# ಪರಿಪೂರ್ಣಚಂದ್ರಿಕಾ

## ಭಾಗ – 4

ಸೂತ್ರ–ಭಾಷ್ಯ–ಟೀಕಾ–ಟಿಪ್ಪಣಿ–ಮೊದಲಾದ 18 ಗ್ರಂಥಗಳೊಂದಿಗೆ
ಶ್ರೀವ್ಯಾಸತೀರ್ಥರ ತಾತ್ಪರ್ಯಚಂದ್ರಿಕಾ ಸಂಸ್ಕೃತಮೂಲ ಹಾಗೂ ಕನ್ನಡಾನುವಾದ



ಆಕಾಶಾಧಿಕರಣ, ಪ್ರಾಣಾಧಿಕರಣ,
ಜ್ಯೋತಿರಧಿಕರಣ, ಗಾಯತ್ರ್ಯಧಿಕರಣ,
ಅಂತಿಮಪ್ರಾಣಾಧಿಕರಣಗಳು

ಪ್ರಕಾಶಕರು : ಶ್ರೀಪಾದರಾಜಮಠ, ಮುಳಬಾಗಿಲು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

भाग -४

# ಭಾಗ -೪

# ಪರಿಪೂರ್ಣಚಂದ್ರಿಕಾ

## ಆಕಾಶಾಧಿಕರಣ, ಪ್ರಾಣಾಧಿಕರಣ, ಜ್ಯೋತಿರಧಿಕರಣ, ಗಾಯತ್ರ್ಯಧಿಕರಣ ಅಂತಿಮಪ್ರಾಣಾಧಿಕರಣ

| | | | |
|---|---|---|---|
| ಬ್ರಹ್ಮಸೂತ್ರ | ಬ್ರಹ್ಮಸೂತ್ರಭಾಷ್ಯ | ತಾತ್ಪರ್ಯಚಂದ್ರಿಕಾ | ನ್ಯಾಯವಿವರಣ |
| ಸೂತ್ರದೀಪಿಕಾ | ಭಾಷ್ಯದೀಪಿಕಾ | ಪ್ರಕಾಶ | ನ್ಯಾಯವಿವರಣಟೀಕಾ |
| ತಂತ್ರದೀಪಿಕಾ | ಸತ್ತರ್ಕದೀಪಾವಳಿ | ಗುರುರಾಜೀಯ | ಅಣುಭಾಷ್ಯ |
| ನ್ಯಾಯಮುಕ್ತಾವಳಿ | ತತ್ವಪ್ರಕಾಶಿಕಾ | ಭಾಟ್ಟಸಂಗ್ರಹ | ತತ್ವಮಂಜರೀ |
| | ಭಾವದೀಪ | | |
| | ವಾಕ್ಯಾರ್ಥಮಂಜರೀ | | |

(ಶಂಕರಭಾಷ್ಯ, ಭಾಮತೀ, ಶ್ರೀಭಾಷ್ಯ ಇವುಗಳ ಆಯ್ದ ಭಾಗಗಳು)

* * * * * *

ಪ್ರಧಾನಸಂಪಾದಕರು :
ವಿ॥ ಆರ್. ವೇಂಕಟೇಶಾಚಾರ್ಯ
ಶ್ರೀರಂಗಮ್

ಸಂಗ್ರಹ ಮತ್ತು ಅನುವಾದ :
ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು

\- - - - - -

ಪ್ರಕಾಶಕರು
ಶ್ರೀಪಾದರಾಜಮಠ
ಮುಳಬಾಗಿಲು.

# ಬಿನ್ನಹ

ಅಭಿಮಾನಿಗಳ ಪ್ರಶಂಸೆಯಿಂದ ದೊಡ್ಡವನಾಗಲಾರ. ಅಥವಾ ಶತ್ರುಗಳು ಮಾಡುವ ಮುಖಸ್ತುತಿಯಿಂದಲೂ ದೊಡ್ಡವನಾಗಲಾರ. ಅಭಿಮಾನಿಗಳಲ್ಲದವಗ ಮನಸ್ಸನ್ನು ಸೂರೆಗೊಳ್ಳುವಂತಹ ಗುಣಶಾಲಿಗಳಾಗಬೇಕು. ಶತ್ರುಗಳಾದವರು ಅಥವಾ ಅಭಿಮಾನಿಗಳಾಗದವರು ನಮ್ಮ ಗುರುಗಳ ಮುಂದೆ ಯಾವ ಉದ್ದೇಶವೂ ಇಲ್ಲದೆ ಸಹಜವಾಗಿ ಪ್ರಶಂಸಿಸಬೇಕು. ಆವಾಗ ಮಾತ್ರ ದೊಡ್ಡವನಾಗಲು ಸಾಧ್ಯ.

ಒಮ್ಮೆ ಶ್ರೀಪಾದರಾಜರೆದುರು ತಾರ್ಕಿಕ ದುರಂಧರನಾದ ಪಕ್ಷಧರಮಿಶ್ರನು ಮಾಡಿದ ಉದ್ಗಾರವಿದು-

*ಯದಧೀತಂ ತದಧೀತಂ, ಯನ್ನಾಧೀತಂ ತದಪ್ಯಧೀತಮ್ ।*

*ಪಕ್ಷಧರವಿಪಕ್ಷಃ ನಾವೇಕ್ಷಿ ವಿನಾ ನವೀನವ್ಯಾಸೇನ ॥*

''ಸ್ವಾಮೀ!! ಈ ಸಮಸ್ತಜಗತ್ತಿನಲ್ಲಿ ಪಕ್ಷಧರನಿಗೆ ಸರಿಸಾಟಿಯಾದ ಮತ್ತೊಬ್ಬ ಪ್ರತಿವಾದಿಯೇ ಇರಲು ಸಾಧ್ಯವಿಲ್ಲ. ಆದರೆ ಇಂದು ತಮ್ಮ ಶಿಷ್ಯನಾದ ನವೀನವ್ಯಾಸ ಮಾತ್ರ ನಾನು ಓದಿದ್ದೆಲ್ಲವನ್ನೂ ಓದಿದ್ದಾನೆ. ನಾನು ಓದದೇ ಇದ್ದದ್ದನ್ನೂ ಸಹ ಓದಿದ್ದಾನೆ. ಇವನು ಮಾತ್ರ ನನಗೊಬ್ಬ ಪ್ರಬಲಪ್ರತಿಪಕ್ಷಿ. ಬೇರಾರೂ ಇಲ್ಲ.''

ಹೀಗೆ ಶ್ರೀವ್ಯಾಸತೀರ್ಥರ ವೈದುಷ್ಯ ಹಾಗೂ ಗುಣಗಳು ಪ್ರತಿವಾದಿಗಳ ಮನಸ್ಸನ್ನೂ ಸಹ ಸೂರೆಗೊಂಡಿದ್ದವು.

ಇಂತಹ ವ್ಯಾಸತೀರ್ಥರ ಪಾಂಡಿತ್ಯವೇ ಹೀಗಿರಬೇಕಾದರೆ ಅವರ ಗುರುಗಳಾದ ಶ್ರೀಪಾದರಾಜರ ಪಾಂಡಿತ್ಯ ಹಾಗೂ ಗುಣಗಳು ಯಾವ ಹಂತದಲ್ಲಿದ್ದವು ಎಂಬುದನ್ನು ನಮ್ಮಿಂದ ಊಹಿಸಲೂ ಸಹ ಸಾಧ್ಯವಿಲ್ಲ. ಶ್ರೀವ್ಯಾಸತೀರ್ಥರಿಗೆ ನ್ಯಾಯ, ವೇದಾಂತಪಾಠಗಳನ್ನೆಲ್ಲಾ ಹೇಳಿ ತ್ರಿಖಂಡಭೂಖಂಡದಲ್ಲಿಯೇ ಅಪ್ರತಿಮಪಂಡಿತರೆಂದು ಜಯ ಡಿಂಡಿಮ ಹೊಡೆಸಿದವರು ಶ್ರೀಪಾದರಾಜರು. ಅದಕ್ಕೆ ತಕ್ಕಂತೆ ಶ್ರೀಪಾದರಾಜರ ಮನಸ್ಸಿಗೆ ಸಂಪೂರ್ಣ ತೃಪ್ತಿಯಾಗುವಂತೆ ನಡೆದುಕೊಂಡ ಧೀರಪುರುಷರು ಶ್ರೀವ್ಯಾಸತೀರ್ಥರು. ಇವರಿಬ್ಬರ ಸಂಬಂಧ ಅನ್ಯಾದೃಶವಾದದ್ದು.

ಶ್ರೀವ್ಯಾಸತೀರ್ಥರ ಗುರುಭಕ್ತಿ ಹಾಗೂ ಶ್ರೀಪಾದರಾಜರ ಶಿಷ್ಯವಾತ್ಸಲ್ಯ ಎರಡೂ ಸಹ ಆದರ್ಶಪ್ರಾಯವಾಗಿವೆ. ಗುರುಗಳಾದ ಶ್ರೀಶ್ರೀಪಾದರಾಜರೇ ಶ್ರೀವ್ಯಾಸತೀರ್ಥ ಮೇಲೆ ಪದ್ಯಗಳನ್ನು ರಚಿಸಿ, ಪ್ರಶಂಸಿಸಿದ್ದು ಅತ್ಯಂತ ಅನುಕರಣೀಯ.

*'ಇದಿರದಾವನು ನಿನಗೀ ಧರೆಯೊಳು*

*ಪದುಮನಾಭನ ದಾಸ ಪರಮೋಲ್ಲಾಸ ।*

*ವಾದಿತಿಮಿರಮಾರ್ತಾಂಡನೆಂದೆನಿಸಿದೆ*

*ವಾದಿಶರಭಭೇರುಂಡ ವ್ಯಾಸರಾಯಾ ॥*

*ಪರಿಪೂರ್ಣಚಂದ್ರಿಕಾ*

*.... ಹಮ್ಮನಳಿದು ಶ್ರೀಪತಿರಂಗವಿಟ್ಠಲನ್ನ*
*ಸುಮ್ಮಾನದಿಂ ಸೇವಿಪ ವ್ಯಾಸಮುನಿರಾಯಾ ॥೩॥*

ಎಂದು ಶಿಷ್ಯವಾತ್ಸಲ್ಯದಿಂದ ಗುರುಗಳು ಕೊಂಡಾಡಿದರೆ ಶಿಷ್ಯರಾದ ಶ್ರೀವ್ಯಾಸತೀರ್ಥರು

*'ವಾದಿಗಜಮಸ್ತಕಾಂಕುಶ ಸುಜನಬುಧಗೇಯ ।*
*ಮೇದಿನೀಸುರವಂದ್ಯ ಶ್ರೀಪಾದರಾಯ ॥*

ಎಂಬುದಾಗಿ ಗುರುಗಳು ತಮಗೆ ಮಾಡಿದ ಪ್ರಶಂಸೆಯನ್ನೇ ಇಮ್ಮಡಿಮಾಡಿ ಗುರುಗಳಿಗೆ ಸಮರ್ಪಿಸಿದ್ದಾರೆ.

ಗುರುಗಳಾದ ಶ್ರೀಪಾದರಾಜರು ಶಿಷ್ಯನನ್ನು

*'ಸಾಸಿರಜಿಹ್ವೆಯೊಳ್ಳ ಶೇಷನೇ ಕೊಂಡಾಡಬೇಕು*
*ವ್ಯಾಸಮುನಿರಾಯರ ಸನ್ಯಾಸದಿರವ ।*

*ಆಸೆಯಿಂದ ತಮ್ಮುದರ ಪೋಷಣೆಗಾಗಿ ಛಪ್ಪನ್ನ*
*ದೇಶವ ತಿರುಗಿ ಸಂಚಾರ ಮಾಡುತ*
*ಮೀಸಲ ಮಡಿ ಬಚ್ಚಿಟ್ಟು ಮಿಂಚುಕೂಳನುಂಡು ದಿನ*
*ಮೋಸಮಾಡಿ ಕಳೆವ ಸನ್ಯಾಸಿಗಳ ಸರಿಯೆ ॥*

*ಕೆರೆ ಬಾವಿ ಪುರ ಅಗ್ರಹಾರಂಗಳ ಮಾಡಿ ಭೂ-*
*ಸುರರೊಂದು ಲಕ್ಷ ಕುಟುಂಬಗಳ*
*ಪೊರೆವ ವೈಭವ ಕೀರ್ತಿಯಿಂದಲಿ ವ್ಯಾಸರಾ-*
*ಯರ ಗುಣಗಣಗಾಂಭೀರ್ಯಾದಿಗಳ ॥*

*ಹಗಲಿರುಳೆನ್ನದೆ ಆವಾಗ ಶ್ರೀಹರಿ ಪದಪದ್ಮ-*
*ಯುಗಳವನರ್ಚಿಸಿ ಭಕುತಿಯಿಂದ*
*ರಘುಪತಿಭಜಕ ಬ್ರಹ್ಮಣ್ಯತೀರ್ಥಕುವರ*
*ರಂಗವಿಠಲನನ್ನು ಬಿಡೆಬಿಡೆನು ಎಂಬ ॥*

ಎಂದು ಪ್ರಶಂಸಿಸಿದರೆ, ಅದಕ್ಕೆ ತಕ್ಕಂತೆ ಶಿಷ್ಯರಾದ ವ್ಯಾಸತೀರ್ಥರೂ ಸಹ,

*'ಮಹಿಮೆ ಸಾಲದೇ ಇಷ್ಟೇ ಮಹಿಮೆ ಸಾಲದೆ*
*ಅಹಿಶಯನನ ಒಲುಮೆಯಿಂದ*
*ಮಹಿಯೊಳೆಮ್ಮ ಶ್ರೀಪಾದರಾಯರ ।'*

ಎಂಬುದಾಗಿ ಕೇವಲ ಮೂರು ನುಡಿಗಳಿಂದ ಶ್ರೀಪಾದರಾಜರ ಸಂಪೂರ್ಣಮಹಿಮೆಯನ್ನು ಸೆರೆಹಿಡಿದು ಸ್ತುತಿಸಿದ್ದಾರೆ. ಇದೇ ಮಾದರಿಯಲ್ಲಿ

*ಧರೆಯೊಳು ಮೂರೇಳು ಕುಮತರ ಕುಭಾಷ್ಯವ*

ಎಂಬ ವ್ಯಾಸರಾಜರ ಇನ್ನೊಂದು ಕೀರ್ತನೆಯಲ್ಲಿಯೂ ಸಹ ಗುರುಮಹಿಮೆಗಳ ಸರಮಾಲೆಯೇ ಪೋಣಿಸಲ್ಪಟ್ಟಿದೆ. ಈ ಎಲ್ಲ ಕೀರ್ತನೆಗಳ ಮೂಲ ಭಾಷ್ಯದಂತೆ ಶ್ರೀವ್ಯಾಸತೀರ್ಥರ ಪಂಚರತ್ನಮಾಲಿಕೆಯು ಸುಪ್ರಸಿದ್ಧವಾಗಿದೆ.

*'ವಂದೇ ಶ್ರೀಪಾದರಾಜಂ ರುಚಿತಮಹೃದಯಂ ಪೂಜಿತಶ್ರೀಸಹಾಯಂ'*

ಎಂದು ಪ್ರಾರಂಭವಾಗುವ ಈ ಪುಟ್ಟ ನುಡಿಗಟ್ಟಿನಲ್ಲಿ ವಿಸ್ತಾರವಾದ ಗುರುಗಳ ಮಹಿಮೆಯು ಅಡಕ-ವಾಗಿದೆ.

*ಯದ್ವೃಂದಾವನಸೇವಯಾ ಸುವಿಮಲಾ ವಿದ್ಯಾಂ ಪಶೂನ್ ಸಂತತಿಮ್*
*ಧ್ಯಾನಾತ್ ಜ್ಞಾನಮನಲ್ಪಕೀರ್ತಿನಿವಹಂ ಪ್ರಾಪ್ನೋತಿ ಸೌಖ್ಯಂ ಜನಃ ।*
*ತಂ ವಂದೇ ನರಸಿಂಹತೀರ್ಥನಿಲಯಂ ಶ್ರೀವ್ಯಾಸರಾಟ್ ಪೂಜಿತಂ*
*ಧ್ಯಾಯಂತಂ ಮನಸಾ ನೃಸಿಂಹಚರಣಂ ಶ್ರೀಪಾದರಾಜಂ ಗುರುಮ್ ॥*

ಎಂಬುದಾಗಿ ಗುರುಸ್ಮರಣೆಯಿಂದ ಸಕಲವೂ ದೊರೆಯುತ್ತದೆಂದು ಧೈರ್ಯನೀಡಿದ್ದಾರೆ.

ತಾತ್ಪರ್ಯಚಂದ್ರಿಕಾಗ್ರಂಥವನ್ನು ಪ್ರಾರಂಭಮಾಡುವಾಗಲೂ ಸಹ ಅತ್ಯಂತಭಕ್ತಿಯಿಂದ ಗುರುಗಳನ್ನು ನಮಿಸುತ್ತಾರೆ.

*ಜ್ಞಾನವೈರಾಗ್ಯಭಕ್ತ್ಯಾದಿ ಕಲ್ಯಾಣಗುಣಶಾಲಿನಃ ।*
*ಲಕ್ಷ್ಮೀನಾರಾಯಣಮುನೀನ್ ವಂದೇ ವಿದ್ಯಾಗುರೂನ್ ಮಮ ॥*

ಪರಿಪೂರ್ಣಚಂದ್ರಿಕಾಗ್ರಂಥದ ನಾಲ್ಕನೆಯ ಸಂಪುಟವು ಶ್ರೀಪಾದರಾಜರ ಆರಾಧನೆಯ ಶುಭ-ಸಂದರ್ಭದಲ್ಲಿ ಅರ್ಪಿತವಾಗುತ್ತಿದೆ. ೬೧೧ನೆಯ ಈ ಆರಾಧನೆಯ ಶುಭಮುಹೂರ್ತದಲ್ಲಿ ಶ್ರೀವ್ಯಾಸ-ತೀರ್ಥರೇ ಗುರುಗಳಿಗೆ ಸಮರ್ಪಿಸುವಂತೆ ನಮ್ಮನ್ನು ಅನುಗ್ರಹಿಸಿದ್ದಾರೆ. ಈ ಕೃತಿಯ ಪ್ರಕಟನೆಗೆ ಸಂಪೂರ್ಣ-ವಾಗಿ ಬೆಂಬಲ ನೀಡಿದ ಶ್ರೀಪಾದರಾಜಮಠದ ಯತಿಪುಂಗವರಿಗೆ ಹಾಗೂ ಲಕ್ಷ್ಮೀನಾರಾಯಣಾಚಾರ್ಯರಿಗೆ ಅನಂತನಮಸ್ಕಾರಗಳು ಹಾಗೂ ಕೃತಜ್ಞತೆಗಳು.

ಮುಖಪುಟವನ್ನು ಅಂದವಾಗಿ ಚಿತ್ರಿಸಿಕೊಟ್ಟ ಪಿ. ಮಧುಸೂದನಾಚಾರ್ಯರಿಗೆ ಕೃತಜ್ಞತೆಗಳು.

ವಿದ್ವಾಂಸರಾದ ಕಲ್ಲಾಪೂರ ಗುರುರಾಜಾಚಾರ್ಯರು ಸುಮಾರು ೨೫,೦೦೦ರೂಗಳನ್ನು ಸಂಗ್ರಹಿಸಿ ಈ ಕೃತಿಯ ಪ್ರಕಟನೆಗಾಗಿ ನೀಡಿ ಆಶೀರ್ವದಿಸಿದ್ದಾರೆ. ಯಾರೊಬ್ಬರ ಮನೆಯಲ್ಲೂ ಒಂದು ಕ್ಷಣಮಾತ್ರ ನಿಲ್ಲುವ ಪಾದರಸದಂತೆ ಸಾಧನಾಪಥದಲ್ಲಿ ಸಂಚರಿಸುವ ಇವರ ಗುಣಗಳು ಹಾಗೂ ವೈದುಷ್ಯವು ಅತ್ಯಂತ ಆದರ್ಶಪ್ರಾಯವಾಗಿದೆ. ಇವರಿಗೆ ನನ್ನ ಅನಂತನಮಸ್ಕಾರಗಳು ಹಾಗೂ ಕೃತಜ್ಞತೆಗಳು.

ಪ್ರತಿಯೊಂದು ಸಂಪುಟಕ್ಕೂ ತುಂಬು ಹೃದಯದಿಂದ ಸಹಕಾರ ನೀಡಿ ಪ್ರೋತ್ಸಾಹಿಸುತ್ತಿರುವ ಶ್ರೀನಿವಾಸ ಪ್ರಹ್ಲಾದ್ ಇವರಿಗೂ ಕೃತಜ್ಞತೆಗಳು.

* * * *

# ಭೂಮಿಕಾ

ಚಂದ್ರಿಕಾಚಾರ್ಯರು ಆಕಾಶಾಧಿಕರಣದಲ್ಲಿ ಅನೇಕ ರೀತಿಯ ಪೂರ್ವಪಕ್ಷಗಳನ್ನು ತೋರಿಸಿದ್ದಾರೆ. ಇವುಗಳಲ್ಲಿ ಕೆಲವನ್ನು ಆಚಾರ್ಯರು ಭಾಷ್ಯದಲ್ಲಿ, ಅನುವ್ಯಾಖ್ಯಾನದಲ್ಲಿ, ನ್ಯಾಯವಿವರಣದಲ್ಲಿ ಹೇಳಿದ್ದಾರೆ. ಇನ್ನು ಕೆಲವನ್ನು ಸೂಚಿಸಿದ್ದಾರೆ.

ಅನುವ್ಯಾಖ್ಯಾನದ ಒಂದೇ ಶ್ಲೋಕದಲ್ಲಿ ಅನೇಕ ಪೂರ್ವಪಕ್ಷಗಳು ಹೇಗೆ ಅಡಕವಾಗಿವೆ ಎಂಬುದನ್ನು ಹೃದಯಂಗಮವಾಗಿ ಚಂದ್ರಿಕಾಚಾರ್ಯರು ತೋರಿಸಿದ್ದಾರೆ. ಅನುವ್ಯಾಖ್ಯಾನದ ಶ್ಲೋಕ ಹೀಗಿದೆ —

*ಚೇಷ್ಟಾ ಹಿ ಚೇತನಾನಾಂ ಯಾ ಸಾ ಭವೇತ್ ತತ್ಪ್ರಸಾದತಃ ।*
*ಅಚೇತನಸ್ವಭಾವಸ್ತು ವಿವರಾದಿಃ ಕಥಂ ತತಃ?* - ಎಂದು.

ಇದಕ್ಕೆ ಮೊದಲನೆಯ ಅನ್ವಯ - ಅಚೇತನಸ್ವಭಾವಃ = ಅಚೇತನಗತಸ್ವಭಾವಃ, ವಿವರಾದಿಃ = ವಿವರತ್ವಾದಿಃ, ತತಃ = ಭಗವತ್ಪ್ರಸಾದಾತ್, ಕಥಂ = ಕಥಮ್ ಅಪಿ ನ ।

ತಾತ್ಪರ್ಯ – ಚೇತನಪದಾರ್ಥದಲ್ಲಿರುವ ಪ್ರವೃತ್ತಿನಿಮಿತ್ತವು ವಿಷ್ಣುವಿನ ಪ್ರಸಾದದಿಂದ ಬರಬಹುದು. ಆದರೆ ಅಚೇತನಪದಾರ್ಥಕ್ಕೆ ಪ್ರಸಾದ(ಅನುಗ್ರಹ)ವನ್ನು ಮಾಡಲಿಕ್ಕೆ ಬರುವುದಿಲ್ಲ. ಆದ್ದರಿಂದ ಆಕಾಶಶಬ್ದ-ಪ್ರವೃತ್ತಿನಿಮಿತ್ತವಾದ ವಿವರತ್ವವನ್ನು ಜಡವಾದ ಆಕಾಶಕ್ಕೆ ಹೇಗೆ ಪ್ರಸಾದವಾಗಿ ಕೊಡಲಿಕ್ಕೆ ಬರುತ್ತದೆ.

ಎರಡನೆಯ ಪೂರ್ವಪಕ್ಷ –

ಅಚೇತನಸ್ವಭಾವಃ ವಿವರಾದಿಃ = ವಿವರತ್ವಾದಿಃ ತತಃ =ಭಗವತಃ ಕಥಮ್ = ಭಗವದಧೀನಂ ಕಥಮ್? ಸ್ವಭಾವವತ್ತ್ವಾತ್ ।

ತಾತ್ಪರ್ಯ– ಆಗಂತುಕವಾದ ಧರ್ಮವು ಭಗವಂತನಿಂದ ಬರಬಹುದು. ಉದಾ - ಇಂದ್ರನಲ್ಲಿರುವ ಪರಮೈಶ್ವರ್ಯವು ಭಗವಂತನ ಅಧೀನವಾಗಬಹುದು. ಆದರೆ ಪದಾರ್ಥದ ಸ್ವಭಾವವು ವಿಷ್ಣುವಿನ ಅಧೀನ-ವಾಗುವುದಿಲ್ಲ. ಸ್ವಭಾವವೆಂದರೆ ಅನ್ಯಾಧೀನವಲ್ಲವೆಂದರ್ಥ. ಹೀಗಾಗಿ ಆಕಾಶದ ಧರ್ಮವಾದ ವಿವರತ್ವವು ವಿಷ್ಣುವಿನ ಅಧೀನ ಹೇಗಾಗುತ್ತದೆ? ಎರಡು ಪ್ರಶ್ನೆಗಳ ಆಂತರ್ಯವೇನೆಂದರೆ - ಚೇತನದ, ಅಚೇತನದ ಸ್ವಭಾವವು ಎಂದೂ ಭಗವಂತನ ಅಧೀನವಾಗುವುದಿಲ್ಲ ಎಂದು.

ಮೂರನೆಯ ಪೂರ್ವಪಕ್ಷ -

ವಿವರತ್ವಾದಿಕಂ ಕಥಂ ತತಃ = ತತ್ರ ಭಗವತಿ ಕಥಮ್? ಕುತಃ? ಅಚೇತನತ್ವಾತ್ ತತಶ್ಚ ತದ್ಗತತ್ವಾಭಾವಾತ್ ನ ನಿಮಿತ್ತಮ್ ।

ತಾತ್ಪರ್ಯ - ಯಾವುದೇ ಶಬ್ದದಿಂದ ವಿಷ್ಣು ವಾಚ್ಯನಾಗಬೇಕಾದರೆ, ಆ ಶಬ್ದದ ಪ್ರವೃತ್ತಿನಿಮಿತ್ತ ವಿಷ್ಣುವಿನಲ್ಲಿರಬೇಕು. ಆದರೆ ಆಕಾಶಶಬ್ದದ ಪ್ರವೃತ್ತಿನಿಮಿತ್ತವಾದ ವಿವರತ್ವವು ಕೇವಲ ಆಕಾಶದಲ್ಲಿ ಮಾತ್ರ ಇರುವಂತಹದ್ದು. ಚೇತನಪದಾರ್ಥವಾದ ವಿಷ್ಣುವಿನಲ್ಲಿ ಹೇಗೆ ಬರಲಿಕ್ಕೆ ಸಾಧ್ಯ? ಆದ್ದರಿಂದ ಆಕಾಶ-ಶಬ್ದದಿಂದ ವಿಷ್ಣುವು ಹೇಳಲ್ಪಡುವುದಿಲ್ಲ.

ನಾಲ್ಕನೆಯ ಪೂರ್ವಪಕ್ಷ –

> ಅಚೇತನಸ್ವಭಾವಃ ವಿವರಾದಿಃ = ವಿವರತ್ವಾದಿಃ ಕಥಂ ತತಃ? ಐಶ್ವರ್ಯಾದಿವತ್ ಆಗಂತುಕಜ್ಞಾನಾದಿ -ಹೇತುದ್ವಾರಾಭಾವಾತ್ ಕಥಂ ಈಶ್ವರಾಯತ್ತಮ್?

ತಾತ್ಪರ್ಯ - ಇಂದ್ರನಲ್ಲಿ ಜಗತ್ಪಾಲನಾದಿ ಐಶ್ವರ್ಯವನ್ನು ಹೇಗೆ ಕೊಡುತ್ತಾನೆಂದರೆ, ಅವನಿಗೆ ಜ್ಞಾನವನ್ನು ಕೊಟ್ಟು, ಅವನಿಂದ ಪಾಲನೆಯನ್ನೂ ಮಾಡಿಸುತ್ತಾನೆ. ಈ ಪಾಲನರೂಪವಾದ ಇಂದ್ರಶಬ್ದ-ಪ್ರವೃತ್ತಿನಿಮಿತ್ತವಾದ ಐಶ್ವರ್ಯವನ್ನು ಚೇತನನಾದ ಇಂದ್ರನಿಗೆ ಕೊಟ್ಟು, ತಾನು (ವಿಷ್ಣುವು) ಇಂದ್ರಶಬ್ದದಿಂದ ವಾಚ್ಯನಾಗಬಹುದು. ಆದರೆ ಜಡವಾದ ಪದಾರ್ಥಕ್ಕೆ ಜ್ಞಾನವನ್ನು ಕೊಡುವುದಕ್ಕೆ ಬರುವುದಿಲ್ಲ. ಆದ್ದರಿಂದ ವಿವರತ್ವವನ್ನು ಆಕಾಶಕ್ಕೆ ಜ್ಞಾನಪ್ರಚೋದನೆಯ ಮೂಲಕ ಕೊಡಲಿಕ್ಕೆ ಬರುವುದಿಲ್ಲ.

ಇಷ್ಟು ಪ್ರಮೇಯದ ಮೇಲೆ ಬರುವ ಆಕ್ಷೇಪಗಳು. ಈ ಪೂರ್ವಪಕ್ಷಗಳನ್ನು ಆಚಾರ್ಯರು ಕಂಠತಃ ಹೇಳಿದ್ದಾರೆ.

ಇನ್ನು ಭಾಷ್ಯದಲ್ಲಿ, ಅನುವ್ಯಾಖ್ಯಾನದಲ್ಲಿ ಸೂಚಿತವಾದ ಕೆಲವು ಪೂರ್ವಪಕ್ಷಗಳನ್ನು ತೋರಿಸುತ್ತಾರೆ.

> (೧) '' 'ಆಕಾಶ' ಶಬ್ದವು ಅನೇಕಬಾರಿ ಬಂದಿರುವುದರಿಂದ ನಿರವಕಾಶಲಿಂಗಗಳಿದ್ದರೂ 'ಆಕಾಶ'ಶಬ್ದಕ್ಕೆ ಶ್ರುತಿತ್ವೇನ ಪ್ರಾಮುಖ್ಯತೆಯನ್ನು ಕೊಟ್ಟು ರೂಢಿಯಿಂದ ತಿಳಿಯುವ ಭೂತಾಕಾಶವನ್ನೇ ತೆಗೆದುಕೊಳ್ಳಬೇಕು.''

— ಈ ಪೂರ್ವಪಕ್ಷವನ್ನು ಮಾಡುತ್ತಾ ಚಂದ್ರಿಕಾಚಾರ್ಯರು ಇನ್ನೊಂದು ಸೂಕ್ಷ್ಮವಾದ ಅಂಶವನ್ನು ತಿಳಿಸಿಕೊಡುತ್ತಾರೆ – ಹಿಂದಿನ ಅಧಿಕರಣದಲ್ಲಿಯೂ 'ಇಂದ್ರ'ಶಬ್ದವು (ಇಂದ್ರೋ ರಾಜಾ, ಬ್ರಹ್ಮೇಂದ್ರ-ಮಗ್ನಿಂ ಇತ್ಯಾದಿಯಾಗಿ) ಅನೇಕಬಾರಿ ಬಂದಿದೆ. ಆದರೆ ಅಲ್ಲಿ ಅನೇಕ ಬಾರಿ ಬಂದಿರುವ ಇಂದ್ರಶ್ರುತಿಯನ್ನು ಬಾಧಿಸಿ, ನಿರವಕಾಶವಾದ ಸಮುದ್ರಶಾಯಿತ್ವಲಿಂಗದಿಂದ ಇಂದ್ರಶಬ್ದವಾಚ್ಯನಾದವನು ವಿಷ್ಣುವೆಂದು ನಿರ್ಣಯಮಾಡಲಾಗಿದೆ. ಅದೇ ನ್ಯಾಯವನ್ನು ಈ ಅಧಿಕರಣದಲ್ಲಿ ವಿವಕ್ಷಿಸಲಾಗಿದೆ. ಆದ್ದರಿಂದ ಅನೇಕ ಬಾರಿ ಆಕಾಶಶಬ್ದವು ಬಂದಿದ್ದರೂ ನಿರವಕಾಶವಾದ ಅನಂತತ್ವಲಿಂಗದಿಂದ ಏಕೆ ಬಾಧಿಸಬಾರದು? ಎಂಬ ಸೂಕ್ಷ್ಮವಾದ ಪ್ರಶ್ನೆ ಬರುತ್ತದೆ. ಈ ಸಂದೇಹವನ್ನು ಚಂದ್ರಿಕಾಚಾರ್ಯರು ಪರಿಹಾರ ಮಾಡುತ್ತಾ ಹಿಂದಿನ ಅಧಿಕರಣದಲ್ಲಿ ಕೇವಲ ಶ್ರುತಿತ್ವಪ್ರಯುಕ್ತಪ್ರಾಬಲ್ಯವು ನಿರವಕಾಶತ್ವಪ್ರಯುಕ್ತಪ್ರಾಬಲ್ಯಕ್ಕಿಂತ ಹೆಚ್ಚು ಎನ್ನುವುದನ್ನು ಮಾತ್ರ ಖಂಡಿಸಿದ್ದಾರೆ. ಈ ಅಧಿಕರಣದಲ್ಲಾದರೋ ಶ್ರುತಿತ್ವಬಹುತ್ವ- ಉಭಯಪ್ರಯುಕ್ತ-ಪ್ರಾಬಲ್ಯಕ್ಕಿಂತ ನಿರವಕಾಶಪ್ರಯುಕ್ತಪ್ರಾಬಲ್ಯವು ಹೆಚ್ಚು ಎನ್ನುವುದನ್ನೂ ಸಮರ್ಥಿಸುತ್ತಾರೆ ಎಂಬ ಸೂಕ್ಷ್ಮ ಅಂಶವನ್ನು ತಿಳಿಸಿತ್ತಾರೆ.

ಈ ಪೂರ್ವಪಕ್ಷವು ಭಾಷ್ಯದಲ್ಲಿ ಉದಾಹೃತವಾದ ವಾಕ್ಯದಿಂದ ಸೂಚಿತವಾಗಿದೆ.

> (೨) ಆಕಾಶಶ್ರುತಿಯು ಭೂತಾಕಾಶಪರವೇ ಆಗಿದೆ. ಏಕೆಂದರೆ-
>
> (ಅ) ಆಕಾಶಶಬ್ದವು ವಿಷ್ಣುಪರವಾಗಬೇಕಾದರೆ, ಬೇರೆ ಕಡೆ ಎಲ್ಲಿಯಾದರೂ ಆಕಾಶಶಬ್ದವು ವಿಷ್ಣುಶಬ್ದದ ಜೊತೆಗೆ ಪಠಿತವಾಗಿರಬೇಕು. ಉದಾ - 'ಇಂದ್ರೋ ರಾಜಾ'

ಎಂದು ತೈತ್ತಿರೀಯ ಆರಣ್ಯಕದಲ್ಲಿ ಬರುವ ವಾಕ್ಯದಲ್ಲಿ, ಇಂದ್ರಶಬ್ದವು ಪ್ರಸಿದ್ಧ ಪುರಂದರನನ್ನು ಹೇಳುತ್ತದೋ ಅಥವಾ ವಿಷ್ಣುವನ್ನು ಹೇಳುತ್ತದೋ ಎಂದು ಚರ್ಚಿಸಿದಾಗ 'ಮತ್ಸೀಂದ್ರಮಿಂದೋ ಪವಮಾನ ವಿಷ್ಣುಂ' ಎಂದು ಪವಮಾನಸೂಕ್ತದಲ್ಲಿ ಬರುವ ವಾಕ್ಯದಲ್ಲಿ ಇಂದ್ರಶಬ್ದಕ್ಕೆ ವಿಷ್ಣುಶಬ್ದದ ಸಾಹಚರ್ಯವು ಇದೆಯಾದ್ದರಿಂದ 'ಇಂದ್ರೋ ರಾಜಾ' ಎನ್ನುವಲ್ಲೂ ಇಂದ್ರಶಬ್ದವು ವಿಷ್ಣುವನ್ನು ಹೇಳುತ್ತದೆ ಎಂದು ನಿರ್ಣಯಿಸಲಾಗಿದೆ. ಇದರಂತೆ ಆಕಾಶಶಬ್ದಕ್ಕೆ ವಿಷ್ಣುವಿನ ಸಾಹಚರ್ಯವು ಎಲ್ಲೂ ಕಂಡು ಬಂದಿಲ್ಲ.

(ಆ) ಆಕಾಶಶಬ್ದವು ವಿಷ್ಣುಪರ ಎಂದು ಹೇಳುವ ಯಾವ ವಿಶೇಷಶ್ರುತಿಯೂ ಇಲ್ಲ. ಉದಾಹ - 'ಇಂದ್ರೋ ರಾಜಾ' ಎನ್ನುವ ವಾಕ್ಯದಲ್ಲಿ ಇಂದ್ರಶಬ್ದವು ವಿಷ್ಣುಪರವಾಗಿದೆ ಎಂದು ಹೇಳಬಹುದು. ಏಕೆಂದರೆ, ಎಲ್ಲ ದೇವತೆಗಳ ನಾಮವೂ ವಿಷ್ಣುವಿನ ನಾಮಗಳೇ ಎಂದು ಹೇಳುವ 'ಯೋ ದೇವಾನಾಂ ನಾಮಧಾ ಏಕ ಏವ' ಎಂದು ಹೇಳುವ ವಿಶೇಷಶ್ರುತಿಯಿದೆ. ಅದರಂತೆ ಎಲ್ಲ ಭೂತವಾಚಕಶಬ್ದಗಳೂ ವಿಷ್ಣುವಿನ ನಾಮಗಳು ಎಂದು ಹೇಳುವ ಯಾವ ಶ್ರುತಿಯೂ ಇಲ್ಲ.

ಈ ಎರಡೂ ಪೂರ್ವಪಕ್ಷಗಳನ್ನು ಇನ್ನೂ ಪ್ರಬಲಮಾಡಲು ರಾಯರು ಪ್ರಕಾಶದಲ್ಲಿ ಇನ್ನೂ ಹೆಚ್ಚಿನ ಅಂಶಗಳನ್ನು ಹೇಳುತ್ತಾರೆ.

— ಮೊದಲನೆಯ ಪೂರ್ವಪಕ್ಷದಲ್ಲಿ ಇಂದ್ರಶಬ್ದವು ಬೇರೊಂದು ಕಡೆ ವಿಷ್ಣುಶಬ್ದದ ಸಾಮಾನಾಧಿ- ಕರಣ್ಯವನ್ನು ಹೊಂದಿದೆ. ಅದರಂತೆ ಆಕಾಶಶಬ್ದವು ಹೊಂದಿಲ್ಲವೆಂದು ಹೇಳಿದಿರಿ. ಆದರೆ ಇದು ಸರಿಯಲ್ಲ. ಏಕೆಂದರೆ 'ಆಕಾಶೋ ವೈ ನಾಮ ನಾಮರೂಪಯೋಃ ನಿರ್ವಹಿತಾಃ ತೇ ಯದಂತರಾತ್ಮಾ ತದ್‌ಬ್ರಹ್ಮ, ತದಮೃತಂ ಸಾ ಆತ್ಮಾ' ಎಂದು ಬೇರೊಂದು (ಛಾಂದೋಗ್ಯದಲ್ಲಿ) ಕಡೆ ವಿಷ್ಣುವಿನಲ್ಲೇ ಇರುವ ಬ್ರಹ್ಮಶಬ್ದದ ಸಾಮಾನಾಧಿಕರಣ್ಯವು ಆಕಾಶ-ಶಬ್ದಕ್ಕೆ ಇದೆಯಲ್ಲವೇ? ಎಂದರೆ ಇಲ್ಲಿ 'ವೈ ನಾಮ' ಎಂದು ಪ್ರಸಿದ್ಧಿಯನ್ನು ಹೇಳುವ ಶಬ್ದಗಳ ಸಾಹಚರ್ಯದಿಂದ ಆಕಾಶಶಬ್ದವು ಪ್ರಸಿದ್ಧ ಆಕಾಶಪರವೇ ಆಗಿದೆ ಹೊರತು ವಿಷ್ಣುಪರವಾಗಿಲ್ಲ. ಬ್ರಹ್ಮಶಬ್ದವನ್ನು ಸಾವಕಾಶಮಾಡಿ ಪ್ರಸಿದ್ಧ ಆಕಾಶಪರ ಎಂದೇ ಹೇಳಬೇಕು ಎಂದು ಪೂರ್ವಪಕ್ಷಿಯ ಅಭಿಪ್ರಾಯವಿರುವುದರಿಂದ ಈ ಛಾಂದೋಗ್ಯವಾಕ್ಯವನ್ನು ಉದಾಹರಿಸು-ವಂತಿಲ್ಲ.

— ಇದರಂತೆ ಎರಡನೆಯ ಪೂರ್ವಪಕ್ಷದಲ್ಲಿ ಎಲ್ಲ ದೇವತೆಗಳ ಹೆಸರುಗಳೂ ವಿಷ್ಣುವಿನ ನಾಮಗಳೇ ಎಂದು ಹೇಳುವ 'ಯೋ ದೇವಾನಾಂ ನಾಮಧಾ ಏಕ ಏವ' ಎಂಬ ವಿಶೇಷಶ್ರುತಿಯಿರುವಂತೆ ಆಕಾಶಶಬ್ದ ಅಥವಾ ಎಲ್ಲಾ ಭೂತಶಬ್ದ ವಿಷ್ಣುವಿನ ನಾಮಗಳೇ ಆಗಿವೆ ಎಂದು ಹೇಳುವ ಯಾವ ವಿಶೇಷಶ್ರುತಿಯೂ ಇಲ್ಲ ಎಂದು ಹೇಳಿದ್ದೀರಿ. ಅದು ಸರಿಯಲ್ಲ. ಏಕೆಂದರೆ ಎಲ್ಲಾ ನಾಮಗಳೂ ವಿಷ್ಣುವಿನ ನಾಮಗಳೇ ಆಗಿವೆ ಎಂದು ಹೇಳುವ 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯು ಇದೆಯಲ್ಲವೇ? ಎಂಬ ಪ್ರಶ್ನೆ ಬಂದರೆ, ಅದಕ್ಕೆ ಉತ್ತರವನ್ನು ರಾಯರು ಹೇಳುತ್ತಾ ಈ ಶ್ರುತಿಯು ಸಾಮಾನ್ಯಶ್ರುತಿ. 'ಯೋ ದೇವಾನಾಂ'

ಎಂಬುದು ವಿಶೇಷಶ್ರುತಿ. ಅಂದರೆ ವಿಶಿಷ್ಟ ಎಲ್ಲಾ ದೇವತೆಗಳ ಹೆಸರುಗಳೂ ವಿಷ್ಣುವಿನ ಹೆಸರನ್ನೇ ಹೇಳುತ್ತವೆ. ಅದರಂತೆ ಇದು ಅಲ್ಲ. ಅದಕ್ಕಾಗಿ ಚಂದ್ರಿಕಾಚಾರ್ಯರು ವಿಶೇಷಶ್ರುತಿ ಎಂದು 'ವಿಶೇಷ'ಪದವನ್ನು ಹೇಳಿದ್ದಾರೆ. ಪ್ರತ್ಯುತ 'ಯೋ ದೇವಾನಾಂ' ಎಂದು ವಿಶೇಷಶ್ರುತಿಗೆ ಅನುಸಾರವಾಗಿ, 'ನಾಮಾನಿ ಸರ್ವಾಣಿ' ಎಂಬಲ್ಲಿರುವ 'ಸರ್ವಾಣಿ' ಎಂಬ ಪದಕ್ಕೆ ದೇವತೆಗಳು ಎಂಬ ಅರ್ಥವನ್ನು ಮಾಡಬೇಕಾಗುತ್ತದೆ.

ಹೀಗೆ ಚಂದ್ರಿಕಾದಲ್ಲಿ ಬರುವ ಸಣ್ಣಶಬ್ದಗಳೂ (ಇಲ್ಲಿನ ವಿಶೇಷಶಬ್ದದಂತೆ) ಔಚಿತ್ಯಪೂರ್ಣವಾಗಿವೆ ಎಂಬುದನ್ನು ರಾಯರು ಪ್ರಕಾಶದಲ್ಲಿ ತೋರಿಸುತ್ತಾರೆ.

ಈ ಮೇಲೆ ಹೇಳಿದ ಎಲ್ಲಾ ಪೂರ್ವಪಕ್ಷಗಳೂ

*'ಇತಿ ಶಂಕಾನಿವೃತ್ತ್ಯರ್ಥಂ ಆಕಾಶ ಇತಿ ನಾಮ ಚ ।*
*ಪರತೋಽಪಿ ವರೀಯಸ್ತ್ವಪೂರ್ವಲಿಂಗಾತ್ ಹರೇಃ ಭವೇತ್ ॥*

ಎಂದು ಅನುವ್ಯಾಖ್ಯಾನದಲ್ಲಿ ಬರುವ ನಾಮ ಎಂಬ ಪದದಿಂದ ಸೂಚಿತವಾಗಿದೆ.

ಇನ್ನು ಆಚಾರ್ಯರು ಭಾಷ್ಯದಲ್ಲಿ ಹೇಳಿರುವ ವಿಷಯವಾಕ್ಯವನ್ನು ಪರಿಶೀಲಿಸಿದಾಗ ಇನ್ನೊಂದು ಪೂರ್ವಪಕ್ಷವು ಸೂಚಿತವಾಗುತ್ತದೆ - ಎಂದು ಚಂದ್ರಿಕಾಚಾರ್ಯರು ಅಭಿಪ್ರಾಯ ಪಡುತ್ತಾರೆ. ಅದೇನೆಂದರೆ 'ಅಸ್ಯ ಲೋಕಸ್ಯ ಕಾ ಗತಿಃ?' ಎಂದು ಶಾಲಾವತ್ಯರು ಪ್ರಶ್ನೆ ಮಾಡಿದಾಗ 'ಆಕಾಶ ಇತಿ ಹೋವಾಚ' ಎಂದು ಪ್ರವಾಹಣರು ಉತ್ತರ ಕೊಡುತ್ತಾರೆ. ಮುಂದೆ ಆಕಾಶದ ಬಗ್ಗೆ ಇನ್ನೂ ಅನೇಕ ಧರ್ಮಗಳನ್ನು ಹೇಳುತ್ತಾರೆ. ಹೀಗೆ ಆಕಾಶಶಬ್ದವು ಉಪಕ್ರಮದಲ್ಲಿ ಶ್ರುತವಾಗಿದೆ. ಹಾಗೂ ಅನೇಕ ಬಾರಿ ಶ್ರುತವಾಗಿದೆ. ಹಿಂದಿನ ಅಧಿ-ಕರಣದಲ್ಲಾದರೂ (ಅಂತಃಸ್ಥತ್ವಾಧಿಕರಣದಲ್ಲಿ) ಒಂದೇ ವಾಕ್ಯದಲ್ಲಿ ಇಂದ್ರ, ಬೃಹಸ್ಪತಿ, ವರುಣ, ಸೂರ್ಯ, ಮೊದಲಾದ ಅನೇಕ ನಾಮಗಳು ಶ್ರುತವಾಗಿವೆ. ಆಗ ಅಲ್ಲಿ ಅನೇಕ ನಾಮಗಳು ಬಂದಿರುವುದರಿಂದ ಇವು ಅನೇಕ ದೇವತೆಗಳ ನಾಮಗಳೋ ಅಥವಾ 'ಯೋ ದೇವಾನಾಂ ನಾಮಧಾ ಏಕ ಏವ' ಎಂಬಂತೆ ವಿಷ್ಣುವಿನ ನಾಮಗಳೋ ಎಂದು ಸಂದೇಹಕ್ಕೆ ಅವಕಾಶವಿದೆ. ಆದರೆ ಇಲ್ಲಿ (ಆಕಾಶ ಇತಿ ಹೋವಾಚ' ಎಂಬಲ್ಲಿ) ಸಂದೇಹಕ್ಕೆ ಅವಕಾಶವೇ ಇಲ್ಲ. ಏಕೆಂದರೆ ಆಕಾಶಶಬ್ದ ಬಿಟ್ಟು ಬೇರೆ ಯಾವ ಶಬ್ದವೂ ಇಲ್ಲ. ಆದ್ದರಿಂದ ಶ್ರುತಿತ್ವಪ್ರಯುಕ್ತಪ್ರಾಬಲ್ಯ, ಪರಸ್ಪರನಾನಾರ್ಥಉಪಸ್ಥಾಪಕತ್ವಾಭಾವ, ಉಪಕ್ರಮಸ್ಥತ್ವ ಮೊದಲಾದ ಅನೇಕ ಪ್ರಬಲಕಾರಣಗಳು ಇರುವುದರಿಂದ ಅನಂತತ್ವಾದಿ ಲಿಂಗಗಳನ್ನು ಹೇಗಾದರೂ ಮಾಡಿ ಆಕಾಶದಲ್ಲಿ ಸಾವಕಾಶ ಮಾಡಬೇಕು. ಹೀಗೆ ಹಿಂದಿನ ಅಂತಸ್ಥತ್ವಾಧಿಕರಣದಲ್ಲಿ ಸಿದ್ಧಾಂತವನ್ನು ಹೇಳಿದ ಮೇಲೆ ಅದರ ಮೇಲೆ ಬರುವ ಅಭ್ಯಧಿಕಾಶಂಕೆಯನ್ನು ಅನೇಕ ರೀತಿ ಉಪಪಾದನೆ ಮಾಡಿ, ಆ ಎಲ್ಲಾ ಪೂರ್ವಪಕ್ಷಗಳೂ ಕೂಡ ಭಾಷ್ಯ, ಅನುವ್ಯಾಖ್ಯಾನಗಳಲ್ಲಿ ಹೇಗೆ ಸೂಚಿತವಾಗಿವೆ ಎಂಬುದನ್ನು ಚಂದ್ರಿಕಾಚಾರ್ಯರು ಹೃದಯಂಗಮವಾಗಿ ವಿವರಿಸಿದ್ದಾರೆ.

ಇನ್ನು ಚಂದ್ರಿಕಾಚಾರ್ಯರು ಅಭ್ಯಧಿಕಶಂಕಾ ಇಲ್ಲದೆಯೂ ಪೂರ್ವಪಕ್ಷವನ್ನು ಮಾಡಬಹುದು ಎಂದು ಮತ್ತೊಂದು ರೀತಿಯಲ್ಲಿ ಚಮತ್ಕಾರವಾಗಿ ಪೂರ್ವಪಕ್ಷವನ್ನು ತೋರಿಸುತ್ತಾರೆ.

ಅಂತಃಸ್ಥತ್ವಾಧಿಕರಣದಲ್ಲಿ ಸಮುದ್ರಶಾಯಿತ್ವ ಎಂಬ ವಿಷ್ಣುವಿನ ಪ್ರಸಿದ್ಧಲಿಂಗವನ್ನು ಆಧರಿಸಿ, ಇಂದ್ರ ಮೊದಲಾದ ಶಬ್ದಗಳು ವಿಷ್ಣುವಿನ ನಾಮಗಳು ಎಂದು ಹೇಳಲಾಗಿದೆ. ಅದರಂತೆ ಅನಂತತ್ವ ಎಂಬ ಲಿಂಗವು

ವಿಷ್ಣುವಿನ ಅಸಾಧಾರಣಧರ್ಮವಾಗಿದೆ ಎಂದು ನಿಶ್ಚಯವಿಲ್ಲ. ಆದ್ದರಿಂದ ಅನಂತತ್ವಾದಿಧರ್ಮಗಳು ವಿಷ್ಣುವಿನ ಅಸಾಧಾರಣಧರ್ಮವಾಗಿವೆ ಎಂದು ಹೇಳಲು ಈ ಅಧಿಕರಣ ಹೊರಟಿದೆ ಎಂದು ಹಿಂದಿನ ಅಧಿಕರಣವನ್ನಾಧರಿಸದೇನೇ ಪೂರ್ವಪಕ್ಷವನ್ನು ಮಾಡಬಹುದು.

ಈ ರೀತಿಯ ಪೂರ್ವಪಕ್ಷವು ಭಾಷ್ಯದಲ್ಲಿ ಅಭ್ಯಧಿಕಾಶಂಕಾವನ್ನು ಹೇಳದಿರುವುದರಿಂದಲೇ ಸೂಚಿತ-ವಾಗಿದೆ ಎಂದು ಚಂದ್ರಿಕಾಚಾರ್ಯರು ಹೇಳುತ್ತಾರೆ. ಅನುವ್ಯಾಖ್ಯಾನದಲ್ಲಿ ಅಭ್ಯಧಿಕಾಶಂಕಾವನ್ನು ತೋರಿಸಿರುವುದು ಪೂರ್ವಪಕ್ಷವನ್ನು ದೃಢಪಡಿಸಲು ಹೊರತು ಹಾಗೆ ಪೂರ್ವಪಕ್ಷವನ್ನು ಹೇಳಬೇಕೆಂಬ ಅರ್ಥದಲ್ಲಿ ಅಲ್ಲ.

ಹೀಗೆ ಚಂದ್ರಿಕಾಚಾರ್ಯರು ಆಕಾಶಾಧಿಕರಣದಲ್ಲಿ ಎಂಟು ರೀತಿಯಲ್ಲಿ ಪೂರ್ವಪಕ್ಷವನ್ನು ತೋರಿ-ಸುತ್ತಾರೆ. ಇದರಲ್ಲಿ ಮೂರು ರೀತಿಯನ್ನು ಕಂಠತಃ ಆಚಾರ್ಯರು ಅನುವ್ಯಾಖ್ಯಾನ, ಭಾಷ್ಯದಲ್ಲಿ ಹೇಳಿದ್ದಾರೆ. ಇನ್ನುಳಿದ ಐದು ಪೂರ್ವಪಕ್ಷಗಳನ್ನು ಚಂದ್ರಿಕಾಚಾರ್ಯರು ತಮ್ಮ ಸೂಕ್ಷ್ಮದೃಷ್ಟಿಯಿಂದ ಅನುವ್ಯಾಖ್ಯಾನ, ಭಾಷ್ಯದಲ್ಲಿ ಆಚಾರ್ಯರು ಹೇಳಿದ ವಾಕ್ಯಗಳಿಂದ, ಉದಾಹೃತವಾದ ಶ್ರುತಿಗಳಿಂದ, ಇನ್ನು ಕೆಲವುಕಡೆ ಹೇಳದೇ ಮೌನವಾಗಿರುವುದರಿಂದ (ಭಾಷ್ಯದಲ್ಲಿ ಅಭ್ಯಧಿಕಾಶಂಕೆಯು ಉಕ್ತವಾಗದೇ ಇರುವುದರಿಂದ) ಸೂಚಿತವಾದ ಪೂರ್ವಪಕ್ಷಗಳನ್ನು ತೋರಿಸಿದ್ದಾರೆ. ಈ ರೀತಿಯ ವ್ಯಾಖ್ಯಾನ ಚಂದ್ರಿಕಾದಲ್ಲಿಯೇ ಕಾಣಬಹುದಾದ ವಿಶಿಷ್ಟಶೈಲಿಯಾಗಿದೆ. ಚಂದ್ರಿಕಾದಲ್ಲಿರುವ ಇಂತಹ ರತ್ನಗಳನ್ನು ಶ್ರೀಮಂತ್ರಾಲಯಪ್ರಭುಗಳ ಪ್ರಕಾಶದ ಸಹಾಯವಿಲ್ಲದೆ ನೋಡುವುದು ದುಃಸಾಧ್ಯವಾಗಿದೆ.

## ಪ್ರಾಣಾಧಿಕರಣ

ಈ ಅಧಿಕರಣದಲ್ಲಿ ಸಕಲ ಆಧ್ಯಾತ್ಮಿಕಶಬ್ದಗಳನ್ನು ವಿಷ್ಣುಪರ ಎಂಬುದನ್ನು ಸಮರ್ಥಿಸುತ್ತಾರೆ. ಆದರಲ್ಲಿ ದೃಷ್ಟಾಂತವಾಗಿ ಪ್ರಾಣಶಬ್ದದ ಸಮನ್ವಯವನ್ನು ಮಾಡುತ್ತಾರೆ.

ಚಂದ್ರಿಕಾಚಾರ್ಯರು ಪೂರ್ವಪಕ್ಷವನ್ನು ಅತ್ಯಂತ ದೃಢವಾಗಿ ಸಮರ್ಥಿಸಿದ್ದಾರೆ. ಹಾಗೂ ಅನು-ವ್ಯಾಖ್ಯಾನ, ಸುಧಾದಲ್ಲಿ ಬರುವ ಆಪಾತತಃ ಪ್ರತೀತವಾದ ಅರ್ಥವನ್ನು ನಿರಾಕರಿಸಿ, ಸರಿಯಾದ ಅರ್ಥವನ್ನು ಹೇಳುತ್ತಾರೆ.

ಈ ಅಧಿಕರಣದಲ್ಲಿ ಬರುವ ದೊಡ್ಡತೊಂದರೆ ಏನೆಂದರೆ ಪೂರ್ವಪಕ್ಷವನ್ನೇ ಮಾಡಲು ಬರುವುದಿಲ್ಲ ಎಂದು. ಇದನ್ನು ಚಂದ್ರಿಕಾಚಾರ್ಯರು ಸಮರ್ಥನೆ ಮಾಡುತ್ತಾರೆ.

ಮೊದಲು — ಇಲ್ಲಿ ಬರುವ ವಿಷಯವಾಕ್ಯವೇನೆಂದರೆ 'ತದ್ವೈ ತ್ವಂ ಪ್ರಾಣೋಽಭವಃ' ಎಂಬ ತೈತ್ತಿರೀಯದ ವಾಕ್ಯ. ಇಲ್ಲಿ ಬರುವ ಪ್ರಾಣಶಬ್ದಾರ್ಥವು ಜಡವಾದ ವಾಯುವೋ; ಅಥವಾ ಮುಖ್ಯ-ಪ್ರಾಣನೋ? ಜಡವಾದ ವಾಯು ಆಗುವುದಿಲ್ಲ. ಏಕೆಂದರೆ, ಅದೇ ವಾಕ್ಯದಲ್ಲಿ 'ತ್ವಂ ಪ್ರಾಣಃ ಅಭವಃ' ಎಂಬ ಸಂಬೋಧನೆ ಕೇಳಲ್ಪಡುತ್ತಿದೆ. ಜಡವಾದ ವಸ್ತುವಿಗೆ ಸಂಬೋಧನೆಯು ಹೇಗೆ ಕೂಡುತ್ತದೆ?

ಹಾಗಾದರೆ ಮುಖ್ಯಪ್ರಾಣನನ್ನು ತೆಗೆದುಕೊಳ್ಳಬಹುದಲ್ಲಾ? ಎಂದರೆ. ಇದಾಗದು. ಪ್ರಾಣಶಬ್ದದ ಪ್ರವೃತ್ತಿನಿಮಿತ್ತವಾದ ಜೀವನಹೇತುತ್ವವು (ಜೀವನಕ್ಕೆ ಕಾರಣವಾಗುವುದು) ಪ್ರಾಣನಲ್ಲಿ ಕೂಡುವುದಿಲ್ಲ.

ಏಕೆಂದರೆ, ಕಾರಣತ್ವವು ಅನ್ವಯವ್ಯತಿರೇಕದಿಂದ ಅನುಮೇಯ. ಇಂತಹ ಅನ್ವಯವ್ಯತಿರೇಕವು ಜಡರೂಪ-ವಾದ ವಾಯುವಿಗೆ ಇದೆಯೇ ಹೊರತು ಚೇತನನಾದ ಮುಖ್ಯಪ್ರಾಣನಿಗೆ ಇಲ್ಲ.

ಹಾಗಾದರೆ ಜಡವಾದ ವಸ್ತುವಿಗೇ ಪ್ರಾಣಶಬ್ದವಾಚ್ಯತ್ವವನ್ನು ಹೇಳುತ್ತೇವೆ. ಜಡಕ್ಕೆ ಸಂಬೋಧನೆಯನ್ನು ಅಭಿಮಾನದ್ವಾರಾ ಕೂಡಿಸಬಹುದು. ಎಂದರೆ ಇದೂ ಸರಿಯಲ್ಲ. ಏಕೆಂದರೆ, ಪ್ರಾಣಶಬ್ದಕ್ಕೆ ಮುಖ್ಯವಾದ ಅರ್ಥ ಮುಖ್ಯಪ್ರಾಣ. ಅಮುಖ್ಯವಾದ ಅರ್ಥ ಜಡವಾದ ವಾಯು. ಆದ್ದರಿಂದ ಮುಖ್ಯಾರ್ಥವನ್ನು ಬಿಟ್ಟು ಅಮುಖ್ಯಾರ್ಥವನ್ನು ಇಟ್ಟುಕ್ಕೊಳ್ಳಬಾರದು. ಆದರೆ ಹೀಗೆ ಹೇಳಿದರೆ, ಮುಖ್ಯಾರ್ಥನಾದವನು ಮುಖ್ಯ-ಪ್ರಾಣನಿಗಿಂತ ವಿಷ್ಣುವು ಇದ್ದಾನೆ. ಆದ್ದರಿಂದ ಅವನೇ ಪ್ರಾಣಶಬ್ದಕ್ಕೆ ವಾಚ್ಯನಾಗುತ್ತಾನೆ. ಹಾಗಾಗಿ ಪೂರ್ವಪಕ್ಷವು ಹುಟ್ಟದೇ ಹೋದೀತು.

ಇನ್ನುಲೋಕಪ್ರಸಿದ್ಧಿಯನ್ನು ಇಟ್ಟುಕೊಂಡು, ಪ್ರಾಣಶಬ್ದವಾಚ್ಯನಾದದ್ದು ಜಡವಾಯು ಎಂದು ಹೇಳಿದರೆ; ಇದೂ ಸರಿಯಲ್ಲ. ಏಕೆಂದರೆ ಈ ರೀತಿ ಪೂರ್ವಪಕ್ಷ ಮಾಡಿದರೆ ಟೀಕಾ, ಮತ್ತು ಅನುವ್ಯಾಖ್ಯಾನಗಳ ವಿರೋಧ ಬರುತ್ತದೆ. ಅಲ್ಲಿ ಮುಖ್ಯಪ್ರಾಣನು ಪ್ರಾಣಶಬ್ದದಿಂದ ವಾಚ್ಯ ಎಂದು ಹೇಳಿದೆ ಹೊರತು ಜಡವಾಯುವೆಂದು ಹೇಳಿಲ್ಲ. ಅಷ್ಟೇ ಅಲ್ಲದೆ ತ್ವಂ, ಅಭವಃ, ಪ್ರಾಣಃ ಇತ್ಯಾದಿಯಾಗಿ ಅನೇಕ ಸಂಬೋಧನಾ ವಾಚಕಶಬ್ದಗಳಿಗೆ ಅಮುಖ್ಯಾರ್ಥವನ್ನು ಕಲ್ಪಿಸಬೇಕಾಗುತ್ತದೆ. ಆದ್ದರಿಂದ ಜಡವಾಯುವನ್ನು ತೆಗೆದು-ಕೊಳ್ಳಲಾಗುವುದಿಲ್ಲ. ಮುಖ್ಯಪ್ರಾಣನನ್ನೂ ತೆಗೆದುಕೊಳ್ಳಲು ಬರುವುದಿಲ್ಲ (ಜೀವನಹೇತುತ್ವವು ಅವನಲ್ಲಿ ಅಸಿದ್ಧ). ಆದ್ದರಿಂದ ಪೂರ್ವಪಕ್ಷದಲ್ಲಿ ಪ್ರಾಣಶಬ್ದದಿಂದ ಹೇಳಲ್ಪಡುವವನು ಯಾರು? ಎಂಬ ಪ್ರಶ್ನೆ ಬರುತ್ತದೆ.

ಈ ಪ್ರಶ್ನೆಗೆ ಚಂದ್ರಿಕಾಚಾರ್ಯರು ಎರಡು ರೀತಿಯಲ್ಲಿ ಸಮಾಧಾನವನ್ನು ಹೇಳುತ್ತಾರೆ.

(೧) ಪೂರ್ವಪಕ್ಷದಲ್ಲಿ ಮುಖ್ಯಪ್ರಾಣನನ್ನೇ ತೆಗೆದುಕೊಳ್ಳಬೇಕು. ಅವನಿಗೆ ಜೀವನಹೇತುತ್ವವನ್ನು ಪ್ರತ್ಯಕ್ಷದಿಂದ, ಅನ್ವಯವ್ಯತಿರೇಕದಿಂದ ಹೇಳಲು ಬರದಿದ್ದರೂ, ಆಗಮದಿಂದ ಹೇಳಬಹುದು. ಆಗಮದಲ್ಲಿ ''ತತ್ಪ್ರಾಣೇ ಪ್ರಪನ್ನಃ, ಉದತಿಷ್ಠತ್, ತತ್ಪ್ರಾಣ ಉತ್ಕ್ರಾಂತೇ ಪದ್ಯತೇ ಎಂಬುದಾಗಿ ಅನ್ವಯವ್ಯತಿರೇಕತ್ವಅನುವಿಧಾಯಿತ್ವವನ್ನು ಮುಖ್ಯಪ್ರಾಣನಿಗೆ ಹೇಳಲಾಗಿದೆ. ಇದರಿಂದ ಜೀವನ ಹೇತುತ್ವವನ್ನು ಮುಖ್ಯಪ್ರಾಣನಿಗೆ ಹೇಳಬಹುದು. ಹೀಗೆ ಪ್ರಾಣಶಬ್ದದ ಪ್ರವೃತ್ತಿನಿಮಿತ್ತವಾದ ಜೀವನ ಹೇತುತ್ವವು ಮುಖ್ಯಪ್ರಾಣನಲ್ಲಿರುವುದರಿಂದ ''ತದ್ವೈ ತ್ವಂ ಪ್ರಾಣ ಅಭವಃ'' ಎಂಬಲ್ಲಿರುವ ಪ್ರಾಣಶಬ್ದದಿಂದ ವಾಚ್ಯನಾದವನು ಮುಖ್ಯಪ್ರಾಣನೇ ಎಂದು ಹೇಳಬಹುದು.

(೨) ಎರಡನೆ ರೀತಿಯ ಸಮಾಧಾನವನ್ನು ಚಂದ್ರಿಕಾಚಾರ್ಯರು ಆಗಮಸಹಾಯವಿಲ್ಲದೆ ಜೀವನಹೇತುತ್ವವನ್ನು ನೇರವಾಗಿ ಮುಖ್ಯಪ್ರಾಣನಿಗೆ ಹೇಳಬಹುದು ಎಂದು ಹೇಳಿದ್ದಾರೆ.

ಇದನ್ನು ಲೋಕದ ದೃಷ್ಟಾಂತವನ್ನು ಕೊಟ್ಟು ಸ್ವಾರಸ್ಯವಾಗಿ ಸಮರ್ಥಿಸಿದ್ದಾರೆ. ಒಂದು ಮಡಿಕೆಗೆ ಕಾರಣನಾದವನು ಯಾರು? ಎಂಬ ಪ್ರಶ್ನೆಗೆ ಕುಂಭಕಾರನು ಎಂದು ಉತ್ತರಿಸುತ್ತೇವೆ. ಆದರೆ ಈ ಘಟಕಾರಣತ್ವವನ್ನು ಅನ್ವಯವ್ಯತಿರೇಕಗಳಿಂದ ತಿಳಿದುಕೊಳ್ಳಬೇಕು. ಈ ಅನ್ವಯವ್ಯತಿರೇಕ-ವಾದರೋ ಕುಲಾಲನ ಶರೀರಕ್ಕೆ ಇದೆಯೇ ಹೊರತು ಕುಲಾಲ(ಜೀವ)ನಿಗೆ ಬರುವುದಿಲ್ಲ.

ಏಕೆಂದರೆ, ಪ್ರತ್ಯಕ್ಷವಾಗಿ ಕಾಣುವುದು ಕುಲಾಲನ ಶರೀರ ಹೊರತು ಜೀವನಾದ ಕುಲಾಲನಲ್ಲ. 'ಕುಲಾಲಶರೀರವಿದ್ದರೆ ಘಟ, ಇಲ್ಲದಿದ್ದರೆ ಘಟವಿಲ್ಲ'. ಆದ್ದರಿಂದ ಕುಲಾಲನಿಗೆ ಘಟಕಾರಣತ್ವ-ವಿಲ್ಲ. ಆದರೆ ಲೋಕದಲ್ಲಿ ಘಟಕಾರಣತ್ವವನ್ನು ನಾವು ಕುಲಾಲನಿಗೆ ಒಪ್ಪುತ್ತೇವೆ. ಕುಲಾಲ-ಶರೀರಕ್ಕೆ ಅನ್ವಯವ್ಯತಿರೇಕವು ಕಂಡರೂ ಆ ಶರೀರದ ಸ್ವಾಮಿಯಾದ ಕುಲಾಲ ಆತ್ಮನಿಗೂ ಅನ್ವಯವ್ಯತಿರೇಕವು ಅರ್ಥಾತ್ ಸಿದ್ಧಿಸುವುದರಿಂದ.

ಆದರಂತೆ ಕೇವಲ ಈ ಜಡಭೂತವಾದ ವಾಯುವಿಗೆ ಜೀವನಹೇತುತ್ವವೆಂಬುದು ಅನ್ವಯ-ವ್ಯತಿರೇಕದಿಂದ ಸಿದ್ಧಿಸಿದರೂ, ಆ ಜಡಭೂತವಾದ ವಾಯುವನ್ನೇ ಶರೀರವಾಗಿ ಉಳ್ಳ ಮುಖ್ಯಪ್ರಾಣನಿಗೂ ಕೂಡ ಜೀವನಹೇತುತ್ವವನ್ನು ಹೇಳಬಹುದು.

ಆದರೆ ಹೀಗೆ ಹೇಳಿದರೆ ವಿಷ್ಣುವಿಗೂ ಜೀವನಹೇತುತ್ವವನ್ನು ಹೇಳಬೇಕಾಗುತ್ತದೆ. ಏಕೆಂದರೆ ಜಡಭೂತವಾದ ವಾಯುವಿನೊಳಗೆ ವಿಷ್ಣುವೂ ಇದ್ದಾನೆ. ಅವನೂ ಮುಖ್ಯಪ್ರಾಣನಂತೆ ಆ ವಾಯುವಿಗೆ ಸ್ವಾಮಿಯಾಗಿದ್ದಾನೆ. ಅದು ಅವನ ಶರೀರವೂ ಆಗಿದೆ. ಆದ್ದರಿಂದ ಪ್ರಾಣಶಬ್ದದಿಂದ ವಾಚ್ಯನಾದವನು ವಿಷ್ಣುವೂ ಆಗಿಬಿಡುತ್ತಾನೆ ಎಂದರೆ, ಆಗುವುದಿಲ್ಲ ಎಂದು ಉತ್ತರ. ಏಕೆಂದರೆ ವಿಷ್ಣುವಿಗೂ ಜೀವನಹೇತುತ್ವವನ್ನು ಹೇಳಬೇಕೆಂದರೆ ತದನ್ವಯವ್ಯತಿರೇಕವನ್ನು ಹೇಳಬೇಕು. ಆದರೆ ವಿಷ್ಣುವು ಸರ್ವಗತನಾದುದರಿಂದ ಅವನ ವ್ಯತಿರೇಕವನ್ನು ಎಲ್ಲೂ ಹೇಳಲಿಕ್ಕೆ ಬರುವುದಿಲ್ಲ. ಆದ್ದರಿಂದ ಅವನ ಅನ್ವಯವನ್ನು ಹೇಳಲಿಕ್ಕೆ ಬಂದರೂ, ವ್ಯತಿರೇಕವನ್ನು ಹೇಳಲಿಕ್ಕೆ ಬರುವುದಿಲ್ಲವಾದುದರಿಂದ ಜೀವನಹೇತುತ್ವವನ್ನು ವಿಷ್ಣುವಿಗೆ ಹೇಳಲಾಗುವುದಿಲ್ಲ.

ಆದರೆ ಹೀಗೆ ಉತ್ತರ ಕೊಡಲು ಬರುವುದಿಲ್ಲ. ಏಕೆಂದರೆ ಭೂಮಾಧಿಕರಣದಲ್ಲಿ 'ಉತ್ಕ್ರಾಂತ-ಪ್ರಾಣಾನ್ ಶೂಲೇನ ಸಮಾಸಂ ವ್ಯತಿಷಂ ದಹೇತ್' ಎಂಬಲ್ಲಿ ಉತ್ಕ್ರಮಣಲಿಂಗವಿರುವುದರಿಂದ ಪ್ರಾಣಶಬ್ದವಾಚ್ಯನಾದವನು ಇಲ್ಲಿ ವಾಯು ಎಂದು ಪೂರ್ವಪಕ್ಷ ಮಾಡಿಕೊಂಡು ಪೂರ್ಣ-ಸುಖತ್ವಲಿಂಗವಿರುವುದರಿಂದ ಉತ್ಕ್ರಮಣವು ಒಂದು ರೂಪವಿಶೇಷದಿಂದ ವಿಷ್ಣುವಿನಲ್ಲೂ ಇದೆ. ಆದ್ದರಿಂದ ಪ್ರಾಣ ಶಬ್ದವಾಚ್ಯನಾದವನು ವಿಷ್ಣುವೇ ಆಗಿದ್ದಾನೆ ಎಂದು ಸಿದ್ಧಾಂತ ಮಾಡಿದ್ದಾರೆ. ಆದ್ದರಿಂದ ವ್ಯತಿರೇಕವಿಲ್ಲವೆಂದು ಹೇಳಲಿಕ್ಕೆ ಬರುವುದಿಲ್ಲ. ಆದ್ದರಿಂದ ವಿಷ್ಣುವಿಗೂ ಜೀವನ-ಹೇತುತ್ವವನ್ನು ಹೇಳಬೇಕಾಗುತ್ತದೆ ಎಂದರೆ, ಇದಕ್ಕೆ ಚಂದ್ರಿಕಾಚಾರ್ಯರು ಅತ್ಯಂತ ಸೂಕ್ಷ್ಮವಾಗಿ ಉತ್ತರವನ್ನು ತೋರಿಸುತ್ತಾರೆ. 'ಉತ್ಕ್ರಾಂತಪ್ರಾಣಾನ್ ಶೂಲೇನ ಸಮಾಸಂ ವ್ಯತಿಷಂ ದಹೇತ್' ಎನ್ನುವಲ್ಲಿ ರೂಪವಿಶೇಷೇಣ ವಿಷ್ಣುವಿಗೂ ಉತ್ಕ್ರಮಣವನ್ನು ಹೇಳಿದ್ದಾರೆ ಹೊರತು ಶರೀರದಲ್ಲಿ ಇಲ್ಲ ಎಂದು ಹೇಳಿಲ್ಲ. ಆದ್ದರಿಂದ ಅವನು ಒಂದು ರೂಪದಿಂದ ಶರೀರದಲ್ಲೂ ಇರುತ್ತಾನೆ. ಹಾಗೆಯೇ ಇನ್ನೊಂದು ರೂಪದಿಂದ ಉತ್ಕ್ರಮಣವನ್ನು ಮಾಡುತ್ತಾನೆ. ಹೀಗಾಗಿ ಪುನಃ ವ್ಯತಿ-ರೇಕವನ್ನು ಹೇಳಲು ಆಗುವುದಿಲ್ಲ.

ಈ ವಿಷಯದಲ್ಲಿ ರಾಯರು ಒಂದು ದೃಷ್ಟಾಂತವನ್ನು ಕೊಡುತ್ತಾರೆ. ಹೇಗೆ ಶರೀರದಲ್ಲೇ ಇದ್ದು-ಕೊಂಡು, ಚಕ್ಷುರಿಂದ್ರಿಯವು ದೂರದ ಪದಾರ್ಥದ ತನಕ ನಿರ್ಗಮನ ಮಾಡುತ್ತದೋ, ಆದರಂತೆ ವಿಷ್ಣುವು ದೇಹದಲ್ಲಿದ್ದುಕೊಂಡೇ ಇಂದ್ರಿಯಗಳ ಜೊತೆಗೆ ನಿರ್ಗಮನವನ್ನು ಮಾಡು-

ತ್ತಾನೆ. ಆದ್ದರಿಂದ ದೇಹದಲ್ಲಿ ಅವನು ಇಲ್ಲದಿರುವ ಅವಕಾಶವೇ ಇಲ್ಲ. ಆದ್ದರಿಂದ ವ್ಯತಿರೇಕವನ್ನು ಹೇಳಲು ಆಗುವುದಿಲ್ಲವಾದ್ದರಿಂದ ಜೀವನಹೇತುತ್ವವನ್ನು ವಿಷ್ಣುವಿಗೆ ಹೇಳಲು ಬರುವುದಿಲ್ಲ.

ಆದ್ದರಿಂದ ಪ್ರತ್ಯಕ್ಷದಿಂದಾಗಲೀ, ಆಗಮದಿಂದಾಗಲೀ ಅನ್ವಯವ್ಯತಿರೇಕವನ್ನು ವಿಷ್ಣುವಿಗೆ ಹೇಳಲು ಬರುವುದಿಲ್ಲ. ಆದರೆ ಪ್ರತ್ಯಕ್ಷದಿಂದಲೂ, ಆಗಮದಿಂದಲೂ ಮುಖ್ಯಪ್ರಾಣನಿಗೆ ಅನ್ವಯವ್ಯತಿರೇಕವನ್ನು ಹೇಳಲು ಬರುವುದರಿಂದ ಜೀವನಹೇತುತ್ವವನ್ನು ಅವನಿಗೆ ಹೇಳ-ಬಹುದು. ಆದ್ದರಿಂದ ಪ್ರಾಣಶಬ್ದದ ಪ್ರವೃತ್ತಿನಿಮಿತ್ತವಾದ ಜೀವನಹೇತುತ್ವವು ಮುಖ್ಯಪ್ರಾಣನಲ್ಲಿ ಇರುವುದರಿಂದ 'ತದ್ವೈ ತ್ವಂ ಪ್ರಾಣೋऽಭವಃ' ಎಂಬಲ್ಲಿ ಪ್ರಾಣಶಬ್ದವಾಚ್ಯನಾದವನು ಮುಖ್ಯಪ್ರಾಣನೇ.

ಈ ರೀತಿಯಾಗಿ ಭಾಷ್ಯ-ತತ್ವಪ್ರಕಾಶಿಕಾ, ಅನುವ್ಯಾಖ್ಯಾನ-ಸುಧಾಗಳಲ್ಲಿ ಬಂದಿರುವ ಅನೇಕ ಪ್ರಮೇಯ-ಗಳ ವಿರೋಧವನ್ನು ಪರಿಹಾರಮಾಡುತ್ತಾ ಪೂರ್ವಪಕ್ಷವನ್ನು ದೃಢಪಡಿಸಿದ್ದಾರೆ.

## ಜ್ಯೋತಿರಧಿಕರಣ

ಓಂ ಜ್ಯೋತಿಶ್ಚರಣಾಭಿಧಾನಾತ್ ಓಂ ॥

ವ್ಯಾಸರಾಜರು ಚಂದ್ರಿಕೆಯ ಪ್ರಾರಂಭದಲ್ಲಿ 'ಟೀಕಾಸು ಚ ಯದಸ್ಪಷ್ಟಂ ತಚ್ಚ ಸ್ಪಷ್ಟೀಕರಿಷ್ಯತೇ' ಎಂದು ಪ್ರತಿಜ್ಞೆ ಮಾಡಿದ್ದಾರೆ. ಇದಕ್ಕೆ ದೊಡ್ಡ ನಿದರ್ಶನ ಜ್ಯೋತಿರಧಿಕರಣ. ಇಲ್ಲಿ ತತ್ವಪ್ರದೀಪ, ಸನ್ನ್ಯಾಯರತ್ನಾವಳಿ ಹಾಗೂ ತತ್ವಪ್ರಕಾಶಿಕಾ ಈ ಮೂರೂ ಟೀಕಾಗ್ರಂಥಗಳಲ್ಲಿರುವ ಅಸ್ಪಷ್ಟತೆಯನ್ನು ಉತ್ತಮರೀತಿಯಲ್ಲಿ ಪರಿಹಾರ ಮಾಡಿದ್ದಾರೆ.

ತತ್ವಪ್ರದೀಪ ಹಾಗೂ ಸನ್ನ್ಯಾಯರತ್ನಾವಳಿಗ್ರಂಥಗಳ ಪ್ರಕಾರ, ಜ್ಯೋತಿರಧಿಕರಣ ಹಾಗೂ ಗಾಯತ್ರ್ಯ-ಧಿಕರಣ ಇವೆರಡೂ ಸೇರಿ ಒಂದೇ ಅಧಿಕರಣ. ತತ್ವಪ್ರಕಾಶಿಕಾ ಗ್ರಂಥದ ಪ್ರಕಾರ 'ಜ್ಯೋತಿಶ್ಚರಣಾಭಿಧಾನಾತ್' ಎಂಬ ಒಂದು ಸೂತ್ರವು ಒಂದು ಅಧಿಕರಣ. ಇನ್ನು ಅದರ ಮುಂದೆ ಬರುವ ಮೂರು ಸೂತ್ರಗಳು ಸೇರಿ ಗಾಯತ್ರ್ಯಧಿಕರಣ.

ಇನ್ನು ವಿಷಯವಾಕ್ಯವು ಮೂರು ಟೀಕಾಗ್ರಂಥಗಳಲ್ಲಿ ಬೇರೆಯೇ ಹೇಳಿದ್ದಾರೆ. ತತ್ವಪ್ರದೀಪಕಾರರ ಮತದಲ್ಲಿ ಋಗ್ವೇದದಲ್ಲಿ ಬರುವ 'ಜ್ಯೋತಿರ್ಹೃದಯ ಆಹಿತಂ ಯತ್' ಎಂಬ ಅಗ್ನಿಸೂಕ್ತಸ್ಥವಾಕ್ಯವು ವಿಷಯವಾಕ್ಯ. ಸನ್ನ್ಯಾಯರತ್ನಾವಳಿಕಾರರ ಮತದಲ್ಲಿ 'ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ' ಎಂಬ ಛಾಂದೋಗ್ಯೋಪನಿಷತ್ತಿನಲ್ಲಿ ಬರುವ ವಾಕ್ಯವು ವಿಷಯವಾಕ್ಯ. ತತ್ವಪ್ರಕಾಶಿಕಾಕಾರರ ಪ್ರಕಾರ ಜ್ಯೋತಿರಧಿಕರಣಕ್ಕೆ ತತ್ವಪ್ರದೀಪಕಾರರು ಹೇಳಿದಂತೆ ಋಗ್ವೇದಮಂತ್ರವೇ ವಿಷಯವಾಕ್ಯ. ಇನ್ನು ಗಾಯತ್ರ್ಯಧಿಕರಣಕ್ಕೆ ಛಾಂದೋಗ್ಯದಲ್ಲಿ ಬರುವ 'ಗಾಯತ್ರೀ ವಾ ಇದಂ ಸರ್ವಂ ಭೂತಂ ಯದಿದಂ ಕಿಂಚ' ಎಂಬ ವಾಕ್ಯವು ವಿಷಯವಾಕ್ಯ.

ಈ ಮೂರು ಟೀಕಾಗಳಲ್ಲಿ ತೋರುವ ಅಧಿಕರಣರಚನೆ ಹಾಗೂ ವಿಷಯವಾಕ್ಯಗಳಲ್ಲಿ ಆಪಾತತಃ

ತೋರುವ ವಿರೋಧವನ್ನು ಚಂದ್ರಿಕಾಚಾರ್ಯರು ಪರಿಹಾರಮಾಡಿದ್ದಾರೆ. ಎಲ್ಲರ ಪಕ್ಷವನ್ನೂ ಸಮರ್ಥನೆ ಮಾಡಿದ್ದಾರೆ. ಪ್ರತಿಯೊಂದು ಮತದಲ್ಲೂ ಟೀಕಾದಲ್ಲೂ ಭಾಷ್ಯದಲ್ಲಿರುವ ವಾಕ್ಯಗಳು ಹೇಗೆ ಅಧಿಕರಣ ರಚನೆಗೆ ಸಹಾಯಮಾಡುತ್ತವೆ ಎನ್ನುವುದನ್ನು ಸ್ವಾರಸ್ಯವಾಗಿ ಸಮರ್ಥನೆ ಮಾಡುತ್ತಾರೆ. ಹಾಗೆಯೇ ಆಚಾರ್ಯರು ಭಾಷ್ಯದಲ್ಲಿ ಉದಾಹರಿಸಿದ ವಾಕ್ಯಗಳು ಹೇಗೆ ಪ್ರತಿಯೊಬ್ಬ ಟೀಕಾಕಾರರಿಗೆ ವಿಷಯವಾಕ್ಯ-ಗಳನ್ನು ತೆಗೆದುಕೊಳ್ಳುವಲ್ಲಿ ಮಾರ್ಗದರ್ಶನ ಮಾಡಿವೆ ಎಂಬುದನ್ನು ಕೂಲಂಕಷವಾಗಿ ವಿಚಾರ ಮಾಡಿದ್ದಾರೆ.

''ಟೀಕಾಸು ಯದಸ್ಪಷ್ಟಂ'' ಎನ್ನುವುದಕ್ಕೆ ಮತ್ತೊಂದು ಉದಾಹರಣೆ —

ತತ್ವಪ್ರದೀಪದಲ್ಲಿ ಈ ಅಧಿಕರಣದಲ್ಲಿ ಹೀಗೊಂದು ವಾಕ್ಯವಿದೆ. - ಅಗ್ನಿಸೂಕ್ತಂ ಉದಾಹೃತ್ಯ ಮಂತ್ರ-ಗೋಚರಂ ವಿಚಾರಂ ಆರಚಯತಾ ಪರಮವೈದಿಕೇನ ಆಚಾರ್ಯೇಣ ನಿಖಿಲೋऽಪಿ ವೇದಸಮನ್ವಯಃ ವಿಚಾರಿತಃ ಭವತಿ'.

ಇದರ ಸಾಮಾನ್ಯ ಅರ್ಥ -- ''ಭಾಷ್ಯದಲ್ಲಿ 'ಜ್ಯೋತಿರ್ಹೃದಯ ಆಹಿತಂ ಯತ್' ಎಂದು ಋಗ್ವೇದದ ಅಗ್ನಿಸೂಕ್ತದ ಮಂತ್ರವನ್ನು ಉದಾಹರಿಸಿದ್ದರಿಂದ ಸಮಸ್ತವೇದದ ಸಮನ್ವಯವನ್ನು ಮಾಡಿದಂತಾಯಿತು'' ಎಂದು.

ಇಲ್ಲಿ ಒಂದು ಸಂದೇಹ ಬರುತ್ತದೆ. ಋಗ್ವೇದ ಮಂತ್ರವನ್ನು ಉದಾಹರಿಸಿದ್ದರಿಂದ ಹೇಗೆ ಇಡೀ ವೇದ-ಸಮನ್ವಯವನ್ನು ಮಾಡಿದಂತೆ ಆಯಿತು? ಎಂದು. ಇದಕ್ಕೆ ಉತ್ತರವನ್ನು ಚಂದ್ರಿಕೆಯ ಕೆಳಗಿನ ವಾಕ್ಯದಿಂದ ಪಡೆಯಬಹುದು ಎಂದೆನಿಸುತ್ತದೆ. ''ಯದ್ಯಪಿ ಛಂದೋಗ್ಯೋಕ್ತಸ್ಯ ಬ್ರಹ್ಮತ್ವೇ, 'ಯದ್ವೈ ತದ್ ಬ್ರಹ್ಮ' ಇತ್ಯಾದಿ ಶ್ರುತಿಲಿಂಗಾನಿ ಸ್ವವಾಕ್ಯಸ್ಥಾನಿ ಸಂತಿ । ತಥಾಪಿ ತತ್ತತ್ಸೂಕ್ತಸ್ಥನಿರವಕಾಶವಿಷ್ಣುಲಿಂಗೈಃ ಸಾವಕಾಶ-ಶ್ರುತಿಸೂಕ್ತಬಾಧೇನ ಭಿಕ್ಷುಕಪಾದಪ್ರಸರಣನ್ಯಾಯೇನ ಸರ್ವವೇದಾನಾಂ ವಿಷ್ಣೌ ಸಮನ್ವಯಂ ದರ್ಶಯಿತುಂ ಸೂತ್ರಕಾರೇಣ ಅಗ್ನಿಸೂಕ್ತಸ್ಥಂ ಲಿಂಗಮ್ ಉಕ್ತಮ್॥' ಈ ವಾಕ್ಯವನ್ನು ಚಂದ್ರಿಕಾಚಾರ್ಯರು ಸನ್ನ್ಯಾಯರತ್ನಾವಳಿಯ ರೀತ್ಯಾ ಅಧಿಕರಣ ರಚನೆ ಹಾಗೂ ವಿಷಯವಾಕ್ಯದ ಸಮರ್ಥನೆ ಮಾಡುವ ಸಂದರ್ಭದಲ್ಲಿ ಹೇಳಿದ್ದಾರೆ.

ಈ ವಾಕ್ಯಕ್ಕೆ ಪೀಠಿಕೆಯನ್ನು ಬರೆಯುತ್ತಾ ರಾಯರು *'ನನು ಅಯುಕ್ತಮ್ ಏತತ್ । ಛಾಂದೋಗ್ಯಗತ-ಜ್ಯೋತಿಷಃ ವಿಷ್ಣುತ್ವಂ ತತ್ರತ್ಯಾನಾಂ 'ತತೋ ಜ್ಯಾಯಾಂಶ್ಚ ಪೂರುಷಃ' 'ಯದ್ವೈ ತದ್ ಬ್ರಹ್ಮ' 'ಏತಾಮೇವ ಬ್ರಹ್ಮೋಪನಿಷದಂ ವೇದ' ಇತಿ ಶ್ರುತೀನಾಂ 'ಏತಾಮೇವ ನಾತಿಶೀಯಂತೇ' ಇತಿ ಸರ್ವೋತ್ತಮತ್ವ, ಗಾನತ್ರಾಣಕರ್ತೃತ್ವ, ಭೂತಾದಿಪಾದತ್ವಾದಿಲಿಂಗಾನಾಂ ಚ ತ್ಯಾಗೇನ, ಅನ್ಯಗತಲಿಂಗೋದಾಹರಣೇ ಪ್ರಯೋ-ಜನಾಭಾವಾತ್ ಇತ್ಯಾಶಂಕ್ಯ ಆಹ - ಯದ್ಯಪಿ ಇತಿ ॥'* ಎಂದು ಹೇಳಿದ್ದಾರೆ.

ಇದರ ತಾತ್ಪರ್ಯ -

> ಸನ್ನ್ಯಾಯರತ್ನಾವಳಿಕಾರರ ಪ್ರಕಾರ ಛಾಂದೋಗ್ಯೋಪನಿಷತ್ತಿನಲ್ಲಿ ಬರುವ 'ಅಥ ಯದತಃ ಪರೋ ದಿವೋ ಜ್ಯೋತಿಃ' ಎಂಬ ವಾಕ್ಯವು ವಿಷಯವಾಕ್ಯ. ಇಲ್ಲಿ ಬರುವ ಜ್ಯೋತಿಃಶಬ್ದದ ಸಮನ್ವಯ-ವನ್ನು (ಜ್ಯೋತಿಃಶಬ್ದವು ವಿಷ್ಣುಪರವೆಂದು) ಮಾಡಬೇಕಾಗಿದೆ. ಇದು ವಿಷ್ಣುಪರ ಎಂದು ಸಾಧನೆ ಮಾಡಬೇಕಾದರೆ ಅಲ್ಲೇ ಇರುವ ಅನೇಕ ನಿರವಕಾಶಲಿಂಗಗಳು, ಬ್ರಹ್ಮಶ್ರುತಿಯು ಇವುಗಳನ್ನು

ಉದಾಹರಿಸುವುದನ್ನು ಬಿಟ್ಟು ಆಚಾರ್ಯರು ಋಗ್ವೇದದಲ್ಲಿ ಬರುವ ಅಗ್ನಿಸೂಕ್ತಸ್ಥಲಿಂಗಗಳನ್ನು ಯಾಕೆ ಉದಾಹರಿಸಿದ್ದಾರೆ? ಎಂದರೆ ಅದಕ್ಕೊಂದು ದೊಡ್ಡ ಪ್ರಯೋಜನವಿದೆ. ಅದೇನೆಂದರೆ ಆಚಾರ್ಯರು ಒಂದು ಸಾಮಾನ್ಯನಿಯಮವನ್ನು ತೋರಿಸುತ್ತಿದ್ದಾರೆ. ವೇದಗಳಲ್ಲಿ (ಮಂತ್ರಗಳೇ ಆಗಲಿ, ಉಪನಿಷತ್ತೇ ಆಗಲಿ) ಸಾವಕಾಶವಾದ ಲಿಂಗಗಳು ಇರುವ ವಾಕ್ಯಗಳು ಇದ್ದಾಗ ಆ ವಾಕ್ಯಗಳಲ್ಲಿ ಬರುವ ಶಬ್ದಗಳನ್ನು ವಿಷ್ಣುಪರವನ್ನಾಗಿ ಮಾಡಬೇಕಾದರೆ ವೇದಗಳಲ್ಲಿ ಅದೇ ವಾಕ್ಯದಲ್ಲಿ ಇರುವ ನಿರವಕಾಶವಿಷ್ಣುಲಿಂಗಗಳಿಂದ ಸಾವಕಾಶಲಿಂಗಗಳನ್ನು ಬಾಧಿಸಬೇಕು. ಆಗ ಆ ಸಾವಕಾಶವಾದ ಲಿಂಗಗಳು ಇರುವ ವಾಕ್ಯಗಳು ವಿಷ್ಣುಪರವಾಗುತ್ತವೆ. ವಸ್ತುತಃ ಛಾಂದೋಗ್ಯದಲ್ಲಿ ಬರುವ ಈ ವಾಕ್ಯಕ್ಕೆ ಈ ನಿಯಮವನ್ನು ಕೂಡಿಸಬೇಕಾಗಿಲ್ಲ. ಏಕೆಂದರೆ ಅದೇ ವಾಕ್ಯದಲ್ಲಿ ಜ್ಯೋತಿಃಶಬ್ದವು ವಿಷ್ಣುಪರವೆಂದು ಹೇಳಲಿಕ್ಕೆ ಅನೇಕ ನಿರವಕಾಶಲಿಂಗಗಳಿವೆ. ಆದರೂ ಋಗ್ವೇದದಲ್ಲಿ ಬರುವ ಲಿಂಗಗಳನ್ನು ತೋರಿಸಿದ್ದರಿಂದ ಆಚಾರ್ಯರು ಆ ನಿಯಮವನ್ನು ಸೂಚನೆಮಾಡಿದ್ದರೆ ಎಂದಿಟ್ಟುಕೊಳ್ಳಬಹುದು. ಈ ನಿಯಮವನ್ನು ಅನುಸರಿಸಿದಾಗ ಸಮಸ್ತವೇದವನ್ನು ವಿಷ್ಣುಪರವನ್ನಾಗಿ ಮಾಡಬಹುದು. ಹೀಗೆ ಭಿಕ್ಷುಕಪಾದಪ್ರಸರಣನ್ಯಾಯದಿಂದ (ಭಿಕ್ಷುಕ ವಾಮನದೇವರು ಬಲಿಯಿಂದ ದತ್ತವಾದ ಮೂರುಪಾದವನ್ನು ಅಳೆಯುವ ವ್ಯಾಜದಿಂದ ಸಮಸ್ತ ಮೂರುಲೋಕಗಳನ್ನು ಆಕ್ರಮಿಸಿದಂತೆ) ನಿರವಕಾಶವಾದ ವಿಷ್ಣುಲಿಂಗಗಳುಳ್ಳ ಎಲ್ಲ ವಾಕ್ಯಗಳನ್ನು ಅವಲಂಬಿಸಿ ಹೇಗೆ ಸಮಸ್ತವೇದವನ್ನು ವಿಷ್ಣುಪರ ಮಾಡಬಹುದು ಎಂಬ ಉಪಾಯವನ್ನು ಆಚಾರ್ಯರು ಋಗ್ವೇದದ ಮಂತ್ರವನ್ನು ಉದಾಹರಿಸುವ ಮೂಲಕ ಸೂಚಿಸಿದ್ದಾರೆ ಎಂದು ಚಂದ್ರಿಕಾಚಾರ್ಯರ ಅಭಿಪ್ರಾಯ.

ಈ ಅಭಿಪ್ರಾಯವನ್ನು ಸನ್ನ್ಯಾಯರತ್ನಾವಳಿಯ ಮತವನ್ನು ಸಮರ್ಥನೆ ಮಾಡುವ ಸಂದರ್ಭದಲ್ಲಿ ಚಂದ್ರಿಕಾಚಾರ್ಯರು ಹೇಳಿದ್ದರೂ ತತ್ವಪ್ರದೀಪದ ವಾಕ್ಯಕ್ಕೆ ಇದು ಬೆಳಕನ್ನು ಚೆಲ್ಲುತ್ತದೆ. ಹೀಗೆ ವ್ಯಾಸರಾಜರು ಮಂತ್ರಗಳನ್ನು ವಿಷ್ಣುಪರವನ್ನಾಗಿ ಹೇಗೆ ಸಮನ್ವಯ ಮಾಡಬಹುದು ಎಂಬುದನ್ನು ಅನೇಕ ದೃಷ್ಟಾಂತಗಳನ್ನು ಕೊಟ್ಟು ಸಮರ್ಥಿಸಿದ್ದಾರೆ.

## ಗಾಯತ್ರ್ಯಧಿಕರಣ

ಆಕಾಶಾಧಿಕರಣದಲ್ಲಿ ಪದಾರ್ಥದ ಸ್ವಭಾವವೂ ಭಗವದಧೀನವಾಗಿದೆ ಎಂದು ಸಮರ್ಥಿಸಲಾಗಿತ್ತು. ಅಲ್ಲಿ ವಿವರತ್ವ(ಅವಕಾಶಪ್ರದಾತೃತ್ವ)ವೆಂಬ ಆಕಾಶದಲ್ಲಿರುವ ಸ್ವಾಭಾವಿಕವಾದ ಧರ್ಮವು ಭಗವದಧೀನ ಎಂದು ಹೇಳಿದೆ. ಈ ಅಧಿಕರಣದಲ್ಲಿ ಅನಾದಿನಿತ್ಯವಾದ ಧರ್ಮವೂ ಪರಮಾತ್ಮನ ಅಧೀನ ಎಂದು ಸಮರ್ಥನೆ ಮಾಡುತ್ತಾರೆ. ಇಲ್ಲಿ ಪೂರ್ವಪಕ್ಷವನ್ನು ಸಮರ್ಥನೆ ಮಾಡುವ ಸಂದರ್ಭದಲ್ಲಿ ಚಂದ್ರಿಕಾಚಾರ್ಯರು ಟೀಕಾಗಳಲ್ಲಿ ಬರುವ ವಿರೋಧವನ್ನು ಪರಿಹಾರಮಾಡಿದ್ದಾರೆ.

'ಟೀಕಾಸು ಚ ಯದಸ್ಪಷ್ಟಂ' ಎನ್ನುವ ಪ್ರತಿಜ್ಞೆಯ ಪ್ರಕಾರ ಟೀಕಾಸು ಎಂದರೆ ಕೇವಲ ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನರೂಪವಾಗಿರುವ ಅನುವ್ಯಾಖ್ಯಾನ, ಭಾಷ್ಯ, ನ್ಯಾಯವಿವರಣ, ಅಣುಭಾಷ್ಯ ಹಾಗೂ ಇವುಗಳಿಗೆ ಟೀಕಾರೂಪವಾಗಿರುವ ಸುಧಾ, ತತ್ವಪ್ರಕಾಶಿಕಾ, ತತ್ವಪ್ರದೀಪ, ಸನ್ನ್ಯಾಯರತ್ನಾವಳಿ, ಸತ್ತರ್ಕದೀಪಾವಳಿ ಇವುಗಳಲ್ಲಿ ಆಪಾತತಃ ತೋರುವ ವಿರೋಧಗಳನ್ನು, ಅಸ್ಪಷ್ಟತೆಯನ್ನು ಪರಿಹಾರಮಾಡಿದ್ದಾರೆಂದಷ್ಟೇ ಅಲ್ಲ;

ಶ್ರೀಜಯತೀರ್ಥರ ಬೇರೆ ಟೀಕಾಗ್ರಂಥಗಳಲ್ಲಿ ಆಪಾತತಃ ಕಂಡು ಬರುವ ವಿರೋಧಗಳನ್ನೂ ಪರಿಹಾರ-ಮಾಡಿದ್ದಾರೆ. ಇದಕ್ಕೊಂದು ನಿದರ್ಶನ.

ಈ ಅಧಿಕರಣದಲ್ಲಿ ವೇದದ ನಿತ್ಯತ್ವವನ್ನು ಸಮರ್ಥನೆ ಮಾಡುತ್ತಾ ತತ್ವಸಂಖ್ಯಾನ ಹಾಗೂ ತತ್ವ-ನಿರ್ಣಯ ಟೀಕಾಗಳಲ್ಲಿ ಬರುವ ಪರಸ್ಪರ ವಿರುದ್ಧವಿರುವಂತೆ ತೋರುವ ವಾಕ್ಯಗಳ ವಿರೋಧವನ್ನು ಪರಿಹಾರ ಮಾಡುತ್ತಾರೆ. ತತ್ವನಿರ್ಣಯಟೀಕಾದಲ್ಲಿ 'ನ ಹಿ ವಯಂ ವೇದಸ್ಯ ಕೂಟಸ್ಥನಿತ್ಯತಾಂ ಬ್ರೂಮಃ' ಎಂದು ವೇದಗಳಿಗೆ ಕೂಟಸ್ಥತ್ವವನ್ನು ನಿಷೇಧ ಮಾಡಿದ್ದಾರೆ. ತತ್ವಸಂಖ್ಯಾನಟೀಕಾದಲ್ಲಿ 'ನಿತ್ಯಾ ವೇದಾಃ' ಎಂಬ ಆಚಾರ್ಯರ ವಾಕ್ಯಕ್ಕೆ ವ್ಯಾಖ್ಯಾನಮಾಡುತ್ತಾ, 'ಅತ್ರ ನಿತ್ಯತ್ವಂ ನಾಮ ಕೂಟಸ್ಥತಯಾ ಆದ್ಯಂತಶೂನ್ಯತ್ವಮ್' ಎಂದು ವೇದಗಳಿಗೆ ಕೂಟಸ್ಥತ್ವವನ್ನು ಹೇಳಲಾಗಿದೆ. ಈ ಎರಡು ವಾಕ್ಯಗಳಿಗೆ ಪರಸ್ಪರವಿರೋಧವನ್ನು ಪರಿಹಾರಮಾಡುತ್ತಾ ಚಂದ್ರಿಕಾಚಾರ್ಯರು — ಈಶ್ವರಬುದ್ಧಿಘಟಿತವಾದ ವೇದವು ನಿತ್ಯವಾಗಿದೆ. ಅಸ್ಮದ್‌ಬುದ್ಧಿಘಟಿತವಾದದ್ದು ಅನಿತ್ಯ' ಎಂದು ಹೇಳಿ ಎರಡೂ ವಾಕ್ಯಗಳನ್ನು ಕೂಡಿಸಿದ್ದಾರೆ.

ಇಲ್ಲಿ ರಾಯರು ಒಂದು ಅಪೂರ್ವವಿಷಯವನ್ನು ಹೇಳಿದ್ದಾರೆ. ಉಚ್ಚಾರಣಾಘಟಿತವಾದದ್ದೆಲ್ಲವೂ ಅನಿತ್ಯವಾಗಿರುತ್ತದೆ. ಈ ನಿಯಮವು ನಮಗೂ ಹಾಗೂ ಪರಮಾತ್ಮನಿಗೂ ಸಮನವಾಗಿದೆ. ಇದನ್ನೇ ವ್ಯಾಸರಾಜರು ತರ್ಕತಾಂಡವದಲ್ಲಿ ಹೇಳುತ್ತಾ ''*ಆಧುನಿಕ ಅಧ್ಯಾಪಕೇನ ಸ್ವಬುದ್ಧಿಸ್ಥಪೂರ್ವಪೂರ್ವ-ದಿವಸೀಯಕ್ರಮಾನುಸಾರೇಣ ಏವ ಉತ್ತರೋತ್ತರದಿವಸೇಷುಇವ ಈಶ್ವರೇಣಾಪಿ ಸ್ವಬುದ್ಧಿಸ್ಥಪ್ರವಾಹ ಅನಾದಿ-ಪೂರ್ವಪೂರ್ವಕಲ್ಪೀಯಕ್ರಮಾನುಸಾರೇಣ ಏವ ಉತ್ತರೋತ್ತರಕಲ್ಪೇಽಪಿ ವೇದಸ್ಯ ಉಚ್ಚಾರಿತತ್ವೇನ*' ಎಂದು ಉಚ್ಚಾರಣಾಘಟಿತವಾದ್ದರಿಂದ ಅನಿತ್ಯವೇ ಆಗಿದೆ ಎಂದು ಹೇಳಿದ್ದಾರೆ.

ಇನ್ನು 'ಜ್ಞಾನಂ ನಿತ್ಯಂ ಕ್ರಿಯಾ ನಿತ್ಯಂ ಬಲಂ ಶಕ್ತಿಃ ಪರಾತ್ಮನಃ' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಭಗವಂತನ ಎಲ್ಲಾ ಕ್ರಿಯೆಗಳೂ ನಿತ್ಯವೆಂದು ಅಂಗೀಕರಿಸುವ ಪಕ್ಷದಲ್ಲಿ ಆಗ ಭಗವಂತನ ಉಚ್ಚಾರಣಾ-ಘಟಿತವಾದ ವೇದವೂ ನಿತ್ಯವೇ ಆಗುತ್ತದೆ.

ವ್ಯಾಸರಾಜರು ಇನ್ನೊಂದು ಪಕ್ಷವನ್ನು ಹೇಳಿದ್ದಾರೆ. 'ಕೃತ್ವಾಚಿಂತಯಾ ವಾ ಅನಾದಿತ್ವೋಕ್ತಿಃ' ಎಂದು. ಇದರ ಅರ್ಥ ವೇದದ ಕ್ರಮವು ಅನಾದಿನಿತ್ಯವಲ್ಲದಿದ್ದರೂ ಅನಾದಿನಿತ್ಯ ಎಂದು ಅಭ್ಯುಪೇತ್ಯಅನಾದಿತ್ವವನ್ನು ಹೇಳಲಾಗಿದೆ. ಚಂದ್ರಿಕಾಗ್ರಂಥಕ್ಕೆ ಸತ್ಯಾನಂದತೀರ್ಥರು ಚಂದ್ರಿಕಾವಿವೃತಿ ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಅದರಲ್ಲಿ ಈ ಚಂದ್ರಿಕಾವಾಕ್ಯಕ್ಕೆ ಹೀಗೆ ವ್ಯಾಖ್ಯಾನಮಾಡುತ್ತಾರೆ. - ತತ್ವಸಂಖ್ಯಾನಟೀಕಾವಾಕ್ಯವು ನಿರವಕಾಶ, ತತ್ವನಿರ್ಣಯಟೀಕಾವಾಕ್ಯವು ಸಾವಕಾಶ. ಇದನ್ನೆ ಚಂದ್ರಿಕಾಚಾರ್ಯರು ಸಮರ್ಥನೆ ಮಾಡಿ ತತ್ವನಿರ್ಣಯ -ಟೀಕಾದಲ್ಲಿ ಹೇಳಿರುವಂತೆ ವೇದಕ್ಕೆ ಕೂಟಸ್ಥತ್ವವನ್ನು ನಿಷೇಧಮಾಡಿಲ್ಲ. ನಿಷೇಧಮಾಡುವ ವಾಕ್ಯಕ್ಕೆ ನಮ್ಮ ಬುದ್ಧಿಯಲ್ಲಿ ಇರುವ ಕ್ರಮವು ಅನಿತ್ಯ ಎಂದರ್ಥ ಎಂದಿದ್ದಾರೆ. ಇನ್ನು ಕೃತ್ವಾಚಿಂತಯಾ ವಾ ಅನಾದಿತ್ವೋಕ್ತಿಃ ಎಂದು ಚಂದ್ರಿಕಾಚಾರ್ಯರು ಎರಡನೆಯ ಪಕ್ಷವನ್ನು ಯಾಕೆ ಹೇಳಿದ್ದಾರೆ? ಎಂದರೆ ಅನಾದಿತ್ವ ಇಲ್ಲದಿದ್ದರೂ ಅನಾದಿತ್ವವನ್ನು ಒಪ್ಪಿ ಹೇಳಿದ್ದು. ಇದಕ್ಕೆ ಪ್ರಯೋಜನವೇನೆಂದರೆ, 'ಅನಾದಿಸ್ವಭಾವನಿಯಾಮಕತ್ವರೂಪ-ಮಹಾಗುಣಸಿದ್ಧ್ಯರ್ಥಂ' ಅಂದರೆ ಅನಾದಿನಿತ್ಯವಾದ ಪದಾರ್ಥದಲ್ಲಿರುವ ಅನಾದಿಧರ್ಮವೂ ಕೂಡ ಪರಮಾತ್ಮನ ಅಧೀನವಾಗಿದೆಎಂದು ಸಮರ್ಥನೆ ಮಾಡಬೇಕಾಗಿದೆ. ಅದರ ಸಿದ್ಧಿಗಾಗಿ ಕೃತ್ವಾಚಿಂತಯಾ ಅನಾದಿತ್ವವನ್ನು ಹೇಳಿದ್ದೇ ಹೊರತು ವೇದಕ್ಕೆ ಅನಾದಿನಿತ್ಯತ್ವ ಇಲ್ಲ ಎಂದಲ್ಲ.

ಸತ್ಯಾನಂದತೀರ್ಥರು ಹೀಗೆ ವ್ಯಾಖ್ಯಾನಮಾಡುವುದಕ್ಕೆ ಒಂದು ಪ್ರಮಾಣವನ್ನು ಕೊಡುತ್ತಾರೆ. ವಾಯುಪುರಾಣದಲ್ಲಿ ಸ್ಪಷ್ಟವಾಗಿ ವರ್ಣಗಳಿಗೆ ಹಾಗೂ ಕ್ರಮಾತ್ಮಕವಾದ ವೇದ ಇವೆರಡಕ್ಕೂ ಪ್ರತ್ಯೇಕವಾಗಿ ನಿತ್ಯತ್ವವನ್ನು ಹೇಳಿದ್ದಾರೆ. 'ನಿತ್ಯಾಃ ವರ್ಣಾಃ ಸಮಸ್ತಶಃ ತಥಾ ವೇದಾಃ ಸಮಸ್ತಾಶ್ಚ । ತಥಾ ಅವ್ಯಾಕೃತಂ ಅಂಬರಮ್' ಇತಿ ವಾಯುಪುರಾಣವಿರೋಧಾಚ್ಚ ॥

ಇನ್ನು ತತ್ವನಿರ್ಣಯಟೀಕಾಕ್ಕೆ ವ್ಯಾಸತತ್ವಜ್ಞರು ಟಿಪ್ಪಣಿಯನ್ನು ಬರೆದಿದ್ದಾರೆ. ಅವರು ಚಂದ್ರಿಕಾದಲ್ಲಿ ಬರುವ ಈ ವಾಕ್ಯಕ್ಕೆ ವ್ಯಾಖ್ಯಾನಮಾಡುತ್ತಾ -*ವರ್ಣಾಃ ಏವ ಕೂಟಸ್ಥಾಃ ಕ್ರಮಸ್ತು ಜನ್ಯಃ ವಿನಾಶೀ ಇತಿ ಸಿದ್ಧಂ ಪ್ರಮೇಯಮ್ । ತಥಾ ಚ ತತ್ವಸಂಖ್ಯಾನಟೀಕಾ ವರ್ಣಾಂಶೇ ಕೂಟಸ್ಥತ್ವಾಭಿಪ್ರಾಯಿಕಾ, ಕ್ರಮಾಂಶೇ ಸರ್ವದಾ ಈಶ್ವರಬುದ್ಧಿಸ್ಥತ್ವಾಭಿಪ್ರಾಯಿಕಾ ವಾ ಕೃತ್ಸ್ನಾಚಿಂತೋಕ್ತಿರೂಪಾ ವಾ ।* ಎಂದು ತತ್ವಸಂಖ್ಯಾನಟೀಕಾವು ಸಾವಕಾಶ; ಕ್ರಮಕ್ಕೆ ಅನಿತ್ಯವನ್ನು ಹೇಳುವ ತತ್ವನಿರ್ಣಯಟೀಕಾವು ನಿರವಕಾಶ ಎಂದಿದ್ದಾರೆ. ಅವರು ಈ ರೀತಿಯಲ್ಲಿ ನಿರ್ಣಯಿಸಿದ ಪ್ರಮೇಯಕ್ಕೆ ಗಾಯತ್ರ್ಯಧಿಕರಣದಲ್ಲಿ ಬರುವ ಚಂದ್ರಿಕಾವಾಕ್ಯವನ್ನು ಉದಾಹರಿಸುತ್ತಾರೆ. 'ಅತ ಏವ ಗಾಯತ್ರ್ಯಧಿಕರಣಚಂದ್ರಿಕಾಯಾಂ ಈಶ್ವರಬುದ್ಧಿಸ್ಥತ್ವಾದೇವ ತತ್ವಸಂಖ್ಯಾನಟೀಕಾಯಾಃ ಯುಕ್ತತ್ವಮುಕ್ತ್ವಾ ಕೃತ್ಸ್ನಾಚಿಂತಯಾ ವಾ ಅನಾದಿತ್ವೋಕ್ತಿಃ' ಇತ್ಯುಕ್ತಮ್ । ಎಂದಿದ್ದಾರೆ.

ಹೀಗೆ ಚಂದ್ರಿಕಾವಾಕ್ಯಕ್ಕೆ ಅನೇಕ ರೀತಿಯಲ್ಲಿ ವ್ಯಾಖ್ಯಾನಕಾರರು ಅರ್ಥವನ್ನು ಹೇಳಿದ್ದಾರೆ. ಒಟ್ಟಿನಲ್ಲಿ ಚಂದ್ರಿಕಾಗ್ರಂಥವು ಟೀಕಾ ಗ್ರಂಥಗಳಲ್ಲಿ ಬರುವ ಆಪಾತತಃ ವಿರುದ್ಧವಾಗಿ ತೋರುವ ಎರಡು ವಾಕ್ಯಗಳಿಗೆ ಅನೇಕರೀತಿಯಲ್ಲಿ ಸಮಾಧಾನ ಹೇಳಬಹುದೆಂದು ದಿಗ್ದರ್ಶನಮಾಡಿದೆ.

## ಪಾದಾಂತ್ಯಪ್ರಾಣಾಧಿಕರಣ

ಓಂ ಪ್ರಾಣಸ್ತಥಾನುಗಮಾತ್ ಓಂ ॥

ಈ ಅಧಿಕರಣದಲ್ಲಿ ಐತರೇಯದಲ್ಲಿ ಬರುವ 'ತಾ ವಾ ಏತಾಃ ಶೀರ್ಷನ್ ಶ್ರಿಯಃಶ್ರಿತಾಃ ಚಕ್ಷುಃ ಶ್ರೋತ್ರಂ ಮನೋ ವಾಕ್ ಪ್ರಾಣ' ಎಂದಾರಂಭಿಸಿ ಅನೇಕ ಕಡೆಗಳಲ್ಲಿ ಕೇಳಿಬರುವ ಪ್ರಾಣಶಬ್ದದ ಸಮನ್ವಯವನ್ನು ಮಾಡಲಾಗಿದೆ.

ಶಂಕಾ – ಇಲ್ಲಿ ಬರುವ ಮುಖ್ಯ ಸಂದೇಹವೇನೆಂದರೆ, ಹಿಂದಿನ ಪ್ರಾಣಾಧಿಕರಣದಿಂದಲೇ (ಅತಃ ಏವ ಪ್ರಾಣಃ ಎಂಬಲ್ಲಿ) ಪ್ರಾಣಶಬ್ದದ ಸಮನ್ವಯವನ್ನು ಮಾಡಲಾಗಿದೆ. ಈ ಅಧಿಕರಣದಲ್ಲಿ ಪುನಃ ಅದೇ ಪ್ರಾಣಶಬ್ದದ ಸಮನ್ವಯವನ್ನು ಸೂತ್ರಕಾರರು ಏಕೆ ಮಾಡಿದ್ದಾರೆ? ಎಂದು. ಇಲ್ಲಿ ಚಂದ್ರಿಕಾಚಾರ್ಯರು ಬಹುಮುಖದಿಂದ ಶಂಕಾವನ್ನು ದೃಢಪಡಿಸಿದ್ದಾರೆ. ಅದರ ಒಂದು ಸಾರಾಂಶವನ್ನು ನೋಡೋಣ.

ಸಮಾಧಾನ - ಹಿಂದಿನ ಪ್ರಾಣಾಧಿಕರಣಕ್ಕೂ ಈ ಅಧಿಕರಣಕ್ಕೂ ವೈಲಕ್ಷಣ್ಯ(ಭೇದ)ವಿದೆ. ಹಿಂದೆ ಪ್ರಾಣಶಬ್ದವು ವಾಯುಪರವಲ್ಲ ಎಂದು ಸಮಾಧಾನ ಮಾಡಿದ್ದಾರೆ. ಇಲ್ಲಿ ಪ್ರಾಣಶಬ್ದವು ಇಂದ್ರ, ಜೀವಪರ ಅಲ್ಲ ಎಂದು ಸಮರ್ಥಿಸಿ ವಿಷ್ಣುಪರ ಎಂದು ಸಮನ್ವಯಮಾಡಲಾಗಿದೆ.

ಶಂಕಾ - ಈ ರೀತಿಯ ಸಮಾಧಾನ ಸರಿಯಾದುದಲ್ಲ. ಏಕೆಂದರೆ ಇದೇ ಅಧಿಕರಣದಲ್ಲಿ 'ಜೀವ-ಮುಖ್ಯಪ್ರಾಣಲಿಂಗಾತ್' ಎಂಬ ಸೂತ್ರದಲ್ಲಿ ಮುಖ್ಯಪ್ರಾಣನನ್ನೂ ಪೂರ್ವಪಕ್ಷವನ್ನಾಗಿ ಇಟ್ಟುಕೊಂಡಿದ್ದಾರೆ. ಆದ್ದರಿಂದ ಈ ಅಧಿಕರಣದಲ್ಲಿ ವಾಯುಪರವಲ್ಲ ಎಂದೂ ಸಮರ್ಥಿಸಿದ್ದಾರೆ.

ಸಮಾಧಾನ - ಹಿಂದೆ ವಾಯುಪರವಲ್ಲ ಎಂದು ಸಮರ್ಥಿಸಿದ್ದಾರೆ. ಇಲ್ಲಿಯಾದರೋ ಇಂದ್ರ, ಜೀವ, ವಾಯು ಈ ಮೂರರ ಪರವಲ್ಲ ಎಂದು ಸಮರ್ಥಿಸಿದ್ದಾರೆ. ಆದ್ದರಿಂದ ಗತಾರ್ಥತಾ ಬರುವುದಿಲ್ಲ.

ಶಂಕಾ - ಹಾಗಾದರೆ ಈ ಅಧಿಕರಣ ಒಂದೇ ಸಾಕು. ಇಲ್ಲಿ ಪ್ರಾಣಶಬ್ದವು ವಾಯುಪರವಲ್ಲ ಎಂದು ಸಮರ್ಥನೆ ಮಾಡಿದ್ದರಿಂದ ಹಿಂದಿನ ಪ್ರಾಣಾಧಿಕರಣವು ಬೇಕಿಲ್ಲ. ಅಷ್ಟೇ ಅಲ್ಲದೆ ನ್ಯಾಯಭೇದದಿಂದ (ಪೂರ್ವಪಕ್ಷ ಸಿದ್ಧಾಂತನ್ಯಾಯ) ಅಧಿಕರಣಭೇದವನ್ನು ಹೇಳಬೇಕೇ ಹೊರತು ಒಂದೇ ನ್ಯಾಯದಿಂದ ನಿರಸನೀಯವಾದದ್ದರಲ್ಲಿ ಭೇದವನ್ನು ಹೇಳಿ ಅಧಿಕರಣಭೇದವನ್ನು ಹೇಳಬಾರದು.

ಸಮಾಧಾನ - ಹಿಂದಿನ ಪ್ರಾಣಾಧಿಕರಣಕ್ಕೆ ವಿಷಯವಾಕ್ಯವು ಬೇರೆ. (ತದ್ವೈ ತ್ವಂ ಪ್ರಾಣಃ ಅಭವಃ ಮಹಾನ್ ಭೋಗಃ ಪ್ರಜಾಪತೇಃ...) ಈ ಪ್ರಾಣಾಧಿಕರಣಕ್ಕೆ ವಿಷಯವಾಕ್ಯವು ಬೇರೆ (ತಾ ವಾ ಏತಾಃ) ಆದ್ದರಿಂದ ಅಧಿಕರಣಗಳು ಬೇರೆ ಬೇರೆ.

ಶಂಕಾ -- ವಿಷಯವಾಕ್ಯಗಳ ಭೇದದಿಂದ ಅಧಿಕರಣ ಭೇದವನ್ನು ಹೇಳಿದರೆ ಸೂತ್ರಗಳು ಅನಂತವಾಗಬೇಕಾಗುತ್ತವೆ. ಸೂತ್ರವು ನ್ಯಾಯವನ್ನು ಹೇಳಿ ಆ ನ್ಯಾಯದಿಂದ ಅನೇಕ ವಿಷಯವಾಕ್ಯಗಳು ಸಂಗೃಹೀತವಾಗಬೇಕು ಹೊರತು ಬೇರೆ ಬೇರೆ ವಿಷಯವಾಕ್ಯಗಳು ಇದ್ದುದಕ್ಕಾಗಿ ಒಂದೇ ನ್ಯಾಯವನ್ನು ಅನೇಕ ಸೂತ್ರಗಳಲ್ಲಿ ಹೇಳಿದ್ದಾರೆ ಎಂಬುದು ಸಮಂಜಸವಲ್ಲ.

ಸಮಾಧಾನ - ನ್ಯಾಯಭೇದವೇ ಇದೆ. ಆದ್ದರಿಂದ ಬೇರೆ ಅಧಿಕರಣಗಳೆಂದು ಹೇಳುತ್ತೇವೆ. ಹಿಂದಿನ ಅಧಿಕರಣದಲ್ಲಿ ಲೋಕಪ್ರಸಿದ್ಧಿಯಿಂದ ಪ್ರಾಣಶಬ್ದವು ವಾಯುಪರ ಎಂದು ಪೂರ್ವಪಕ್ಷಿಸಿ, ನಿರವಕಾಶ ಲಿಂಗಗಳಿಂದ ವಿಷ್ಣುಪರ ಎಂದು ಸಿದ್ಧಾಂತ ಮಾಡಲಾಗಿತ್ತು. ಈ ಅಧಿಕರಣದಲ್ಲಾದರೋ, ಲಿಂಗದಿಂದ ಪೂರ್ವಪಕ್ಷವನ್ನು ಮಾಡಿ, ಶ್ರುತಿ ಮತ್ತು ಲಿಂಗಗಳಿಂದ (ಬ್ರಹ್ಮಶ್ರುತಿ ಹಾಗೂ ಸರ್ವದೇವೋಪದೇಶ್ಯತ್ವಲಿಂಗ) ಸಿದ್ಧಾಂತವನ್ನು ಮಾಡಲಾಗಿದೆ.

ಶಂಕಾ --ಈ ರೀತಿಯಲ್ಲಿ ಪೂರ್ವಪಕ್ಷವನ್ನು ಹೇಳಲಿಕ್ಕೆ ಬರುವುದಿಲ್ಲ. ಏಕೆಂದರೆ, 'ಅತ ಏವ ಪ್ರಾಣಃ' ಎಂಬಲ್ಲಿ ಶ್ರುತ್ಯಾ ಪೂರ್ವಪಕ್ಷವನ್ನು ಮಾಡಿದಾಗ ಲಿಂಗದಿಂದ ಅದನ್ನು ಬಾಧ ಮಾಡಿದ ಮೇಲೆ ಪುನಃ ಪೂರ್ವಪಕ್ಷವನ್ನು ಉಜ್ಜೀವನ ಮಾಡುವುದಕ್ಕೆ ಕೇವಲ ಲಿಂಗದಿಂದ ಹೇಗೆ ಸಾಧ್ಯ ? ಅದರಲ್ಲೂ ವಿರೋಧಿ ಶ್ರುತಿ ಮತ್ತು ಲಿಂಗಗಳು ಇರುವಾಗ (ಬ್ರಹ್ಮಶ್ರುತಿ ಹಾಗೂ ಸರ್ವದೇವೋಪದೇಶ್ಯತ್ವಲಿಂಗ). ಆದ್ದರಿಂದ ಹಿಂದಿನ ಅಧಿಕರಣದಲ್ಲಿ ಲಿಂಗದಿಂದ ಸಿದ್ಧಾಂತವನ್ನು ಹೇಳಿದಾಗ ಆ ಲಿಂಗಕ್ಕಿಂತ ಪ್ರಬಲವಾದ ಪೂರ್ವಪಕ್ಷ ಪ್ರಾಪಕವನ್ನು (ಉದಾ ಶ್ರುತಿಸಹಿತಲಿಂಗ) ಹೇಳಿ ಪೂರ್ವಪಕ್ಷವನ್ನು ಉಜ್ಜೀವನ ಮಾಡಬಹುದು ಹೊರತು, ಕೇವಲ ಲಿಂಗದಿಂದ ಸಿದ್ಧಾಂತಕ್ಕೆ ವಿರೋಧಿಯಾದ ಬ್ರಹ್ಮಶ್ರುತಿ ಹಾಗೂ ಲಿಂಗಗಳನ್ನು ಬಾಧಿಸಿ ಪೂರ್ವಪಕ್ಷವನ್ನು ದೃಢಪಡಿಸಲು ಸಾಧ್ಯವೇ ಇಲ್ಲ.

ಸಮಾಧಾನ -- ಕೇವಲ ಲಿಂಗದಿಂದ ಪೂರ್ವಪಕ್ಷವನ್ನು ಉಜ್ಜೀವನ ಮಾಡುವುದಿಲ್ಲ. ಕಿಂತು ಪ್ರಾಣಶ್ರುತಿಬಾಹುಲ್ಯವಿರುವುದರಿಂದ ಮಾಡುತ್ತೇವೆ.

ಶಂಕಾ - ಶ್ರುತಿಬಾಹುಲ್ಯವಿದ್ದಾಗಲೂ ನಿರವಕಾಶಲಿಂಗವು ಪ್ರಬಲವೆಂಬುದನ್ನು ಗಾಯತ್ರ್ಯಧಿಕರಣದಲ್ಲಿ ಹೇಳಿದ್ದಾಗಿದೆ. ಆದ್ದರಿಂದ ಈ ಅಧಿಕರಣದಲ್ಲಿ ಹೊಸದಾದ ಪೂರ್ವಪಕ್ಷಪ್ರಾಪಕ ಯಾವುದೂ ಇಲ್ಲ.

ಸಮಾಧಾನ - ಗಾಯತ್ರ್ಯಧಿಕರಣ ಹಾಗೂ ಈ ಅಧಿಕರಣ ಇವೆರಡಕ್ಕೂ ವೈಷಮ್ಯ ಇದೆ. ಗಾಯತ್ರ್ಯಧಿಕರಣದಲ್ಲಿ ಗಾಯತ್ರೀ, ವಾಕ್, ಪೃಥಿವೀ ಎಂದು ಬೇರೆ ಬೇರೆ ನಾಮಗಳು ಇದ್ದವು. ಇಲ್ಲಾದರೋ ಪ್ರಾಣ ಎಂಬ ಒಂದೇ ನಾಮವು ಆವೃತ್ತಗೊಂಡಿದೆ.

ಶಂಕಾ - ಗಾಯತ್ರ್ಯಧಿಕರಣದಲ್ಲೂ 'ಗಾಯತ್ರೀ ವಾ ಇದಂ ಸರ್ವಮ್' 'ವಾಗ್ ವೈ ಗಾಯತ್ರೀ' 'ಸೈಷಾ ಷಡ್ವಿಧಾ ಗಾಯತ್ರೀ' ಎಂಬುದಾಗಿ ಒಂದೇ ಗಾಯತ್ರೀ ಪದವು ಆವೃತ್ತಿಗೊಂಡಿದೆ. ವಸ್ತುತಃ ಶ್ರುತಿಬಾಹುಲ್ಯದಿಂದ ಪ್ರಾಪ್ತವಾದ ಪೂರ್ವಪಕ್ಷವನ್ನು ಆಕಾಶಾಧಿಕರಣದಲ್ಲಿಯೇ ನಿರಾಸಮಾಡಲಾಗಿದೆ. ಆದ್ದರಿಂದ ಈ ಅಧಿಕರಣದಲ್ಲಿ ಹೊಸದಾಗಿ ಪೂರ್ವಪಕ್ಷಪ್ರಾಪಕವಾದ ನ್ಯಾಯ ಯಾವುದೂ ಇಲ್ಲ.

ಸಮಾಧಾನ - ಕೇವಲ ಶ್ರುತಿಬಾಹುಲ್ಯದಿಂದ ಇಲ್ಲಿ ಪೂರ್ವಪಕ್ಷವನ್ನು ಉಜ್ಜೀವನ ಮಾಡುತ್ತಿಲ್ಲ. ಕಿಂತು ಶ್ರುತಿಲಿಂಗಬಾಹುಲ್ಯದಿಂದ ಮಾಡುತ್ತೇವೆ.

ಶಂಕಾ - ಶ್ರುತಿ ಮತ್ತು ಲಿಂಗಗಳನ್ನು ಹಿಂದಿನ ಅಧಿಕರಣಗಳಲ್ಲಿ ಆಗಲೇ ಸಾವಕಾಶಮಾಡಲಾಗಿದೆ. ಉದಾ - ಇಂದ್ರನ ಪರವಾಗಿ ಶ್ರುತಿಗಳನ್ನು ಹೇಳಿದರೆ ಅವನ್ನು ಅಂತರಧಿಕರಣದ ನ್ಯಾಯದಿಂದ ವಿಷ್ಣುಪರವನ್ನಾಗಿ ಮಾಡಬಹುದು. ಮುಖ್ಯಪ್ರಾಣಪರವಾಗಿ ಶ್ರುತಿಗಳನ್ನು ಹೇಳಿದರೆ ಅತ ಏವ ಪ್ರಾಣಃ ಎಂಬ ಸೂತ್ರದಲ್ಲಿ ವಿಷ್ಣುಪರವಾಗಿ ಮಾಡಿದ್ದಾಗಿದೆ. ಇನ್ನು ಜೀವಪರವಾಗಿ ಶ್ರುತಿಗಳನ್ನು ಹೇಳಿದರೆ ಗಾಯತ್ರ್ಯಧಿಕರಣದಲ್ಲಿ ಹೇಳಿದಂತೆ ವಿಷ್ಣುಪರವಾಗಿ ಮಾಡಲಾಗಿದೆ. ಇದರ ಜೊತೆಗೆ ಲಿಂಗಗಳನ್ನು ಹೇಳಿದರೂ ಸಹ ಇಲ್ಲಿ ಬಹುವಿಷ್ಣುಶ್ರುತಿಗಳು ಇರುವುದರಿಂದ, ಪ್ರಬಲವಾದ್ದರಿಂದ ಲಿಂಗಗಳನ್ನು ಸಾವಕಾಶ ಮಾಡಬೇಕು.

ಹೀಗೆ ಅನೇಕರೀತಿಯಲ್ಲಿ ಈ ಅಧಿಕರಣವು ಅನಾರಂಭಣೀಯ. ಏಕೆಂದರೆ ಈ ಅಧಿಕರಣದಲ್ಲಿ ಹೇಳಬೇಕಾದ ನ್ಯಾಯವು ಹಿಂದಿನ ಅಧಿಕರಣಗಳಲ್ಲೇ ಹೇಳಿಯಾಗಿದೆ ಎಂದು. ಇಲ್ಲಿ ಗಮನಿಸಬೇಕಾದ ಅಂಶ. ಈ ಪ್ರಾಣಾಧಿಕರಣವು ಹಿಂದಿನ ಹಾಗೂ ಮುಂದಿನ ಯಾವ ಅಧಿಕರಣದಿಂದಲೂ ಗತಾರ್ಥವಾಗಿಲ್ಲ - ಎಂಬುದನ್ನು ಚಂದ್ರಿಕಾಚಾರ್ಯರು ಅತ್ಯಂತ ಸೂಕ್ಷ್ಮವಾಗಿ ವಿಚಾರ ಮಾಡಿ ನಿರ್ಣಯ ಮಾಡಿದ್ದಾರೆ.

ಸಮಸ್ತ ಅಧಿಕರಣಗಳಲ್ಲೂ ಈ ರೀತಿಯ ವಿಚಾರವನ್ನು ಮಾಡಿ, ಹೇಗೆ ಪ್ರತಿಯೊಂದು ಅಧಿಕರಣವು ಹೊಸದಾದ ನ್ಯಾಯವನ್ನು ಹೇಳುತ್ತದೆ ಎಂಬುದನ್ನು ಚಂದ್ರಿಕಾಚಾರ್ಯರು ಸಮರ್ಥನೆ ಮಾಡುತ್ತಾರೆ.

ಈ ಎಲ್ಲವನ್ನೂ ಅನೇಕ ಮಜಲುಗಳಲ್ಲಿ ಸಮರ್ಥನೆ ಮಾಡಿದ್ದಾರೆ. ಇದಕ್ಕೂ ಹೆಚ್ಚು ರೋಚಕವಾಗಿ ಉತ್ತರವನ್ನು ಹೇಳುವ ಸಂದರ್ಭದಲ್ಲಿ ಸಮರ್ಥನೆಯನ್ನು ಕೊಡುವ ಶ್ರೀವ್ಯಾಸರಾಜರ ಕೌಶಲಕ್ಕೆ ನಮಸ್ಕಾರ.

***

# ವಿಷಯಾನುಕ್ರಮಣಿಕೆ

## ಆಕಾಶಾಧಿಕರಣ



## ತಾತ್ಪರ್ಯಚಂದ್ರಿಕಾ

## ಪ್ರಾಣಾಧಿಕರಣ



## ತಾತ್ಪರ್ಯಚಂದ್ರಿಕಾ

## ಜ್ಯೋತಿರಧಿಕರಣ



## ತಾತ್ಪರ್ಯಚಂದ್ರಿಕಾ

## ಗಾಯತ್ರ್ಯಧಿಕರಣ



### ತಾತ್ಪರ್ಯಚಂದ್ರಿಕಾ



### ಪರಿಪೂರ್ಣಚಂದ್ರಿಕಾ

## ಅಂತಿಮಪ್ರಾಣಾಧಿಕರಣ



### ತಾತ್ಪರ್ಯಚಂದ್ರಿಕಾ



### ಪರಿಪೂರ್ಣಚಂದ್ರಿಕಾ

* * * *

# ೦೦೮-ಆಕಾಶಾಧಿಕರಣ

ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ಭಾಷ್ಯದೀಪಿಕಾ, ಸತ್ತರ್ಕದೀಪಾವಳೀ, ತತ್ತ್ವಪ್ರಕಾಶಿಕಾ, ಭಾವದೀಪ, ವಾಕ್ಯಾರ್ಥಮಂಜರೀ

॥ ಶ್ರೀಗುರುಭ್ಯೋ ನಮಃ ॥

ದೇವದೇವೋತ್ತಮ ದೇವತಾಸಾರ್ವಭೌಮ ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

# ಬ್ರಹ್ಮಮೀಮಾಂಸಾಶಾಸ್ತ್ರ

## ಆಕಾಶಾಧಿಕರಣ

**सू - ॐ ॥ आकाशस्तल्लिङ्गात् ॥ ॐ ॥ ३ ॥**

**ಅನುವಾದ - ಪರೋವರೀಯಸ್ತ್ವಾದಿಲಿಂಗಗಳಿಂದ ಆಕಾಶಶಬ್ದವಾಚ್ಯನು ವಿಷ್ಣುವೇ ಆಗಿದ್ದಾನೆ.**

॥ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಆಕಾಶಾಧಿಕರಣವು ಸಮಾಪ್ತವಾಯಿತು ॥

* * * * * *

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ ಸೂತ್ರದೀಪಿಕಾ

सूत्रदीपिका – आकाशः आकाशशब्दवाच्यः विष्णुरेव, न प्रसिद्धाकाशः । कुतः? तल्लिङ्गात् छन्दोगश्रुत्युक्ताकाशे परोवरीयस्त्वादिरूपविष्णुलिङ्गस्य श्रवणादित्यर्थः ।

ಅನುವಾದ -- ಸಮನ್ವಯ ಸೂತ್ರದಿಂದ ತತ್ತು ಎಂಬ ಶಬ್ದವು ಅನುವೃತ್ತವಾಗಿದೆ. ಆಕಾಶ ಇತಿ ಹೋವಾಚ (ಛಾಂ.) ಎಂಬಲ್ಲಿರುವ ಆಕಾಶಶಬ್ದದಿಂದ ವಿಷ್ಣುವೇ ವಾಚ್ಯನಾಗುತ್ತಾನೆ ಹೊರತು ಪ್ರಸಿದ್ಧವಾದ ಭೂತಾಕಾಶವಲ್ಲ. ಏಕೆಂದರೆ ತಲ್ಲಿಂಗಾತ್ = 'ಸ ಏಷಃ ಪರೋವರೀಯಾನ್'(ಛಾಂ ೧/೯) ಎಂಬ ಶ್ರುತಿಯಲ್ಲಿ ವಿಷ್ಣುವಿನ ಅಸಾಧಾರಣಧರ್ಮಗಳು ಕೇಳಿಸುತ್ತಿರುವುದರಿಂದ.

॥ ಸೂತ್ರದೀಪಿಕೆಯಲ್ಲಿ ಆಕಾಶಾಧಿಕರಣವು ಸಮಾಪ್ತವಾಯಿತು ॥

* * * * *

ಪರಿಪೂರ್ಣಚಂದ್ರಿಕಾ

श्रीमदानन्दतीर्थभगवत्पादाचार्यविरचित-

# ब्रह्मसूत्रभाष्यम्

## ॥ आकाशाधिकरणम् ॥

### ಭೂತಾಕಾಶವೇ ಆನಂದಮಯವೆಂದು ಪೂರ್ವಪಕ್ಷ

**भाष्यम् – 'को ह्येवान्यात् कः प्राण्यात्, यदेष आकाश आनन्दो न स्यात्' (तै. २-७.) इति आकाशस्याऽनन्दमयत्वे हेतुरुक्तः, न तु विष्णोः[१] ।**

ಆಕಾಶವು ಆನಂದಪೂರ್ಣವಾಗದಿದ್ದಲ್ಲಿ ಈ ಜಗತ್ತನ್ನು ಯಾರು ತಾನೇ ನಿಯಮನ ಮಾಡಿಯಾನು? ಮತ್ತು ಬದುಕಿಸಿಯಾನು? ಹೀಗೆ ಆಕಾಶಕ್ಕೆ ಆನಂದಮಯತ್ವವನ್ನು ಹೇಳುವುದರಲ್ಲಿ ತೈತ್ತಿರೀಯೋಪನಿಷತ್ತು ಕಾರಣವನ್ನು ಹೇಳಿದೆ ಹೊರತು ವಿಷ್ಣುವಿಗಲ್ಲ. ಆದ್ದರಿಂದ ಭೂತಾಕಾಶವೇ ಆನಂದಮಯವಾಗಲಿ ವಿಷ್ಣುವಲ್ಲ.

ಪ್ರತಿಪದಾರ್ಥ– ಈ ಅಧಿಕರಣದಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವಾದ ಆಕಾಶ ಮೊದಲಾದ ಆಧಿಭೌತಿಕಶಬ್ದಗಳ ಸಮನ್ವಯವನ್ನು ಭಗವಂತನಲ್ಲಿ ಮಾಡಲಾಗಿದೆ. ಫಲವನ್ನು ಹೇಳುವುದರಿಂದಲೇ ಪೂರ್ವಪಕ್ಷವು ಸೂಚಿತವಾಗುತ್ತದೆಂಬಭಿಪ್ರಾಯದಿಂದ ನೇರವಾಗಿ ಪೂರ್ವಪಕ್ಷದ ಫಲವನ್ನೇ ಹೇಳುತ್ತಿದ್ದಾರೆ.

ಯತ್ = ಯಾವ ಪ್ರಸಿದ್ಧವಾದ, ಏಷಃ ಆಕಾಶಃ = ಈ ಆಕಾಶಶಬ್ದವಾಚ್ಯವಾದದ್ದು, ಆನಂದೋ ನ ಸ್ಯಾತ್ = ಆನಂದಮಯವಾಗದಿದ್ದಲ್ಲಿ, ಕಃ ಪ್ರಾಣ್ಯಾತ್ = ಯಾರು ಬದುಕಿಸಿಯಾನು? ಕೋ ಹಿ = ಯಾವಾತನು, ಅನ್ಯಾತ್ = ಜಗತ್ತನ್ನು ಪ್ರೇರಿಸಿಯಾನು? ಇತಿ = ಹೀಗೆ, ಆಕಾಶಸ್ಯ = ಆಕಾಶಕ್ಕೆ, ಆನಂದಮಯತ್ವೇ = ಆನಂದಮಯತ್ವವನ್ನು ಹೇಳುವುದರಲ್ಲಿ, ಹೇತುಃ = ಕಾರಣವು ಉಕ್ತಃ = ಹೇಳಲ್ಪಟ್ಟಿದೆ. ನ ತು = ಹೊರತಾಗಿ, ವಿಷ್ಣೋಃ = ವಿಷ್ಣುವಿಗೆ ಕಾರಣವನ್ನು ಹೇಳಿಲ್ಲ.

---

(१) भाष्यदीपिका – अत्राधिकरणे भगवति लोकतोऽन्यत्रप्रसिद्धाकाशपदोपलक्षिताधिभौतिकाशेषशब्दसमन्वयः क्रियते । फलकथनेन पूर्वपक्षः सूचितो भवतीत्याशयेन पूर्वपक्षफलमाह – को हीति ॥ इतीति ॥ इत्यानन्दमयाधिकरणोदाहृतवाक्येनेत्यर्थः। तुशब्दस्याऽकाशस्य त्विति सम्बन्धः । तथा च छन्दोगश्रुत्यु क्ताकाशाभिन्नाकाशस्यैवेत्यर्थः । 'आनन्दमयत्वे' पूर्णानन्दत्वेन निमित्तेन आनन्दमयशब्दवाच्यत्वे 'हेतुः' लोकचेष्टकत्वरूपः । तुशब्दार्थैवकारव्यावर्त्यमाह- नेति ॥ अनेन विष्णुभिन्नभूताकाशस्यैव छन्दोगश्रुत्युक्ताकाशशब्दवाच्यत्वमिति पूर्वपक्षे 'को हि' इति तैत्तिरीयश्रुत्युक्तोऽपि स एवेति तदुक्तहेतुना तस्यैवाऽनन्दमयत्वं सिद्ध्यति, न विष्णोरिति फलमुक्तं भवति । पूर्वसङ्गतिस्त्वधिकाशङ्कां कृत्वाऽत्र पूर्वन्याय एवातिदिश्यत इत्यातिदेशिकी द्रष्टव्या ।

॥ ಶ್ರೀಗುರುಭ್ಯೋ ನಮಃ ॥

ದೇವದೇವೋತ್ತಮ ದೇವತಾಸಾರ್ವಭೌಮ ಅಖಿಲಾಂಡಕೋಟಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

# ಬ್ರಹ್ಮಮೀಮಾಂಸಾಶಾಸ್ತ್ರ

## ಆಕಾಶಾಧಿಕರಣ

**सू - ॐ ॥ आकाशस्तल्लिङ्गात् ॥ ॐ ॥ ३ ॥**

ಅನುವಾದ - ಪರೋವರೀಯಸ್ತ್ವಾದಿಲಿಂಗಗಳಿಂದ ಆಕಾಶಶಬ್ದವಾಚ್ಯನು ವಿಷ್ಣುವೇ ಆಗಿದ್ದಾನೆ.

॥ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಆಕಾಶಾಧಿಕರಣವು ಸಮಾಪ್ತವಾಯಿತು ॥

* * * * * *

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ ಸೂತ್ರದೀಪಿಕಾ

सूत्रदीपिका – आकाशः आकाशशब्दवाच्यः विष्णुरेव, न प्रसिद्धाकाशः । कुतः? तल्लिङ्गात् छन्दोगश्रुत्युक्ताकाशे परोवरीयस्त्वादिरूपविष्णुलिङ्गस्य श्रवणादित्यर्थः ।

ಅನುವಾದ -- ಸಮನ್ವಯ ಸೂತ್ರದಿಂದ ತತ್ತು ಎಂಬ ಶಬ್ದವು ಅನುವೃತ್ತವಾಗಿದೆ. ಆಕಾಶ ಇತಿ ಹೋವಾಚ (ಛಾಂ.) ಎಂಬಲ್ಲಿರುವ ಆಕಾಶಶಬ್ದದಿಂದ ವಿಷ್ಣುವೇ ವಾಚ್ಯನಾಗುತ್ತಾನೆ ಹೊರತು ಪ್ರಸಿದ್ಧವಾದ ಭೂತಾಕಾಶವಲ್ಲ. ಏಕೆಂದರೆ ತಲ್ಲಿಂಗಾತ್ = 'ಸ ಏಷಃ ಪರೋವರೀಯಾನ್'(ಛಾಂ ೧/೯) ಎಂಬ ಶ್ರುತಿಯಲ್ಲಿ ವಿಷ್ಣುವಿನ ಅಸಾಧಾರಣಧರ್ಮಗಳು ಕೇಳಿಸುತ್ತಿರುವುದರಿಂದ.

॥ ಸೂತ್ರದೀಪಿಕೆಯಲ್ಲಿ ಆಕಾಶಾಧಿಕರಣವು ಸಮಾಪ್ತವಾಯಿತು ॥

* * * * *

श्रीमदानन्दतीर्थभगवत्पादाचार्यविरचित-

# ब्रह्मसूत्रभाष्यम्

## ।। आकाशाधिकरणम् ।।

### ಭೂತಾಕಾಶವೇ ಆನಂದಮಯವೆಂದು ಪೂರ್ವಪಕ್ಷ

**भाष्यम् – 'को ह्येवान्यात् कः प्राण्यात्, यदेष आकाश आनन्दो न स्यात्' (तै. २-७.) इति आकाशस्याऽनन्दमयत्वे हेतुरुक्तः, न तु विष्णोः[१] ।**

ಆಕಾಶವು ಆನಂದಪೂರ್ಣವಾಗದಿದ್ದಲ್ಲಿ ಈ ಜಗತ್ತನ್ನು ಯಾರು ತಾನೇ ನಿಯಮನ ಮಾಡಿಯಾನು? ಮತ್ತು ಬದುಕಿಸಿಯಾನು? ಹೀಗೆ ಆಕಾಶಕ್ಕೆ ಆನಂದಮಯತ್ವವನ್ನು ಹೇಳುವುದರಲ್ಲಿ ತೈತ್ತಿರೀಯೋಪನಿಷತ್ತು ಕಾರಣವನ್ನು ಹೇಳಿದೆ. ಹೊರತು ವಿಷ್ಣುವಿಗಲ್ಲ. ಆದ್ದರಿಂದ ಭೂತಾಕಾಶವೇ ಆನಂದಮಯವಾಗಲಿ ವಿಷ್ಣುವಲ್ಲ.

ಪ್ರತಿಪದಾರ್ಥ– ಈ ಅಧಿಕರಣದಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವಾದ ಆಕಾಶ ಮೊದಲಾದ ಆಧಿಭೌತಿಕಶಬ್ದಗಳ ಸಮನ್ವಯವನ್ನು ಭಗವಂತನಲ್ಲಿ ಮಾಡಲಾಗಿದೆ. ಫಲವನ್ನು ಹೇಳುವುದರಿಂದಲೇ ಪೂರ್ವಪಕ್ಷವು ಸೂಚಿತವಾಗುತ್ತದೆಂಬಭಿಪ್ರಾಯದಿಂದ ನೇರವಾಗಿ ಪೂರ್ವಪಕ್ಷದ ಫಲವನ್ನೇ ಹೇಳುತ್ತಿದ್ದಾರೆ.

ಯತ್ = ಯಾವ ಪ್ರಸಿದ್ಧವಾದ, ಏಷಃ ಆಕಾಶಃ = ಈ ಆಕಾಶಶಬ್ದವಾಚ್ಯವಾದದ್ದು, ಆನಂದೋ ನ ಸ್ಯಾತ್ = ಆನಂದಮಯವಾಗದಿದ್ದಲ್ಲಿ, ಕಃ ಪ್ರಾಣ್ಯಾತ್ = ಯಾರು ಬದುಕಿಸಿಯಾನು? ಕೋ ಹಿ = ಯಾವಾತನು, ಅನ್ಯಾತ್ = ಜಗತ್ತನ್ನು ಪ್ರೇರಿಸಿಯಾನು? ಇತಿ = ಹೀಗೆ, ಆಕಾಶಸ್ಯ = ಆಕಾಶಕ್ಕೆ, ಆನಂದಮಯತ್ವೇ = ಆನಂದಮಯತ್ವವನ್ನು ಹೇಳುವುದರಲ್ಲಿ, ಹೇತುಃ = ಕಾರಣವು ಉಕ್ತಃ = ಹೇಳಲ್ಪಟ್ಟಿದೆ. ನ ತು = ಹೊರತಾಗಿ, ವಿಷ್ಣೋಃ = ವಿಷ್ಣುವಿಗೆ ಕಾರಣವನ್ನು ಹೇಳಿಲ್ಲ.

---

(१) भाष्यदीपिका – अत्राधिकरणे भगवति लोकतोऽन्यत्रप्रसिद्धाकाशपदोपलक्षिताधिभौतिकाशेषशब्दसमन्वयः क्रियते । फलकथनेन पूर्वपक्षः सूचितो भवतीत्याशयेन पूर्वपक्षफलमाह – को हीति ॥ इतीति ॥ इत्यानन्दमयाधिकरणोदाहृतवाक्येनेत्यर्थः। तुशब्दस्याऽकाशस्य त्विति सम्बन्धः । तथा च छन्दोगश्रुत्यु क्ताकाशाभिन्नाकाशस्यैवेत्यर्थः । 'आनन्दमयत्वे' पूर्णानन्दत्वेन निमित्तेन आनन्दमयशब्दवाच्यत्वे 'हेतुः' लोकचेष्टकत्वरूपः । तुशब्दार्थैवकारव्यावर्त्यमाह- नेति ॥ अनेन विष्णुभिन्नभूताकाशस्यैव छन्दोगश्रुत्युक्ताकाशशब्दवाच्यत्वमिति पूर्वपक्षे 'को हि' इति तैत्तिरीयश्रुत्युक्तोऽपि स एवेति तदुक्तहेतुना तस्यैवाऽनन्दमयत्वं सिद्ध्यति, न विष्णोरिति फलमुक्तं भवति । पूर्वसङ्गतिस्त्वधिकाशङ्कां कृत्वाऽत्र पूर्वन्याय एवातिदिश्यत इत्यातिदेशिकी द्रष्टव्या ।

**तत्वप्रकाशिका – अत्र लोकतोऽन्यत्रप्रसिद्धाकाशनाम्नो ब्रह्मणि समन्वय-प्रतिपादनादस्ति शास्त्रादिसङ्गतिः । 'को ह्येवान्यात्' इत्याकाशशब्द आनन्दमये प्रयुक्तः । स एव छन्दोगश्रुतौ पठ्यते – 'अस्य लोकस्य का गतिरिति, आकाश इति होवाच । सर्वाणि ह वा इमानि भूतान्याकाशादेव समुत्पद्यन्ते । आकाशं प्रत्यस्तं यन्ति । आकाशो ह्येवैभ्यो ज्यायानाकाशः परायणम् । स एष परोवरीयानुद्गीथः स एषोऽनन्तः' इति । स चाकाशो यदि विष्णोरन्यस्तदा प्रागुक्तोऽपि स एव इत्यानन्दमयोऽप्यन्यः प्रसज्यते, अतः स निर्णयः ।**

ಈ ಅಧಿಕರಣದಲ್ಲಿ ಲೋಕದಿಂದ(ಲೋಕರೂಢಿಯಿಂದ) ಅನ್ಯತ್ರಪ್ರಸಿದ್ಧವಾದ 'ಆಕಾಶ' ಎಂಬ ನಾಮವನ್ನು ಬ್ರಹ್ಮನಲ್ಲಿ ಸಮರ್ಥನೆ ಮಾಡುವುದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಪಾದಸಂಗತಿಗಳು ಇವೆ. (ವೇದಾರ್ಥನಿರ್ಣಯ ಮಾಡುವುದರಿಂದ ಶಾಸ್ತ್ರಸಂಗತಿ, ಸಮನ್ವಯ ಮಾಡುವುದರಿಂದ ಅಧ್ಯಾಯಸಂಗತಿ, ನಾಮವನ್ನು ಸಮನ್ವಯ ಮಾಡುವುದರಿಂದ ಪಾದಸಂಗತಿ) 'ಕೋ ಹ್ಯೇವಾನ್ಯಾತ್' ಎಂದು ಆಕಾಶಶಬ್ದವನ್ನು ಆನಂದಮಯನಲ್ಲಿ ಪ್ರಯೋಗಿಸಿದ್ದಾರೆ. ಆ ಆಕಾಶ-ಶಬ್ದವೇ ಛಾಂದೋಗ್ಯೋಪನಿಷತ್ತಿನಲ್ಲಿ 'ಇಮಾನಿ ಭೂತಾನಿ ಆಕಾಶಾದೇವ ಸಮುತ್ಪದ್ಯಂತೇ । ಆಕಾಶಂ ಪ್ರತ್ಯಸ್ತಂ ಯಂತಿ, ಆಕಾಶೋ ಹ್ಯೇವೇಭ್ಯೋ ಜ್ಯಾಯಾನಾಕಾಶಃ ಪರಾಯಣಂ, ಸ ಏಷ ಪರೋ- ವರೀಯಾನುದ್ಗೀಥಃ, ಸ ಏಷೋऽನಂತಃ' ಎಂದು ಪಠಿಸಲ್ಪಟ್ಟಿದೆ. ಆಕಾಶಶಬ್ದವಾಚ್ಯನು ಒಂದು ವೇಳೆ ವಿಷ್ಣುವಿಗಿಂತ ಭಿನ್ನನು ಎಂದಾದರೆ ಆನಂದಮಯಪ್ರಕರಣದಲ್ಲಿ ಹೇಳಲ್ಪಟ್ಟ ಆಕಾಶಶಬ್ದವಾಚ್ಯನೂ ಬೇರೆಯವನೇ ಎಂದಾಗಿ, ಆನಂದಮಯನು ಬೇರೆಯವನೇ ಹೊರತು ವಿಷ್ಣುವಲ್ಲ ಎಂದಾಗುತ್ತದೆ. ಆದ್ದರಿಂದ ಆಕಾಶಶಬ್ದವಾಚ್ಯನು ಯಾರು? ಎಂದು ನಿರ್ಣಯಿಸಬೇಕು.

**तत्वप्रकाशिका – स आकाशोऽत्र विषयः । विष्णुरन्यो वेति सन्देहः । आकाशशब्दस्याऽऽनन्दमये प्रयुक्तत्वमन्यत्रप्रसिद्धिश्च सन्देहबीजम्(१) ।**

ಆದ್ದರಿಂದ ಆಕಾಶವು ಈ ಅಧಿಕರಣದಲ್ಲಿ ವಿಷಯ. ವಿಷ್ಣುವೋ ಅಥವಾ ಅನ್ಯರೋ ಎಂದು

---

(१) अत्राकाशः किं भूताकाशः उत ब्रह्मेति चिन्ता । तदर्थम् आकाशश्रुतिरनन्तत्वादि-लिङ्गबाधिका उत स्वयं तद्बाध्येति । तदर्थं सा श्रुतिः किं निरवकाशा उत सावकाशेति । तदर्थम् आकाशशब्दप्रवृत्तिनिमित्तं विवरत्वादिकं किमिन्द्रादिशब्दप्रवृत्तिनिमित्तैश्वर्यादि तदर्थम् अचेतनस्वभावः किं विष्ण्वाधीन उत

ಸಂದೇಹ. ಆಕಾಶಶಬ್ದವನ್ನು ಆನಂದಮಯನಲ್ಲಿ ಪ್ರಯೋಗಿಸಿರುವುದು ಮತ್ತು ಭೂತಾಕಾಶದಲ್ಲಿ ಪ್ರಸಿದ್ಧಿಯಿರುವುದು ಸಂದೇಹಕ್ಕೆ ಕಾರಣ.

**तत्वप्रकाशिका – भूताकाश एवायमिति पूर्वः पक्षः । आकाशशब्दस्य तत्र रूढत्वात् । न च वाच्यं 'योगवृत्त्याऽऽकाशशब्दो विष्णौ सावकाशः' इति, बाधकं विनाऽमुख्यार्थाङ्गीकारायोगात् ।**

**न च 'आकाशस्य भगवदधीनत्वेन तत्रैवाऽऽकाशशब्दो मुख्यः' इति युक्तम् । 'आकाशस्याचेतनत्वेनान्याधीनत्वायोगात् । चेतनस्य हि चेष्टादावन्याधीनत्वं सम्भवति' इति । आकाशशब्दस्यावकाशेऽपि रूढत्वादत्र भूताकाशग्रहणे को विशेषहेतुः? इति चेत् पृथिवीगतित्वोपपादनाय 'सर्वाणि ह वा इमानि भूतान्याकाशादेव समुत्पद्यन्ते' इत्यादिनाऽऽकाशस्य सर्वभूतकारणत्वलयाधिकरणत्वादेरुक्तत्वात् । तच्च 'आकाशाद् वायुः' इत्यादिना भूताकाशस्यैव प्रसिद्धम् । अतो भूताकाश एवायम् – इति मनसि निधाय पूर्वपक्षफलमाह – को हीति ॥**

ಪೂರ್ವಪಕ್ಷ -- ಆಕಾಶಶಬ್ದದಿಂದ ಭೂತಾಕಾಶವೇ ಪ್ರತಿಪಾದ್ಯವಾಗುತ್ತದೆ. ಏಕೆಂದರೆ ಭೂತಾಕಾಶದಲ್ಲಿಯೇ ಆಕಾಶಶಬ್ದವು ರೂಢವಾಗಿದೆ. ಇನ್ನು 'ಆ ಸಮಂತಾತ್ ಕಾಶತೇ' (ಸರ್ವತ್ರ-ಪ್ರಕಾಶವುಳ್ಳದ್ದು) ಎಂಬ ಯೋಗವೃತ್ತಿಯಿಂದ ವಿಷ್ಣುವಿನಲ್ಲಿ ಸಾವಕಾಶವಾಗಿದೆಯಲ್ಲ ಎಂದು ಪ್ರಶ್ನಿಸ-ಬಾರದು. ಏಕೆಂದರೆ, ವಿಶೇಷಬಾಧಕವಿಲ್ಲದಿದ್ದಾಗ ಅಮುಖ್ಯಾರ್ಥವನ್ನು (ಯೋಗಾರ್ಥವನ್ನು) ಸ್ವೀಕರಿಸಬಾರದು. ಒಂದು ವೇಳೆ ಭಗವದಧೀನವಾಗಿದ್ದರೆ ಭಗವಂತನಲ್ಲಿ ಆಕಾಶಶಬ್ದವು ಮುಖ್ಯ-ವಾಗುತ್ತಿತ್ತು. ಆದರೆ ಆಕಾಶವು ಅಚೇತನವಾದ್ದರಿಂದ ಭಗವದಧೀನವೂ ಆಗುವುದಿಲ್ಲ. ಏಕೆಂದರೆ ಚೇತನವಾಗಿದ್ದರೆ ತನ್ನ ವ್ಯಾಪಾರಕ್ಕೋಸ್ಕರ ಇನ್ನೊಂದು ಚೇತನ ಪದಾರ್ಥವನ್ನೇ ಅಪೇಕ್ಷಿಸಬೇಕು, ಆದರೆ ಆಕಾಶವು ಅಚೇತನವಾದ್ದರಿಂದ ಭಗವದಧೀನವಾಗಬೇಕಿಲ್ಲ.

ಪ್ರಶ್ನೆ -- ಆಕಾಶಶಬ್ದವು ಕೇವಲ ಅವಕಾಶ ಎಂಬರ್ಥದಲ್ಲಿ ರೂಢವಾಗಿದೆ ಹೊರತು ಭೂತಾ-ಕಾಶದಲ್ಲಿ ಅಲ್ಲ. ಹೀಗಿರುವಾಗ ಭೂತಾಕಾಶವನ್ನೇ ಸ್ವೀಕರಿಸಬೇಕೆಂಬುದಕ್ಕೆ ವಿಶೇಷಕಾರಣ-ವಿರುವುದಿಲ್ಲವಲ್ಲ?

---

तदधीन इति । तदर्थं तस्य तदधीनत्व एतत् कल्पकत्वेनाभिमतानन्तत्वादिलिङ्गनिरवकाशत्वे च प्रमाणं नास्त्युतास्तीति । – भावबोधः ।

ಉತ್ತರ -- ವಿಶೇಷಕಾರಣವಿದೆ. ಪೃಥಿವಿಗೆ ಯಾವುದು ಆಶ್ರಯ ಎಂಬ ಪ್ರಶ್ನೆಗೆ 'ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ' (ಸಕಲ ಭೂತಪದಾರ್ಥಗಳು ಆಕಾಶದಿಂದಲೇ ಹುಟ್ಟುತ್ತವೆ) ಎಂಬ ಶ್ರುತಿಯಿಂದ ಉತ್ತರಿಸಲಾಗಿದೆ. ಆಕಾಶವು ಸಕಲ ಭೂತಪದಾರ್ಥಗಳಿಗೆ ಕಾರಣವಾಗಿದೆ ಮತ್ತು ಅವುಗಳ ಲಯಕ್ಕೆ ಆಶ್ರಯವಾಗಿದೆ ಎಂದು ಶ್ರುತಿಯು ಹೇಳುತ್ತಿರುವುದರಿಂದ ಆಕಾಶಶಬ್ದದಿಂದ ಪ್ರಸಿದ್ಧವಾದ ಭೂತಾಕಾಶವೇ ವಾಚ್ಯವಾಗಬೇಕು. ಏಕೆಂದರೆ 'ಆಕಾಶಾದ್ವಾಯುಃ' ಎಂಬ ಮತ್ತೊಂದು ಶ್ರುತಿಯು ಪ್ರಸಿದ್ಧವಾದ ಭೂತಾಕಾಶದಿಂದ ವಾಯುವಿನ ಉತ್ಪತ್ತಿಯನ್ನು ಹೇಳುತ್ತಿದೆ. ಅದರಂತೆ ಪ್ರಕೃತದಲ್ಲಿಯೂ ಆಕಾಶಶಬ್ದದಿಂದ ಭೂತಾಕಾಶವೇ ಪ್ರತಿಪಾದ್ಯವಾಗುತ್ತದೆ. ಈ ವಿಷಯವನ್ನು ಮನಸ್ಸಿನಲ್ಲಿಟ್ಟುಕೊಂಡು ಪೂರ್ವಪಕ್ಷದ ಫಲವನ್ನು ಶ್ರೀಮದಾಚಾರ್ಯರು 'ಕೋ ಹಿ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**तत्वप्रकाशिका — एवमाकाशे छन्दोगश्रुत्युक्ते भूताकाशे सति 'को हि' इति तैत्तिरीयश्रुत्युक्तोऽपि स एव स्यात् । तथा च लोकचेष्टकत्वहेतु-राकाशस्यैवाऽऽनन्दमयत्वे कथितः स्यान्न विष्णोः ततश्च स एवाऽऽनन्दमयो भवति । आकाशस्याचेतनत्वेनाऽऽनन्दानुपपत्तावप्यभिमानिद्वारा तदुपपत्तेरिति भावः । अनेनैव 'अकाशशब्दस्याऽऽनन्दमये प्रयुक्तत्वात् विष्णुराकाशः किं न स्यात्?' इति परास्तम् । 'रूढेर्बलवत्त्वेन तस्यापि बाधोपपत्तेः' इति ।**

ಛಾಂದೋಗ್ಯಶ್ರುತಿಯಲ್ಲಿರುವ ಆಕಾಶಶಬ್ದವು ಭೂತಾಕಾಶಪರವೆಂದು ಇಲ್ಲಿಯ ತನಕ ನಿರ್ಣಯಿಸಿದ್ದಾಯಿತು. ಇದರಿಂದಲೇ ತೈತ್ತಿರೀಯಶ್ರುತಿಯಲ್ಲಿರುವ ಆಕಾಶಶಬ್ದವೂ ಸಹ ಭೂತಾಕಾಶ- ಪರವೆಂದು ನಿರ್ಣಯವಾಗುತ್ತದೆ. ಆದ್ದರಿಂದ ಲೋಕಚೇಷ್ಟಕತ್ವವೆಂಬ ಹೇತುವು ಭೂತಾಕಾಶದಲ್ಲಿ ಆನಂದಮಯತ್ವವನ್ನು ಸಾಧಿಸಲು ಹೇತುವಾಗುತ್ತದೆ ಹೊರತು ವಿಷ್ಣುವಿನಲ್ಲಿ ಆನಂದಮಯತ್ವವನ್ನು ಸಾಧಿಸಲು ಅಲ್ಲ. ಆದ್ದರಿಂದ ಭೂತಾಕಾಶವೇ ಆನಂದಮಯವಾಗಿದೆ. ಅಚೇತನವಾದ ಆಕಾಶದಲ್ಲಿ ಆನಂದಮಯತ್ವವು ಅಸಂಭಾವಿತವಲ್ಲವೇ? ಎಂದು ಪ್ರಶ್ನಿಸಬಾರದು. ಆಕಾಶತತ್ವದ ಅಭಿಮಾನಿಯು ಆನಂದಮಯನಾದ್ದರಿಂದ ಅಭಿಮನ್ಯಮಾನವಾದ ಆಕಾಶದಲ್ಲಿ ಆನಂದಮಯಶಬ್ದವನ್ನು ಗೌಣವಾಗಿ ವ್ಯವಹರಿಸಲಾಗಿದೆ. ಹಾಗಾದರೆ ಅಂತರ್ಯಾಮಿಯಾದ ವಿಷ್ಣುವಿನಲ್ಲಿ ಆನಂದಮಯತ್ವವನ್ನು ಸುಲಭವಾಗಿ ಹೇಳಬಹುದಲ್ಲವೇ? ಎಂದು ಶಂಕಿಸಬಾರದು. ವಿಷ್ಣುವು ಆನಂದಮಯನಾದರೆ ಆಕಾಶಶಬ್ದವಾಚ್ಯತ್ವವನ್ನು ಅವನಲ್ಲೇ ಹೇಳಬೇಕಾಗುತ್ತದೆ. ಆದರೆ ಈಗ ತಾನೇ ಹೇಳಿದಂತೆ ರೂಢಿಯು ಯೋಗಕ್ಕಿಂತ ಪ್ರಬಲವಾಗಿದೆ. ಭೂತಾಕಾಶದಲ್ಲಿರುವ ಪ್ರಬಲವಾದ ಆಕಾಶಶಬ್ದದ ರೂಢಿಯು ದುರ್ಬಲವಾದ ವಿಷ್ಣುವಿನಲ್ಲಿರುವ ಯೋಗವನ್ನು ಬಾಧಿ ಸುತ್ತದೆ. ಆದ್ದರಿಂದ ಭೂತಾಕಾಶವೇ ಆಕಾಶಶಬ್ದವಾಚ್ಯವಾಗಿದೆ ಮತ್ತು ಆನಂದಮಯವಾಗಿದೆ.

**भावदीपः – ॐ॥ आकाशस्तल्लिङ्गात् ॥ॐ**

द्वेधा ह्यन्यत्रप्रसिद्धाः शब्दाः लोकतो वा लोकप्रसिद्धश्रुतिलिङ्गसाहित्येन वा? तत्राद्याः आद्यपादे, द्वितीयास्तु द्वितीयपादे समन्वीयन्त इति भावेनाह – **लोकत इति** ॥ 'लोकप्रयोगतः' इत्यर्थः । भाष्ये पूर्वपक्षफलोक्त्या सूचिते श्रुत्यधिकरण–सङ्गती स्वयमाह – **को हीति** ॥ **स एवेति** ॥ इतः पूर्वं क्वापि लोकप्रसिद्धेरत्याजनेन लोकप्रसिद्ध्या सर्वत्रैकार्थत्वादिति भावः । **छन्दोगेति** ॥ आद्ये अध्याये विष्णु–लिङ्गानां दूरे श्रवणात् तदन्तवाक्योक्तिः । **प्रागुक्तोऽपि स एवेति** ॥ भूते प्रसिद्धिमात्रेण ब्रह्मलिङ्गानामन्यथानयनस्य छान्दोग्य इवात्रापि सम्भवादिति भावः । वक्ष्यति च तथा च 'लोकचेष्टकत्वहेतुः' इत्यादि ॥

ಲೋಕತಃ ಅನ್ಯತ್ರಶಬ್ದಗಳು, ಲೋಕಪ್ರಸಿದ್ಧವಾದ ಶ್ರುತಿ,ಲಿಂಗಸಾಹಿತ್ಯವುಳ್ಳ ಅನ್ಯತ್ರಪ್ರಸಿದ್ಧಶಬ್ದಗಳು ಎಂದು ಅನ್ಯತ್ರಪ್ರಸಿದ್ಧಶಬ್ದಗಳು ಎರಡು ರೀತಿಯಾಗಿವೆ. ಅವುಗಳಲ್ಲಿ ಮೊದಲನೆಯ ಪಾದದಲ್ಲಿ ಲೋಕತಃ ಅನ್ಯತ್ರಶಬ್ದಗಳನ್ನು, ದ್ವಿತೀಯಪಾದದಲ್ಲಿ ಲೋಕಪ್ರಸಿದ್ಧಶ್ರುತಿಲಿಂಗಸಹಿತವಾದ ಅನ್ಯತ್ರಪ್ರಸಿದ್ಧಶಬ್ದಗಳನ್ನು ಸಮನ್ವಯ ಮಾಡುತ್ತಾರೆ ಎನ್ನುವ ಅಭಿಪ್ರಾಯದಿಂದ "ಲೋಕತಃ" ಎಂದಿದ್ದಾರೆ. ಲೋಕತಃ ಎಂದರೆ 'ಲೋಕದ (ಜನರ) ಪ್ರಯೋಗದಿಂದ' ಎಂದರ್ಥ. ಭಾಷ್ಯದಲ್ಲಿ ಪೂರ್ವಪಕ್ಷದ ಫಲವನ್ನು ಹೇಳಿದ್ದರಿಂದ ಸೂಚಿಸಲ್ಪಟ್ಟ ಶ್ರುತಿಸಂಗತಿ ಮತ್ತು ಅಧಿಕರಣಸಂಗತಿಗಳನ್ನು ತಾವೇ "ಕೋ ಹಿ" ಎಂಬಂಶದಿಂದ ತಿಳಿಸುತ್ತಿದ್ದಾರೆ. "ಸ ಏವ" ಎಂಬ ಟೀಕಾಭಾಗಕ್ಕೆ 'ಇದಕ್ಕೂ ಮೊದಲು ಎಲ್ಲಿಯೂ ಲೋಕಪ್ರಸಿದ್ಧಿಯನ್ನು ಬಿಟ್ಟಿಲ್ಲವಾದ್ದರಿಂದ ಲೋಕಪ್ರಸಿದ್ಧಿಯಿರುವುದರಿಂದ ಎಲ್ಲಾ ಕಡೆಯಲ್ಲಿಯೂ (ಆಕಾಶಶಬ್ದಕ್ಕೆ) ಒಂದೇ ಅರ್ಥವಿರುವುದರಿಂದ' ಎಂದರ್ಥ. "ಛಂದೋಗ" ಎಂಬ ಭಾಗದಿಂದ 'ಮೊದಲನೆಯ ಅಧ್ಯಾಯದ ಛಾಂದೋಗ್ಯೋಪನಿಷತ್ತಿನಲ್ಲಿ ವಿಷ್ಣುವಿನ ಲಿಂಗಗಳು ದೂರದಲ್ಲಿರುವುದರಿಂದ ತದಂತವಾದ ಶ್ರುತಿಗಳನ್ನು ಉದಾಹರಿಸುತ್ತಾರೆ' ಎಂದು ತಿಳಿಯಬೇಕು. "ಪ್ರಾಗುಕ್ತೋಪಿ ಸ ಏವ" ಎಂಬಂಶದಿಂದ ಭೂತಾಕಾಶದಲ್ಲಿ ಆಕಾಶಶಬ್ದದ ಪ್ರಸಿದ್ಧಿಯಿರುವುದರಿಂದಲೇ ಬ್ರಹ್ಮನ ಲಿಂಗಗಳನ್ನು ಛಂದೋಗಶ್ರುತಿಯಲ್ಲಿ ಬೇರೆ ರೀತಿ ಕೂಡಿಸಿರುವಂತೆ ತೈತ್ತಿರೀಯೋಪನಿಷತ್ತಿನಲ್ಲೂ ಕೂಡಿಸಬೇಕು (ಕೂಡುತ್ತದೆ) ಎಂದು ಭಾವ. ಇದನ್ನು ಟೀಕೆಯಲ್ಲಿ ಮುಂದೆ "ಲೋಕಚೇಷ್ಟಕತ್ವಹೇತುಃ" ಎಂಬಿತ್ಯಾದಿಯಾಗಿ ಹೇಳುತ್ತಾರೆ.

**भावदीपः – स आकाश इति** ॥ शालावत्यकृतपृथिवीगतिप्रश्नं प्रत्यु–त्तरत्वेनोक्त इत्यर्थः । 'भूताकाशस्य प्राप्तिः' इति भाष्यं व्याचष्टे – **भूतेति** ॥ आकाशपदोक्त्या लब्धं हेतुमाह **रूढत्वादिति** ॥ 'विष्णौ तु न रूढिः' इति भावः ।

"ಸ ಆಕಾಶಃ" ಎಂಬುದರಿಂದ 'ಶಾಲಾವತ್ಯರು ಮಾಡಿದ ಪೃಥಿವಿಯ ಚಲನೆಯ ಕುರಿತಾದ ಪ್ರಶ್ನೆಯ ಉತ್ತರರೂಪವಾಗಿ ಹೇಳಿದ ಎಂದರ್ಥ. 'ಭೂತಾಕಾಶಸ್ಯ ಪ್ರಾಪ್ತಿಃ' ಎಂಬ ಭಾಷ್ಯವನ್ನು "ಭೂತ"

ಎಂಬಿತ್ಯಾದಿಯಾಗಿ ವ್ಯಾಖ್ಯಾನಿಸುತ್ತಾರೆ. ಆಕಾಶಪದವನ್ನು ಹೇಳಿದ್ದರಿಂದ ದೊರೆತ ಹೇತುವನ್ನು ''ರೂಢತ್ವಾತ್'' ಎಂಬುದಾಗಿ ಹೇಳುತ್ತಾರೆ. 'ವಿಷ್ಣುವಿನಲ್ಲಾದರೋ ರೂಢಿಯಿಲ್ಲ' ಎಂದು ಭಾವ.

**भावदीपः – पूर्वोक्तरीत्या गतार्थत्वमाशङ्कते – न चेति ॥** तन्न्यायविषयत्व-माह – **बाधकं विनेति ॥** 'अनन्तत्वादिलिङ्गं तु रूढाकाशश्रुत्यनुरोधेन भूते कथञ्चिद् योज्यम्' इति भावः । एवं च पूर्वत्र समुद्रस्थत्वादेर्भाष्योक्तश्रुत्यादिना विष्ण्वेकनिष्ठत्वनिश्चयेन, निरवकाशलिङ्गेन इन्द्रादिश्रुतेरङ्गरूढिबाधेन, योगवृत्या विष्णुनिष्ठत्वोक्तावपीहानन्तत्वादेर्विष्णुनिष्ठत्वानिश्चयेन पूर्वन्यायाविषयत्वान्न तेनास्य गतार्थत्वमिति सूचितम् । एतेन भाष्ये पूर्वपक्षप्रापकविशेषहेत्वनुक्ते-स्तात्पर्यमुद्घाटितं ध्येयम् । एवमग्रेऽपि । सुधायां तु अनन्तत्वादिलिङ्गानां वास्तवं निरवकाशत्वमुपेत्य गतार्थतामाशङ्क्याऽभ्यधिकाऽऽशङ्कोक्ता । अत एव 'तन्न सुतरां निरवकाशलिङ्गात्' इत्युक्तम् ।

ಹಿಂದಿನ ಅಧಿಕರಣದಲ್ಲಿ ಹೇಳಿದ ನ್ಯಾಯದಿಂದ ಈ ಅಧಿಕರಣದ ವಿಷಯವನ್ನು ಯೋಜಿಸ-ಬಹುದಲ್ಲವೇ? ಎಂದು ''ನ ಚ'' ಎಂಬುದಾಗಿ ಶಂಕೆಯನ್ನು ಮಾಡುತ್ತಾರೆ. ಆ ಅಧಿಕರಣದ ನ್ಯಾಯಕ್ಕೆ 'ಆಕಾಶ'ಶಬ್ದವು ವಿಷಯವಾಗುತ್ತದೆ ಎಂದು ''ಬಾಧಕಂ ವಿನಾ'' ಎಂಬಂಶದಿಂದ ಹೇಳುತ್ತಾರೆ. '(ಆ ಶ್ರುತಿಯಲ್ಲಿ ಶ್ರುತವಾದ) ಅನಂತತ್ವಾದಿಲಿಂಗವನ್ನು ರೂಢವಾದ ಆಕಾಶಶ್ರುತಿಗನುಗುಣವಾಗಿ ಭೂತಾಕಾಶದಲ್ಲಿ ಹೇಗಾದರೂ ಕೂಡಿಸಬೇಕು' ಎಂದು ಭಾವ. ಹೀಗಾಗಿ ಹಿಂದಿನ ಅಧಿಕರಣದಲ್ಲಿ ಸಮುದ್ರಸ್ಥತ್ವಲಿಂಗವು ಭಾಷ್ಯದಲ್ಲಿ ಹೇಳಿದ ಶ್ರುತಿಸ್ಮೃತಿಗಳಿಗನುಗುಣವಾಗಿ ವಿಷ್ಣುವಿನಲ್ಲಿ ಮಾತ್ರ ಇರುವುದೆಂದು ನಿಶ್ಚಿತವಾದ್ದರಿಂದ, ನಿರವಕಾಶಲಿಂಗದಿಂದ ಇಂದ್ರಾದಿಶ್ರುತಿಗಳಿಗೆ ಆಯಾಯ ಇಂದ್ರಾದಿದೇವತೆಗಳಲ್ಲಿ ಅಜ್ಞರ ರೂಢಿಯಿದ್ದರೂ ಬಾಧಿಸುವುದರಿಂದ, ಯೋಗವೃತ್ತಿಯಿಂದ ವಿಷ್ಣುವಿನಲ್ಲಿ (ಸಮುದ್ರಸ್ಥತ್ವಲಿಂಗವು) ಸಮರ್ಥಿಸಲ್ಪಟ್ಟಿದ್ದರೂ; ಈ ಅಧಿಕರಣದಲ್ಲಿ ಅನಂತತ್ವಲಿಂಗವು ವಿಷ್ಣುನಿಷ್ಠವೆಂದು ನಿಶ್ಚಿತವಾಗಿಲ್ಲವಾದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಗತಾರ್ಥತ್ವವಿಲ್ಲ ಎಂದು ಸೂಚಿಸಿದಂತಾಯಿತು. ಹೀಗೆ ಹೇಳಿದ್ದರಿಂದ ಭಾಷ್ಯದಲ್ಲಿ ಪೂರ್ವಪಕ್ಷವನ್ನು ಸಮರ್ಥಿಸುವ ವಿಶೇಷಹೇತುವನ್ನು ಹೇಳದಿದ್ದುದರ ತಾತ್ಪರ್ಯವನ್ನು ಬಿಡಿಸಿ ಹೇಳಿದಂತಾಯಿತು.

ಸುಧೆಯಲ್ಲಾದರೂ ಅನಂತತ್ವಲಿಂಗ ಮೊದಲಾದವುಗಳಿಗೆ ವಾಸ್ತವಿಕ ನಿರವಕಾಶತ್ವವನ್ನು ಸ್ವೀಕರಿಸಿ, ಹಿಂದಿನ ಅಧಿಕರಣದಿಂದ ಗತಾರ್ಥತ್ವವನ್ನು ಹೇಳಿ, ಅದರ ಮೇಲಿನ ಸಂದೇಹವನ್ನು (ಅಭ್ಯಧಿ ಕಾಶಂಕಾವನ್ನು) ಹೇಳಿದ್ದಾರೆ. (ಅತ ಏವ) ಆದುದರಿಂದಲೇ ಸುಧೆಯಲ್ಲಿ 'ತನ್ನ ಸುತರಾಂ ನಿರವಕಾಶತ್ವಲಿಂಗಾತ್' ಎಂದು ಹೇಳಿದ್ದಾರೆ.

**भावदीपः –** किञ्च योगो हि प्रवृत्तिनिमित्तस्य तद्गतत्वेन, वा 'तदधीन-त्वादर्थवत्' इति वक्ष्यमाणन्यायेनान्यगतस्य तदधीनत्वाद्वा, द्वेधा पूर्वमुक्तः । तत्रा-

द्यस्त्वशक्यशङ्कः । आकाशपदप्रवृत्तिनिमित्तस्य विवरत्वस्याऽऽकाशस्वभाववत्वात् । द्वितीयं निरसितुमाशङ्कते – **न चाऽऽकाशस्येति** ॥ आकाशपदप्रवृत्तिनिमित्त-विवरत्वादेराकाशस्वभावत्वात् आकाशस्य तदधीनत्वानधीनत्वाभ्यां विवरत्वस्यापि ते स्याताम्, इति भावेन 'आकाशस्य' इत्येवोक्तम्; न तु 'आकाशत्वस्य' इति ॥

**चेष्टा हि चेतनानां या सा भवेत् तत्प्रसादतः ।**
**अचेतनस्वभावस्तु विवरादिः कथं ततः? ॥'**

इत्यनुभाष्योक्तसमाधिमाह – **आकाशस्येति** ॥ यद्वा, द्विविधयोगमध्ये आद्यस्य निरासो 'बाधकं विना' इत्यादि । आकाशपदप्रवृत्तिहेतोराकाशस्वभावतया विष्णावसम्भवाच्चेत्यपि ध्येयम् । द्वितीयस्य शङ्कापूर्वं निरासः 'न चाकाशस्य' इत्यादि ।

ಮತ್ತೊಂದು ರೀತಿಯಲ್ಲಿ ಗತಾರ್ಥತ್ವವನ್ನು ಪರಿಹಾರ ಮಾಡುತ್ತಾರೆ.

ಭಗವಂತನಲ್ಲಿ ಸಕಲಶಬ್ದಗಳನ್ನು ಯೌಗಿಕವೃತ್ತಿಯಿಂದ ಹಿಂದೆ ಕೂಡಿಸಿದರು. (೧)ಆ ಯೋಗ-ವೃತ್ತಿಯು ಆಯಾಯ ಶಬ್ದಗಳ ಪ್ರವೃತ್ತಿನಿಮಿತ್ತವು ಭಗವಂತನಲ್ಲಿದೆ ಅಥವಾ (೨)ಮುಂದೆ ಹೇಳುವ 'ತದಧೀನತ್ವಾತ್' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಂತೆ ಆ ಪ್ರವೃತ್ತಿನಿಮಿತ್ತ ಭಗವದಧೀನವಾಗಿದೆ -- ಹೀಗೆ ಎರಡು ರೀತಿಯಾಗಿ ಹೇಳಿತ್ತು. ಅದರಲ್ಲಿ ಮೊದಲನೆಯದ್ದನ್ನು ಭಗವಂತನಲ್ಲಿ ಹೇಳಲು ಸಾಧ್ಯವಿಲ್ಲ. ಏಕೆಂದರೆ ಆಕಾಶಪದದ ಪ್ರವೃತ್ತಿನಿಮಿತ್ತವಾದ ವಿವರತ್ವ ಎನ್ನುವುದು ಆಕಾಶದ್ದೇ ಆದ ಸ್ವಭಾವ. ಎರಡನೆಯದ್ದನ್ನು ನಿರಾಕರಿಸಲೋಸುಗ ''ನ ಚಾಕಾಶಸ್ಯ'' ಎಂಬಿತ್ಯಾದಿಯಾಗಿ ಶಂಕಿಸುತ್ತಾರೆ. ಆಕಾಶಪ್ರವೃತ್ತಿನಿಮಿತ್ತವಾದ ವಿವರತ್ವವು ಆಕಾಶದ ಸ್ವಭಾವವಾದ್ದರಿಂದ ಆಕಾಶವು ಭಗವದಧೀನವಾದರೆ ವಿವರತ್ವವು ಭಗವದಧೀನವಾಗುತ್ತದೆ; ಇಲ್ಲದಿದ್ದರೆ ವಿವರತ್ವವು ಭಗವದಧೀನವಾಗುವುದಿಲ್ಲ ಎನ್ನುವ ಅಭಿಪ್ರಾಯದಿಂದ ''ಆಕಾಶಸ್ಯ'' ಎಂದು ಹೇಳಿದ್ದಾರೆ. ಇಲ್ಲದಿದ್ದರೆ ಆಕಾಶತ್ವಸ್ಯ ಎಂದು ಹೇಳಬೇಕಾಗಿತ್ತು.

'ಚೇಷ್ಟಾ ಹಿ ಚೇತನಾನಾಂ ಯಾ ಸಾ ಭವೇತ್ ತತ್ಪ್ರಸಾದತಃ ।
ಅಚೇತನಸ್ವಭಾವಸ್ತು ವಿವರಾದಿಃ ಕಥಂ ತತಃ ॥'

ಚೇತನರ ಚೇಷ್ಟೆಗಳು (ಕ್ರಿಯೆಗಳು) ಭಗವಂತನ ಪ್ರಸಾದದಿಂದ ನಡೆಯುತ್ತವೆ ಎಂದು ಒಪ್ಪೋಣ. ಆದರೆ ಅಚೇತನಸ್ವಭಾವಗಳಾದ ವಿವರತ್ವ ಮುಂತಾದವುಗಳು ಭಗವಂತನ ಅನುಗ್ರಹದಿಂದ ಇವೆ ಎನ್ನುವುದು ಹೇಗೆ?'' ಎನ್ನುವ ಅನುಭಾಷ್ಯದಲ್ಲಿ ಹೇಳಿದ ಅಭಿಪ್ರಾಯವನ್ನು ''ಆಕಾಶಸ್ಯ'' ಎನ್ನುವುದರಿಂದ ಹೇಳುತ್ತಾರೆ.

ಅಥವಾ ಕೆಲವರು ಹೀಗೆ ಹೇಳುತ್ತಾರೆ -- ಎರಡು ವಿಧವಾದ ಯೋಗಗಳ ಮಧ್ಯದಲ್ಲಿ ಮೊದಲನೆಯ

ವಿಧದ ಯೋಗವನ್ನು 'ಬಾಧಕಂ ವಿನಾ' ಎನ್ನುವುದರಿಂದ ನಿರಾಕರಣೆ ಮಾಡುತ್ತಾರೆ. ಆಕಾಶಪದ-ಪ್ರವೃತ್ತಿನಿಮಿತ್ತವಾದದ್ದು ಆಕಾಶದ ಸ್ವಭಾವವಾದ್ದರಿಂದ ವಿಷ್ಣುವಿನಲ್ಲಿ ಬರುವುದಿಲ್ಲ. ಎರಡನೆಯ ವಿಧವಾದ ಯೋಗವನ್ನು ಶಂಕೆ ಮಾಡಿ 'ನ ಚಾಕಾಶಸ್ಯ' ಎನ್ನುವುದರಿಂದ ನಿರಾಕರಣೆ ಮಾಡುತ್ತಾರೆ.

**भावदीपः – मुख्य इतीति ॥**

**'स्वातन्त्र्यं तद्गतत्वं च शब्दवृत्तेर्हि कारणम् ।**
**स्वातन्त्र्यं तत्र मुख्यं स्यात् .............'**

**इत्यनुभाष्योक्तेरिति भावः । एवं च विनैव अभ्यधिकाशङ्कां पूर्वन्यायाविषयत्वेनेह टीकायां पूर्वपक्षप्रवृत्तिरभिमता इत्याहुः ।**

ತದಧೀನತ್ವರೂಪವಾದ ಯೋಗವೃತ್ತಿಯು ಮುಖ್ಯವೃತ್ತಿಯಾಗಿದೆ. ಏಕೆಂದರೆ -

'ಸ್ವಾತಂತ್ರ್ಯಂ ತದ್‌ಗತತ್ವಂ ಚ ಶಬ್ದವೃತ್ತೇರ್ಹಿ ಕಾರಣಮ್ ।
ಸ್ವಾತಂತ್ರ್ಯಂ ತತ್ರ ಮುಖ್ಯಂ ಸ್ಯಾತ್ ................'

'ಸ್ವಾತಂತ್ರ್ಯ ಮತ್ತು ಅದರಲ್ಲಿ ಇರುವಿಕೆ ಎನ್ನುವುದು ಶಬ್ದವೃತ್ತಿಗೆ ಕಾರಣಗಳಾಗಿವೆ. ಅದರಲ್ಲಿ ಸ್ವಾತಂತ್ರ್ಯವು ಮುಖ್ಯವೃತ್ತಿಯೆನಿಸಿಕೊಳ್ಳುತ್ತದೆ' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ ಎಂದು ಭಾವ. ಹೀಗಾಗಿ ಅಭ್ಯಧಿಕಾಶಂಕೆಯಿಲ್ಲದೆ (ಹೆಚ್ಚಿನ ಪ್ರಶ್ನೆ) ಹಿಂದಿನ ಅಧಿಕರಣದ ನ್ಯಾಯಕ್ಕೆ ಈ ಅಧಿಕರಣದ ವಿಷಯ ಒಳಪಡದೆ ಪೂರ್ವಪಕ್ಷವು ಟೀಕೆಯಲ್ಲಿ ಪ್ರವೃತ್ತವಾಗುತ್ತದೆ ಎಂದು ಕೆಲವರು ಹೇಳುತ್ತಾರೆ.

**भावदीपः –** 'आकाशस्य प्राप्तिः' इत्यनुक्त्वा भाष्ये 'भूते'त्युक्तेर्भावं विवृण्वानः तदुपपादकत्वेन 'अस्य लोकस्य' इति पूर्वांशोक्तिरिति वक्तुं तटस्थशङ्कामाह – **आकाशेति ॥ अवकाशे** = अव्याकृताकाश इत्यर्थः । **सर्वभूतेति ॥** 'स्वेतर-सर्वभूताः' इत्यर्थः । अत्र रूढत्वादिनोक्तः पूर्वपक्षो वाचकशब्दस्वरूपप्रमाणाश्रितः । 'आकाशस्याचेतनत्वेन' इत्यादिनोक्तस्तु शब्दप्रवृत्तिहेतुरूपप्रमेयाश्रित इत्याहुः । भाष्योक्तेर्निर्बीजत्वभ्रमनिरासायाह – **इति मनसीति ॥** 'भूताकाश एवायमित्यादि-नोक्तम्' इत्यर्थः ।

ಭಾಷ್ಯದಲ್ಲಿ 'ಆಕಾಶಸ್ಯ ಪ್ರಾಪ್ತಿಃ' (ಆಕಾಶದ ಪ್ರಾಪ್ತಿಯಾಗುತ್ತದೆ) ಎಂದು ಹೇಳದೆ 'ಭೂತಾಕಾಶಸ್ಯ ಪ್ರಾಪ್ತಿಃ' (ಭೂತಾಕಾಶದ ಪ್ರಾಪ್ತಿ) ಎಂದು ಹೇಳಿದ್ದು ಏಕೆ? ಎನ್ನುವುದರ ಅಭಿಪ್ರಾಯವನ್ನು ವಿವರಿಸಲು, ಅದನ್ನು ಉಪಪಾದನೆ ಮಾಡುವುದಕ್ಕಾಗಿ 'ಅಸ್ಯ ಲೋಕಸ್ಯ ಕಾ ಗತಿಃ' ಎಂಬ ಮೊದಲಿನ ಭಾಗವನ್ನು ಹೇಳಿದ್ದಾರೆ. ಅದಕ್ಕಾಗಿ ತಟಸ್ಥಶಂಕೆಯನ್ನು ''ಆಕಾಶ'' ಎನ್ನುವುದರಿಂದ ತಿಳಿಸುತ್ತಾರೆ. 'ಅವಕಾಶೇ' ಎಂದರೆ

ಅವ್ಯಾಕೃತಾಕಾಶದಲ್ಲಿ ಎಂದರ್ಥ. "ಸರ್ವಭೂತ" ಎಂದರೆ 'ತನ್ನನ್ನು ಬಿಟ್ಟು ಉಳಿದ ಎಲ್ಲಾ ಭೂತಗಳು' ಎಂದರ್ಥ.

ಟೀಕೆಯಲ್ಲಿ 'ಆಕಾಶಶಬ್ದವು ಭೂತಾಕಾಶದಲ್ಲಿ ರೂಢವಾಗಿದೆ' ಎಂದಿಟ್ಟುಕೊಂಡು ಹೇಳಿದ ಪೂರ್ವಪಕ್ಷವು ಭೂತಾಕಾಶವನ್ನು ಹೇಳುವ ಶಬ್ದರೂಪಪ್ರಮಾಣವನ್ನಾಶ್ರಯಿಸಿ ಹೇಳಿದ್ದು. 'ಆಕಾಶವು ಅಚೇತನವಾಗಿದೆಯಾದ್ದರಿಂದ' ಎಂದು ಹೇಳಿದ ಪೂರ್ವಪಕ್ಷವು ಶಬ್ದಪ್ರವೃತ್ತಿನಿಮಿತ್ತವಾದ ಪ್ರಮೇಯವನ್ನು ಆಶ್ರಯಿಸಿ ಹೇಳಿದ್ದು ಎಂದು ಕೆಲವರು ಹೇಳುತ್ತಾರೆ.

'ಭೂತಾಕಾಶವೇ ಇಲ್ಲಿ ವಾಚ್ಯ' ಇತ್ಯಾದಿ ಭಾಷ್ಯದಲ್ಲಿ ಹೇಳಿದ್ದಕ್ಕೆ ಏನೂ ಪ್ರಮಾಣವಿಲ್ಲ ಎನ್ನುವ ಭ್ರಮೆಯನ್ನು ನಿವಾರಿಸಲು "ಇತಿ ಮನಸಿ" ಎಂಬಿತ್ಯಾದಿಯಾಗಿ ಹೇಳುತ್ತಾರೆ. 'ಭೂತಾಕಾಶ ಏವಾಯಮ್ ಇತ್ಯಾದಿನೋಕ್ತಮ್' ಎಂದು ಇದರ ಅರ್ಥ.

**भावदीपः – स्वोक्तं सर्वं भाष्ये पूर्वत्र योज्यमिति भावेन भाष्यं योजयति – एवमिति ॥ स एवेति ॥ रूढ्या भूतप्राप्तिबलेनात्रत्यानन्तत्वादिब्रह्मलिङ्गस्य च तत्रापि विश्वचेष्टकत्वरूपब्रह्मलिङ्गस्याकाशे योजनीयत्वादिति भावः । अनेनैवेति ॥ 'उक्तरीत्या आनन्दमयस्याप्याक्षेपसम्भवेन' इत्यर्थः ।**

ಟೀಕೆಯಲ್ಲಿ ತಾವು ಹೇಳಿದ ಎಲ್ಲವನ್ನೂ ಭಾಷ್ಯದಲ್ಲಿ ಮೊದಲು ಸೇರಿಸಿಕೊಳ್ಳಬೇಕು ಎಂಬ ಅಭಿಪ್ರಾಯದಿಂದ ಭಾಷ್ಯವನ್ನು "ಏವಮ್" ಎಂಬುದಾಗಿ ಯೋಜಿಸುತ್ತಾರೆ. "ಸ ಏವ" ಎಂಬಂಶದಿಂದ ರೂಢಿಯಿಂದ ಆಕಾಶಶಬ್ದಕ್ಕೆ ಭೂತಾಕಾಶ ಎಂದು ಅರ್ಥವಿರುವುದರಿಂದ ಛಾಂದೋಗ್ಯಶ್ರುತಿಯಲ್ಲಿರುವ ಅನಂತತ್ವ ಮೊದಲಾದ ಬ್ರಹ್ಮನ ಲಿಂಗವನ್ನು ಮತ್ತು ತೈತ್ತಿರೀಯೋಪನಿಷತ್ತಿನಲ್ಲಿ ಶ್ರುತವಾದ ಸರ್ವಚೇಷ್ಟಕತ್ವರೂಪವಾದ ಬ್ರಹ್ಮಲಿಂಗವನ್ನು ಭೂತಾಕಾಶದಲ್ಲಿ ಯೋಜಿಸಬೇಕು ಎಂಬಭಿಪ್ರಾಯವನ್ನು ಸೂಚಿಸಿದ್ದಾರೆ. "ಅನೇನೈವ" ಎಂದರೆ 'ಅಭಿಮಾನಿನ್ಯಾಯದಿಂದಲೇ ಆಕಾಶಶಬ್ದವನ್ನು ಆನಂದಮಯನಲ್ಲಿ ಪ್ರಯೋಗಿಸಿದ್ದಾರೆ ಎಂದು ಆಕ್ಷೇಪ ಮಾಡಲು ಬರುವುದರಿಂದ' ಎಂದು ಅಭಿಪ್ರಾಯ.

## ಪರೋವರೀಯಸ್ತ್ವಾದಿ ವಿಷ್ಣುವಿನ ಅಸಾಧಾರಣವಾದ ಲಿಂಗಗಳು

**भाष्यम् – इति न मन्तव्यम् । यतः –**

**सू - ॐ ॥ आकाशस्तल्लिङ्गात् ॥ ॐ ॥ २२ ॥**

**'अस्य लोकस्य का गतिरित्याकाश इति होवाच' (छा. १-९.) इत्यत्र भूताकाशस्य प्राप्तिः । न चासौ युज्यते, किन्तु विष्णुरेव ।**

**'स एष परोवरीयानुद्गीथः स एषोऽनन्तः' (छा. १-९.) इत्यादि तल्लिङ्गात् ।**

ಹೀಗೆ ತಿಳಿಯಬಾರದು. ಏಕೆಂದರೆ ವಿಷ್ಣುವಿನ ಅಸಾಧಾರಣಲಿಂಗಗಳನ್ನೇ ಶ್ರುತಿಯಲ್ಲಿ ಹೇಳಲಾಗಿದೆ.

ಛಾಂದೋಗ್ಯೋಪನಿಷತ್ತಿನಲ್ಲಿ ಪೃಥ್ವೀಲೋಕಕ್ಕೆ ಯಾರು ಗತಿ(ಆಧಾರ)? ಎಂಬ ಶಲಕರು ಮಾಡುವ ಪ್ರಶ್ನೆಗೆ 'ಆಕಾಶವೇ ಆಧಾರ' ಎಂದು ಪ್ರವಾಹಣರು ಉತ್ತರಿಸಿದ್ದಾರೆ.

ಇಲ್ಲಿ ಆಕಾಶಶಬ್ದವು ಭೂತಾಕಾಶದಲ್ಲಿಯೇ ಪ್ರಸಿದ್ಧವಾದ್ದರಿಂದ ಅದೇ ಆನಂದಮಯವೆಂದು ಭಾಸವಾಗುತ್ತದೆ. ಇದು ತಪ್ಪು. ವಿಷ್ಣುವೇ ಆಕಾಶಶಬ್ದವಾಚ್ಯನಾಗಿದ್ದಾನೆ. ಏಕೆಂದರೆ 'ಬ್ರಹ್ಮ, ಲಕ್ಷ್ಮೀ ಮೊದಲಾದವರಿಗಿಂತಲೂ ಶ್ರೇಷ್ಠನು' 'ಸಕಲವೇದಗಳಿಂದ ಗಾನಮಾಡಿಸಿಕೊಳ್ಳಲು ಅರ್ಹನು' 'ಸಕಲವಿಧನಾಶರಹಿತನು' ಇವೇ ಮೊದಲಾದ ವಿಷ್ಣುವಿನ ಅಸಾಧಾರಣ ಧರ್ಮಗಳು ಆಕಾಶಶಬ್ದಪ್ರತಿಪಾದ್ಯವಾದ್ದರಲ್ಲಿ ಕೇಳಿಸುತ್ತಿದೆಯಾದ್ದರಿಂದ.

---

**भाष्यदीपिका** – सिद्धान्तयति – इतीति ॥ कुतो न मन्तव्यमित्याशङ्कायां तत्र हेतुतया सूत्रमुपादत्ते – यत इति ॥ इदं चाऽवर्तते । तत्राऽद्यस्य 'यतश्चोदेति' इतिवत् कुत इत्यर्थः । 'यच्छब्दस्तु परामर्शे प्रश्नार्थेऽपि च भण्यते' इति भागवततात्पर्योक्तेः। द्वितीयस्तु न मन्तव्यमिति प्रतिज्ञायां सूत्रार्थस्य हेतुत्वद्योतकः ।

विषयादेः पूर्वपक्षफलकथनेन सूचनेऽपि मुखतोऽनुक्तेः तदनुवादपूर्वकं सूत्रं व्याचष्टे – अस्येति ॥ 'इत्यत्र' वाक्ये प्रतिपाद्यत्वस्येति शेषः । चोऽप्यर्थः । यद्यपि तथाऽपीत्यर्थे । 'असौ' आकाशोऽत्र वाच्य इति शेषः । सूत्रेऽनुवृत्तस्य 'तत्तु' इत्यस्यार्थो विष्णुरेवेति ॥ इत्यादीति ॥ लुप्तविभक्तिको निर्देशः । आदिशब्दात् 'सर्वाणि भूतानि' इत्यादिजगत्कारणत्वप्रतिपादकं वाक्यं गृह्यते । यथोक्तं तत्त्वप्रदीपे - 'सर्वाणि भूतानि – इत्यादिनोदीर्यमाणं जगदुत्पादकत्वादिकमादिशब्दादुपाददीत' इति । लिङ्गपदं श्रुत्युपलक्षकम् ।

तथा चेत्थं योजना । यद्यपि 'अस्य लोकस्य' इति छन्दोगवाक्ये भूताकाशस्य श्रुत्यादिबलादस्ति प्रतिपाद्यत्वस्य प्राप्तिः । तथाऽपि नासावत्र वाक्ये आकाशपदेन वाच्यो युज्यते, किन्तु – विष्णुरेव । कुतः? 'स एषः' इत्यादिवाक्ये 'तल्लिङ्गात्' तस्य विष्णोर्लिङ्गमसाधारणधर्मः परोवरीयस्त्वादिः । तस्य तस्मिन्नाकाशे श्रवणादुक्तत्वात् । यत एवं तल्लिङ्गाद् असौ छन्दोगश्रुत्युक्ताकाशो विष्णुरेव, तत एव 'को हि' इति तैत्तिरीयवाक्येऽप्यसावेव प्रतिपाद्यत इति तस्यैवाऽनन्दमयत्वे हेतुरुक्तो न तु भूतस्य । अतो भूताकाशस्याऽनन्दमयत्वे हेतुरुक्तः, न तु विष्णोरिति न मन्तव्यमिति । अनेन सूत्रयोजना दर्शिता ।

ಪ್ರತಿಪದಾರ್ಥ -- ಸಿದ್ಧಾಂತ ಹೀಗಿದೆ.

ಇತಿ ನ ಮಂತವ್ಯಮ್ = ಈ ಬಗೆಯ ಸಂಶಯ ಪಡಬಾರದು, ಯತಃ = ಏಕೆಂದರೆ, ಆಕಾಶಃ = ಆಕಾಶಶಬ್ದವಾಚ್ಯನಾದವನು ಆನಂದಮಯನಾದ ವಿಷ್ಣುವೇ ಆಗಿದ್ದಾನೆ. ತಲ್ಲಿಂಗಾತ್ = ವಿಷ್ಣುವಿನ ಅಸಾಧಾರಣಧರ್ಮಗಳು ಕೇಳಿಸುತ್ತಿರುವುದರಿಂದ,

ಅಸ್ಯ ಲೋಕಸ್ಯ = ಪ್ರತ್ಯಕ್ಷಸಿದ್ಧವಾದ ಈ ಪೃಥಿವಿಗೆ, ಕಾ ಗತಿಃ = ಯಾರು ಆಧಾರ? ಇತಿ = ಈ ಪ್ರಶ್ನೆಗೆ, ಆಕಾಶ ಇತಿ = ಆಕಾಶವೇ ಗತಿಯೆಂದು, ಉವಾಚ ಹ = ಶ್ರುತಿಯು ಹೇಳುತ್ತಿದೆಯಷ್ಟೇ. ಅತ್ರ = ಈ ವಾಕ್ಯದಲ್ಲಿ, ಭೂತಾಕಾಶಸ್ಯ = ಭೂತಾಕಾಶಕ್ಕೆ, ಪ್ರಾಪ್ತಿಃ = ಪ್ರಸಕ್ತಿ ಇದೆ; ಅಸೌ = ಈ ಭೂತಾಕಾಶವು, ನ ಯುಜ್ಯತೇ = ಪ್ರತಿಪಾದ್ಯವಾಗುವುದಿಲ್ಲ; ಕಿಂತು = ಆದರೆ, ವಿಷ್ಣುರೇವ = ವಿಷ್ಣುವೇ ಆಕಾಶನು. ಏಕೆಂದರೆ,

---

'अस्य' इत्यादेरयमर्थः – 'अस्य' प्रत्यक्षसिद्धस्य पृथिवीलोकस्य तदभिमानिनश्चतुर्मुखस्य 'का गतिः' आश्रय इति शिलकेन पृष्टः प्रवाहणो राजा आदीप्तत्वादाकाशनामको विष्णुरिति प्रत्युवाच । कथमित्याकाङ्क्षायां तदुपपादनाय तस्याऽकाशस्य महिमानमाह – 'सर्वाणि हवा इमानि भूतान्याकाशादेव समुत्पद्यन्ते आकाशं प्रत्यस्तं यन्ति आकाशो ह्येवैभ्यो ज्यायानाकाशः परायणं स एष परोवरीयानुद्गीथः स एषोऽनन्तः' इति । अत्र वैशब्दस्य प्रसिद्धिद्योतकस्य सन्निहितसर्वभूतान्वयो वा, 'स्युरेवं तु पुनर्वैवेत्यवधारणवाचकाः' इत्यभिधानादवधारणार्थत्वं वा द्रष्टव्यम् । भूतशब्दो भूताकाश एवात्रोच्यते इति पूर्वपक्षे आकाशव्यतिरिक्तभूतपरः । सिद्धान्ते तु सर्वभूतपरः । ब्रह्मादिसर्वजगत्परो वा । तथा च 'सर्वाणीमानि' प्रमितानि आकाशादिभूतानि ब्रह्मादिजगद्वा आकाशादेव समुत्पद्यन्ते । 'हवै' प्रसिद्धं हि । आकाशं 'प्रत्यस्तम्' अदर्शनं 'यन्ति' तत्रैव प्रलये मुक्तौ च लीनाः भवन्ति । कुतः ? 'हि' यस्मादाकाश एव 'एभ्यः' ब्रह्मादिभ्यो 'ज्यायान्' अधिकोत्तमः । कुत एतत् यत आकाशः 'परायणम्' उत्तमाश्रयः नैतस्मादुत्तमं वस्त्वाशङ्क्यमिति भावेनाऽह – स इति ॥ 'स एषः' आकाशनामा भगवान् 'परोवरीयान्' अत्र –

**'परस्मादुत्तमं प्रोक्तं परो इति ततः परम् ।**
**परोवरं परं तस्मात् प्रोक्तं पारोवरीयकम् ॥'**

इति सामसंहितावचनानुसारेणाऽदौ पर इति शब्दान्तरस्य मध्ये वरशब्दान्तरस्य चाऽवापेन वृत्तिवाक्ये सुबादेशस्य सोरुलोपेन रुत्वोत्वगुणेषु समाने परे ओमशब्दद्वयस्य लोपे चोत्तमोत्तमोत्तम इत्यर्थो ज्ञातव्यः । 'उद्गीथः' उच्चत्वेन गीत उक्तो वेदेन । तकारस्य थकारो व्यत्ययात् । 'स एषः' आकाशः 'अनन्तः' देशकालगुणैरपरिच्छन्न इति । छान्दोग्यभाष्ये तु 'उच्चत्वाद्गीतत्वात् सर्वस्थानस्थत्वादुद्गीथो भगवान्' इति व्याख्यातम् ।

ಸ ಏಷಃ = ಪ್ರಸಿದ್ಧನಾದ ಪರಮಾತ್ಮನೇ, ಪರೋವರೀಯಾನ್ = (ಪರ=) ರುದ್ರಬ್ರಹ್ಮಲಕ್ಷ್ಮೀದೇವಿಯರಿಗಿಂತ (ವರೀಯಾನ್=) ಶ್ರೇಷ್ಠನಾಗಿದ್ದಾನೆ. ಉದ್ಗೀಥಃ = ಸಕಲವೇದಗಳಿಂದ ಗಾನ ಮಾಡಿಸಿಕೊಳ್ಳಲು ಅರ್ಹನಾಗಿದ್ದಾನೆ. ಸ ಏಷಃ = ಇಂತಹ ವಿಷ್ಣುವೇ, ಅನಂತಃ = ಸಕಲವಿಧನಾಶರಹಿತನು. ಇತ್ಯಾದಿ = ಇವೇ ಮೊದಲಾದ, ತಲ್ಲಿಂಗಾತ್ = ವಿಷ್ಣುವಿನ ಧರ್ಮಗಳಿರುವುದರಿಂದ, ವಿಷ್ಣುವೇ ಆಕಾಶನು.

**तत्वप्रकाशिका – सिद्धान्तयति इतीति ।। कुतो न मन्तव्यम्? इत्याशङ्कायां हेतुतया सूत्रमुपादत्ते – यत सति ।। विषयादेः पूर्वं मुखतोऽनुक्तेः तदनुवादपूर्वकं सूत्रं व्याचष्टे – अस्येति ।। यद्यपि 'अस्य लोकस्य का गतिः' इति वाक्ये भूताकाशस्योक्तरीत्याऽस्ति प्रतिपाद्यत्वप्राप्तिः, तस्यापि नासावत्र वाच्यो युज्यते, अपि तु विष्णुरेव युज्यते परोवरीयस्त्वादिविष्णुलिङ्गस्याऽऽकाशनिष्ठतया श्रवणात् । एवं 'यतस्तल्लिङ्गात् छन्दोगश्रुत्युक्ताऽऽकाशो विष्णुः, ततश्च 'को ह्रि' इत्यत्रापि स एव प्रतिपाद्यत इति तस्यैवाऽऽनन्दमयत्वे हेतुरुक्तोऽत आकाशस्याऽऽनन्दमयत्वे हेतुरुक्त इति न मन्तव्यम्' इत्यर्थः ।**

**'परस्मादुत्तमं प्रोक्तं परो इति ततः परम् ।**
**परोवरं परं तस्मात् प्रोक्तं पारोवरीयकम्'**

**इति स्मृतिः । उच्चत्वेन गीत उद्गीतः स एवोद्गीथः ।।**

ಸಿದ್ಧಾಂತ -- ಭಾಷ್ಯಕಾರರು ''ಇತಿ'' ಇತ್ಯಾದಿ ಗ್ರಂಥದಿಂದ ಸಿದ್ಧಾಂತವನ್ನು ಮಾಡಿದ್ದಾರೆ. ಭೂತಾಕಾಶವನ್ನು ಆಕಾಶ ಪದದಿಂದ ಏಕೆ ವಿವಕ್ಷಿಸಬಾರದು? ಎಂಬ ಶಂಕೆಗೆ ಉತ್ತರಿಸುವ ಸೂತ್ರವನ್ನೇ ಯತಃ ಎಂದು ಉಲ್ಲೇಖಿಸಿದ್ದಾರೆ. ಈ ಅಧಿಕರಣದಲ್ಲಿ ವಿಷಯಾದಿಗಳನ್ನು ಸ್ಪಷ್ಟವಾಗಿ ಇದುವರೆಗೂ ಭಾಷ್ಯಕಾರರು ಹೇಳಿಲ್ಲ. ಆದ್ದರಿಂದ ವಿಷಯವಾಕ್ಯವನ್ನು ಅನುವಾದ ಮಾಡುವ ಮೂಲಕ 'ಅಸ್ಯ' ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ.

ವಸ್ತುತಸ್ತು 'ಅಸ್ಯ ಲೋಕಸ್ಯ ಕಾ ಗತಿಃ' ಎಂಬ ಶ್ರುತಿಯಲ್ಲಿ ಪೂರ್ವಪಕ್ಷಕಾರರು ಹೇಳಿದಂತೆ ಭೂತಾಕಾಶವು ಪ್ರತಿಪಾದ್ಯವೆಂದು ತಿಳಿಯುತ್ತದೆ. ಆದರೆ ಇದು ಸರಿಯಲ್ಲ. ವಿಷ್ಣುವೇ ಇಲ್ಲಿರುವ ಆಕಾಶಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಈ ಶ್ರುತಿಯಲ್ಲಿ ವಿಷ್ಣುವಿನಲ್ಲಿ ಅಸಾಧಾರಣವಾಗಿರುವ ಪರೋವರೀಯಸ್ತ್ವಾದಿ ಲಿಂಗಗಳನ್ನು ಹೇಳಲಾಗಿದೆ. ಇದರಿಂದ ಛಾಂದೋಗ್ಯಶ್ರುತಿಯಲ್ಲಿರುವ ಆಕಾಶಶಬ್ದವು ವಿಷ್ಣುವನ್ನೇ ಪ್ರತಿಪಾದಿಸಬೇಕು. ಛಾಂದೋಗ್ಯದಲ್ಲಿರುವ ಆಕಾಶಶಬ್ದವು ವಿಷ್ಣುವನ್ನು ಪ್ರತಿಪಾದಿಸಿದರೆ 'ಕೋ ಹಿ' ಎಂಬ ತೈತ್ತಿರೀಯಶ್ರುತಿಯ ಆಕಾಶಶಬ್ದವೂ ಕೂಡ ವಿಷ್ಣುವನ್ನೇ

ಪ್ರತಿಪಾದಿಸಬೇಕಾಗುತ್ತದೆ. ವಿಷ್ಣುವು ಆನಂದಮಯನೆನ್ನಲು ಕೋ ಹಿ ಎಂಬ ಶ್ರುತಿಯು ಲಿಂಗವನ್ನು ಹೇಳುತ್ತಿದೆ ಎಂದು ಅನಿವಾರ್ಯವಾಗಿ ಅಂಗೀಕರಿಸಬೇಕು.

ಪರಸ್ಮಾದುತ್ತಮಂ ಪ್ರೋಕ್ತಂ ಪರೋ ಇತಿ ತತಃ ಪರಮ್ ।
ಪರೋವರಂ ಪರಂ ತಸ್ಮಾತ್ ಪ್ರೋಕ್ತಂ ಪಾರೋವರೀಯಕಮ್ ॥

ಪರ = ಭಾರತೀದೇವಿಗಿಂತ ಉತ್ತಮರಾಗವರು ಬ್ರಹ್ಮದೇವರು, ಬ್ರಹ್ಮದೇವರಿಗಿಂತ ಉತ್ತಮರಾದವರು ಪರೋ = ಲಕ್ಷ್ಮೀದೇವಿಯು; ಲಕ್ಷ್ಮೀದೇವಿಗಿಂತ ಉತ್ತಮನಾದವನು ಪರೋವರ = ಭಗವಂತನು; ಈ ಪರೋವರನೇ ಪಾರೋವರೀಯಕನಾಗಿದ್ದಾನೆ. (ಪರ + ಉ, ಎಂದಿರಬೇಕಾದರೆ ಗುಣ ಬಂದು ಪರೋ ಎಂದಾಗಿದೆ. ಪರ = ಬ್ರಹ್ಮ, ಪರೋ = ಲಕ್ಷ್ಮಿ, ಈಯಸುನ್ ಪ್ರತ್ಯಯ ಬಂದು ಪರೋವರೀಯ ಎಂಬ ರೂಪವು ನಿಷ್ಪನ್ನವಾಗಿದೆ. ಪರೋವರೀಯಃ ಏವ ಪಾರೋವರೀಯಕಮ್) ಈ ಸ್ಮೃತಿಯ ಪ್ರಕಾರ ಪರೋವರೀಯಸ್ತ್ವವು ಭಗವಂತನ ಅಸಾಧಾರಣಲಿಂಗವೆಂದು ತಿಳಿಯುತ್ತದೆ ಮತ್ತು ಉಚ್ಚತ್ವೇನ = ಸರ್ವೋತ್ತಮನೆಂದು, ಗೀತಃ = ಗಾನಮಾಡಲ್ಪಡುವವನು; ಆದ್ದರಿಂದ ಭಗವಂತನು ಉದ್ಗೀಥನೆನಿಸಿದ್ದಾನೆ. ಈ ಉದ್ಗೀಥತ್ವವು ಕೂಡ ಭಗವಂತನ ಅಸಾಧಾರಣಲಿಂಗವಾಗಿದೆ.

**भावदीपः – मुखत इति** ॥ फलोक्तिपरवाक्येन सूचितत्वात् **'मुखतः'** इत्युक्तिः । व्याघातादिभ्रान्तिं निरस्यन् भाष्यं व्याचष्टे – **यद्यपीति** ॥ 'तल्लिङ्गात्' इत्यत्र 'तत्' इति तन्त्रं षष्ठ्यन्तं सप्तम्यन्तं चेति मत्वाऽऽह – **विष्णुलिङ्गस्येति** ॥ हेतुतया सूत्रमुपादत्त इत्युक्तं व्यनक्ति – **एवमिति** ॥

**स एवेति** ॥ निरवकाशलिङ्गेन भूते अङ्गप्रसिद्धिबाधस्य छान्दोग्यवाक्य इव तैत्तिरीयवाक्येऽपि विश्वचेष्टकत्वरूपनिरवकाशब्रह्मलिङ्गभावेन भूते अङ्गप्रसिद्धिबाधस्य तुल्यत्वादिति भावः ।

''ಮುಖತಃ'' ಎಂಬ ಟೀಕಾಭಾಗದಿಂದ ಫಲವನ್ನು ಹೇಳುವ ವಾಕ್ಯದಿಂದ ಸೂಚಿಸಿದ್ದರಿಂದ ಮುಖತಃ ಎಂದಿದ್ದಾರೆ. 'ಆಚಾರ್ಯರ ವಾಕ್ಯವು ವ್ಯಾಹತ' ಎಂಬ ಭ್ರಾಂತಿಯನ್ನು ನಿರಾಕರಿಸಲು ಭಾಷ್ಯವನ್ನು ''ಯದ್ಯಪಿ'' ಎಂಬಿತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ. ''ತಲ್ಲಿಂಗಾತ್'' ಎಂಬ ಸೂತ್ರದ ಭಾಗದಲ್ಲಿ 'ತತ್' ಎಂಬ ಶಬ್ದವನ್ನು ತಂತ್ರದಿಂದ ಷಷ್ಠೀವಿಭಕ್ತ್ಯಂತವಾಗಿ 'ತಸ್ಯ' ಎಂದೂ, ಸಪ್ತಮೀ ವಿಭಕ್ತ್ಯಂತವಾಗಿ 'ತಸ್ಮಿನ್' ಎಂದೂ ಇಟ್ಟುಕೊಳ್ಳಬೇಕು ಎಂಬ ಅಭಿಪ್ರಾಯವನ್ನಿಟ್ಟುಕೊಂಡು ''ವಿಷ್ಣುಲಿಂಗಸ್ಯ'' ಎಂದು ಹೇಳಿದ್ದಾರೆ. 'ಹೇತುತಯಾ ಸೂತ್ರಮುಪಾದತ್ತೇ' (ಹೇತುವನ್ನಾಗಿ ಸೂತ್ರವನ್ನು ಹೇಳಿದ್ದಾರೆ) ಎಂದು ಹೇಳಿದ್ದನ್ನು ''ಏವಮ್'' ಎಂಬುದಾಗಿ ವ್ಯಕ್ತಪಡಿಸುತ್ತಾರೆ.

ಆಕಾಶಾಧಿಕರಣ (೧।೧।೮)

"ಸ ಏವ" ಎಂಬ ವಾಕ್ಯದಿಂದ 'ಛಾಂದೋಗ್ಯಪನಿಷತ್ತಿನಲ್ಲಿರುವ ಆಕಾಶಶಬ್ದಕ್ಕೆ ಭೂತಾಕಾಶದಲ್ಲಿರುವ ಅಜ್ಞರ ಪ್ರಸಿದ್ಧಿಗೆ ನಿರವಕಾಶವಾದ 'ಪರೋವರೀಯಸ್ತ್ವ' ಮುಂತಾದ ಲಿಂಗದಿಂದ ಬಾಧವನ್ನು ಹೇಳುವಂತೆ, ತೈತ್ತಿರೀಯವಾಕ್ಯದಲ್ಲಿರುವ ಆಕಾಶಶಬ್ದಕ್ಕೆ ಭೂತಾಕಾಶದಲ್ಲಿರುವ ಅಜ್ಞರ ಪ್ರಸಿದ್ಧಿಗೆ ವಿಶ್ವಚೇಷ್ಟಕತ್ವರೂಪವಾದ ನಿರವಕಾಶವಾದ ಬ್ರಹ್ಮನ ಲಿಂಗವಿರುವುದರಿಂದ ಬಾಧವನ್ನು ಹೇಳುವುದು ಸಮಾನವಾಗಿದೆ' ಎಂದು ಅಭಿಪ್ರಾಯ.

**भावदीपः –** भाष्ये अत्रानुक्तमपि द्वितीयछान्दोग्यभाष्योक्तमर्थं व्यनक्ति – **परस्मादिति ॥** 'उच्चोऽसौ गीयते च' इति छान्दोग्यभाष्योक्तेः । 'उद्गीयमान उद्गीथो भगवान् पुरुषोत्तमः' इति स्मृतेश्चाह – **उच्चत्वेनेति ॥** सर्वोत्तमत्वेन परोवरीयस्त्वोद्गीथत्वयोर्द्वयोरप्युक्तिः ।

ಇಲ್ಲಿ ಭಾಷ್ಯದಲ್ಲಿ ಹೇಳದಿದ್ದರೂ ದ್ವಿತೀಯಾಧ್ಯಾಯದ ಛಾಂದೋಗ್ಯಭಾಷ್ಯದಲ್ಲಿ ಹೇಳಿದ ಅರ್ಥವನ್ನು "ಪರಸ್ಮಾತ್" ಎಂಬಿತ್ಯಾದಿಯಾಗಿ ವ್ಯಕ್ತಪಡಿಸುತ್ತಾರೆ. 'ಉತ್ತಮನಾದ ಈ ಭಗವಂತನು ಗಾನಮಾಡಲ್ಪಡುತ್ತಾನೆ' ಎಂದು ಛಾಂದೋಗ್ಯಭಾಷ್ಯದಲ್ಲಿ ಹೇಳಿದೆ. 'ಉದ್ಗೀಯಮಾನ ಉದ್ಗೀಥೋ ಭಗವಾನ್ ಪುರುಷೋತ್ತಮಃ' ಎಂಬ ಸ್ಮೃತಿಯೂ ಇರುವುದರಿಂದ "ಉಚ್ಚತ್ವೇನ" ಎಂದು ಹೇಳಿದ್ದಾರೆ. ಭಗವಂತನು ಸರ್ವೋತ್ತಮನಾದ್ದರಿಂದ ಪರೋವರೀಯಸ್ತ್ವ ಮತ್ತು ಉದ್ಗೀಥತ್ವ ಎರಡನ್ನೂ ಹೇಳಿದ್ದಾರೆ.

## ಅನಂತತ್ವ ಮತ್ತು ಸರ್ವೋತ್ತಮತ್ವಗಳು ವಿಷ್ಣುವಿನ ಲಿಂಗಗಳು

**भाष्यम् – 'विष्णोर्नु कं वीर्याणि प्रवोचं यः पार्थिवान् विममे रजांसि' (ऋ. १-१५४-१.) 'परो मात्रया तन्वा वृधान' (ऋ. ७-९९-१.) इत्यादिना तस्यैव हि तल्लिङ्गम् ।**

---

भाष्यदीपिका –'स एषोऽनन्तः' इत्युक्तानन्तत्वस्यापरिमितत्वस्य विष्णुनिष्ठत्वं कुतो ज्ञायत इत्यत आह- विष्णोरिति ॥ विष्णोर्वीर्याणि 'कं' को नु को वा 'प्रवोचम्' प्रावोचत् । साकल्येन प्रवक्ति न कोऽपि । 'यः' कः कविर्ब्रह्मा 'पार्थिवानि रजांसि' पार्थिवपरमाणून् 'विममे' गणयति । सोऽपि न प्रवक्तीति श्रुत्यर्थः ।

'परोवरीयान्' इत्युक्तसर्वोत्तमत्वस्य विष्णुधर्मत्वं कुत इत्यत आह - पर इति ॥ अत्र 'न ते महित्वमन्वश्नुवन्ति' इति उत्तरवाक्यादुक्तार्थो ज्ञायते । अत एवाऽदिशब्द उभयान्वयी । तत्राऽद्यो 'विष्णोर्नु वीर्यगणनां कतमोऽर्हतीह यः पार्थिवान्यपि कविर्विममे रजांसि' इति स्मृतिग्राही । व्याख्यातेयं श्रुतिर्जन्मनये । इत्यादिना वाक्येनेति शेषः । यद्यपि श्रुत्यनुसारात् सर्वोत्तमत्वे प्रथमं प्रमाणं वक्तव्यं न

'ಸಮಗ್ರ ಬ್ರಹ್ಮಾಂಡಲ್ಲಿರುವ ಧೂಳಿನ ಕಣಗಳನ್ನಾದರೂ ಎಣಿಸಬಹುದು; ಆದರೆ ವಿಷ್ಣುವಿನ ಮಹಿಮೆಯನ್ನು ಯಾರು ತಾನೆ ಎಣಿಸಿಯಾನು?' 'ಎಲೈ ಪರಮಾತ್ಮನೇ! ನೀನು ದೇಶಕಾಲಗಳ ಮಿತಿಯನ್ನು ಮೀರಿದವನು; ದೇಹದಿಂದಲೂ ನೀನು ಸರ್ವತ್ರ ವ್ಯಾಪ್ತನು; ಆದ್ದರಿಂದಲೇ ಸರ್ವೋತ್ತಮನು' ಹೀಗೆ ವಿಷ್ಣುಸೂಕ್ತದ ಆಧಾರದಿಂದ ಛಾಂದೋಗ್ಯದಲ್ಲಿ ಹೇಳಲ್ಪಟ್ಟ ಅನಂತತ್ವ ಮತ್ತು ಸರ್ವೋತ್ತಮತ್ವ ಗುಣಗಳು ವಿಷ್ಣುವಿನದ್ದೇ ಎಂದು ತಿಳಿಯಲ್ಪಡುತ್ತದೆ.

ಪ್ರತಿಪದಾರ್ಥ– ಅನಂತತ್ವ ಹಾಗೂ ಅಪರಿಮಿತತ್ವಗಳು ವಿಷ್ಣುವಿನ ಅಸಾಧಾರಣ ಧರ್ಮಗಳೆಂದು ಹೇಗೆ ನಿರ್ಣಯಿಸುತ್ತೀರಿ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ವಿಷ್ಣೋಃ = ಭಗವಂತನ, ವೀರ್ಯಾಣಿ = ಮಹಿಮೆಗಳನ್ನು, ಕಂ ನು = ಯಾರು ತಾನೇ, ಪ್ರವೋಚಮ್ = ಸಂಪೂರ್ಣವಾಗಿ ಹೇಳಲು ಸಮರ್ಥರು? (ಯಾರೂ ಇಲ್ಲ). ಯಃ = ಯಾವ ಬ್ರಹ್ಮನು, ಪಾರ್ಥಿವಾನಿ = ಸಮಗ್ರ ಪೃಥಿವಿಯಲ್ಲಿರುವ, ರಜಾಂಸಿ = ಪರಮಾಣುಗಳನ್ನು, ವಿಮಮೇ = ಕ್ಷಣಮಾತ್ರದಲ್ಲಿ ಎಣಿಸಬಲ್ಲನು; (ಅಂತಹ ಬ್ರಹ್ಮನೂ ಸಹ ವಿಷ್ಣುವಿನ ಗುಣಗಳನ್ನು ಹೇಳಲು ಅಸಮರ್ಥನು).

ಪರೋವರೀಯಾನ್ ಎಂಬಲ್ಲಿ ಹೇಳಿದ ಸರ್ವೋತ್ತಮತ್ವವು ವಿಷ್ಣುವಿನ ಧರ್ಮವೆಂದು ಹೇಗೆ ತಿಳಿಯುತ್ತದೆ ಎಂಬುದಕ್ಕೆ ಉತ್ತರಿಸುತ್ತಿದ್ದಾರೆ.

ಮಾತ್ರಯಾ ತನ್ವಾ = ಮಿತವಾದ ತನ್ನ ದೇಹದಿಂದ, ಪರಃ = ಪರಮಾತ್ಮನು, ವ್ಯಧಾನ = ಸಮಸ್ತಜಗತ್ತನ್ನು ವ್ಯಾಪಿಸಿದ್ದಾನೆ; ಇತ್ಯಾದಿನಾ = ಇವೇ ಮೊದಲಾದ ಪ್ರಮಾಣಗಳಿಂದ, ತಲ್ಲಿಂಗಮ್ = ಛಾಂದೋಗ್ಯದಲ್ಲಿ ಹೇಳಲ್ಪಟ್ಟ ಧರ್ಮಗಳು, ತಸ್ಯೈವ ಹಿ = ವಿಷ್ಣುವಿನದ್ದೇ ಎಂದು ನಿರ್ಣಯವಾಗುತ್ತದಷ್ಟೇ.

**तत्वप्रकाशिका – ननु सर्वोत्तमत्वानन्तत्वयोः कुतो विष्णुर्लिङ्गत्वम्?, इत्यत आह – विष्णोरिति ॥ विष्णोर्वीर्याणि को नु प्रवक्ति, योऽपि पार्थिवपरमाणून् गणयतीति तस्यानन्तत्वमुच्यते । 'परो मात्रया' इत्यनेन सर्वोत्तमत्वम् ।**

---

त्वनन्तत्वे । अत एव टीकायामादौ सर्वोत्तमत्वं गृहीतम् । तथाऽपि अनन्तत्वस्य सावकाशत्वशङ्काविषयत्वात् प्रथमं तत्र प्रमाणोपन्यासः । अत एव तत्रैवोत्तरत्र स्मृत्या सावकाशत्वशङ्कापरिहारः । 'तस्य' विष्णोः हिशब्दो यत इत्यर्थे । 'तत्' अनन्तत्वादि 'लिङ्गं' धर्म इत्यवगतम् । अतो न हेतुविशेषणासिद्धिरिति वाक्यशेषः । एवकारपाठे नानैकान्त्यमिति शेषः । उत्तरत्रान्वयो वा । यद्यपि 'अनन्तः' इति श्रुतिः; वाचकशब्दत्वात् । तथाऽपि तत्पदप्रवृत्तिनिमित्तस्य लिङ्गत्वमप्यविरुद्धम् ।

ಪರೋವರೀಯಸ್ತ್ವ ಮತ್ತು ಉದ್ಗೀಥತ್ವಗಳು ವಿಷ್ಣುವಿನ ಲಿಂಗಗಳಾಗಲಿ; ಆದರೆ ಅನಂತತ್ವ, ಸರ್ವೋತ್ತಮತ್ವಗಳು ವಿಷ್ಣುವಿನ ಲಿಂಗವೆಂದು ಹೇಗೆ ನಿರ್ಣಯಿಸುತ್ತೀರಿ? ಈ ಪ್ರಶ್ನೆಗೆ 'ವಿಷ್ಣೋರ್ನು ಕಂ' ಎಂಬ ಶ್ರುತಿಯಿಂದ ಉತ್ತರಿಸುತ್ತಿದ್ದಾರೆ.

ಯಾವ ಚತುರ್ಮುಖಬ್ರಹ್ಮದೇವರು ಸಕಲಪಾರ್ಥಿವಪರಮಾಣುಗಳನ್ನು ಕ್ಷಣಮಾತ್ರದಲ್ಲಿ ಎಣಿಸುತ್ತಾರೋ ಅಂತಹ ಬ್ರಹ್ಮದೇವರೂ ಕೂಡ ಭಗವಂತನ ಪರಾಕ್ರಮಗಳನ್ನು ಎಣಿಸಲಾರರು' ಎಂಬ ಶ್ರುತಿಯ ಮಾತಿನಂತೆ ಅನಂತತ್ವಗುಣವು ಭಗವಂತನ ಅಸಾಧಾರಣಧರ್ಮವೆಂದು ತಿಳಿಯುತ್ತದೆ. ಇನ್ನು 'ಪರೋ ಮಾತ್ರಯಾ' ಎಂಬ ಶ್ರುತಿಯು ಹೇಳುವಂತೆ ಸರ್ವೋತ್ತಮತ್ವ-ಧರ್ಮವೂ ಕೂಡ ಭಗವಂತನಲ್ಲಿ ಅಸಾಧಾರಣವಾಗಿದೆಯೆಂದು ತಿಳಿಯುತ್ತದೆ.

**भावदीपः – कं कः । प्रवोचं प्रवक्ति । विममे गणयति ।**

तत्वप्रदीपे तु –

**विष्णोर्नु वीर्यगणनां कतमोऽर्हतीह**
**यः पार्थिवान्यपि कविर्विममे रजांसि ।**
**चस्कम्भ यः स्वरभसाचलितं त्रिपृष्ठं**
**यन्मां निशाम्य सदनादुरुकम्पमानम् ॥**

इति भागवतवचनादस्यार्थोऽवगम्यत इत्युक्तम् । 'परो मात्रया' इति श्रुत्यर्थो जन्मादिनयेऽभिहितः ।

ಭಾಷ್ಯೋದಾಹೃತ 'ವಿಷ್ಣೋರ್ನುಕಂ ವೀರ್ಯಾಣಿ' ಎಂಬ ಶ್ರುತಿಯಲ್ಲಿ 'ಕಂ' ಎಂದರೆ 'ಕಃ' (ಯಾವನು) ಎಂದರ್ಥ. 'ಪ್ರವೋಚಂ' ಎಂದರೆ 'ಪ್ರವಕ್ತಿ' (ಹೇಳುತ್ತಾನೆ) ಎಂದರ್ಥ. 'ವಿಮಮೇ' ಎಂದರೆ ಎಣಿಸುತ್ತಾನೆ ಎಂದರ್ಥ. ತತ್ವಪ್ರದೀಪದಲ್ಲಾದರೋ —

'ವಿಷ್ಣೋರ್ನು ವೀರ್ಯಗಣನಾಂ ಕತಮೋಽರ್ಹತೀಹ
ಯಃ ಪಾರ್ಥಿವಾನ್ಯಪಿ ಕವಿರ್ವಿಮಮೇ ರಜಾಂಸಿ ।
ಚಸ್ಕಂಭ ಯಃ ಸ್ವರಭಸಾಚ್ಚಲಿತಂ ತ್ರಿಪೃಷ್ಠಂ
ಯನ್ಮಾಂ ನಿಶಾಮ್ಯ ಸದನಾದುರುಕಂಪಮಾನಮ್ ॥'

ಎಂಬ ಭಾಗವತದ ಮಾತಿನಿಂದ ಈ ಅಭಿಪ್ರಾಯವು ತಿಳಿಯುತ್ತದೆ ಎಂದು ಹೇಳಿದ್ದಾರೆ. 'ಪರೋ ಮಾತ್ರಯಾ' ಎಂಬ ಶ್ರುತಿಯ ಅರ್ಥವನ್ನು ಜನ್ಮಾಧಿಕರಣದಲ್ಲೇ ಹೇಳಲಾಗಿದೆ.

ಪರಿಪೂರ್ಣಚಂದ್ರಿಕಾ

## ಅನಂತತ್ವವೂ ವಿಷ್ಣುವಿನ ಲಿಂಗ - ಬ್ರಾಹ್ಮಪುರಾಣದ ಸಮ್ಮತಿ

**भाष्यम् –**

**'अनन्तो भगवान् ब्रह्म आनन्देत्यादिभिः पदैः ।**

**प्रोच्यते विष्णुरेवैकः परेषामुपचारतः ॥' इति ब्राह्मे ।**

**'नामानि सर्वाणि यमाविशन्ति' इति चोक्तम् ॥ २२ ॥**

**॥ इत्याकाशाधिकरणम् ॥ ८ ॥**

ಬ್ರಾಹ್ಮಪುರಾಣದಲ್ಲಿ ಅನಂತ ಎಂಬ ಹೆಸರು ವಿಷ್ಣುವಿನದ್ದೇ ಎಂದು ಹೇಳಲಾಗಿದೆ– 'ಅನಂತ, ಭಗವಾನ್, ಬ್ರಹ್ಮ, ಆನಂದ ಎಂಬಿವೇ ಮೊದಲಾದ ಪದಗಳು ಕೇವಲ ವಿಷ್ಣುವನ್ನೇ ಹೇಳುತ್ತವೆ. ಬೇರೆಯವರನ್ನು ಅಮುಖ್ಯವಾಗಿ ಹೇಳುತ್ತವೆ' ಎಂದು ಭಾಲ್ಲವೇಯ ಶಾಖೆಯು ಜಗತ್ತಿನಲ್ಲಿರುವ ಎಲ್ಲ ಹೆಸರುಗಳು ವಿಷ್ಣುವನ್ನೇ ಹೊಂದುತ್ತವೆಂದು ಹೇಳಿದೆ.

ಪ್ರತಿಪದಾರ್ಥ - ಅನಂತತ್ವವು ವಿಷ್ಣುವಿನ ಲಿಂಗವೆಂದು ಸಮರ್ಥಿಸಲು ಶ್ರುತಿಯನ್ನು ಉಲ್ಲೇಖಿಸುತ್ತಿದ್ದಾರೆ. ಭಗವಾನ್ = ಸಮರ್ಥನಾದವನು, ಅನಂತಃ = ಸಕಲವಿಧನಾಶರಹಿತನು, ಬ್ರಹ್ಮ = ಸಕಲಗುಣಪರಿಪೂರ್ಣನು, ಆನಂದಃ = ಆನಂದಪೂರ್ಣನು, ಇತ್ಯಾದಿಭಿಃ = ಇವೇ ಮೊದಲಾದ, ಪದೈಃ = ಪದಗಳಿಂದ, ವಿಷ್ಣುರೇವೈಕಃ = ವಿಷ್ಣುವೊಬ್ಬನೇ ಮುಖ್ಯವಾಗಿ, ಪ್ರೋಚ್ಯತೇ = ಕರೆಸಿಕೊಳ್ಳಲ್ಪಡುತ್ತಾನೆ. ಪರೇಷಾಂ = ಇತರರಲ್ಲಿ, ಉಪಚಾರತಃ = ಅಮುಖ್ಯವೃತ್ತಿಯಿಂದ, ಪ್ರೋಚ್ಯತೇ = ಹೇಳಲ್ಪಡುತ್ತದೆ. ಇತಿ = ಹೀಗೆ, ಬ್ರಾಹ್ಮೇ = ಬ್ರಹ್ಮಪುರಾಣದಲ್ಲಿ ಹೇಳಲ್ಪಟ್ಟಿದೆ.

---

**भाष्यदीपिका –** नन्वनन्तत्वम् 'अनन्ताकाशवत् पश्यन्' इत्याकाशस्यापि स्मर्यते, अतः सावकाशत्वात् कथं विष्णोरेव तल्लिङ्गमित्यतः स्मृतिमाह – अनन्त इति ॥ आनन्देति लुप्तविभक्तिको निर्देशः । विष्णुरेवैको मुख्यतया प्रोच्यत इति सम्बन्धः । 'परेषां' विष्णोरन्येषाम् 'उपचारतः' स्वस्वसमीपगतपरमात्मसम्बन्धादेव वाच्यतेति शेषः । इति ब्राह्म इत्यस्य तस्यैव तल्लिङ्गमित्युक्तमिति पूर्वेणान्वयः । अनेनैवकारो लिङ्गस्य निरवकाशत्वज्ञापक इति सूचितम् ।

ननु श्रुत्या पूर्वपक्षिते कथं लिङ्गेन निर्णयः । लिङ्गस्य श्रुतितो दुर्बलत्वादित्यतः आकाशश्रुतिर्विष्णौ सावकाशेति श्रुत्या दर्शयति – नामानीति ॥ 'च' यतः 'नामानि सर्वाणि' इति वाक्येन विष्णोराकाशादिसर्वशब्दवाच्यत्वमुक्तम्, अतो लिङ्गेन श्रुतेर्बाधया निर्णयो युक्त इति योजना ।

॥ इत्याकाशाधिकरणम् ॥ ८ ॥

ಚ = ಮತ್ತು, ನಾಮಾನಿ ಸರ್ವಾಣಿ = ಜಗತ್ತಿನಲ್ಲಿರುವ ಎಲ್ಲ ಹೆಸರುಗಳು, ಯಮಾವಿಶಂತಿ = ಯಾವ ವಿಷ್ಣುವನ್ನೇ ಪ್ರವೇಶಿಸುತ್ತವೋ, ಇತಿ = ಹೀಗೆ, ಉಕ್ತಮ್ = ಭಾಲ್ಲವೇಯಶ್ರುತಿಯಲ್ಲಿ ಹೇಳಲ್ಪಟ್ಟಿದೆ.

**तत्वप्रकाशिका –** (अनन्तत्वं) नन्वन्तत्वं 'अनन्ताकाशवत्पश्यन्' इत्या-काशस्यापि स्मर्यते, अतः कथं विष्णोर्लिङ्गम्? इत्यत आह – अनन्त इति ॥ ननु श्रुत्या पूर्वपक्षिते कथं लिङ्गेन निर्णयः? लिङ्गस्य श्रुतितो दौर्बल्यात्, इत्यत आह – नामानीति ॥ श्रुत्या पूर्वपक्षितेऽपि लिङ्गमात्रेण निर्णयो घटते, आकाशश्रुतेः 'नामानि सर्वाणि' इति श्रुतिबलेन विष्णौ सावकाशत्वात् लिङ्गस्य चाकाशेऽनवकाशत्वात्, दुर्बलेनापि निरवकाशेन प्रबलस्यापि सावकाशस्य बाधोपपत्तेः – इति भावः ।

अस्तु लिङ्गेन श्रुतेर्बाधः; तथाऽपि विष्णौ श्रुतिरमुख्यैव, अन्यत्र रूढत्वात् विष्णौ यौगिकत्वात् – इति चेन्न । आकाशस्य भगवदधीनत्वेन तत्रैव मुख्यत्वात् महायोगविद्वद्रूढ्योर्भावाच्च । न चाऽऽकाशस्याऽपराधीनत्वम् । 'नभो ददाति श्वसतां मार्गं यन्नियमाददः' इत्यादेः । न च भूतकारणत्वोक्तिविरोधः, तस्य विष्णावेव सम्भवात् । तस्मात् 'आधिभौतिकसर्वशब्दोपलक्षकाकाशशब्दवाच्यो विष्णुरेवेति स एवाऽऽनन्दमयः' इति स्थितम् ॥ २२ ॥

॥ इति श्रीमज्जयतीर्थभिक्षुविरचितायां तत्वप्रकाशिकायाम् आकाशाधिकरणम् ॥

'ಅನಂತಾಕಾಶವತ್ ಪಶ್ಯನ್' ಎಂಬ ಪ್ರಮಾಣದಂತೆ ಭೂತಾಕಾಶವೂ ಸಹ ಅನಂತವೆಂದು ಪ್ರಸಿದ್ಧವಾಗಿರುವಾಗ ಅನಂತತ್ವಧರ್ಮವು ವಿಷ್ಣುವಿನಂತೆ ಭೂತಾಕಾಶದಲ್ಲಿಯೂ ಬರುತ್ತದೆ. ಹೀಗಿರುವಾಗ ಈ ಧರ್ಮವು ಭಗವಂತನಲ್ಲಿ ಅಸಾಧಾರಣವಾಗಿದೆಯೆಂದು ಹೇಗೆ ಹೇಳಿದಿರಿ? ಈ ಪ್ರಶ್ನೆಗೆ ಬ್ರಾಹ್ಮಪುರಾಣದ 'ಅನಂತೋ ಭಗವಾನ್' ಎಂಬ ಮಾತಿನಿಂದ ಉತ್ತರಿಸುತ್ತಿದ್ದಾರೆ.

ಶ್ರುತಿಯಿಂದ ಪೂರ್ವಪಕ್ಷ ಮಾಡಿದರೆ ಲಿಂಗದಿಂದ ನಿರ್ಣಯಿಸುವುದು ತಪ್ಪಲ್ಲವೇ? ಏನೇ ಆದರೂ ಶ್ರುತಿಗಿಂತ ಲಿಂಗವು ದುರ್ಬಲವಾಗಿದೆ. ಈ ಪ್ರಶ್ನೆಗೆ 'ನಾಮಾನಿ ಸರ್ವಾಣಿ' ಎಂಬ ಭಾಲ್ಲವೇಯ ಶ್ರುತಿಯಿಂದ ಉತ್ತರಿಸುತ್ತಿದ್ದಾರೆ. ಶ್ರುತಿಯಿಂದ ಪೂರ್ವಪಕ್ಷ ಮಾಡಿದರೂ ಕೂಡ ಕೆಲವೊಮ್ಮೆ ಲಿಂಗದಿಂದ ನಿರ್ಣಯಿಸಬಹುದು. 'ನಾಮಾನಿ ಸರ್ವಾಣಿ' ಎಂಬ ಶ್ರುತಿಯು ಭೂತಾಕಾಶವನ್ನು ಪ್ರತಿಪಾದಿಸುವಂತೆ ವಿಷ್ಣುವನ್ನೂ ಪ್ರತಿಪಾದಿಸುತ್ತದೆ. ಆದರೆ ವಿಷ್ಣುವಿನಲ್ಲಿರುವ

ಪರೋವರೀಯಸ್ತ್ವ ಮೊದಲಾದ ಲಿಂಗಗಳು ಯಾವುದೇ ಕಾರಣದಿಂದಲೂ ಭೂತಾಕಾಶದಲ್ಲಿ ಬರುವುದಿಲ್ಲ. ಹೀಗೆ ನಿರವಕಾಶವಾಗಿ ಅತ್ಯಂತ ಬಲಿಷ್ಠವಾದ ಲಿಂಗಗಳು ಸಾವಕಾಶವಾದ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯನ್ನು ಬಾಧಿಸುತ್ತವೆ. ಲಿಂಗವು ಸ್ವಾಭಾವಿಕವಾಗಿ ದುರ್ಬಲವಾಗಿದ್ದರೂ ಕೂಡ ನಿರವಕಾಶವಾದ ಪ್ರಯುಕ್ತ ಸ್ವಾಭಾವಿಕವಾಗಿ ಪ್ರಬಲವಾದ ಸಾವಕಾಶಶ್ರುತಿಯನ್ನು ಬಾಧಿಸಬಹುದು.

ಲಿಂಗದಿಂದ ಶ್ರುತಿಯು ಬಾಧಿತವಾದರೂ ಕೂಡ ವಿಷ್ಣುವಿನಲ್ಲಿ ಶ್ರುತಿಯು ಅಮುಖ್ಯವಾಗಿದೆ. ಆದರೆ ಭೂತಕಾಶದಲ್ಲಿ ರೂಢವಾಗಿದ್ದರಿಂದ ಮುಖ್ಯವಾಗಿದೆ. ಯೋಗಮಾತ್ರದಿಂದ ವಿಷ್ಣುವನ್ನು ಪ್ರತಿಪಾದಿಸುವ ಕಾರಣದಿಂದ ಭೂತಾಕಾಶಪರವಾದ ಶ್ರುತಿ ಪ್ರಬಲವಲ್ಲವೇ? ಎಂದು ಪ್ರಶ್ನಿಸ-ಬಾರದು. ಭೂತಾಕಾಶವು ಭಗವದಧೀನವಾದ್ದರಿಂದ ಭಗವಂತನಲ್ಲಿಯೇ ಶ್ರುತಿಯ ಮುಖ್ಯಪ್ರತಿ-ಪಾದ್ಯತ್ವವನ್ನು ಒಪ್ಪಬೇಕು. ಅಷ್ಟೇ ಅಲ್ಲದೆ ಭಗವಂತನಲ್ಲಿ ಸಕಲಶಬ್ದಗಳೂ ಸಹ ಮಹಾಯೋಗ ಹಾಗೂ ವಿದ್ವದ್ರೂಢಿಗಳಿಂದ ಇರುತ್ತವೆಂದು ತಿಳಿಯಬೇಕು. ಇನ್ನು ಭೂತಾಕಾಶವು ಭಗವಂತನ ಅಧೀನವೇ ಅಲ್ಲವಲ್ಲ? ಎಂಬ ಪ್ರಶ್ನೆಗೂ ಅವಕಾಶವಿಲ್ಲ. 'ನಭೋ ದದಾತಿ ಶ್ವಸತಾಂ ಮಾರ್ಗಂ ಯನ್ನಿಯಮಾದದಃ' ಎಂಬ ತೃತೀಯಸ್ಕಂಧದ ಮಾತಿನಂತೆ ಭೂತಾಕಾಶವು ಭಗವಂತನ ಆಧೀನವಾಗಿ ಶ್ವಾಸೋಚ್ಛ್ವಾಸಮಾಡುವ ಸಕಲಚೇತನರಿಗೆ ಅವಕಾಶವನ್ನು ಕೊಡುತ್ತದೆ. ಹೀಗಿರುವ ಆಕಾಶವು ಭಗವಂತನ ಅಧೀನವಾಗಿದೆಯೆಂದು ಸ್ಪಷ್ಟವಾಗಿ ತಿಳಿಯಬೇಕು.

'ಆಕಾಶಾದ್ವಾಯುಃ' ಎಂಬ ಶ್ರುತಿಯು ಭೂತಾಕಾಶಕ್ಕೆ ಕಾರಣತ್ವವನ್ನು ಹೇಳುತ್ತಿರುವುದರಿಂದ ವಿರೋಧವು ಬರುತ್ತದಲ್ಲವೇ? ಎಂದು ಶಂಕಿಸಬಾರದು. ಅಲ್ಲಿರುವ ಆಕಾಶಶಬ್ದದಿಂದ ಭಗವಂತನೇ ಪ್ರತಿಪಾದ್ಯನಾಗುತ್ತಾನೆ. ಆಕಾಶನೆನಿಸಿದ ಭಗವಂತನಲ್ಲಿಯೇ 'ಆಕಾಶಾದ್ವಾಯುಃ' ಎಂಬ ಶ್ರುತಿಯು ಕಾರಣತ್ವವನ್ನು ಪ್ರತಿಪಾದಿಸುತ್ತಿದೆ. ಆದ್ದರಿಂದ ಆದಿಭೌತಿಕವಾದ ಸಕಲಶಬ್ದಗಳನ್ನು (ಪೃಥಿವಿ, ಅಪ್ಪು, ತೇಜಸ್ಸು, ವಾಯು ಮೊದಲಾದ ಶಬ್ದಗಳನ್ನು) ಉಪಲಕ್ಷಿಸಿ ಆಕಾಶಶಬ್ದದಿಂದ ಮುಖ್ಯವಾಗಿ ವಾಚ್ಯ-ನಾದವನು ವಿಷ್ಣುವೇ ಆಗಿದ್ದಾನೆ. ಅವನೇ ಆನಂದಮಯನಾಗುತ್ತಾನೆ ಎಂದು ನಿರ್ಣಯವಾಯಿತು.

॥ತತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಸಮಾಪ್ತವಾಯಿತು॥

**भावदीपः – स्मर्यत इति** ॥ 'पुरुषार्थनयभाष्योक्तभविष्यत्पर्वस्मृतिकर्त्री' इत्यर्थः । एतेन **अनन्यथासिद्धलिङ्गैः** इति न्यायविवरणोक्तमनन्यथासिद्धत्वमुपपादितं भवति । **श्रुतिबलेनेति** ॥ श्रुत्यर्थस्तु आद्यनयेऽभिहितः । ततश्च किम्? इत्यतो 'अनन्यथासिद्धलिङ्गैः भगवद्विषयत्वमेव' इत्यन्यत्रोक्तं हृदि कृत्वाऽऽह – **दुर्बलेनापीति** ॥

'............ ......तथैव ह्यधिभूतगैः ।
अन्नादिशब्दैर्भगवान् एको मुख्यतयोदितः ।
शब्दप्रवृत्तिहेतूनां तस्मिन् मुख्यसमन्वयात् ॥'

इत्याद्यनुभाष्यार्थं व्यावर्त्यशङ्कापूर्वमाह – अस्त्विति ॥ आकाशस्येति ॥ तथा च तत्स्वभावस्यापि विवरत्वस्य भगवदधीनत्वमेवेत्यर्थः ।

'ಸ್ಮರ್ಯತೇ'' ಎಂಬ ಟೀಕಾಭಾಗಕ್ಕೆ 'ಪುರುಷಾರ್ಥಾಧಿಕರಣದಲ್ಲಿ ಹೇಳಿದ ಭವಿಷ್ಯತ್‌ಪರ್ವ-ಸ್ಮೃತಿಯನ್ನು ರಚಿಸಿದ ವೇದವ್ಯಾಸದೇವರಿಂದ (ಸ್ಮರ್ಯತೇ = ಪುರಾಣದಲ್ಲಿ ಹೇಳಿದ್ದಾರೆ)' ಎಂದರ್ಥ. ಹೀಗೆ ಹೇಳಿದ್ದರಿಂದ 'ಅನನ್ಯಥಾಸಿದ್ಧಲಿಂಗೈಃ' ಎಂದು ನ್ಯಾಯವಿವರಣದಲ್ಲಿ ಹೇಳಿದ ಅನನ್ಯಥಾಸಿದ್ಧತ್ವವನ್ನು ಉಪಪಾದನೆ ಮಾಡಿದಂತಾಗುತ್ತದೆ. ''ಶ್ರುತಿಬಲೇನ'' ಎಂದು ಟೀಕೆಯಲ್ಲಿದೆ. 'ನಾಮಾನಿ ಸರ್ವಾಣಿ' ಎಂಬ ಶ್ರುತಿಯ ಅರ್ಥವನ್ನು ಮೊದಲನೆಯ ಅಧಿಕರಣದಲ್ಲೇ ಹೇಳಲಾಗಿದೆ. ಹೀಗೆ ಸಾವಕಾಶತ್ವ, ನಿರವಕಾಶತ್ವ ಹೇಳಿದ್ದರಿಂದ ಏನು ಪ್ರಯೋಜನ? ಎಂದರೆ ಅನನ್ಯಥಾಸಿದ್ಧಲಿಂಗಗಳಿಂದ ಭಗವದ್ ವಿಷಯತ್ವವನ್ನೇ ಆಕಾಶಶಬ್ದಕ್ಕೆ ಹೇಳಬೇಕು ಎಂದು ಬೇರೆ ಕಡೆ ಹೇಳಿದ್ದನ್ನು ಮನಸ್ಸಿನಲ್ಲಿಟ್ಟುಕೊಂಡು ''ದುರ್ಬಲೇನಾಪಿ'' ಎಂದು ಹೇಳುತ್ತಾರೆ.

'............... ತಥೈವ ಹ್ಯಧಿಭೂತಗೈಃ ।
ಅನ್ನಾದಿಶಬ್ದೈರ್ಭಗವಾನ್ ಏಕೋ ಮುಖ್ಯತಯೋದಿತಃ ।
ಶಬ್ದಪ್ರವೃತ್ತಿಹೇತೂನಾಂ ತಸ್ಮಿನ್ ಮುಖ್ಯಸಮನ್ವಯಾತ್ ॥'

ಎಂಬ ಅನುವ್ಯಾಖ್ಯಾನದ ಅಭಿಪ್ರಾಯವನ್ನು, ಅದರಿಂದ ನಿರಾಕರಿಸಲ್ಪಡುವ ಶಂಕೆಯ ಸಹಿತ ''ಅಸ್ತು'' ಎಂದು ಹೇಳುತ್ತಾರೆ. ''ಆಕಾಶಸ್ಯ''. ಆಕಾಶದ ಸ್ವಭಾವವಾಗಿದ್ದರೂ ವಿವರತ್ವವು ನಿಶ್ಚಯವಾಗಿ ಭಗವಂತನ ಅಧೀನವೆಂದರ್ಥ.

**भावदीपः – मुख्यत्वादिति ॥** 'स्वातन्त्र्यं तत्र मुख्यं स्यात्' इत्युक्तेरिति भावः । 'आकाशस्यावकाशदातृत्वस्य ईश्वरायत्तत्वमीश्वरस्य पृथक् तद्वत्त्वं चावगम्यते' इति सुधोक्तदिशा 'सर्वभूतगुणैर्युक्तं देवं त्वं ज्ञातुमर्हसि' इति स्मृत्युक्तदिशा चावकाशदातृत्वरूपविवरत्वस्य निरवधिकतया तद्गतत्वाच्चेति भावेनाऽऽह – महायोगेति ॥ अत एव 'विद्वद्रूढिरपि सिद्धा सा योगादेव लभ्यते' इत्युक्तेः ।

''ಮುಖ್ಯತ್ವಾದಿತಿ''. 'ಸ್ವಾತಂತ್ರ್ಯಂ ತತ್ರ ಮುಖ್ಯಂ ಸ್ಯಾತ್' ಎಂದು ಹೇಳಿದ್ದರಿಂದ ಮುಖ್ಯ ಎಂದರ್ಥ. 'ಆಕಾಶಸ್ಯಾವಕಾಶದಾತೃತ್ವಸ್ಯ ಈಶ್ವರಾಯತ್ತತ್ವಮೀಶ್ವರಸ್ಯ ಪೃಥಕ್ ತದ್ವತ್ತ್ವಂ ಚಾವಗಮ್ಯತೇ' (ಆಕಾಶದಲ್ಲಿರುವ ಅವಕಾಶದಾತೃತ್ವವು ಭಗವಂತನ ಅಧೀನವಾಗಿದೆ; ಮತ್ತು ಭಗವಂತನಲ್ಲಿಯೇ

ಪ್ರತ್ಯೇಕವಾಗಿ ಅವಕಾಶದಾತೃತ್ವವು ಇದೆ ಎಂದು ತಿಳಿಯುತ್ತದೆ) ಎಂದು ಸುಧಾದಲ್ಲಿ ಹೇಳಿದಂತೆ; ಹಾಗೂ 'ಸರ್ವಭೂತಗುಣೈರ್ಯುಕ್ತಂ ದೇವಂ ತ್ವಂ ಜ್ಞಾತುಮರ್ಹಸಿ' ಎಂದು ಸ್ಮೃತಿಯಲ್ಲಿ ಹೇಳಿದಂತೆ ಅವಕಾಶದಾತೃತ್ವರೂಪವಾದ ವಿವರತ್ವವು ಪೂರ್ಣವಾಗಿ (ನಿರವಧಿಕವಾಗಿ) ಭಗವಂತನಲ್ಲಿ ಇದೆ-ಯಾದ್ದರಿಂದ ಎಂಬ ಅಭಿಪ್ರಾಯದಿಂದ "ಮಹಾಯೋಗ" ಎಂಬಿತ್ಯಾದಿಯಾಗಿ ಹೇಳುತ್ತಾರೆ. ಆದುದರಿಂದಲೇ 'ವಿದ್ವದ್‌ರೂಢಿರಪಿ ಸಿದ್ಧಾ ಸಾ ಯೋಗಾದೇವ ಲಭ್ಯತೇ' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

**भावदीपः** – यद्वा, **'एतद् ब्रह्म इदं वाव तत् योऽयं बहिर्धा पुरुषादाकाशः । यावान्वा अयमाकाशः । आकाशो वै नाम नामरूपयोः निर्वहिता'** इत्यादि प्रयोगबाहुल्याच्चेति भावः ।

ಅಥವಾ, 'ಏತದ್ ಬ್ರಹ್ಮ ಇದಂ ವಾವ ತತ್ ಯೋಽಯಂ ಬಹಿರ್ಧಾ ಪುರುಷಾದಾಕಾಶಃ । ಯಾವಾನ್ ವಾ ಅಯಮಾಕಾಶಃ । ಆಕಾಶೋ ವೈ ನಾಮ ನಾಮರೂಪಯೋಃ ನಿರ್ವಹಿತಾ" ಇವೇ ಮೊದಲಾದ ಬಹಳಪ್ರಯೋಗದಿಂದ ಆಕಾಶಶಬ್ದವಾಚ್ಯನು ವಿಷ್ಣುವೆಂದು ತಿಳಿಯುತ್ತದೆ ಎಂಬ ಅಭಿಪ್ರಾಯ ತಿಳಿಯಬೇಕು.

**भावदीपः** – अत्र प्रतिनयं विष्णौ योगरूढिसमर्थनं तु सर्वत्रानुवृत्त-तत्त्वितिशब्दे अवधारणार्थतुशब्दसूचितं ज्ञेयम् । विष्णौ परममुख्यवृत्त्यभावेऽ-न्यस्मिंस्तद्भावे वा अवधारणायोगात् आकाशस्याचेतनत्वेनान्याधीनत्वायोगात् इति प्रागुक्तमनूद्यानुभाष्योक्तसमाधिमाह – **न चाऽऽकाशस्येति ॥**

ಈ ಪಾದದ ಪ್ರತಿಯೊಂದು ಅಧಿಕರಣದಲ್ಲಿಯೂ ವಿಷ್ಣುವಿನಲ್ಲಿ ಶಬ್ದಗಳ ಯೋಗ ಮತ್ತು ರೂಢಿಯ ಸಮರ್ಥನೆಯು ಎಲ್ಲಾ ಅಧಿಕರಣಗಳಲ್ಲಿ ಅನುವೃತ್ತವಾದ್ದರಿಂದ ತತ್ತು ಎಂಬ ಪದದಲ್ಲಿ ಅವಧಾರಣಾರ್ಥಕವಾದ ತು ಎಂಬುದರಿಂದ ಸೂಚಿತವಾಗಿದೆಯೆಂದು ತಿಳಿಯಬೇಕು. 'ವಿಷ್ಣುವಿನಲ್ಲಿ ಪರಮಮುಖ್ಯವೃತ್ತಿ ಇಲ್ಲವೆನ್ನುವುದಾದಲ್ಲಿ ಅಥವಾ ಬೇರೆಯವರಲ್ಲಿ ಇದೆಯೆನ್ನುವುದಾದಲ್ಲಿ ಆಗ ತತ್ತು ಎಂದು ಅವಧಾರಣೆ ಮಾಡಿರುವುದು ಕೂಡುವುದಿಲ್ಲ. ಮತ್ತು ಆಕಾಶವು ಅಚೇತನವಾದ್ದರಿಂದ ಮತ್ತೊಬ್ಬರ ಅಧೀನವಾಗುವುದೂ ಸಾಧ್ಯವಿಲ್ಲ' ಎಂದು ಹಿಂದೆ ಹೇಳಿದ ವಿಷಯವನ್ನು ಅನುವಾದ ಮಾಡಿ, ಅದಕ್ಕೆ ಅನುವ್ಯಾಖ್ಯಾನದಲ್ಲಿ ಹೇಳಿದ ಸಮಾಧಾನವನ್ನು "ನ ಚಾಕಾಶಸ್ಯ" ಎಂಬ ಟೀಕಾಭಾಗದಿಂದ ಹೇಳುತ್ತಾರೆ.

**भावदीपः** – इत्यादेरिति ॥ तृतीयस्कन्धे आदिपदेन **'प्राणेन सृष्टावन्तरिक्षं च वायुश्च एतस्य वाक्षरस्य प्रशासने गार्गि द्यावाभूमी विधृते तिष्ठते'** इत्यादिश्रुति-र्ग्राह्या । अत्र युक्तिस्तु विवरत्वादिकं कारणतः स्वरूपतोऽप्यनागन्तुकम् । तथापि

धर्मिण एवाकाशादेरुत्पत्तिविनाशवतो जन्मस्थितिलयेष्वीशाधीनत्वे धर्मस्यापि तथा-भावोऽवर्जनीयः । तस्य जन्मादिस्तु 'आत्मनः आकाशः सम्भूतः' इत्यादिना सिद्धा इति छन्दोनये सुधायामुक्ता । सा विवृता चन्द्रिकायाम् –

'अस्तु सच्छिद्रमिति या हरीच्छा तद्वशान्नभः ।
छिद्रात्मकं हि सञ्जातमन्यथा निबिडं भवेत् ॥'

इत्यादिना । विष्णावेवेति ॥ 'आत्मनः आकाशः' इत्यत्रेवासङ्कुचितसर्वभूत-कारणत्वलाभादिति भावः ।

''ಇತ್ಯಾದೇಃ''. 'ನಭೋ ದದಾತಿ' ಎನ್ನುವುದು ಭಾಗವತತೃತೀಯಸ್ಕಂಧದ ವಾಕ್ಯ. 'ಇತ್ಯಾದೇಃ' ಎಂಬಲ್ಲಿ ಆದಿಪದದಿಂದ 'ಪ್ರಾಣೇನ ಸೃಷ್ಟಾವಂತರಿಕ್ಷಂ ಚ ವಾಯುಶ್ಚ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಭೂಮೀ ವಿಧೃತೇ ತಿಷ್ಠತಃ' ಇವೇ ಮೊದಲಾದ ಶ್ರುತಿಗಳನ್ನು ಸ್ವೀಕರಿಸಬೇಕು. ಈ ವಿಷಯದಲ್ಲಿ ಯುಕ್ತಿಯನ್ನು 'ವಿವರತ್ವಾದಿಕಂ ಕಾರಣತಃ ಸ್ವರೂಪತೋಽಪ್ಯನಾಗಂತುಕಮ್ । ತಥಾಪಿ ಧರ್ಮಿಣ ಏವಾಕಾಶಾದೇರುತ್ಪತ್ತಿವಿನಾಶವತೋ ಜನ್ಮಸ್ಥಿತಿಲಯೇಷ್ವೀಶಾಧೀನತ್ವೇ ಧರ್ಮಸ್ಯಾಪಿ ತಥಾಭಾವೋಽವರ್ಜನೀಯಃ । ತಸ್ಯ ಜನ್ಮಾದಿಸ್ತು ಆತ್ಮನ ಆಕಾಶಃ ಸಂಭೂತಃ ಇತ್ಯಾದಿನಾ ಸಿದ್ಧಾ' (ಆಕಾಶದಲ್ಲಿರುವ ವಿವರತ್ವವು ಜ್ಞಾನಾದಿಕಾರಣಗಳಿಂದ ಅಥವಾ ಸ್ವರೂಪತಃ ಈ ಎರಡೂ ರೀತಿಯಿಂದಲೂ ಆಗಂತುಕವಲ್ಲ/ಉತ್ಪನ್ನವಾಗುವುದಲ್ಲ. ಹಾಗಿದ್ದರೂ ಉತ್ಪತ್ತಿನಾಶವುಳ್ಳ ವಿವರತ್ವಕ್ಕೆ ಧರ್ಮಿಯಾದ ಆಕಾಶದ ಉತ್ಪತ್ತಿ, ಸ್ಥಿತಿ, ವಿನಾಶಗಳು ಭಗವಂತನ ಅಧೀನವಾದ್ದರಿಂದ ಅದರ ಧರ್ಮವಾದ ವಿವರತ್ವಕ್ಕೂ ಭಗವಂತನ ಅಧೀನತ್ವವು ಅಪರಿಹಾರ್ಯ. ಆಕಾಶದ ಉತ್ಪತ್ತ್ಯಾದಿಗಳು ಭಗವಂತನ ಅಧೀನ ಎನ್ನುವುದು ಆತ್ಮನ ಆಕಾಶಸ್ಸಂಭೂತಃ ಇವೇ ಮೊದಲಾದ ಪ್ರಮಾಣಗಳಿಂದ ಸಿದ್ಧವಾಗಿದೆ) ಎಂಬ ಛಂದೋಧಿಕರಣ (ಗಾಯತ್ರ್ಯಧಿಕರಣ)ದ ಸುಧೆಯಲ್ಲಿ ಹೇಳಿದ್ದಾರೆ. ಅದನ್ನೇ ಚಂದ್ರಿಕೆಯಲ್ಲಿ -

'ಅಸ್ತು ಸಚ್ಛಿದ್ರಮಿತಿ ಯಾ ಹರೀಚ್ಛಾ ತದ್ವಶಾನ್ನಭಃ ।
ಛಿದ್ರಾತ್ಮಕಂ ಹಿ ಸಂಜಾತಮನ್ಯಥಾ ನಿಬಿಡಂ ಭವೇತ್ ॥'

'ಆಕಾಶವು ಛಿದ್ರವುಳ್ಳದ್ದಾಗಲಿ/ವಿವರತ್ವವುಳ್ಳದ್ದಾಗಲಿ ಎಂದು ಹರಿಯ ಇಚ್ಛೆಯಿರುವುದರಿಂದ ಆಕಾಶವು ಛಿದ್ರವುಳ್ಳದ್ದಾಗಿದೆ. ಇಲ್ಲದಿದ್ದರೆ ನಿಬಿಡವಾಗಿ/ಛಿದ್ರರಹಿತವಾಗಿ ಇರುತ್ತಿತ್ತು' ಎಂದು ವಿವರಿಸಿದ್ದಾರೆ. ''ವಿಷ್ಣಾವೇವ'' 'ಆತ್ಮನ ಆಕಾಶಸ್ಸಂಭೂತಃ' ಎನ್ನುವ ಶ್ರುತಿಯಲ್ಲಿರುವಂತಹ ಅಸಂಕುಚಿತವಾದ ಸಕಲಭೂತಗಳಿಗೆ ಕಾರಣನು (ಕಾರಣತ್ವವು ಅಸಂಕುಚಿತವಾಗಿದೆ) ಎಂದು ಸಿದ್ಧ-ವಾಗುವುದರಿಂದ -ಎಂದು ಅಭಿಪ್ರಾಯ.

**भावदीपः** – विश्वतोमुखत्वं व्यञ्जयन् सूत्रार्थमुपसंहरति – **तस्मादिति** ॥ निरवकाशानेकलिङ्गभावादिति तल्लिङ्गादित्यर्थः । 'आकाशः तत्तु' इति प्रतिज्ञांशार्थमाह – **आधिभौतिकेति** ॥ **'अधिभूताध्यात्माधिवेदगतानाम्'** इति न्यायविवरणोक्तेः । एतन्न्यायविषयाणामत्रैव वाच्यत्वात् सूत्रस्याल्पाक्षरत्वेन सर्वोक्तेरयोगात् । उपलक्षणत्वेन कस्यचिदुदाहर्तव्यत्वे सर्वभूतमूलकारणत्वेन प्राधान्यात् पूर्वाक्षेपकत्वेन सङ्गतत्वाच्च आकाश एवोदाहृतः सूत्रे इति भावः । एवमग्रेऽपि महायोगविद्वद्रूढिभावादाह – **वाच्य इति** ॥ 'स एवानन्दमयः' इति फलोक्तिपरभाष्यार्थोपसंहारः ॥

॥ इति श्रीराघवेन्द्रयतिकृते भावदीपे आकाशाधिकरणम् ॥

ಸೂತ್ರವು ವಿಶ್ವತೋಮುಖವಾಗಿದೆ (ಅನೇಕ ಶಾಖಾನಿರ್ಣಾಯಕವಾಗಿದೆ) ಎಂಬುದನ್ನು ವ್ಯಕ್ತಪಡಿಸುತ್ತಾ ಸೂತ್ರಾರ್ಥವನ್ನು "ತಸ್ಮಾತ್" ಎಂಬಿತ್ಯಾದಿ ಟೀಕಾಭಾಗದಿಂದ ಉಪಸಂಹರಿಸುತ್ತಾರೆ. 'ನಿರವಕಾಶವಾದ ಅನೇಕ ಲಿಂಗಗಳಿರುವುದರಿಂದ' ಎಂದು 'ತಲ್ಲಿಂಗಾತ್' ಎಂಬುದರ ಅರ್ಥ. 'ಆಕಾಶಃ ತತ್ ತು' ಎಂದು ಪ್ರತಿಜ್ಞೆ ಮಾಡಿದ ವಿಷಯವನ್ನು "ಆಧಿಭೌತಿಕ" ಎನ್ನುವುದರಿಂದ ಹೇಳುತ್ತಾರೆ. ಆಕಾಶಶಬ್ದದಿಂದ ಆಧಿಭೌತಿಕವಾದ ಶಬ್ದಗಳನ್ನು ಉಪಲಕ್ಷಣಯಾ ಇಟ್ಟುಕೊಳ್ಳುವುದಕ್ಕೆ ಪ್ರಮಾಣವೇನೆಂದರೆ 'ಅಧಿಭೂತಾಧ್ಯಾತ್ಮಾಧಿವೇದಗತಾನಾಮ್' ಎಂದು ನ್ಯಾಯವಿವರಣದಲ್ಲಿ ಆಚಾರ್ಯರು ಹೇಳಿದ್ದಾರೆ.

ಸೂತ್ರಕ್ಕೆ ನೀವು ಹೇಳಿದ ಅಭಿಪ್ರಾಯವಿರುವುದಾದರೆ ಸೂತ್ರದಲ್ಲಿ ಆಕಾಶಶಬ್ದವನ್ನೇಕೆ ಗ್ರಹಣ ಮಾಡಿದ್ದಾರೆ? ಎಂದರೆ ಈ ಅಧಿಕರಣದಲ್ಲಿ ಹೇಳುವ ನ್ಯಾಯಕ್ಕೆ ವಿಷಯವಾದ ಶಬ್ದಗಳನ್ನು ಇಲ್ಲಿಯೇ ಹೇಳಬೇಕು. ಆದರೆ ಸೂತ್ರವು ಅಲ್ಪಾಕ್ಷರವುಳ್ಳದ್ದಾದ್ದರಿಂದ ಎಲ್ಲವನ್ನೂ ಇಲ್ಲಿ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಒಂದು ಶಬ್ದವನ್ನು ಹೇಳಿ ಉಳಿದವನ್ನು ಉಪಲಕ್ಷಣವನ್ನಾಗಿ ಇಟ್ಟುಕೊಳ್ಳಬೇಕು. ಆ ಸಂದರ್ಭದಲ್ಲಿ ಎಲ್ಲಾ ಭೂತಾದಿಗಳಿಗೆ ಮೂಲಕಾರಣ ಆಕಾಶವಾದ್ದರಿಂದ ಪ್ರಧಾನವಾಗಿದೆ ಮತ್ತು ಅಧಿಕರಣದ ಸಿದ್ಧಾಂತವನ್ನು ಆಕ್ಷೇಪಿಸಲು ಸಂಗತವಾಗಿದೆಯಾದ್ದರಿಂದ 'ಆಕಾಶ'ಶಬ್ದವನ್ನೇ ಸೂತ್ರದಲ್ಲಿ ಉದಾಹರಿಸಿದ್ದಾರೆ ಎಂದು ಅಭಿಪ್ರಾಯ.

ಹೀಗೆಯೇ ಮುಂದಿನ ಅಧಿಕರಣಗಳಲ್ಲಿ ಶಬ್ದಗಳು ಮಹಾಯೋಗ ಮತ್ತು ವಿದ್ವದ್ ರೂಢಿಗಳಿರುವುದರಿಂದ ಭಗವಂತನನ್ನು ಹೇಳುತ್ತವೆ ಎನ್ನುವುದನ್ನು "ವಾಚ್ಯ" ಎಂಬಿತ್ಯಾದಿಯಾಗಿ ಹೇಳುತ್ತಾರೆ. "ಸ ಏವ ಆನಂದಮಯಃ" ಎನ್ನುವುದು ಅಧಿಕರಣದ ಫಲವನ್ನು ಹೇಳುವ ಭಾಷ್ಯಾರ್ಥದ ಉಪಸಂಹಾರರೂಪವಾಗಿದೆ.

॥ ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಮುಗಿಯಿತು ॥

ಆಕಾಶಾಧಿಕರಣ (೧।೧।೮)

## अथ श्रीशर्कराश्रीनिवासविरचिता वाक्यार्थमञ्जर्याम्
## आकाशाधिकरणम्

**अस्य लोकस्येति** ।। अस्य लोकस्य पृथिव्यभिमानिनो ब्रह्मणः का गतिरिति शालावत्येन पृष्टे आदीप्तत्वादाकाशनामको विष्णुरिति होवाच प्रवाहणः । कथमेतस्य पृथिव्यभिमानिब्रह्मणो गतित्वम्? इत्यतस्तस्य माहात्म्यमाह – **सर्वाणीति** ।। सर्वाणि इमानि प्रमाणप्रसिद्धानि भूतानि ब्रह्मरुद्रादीनि आकाशादेव समुत्पद्यन्ते । ह वा इत्यस्यार्थस्य वैदिकप्रसिद्धिमाह । आकाशं प्रति अस्तं अदर्शनं यान्ति यत्रैव प्रलये मुक्तौ च लीना भवन्ति । कुतः? हि यस्मादाकाश एवैभ्यो ब्रह्मरुद्रादिभूतेभ्यो ज्यायान्, तदपि कुतः? आकाशःपरायणम् उत्तमाश्रयः ।

नैतस्मादप्युत्तमंवस्त्वाशङ्क्यमित्याशयेनाह – **स इति** ।। स एष आकाशनामा भगवान् परोवरीयान् सर्वोत्तमः उद्गीथः उच्चैर्देवैर्गीथः स एषोऽनन्तः देशतः कालतः गुणतश्च परिच्छेद-शून्यत्वादनन्तनामक इत्यर्थः ॥ **आकाशस्येति** ।। तथा च तत्स्वभावभूतप्रवृतिनिमित्तस्यापि भगवदधीनत्वमिति भावः । अवकाशे अव्याकृताकाशे ॥ **अनेनैव** ।। 'आकाशस्ये' इयादिभाष्ये-णैव । कथमित्यत आह – **रूढेरिति** ।। तस्यापि आनन्दमयप्रयुक्ताकाशशब्दस्यपि ॥

**ॐ आकाशस्तलिङ्गात् ॐ** ।। 'आकाश इति होवाच' इत्याकाशशब्दवाच्यो विष्णुरेव 'स एष परोवरीयान् स एषोऽनन्तः' इत्यादिना आकाशे श्रुतपरोवरीयस्त्वानन्तत्वादिविष्णु-लिङ्गादित्यर्थः । परोवरीय व्याख्यानरूपां छान्दोग्यभाष्योदाशब्दतां स्मृतिमुदाहरति – **परस्मा-दिति** ।। 'परशब्दितभारत्युत्तमो ब्रह्मा परो इत्युच्यते; उशब्दस्योत्तमार्थकत्वात् तदुत्तमा रमा परोवरमिति; तदुत्तमो हरिः पारोवरीयक' इति छान्दोग्यभाष्योदाहृतस्मृत्यर्थः । उच्चत्वेन उत्तमत्वेन । **स एवेति** ।। निर्वचनत्वात्तकारस्य थकार इति भावः । योपि सोपि न प्रवक्तीत्यर्थः ।

**अनन्तत्वमुच्यत इति** ।। गुणतोऽनन्तत्वस्याप्यनन्तशब्दार्थत्वादिति भावः ॥ **सर्वोत्तमत्वमिति** ।। मात्रशब्देन परिमितसर्वजगत् ग्रहणादिति भावः । स्मर्यते भविष्यत्पर्वणि ॥ **महायोगेति** ।। सर्वभूतगुणैर्युक्तं 'देवत्वं ज्ञातुमर्हसि' इत्युक्तेः । पुरुषादाकाशः । यावान्वा अयमाकाशः । आकाशो वै नामेति वैदिकप्रयोगबाहुल्याच्चेति भावः । **नभ इति** ।। अदो नभः यस्य हरेःप्रेरणात् श्वासं कुर्वतां मार्गं ददाति इति तृतीयस्कन्धवाक्यार्थः ॥ **विष्णावेवेति** ।। सर्वाणि ह वेति भूतकारणत्वमाकाशस्योच्यते । तच्चाकाशपदेन विष्णोरेव ग्रहणे सम्भवति । 'आत्मन आकाशः सम्भूतः' इत्यादिना विष्णोरेव सर्वभूतकारणत्वेन प्रमितत्वात् । भूताकाशस्य तु

स्वव्यतिरिक्तभूतकारणत्वेन तद्ग्रहणे सर्वशब्दस्य सङ्कोचः कार्य इति भावः । इदमभ्युपेत्योक्तम् । उक्तरीत्या भूतशब्दस्य ब्रह्मादिपरत्वात् ॥ **आधिभौतिकेति** ॥ महाभूताधिकाराख्यग्रन्थप्रतिपाद्यं देहात् ब्राह्मप्रकृत्यन्तं जडमधिभूतं तद्गतेत्यर्थः । यथोक्तं महाभूताधिकारणे तत्कारणम् । तथा कार्यमधिभूतं तदन्तिकादिति ॥ ८ ॥

॥ इति श्रीशर्कराश्रीनिवासविरचितायां वाक्यार्थमञ्जर्याम्
आकाशाधिकरणम् ॥

* * * * *

## श्रीपद्मनाभतीर्थविरचितसत्तर्कदीपावळ्याम्
## आकाशाधिकरणम्

**ॐ आकाशस्तल्लिङ्गात् ॐ ॥२२॥**

**'इन्द्रादिजीवेष्वसम्भावितधर्मोपदेशात् तेभ्योऽन्यः परमात्मा विष्णुः' इत्युक्तम् । उपर्याकाशादिष्वसम्भावितलिङ्गनिर्देशात् तेभ्योऽन्य इत्येतत्प्रतिपादक-सूत्रव्याख्यानं कर्तुमाह – को ह्येवेति ॥ छान्दोग्ये श्रूयते – 'अस्य लोकस्य का गतिरिति आकाश इति होवाच सर्वाणि ह वा इमानि भूतानि आकाशादेव समुत्पद्यन्ते आकाशं प्रत्यस्तं यन्ति आकाशो ह्येवैभ्यो ज्यायान् आकाशः परायणं स एष परोवरीयानुद्गीथः स एषोऽनन्तः' इति तत्राकाशशब्दनिर्दिष्टो भूताकाश एव लोकप्रसिद्धत्वाद्भवेत् । ततश्च 'को ह्येवान्यात् कः प्राण्यात् । यदेष आकाश आनन्दो न स्यात्' इत्यानन्दमयप्रकरणपठितोऽपि स एव भवेदिति ।**

ಇಂದ್ರಾದಿದೇವತೆಗಳಲ್ಲಿ ಅಸಂಭಾವಿತಧರ್ಮವನ್ನು ಶ್ರುತಿಯಲ್ಲಿ ಹೇಳಿದ್ದರಿಂದ ಪರಮಾತ್ಮನು ವಿಷ್ಣುವು, ಇಂದ್ರಾದಿದೇವತೆಗಳಿಗಿಂತ ಭಿನ್ನನು ಎಂದು ಹೇಳಲಾಗಿತ್ತು. ಮುಂದಿನ ಅಧಿಕರಣಗಳಲ್ಲಿ ಆಕಾಶಾದಿಗಳಲ್ಲಿ ಅಸಂಭಾವಿತವಾದ ಲಿಂಗಗಳನ್ನು ಹೇಳಿದ್ದರಿಂದ ಆಕಾಶಾದಿಗಳಿಗಿಂತ ಭಿನ್ನ ಎಂದು ಪ್ರತಿಪಾದಿಸುವ ಸೂತ್ರದ ವ್ಯಾಖ್ಯಾನವನ್ನು "ಕೋ ಹ್ಯೇವ" ಎಂಬಿತ್ಯಾದಿಯಾಗಿ ಹೇಳುತ್ತಾರೆ.

"ಅಸ್ಯ ಲೋಕಸ್ಯ ಕಾ ಗತಿರಿತಿ; ಆಕಾಶ ಇತಿ ಹೋವಾಚ; ಸರ್ವಾಣಿ ಹ ವಾ ಇಮಾನಿ ಭೂತಾನಿ ಆಕಾಶಾದೇವ ಸಮುತ್ಪದ್ಯಂತೇ; ಆಕಾಶಂ ಪ್ರತ್ಯಸ್ತಂ ಯಂತಿ; ಆಕಾಶೋ ಹ್ಯೇವೈಭ್ಯೋ ಜ್ಯಾಯಾನ್ । ಆಕಾಶಃ ಪರಾಯಣಂ; ಸ ಏಷ ಪರೋವರೀಯಾನುದ್ಗೀಥಃ; ಸ ಏಷೋಽನಂತಃ" ಎಂಬುದಾಗಿ

ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿದೆ. ಅಲ್ಲಿ ಆಕಾಶಶಬ್ದದಿಂದ ಹೇಳಿದ್ದು ಭೂತಾಕಾಶವನ್ನೇ ಎಂದಿಟ್ಟುಕೊಳ್ಳಬೇಕು. ಆದ್ದರಿಂದ 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ । ಯದೇಷ ಆಕಾಶ ಆನಂದೋ ನ ಸ್ಯಾತ್' ಎಂದು ಆನಂದಮಯಪ್ರಕರಣದಲ್ಲಿ ಹೇಳಲ್ಪಟ್ಟ ಆಕಾಶಶಬ್ದವಾಚ್ಯವಾದದ್ದು ಅದೇ ಆಗಬೇಕು ಎಂಬ ಪ್ರಶ್ನೆ ಬರುತ್ತದೆ.

**एवं प्राप्ते अभिधीयते । अत्राकाशशब्देन विष्णुरेवोच्यते । स एषोऽनन्त इत्यादिलिङ्गात् । अपरिमितगुणत्वं ह्यनन्तत्वं मुख्यतो विष्णोरेव श्रूयते 'विष्णोर्नु कम्' इत्यादि श्रुतौ । भागवते चैतदुक्तम् । 'विष्णोर्नु वीर्यगणनां कतमोऽर्हतीह यः पार्थिवान्यपि कविर्विममे रजांसि' इति । अत एवानन्तशब्दो विष्णुरूढः । सर्वभूतोत्पादकत्वे हेतुः इति श्रवणात् आकाशशब्दार्थः परमात्मेति ज्ञायते । सर्वभूतोत्पादकत्वमुपनिषत्सूत्रसिद्धम् । (१।१।८)**

**॥ इति सत्तर्कदीपावल्याम् आकाशाधिकरणम् ॥**

ಹೀಗೆ ಪ್ರಾಪ್ತವಾದರೆ; ಇಲ್ಲಿ ಆಕಾಶಶಬ್ದದಿಂದ ವಿಷ್ಣುವೇ ಹೇಳಲ್ಪಡುತ್ತಾನೆ. 'ಸ ಏಷೋಽನಂತಃ' ಎಂಬಿತ್ಯಾದಿ ವಿಷ್ಣುವಿನ ಲಿಂಗಗಳಿರುವುದರಿಂದ. ಅಪರಿಮಿತಗುಣವಿರುವಿಕೆಯೇ ಅನಂತತ್ವವು. ಅದಾದರೋ 'ವಿಷ್ಣೋರ್ನುಕಮ್' ಇತ್ಯಾದಿ ಶ್ರುತಿಗಳಲ್ಲಿ ಕೇಳಲ್ಪಡುತ್ತಿದೆ. ಭಾಗವತದಲ್ಲೂ ಕೂಡ

'ವಿಷ್ಣೋರ್ನು ವೀರ್ಯಗಣನಾಂ ಕತಮೋಽರ್ಹತೀಹ ।
ಯಃ ಪಾರ್ಥಿವಾನ್ಯಪಿ ಕವಿರ್ವಿಮಮೇ ರಜಾಂಸಿ'

ಎಂದು ಇದನ್ನೇ ಹೇಳಿದ್ದಾರೆ. ಆದುದರಿಂದ ಅನಂತಶಬ್ದವು ವಿಷ್ಣುವಿನಲ್ಲೇ ರೂಢವಾಗಿದೆ. ಸರ್ವಭೂತಗಳ ಉತ್ಪತ್ತಿಗೆ ಕಾರಣನಾದವನು ಎಂದು ಶ್ರುತವಾದ್ದರಿಂದ ಆಕಾಶಶಬ್ದದ ಅರ್ಥವು ಪರಮಾತ್ಮನೆಂಬುದಾಗಿ ತಿಳಿಯುತ್ತದೆ. (ವಿಷ್ಣುವಿನಲ್ಲಿನ) ಸರ್ವಭೂತೋತ್ಪಾದಕತ್ವವು ಉಪನಿಷತ್ತು, ಸೂತ್ರಗಳಿಂದ ಸಿದ್ಧವಾಗಿದೆ.

॥ ಇಲ್ಲಿಗೆ ಸತ್ತರ್ಕದೀಪಾವಳಿ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಮುಗಿಯಿತು ॥

॥ ಶ್ರೀಮಧ್ವೇಶಾರ್ಪಣಮಸ್ತು ॥

# ೦೦೮-ಆಕಾಶಾಧಿಕರಣ

## ಭಾಗ -೨

ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ,
ಭಾಟ್ಟಸಂಗ್ರಹ, ಶಂಕರಭಾಷ್ಯ, ಭಾಮತೀ,
ಶ್ರೀಭಾಷ್ಯ, ಶ್ರುತಪ್ರಕಾಶ ಇವುಗಳ ಆಯ್ದ ಭಾಗಗಳು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

॥ ಶ್ರೀಮಧ್ವರಾಜೋ ವಿಜಯತೇತರಾಮ್ ॥

॥ ಶ್ರೀಗುರುಭ್ಯೋ ನಮಃ ॥

# ಆಕಾಶಾಧಿಕರಣ ಸಾರ

ಈ ಅಧಿಕರಣದಲ್ಲಿ ಭೂತಗಳಲ್ಲಿ ಪ್ರಸಿದ್ಧಗಳಾದ 'ಆಕಾಶ' ಮುಂತಾದ ನಾಮಗಳನ್ನು ಸಮನ್ವಯ ಮಾಡುತ್ತಾರೆ. ಪಂಚಭೂತಗಳಲ್ಲಿ ಮೊದಲನೆಯದಾದ್ದರಿಂದ ಆಕಾಶವು ಮುಖ್ಯವಾಗಿದೆ. ಆದ್ದರಿಂದ ಅದರ ಸಮನ್ವಯವನ್ನು ಸೂತ್ರದಲ್ಲಿ ಹೇಳಿ ಉಳಿದವುಗಳನ್ನು ಉಪಲಕ್ಷಣಯಾ ಸಮನ್ವಯ ಮಾಡುತ್ತಾರೆ. ವಸ್ತುತಃ ಈ ಅಧಿಕರಣದ ನ್ಯಾಯಕ್ಕೆ ವಿಷಯವಾದ ಭೂತಗಳಿಗಿಂತ ಭಿನ್ನವಾದ ಶಬ್ದಗಳನ್ನು ಸಮನ್ವಯ ಮಾಡುತ್ತಾರೆ ಎನ್ನಬಹುದು. ಆದರೆ ಆಕಾಶಾದಿಗಳು ಹೇಗೆ ಸ್ವಭಾವಭೂತವಾದ ಪ್ರವೃತ್ತಿನಿಮಿತ್ತವುಳ್ಳದ್ದೋ ಹಾಗೆ ಉಳಿದ ಶಬ್ದಗಳು ಆಗಿಲ್ಲ. ಹಾಗಾಗಿ ಅಧಿಭೂತಗತಶಬ್ದಗಳನ್ನು ಸಮನ್ವಯ ಮಾಡುತ್ತಾರೆ ಎಂದು ಹೇಳಿದ್ದಾರೆ. ಹಿಂದಿನ ಅಧಿಕರಣದಲ್ಲಿ 'ಅಂತಸ್ಥತ್ವ' ಲಿಂಗವನ್ನು ಸಮನ್ವಯ ಮಾಡಿದಂತೆ ಈ ಅಧಿಕರಣದಲ್ಲಿಯೂ 'ಅನಂತತ್ವ' ಲಿಂಗವನ್ನು ಸಮನ್ವಯ ಮಾಡಬಹುದಿತ್ತಲ್ಲವೆ? ಎಂದರೆ ಹಿಂದಿನ ಅಧಿಕರಣದಲ್ಲಿ ಒಂದು ಲಿಂಗವನ್ನು ಸಮನ್ವಯ ಮಾಡಿದ್ದರಿಂದ ಬಹಳ ನಾಮಗಳ ಸಮನ್ವಯ ಮಾಡಲಾಗಿತ್ತು. ಈ ಅಧಿಕರಣದಲ್ಲಿ 'ಆಕಾಶ' ಎಂಬ ಒಂದು ನಾಮಸಮನ್ವಯವನ್ನು ಮಾಡುವುದರಿಂದ ಬಹಳ ಲಿಂಗಗಳ ಸಮನ್ವಯ ಸಿದ್ಧಿಸುತ್ತದೆ. ಹಾಗಾಗಿ ಇಲ್ಲಿ ನಾಮವನ್ನೇ ಸಮನ್ವಯ ಮಾಡಿದ್ದಾರೆ.

ಅಂತಸ್ಥತ್ವಾಧಿಕರಣದ ನ್ಯಾಯದ ಅತಿದೇಶ ಆಕಾಶಾಧಿಕರಣದಲ್ಲಿ ಇರುವಂತೆ ಮುಂದಿನ ಪ್ರಾಣಾಧಿಕರಣ ಜ್ಯೋತಿರಧಿಕರಣಗಳಲ್ಲಿಯೂ ಇರುವುದರಿಂದ ಮೊದಲು ಆಕಾಶಾಧಿಕರಣ ಅನಂತರ ಪ್ರಾಣಾಧಿಕರಣ, ಅನಂತರ ಜ್ಯೋತಿರಧಿಕರಣ ಹೀಗೆ ಕ್ರಮವಾಗಿ ನಿರೂಪಣೆ ಮಾಡಲು ಏನು ಕಾರಣ? ಎಂದು ಪ್ರಶ್ನೆ ಬರಬಹುದು. ಅದಕ್ಕೆ ಎರಡು ರೀತಿಯ ಉತ್ತರವಿದೆ. ಮೊದಲನೆಯದಾಗಿ ಅಂತಸ್ಥತ್ವಾಧಿಕರಣದ ನ್ಯಾಯದ ಮೇಲೆ ಅಭ್ಯಧಿಕಾ-ಶಂಕಾವನ್ನು ಆಕಾಶಾಧಿಕರಣದಲ್ಲಿ ಮಾಡಿಕೊಂಡು ಉತ್ತರಿಸಿದ ಮೇಲೆ ಪುನಃ ಅದರ ಮೇಲೆ ಹೆಚ್ಚಿನ ಶಂಕೆಯನ್ನು ಪ್ರಾಣಾಧಿಕರಣದಲ್ಲಿ ಮಾಡಿದ್ದಾರೆ. ಅಲ್ಲಿ ಸಮಾಧಾನವನ್ನು ಹೇಳಿದಮೇಲೆ ಪುನಃ ಅಭ್ಯಧಿಕಾಶಂಕೆಯನ್ನು ಮಾಡಲಾಗಿದೆ. ಈ ಕ್ರಮದಿಂದಾಗಿ ಅವುಗಳಲ್ಲಿ ಕ್ರಮವು ಹೇಳಲ್ಪಟ್ಟಿದೆ. ಎರಡನೆಯದಾಗಿ ಶ್ರುತಿಯಲ್ಲಿ 'ಆಕಾಶದಿಂದ ವಾಯು ವಾಯುವಿನಿಂದ ಅಗ್ನಿ' ಹೀಗೆ ಕ್ರಮವಾಗಿ ಒಂದೊಂದಕ್ಕೆ ಕಾರಣತ್ವವನ್ನು ಹೇಳಿದ್ದರಿಂದ ಅದನ್ನಿಟ್ಟುಕೊಂಡು ಇಲ್ಲಿ ಕ್ರಮವು ಹೇಳಲ್ಪಟ್ಟಿದೆ.

ಭಾಷ್ಯದಲ್ಲಿ ಈ ಅಧಿಕರಣಫಲದ ಬಗ್ಗೆ ಹೇಳುವಾಗ ಛಾಂದೋಗ್ಯೋಪನಿಷತ್ತಿನಲ್ಲಿ ಬಂದಿರುವ 'ಆಕಾಶ' ಶಬ್ದವು ವಿಷ್ಣುವಾಚಕವಲ್ಲದಿದ್ದರೆ, ಆನಂದಮಯನನ್ನು ಕುರಿತು ಹೇಳಿದ 'ಆಕಾಶ' ಶಬ್ದವೂ ಕೂಡ ವಿಷ್ಣುವಾಚಕವಾಗುವುದಿಲ್ಲ. ಹಾಗಾಗಿ ಆನಂದಮಯನು ವಿಷ್ಣುವಾಗುವುದಿಲ್ಲ ಎಂದು ಪೂರ್ವಪಕ್ಷ ಮಾಡಿ-ಕೊಂಡು ಸಮಾಧಾನವನ್ನು ಸಿದ್ಧಾಂತದಲ್ಲಿ ಹೇಳಿದ್ದರಿಂದ ಈ ಅಧಿಕರಣ ಸಾರ್ಥಕ ಎಂದಿದ್ದಾರೆ. ಆದರೆ ಅದು ಸರಿಯಲ್ಲ. ಏಕೆಂದರೆ ಛಾಂದೋಗ್ಯದಲ್ಲಿರುವ ಆಕಾಶಶಬ್ದವು ವಿಷ್ಣುವಾಚಕವಾಗಿದ್ದರೂ 'ಆತ್ಮನಃ ಆಕಾಶಃ

ಸಂಭೂತಃ' ಎಂಬಲ್ಲಿ ಆಕಾಶ ಶಬ್ದವನ್ನು ವಿಷ್ಣುಪರ ಎಂದು ಹೇಗೆ ಒಪ್ಪುವುದಿಲ್ಲವೋ ಹಾಗೆಯೇ ಆನಂದಮಯನ ಕುರಿತು ಹೇಳಿದ ವಾಕ್ಯದಲ್ಲಿಯೂ ಹೇಳಲು ಬರುವುದಿಲ್ಲ. ಆದ್ದರಿಂದ ಆನಂದಮಯಾಧಿಕರಣದಿಂದ ಸಂಗತಿಯನ್ನು ಹೇಳಿದ್ದು ಹೇಗೆ? ಎಂದರೆ ಛಾಂದೋಗ್ಯದಲ್ಲಿರುವ ಆಕಾಶ ಶಬ್ದವು ಮತ್ತು ಆನಂದಮಯನಲ್ಲಿರುವ ಆಕಾಶಶಬ್ದವು ವಿಷ್ಣುವಾಚಕ ಎನ್ನಲು ಅಲ್ಲಿ ಬ್ರಹ್ಮನ ಲಿಂಗವಿರುವುದು ಕಾರಣ. 'ಆತ್ಮನಃ ಆಕಾಶಸ್ಸಂಭೂತಃ' ಎಂಬಲ್ಲಿ ಭೂತಾಕಾಶದ ಲಿಂಗವಿದೆಯೇ ಹೊರತು ಬ್ರಹ್ಮನ ಲಿಂಗವಿಲ್ಲ. ಹಾಗಾಗಿ ಅಲ್ಲಿ ಆಕಾಶಶಬ್ದವು ಭೂತಪರ. ಆದ್ದರಿಂದ ಆನಂದಮಯಾಧಿಕರಣದಿಂದ ಸಂಗತಿ ಹೇಳಿದ್ದು ಸರಿಯಾಗಿದೆ.

ಆಕಾಶಾಧಿಕರಣಕ್ಕೆ ಹೀಗೆ ಆನಂದಮಯಾಧಿಕರಣದಿಂದ ಸಂಗತಿಯನ್ನು ಹೇಳುವುದಾದರೆ ಈ ಅಧಿಕರಣವೇ ವ್ಯರ್ಥ. ಹೇಗೆಂದರೆ ಇಲ್ಲಿ ಆಕಾಶಶಬ್ದವು ವಿಷ್ಣು ವಾಚಕ ಎಂದು ಸಾಧಿಸುತ್ತಾರೆ. ಆದರೆ ಅದನ್ನು ಹೇಳಲು ಪ್ರತ್ಯೇಕ ಅಧಿಕರಣದ ಅವಶ್ಯಕತೆಯಿಲ್ಲ. ಆನಂದಮಯ ಎಂಬಲ್ಲಿ ಮಯಟ್‌ಪ್ರತ್ಯಯವು ವಿಕಾರಾರ್ಥಕ ಎಂದು ಆಕ್ಷೇಪ ಮಾಡಿ ಸಮಾಧಾನ ಮಾಡುವ ಸೂತ್ರವನ್ನು ಆನಂದಮಯಾಧಿಕರಣದಲ್ಲಿ ಸೇರಿಸಿದಂತೆ ಆನಂದಮಯಪ್ರಕರಣದಲ್ಲಿ ಆಕಾಶಶಬ್ದವಿರುವುದರಿಂದ ವಿಷ್ಣುವಿನಲ್ಲಿ ಎಂದು ಆಕ್ಷೇಪ ಮಾಡಿ ಸಮಾಧಾನ ಪಡಿಸುವ ಸೂತ್ರವನ್ನು ಅಲ್ಲಿಯೇ ಸೇರಿಸಬಹುದಾದ್ದರಿಂದ ಪ್ರತ್ಯೇಕ ಅಧಿಕರಣದ ಅವಶ್ಯಕತೆಯಿಲ್ಲ.

ಹೀಗೆ ಹೇಳುವುದಾದರೆ ಆನಂದಮಯನಲ್ಲಿ ಶ್ರುತವಾದ ಅಂತಸ್ಥತ್ವವನ್ನಿಟ್ಟುಕೊಂಡು ಅಂತಸ್ಥತ್ವಾಧಿಕರಣವನ್ನು ಪ್ರಾರಂಭ ಮಾಡಿದ್ದಾರೆ. ಅಲ್ಲಿಯೂ ಹೀಗೆಯೇ ಹೇಳಿ ಆನಂದಮಯಾಧಿಕರಣದಲ್ಲಿಯೇ ಆ ಸೂತ್ರವನ್ನು ಸೇರಿಸಬಹುದು ಎಂದು ಆಕ್ಷೇಪ ಮಾಡಬಹುದು. ಅಲ್ಲಿ ಆಕ್ಷೇಪಿಸದೆ ಇಲ್ಲಿ ಏಕೆ ಹೇಳುತ್ತೀರಿ? ಎಂದರೆ ಅಂತಸ್ಥತ್ವವು ಆನಂದಮಯನಲ್ಲಿ ಶ್ರುತವಾದರೂ, ಆಕಾಶಶಬ್ದವು ಹೇಗೆ ವಿಷ್ಣುವನ್ನು ಬಿಟ್ಟು ಬೇರೆಯವರಲ್ಲಿ (ಭೂತಾಕಾಶ) ಪ್ರಸಿದ್ಧವಾಗಿದೆಯೋ ಹಾಗೆ ಅಂತಸ್ಥತ್ವವೂ ಶ್ರುತವಾಗಿಲ್ಲ.

ಮತ್ತು ಅನ್ಯತ್ರಪ್ರಸಿದ್ಧವಾದ ಇಂದ್ರಾದಿ ಶ್ರುತಿಗಳ ಸಹಕಾರವೂ ಅದಕ್ಕಿಲ್ಲ. ಹಾಗಾಗಿ ಅದೇ ವಾಕ್ಯದಲ್ಲಿ ಈ ರೀತಿ ಪೂರ್ವಪಕ್ಷ ಮಾಡಲು ಅವಕಾಶವಿಲ್ಲವಾದ್ದರಿಂದ ಬೇರೆ ವಾಕ್ಯವನ್ನು ಇಟ್ಟುಕೊಂಡು ಪ್ರತ್ಯೇಕ ಅಧಿಕರಣರಚನೆ ಮಾಡುವುದು ಅನಿವಾರ್ಯ. ಆದರೆ ಆಕಾಶಶಬ್ದವಾದರೂ ಆನಂದಮಯನಲ್ಲಿ ಶ್ರುತವಾಗಿದೆ. ಮತ್ತು ಅನ್ಯತ್ರ ಭೂತಾಕಾಶದಲ್ಲಿ ಪ್ರಸಿದ್ಧವಾಗಿದೆ.

ಆದ್ದರಿಂದ ಅದೇ ವಾಕ್ಯದಲ್ಲಿ ಪೂರ್ವಪಕ್ಷ ಮಾಡಲು ಬರುವುದರಿಂದ ಪ್ರತ್ಯೇಕಾಧಿಕರಣದ ಅವಶ್ಯಕತೆಯಿಲ್ಲ ಎಂದು ಹೇಳಿದ್ದು ಎನ್ನಬಾರದು. ಆಕಾಶಶಬ್ದವನ್ನು ಸಮನ್ವಯ ಮಾಡಲು ಪ್ರತ್ಯೇಕವಾಗಿ ಅಧಿಕರಣರಚನೆ ಮಾಡುವುದಕ್ಕೆ ಅನೇಕ ಕಾರಣಗಳಿವೆ.

೧) ಆನಂದಮಯ ಎಂಬಲ್ಲಿ ಮಯಟ್ ಶಬ್ದವು ಹೇಗೆ ಆನಂದಮಯಶಬ್ದದ ಒಂದು ಭಾಗವಾಗಿದೆಯೋ ಹಾಗೆಯೇ ಆಕಾಶಶಬ್ದವು ಆನಂದಮಯಶಬ್ದದ ಒಂದು ಭಾಗವಾಗಿ ಆನಂದಮಯ ಶಬ್ದದಲ್ಲಿ ಸೇರಿಲ್ಲವಾದ್ದರಿಂದ ಅದೇ ನ್ಯಾಯದಿಂದ ಸಮನ್ವಯ ಮಾಡಲು ಬರುವುದಿಲ್ಲ. ಆದ್ದರಿಂದ ಮತ್ತೊಂದು ಯುಕ್ತಿಯನ್ನು ಹೇಳಬೇಕಾಗುತ್ತದಾದ್ದರಿಂದ ಬೇರೆ ಅಧಿಕರಣವನ್ನು ರಚಿಸಲಾಗಿದೆ.

೨) ಬೇರೆ ಅಧಿಕರಣದಿಂದ ಸಮನ್ವಯ ಮಾಡಲು ಹೊರಟಾಗ "ಆಕಾಶ ಇತಿ ಹೋವಾಚ" ಎನ್ನುವ ಮತ್ತೊಂದು ವಾಕ್ಯವನ್ನು ವಿಷಯವಾಕ್ಯವೆಂದಿಟ್ಟುಕೊಂಡಾಗ. 'ಯದೇಷ ಆಕಾಶ' ಎಂದು ಆನಂದಮಯನಲ್ಲಿ

ಶ್ರುತವಾದ ವಾಕ್ಯದಲ್ಲಿರದ ಅನೇಕ ಗುಣಗಳು ಮತ್ತೊಂದು ವಾಕ್ಯದಲ್ಲಿರುವುದರಿಂದ ಅವುಗಳೂ ಕೂಡ ಈ ಆಕಾಶನಲ್ಲಿ ಹೇಳಿದಂತಾಗುತ್ತದೆ.

೩) ಮತ್ತು 'ಆಕಾಶ ಇತಿ ಹೋವಾಚ' ಎಂಬ ಬ್ರಹ್ಮ ಪ್ರಕರಣವೆಂದು ನಿರ್ಧರಿಸಲ್ಪಟ್ಟ ವಾಕ್ಯದಲ್ಲಿರುವ ಯುಕ್ತಿಗಳು 'ಯದೇಷ ಆಕಾಶ' ಎನ್ನುವ ವಾಕ್ಯದಲ್ಲಿ ಇಲ್ಲವಾದ್ದರಿಂದ ಅದಕ್ಕೋಸ್ಕರ ಆನಂದಮಯ ಪ್ರಕರಣದಲ್ಲಿರುವ ವಿಷಯ ವಾಕ್ಯವನ್ನು ಬಿಟ್ಟು ಮತ್ತೊಂದನ್ನು ಹೇಳಬೇಕಾಗುತ್ತದೆ.

ವಸ್ತುತಃ ಇಲ್ಲಿ ಆನಂದಮಯಾಧಿಕರಣದಿಂದ ಸಂಗತಿ ತೋರಿಸಿದಂತೆ. ''ಆಕಾಶಾದೇವ ಸಮುತ್ಪದ್ಯಂತೇ'' ಎಂದಿರುವುದರಿಂದ ಜನ್ಮಾಧಿಕರಣದಿಂದಲೂ ಸಂಗತಿಯನ್ನೂ ಹೇಳಬಹುದು. ಆದರೆ ಇಲ್ಲಿ ಶ್ರುತವಾದ ಕಾರಣತ್ವವನ್ನು ನಿಮಿತ್ತಕಾರಣ ಎನ್ನದೆ ಉಪಾದಾನಕಾರಣ ಎಂದು ಕೂಡಿಸಬಹುದಾದ್ದರಿಂದ ಆನಂದಮಯಾಧಿಕರಣದಿಂದಲೇ ಸಂಗತಿಯನ್ನು ಹೇಳಿದ್ದಾರೆ. ಆನಂದಮಯಾಧಿಕರಣದಿಂದ ಸಂಗತಿಯನ್ನು ಹೇಳದಿದ್ದರೆ ಅದರಿಂದ ಸಂಗತಿ ಇರುವ ಅಂತಸ್ಥತ್ವಾಧಿಕರಣದ ನಂತರ ಈ ಸೂತ್ರವಿರುವುದು ಸಂಗತವಾಗುವುದಿಲ್ಲವಾದ್ದರಿಂದ ಆನಂದಮಯಾಧಿಕರಣದಿಂದ ಸಂಗತಿ ಹೇಳಿದ್ದಾರೆ.

ಆನಂದಮಯಾಧಿಕರಣದಿಂದ ಸಂಗತಿಯನ್ನು ತೋರಿಸಿದ್ದಕ್ಕೆ ಕೆಲವರು ಹೀಗೆ ಅಭಿಪ್ರಾಯಪಡುತ್ತಾರೆ. ಪೂರ್ವಪಕ್ಷಿಗಳು 'ಆಕಾಶ' ಎಂದರೆ ಅಚೇತನವಾದ ವಸ್ತುವೆಂದು ಅಂಗೀಕರಿಸಿರುವುದರಿಂದ ಜನ್ಮಾದಿಸೂತ್ರದಲ್ಲಿ ಹೇಳಿರುವ ಚೇತನಕರ್ತೃತ್ವದಿಂದ ಸಂಗತಿಯನ್ನು ಹೇಳಲು ಬರುವುದಿಲ್ಲವಾದ್ದರಿಂದ ಹೀಗೆ ಹೇಳಿದ್ದು ಎನ್ನುತ್ತಾರೆ. ಅದು ಸರಿಯಲ್ಲ. ಆನಂದಮಯಶಬ್ದವಾಚ್ಯವಾದದ್ದು ಅಚೇತನವಾದರೂ ಅಭಿಮಾನಿದ್ವಾರಾ ಕರ್ತೃವಾಗಬಹುದು. ಆದ್ದರಿಂದ ಆಕಾಶವೂ ಕರ್ತೃವಾಗಬಹುದಾದ್ದರಿಂದ ಈ ರೀತಿ ಸಮರ್ಥನೆ ಸರಿಯಲ್ಲ.

ಮತ್ತೆ ಕೆಲವರು. ಹತ್ತಿರವಿರುವ ಆನಂದಮಯಾಧಿಕರಣದಿಂದ ಸಂಗತಿಯನ್ನು ತೋರಿಸಲು ಬರುವಾಗ ದೂರದಲ್ಲಿರುವ ಜನ್ಮಾಧಿಕರಣದಿಂದ ಸಂಗತಿಯನ್ನು ತೋರಿಸುವುದು ಸರಿಯಲ್ಲವೆನ್ನುತ್ತಾರೆ. ಆದರೆ ಇದೂ ಸರಿಯಲ್ಲ. ಟೀಕೆಯಲ್ಲಿ ಆನಂದಮಯಾಧಿಕರಣಕ್ಕೆ ಸಂಗತಿಯನ್ನು ಹೇಳುವಾಗ ದೂರಸ್ಥವಾದ ಜಿಜ್ಞಾಸಾಧಿ ಕರಣದಿಂದ ಸಂಗತಿಯನ್ನು ತೋರಿಸಿದ್ದಾರೆ. ಹಾಗಾಗಿ ಸಂಗತಿಯಿರುವುದು ಮುಖ್ಯವೇ ಹೊರತು ಸಮೀಪದ ಸಂಗತಿಯೇ ದೂರದ ಸಂಗತಿ ಎನ್ನುವುದು ಮುಖ್ಯವಲ್ಲ.

ಈ ಅಧಿಕರಣದ ಚಿಂತಾಕ್ರಮ ಹೀಗಿದೆ -

ಇಲ್ಲಿ ಆಕಾಶವೆಂದರೆ ಭೂತಾಕಾಶವನ್ನು ಇಟ್ಟುಕೊಳ್ಳಬೇಕೋ ಅಥವಾ ಬ್ರಹ್ಮನನ್ನೋ? ಅದಕ್ಕೋಸ್ಕರ ಶ್ರುತಿಪ್ರಸಿದ್ಧಿಯನ್ನಿಟ್ಟುಕೊಂಡು 'ಪರೋವರೀಯಸ್ತ್ವ' ಲಿಂಗವು ಬಾಧ್ಯವೋ? ಅಥವಾ ಪರೋವರಿಯಸ್ತ್ವಲಿಂಗದಿಂದ ಶ್ರುತಿಯೇ ಬಾಧ್ಯವೋ? ಅದಕ್ಕೋಸ್ಕರ ಪ್ರಸಿದ್ಧಿಬಾಧ ಬಂದಾಗ ಶ್ರುತಿಗೆ ಮುಖ್ಯಾರ್ಥತ್ವ ಹಾನಿಯಾಗುತ್ತದೋ ? ಅಥವಾ ಇಲ್ಲವೋ? ಅದಕ್ಕೋಸ್ಕರ ಆಕಾಶ ಶಬ್ದದ ಪ್ರವೃತ್ತಿ ನಿಮಿತ್ತವು ಬ್ರಹ್ಮನಲ್ಲಿ ಇಲ್ಲವೋ? ಅಥವಾ ಇದೆಯೋ? ಅದಕ್ಕೋಸ್ಕರ ಜಡದ ಸ್ವಭಾವವು ಈಶ್ವರನ ಅಧೀನವಲ್ಲವೋ? ಅಥವಾ ಈಶ್ವರನ ಅಧೀನವೋ? ಎಂದು ಚಿಂತಾ.

ಒಂದು ವೇಳೆ ಜಡದ ಸ್ವಭಾವವು ಈಶ್ವರನ ಅಧೀನವೆಂದಾದರೆ 'ತದಧೀನತ್ವ' ನ್ಯಾಯದಂತೆ ಆಕಾಶಶಬ್ದವು ಬ್ರಹ್ಮನಲ್ಲಿ ಮುಖ್ಯವೆಂದಾಗುತ್ತದೆ. ಇಲ್ಲವೆಂದರೆ ಬ್ರಹ್ಮನಲ್ಲಿ ಆಕಾಶ ಶಬ್ದವು ಮುಖ್ಯವಲ್ಲವೆಂದಾಗುತ್ತದೆ.

ವಸ್ತುತಃ ಹಿಂದಿನ ಅಧಿಕರಣದಲ್ಲಿರುವ ನಿರವಕಾಶಲಿಂಗದಿಂದ ಲೋಕಪ್ರಸಿದ್ಧಿಗೆ ಬಾಧವನ್ನು ಹೇಳಬೇಕು ಎಂದು ನಿರ್ಣಯಿಸಿದೆ. ಅದನ್ನೇ ಇಲ್ಲಿ ಹೇಳಿದ್ದು. ಹಾಗಾಗಿ ಒಂದೊಂದು ವಿಷಯ ವಾಕ್ಯವನ್ನಿಟ್ಟುಕೊಂಡು ಅಧಿಕರಣ ಭೇದವನ್ನು ಹೇಳಿದರೆ ಆನಂತ್ಯದೋಷಬರುತ್ತದಲ್ಲವೆ? ಎಂದು ಪ್ರಶ್ನೆ ಬರಬಹುದು. ಆದರೆ ಕೇವಲ ವಿಷಯವಾಕ್ಯಭೇದವನ್ನಿಟ್ಟುಕೊಂಡು ಇಲ್ಲಿ ಅಧಿಕರಣರಚನೆ ಮಾಡಿದ್ದಲ್ಲ. ಕಿಂತು ಹಿಂದಿನ ಅಧಿಕರಣಕ್ಕಿಂತಲೂ ಅಧಿಕಾಶಂಕಾವಿರುವುದರಿಂದ. ಅದರ ನಿರಾಕರಣೆ ಮಾಡಲು ಈ ಅಧಿಕರಣವನ್ನು ರಚನೆ ಮಾಡಲಾಗಿದೆ. ಅಧಿಕಾಶಂಕೆಯನ್ನು ಅನುವ್ಯಾಖ್ಯಾನದಲ್ಲಿ ತೋರಿಸಿದ್ದಾನೆ.

ಅಭ್ಯಧಿಕಾಶಂಕೆಯನ್ನು ತೋರಿಸುವ ಅನುವ್ಯಾಖ್ಯಾನದ ಅಭಿಪ್ರಾಯವನ್ನು ವಿವರಿಸುತ್ತಾರೆ.

ಆಕಾಶ ಶಬ್ದದ ಪ್ರವೃತ್ತಿ ನಿಮಿತ್ತವಾದ ವಿವರತ್ವವನ್ನು ಭಗವದಧೀನ ಎನ್ನಲು ಅಚೇತನಗತತ್ವ, ಮತ್ತು ಸ್ವಭಾವತ್ವ ಈ ಎರಡೂ ಬಾಧಕವಾಗಿವೆ. ಹೇಗೆಂದರೆ ರಾಜಾಧೀನವಾದ್ದರಿಂದ ಭೃತ್ಯನ ಜಯವನ್ನು ರಾಜನಲ್ಲಿ ವ್ಯವಹರಿಸುವಂತೆ ಅಚೇತನದಲ್ಲಿರುವ 'ತದ್‌ಗತತ್ವ' ಎಂಬ ಪ್ರವೃತ್ತಿನಿಮಿತ್ತವನ್ನಿಟ್ಟುಕೊಂಡು ಚೇತನನ ಅಧೀನವಾಗಿದೆ ಎಂದ ಮಾತ್ರಕ್ಕೆ ಜಡವಾಚಕ ಶಬ್ದಪ್ರಯೋಗವು ಲೋಕದಲ್ಲಿ ಕಂಡಿಲ್ಲ. 'ಚೇತನಪ್ರಸಾದಲಬ್ಧತ್ವ' ರೂಪ ಚೇತನಾಧೀನತ್ವನ್ನಿಟ್ಟುಕೊಂಡು ಹೇಳಬೇಕು. ಆದರೆ ಅಚೇತನವಾದದ್ದರಲ್ಲಿ ಭಗವಂತನ ಪ್ರಸಾದವನ್ನು ಹೇಳಲು ಬರುವುದಿಲ್ಲ ಎಂದು ಶಂಕಾಭಿಪ್ರಾಯ.

ಹೀಗೆ, ಇಂದ್ರಾದಿಶಬ್ದಗಳ ಪ್ರವೃತ್ತಿ ನಿಮಿತ್ತಗಳು ಹೇಗೆ ಇಂದ್ರಾದಿಗಳ ಸ್ವಭಾವವೋ ಹಾಗೆ ವಿವರತ್ವವೂ ಕೂಡ ಆಕಾಶದ್ದೇ ಸ್ವಭಾವ. ಹಾಗಾಗಿ ಇದನ್ನು ಭಗವಂತನ ಅಧೀನವೆನ್ನುವುದಾದರೆ. ಅದರ ಸ್ವಭಾವವಾಗಲಿಕ್ಕೆ ಹೇಗೆ ಸಾಧ್ಯ? ಭೃತ್ಯನಲ್ಲಿರುವ ಭೃತ್ಯನ ಸ್ವಾಭಾವಿಕ ರೂಪಾದಿಗಳನ್ನಿಟ್ಟುಕೊಂಡು ರಾಜನು ರೂಪವಂತ ಎಂದು ಎಲ್ಲಿಯಾದರೂ ಬಳಸುವುದು ಕಂಡಿದೆಯೇ? ಎಂದು ಪ್ರಶ್ನೆಯ ಅಭಿಪ್ರಾಯ.

ಇಂದ್ರಾದಿದೇವತೆಗಳಲ್ಲಿರುವ ಇಂದ್ರಾದಿಪದ ಪ್ರವೃತ್ತಿನಿಮಿತ್ತವಾದ 'ಐಶ್ವರ್ಯ' ಮುಂತಾದವುಗಳು ಭಗವಂತನ ಪ್ರಸಾದದಿಂದ ಲಭ್ಯವಾದುವುಗಳಾದ್ದರಿಂದ ಹೇಗೆ ಭಗವದಧೀನಗಳೋ ಹಾಗೆ. ವಿವರತ್ವ ಮೊದಲಾದುವುಗಳೂ ಸಹ ಭಗವಂತನ ಪ್ರಸಾದದಿಂದ ಲಬ್ಧವಾದ್ದರಿಂದ ಭಗವಂತನ ಅಧೀನವೋ? ಅಥವಾ ಕುಂಬಾರನ ಅಧೀನವಾಗಿ ಚಕ್ರದಲ್ಲಿ ಆಗಂತುಕವಾಗಿ ಬರುವ ಭ್ರಮಣದಂತೆ ಆಗಂತುಕವಾಗಿ ಭಗವದಧೀನವೋ? ಎರಡೂ ಸರಿಯಲ್ಲ. ವಿವರತ್ವಾದಿಗಳೂ ಅಚೇತನನಲ್ಲಿರುವುದರಿಂದ ಅವನ ಪ್ರಸಾದಲಭ್ಯಗಳು ಎನ್ನಲು ಬರುವುದಿಲ್ಲ. ವಿವರತ್ವಾದಿಗಳು ಸ್ವಭಾವಗಳಾದ್ದರಿಂದ ಆಗಂತುಕಾಧೀನತ್ವವೆಂದು ಹೇಳಲು ಬರುವುದಿಲ್ಲ.

ಅಥವಾ "ಸ್ವಾತಂತ್ರ್ಯಂ ತದ್‌ಗತತ್ವಂಚ ಶಬ್ದವೃತ್ತೇರ್ಹಿಕಾರಣಮ್" ಎಂದು ಶಬ್ದ ಪ್ರಯೋಗಕ್ಕೆ 'ಸ್ವಾತಂತ್ರ್ಯ ಮತ್ತು ತದ್‌ಗತತ್ವ' ಎರಡೂ ಕಾರಣ ಎಂದು ಹೇಳಿದ್ದರಿಂದ ಆ ಎರಡನ್ನೂ ಇಲ್ಲಿಲ್ಲವೆಂದು ತೋರಿಸುತ್ತಾರೆ. ಇಂದ್ರಾದಿಪದಪ್ರವೃತ್ತಿನಿಮಿತ್ತವಾದ ಐಶ್ವರ್ಯಾದಿಗಳು ನಿರವಧಿಕವಾಗಿ ಬ್ರಹ್ಮನಲ್ಲಿರುವಂತೆ ವಿವರತ್ವಾದಿಗಳನ್ನು ಹೇಳಲು ಬರುವುದಿಲ್ಲ. ಅವುಗಳು ಅಚೇತನಧರ್ಮಗಳಾದ್ದರಿಂದ ಚೇತನನಲ್ಲಿ ಹೇಳಲು ಬರುವುದಿಲ್ಲ. ಹಾಗೆಯೇ ಇಂದ್ರಾದಿಗಳಲ್ಲಿರುವ ಐಶ್ವರ್ಯಾದಿಗಳು ಭಗವಂತನ ಅಧೀನವಾಗಿರುವಂತೆ ವಿವರತ್ವವು ಭಗವದಧೀನ ಎನ್ನಲೂ ಬರುವುದಿಲ್ಲ. ವಿವರತ್ವಾದಿಗಳು ಆಕಾಶಾದಿಗಳ ಸ್ವಭಾವವಾಗಿದೆ. ಹಾಗಾಗಿ ಭಗವಂತನ ಅಧೀನವೆನ್ನಲೂ ಬರುವುದಿಲ್ಲ. ಹೀಗಾಗಿ ಆಕಾಶಶಬ್ದವು ಬ್ರಹ್ಮನನ್ನು ಹೇಳಬೇಕಾದರೆ ಅದಕ್ಕೆ ಬೇಕಾದ ನಿಮಿತ್ತವಿಲ್ಲವಾದ್ದರಿಂದ ಆಕಾಶಶಬ್ದವಾಚ್ಯನು ವಿಷ್ಣುವಾಗಲಾರ. ಸುಧಾದಲ್ಲಿ ಇದೇ ಅಭಿಪ್ರಾಯವನ್ನಿಟ್ಟುಕೊಂಡು ಇನ್ನೂ ವಿಸ್ತಾರವಾಗಿ ಹೇಳಿದ್ದಾರೆ.

## ಆಕಾಶಾಧಿಕರಣ (೧।೧।೮)

ಸುಧಾಗ್ರಂಥದ ಅಂತಸ್ಥತ್ವಾಧಿಕರಣಪೂರ್ವಪಕ್ಷದಲ್ಲಿ ಅಚೇತನನ ಸ್ವಭಾವವನ್ನು ಭಗವದಧೀನ ಎಂದಿಟ್ಟು-ಕೊಂಡು ಪೂರ್ವಪಕ್ಷ ಮಾಡಿದ್ದು ಹೇಗೆ ಎಂದರೆ ಈ ಅಧಿಕರಣದ ಸಿದ್ಧಾಂತ ನ್ಯಾಯವನ್ನಿಟ್ಟುಕೊಂಡು ಹೇಳಿದ್ದಾರೆ. ಆದ್ದರಿಂದ ಅದು ಕೂಡುತ್ತದೆ.

''ಆಕಾಶಸ್ಯಾಚೇತನತ್ವೇನ'' ಎಂಬ ಟೀಕೆಯಲ್ಲಿ ಅನುವ್ಯಾಖ್ಯಾನ ಮತ್ತು ಸುಧಾಗ್ರಂಥದ ಅನುಸಾರವಾಗಿ 'ಆಕಾಶ' ಎಂದರೆ ''ಆಕಾಶಪದ ಪ್ರವೃತ್ತಿ ನಿಮಿತ್ತ'' ಎಂದಿಟ್ಟುಕೊಳ್ಳಬೇಕು. ಹೀಗೆ ಆಕಾಶ ಶಬ್ದವು ಬ್ರಹ್ಮನಲ್ಲಿ ಮುಖ್ಯವಾಗಿದೆ ಎನ್ನಲು ವಿರೋಧಿಯಾದ ಪ್ರಮೇಯಾಶ್ರಿತವಾದ ಶಂಕೆಯು ಇದಾಗಿದೆ.

ಪ್ರಮಾಣಾಶ್ರಿತ ಪೂರ್ವಪಕ್ಷವು ಮೂರು ರೀತಿಯಾಗಿದೆ -

೧) ಹಿಂದಿನ ಅಂತರಧಿಕರಣದಲ್ಲಿ ಸ್ವತಃ ಪ್ರಬಲವಾಗಿದ್ದರೂ ಶ್ರುತಿಯು ನಿರವಕಾಶಲಿಂಗದಿಂದ ಬಾಧಿತ-ವಾಗಿತ್ತು. ಆದರೆ ಈ ಅಧಿಕರಣದಲ್ಲಿ ಹಾಗಲ್ಲ; ಆಕಾಶ ಶ್ರುತಿಯು ಬಹಳ ಸಲ ಶ್ರುತವಾದ್ದರಿಂದ ಬಹುತ್ವವು ಇದೆ. ಹೀಗಾಗಿ ಸ್ವಭಾವತಃ ಪ್ರಾಬಲ್ಯ ಮತ್ತು ಬಹುತ್ವ ಪ್ರಯುಕ್ತ ಪ್ರಾಬಲ್ಯ ಎಂಬೆರಡು ರೀತಿಯ ಪ್ರಾಬಲ್ಯ-ವಿರುವುದರಿಂದ ಲಿಂಗವು ನಿರವಕಾಶವಾಗಿದ್ದರೂ ದುರ್ಬಲವೇ ಆಗಿದೆ. ಹಾಗಾಗಿ ನಿರವಕಾಶವಾದ ಲಿಂಗವನ್ನೂ ಆಕಾಶಶ್ರುತಿಯು ಬಾಧಿಸುತ್ತದೆ. ಆದ್ದರಿಂದ ನಿರವಕಾಶವಾದ ವಿಷ್ಣುವಿನ ಲಿಂಗವಿದ್ದರೂ ಪ್ರಬಲವಾದ ಆಕಾಶಶ್ರುತಿಯಿರುವುದರಿಂದ ಆಕಾಶಶಬ್ದವು ವಿಷ್ಣುವಾಚಕವಲ್ಲ.

೨) ವಿಷ್ಣುವಿತರರಲ್ಲಿ ಪ್ರಸಿದ್ಧಗಳಾದ ಇಂದ್ರಾದಿ ಶಬ್ದಗಳನ್ನು ವಿಷ್ಣುವಾಚಕ ಶಬ್ದಗಳ ಜೊತೆಗಿರುವುದರಿಂದ. ವಿಷ್ಣುವಾಚಕಗಳೇ ಎಂದು ಹಿಂದಿನ ಅಧಿಕರಣದಲ್ಲಿ ಹೇಳಿದ್ದರೂ ಈ ಅಧಿಕರಣದಲ್ಲಿರುವ ಆಕಾಶ ಶಬ್ದವು ವಿಷ್ಣುವಾಚಕ ಶಬ್ದಗಳ ಜೊತೆಗೆ ಎಲ್ಲೂ ಪಠಿತವಾಗಿಲ್ಲ. ಆದ್ದರಿಂದ ಆಕಾಶಶಬ್ದವು ವಿಷ್ಣುವನ್ನು ಹೇಳುತ್ತದೆನ್ನುವುದು ಸರಿಯಲ್ಲ.

೩) ಅಂತಸ್ಥತ್ವಾಧಿಕರಣದ ಪೂರ್ವಪಕ್ಷದಲ್ಲಿದ್ದ ಗೊಂದಲಗಳು ಈ ಅಧಿಕರಣದಲ್ಲಿ ಇಲ್ಲ. ಹಿಂದೆ ಅಂತಸ್ಥನು ಇಂದ್ರ, ಬೃಹಸ್ಪತಿ ಮೊದಲಾದವರ ಶ್ರುತಿಗಳಿದ್ದುದರಿಂದ ಇಂದ್ರನೋ ಬೃಹಸ್ಪತಿಯೋ ಎಂದು ನಿರ್ಣಯ ಮಾಡದೆ ಪೂರ್ವಪಕ್ಷ ಮಾಡಿದ್ದರಿಂದ ಏಕವಾಕ್ಯತಾ ಭಂಗವಿತ್ತು. ಹಾಗೆಯೇ ಇಂದ್ರಾದಿಗಳಿಗೆ ಬ್ರಹ್ಮನೊಂದಿಗೆ ಐಕ್ಯವನ್ನಿಟ್ಟುಕೊಳ್ಳೋಣವೆಂದರೆ ಭೇದವ್ಯಪದೇಶದ ಬಾಧಕವಿತ್ತು. ಆದರೆ ಆಕಾಶಾಧಿಕರಣ-ದಲ್ಲಿ ಈ ಯಾವ ಸಮಸ್ಯೆಗಳಿಲ್ಲ. ಮಾತ್ರವಲ್ಲ ಉಪಕ್ರಮದಲ್ಲಿ, ಸ್ವತಃ ಪ್ರಬಲವಾದ ಆಕಾಶಶ್ರುತಿಯಿದೆ. ಹೀಗಾಗಿ ಪ್ರಬಲವಾದ್ದರಿಂದ ಆಕಾಶಶಬ್ದಕ್ಕೆ ಭೂತಾಕಾಶವೆಂದೇ ಅರ್ಥ. ಪ್ರಬಲ ಶ್ರುತಿಯಿರುವುದರಿಂದ ಅನಂತತ್ವ ಮೊದಲಾದ ಲಿಂಗಗಳನ್ನು ಅದಕ್ಕನುಸಾರಿಯಾಗಿ ಅರ್ಥೈಸಬೇಕು.

ಈ ಅಧಿಕರಣದ ಪೂರ್ವಪಕ್ಷದಲ್ಲಿ ಆಕಾಶವೆಂದರೆ ಭೂತಾಕಾಶವೋ? ಅವ್ಯಾಕೃತಾಕಾಶವೋ? ಭೂತಾಕಾಶವೆಂದಿಟ್ಟುಕೊಳ್ಳೋಣವೆಂದರೆ ಅನುವ್ಯಾಖ್ಯಾನದ ವಿರೋಧ ಬರುತ್ತದೆ. ಅನುವ್ಯಾಖ್ಯಾನದಲ್ಲಿ ವಿವರತ್ವವು ಆಕಾಶದ ಸ್ವಭಾವವೆಂದಿದ್ದಾರೆ. ಅಂದರೆ ಅವ್ಯಕೃತಾಕಾಶವೆಂದು ಅನುವ್ಯಾಖ್ಯಾನದ ಅಭಿಪ್ರಾಯ. ಅವ್ಯಾಕೃತಾಕಾಶವೆಂದಿಟ್ಟುಕೊಳ್ಳೋಣವೆಂದರೆ ಭಾಷ್ಯದ ವಿರೋಧ ಬರುತ್ತದೆ. ಭೂತಪ್ರಕರಣವಾದ್ದರಿಂದ ಅಲ್ಲಿ ಭೂತಾಕಾಶ ಎಂದು ಪೂರ್ವಪಕ್ಷ ಮಾಡಿದ್ದಾರೆ. ಆದ್ದರಿಂದ ಎರಡನ್ನೂ ಕೂಡಿಸುವುದು ಹೇಗೆ? ಎಂಬ ಪ್ರಶ್ನೆ ಬಂದರೆ. ಭೂತಾಕಾಶವನ್ನೇ ಭಾಷ್ಯಾನುಸಾರಿಯಾಗಿ ಇಟ್ಟುಕೊಳ್ಳಬೇಕು. ಅನುವ್ಯಾಖ್ಯಾನದಲ್ಲಿ ವಿವರತ್ವವನ್ನು

ಹೇಳಿದ್ದರೂ ಅದು ಪ್ರಾಣಿಗಳ ಸಂಚಾರಕ್ಕೆ ಅನುಕೂಲವಾದ ವಿವರತ್ವ ಎಂದಿಷ್ಟೇ ಅರ್ಥೈಸಬೇಕು. ಅದು ಭೂತಾಕಾಶದಲ್ಲಿದೆ. ಆದ್ದರಿಂದ ವಿರೋಧವಿಲ್ಲ.

ಹಾಗಿದ್ದರೆ ಭಾಷ್ಯದಲ್ಲಿ ಹೇಳಿದ್ದನ್ನೇ ಅನುವ್ಯಾಖ್ಯಾನದಲ್ಲಿ ಹೇಳಿದ್ದರಿಂದ ಪುನರುಕ್ತಿಬರುತ್ತದವಲ್ಲವೆ? ಎಂದರೆ ಭಾಷ್ಯದಲ್ಲಿ ಅಭ್ಯಧಿಕಾಶಂಕಾವಿಲ್ಲದೇ ಅನಂತತ್ವ ಲಿಂಗವನ್ನು ವಿಷ್ಣುವಿನ ಲಿಂಗವೆಂದು ತಿಳಿಯದ ಪ್ರಯುಕ್ತ ಆಕಾಶ ಶಬ್ದದಿಂದ ಭೂತಾಕಾಶವನ್ನಿಟ್ಟುಕೊಂಡು ಪೂರ್ವಪಕ್ಷಮಾಡಿದ್ದಾರೆ. ಅನುವ್ಯಾಖ್ಯಾನದಲ್ಲಿ ಅನಂತತ್ವವು ವಿಷ್ಣುವಿನ ಲಿಂಗವೆಂದು ತಿಳಿದರೂ ಅಭ್ಯಧಿಕಾಶಂಕಾ ಪ್ರಯುಕ್ತವಾದ ಪೂರ್ವಪಕ್ಷ ಮಾಡಿದ್ದಾರೆ ಎಂದಿಟ್ಟುಕೊಂಡಾಗ ಭಾಷ್ಯ ಮತ್ತು ಅನುವ್ಯಾಖ್ಯಾನದಲ್ಲಿ ಎರಡು ರೀತಿಯ ಪೂರ್ವಪಕ್ಷ ಮಾಡಿದ್ದು ಪುನರುಕ್ತವಲ್ಲ.

ಈ ಆಕಾಶಾಧಿಕರಣದಲ್ಲಿ ಆಕಾಶಶಬ್ದವನ್ನು ವಿಷ್ಣುವಿನಲ್ಲಿ ಸಮರ್ಥನೆ ಮಾಡಲಾಗಿದೆ. ಮುಂದೆ ''ಆಕಾಶೋ ಅರ್ಥಾಂತರವ್ಯಪದೇಶಾತ್'' ಎಂಬಲ್ಲಿಯೂ, ಅದನ್ನೇ ಹೇಳುತ್ತಾರೆ. ವಿಯದಧಿಕರಣವೂ ಭೂತಾ-ಕಾಶವಲ್ಲ ಕಿಂತು ವಿಷ್ಣುವೇ ಎಂದು ಹೇಳುತ್ತದೆ. ಹೀಗೆ ಒಂದೇ ವಿಷಯವನ್ನು ಕುರಿತು ಮೂರು ಅಧಿ-ಕರಣಗಳಿದ್ದರೆ ಪುನರುಕ್ತವಲ್ಲವೆ ? ಎಂದರೆ. ಆಕಾಶವಲ್ಲ ಕಿಂತು ವಿಷ್ಣುವೇ ಎಂಬ ಸಮರ್ಥನೆ ಮೂರರಲ್ಲಿಯೂ ಸಮಾನವಾಗಿದ್ದರೂ ನ್ಯಾಯಭೇದವಿರುವುದರಿಂದ ಅಧಿಕರಣಭೇದವಿದೆ; ಹಾಗಾಗಿ ಪುನರುಕ್ತವಲ್ಲ. ಹೇಗೆಂದರೆ ಈ ಅಧಿಕರಣದಲ್ಲಿ ಆಕಾಶಶಬ್ದವು ಭಗವಂತನಲ್ಲಿ ಮುಖ್ಯ ಎಂದು ಹೇಳಲು ಆಕಾಶಶಬ್ದದ ಪ್ರವೃತ್ತಿನಿಮಿತ್ತ ಭಗವದಧೀನ ಎಂದು ಸಮರ್ಥನೆ ಮಾಡುತ್ತಾರೆ ಮುಂದಿನ ಆಕಾಶಾಧಿಕರಣದಲ್ಲಿ ಪ್ರವೃತ್ತಿನಿಮಿತ್ತ ಭಗವದಧೀನ ಮತ್ತು ಆಕಾಶಶಬ್ದವು ವಿಷ್ಣುವಾಚಕ ಎಂದು ಸಿದ್ಧವಾದರೂ ಶ್ರುತಿಯಲ್ಲಿರುವ 'ವೈ' ಶಬ್ದವನ್ನಿಟ್ಟುಕೊಂಡು ಪೂರ್ವಪಕ್ಷ ಮಾಡಿದಾಗ ಅದರ ಪರಿಹಾರವನ್ನು ಮಾಡಿದೆ. ವಿಯದಧಿಕರಣದಲ್ಲಿ ಜನ್ಮಾದಿಕಾರಣತ್ವವು ಆಕಾಶಕ್ಕಿಲ್ಲ ಕಿಂತು ವಿಷ್ಣುವಿಗೇ ಎಂದು ಸಮರ್ಥನೆ ಮಾಡಿದೆ. ಆದ್ದರಿಂದ ಪುನರುಕ್ತಿದೋಷಕ್ಕೆ ಅವಕಾಶವಿಲ್ಲ.

ಸಿದ್ಧಾಂತ ಹೀಗಿದೆ -

ಚೇತನರಲ್ಲಿರುವ ಪ್ರವೃತ್ತಿನಿಮಿತ್ತಗಳೇ ಭಗವಂತನ ಅಧೀನಗಳಾಗಿವೆಯೆಂದರೆ ಅಚೇತನಗಳಲ್ಲಿರುವ ಪ್ರವೃತ್ತಿ ನಿಮಿತ್ತಗಳು ಸರ್ವಥಾ ಭಗವದಧೀನಗಳೇ ಆಗುತ್ತವೆ. ಏಕೆಂದರೆ ಚೇತನಕ್ಕಿಂತ ಅಚೇತನಗಳು ಅತ್ಯಂತ ಪರಾಧೀನಗಳು ಎಂಬುದು ಎಲ್ಲರಿಗೂ ಸಿದ್ಧವಾದ ವಿಷಯ. ಹಾಗಾಗಿ ಅಚೇತನದಲ್ಲಿರುವ ಧರ್ಮಗಳು ಭಗವದಧೀನವಾಗಲಿಕ್ಕೆ ಹೇಗೆ ಸಾಧ್ಯ? ಎನ್ನುವುದು ಸರಿಯಲ್ಲ.

ಹಾಗೆಯೇ ಭೃತ್ಯನ ಜಯವನ್ನು ರಾಜನ ಜಯವೆಂದು ವ್ಯವಹರಿಸುವಂತೆ ಜಡವಸ್ತುಗಳಲ್ಲಿರುವ 'ಮೃತ್ವ' ಮುಂತಾದ ಧರ್ಮಗಳು ಅವುಗಳ ಅಭಿಮಾನಿಗಳ ಅಧೀನವಾದ್ದರಿಂದ ಅದನ್ನಿಟ್ಟುಕೊಂಡು 'ಮೃದಬ್ರವೀತ್' ಎಂದು ಪ್ರಯೋಗಿಸಲಾಗುವುದು. ಹೀಗೆ ಅಭಿಮಾನಿದೇವತೆಗಳಲ್ಲಿ 'ಮೃತ್ವ' ವ್ಯವಹಾರ ಕಂಡಿದೆಯಾದ್ದರಿಂದ ಚೇತನಗತವಾದ ಧರ್ಮವನ್ನು ಭಗವಂತನಲ್ಲಿ ಹೇಳಿದಂತೆ ಜಡಗತಧರ್ಮವನ್ನು ಹೇಳಲು ಬರುವುದಿಲ್ಲ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ.

ಆಕಾಶದ ಸ್ವಭಾವವು ವಿಷ್ಣುವಿನ ಅಧೀನವಾಗಲಿಕ್ಕೆ ಹೇಗೆ ಸಾಧ್ಯ? ಎಂದರೆ. ಲೋಕದಲ್ಲಿ ಕುಂಬಾರನು ಘಟವನ್ನು ತಯಾರಿಸುವಾಗ ಘಟದ ಸ್ವಭಾವವಾದ ಘಟತ್ವವೂ ಅವನ ಅಧೀನವೇ ಆಗಿರುತ್ತದೆ. ಏಕೆಂದರೆ ಅವನು ಶರಾವವನ್ನು ಮಾಡಲು ಪ್ರಯತ್ನ ಮಾಡಿದಾಗ ಘಟವು ಹುಟ್ಟುವುದಿಲ್ಲ. ಘಟವನ್ನು ಮಾಡಲು

ಯತ್ನಸಿದಾಗಷ್ಟೇ ಘಟವು ಹುಟುತ್ತದೆ. ಕೇವಲ ಮಣ್ಣಿನಿಂದ ಅವನು ಯಾವುದನ್ನಾದರೂ ಮಾಡಬಹುದು. ಹಾಗಾಗಿ ಘಟದ ಸ್ವಭಾವವಾದ ಘಟತ್ವ ಕುಂಬಾರನ ಅಧೀನವೇ ಆಗಿರುತ್ತದೆ. ಹೀಗಿರುವಾಗ ವಿಷ್ಣುವಿನಿಂದ ಹುಟ್ಟಿದ ಆಕಾಶದ ಸ್ವಭಾವವು ಭಗವದಧೀನ ಎಂದರೆ ಏನು ತೊಂದರೆ? ಅಲ್ಲದೆ ಅನೇಕ ಶ್ರುತಿಸ್ಮೃತಿಗಳೂ ಕೂಡ ಆಕಾಶದ ಸ್ವಭಾವವಾದ ವಿವರತ್ವವು ಭಗವಂತನ ಅಧೀನವೆಂದು ಸಾರುತ್ತಿವೆ. ಆದ್ದರಿಂದ ಆಕಾಶ-ಸ್ವಭಾವವೂ ಭಗವದಧೀನವಾಗಿದೆ. ಮತ್ತು ನಿರವಧಿಕವಾದ ವಿವರತ್ವವು ಭಗವಂತನಲ್ಲಿಯೇ ಇರುವುದರಿಂದ ಆಕಾಶ ಶಬ್ದದ ಮುಖ್ಯ ವಾಚ್ಯತ್ವ ವಿಷ್ಣುವಿಗೆ ಕೊಡುತ್ತದೆ.

ಪ್ರಮಾಣಾಶ್ರಿತವಾದ ಆಕಾಶಶಬ್ದವು ಭಗವಂತನಲ್ಲಿ ಮುಖ್ಯವಲ್ಲ ಎಂಬ ಶಂಕೆಯನ್ನು ನಿರಾಕರಿಸುತ್ತಾರೆ.

ಅನಂತತ್ವ ಮೊದಲಾದ ಲಿಂಗಗಳು ವಿಷ್ಣುವಿನಲ್ಲಿ ನಿರವಕಾಶಗಳು. ಏಕೆಂದರೆ ಅನಂತತ್ವ ಎಂದರೆ ಅಂತತ್ರಯವಿಲ್ಲದ್ದು ಎಂದರ್ಥ. ದೇಶತಃ ಕಾಲತಃ ಗುಣತಃ ಅಂತವಿಲ್ಲದವನು ವಿಷ್ಣುವೇ ಹೊರತು ಮೂರು ರೀತಿಯ ಅಂತವುಳ್ಳ ಭೂತಾಕಾಶವಲ್ಲ.

ಅವ್ಯಾಕೃತಾಕಾಶವನ್ನಿಟ್ಟುಕೊಂಡರೆ ಅದೂ ಕೂಡ ದೇಶತಃ ಕಾಲತಃ ಅಂತರಹಿತವಾದದ್ದು ಎಂದು ಕೋಶಗಳು ಹೇಳುತ್ತವೆಯಾದರೂ ಪೂರ್ವಪಕ್ಷಿಯು ಭೂತಕಾಶವನ್ನು ಆಕಾಶ ಶಬ್ದವಾಚ್ಯವೆಂದು ಹೇಳುತ್ತಾನೆ. ಅಲ್ಲಿ ಅದೂ ಕೂಡ ಇಲ್ಲ. ಹೀಗಾಗಿ ಭಾಷ್ಯದಲ್ಲಿ ಹೇಳಿದ ಶ್ರುತಿಯಿಂದ ಮತ್ತು ಲೋಕಪ್ರಸಿದ್ಧಿಯಿಂದ 'ಅನಂತ' ಶಬ್ದವು ವಿಷ್ಣುವಿನಲ್ಲೇ ಮುಖ್ಯವಾದ್ದರಿಂದ ಸಾವಕಾಶವಾದ ಆಕಾಶಶಬ್ದದಿಂದ ಬಾಧವನ್ನು ಹೇಳಲು ಬರುವುದಿಲ್ಲ.

ಬಲಾಬಲವನ್ನು ಪರೀಕ್ಷೆ ಮಾಡಿದಾಗ ಸ್ವಭಾವತಃ ಶ್ರುತಿ ಪ್ರಬಲವಾಗಿದ್ದರೂ ನಿರವಕಾಶತ್ವ ಮೊದಲಾದ ಪ್ರಾಬಲ್ಯ ಹೇತುಗಳಿಂದ ಕೂಡಿದ ಲಿಂಗವು ಅದಕ್ಕಿಂತಲೂ ಪ್ರಬಲವಾಗುತ್ತದೆಯಾದ್ದರಿಂದ ಇಲ್ಲಿ ಆಕಾಶ-ಶ್ರುತಿಯಿಂದ ವಿಷ್ಣುವಿನ ಲಿಂಗಕ್ಕೆ ಬಾಧವನ್ನು ಹೇಳಲು ಬರುವುದಿಲ್ಲ. ಹಾಗೆಯೇ ಭೂತಾಕಾಶದ ಲಿಂಗವಾದ ಭೂತಕಾರಣತ್ವವೂ ಕೂಡ ಬೇರೆ ಶ್ರುತಿಯಲ್ಲಿ ಹೇಳಿದಂತೆ ವಿಷ್ಣುವಿನಲ್ಲಿಯೇ ಮುಖ್ಯವಾಗಿದೆ. ಆದ್ದರಿಂದ ಆಕಾಶಶಬ್ದವು ವಿಷ್ಣುವನ್ನೇ ಮುಖ್ಯವಾಗಿ ಹೇಳುತ್ತದೆ.

ಅದ್ವೈತ ಹಾಗೂ ವಿಶಿಷ್ಟಾದ್ವೈತಮತಗಳ ವಿಮರ್ಶೆಯನ್ನು ಮಾಡುತ್ತಾರೆ. ಅದ್ವೈತಿಗಳು ಮತ್ತು ವಿಶಿಷ್ಟಾ-ದ್ವೈತಿಗಳು ಇಬ್ಬರೂ ಹೀಗೆ ಹೇಳುತ್ತಾರೆ - ಈ ಅಧಿಕರಣದಲ್ಲಿ 'ಆಕಾಶ ಇತಿ ಹೋವಾಚ' ಎಂಬಲ್ಲಿ ಬಹುಕಾಲದಿಂದ ಭೂತಾಕಾಶದಲ್ಲಿ ಲೋಕಪ್ರಸಿದ್ಧವಾದ ಆಕಾಶಪದವು ಮೊದಲಿರುವುದರಿಂದ ಅದಕ್ಕನು-ಸಾರಿಯಾಗಿ ಕೊನೆಯಲ್ಲಿರುವ 'ಸರ್ವಕಾರಣತ್ವ' ಮೊದಲಾದ ಲಿಂಗಗಳನ್ನು ಹೇಗಾದರೂ ಅರ್ಥೈಸಬೇಕು ಎಂದು ಪೂರ್ವಪಕ್ಷ ಮಾಡಿ. ಉತ್ತರ ವಾಕ್ಯದಲ್ಲಿ ಆಕಾಶ ಪದವು ಮೊದಲು ಶ್ರುತವಾಗಿದ್ದರೂ, ಮೊದಲು ಶ್ರುತವಾದ ಪ್ರಶ್ನೆಗೆ ಅನುಸಾರವಾಗಿ ನಂತರದಲ್ಲಿರುವ ಉತ್ತರವನ್ನು ಕೊಡುವ ವಾಕ್ಯದಲ್ಲಿರುವ ಆಕಾಶಪದವನ್ನು ವ್ಯಾಖ್ಯಾನಿಸಬೇಕಾದ್ದರಿಂದ, 'ಅಸ್ಯಲೋಕಸ್ಯ ಕಾ ಗತಿಃ' ಎಂದು ಸಕಲಪ್ರಪಂಚಕ್ಕೆ ಯಾರು ಕಾರಣ? ಎಂಬ ಪ್ರಶ್ನೆಗೆ ಅನುಗುಣವಾದ ಉತ್ತರನೀಡುವ ಆಕಾಶ ಪದವನ್ನು ಹೇಳಿದಾಗ ಭೂತಾಕಾಶವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಭೂತಾಕಾಶವೂ ಪ್ರಪಂಚದಲ್ಲಿ ಸೇರಿದೆ. ಮತ್ತು ರೂಢಿಯಿಂದ ಭೂತಾಕಾಶದ ಪ್ರಾಪ್ತಿಯಿದ್ದರೂ 'ಸರ್ವಕಾರಣತ್ವ ಮುಂತಾದ ಅನೇಕ ಲಿಂಗಗಳ ಅನುಕೂಲಕ್ಕಾಗಿ 'ತ್ಯಜೇದೇಕಂ ಕುಲಸ್ಯಾರ್ಥೇ' ಎಂಬ ನ್ಯಾಯಾನುಸಾರವಾಗಿ ಆಕಾಶಪದಕ್ಕೆ ರೂಢಿಯನ್ನು ಬಿಟ್ಟು ಲಕ್ಷಣಾದಿವೃತ್ತಿಯಿಂದ ಸೋಪಾಧಿಕ ಬ್ರಹ್ಮನೇ ಅರ್ಥವಾಗಿದ್ದಾನೆಂದು ಹೇಳಬೇಕು. ಹೀಗೆ ಸಿದ್ಧಾಂತ ಮಾಡುತ್ತಾರೆ.

ಪರಿಪೂರ್ಣಚಂದ್ರಿಕಾ

ಆದರೆ ಇದು ಉಚಿತವಲ್ಲ. ಪ್ರಾರಂಭಕ್ಕೆ ಅನುಸಾರಿಯಾಗಿ ಕೊನೆಯಲ್ಲಿರುವುದಕ್ಕೆ ಅರ್ಥೈಸಬೇಕು ಎನ್ನುವುದಾದರೆ ಹಿಂದಿನ ಅಧಿಕರಣದಲ್ಲೂ ಹೀಗೆ ಜೀವನೆಂದೇ ಸಿದ್ಧಾಂತ ಮಾಡಬೇಕಾಗುತ್ತದೆ.

ಹಾಗೆಯೆ ಈ ಪ್ರಶ್ನೆಯು ಸರ್ವಲೋಕ ಗತಿವಿಷಯಕವಾದದ್ದು ಎನ್ನುವುದೂ ಸರಿಯಲ್ಲ. ಪ್ರಶ್ನೆವಾಕ್ಯದಲ್ಲಿ 'ಅಸ್ಯ' ಎಂಬ ಸರ್ವನಾಮದಿಂದ ಪೃಥಿವಿಯನ್ನೇ ಇಟ್ಟುಕೊಳ್ಳಬೇಕು ಹೊರತು 'ಸರ್ವಪ್ರಪಂಚವನ್ನಲ್ಲ'.

ಪೃಥಿವಿಯನ್ನು ಮಾತ್ರ 'ಅಸ್ಯ' ಪದದಿಂದ ಸ್ವೀಕರಿಸಿದರೆ ಪೃಥಿವಿಗೆ ಜಲವು ಕಾರಣವೆಂಬುದು ಲೋಕಪ್ರಸಿದ್ಧವಾದ್ದರಿಂದ ಪ್ರಶ್ನೆಯೇ ವ್ಯರ್ಥವೆಂದರ ಸಕಲ ಪ್ರಪಂಚಕ್ಕೂ ಕಾರಣ ಭಗವಂತನೆಂದು ಬೇರೆ ಶ್ರುತಿಗಳಿಂದ ತಿಳಿಯುವುದರಿಂದ ನೀವು ಹೇಳುವುದೂ ವ್ಯರ್ಥ. ಮತ್ತು ಪೃಥಿವಿಗೆ ಜಲವು ಕಾರಣ ಎಂದು ಶಾಸ್ತ್ರದಿಂದ ಸಿದ್ಧವೇ ಹೊರತು ಲೋಕಪ್ರಸಿದ್ಧಿಯಿಂದಲ್ಲ.

ಹಾಗಿದ್ದರೆ ಪೃಥಿವಿಗೆ ಕಾರಣ ಜಲ ಎಂದಿಷ್ಟೇ ಹೇಳಬಹುದಿತ್ತು. ಆಕಾಶ ಎಂದು ಹೇಳಿದ್ದು ಏಕೆ? ಹಾಗೆಯೇ 'ಸರ್ವಾಣಿ' ಎಂದು ಸರ್ವಪದ ಹೇಳಿದ್ದು. 'ಆಕಾಶಾದೇವ' ಎಂದು ಅವಧಾರಣೆ ಮಾಡಿದ್ದೂ ಕೂಡುವುದಿಲ್ಲವಾದ್ದರಿಂದ ನಾವು ಅರ್ಥೈಸಿದಂತೆಯೇ ಹೇಳಬೇಕು ಎಂದರೆ, ಭಾಮತಿಯಲ್ಲಿ ಪ್ರಶ್ನಾನುಸಾರಿಯಾಗಿ ಉತ್ತರವನ್ನು ವ್ಯಾಖ್ಯಾನಿಸಬೇಕು ಎಂದು ಹೇಳಿದೆ. ಆದರೆ ನೀವು ಉತ್ತರಾನುಸಾರಿಯಾಗಿ ಪ್ರಶ್ನೆಯನ್ನು ವ್ಯಾಖ್ಯಾನಿಸಬೇಕು ಎನ್ನುತ್ತಿರುವಿರಿಯಾದ್ದರಿಂದ ನಿಮ್ಮಲ್ಲೇ ಪರಸ್ಪರ ವಿರೋಧವಿದೆ.

"ತ್ಯಜೇದೇಕಂ ಕುಲಸ್ಯಾರ್ಥೇ" ಎಂಬ ನ್ಯಾಯಾನುಸಾರಿಯಾಗಿ ಆಕಾಶಪದಕ್ಕೆ ರೂಢಿಯನ್ನು ಬಿಟ್ಟು ಬೇರೆ ಅರ್ಥವನ್ನು ಮಾಡಬೇಕು ಎಂದು ಹೇಳಿದ್ದು ಸರಿಯಲ್ಲ. ಆಕಾಶಶ್ರುತಿಯು ಪ್ರಧಾನವಾದ್ದರಿಂದ ಅಪ್ರಧಾನವಾದ 'ಸರ್ವಕಾರಣತ್ವ' ಮೊದಲಾದ ಲಿಂಗಗಳಿಗೇ "ಆತ್ಮಾರ್ಥೇ ಪೃಥಿವೀಂ ತ್ಯಜೇತ್" ಎಂಬ ನ್ಯಾಯಾನುಸಾರವಾಗಿ ಬಾಧವನ್ನು ಹೇಳಬೇಕು. ಇದು ಮೀಮಾಂಸಕರಿಗೂ ಸಮ್ಮತವಾದ ವಿಷಯ. ಆಕಾಶಶಬ್ದವು ಬ್ರಹ್ಮನಲ್ಲಿ ಮುಖ್ಯವಾಗಿದೆ ಎಂದು ನೀವು ಒಪ್ಪಿಲ್ಲವಾದ್ದರಿಂದ ಈ ನ್ಯಾಯಾನುಸಾರಿಯಾಗಿ ಆಕಾಶಪದಕ್ಕೆ ಬ್ರಹ್ಮನೆಂದು ಅರ್ಥೈಸುವುದು ಸರಿಯಲ್ಲ.

ಮತ್ತು ನೀವು ಹಿಂದಿನ ಅಧಿಕರಣದಲ್ಲಿ ಹೇಳಿದ ನ್ಯಾಯವನ್ನಿಟ್ಟುಕೊಂಡರೂ ಈ ಅಧಿಕರಣದಲ್ಲಿ ಪೂರ್ವಪಕ್ಷ ಸಿದ್ಧಾಂತಗಳಿಗೆ ಅವಕಾಶವಿಲ್ಲ. ಅಲ್ಲದೆ ಈ ಅಧಿಕರಣದಲ್ಲಿ ಹೇಳಿದ ವಾಕ್ಯವನ್ನು ವಿಷಯವಾಕ್ಯವನ್ನಾಗಿ ಸ್ವೀಕರಿಸುವುದೂ ನಿಮ್ಮ ಮತದಂತೆ ಬ್ರಹ್ಮನು ನಿರ್ವಿಶೇಷನಾದ್ದರಿಂದ ವಿರುದ್ಧವಾಗುತ್ತದೆ. ಈ ವಿರೋಧ ಪರಿಹಾರಕ್ಕಾಗಿ ಸವಿಶೇಷ ನಿರ್ವಿಶೇಷ ಎಂಬ ವಿಂಗಡನೆ ಮಾಡುವುದಾದರೆ ಫಲಭೇದ ಮತ್ತು ಪಾದಭೇದ ಮಾಡಿರುವುದು ಕೂಡುವುದಿಲ್ಲ. ಮತ್ತು ಸೂತ್ರದಲ್ಲಿ ಹೇಳಿರುವ ಲಿಂಗವೂ ಕೂಡ ವಾಸ್ತವಿಕವಾಗಿ ನಿಮ್ಮ ಮತದಂತೆ ಬ್ರಹ್ಮನಲ್ಲಿ ಇಲ್ಲ. ಹೀಗಾಗಿ ಅದನ್ನಿಟ್ಟುಕೊಂಡು ಸಿದ್ಧಾಂತ ಮಾಡುವುದೂ ಸರಿಯಲ್ಲ. ಆದ್ದರಿಂದ ಅದ್ವೈತಿಗಳು ಮತ್ತು ವಿಶಿಷ್ಟಾದ್ವೈತಿಗಳು ಇಬ್ಬರು ಹೇಳಿದ್ದೂ ಸರಿಯಲ್ಲ.

* * * * *

ಆಕಾಶಾಧಿಕರಣ (೧।೧।೮)

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ आकाशाधिकरणम्

### ಆಧಿಭೌತಿಕಶಬ್ದಗಳ ಸಮನ್ವಯಕ್ಕಾಗಿ ಆಕಾಶಾಧಿಕರಣ

॥ ॐ आकाशस्तल्लिङ्गात् ॐ ॥ अत्राधिभूतगताकाशादिनाम्नां समन्वय उच्यते । भूतेष्वाकाशस्य प्राधान्यात् सूत्रे तस्य मुखतः कीर्तनमन्येषां तूपलक्षणम् । अत एव सङ्गतिटीकायां "आकाशनाम्नः" इत्युक्त्वा अधिकरणोपसंहारटीकायां "आधिभौतिकसर्वशब्दोपलक्षकः" इत्युक्तम् ।

यद्यपि भूतेतरवाचिनामप्येतन्न्यायविषयाणामनेन समन्वयस्सिद्ध्यति । तथाऽपि सजातीये भूतशब्दे प्रथमं बुद्ध्यवतारादाधिदैविकेन्द्रादिशब्देषु आध्यात्मिकप्राणादिशब्देषु च स्वभावप्रवृत्तिनिमित्तकत्वाभावेन इतरत्र एतन्न्यायाप्रवृत्तेश्च टीकायामाधिभौतिकोपलक्षकतोक्तिः ।

न चात्रापि पूर्वत्रेवाकाशनामसमन्वयार्थमनन्तत्वादिलिङ्गसमन्वय एवोच्यताम् इति शङ्क्यम्, पूर्वत्रान्तस्स्थत्वरूपैकलिङ्गसमन्वयेन बहुनामसमन्वयात्, अत्र तु 'आकाशः' इत्येकनामसमन्वयेन बहुलिङ्गसमन्वयसिद्धेः । अनन्तत्वादेः सिद्धान्तहेतुत्वेन तत्र संशयानुदयाच्च ।

अनन्तरसङ्गतिस्तु – अभ्यधिकां शङ्कां कृत्वा पूर्वन्याय एवातिदिश्यत इत्यातिदेशिकी ॥

ಅನುವಾದ - ಆಕಾಶಾಧಿಕರಣವು ಪ್ರಾರಂಭವಾಗುತ್ತಿದೆ. ಭೂತ ಪದಾರ್ಥಗಳನ್ನು ಪ್ರತಿಪಾದಿಸುವ ಆಕಾಶಾದಿಶಬ್ದಗಳ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆ. ಭೂತಪದಾರ್ಥಗಳಲ್ಲಿ ಆಕಾಶವೇ ಪ್ರಧಾನವಾದ್ದರಿಂದ ಸೂತ್ರಕಾರರು ಆಕಾಶಶಬ್ದವನ್ನೇ ಉಲ್ಲೇಖಿಸಿದ್ದಾರೆ.

ವಾಯು ಮೊದಲಾದ ಶಬ್ದಗಳನ್ನು ಉಪಲಕ್ಷಣಯಾ ವಿವಕ್ಷಿಸಬೇಕು. ಆದ್ದರಿಂದಲೇ ಸಂಗತಿ-ಟೀಕೆಯಲ್ಲಿ 'ಆಕಾಶ ನಾಮ್ನಃ' ಎಂದು ಪ್ರಾರಂಭಿಸಿ ಅಧಿಕರಣದ ಉಪಸಂಹಾರದಲ್ಲಿ 'ಆಧಿಭೌತಿಕ-ಸರ್ವಶಬ್ದೋಪಲಕ್ಷಕಃ' ಎಂದು ಹೇಳಿದೆ. ಹೀಗೆ ಆಧಿಭೌತಿಕವಾದ ಸಕಲಶಬ್ದಗಳ ಸಮನ್ವಯವೇ ಈ ಅಧಿಕರಣದ ಉದ್ದೇಶ ಹೊರತು ಕೇವಲ ಆಕಾಶಶಬ್ದದ ಸಮನ್ವಯವಲ್ಲ.

ಪ್ರಶ್ನೆ - ವಸ್ತುತಸ್ತು ಈ ಅಧಿಕರಣದಲ್ಲಿ ಸ್ವಭಾವವೇ ಪ್ರವೃತ್ತಿನಿಮಿತ್ತವಾಗಿರುವ ಸಕಲ ಶಬ್ದಗಳನ್ನು ಸಮನ್ವಯ ಮಾಡಲಾಗಿದೆ. ಆದ್ದರಿಂದ ಪೃಥಿವೀ ವಾಯು ಮೊದಲಾದ ಆಧಿಭೌತಿಕ ಶಬ್ದಗಳನ್ನು ಉಪಲಕ್ಷಣಯಾ ತೆಗೆದುಕೊಳ್ಳುವಂತೆ ಭೂತವಾಚಕವಲ್ಲದ ಇಂದ್ರಪ್ರಾಣಾದಿಶಬ್ದಗಳನ್ನೂ ಉಪ-ಲಕ್ಷಣಯಾ ಸ್ವೀಕರಿಸಬೇಕಲ್ಲವೇ?

ಉತ್ತರ - ಸೂತ್ರಕಾರರು ಆಕಾಶಶಬ್ದವನ್ನು ಪ್ರಯೋಗಿಸಿದ್ದಾರೆ. ಇದನ್ನು ಕೇಳಿದಾಗ ಸಜಾತೀಯ-ವಾದ ಆಧಿಭೌತಿಕ ಪೃಥಿವೀ, ವಾಯು ಮುಂತಾದ ಶಬ್ದಗಳ ಸಮನ್ವಯವನ್ನು ಸೂತ್ರಕಾರರು ಮಾಡುತ್ತಿದ್ದಾರೆ ಎಂದೇ ಎಲ್ಲರಿಗೂ ತಿಳಿಯುತ್ತದೆ. ಇಂದ್ರ ಮೊದಲಾದ ಆಧಿದೈವಿಕಶಬ್ದಗಳಾಗಲೀ, ಪ್ರಾಣ ಮೊದಲಾದ ಆಧ್ಯಾತ್ಮಿಕಶಬ್ದಗಳಾಗಲಿ ಬುದ್ಧಿಯಲ್ಲಿ ಪ್ರಸಕ್ತವಾಗುವುದಿಲ್ಲ. ಮತ್ತೊಂದು ಕಾರಣ -- ಅಚೇತನದ ಸ್ವಭಾವವು ಭಗವಂತನ ಅಧೀನವಾಗುವುದಿಲ್ಲ ಎಂಬುದೇ ಈ ಅಧಿಕರಣದ ಪೂರ್ವಪಕ್ಷದ ನ್ಯಾಯ. ಈ ಪೂರ್ವಪಕ್ಷ ನ್ಯಾಯವು ಆಧಿಭೌತಿಕಶಬ್ದಗಳಲ್ಲಷ್ಟೇ ಸಂಚಾರವಾಗುತ್ತದೆ. ಆಧಿದೈವಿಕಶಬ್ದಗಳಲ್ಲಿ ಆಧ್ಯಾತ್ಮಿಕಶಬ್ದಗಳಲ್ಲಿ ಸಂಚಾರವಾಗುವುದಿಲ್ಲ. ಆಧಿದೈವಿಕ ಶಬ್ದಗಳಾಗಿರುವ ಇಂದ್ರಾದಿಶಬ್ದಗಳ ಪ್ರವೃತ್ತಿನಿಮಿತ್ತವು ಭಗವಂತನ ಅಧೀನಗಳಾಗಿವೆ. ಈ ಎರಡು ಕಾರಣಗಳಿಂದ ಟೀಕಾರಾಯರು ಆಧಿಭೌತಿಕಶಬ್ದಗಳನ್ನಷ್ಟೇ ಉಪಲಕ್ಷಣಯಾ ಸ್ವೀಕರಿಸಿದ್ದಾರೆ.

ಪ್ರಶ್ನೆ - ಹಿಂದಿನ ಅಂತಃಸ್ಥತ್ವಾಧಿಕರಣದಲ್ಲಿ ಅಂತಃಸ್ಥತ್ವವೆಂಬ ಲಿಂಗದ ಸಮನ್ವಯದಿಂದ ಅನೇಕ ಶಬ್ದಗಳ ಸಮನ್ವಯವನ್ನು ಮಾಡಿದಿರಿ. ಅದರಂತೆ ಈ ಅಧಿಕರಣದಲ್ಲಿಯೂ ಸಹ ಅನಂತತ್ವಾದಿ ಲಿಂಗದ ಸಮನ್ವಯದಿಂದ ಆಕಾಶ ಮೊದಲಾದ ಅನೇಕ ನಾಮಗಳ ಸಮನ್ವಯವನ್ನು ಮಾಡಬಹು-ದಲ್ಲವೇ?

ಉತ್ತರ - ಹಿಂದಿನ ಅಧಿಕರಣದಲ್ಲಿ ಬಹುವಿಧವಾದ ನಾಮಗಳ ಸಮನ್ವಯವನ್ನು ಅಂತಃಸ್ಥತ್ವ-ವೆಂಬ ಒಂದೇ ಲಿಂಗಸಮನ್ವಯದಿಂದ ಮಾಡಲಾಗಿತ್ತು. ಆದರೆ ಈ ಅಧಿಕರಣದಲ್ಲಿ ಬಹುವಿಧವಾದ ನಾಮಗಳ ಸಮನ್ವಯವನ್ನು ಮಾಡುತ್ತಿಲ್ಲ. ಕೇವಲ ಆಕಾಶ ಎಂಬ ಒಂದೇ ನಾಮದ ಸಮನ್ವಯ-ವನ್ನು ಮಾಡುತ್ತಿದ್ದಾರೆ. ಆದ್ದರಿಂದ ಲಿಂಗಸಮನ್ವಯವನ್ನು ಮಾಡಿಯೂ ಪ್ರಯೋಜನವಿಲ್ಲ. ಮತ್ತು ಅನಂತತ್ವ ಲಿಂಗವು ಸಿದ್ಧಾಂತದ ಹೇತುವಾಗಿದೆ. ಆಕಾಶಪದದ ಬದಲು ಅನಂತ ಪದವನ್ನು ಹೇಳಿದರೆ ಸಂಶಯವೇ ಹುಟ್ಟಲಾರದು.

ಈ ಅಧಿಕರಣಕ್ಕೆ ಆತಿದೇಶಿಕೀಸಂಗತಿಯನ್ನು ತಿಳಿಯಬೇಕು. ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯದ ಮೇಲೆ ಅಧಿಕಾಶಂಕೆಯನ್ನು ಮಾಡಿ, ಹಿಂದಿನ ಅಧಿಕರಣದ ನ್ಯಾಯವನ್ನೇ ಅತಿದೇಶ ಮಾಡುತ್ತಿದ್ದಾರೆ. ಆದ್ದರಿಂದ ಈ ಅಧಿಕರಣಕ್ಕಿರುವ ಅನಂತರ ಸಂಗತಿಯು ಆತಿದೇಶಿಕ ರೂಪವಾಗಿದೆ.

**ಕಠಿಣಪದಾರ್ಥ**

ಅಧಿಭೂತಗತಾಃ = ಅಧಿಭೂತಂ ಗತಾಃ = ಭೂತಗಳಲ್ಲಿ ಪ್ರಸಿದ್ಧವಾದ; ಪ್ರಾಧಾನ್ಯಾತ್ = 'ಆಕಾಶಃ ಸಂಭೂತಃ' ಎಂಬ ಶ್ರುತಿಯಲ್ಲಿ ಆಕಾಶವನ್ನು ಪ್ರಥಮವಾಗಿ ಹೇಳಿದ್ದರಿಂದ, ಏತನ್ನ್ಯಾಯ = ಅಚೇತನವಾದ್ದರಿಂದ ಭಗವಂತನಿಂದ ನಿಯಮ್ಯವಾಗಿಲ್ಲ ಎಂಬ ಪೂರ್ವಪಕ್ಷನ್ಯಾಯ, ಆಧಿದೈವಿಕ = ದೇವತೆಗಳಲ್ಲಿ ಪ್ರಸಿದ್ಧವಾದ, ಪೂರ್ವತ್ರ = ಹಿಂದಿನ ಅಧಿಕರಣದಲ್ಲಿ, ಅತ್ರ ತು = ಈ ಆಕಾಶಾಧಿಕರಣದಲ್ಲಿ, ಆತಿದೇಶಿಕೀ = ಹಿಂದಿನ ಸಿದ್ಧಾಂತನ್ಯಾಯದಿಂದ ಅತಿದೇಶ ಮಾಡುವಿಕೆ.

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः** – ॐ आकाशस्तल्लिङ्गात् ॐ ॥ अत्र सङ्गतिटीकायां ''आकाशनाम्नः समन्वयः'' इत्युक्तम्, तदयुक्तं, एकोदाहरणस्य योगारम्भाप्रयोजकत्वात् । तथात्वे विश्वतोमुखत्वहानेरित्यत एतदधिकरणप्रतिपाद्यं दर्शयन् विषयोपाधिमाह – **अत्रेति** ॥

ननु सूत्रे आकाशपदस्यैव ग्रहणात् ''आकाशादि'' इति कथम् । नचेतरोपलक्षकत्वेनैकस्योपादानम्, तथाऽपि अस्यैवोपादाने हेत्वभावादित्यत आह – **भूतेष्विति** ॥ **प्राधान्यादिति** ॥ ''आकाशः सम्भूतः आकाशाद्वायुः'' इत्यत्र सर्वभूतादित्वेनोपादानादिति भावः । उक्तञ्च सुधायाम् – ''आकाशस्य भूतेषु प्राधान्यात् तत् शब्दसमन्वयं हरावाह सूत्रकारः'' इति ।

ननु ''टीकायां ''आकाशनाम्नो ब्रह्मणि समन्वयप्रतिपादनात्'' इत्येकस्यैवोपादानात् 'आकाशादि' इति कथमित्यत आह – **अत एवेति** ॥

नन्वत्र वक्ष्यमाणरीत्या स्वभावप्रवृत्तिनिमित्तकाः शब्दाः समन्वीयन्ते । ते च भूताभूतशब्दसाधारणा इति भौतिकमात्रोपलक्षणत्वमयुक्तमित्याशङ्क्य, द्वेधा समाधानमाह – **यद्यपीति** ॥ **एतन्न्यायेति** ॥ 'अचेतनस्वभावत्वान्न भगवन्नियम्यत्वम्'

इत्यादिपूर्वपक्षन्यायविषयाणामित्यर्थः । 'अनेन' स्वभावस्यापीशाधीनत्वसाधकेनाधिकरणेनेत्यर्थः ॥ **आधिदैविकेति**॥ अतीताधिकरणविषयेषु उत्तराधिकरणविषयेषु चेत्यर्थः । एतेनाधिदैविकादिव्यावृत्त्यर्थमेव तथोक्तिरित्युक्तं भवति ।

ननु पूर्वाधिकरणे लिङ्गस्य समन्वितत्वेन बुद्धौ विपरिवर्तमानलिङ्गत्यागे हेत्वभावात्तदेव समन्वेतव्यम्, नतु नामेत्याक्षिप्य हेतुमाह – **न चात्रापीति** ॥ **नामेति** ॥ तथा च फलतः पादसङ्गतिर्भविष्यतीति भावः । अत्र किं सर्वभूतकारणत्वादिलिङ्गस्य समन्वयश्चोद्यते, सिद्धान्त्यभिमतस्य वा?

आद्य आह – **पूर्वत्रेति** ॥ **एकनामेति** ॥ वैश्वानराधिकरणवदिति भावः ।

ननु अत्रापि आकाशनाम्नो बहुकृत्वः श्रवणेन बहुनामसमन्वयोऽस्तीति चेत्, न,

प्रवृत्तिनिमित्तभेदाभावेन एकसमन्वये सति पुनः श्रुतसमन्वये यत्नाधिक्याभावेन भिन्नप्रवृत्तिनिमित्तकनामबहुत्वस्य विवक्षितत्वेनात्र तदभावादिति तात्पर्यात् ।

नच वाच्यमेकलिङ्गसमन्वयेनाप्यनेकलिङ्गानां नाम्नश्च समन्वयोऽर्थात् सिध्यतीति लिङ्गमेव समन्वेतव्यमिति, एकलिङ्गसमन्वयेन सजातीयविजातीयसमन्वयाक्षेपस्य गत्यन्तरे सति गौरवहतत्वात् । न चान्यत्र निरूढनामसमन्वयस्य प्रथमं बुद्धावनारोहात् अन्यत्रानिरूढलिङ्गसमन्वयस्य एव वाच्य इति वाच्यम्, पूर्वत्र तादृशस्यापीन्द्रादिनाम्नः समन्वयोक्त्याऽत्र बुद्धावारोहसम्भवादिति भावः ।

द्वितीये त्वाह – **अनन्तत्वादेरिति** ॥ अन्यथा सन्दिग्धासिद्धत्वापातादिति भावः ।

उपलक्षणमेतत् – अन्यत्र प्रसिद्धाकाशादिश्रुतित्वादिरूपपूर्वपक्षन्यायस्य मुखतः सूचनाभावाच्चेत्यपि ध्येयम् । नन्वेतत् "समुद्रान्तस्थितत्वादेर्विष्णुत्वनिश्चयेऽप्यनन्तत्वादेस्तदनिश्चयात्" इति वक्ष्यमाणेन विरुध्यत इति चेन्न, वास्तवाभिप्रायेणात्र स्वारसिकसंशयानुदयोक्तेः । तत्राकाशश्रुत्यादिसाहचर्येणाहितसंशयोक्तेः । श्रुत्याहितसंशयोपादानेन लिङ्गसमन्वयोक्त्या उपजीव्यत्वेन श्रुतिसमन्वयस्यैव

न्याय्यत्वादिति तात्पर्यादिति । अतो नामसमन्वय एव युक्तः, मुखतः पाद-सङ्गतेरपि सत्त्वादिति स्थितम् ।

एतेन ''आकाशनाम्नः'' इत्यादिसङ्गतिटीका समर्थिता । पूर्वाधिकरणसङ्गतिमाह – **अनन्तरेति** ॥ पूर्वसिद्धान्तस्योपरि तदनिवर्त्याशङ्कां कृत्वा तदुपमर्दनपूर्वकं निरवकाशलिङ्गेन सावकाशश्रुतिबाधरूपन्याय एवेत्यर्थः । अनेन –

**कृत्वा त्वभ्यधिकाशङ्कां पूर्वमेवातिदिश्यते ।**
**तत्रातिदेशिकी प्रोक्ता ॥**

इति लक्षणं स्मारितं भवति । इयं च सङ्गतिः ''चेष्टा हि'' इत्याद्यनु-व्याख्यानात् स्पष्टं प्रतीयत इति भावः ।

ವಿವರಣೆ - ಆಕಾಶಾಧಿಕರಣಕ್ಕೆ ಹಿಂದಿನ ಅಧಿಕರಣದಿಂದ ಆತಿದೇಶಿಕೀಸಂಗತಿ ಇದೆಯೆಂದು. 'ಆಕಾಶನಾಮ್ನಃ' ಎಂಬ ಟೀಕೆಯು ಹೇಳಿದೆ.

ಶಂಕೆ - ಆಕಾಶಶಬ್ದದಸಮನ್ವಯವನ್ನು ಈ ಅಧಿಕರಣವು ಮಾಡುತ್ತಿದೆ ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದು ಹೇಗೆ ಸರಿ? ಒಂದೇ ನಾಮದ ಸಮನ್ವಯ ಮಾಡಲು ಸಂಪೂರ್ಣ ಅಧಿಕರಣ ಹೊರಡುವುದು ವ್ಯರ್ಥ. ಹಾಗಾದಲ್ಲಿ ಸೂತ್ರದ ವಿಶ್ವತೋಮುಖತ್ವ ಲಕ್ಷಣಕ್ಕೆ ಹಾನಿ ಬರುತ್ತದಲ್ಲವೇ?

ಸಮಾಧಾನ - ಈ ಅಧಿಕರಣದಲ್ಲಿ ಕೇವಲ ಆಕಾಶಶಬ್ದದ ಸಮನ್ವಯವನ್ನಷ್ಟೇ ಮಾಡುತ್ತಿಲ್ಲ. ಆಧಿಭೌತಿಕವಾದ ಸಕಲಶಬ್ದಗಳ ಸಮನ್ವಯವನ್ನು ಮಾಡುತ್ತಿದ್ದಾರೆ. ಆ ಎಲ್ಲ ಶಬ್ದಗಳನ್ನು ಕ್ರೋಢೀಕರಿಸುವ ಧರ್ಮ ಎಂದರೆ 'ಆಧಿಭೌತಿಕಶಬ್ದತ್ವ'. ಇದು ಉಪಲಕ್ಷತಾವಚ್ಛೇದಕವಾಗಿದೆ. ಇದನ್ನೇ 'ಅತ್ರ' ಇತ್ಯಾದಿ ಗ್ರಂಥದಿಂದ ವಿವರಿಸಿದ್ದಾರೆ. ಹಾಗಾಗಿ, ಪೃಥ್ವೀ, ಅಪ್, ತೇಜಸ್ಸು, ವಾಯು ಮೊದಲಾದ ಎಲ್ಲ ಶಬ್ದಗಳ ಸಮನ್ವಯವು ಈ ಅಧಿಕರಣದಿಂದ ಸಿದ್ಧವಾಗುತ್ತಿದೆ. ಟೀಕೆಯು 'ಆಕಾಶನಾಮ್ನಃ' ಎಂದು ಉಪಲಕ್ಷಣಕ್ಕೋಸ್ಕರ ಆಕಾಶಪದವನ್ನು ಉಲ್ಲೇಖಿಸಿದೆ ಹೊರತು, ಒಂದೇ ಆಕಾಶಶಬ್ದದ ಸಮನ್ವಯ-ಕ್ಕೋಸ್ಕರವಲ್ಲ.

ಶಂಕೆ - ಗ್ರಂಥಕಾರರು 'ಆಕಾಶಾದಿನಾಮ್ನಾಂ' ಎಂದಿದ್ದಾರೆ. ಆದರೆ ಸೂತ್ರದಲ್ಲಿ ಕೇವಲ ಆಕಾಶಪದವಷ್ಟೇ ಕಾಣಿಸುತ್ತಿದೆ. ಆದಿಪದ ಹೇಳಿದ್ದು ವ್ಯರ್ಥ. ಬೇರೆ ಶಬ್ದಗಳ ಉಪಲಕ್ಷಣಕ್ಕೋಸ್ಕರ ಆದಿಪದ ಹೇಳಿದ್ದು ಸಾರ್ಥಕವೆಂದು ಹೇಳಲಾಗದು. ಏಕೆಂದರೆ, ವಾಯು ಮೊದಲಾದ ಬೇರೆ ಶಬ್ದಗಳನ್ನು ಉಪಲಕ್ಷಣವಾಗಿ ಸ್ವೀಕರಿಸಿದಲ್ಲಿ ಆಕಾಶಶಬ್ದದ ಉಲ್ಲೇಖವನ್ನೇ ಏಕೆ ಮಾಡಬೇಕು?

ಸಮಾಧಾನ - ಈ ಶಂಕೆಗೆ 'ಭೂತೇಷು' ಇತ್ಯಾದಿ ವಾಕ್ಯದಿಂದ ಗ್ರಂಥಕಾರರು ಉತ್ತರಿಸಿದ್ದಾರೆ. 'ಆಕಾಶಃ ಸಂಭೂತಃ' 'ಆಕಾಶಾದ್ವಾಯುಃ' ಇತ್ಯಾದಿಯಾಗಿ ಶ್ರುತಿಯು ಆಕಾಶವನ್ನೇ ಪ್ರಧಾನವಾಗಿ

ಪ್ರಾರಂಭದಲ್ಲಿ ಹೇಳಿದೆ. ಸಕಲಭೂತಪದಾರ್ಥಗಳಿಗೆ ಪ್ರಥಮವಾಗಿ ಕಾರಣವಾದದ್ದು ಆಕಾಶ. 'ಪ್ರಥಮಾತಿಕ್ರಮಣೇ ಮಾನಾಭಾವಾತ್' ಎಂಬ ನ್ಯಾಯದಂತೆ ಸೂತ್ರಕಾರರು ಆಕಾಶಶಬ್ದವನ್ನೇ ಉಪಲಕ್ಷಕವಾಗಿ ಬಳಸಿದ್ದಾರೆ. ಈ ವಿಷಯವನ್ನು ಸುಧೆಯಲ್ಲಿ 'ಆಕಾಶಸ್ಯ ಭೂತೇಷು ಪ್ರಾಧಾನ್ಯಾತ್ ತತ್ ಶಬ್ದಸಮನ್ವಯಂ ಹರಾವಾಹ ಸೂತ್ರಕಾರಃ' (ಸಕಲಭೂತಪದಾರ್ಥಗಳಲ್ಲಿ ಆಕಾಶವೇ ಪ್ರಧಾನವಾದ್ದರಿಂದ ಆಕಾಶಶಬ್ದದ ಸಮನ್ವಯವನ್ನೇ ಹರಿಯಲ್ಲಿ ಹೇಳಿದ್ದಾರೆ) ಎಂದು ಉಲ್ಲೇಖಿಸಿದ್ದಾರೆ.

ಶಂಕೆ - ಟೀಕೆಯಲ್ಲಿ 'ಆಕಾಶನಾಮ್ನಃ ಬ್ರಹ್ಮಣಿ ಸಮನ್ವಯಪ್ರತಿಪಾದನಾತ್' ಎಂದು ಆಕಾಶ-ಶಬ್ದವನ್ನಷ್ಟೇ ಉಲ್ಲೇಖಿಸಿರುವಾಗ ಆಕಾಶಾದಿ ಎಂದು ಹೇಗೆ ಹೇಳಿದಿರಿ?

ಸಮಾಧಾನ - ಈ ಶಂಕೆಗೆ 'ಅತ ಏವ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಟೀಕೆಯ ಪ್ರಾರಂಭದಲ್ಲಿ ಹೀಗೆ ಹೇಳಿದರೂ ಸಹ ಉಪಸಂಹಾರದಲ್ಲಿ ಸಕಲ ಭೌತಿಕಶಬ್ದಗಳನ್ನು ಉಪಲಕ್ಷಣಯಾ ವಿವಕ್ಷಿಸಬೇಕೆಂದು ಹೇಳಿದ್ದಾರೆ. ಆದ್ದರಿಂದ ಟೀಕೆಯ ವಿರೋಧವು ಬರುವುದಿಲ್ಲ.

ಶಂಕೆ - ಮುಂದೆ ಹೇಳುವಂತೆ ಸ್ವಭಾವವಾಚಕವಾದ ಮತ್ತು ಪ್ರವೃತ್ತಿನಿಮಿತ್ತವುಳ್ಳ ಶಬ್ದಗಳನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡಲಾಗಿದೆ. ಇದು ಭೂತಗಳಲ್ಲಿ ಹೇಗಿದೆಯೋ ಆದರಂತೆ ಭೂತವಲ್ಲದ ಪದಾರ್ಥಗಳಲ್ಲಿಯೂ ಸಾಧಾರಣವಾಗಿದೆ. ಹೀಗಿರುವಾಗ ಆಧಿಭೌತಿಕಶಬ್ದಗಳನ್ನಷ್ಟೇ ಉಪಲಕ್ಷಣವಾಗಿ ವಿವಕ್ಷಿಸಬೇಕೆಂಬ ಟೀಕೆಯು ಹೇಗೆ ಸಮಂಜಸವಾಗುತ್ತದೆ?

ಸಮಾಧಾನ - ಈ ಶಂಕೆಗೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ ಎರಡು ಬಗೆಯಲ್ಲಿ ಸಮಾಧಾನವನ್ನು ನೀಡುತ್ತಿದ್ದಾರೆ. ಆಧಿದೈವಿಕ(ಭೂತವಾಚಕವಾಗದ) ಇಂದ್ರಾದಿಶಬ್ದಗಳಾಗಲೀ ಪ್ರಾಣಾದಿ ಶಬ್ದಗಳಾಗಲೀ ಉಪಲಕ್ಷ್ಯಗಳಾಗುವುದಿಲ್ಲ. ಚೇತನನ ಸ್ವಭಾವವು ಭಗವಂತನಿಂದ ನಿಯಮ್ಯವಾಗಬಹುದು. ಆದರೆ ಅಚೇತನಪದಾರ್ಥದ ಸ್ವಭಾವವು ಭಗವಂತನಿಂದ ನಿಯಮ್ಯವಾಗುವುದಿಲ್ಲ. ಇದು ಈ ಅಧಿಕರಣದ ಪೂರ್ವಪಕ್ಷನ್ಯಾಯ. ಈ ನ್ಯಾಯವು ಆಧಿಭೌತಿಕಶಬ್ದಗಳಲ್ಲಾಗಲೀ ಆಧ್ಯಾತ್ಮಿಕ ಶಬ್ದಗಳಲ್ಲಾಗಲೀ ಹೇಳ-ಲಾಗದು. ಆಧಿದೈವಿಕವಾದ ಇಂದ್ರಾದಿಶಬ್ದಗಳು ಆಧ್ಯಾತ್ಮಿಕವಾದ ಪ್ರಾಣಾದಿಶಬ್ದಗಳು ಇಂದ್ರಾದಿ ಚೇತನರನ್ನು ಪ್ರತಿಪಾದಿಸುತ್ತಿವೆ. ಇಂದ್ರಾದಿಗಳಲ್ಲಿರುವ ಸ್ವಭಾವವಾಗಲೀ ಪ್ರವೃತ್ತಿನಿಮಿತ್ತವಾಗಲೀ ಭಗವಂತನಿಂದ ನಿಯಮ್ಯವಾಗಿವೆಯೆಂದು ಹಿಂದಿನ ಅಧಿಕರಣದಲ್ಲಿ ನಿರ್ಣಯಿಸಿದ್ದಾಗಿದೆ. ಚೇತನನ ಸ್ವಭಾವ ಮತ್ತು ಪ್ರವೃತ್ತಿನಿಮಿತ್ತಗಳು ಈಶಾಧೀನವಾಗಲು ಅಚೇತನ ಸ್ವಭಾವ ಮತ್ತು ಪ್ರವೃತ್ತಿನಿಮಿತ್ತವು ಈಶಾಧೀನವಾಗುವುದಿಲ್ಲ ಎಂಬ ಅಭ್ಯಧಿಕಾಶಂಕೆಗೆ ಉತ್ತರಿಸಲು ಈ ಅಧಿಕರಣವು ಹೊರಟಿದೆ.

ಶಂಕೆ - ಹಿಂದಿನ ಅಧಿಕರಣದಲ್ಲಿ ಲಿಂಗಸಮನ್ವಯವನ್ನು ಮಾಡಿದ್ದರಿಂದ ಈ ಅಧಿಕರಣದಲ್ಲಿಯೂ ಲಿಂಗಸಮನ್ವಯವೇ ಬುದ್ಧಿಯಲ್ಲಿ ಪ್ರಸಕ್ತವಾಗುತ್ತದೆ. ಆದರೆ ನೀವು ಲಿಂಗಸಮನ್ವಯವನ್ನು ಬಿಟ್ಟು, ನಾಮಸಮನ್ವಯವನ್ನು ಮಾಡುತ್ತಿದ್ದೀರಿ. ಹೀಗೆ ವ್ಯತ್ಯಾಸಮಾಡಿ ಸಮನ್ವಯ ಮಾಡುವುದು ತಪ್ಪಲ್ಲವೇ?

ಸಮಾಧಾನ - ಈ ಶಂಕೆಗೆ 'ನಚ ಅತ್ರಾಪಿ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಹಿಂದಿನ ಅಧಿಕರಣದಲ್ಲಿ ಅನೇಕ ನಾಮಸಮನ್ವಯದ ಪ್ರಯೋಜನವಿದ್ದದ್ದರಿಂದ ಲಿಂಗಸಮನ್ವಯವು

ಅನಿವಾರ್ಯವಾಗಿತ್ತು. ಆದರೆ ಈ ಅಧಿಕರಣದಲ್ಲಿ ಲಿಂಗಸಮನ್ವಯ ಮಾಡುವುದರಿಂದ ಅಂತಹ ಯಾವ ಪ್ರಯೋಜನವೂ ಇರುವುದಿಲ್ಲ. ಲಿಂಗಸಮನ್ವಯ ಮಾಡುವುದರಿಂದ ಅರ್ಥಾತ್ ನಾಮದ ಸಮನ್ವಯವೂ ಸಿದ್ಧವಾಗುತ್ತದಲ್ಲ? ಎಂದು ಪ್ರಶ್ನಿಸಬಹುದು. ಆದರೆ ಇದು ನಾಮಪಾದ. ನಾಮಪಾದದಲ್ಲಿ ನೇರವಾಗಿ ನಾಮಸಮನ್ವಯವನ್ನೇ ಮಾಡಬೇಕು. ಇಲ್ಲದಿದ್ದಲ್ಲಿ ಪಾದಸಂಗತಿಯೇ ದುರ್ಲಭವಾಗುತ್ತದೆ. ಮತ್ತು ಈ ಅಧಿಕರಣದಲ್ಲಿ ಲಿಂಗಸಮನ್ವಯವನ್ನು ಮಾಡಬೇಕೆಂಬ ನಿಮ್ಮ ಅಭಿಪ್ರಾಯವೇನು? ಸರ್ವಭೂತಕಾರಣತ್ವವೇ ಮೊದಲಾದ ಪೂರ್ವಪಕ್ಷಲಿಂಗಗಳನ್ನು ಸಮನ್ವಯ ಮಾಡಬೇಕೆಂದೋ? ಅಥವಾ ಸಿದ್ಧಾಂತಿಗಳಿಗೆ ಅಭಿಪ್ರೇತವಾದ ಅನಂತತ್ವ ಮೊದಲಾದ ಲಿಂಗಗಳ ಸಮನ್ವಯ ಮಾಡಬೇಕೆಂದೋ? ಮೊದಲನೆಯ ವಿಕಲ್ಪಕ್ಕೆ 'ಪೂರ್ವತ್ರ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ವೈಶ್ವಾನರಾಧಿಕರಣದಲ್ಲಿ ಒಂದೇ ನಾಮದ ಸಮನ್ವಯದಿಂದ ಅನೇಕ ಲಿಂಗಗಳ ಸಮನ್ವಯವು ಸಿದ್ಧವಾಗುತ್ತದೆ. ಹಾಗೆ ಈ ಅಧಿಕರಣದಲ್ಲಿ ಆಕಾಶನಾಮ ಸಮನ್ವಯದಿಂದ ಅನೇಕ ಲಿಂಗಗಳ ಸಮನ್ವಯವೂ ಸಹ ಸಿದ್ಧವಾಗುತ್ತಿಲ್ಲ. ಹೀಗಿರುವಾಗ ಸರ್ವಭೂತಕಾರಣತ್ವಾದಿ ಲಿಂಗಗಳ ಸಮನ್ವಯವನ್ನು ಹೇಗೆ ಮಾಡುತ್ತೀರಿ?

ಶಂಕೆ - ಶ್ರುತಿಯಲ್ಲಿ ಆಕಾಶನಾಮವೂ ಸಹ ಅನೇಕ ಬಾರಿ ಕೇಳಿಸುತ್ತಿದೆ. ಆದ್ದರಿಂದ ಒಂದು ಲಿಂಗದ ಸಮನ್ವಯದಿಂದ ಅನೇಕ ಆಕಾಶನಾಮಗಳ ಸಮನ್ವಯವನ್ನು ಹಿಂದಿನ ಅಧಿಕರಣದಂತೆ ಇಲ್ಲಿಯೂ ಹೇಳಬಹುದಲ್ಲವೆ?

ಸಮಾಧಾನ - ಬೇರೆ ಬೇರೆ ಪ್ರವೃತ್ತಿನಿಮಿತ್ತಗಳನ್ನು ಹೊಂದಿರುವ ಅನೇಕ ನಾಮಗಳ ಸಮನ್ವಯವನ್ನು ಹಿಂದಿನ ಅಧಿಕರಣದಲ್ಲಿ ಮಾಡಿದ್ದೇವೆ. ಆದರೆ ನೀವು ಒಂದೇ ಪ್ರವೃತ್ತಿನಿಮಿತ್ತವನ್ನು ಹೊಂದಿರುವ ಆಕಾಶಶಬ್ದದ ಸಮನ್ವಯವನ್ನಷ್ಟೇ ಆಕ್ಷೇಪಿಸುತ್ತಿದ್ದೀರಿ. ಒಂದೇ ಪ್ರವೃತ್ತಿನಿಮಿತ್ತ ಹೊಂದಿರುವ ಅನೇಕ ಶಬ್ದಗಳ ಸಮನ್ವಯವು ಕಷ್ಟಕರವಲ್ಲ. ಇದಕ್ಕೋಸ್ಕರ ಲಿಂಗಸಮನ್ವಯ ಮಾಡುವುದು ಅನಾವಶ್ಯಕ.

ಶಂಕೆ - ಲಿಂಗಸಮನ್ವಯ ಮಾಡುವುದು ತಪ್ಪಲ್ಲ. ಒಂದು ಲಿಂಗವನ್ನು ಸಮನ್ವಯ ಮಾಡುವುದರಿಂದ ಸಮಾನವಾದ ಅನೇಕ ಲಿಂಗಗಳ ಸಮನ್ವಯವು ಸಿದ್ಧವಾಗುತ್ತದೆ. ಅದರಂತೆ ಅನೇಕ ನಾಮಗಳ ಸಮನ್ವಯವೂ ಸಹ ಅರ್ಥಾತ್ ಸಿದ್ಧವಾಗುತ್ತದೆ. ಹೀಗೆ ಬಹಳ ಪ್ರಯೋಜನವಿರುವುದರಿಂದ ಲಿಂಗಸಮನ್ವಯ ಮಾಡುವುದೇ ಸ್ವರಸವಲ್ಲವೇ?

ಸಮಾಧಾನ - ಬೇರೆ ಗತಿ ಇಲ್ಲದಿದ್ದರೆ ನೀವು ಹೇಳಿದಂತೆ ಒಪ್ಪಬಹುದಿತ್ತು. ಆದರೆ ಲಿಂಗಸಮನ್ವಯವನ್ನು ಮಾಡದೇ ಇದ್ದರೂ ಸಹ ನಾಮಸಮನ್ವಯವು ಸಿದ್ಧವಾಗುತ್ತಿದೆ. ಒಂದು ಲಿಂಗದ ಸಮನ್ವಯದಿಂದ ಸಜಾತೀಯವಾದ ಅನೇಕ ಲಿಂಗಗಳ ಸಮನ್ವಯವನ್ನು ವಿಜಾತೀಯವಾದ ಅನೇಕ ನಾಮಗಳ ಸಮನ್ವಯವನ್ನು ಹೇಳುವುದು ಗೌರವ.

ಶಂಕೆ - ನಾಮಸಮನ್ವಯ ಮಾಡಿದಾಗಲೇ ಗೌರವ ಬರುತ್ತದೆ. ಏಕೆಂದರೆ ಆಕಾಶಾದಿ ನಾಮಗಳು ಬೇರೆ ಲೌಕಿಕ ಪದಾರ್ಥಗಳಲ್ಲಿ ರೂಢವಾಗಿವೆ. ಅನ್ಯತ್ರ ರೂಢವಾದ ಆಕಾಶಾದಿ ಶಬ್ದಗಳು ಬುದ್ಧಿಯಲ್ಲಿ

ಪ್ರಸಕ್ತವೇ ಆಗುವುದಿಲ್ಲ. ಆದರೆ ಲಿಂಗಗಳು ಭಗವಂತನಲ್ಲಿ ಪ್ರಸಿದ್ಧವಾಗಿ ಬೇರೆ ಕಡೆ ಅಪ್ರಸಿದ್ಧವಾಗಿರುತ್ತವೆ. ಆದ್ದರಿಂದ ನಾಮ ಮತ್ತು ಲಿಂಗಗಳಲ್ಲಿ ಮೊದಲು ಲಿಂಗವೇ ಬುದ್ಧಿಯಲ್ಲಿ ಬರುತ್ತದೆ. ಬುದ್ಧಿಯಲ್ಲಿ ಪ್ರಸಕ್ತವಾದ ಲಿಂಗಸಮನ್ವಯವೇ ಉಚಿತವಲ್ಲವೇ?

ಸಮಾಧಾನ - ಹಾಗೇನಿಲ್ಲ. ಹಿಂದಿನ ಅಧಿಕರಣಗಳಲ್ಲಿ ಇಂದ್ರಾದಿ ನಾಮಗಳನ್ನು ಭಗವಂತನಲ್ಲಿ ಸಮನ್ವಯ ಮಾಡಿದ್ದೇವೆ. ಹಾಗಾಗಿ ಆಕಾಶಾದಿ ಶಬ್ದಗಳು ಭಗವಂತನಲ್ಲಿ ಇವೆಯೋ ಇಲ್ಲವೋ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಹೀಗೆ ಇಲ್ಲಿ ಪ್ರಸಕ್ತವಾದದ್ದು ಆಕಾಶಾದಿ ನಾಮಗಳೇ ಹೊರತು ಲಿಂಗಗಳಲ್ಲ.

ಅನಂತತ್ವಾದಿ ಲಿಂಗಗಳನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತೇವೆ ಎಂಬ ಎರಡನೆಯ ವಿಕಲ್ಪಕ್ಕೆ 'ಅನಂತತ್ವಾದೇಃ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಸಿದ್ಧಾಂತಯುಕ್ತಿಯನ್ನು ಸಮನ್ವಯ ಮಾಡುವುದಾದರೆ ಸಂಶಯ ಪೂರ್ವಪಕ್ಷಗಳು ಹೇಗೆ ಹುಟ್ಟುತ್ತವೆ? ಅಷ್ಟಾದರೂ ಅನಂತತ್ವ ಲಿಂಗವನ್ನು ಸಮನ್ವಯ ಮಾಡುವುದಾದಲ್ಲಿ ಸಂದಿಗ್ಧಾಸಿದ್ಧಿಯು ಅನಿವಾರ್ಯ -- 'ಆಕಾಶಃ ಬ್ರಹ್ಮ ಏವ ಅನಂತತ್ವಾದಿ ಲಿಂಗಾತ್' ಇದು ಸೂತ್ರದಿಂದ ಸಿದ್ಧವಾದ ಅನುಮಾನ. ಈ ಅನುಮಾನದಲ್ಲಿರುವ ಅನಂತತ್ವಲಿಂಗವನ್ನು ಸಂಶಯಕೋಟಿಯಲ್ಲಿ ಸೇರಿಸಿದರೆ ಹೇತುವೇ ಸಂದಿಗ್ಧವಾಗುತ್ತದೆ. ಗ್ರಂಥದಲ್ಲಿ ಹೇಳಿದ ಈ ದೋಷದಿಂದ ಉಪಲಕ್ಷಣಯಾ ಮತ್ತೊಂದು ದೋಷವನ್ನು ತಿಳಿಯಬೇಕು. - ಆಕಾಶಾದಿ ಶ್ರುತಿಯಲ್ಲಿ ಅನ್ಯತ್ರ-ಪ್ರಸಿದ್ಧವೆಂಬ ಪೂರ್ವಪಕ್ಷನ್ಯಾಯವು ಸ್ಪಷ್ಟವಾಗಿ ತಿಳಿಯುತ್ತಿದೆ. ಅನಂತತ್ವಲಿಂಗವನ್ನು ಸಮನ್ವಯ ಮಾಡುವುದಾದಲ್ಲಿ ಅನ್ಯತ್ರಪ್ರಸಿದ್ಧಿ ಎಂಬ ಪೂರ್ವಪಕ್ಷ ನ್ಯಾಯವನ್ನು ಮುಖತಃ ಹೇಳಿದಂತಾಗುವುದಿಲ್ಲ.

ಶಂಕೆ - ಗ್ರಂಥಕಾರರು ಇಲ್ಲಿ ಅನಂತತ್ವಲಿಂಗವನ್ನು ಅಸಂದಿಗ್ಧವೆಂದಿದ್ದಾರೆ. ಆದರೆ ಮುಂದೆ ಪೂರ್ವಪಕ್ಷ ಮಾಡುವಾಗ ಇದೇ ಗ್ರಂಥಕಾರರು 'ಏತತ್ ಸಮುದ್ರಾಂತಃಸ್ಥಿತತ್ವಾದೇಃ ವಿಷ್ಣುಲಿಂಗತ್ವ-ನಿಶ್ಚಯೇಪಿ ಅನಂತತ್ವಾದೇಃ ತದನಿಶ್ಚಯಾತ್ (ಸಮುದ್ರಾಂತಃಸ್ಥಿತತ್ವ ಮೊದಲಾದವು ವಿಷ್ಣುವಿನ ಲಿಂಗವೆಂದು ನಿಶ್ಚಯವಾದರೂ ಅನಂತತ್ವಾದಿಗಳು ವಿಷ್ಣುಲಿಂಗವೆಂದು ನಿಶ್ಚಯವಾಗಿಲ್ಲ)' ಎಂದು ಹೇಳುತ್ತಾರೆ. ಈ ವಾಕ್ಯಕ್ಕೂ ಇಲ್ಲಿ ಹೇಳುತ್ತಿರುವ 'ಅನಂತತ್ವಾದೇಃ ಸಿದ್ಧಾಂತಹೇತುತ್ವೇನ ತತ್ರ ಸಂಶಯಾನುದಯಾಚ್ಚ' (ಅನಂತತ್ವಾದಿಗಳು ಸಿದ್ಧಾಂತಹೇತುವಾದ್ದರಿಂದ ಅಲ್ಲಿ ಸಂಶಯವು ಹುಟ್ಟು-ವುದಿಲ್ಲ) ಎಂಬ ವಾಕ್ಯಕ್ಕೂ ಪರಸ್ಪರವಿರೋಧ ಬರುತ್ತಿದೆಯಲ್ಲ?

ಸಮಾಧಾನ - ಇಲ್ಲಿ ಸ್ವಾರಸಿಕಸಂಶಯ ಬರುವುದಿಲ್ಲವೆಂಬ ಅಭಿಪ್ರಾಯದಿಂದ 'ಸಂಶಯಾ-ನುದಯಾತ್' ಎಂದು ಹೇಳಿದ್ದಾರೆ. ಮುಂದಿನ ಗ್ರಂಥದಲ್ಲಿ ಆಕಾಶಶ್ರುತಿಯ ಸಾಹಚರ್ಯವಿರುವುದರಿಂದ ಆಹಿತವಾದ ಸಂಶಯವು ಬರುತ್ತದೆಂದು ಹೇಳಿದ್ದಾರೆ. ಸಂಶಯವು ಎರಡು ವಿಧ - (೧) ಸ್ವಾರಸಿಕ-ಸಂಶಯ, (೨) ಆಹಿತಸಂಶಯ ಎಂದು. ಸ್ವಾಭಾವಿಕವಾಗಿ ಬರುವ ಸಂಶಯವನ್ನು ಸ್ವಾರಸಿಕಸಂಶಯ-ವೆನ್ನುತ್ತಾರೆ. ಇಚ್ಛೆ ಪಟ್ಟು ಹೊಂದುವ ಸಂಶಯವನ್ನು ಆಹಿತಸಂಶಯ ಎನ್ನುತ್ತಾರೆ. ಈಗ ಅನಂತತ್ವ-ಲಿಂಗದಲ್ಲಿ ಸ್ವಾಭಾವಿಕವಾದ ಸಂಶಯವನ್ನು ಹೇಳಬಹುದು ಆಹಿತ ಸಂಶಯವನ್ನೂ ಹೇಳಬಹುದು. ಆದ್ದರಿಂದ ಎರಡೂ ಗ್ರಂಥಗಳಿಗೆ ಪರಸ್ಪರವಿರೋಧವು ಬರುವುದಿಲ್ಲ.

ಆಕಾಶಾಧಿಕರಣ (೧।೧।೮)

ಮತ್ತು ನಾಮಸಮನ್ವಯವನ್ನು ಹೇಳುವುದೇ ನ್ಯಾಯ. ಲಿಂಗಸಮನ್ವಯವನ್ನು ಹೇಳುವುದಾದಲ್ಲಿ ನಾಮದ ಅಪೇಕ್ಷೆಯು ಬೇಕಾಗುತ್ತದೆ. ಶ್ರುತಿಯ ಸಾಹಚರ್ಯದಿಂದ ಆಹಿತಸಂಶಯವನ್ನು ಹೊಂದಿ ಲಿಂಗಸಮನ್ವಯವನ್ನು ಹೇಳಬೇಕು. ಇಲ್ಲಿ ಶ್ರುತಿಯು = ನಾಮವು ಉಪಜೀವ್ಯವಾಗಿದೆ. ಲಿಂಗವು ಉಪಜೀವಕವಾಗಿದೆ. ಉಪಜೀವ್ಯವು ಪ್ರಬಲವಾದ್ದರಿಂದ ನಾಮಸಮನ್ವಯವು ಅನಿವಾರ್ಯವಾಗಿದೆ. ಮತ್ತು ನಾಮಸಮನ್ವಯ ಮಾಡಿದಾಗ ಪಾದಸಂಗತಿಯನ್ನು ನೇರವಾಗಿಯೇ ಹೇಳಬಹುದು. ಹೀಗೆ ಯಾವುದೇ ಮುಖದಲ್ಲಿ ವಿಚಾರಮಾಡಿದರೂ ಆಕಾಶಾಧಿಕರಣದಲ್ಲಿ ಆಧಿಭೌತಿಕವಾದ ಆಕಾಶಾದಿ-ನಾಮಗಳ ಸಮನ್ವಯವೇ ಅತ್ಯಂತ ಸ್ವರಸವೆಂದು ಮನದಟ್ಟಾಗುತ್ತದೆ. ಅನಂತತ್ವಾದಿಲಿಂಗಗಳ ಸಮನ್ವಯ ಮಾಡಿದರೆ ಅಸ್ವರಸವೂ ನಿಷ್ಪ್ರಯೋಜನವೂ ಅಸಂಗತವೂ ಆಗುತ್ತದೆ. ಇವಾಗ 'ಆಕಾಶನಾಮ್ನಃ' ಎಂಬ ಸಂಗತಿಟೀಕೆಯು ಅತ್ಯಂತ ಅರ್ಥಬದ್ಧವಾಗುತ್ತದೆ.

ಹಿಂದಿನ ಅಧಿಕರಣದಿಂದ ಇರುವ ಸಂಗತಿಯನ್ನು 'ಅನಂತರಸಂಗತಿಃ' ಎಂಬ ಗ್ರಂಥದಿಂದ ವಿವರಿಸುತ್ತಿದ್ದಾರೆ. ಹಿಂದಿನ ಅಧಿಕರಣದಲ್ಲಿ ಮಾಡಿದ ಸಿದ್ಧಾಂತವನ್ನು ಆಶ್ರಯಿಸಿ ಆ ಸಿದ್ಧಾಂತನ್ಯಾಯದಿಂದ ಪರಿಹಾರವಾಗದ ಶಂಕೆಯನ್ನು ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆ. ನಿರವಕಾಶಲಿಂಗದಿಂದ ಸಾವಕಾಶಶ್ರುತಿಯನ್ನು ಬಾಧಿಸುವಂತಹ ನ್ಯಾಯವನ್ನು ಈ ಅಧಿಕರಣದಲ್ಲಿ ಸಿದ್ಧಾಂತನ್ಯಾಯವೆಂದು ಸಮರ್ಥಿಸಿದ್ದಾರೆ. ಈ ನ್ಯಾಯದಿಂದ ಅಧಿಕಾಶಂಕೆಯು ಪರಿಹಾರವಾಗುತ್ತದೆ. ಇದನ್ನು ಆತಿದೇಶಿಕೀಸಂಗತಿ ಎನ್ನುತ್ತಾರೆ.

'ಕೃತ್ವಾ ತ್ವಭ್ಯಧಿಕಾಶಂಕಾಂ ಪೂರ್ವಮೇವಾತಿದಿಶ್ಯತೇ ।

ತತ್ರಾತಿದೇಶಿಕೀ ಪ್ರೋಕ್ತಾ ...'

(ಅಭ್ಯಧಿಕಾಶಂಕೆಯನ್ನು ಮಾಡಿ ಪೂರ್ವನ್ಯಾಯದಿಂದಲೇ ಅತಿದೇಶಮಾಡಿದರೆ ಅಲ್ಲಿ ಆತಿದೇಶಿಕೀ ಸಂಗತಿಯೆಂದು ಹೇಳುತ್ತಾರೆ.) ಎಂಬ ಆತಿದೇಶಿಕೀಲಕ್ಷಣವನ್ನು ಒಪ್ಪಿಕೊಳ್ಳಬೇಕು. 'ಚೇಷ್ಟಾ ಹಿ' ಎಂಬ ಅನುವ್ಯಾಖ್ಯಾನದಿಂದ ಈ ಸಂಗತಿಯು ಸ್ಪಷ್ಟವಾಗುತ್ತದೆ.

ಪಾಂಡುರಂಗಿಕೇಶವಾಚಾರ್ಯವಿರಚಿತ

## ಗುರುರಾಜೀಯಮ್ (ಭಾವದೀಪ)

**गुरुराजीयम्** – ॐ आकाशस्तल्लिङ्गात् ॐ ॥ एतदधिकरणोपाधिमाह – **अत्राधिभूतेति** ॥ विभक्त्यर्थेऽधीत्यव्ययम् । तथा च भूतेष्वित्यधिभूतम् । अधिभूतं गताः अधिभूतगताः । भूतेषु वर्तमाना इत्यर्थ इति द्रष्टव्यम् ।

नन्वेवं सूत्रविरोध इत्यत आह – **भूतेष्विति** ॥ 'अत आकाश-शब्दोक्तस्तद्देवोत्र विनायकः' इत्यनुव्याख्यानोक्तावपि ''महामान्'' इत्यादि

तत्रैवोक्तत्वात् ''इन्द्रियेभ्यः परा ह्यर्थाः'' इत्युक्तरीत्या भूतोत्पत्तिप्रसङ्गे तदुत्तमाभिमानिप्राधान्यक्रमेणोत्पादकस्योत्पाद्यात् प्राधान्यक्रमेण च जडभूतस्य तदभिमानिनश्चात्राप्राधान्यं ज्ञेयम् ॥ अत एवेति सूत्रस्थाकाशशब्दस्यापि भूतगत-पृथिव्यादिशब्दान्तरोपलक्षकत्वादेवेत्यर्थः । ननु तथाप्यस्मिन्नधिकरणे स्वभाव-प्रवृत्तिनिमित्तकानां शब्दानां समन्व्यप्रतिपादनेनाधिभूतगतानां शब्दानामेव समन्वयाप्रतिपादनादुपसंहारस्थाधिभौतिकसर्वशब्दोपलक्षकः इत्यादिटीकाऽनुपपन्नैव इत्यत आह – यद्यपीति ॥ तथा च टीकायामाधिभौतिकोपलक्षकतोक्तिरयुक्तेति शेषः ।

ननु पूर्वाधिकरणवदत्राप्यनन्तत्वलिङ्गसमन्वयः किं नोच्यते? इत्याशङ्क्य निषेधति – नचेति ॥ वैषम्येण परिहरति – पूर्वत्रेति ॥

ननु पूर्वत्रान्तस्स्थत्वरूपलिङ्गसमन्वयेनेन्द्राद्यनेकनामसमन्वयसिद्धिवत् अत्रा- प्यनन्तत्वादिलिङ्गसमन्वयेन पृथिव्याद्यधिभूतगतसर्वगतशब्दसमन्वयसिद्धेः सम्भवेन कथमेतदित्यत आह – अनन्तत्वादेरिति ॥ अव्यवहितपूर्वाधिकरणेन सङ्गतिमाह – अनन्तरेति ॥

## ಸಾರ

ಈ ಅಧಿಕರಣದಲ್ಲಿ ಭೂತಗಳಲ್ಲಿ ಪ್ರಸಿದ್ಧಗಳಾದ 'ಆಕಾಶ' ಮುಂತಾದ ನಾಮಗಳನ್ನು ಸಮನ್ವಯ ಮಾಡುತ್ತಾರೆ. ಪಂಚಭೂತಗಳಲ್ಲಿ ಮೊದಲನೆಯದಾದ್ದರಿಂದ ಆಕಾಶವು ಮುಖ್ಯವಾಗಿದೆ. ಆದ್ದರಿಂದ ಅದರ ಸಮನ್ವಯವನ್ನು ಸೂತ್ರದಲ್ಲಿ ಹೇಳಿ ಉಳಿದವುಗಳನ್ನು ಉಪಲಕ್ಷಣಯಾ ಸಮನ್ವಯ ಮಾಡುತ್ತಾರೆ. ವಸ್ತುತಃ ಅಧಿಕರಣದ ನ್ಯಾಯಕ್ಕೆ ವಿಷಯವಾದ ಭೂತಗಳಿಗಿಂತ ಭಿನ್ನವಾದ ಶಬ್ದಗಳನ್ನು ಸಮನ್ವಯ ಮಾಡುತ್ತಾರೆ ಎನ್ನಬಹುದು. ಆದರೆ ಆಕಾಶಾದಿಗಳು ಹೇಗೆ ಸ್ವಭಾವಭೂತವಾದ ಪ್ರವೃತ್ತಿನಿಮಿತ್ತವುಳ್ಳದ್ದೋ ಹಾಗೆ ಉಳಿದ ಶಬ್ದಗಳು ಆಗಿಲ್ಲ. ಹಾಗಾಗಿ ಅಧಿಭೂತಗತಶಬ್ದಗಳನ್ನು ಸಮನ್ವಯ ಮಾಡುತ್ತಾರೆ ಎಂದು ಹೇಳಿದ್ದಾರೆ. ಹಿಂದಿನ ಅಧಿಕರಣದಲ್ಲಿ 'ಅಂತಸ್ಥತ್ವ' ಲಿಂಗವನ್ನು ಸಮನ್ವಯ ಮಾಡಿದಂತೆ ಈ ಅಧಿಕರಣದಲ್ಲಿಯೂ 'ಅನಂತತ್ವ' ಲಿಂಗವನ್ನು ಸಮನ್ವಯ ಮಾಡಬಹುದಿತ್ತಲ್ಲವೆ? ಎಂದರೆ ಹಿಂದಿನ ಅಧಿಕರಣದಲ್ಲಿ ಒಂದು ಲಿಂಗವನ್ನು ಸಮನ್ವಯ ಮಾಡಿದ್ದರಿಂದ ಬಹಳ ನಾಮಗಳ ಸಮನ್ವಯ ಮಾಡಲಾಗಿತ್ತು. ಈ ಅಧಿಕರಣದಲ್ಲಿ 'ಆಕಾಶ' ಎಂಬ ಒಂದು ನಾಮಸಮನ್ವಯವನ್ನು ಮಾಡುವುದರಿಂದ ಬಹಳ ಲಿಂಗಗಳ ಸಮನ್ವಯ ಸಿದ್ಧಿಸುತ್ತದೆ. ಹಾಗಾಗಿ ಇಲ್ಲಿ ನಾಮವನ್ನೇ ಸಮನ್ವಯ ಮಾಡಿದ್ದಾರೆ.

ಅಂತರಧಿಕರಣದ ಅನಂತರ ಆಕಾಶಾಧಿಕರಣವೇ ಏಕೆ?

**तात्पर्यचन्द्रिका**

यद्यपि 'अत एव प्राणः' इत्याद्यधिकरणत्रयेऽप्यन्तरधिकरणन्यायातिदेशः, तथाऽप्यधिकाशङ्काक्रमात्तत्क्रमः । शङ्काक्रमश्च तत्र तत्र वक्ष्यते ।

यद्वा – "आकाशाद्वायुः वायोरग्निः" इति श्रुत्या आकाशादेर्वाय्वादि-कारणत्वोक्तेः तदनुसारेण आकाशप्राणज्योतिरधिकरणानां क्रमः । "को ह्येवान्यात्" इति भाष्ये तु "आकाश इति होवाच" इत्यत्र आकाशस्य विष्णवन्यत्वे "यदेष आकाशः" इत्यत्रापि अन्यः स्यादिति, आनन्दमयोप्यन्यः, प्रसज्येतेति पूर्वपक्षे आनन्दमयाधिकरणाक्षेपात्, सिद्धान्ते च तत्समाधानात्सफलोऽयं विचार इत्युक्तम् ।

नच यथा सिद्धान्ते "आकाश इति होवाच" इत्यत्राकाशशब्दस्य ब्रह्म-परत्वेऽपि, "आकाशः सम्भूतः" इत्यत्र भूतपरत्वं, तथा सिद्धान्ते "यदेष आकाशः" इत्यत्रापि भूतपरत्वमस्तु ।

यदि तु "यदेषः" इत्यत्र ब्रह्मलिङ्गात् ब्रह्मपरता, तर्हि यथा सिद्धान्ते सम्भूतवाक्ये आकाशशब्दस्य भूतलिङ्गात् भूतपरत्वेऽपि "यदेषः" इति वाक्ये ब्रह्मलिङ्गात् ब्रह्मपरता, तथा पूर्वपक्षे "इति होवाच" इति वाक्ये भूतपरत्वेऽपि "यदेषः" इत्यत्र ब्रह्मलिङ्गात् ब्रह्मपरता भविष्यतीति, नानन्दमयाधिकरणाक्षेप इति शङ्क्यम्, सिद्धान्ते सम्भूतवाक्ये सम्भूतत्ववत् "यदेषः" इति वाक्ये कस्यचित् भूतलिङ्गस्य अभावात्, भूते प्रसिद्धिमात्रस्य चैतत्सिद्धान्तेन निरासात् ।

"इति होवाच" इति वाक्ये च पूर्वपक्षे प्रबलभूतलिङ्गाभावात्, ब्रह्मलिङ्गानामेव च भावात् । भूते प्रसिद्धिमात्रेण ब्रह्मलिङ्गानामन्यथाकरणस्य "यदेषः" इति वाक्येऽपि साम्यात् ।

तस्माद्युक्तं प्रयोजनम् । एवमुत्तरत्रापि द्रष्टव्यम् ।

ಪರಿಪೂರ್ಣಚಂದ್ರಿಕಾ

ಅನುವಾದ - ಪ್ರಶ್ನೆ - ಹಿಂದಿನ ಅಂತರಧಿಕರಣದಿಂದ ಈ ಆಕಾಶಾಧಿಕರಣಕ್ಕೆ ಆತಿ-ದೇಶಿಕೀಸಂಗತಿಯೆಂದು ಹೇಳಿದಿರಿ. ಆದರೆ ಮುಂದಿನ ಪ್ರಾಣಾಧಿಕರಣ ಮತ್ತು ಜ್ಯೋತಿರಧಿಕರಣ-ಗಳಲ್ಲಿಯೂ ಅಂತರಧಿಕರಣದ ಸಿದ್ಧಾಂತನ್ಯಾಯವನ್ನೇ ಅತಿದೇಶ ಮಾಡುತ್ತಾರೆ. ಹಾಗಾಗಿ ಆಕಾಶಾದಿ ಮೂರು ಅಧಿಕರಣಗಳಿಗೂ ಅಂತರಧಿಕರಣದಿಂದ ಆತಿದೇಶಿಕೀಸಂಗತಿಯು ಸಮಾನವಾಗಿದೆ. ಹೀಗಿರುವಾಗ ಆಕಾಶಾಧಿಕರಣವನ್ನೇ ಮೊದಲು ಹೇಳಲು ಏನು ಕಾರಣ?

ಉತ್ತರ - ವಸ್ತುತಃ ಮೂರೂ ಅಧಿಕರಣಗಳಿಗೆ ಸಂಗತಿಯು ಸಮಾನವಾಗಿದೆ. ಆದರೆ ಅಧಿಕಾ-ಶಂಕೆಯಲ್ಲಿರುವ ಕ್ರಮವನ್ನು ಅನುಸರಿಸಿ ಅಧಿಕರಣದಲ್ಲಿಯೂ ಕ್ರಮವು ಅನುಗತವಾಗಿದೆ. ಹಿಂದಿನ ಅಧಿಕರಣದಲ್ಲಿ ಮಾಡಿರುವ ಶಂಕೆಯನ್ನು ಅವಲಂಬಿಸಿ ಮುಂದಿನ ಅಧಿಕರಣಗಳ ಶಂಕೆಯು ಹೊರಟಿರುತ್ತದೆ ಎಂದು ಅಭಿಪ್ರಾಯ. ಶಂಕಾಕ್ರಮದ ಬಗ್ಗೆ ಪ್ರಸಂಗ ಬಂದಾಗ ಮುಂದೆ ವಿವರಿಸುತ್ತೇವೆ. ಅಥವಾ -- ಶ್ರುತಿಯಲ್ಲಿ 'ಆಕಾಶಾದ್ವಾಯುಃ' 'ವಾಯೋರಗ್ನಿಃ' ಎಂಬುದಾಗಿ ವಾಯು ಮೊದಲಾದವುಗಳಿಗೆ ಆಕಾಶಾದಿಗಳನ್ನು ಕಾರಣವನ್ನಾಗಿ ಹೇಳಲಾಗಿದೆ. ಇಲ್ಲಿ ಮೊದಲು ಆಕಾಶವನ್ನು ಅನಂತರ ವಾಯುವನ್ನು ಆದರ ನಂತರ ಅಗ್ನಿಯನ್ನು ಕಾರಣವನ್ನಾಗಿ ಹೇಳಿದ್ದರಿಂದ ಅಧಿ-ಕರಣಗಳಲ್ಲಿಯೂ ಅದೇ ಕ್ರಮವನ್ನು ಅನುಸರಿಸಲಾಗಿದೆ. ಆಕಾಶಾಧಿಕರಣ, ಪ್ರಾಣಾಧಿಕರಣ, ಜ್ಯೋತಿರಧಿಕರಣ ಎಂಬುದಾಗಿ ಶ್ರುತಿಯಲ್ಲಿರುವ ಪದಗಳಿಗೆ ಅನುಗುಣವಾಗಿ ಅಧಿಕರಣಗಳನ್ನು ಜೋಡಿಸಲಾಗಿದೆ.

ಪ್ರಶ್ನೆ - ನೀವು ಅಂತರಧಿಕರಣದಿಂದ ಸಂಗತಿ ಹೇಳುತ್ತಿದ್ದೀರಿ. ಆದರೆ 'ಕೋ ಹ್ಯೇವಾನ್ಯಾತ್' ಎಂಬ ಭಾಷ್ಯದಲ್ಲಿ ಆನಂದಮಯಾಧಿಕರಣದಿಂದ ಸಂಗತಿಯನ್ನು ತೋರಿಸಿದ್ದಾರಲ್ಲ.

ಉತ್ತರ - 'ಆಕಾಶ ಇತಿ ಹೋವಾಚ' ಎಂಬ ಶ್ರುತಿಯಲ್ಲಿ ಆಕಾಶವು ವಿಷ್ಣುವಿಗಿಂತ ಬೇರೆಯಾದರೆ 'ಯದೇಷ ಆಕಾಶಃ' ಎಂಬಲ್ಲಿಯೂ ಬೇರೆ ಪದಾರ್ಥವೇ ಆಕಾಶವಾಗುತ್ತದೆ. ಯದೇಷ ಆಕಾಶ ಎಂಬಲ್ಲಿ ವಿಷ್ಣುವು ಆಕಾಶವಾಗದೇ ಇರುವುದರಿಂದ ಆನಂದಮಯನೂ ಸಹ ಬೇರೆ ಪದಾರ್ಥವೇ ಆಗುತ್ತದೆ, ವಿಷ್ಣುವು ಆಗುವುದಿಲ್ಲ. ಹೀಗೆ ಆನಂದಮಯಾಧಿಕರಣವನ್ನು ಆಕ್ಷೇಪಿಸಿ ಪೂರ್ವಪಕ್ಷ ಮಾಡಲಾಗಿದೆ. ಸಿದ್ಧಾಂತದಲ್ಲಿ ಇದಕ್ಕೆ ಪರಿಹಾರವನ್ನು ಮಾಡಲಾಗಿದೆ. ಆದ್ದರಿಂದ ಆಕಾಶಾಧಿಕರಣದ ವಿಚಾರವು ಸಾರ್ಥಕವೆಂದು ಭಾಷ್ಯದ ಅಭಿಪ್ರಾಯ ಹೊರತು ಆನಂದಮಯಾಧಿಕರಣದಿಂದ ಸಂಗತಿ ತೋರಿಸುವುದರಲ್ಲಿ ಭಾಷ್ಯಕ್ಕೆ ಅಭಿಪ್ರಾಯವಿಲ್ಲ. ಭಾಷ್ಯಕಾರರಿಗೂ ಸಹ ಅಂತರಧಿಕರಣದಿಂದ ಸಂಗತಿ ಹೇಳುವುದರಲ್ಲಿ ಅಭಿಪ್ರಾಯವಿದೆ.

ಪ್ರಶ್ನೆ - 'ಆಕಾಶ ಇತಿ ಹೋವಾಚ' ಎಂಬಲ್ಲಿರುವ ಆಕಾಶಶಬ್ದವು ಬ್ರಹ್ಮಪರವೆಂದು ಸಿದ್ಧಾಂತದಲ್ಲಿ ಹೇಳುತ್ತೀರಿ. ಆದರೆ ಬ್ರಹ್ಮನಲ್ಲಿ ಸಂಭೂತತ್ವವು ಕೂಡದಿರುವುದರಿಂದ 'ಆಕಾಶಃ ಸಂಭೂತಃ'

ಎಂಬಲ್ಲಿ ಆಕಾಶಶಬ್ದವನ್ನು ಭೂತಪರವೆನ್ನುತ್ತೀರಿ. ಹೀಗೆ ಈ ತೈತ್ತಿರೀಯಶ್ರುತಿಯಲ್ಲಿರುವ ಕೆಲವು ಬ್ರಹ್ಮಪರವೆಂದು, ಇನ್ನು ಕೆಲವು ಆಕಾಶಶಬ್ದಗಳು ಭೂತಪರವೆಂದೂ ಹೇಗೆ ಹೇಳುತ್ತೀರೋ ಅದರಂತೆ ಛಾಂದೋಗ್ಯದ 'ಯದೇಷ ಆಕಾಶಃ' ಎಂಬಲ್ಲಿರುವ ಆಕಾಶಶಬ್ದವು ಭೂತಪರವಾಗಲಿ?

ಉತ್ತರ - 'ಯದೇಷ ಆಕಾಶಃ' ಎಂಬ ಛಾಂದೋಗ್ಯವಾಕ್ಯದಲ್ಲಿ ಬ್ರಹ್ಮಲಿಂಗವು ಕೇಳಿಸುತ್ತಿದೆ. 'ಆಕಾಶಃ ಸಂಭೂತಃ' ಎಂಬ ತೈತ್ತಿರೀಯವಾಕ್ಯದಲ್ಲಿ ಭೂತಲಿಂಗವು ಕೇಳಿಸುತ್ತಿದೆ. ಹಾಗಾಗಿ ಛಾಂದೋಗ್ಯವಾಕ್ಯವು ಬ್ರಹ್ಮಪರವೇ ಆಗುತ್ತದೆ. ತೈತ್ತಿರೀಯವಾಕ್ಯವು ಭೂತಪರವೇ ಆಗುತ್ತದೆ.

ಪ್ರಶ್ನೆ - ಹಾಗಾದರೆ ಭೂತಲಿಂಗವಿರುವುದರಿಂದ 'ಆಕಾಶಃ ಸಂಭೂತಃ' ಎಂಬಲ್ಲಿರುವ ಆಕಾಶಶಬ್ದವು ಭೂತಪರವಾಗುತ್ತದೆಯೆಂದು, ಬ್ರಹ್ಮಲಿಂಗವಿರುವುದರಿಂದ 'ಯದೇಷ' ಎಂಬ ವಾಕ್ಯವು ಬ್ರಹ್ಮಪರವೆಂದು ಸಿದ್ಧಾಂತ ಮಾಡಿದ್ದೀರಿ. ಹಾಗೆಯೇ ಪೂರ್ವಪಕ್ಷದಲ್ಲಿಯೂ 'ಆಕಾಶ ಇತಿ ಹೋವಾಚ' ಎಂಬ ವಾಕ್ಯದಲ್ಲಿರುವ ಆಕಾಶ ಶಬ್ದವು ಭೂತಪರವಾದರೂ, 'ಯದೇಷ' ಎಂಬ ವಾಕ್ಯದಲ್ಲಿ ಬ್ರಹ್ಮಲಿಂಗ ಇರುವುದರಿಂದ ಬ್ರಹ್ಮಪರವಾಗಲಿ. ಅಂದರೆ ಪೂರ್ವಪಕ್ಷ ಮಾಡುವಾಗಲೇ 'ಯದೇಷ' ಎಂಬ ವಾಕ್ಯವು ಬ್ರಹ್ಮಪರವೆಂದು ಸಿದ್ಧವಾಗಿದೆ. ಪುನಃ ಬ್ರಹ್ಮಪರವಲ್ಲವೆಂದು ಆನಂದಮಯಾಧಿಕರಣದ ಮೇಲೆ ಹೇಗೆ ಆಕ್ಷೇಪ ಮಾಡುತ್ತೀರಿ?

ಉತ್ತರ - ಹೀಗೆ ಪ್ರಶ್ನಿಸಬಾರದು. 'ಆಕಾಶಃ ಸಂಭೂತಃ' ಎಂಬಲ್ಲಿ ಸಂಭೂತತ್ವಲಿಂಗ-ವಿರುವುದರಿಂದಷ್ಟೇ ಭೂತಪರವೆಂದು ಹೇಳುತ್ತಿದ್ದೇವೆ. ಇದರಂತೆ 'ಯದೇಷ ಆಕಾಶಃ' ಎಂಬ ವಾಕ್ಯದಲ್ಲಿ ಭೂತಪರವಾದ ಯಾವ ಲಿಂಗಗಳೂ ಕೇಳಿಸುತ್ತಿಲ್ಲ. ಹೀಗಿರುವಾಗ 'ಆಕಾಶಃ ಸಂಭೂತಃ' ಎಂಬಂತೆ 'ಯದೇಷ ಆಕಾಶಃ' ಎಂಬ ವಾಕ್ಯವೂ ಭೂತಪರವಾಗಲಿ? ಎಂಬ ನಿಮ್ಮ ಪ್ರಶ್ನೆಯಲ್ಲಿ ಅರ್ಥವೇ ಇಲ್ಲ.

ಪ್ರಶ್ನೆ - 'ಯದೇಷ ಆಕಾಶಃ' ಎಂಬಲ್ಲಿ ಸಂಭೂತತ್ವ ಲಿಂಗವಿಲ್ಲದಿರಬಹುದು. ಆದರೆ ಲೋಕ-ಪ್ರಸಿದ್ಧಿಯಂತೂ ಸ್ಪಷ್ಟವಾಗಿ ಕಾಣಿಸುತ್ತಿದೆ. ಭೂತಾಕಾಶದಲ್ಲಿರುವ ಈ ಲೋಕಪ್ರಸಿದ್ಧಿಯಿಂದಷ್ಟೇ ಭೂತಪರವಾಗಲಿ? ಎಂದು ನಮ್ಮ ಅಭಿಪ್ರಾಯ.

ಉತ್ತರ - ಲೋಕಪ್ರಸಿದ್ಧಿ ಮಾತ್ರವನ್ನು ಆಕಾಶಾಧಿಕರಣದ ಸಿದ್ಧಾಂತನ್ಯಾಯದಿಂದ ನಿರಾಸಮಾಡುವವರಿದ್ದೇವೆ. ಮತ್ತು 'ಆಕಾಶ ಇತಿ ಹೋವಾಚ' ಎಂಬ ವಾಕ್ಯದಲ್ಲಿ ಪ್ರಬಲವಾದ ಭೂತಲಿಂಗವು ಕೇಳಿಸುತ್ತಿಲ್ಲ. ಹಾಗಾಗಿ ನಿಮ್ಮಿಂದ ಪೂರ್ವಪಕ್ಷವನ್ನೇ ರಚಿಸಲಾಗದು. ಅಷ್ಟೇ ಅಲ್ಲದೆ ಬ್ರಹ್ಮಲಿಂಗವೇ ಸ್ಪಷ್ಟವಾಗಿ ಕಾಣಿಸುತ್ತಿದೆ.

ಪ್ರಶ್ನೆ - ಭೂತಾಕಾಶದಲ್ಲಿ ಪ್ರಸಿದ್ಧಿ ಇರುವುದರಿಂದ 'ಆಕಾಶ ಇತಿ ಹೋವಾಚ' ಎಂಬಲ್ಲಿನ ಬ್ರಹ್ಮಲಿಂಗವನ್ನು ಅನ್ಯಥಾ ಅರ್ಥೈಸಬೇಕಲ್ಲವೆ?

ಉತ್ತರ - ಹಾಗಾದರೆ 'ಯದೇಷ ಆಕಾಶಃ' ಎಂಬ ವಾಕ್ಯದಲ್ಲಿರುವ ಬ್ರಹ್ಮಲಿಂಗವನ್ನು ಬೇರೆ ರೀತಿಯಾಗಿಯೇ ಅರ್ಥೈಸಬಹುದಾದ್ದರಿಂದ ಈ ವಾಕ್ಯವು ವಿಷ್ಣುಪರವಾಗದಿರಬೇಕಾದೀತು. ಆದ್ದರಿಂದ ಆನಂದಮಯಾಧಿಕರಣವನ್ನು ಅವಲಂಬಿಸಿ ಆಕಾಶಾಧಿಕರಣದ ಪ್ರವೃತ್ತಿಯು ಸಾರ್ಥಕವಾಗುತ್ತದೆ. ಇದರಂತೆ ಮುಂದಿನ ಅಧಿಕರಣಗಳಲ್ಲಿಯೂ ಅನುಸಂಧಾನ ಮಾಡಿಕೊಳ್ಳಬೇಕು.

### ಕಠಿಣಪದಾರ್ಥ

ಅತಿದೇಶಃ = ವರ್ಗಾಯಿಸುವಿಕೆ = ಒಂದರ ಧರ್ಮವನ್ನು ಮತ್ತೊಂದರಲ್ಲಿ ಹೇಳುವಿಕೆ ಮೀಮಾಂಸಕಮತದಂತೆ ಅತಿದೇಶವು ಐದು ವಿಧ. (೧) ಶಾಸ್ತ್ರಾತಿದೇಶ (೨) ಕಾರ್ಯಾತಿದೇಶ (೩) ನಿಮಿತ್ತಾತಿದೇಶ (೪) ವ್ಯಪದೇಶಾತಿದೇಶ (೫) ರೂಪಾತಿದೇಶ. ಅಧಿಕಾಶಂಕಾಕ್ರಮಾತ್ = ಅಧಿಕಾಶಂಕೆಗಳಲ್ಲಿರುವ ಪ್ರಾಬಲ್ಯವನ್ನು ಅನುಸರಿಸಿ (ಸೋಪಾನಾರೋಹಣ ನ್ಯಾಯದಂತೆ); ತದನುಸಾರೇಣ = ಶ್ರುತಿಯಲ್ಲಿರುವ ಶಬ್ದಕ್ರಮವನ್ನು ಅನುಸರಿಸಿ; ಸಫಲಃ = ಸಾರ್ಥಕವಾಗಿದೆ; 'ನಚ ಶಂಕ್ಯಮ್' ಎಂಬಲ್ಲಿ ಅನ್ವಯ; ಬ್ರಹ್ಮಲಿಂಗಾತ್ = ಆನಂದಮಯತ್ವವೆಂಬ ಬ್ರಹ್ಮಲಿಂಗವಿರುವುದರಿಂದ; ಸಂಭೂತವಾಕ್ಯೇ = 'ಆಕಾಶಃ ಸಂಭೂತಃ' ಎಂಬ ವಾಕ್ಯದಲ್ಲಿ; ಭೂತಲಿಂಗಾತ್ = ಉತ್ಪತ್ತಿಮತ್ತ್ವ, ವಿವರತ್ವ, ಮೊದಲಾದ ಲಿಂಗಗಳಿರುವುದರಿಂದ; ನಾನಂದಮಯಾಧಿ-ಕರಣಾಕ್ಷೇಪಃ = ಆನಂದಮಯಾಕರಣದ ಸಿದ್ಧಾಂತವನ್ನು ಆಕ್ಷೇಪಿಸಲಾಗುವುದಿಲ್ಲ. ಏತತ್ಸಿದ್ಧಾಂತೇನ = ನಿರವಕಾಶಲಿಂಗದಿಂದ ಅನ್ಯತ್ರಪ್ರಸಿದ್ಧಿ ಎಂಬ ರೂಢಿಗೆ ಬಾಧವನ್ನು ಹೇಳುವ ಆಕಾಶಾಧಿಕರಣದ ಸಿದ್ಧಾಂತದಿಂದ; ಪ್ರಯೋಜನಮ್ = ಪೂರ್ವಪಕ್ಷ ಮತ್ತು ಸಿದ್ಧಾಂತಗಳ ಪ್ರಯೋಜನವು.

**प्रकाशः** – नन्वेवमुत्तरेषामपि पूर्वानन्तर्यं स्यात्, न तु व्यवधानमित्याशङ्क्याह – **यद्यपीति** ॥ 'तदनुसारेण' श्रुतिक्रमानुसारेण । वायोरेवाध्यात्मं प्राणत्वाद् अग्निज्योतिश्शब्दयोरेकार्थत्वादिति भावः ।

ननु यदि पूर्वेणातिदेशिकीसङ्गतिः, तर्हि – '' 'को ह्येवान्यात् कः प्राण्यात् यदेष आकाश आनन्दो न स्यात्' इत्याकाशस्याऽऽनन्दमयत्वे हेतुरुक्तः, न तु विष्णोरिति न मन्तव्यम्'' इत्यानन्दमयाधिकरणाक्षेपसङ्गतिपरभाष्यं विरुध्येत इत्यतः तद्भाष्यं न सङ्गतिपरं, किन्तु फलमात्रपरमिति भावेनाह – **को ह्येवा-न्यादितीति** ॥ 'अयं विचारः' आकाशस्य विष्णुत्वविचारः । एतेन टीकाऽपीत्थमेव व्याख्येयेत्युक्तं भवति । अनन्तरसङ्गतिस्तूत्तरप्रस्थानाद्बोध्येति तात्पर्यमिति भावः ।

ननु यदुक्तं भाष्यटीकयोः, ''आकाश इति होवाच'' इत्यत्राकाशो भूतं चेत्, ''को ह्येवान्यात्'' इत्यत्रत्योऽप्याकाशः भूतं स्यात् । ततस्तस्य विष्णुत्वसिद्धये

"आकाश इति होवाच" इत्ययमाकाशो विष्णुरिति विचार्यत इति साफल्यं विचारस्येति, तदयुक्तं, छान्दोग्यस्थाकाशस्य विष्णुत्वेऽपि "को ह्येवान्यात्" इत्यत्रत्यस्य विष्णुत्वासिद्ध्या विचारस्य साफल्यायोगादिति भावेन दृष्टान्तोक्तिपूर्वमाक्षिपति – **नचेति** ॥ "शङ्क्यम्" इत्यन्वयः ॥ **भूतपरत्वमिति** ॥

ननु, "कारणत्वेन चाकाशादिषु" इत्यधिकरणे सम्भूतवाक्यगताकाशादिशब्दस्य ब्रह्मपरत्वं वक्ष्यते । यद्वक्ष्यति "भूतपरत्वे शङ्किते तन्निरासः" इति । तथा च कथं भूतपरत्वोक्तिः? इति चेत् सत्यम्; तत्र भूतपरत्वापरित्यागेनैव ब्रह्मपरत्वाभिधानेन भूतपरत्वस्यापि सत्त्वात् । अन्यथा भूतोत्पत्त्यसिद्धिप्रसङ्गात् । वाक्यान्तरस्याप्येतत्तुल्यत्वात् । अत एवोक्तं प्राक् – "प्राबल्यं हि तस्य शब्दस्य तद्युक्तवाक्यस्य वाऽपरमुख्यवृत्त्याऽन्यपरत्वं विनाऽनुपपद्यमानत्वम्" इति ॥ अत एवानुव्याख्याने – 'भूतं भूताभिमानी च तद्देहोऽन्तर्नियामकः ।' इत्युक्तमिति भावः ।

ननु सम्भूतवाक्ये भूतलिङ्गाद् भूतपरत्वेऽपि "को ह्येवान्यात्" इत्यत्र जगच्चेष्टकत्वादिब्रह्मलिङ्गात् ब्रह्मपरता एतदधिकरणसिद्धान्तन्यायेन स्यात् । तथा च सिद्धान्ते प्रयोजनं सेत्स्यतीत्याशङ्क्य, तर्हि पूर्वपक्षे पूर्वोक्ताक्षेपरूपफलासिद्धिरिति सदृष्टान्तमाह – **यदि त्विति** ॥

ननु सम्भूतवाक्य इव "यदेषः" इति वाक्येऽप्युभयपरत्वमस्तु, आकाशश्रुतिब्रह्मलिङ्गयोः सत्त्वात् । तथा च तस्य भूतपरत्वेऽपि विष्णुपरत्वस्यापि सत्त्वात् आनन्दमयस्य विष्णुत्वे हेतुव्यपदेशत्वं सेत्स्यतीति चेन्न, सम्भूतवाक्येऽन्यपरत्वानभ्युपगतौ भूतोत्पत्त्याद्यसिद्धिवदिहान्यपरत्वाभावे बाधकाभावात् निरवकाशब्रह्मलिङ्गानुपपत्तेश्च । उक्तं च चतुर्थपादीयानुव्याख्याने –

> **तेषु तेषु पदार्थेषु रूढिरङ्गीकृता यतः ।**
> **प्रयोजनबहुत्वेन तस्य तस्याविरोधतः ।**
> **उपदेशादिसामर्थ्याद् विष्णौ शक्तिश्च गृह्यते ।**
> **तथाऽप्येतद्विरोधे तु तद् वाचित्वमपोद्यते ।**

इति । यत् तावत्सिद्धान्तिनं प्रत्यापादितं – सम्भूतवाक्य इव "को

ह्येवान्यात्'' इत्यत्रापि भूतपरत्वं स्यात् । तथा च न सिद्धान्तफलसिद्धिः' इति, तद्वैषम्यप्रदर्शनेन परिहरति – **सिद्धान्त इत्यादिना** ॥

ननु भूतलिङ्गाभावेऽपि भूते प्रसिद्धाकाशश्रुतिरस्तीत्यत आह – **भूत इति** ॥ **एतदिति** ॥ निरवकाशलिङ्गेनान्यत्र प्रसिद्धिबाधकथनरूपेणेत्यर्थः । एवं सिद्धान्ते ''आकाश इति होवाच'' इति वाक्यस्य ''को ह्येवान्यात्'' इति वाक्यस्य च तुल्यन्यायविषयताप्रदर्शनेन सिद्धान्ते प्रयोजनसिद्धिं समर्थ्य, इदानीं पूर्वपक्षेऽपि द्वयोस्तुल्यन्यायविषयताप्रदर्शनेन पूर्वपक्षफलं च समर्थयते – **इति होवाचेति** ॥ **साम्यादिति** ॥ तथा च पूर्वपक्षेऽपि ''इति होवाच'' इत्यस्य भूतपरत्वे ''को ह्येवान्यात्'' इत्यपि भूतपरं स्यादिति भावः । **प्रयोजनमिति** ॥ 'पूर्वपक्षे सिद्धान्ते च' इति शेषः । **एवमिति** ॥ यत्र यत्र पूर्वाक्षेपः प्राणज्योतिरधिकरणादौ, तत्र सर्वत्रापि तुल्यन्यायविषयतामापाद्य व्युत्पादनीयमित्यर्थः ।

ವಿವರಣೆ - ಶಂಕೆ - ಅಂತರಧಿಕರಣದ ಅನಂತರ ಆಕಾಶಾಧಿಕರಣವನ್ನೇ ನಿವೇಶಿಸಲು ಕಾರಣವಿಲ್ಲ. ಮುಂದಿನ ಪ್ರಾಣಾಧಿಕರಣ, ಹಾಗೂ ಜ್ಯೋತಿರಧಿಕರಣಗಳಿಗೂ ಸಹ ಅಂತರಧಿಕರಣದಿಂದ ಆತಿದೇಶಿಕೀಸಂಗತಿಯು ಇರುತ್ತದೆ. ಹೀಗೆ ಮೂರು ಅಧಿಕರಣಗಳಲ್ಲಿಯೂ ಅಂತರಧಿಕರಣದಿಂದ ಸಂಗತಿಯು ಸಮಾನವಾಗಿರುವಾಗ ಆ ಎರಡು ಅಧಿಕರಣಗಳನ್ನು ವ್ಯವಹಿತವಾಗಿ ಉಲ್ಲೇಖಿಸಲು ಏನು ಕಾರಣ?

ಸಮಾಧಾನ - ಎರಡು ಕಾರಣಗಳಿಂದ ಅಂತರಧಿಕರಣದ ಅನಂತರ ಆಕಾಶಾಧಿಕರಣವನ್ನು ಹೇಳಿದ್ದು ಸಮಂಜಸವಾಗಿದೆ. ೧) ಅಧಿಕಾಶಂಕೆಗಳಲ್ಲಿರುವ ಕ್ರಮವನ್ನು ಅನುಸರಿಸುವಿಕೆ. ೨) ಶ್ರುತಿಯಲ್ಲಿ ಇರುವ ಕ್ರಮವನ್ನು ಅನುಸರಿಸುವಿಕೆ ಎಂದು.

ಶ್ರುತಿಯಲ್ಲಿ 'ಆಕಾಶಾತ್ ವಾಯುಃ ವಾಯೋರಗ್ನಿಃ' ಎಂದು ಆಕಾಶ, ವಾಯು, ಅಗ್ನಿ ಶಬ್ದಗಳನ್ನು ಕ್ರಮವಾಗಿ ಹೇಳಲಾಗಿದೆ. ಆಕಾಶ ಶಬ್ದದ ಸಮನ್ವಯವನ್ನು ಆಕಾಶಾಧಿಕರಣದಲ್ಲಿ ಅಗ್ನಿ ಮತ್ತು ಜ್ಯೋತಿಶಬ್ದಗಳು ಪರ್ಯಾಯ ಪದಗಳಾದ್ದರಿಂದ ಅಗ್ನಿ ಶಬ್ದವನ್ನು ಜ್ಯೋತಿರಧಿಕರಣದಲ್ಲಿ ಸಮನ್ವಯ ಮಾಡಲಾಗಿದೆ. ಇನ್ನು ವಾಯುಶಬ್ದದ ಸಮನ್ವಯವನ್ನು ಪ್ರಾಣಾಧಿಕರಣದಲ್ಲಿ ಮಾಡಿದ್ದಾರೆ. ಆಧಿ-ಭೌತಿಕಶಬ್ದಗಳ ಸಮನ್ವಯವನ್ನು ಆಕಾಶಾಧಿಕರಣದಲ್ಲಿ ಮಾಡಿದಂತೆ ಆಧ್ಯಾತ್ಮಿಕಶಬ್ದಗಳ ಸಮನ್ವಯವನ್ನು ಪ್ರಾಣಾಧಿಕರಣದಲ್ಲಿ ಮಾಡಿದ್ದಾರೆ.

ಶಂಕೆ - ಹಿಂದಿನ ಅಧಿಕರಣದಿಂದ ಆತಿದೇಶಿಕೀಸಂಗತಿಯನ್ನು ಹೇಳುತ್ತಿದ್ದೀರಿ. ಹಾಗಾದಲ್ಲಿ ಭಾಷ್ಯದ ಮಾತಿಗೆ ವಿರೋಧ ಬರುತ್ತದೆ. 'ಕೋ ಹ್ಯೇವಾನ್ಯಾತ್ ಪ್ರಾಣ್ಯಾದ್ಯದೇಷ ಆಕಾಶ ಆನಂದೋ ನ ಸ್ಯಾತ್'

ಎಂಬ ಶ್ರುತಿಯಲ್ಲಿ ಆಕಾಶವು ಆನಂದವೆನ್ನಲು ಕಾರಣವನ್ನು ಹೇಳಿದ್ದಾರೆ. ಹೊರತು ವಿಷ್ಣುವು ಆನಂದಮಯನೆನ್ನಲು ಕಾರಣ ಹೇಳಿಲ್ಲ. ಆದ್ದರಿಂದ ಆನಂದಮಯಾಧಿಕರಣದಲ್ಲಿ ವಿಷ್ಣುವೇ ಆನಂದಮಯನಾಗಿದ್ದಾನೆಂಬ ಸಿದ್ಧಾಂತವು ಸರಿಯಲ್ಲವೆಂಬ ಆಕ್ಷೇಪವನ್ನು ಈ ಆಕಾಶಾಧಿಕರಣದಲ್ಲಿ ಪರಿಹರಿಸುತ್ತಿದ್ದಾರೆಂದು ಭಾಷ್ಯದಲ್ಲಿ ಹೇಳಿದ್ದಾರೆ. ಭಾಷ್ಯದ ಈ ಮಾತಿನಿಂದ ಆಕಾಶಾಧಿಕರಣಕ್ಕೆ ಆನಂದಮಯಾಧಿಕರಣದಿಂದಲೇ ನೇರವಾದ ಸಂಗತಿ ಇದೆಯೆಂದು ತಿಳಿಯುತ್ತದೆ. ಹೊರತು ಅವ್ಯವಹಿತವಾದ ಅಂತರಧಿಕರಣದಿಂದ ಸಂಗತಿಯು ತಿಳಿಯವುದಿಲ್ಲವಲ್ಲ?

ಸಮಾಧಾನ - ನೀವು ಹೇಳಿದ ಭಾಷ್ಯವಾಕ್ಯವು ಆಕಾಶಾಧಿಕರಣದ ಸಾರ್ಥಕ್ಯವನ್ನು ತೋರಿಸಲು ಹೊರಟಿದೆ ಹೊರತು ಸಂಗತಿಗಾಗಿ ಅಲ್ಲ. ಈ ವಿಷಯವನ್ನು 'ಕೋ ಹ್ಯೇವಾನ್ಯಾದಿತಿ' ಎಂಬ ಗ್ರಂಥದಿಂದ ಸಮರ್ಥಿಸಿದ್ದಾರೆ. ಭಾಷ್ಯಕ್ಕೆ ವ್ಯಾಖ್ಯಾನಿಸುವ ಟೀಕೆಯ ಮಾತಿಗೂ ಹೀಗೆಯೇ ವ್ಯಾಖ್ಯಾನಿಸಬೇಕು. ಉತ್ತರ ಪ್ರಸ್ಥಾನವೆನಿಸಿದ ಅನುವ್ಯಾಖ್ಯಾನ ಮತ್ತು ಸುಧೆಗಳಿಂದ ಅನಂತರಸಂಗತಿಯೆಂದು ತಿಳಿಯಬೇಕು. ಪೂರ್ವಪ್ರಸ್ಥಾನವಾದ ಭಾಷ್ಯಟೀಕೆಗಳಿಂದ ಪ್ರಯೋಜನವನ್ನು ತಿಳಿಯಬೇಕು. ಪ್ರಕೃತ ಗ್ರಂಥಕಾರರು ಅನುವ್ಯಾಖ್ಯಾನ ಸುಧೆಗಳನ್ನು ಅವಲಂಬಿಸಿ ಸಂಗತಿಯನ್ನು ತೋರಿಸಿದ್ದಾರೆ.

''ಆಕಾಶ ಇತಿ ಹೋವಾಚ'' ಎಂಬಲ್ಲಿರುವ ಆಕಾಶಶಬ್ದವು ಭೂತಪರವಾದರೆ 'ಕೋ ಹ್ಯೇವಾನ್ಯಾತ್' ಎಂಬಲ್ಲಿರುವ ಆಕಾಶ ಶಬ್ದವೂ ಸಹ ಭೂತಪರವಾಗಲಿ ಎಂಬ ಆಕ್ಷೇಪ ಬರುತ್ತದೆ. ಆದ್ದರಿಂದ 'ಕೋ ಹ್ಯೇವಾನ್ಯಾತ್' ಎಂಬಲ್ಲಿರುವ ಆಕಾಶಶಬ್ದವು ವಿಷ್ಣುವೆಂದು ನಿರ್ಣಯಿಸಲು 'ಆಕಾಶ ಇತಿ ಹೋವಾಚ' ಎಂಬಲ್ಲಿರುವ ಆಕಾಶಶಬ್ದವು ವಿಷ್ಣುಪರವೆಂದು ನಿರ್ಣಯಿಸಲೇ ಬೇಕು. ಅದಕ್ಕೋಸ್ಕರ ಆಕಾಶಾಧಿಕರಣವು ಸಾರ್ಥಕವಾಗಿದೆ' ಎಂದು ಭಾಷ್ಯ ಟೀಕೆಗಳಲ್ಲಿ ಹೇಳಿದ್ದಾರೆ. ಇದು ಹೇಗೆ ಸರಿ? ಏಕೆಂದರೆ ಛಾಂದೋಗ್ಯದಲ್ಲಿರುವ ಆಕಾಶವು ವಿಷ್ಣುವಾದರೆ ತೈತ್ತಿರೀಯದ 'ಕೋ ಹ್ಯೇವಾನ್ಯಾತ್' ಎಂಬಲ್ಲಿರುವ ಆಕಾಶ ಪದವು ಏಕೆ ವಿಷ್ಣುಪರವಾಗಬೇಕು? ಹಾಗಾಗಿ ಆಕಾಶಾಧಿಕರಣದ ವಿಚಾರವು ಸಾರ್ಥಕವೆಂದು ಸಮರ್ಥಿಸಲಾಗದೆಂಬ ಅಭಿಪ್ರಾಯದಿಂದ 'ನಚ' ಇತ್ಯಾದಿ ಗ್ರಂಥವು ಹೊರಟಿದೆ.

ಶಂಕೆ - 'ಆಕಾಶಃ ಸಂಭೂತಃ' ಎಂಬಲ್ಲಿರುವ ಆಕಾಶ ಪದವು ಭೂತಾಕಾಶಪರವಾಗುತ್ತದೆಂದು ಹೇಳುತ್ತಿದ್ದೀರಿ. ಆದರೆ 'ಕಾರಣತ್ವೇನ ಚಾಕಾಶಾದಿಷು' ಎಂಬ ಅಧಿಕರಣದಲ್ಲಿ ಸಂಭೂತವಾಕ್ಯದಲ್ಲಿರುವ ಆಕಾಶಪದವೂ ಸಹ ಬ್ರಹ್ಮಪರವೆಂದು ಸಮರ್ಥಿಸುತ್ತೀರಿ - 'ಭೂತಪರತ್ವೇ ಶಂಕಿತೇ ತನ್ನಿರಾಸಃ' (ಸಂಭೂತವಾಕ್ಯವು ಭೂತಪರವೆಂದು ಆಶಂಕಿಸಿದರೆ ಸೂತ್ರವು ಪರಿಹಾರ ಮಾಡುತ್ತಿದೆ) ಎಂದು. ಆದ್ದರಿಂದ ಸಂಭೂತವಾಕ್ಯವು ಭೂತಪರವೆಂದು ಇಲ್ಲಿ ಹೇಳುತ್ತಿರುವುದು ತಪ್ಪಲ್ಲವೇ?

ಸಮಾಧಾನ - 'ಆಕಾಶಃ ಸಂಭೂತಃ' ಎಂಬ ವಾಕ್ಯಕ್ಕೆ ಭೂತಪರತ್ವವನ್ನು ಬಿಡದೆ ಬ್ರಹ್ಮಪರತ್ವವನ್ನು ಒಪ್ಪುತ್ತೇವೆ. ಆದ್ದರಿಂದ ಈ ಅಧಿಕರಣದಲ್ಲಿ ಹೇಳಿದಂತೆ ಸಂಭೂತವಾಕ್ಯವು ಭೂತಪರವೂ ಆಗುತ್ತದೆ, ಕಾರಣತ್ವೇನ ಇತ್ಯಾದಿ ಸೂತ್ರದಲ್ಲಿ ಹೇಳುವಂತೆ ಬ್ರಹ್ಮಪರವೂ ಆಗುತ್ತದೆ. ಒಂದು ವೇಳೆ ಭೂತಪರವೆಂದು ಒಪ್ಪದಿದ್ದರೆ 'ಆತ್ಮನಿಂದ ಆಕಾಶವು ಹುಟ್ಟಿತು' ಎಂಬ ವಿಷಯವೇ ಸಿದ್ಧವಾಗದಿರಬೇಕಾದೀತು. ಆಕಾಶದ ಉತ್ಪತ್ತಿ ಎಂದು ಬೇರೆ ವಾಕ್ಯದಿಂದಲೂ ಸಮರ್ಥಿಸಲಾಗದು. ಬೇರೆ ವಾಕ್ಯವೂ ಸಹ ಭಗವತ್ಪರ-

ವಾಗುವುದರಿಂದ ಆಕಾಶದ ಉತ್ಪತ್ತಿಯನ್ನು ಹೇಗೆ ಹೇಳುತ್ತದೆ? ಎಂಬ ಆಕ್ಷೇಪವು ಅಲ್ಲಿಯೂ ಸಮಾನ. ಆದ್ದರಿಂದಲೇ ಹಿಂದೆ ಗ್ರಂಥಕಾರರು ಹೀಗೆ ಹೇಳಿದ್ದರು - ''ಪ್ರಾಬಲ್ಯಂ ಹಿ ತಸ್ಯ ಶಬ್ದಸ್ಯ ಪ್ರತ್ಯುಕ್ತವಾಕ್ಯಸ್ಯ ವಾ ಅಪರಮುಖ್ಯವೃತ್ತ್ಯಾ ಅನ್ಯಪರತ್ವಂ ವಿನಾ ಅನುಪಪದ್ಯಮಾನತ್ವಮ್ (ಶಬ್ದವು ಮತ್ತು ಶಬ್ದದಿಂದ ಕೂಡಿರುವ ವಾಕ್ಯವು ಅಪರಮುಖ್ಯವೃತ್ತಿಯಿಂದ ಅನ್ಯಪರವಾಗದೆ ಪ್ರಾಬಲ್ಯವು ಕೂಡುವುದಿಲ್ಲ)' ಎಂದು. ಅನುವ್ಯಾಖ್ಯಾನದಲ್ಲಿಯೂ ಸಹ 'ಭೂತಂ ಭೂತಾಭಿಮಾನೀ ಚ ತದ್ದೇಹೋಂತರ್ನಿಯಾಮಕಃ (ಭೂತಪದಾರ್ಥ, ಭೂತಾಭಿಮಾನಿದೇವತೆ, ಅಭಿಮಾನಿದೇವತೆಯ ದೇಹ, ನಿಯಾಮಕವಾದ ಭಗವ-ದ್ರೂಪ ಈ ನಾಲ್ಕೂ ಶಬ್ದಪ್ರತಿಪಾದ್ಯಗಳು) ಎಂದು ಹೇಳಿದ್ದಾರೆ.

ಸಂಭೂತವಾಕ್ಯವು ಹೇಗೆ ಉತ್ಪತ್ತಿಮತ್ವವೆಂಬ ಭೂತಲಿಂಗ ಇರುವುದರಿಂದ ಭೂತಪರವಾಗುತ್ತದೋ ಅದರಂತೆ 'ಕೋ ಹ್ಯೇವಾನ್ಯಾತ್' ಎಂಬ ವಾಕ್ಯದಲ್ಲಿಯೂ ಸಹ ಜಗಚ್ಚೇಷ್ಟಕತ್ವಾದಿ ಬ್ರಹ್ಮನ ಲಿಂಗಗಳು ಕೇಳಿಸುತ್ತಿರುವುದರಿಂದ ಬ್ರಹ್ಮಪರವಾಗುತ್ತದೆ. ಈ ಅಧಿಕರಣದ ಸಿದ್ಧಾಂತನ್ಯಾಯದಿಂದಲೇ ಈ ವಿಷಯವು ಸ್ಪಷ್ಟವಾಗುತ್ತದೆ. ಹೀಗೆ ಸಿದ್ಧಾಂತವು ಸಪ್ರಯೋಜನವಾದ್ದರಿಂದ ಅಧಿಕರಣವು ಸಾರ್ಥಕವೆಂದೇ ಹೇಳ-ಬಹುದು. ಹೀಗೆ ಹೇಳಿದಾಗ ಪೂರ್ವಪಕ್ಷದಲ್ಲಿ ಹಿಂದಿನ ಅಧಿಕರಣದಲ್ಲಿ ಹೇಳಿದ ಸಿದ್ಧಾಂತವನ್ನು ಆಕ್ಷೇಪ ಮಾಡುವಿಕೆಯೆಂಬ ಪ್ರಯೋಜನವು ಸಿದ್ಧವಾಗಲಿಲ್ಲ. ಎಂಬ ವಿಷಯವನ್ನು ದೃಷ್ಟಾಂತಪುರಃಸರವಾಗಿ 'ಯದಿ ತು' ಇತ್ಯಾದಿ ಗ್ರಂಥವು ಆಕ್ಷೇಪಿಸುತ್ತಿದೆ.

ಶಂಕೆ - ಸಂಭೂತವಾಕ್ಯವನ್ನು ಉಭಯಪರವೆಂದು ಹೇಳಿದಿರಿ. ಇದರಂತೆ 'ಯದೇಷ' ಇತ್ಯಾದಿ ವಾಕ್ಯವೂ ಸಹ ಉಭಯಪರವಾಗಲಿ. ಭೂತಾಕಾಶಪರವೆನ್ನಲು ರೂಢಿ ಎಂಬ ಆಕಾಶಶ್ರುತಿಯು ಇದೆ. ಬ್ರಹ್ಮಪರವೆನ್ನಲು ಆನಂದಮಯತ್ವವೆಂಬ ಬ್ರಹ್ಮಲಿಂಗವೂ ಇದೆ. ಆದ್ದರಿಂದ 'ಯದೇಷ' ಇತ್ಯಾದಿ ವಾಕ್ಯವು ಭೂತಪರವಾದರೂ ವಿಷ್ಣುಪರವೂ ಆಗುತ್ತದೆ. ಹೀಗೆ ಹೇಳಿದಾಗ ಆನಂದಮಯನು ವಿಷ್ಣು ಎಂಬಲ್ಲಿ ಇನ್ನೊಂದು ಹೇತುವನ್ನು ಸಹ ಹೇಳಿದಂತಾಗುತ್ತದಲ್ಲವೆ?

ಸಮಾಧಾನ - ಹಾಗೆ ಹೇಳಬಾರದು. ಸಂಭೂತವಾಕ್ಯವನ್ನು ಭೂತಾಕಾಶಪರವೆನ್ನದೆ ಬೇರೆ ಗತಿ-ಯಿಲ್ಲ. ಭೂತಾಕಾಶಪರವಾಗದಿದ್ದಲ್ಲಿ ಭೂತೋತ್ಪತ್ತ್ಯಾದಿಗಳೇ ಅಸಿದ್ಧವಾಗುತ್ತವೆ. ಅದರಂತೆ 'ಯದೇಷ' ಇತ್ಯಾದಿ ವಾಕ್ಯವು ಭೂತಾಕಾಶಪರವಾಗದಿದ್ದಲ್ಲಿ ಬೇರೇನೂ ಬಾಧಕಗಳು ಇರುವುದಿಲ್ಲ. ಭೂತಾಕಾಶ-ಪರತ್ವವು ಅನಿವಾರ್ಯವಲ್ಲ ಮತ್ತು ನಿರವಕಾಶವಾದ ಬ್ರಹ್ಮಲಿಂಗವು ಅನುಪಪನ್ನವಾದೀತು. ಇದನ್ನೇ ನಾಲ್ಕನೇ ಪಾದದ ಜ್ಯೋತಿರುಪಕ್ರಮಾಧಿಕರಣದ ಅನುವ್ಯಾಖ್ಯಾನವು ಹೇಳಿದೆ.

''ತೇಷು ತೇಷು ಪದಾರ್ಥೇಷು ರೂಢಿರಂಗೀಕೃತಾ ಯತಃ ।
ಪ್ರಯೋಜನಬಹುತ್ವೇನ ತಸ್ಯ ತಸ್ಯಾವಿರೋಧತಃ।
ಉಪದೇಶಾದಿಸಾಮರ್ಥ್ಯಾದ್ವಿಷ್ಣೌ ಶಕ್ತಿಶ್ಚ ಗೃಹ್ಯತೇ ॥
ತಥಾಪ್ಯೇತದ್ವಿರೋಧೇ ತು ತದ್ವಾಚಿತ್ವಮಪೋದ್ಯತೇ।

(ಆಯಾ ಅರ್ಥಗಳಲ್ಲಿ ಆಯಾ ಶಬ್ದಗಳಿಗೆ ರೂಢಿಯು ಅಂಗೀಕರಿಸಲ್ಪಟ್ಟಿದೆ. ವ್ಯುತ್ಪತ್ತಿಯ ಕೂಡುವಿಕೆ, ಲೋಕವ್ಯವಹಾರ ಮೊದಲಾದ ಅನೇಕ ಪ್ರಯೋಜನಗಳು ಬೇರೆಡೆ ರೂಢಿಯನ್ನು ಅಂಗೀಕರಿಸಿದರೆ ಮಾತ್ರ

ಹೇಳಲು ಸಾಧ್ಯ. ಆಯಾ ಅರ್ಥಗಳಿಗೆ ವಿರೋಧ ಬಾರದಂತೆ ಉಪದೇಶ ಮೊದಲಾದ ಸಾಮರ್ಥ್ಯದಿಂದ ವಿಷ್ಣುವಿನಲ್ಲಿ ಶಕ್ತಿಯನ್ನೂ ಅಂಗೀಕರಿಸಬೇಕು. ಶಬ್ದಗಳಿಗೆ ಉಭಯಾರ್ಥವನ್ನು ಒಪ್ಪಿದಾಗ ಪರಮಾತ್ಮಪರವಾಗುವ ವಿಷಯದಲ್ಲಿ ವಿರೋಧ ಬಂದರೆ ಮಾತ್ರ ಅನ್ಯಾರ್ಥದಲ್ಲಿ ರೂಢಿಯನ್ನು ಪರಿತ್ಯಾಗ ಮಾಡಬೇಕು).

''ಸಂಭೂತವಾಕ್ಯದಲ್ಲಿ ಉಭಯಪರತ್ವವನ್ನು ಒಪ್ಪಿದಂತೆ 'ಕೋ ಹ್ಯೇವಾನ್ಯಾತ್' ಎಂಬ ವಾಕ್ಯದಲ್ಲಿಯೂ ಉಭಯಪರತ್ವವನ್ನು ಒಪ್ಪಬೇಕು. ಆವಾಗ ಸಂಭೂತವಾಕ್ಯವು ಭೂತಪರವಾಗುವುದರಿಂದ ಸಿದ್ಧಾಂತ ಫಲವು ಸಿದ್ಧವಾಗುವುದಿಲ್ಲ'' ಎಂದು ಸಿದ್ಧಾಂತಿಗಳನ್ನು ಕುರಿತು ಹಿಂದೆ ಆಕ್ಷೇಪಿಸಲಾಗಿತ್ತು. ಆ ಆಕ್ಷೇಪವು ವಿಷಮವಾಗಿದೆ ಎಂದು 'ಸಿದ್ಧಾಂತೇ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

'ಕೋ ಹ್ಯೇವಾನ್ಯಾತ್'' ಎಂಬ ಶ್ರುತಿಯಲ್ಲಿ ಭೂತಲಿಂಗವಿಲ್ಲದಿರಬಹುದು. ಆದರೆ ಭೂತದಲ್ಲಿ ರೂಢಿಯನ್ನು ಹೇಳುವ ಆಕಾಶಶ್ರುತಿ ಇದೆಯಲ್ಲ? ಎಂಬ ಆಕ್ಷೇಪಕ್ಕೆ 'ಭೂತೇ ಪ್ರಸಿದ್ಧಿಮಾತ್ರಸ್ಯ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

'ಆಕಾಶ ಇತಿ ಹೋವಾಚ' ಎಂಬ ವಾಕ್ಯವು ಮತ್ತು 'ಕೋ ಹ್ಯೇವಾನ್ಯಾತ್' ಎಂಬ ವಾಕ್ಯವು ಸಮಾನವಾದ ನ್ಯಾಯಕ್ಕೆ ವಿಷಯವಾಗಿವೆ. 'ಆಕಾಶ ಇತಿ ಹೋವಾಚ' ಎಂಬ ವಾಕ್ಯವು ವಿಷ್ಣುಪರವಾದರೆ 'ಕೋ ಹ್ಯೇವಾನ್ಯಾತ್' ಎಂಬ ವಾಕ್ಯವೂ ಸಹ ವಿಷ್ಣುಪರವಾಗುತ್ತದೆ. ಹೀಗೆ 'ಸಿದ್ಧಾಂತೇ' ಎಂಬ ವಾಕ್ಯದಿಂದ ಮೊದಲು ಸಿದ್ಧಾಂತದ ಪ್ರಯೋಜನವನ್ನು ಸಮರ್ಥಿಸಿದರು. ಈಗ ಪೂರ್ವಪಕ್ಷದಲ್ಲಿಯೂ ಸಹ ಈ ಎರಡೂ ಶ್ರುತಿಗಳು ಸಮಾನನ್ಯಾಯಕ್ಕೆ ವಿಷಯವಾಗಿವೆಯೆಂದು ಪೂರ್ವಪಕ್ಷದ ಫಲವನ್ನು 'ಇತಿ ಹೋವಾಚೇತಿ' ಎಂಬ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ಅದು ಹೀಗೆ - ಪೂರ್ವಪಕ್ಷದಲ್ಲಿ 'ಆಕಾಶ ಇತಿ ಹೋವಾಚ' ಎಂಬ ಶ್ರುತಿಯು ಭೂತಪರವಾದರೆ 'ಕೋ ಹ್ಯೇವಾನ್ಯಾತ್' ಎಂಬ ವಾಕ್ಯವೂ ಸಹ ಭೂತಪರವೇ ಆಗುತ್ತದೆ. ಆಕಾಶಶ್ರುತಿಯು ಎರಡೂ ಕಡೆ ಸಮಾನವಾದ್ದರಿಂದ. ಮುಂದಿನ ಅಧಿಕರಣಗಳಲ್ಲಿಯೂ ಸಹ ಎರಡು ಶ್ರುತಿಗಳಿಗೆ ಸಮಾನನ್ಯಾಯವಿಷಯತ್ವವನ್ನು ಸಿದ್ಧಾಂತದಲ್ಲಿ ಹೇಳಿದರೆ ಪೂರ್ವಪಕ್ಷದಲ್ಲಿಯೂ ಸಹ ಹೇಳಬೇಕೆಂದು ಇದರಂತೆ ತಿಳಿಯಬೇಕು.

**गुरुराजीयम्** – नन्वन्तराधिकरणन्यायातिदेशस्याधिकरणत्रयेपि सत्त्वात् कथमेतेषां क्रमः? इत्यत आह – **यद्यपीति** ॥ **अधिकाशङ्काक्रमादिति** ॥ प्रबलाधिकशङ्काक्रमादित्यर्थः । तथा च सोपानारोहणन्यायेन यत्राधिकशङ्काया अल्पत्वं तस्य प्राथम्यमिति भावः । महामल्लभङ्गन्यायेन वैपरीत्यमेव किं न स्यात्? इत्यत आह – **यद्वेति** ॥

ननु भिन्नभिन्नशाखास्थवाक्यनिर्णायकानां सूत्राणां परस्परं सङ्गत्यभावेन पुरुषोत्प्रेक्षयैवाभ्यधिकाशङ्काक्रमेणाधिकरणानां क्रमश्चेत् तर्ह्यन्यथापि पुरुषोत्प्रेक्षासम्भवेन प्रकारान्तरेणापि सङ्गतिः स्यादित्यनुशयाद्वाऽऽह – **यद्वेति** ॥

नन्वेवं साक्षादन्तरधिकरणसङ्गतिरेव चेदाकाशस्य सङ्गतिः तर्ह्यानन्द-मयाधिकरणेन सह सङ्गतिप्रदर्शककोह्येवान्यादित्यादिभाष्यविरोध इत्यतो न तत्सङ्गतिप्रदर्शकं किं नाम विचारसाफल्यमात्रकथनमित्यतो न विरोध इति भावेनाह – **को हीति ॥**

नन्वेतदयुक्तम् । सिद्धान्ते 'आकाश इति होवाच' इत्यत्राकाशशब्दस्य ब्रह्मपरत्वेपि 'यदेष आकाश' इति वाक्ये आकाशशब्दस्य भूतपरत्वस्यैव सम्भवात् कथं सिद्धान्ते तत्साधनम् । न चैकत्राकाशशब्दस्य ब्रह्मपरत्वेऽन्यत्रापि ब्रह्मपरत्वमेव स्यादिति वाच्यं तथात्वे सिद्धान्ते आकाश इति होवाचेति वाक्ये आकाशशब्दस्य ब्रह्मपरत्वेन 'आत्मन आकाशः सम्भूतः' इति सम्भूत-वाक्येप्याकाशशब्दस्य ब्रह्मपरत्वापातात् ।

नच सति ब्रह्मलिङ्गे आकाशशब्दस्य ब्रह्मपरत्वाभ्युपगमात् सम्भूतवाक्ये ब्रह्मलिङ्गाभावेन तत्राकाशशब्दस्य ब्रह्मपरत्वाभावेपि 'यदेष आकाशः' इति वाक्ये ब्रह्मलिङ्गानां विद्यमानत्वेनाकाशशब्दस्य ब्रह्मपरत्वं सम्भवतीति समाधानं युक्तमिति वाच्यम् ।

तथात्वे सिद्धान्ते सम्भूतवाक्ये ब्रह्मलिङ्गाभावेनाकाशशब्दस्य ब्रह्म-परत्वाभावेऽपि 'यदेष आकाश' इति वाक्ये ब्रह्मलिङ्गानां सत्वेनाकाशशब्दस्य विष्णुपरत्ववत्, पूर्वपक्षेपि 'आकाश इति होवाच' इति वाक्ये ब्रह्मलिङ्गानाम-भावेनाकाशशब्दस्य ब्रह्मपरत्वाभावेपि यदेष इति वाक्ये ब्रह्मलिङ्गानां विद्यमानत्वेनाकाशशब्दस्यान्यपरत्वं स्यादित्यानन्दमयोप्यन्यएवेत्याक्षेप एवानुप-पन्न इति पूर्वपक्षे आनन्दमयाधिकरणाक्षेपात्सिद्धान्ते तत्समाधानात् 'को ह्येवान्यात्' इति वाक्यचिन्तासाफल्यमात्रपरमित्युच्यते । तथा चास्य भाष्यस्य चिन्तासाफल्यपरत्वासम्भवेनानन्दमयाधिकरणसङ्गतिप्रदर्शनपरत्वस्यैवावश्यकत्वात् साक्षादनन्तराधिकरणसङ्गत्यभिधाने भाष्यविरोधः स्यादेवेत्याशयेन शङ्कते – **न चेत्यादि ॥** 'इति होवाच' इति वाक्ये आकाशस्य ब्रह्मपरत्वे यदेष इति वाक्येपि ब्रह्मपरत्वं स्यादेवेति सिद्धान्ते आनन्दमयाक्षेपपरिहारः ।

नच 'इति होवाच' इति वाक्ये आकाशशब्दस्य ब्रह्मपरत्वेपि सम्भूतवाक्ये तदभाववत् यदेष इति वाक्येपि तदभावः किं न स्यादिति वाच्यम् ।

तत्राकाशशब्दस्य ब्रह्मपरत्वेपि सम्भूतवाक्ये आकाशशब्दस्य ब्रह्मपरत्वे बाधकाभावेन ब्रह्मपरत्वोपपत्तेः । तथाहि । बाधकं भवत्सम्भूतत्वं वा स्यादाकाशशब्दस्यान्यत्र प्रसिद्धत्वं वा स्यात् । नाद्यः । यदेष इति वाक्ये सम्भूतत्वादेरभावात् । न द्वितीयः । तल्लिङ्गन्यायेन तस्यापि परिहारात् । तस्मात् 'इति होवाच' इति वाक्ये आकाशशब्दस्य ब्रह्मपरत्वे यदेष इति वाक्येपि ब्रह्मपरत्वं स्यादित्यानन्दमयस्यापि ब्रह्मत्वमित्यानन्दमयाक्षेपसमाधानं सिद्धान्ते युक्तमेव । एवं पूर्वपक्षेपि इति होवाचेत्यत्राब्रह्मत्वे यदेष इति वाक्येप्यब्रह्मत्वस्य वक्तुं शक्यत्वेनानन्दमयाक्षेपकतोपपन्ना ।

नच सिद्धान्ते सम्भूतवाक्येऽब्रह्मत्वेपि ब्रह्मलिङ्गाद् यदेष इति वाक्ये ब्रह्मत्ववत्, 'इति होवाच' इत्यत्र ब्रह्मपरत्वेपि यदेष इति वाक्ये ब्रह्मपरत्वं स्यादिति शङ्क्यम् । यदेष वाक्ये ब्रह्मलिङ्गत्वात् 'इति होवाच' इत्यत्रापि ब्रह्मलिङ्गानां सत्त्वात्तत्रोक्तस्यापि ब्रह्मत्वम् ।

यदि च तत्रान्यत्रप्रसिद्धिमात्रेण लिङ्गानां सावकाशत्वापत्तावत्रोक्तस्यापि ब्रह्मत्वं न स्यादेव । तथा च 'इति होवाच' इति वाक्ये आकाशस्याब्रह्मत्वे यदेष इति वाक्येप्यब्रह्मत्वं स्यादित्यानन्दमयोप्यन्यएव स्यादिति पूर्वपक्षे आनन्दमयाधिकरणाक्षेपो युक्त एव ।

तथा च भाष्यस्य चिन्तासाफल्यमात्रप्रदर्शनपरत्वेन सङ्गतिप्रदर्शनपरत्वाभावात् साक्षात्सङ्गत्यभिधानेन भाष्यविरोध इत्याशयवान् परिहरति – **सिद्धान्त इत्यादिना** ॥

ननु भूतेषु प्रसिद्ध्या यदेष आकाश इति वाक्यस्थाकाशशब्दस्याप्यन्यपरत्वम् इत्यत आह – **भूते प्रसिद्धिमात्रस्येति** ॥

ननु तत्रत्यब्रह्मलिङ्गातिप्रसिद्ध्याऽन्यथा क्रियत इत्यत आह – **भूत इति** ॥
उक्तन्यायमन्यत्राप्यतिदिशति – **एवमिति** ॥

## ಸಾರ

ಅಂತಸ್ಥತ್ವಾಧಿಕರಣದ ನ್ಯಾಯದ ಅತಿದೇಶ ಆಕಾಶಾಧಿಕರಣದಲ್ಲಿ ಇರುವಂತೆ ಮುಂದಿನ ಪ್ರಾಣಾಧಿಕರಣ ಜ್ಯೋತಿರಧಿಕರಣಗಳಲ್ಲಿಯೂ ಇರುವುದರಿಂದ ಮೊದಲು ಆಕಾಶಾಧಿಕರಣ ಅನಂತರ ಪ್ರಾಣಾಧಿಕರಣ, ಅನಂತರ ಜ್ಯೋತಿರಧಿಕರಣ ಹೀಗೆ ಕ್ರಮವಾಗಿ ನಿರೂಪಣೆ ಮಾಡಲು ಏನು ಕಾರಣ? ಎಂದು ಪ್ರಶ್ನೆ ಬರಬಹುದು. ಅದಕ್ಕೆ ಎರಡು ರೀತಿಯ ಉತ್ತರವಿದೆ. ಮೊದಲನೆಯದಾಗಿ ಅಂತಸ್ಥತ್ವಾಧಿಕರಣದ ನ್ಯಾಯದ ಮೇಲೆ ಅಭ್ಯಧಿಕಾಶಂಕಾವನ್ನು ಆಕಾಶಾಧಿಕರಣದಲ್ಲಿ ಮಾಡಿಕೊಂಡು ಉತ್ತರಿಸಿದ ಮೇಲೆ ಪುನಃ ಅದರ ಮೇಲೆ ಹೆಚ್ಚಿನ ಶಂಕೆಯನ್ನು ಪ್ರಾಣಾಧಿಕರಣದಲ್ಲಿ ಮಾಡಿದ್ದಾರೆ. ಅಲ್ಲಿ ಸಮಾಧಾನವನ್ನು ಹೇಳಿದಮೇಲೆ ಪುನಃ ಅಭ್ಯಧಿ-ಕಾಶಂಕೆಯನ್ನು ಮಾಡಲಾಗಿದೆ. ಈ ಕ್ರಮದಿಂದಾಗಿ ಅವುಗಳಲ್ಲಿ ಕ್ರಮವು ಹೇಳಲ್ಪಟ್ಟಿದೆ. ಎರಡನೆಯದಾಗಿ ಶ್ರುತಿಯಲ್ಲಿ 'ಆಕಾಶದಿಂದ ವಾಯು ವಾಯುವಿನಿಂದ ಅಗ್ನಿ' ಹೀಗೆ ಕ್ರಮವಾಗಿ ಒಂದೊಂದಕ್ಕೆ ಕಾರಣತ್ವವನ್ನು ಹೇಳಿದ್ದರಿಂದ ಅದನ್ನಿಟ್ಟುಕೊಂಡು ಇಲ್ಲಿ ಕ್ರಮವು ಹೇಳಲ್ಪಟ್ಟಿದೆ.

ಭಾಷ್ಯದಲ್ಲಿ ಈ ಅಧಿಕರಣಫಲದ ಬಗ್ಗೆ ಹೇಳುವಾಗ ಛಾಂದೋಗ್ಯೋಪನಿಷತ್ತಿನಲ್ಲಿ ಬಂದಿರುವ 'ಆಕಾಶ' ಶಬ್ದವು ವಿಷ್ಣುವಾಚಕವಲ್ಲದಿದ್ದರೆ, ಆನಂದಮಯನನ್ನು ಕುರಿತು ಹೇಳಿದ 'ಆಕಾಶ' ಶಬ್ದವೂ ಕೂಡ ವಿಷ್ಣು-ವಾಚಕವಾಗುವುದಿಲ್ಲ. ಹಾಗಾಗಿ ಆನಂದಮಯನು ವಿಷ್ಣುವಾಗುವುದಿಲ್ಲ ಎಂದು ಪೂರ್ವಪಕ್ಷ ಮಾಡಿಕೊಂಡು ಸಮಾಧಾನವನ್ನು ಸಿದ್ಧಾಂತದಲ್ಲಿ ಹೇಳಿದ್ದರಿಂದ ಈ ಅಧಿಕರಣ ಸಾರ್ಥಕ ಎಂದಿದ್ದಾರೆ. ಆದರೆ ಅದು ಸರಿಯಲ್ಲ. ಏಕೆಂದರೆ ಛಾಂದೋಗ್ಯದಲ್ಲಿರುವ ಆಕಾಶಶಬ್ದವು ವಿಷ್ಣುವಾಚಕವಾಗಿದ್ದರೂ 'ಆತ್ಮನಃ ಆಕಾಶಸ್ಸಂಭೂತಃ' ಎಂಬಲ್ಲಿ ಆಕಾಶ ಶಬ್ದವನ್ನು ವಿಷ್ಣುಪರ ಎಂದು ಹೇಗೆ ಒಪ್ಪುವುದಿಲ್ಲವೋ ಹಾಗೆಯೇ ಆನಂದಮಯನ ಕುರಿತು ಹೇಳಿದ ವಾಕ್ಯದಲ್ಲಿಯೂ ಹೇಳಲು ಬರುವುದಿಲ್ಲ. ಆದ್ದರಿಂದ ಆನಂದಮಯಾಧಿಕರಣದಿಂದ ಸಂಗತಿಯನ್ನು ಹೇಳಿದ್ದು ಹೇಗೆ? ಎಂದರೆ ಛಾಂದೋಗ್ಯದಲ್ಲಿರುವ ಆಕಾಶ ಶಬ್ದವು ಮತ್ತು ಆನಂದಮಯನಲ್ಲಿರುವ ಆಕಾಶಶಬ್ದವು ವಿಷ್ಣುವಾಚಕ ಎನ್ನಲು ಅಲ್ಲಿ ಬ್ರಹ್ಮನ ಲಿಂಗವಿರುವುದು ಕಾರಣ. 'ಆತ್ಮನಃ ಆಕಾಶಸ್ಸಂಭೂತಃ' ಎಂಬಲ್ಲಿ ಭೂತಾಕಾಶದ ಲಿಂಗವಿದೆಯೇ ಹೊರತು ಬ್ರಹ್ಮನ ಲಿಂಗವಿಲ್ಲ. ಹಾಗಾಗಿ ಅಲ್ಲಿ ಆಕಾಶಶಬ್ದವು ಭೂತಪರ. ಆದ್ದರಿಂದ ಆನಂದಮಯಾಧಿಕರಣದಿಂದ ಸಂಗತಿ ಹೇಳಿದ್ದು ಸರಿಯಾಗಿದೆ.

---

## ತೈತ್ತಿರೀಯದಂತೆ ಛಾಂದೋಗ್ಯದ ಮಾತೂ ಸಹ ವಿಷಯವಾಕ್ಯ

**तात्पर्यचन्द्रिका –**

**ननु यद्येवमानन्दमयाधिकरणाक्षेपः, तर्हि साक्षात् तदाक्षेपार्थम् आनन्दमय-शब्दे मयटो विकारार्थत्वमिव ''यदेषः'' इति वाक्ये आकाशशब्दस्य भूताकाश-परत्वमाशङ्क्य, आनन्दमयस्य विष्णुत्वसिद्धये ब्रह्मणि समन्वय उच्यताम् ।**

अन्तस्स्थत्वस्य तु आनन्दमयप्रकरणे श्रवणेऽपि तस्य स्वतोऽन्यत्र प्रसिद्ध्यभावात् अन्यत्र प्रसिद्धेन्द्रादिश्रुतिसाहचर्यस्य तत्प्रकरणे अभावेन तत्र पूर्वपक्षानुदयाद् वाक्यान्तरोदाहरणं युक्तम् । आकाशशब्दस्त्वानन्दमयप्रकरणे श्रुतः स्वतोऽन्यत्र प्रसिद्धश्चेति तत्रैव पूर्वपक्षोदय इति वैषम्यम् ।

सत्यम्, तथाऽपि मयट इव आकाशशब्दस्य समन्वेतव्यानन्दमयशब्दान्तर्भावाभावेन न्यायभेदेन चाधिकरणभेदे स्थिते, ''आकाश इति होवाच'' इति वाक्यान्तरस्याऽपि समन्वये एतत्प्रकरणस्थबहुगुणलाभात्, तथा एतत् समन्वयेन निर्णीतब्रह्मप्रकरणस्थ'यदेष'वाक्यसमन्वयवत्, ''यदेषः'' इति वाक्यसमन्वयेन अनिर्णीतब्रह्मप्रकरणस्थैतद्वाक्यसमन्वयासिद्धेः, तथा सिद्धान्तिना सावकाशयितव्यानां भूतलयाधिष्ठानत्वादिपूर्वपक्षयुक्तीनां निरवकाशयितव्यानां परोवरीयस्त्वादिसिद्धान्तयुक्तीनां च ''यदेषः'' इत्यत्राभावाच्च वाक्यान्तरोदाहरणं युक्तम् ।

अत्र यद्यपि ''आकाश इति होवाच'' इत्यत्र आकाशस्यान्यत्वे ''आकाशादेव समुत्पद्यन्ते'' इति तत्प्रकरणे श्रुतं कारणत्वमपि अन्यस्यैव स्यादिति जन्मादिसूत्रमप्याक्षेप्तुं शक्यं भाति । तथाऽपि ''समुत्पद्यन्ते'' इत्यस्योपादानत्वेऽप्युपपत्तेः जन्मादिसूत्रोक्तकर्तृत्वाक्षेपायोगात्, आनन्दमयाधिकरणानाक्षेपे तदाक्षेपकान्तरधिकरणप्राणाधिकरणयोर्मध्ये अस्य निवेशायोगाच्च आनन्दमयाधिकरणमेवाऽक्षिप्तम् ।

ಅನುವಾದ - ಪ್ರಶ್ನೆ - ಆನಂದಮಯಾಧಿಕರಣವನ್ನು ಆಕ್ಷೇಪಿಸಿ ಆಕಾಶಾಧಿಕರಣವು ಹೊರಡುತ್ತಿದೆಯೆಂದು ಈ ಹಿಂದೆ ಹೇಳಿದಿರಿ. ಹಾಗಾದಲ್ಲಿ ಕೇವಲ ತೈತ್ತಿರೀಯವಾಕ್ಯದಲ್ಲಿರುವ ಆಕಾಶಶಬ್ದವನ್ನಷ್ಟೇ ವಿಷ್ಣುಪರವಲ್ಲವೆಂದು ಪೂರ್ವಪಕ್ಷ ಮಾಡಿ, ಸಿದ್ಧಾಂತ ಮಾಡುವುದು ಉಚಿತ. ಛಾಂದೋಗ್ಯದ ಮಾತು ಇಲ್ಲಿ ಅಪ್ರಸ್ತುತ. ಯಾವ ರೀತಿಯಾಗಿ ಆನಂದಮಯ ಶಬ್ದದಲ್ಲಿರುವ ವಿಕಾರಾರ್ಥವುಳ್ಳ ಮಯಟ್ ಪ್ರತ್ಯಯವು ವಿಷ್ಣುತ್ವ ನಿರ್ಣಯಕ್ಕೆ ಬಾಧಕವೆಂದು ಪೂರ್ವಪಕ್ಷ ಮಾಡುತ್ತೀರೋ, ಅದರಂತೆ 'ಯದೇಷ ಆಕಾಶಃ' ಎಂಬ ತೈತ್ತಿರೀಯದ ಆಕಾಶಶಬ್ದವು ಭೂತಾಕಾಶಪರವಾಗಿದೆ ಎಂದು ಆಕ್ಷೇಪಿಸಬಹುದು. ಆನಂದಮಯನು ವಿಷ್ಣುವೆಂದು ನಿರ್ಣಯವಾಗಬೇಕಾದರೆ ತೈತ್ತಿರೀಯದ ಈ ಆಕಾಶಶಬ್ದವು ವಿಷ್ಣುಪರವೇ ಆಗಬೇಕೆಂದು ಸಿದ್ಧಾಂತ ಮಾಡುವುದು

ಅತ್ಯಂತ ಸಮಂಜಸ. ಪುನಃ 'ಆಕಾಶ ಇತಿ ಹೋವಾಚ' ಎಂಬ ಛಾಂದೋಗ್ಯದ ಆಕಾಶಶಬ್ದವು ಇಲ್ಲಿ ಪೂರ್ವಪಕ್ಷಕ್ಕಾಗಲೀ ಸಿದ್ಧಾಂತಕ್ಕಾಗಲೀ ಕಾರಣವಾಗುವುದಿಲ್ಲ.

ಅಂತಃಸ್ಥತ್ವಾಧಿಕರಣದಲ್ಲಿ ಬೇರೆ ಪ್ರಕರಣದಲ್ಲಿರುವ ವಾಕ್ಯವನ್ನು ಉದಾಹರಿಸಿದಂತೆ ಇಲ್ಲಿಯೂ ಉದಾಹರಿಸಿದ್ದೇವೆಂದು ಹೇಳಬಾರದು. ಅಂತಃಸ್ಥತ್ವವು ಆನಂದಮಯ ಪ್ರಕರಣದಲ್ಲಿ ಶ್ರುತವಾಗಿದೆ. ಆದರೆ ಆ ಅಂತಃಸ್ಥತ್ವವು ಆಕಾಶಶಬ್ದದಂತೆ ಅನ್ಯತ್ರಪ್ರಸಿದ್ಧವಾಗಿಲ್ಲ. ಅಷ್ಟೇ ಅಲ್ಲದೆ ಅನ್ಯತ್ರಪ್ರಸಿದ್ಧವಾದ ಇಂದ್ರಾದಿ ಶ್ರುತಿಗಳ ಸಾಹಚರ್ಯವೂ ಕೂಡ ಅಂತಃಸ್ಥತ್ವಕ್ಕೆ ಇರುವುದಿಲ್ಲ. ಆದ್ದರಿಂದ ಅಂತಃಸ್ಥತ್ವವು ವಿಷ್ಣುವಿನಲ್ಲಿ ಇರುವುದಿಲ್ಲವೆಂಬ ಪೂರ್ವಪಕ್ಷಕ್ಕೆ ಬೀಜವೇ ಇಲ್ಲದಂತಾಗುತ್ತದೆ. ಆದ್ದರಿಂದ ಅನಿವಾರ್ಯವಾಗಿ ಪೂರ್ವಪಕ್ಷದ ಸ್ಥಾಪನೆಗೋಸ್ಕರ ವಾಕ್ಯಾಂತರವನ್ನು ಉದಾಹರಿಸಿದ್ದೇವೆ. ಆದರೆ ತೈತ್ತಿರೀಯದಲ್ಲಿರುವ ಆಕಾಶಶಬ್ದದಲ್ಲಿ ಪೂರ್ವಪಕ್ಷಪ್ರಾಪಕವಾದ ಕಾರಣಗಳು ಇರುತ್ತದೆ. ಆನಂದಮಯಪ್ರಕರಣದಲ್ಲಿ ಆಕಾಶಶಬ್ದವು ಶ್ರುತವಾಗಿದೆ. ಮತ್ತು ಅನ್ಯತ್ರಪ್ರಸಿದ್ಧವೂ ಆಗಿದೆ. ಇದರಿಂದ ಆಕಾಶವು ವಿಷ್ಣುವಲ್ಲ. ಆನಂದಮಯನೂ ಸಹ ವಿಷ್ಣುವಾಗಲಾರ ಎಂಬ ಪೂರ್ವಪಕ್ಷವನ್ನು ಸುಲಭವಾಗಿಯೇ ಮಾಡಬಹುದು. ವಾಕ್ಯಾಂತರದ ಅಪೇಕ್ಷೆಯು ಇರುವುದಿಲ್ಲ. ಹೀಗೆ ಅಂತಃಸ್ಥತ್ವಾಧಿಕರಣಕ್ಕೂ ಆಕಾಶಾಧಿಕರಣಕ್ಕೂ ವೈಷಮ್ಯವಿದೆ.

ಉತ್ತರ - ಹೌದು, ಆದರೂ ಸಹ ಛಾಂದೋಗ್ಯಮಾತಿನ ಅನಿವಾರ್ಯತೆ ಇಲ್ಲಿಯೂ ಇದೆ. ಮಯಟ್ ಪ್ರತ್ಯಯವು ಸಮನ್ವಯ ಮಾಡಬೇಕಾಗಿರುವ ಆನಂದಮಯ ಶಬ್ದದ ಗರ್ಭದಲ್ಲಿ ಸೇರಿದೆ. ಆದರೆ ಆಕಾಶಶಬ್ದವು ಹಾಗಿಲ್ಲ. ಆನಂದಮಯಶಬ್ದದ ಸಮನ್ವಯದಿಂದ ಆಕಾಶಶಬ್ದದ ಸಮನ್ವಯವು ಸಿದ್ಧವಾಗದ ಕಾರಣ ಆನಂದಮಯಾಧಿಕರಣದಿಂದ ಆಕಾಶಾಧಿಕರಣವು ಗತಾರ್ಥವಾಗುವುದಿಲ್ಲ.

ಮತ್ತು ಆನಂದಮಯಾಧಿಕರಣದ ನ್ಯಾಯಕ್ಕೂ ಆಕಾಶಾಧಿಕರಣದ ನ್ಯಾಯಕ್ಕೂ ಭೇದವಿರುವುದರಿಂದ ಆಕಾಶಾಧಿಕರಣವನ್ನು ಪ್ರತ್ಯೇಕವಾಗಿ ಹೇಳಲೇಬೇಕು. 'ಆಕಾಶ ಇತಿ ಹೋವಾಚ' ಎಂಬ ಛಾಂದೋಗ್ಯದ ವಾಕ್ಯವನ್ನು ಸಮನ್ವಯ ಮಾಡುವುದರಿಂದ ಅನೇಕ ಪ್ರಯೋಜನಗಳಿರುತ್ತವೆ. 'ಆಕಾಶ ಇತಿ ಹೋವಾಚ' ಎಂಬ ಪ್ರಕರಣದಲ್ಲಿನ ಅನೇಕಗುಣಗಳ ಸಮನ್ವಯವು ಸಿದ್ಧವಾಗುತ್ತದೆ.

ತೈತ್ತಿರೀಯದ ಸಮನ್ವಯದಿಂದಲೇ ಛಾಂದೋಗ್ಯದ ಸಮನ್ವಯವು ಸಿದ್ಧವಾಗಿ ಬಹುಗುಣಸಮನ್ವಯದ ಲಾಭವನ್ನು ಹೊಂದಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಛಾಂದೋಗ್ಯದ ಪ್ರಕರಣವು ಬ್ರಹ್ಮಪರವೆಂದು ಇದುವರೆಗೂ ನಿರ್ಣಯವಾಗಿಲ್ಲ. ಒಂದು ವೇಳೆ ಬ್ರಹ್ಮಪರವೆಂದು ನಿರ್ಣಯವಾಗಿದ್ದಲ್ಲಿ ತೈತ್ತಿರೀಯವಾಕ್ಯದ ಸಮನ್ವಯದಿಂದ ಇದರ ಸಮನ್ವಯವು ನಿರ್ಣಯವಾಯಿತೆಂದು ಹೇಳಬಹುದಿತ್ತು.

ಆದ್ದರಿಂದ 'ಆಕಾಶ ಇತಿ ಹೋವಾಚ' ಎಂಬ ವಾಕ್ಯದ ಸಮನ್ವಯದಿಂದ ನಿರ್ಣೀತ-ಬ್ರಹ್ಮಪ್ರಕರಣದಲ್ಲಿರುವ ಯದೇಷವಾಕ್ಯದ ಸಮನ್ವಯದಂತೆ 'ಯದೇಷ' ಎಂಬ ವಾಕ್ಯದ ಸಮನ್ವಯ-ದಿಂದ ನಿರ್ಣೀತವಲ್ಲದ ಛಾಂದೋಗ್ಯದ ಬ್ರಹ್ಮಪ್ರಕರಣದಲ್ಲಿರುವ 'ಆಕಾಶ ಇತಿ ಹೋವಾಚ' ಎಂಬ ವಾಕ್ಯದ ಸಮನ್ವಯವು ಸಿದ್ಧವಾಗುವುದಿಲ್ಲ. ಮತ್ತು ಭೂತಲಯಾಧಿಷ್ಠಾನತ್ವವೇ ಮೊದಲಾದ ಪೂರ್ವಪಕ್ಷಯುಕ್ತಿಗಳು ಸಾವಕಾಶಗಳಾಗಿವೆ. ಪರೋವರೀಯಸ್ತ್ವ ಅನಂತತ್ವ, ಮೊದಲಾದ ಸಿದ್ಧಾಂತಯುಕ್ತಿಗಳು ನಿರವಕಾಶಗಳಾಗಿವೆ ಎಂದು ಈ ಅಧಿಕರಣದ ಸಿದ್ಧಾಂತದಲ್ಲಿ ಹೇಳುತ್ತಾರೆ. ಈ ಪೂರ್ವಪಕ್ಷಯುಕ್ತಿಗಳಾಗಲೀ, ಸಿದ್ಧಾಂತಯುಕ್ತಿಗಳಾಗಲೀ 'ಯದೇಷ' ಎಂಬ ತೈತ್ತಿರೀಯಪ್ರಕರಣದಲ್ಲಿ ಕಾಣಿಸುವುದೇ ಇಲ್ಲ. ಆದರೆ ಛಾಂದೋಗ್ಯದಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಈ ಕಾರಣದಿಂದಲೂ ಛಾಂದೋಗ್ಯದ ಉಲ್ಲೇಖ ಇಲ್ಲಿ ಅತ್ಯಂತ ಪ್ರಸ್ತುತ ವೆನಿಸುತ್ತದೆ.

ಪ್ರಶ್ನೆ - ಆನಂದಮಯಾಧಿಕರಣವನ್ನು ಆಕ್ಷೇಪಿಸಿ ಆಕಾಶಾಧಿಕರಣಕ್ಕೆ ಸಾರ್ಥಕ್ಯವನ್ನು ಹೇಳಿದಿರಿ. ಹಾಗಾದರೆ ಜನ್ಮಾಧಿಕರಣವನ್ನೂ ಸಹ ಆಕ್ಷೇಪಿಸಿ ಸಾರ್ಥಕ್ಯ ಹೇಳಬಹುದಲ್ಲವೇ? ಏಕೆಂದರೆ 'ಆಕಾಶ ಇತಿ ಹೋವಾಚ' ಎಂಬ ಛಾಂದೋಗ್ಯದ ಆಕಾಶಶಬ್ದವು ಅನ್ಯಪರವಾದಾಗ 'ಆಕಾಶಾದೇವ ಸಮುತ್ಪದ್ಯಂತೇ' ಎಂಬ ಅದೇ ಪ್ರಕರಣದಲ್ಲಿ ಶ್ರುತವಾದ ಜಗತ್ಕಾರಣತ್ವವು ಅನ್ಯಪರವೇ ಆಗಬೇಕು. ಆದ್ದರಿಂದ ಜನ್ಮಾಧಿಕರಣದ ಸಿದ್ಧಾಂತವು ಕೂಡುವುದಿಲ್ಲ ಎಂಬ ಆಕ್ಷೇಪಕ್ಕೆ ಆಕಾಶಾಧಿಕರಣದಲ್ಲಿ ಉತ್ತರಿಸುತ್ತಿದ್ದಾರೆಂದು ಹೇಳಬಹುದಲ್ಲವೇ?

ಉತ್ತರ - ಹಾಗೆ ಹೇಳಲಾಗದು. 'ಸಮುತ್ಪದ್ಯಂತೇ' ಎಂಬ ಮಾತಿನಿಂದ ಉಪಾದಾನಕಾರಣತ್ವ-ವನ್ನು ತಿಳಿಯಬಹುದು. ಆದರೆ ಜನ್ಮಾಧಿಕರಣದಲ್ಲಿ ನಿಮಿತ್ತಕಾರಣತ್ವವನ್ನು ಭಗವಂತನಲ್ಲಿ ಸಮರ್ಥಿಸಲಾಗಿದೆ. ಅದನ್ನು ಆಕ್ಷೇಪಿಸಲು ಸಾಧ್ಯವಿಲ್ಲ. ಮತ್ತು ಆನಂದಮಯಾಧಿಕರಣವನ್ನು ಆಕ್ಷೇಪ ಮಾಡದೇ ಇದ್ದರೆ ಅಂತರಧಿಕರಣ, ಪ್ರಾಣಾಧಿಕರಣಗಳ ಮಧ್ಯದಲ್ಲಿ ಆಕಾಶಾಧಿಕರಣದ ಉಲ್ಲೇಖವು ತಪ್ಪಾಗುತ್ತದೆ. ಆ ಎರಡು ಅಧಿಕರಣಗಳು ಆನಂದಮಯಾಧಿಕರಣವನ್ನು ಆಕ್ಷೇಪಿಸಿ ಹೊರಟಿರುವಾಗ ಅವುಗಳ ಮಧ್ಯದಲ್ಲಿ ಇದರ ಉಲ್ಲೇಖವು ಅಪ್ರಸ್ತುತವಾಗುವುದಿಲ್ಲವೇ? ಈ ಎರಡು ಕಾರಣಗಳಿಂದ ಆನಂದಮಯಾಧಿಕರಣವನ್ನು ಆಕ್ಷೇಪಿಸಿಯೇ ಆಕಾಶಾಧಿಕರಣಕ್ಕೆ ಸಾರ್ಥಕ್ಯ-ವನ್ನು ಭಾಷ್ಯಟೀಕೆಗಳಲ್ಲಿ ಹೇಳಿದ್ದಾರೆ.

### ಕಠಿಣಪದಾರ್ಥ

ಸಾಕ್ಷಾತ್ = 'ಇತಿ ಹೋವಾಚ' ಎಂಬ ತೈತ್ತಿರೀಯದ ಮಾತನ್ನೇ ಆಕ್ಷೇಪಿಸಿ ಉತ್ತರಿಸುವುದು ನೇರಮಾರ್ಗ, ಆನಂದಮಯಪ್ರಕರಣೇ ಶ್ರವಣೇಽಪಿ = 'ಯೋ ವೇದ ನಿಹಿತಂ ಗುಹಾಯಾಮ್' ಎಂದು ಆನಂದಮಯಪ್ರಕರಣದಲ್ಲಿ ಗುಹಾನಿಹಿತತ್ವದಿಂದ ತಿಳಿಯಲ್ಪಟ್ಟಿದ್ದರೂ, ತಸ್ಯ = ಅಂತಃಸ್ಥತ್ವವು ; ತತ್ಪ್ರಕರಣೇ = ಆನಂದಮಯಪ್ರಕರಣದಲ್ಲಿ;

ವಾಕ್ಯಾಂತರೋದಾಹರಣಮ್ = ಅಂತಃಸ್ಥತ್ವಪ್ರಕರಣ ಬಿಟ್ಟು ಬೇರೆ ಪ್ರಕರಣದಲ್ಲಿರುವ ವಾಕ್ಯದ ಉದಾಹರಣೆಯು, ವೈಷಮ್ಯಂ = ಅಂತಃಸ್ಥಾಧಿಕರಣಕ್ಕೂ ಆಕಾಶಾಧಿಕರಣಕ್ಕೂ ವ್ಯತ್ಯಾಸವಿದೆ; ನ್ಯಾಯಭೇದೇನ = ಆನಂದಮಯಾಧಿಕರಣದಲ್ಲಿ ಬ್ರಹ್ಮಶಬ್ದದ ಅಭ್ಯಾಸವು ನ್ಯಾಯವಾಗಿದೆ. ಆಕಾಶಾಧಿಕರಣದಲ್ಲಿ ಅಚೇತನಸ್ವಭಾವವೂ ಭಗವದಧೀನವಾಗಿದೆ ಎಂಬ ನ್ಯಾಯಭೇದವಿರುವುದರಿಂದ; ವಾಕ್ಯಾಂತರಸ್ಯಾಪಿ = ಛಾಂದೋಗ್ಯದ ಮಾತಿಗೂ; ಏತತ್‌ಪ್ರಕರಣಸ್ಥ = ಛಾಂದೋಗ್ಯಪ್ರಕರಣದಲ್ಲಿರುವ; ಏತತ್ ಸಮನ್ವಯೇನ = ಛಾಂದೋಗ್ಯದಲ್ಲಿರುವ ಆಕಾಶಶಬ್ದದ ಸಮನ್ವಯದಿಂದ, ನಿರ್ಣೀತಬ್ರಹ್ಮಪ್ರಕರಣಸ್ಥ = ನಿರ್ಣಯವಾದ ತೈತ್ತಿರೀಯದಲ್ಲಿರುವ ಬ್ರಹ್ಮಪ್ರಕರಣದಲ್ಲಿರುವ; ಉಪಾದಾನತ್ವೇ-ಪ್ಯುಪಪತ್ತೇಃ = ನಿಮಿತ್ತಕಾರಣದಂತೆ ಉಪಾದಾನಕಾರಣ ಎಂಬರ್ಥವನ್ನು ಹೇಳುತ್ತದೆ.

**प्रकाशः** – ननु यदि '''को ह्येवान्यात्'' इत्यत्रत्याकाशस्य विष्णुत्वसिद्धिः फलं तर्हि नाधिकरणान्तरमारम्भणीयम्, ''विकारशब्दान्नेति चेत्'' इतिवत् हेतुव्यपदेशसूत्रानन्तरं ''आकाशशब्दान्नेति चेत्तल्लिङ्गात्'' इति गुणसूत्रेणैव विष्णोरेवाकाशशब्दवाच्यत्वोक्तिसम्भवात् । अधिकरणान्तरत्वेऽपि ''को ह्येवान्यात्'' इत्यस्यैव विषयत्वसम्भवे वाक्यान्तरोदाहरणस्यायुक्तत्वादित्याशङ्कते – **ननु यद्येवमिति ॥**

**साक्षादिति ॥** ''इति होवाच'' इत्यस्य भूतपरत्वात्तत्तुल्यन्यायतया अयमपि भूतपरस्स्यादित्यस्य वक्त्रत्वादिति भावः । इयं शङ्काऽन्तरधिकरण एव कुतो न कृता, किं विशिष्यात्रेत्यत आह – **अन्तस्स्थत्वस्य त्विति ॥**

यद्यपि ''यो वेद निहितं गुहायां'' इति मन्त्रवर्ण एवान्तस्स्थत्वं श्रुतं, तथाऽपि मन्त्रवर्णोक्तस्यैवात्रानन्दमयशब्देनोच्यमानत्वात् 'तत्प्रकरणे श्रवणेपि' इत्युक्तम् । यत् तावदुक्तमधिकरणान्तरं न कार्यमिति, तत् तावन्नेत्याह – **तथाऽपीति ॥ न्यायेति ॥** अचेतनस्वभावस्यापि भगवदधीनत्व प्रतिपादनरूपन्यायभेदेनेत्यर्थः । अधिकरणान्तरत्वेऽपि वाक्यान्तरमयुक्तमित्येतन्निरस्यति – **आकाश इतीति ॥ एतदिति ॥** ''इति होवाच'' इत्येतत्परामृश्यते ।

नन्वस्त्वधिकरणान्तरं वाक्यान्तरोदाहरणं च । तथाऽपि न भाष्योक्तं प्रयोजनं, ''सर्वाणि ह वा इमानि भूतान्याकाशादेव'' इति साक्षाच्छ्रुतकारणत्वस्य पूर्वपक्षे भूतनिष्ठत्वेन जन्मादिसूत्राक्षेपस्य ऋजुत्वादित्याशङ्क्याह – **अत्रेति ॥ उपादानत्वेऽपीति ॥**

ಆದ್ದರಿಂದ 'ಆಕಾಶ ಇತಿ ಹೋವಾಚ' ಎಂಬ ವಾಕ್ಯದ ಸಮನ್ವಯದಿಂದ ನಿರ್ಣೀತ-ಬ್ರಹ್ಮಪ್ರಕರಣದಲ್ಲಿರುವ ಯದೇಷವಾಕ್ಯದ ಸಮನ್ವಯದಂತೆ 'ಯದೇಷ' ಎಂಬ ವಾಕ್ಯದ ಸಮನ್ವಯ -ದಿಂದ ನಿರ್ಣೀತವಲ್ಲದ ಛಾಂದೋಗ್ಯದ ಬ್ರಹ್ಮಪ್ರಕರಣದಲ್ಲಿರುವ 'ಆಕಾಶ ಇತಿ ಹೋವಾಚ' ಎಂಬ ವಾಕ್ಯದ ಸಮನ್ವಯವು ಸಿದ್ಧವಾಗುವುದಿಲ್ಲ. ಮತ್ತು ಭೂತಲಯಾಧಿಷ್ಠಾನತ್ವವೇ ಮೊದಲಾದ ಪೂರ್ವಪಕ್ಷಯುಕ್ತಿಗಳು ಸಾವಕಾಶಗಳಾಗಿವೆ. ಪರೋವರೀಯಸ್ತ್ವ ಅನಂತತ್ವ, ಮೊದಲಾದ ಸಿದ್ಧಾಂತಯುಕ್ತಿಗಳು ನಿರವಕಾಶಗಳಾಗಿವೆ ಎಂದು ಈ ಅಧಿಕರಣದ ಸಿದ್ಧಾಂತದಲ್ಲಿ ಹೇಳುತ್ತಾರೆ. ಈ ಪೂರ್ವಪಕ್ಷಯುಕ್ತಿಗಳಾಗಲೀ, ಸಿದ್ಧಾಂತಯುಕ್ತಿಗಳಾಗಲೀ 'ಯದೇಷ' ಎಂಬ ತೈತ್ತಿರೀಯಪ್ರಕರಣದಲ್ಲಿ ಕಾಣಿಸುವುದೇ ಇಲ್ಲ. ಆದರೆ ಛಾಂದೋಗ್ಯದಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಈ ಕಾರಣದಿಂದಲೂ ಛಾಂದೋಗ್ಯದ ಉಲ್ಲೇಖ ಇಲ್ಲಿ ಅತ್ಯಂತ ಪ್ರಸ್ತುತ ವೆನಿಸುತ್ತದೆ.

ಪ್ರಶ್ನೆ - ಆನಂದಮಯಾಧಿಕರಣವನ್ನು ಆಕ್ಷೇಪಿಸಿ ಆಕಾಶಾಧಿಕರಣಕ್ಕೆ ಸಾರ್ಥಕ್ಯವನ್ನು ಹೇಳಿದಿರಿ. ಹಾಗಾದರೆ ಜನ್ಮಾಧಿಕರಣವನ್ನೂ ಸಹ ಆಕ್ಷೇಪಿಸಿ ಸಾರ್ಥಕ್ಯ ಹೇಳಬಹುದಲ್ಲವೇ? ಏಕೆಂದರೆ 'ಆಕಾಶ ಇತಿ ಹೋವಾಚ' ಎಂಬ ಛಾಂದೋಗ್ಯದ ಆಕಾಶಶಬ್ದವು ಅನ್ಯಪರವಾದಾಗ 'ಆಕಾಶಾದೇವ ಸಮುತ್ಪದ್ಯಂತೇ' ಎಂಬ ಅದೇ ಪ್ರಕರಣದಲ್ಲಿ ಶ್ರುತವಾದ ಜಗತ್ಕಾರಣತ್ವವು ಅನ್ಯಪರವೇ ಆಗಬೇಕು. ಆದ್ದರಿಂದ ಜನ್ಮಾಧಿಕರಣದ ಸಿದ್ಧಾಂತವು ಕೂಡುವುದಿಲ್ಲ ಎಂಬ ಆಕ್ಷೇಪಕ್ಕೆ ಆಕಾಶಾಧಿಕರಣದಲ್ಲಿ ಉತ್ತರಿಸುತ್ತಿದ್ದಾರೆಂದು ಹೇಳಬಹುದಲ್ಲವೇ?

ಉತ್ತರ - ಹಾಗೆ ಹೇಳಲಾಗದು. 'ಸಮುತ್ಪದ್ಯಂತೇ' ಎಂಬ ಮಾತಿನಿಂದ ಉಪಾದಾನಕಾರಣತ್ವ-ವನ್ನು ತಿಳಿಯಬಹುದು. ಆದರೆ ಜನ್ಮಾಧಿಕರಣದಲ್ಲಿ ನಿಮಿತ್ತಕಾರಣತ್ವವನ್ನು ಭಗವಂತನಲ್ಲಿ ಸಮರ್ಥಿಸಲಾಗಿದೆ. ಅದನ್ನು ಆಕ್ಷೇಪಿಸಲು ಸಾಧ್ಯವಿಲ್ಲ. ಮತ್ತು ಆನಂದಮಯಾಧಿಕರಣವನ್ನು ಆಕ್ಷೇಪ ಮಾಡದೇ ಇದ್ದರೆ ಅಂತರಧಿಕರಣ, ಪ್ರಾಣಾಧಿಕರಣಗಳ ಮಧ್ಯದಲ್ಲಿ ಆಕಾಶಾಧಿಕರಣದ ಉಲ್ಲೇಖವು ತಪ್ಪಾಗುತ್ತದೆ. ಆ ಎರಡು ಅಧಿಕರಣಗಳು ಆನಂದಮಯಾಧಿಕರಣವನ್ನು ಆಕ್ಷೇಪಿಸಿ ಹೊರಟಿರುವಾಗ ಅವುಗಳ ಮಧ್ಯದಲ್ಲಿ ಇದರ ಉಲ್ಲೇಖವು ಅಪ್ರಸ್ತುತವಾಗುವುದಿಲ್ಲವೇ? ಈ ಎರಡು ಕಾರಣಗಳಿಂದ ಆನಂದಮಯಾಧಿಕರಣವನ್ನು ಆಕ್ಷೇಪಿಸಿಯೇ ಆಕಾಶಾಧಿಕರಣಕ್ಕೆ ಸಾರ್ಥಕ್ಯ-ವನ್ನು ಭಾಷ್ಯಟೀಕೆಗಳಲ್ಲಿ ಹೇಳಿದ್ದಾರೆ.

## ಕಠಿಣಪದಾರ್ಥ

ಸಾಕ್ಷಾತ್ = 'ಇತಿ ಹೋವಾಚ' ಎಂಬ ತೈತ್ತಿರೀಯದ ಮಾತನ್ನೇ ಆಕ್ಷೇಪಿಸಿ ಉತ್ತರಿಸುವುದು ನೇರಮಾರ್ಗ, ಆನಂದಮಯಪ್ರಕರಣೇ ಶ್ರವಣೇಽಪಿ = 'ಯೋ ವೇದ ನಿಹಿತಂ ಗುಹಾಯಾಮ್' ಎಂದು ಆನಂದಮಯಪ್ರಕರಣದಲ್ಲಿ ಗುಹಾನಿಹಿತತ್ವದಿಂದ ತಿಳಿಯಲ್ಪಟ್ಟಿದ್ದರೂ, ತಸ್ಯ = ಅಂತಃಸ್ಥತ್ವವು ; ತತ್ಪ್ರಕರಣೇ = ಆನಂದಮಯಪ್ರಕರಣದಲ್ಲಿ;

ವಾಕ್ಯಾಂತರೋದಾಹರಣಮ್ = ಅಂತಃಸ್ಥತ್ವಪ್ರಕರಣ ಬಿಟ್ಟು ಬೇರೆ ಪ್ರಕರಣದಲ್ಲಿರುವ ವಾಕ್ಯದ ಉದಾಹರಣೆಯು, ವೈಷಮ್ಯಂ = ಅಂತಃಸ್ಥಾಧಿಕರಣಕ್ಕೂ ಆಕಾಶಾಧಿಕರಣಕ್ಕೂ ವ್ಯತ್ಯಾಸವಿದೆ; ನ್ಯಾಯಭೇದೇನ = ಆನಂದಮಯಾಧಿಕರಣದಲ್ಲಿ ಬ್ರಹ್ಮಶಬ್ದದ ಅಭ್ಯಾಸವು ನ್ಯಾಯವಾಗಿದೆ. ಆಕಾಶಾಧಿಕರಣದಲ್ಲಿ ಅಚೇತನಸ್ವಭಾವವೂ ಭಗವದಧೀನವಾಗಿದೆ ಎಂಬ ನ್ಯಾಯಭೇದವಿರುವುದರಿಂದ; ವಾಕ್ಯಾಂತರಸ್ಯಾಪಿ = ಛಾಂದೋಗ್ಯದ ಮಾತಿಗೂ; ಏತತ್‌ಪ್ರಕರಣಸ್ಥ = ಛಾಂದೋಗ್ಯಪ್ರಕರಣದಲ್ಲಿರುವ; ಏತತ್ ಸಮನ್ವಯೇನ = ಛಾಂದೋಗ್ಯದಲ್ಲಿರುವ ಆಕಾಶಶಬ್ದದ ಸಮನ್ವಯದಿಂದ, ನಿರ್ಣೀತಬ್ರಹ್ಮಪ್ರಕರಣಸ್ಥ = ನಿರ್ಣಯವಾದ ತೈತ್ತಿರೀಯದಲ್ಲಿರುವ ಬ್ರಹ್ಮಪ್ರಕರಣದಲ್ಲಿರುವ; ಉಪಾದಾನತ್ವೇ-ಪ್ಯುಪಪತ್ತೇಃ = ನಿಮಿತ್ತಕಾರಣದಂತೆ ಉಪಾದಾನಕಾರಣ ಎಂಬರ್ಥವನ್ನು ಹೇಳುತ್ತದೆ.

**प्रकाशः** – ननु यदि '''को ह्येवान्यात्'' इत्यत्रत्याकाशस्य विष्णुत्वसिद्धिः फलं तर्हि नाधिकरणान्तरमारम्भणीयम्, ''विकारशब्दान्नेति चेत्'' इतिवत् हेतुव्यपदेशसूत्रानन्तरं ''आकाशशब्दान्नेति चेत्तल्लिङ्गात्'' इति गुणसूत्रेणैव विष्णोरेवाकाशशब्दवाच्यत्वोक्तिसम्भवात् । अधिकरणान्तरत्वेऽपि ''को ह्येवान्यात्'' इत्यस्यैव विषयत्वसम्भवे वाक्यान्तरोदाहरणस्यायुक्तत्वादित्याशङ्कते – **ननु यद्येवमिति ॥**

**साक्षादिति ॥** ''इति होवाच'' इत्यस्य भूतपरत्वात्तत्तुल्यन्यायतया अयमपि भूतपरस्स्यादित्यस्य वक्त्रत्वादिति भावः । इयं शङ्काऽन्तरधिकरण एव कुतो न कृता, किं विशिष्यात्रेत्यत आह – **अन्तस्स्थत्वस्य त्विति ॥**

यद्यपि ''यो वेद निहितं गुहायां'' इति मन्त्रवर्ण एवान्तस्स्थत्वं श्रुतं, तथाऽपि मन्त्रवर्णोक्तस्यैवात्रानन्दमयशब्देनोच्यमानत्वात् 'तत्प्रकरणे श्रवणेपि' इत्युक्तम् । यत् तावदुक्तमधिकरणान्तरं न कार्यमिति, तत् तावन्नेत्याह – **तथाऽपीति ॥** **न्यायेति ॥** अचेतनस्वभावस्यापि भगवदधीनत्व प्रतिपादनरूपन्यायभेदेनेत्यर्थः । अधिकरणान्तरत्वेऽपि वाक्यान्तरमयुक्तमित्येतन्निरस्यति – **आकाश इतीति ॥** **एतदिति ॥** ''इति होवाच'' इत्येतत्परामृश्यते ।

नन्वस्त्वधिकरणान्तरं वाक्यान्तरोदाहरणं च । तथाऽपि न भाष्योक्तं प्रयोजनं, ''सर्वाणि ह वा इमानि भूतान्याकाशादेव'' इति साक्षाच्छ्रुतकारणत्वस्य पूर्वपक्षे भूतनिष्ठत्वेन जन्मादिसूत्राक्षेपस्य ऋजुत्वादित्याशङ्क्याह – **अत्रेति ॥** **उपादानत्वेऽपीति ॥**

ननूपादानत्वोक्तौ का सङ्गतिः? इति चेत्, अयं भावः – "अस्य लोकस्य का गतिः" इति पृथिवीगतिप्रश्नस्य 'आकाशः' इत्युत्तरमभिधाय, कथमेतत्, अपां कार्यं हि पृथिवी, तत्रैव च लीयत इति तासामेव पृथिवीगतित्वोपपत्तेरित्याशङ्क्य, मैवं, मूलोपादानत्वात् इत्याह – **सर्वाणि ह वा इमानि भूतान्याकाशादेव समुत्पद्यन्त इति ।**

नच तर्हि "आत्मन आकाशः" इति श्रुतेरात्मा वाच्य इति शङ्क्यम्, भूतविषयविचारे वियत एव वक्तव्यत्वात् । न चाकाशस्यापि भूतत्वात् 'सर्वाणि' इति विरुद्धं, "इदं सर्वमसृजत" इतिवत् तद्व्यतिरिक्तग्रहणोपपत्तेः ।

नच 'एव' इत्यवधारणानुपपत्तिः, परम्परया भूतोपादानस्यापरस्याभावादिति । हेत्वन्तरमाह – **आनन्दमयेति ॥** तत्राक्षेपान्तराभावादिति भावः ।

ವಿವರಣೆ - 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾತ್' ಎಂಬ ತೈತ್ತಿರೀಯದಲ್ಲಿರುವ ಆಕಾಶಶಬ್ದದ ಸಮನ್ವಯವನ್ನು ವಿಷ್ಣುವಿನಲ್ಲಿ ಮಾಡುವುದು ಈ ಅಧಿಕರಣದ ಪ್ರಯೋಜನ ಎಂದು ಸಮರ್ಥಿಸಿದಿರಿ; ಹಾಗಾದಲ್ಲಿ, ಪ್ರತ್ಯೇಕವಾಗಿ ಆಕಾಶಾಧಿಕರಣವನ್ನು ಆರಂಭಿಸು-ವುದೇ ಬೇಡ. ಆನಂದಮಯಾಧಿಕರಣದಲ್ಲಿಯೇ ಇದನ್ನು ಸೇರಿಸಬಹುದು. ಆನಂದಮಯಶಬ್ದವು ವಿಷ್ಣುಪರವೆನ್ನಲು 'ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್' ಎಂಬ ಸೂತ್ರವು ಹೊರಟಂತೆ 'ತದ್ಧೇತುವ್ಯಪದೇಶಾಚ್ಚ' ಎಂಬ ಸೂತ್ರದ ಅನಂತರ 'ಆಕಾಶಶಬ್ದಾನ್ನೇತಿ ಚೇತ್ ತಲ್ಲಿಂಗಾತ್' ಎಂಬ ಗುಣಸೂತ್ರವನ್ನು ಉಲ್ಲೇಖಿಸಿದರೆ ಸಾಕು. ಇದರಿಂದಲೇ ಆಕಾಶಶಬ್ದ ಪ್ರತಿಪಾದ್ಯನಾದವನು ವಿಷ್ಣು-ಮಾತ್ರನೆಂದು ಸಮರ್ಥಿಸಿದಂತಾಗುತ್ತದೆ. ಪ್ರತ್ಯೇಕಾಧಿಕರಣದ ಆವಶ್ಯಕತೆ ಇರುವುದಿಲ್ಲ. ಪ್ರತ್ಯೇಕವಾದ ಅಧಿಕರಣವನ್ನು ಆರಂಭಿಸುವುದಾದರೂ ಸಹ 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್' ಎಂಬ ತೈತ್ತಿರೀಯವಾಕ್ಯವಷ್ಟೇ ವಿಷಯವಾಕ್ಯವಾಗುತ್ತದೆ. ಛಾಂದೋಗ್ಯದ ಉದಾಹರಣೆಯು ಕೂಡುವುದಿಲ್ಲ. ಈ ಎರಡೂ ಆಶಂಕೆಗಳನ್ನು 'ನನು ಯದ್ಯೇವಂ' ಎಂಬ ಗ್ರಂಥದಿಂದ ಮಾಡುತ್ತಿದ್ದಾರೆ.

'ಆಕಾಶ ಇತಿ ಹೋವಾಚ' ಎಂಬ ಛಾಂದೋಗ್ಯವು ಭೂತಪರವಾದರೆ ಸಮಾನನ್ಯಾಯದಿಂದ ತೈತ್ತಿರೀಯದ 'ಕೋ ಹ್ಯೇವಾನ್ಯಾತ್' ಎಂಬ ವಾಕ್ಯವೂ ಸಹ ಭೂತಪರವಾಗುತ್ತದೆಂದು ಹೇಳುವುದು ವಕ್ರಮಾರ್ಗ. ಇದಕ್ಕಿಂತ ತೈತ್ತಿರೀಯದ ವಾಕ್ಯವು ಭೂತಪರವಾಗಿದೆಯೆಂದು ಪೂರ್ವಪಕ್ಷ ಮಾಡಿ ಬ್ರಹ್ಮಲಿಂಗಗಳಿರುವುದರಿಂದ ಭೂತಪರವಲ್ಲವೆಂದು ಸಿದ್ಧಾಂತ ಮಾಡುವುದು ನೇರಮಾರ್ಗ.

ವಾಕ್ಯಾಂತರವನ್ನು ಅಪೇಕ್ಷಿಸದೆ ವಿಷಯವಾಕ್ಯದಿಂದಷ್ಟೇ ಆಕ್ಷೇಪ ಸಿದ್ಧಾಂತಗಳನ್ನು ಮಾಡಿದರೆ ಅಂತರಧಿಕರಣದಲ್ಲಿಯೂ ಸಹ ಹೀಗೆಯೇ ಮಾಡಿರಿ. ಆಕಾಶಾಧಿಕರಣದಲ್ಲಿ ವಾಕ್ಯಾಂತರವನ್ನು ಉದಾಹರಿಸುವುದು ಬೇಡವೆನ್ನುತ್ತೀರಿ. ಆದರೆ ಅಂತರಧಿಕರಣದಲ್ಲಿ ವಾಕ್ಯಾಂತರವನ್ನು ಉದಾಹರಿಸಿಯೇ

ಪೂರ್ವಪಕ್ಷ ಮಾಡಿದ್ದೀರಿ. ಈ ಒಂದೊಂದು ಅಧಿಕರಣಗಳಲ್ಲಿ ಒಂದೊಂದು ವಿಧವಾದ ನಿಮ್ಮ ಧೋರಣೆಗಳನ್ನು ಶಿಷ್ಯರು ಹೇಗೆ ಅರ್ಥೈಸಿಕೊಳ್ಳಬೇಕು? ಎಂಬ ಶಂಕೆಗೆ 'ಅಂತಃಸ್ಥತ್ವಸ್ಯ ತು' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

'ಯೋ ವೇದ ನಿಹಿತಂ ಗುಹಾಯಾಮ್' ಎಂಬ ಮಂತ್ರವರ್ಣದಲ್ಲಿರುವ ಗುಹಾನಿಹಿತತ್ವವು ಅಂತಃಸ್ಥತ್ವವನ್ನು ಹೇಳುತ್ತಿದೆ. ಆದ್ದರಿಂದ ಆನಂದಮಯಪ್ರಕರಣದಲ್ಲಿಯೇ ಅಂತಸ್ಥತ್ವವು ಶ್ರುತವಾಗಿದೆ. ಆದರೂ ಸಹ ಪೂರ್ವಪಕ್ಷಪ್ರಾಪಕವಾದ ಅನ್ಯತ್ರಪ್ರಸಿದ್ಧ್ಯಾದಿಗಳು ಇರುವುದಿಲ್ಲ. ಈ ಮಂತ್ರವರ್ಣದಿಂದ ಆನಂದಮಯನು ಪ್ರತಿಪಾದ್ಯನಾಗಿದ್ದಾನೆ. ಅವನು ಅಂತಃಸ್ಥನೂ ಆಗಿದ್ದಾನೆ ಎಂದಷ್ಟೇ ತಿಳಿಯುತ್ತದೆ. ಈ ವಿಚಾರವನ್ನು 'ತತ್ ಪ್ರಕರಣೇ ಶ್ರವಣೇಽಪಿ' ಎಂಬ ಮಾತಿನಿಂದ ಗ್ರಂಥಕಾರರು ತಿಳಿಸಿದ್ದಾರೆ.

ಆನಂದಮಯಾಧಿಕರಣದಲ್ಲಿಯೇ ಆಕಾಶಾಧಿಕರಣದ ಪ್ರಮೇಯವನ್ನು ಸಾಧಿಸಲು ಬರುವಾಗ ಪ್ರತ್ಯೇಕ ಅಧಿಕರಣದ ರಚನೆಯು ಅನಾವಶ್ಯಕವೆಂದು ಹಿಂದೆ ಆಕ್ಷೇಪಿಸಿದ್ದರು. ಅದನ್ನು 'ತಥಾಪಿ' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ. ಪ್ರತ್ಯೇಕ ಅಧಿಕರಣವು ವ್ಯರ್ಥವಾಗದಿರಬಹುದು. ಆದರೆ ಛಾಂದೋಗ್ಯವಾಕ್ಯದ ಉದಾಹರಣೆಯು ಅನಾವಶ್ಯಕವೆಂಬ ಮತ್ತೊಂದು ಆಕ್ಷೇಪಕ್ಕೆ 'ಆಕಾಶ ಇತಿ' ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಅಧಿಕರಣಾಂತರವು ಮತ್ತು ವಾಕ್ಯಾಂತರ ಉದಾಹರಣೆಯು ಸಾರ್ಥಕವಾಗಲಿ, ಆದರೆ ಭಾಷ್ಯದಲ್ಲಿ ಹೇಳಿದ ಪ್ರಯೋಜನವನ್ನು ಈ ಅಧಿಕರಣಕ್ಕೆ ಹೇಳಲಾಗದು. 'ಸರ್ವಾಣಿ ಹ ವಾ ಇಮಾನಿ ಭೂತಾನಿ ಆಕಾಶಾದೇವ ಸಮುತ್ಪದ್ಯಂತೇ' ಎಂಬ ಶ್ರುತಿಯಲ್ಲಿ ಸಾಕ್ಷಾತ್ತಾಗಿ ಭೂತಕಾರಣತ್ವವು ಆಕಾಶದಲ್ಲಿ ಕೇಳಿಸುತ್ತಿದೆ. ಆದ್ದರಿಂದ ಜನ್ಮಾಧಿಕರಣದಲ್ಲಿ ನಿರ್ಣಯಿಸಿದ ಜಗತ್ಕಾರಣತ್ವವು ಬ್ರಹ್ಮನಿಗೆ ಕೂಡುವುದಿಲ್ಲ. ಹೀಗೆ ಜನ್ಮಾಧಿಕರಣವನ್ನು ಈ ಅಧಿಕರಣದಲ್ಲಿ ಉತ್ತರಿಸಲಾಗುತ್ತಿದೆಯೆಂದು ನೇರವಾಗಿ ಹೇಳಲು ಬರುತ್ತದೆ. ಆದರೆ ಭಾಷ್ಯದಲ್ಲಿ ಆನಂದಮಯಾಧಿ-ಕರಣದ ಆಕ್ಷೇಪಕ್ಕೆ ಈ ಅಧಿಕರಣದಲ್ಲಿ ಉತ್ತರಿಸುತ್ತಿದ್ದಾರೆಂದು ಪ್ರಯೋಜನವನ್ನು ಹೇಳಿದ್ದಾರೆ. ಇದು ಸರಿಯಲ್ಲವೆಂಬ ಆಕ್ಷೇಪಕ್ಕೆ 'ಅತ್ರ ಯದ್ಯಪಿ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

ಜನ್ಮಾಧಿಕರಣದಲ್ಲಿ ನಿಮಿತ್ತಕಾರಣತ್ವವನ್ನು ಹೇಳಿದ್ದಾರೆ. ಆದರೆ 'ಸಮುತ್ಪದ್ಯಂತೇ' ಎಂಬ ಶ್ರುತಿಯು ನಿಮಿತ್ತಕಾರಣದಂತೆ ಉಪಾದಾನಕಾರಣವನ್ನು ಹೇಳಬಹುದು. ಹಾಗಾಗಿ ಜನ್ಮಾಧಿಕರಣದಿಂದ ಸಂಗತಿ ಹೇಳುವುದು ದುರ್ಲಭವಾಗಿದೆ.

ಪ್ರಶ್ನೆ – 'ಅಸ್ಯ ಲೋಕಸ್ಯ ಕಾ ಗತಿಃ?' ಎಂದು ಪೃಥಿವೀಗತಿಯ ಪ್ರಶ್ನೆಗೆ. 'ಆಕಾಶ ಇತಿ ಹೋವಾಚ' ಎಂದು ಉತ್ತರಿಸಿದ ಮೇಲೆ ಪುನಃ ಇದು ಹೇಗೆ? ಎಂಬ ಪ್ರಶ್ನೆ ಬರುತ್ತದೆ. ಪೃಥಿವೀಯು ಜಲದ ಕಾರ್ಯವಾಗಿದೆ. ಜಲದಲ್ಲೇ ಲೀನವಾಗುತ್ತದೆ. ಆದ್ದರಿಂದ ಪೃಥಿವೀಗೆ ಗತಿ ಜಲವಾಗುತ್ತದೆ ಹೊರತು ಆಕಾಶವಾಗುವುದಿಲ್ಲವಲ್ಲ?

ಉತ್ತರ – ಎಲ್ಲ ತತ್ವಗಳಿಗೂ ಸಹ ಮೂಲ ಉಪಾದಾನವಾದದ್ದು ಆಕಾಶ. ಪ್ರಕೃತ ಪೃಥಿವೀಗೆ ಮೂಲೋಪಾದಾನವಾದದ್ದು ಯಾವುದು? ಎಂದೇ ಪ್ರಶ್ನೆಯ ಆಂತರ್ಯ. ಈ ಪ್ರಶ್ನೆಗೆ 'ಸರ್ವಾಣಿ ಹ ವಾ

ಇಮಾನಿ ಭೂತಾನಿ ಆಕಾಶಾದೇವ ಸಮುತ್ಪದ್ಯಂತೇ' (ಪೃಥಿವೀ ಮೊದಲಾದ ಸಕಲಭೂತಪದಾರ್ಥಗಳು ಆಕಾಶದಿಂದಲೇ ಹುಟ್ಟುತ್ತವೆ) ಎಂಬ ವಾಕ್ಯವು ಸಮಂಜಸವಾದ ಉತ್ತರವನ್ನು ನೀಡುತ್ತಿದೆ.

ಪ್ರಶ್ನೆ - ಆಕಾಶಕಾರಣತ್ವಕ್ಕಿಂತ ಮೊದಲು ಅಪ್ ಕಾರಣತ್ವವನ್ನು ಶ್ರುತಿ ಹೇಳುತ್ತಿದೆ. 'ಆತ್ಮನಃ ಆಕಾಶಃ ಸಂಭೂತಃ' (ಆತ್ಮನಿಂದ ಆಕಾಶವು ಹುಟ್ಟಿತು) ಈ ಶ್ರುತಿಯಿಂದ ಸಕಲಭೂತಪದಾರ್ಥಗಳಿಗೆ ಆತ್ಮನೇ ಮೂಲ ಉಪಾದಾನಕಾರಣನೆಂದು ತಿಳಿಯುವಾಗ ಆಕಾಶವು ಮೂಲ ಉಪಾದಾನವೆಂದು ಹೇಗೆ ಹೇಳುತ್ತೀರಿ?

ಉತ್ತರ - ಆತ್ಮನು ಚೇತನನಾಗಿದ್ದಾನೆ. ಪೃಥಿವೀ ಮೊದಲಾದವುಗಳು ಅಚೇತನವಾಗಿವೆ. ಅಚೇತನ ಪದಾರ್ಥಗಳಿಗೆ ಮತ್ತೊಂದು ಅಚೇತನ ಪದಾರ್ಥವೇ ಉಪಾದಾನಕಾರಣವಾಗಬೇಕು. ಆಕಾಶವು ಅಚೇತನವಾದ ಭೂತಪದಾರ್ಥವಾದ್ದರಿಂದ ಪೃಥಿವ್ಯಾದಿಗಳಿಗೆ ಉಪಾದಾನಕಾರಣವಾಗುತ್ತದೆ ಆತ್ಮನಾಗಲಾರ.

ಪ್ರಶ್ನೆ - 'ಆಕಾಶಾದೇವ' ಎಂದು ಜಲಾದಿಗಳನ್ನು ವ್ಯಾವೃತ್ತಿ ಮಾಡುವ ಏವಕಾರವು ತಪ್ಪಲ್ಲವೇ? ಪೃಥಿವೀಗೆ ಆಕಾಶವು ಉಪಾದಾನಕಾರಣವಾದಂತೆ ಜಲವೂ ಉಪಾದಾನಕಾರಣವಾಗುತ್ತದೆ. ಆದರೆ ಶ್ರುತಿಯು ಏವಕಾರದಿಂದ ಆಕಾಶ ಮಾತ್ರ ಉಪಾದಾನಕಾರಣವೆಂದು ಹೇಳುವುದು ಹೇಗೆ ಸರಿ.

ಉತ್ತರ - ಜಲವು ಕೇವಲ ಪೃಥಿವೀಗೆ ಉಪಾದಾನಕಾರಣವಾಗಿದೆ. ಆದರೆ ಆಕಾಶವು ಸಕಲಭೂತಪದಾರ್ಥಗಳಿಗೂ ಉಪಾದಾನಕಾರಣವಾಗಿದೆ. ಪರಂಪರಯಾ ಅಥವಾ ಸಾಕ್ಷಾತ್ತಾಗಿ ಸಕಲಭೂತಪದಾರ್ಥಗಳಿಗೆ ಉಪಾದಾನಕಾರಣವಾದದ್ದು ಆಕಾಶ ಮಾತ್ರವೇ ಹೊರತು ಉಳಿದ ಯಾವ ಪದಾರ್ಥಗಳೂ ಆಗುವುದಿಲ್ಲ. ಈ ವಿಷಯವನ್ನು ಏವಕಾರವು ನಿಖರವಾಗಿ ಹೇಳುತ್ತಿದೆ.

ಆನಂದಮಯಾಧಿಕರಣದಿಂದಲೇ ಆಕ್ಷೇಪಮಾಡಿಕೊಳ್ಳಬೇಕು ಎನ್ನುವುದಕ್ಕೆ ಇನ್ನೊಂದು ಕಾರಣವನ್ನು 'ಆನಂದಮಯಾಧಿಕರಣಾನಾಕ್ಷೇಪೇ' ಎಂಬ ಗ್ರಂಥದಿಂದ ವಿವರಿಸುತ್ತಿದ್ದಾರೆ. ಅಂತರಧಿಕರಣಕ್ಕಾಗಲೀ, ಪ್ರಾಣಾಧಿಕರಣಕ್ಕಾಗಲೀ ಆನಂದಮಯಾಧಿಕರಣದಿಂದಲೇ ಆಕ್ಷೇಪ ಮಾಡಿಕೊಳ್ಳಬೇಕು. ಬೇರೆ ಆಕ್ಷೇಪವು ಇರುವುದಿಲ್ಲ. ಹೀಗೆ ಅನಿವಾರ್ಯವಾಗಿ ಆನಂದಮಯಾಧಿಕರಣದ ಅನಂತರವೇ ಅಂತರಧಿಕರಣ ಪ್ರಾಣಾಧಿಕರಣಗಳನ್ನು ನಿವೇಶಿಸುವುದು ಉಚಿತ. ಈ ಎರಡು ಅಧಿಕರಣಗಳ ಮಧ್ಯದಲ್ಲಿ ಆನಂದಮಯಾಧಿಕರಣವನ್ನು ನಿವೇಶಿಸಿದ್ದರಿಂದ ಈ ಅಧಿಕರಣಕ್ಕೂ ಆನಂದಮಯಾಧಿಕರಣದಿಂದಲೇ ಆಕ್ಷೇಪಿಸಿ ಸಾರ್ಥಕ್ಯವನ್ನು ಹೇಳಬೇಕೆಂದು ಮನದಟ್ಟಾಗುತ್ತದೆ.

**गुरुराजीयम्** – नन्वानन्दमयाधिकरणाक्षेपेणास्तु विचारसाफल्यम् । तथाऽपि वाक्यान्तरोदाहरणमयुक्तं आनन्दमयप्रकरणस्थे यदेष इत्यत्रैव पूर्वपक्ष-सिद्धान्तौ कर्तव्यौ । लाघवात् इति शङ्कते – **नन्विति** ॥ तर्ह्यानन्दमय-प्रकरणेऽतस्स्थत्वस्य श्रुतत्वादन्तरधिकरणेपि वाक्यान्तरं नोदाहर्तव्यम् । अत आह – **अन्तस्स्थत्वस्येति** ॥ तस्य स्वतोन्यत्र प्रसिद्ध्यभावादिति ॥

यद्यपि द्युभ्वाद्यधिकरणे 'एवं सर्वगतत्वादीनि ब्रह्मण्ययुक्तत्वादेव अन्यत्र प्रसिद्धानि' इति वक्ष्यमाणत्वात् गुहानिहितत्वरूपान्तस्स्थत्वस्यापि स्वत एवान्यत्र प्रसिद्धिर्वक्तुं शक्या, तथापि अथवान्यत्र प्रसिद्धेरन्यत्र प्रसिद्धान्य-साहित्यसापेक्षत्वात् इति तत्पूर्वोक्तपक्षानुसारेणेदमित्यविरोधः ॥

**तत्प्रकरणेऽभावेनेति** ॥ यद्यपि 'ते ये शतं प्रजापतेरानन्दाः ते ये शतं बृहस्पतेरानन्दाः' इतीन्द्रादिश्रुतिरप्यस्ति तथाप्यस्य उपहंसारस्थाया उपक्रमस्थ-गुहानिहितत्वेन मध्यस्थसृष्ट्यन्नमयादिप्रकरणैरव्यवधानात् प्रकृते चान्तस्थप्रश्न–प्रकरण एवेन्द्रादिश्रुतिश्रवणाद्वैषम्यमित्याशयेनोक्तं **तत्प्रकरण इति** ॥ किं वा बाधकपरिहारत्वादस्य विकारशब्दादिवत् अधिकरणान्तर्भाव इत्याशयः, किं वा भिन्नाधिकरणत्वेऽपि वाक्यं तदेवोदाहार्यमिति विकल्पं मनसि निधाय क्रमेण निराह – **सत्यमित्यादिना** ॥

नन्वेवं तर्हि पुनर्वैषम्यापत्त्योक्ताक्षेपानुपपत्तितादवस्थ्यमिति चेन्न । तथा पूर्वपक्षफलस्य जिज्ञासाक्षेपपर्यन्तस्य सिद्धये विद्यमानस्याप्यस्य विषयत्वस्य पूर्वपक्षिणा विवक्षणोपपत्तेः, यद्वा भूतलयाद्यधिष्ठानत्वादिभूतलिङ्गोपेतस्यापि 'इति होवाच' इति वाक्यस्य ब्रह्मलिङ्गाद् ब्रह्मपरत्वे भूतलिङ्गविधुरस्य यदेष इति वाक्यस्य ब्रह्मपरत्वं किमु वाच्यम्? इति सिद्धान्ते कैमुत्येनैव सिद्धान्त–फलसिद्धेरभिप्रेतत्वात् तदनुसारेण पूर्वपक्षेपि परोवरीयस्त्वादिब्रह्मलिङ्गोपेतस्यापि भूतपरत्वे भूतप्रसिद्धिबाधकब्रह्मलिङ्गविधुरस्य भूतपरत्वं कैमुत्येनैव स्यादित्या–क्षेपाभिप्रायः । **न्यायभेदेनेति** ॥ आनन्दमयाधिकरणे 'गुणिसामान्यवाचिनां गुण -वाचिनां च समन्वयः आकाशाधिकरणे चाधिभूतगताशेषशब्दसमन्वयः प्रति-पाद्यते' इति न्यायभेदेन – इत्यर्थः ।

यद्वा 'अचेतनस्वभावस्यापि भगवदधीनत्वम्' इत्येतदधिकरणन्यायेन – इत्यर्थः । ननु यदेष इति वाक्यसमन्वयेनैव 'इति होवाच' इत्यस्यापि समन्वयसिद्धौ तद्वाक्यस्थगुणलाभस्यापि सम्भवेन वाक्यान्तरोदाहरणमयुक्तम् । अन्यथा यदेष इत्यस्य समन्वयार्थमप्यधिकरणान्तरमारभ्येत, इत्यत आह – **तथैतदिति** ॥

ननु यदेष इति वाक्यसमन्वय उक्ते एतत्समानन्यायानामपि समन्वयः सेत्स्यतीति निर्णीतत्वानिर्णीतत्वे अप्रयोजके इति न वाक्यान्तरमुदाहर्तव्यम् इत्यत आह – **तथा सिद्धान्तिनेति** ॥ ननु चात्र जन्माधिकरणाक्षेपस्यापि सम्भवेन प्रयोजनस्यान्यथाप्युपपत्तेर्नैतद्भाष्यं चिन्तासाफल्यपरम् । अन्यथा अन्तरधिकरणेपि 'अदृश्येऽनात्म्ये' इत्यादिभाष्यस्य चिन्तासाफल्यपरत्वापत्त्या सङ्गतिप्रदर्शकत्वाभावापत्तेः । तत्र तथाभ्युपगमे चात्रापि तथैव स्यात्, इत्यत आह – **अत्र यद्यपीत्यादिना** ॥

ननु 'समुत्पद्यन्ते' इत्यस्य निमित्तकारणपरत्वेप्युपपत्तेः जन्मादिसूत्रोक्त-कर्तृत्वाक्षेपः स्यादेव, इत्यत आह – **आनन्दमयाधिकरणानाक्षेप इति** ॥

## ಸಾರ

ಆಕಾಶಾಧಿಕರಣಕ್ಕೆ ಹೀಗೆ ಆನಂದಮಯಾಧಿಕರಣದಿಂದ ಸಂಗತಿಯನ್ನು ಹೇಳುವುದಾದರೆ ಈ ಅಧಿ-ಕರಣವೇ ವ್ಯರ್ಥ. ಹೇಗೆಂದರೆ ಇಲ್ಲಿ ಆಕಾಶಶಬ್ದವು ವಿಷ್ಣು ವಾಚಕ ಎಂದು ಸಾಧಿಸುತ್ತಾರೆ. ಆದರೆ ಅದನ್ನು ಹೇಳಲು ಪ್ರತ್ಯೇಕ ಅಧಿಕರಣದ ಅವಶ್ಯಕತೆಯಿಲ್ಲ. ಆನಂದಮಯ ಎಂಬಲ್ಲಿ ಮಯಟ್‌ಪ್ರತ್ಯಯವು ವಿಕಾರಾರ್ಥಕ ಎಂದು ಆಕ್ಷೇಪ ಮಾಡಿ ಸಮಾಧಾನ ಮಾಡುವ ಸೂತ್ರವನ್ನು ಆನಂದಮಯಾಧಿಕರಣದಲ್ಲಿ ಸೇರಿಸಿದಂತೆ ಆನಂದಮಯಪ್ರಕರಣದಲ್ಲಿ ಆಕಾಶಶಬ್ದವಿರುವುದರಿಂದ ವಿಷ್ಣುವಿನಲ್ಲಿ ಎಂದು ಆಕ್ಷೇಪ ಮಾಡಿ ಸಮಾಧಾನ ಪಡಿಸುವ ಸೂತ್ರವನ್ನು ಅಲ್ಲಿಯೇ ಸೇರಿಸಬಹುದಾದ್ದರಿಂದ ಪ್ರತ್ಯೇಕ ಅಧಿಕರಣದ ಅವಶ್ಯಕತೆಯಿಲ್ಲ.

ಹೀಗೆ ಹೇಳುವುದಾದರೆ ಆನಂದಮಯನಲ್ಲಿ ಶ್ರುತವಾದ ಅಂತಸ್ಥತ್ವವನ್ನಿಟ್ಟುಕೊಂಡು ಅಂತಸ್ಥತ್ವಾಧಿ-ಕರಣವನ್ನು ಪ್ರಾರಂಭ ಮಾಡಿದ್ದಾರೆ. ಅಲ್ಲಿಯೂ ಹೀಗೆಯೇ ಹೇಳಿ ಆನಂದಮಯಾಧಿಕರಣದಲ್ಲಿಯೇ ಆ ಸೂತ್ರವನ್ನು ಸೇರಿಸಬಹುದು ಎಂದು ಆಕ್ಷೇಪ ಮಾಡಬಹುದು. ಅಲ್ಲಿ ಆಕ್ಷೇಪಿಸದೆ ಇಲ್ಲಿ ಏಕೆ ಹೇಳುತ್ತೀರಿ? ಎಂದರೆ ಅಂತಸ್ಥತ್ವವು ಆನಂದಮಯನಲ್ಲಿ ಶ್ರುತವಾದರೂ, ಆಕಾಶಶಬ್ದವು ಹೇಗೆ ವಿಷ್ಣುವನ್ನು ಬಿಟ್ಟು ಬೇರೆಯ-ವರಲ್ಲಿ (ಭೂತಾಕಾಶ) ಪ್ರಸಿದ್ಧವಾಗಿದೆಯೋ ಹಾಗೆ ಅಂತಸ್ಥತ್ವವೂ ಶ್ರುತವಾಗಿಲ್ಲ.

ಮತ್ತು ಅನ್ಯತ್ರಪ್ರಸಿದ್ಧವಾದ ಇಂದ್ರಾದಿ ಶ್ರುತಿಗಳ ಸಹಕಾರವೂ ಅದಕ್ಕಿಲ್ಲ. ಹಾಗಾಗಿ ಅದೇ ವಾಕ್ಯದಲ್ಲಿ ಈ ರೀತಿ ಪೂರ್ವಪಕ್ಷ ಮಾಡಲು ಅವಕಾಶವಿಲ್ಲವಾದ್ದರಿಂದ ಬೇರೆ ವಾಕ್ಯವನ್ನು ಇಟ್ಟುಕೊಂಡು ಪ್ರತ್ಯೇಕ ಅಧಿಕರಣ-ರಚನೆ ಮಾಡುವುದು ಅನಿವಾರ್ಯ. ಆದರೆ ಆಕಾಶಶಬ್ದವಾದರೂ ಆನಂದಮಯನಲ್ಲಿ ಶ್ರುತವಾಗಿದೆ. ಮತ್ತು ಅನ್ಯತ್ರ ಭೂತಾಕಾಶದಲ್ಲಿ ಪ್ರಸಿದ್ಧವಾಗಿದೆ. ಆದ್ದರಿಂದ ಅದೇ ವಾಕ್ಯದಲ್ಲಿ ಪೂರ್ವಪಕ್ಷ ಮಾಡಲು ಬರುವುದರಿಂದ ಪ್ರತ್ಯೇಕಾಧಿಕರಣದ ಅವಶ್ಯಕತೆಯಿಲ್ಲ ಎಂದು ಹೇಳಿದ್ದು ಎನ್ನಬಾರದು. ಆಕಾಶಶಬ್ದವನ್ನು ಸಮನ್ವಯ ಮಾಡಲು ಪ್ರತ್ಯೇಕವಾಗಿ ಅಧಿಕರಣರಚನೆ ಮಾಡುವುದಕ್ಕೆ ಅನೇಕ ಕಾರಣಗಳಿವೆ.

೧) ಆನಂದಮಯ ಎಂಬಲ್ಲಿ ಮಯಟ್ ಶಬ್ದವು ಹೇಗೆ ಆನಂದಮಯಶಬ್ದದ ಒಂದು ಭಾಗವಾಗಿದೆಯೋ ಹಾಗೆಯೇ ಆಕಾಶಶಬ್ದವು ಆನಂದಮಯಶಬ್ದದ ಒಂದು ಭಾಗವಾಗಿ ಆನಂದಮಯ ಶಬ್ದದಲ್ಲಿ ಸೇರಿಲ್ಲವಾದ್ದರಿಂದ ಅದೇ ನ್ಯಾಯದಿಂದ ಸಮನ್ವಯ ಮಾಡಲು ಬರುವುದಿಲ್ಲ. ಆದ್ದರಿಂದ ಮತ್ತೊಂದು ಯುಕ್ತಿಯನ್ನು ಹೇಳಬೇಕಾಗುತ್ತದಾದ್ದರಿಂದ ಬೇರೆ ಅಧಿಕರಣವನ್ನು ರಚಿಸಲಾಗಿದೆ.

೨) ಬೇರೆ ಅಧಿಕರಣದಿಂದ ಸಮನ್ವಯ ಮಾಡಲು ಹೊರಟಾಗ "ಆಕಾಶ ಇತಿ ಹೋವಾಚ" ಎನ್ನುವ ಮತ್ತೊಂದು ವಾಕ್ಯವನ್ನು ವಿಷಯವಾಕ್ಯವೆಂದಿಟ್ಟುಕೊಂಡಾಗ. 'ಯದೇಷ ಆಕಾಶ' ಎಂದು ಆನಂದಮಯನಲ್ಲಿ ಶ್ರುತವಾದ ವಾಕ್ಯದಲ್ಲಿರದ ಅನೇಕ ಗುಣಗಳು ಮತ್ತೊಂದು ವಾಕ್ಯದಲ್ಲಿರುವುದರಿಂದ ಅವುಗಳೂ ಕೂಡ ಈ ಆಕಾಶನಲ್ಲಿ ಹೇಳಿದಂತಾಗುತ್ತದೆ.

೩) ಮತ್ತು 'ಆಕಾಶ ಇತಿ ಹೋವಾಚ' ಎಂಬ ಬ್ರಹ್ಮ ಪ್ರಕರಣವೆಂದು ನಿರ್ಧರಿಸಲ್ಪಟ್ಟ ವಾಕ್ಯದಲ್ಲಿರುವ ಯುಕ್ತಿಗಳು 'ಯದೇಷ ಆಕಾಶ' ಎನ್ನುವ ವಾಕ್ಯದಲ್ಲಿ ಇಲ್ಲವಾದ್ದರಿಂದ ಅದಕ್ಕೋಸ್ಕರ ಆನಂದಮಯ ಪ್ರಕರಣ-ದಲ್ಲಿರುವ ವಿಷಯ ವಾಕ್ಯವನ್ನು ಬಿಟ್ಟು ಮತ್ತೊಂದನ್ನು ಹೇಳಬೇಕಾಗುತ್ತದೆ.

ವಸ್ತುತಃ ಇಲ್ಲಿ ಆನಂದಮಯಾಧಿಕರಣದಿಂದ ಸಂಗತಿ ತೋರಿಸಿದಂತೆ. "ಆಕಾಶಾದೇವ ಸಮುತ್ಪದ್ಯಂತೇ" ಎಂದಿರುವುದರಿಂದ ಜನ್ಮಾಧಿಕರಣದಿಂದಲೂ ಸಂಗತಿಯನ್ನೂ ಹೇಳಬಹುದು. ಆದರೆ ಇಲ್ಲಿ ಶ್ರುತವಾದ ಕಾರಣತ್ವ-ವನ್ನು ನಿಮಿತ್ತಕಾರಣ ಎನ್ನದೆ ಉಪಾದಾನಕಾರಣ ಎಂದು ಕೂಡಿಸಬಹುದಾದ್ದರಿಂದ ಆನಂದಮಯಾಧಿ-ಕರಣದಿಂದಲೇ ಸಂಗತಿಯನ್ನು ಹೇಳಿದ್ದಾರೆ. ಆನಂದಮಯಾಧಿಕರಣದಿಂದ ಸಂಗತಿಯನ್ನು ಹೇಳದಿದ್ದರೆ ಅದರಿಂದ ಸಂಗತಿ ಇರುವ ಅಂತಸ್ಥ್ವಾಧಿಕರಣದ ನಂತರ ಈ ಸೂತ್ರವಿರುವುದು ಸಂಗತವಾಗುವುದಿಲ್ಲವಾದ್ದರಿಂದ ಆನಂದಮಯಾಧಿಕರಣದಿಂದ ಸಂಗತಿ ಹೇಳಿದ್ದಾರೆ.

---

## ವಿದ್ವಾಂಸಾಭಾಸರ ನಿರಾಕರಣೆ

**तात्पर्यचन्द्रिका –**

**केचित्तु – 'अचेतनस्यैव पूर्वपक्षिणाऽऽकाशत्वेन शङ्क्यमानत्वात् जन्मादि-सूत्रोक्तकर्तृत्वानाक्षेपः' इत्याहुः ।**

**तन्न, अचेतनस्याप्यभिमानिद्वारा आनन्दमयत्ववत् कर्तृत्वस्याप्युपपत्तेः ।**

**अन्ये तु – 'सन्निकृष्टानन्दमयाक्षेपसम्भवे विप्रकृष्टजन्मादिसूत्राक्षेपो न युक्तः' इत्याहुः । तन्न, टीकायामानन्दमयाक्षेपस्य व्यवहितजिज्ञासाक्षेपपर्यन्तत्वोक्तेः ।**

ಅನುವಾದ - ಇಲ್ಲಿ ಕೆಲವರು ಜನ್ಮಾದಿಸೂತ್ರದಿಂದ ಭಾಷ್ಯಕಾರರು ಆಕ್ಷೇಪವನ್ನು ಏಕೆ ಮಾಡಲಿಲ್ಲ? ಎಂದರೆ ಈ ಅಧಿಕರಣದ ಪೂರ್ವಪಕ್ಷಿಯು ಅಚೇತನವಾದ ಆಕಾಶವೇ

ಸಕಲಕಾರಣವೆಂದು ಆಕ್ಷೇಪಿಸುತ್ತಿದ್ದಾನೆ. ಆದರೆ ಜನ್ಮಾದಿಸೂತ್ರದಲ್ಲಿ ನಿರ್ಣಯಿಸಿದ ಕರ್ತೃತ್ವವು ಚೇತನನಿಷ್ಠವಾಗಿದೆ. ಅದನ್ನು ಈ ಅಧಿಕರಣದಲ್ಲಿ ಆಕ್ಷೇಪಿಸಲಾಗದು.

ನಿರಾಕರಣೆ - ಅಚೇತನಪದಾರ್ಥಕ್ಕೂ ಸಕಲಜಗತ್ಕರ್ತೃತ್ವವನ್ನು ಆಕ್ಷೇಪಿಸಬಹುದು. ಯಾವರೀತಿಯಾಗಿ ಆನಂದಮಯತ್ವವು ಅಚೇತನ ಪದಾರ್ಥದಲ್ಲಿ ಅನುಪಪನ್ನವಾದಾಗ ಅಭಿಮಾನಿಯ ವಿವಕ್ಷೆಯಿಂದ ಸಮರ್ಥಿಸಲಾಗುತ್ತದೋ, ಅದರಂತೆ ಜಡವು ಸಕಲಜಗತ್ಕಾರಣವಾಗದಿದ್ದರೂ ಅಭಿಮಾನಿಯು ಸಕಲಜಗತ್ಕಾರಣನಾಗಬಹುದು. ಹೀಗೆ ಅಭಿಮಾನಿಯ ವಿವಕ್ಷೆಯಿಂದ ಜಡಪದಾರ್ಥಕ್ಕೆ ಸಕಲಜಗತ್ಕಾರಣತ್ವ ಹೇಳುವುದು ತಪ್ಪಾಗುವುದಿಲ್ಲ.

ಇನ್ನು ಕೆಲವರು - ಹತ್ತಿರವಿರುವ ಆನಂದಮಯಾಧಿಕರಣವನ್ನೇ ಆಕ್ಷೇಪಿಸುವುದು ಸುಲಭ. ಜನ್ಮಾಧಿಕರಣವು ದೂರದಲ್ಲಿರುವುದರಿಂದ ಅದರ ಆಕ್ಷೇಪವು ಕ್ಲೇಶದಾಯಕವಾಗಿದೆ.

ನಿರಾಕರಣೆ - ಟೀಕೆಯಲ್ಲಿ ಆನಂದಮಯನನ್ನು ಆಕ್ಷೇಪಿಸಿ ಅತ್ಯಂತ ದೂರದಲ್ಲಿರುವ ಬ್ರಹ್ಮಜಿಜ್ಞಾಸೆಯು ತಪ್ಪೆಂದು ಆಕ್ಷೇಪಿಸುತ್ತಾರೆ. ಹಾಗಾಗಿ ದೂರದಲ್ಲಿರುವುದನ್ನು ಆಕ್ಷೇಪ ಮಾಡುವುದು ತಪ್ಪಾಗುವುದಿಲ್ಲ.

### ಕಠಿಣಪದಾರ್ಥ

ಕೇಚಿತ್ತು = ನಮ್ಮಲ್ಲಿನ ಕೆಲವು ವಿದ್ವಾಂಸರು; ಅಭಿಮಾನಿದ್ವಾರಾ = ಆಕಾಶವು ಅಚೇತನವಾದ್ದರಿಂದ ಆನಂದವು ಅನುಪಪನ್ನವಾಗುತ್ತದೆ, ಆದ್ದರಿಂದ ಅಭಿಮಾನಿದೇವತೆಯ ವಿವಕ್ಷೆಯಿಂದ ಆನಂದವನ್ನು ಕೂಡಿಸಬೇಕು; ಕರ್ತೃತ್ವಸ್ಯಾಪಿ = ಜಗತ್ಕಾರಣತ್ವವನ್ನು ಕೂಡ. ಉಪಪತ್ತೇಃ = ಅಭಿಮಾನಿಯ ಮೂಲಕವಾಗಿ ಕೂಡಿಸಬಹುದು; ಅನ್ಯೇ ತು = ಆಪಾತತಃ ತೋರುವ ಪರಿಹಾರ.

**प्रकाशः** – उत्तानदृशां परिहारमनूद्य निरस्यति – **केचित्त्विति ॥**

**अभिमानिद्वारेति ॥** ''आकाशस्याचेतनत्वेनानन्दानुपपत्तावपि अभिमानिद्वारा तदुपपत्तेः'' इति टीकोक्तेरिति भावः । आपाततः प्रतीयमानं परिहारान्तरमुट्टङ्क्य निरस्यति – **अन्ये त्विति ॥**

**टीकायामिति ॥** यद्यप्येतदधिकरणटीकायां न जिज्ञासासूत्राक्षेपपर्यन्तत्वोक्तिरस्ति तथाऽपि अन्तरधिकरणादौ तत्र तत्र टीकायां तदाक्षेपपर्यन्तत्वोक्तेरनुक्तिस्थले तदाक्षेपपर्यन्तत्वमभिप्रेतमिति भावः ।

ವಿವರಣೆ - ವಿಚಾರದ ಆಳಕ್ಕಿಳಿಯದ ಕೆಲವು ವಿದ್ವಾಂಸರ ಅಭಿಪ್ರಾಯವನ್ನು 'ಕೇಚಿತ್ತು' ಎಂದು

ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ. ಆಪಾತತಃ ತೋರುವ ಅರ್ಥವನ್ನು ಆಶಂಕಿಸಿ ನಿರಾಸ-ಮಾಡುತ್ತಿದ್ದಾರೆ - 'ಅನ್ಯೇತು' ಇತ್ಯಾದಿ ಗ್ರಂಥದಿಂದ.

ವಸ್ತುತಃ ಈ ಅಧಿಕರಣದ ಟೀಕೆಯಲ್ಲಿ ಜಿಜ್ಞಾಸಾಸೂತ್ರದ ಪರ್ಯಂತವಾಗಿ ಆಕ್ಷೇಪಿಸಿಲ್ಲ. ಆದರೆ ಅಂತರಧಿಕರಣವೇ ಮೊದಲಾದ ಅನೇಕ ಅಧಿಕರಣಗಳ ಟೀಕೆಯಲ್ಲಿ ಜಿಜ್ಞಾಸಾಸೂತ್ರಪರ್ಯಂತವಾಗಿ ಆಕ್ಷೇಪಿಸಿದ್ದಾರೆ. ಆಕಾಶಾಧಿಕರಣ ಮೊದಲಾದ ಅಧಿಕರಣಗಳಲ್ಲಿ ಜಿಜ್ಞಾಸಾಸೂತ್ರಪರ್ಯಂತವಾಗಿ ಆಕ್ಷೇಪ ಮಾಡದಿದ್ದರೂ ಟೀಕಾರಾಯರ ಅಭಿಪ್ರಾಯವಿದೆ ಎಂದು ತಿಳಿಯಬೇಕು.

**गुरुराजीयम् – केचित्त्विति ॥** बुद्ध्यादिमत्त्वघटितं कर्तृत्वमचेतने न सम्भवतीति भावः । एवं ह्यानन्दमयत्वमपि कथमचेतने स्यात्? न चाभिमानिद्वारा तदुपपत्तिः । कर्तृत्वस्याप्यभिमानिद्वारोपपत्तेरित्याह – **तन्नेति ॥**

## ಸಾರ

ಆನಂದಮಯಾಧಿಕರಣದಿಂದ ಸಂಗತಿಯನ್ನು ತೋರಿಸಿದ್ದಕ್ಕೆ ಕೆಲವರು ಹೀಗೆ ಅಭಿಪ್ರಾಯಪಡುತ್ತಾರೆ. ಪೂರ್ವಪಕ್ಷಿಗಳು 'ಆಕಾಶ' ಎಂದರೆ ಅಚೇತನವಾದ ವಸ್ತುವೆಂದು ಅಂಗೀಕರಿಸಿರುವುದರಿಂದ ಜನ್ಮಾದಿಸೂತ್ರದಲ್ಲಿ ಹೇಳಿರುವ ಚೇತನಕರ್ತೃತ್ವದಿಂದ ಸಂಗತಿಯನ್ನು ಹೇಳಲು ಬರುವುದಿಲ್ಲವಾದ್ದರಿಂದ ಹೀಗೆ ಹೇಳಿದ್ದು ಎನ್ನುತ್ತಾರೆ. ಅದು ಸರಿಯಲ್ಲ. ಆನಂದಮಯಶಬ್ದವಾಚ್ಯವಾದದ್ದು ಅಚೇತನವಾದರೂ ಅಭಿಮಾನಿದ್ವಾರಾ ಕರ್ತೃವಾಗ-ಬಹುದು. ಆದ್ದರಿಂದ ಆಕಾಶವೂ ಕರ್ತೃವಾಗಬಹುದಾದ್ದರಿಂದ ಈ ರೀತಿ ಸಮರ್ಥನೆ ಸರಿಯಲ್ಲ.

ಮತ್ತೆ ಕೆಲವರು. ಹತ್ತಿರವಿರುವ ಆನಂದಮಯಾಧಿಕರಣದಿಂದ ಸಂಗತಿಯನ್ನು ತೋರಿಸಲು ಬರುವಾಗ ದೂರದಲ್ಲಿರುವ ಜನ್ಮಾಧಿಕರಣದಿಂದ ಸಂಗತಿಯನ್ನು ತೋರಿಸುವುದು ಸರಿಯಲ್ಲವೆನ್ನುತ್ತಾರೆ. ಆದರೆ ಇದೂ ಸರಿಯಲ್ಲ. ಟೀಕೆಯಲ್ಲಿ ಆನಂದಮಯಾಧಿಕರಣಕ್ಕೆ ಸಂಗತಿಯನ್ನು ಹೇಳುವಾಗ ದೂರಸ್ಥವಾದ ಜಿಜ್ಞಾಸಾಧಿ ಕರಣದಿಂದ ಸಂಗತಿಯನ್ನು ತೋರಿಸಿದ್ದಾರೆ. ಹಾಗಾಗಿ ಸಂಗತಿಯಿರುವುದು ಮುಖ್ಯವೇ ಹೊರತು ಸಮೀಪದ ಸಂಗತಿಯೇ ದೂರದ ಸಂಗತಿ ಎನ್ನುವುದು ಮುಖ್ಯವಲ್ಲ.

------

## ಅಧಿಕರಣದ ಸಂಶಯಕೋಟಿಗಳು

### तात्पर्यचन्द्रिका

अत्र आकाशः किं भूताकाशः किं वा ब्रह्म इति? चिन्ता । तदर्थं किमाकाश-श्रुतिप्रसिद्ध्यनुसारेण परोवरीयस्त्वादिलिङ्गं बाध्यं किं वा विपरीतम्? इति । तदर्थं

**प्रसिद्धिबाधे श्रुतेः किं मुख्यत्वहानिः उत न? इति । तदर्थमाकाशशब्दप्रवृत्तिनिमित्तं ब्रह्मणि किं नास्ति उतास्ति? इति । तदर्थं जडस्वभावः किमीश्वरानधीनः उत तदधीनः? इति ।**

**यद्यधीनः, तदा तदधीनत्वन्यायेन ब्रह्मणि मुख्यत्वम्, अन्यथा तु न ।**

**यद्यपि निरवकाशलिङ्गैः लोकप्रसिद्धिबाध इह पूर्वत्र च अविशिष्टः विषयवाक्यभेदमात्रेण च नाधिकरणभेदः ।**

**तथाप्यधिकाशङ्कानिरासादपौनरुक्त्यम् । शङ्का च,**

**'चेष्टा हि चेतनानां या सा भवेत् तत्प्रसादतः ।**
**अचेतनस्वभावस्तु विवरादिः कथं ततः ॥'**

**इत्यनुव्याख्यानेन दर्शिता ।**

ಅನುವಾದ - ಈ ಅಧಿಕರಣದ ಸಂಶಯಕೋಟಿಗಳು -- ಶ್ರುತಿಯಲ್ಲಿರುವ ಆಕಾಶವು ಭೂತಾಕಾಶವೋ? ಅಥವಾ ಬ್ರಹ್ಮನೋ? ಎಂದು ಸಂಶಯ. ಈ ಸಂಶಯವು ಪರಿಹಾರವಾಗಬೇಕಾದರೆ ಆಕಾಶಶ್ರುತಿಯ ಪ್ರಸಿದ್ಧಿಯಿಂದ 'ಪರೋವರೀಯಸ್ತ್ವಾದಿ'ಲಿಂಗಗಳು ಬಾಧ್ಯವಾಗುತ್ತವೋ ಅಥವಾ ಪರೀವರೀಯಸ್ತ್ವಾದಿ ಲಿಂಗಗಳಿಂದ ಆಕಾಶಶ್ರುತಿಪ್ರಸಿದ್ಧಿಯು ಬಾಧ್ಯವಾಗುತ್ತದೋ? ಎಂಬ ಸಂಶಯವು ಪರಿಹಾರವಾಗಬೇಕು. ಈ ಸಂಶಯ ಪರಿಹಾರವಾಗಬೇಕಾದರೆ, ಪ್ರಸಿದ್ಧಿಬಾಧ ಹೇಳಿದರೆ ಶ್ರುತಿಗೆ ಮುಖ್ಯತ್ವ ಹಾನಿಯು ಬರುತ್ತದೋ ಅಥವಾ ಇಲ್ಲವೋ? ಎಂಬ ಸಂಶಯವು ಪರಿಹಾರವಾಗಬೇಕು. ಈ ಸಂಶಯವು ಪರಿಹಾರವಾಗಬೇಕಾದರೆ ಆಕಾಶಶಬ್ದದ ಪ್ರವೃತ್ತಿನಿಮಿತ್ತವು ಬ್ರಹ್ಮನಲ್ಲಿ ಇರುವುದಿಲ್ಲವೋ ಅಥವಾ ಇರುತ್ತದೋ? ಎಂಬ ಸಂಶಯವು ಪರಿಹಾರವಾಗಬೇಕು. ಈ ಸಂಶಯವು ಪರಿಹಾರವಾಗಬೇಕಾದರೆ ಜಡಸ್ವಭಾವವು ಈಶ್ವರನ ಅಧೀನ ಆಗಿಲ್ಲವೋ ಅಥವಾ ಆಗಿದೆಯೋ? ಎಂಬ ಸಂಶಯದ ಪರಿಹಾರವಾಗಬೇಕು.

ಒಂದು ವೇಳೆ ಈಶ್ವರನ ಅಧೀನವಾದರೆ ತದಧೀನತ್ವನ್ಯಾಯದಿಂದ ಬ್ರಹ್ಮನಲ್ಲಿ ಆಕಾಶಶಬ್ದವು ಮುಖ್ಯವಾಗುತ್ತದೆ. ಇಲ್ಲದಿದ್ದರೆ ಆಗುವುದಿಲ್ಲ. ವಸ್ತುತಸ್ತು ನಿರವಕಾಶಲಿಂಗಗಳಿಂದ ಲೋಕಪ್ರಸಿದ್ಧಿಗೆ ಬಾಧವನ್ನು ಈ ಅಧಿಕರಣದಲ್ಲಿ ಹೇಳುತ್ತಿರುವಂತೆ ಹಿಂದಿನ ಅಧಿಕರಣದಲ್ಲಿಯೂ ಹೇಳಿದ್ದಾರೆ. ಎರಡೂ ಅಧಿಕರಣಗಳ ಸಿದ್ಧಾಂತನ್ಯಾಯವು ಒಂದೇ ಆಗಿರುವುದರಿಂದ ಪ್ರತ್ಯೇಕ ಅಧಿಕರಣದ ಅವಶ್ಯಕತೆಯು ಇರುವುದಿಲ್ಲ. ಇನ್ನು ವಿಷಯವಾಕ್ಯದಲ್ಲಿ ಭೇದ ಇರುವುದರಿಂದ ಅಧಿಕರಣ-

ಭೇದವನ್ನು ಹೇಳುತ್ತೇವೆನ್ನುವುದು ಸಮಂಜಸವಾಗುವುದಿಲ್ಲ. ಆದರೂ ಸಹ ಅಭ್ಯಧಿಕಾಶಂಕೆಯನ್ನು ಈ ಅಧಿಕರಣದಲ್ಲಿ ನಿರಾಸ ಮಾಡುತ್ತಿರುವುದರಿಂದ ಹಿಂದಿನ ಅಧಿಕರಣದಿಂದ ಪುನರುಕ್ತಿಯು ಬರುವುದಿಲ್ಲ. ಅಭ್ಯಧಿಕಾಶಂಕೆಯನ್ನು ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ.

"ಚೇಷ್ಟಾ ಹಿ ಚೇತನಾನಾಂ ಯಾ ಸಾ ಭವೇತ್ ತತ್ಪ್ರಸಾದತಃ।
ಅಚೇತನಸ್ವಭಾವಸ್ತು ವಿವರಾದಿಃ ಕಥಂ ತತಃ ॥"

(ಚೇತನರ ಚೇಷ್ಟೆಯು ಭಗವಂತನ ಪ್ರಸಾದದಿಂದ ನಡೆಯುತ್ತದೆ. ಆದ್ದರಿಂದ ಭಗವಂತನ ಅಧೀನವಾಗಿದೆ. ಆದರೆ ಅಚೇತನ ಸ್ವಭಾವವು ಅಚೇತನಸ್ವಭಾವವಾದ ವಿವರಾದಿಗಳಿಗೆ ಭಗವಂತನ ಆಧೀನ್ಯವನ್ನು ಹೇಳಲು ಹೇಗೆ ಸಾಧ್ಯ ?)

### ಕಠಿಣಶಬ್ದಾರ್ಥ

ಅತ್ರ = 'ಅಸ್ಯಲೋಕಸ್ಯ' ಇತ್ಯಾದಿ ಛಾಂದೋಗ್ಯದಲ್ಲಿರುವ; ಬಾಧ್ಯಮ್ = ಸಾವಕಾಶ ಮಾಡಬೇಕು; ವಿಪರೀತಂ = ಲಿಂಗವನ್ನು ಅನುಸರಿಸಿ ಶ್ರುತಿಗೆ ಬಾಧ ಹೇಳಬೇಕು. ಪ್ರಸಿದ್ಧಿಬಾಧೇ = ಅನ್ಯಪರತ್ವವನ್ನು ಬಿಟ್ಟರೆ, ತದಧೀನತ್ವನ್ಯಾಯೇನ = ಅವರತ್ವಾದಿಗಳು ಭಗವಂತನ ಅಧೀನವಾಗಿವೆ ಎಂಬ ನ್ಯಾಯದಿಂದ; ತತ್‌ಪ್ರಸಾದತಃ = ಭಗವಂತನ ಪ್ರಸಾದದಿಂದ;

**प्रकाशः** – एवं सङ्गतिमुक्त्वा, भाष्यकारीयां प्रयोजनोक्तिं तत्र वाक्यान्तरोदाहरणं च समर्थ्य, इदानीं विषयसंशयौ दर्शयति – **अत्रेति** ॥

छान्दोग्ये "अस्य लोकस्य का गतिरिति आकाश इति होवाच सर्वाणि ह वा इमानि भूतान्याकाशादेव समुत्पद्यन्ते आकाशं प्रत्यस्तं यन्ति आकाशो ह्येवैभ्यो ज्यायानाकाशः परायणम् । स एष परोवरीयानुद्गीथः स एषोनन्तः" इति श्रुति-वाक्ये शालावत्येन कृतस्य पृथिवीगतिप्रश्नस्योक्तत्वेन प्रवाहणेनोक्तआकाशोऽत्र विषय इत्यर्थः । उपलक्षणमेतत् । 'वाय्वादिभूतवाचिनः सर्वेऽपि' इति ध्येयम् ।

**भूतेति** ॥ आकाशशब्दस्यावकाशसाधारणत्वेऽपि भूतप्रकरणत्वात् 'भूताकाशः' इत्युक्तम् ॥ **बाध्यमिति** ॥ सावकाशयितव्यमित्यर्थः ॥ **विपरीतमिति** ॥ लिङ्गानुसारेण श्रुतिर्बाध्येत्यर्थः । 'प्रसिद्धिबाधे' अन्यपरत्वत्याजने ।

अस्पष्टांशो फलफलिभावं स्वयमेवाह – **यदधीन इति** ॥ अन्यत्र स्पष्टमिति भावः । तथा हि – 'यदि जडस्वभाव ईश्वरानधीनस्तदा जडस्वभावं प्रति स्वातन्त्र्यरूपस्य जडवाचिशब्दप्रवृत्तिनिमित्तस्य ब्रह्मण्यभावाच्छ्रुतेः मुख्यत्वहानेन

बाधायोगाच्छ्रुत्या भूतम्' इति पूर्वपक्षे फलफलिभावः । 'यद्यधीनस्तदा स्वातन्त्र्य-रूपप्रवृत्तिनिमित्तस्य सत्त्वात् ब्रह्मणि श्रुतेर्मुख्यत्वेन बाधाभावेन विष्णुः' इति सिद्धान्ते फलफलिभावः ।

**तदधीनत्वन्यायेनेति ॥** 'आनुमानिकमप्येकेषाम्' इत्यधिकरणे, 'तदधीनत्वा-दर्थवत्' इति गुणसूत्रे 'अव्यक्तात् पुरुषः परः' इत्यादौ – अव्यक्तादिगतावरत्वस्य भगवद्गतत्वाभावेऽपि तस्मिन्नेवावरत्वादिवाचिशब्दजातमर्थवत्, प्रधानादिगत-परावरत्वादिधर्माणां भगवदधीनत्वात् – इति वक्ष्यमाणन्यायेन जडस्वभावस्य विवरत्वादेर्भगवत्यभावेऽपि तदधीनत्वेन जडवाचिशब्दवाच्यत्वं भविष्यतीत्यर्थः ।

नन्वत्राकाशस्वभाव ईश्वराधीनस्तदनधीन इति वा, भूतस्वभावः तदधीनस्तदनधीन इति वा चिन्तनीयम् । न तु जडस्वभाव इति चेत्, अयं भावः – न केवलं भूतवाचिन एवोदाहरणं, किं तु स्वभावप्रवृत्तिनिमित्तकास्सर्वेऽपि जडवाचिनः – इति । वक्ष्यते चैतदनुपदम् ।

अनुव्याख्यानोक्तप्रमेयाश्रिताभ्यधिकाशङ्कोपयुक्तेयं चिन्तापरम्परा सूत्रप्रतिज्ञांश-व्यावर्त्या प्रदर्शिता । हेत्वंशव्यावर्त्यभाष्यादिसूचितप्रमाणाश्रिताभ्यधिकाशङ्कोप-युक्ता तु 'लिङ्गं बाध्यं किं वा विपरीतम्' इत्यनन्तरं, 'तदर्थं श्रुतिः प्रबला लिङ्गं तु दुर्बलमुत विपरीतमिति, तदर्थं श्रुतिप्राबल्ये हेतुरस्ति न वा' इति द्रष्टव्या ।

पूर्वेणेदं गतार्थमित्याक्षिप्य, समाधत्ते – **यद्यपीति ॥** विषयभेदेनाधिकरणभेद-माशङ्क्य निरस्यति – **विषयेति ॥** तथात्वे विषयाणामनन्तत्वेन शास्त्रापर्यवसानं स्यादिति भावः । भाष्ये अनुपलम्भादाह – **शङ्का चेति ॥** 'दर्शिता' इत्यन्वयः ।

ವಿವರಣೆ - ಇಲ್ಲಿಯ ತನಕ ಆಕಾಶಾಧಿಕರಣಕ್ಕೆ ಸಂಗತಿಯನ್ನು, ಭಾಷ್ಯಕಾರರು ಹೇಳಿದ ಪ್ರಯೋಜನವನ್ನು, ಮತ್ತು ವಾಕ್ಯಾಂತರ ಉದಾಹರಣೆಯ ಅನಿವಾರ್ಯತೆಯನ್ನು ಸಮರ್ಥಿಸಿದ್ದಾಯಿತು. ಪ್ರಕೃತ ಆಕಾಶಾಧಿಕರಣದ ವಿಷಯ ಮತ್ತು ಸಂಶಯಗಳನ್ನು 'ಅತ್ರ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಛಾಂದೋಗ್ಯದಲ್ಲಿ "ಅಸ್ಯ ಲೋಕಸ್ಯ ಕಾ ಗತಿರಿತಿ ಆಕಾಶ ಇತಿ ಹೋವಾಚ ಸರ್ವಾಣಿ ಹವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ ಆಕಾಶಂ ಪ್ರತ್ಯಸ್ತಂ ಯಂತಿ ಆಕಾಶೋ ಹ್ಯೇವೈಭ್ಯೋ ಜ್ಯಾಯಾನಾಕಾಶಃ ಪರಾಯಣಂ ಸ ಏಷ ಪರೋ ವರೀಯಾನ್ ಉದ್ಗೀಥಃ ಸ ಏಷೋ ಅನಂತಃ' ಎಂದು ಕೇಳಿಸುತ್ತಿದೆ. ಇದು ಆಕಾಶಾಧಿಕರಣದ ವಿಷಯವಾಕ್ಯ.

ವಾಯುವೇ ಮೊದಲಾದ ಸಕಲಭೂತವಾಚಕಶಬ್ದಗಳನ್ನು ಸಂಶಯಕೋಟಿಯಲ್ಲಿ ಸೇರಿಸಬೇಕು. ಮೊದಲನೆಯ ಸಂಶಯದಲ್ಲಿ 'ಭೂತಾಕಾಶಃ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಆಕಾಶಶಬ್ದದಿಂದ ಅವ್ಯಾಕೃತಾಕಾಶವನ್ನು ವಿವಕ್ಷಿಸಲು ಬರುತ್ತದೆ. ಭೂತಪ್ರಕರಣವು ಪ್ರಕೃತವಾದ್ದರಿಂದ 'ಭೂತಾಕಾಶಃ' ಎಂದೇ ಸಂಶಯಕೋಟಿಯಲ್ಲಿ ಹೇಳಿದ್ದಾರೆ. ಸಂಶಯಕೋಟಿಯಲ್ಲಿರುವ ಅಸ್ಪಷ್ಟಭಾಗದ ಫಲಫಲಿಭಾವವನ್ನು ಸ್ವತಃ ಗ್ರಂಥಕಾರರು ಯದ್ಯಧೀನಃ ಎಂಬ ವಾಕ್ಯದಿಂದ ತೋರಿಸಿದ್ದಾರೆ. ಉಳಿದ ಫಲಫಲಿಭಾವವು ಸ್ಪಷ್ಟವಾಗಿಯೇ ಇದೆ. ಅದು ಹೀಗೆ - ಒಂದು ವೇಳೆ ಜಡಸ್ವಭಾವವು ಈಶ್ವರನ ಅಧೀನವಾಗದಿದ್ದರೆ ಜಡಸ್ವಭಾವವನ್ನು ಕುರಿತು ಸ್ವಾತಂತ್ರ್ಯರೂಪವಾದ ಜಡವಾಚಿಯಾದ ಶಬ್ದಪ್ರವೃತ್ತಿನಿಮಿತ್ತವು ಬ್ರಹ್ಮನಲ್ಲಿ ಬರುವುದಿಲ್ಲ. ಆವಾಗ ಶ್ರುತಿಗೆ ಮುಖ್ಯತ್ವದ ಹಾನಿಯಿಂದ ಬಾಧವನ್ನು ಹೇಳಲಾಗದ ಕಾರಣ ಶ್ರುತಿಯು ಭೂತಪರವಾಗುತ್ತದೆ. ಇಷ್ಟು ಪೂರ್ವಪಕ್ಷದ ಫಲಫಲಿಭಾವ.

ಒಂದುವೇಳೆ ಜಡಸ್ವಭಾವವು ಈಶ್ವರನ ಅಧೀನವಾದಲ್ಲಿ ಸ್ವಾತಂತ್ರ್ಯರೂಪವಾದ ಪ್ರವೃತ್ತಿನಿಮಿತ್ತವು ಬ್ರಹ್ಮನಲ್ಲಿ ಬರುತ್ತದೆ. ಆವಾಗ ಶ್ರುತಿಯು ಬ್ರಹ್ಮನಲ್ಲಿ ಮುಖ್ಯವಾಗುವ ಕಾರಣ ಬಾಧವನ್ನು ಹೇಳಲಾಗದು. ಶ್ರುತಿಯಿಂದ ಮುಖ್ಯಪ್ರತಿಪಾದ್ಯನು ವಿಷ್ಣುವೇ ಆಗುತ್ತಾನೆ. ಇಷ್ಟು ಸಿದ್ಧಾಂತದ ಫಲಫಲಿಭಾವ.

ತದಧೀನತ್ವನ್ಯಾಯದಿಂದ ಜಡವಾಚಕವಾದ ಶಬ್ದಗಳಿಂದ ಭಗವಂತನು ಪ್ರತಿಪಾದ್ಯನಾಗುತ್ತಾನೆಂದು ಇಲ್ಲಿ ಗ್ರಂಥಕಾರರು 'ತದಧೀನತ್ವನ್ಯಾಯೇನ' ಇತ್ಯಾದಿಯಾಗಿ ಹೇಳಿದ್ದಾರೆ. 'ಆನುಮಾನಿಕಮಪ್ಯೇಕೇಷಾಮ್ ' ಎಂಬ ಅಧಿಕರಣದಲ್ಲಿ 'ತದಧೀನತ್ವಾದರ್ಥವತ್' ಎಂಬ ಗುಣಸೂತ್ರವಿದೆ. ಅಲ್ಲಿ 'ಅವ್ಯಕ್ತಾತ್ ಪುರುಷಃ ಪರಃ' ಇತ್ಯಾದಿ ವಾಕ್ಯದಿಂದ ಅವ್ಯಕ್ತ್ಯಾದಿಗಳಲ್ಲಿರುವ ಅವರತ್ವವು ತಿಳಿಯುತ್ತದೆ. ಈ ಅವರತ್ವವನ್ನು ಭಗವಂತನಲ್ಲಿ ಹೇಳಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ 'ಅಸ್ಮಿನ್ನೇವಾವರತ್ವಾದಿವಾಚಿಶಬ್ದಜಾತಮರ್ಥವತ್ । ಪ್ರಧಾನಾದಿಗತ-ಪರಾವರತ್ವಾದಿಧರ್ಮಾಣಾಂ ಭಗವದಧೀನತ್ವಾತ್ (ಭಗವಂತನಲ್ಲಿ ಅವರತ್ವಾದಿಗಳನ್ನು ಹೇಳುವ ಶಬ್ದಸಮೂಹವು ಅರ್ಥವುಳ್ಳವುಗಳು. ಪ್ರಧಾನಾದಿಗಳಲ್ಲಿರುವ ಪರಾವರತ್ವಾದಿ ಧರ್ಮಗಳು ಭಗವದಧೀನ- ವಾದ್ದರಿಂದ)' ಎಂಬ ನ್ಯಾಯದಿಂದ ಉತ್ತರಿಸಿದ್ದಾರೆ. ಪ್ರಕೃತ ಜಡಸ್ವಭಾವವಾದ ವಿವರತ್ವಾದಿಗಳನ್ನು ಭಗವಂತನಲ್ಲಿ ಹೇಳಲು ಹೇಗೆ ಸಾಧ್ಯ ? ಎಂಬ ಪ್ರಶ್ನೆ ಬಂದರೆ ಮೂರನೆಯ ಪಾದದ ಆನುಮಾನಿಕಾಧಿಕರಣದಲ್ಲಿ ಹೇಳಿರುವ ತದಧೀನತ್ವನ್ಯಾಯವನ್ನೇ ಅನುಸರಿಸಬೇಕು. ಆಕಾಶಾದಿಗಳಲ್ಲಿರುವ ವಿವರತ್ವಾದಿಗಳು ಭಗವಂತನ ಅಧೀನವಾದ್ದರಿಂದ ಜಡವಾಚಕಶಬ್ದಪ್ರತಿಪಾದ್ಯತ್ವವನ್ನು ಸುಲಭವಾಗಿ ಭಗವಂತನಲ್ಲಿ ಹೇಳಬಹುದು.

ಪ್ರಶ್ನೆ - ಇಲ್ಲಿ ಜಡಸ್ವಭಾವವು ಈಶ್ವರನ ಅಧೀನವಲ್ಲವೋ? ಅಥವಾ ಅಧೀನವೋ? ಎಂದು ಸಂಶಯ ತೋರಿಸಿದ್ದಾರೆ. ಆದರೆ ಆಕಾಶದ ಸ್ವಭಾವವು ಈಶ್ವರನ ಅಧೀನವಲ್ಲವೋ ಅಥವಾ ಹೌದೋ? ಎಂದು ಸಂಶಯ ತೋರಿಸಬೇಕಿತ್ತು. ಅಥವಾ ಭೂತಸ್ವಭಾವವು ಈಶ್ವರನ ಅಧೀನವಲ್ಲವೋ ಹೌದೋ? ಎಂದಾದರೂ ಸಂಶಯ ತೋರಿಸಬಹುದಿತ್ತು.

ಉತ್ತರ - ಈ ಅಧಿಕರಣದಲ್ಲಿ ಭೂತವಾಚಕವಾದ ಶಬ್ದಗಳ ಸಮನ್ವಯವಷ್ಟೇ ಉದ್ದೇಶವಾಗಿಲ್ಲ; ಹೊರತಾಗಿ ಸ್ವಭಾವವೇ ಪ್ರವೃತ್ತಿನಿಮಿತ್ತವಾಗಿ ಉಳ್ಳ ಜಡವಾಚಕವಾದ ಸಕಲಶಬ್ದಗಳ ಸಮನ್ವಯವು

ಉದ್ದೇಶವಾಗಿದೆ. ಈ ವಿಷಯವನ್ನು ಸದ್ಯದಲ್ಲೇ ಉಪಪಾದಿಸುವವರಿದ್ದಾರೆ. ಅನುವ್ಯಾಖ್ಯಾನದಲ್ಲಿ ಹೇಳಿರುವ ಪ್ರಮೇಯವನ್ನು ಆಶ್ರಯಿಸಿ ಗ್ರಂಥದಲ್ಲಿ ಚಿಂತಾಪರಂಪರೆಯನ್ನು ತೋರಿಸಿದ್ದಾರೆ. ಇದರಿಂದ ಹಿಂದಿನ ಅಧಿಕರಣದ ಮೇಲಿರುವ ಅಭ್ಯಧಿಕಾಶಂಕೆಯನ್ನು ತೋರಿಸಿದಂತೆಯೂ ಆಗುತ್ತದೆ. ಆದರೆ ಭಾಷ್ಯದಲ್ಲಿ ಪ್ರಮಾಣವನ್ನು ಆಶ್ರಯಿಸಿದ ಅಭ್ಯಧಿಕಾಶಂಕೆಯನ್ನು ತೋರಿಸಿದ್ದಾರೆ. ಅದಕ್ಕೆ ಉಪಯುಕ್ತವಾದ ಚಿಂತಾಪರಂಪರೆಯನ್ನು ಗ್ರಂಥಕಾರರು ತೋರಿಸಿಲ್ಲ. ಉಪಲಕ್ಷಣಯಾ ಅದನ್ನು ಸ್ವತಃ ಊಹಿಸಬೇಕು -- ಪರೋವರೀಯಸ್ತ್ವಾದಿಲಿಂಗಗಳು ಆಕಾಶಶ್ರುತಿಯಿಂದ ಬಾಧ್ಯವಾಗುತ್ತದೋ ಅಥವಾ ಆಕಾಶಶ್ರುತಿಯೇ ಪರೋವರೀಯಸ್ತ್ವಾದಿಲಿಂಗಗಳಿಂದ ಬಾಧ್ಯವಾಗುತ್ತದೋ? ಎಂಬ ಸಂಶಯದ ಅನಂತರ ಈ ಎರಡು ಸಂಶಯಗಳನ್ನು ತಿಳಿಯಬೇಕು. ಈ ಸಂಶಯವು ಪರಿಹಾರವಾಗಬೇಕೆಂದರೆ 'ಶ್ರುತಿಯು ಪ್ರಬಲ, ಲಿಂಗವು ದುರ್ಬಲ' ಎಂದು ಹೇಳಬೇಕೋ? 'ಲಿಂಗವು ಪ್ರಬಲ, ಶ್ರುತಿಯು ದುರ್ಬಲ' ಎಂದು ಹೇಳಬೇಕೋ? ಎಂಬ ಸಂಶಯವು ಪರಿಹಾರವಾಗಬೇಕು. ಈ ಸಂಶಯ ಪರಿಹಾರವಾಗಬೇಕಾದರೆ ಶ್ರುತಿಪ್ರಾಬಲ್ಯಕ್ಕೆ ಹೇತುವಿದೆಯೋ ಇಲ್ಲವೋ? ಎಂಬ ಸಂಶಯವು ಪರಿಹಾರವಾಗಬೇಕು -- ಎಂದು.

ಹಿಂದಿನ ಅಧಿಕರಣದಿಂದಲೇ ಆಕಾಶಾಧಿಕರಣದ ಸಿದ್ಧಾಂತವು ಗತಾರ್ಥವಾಗಿದೆಯಲ್ಲವೆ? ಎಂದು ಆಕ್ಷೇಪಿಸಿ ಸಮಾಧಾನವನ್ನು 'ಯದ್ಯಪಿ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ವಿಷಯವಾಕ್ಯದ ಭೇದದಿಂದ ಅಧಿಕರಣಭೇದವನ್ನು ಹೇಳಬಹುದಲ್ಲವೇ? ಎಂಬ ಶಂಕೆಯನ್ನು 'ವಿಷಯವಾಕ್ಯ' ಎಂಬ ಗ್ರಂಥದಿಂದ ನಿರಾಸ ಮಾಡುತ್ತಿದ್ದಾರೆ. ವಿಷಯವಾಕ್ಯದಿಂದ ಅಧಿಕರಣಭೇದ ಹೇಳುವುದಾದರೆ ವಿಷಯವಾಕ್ಯಗಳು ಅನಂತವಾದ್ದರಿಂದ ಶಾಸ್ತ್ರಕ್ಕೆ ಪರ್ಯವಸಾನವೇ ಇಲ್ಲದಿರಬೇಕಾಗಿತ್ತು. ನೀವು ಹೇಳಿದ ಅಭ್ಯಧಿಕಾಶಂಕೆಯು ಭಾಷ್ಯದಲ್ಲಿ ತೋರುತ್ತಿಲ್ಲ ? ಎಂದು ಸಂಶಯ ಬಂದರೆ ಅನುವ್ಯಾಖ್ಯಾನದ ಆಧಾರದಿಂದ ಉತ್ತರಿಸುತ್ತಿದ್ದಾರೆ.

**गुरुराजीयम्** – अन्त्यचिन्ताया अव्यवहितोपान्त्यचिन्तार्थत्वप्रतीतिं वारयति ॥ **यद्यधीन इति** ॥ अस्याधिकरणस्य पूर्वाधिकरणेन गतार्थतां परिहरति – **यद्यपीति** ॥

नन्वभ्यधिकाशंकायाश्टीकादावप्रदर्शितत्वात् तत्प्रदर्शने टीकाविरोधः स्यात्, इत्यत आह – **शङ्का चेति** ॥

## ಸಾರ

ಈ ಅಧಿಕರಣದ ಚಿಂತಾಕ್ರಮ ಹೀಗಿದೆ -

ಇಲ್ಲಿ ಆಕಾಶವೆಂದರೆ ಭೂತಾಕಾಶವನ್ನು ಇಟ್ಟುಕೊಳ್ಳಬೇಕೋ ಅಥವಾ ಬ್ರಹ್ಮನನ್ನೋ? ಅದಕ್ಕೋಸ್ಕರ ಶ್ರುತಿಪ್ರಸಿದ್ಧಿಯನ್ನಿಟ್ಟುಕೊಂಡು 'ಪರೋವರೀಯಸ್ತ್ವ' ಲಿಂಗವು ಬಾಧ್ಯವೋ? ಅಥವಾ ಪರೋವರೀಯಸ್ತ್ವ

ಲಿಂಗದಿಂದ ಶ್ರುತಿಯೇ ಬಾಧ್ಯವೋ? ಅದಕ್ಕೋಸ್ಕರ ಪ್ರಸಿದ್ಧಿಬಾಧ ಬಂದಾಗ ಶ್ರುತಿಗೆ ಮುಖ್ಯಾರ್ಥತ್ವ ಹಾನಿಯಾಗುತ್ತದೋ ? ಅಥವಾ ಇಲ್ಲವೋ? ಅದಕ್ಕೋಸ್ಕರ ಆಕಾಶ ಶಬ್ದದ ಪ್ರವೃತ್ತಿ ನಿಮಿತ್ತವು ಬ್ರಹ್ಮನಲ್ಲಿ ಇಲ್ಲವೋ? ಅಥವಾ ಇದೆಯೋ? ಅದಕ್ಕೋಸ್ಕರ ಜಡದ ಸ್ವಭಾವವು ಈಶ್ವರನ ಅಧೀನವಲ್ಲವೋ? ಅಥವಾ ಈಶ್ವರನ ಅಧೀನವೋ? ಎಂದು ಚಿಂತಾ.

ಒಂದು ವೇಳೆ ಜಡದ ಸ್ವಭಾವವು ಈಶ್ವರನ ಅಧೀನವೆಂದಾದರೆ 'ತದಧೀನತ್ವ' ನ್ಯಾಯದಂತೆ ಆಕಾಶಶಬ್ದವು ಬ್ರಹ್ಮನಲ್ಲಿ ಮುಖ್ಯವೆಂದಾಗುತ್ತದೆ. ಇಲ್ಲವೆಂದರೆ ಬ್ರಹ್ಮನಲ್ಲಿ ಆಕಾಶ ಶಬ್ದವು ಮುಖ್ಯವಲ್ಲವೆಂದಾಗುತ್ತದೆ.

ವಸ್ತುತಃ ಹಿಂದಿನ ಅಧಿಕರಣದಲ್ಲಿರುವ ನಿರವಕಾಶಲಿಂಗದಿಂದ ಲೋಕಪ್ರಸಿದ್ಧಿಗೆ ಬಾಧವನ್ನು ಹೇಳಬೇಕು ಎಂದು ನಿರ್ಣಯಿಸಿದೆ. ಅದನ್ನೇ ಇಲ್ಲಿ ಹೇಳಿದ್ದು. ಹಾಗಾಗಿ ಒಂದೊಂದು ವಿಷಯ ವಾಕ್ಯವನ್ನಿಟ್ಟುಕೊಂಡು ಅಧಿ ಕರಣ ಭೇದವನ್ನು ಹೇಳಿದರೆ ಆನಂತ್ಯದೋಷಬರುತ್ತದಲ್ಲವೆ? ಎಂದು ಪ್ರಶ್ನೆ ಬರಬಹುದು. ಆದರೆ ಕೇವಲ ವಿಷಯವಾಕ್ಯಭೇದವನ್ನಿಟ್ಟುಕೊಂಡು ಇಲ್ಲಿ ಅಧಿಕರಣರಚನೆ ಮಾಡಿದ್ದಲ್ಲ. ಕಿಂತು ಹಿಂದಿನ ಅಧಿಕರಣಕ್ಕಿಂತಲೂ ಅಧಿಕಾಶಂಕಾವಿರುವುದರಿಂದ. ಅದರ ನಿರಾಕರಣೆ ಮಾಡಲು ಈ ಅಧಿಕರಣವನ್ನು ರಚನೆ ಮಾಡಲಾಗಿದೆ. ಅಧಿ ಕಾಶಂಕೆಯನ್ನು ಅನುವ್ಯಾಖ್ಯಾನದಲ್ಲಿ ತೋರಿಸಿದ್ದಾರೆ.

---

## ಅನುವ್ಯಾಖ್ಯಾನಸೂಚಿತ ಪೂರ್ವಪಕ್ಷ

### तात्पर्यचन्द्रिका

तत्राकाशशब्दप्रवृत्तिनिमित्तस्य विवरत्वादेः भगवदधीनत्वे अचेतनगतत्वं स्वभावत्वं चेति हेतुद्वयं विवक्षितम् ।

तत्र आद्ये भृत्यगतस्य जयस्य राजाधीनत्वेन 'राजा जयी' इति प्रयोगस्येव अचेतनगतप्रवृत्तिनिमित्तस्य चेतनाधीनत्वे चेतने जडवाचिशब्द-प्रयोगस्य अदर्शनात्, तत्प्रसादलब्धत्वरूपं तदधीनत्वं शब्दप्रवृत्तिनिमित्तम्, न तु यथेष्टविनियोगार्हत्वरूपम् । न चाचेतने भगवतः प्रसादोऽस्ति इति शङ्काभिप्रायः । अत एवानुव्याख्याने "तत्प्रसादतः" इत्युक्तम् । एवं चाचेतनगतप्रवृत्तिनिमित्तकाः सर्वेऽपि शब्दा इह तेन रूपेण विचार्याः ।

द्वितीये तु इन्द्रादिशब्दप्रवृत्तिनिमित्तानामैश्वर्यादीनामिव विवरत्वादीनां स्वभावत्वान्नेशाधीनता, अन्याधीनत्वे स्वभावत्वहानेः । भृत्यादिगतस्वाभाविका-

**भिरूप्यादिना राज्ञाभिरूपादिशब्दाप्रयोगाच्चेति शङ्काभिप्रायः । अत्रापि स्वाभाविकप्रवृत्तिनिमित्तकाः शब्दाः सर्वेऽपीह तेन रूपेण विचार्याः ।**

**कस्यचिदुदाहर्तव्यत्वादानन्दमयाक्षेपकत्वाच्च आकाशशब्द उदाहृतः, वाजपेयाधिकरणे उद्भिदादिशब्दानामपि विचार्यत्वेऽपि वाजपेयशब्द इव ।**

ಅನುವಾದ - ಅನುವ್ಯಾಖ್ಯಾನದಲ್ಲಿ ಸೂಚಿಸಿದ ಪೂರ್ವಪಕ್ಷ ಹೀಗಿದೆ - ಆಕಾಶಶಬ್ದದ ಪ್ರವೃತ್ತಿನಿಮಿತ್ತವು ವಿವರತ್ವವಾಗಿದೆ. ಈ ವಿವರತ್ವವು ಭಗವಂತನ ಅಧೀನವಲ್ಲವೆನ್ನಲು ಅಚೇತನಗತತ್ವ ಮತ್ತು ಸ್ವಭಾವತ್ವ ಎಂದು ಎರಡು ಹೇತುಗಳು ವಿವಕ್ಷಿತವಾಗಿವೆ. ಮೊದಲನೆಯ ಹೇತುವನ್ನು ವಿವಕ್ಷಿಸಿದಾಗ ಅನುಮಾನವನ್ನು ಹೀಗೆ ತಿಳಿಯಬೇಕು - ''ವಿವರತ್ವಾದಿಕಂ ನ ಭಗವದಧೀನಂ, ಅಚೇತನಗತತ್ವಾತ್'' ಎಂದು. ''ಭೃತ್ಯನಲ್ಲಿರುವ ಜಯವು ರಾಜಾಧೀನವಾಗಿದೆ, ಆದ್ದರಿಂದ ಭೃತ್ಯನು ಗೆದ್ದರೆ ರಾಜನು ಗೆದ್ದ'' ಎಂಬ ಪ್ರಯೋಗವು ಲೋಕದಲ್ಲಿ ಕಾಣಿಸುತ್ತದೆ.

ಇದರಂತೆ ಅಚೇತನದಲ್ಲಿರುವ ಪ್ರವೃತ್ತಿನಿಮಿತ್ತವು ಚೇತನಾಧೀನವಾದರೆ ಚೇತನನಲ್ಲಿ ಜಡವಾಚಕವಾದ ಶಬ್ದಪ್ರಯೋಗವು ಕಾಣಿಸುವುದಿಲ್ಲ. ಆದ್ದರಿಂದ 'ತತ್ಪ್ರಸಾದಲಬ್ಧತ್ವ'ವನ್ನೇ 'ತದಧೀನತ್ವ' ಎಂದು ಹೇಳಬೇಕು. ಇದು ಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ಎಂದರೆ ಭಗವಂತನ ಪ್ರಸಾದಕ್ಕೆ ವಿಷಯವಾಗಿರುವಿಕೆಯನ್ನು ಶಬ್ದಪ್ರವೃತ್ತಿನಿಮಿತ್ತವೆನ್ನಬೇಕು ಹೊರತು 'ಯಥೇಷ್ಟವಿನಿಯೋಗಾರ್ಹತ್ವ (ಇಚ್ಛೆಬಂದಂತೆ ವಿನಿಯೋಗಿಸುವಿಕೆ)' ರೂಪವಾದದ್ದಲ್ಲ. ಅಚೇತನದಲ್ಲಿ ಭಗವಂತನ ಪ್ರಸಾದವಿಷಯತ್ವವನ್ನು ಹೇಳಲು ಸಾಧ್ಯವಿಲ್ಲ. ಚೇತನದಲ್ಲಷ್ಟೇ ಇಂತಹ ಪ್ರವೃತ್ತಿನಿಮಿತ್ತವನ್ನು ಹೇಳಬಹುದು. ಆದ್ದರಿಂದ ಭೃತ್ಯನು ಗೆದ್ದರೆ 'ರಾಜಾ ಜಯೀ' ಎಂಬ ಪ್ರಯೋಗವು ಸಮಂಜಸವಾಗುತ್ತದೆ. ಆದರೆ ಘಟಾದಿಗಳಲ್ಲಿರುವ 'ಪೃಥುಬುಧ್ನೋದರಾದ್ಯಾಕಾರತ್ವ'ವು ಕುಲಾಲನ ಅಧೀನವಾದ ಮಾತ್ರದಿಂದ ಕುಲಾಲನಲ್ಲಿ ಪೃಥುಬುಧ್ನೋದರಾದಿಶಬ್ದಗಳ ಪ್ರತಿಪಾದ್ಯತ್ವವು ಬರುವುದಿಲ್ಲ.

ಅನುವ್ಯಾಖ್ಯಾನದಲ್ಲಿ ಹೀಗೆ ಪ್ರಸಾದಲಬ್ಧತ್ವರೂಪವಾದ ತದಧೀನತ್ವವನ್ನೇ ವಿವಕ್ಷಿಸಬೇಕೆಂದು ''ತತ್ಪ್ರಸಾದತಃ'' ಎಂಬ ಪದವನ್ನು ಬಳಸಿದ್ದಾರೆ. ಹೀಗೆ ಅಚೇತನದಲ್ಲಿರುವ ಪ್ರವೃತ್ತಿನಿಮಿತ್ತಗಳನ್ನು ಅಪೇಕ್ಷಿಸಿರುವ ಎಲ್ಲಾ ಶಬ್ದಗಳನ್ನು ಈ ಆಕಾಶಾಧಿಕರಣದಲ್ಲಿ ವಿಮರ್ಶಿಸಲಾಗಿದೆ. ಅಚೇತನಗತಪ್ರವೃತ್ತಿನಿಮಿತ್ತರೂಪದಿಂದ ಆಕಾಶಶಬ್ದದ ವಿಚಾರದಂತೆ ಪ್ರಾಣ, ಗಾಯತ್ರೀ, ಜ್ಯೋತಿರಾದಿಶಬ್ದಗಳನ್ನೂ ಸಹ ಈ ಅಧಿಕರಣದಲ್ಲಿ ವಿಚಾರ ಮಾಡಲಾಗಿದೆ. ಆದ್ದರಿಂದ ಅಚೇತನಗತವಾದ ವಿವರತ್ವಾದಿಗಳು ಭಗವಂತನ ಅಧೀನವಾಗಲು ಸಾಧ್ಯವಿಲ್ಲವೆಂದು ಸಿದ್ಧವಾಯಿತು.

ವಿವರತ್ವಾದಿಗಳು ಭಗವಂತನ ಅಧೀನವಲ್ಲವೆನ್ನಲು ಅಚೇತನಸ್ವಭಾವತ್ವವೆಂಬುದು ಮತ್ತೊಂದು ಕಾರಣ - 'ವಿವರತ್ವಾದಿಕಂ ನ ಭಗವದಧೀನಂ, ಆಕಾಶಸ್ವಭಾವತ್ವಾತ್' ಎಂದು. ಇಂದ್ರಾದಿಶಬ್ದಗಳ

ಪ್ರವೃತ್ತಿನಿಮಿತ್ತವು ಐಶ್ವರ್ಯಾದಿಗಳಾಗಿವೆ. ಇದರಂತೆ ವಿವರತ್ವಾದಿಗಳು ಜಡವಾದ ಆಕಾಶದ ಸ್ವಭಾವವಾದ್ದರಿಂದ ಭಗವಂತನ ಅಧೀನವಾಗಲು ಸಾಧ್ಯವಿಲ್ಲ. ಆಗಂತುಕವಾದ ಧರ್ಮವಷ್ಟೇ ಅನ್ಯಾಧೀನವಾಗುತ್ತದೆ. ಭೃತ್ಯನ ಜಯವು ಆಗಂತುಕಧರ್ಮವಾದ್ದರಿಂದ, ರಾಜನ ಅಧೀನವಾಗಿದೆ. ಆದರೆ ಸ್ವಭಾವಭೂತವಾದ ಧರ್ಮವು ಅನ್ಯಾಧೀನವಾಗುವುದಿಲ್ಲ. ಅನ್ಯಾಧೀನವಾದರೆ ಸ್ವಭಾವತ್ವವೇ ಹಾನಿಯಾಗಬೇಕಾಗುತ್ತದೆ. ಭೃತ್ಯನಲ್ಲಿ ಸ್ವಾಭಾವಿಕವಾದ ಸೌಂದರ್ಯ ಮೊದಲಾದ ಧರ್ಮಗಳಿವೆ. ಇವುಗಳನ್ನು ವಿವಕ್ಷಿಸಿ ರಾಜನಲ್ಲಿ ಸೌಂದರ್ಯಾದಿಶಬ್ದಗಳ ಪ್ರಯೋಗವನ್ನು ಯಾರೂ ಮಾಡುವುದಿಲ್ಲ. ಅದರಂತೆ ವಿವರತ್ವಾದಿಗಳೂ ಸಹ ಸ್ವಾಭಾವಿಕಧರ್ಮವಾದ್ದರಿಂದ ವಿವರತ್ವಾದಿ-ಗಳನ್ನು ವಿವಕ್ಷಿಸಿ ಭಗವಂತನಲ್ಲಿ ಆಕಾಶಾದಿಶಬ್ದಗಳ ಪ್ರಯೋಗವು ಉಚಿತವಾಗುವುದಿಲ್ಲ.

ಈ ಪಕ್ಷದಲ್ಲಿಯೂ ಸಹ ಸ್ವಾಭಾವಿಕವಾದ ಪ್ರವೃತ್ತಿನಿಮಿತ್ತವುಳ್ಳ ಎಲ್ಲಾ ಶಬ್ದಗಳನ್ನು ಆಕಾಶಾಧಿಕರಣದಲ್ಲಿ ವಿಚಾರ ಮಾಡಲಾಗಿದೆ ಅಂದರೆ ಸ್ವಾಭಾವಿಕಪ್ರವೃತ್ತಿನಿಮಿತ್ತಕತ್ವರೂಪೇಣ ಆಕಾಶಶಬ್ದದ ವಿಚಾರದಂತೆ ಪ್ರಾಣ, ಗಾಯತ್ರೀ, ಜ್ಯೋತಿರಾದಿ ಶಬ್ದಗಳನ್ನೂ ಸಹ ವಿಚಾರ ಮಾಡ-ಲಾಗಿದೆ. ಹಾಗಾದರೆ ಪ್ರಾಣಾದಿಶಬ್ದಗಳನ್ನೇ ಉದಾಹರಿಸಲು ಬರುವಾಗ ಆಕಾಶಶಬ್ದವನ್ನೇಕೆ ಮೊದಲು ಉದಾಹರಿಸಿದಿರಿ? ಎಂಬ ಪ್ರಶ್ನೆ ಬರುತ್ತದೆ. ಆದರೆ ಯಾವುದೇ ಶಬ್ದಗಳನ್ನು ಉದಾಹರಿಸಿದರೂ ಈ ಪ್ರಶ್ನೆಯು ಸಮಾನವಾದ್ದರಿಂದ ಆಕಾಶಶಬ್ದವನ್ನು ಉದಾಹರಿಸಿದ್ದು ತಪ್ಪಲ್ಲ. ಅಥವಾ 'ಕೋ ಹ್ಯೇವಾನ್ಯಾತ್, ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾತ್' ಎಂದು ಆನಂದಮಯ-ನಲ್ಲಿ ಶ್ರುತವಾದ ಆಕಾಶಶಬ್ದವಾಚ್ಯನಾದವನು ಭಗವಂತನಲ್ಲ ಎಂದು ಆನಂದಮಯಾಧಿಕರಣದ ಮೇಲೆ ಆಕ್ಷೇಪ ಬಂದರೆ ಅದಕ್ಕೆ ಉತ್ತರಿಸುವುದಕ್ಕಾಗಿ ಈ ಅಧಿಕರಣ ಹೊರಟಿದೆ. ಆದ್ದರಿಂದಲೂ ಸಹ ಆಕಾಶಶಬ್ದದ ಉದಾಹರಣೆಯು ಸಮರ್ಪಕವಾಗಿದೆ.

ಪೂರ್ವಮೀಮಾಂಸೆಯ ವಾಜಪೇಯಾಧಿಕರಣದಲ್ಲಿ ಉದ್ಭಿದಾದಿ ಅನೇಕಶಬ್ದಗಳನ್ನು ವಿಚಾರ ಮಾಡಿದ್ದಾರೆ. ಆದರೂ ಸಹ ವಾಜಪೇಯಶಬ್ದವನ್ನಷ್ಟೇ ಉದಾಹರಿಸಿ ವಾಜಪೇಯಾಧಿಕರಣವೆಂದು ಹೇಳಿದ್ದಾರೆ. ಅದರಂತೆ ಇಲ್ಲಿಯೂ ಸಹ ಪ್ರಾಣಾದಿ ಅನೇಕ ಶಬ್ದಗಳ ಸಮನ್ವಯವು ವಿವಕ್ಷಿತ-ವಾಗಿದ್ದರೂ ಆಕಾಶಶಬ್ದವನ್ನಷ್ಟೇ ಉಲ್ಲೇಖಿಸಿ ಆಕಾಶಾಧಿಕರಣವೆಂದು ಹೇಳಿದ್ದು ತಪ್ಪಾಗುವುದಿಲ್ಲ.

### ಕಠಿಣಪದಾರ್ಥ

ತತ್ರ = ಅನುವ್ಯಾಖ್ಯಾನಶ್ಲೋಕದಲ್ಲಿ; ಹೇತುದ್ವಯಂ = ಸಾಕ್ಷಾತ್ತಾಗಿ ಅಥವಾ ಪರಂಪರೆಯಿಂದ ಎರಡು ಹೇತುಗಳನ್ನು, ತತ್ರ = ಎರಡು ಹೇತುಗಳ ಮಧ್ಯದಲ್ಲಿ; ತತ್ಪ್ರಸಾದಲಬ್ಧತ್ವರೂಪಂ = ಭಗವಂತನ ಪ್ರಸಾದವನ್ನು ಹೊಂದುವಿಕೆಯೆಂಬ; ತದಧೀನತ್ವಂ = ಭಗವಂತನ ಆಧೀನ್ಯ, ಯಥೇಷ್ಟವಿನಿಯೋಗಾರ್ಹತ್ವರೂಪಂ = ಇಚ್ಛೆ ಬಂದಂತೆ ವಿನಿಯೋಗ ಮಾಡಲು ಅರ್ಹವಾಗಿರುವಿಕೆ; ಇಹ = ಆಕಾಶಾಧಿಕರಣದಲ್ಲಿ, ತೇನ ರೂಪೇಣ = ಅಚೇತನಪ್ರವೃತ್ತಿನಿಮಿತ್ತಕತ್ವರೂಪದಿಂದ, ದ್ವಿತೀಯೇ ತು =

ಜಡಸ್ವಭಾವವಾದ್ದರಿಂದ ಭಗವದಧೀನವಾಗುವುದಿಲ್ಲವೆಂಬ ಎರಡನೆಯ ಪಕ್ಷದಲ್ಲಿ, ಆಧಿ ರೂಪ್ಯಾದಿನಾ = ಸೌಂದರ್ಯಾದಿಗಳಿಂದ, ಅತ್ರಾಪಿ = ಆಕಾಶಾಧಿಕರಣದಲ್ಲಿಯೂ, ತೇನ ರೂಪೇಣ = ಸ್ವಭಾವಪ್ರವೃತ್ತಿನಿಮಿತ್ತಕತ್ವರೂಪದಿಂದ, ಕಸ್ಯಚಿತ್ = ಯಾವುದಾದರೊಂದು ಶಬ್ದವನ್ನು, ಆನಂದಮಯಆಕ್ಷೇಪಕತ್ವಾತ್ = 'ಕೋ ಹ್ಯೇವಾನ್ಯಾತ್ ಕಃ' ಎಂಬ ಶ್ರುತಿಯಲ್ಲಿ ಆನಂದಮಯನು ಬ್ರಹ್ಮನಲ್ಲವೆಂದು ಆಕ್ಷೇಪಿಸಿದ್ದರಿಂದ, ವಾಜಪೇಯ = ಸುರಾಪಾನವುಳ್ಳ ಯಾಗ,

**प्रकाशः – श्लोकार्थं विशदयन्नधिकाशङ्काप्रकारमाह – तत्रेति ॥** अत्रेदं द्रष्टव्यम् – अयमाकाशो भूतमेव, न तु विष्णुः । तस्य विष्णुवाचित्वं हि रूढ्या योगेन वा? नाद्यः, भूत एव तस्याः सत्त्वेनासिद्धेः । द्वितीयेऽपि योगः क्लृप्तो वा कल्प्यो वा ।

आद्येऽपि अवकाशत्वम् आकाशत्वमिति यद्विवरत्वं प्रवृत्तिनिमित्तं, तस्य प्रधानादिगतावरत्वादिवत् भगवदधीनत्वेन वा इन्द्रादिशब्दप्रवृत्तिनिमित्तैश्वर्यादिवत् भगवद्गतत्वेन वा योगोऽभिमतः । नाद्यः, तदभावात् । कुतः? इत्यतः ''अचेतन-स्वभावस्तु'' इत्यनेनाभिमतं हेतुद्वयमाह – **आकाशशब्दप्रवृत्तिनिमित्तस्येति ॥**

**हेतुद्वयमिति ॥** 'साक्षाद्वा परम्परया वा' इति शेषः । 'तत्र' आकाशगतं विवरत्वं न भगवदधीनं, अचेतनगतत्वादचेतनस्वभावत्वाच्चेति साक्षाद्धेतुत्वपक्षे ननु सर्वस्य भगवतो यथेष्टविनियोगयोग्यत्वस्य सिद्धत्वादचेतनगतत्वमनधीनत्वे कथं हेतुरित्याशङ्क्य, आद्यं हेतुं दृष्टान्तोक्तिपूर्वं विवृणोति – **आद्य इति ॥ अदर्शना-दिति ॥**

ननु ''मृदब्रवीदापोऽब्रुवन्'' इत्यादावभिमानिचेतने मृदादिशब्दप्रयोगो दृष्ट इति चेन्न, अत्रत्यसिद्धान्तन्यायेनाभिमान्यधीनत्वे सिद्धे ''तदधीनत्वात्'' इति न्यायेन देवतायां प्रयोगस्य वक्ष्यमाणत्वेनात्रत्यपूर्वपक्षिणोऽ सम्प्रतिपत्तेरिति भावः ।

एतेनाचेतनगतं 'विवरादिः' विवरत्वादिकं, 'ततः' भगवत्प्रसादात्, 'कथं' न कथमपीति योजितम् । अनेन लब्धमर्थमाह – **एवञ्चेति ॥** 'तेन रूपेण' अचेतनगतप्रवृत्तिनिमित्तकत्वेन रूपेण, प्राणगायत्रीज्योतिरादिशब्दा उदाहरणम् । एकस्यानेकत्रोदाहरणं तूपपादयिष्यते । अन्यथा तेषु शब्देषु विष्णुवाचित्ववदत्रापि विष्णुवाचित्वप्रसङ्गादिति भावः ।

स्वभावत्वहेतुं विवृणोति – **द्वितीये त्विति ॥ स्वाभाविकेति ॥** स्वभावसिद्धं अनागन्तुकमेव प्रवृत्तिनिमित्तं येषां त इत्यर्थः । तर्हि भाष्याद्युक्तोदाहरणविरोध इत्यत आह – **कस्यचिदिति ॥**

**वाजपेयाधिकरण** इति ॥ प्रथमाध्याये चतुर्थपादे ''नामधेये गुणश्रुतेः स्याद्विधानमिति चेत्'' इति पञ्चमेऽधिकरणे चिन्तितम् । ''वाजपेयेन स्वाराज्यकामो यजेत'' इत्यत्र वाजपेयशब्दः किं गुणविधिः कर्मनाम वेति सन्देहे, 'यजेत' इत्यत्र यागे द्वितीयाद्यभावेन कर्मकरणत्वयोरप्रतीतेः प्रकृतिप्रत्ययाभ्यां यागभावनामात्राभिधानात्, समभिव्याहारेण तयोः सम्बन्धमात्रमेवावगम्यते । तच्च कर्मत्वकरणत्वसाधारणमिति यागकर्मत्वांशे गुणसम्बन्धः, तत्करणत्वांशे फल-सम्बन्धश्च विनैव मत्वर्थलक्षणया तन्त्रेण स्यादिति गुणविधिरिति प्राप्ते,

सम्बन्धमात्रपरत्वे आकाङ्क्षानुदयेन गुणफलयोरन्यतरेणाप्यसम्बन्धस्स्यात् । लक्षणयाऽन्यतरविशेषपरत्वे अन्तरेणैव सम्बन्धस्स्यात् । उभयविषयपरत्वे तु वाक्यावृत्तिः, गुणप्रधानत्वोद्देश्यत्वोपादेयत्वविधेयानुवाद्यत्वकृतं वैरूप्यं च स्यादिति तन्त्रसम्बन्धासम्भवात् गुणविवक्षासामानाधिकरण्यनिर्वाहाय मत्वर्थलक्षणादोषो दुर्वार इति वाजमन्नरूपं सुराद्रव्यं पेयमस्मिन्निति सुराग्रहणविधानात् तत्प्रख्य-न्यायेन नामधेयमिति सिद्धान्त इति ।

अत्र –

**सर्वेष्वाख्यातशब्देषु तन्त्रसम्बन्धसम्भवात् ।**
**मत्वर्थलक्षणादोषो नास्तीत्याक्षिप्यतेऽधुना ॥**

इत्युक्तरीत्या पूर्वपक्षे उद्भिदादिषु विशिष्टविधिपक्षोद्भावितमत्वर्थलक्षणादोषो-द्धारात् सिद्धान्ते तद्व्यवस्थापनाच्चोद्भिदादिशब्दानां विचार्यत्वेऽपि यथा वाजपेयशब्दोदाहरणं, तथा प्रकृतेऽपीत्यर्थः।

एतेन स्वभावरूपं विवरत्वादिकं 'ततः' भगवतः, कथं भगवदधीनं कथं स्वभावत्वादिति योजनोक्ता भवति ।

ವಿವರಣೆ - ಆಕಾಶಾಧಿಕರಣದ ಪೂರ್ವಪಕ್ಷವನ್ನು ರಚಿಸುತ್ತಿದ್ದಾರೆ "ಚೇಷ್ಟಾ ಹಿ" ಇತ್ಯಾದಿ ಅನುವ್ಯಾಖ್ಯಾನದಲ್ಲಿ ಹೇಳಿದ ಪೂರ್ವಪಕ್ಷವನ್ನೇ ಗ್ರಂಥಕಾರರು "ತತ್ರ" ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನಿಸುತ್ತಿದ್ದಾರೆ.

ಈ ಅಧಿಕರಣದಲ್ಲಿರುವ ಅಧಿಕಾಶಂಕೆಯ ಕ್ರಮವನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು -- ಶ್ರುತಿಯಲ್ಲಿ ಕೇಳಿ ಬರುವ ಆಕಾಶವು ಭೂತಾಕಾಶವನ್ನೇ ಪ್ರತಿಪಾದಿಸುತ್ತದೆ; ವಿಷ್ಣುವನ್ನು ಪ್ರತಿಪಾದಿಸುವುದಿಲ್ಲ. ಒಂದು ವೇಳೆ ವಿಷ್ಣುವನ್ನು ಪ್ರತಿಪಾದಿಸುವುದಾದರೆ ರೂಢಿಯನ್ನು ಹೇಳುತ್ತೀರೋ ಅಥವಾ ಯೋಗವನ್ನು ಹೇಳುತ್ತೀರೋ? ರೂಢಿಯಿಂದ ವಿಷ್ಣುವನ್ನು ಪ್ರತಿಪಾದಿಸಲು ಸಾಧ್ಯವಿಲ್ಲ. ಭೂತಾಕಾಶದಲ್ಲಿಯೇ ಆಕಾಶಶಬ್ದದ ರೂಢಿಯು ಪ್ರಸಿದ್ಧವಾದ್ದರಿಂದ ವಿಷ್ಣುವಿನಲ್ಲಿ ರೂಢಿಯನ್ನು ಹೇಳಲಾಗದು. ಯೋಗದಿಂದ ವಿಷ್ಣುವಾಚಕತ್ವವನ್ನು ಹೇಳುವುದಾದರೆ ಆ ಯೋಗವು ಪ್ರಮಾಣಸಿದ್ಧವಾಗಿದೆಯೋ ಅಥವಾ ಇಲ್ಲವೋ? ಪ್ರಮಾಣಸಿದ್ಧವೆಂದಾದಲ್ಲಿ ಅವಕಾಶತ್ವವನ್ನು ಆಕಾಶತ್ವವೆನ್ನಬೇಕು ಅಂದರೆ ವಿವರತ್ವವು ಆಕಾಶಶಬ್ದದ ಪ್ರವೃತ್ತಿನಿಮಿತ್ತ ಎಂದಂತಾಗುತ್ತದೆ. ಇದನ್ನು ಪ್ರಧಾನದಲ್ಲಿರುವ ಅವರತ್ವಾದಿಗಳಂತೆ ಭಗವಂತನ ಅಧೀನವೆಂದು ಹೇಳುತ್ತೀರೋ ಅಥವಾ ಇಂದ್ರಾದಿ ಶಬ್ದಗಳ ಪ್ರವೃತ್ತಿನಿಮಿತ್ತವಾದ ಐಶ್ವರ್ಯಾದಿಗಳಂತೆ ಭಗವಂತನಲ್ಲಿಯೇ ವಿವರತ್ವಾದಿಗಳು ಇವೆಯೆನ್ನುತ್ತೀರೋ? ಈ ಎರಡು ಕಾರಣಗಳಿಂದಷ್ಟೇ ಭಗವಂತನಲ್ಲಿ ಆಕಾಶಶಬ್ದದ ಪ್ರಯೋಗವನ್ನು ಕೂಡಿಸಬಹುದು.

ಆದರೆ ಮೊದಲನೆಯ ಪಕ್ಷ ತಪ್ಪು. ಚೇತನರ ಸ್ವಭಾವವು ಮತ್ತೊಬ್ಬರ ಅಧೀನವಾದಾಗ ನಿಯಾಮಕವ್ಯಕ್ತಿಯಲ್ಲಿ ಆ ಶಬ್ದದ ಪ್ರಯೋಗವು ಕಂಡಿದೆ. ಆದರೆ ಜಡವಾದ ವಸ್ತುವಿನ ಸ್ವಭಾವವು ಚೇತನಾಧೀನವಾದರೂ ಸಹ ಚೇತನರಲ್ಲಿ ಆ ಜಡಸ್ವಭಾವ ಶಬ್ದದ ಪ್ರಯೋಗವು ಲೋಕದಲ್ಲಿ ಕಂಡಿಲ್ಲ. ಈ ವಿಷಯದಲ್ಲಿ ಎರಡು ಹೇತುಗಳನ್ನು ಗ್ರಂಥಕಾರರು 'ಆಕಾಶಶಬ್ದಪ್ರವೃತ್ತಿನಿಮಿತ್ತಸ್ಯ' ಇತ್ಯಾದಿ ಗ್ರಂಥದಿಂದ ವಿವಕ್ಷಿಸಿದ್ದಾರೆ. ಅಚೇತನಗತತ್ವ ಮತ್ತು ಅಚೇತನಸ್ವಭಾವತ್ವವೆಂಬ ಎರಡು ಹೇತುಗಳು ಸಾಕ್ಷಾತ್ತಾಗಿ ಅಥವಾ ಪರಂಪರೆಯಿಂದಾಗಿ ಭಗವಂತನ ಅಧೀನಗಳಾಗಲಾರವು. ಮೊದಲನೆಯ ಹೇತುವನ್ನು ದೃಷ್ಟಾಂತಪುರಃಸರವಾಗಿ 'ಆದ್ಯೇ' ಇತ್ಯಾದಿ ವಾಕ್ಯದಿಂದ ವಿವರಿಸಿದ್ದಾರೆ. ಎಲ್ಲವೂ ಸಹ ಭಗವಂತನಿಂದ ನಿಯಮ್ಯಗಳಾಗಿವೆ. ಹೀಗಿರುವಾಗ ಅಚೇತನಗತತ್ವವು ಭಗವಂತನ ಅಧೀನವಲ್ಲವೆನ್ನಲು ಹೇಗೆ ಹೇತುವಾಗುತ್ತದೆ? ಅಚೇತನಗತತ್ವವೆಂಬ ಹೇತುವಿದ್ದರೂ ಭಗವದನಧೀನತ್ವವೆಂಬ ಸಾಧ್ಯವಿರುವುದು ಬೇಡ ಎಂಬ ಅಪ್ರಯೋಜಕಾಶಂಕೆಯನ್ನು ಗ್ರಂಥಕಾರರು ಪರಿಹರಿಸಿದ್ದಾರೆ.

ಶಂಕೆ - ಅಚೇತನದ ಧರ್ಮವನ್ನು ಚೇತನರಲ್ಲಿ ಹೇಳಲಾಗದೆಂದು ಹೇಳಿದಿರಿ. 'ಮೃದಬ್ರವೀತ್' 'ಆಪೋಽಬ್ರುವನ್' ಇತ್ಯಾದಿ ಸ್ಥಳದಲ್ಲಿ ಅಭಿಮಾನಿ ಚೇತನರಲ್ಲಿ ಮೃದಾದಿಶಬ್ದಗಳ ಪ್ರಯೋಗವನ್ನು ನೀವೇ ಸಮರ್ಥಿಸಿದ್ದೀರಲ್ಲ. ಅದರಂತೆ ಇಲ್ಲಿಯೂ ಸಹ ಜಡವಾಚಿಯಾದ ಆಕಾಶಶಬ್ದವನ್ನು ವಿಷ್ಣುವಿನಲ್ಲಿ ಪ್ರಯೋಗಿಸಬಹುದು.

ಸಮಾಧಾನ - ಈ ಆಕಾಶಾಧಿಕರಣದ ಸಿದ್ಧಾಂತನ್ಯಾಯದಿಂದ ಅಭಿಮಾನಿ ಚೇತನರ ಆಧೀನ್ಯವನ್ನು ಜಡಪದಾರ್ಥಗಳಿಗೆ ಹೇಳಬಹುದೆಂದು ಸಿದ್ಧವಾಗುತ್ತದೆ. ಈ ನ್ಯಾಯವನ್ನು ಆಶ್ರಯಿಸಿ ದೇವತೆಗಳಲಿ

ಜಡವಾಚಕಶಬ್ದಗಳ ಪ್ರಯೋಗವನ್ನು ಮಾಡಬಹುದೆಂದು ಅಭಿಮಾನ್ಯಧಿಕರಣದಲ್ಲಿ ಸಮರ್ಥಿಸುತ್ತಾರೆ. ಹೀಗಿರುವಾಗ ಆಕಾಶಾಧಿಕರಣದ ಪೂರ್ವಪಕ್ಷಿಯು ಅಭಿಮಾನ್ಯಧಿಕರಣದ ಸಿದ್ಧಾಂತವನ್ನು ಆಶ್ರಯಿಸಿ ಶಂಕಿಸಲು ಸಾಧ್ಯವಿಲ್ಲ. ಅವನಿಗೆ ಅಭಿಮಾನ್ಯಧಿಕರಣದ ಸಿದ್ಧಾಂತವೂ ಸಹ ಸಮ್ಮತವಾಗಿಲ್ಲ. ಹೀಗೆ ''ಅಚೇತನಸ್ವಭಾವಸ್ತು ವಿವರಾದಿಃ ಕಥಂ ತತಃ?'' ಎಂಬ ಅನುವ್ಯಾಖ್ಯಾನಶ್ಲೋಕವನ್ನು ವ್ಯಾಖ್ಯಾನಿಸಿ-ದಂತಾಯಿತು.

ಅಚೇತನದಲ್ಲಿರುವ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿರುವ ಸಕಲಶಬ್ದಗಳ ಸಮನ್ವಯವನ್ನು ಈ ಆಕಾಶಾಧಿಕರಣದಲ್ಲಿ ಮಾಡುತ್ತಿದ್ದಾರೆ. ಆದ್ದರಿಂದ ಮುಂದಿನ ಅಧಿಕರಣಗಳಲ್ಲಿ ಸಮನ್ವಯ ಮಾಡುವ ಪ್ರಾಣ, ಗಾಯತ್ರೀ, ಜ್ಯೋತಿರಾದಿ ಶಬ್ದಗಳನ್ನೂ ಸಹ ಇಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಹಾಗಾದರೆ ಪುನರುಕ್ತಿ ಬರುತ್ತದಲ್ಲಾ? ಎಂಬ ಶಂಕೆಗೆ ಅವಕಾಶವಿಲ್ಲ. ಮುಂದಿನ ಅಧಿಕರಣಗಳಲ್ಲಿ ಅಧಿಕಾಶಂಕೆಗೆ ಅನುಗುಣವಾಗಿ ಆಧ್ಯಾತ್ಮಿಕಶಬ್ದತ್ವೇನ ರೂಪೇಣ ಜ್ಞಾನಾದಿಶಬ್ದಗಳ ಸಮನ್ವಯವನ್ನು ಮಾಡುತ್ತಾರೆ. ಅದೇ ಶಬ್ದಗಳನ್ನು ಇಲ್ಲಿ ಅಚೇತನಗತಪ್ರವೃತ್ತಿನಿಮಿತ್ತಕತ್ವರೂಪೇಣ ಸಮನ್ವಯ ಮಾಡುತ್ತಿದ್ದಾರೆ. ಹೀಗೆ ಅವಚ್ಛೇದಕಭೇದೇನ ಒಂದೇ ಶಬ್ದವನ್ನು ಅನೇಕ ಅಧಿಕರಣಗಳಲ್ಲಿ ಸಮನ್ವಯ ಮಾಡಬಹುದು. ಹೀಗೆ ಹೇಳದಿದ್ದರೆ ಪ್ರಾಣಾದಿಶಬ್ದಗಳು ಹೇಗೆ ವಿಷ್ಣುವಾಚಿಯಾಗುತ್ತವೋ ಅದರಂತೆ ಆಕಾಶಶಬ್ದವೂ ಸಹ ವಿಷ್ಣುವಾಚಿಯಾಗುತ್ತದಲ್ಲವೇ? ಎಂಬ ಶಂಕೆಯು ಸಹಜವಾಗಿ ಬರುತ್ತದೆ. ಅದಕ್ಕೋಸ್ಕರ ಪ್ರಾಣಾದಿಶಬ್ದಗಳನ್ನೂ ಸಹ ಈ ಅಧಿಕರಣದಲ್ಲಿ ವಿಷ್ಣುವಾಚಿಯಲ್ಲವೆಂದು ಆಕ್ಷೇಪಿಸಿ, ಉತ್ತರಿಸಬೇಕಾದ ಅನಿವಾರ್ಯತೆ ಇದೆ. ಈ ಅಧಿಕರಣದ ಪೂರ್ವಪಕ್ಷಿಯು ಆಕಾಶಶಬ್ದದಂತೆ ಪ್ರಾಣಾದಿಶಬ್ದಗಳೂ ಸಹ ವಿಷ್ಣುಪರವಲ್ಲವೆಂದು ಅಭಿಪ್ರಾಯ ಪಡುತ್ತಾನೆ. ಹಾಗಾದಾಗ ಮಾತ್ರ ಆಕಾಶಾಧಿಕರಣಕ್ಕೆ ಸಾರ್ಥಕ್ಯವನ್ನು ಹೇಳಲು ಸಾಧ್ಯ.

ಅಚೇತನಸ್ವಭಾವತ್ವವೆಂಬ ಎರಡನೆಯ ಹೇತುವನ್ನು 'ದ್ವಿತೀಯೇ ತು' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ. ಭಾಷ್ಯದಲ್ಲಿ ಹೇಳಿದ ಉದಾಹರಣವಾಕ್ಯಕ್ಕೆ ವಿರೋಧ ಬಾರದಂತೆ 'ಕಸ್ಯಚಿತ್' ಎಂಬ ವಾಕ್ಯದಿಂದ ವ್ಯಾಖ್ಯಾನಿಸಿದ್ದಾರೆ.

## ವಾಜಪೇಯಾಧಿಕರಣ

### ''ನಾಮಧೇಯೇ ಗುಣಶ್ರುತೇಃ ಸ್ಯಾದ್ವಿಧಾನಮಿತಿ ಚೇತ್' (೧-೪-೫)

ಸಂಶಯ - 'ವಾಜಪೇಯೇನ ಸ್ವಾರಾಜ್ಯಕಾಮೋ ಯಜೇತ' ಎಂಬುದು ಈ ಅಧಿಕರಣದ ವಿಷಯವಾಕ್ಯ. ಇಲ್ಲಿ ಕೇಳಿಸುತ್ತಿರುವ ವಾಜಪೇಯಶಬ್ದವು ಗುಣವಿಧಿಯೋ? ಅಥವಾ ಯಾಗವೆಂಬ ಕರ್ಮದ ಹೆಸರೋ?

ಪೂರ್ವಪಕ್ಷ - ವಾಜಪೇಯಶಬ್ದವು ಗುಣವಿಧಾಯಕವಾಗಿದೆ. ಅದು ಹೀಗೆ -- ಯಜೇತ ಎಂಬಲ್ಲಿ 'ಯಜ್' ಎಂಬ ಪ್ರಕೃತಿಯು 'ಈತ' ಎಂಬ ಲಿಙ್‌ಪ್ರತ್ಯಯವು ಕೇಳಿಸುತ್ತದೆ. ಯಜ್ ಧಾತುವು ಯಾಗವನ್ನು ಲಿಙ್ ಪ್ರತ್ಯಯವು ಭಾವನಾವನ್ನು ಹೇಳುತ್ತಿದೆ. ಕರ್ಮತ್ವ ಮತ್ತು ಕರಣತ್ವಗಳು ಸ್ಪಷ್ಟವಾಗಿ ಕಾಣಿಸದ

ಕಾರಣ 'ಯಾಗೇನ ಭಾವಯೇತ್' ಎಂದಾಗಲೀ, 'ಯಾಗಂ ಭಾವಯೇತ್' ಎಂದಾಗಲೀ ಹೇಳುವುದು ಕಷ್ಟ. ಅಂದರೆ ಭಾವನಾದಲ್ಲಿ ಯಾಗವು ಕರ್ಮವೋ? ಅಥವಾ ಕರಣವೋ? ಎಂದು ತಿಳಿಯುವುದಿಲ್ಲ. ಆದ್ದರಿಂದ ಯಾಗಕರ್ಮಕಭಾವನಾ ಎಂದೂ ಹೇಳಬಹುದು, ಯಾಗಕರಣಕಭಾವನಾ ಎಂದೂ ಹೇಳಬಹುದು. ಯಾಗಕರ್ಮಕಭಾವನಾ ಎಂದು ಹೇಳಿದಾಗ 'ಯಾಗಂ ಭಾವಯೇತ್' ಎಂದಾಗುತ್ತದೆ. ಇವಾಗ ಕರ್ಮಕ್ಕೆ ಫಲಸಂಬಂಧವನ್ನು ಹೇಳುವುದು ಅನಿವಾರ್ಯ. ಶ್ರುತಿಯಲ್ಲಿಯೇ ಸ್ವಾರಾಜ್ಯಕಾಮಃ ಎಂಬ ಪದವು ಸ್ವಾರಾಜ್ಯವೆಂಬ ಫಲದ ಸಂಬಂಧವನ್ನು ಹೇಳುತ್ತಿದೆ. ಆದ್ದರಿಂದ ಭಾವನಾವಾಚಕವಾದ 'ಈತ' ಎಂಬ ಪ್ರತ್ಯಯವನ್ನು ತಂತ್ರದಿಂದ ಎರಡು ಬಾರಿ ಅನ್ವಯ ಮಾಡಬೇಕು. 'ಯಾಗಂ ಭಾವಯೇತ್' ಮತ್ತು 'ಸ್ವಾರಾಜ್ಯಂ ಭಾವಯೇತ್' ಎಂದು ತಂತ್ರದಿಂದ ಫಲಸಂಬಂಧವನ್ನು ಹೇಳಿದಾಗ ಆಕಾಂಕ್ಷೆಯು ಬರುವುದಿಲ್ಲ. 'ವಾಜಪೇಯೇನ ಸ್ವಾರಾಜ್ಯಕಾಮೋ ಯಜೇತ' ಎಂಬ ವಾಕ್ಯಕ್ಕೆ

---

भाट्टसङ्ग्रहः –

**अथ षष्ठं वाजपेयादिशब्दानां यागनामधेयताधिकरणम् (सूत्राणि ६-८)**

**नामधेये गुणश्रुतेः स्याद्विधानमिति चेत् ॥ ६ ॥**

**(तुल्यत्वात्क्रिययोर्न ॥ ७ ॥ ऐकशब्द्ये परार्थवत् ॥ ८ ॥)**

प्रागधिकरणचतुष्टयोक्तनामत्वाक्षेपेणेह शङ्कनादाक्षेपिकी **सङ्गतिः** । 'वाजपेयेन स्वाराज्यकामो यजेत' इत्यत्र श्रुतो वाजपेयशब्दो गुणविधिपरोऽथ नामधेयमिति **सन्देहः** । **पूर्वपक्षस्तु** 'यजेत' इत्यत्र प्रत्ययोक्तभावनायां प्रकृतिप्रत्ययसमभिव्याहारादन्वीयमानो धात्वर्थो यागः कर्मत्वेन करणत्वेन वा यद्यन्वीयेत तदा वाजपेयपदोपात्तगुणस्वाराज्यकामपदोपात्तफलयोरन्यतरान्वय एव स्यात्, नोभाभ्याम् । न चैवम् । कर्मत्वादिविशेषान्वयवाचिपदाभावात् । किन्तु कर्मत्वकरणत्वसाधारणसम्बन्धमात्रेणान्वेति । तत्र कर्मत्वांशमादाय गुणस्य करणत्वांशेन फलस्य 'पेयरूपवाजेन यागं, यागेन स्वाराज्यं' इति च युगपदन्वयसम्भवेन मत्वर्थलक्षणादिकं विनैव तन्त्रेण फलकरणाभ्यां यागः सम्बद्धुमर्हतीति (पेयरूपमन्नं वाजं सुराद्रव्यमिति यावत्) सुराग्रहाणां तत्रानुष्ठेयत्वात् तद्रूपगुणपरोऽयं वाजपेयशब्दः । 'उद्भिदायजेत' इत्यादिपूर्वोदाहरणेष्वप्येवं वक्तुं शक्यत्वान्न क्वापि नामधेयत्वमिति । **सिद्धान्तस्तु** कर्मत्वकरणत्वौदासीन्येन सम्बन्धमात्रावगतौ गुणफलयोरन्यतरेणाप्यनन्वयः । कर्मत्वकरणत्वयोरन्यतरविशेषबोधने गुणफलयोरन्यतरेणान्वयो न द्वाभ्यामपि । यागकर्मिका यागकरणिका च भावनेति युगपदुभयान्वयबोधपक्षे गुणफलयोभयसम्बन्धसम्भवेऽपि तथा बोध एवायुक्तः । विरुद्धत्रिकद्वयापत्तेः । कर्मत्वसमानाश्रया उद्देश्यत्वानुवाद्यत्वप्रधानत्वरूपास्त्रयो धर्माः । करणत्वसमानाधिकरणा उपादेयत्वविधेयत्वगुणत्वरूपास्त्रयो धर्माः । ते युगपदापद्येरन् । अतः पेयरूपवाजभूतसुराद्रव्यसम्बन्धनिमित्तेन वाजपेयशब्दो नाम-

ಪಾನಾರ್ಹವಾದ ಅನ್ನಸ್ಥಾನದಲ್ಲಿರುವ ಸುರಾದಿಗಳಿಂದ ಯಾಗಂ ಭಾವಯೇತ್ ಎಂದು ಅರ್ಥ. ಈ ಪಕ್ಷದಲ್ಲಿ ವಾಜಪೇಯೇನ ಎಂಬ ಶಬ್ದಕ್ಕೆ 'ವಾಜಪೇಯವತಾ ಯಾಗೇನ' ಎಂಬ ಮತ್ವರ್ಥಲಕ್ಷಣಾವನ್ನು ಮಾಡಬೇಕಾಗಿಲ್ಲ. ವಾಜಪೇಯಕರಣದಿಂದ 'ಯಾಗಂ ಭಾವಯೇತ್ ತೇನ ಸ್ವಾರಾಜ್ಯಂ ಚ ಭಾವ-ಯೇತ್' ಎಂದು ಸುಲಭವಾಗಿಯೇ ಅರ್ಥವನ್ನು ಹೇಳಬಹುದು. ಈ ಕಾರಣದಿಂದ ವಾಜಪೇಯಶಬ್ದವು ಯಾಗದಲ್ಲಿ ಗುಣವನ್ನಷ್ಟೇ ವಿಧಿಸುತ್ತಿದೆ ಹೊರತು ವಾಜಪೇಯವೆಂಬ ಕರ್ಮವನ್ನು ವಿಧಿಸುತ್ತಿಲ್ಲ.

ಸಿದ್ಧಾಂತ - ವಾಜಪೇಯಶಬ್ದವು ಯಾಗದ ನಾಮಧೇಯವಾದ್ದರಿಂದ ಕರ್ಮವಿಧಾಯಕವೇ ಆಗಿದೆ. ಆದ್ದರಿಂದ ಗುಣವಿಧಾಯಕವೆಂಬ ಪೂರ್ವಪಕ್ಷವು ತಪ್ಪು. ಏಕೆಂದರೆ, 'ಯಜೇತ' ಎಂಬಲ್ಲಿ ಪ್ರಕೃತಿ ಪ್ರತ್ಯಯಗಳ ಸಮಭಿವ್ಯಾಹಾರವಿದೆ. ಆ ಸಮಭಿವ್ಯಾಹಾರದಿಂದ ಸಂಬಂಧವಷ್ಟೇ ತಿಳಿಯುತ್ತದೆಂದು ಪೂರ್ವಪಕ್ಷಿಗಳು ಹೇಳಿದರು. ಹಾಗಾದಲ್ಲಿ ಗುಣ ಹಾಗೂ ಫಲಗಳ ಸಂಬಂಧವನ್ನು ಹೇಳುವುದು ಸಾಧ್ಯವಿಲ್ಲ.

ಸ್ವಾರಾಜ್ಯವೆಂಬ ಫಲದ ವಾಜಪೇಯವೆಂಬ ಗುಣದ ಸಂಬಂಧವನ್ನು ಭಾವನಾದಲ್ಲಿ ಹೇಗೆ ಹೇಳುತ್ತೀರಿ? ಯಾಗಕ್ಕೂ ಹಾಗೂ ಭಾವನಾಕ್ಕೂ ಸಂಬಂಧವನ್ನಷ್ಟೇ ಹೇಳಿದರೆ ಆಕಾಂಕ್ಷವೇ ಬರಲಾರದು. (ಯಾಗೇನ ಭಾವಯೇತ್ ಎಂದು ಹೇಳಿದಾಗ ಕೀದೃಶೇನ ಕಿಂ ಭಾವಯೇತ್? ಎಂಬ ಆಕಾಂಕ್ಷೆ ಬರುತ್ತದೆ. ಯಾಗಂ ಭಾವಯೇತ್ ಎಂದು ಹೇಳಿದಾಗ ಕೇನ ಕಿಮರ್ಥಂ ಭಾವಯೇತ್? ಎಂಬ ಆಕಾಂಕ್ಷೆಯು ಬರುತ್ತದೆ. ಪೂರ್ವಪಕ್ಷಿ ಹೇಳುವಂತೆ ಯಾಗ ಹಾಗೂ ಭಾವನಾಗಳಿಗೆ ಸಂಬಂಧವನ್ನಷ್ಟೇ ಹೇಳಿದರೆ ಈ ಆಕಾಂಕ್ಷೆಯು ಬರಲಾರದೆಂದು ಅಭಿಪ್ರಾಯ.) ಇನ್ನು ಹಿಂದೆ ಪೂರ್ವಪಕ್ಷಿಗಳು ಸಂಬಂಧಸಾಮಾನ್ಯವಷ್ಟೇ ತಿಳಿಯುತ್ತದೆ, ಆ ಸಂಬಂಧಸಾಮಾನ್ಯವು ಕರ್ಮ ಅಥವಾ ಕರಣ ಯಾವುದೂ ಆಗಬಹುದೆಂದಿದ್ದರು. ಇದೂ ಸಹ ತಪ್ಪು.

ಸಮಭಿವ್ಯಾಹಾರದಿಂದ ಕರ್ಮತ್ವರೂಪ ಸಂಬಂಧವಿಶೇಷವನ್ನು ಲಕ್ಷಣಯಾ ಹೇಳಬೇಕು. ಆವಾಗ ವಾಜಪೇಯವೆಂಬ ಗುಣದ ಸಂಬಂಧವನ್ನಷ್ಟೇ ಹೇಳಬಹುದು ಹೊರತು ಫಲದ ಸಂಬಂಧವನ್ನು ಹೇಳಲಾಗದು. ಇನ್ನು ಕರಣತ್ವಸಂಬಂಧವನ್ನು ಹೇಳಿದರೆ, ಆವಾಗ 'ಯಾಗೇನ ಭಾವಯೇತ್' ಎಂದು ಫಲದ ಸಂಬಂಧವನ್ನು ಹೇಳಬಹುದು. ಆದರೆ ಗುಣದ ಸಂಬಂಧವನ್ನು ಹೇಳಲಾಗದು. ಎರಡನ್ನೂ ತೆಗೆದುಕೊಂಡರೆ ವಾಜಪೇಯರೂಪಕರಣೇನ ಯಾಗಂ ಭಾವಯೇತ್, 'ಯಾಗೇನ ಸ್ವಾರಾಜ್ಯಂ ಭಾವಯೇತ್' ಎಂದಂತಾಗುತ್ತದೆ.

---

धेयम् । एवमुद्भिदादयः प्राचीनाः सर्वेऽपि शब्दा इति । **फलन्तु** गुणविधित्वे औषधद्रव्यकादैष्टिकविध्यन्तातिदेशः । नामत्वे त्वनवगतदेवतात्वेनाव्यक्तचोदनात्वात् **'अव्यक्तासु तु सोमस्य'** (८-१-१६) इति सौमिमकविध्यन्तातिदेशः । **सूत्रार्थस्तु, वाजपेये** नामधेयत्वाभिमते वाजपेयशब्दे **गुणश्रुतेः** गुणश्रवणात् **गुणविधानं स्यात्** इति ॥ ६ ॥

इति षष्ठं वाजपेयादिशब्दानां यागनामधेयताधिकरणम्

ಆಕಾಶಾಧಿಕರಣ (೧।೧।೮)

ಆವಾಗ ಅನೇಕ ದೋಷಗಳು ಬರುತ್ತವೆ -- ಎರಡು ವಾಕ್ಯದಿಂದ ಶ್ರುತ್ಯರ್ಥವನ್ನು ವಿವರಿಸಿದರೆ ವಾಕ್ಯಾವೃತ್ತಿಯೆಂಬ ದೋಷ ಬರುತ್ತದೆ. ಮತ್ತು 'ಯಾಗಂ ಭಾವಯೇತ್' ಎಂಬಲ್ಲಿ ಯಾಗವು ಪ್ರಧಾನ-ವಾಗಿದೆ. 'ಯಾಗೇನ ಭಾವಯೇತ್' ಎಂಬಲ್ಲಿ ಯಾಗವು ಗುಣವಾಗಿದೆ. ಹೀಗೆ ಒಂದೇ ಯಾಗ-ಪದಾರ್ಥದಲ್ಲಿ ಗುಣತ್ವ, ಪ್ರಧಾನತ್ವವೆಂಬ ವಿರುದ್ಧಧರ್ಮದ್ವಯಗಳು ಬರಬೇಕಾದೀತು. ಮತ್ತು 'ಯಾಗಂ ಭಾವಯೇತ್' ಎಂಬಲ್ಲಿ ಯಾಗವು ಉದ್ದೇಶವಾಗಿದೆ. 'ಯಾಗೇನ ಭಾವಯೇತ್' ಎಂಬಲ್ಲಿ ವಿಧೇಯವಾಗಿದೆ. ಉದ್ದೇಶ್ಯತ್ವ ಹಾಗೂ ವಿಧೇಯತ್ವಗಳು ವಿರುದ್ಧಧರ್ಮಗಳಾದ್ದರಿಂದ ಒಂದೇ ಯಾಗದಲ್ಲಿ ಹೇಳಲು ಸಾಧ್ಯವಿಲ್ಲ. ಅಷ್ಟೇ ಅಲ್ಲದೆ 'ಯಾಗಂ ಭಾವಯೇತ್' ಎಂಬಲ್ಲಿ ಯಾಗವು ವಿಧಿಯಾಗಿದೆ. 'ಯಾಗೇನ ಭಾವಯೇತ್' ಎಂಬಲ್ಲಿ ಅನುವಾದವಾಗಿದೆ. ವಿಧಿ ಹಾಗೂ ಅನುವಾದಗಳೂ ಸಹ ವಿರುದ್ಧವಾದ್ದರಿಂದ ಒಂದೇ ಯಾಗದಲ್ಲಿ ಹೇಳಲಾಗದು. ಹೀಗೆ ಅನೇಕ ಮುಖದಲ್ಲಿ ವೈರೂಪ್ಯದೋಷ ಬರುವುದರಿಂದ ತಂತ್ರದಿಂದ ಅನ್ವಯವನ್ನು ಪೂರ್ವಪಕ್ಷಿಗಳಿಗೆ ಹೇಳಲು ಬರುವುದಿಲ್ಲ

ಮತ್ತು ವಾಜಪೇಯಶಬ್ದಕ್ಕೆ ಮತ್ವರ್ಥದಲ್ಲಿ ಲಕ್ಷಣಾಪ್ರಸಂಗವೆಂಬ ದೋಷವನ್ನು ಪೂರ್ವಪಕ್ಷಿಗಳು ಹೇಳಿದ್ದರು. ಈ ದೋಷವೂ ಸಹ ಬರುವುದಿಲ್ಲ. ಏಕೆಂದರೆ ಇದುವರೆಗೂ ನಿರೂಪಿಸಿದ ಪ್ರಕಾರ ತಂತ್ರಸಂಬಂಧವನ್ನು ಹೇಳುವುದು ಸಾಧ್ಯವೇ ಇಲ್ಲ. ಆದ್ದರಿಂದ ಮತ್ವರ್ಥದಲ್ಲಿ ಲಕ್ಷಣಾ ಮಾಡುವುದು ಪೂರ್ವಪಕ್ಷಿಗಳಿಗೆ ಅನಿವಾರ್ಯವಾಗಿದೆ. 'ಯಜೇತ' ಎಂಬಲ್ಲಿ ಕರಣತ್ವವೇ ಸಂಬಂಧವಾಗುತ್ತದೆ. 'ವಾಜಪೇಯೇನ ಯಾಗೇನ ಸ್ವಾರಾಜ್ಯಂ ಭಾವಯೇತ್' ಎಂದು ವಾಜಪೇಯಕ್ಕೂ ಮತ್ತು ಯಾಗಕ್ಕೂ ಸಾಮಾನಾಧಿಕರಣ್ಯದ ನಿರ್ವಹಣೆಗಾಗಿ ಮತ್ವರ್ಥಲಕ್ಷಣಾವನ್ನು ಒಪ್ಪಬೇಕಾಗುತ್ತದೆ. ವಾಜವೆಂಬ ಅನ್ನಸ್ಥಾನದಲ್ಲಿರುವ ಸುರಾ ಎಂಬ ದ್ರವ್ಯವನ್ನು ಹೊಂದಿರುವ ವಾಜಪೇಯವೆಂಬ ಯಾಗವನ್ನು ಮಾಡಬೇಕೆಂದು ಶ್ರುತಿಗೆ ಅರ್ಥ. ಈ ವಾಕ್ಯದಲ್ಲಿ ವಾಜಪೇಯವೆಂಬ ಯಾಗವನ್ನು ಮತ್ತು ಸುರಾವೆಂಬ ಗುಣವನ್ನು ವಿಧಿಸಬೇಕಾದ್ದರಿಂದ ವಾಜಪೇಯಶಬ್ದವು ನಾಮಧೇಯವೆಂದೇ ಹೇಳಬೇಕು. ವಾಜಪೇಯ ಯಾಗದಲ್ಲಿ ಮುಖ್ಯವಾಗಿ ಕ್ಷತ್ರಿಯರಿಗೆ ಸುರಾಪಾನವನ್ನು ವಿಧಿಸಿದ್ದಾರೆ. ಆದ್ದರಿಂದ ತತ್ಪ್ರಖ್ಯನ್ಯಾಯದಂತೆ ವಾಜಪೇಯಶಬ್ದವು ನಾಮಧೇಯವೇ ಆಗಿದೆ. ಗುಣವಿಧಾಯಕವಾಗಿಲ್ಲ.

ಸರ್ವೇಷ್ವಾಖ್ಯಾತಶಬ್ದೇಷು ತಂತ್ರಸಂಬಂಧಸಂಭವಾತ್ ।
ಮತ್ವರ್ಥಲಕ್ಷಣಾದೋಷೋ ನಾಸ್ತೀತ್ಯಾಕ್ಷಿಪ್ಯತೇಽಧುನಾ ॥

'ವಾಜಪೇಯೇನ ಯಜೇತ' 'ಜ್ಯೋತಿಷ್ಟೋಮೇನ ಯಜೇತ' ಇತ್ಯಾದಿ ಶ್ರುತಿಗಳಲ್ಲಿ 'ಯಜೇತ 'ಎಂಬ ಆಖ್ಯಾತಶಬ್ದವು ಕೇಳಿಸುತ್ತಿದೆ. ಆದ್ದರಿಂದ ಈ ಸ್ಥಳಗಳಲ್ಲೆಲ್ಲಾ ತಂತ್ರಸಂಬಂಧವನ್ನು ಹೇಳಬಹುದು. 'ಯಾಗಂ ಭಾವಯೇತ್, ಯಾಗೇನ ಫಲಂ ಭಾವಯೇತ್' ಎಂದು ಹಿಂದೆ ಹೇಳಿದಂತೆ ಇಲ್ಲಿಯೂ ಸಹ ಹೇಳಬೇಕು. ಹೀಗೆ ತಂತ್ರಸಂಬಂಧವನ್ನು ಮಾಡಿದಾಗ ಮತ್ವರ್ಥಲಕ್ಷಣಾದೋಷವು ಬರುವುದಿಲ್ಲ. ಎಂದು ಪೂರ್ವಪಕ್ಷಿಗಳು ಆಕ್ಷೇಪಿಸಿದ್ದಾರೆ.

ವಸ್ತುತಸ್ತು ಉದ್ಭಿದಾದಿಶಬ್ದಗಳು ನಾಮಧೇಯಗಳೆಂದು ಹಿಂದಿನ ಅಧಿಕರಣಗಳಲ್ಲಿಯೇ ನಿರ್ಣಯಿಸಲಾಗಿದೆ. ಆದರೂ ಸಹ ಈ ವಾಜಪೇಯಾಧಿಕರಣದಲ್ಲಿ ಉದ್ಭಿದಾದಿಶಬ್ದಗಳನ್ನು ಸೇರಿಸಿ

ಪೂರ್ವಪಕ್ಷಿಗಳು ಆಕ್ಷೇಪ ಮಾಡುತ್ತಿದ್ದಾರೆ. 'ಉದ್ಭಿದಾದಿಶಬ್ದಗಳಲ್ಲೇಕೆ ಮತ್ವರ್ಥಲಕ್ಷಣಾ ಮಾಡಬೇಕು? ಗುಣವಿಶಿಷ್ಟಕರ್ಮಪಕ್ಷದಲ್ಲಷ್ಟೇ ಮತ್ವರ್ಥಲಕ್ಷಣಾದೋಷವು ಬರುತ್ತದೆ. ಗುಣವಿಧಾಯಕ ಪಕ್ಷದಲ್ಲಿ ತಂತ್ರಸಂಬಂಧವನ್ನು ಹೇಳಿದ್ದರಿಂದ ಮತ್ವರ್ಥಲಕ್ಷಣಾದೋಷವು ಬರುವುದಿಲ್ಲ'' ಹೀಗೆ ಪೂರ್ವಪಕ್ಷಿಗಳು ಆಕ್ಷೇಪಿಸಿದ್ದಾರೆ. ಸಿದ್ಧಾಂತದಲ್ಲಿ ಇದನ್ನು ನಿರಾಕರಿಸುತ್ತಾ ಕೇವಲ ಗುಣವಿಧಿಯಾಗಿದ್ದರೆ ಮತ್ವರ್ಥಲಕ್ಷಣಾದೋಷವು ಬರುತ್ತಿತ್ತು. ಆದರೆ ನಾಮಧೇಯವೆಂದು ನಾವು ಹೇಳುವುದರಿಂದ ಮತ್ವರ್ಥಲಕ್ಷಣಾದೋಷವು ಬರುವುದಿಲ್ಲವೆಂದು ಹೇಳಿದ್ದಾರೆ. ಈ ಅಧಿಕರಣದಲ್ಲಿ ಉದ್ಭಿದಾದಿ ಎಲ್ಲಾ ಶಬ್ದಗಳನ್ನು ವಿಚಾರ ಮಾಡಿದ್ದರೂ ವಾಜಪೇಯಶಬ್ದವನ್ನಷ್ಟೇ ಉದಾಹರಿಸಿದ್ದಾರೆ. ಇದರಂತೆ ಪ್ರಕೃತ ಆಕಾಶಾಧಿಕರಣದಲ್ಲಿಯೂ ಸಹ ಪ್ರಾಣ ಗಾಯತ್ರೀ, ಜ್ಯೋತಿರಾದಿಸಕಲಶಬ್ದಗಳ ಸಮನ್ವಯವನ್ನು ಮಾಡುತ್ತಿದ್ದರೂ ಸಹ ಕೇವಲ ಆಕಾಶಶಬ್ದದ ಉಲ್ಲೇಖವು ತಪ್ಪಲ್ಲ. ಅಚೇತನಗತಪ್ರವೃತ್ತಿನಿಮಿತ್ತಕತ್ವ-ರೂಪದಿಂದ ಸ್ವಭಾವಪ್ರವೃತ್ತಿನಿಮಿತ್ತಕತ್ವರೂಪದಿಂದ ಸಕಲಶಬ್ದಗಳು ಉದಾಹರಣೆಯಾಗಿದ್ದರೂ ಒಂದನ್ನಷ್ಟೇ ಸ್ವೀಕರಿಸಿದ್ದು ವಾಜಪೇಯಶಬ್ದದಂತೆ.

''ಅಚೇತನಸ್ವಭಾವಸ್ತು ವಿವರಾದಿಃ ಕಥಂ ತತಃ'' ಎಂಬ ಆಚಾರ್ಯರ ಮಾತನ್ನು ಹೀಗೆ ಯೋಜಿಸಬೇಕು -- ವಿವರಾದಿಃ = ಸ್ವಭಾವರೂಪವಾದ ವಿವರತ್ವಾದಿಗಳು ತತಃ = ಭಗವಂತನ ಅಧೀನ, ಕಥಂ = ಹೇಗಾಗುತ್ತವೆ? ಅಚೇತನಸ್ವಭಾವಃ = ಅಚೇತನಸ್ವಭಾವವಾದ್ದರಿಂದ - ಎಂದು.

**गुरुराजीयम् – अचेतने भगवत्प्रसादोस्तीति** ॥ सेवासाध्यसेवकेष्टानिष्ट-प्राप्तिपरिहारानुग्रहेच्छाविशेषस्यैव प्रसादशब्दार्थत्वस्य 'इच्छानिमित्तको यस्मात्' इत्यनुव्याख्यान उक्तत्वादित्यर्थः । इन्द्रादिशब्दप्रवृत्तिनिमित्तानामैश्वर्यादीनामिवेति व्यतिरेकदृष्टान्तः ॥

**अन्याधीनत्वे स्वभावत्वहानेरिति** ॥ स्वहेत्वतिरिक्तहेत्वधीनत्वे औत्पत्ति-कत्वरूपस्वाभाविकत्वहान्यापातादित्यर्थः ।

नन्वेवमचेतनप्रवृत्तिनिमित्तकानां स्वाभाविकप्रवृत्तिनिमित्तकानां च शब्दा-नामुदाहरणीयत्वे आकाशशब्दस्यैवोदाहरणं कुतः? इत्यत आह **कस्यचिदिति** ॥

ननु प्रथमातिक्रमे कारणाभावात्पृथिवीशब्द एवोदाहर्तव्यः, इत्यत आह – **आनन्दमयेति** ॥

नन्वनेकेषां विचार्यत्वे एकस्यैवोदाहरणं कुत्राप्यदृष्टं प्रकृत एव कथम् अङ्गीकार्यम्? इत्यतस्तत्र पूर्वसम्प्रतिपन्नदृष्टान्तमाह – **वाजपेयाधिकरण इति** ॥

## ಸಾರ

ಅಭ್ಯಧಿಕಾಶಂಕೆಯನ್ನು ತೋರಿಸುವ ಅನುವ್ಯಾಖ್ಯಾನದ ಅಭಿಪ್ರಾಯವನ್ನು ವಿವರಿಸುತ್ತಾರೆ.

ಆಕಾಶ ಶಬ್ದದ ಪ್ರವೃತ್ತಿ ನಿಮಿತ್ತವಾದ ವಿವರತ್ವವನ್ನು ಭಗವದಧೀನ ಎನ್ನಲು ಅಚೇತನಗತತ್ವ, ಮತ್ತು ಸ್ವಭಾವತ್ವ ಈ ಎರಡೂ ಬಾಧಕವಾಗಿವೆ. ಹೇಗೆಂದರೆ ರಾಜಾಧೀನವಾದ್ದರಿಂದ ಭೃತ್ಯನ ಜಯವನ್ನು ರಾಜನಲ್ಲಿ ವ್ಯವಹರಿಸುವಂತೆ ಅಚೇತನದಲ್ಲಿರುವ 'ತದ್‌ಗತತ್ವ' ಎಂಬ ಪ್ರವೃತ್ತಿನಿಮಿತ್ತವನ್ನಿಟ್ಟುಕೊಂಡು ಚೇತನನ ಅಧೀನವಾಗಿದೆ ಎಂದ ಮಾತ್ರಕ್ಕೆ ಜಡವಾಚಕ ಶಬ್ದಪ್ರಯೋಗವು ಲೋಕದಲ್ಲಿ ಕಂಡಿಲ್ಲ. 'ಚೇತನಪ್ರಸಾದಲಬ್ಧತ್ವ' ರೂಪ ಚೇತನಾಧೀನತ್ವನ್ನಿಟ್ಟುಕೊಂಡು ಹೇಳಬೇಕು. ಆದರೆ ಅಚೇತನವಾದದ್ದರಲ್ಲಿ ಭಗವಂತನ ಪ್ರಸಾದವನ್ನು ಹೇಳಲು ಬರುವುದಿಲ್ಲ ಎಂದು ಶಂಕಾಭಿಪ್ರಾಯ.

ಹೀಗೆ, ಇಂದ್ರಾದಿಶಬ್ದಗಳ ಪ್ರವೃತ್ತಿ ನಿಮಿತ್ತಗಳು ಹೇಗೆ ಇಂದ್ರಾದಿಗಳ ಸ್ವಭಾವವೋ ಹಾಗೆ ವಿವರತ್ವವೂ ಕೂಡ ಆಕಾಶದ್ದೇ ಸ್ವಭಾವ. ಹಾಗಾಗಿ ಇದನ್ನು ಭಗವಂತನ ಅಧೀನವೆನ್ನುವುದಾದರೆ. ಅದರ ಸ್ವಭಾವವಾಗಲಿಕ್ಕೆ ಹೇಗೆ ಸಾಧ್ಯ? ಭೃತ್ಯನಲ್ಲಿರುವ ಭೃತ್ಯನ ಸ್ವಾಭಾವಿಕ ರೂಪಾದಿಗಳನ್ನಿಟ್ಟುಕೊಂಡು ರಾಜನು ರೂಪವಂತ ಎಂದು ಎಲ್ಲಿಯಾದರೂ ಬಳಸುವುದು ಕಂಡಿದೆಯೇ? ಎಂದು ಪ್ರಶ್ನೆಯ ಅಭಿಪ್ರಾಯ.

— — — — — —

### ಜಡಸ್ವಭಾವವು ಹೇಗೆ ಭಗವದಧೀನ?

**तात्पर्यचन्द्रिका –**

**यद्वा – विवरत्वादिकं किमिन्द्रादिगतैश्वर्यादिवदीश्वरप्रसादलब्धत्वात् तदधीनम् किं वा कुलालाद्यधीनचक्रादिभ्रमणवदागन्तुकत्वमात्रेण? नाद्यः, तस्याचेतनगतत्वेन तदभावात् । नान्त्यः, स्वभावत्वात् । तथा च विवरत्वादिकं नेश्वराधीन-मितीश्वरानधीनत्वे सापेक्षयोरेवाचेचेतनगतत्वस्वभावत्वयोर्हेतुत्वम् ।**

ಅನುವಾದ - ಅಥವಾ ಹೀಗೆ ಪ್ರಶ್ನಿಸುತ್ತೇವೆ - ಇಂದ್ರಾದಿಗಳಲ್ಲಿರುವ ಐಶ್ವರ್ಯಾದಿಗುಣಗಳು ಭಗವಂತನ ಪ್ರಸಾದದಿಂದ ಲಭ್ಯವಾಗಿವೆ. ಆದಕಾರಣ ಭಗವಂತನ ಅಧೀನಗಳಾಗಿವೆ. ಅದರಂತೆ ಆಕಾಶಾದಿಗಳಲ್ಲಿರುವ ವಿವರತ್ವಾದಿಗಳು ಭಗವಂತನ ಪ್ರಸಾದದಿಂದ ಲಭ್ಯವಾದ ಕಾರಣ ಭಗವಂತನ ಅಧೀನವೆಂದು ಹೇಳುತ್ತೀರೋ? ಅಥವಾ ಆಗಂತುಕ ಧರ್ಮವಾದ ಚಕ್ರಭ್ರಮಣಾದಿಗಳು ಕುಲಾಲನ ಅಧೀನವಾದಂತೆ ಆಕಾಶಾದಿಗಳಲ್ಲಿರುವ ವಿವರತ್ವಾದಿಗಳು ಪರಮಾತ್ಮನಿಂದ ಉಂಟಾದ ಆಗಂತುಕಧರ್ಮವೆಂದು ಹೇಳುತ್ತೀರೋ?

ಮೊದಲನೆಯ ಪಕ್ಷ ಸರಿಯಲ್ಲ. ವಿವರತ್ವಾದಿಗಳು ಜಡಪದಾರ್ಥಗಳಲ್ಲಿರುವುದರಿಂದ ಭಗವಂತನ ಪ್ರಸಾದಕ್ಕೆ ಅರ್ಹವಾಗಲು ಸಾಧ್ಯವಿಲ್ಲ. ಎರಡನೆಯ ಪಕ್ಷವೂ ಸರಿಯಲ್ಲ. ವಿವರತ್ವಾದಿಗಳು ಜಡಸ್ವಭಾವವಾದ್ದರಿಂದ ಆಗಂತುಕಧರ್ಮವೆನ್ನಲು ಹೇಗೆ ಸಾಧ್ಯ? ಆದ್ದರಿಂದ ವಿವರತ್ವಾದಿಗಳು ಭಗವಂತನ ಅಧೀನವಾದ ಧರ್ಮಗಳಾಗಲಾರವು. ಈ ವಿಷಯದಲ್ಲಿ ಅಚೇತನ-ಗತತ್ವ ಹಾಗೂ ಸ್ವಭಾವತ್ವ ಎಂಬ ಎರಡು ಧರ್ಮಗಳು ಪರಂಪರೆಯಿಂದ ಹೇತುಗಳಾಗುತ್ತವೆ

ಕಠಿಣಪದಾರ್ಥ

ತಸ್ಯ = ವಿವರತ್ವಾದಿಗಳು, ತದಭಾವಾತ್ = ಈಶ್ವರನ ಪ್ರಸಾದದಿಂದ ಲಭ್ಯವಾಗಲಾರವು; ಸ್ವಭಾವತ್ವಾತ್ = ಜಡದ ಸ್ವಭಾವವಾದ್ದರಿಂದ, ಸಾಪೇಕ್ಷಯೋಃ = ಭಗವದಧೀನ-ವಲ್ಲವೆನ್ನಲು ಮಧ್ಯದಲ್ಲಿ ಮತ್ತೊಂದು ಹೇತುವನ್ನು ಅಪೇಕ್ಷಿಸುತ್ತದೆ.

**प्रकाशः** – एवं द्वयोस्तदधीनत्वे साक्षाद्धेतुत्वमुपपाद्य परम्परया हेतुत्वं व्यनक्ति – **यद्वेति** ॥

**विवरत्वादिकं** न भगवदधीनं भगवत्प्रसादालब्धत्वाद्व्यतिरेकेणैश्वर्यादिवत्, तथा अनागन्तुकत्वान्नान्याधीनं व्यतिरेकेण विवरकुलालचक्रभ्रमणवत् । तत्रासिद्धौ हेतू इत्यतः क्रमेणाचेतनगतत्वं स्वभावत्वं च हेतुद्वयसमर्थनपरतयेष्यत इति भावेन विकल्पमुखेनोपपादयति – **विवरत्वादिकमिति** ॥ **सापेक्षयोरिति** ॥ उक्तरीत्या मध्ये हेत्वन्तरसापेक्षयोरित्यर्थः । यथा सावयवत्वस्य कार्यत्वद्वारा कर्तृसाधनत्वं, तद्वदिति ।

तथा चानुव्याख्यानस्यैवं योजना – 'विवरत्वादि' विवरत्वादिकं कथं 'ततः' भगवत्प्रसादात्, कथं भगवत्प्रसादलब्धं, अचेतनगतत्वात् । तथा च तत्प्रसाद-लब्धत्वाभावात् विवरत्वादिकं 'कथं ततः' तदधीनं कथं, न कथमपीति ।

तथा विवरत्वादिकं 'कथं ततः' तदधीनं कथम्, 'अनागन्तुकत्वात्' इति शेषः । तदेव कुत इति चेत् – **स्वभावत्वादिति** । एवं ''अचेतनस्वभावस्तु'' इत्यनेन विवक्षितं हेतुद्वयं स्वातन्त्र्यरूपप्रवृत्तिनिमित्तनिरसने साक्षात्परम्परया वा साधनमित्येतच्छ्लोकारूढतया दर्शितम् ।

'विवरत्वादेर्भगवद्गतत्वेन योगोऽभिमतः' इति द्वितीयः कल्पः । तन्निरासस्तु श्लोकाद् बहिरेव ध्येयः। तथा हि । 'विवरत्वादिकम् ऐश्वर्यादिवन्न भगवद्गतम्' इति साध्यमध्याहार्यम् । हेतुस्तु 'अचेतनगतत्वात्' इति ।

ಅನುವಾದ - ಇಲ್ಲಿಯ ತನಕ ವಿವರತ್ವಾದಿಗಳು ಭಗವಂತನ ಅಧೀನವಲ್ಲವೆನ್ನಲು ಅಚೇತನಗತತ್ವ ಹಾಗೂ ಸ್ವಭಾವತ್ವಧರ್ಮಗಳನ್ನು ಸಾಕ್ಷಾತ್ತಾಗಿ ಕಾರಣಗಳೆಂದು ಉಪಪಾದಿಸಿದ್ದಾಯಿತು. ಪ್ರಕೃತ ಈ ಎರಡು ಧರ್ಮಗಳು ಪರಂಪರೆಯಿಂದಲೂ ಸಹ ಹೇತು(ಕಾರಣ)ಗಳಾಗುತ್ತವೆ ಎಂದು ''ಯದ್ವಾ'' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನಿಸಿದ್ದಾರೆ.

ಅನುಮಾನ ಹೀಗಿದೆ - 'ವಿವರತ್ವಾದಿಕಂ ನ ಭಗವದಧೀನಂ ಭಗವತ್ಪ್ರಸಾದಾಲಭ್ಯತ್ವಾತ್ ವ್ಯತಿರೇಕೇಣ ಐಶ್ವರ್ಯಾದಿವತ್' ಇಂದ್ರಾದಿಗಳಲ್ಲಿರುವ ಐಶ್ವರ್ಯಾದಿ ಧರ್ಮಗಳು ಭಗವತ್ ಪ್ರಸಾದದಿಂದ ಲಭ್ಯವಾಗಿವೆ. ಮತ್ತು ಭಗವದಧೀನಗಳೂ ಆಗಿವೆ. ಆದರೆ ಆಕಾಶಾದಿಗಳಲ್ಲಿರುವ ವಿವರತ್ವಾದಿ ಧರ್ಮಗಳು ಭಗವಂತನ ಪ್ರಸಾದದಿಂದ ಲಭ್ಯವಾಗದ ಕಾರಣ ಭಗವದಧೀನವೂ ಸಹ ಆಗಲಾರವೆಂದು ಅನುಮಾನದ ಅಭಿಪ್ರಾಯ. ಈ ಅನುಮಾನದಲ್ಲಿ ಭಗವತ್ಪ್ರಸಾದ ಅಲಭ್ಯತ್ವ ಎಂಬ ಹೇತುವೇ ಅಸಿದ್ಧವಾಗಿದೆಯೆಂದು ಆಕ್ಷೇಪಿಸಿದರೆ ಅಚೇತನಗತತ್ವವು ಹೇತ್ವಸಿದ್ಧಿಯನ್ನು ಪರಿಹರಿಸುತ್ತದೆ. 'ವಿವರತ್ವಾದಿಕಂ ಭಗವತ್ಪ್ರಸಾದ ಅಲಭ್ಯಂ ಅಚೇತನಗತತ್ವಾತ್' ಎಂದು ಅಚೇತನಗತತ್ವಧರ್ಮವು ಭಗವಂತನ ಅಧೀನವಲ್ಲವೆನ್ನಲು ಹೇತ್ವಸಿದ್ಧಿಯನ್ನು ಪರಿಹರಿಸುವ ಮೂಲಕ (ಪರಂಪರೆಯಿಂದ) ಹೇತುವಾಗುತ್ತದೆ. ಇದರಂತೆ ಮತ್ತೊಂದು ಅನುಮಾನ - 'ವಿವರತ್ವಾದಿಕಂ ನ ಭಗವದಧೀನಂ ಅನಾಗಂತುಕತ್ವಾತ್ ವ್ಯತಿರೇಕೇಣ ಕುಲಾಲಚಕ್ರಭ್ರಮಣವತ್'. ಕುಲಾಲನಿಂದ ಉಂಟಾದ ಚಕ್ರಭ್ರಮಣವು ಆಗಂತುಕಧರ್ಮವಾಗಿದೆ. ಮತ್ತು ಕುಲಾಲನ ಅಧೀನವಾಗಿದೆ. ಆದರೆ ಆಕಾಶಾದಿಗಳಲ್ಲಿರುವ ವಿವರತ್ವಾದಿಗಳು ಸ್ವಾಭಾವಿಕಧರ್ಮವಾದ್ದರಿಂದ ಭಗವಂತನ ಅಧೀನ- ವಾಗಲಾರವೆಂದು ಅನುಮಾನದ ಅಭಿಪ್ರಾಯ. ಈ ಅನುಮಾನದಲ್ಲಿಯೂ ಸಹ ಅನಾಗಂತುಕತ್ವವೆಂಬ ಹೇತುವೇ ಅಸಿದ್ಧವಾಗಿದೆಯೆಂದು ಹೇತ್ವಸಿದ್ಧಿಯನ್ನು ಆಕ್ಷೇಪಿಸಿದರೆ ಸ್ವಭಾವತ್ವಧರ್ಮವು ಆ ಹೇತ್ವಸಿದ್ಧಿದೋಷವನ್ನು ಪರಿಹರಿಸುತ್ತದೆ. ಅಂದರೆ 'ವಿವರತ್ವಾದಿಕಂ ಅನಾಗಂತುಕಂ ಜಡಸ್ವಭಾವತ್ವಾತ್' ಎಂದು ಸ್ವಭಾವತ್ವಹೇತುವು ಭಗವದಧೀನವಲ್ಲವೆನ್ನಲು ಕಾರಣವಾದ ಅನಾಗಂತುಕತ್ವಹೇತುವನ್ನು ಸಮರ್ಥಿಸುವ ಮೂಲಕ (ಪರಂಪರೆಯಿಂದ) ಕಾರಣವಾಗಿದೆ. ಈ ಅಭಿಪ್ರಾಯದಿಂದ ಗ್ರಂಥಕಾರರು ''ವಿವರತ್ವಾದಿಕಂ'' ಇತ್ಯಾದಿ ವಾಕ್ಯದಿಂದ ವಿಕಲ್ಪ ಮಾಡುವ ಮೂಲಕ ವಿವರಿಸುತ್ತಿದ್ದಾರೆ.

ಗ್ರಂಥದಲ್ಲಿ ಸಾಪೇಕ್ಷವಾದ ಅಚೇತನಗತತ್ವ ಹಾಗೂ ಸ್ವಭಾವತ್ವಧರ್ಮಗಳು ಹೇತುಗಳಾಗಿವೆಯೆಂದು ಹೇಳಿದ್ದಾರೆ. ಇದಕ್ಕೆ ಹೀಗೆ ಅರ್ಥ -- ಯಾವರೀತಿಯಾಗಿ 'ಕ್ಷಿತ್ಯಂಕುರಾದಿಕಂ ಸಕರ್ತೃಕಂ ಕಾರ್ಯತ್ವಾತ್ ಘಟವತ್' ಎಂಬ ಅನುಮಾನದಲ್ಲಿ ಕಾರ್ಯತ್ವಹೇತುವೇ ಅಸಿದ್ಧವೆಂದು ಶಂಕಿಸಿದಾಗ 'ಕ್ಷಿತ್ಯಂಕುರಾದಿಕಂ ಕಾರ್ಯಂ ಸಾವಯವತ್ವಾತ್' ಎಂದು ಸಾವಯವತ್ವಹೇತುವಿನಿಂದ ಕಾರ್ಯತ್ವವನ್ನು ಸಾಧಿಸುತ್ತಾರೆ. ಅಂದರೆ ಸಕರ್ತೃಕತ್ವವಿಷಯದಲ್ಲಿ ಸಾವಯವತ್ವವು ನೇರವಾಗಿ ಹೇತುವಾಗಲು ಕಾರ್ಯತ್ವಹೇತುವನ್ನು ಸಮರ್ಥಿಸುವ ಮೂಲಕ ಹೇಗೆ ಹೇತುವಾಗುತ್ತದೋ, ಅದರಂತೆ ಪ್ರಕೃತದಲ್ಲಿಯೂ ಸಹ ಅಚೇತನಗತತ್ವ ಮತ್ತು ಸ್ವಭಾವತ್ವಧರ್ಮಗಳು ಭಗವದಧೀನವಲ್ಲವೆನ್ನಲು ನೇರವಾಗಿ ಕಾರಣಗಳಾಗಲಾರವು; ಹೊರತಾಗಿ ಭಗವತ್ಪ್ರಸಾದ ಅಲಭ್ಯತ್ವ ಮತ್ತು ಅನಾಗಂತುಕತ್ವವೆಂಬ ಎರಡು ಹೇತುಗಳನ್ನು ಸಮರ್ಥಿಸುವ ಮೂಲಕ ಹೇತುಗಳಾಗುತ್ತವೆ. ಆದ್ದರಿಂದ ಅಚೇತನಗತತ್ವ ಮತ್ತು ಸ್ವಭಾವತ್ವಧರ್ಮಗಳು ಸಾಪೇಕ್ಷಿತಹೇತುಗಳಾಗಿವೆ.

ಈ ವ್ಯಾಖ್ಯಾನದಲ್ಲಿ ಅನುವ್ಯಾಖ್ಯಾನದ ಮಾತಿಗೆ ಹೀಗೆ ಅರ್ಥ -- ವಿವರಾದಿಃ = ವಿವರತ್ವಾದಿಗಳು ಕಥಂ ತತಃ? = ಹೇಗೆ ಭಗವತ್ಪ್ರಸಾದಲಬ್ಧವೆನಿಸುತ್ತವೆ?, ಅಚೇತನಗತತ್ವಾತ್ = ಅಚೇತನಸ್ವಭಾವವು ಅಚೇತನಧರ್ಮವಾದ್ದರಿಂದ ಎಂದು. ಹೀಗೆ ಭಗವಂತನ ಪ್ರಸಾದ ಲಬ್ಧವಾಗದ ವಿವರತ್ವಾದಿಗಳು ಹೇಗೆ ಭಗವದಧೀನಗಳಾಗುತ್ತವೆ. ಯಾವುದೇ ಕಾರಣದಿಂದಲೂ ಭಗವಂತನ ಪ್ರಸಾದಕ್ಕೆ ವಿಷಯ-ಗಳಾಗುವುದಿಲ್ಲವೆಂದು ಅನುವ್ಯಾಖ್ಯಾನಕ್ಕೆ ಅರ್ಥ. ಆದ್ದರಿಂದ 'ವಿವರತ್ವಾದಿಕಂ ಕಥಂ ತತಃ ತದಧೀನಂ ಕಥಂ ಅನಾಗಂತುಕತ್ವಾತ್?' ಎಂದು ಶೇಷಪೂರಣ ಮಾಡಿಕೊಳ್ಳಬೇಕು.

ಹೀಗೆ 'ಅಚೇತನಸ್ವಭಾವಸ್ತು' ಎಂಬ ಶ್ಲೋಕದಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ನಿರಾಸ ಮಾಡಲು ಎರಡು ಹೇತುಗಳನ್ನು ಹೇಳಿದ್ದಾರೆ. ಈ ಎರಡು ಹೇತುಗಳು ಸಾಕ್ಷಾತ್ತಾಗಿ ಮತ್ತು ಪರಂಪರೆಯಿಂದಲೂ ಸ್ವಾತಂತ್ರ್ಯಧರ್ಮವನ್ನು ನಿರಾಸ ಮಾಡುತ್ತವೆಂದು ಇಲ್ಲಿಯ ತನಕ ತೋರಿಸಿದ್ದಾಯಿತು. ಇನ್ನು ವಿವರತ್ವಾದಿಗಳು ಭಗವಂತನಲ್ಲಿ ಇರುತ್ತವೆಂದು ಹೇಳುವ ತದ್ಗತತ್ವವೆಂಬ ಪ್ರವೃತ್ತಿನಿಮಿತ್ತವನ್ನು ನಿರಾಸ ಮಾಡಬೇಕಾಗಿದೆ. ಈ ಪಕ್ಷವನ್ನು ಅನುವ್ಯಾಖ್ಯಾನಶ್ಲೋಕದಲ್ಲಿ ಸ್ಪಷ್ಟವಾಗಿ ನಿರಾಕರಿಸಿಲ್ಲ. ಆದರೂ ಸಹ ಶ್ಲೋಕದಿಂದ ಹೊರಗಡೆಯೇ ಚಿಂತಿಸಬೇಕಾಗಿದೆ. ಅದು ಹೀಗೆ - "ವಿವರತ್ವಾದಿಕಂ ಐಶ್ವರ್ಯಾದಿವತ್ ನ ಭಗವದ್ಗತಮ್" ಎಂಬ ಪ್ರತಿಜ್ಞೆಯನ್ನು ಶ್ಲೋಕದಲ್ಲಿ ಅಧ್ಯಾಹಾರ ಮಾಡಿಕೊಂಡು ಶ್ಲೋಕದಲ್ಲಿರುವ ಅಚೇತನಗತತ್ವವನ್ನು ಹೇತುವನ್ನಾಗಿ ಯೋಜಿಸಬೇಕು. ಆವಾಗ ಸ್ವಾತಂತ್ರ್ಯ ಮತ್ತು ತದ್ಗತತ್ವಗಳೆಂಬ ಎರಡುವಿಧ ಪ್ರವೃತ್ತಿನಿಮಿತ್ತಗಳನ್ನು ಅನುವ್ಯಾಖ್ಯಾನಶ್ಲೋಕದಿಂದಲೇ ನಿರಾಕರಿಸಿದಂತಾಗುತ್ತದೆ.

**गुरुराजीयम् –** परस्परनिरपेक्षाभ्यामेवाचेतनगतत्वाचेतनस्वभावत्वाभ्या-माकाशशब्दप्रवृत्तिनिमित्तविवरत्वादेरीश्वरानधीनत्वं प्रसाध्य सापेक्षयोरप्यचेतन-गतत्वस्वभावत्वयोरीश्वराधीनत्वसाधकमाह – **यद्वेति** ॥

## ಸಾರ

ಇಂದ್ರಾದಿದೇವತೆಗಳಲ್ಲಿರುವ ಇಂದ್ರಾದಿಪದ ಪ್ರವೃತ್ತಿನಿಮಿತ್ತವಾದ 'ಐಶ್ವರ್ಯ' ಮುಂತಾದವುಗಳು ಭಗವಂತನ ಪ್ರಸಾದದಿಂದ ಲಭ್ಯವಾದುವುಗಳಾದ್ದರಿಂದ ಹೇಗೆ ಭಗವದಧೀನಗಳೋ ಹಾಗೆ. ವಿವರತ್ವ ಮೊದಲಾದುವುಗಳೂ ಸಹ ಭಗವಂತನ ಪ್ರಸಾದದಿಂದ ಲಬ್ಧವಾದ್ದರಿಂದ ಭಗವಂತನ ಅಧೀನವೋ? ಅಥವಾ ಕುಂಬಾರನ ಅಧೀನವಾಗಿ ಚಕ್ರದಲ್ಲಿ ಆಗಂತುಕವಾಗಿ ಬರುವ ಭ್ರಮಣದಂತೆ ಆಗಂತುಕವಾಗಿ ಭಗವದಧೀನವೋ? ಎರಡೂ ಸರಿಯಲ್ಲ. ವಿವರತ್ವಾದಿಗಳೂ ಅಚೇತನನಲ್ಲಿರುವುದರಿಂದ ಅವನ ಪ್ರಸಾದಲಭ್ಯಗಳು ಎನ್ನಲು ಬರುವುದಿಲ್ಲ. ವಿವರತ್ವಾದಿಗಳು ಸ್ವಭಾವಗಳಾದ್ದರಿಂದ ಆಗಂತುಕಾಧೀನತ್ವವೆಂದು ಹೇಳಲು ಬರುವುದಿಲ್ಲ.

ಪ್ರಮೇಯಾಶ್ರಿತ ಪೂರ್ವಪಕ್ಷ

**तात्पर्यचन्द्रिका –**

यद्वा – 'स्वातन्त्र्यं तद्गतत्वं च शब्दवृत्तेर्हि कारणम् ।'

इत्युक्तत्वात् द्वयं निमित्तम् । तत्र न तावत् निरवधिकैश्वर्यादिवत् निरवधिक विवरत्वादिकं ब्रह्मगतम्, तस्याचेतनगतत्वात् । नापि पुरन्दरादिगतैश्वर्यवत् तदधीनम्, स्वभावत्वात् ।

तथा च विवरत्वादिकं ब्रह्मण्याकाशादिशब्दवृत्तौ न निमित्तमिति निमित्तत्वाभावे सापेक्षयोर्हेतुत्वम् । श्लोके सार्वविभक्तिकतस्यन्तस्य ततश्शब्दस्य तत्रेत्यप्यर्थः । अस्मिन्मते तद्गतत्वपक्षोऽपि श्लोकेनैव दूषितः । मतान्तरे तु बहिरेव दूष्यः ।

सुधायां तु – न तावद् विवरत्वादिकमैश्वर्यादिवदागन्तुकज्ञानादिरूपहेतुद्वारा ईश्वरायत्तम्, अचेतनाश्रितत्वात् । नापि स्वरूपतः, स्वभावत्वात् – इति व्याख्यातम् । तत्र इन्द्रादिशब्दप्रवृत्तिनिमित्ते पालनादिरूपप्रयत्नात्मकैश्वर्ये ज्ञानादेरेव हेतुत्वदर्शनात् अत्रापि ज्ञानादिरेव हेतुर्वाच्यः । स च अचेतने नास्तीत्यभिप्रायः ।

यत्तु सुधायाम् अन्तरधिकरणपूर्वपक्षे अचेतनस्वभावस्यानत्वादेर्भगवदधीनत्वाङ्गीकरणम्, तदेतदधिकरणसिद्धान्तन्यायानुसन्धानेन । न ह्येतदधिकरणपूर्वपक्षस्थेनैव तत्रापि पूर्वपक्षिणा भाव्यम्, तथात्वे एतदधिकरणसिद्धान्तेनैव तत्रत्यपूर्वपक्षनिरासेन तत्रत्यसिद्धान्तवैयर्थ्यात् ।

अनुव्याख्यानसुधाद्यनुसारेण चात्रापि टीकायाम् "आकाशस्याचेतनत्वेन अन्याधीनत्वायोगात्" इत्यादावाकाशपदं तत्पदप्रवृत्तिनिमित्तपरम् । तस्मादाकाशादिशब्दानां क्लृप्तं रूढं वा, "आकाशनमवकाशत्वम्" इति सुधोक्तं यौगिकं वा क्लृप्तं निमित्तम् नेश्वरगतम्, नापि तदधीनम् । 'आ समन्तात् काशते' इति कल्प्यो योगस्तु क्लृप्तया भूताकाशे रूढ्या बाधितः । विद्वद्रूढिमहायोगौ तु असिद्धौ, वैदिकप्रयोगबाहुल्यादेरद्याप्यसिद्धेः ।

**यत्तु आनन्दमयाधिकरणे –**

**'अध्यात्मगैश्च प्राणाद्यैस्तथैव ह्यधिभूतगैः ।'**

**इत्याद्यनुव्याख्यानम्, तदानन्दमयप्रकरणस्थाकाशादिशब्दानां ब्रह्मपरत्वाय आकाशाद्यधिकरणे वक्ष्यमाणन्यायमुपजीव्य प्रवृत्तमिति न तेन विद्वद्रूढ्यादि-सिद्धिः । तस्मायुक्ता अभ्यधिकाशङ्का ।**

**इयं च प्रमेयाश्रिता आकाशशब्दस्य ब्रह्मणि मुख्यत्वविरोधिनी शङ्का ।**

ಅನುವಾದ - ಹಾಗಿಲ್ಲದಿದ್ದರೆ 'ಸ್ವಾತಂತ್ರ್ಯಂ ತದ್ಗತತ್ವಂ ಚ ಶಬ್ದವೃತ್ತೇರ್ಹಿ ಕಾರಣಮ್' (ಸ್ವಾತಂತ್ರ್ಯ ಹಾಗೂ ತದ್ಗತತ್ವಗಳು ಶಬ್ದಗಳ ಪ್ರವೃತ್ತಿಗೆ ಕಾರಣಗಳಾಗಿವೆ) ಎಂದು ಅನು-ವ್ಯಾಖ್ಯಾನದಲ್ಲಿ ಹೇಳಿದಂತೆ ಶಬ್ದಗಳ ಪ್ರವೃತ್ತಿಗೆ ಎರಡು ನಿಮಿತ್ತಗಳಿವೆ. ಇವೆರಡರಲ್ಲಿ ತದ್ಗತತ್ವವು ಪ್ರವೃತ್ತಿನಿಮಿತ್ತವೆನ್ನಲು ಸಾಧ್ಯವಿಲ್ಲ. ಇಂದ್ರಾದಿಗಳಲ್ಲಿರುವ ಐಶ್ವರ್ಯಾದಿಗಳು ಹೇಗೆ ಬ್ರಹ್ಮನಲ್ಲಿ ನಿರವಧಿಕವಾಗಿ ಇವೆಯೋ ಅದರಂತೆ ಆಕಾಶಾದಿಗಳಲ್ಲಿರುವ ವಿವರತ್ವಾದಿಗಳು ನಿರವಧಿಕವಾಗಿ ಬ್ರಹ್ಮನಲ್ಲಿ ಇವೆಯೆಂದು ಹೇಳಲು ಸಾಧ್ಯವಿಲ್ಲ. ಐಶ್ವರ್ಯಾದಿಗಳು ಚೇತನನಿಷ್ಠವಾದ್ದರಿಂದ ನಿರ-ವಧಿಕವಾಗಿ ಬ್ರಹ್ಮನಲ್ಲಿ ಇವೆಯೆಂದು ಹೇಳಬಹುದು. ಆದರೆ ವಿವರತ್ವಾದಿಗಳು ಅಚೇತನ ಧರ್ಮ-ವಾದ್ದರಿಂದ ನಿರವಧಿಕವಾಗಿ ಬ್ರಹ್ಮನಲ್ಲಿ ಇವೆಯೆಂದು ಹೇಳಲು ಹೇಗೆ ಸಾಧ್ಯ? ಇನ್ನು ಇಂದ್ರಾದಿ-ಗಳಲ್ಲಿರುವ ಐಶ್ವರ್ಯಾದಿ ಗುಣಗಳು ಭಗವಂತನ ಅಧೀನಗಳಾಗಿವೆ. ಅದರಂತೆ ಆಕಾಶಾದಿಗಳಲ್ಲಿ-ರುವ ವಿವರತ್ವಾದಿ ಧರ್ಮಗಳು ಭಗವಂತನ ಅಧೀನಗಳಾಗಿವೆ ಎಂದು ಹೇಳಬೇಕು. ಆದರೆ ಇಂದ್ರಾದಿಗಳಲ್ಲಿರುವ ಐಶ್ವರ್ಯಾದಿ ಧರ್ಮಗಳು ಸ್ವಾಭಾವಿಕಗಳಲ್ಲ. ಆದರೆ ಆಕಾಶಾದಿಗಳಲ್ಲಿರುವ ವಿವರತ್ವಾದಿಗಳು ಸ್ವಾಭಾವಿಕಧರ್ಮಗಳಾಗಿವೆ. ಆದ್ದರಿಂದ ಹೀಗೆ ಅನುಮಾನ ಮಾಡುತ್ತೇವೆ - 'ವಿವರತ್ವಾದಿಕಂ ಬ್ರಹ್ಮಣಿ ಆಕಾಶಾದಿಶಬ್ದವೃತ್ತೌ ನಿಮಿತ್ತಂ ನ ಭವತಿ, ಅಚೇತನಗತತ್ವಾತ್, ಅಚೇತನ-ಸ್ವಭಾವತ್ವಾತ್' ವಿವರತ್ವಾದಿಗುಣಗಳು ಅಚೇತನ ಸ್ವಭಾವವಾದ್ದರಿಂದ ಮತ್ತು ಅಚೇತನದಲ್ಲಿ-ರುವುದರಿಂದ ಬ್ರಹ್ಮನಲ್ಲಿ ಆಕಾಶಾದಿಶಬ್ದಗಳ ಪ್ರಯೋಗಕ್ಕೆ ನಿಮಿತ್ತಗಳಾಗುವುದಿಲ್ಲ. ಈ ಅರ್ಥದಲ್ಲಿ ಅನುವ್ಯಾಖ್ಯಾನ ಶ್ಲೋಕದಲ್ಲಿರುವ 'ತತಃ' ಎಂಬ ಶಬ್ದಕ್ಕೆ ತತ್ರ ಎಂಬರ್ಥವನ್ನು ಹೇಳಬೇಕು. ತತ್ ಶಬ್ದದ ಮೇಲೆ ಎಲ್ಲಾ ವಿಭಕ್ತಿಗಳಲ್ಲಿ ಬರುವ ತಸಿ ಪ್ರತ್ಯಯವು ಸಪ್ತಮ್ಯರ್ಥದಲ್ಲಿ ಬಂದಿದೆ. ಆದ್ದರಿಂದ ತದ್ಗತತ್ವಪಕ್ಷವನ್ನೂ ಸಹ ಶ್ಲೋಕದಿಂದಲೇ ದೂಷಿಸಿದಂತಾಗುತ್ತದೆ. ಹಿಂದಿನ ಪಕ್ಷವನ್ನು ಶ್ಲೋಕದಿಂದ ಹೊರಗಡೆ ದೂಷಿಸಬೇಕು.

ಈ ವಿಷಯದಲ್ಲಿ ಸುಧೆಯು ಹೀಗೆ ಹೇಳಿದೆ - ''ವಿವರತ್ವಾದಿಗಳು ಭಗವಂತನ ಅಧೀನವೆಂದು ಹೀಗೆ ಹೇಳಬಹುದು 'ಇಂದ್ರನಲ್ಲಿ ಐಶ್ವರ್ಯ ಜಗತ್ಪಾಲಕತ್ವ ಮೊದಲಾದ ಧರ್ಮಗಳಿವೆ. ಹೇಗೆ

ಇವು ಭಗವಂತನ ಅಧೀನಗಳು? ಎಂದರೆ ಪಾಲಕತ್ವವು ಪ್ರಯತ್ನರೂಪವಾಗಿದೆ. ಇದಕ್ಕೆ ಜ್ಞಾನೇಚ್ಛಾದಿಗಳು ಕಾರಣವಾಗಿವೆ. ಇಂದ್ರಾದಿಗಳಲ್ಲಿರುವ ಈ ಜ್ಞಾನೇಚ್ಛಾದಿಗಳು ಭಗವಂತನ ಅಧೀನವಾದ್ದರಿಂದ ಇಂದ್ರಾದಿಗಳಲ್ಲಿರುವ ಪಾಲಕತ್ವಾದಿ ಧರ್ಮಗಳೂ ಸಹ ಭಗವಂತನ ಅಧೀನಗಳಾಗುತ್ತವೆಂದು ಹೇಗೆ ಹೇಳುತ್ತೇವೋ, ಇದರಂತೆ ಪ್ರಕೃತದಲ್ಲಿಯೂ ವಿವರತ್ವಾದಿಗಳಿಗೆ ಜ್ಞಾನೇಚ್ಛಾದಿಗಳು ಕಾರಣಗಳಾಗಿವೆ. ಈ ಜ್ಞಾನೇಚ್ಛಾದಿಗಳು ಭಗವಂತನ ಅಧೀನವಾದ್ದರಿಂದ ವಿವರತ್ವಾದಿಗಳೂ ಸಹ ಭಗವಂತನ ಅಧೀನಗಳಾಗಿವೆ ಎಂದು ಹೇಳಬೇಕು. ಆದರೆ ವಿವರತ್ವಾದಿಗಳು ಜಡನಿಷ್ಠವಾದ್ದರಿಂದ ಜ್ಞಾನೇಚ್ಛಾದಿಗಳ ಅಧೀನವೆಂದು ಹೇಳಲು ಸಾಧ್ಯವಿಲ್ಲ. ಅದರಂತೆ ವಿವರತ್ವಾದಿಗಳು ಸ್ವರೂಪತಃ ಭಗವಂತನ ಅಧೀನಗಳಾಗಿವೆ ಎಂದೂ ಸಹ ಹೇಳಲಾಗದು ಜಡಸ್ವಭಾವವಾದ್ದರಿಂದ. ಹೀಗೆ ಎರಡು ವಿಧದಲ್ಲಿ ವಿವರತ್ವಾದಿಗಳನ್ನು ಭಗವಂತನ ಸ್ವರೂಪವೆಂದು ಹೇಳಬಹುದು. ಆದರೆ ಅಚೇತನಾಶ್ರಿತವಾದ್ದರಿಂದ ಮತ್ತುಜಡಸ್ವಭಾವವಾದ್ದರಿಂದ ಎರಡು ಉಪಾಯ -ಗಳಿಂದ ಭಗವಂತನ ಅಧೀನವೆಂದು ಸಮರ್ಥಿಸಲಾಗದು'' ಇಷ್ಟು ಸುಧೆಯಲ್ಲಿ ಹೇಳಿದ ವಿಚಾರ.

ಐಶ್ವರ್ಯವು ಇಂದ್ರಾದಿಶಬ್ದಗಳ ಪ್ರವೃತ್ತಿನಿಮಿತ್ತ. ಈ ಐಶ್ವರ್ಯವು ಪಾಲನರೂಪವಾದ್ದರಿಂದ ಪ್ರಯತ್ನವೆನಿಸಿದೆ. ಪ್ರಯತ್ನಕ್ಕೆ ಜ್ಞಾನೇಚ್ಛೆಗಳು ಕಾರಣಗಳೆಂದು ಕಂಡಿರುವುದರಿಂದ ವಿವರತ್ವಾದಿ-ಗಳಲ್ಲಿಯೂ ಸಹ ಜ್ಞಾನೇಚ್ಛೆಗಳನ್ನೇ ಕಾರಣವೆಂದು ಹೇಳಬೇಕು. ಆದರೆ ಜಡದಲ್ಲಿ ಜ್ಞಾನೇಚ್ಛೆಗಳನ್ನು ಹೇಳಲು ಸಾಧ್ಯವಿಲ್ಲ. ಸುಧೆಯ ಮರ್ಮವನ್ನು ಸ್ಪಷ್ಟವಾಗಿ ಗಮನಿಸಬೇಕು.

ಪ್ರಶ್ನೆ - ಸುಧೆಯ ಅಂತರಧಿಕರಣದ ಪೂರ್ವಪಕ್ಷದಲ್ಲಿ ಹೀಗೆ ಹೇಳಿದ್ದಾರೆ. ''ಅನ್ನ ಔಷಧಾದಿ ಶಬ್ದಗಳು ಪರಮಾತ್ಮನಲ್ಲಿ ಮುಖ್ಯವಾಗಿ ಬರಬಹುದು. ಏಕೆಂದರೆ, ಈ ಶಬ್ದಗಳ ಪ್ರವೃತ್ತಿನಿಮಿತ್ತವಾದ ಅನ್ನತ್ವಾದಿಗಳು ಅಚೇತನಸ್ವಭಾವವಾದ್ದರಿಂದ ಭಗವಂತನ ಅಧೀನವಾಗುತ್ತವೆ. ಆದರೆ ಇಂದ್ರಾದಿ-ಶಬ್ದಗಳ ಪ್ರವೃತ್ತಿನಿಮಿತ್ತವು ಚೇತನ ಸ್ವಭಾವವಾದ್ದರಿಂದ ಭಗವದಧೀನವಾಗುವುದಿಲ್ಲ. ಆದ್ದರಿಂದ ಆಕಾಶಾದಿಶಬ್ದಗಳ ಪ್ರವೃತ್ತಿನಿಮಿತ್ತವು ಸುಧೆಯ ಮಾತಿನಂತೆ ಭಗವಂತನ ಅಧೀನವೆಂದು ಸುಲಭವಾಗಿ ತಿಳಿಯುವುದರಿಂದ ಈ ಅಧಿಕರಣದ ಪೂರ್ವಪಕ್ಷವನ್ನು ಹೇಗೆ ಸ್ಥಾಪನೆ ಮಾಡುತ್ತೀರಿ?

ಉತ್ತರ - ಹೌದು. ಅಂತಃಸ್ಥತ್ವಾಧಿಕರಣದ ಪೂರ್ವಪಕ್ಷದಲ್ಲಿ ಜಡವಾಚಿಯಾದ ಶಬ್ದಗಳು ಭಗವತ್ಪರವೆಂದು ಹೇಳಿದ್ದಾರೆ. ಆದರೆ ಆ ಪೂರ್ವಪಕ್ಷವು ಆಕಾಶಾಧಿಕರಣದ ಸಿದ್ಧಾಂತನ್ಯಾಯವನ್ನು ಅವಲಂಬಿಸಿ ಹೊರಟಿದೆ. ಆದ್ದರಿಂದ ಈ ಅಧಿಕರಣದ ಪೂರ್ವಪಕ್ಷಿಯು ಅದನ್ನೂ ಸಹ ಆಕ್ಷೇಪಿಸು-ತ್ತಾನೆ. ಅಂದರೆ ಆಕಾಶಾಧಿಕರಣದ ಸಿದ್ಧಾಂತನ್ಯಾಯವನ್ನು ಯಾವುದೇ ಕಾರಣದಿಂದಲೂ ಅಂಗೀ-ಕರಿಸದ ಪೂರ್ವಪಕ್ಷಿಯು ಹಿಂದಿನ ಅಧಿಕರಣದ ಪೂರ್ವಪಕ್ಷದಲ್ಲಿ ಹೇಳಿದ ಜಡವಾಚಿಶಬ್ದಗಳು ಭಗವತ್ಪರವೆಂಬುದನ್ನು ಹೇಗೆ ತಾನೆ ಒಪ್ಪುತ್ತಾನೆ?

ಪರಿಪೂರ್ಣಚಂದ್ರಿಕಾ

ಪ್ರಶ್ನೆ - ಎಲ್ಲಾ ಅಧಿಕರಣಗಳ ಪೂರ್ವಪಕ್ಷಕಾರನೂ ಒಬ್ಬನೇ ಆದ್ದರಿಂದ ಜಡವಾಚಿಶಬ್ದಗಳನ್ನು ಭಗವತ್ಪರವೆಂದು ಒಪ್ಪದ ಆಕಾಶಾಧಿಕರಣದ ಪೂರ್ವಪಕ್ಷಿಯು ಅಂತರಧಿಕರಣದಲ್ಲಿ ಹೇಗೆ ಒಪ್ಪುತ್ತಾನೆ?

ಉತ್ತರ - ಹಾಗೇನಿಲ್ಲ. ಪ್ರತಿಯೊಂದು ಅಧಿಕರಣಗಳ ಪೂರ್ವಪಕ್ಷಿಯು ಒಬ್ಬನೇ ಆಗಲಾರ. ಆಯಾ ಅಧಿಕರಣದ ಸಿದ್ಧಾಂತನ್ಯಾಯಕ್ಕೆ ಅನುಗುಣವಾಗಿ ಪೂರ್ವಪಕ್ಷಿಗಳು ಬೇರೆ ಬೇರೆಯೇ ಆಗಿರುತ್ತಾರೆ. ಹಾಗಾಗಿ ಆಕಾಶಾಧಿಕರಣದ ಪೂರ್ವಪಕ್ಷಿಯೇ ಅಂತರಧಿಕರಣದ ಪೂರ್ವಪಕ್ಷಿ-ಯಾಗಲು ಸಾಧ್ಯವಿಲ್ಲ. ಒಂದು ವೇಳೆ ಪೂರ್ವಪಕ್ಷಿಗಳು ಒಬ್ಬನೇ ಆದಲ್ಲಿ ಈ ಆಕಾಶಾಧಿಕರಣದ ಸಿದ್ಧಾಂತನ್ಯಾಯದಿಂದಲೇ ಹಿಂದಿನ ಅಂತರಧಿಕರಣದ ಪೂರ್ವಪಕ್ಷವನ್ನು ನಿರಾಸ ಮಾಡಲು ಬರುವುದರಿಂದ, ಅಂತರಧಿಕರಣದ ಸಿದ್ಧಾಂತ ನ್ಯಾಯವೇ ವ್ಯರ್ಥವಾಗಬೇಕಾದೀತು!

ಅನುವ್ಯಾಖ್ಯಾನ ಮತ್ತು ಸುಧೆಗೆ ಅನುಸಾರಿಯಾದ ಈ ಅಧಿಕರಣದ ಪೂರ್ವಪಕ್ಷ ಟೀಕೆಯು ಹೀಗೆ ಹೊರಟಿದೆ -- ''ಆಕಾಶಸ್ಯ ಅಚೇತನತ್ವೇನ ಅನ್ಯಾಧೀನತ್ವಾಯೋಗಾತ್'' (ಆಕಾಶಶಬ್ದದ ಪ್ರವೃತ್ತಿನಿಮಿತ್ತವು ಅಚೇತನದಲ್ಲಿರುವುದರಿಂದ ಅನ್ಯಾಧೀನವಾಗದು). ಟೀಕೆಯಲ್ಲಿರುವ ಆಕಾಶಪದಕ್ಕೆ ಆಕಾಶಪದಪ್ರವೃತ್ತಿನಿಮಿತ್ತವೆಂದು ಅರ್ಥೈಸಬೇಕು. ಅಚೇತನತ್ವೇನ ಎಂದರೆ ಅಚೇತನಗತತ್ವೇನ ಎಂದರ್ಥ. ಒಟ್ಟು ''ಆಕಾಶವು ಅಚೇತನವಾಗಿದೆ. ಅದರಲ್ಲಿರುವ ಪ್ರವೃತ್ತಿನಿಮಿತ್ತವು ಅಚೇತನ-ಗತವಾಗಿದೆ. ಆದ್ದರಿಂದ ವಿವರತ್ವಾದಿಗಳು ಅನ್ಯಾಧೀನವಾಗುವುದಿಲ್ಲ'' ಎಂದು ಹೇಳಿದಂತಾಗುತ್ತದೆ. ಆದ್ದರಿಂದ ಆಕಾಶಾದಿಶಬ್ದಗಳಲ್ಲಿ ಕ್ಲೃಪ್ತವಾದ (ಪ್ರಮಾಣಸಿದ್ಧವಾದ) ಶಬ್ದಾಶ್ರಯತ್ವವೇ ಮೊದಲಾದ ಧರ್ಮಗಳಿವೆ. ಇವುಗಳನ್ನು ಈಶ್ವರನಲ್ಲಿ ಹೇಳಲು ಸಾಧ್ಯವಿಲ್ಲ. ಇನ್ನು 'ಆಕಾಶನಮವಕಾಶತ್ವಂ' ಎಂದು ಸುಧೆಯಲ್ಲಿ ಹೇಳಿದಂತೆ ಅವಕಾಶತ್ವವು (ಅವಕಾಶರೂಪವಾಗಿ ಇರೋಣ) ಆಕಾಶಶಬ್ದದ ಯೌಗಿಕಧರ್ಮವಾಗಿದೆ. ಪ್ರಮಾಣಸಿದ್ಧವಾದ ಈ ಯೌಗಿಕಧರ್ಮವನ್ನೂ ಕೂಡ ಈಶ್ವರನಲ್ಲಿ ಹೇಳಲಾಗದು. ರೂಢವಾದ ಮತ್ತು ಯೌಗಿಕವಾದ ಈ ಎರಡು ಧರ್ಮಗಳು ಈಶ್ವರನಲ್ಲಿ ಬರುವುದಿಲ್ಲವೆಂದಷ್ಟೇ ಅಲ್ಲ; ಈಶ್ವರನ ಅಧೀನಗಳೂ ಸಹ ಆಗಲಾರವು. ಇನ್ನು 'ಆಸಮಂತಾತ್ ಕಾಶ್ಯತೇ' (ಎಲ್ಲಡೆ ಪ್ರಕಾಶಿಸುತ್ತಾನೆ) ಎಂದು ಯೋಗವನ್ನು ಈಶ್ವರನಲ್ಲಿ ಕಲ್ಪಿಸಬಹುದು.

ಆದರೆ ಭೂತಾಕಾಶದಲ್ಲಿ ಆಕಾಶಶಬ್ದದ ರೂಢಿಯು ಪ್ರಮಾಣಸಿದ್ಧವಾಗಿದೆ. ಪ್ರಮಾಣಸಿದ್ಧವಾದ ರೂಢಿಯಿಂದ ಕಲ್ಪಿತವಾದ ಯೋಗವು ಸುಲಭವಾಗಿ ಬಾಧಿತವಾಗುತ್ತದೆ.

ಭಗವಂತನಲ್ಲಿ ಆಕಾಶಶಬ್ದದ ರೂಢಿಯನ್ನಾಗಲೀ, ಯೋಗವನ್ನಾಗಲೀ ಹೇಳಲಾಗದೆಂದು ಇಲ್ಲಿಯ ತನಕ ಸಮರ್ಥಿಸಿದ್ದಾಯಿತು. ಅಷ್ಟೇ ಅಲ್ಲ ವಿದ್ವದ್ರೂಢಿ, ಮಹಾಯೋಗಗಳನ್ನೂ ಸಹ ಭಗವಂತನಲ್ಲಿ ಹೇಳಲಾಗದು. ವಿದ್ವದ್ರೂಢಿಯನ್ನು ಹೇಳುವುದಾದರೆ ಅನೇಕ ವೈದಿಕಪ್ರಯೋಗಗಳನ್ನು ತೋರಿಸಬೇಕು. ಆದರೆ ವೇದದ ಯಾವುದೇ ಭಾಗದಲ್ಲಿರುವ ಆಕಾಶಶಬ್ದವನ್ನು ಭೂತಾಕಾಶ-

ಪರವೆಂದೇ ಪೂರ್ವಪಕ್ಷಿಯು ಆಗ್ರಹಿಸುವಾಗ ಭಗವಂತನಲ್ಲಿ ವಿದ್ವದ್ರೂಢಿಯನ್ನು ಅದೇ ಆಕಾಶಶಬ್ದಕ್ಕೆ ಹೇಗೆ ಹೇಳುತ್ತೀರಿ? ಮಹಾಯೋಗವನ್ನೂ ಸಹ ಹೇಳಲಾಗದು. ಆಕಾಶಶಬ್ದದ ಪ್ರವೃತ್ತಿನಿಮಿತ್ತ-ವನ್ನು ನಿರವಧಿಕವಾಗಿ ಭಗವಂತನಲ್ಲಿ ಹೇಳಬೇಕು. ಆದರೆ ನಿರವಧಿಕಪ್ರವೃತ್ತಿನಿಮಿತ್ತವು ಭಗವಂತನಲ್ಲಿ ಇದೆಯೆಂದು ಇದುವರೆಗೂ ಸಿದ್ಧವಾಗಿಲ್ಲ.

ಪ್ರಶ್ನೆ - ಆಕಾಶಾದಿಶಬ್ದಗಳಿಗೆ ಭಗವಂತನಲ್ಲಿ ವಿದ್ವದ್ರೂಢಿಯನ್ನು ಈಗಾಗಲೇ ಆನಂದ-ಮಯಾಧಿಕರಣದಲ್ಲಿ ಸಮರ್ಥಿಸಿದ್ದೇವೆ. 'ಆಧ್ಯಾತ್ಮಗೈಶ್ಚ ಪ್ರಾಣಾದ್ಯೈಃ ತಥೈವ ಹ್ಯಧಿಭೂತಗೈಃ' ಇತ್ಯಾದಿಯಾಗಿ ಆನಂದಮಯಾಧಿಕರಣದ ಅನುವ್ಯಾಖ್ಯಾನಶ್ಲೋಕವು ಹೀಗೆ ಹೇಳಿದೆ. - ''ಅನ್ನ-ಮಯಾದಿ ಪ್ರಕರಣಗಳಲ್ಲಿ ಅನ್ನ, ಪ್ರಾಣ, ಆಕಾಶಾದಿ ಶಬ್ದಗಳು ವಿದ್ವದ್ರೂಢಿಯಿಂದ ಭಗವಂತನನ್ನೇ ಪ್ರತಿಪಾದಿಸುತ್ತವೆ'' ಎಂದು. ಹೀಗಿರುವಾಗ ಆಕಾಶಾದಿಶಬ್ದಗಳನ್ನು ಅಜ್ಞರೂಢಿಯಿಂದ ಭೂತಾಕಾಶ-ಪರವೆಂದು ಹೇಗೆ ಹೇಳುತ್ತೀರಿ?

ಉತ್ತರ - ಆನಂದಮಯಾಧಿಕರಣದಲ್ಲಿ ಆಕಾಶಾದಿಶಬ್ದಗಳನ್ನು ಭಗವತ್ಪರವೆಂದದ್ದು ಸತ್ಯ. ಆದರೆ ಆಕಾಶಾಧಿಕರಣದ ಸಿದ್ಧಾಂತನ್ಯಾಯವನ್ನು ಉಪಜೀವಿಸಿ ಹಾಗೆ ಹೇಳಿದ್ದಾರೆ. ಹೀಗಿರುವಾಗ ಆಕಾಶಾಧಿಕರಣದ ಪೂರ್ವಪಕ್ಷಿಯು ಇದೇ ಅಧಿಕರಣದ ಸಿದ್ಧಾಂತನ್ಯಾಯವೆಂದು ಹೇಗೆ ತಾನೆ ಒಪ್ಪುತ್ತಾನೆ. ಇದರಿಂದ ಆಕಾಶಾದಿಶಬ್ದಗಳಿಗೆ ಭಗವಂತನಲ್ಲಿ ವಿದ್ವದ್ರೂಢಿಯನ್ನು ಸಮರ್ಥಿಸಲಾಗದು. ಈ ಎಲ್ಲ ಕಾರಣಗಳಿಂದ ಅಂತರಧಿಕರಣದ ಮೇಲೆ ಬರುವ ಅಭ್ಯಧಿಕಾಶಂಕೆಯು ಸುದೃಢವಾಗಿದೆ. ಇದನ್ನು ಪರಿಹರಿಸಲು ಆಕಾಶಾಧಿಕರಣವು ಹೊರಟಿದ್ದು ಅತ್ಯಂತ ಸಾರ್ಥಕ. ಈ ಅಭ್ಯಧಿಕಾಶಂಕೆಯು ಪ್ರಮೇಯಾಶ್ರಿತವಾಗಿದೆ.ಆಕಾಶಶಬ್ದವು ಭಗವಂತನಲ್ಲಿ ಮುಖ್ಯವಾಗಿ ಇದೆಯೆನ್ನಲು ಈ ಅಭ್ಯಧಿಕಾ-ಶಂಕೆಯು ವಿರೋಧಿಯಾಗಿದೆ. (ಪ್ರಮಾಣಾಶ್ರಿತಪೂರ್ವಪಕ್ಷವನ್ನು ಈ ಮುಂದೆ ತೋರಿಸಲಿದ್ದಾರೆ.)

### ಕಠಿಣಪದಾರ್ಥ

ದ್ವಯಂ = ಸ್ವಾತಂತ್ರ್ಯ ಮತ್ತು ತದ್ಗತತ್ವ; ವಿವರತ್ವಾದಿಕಂ = ಅನುವ್ಯಾಖ್ಯಾನದಲ್ಲಿರುವ ವಿವರಾದಿಃ ಎಂಬ ಪದವು ಭಾವಪ್ರಧಾನದಿಂದ ನಿರ್ದಿಷ್ಟವಾಗಿದೆ; ತಸ್ಯ = ವಿವರತ್ವಾದಿಗಳು; ತದಧೀನಂ = ಭಗವಂತನ ಅಧೀನ; ಸ್ವಭಾವತ್ವಾತ್ = ಜಡ ಸ್ವಭಾವವಾದ್ದರಿಂದ; ಸಾಪೇಕ್ಷಯೋಃ = ತದ್ಗತತ್ವಾಭಾವ ತದಧೀನತ್ವರೂಪ ಎಂಬ ಹೇತುಗಳು ಮಧ್ಯದಲ್ಲಿ ಮತ್ತೊಂದು ಹೇತುವನ್ನು ಅಪೇಕ್ಷಿಸಿವೆ; ಶ್ಲೋಕೇ = 'ಚೇಷ್ಟಾ ಹಿ' ಎಂಬ ಅನುವ್ಯಾಖ್ಯಾನದಲ್ಲಿ, ತಸ್ಯಂತಸ್ಯ = 'ತಸಿ'ಪ್ರತ್ಯಯಾಂತವಾದ; ಶ್ಲೋಕೇನೈವ = ಚೇಷ್ಟಾ ಹಿ ಇತ್ಯಾದಿಶ್ಲೋಕದಿಂದಲೇ; ಮತಾಂತರೇ ತು = ಹಿಂದೆ ಹೇಳಿದ ಎರಡು ಪಕ್ಷಗಳನ್ನು, ಬಹಿರೇವ = ಶ್ಲೋಕದಿಂದ ಹೊರಗಡೆ; ಸ್ವರೂಪತಃ = ಜ್ಞಾನಾದಿಹೇತುಗಳನ್ನು ಅಪೇಕ್ಷಿಸದೆ; ಪಾಲನ = ಪ್ರಯತ್ನ; ತತ್ರಾಪಿ = ಅಂತರಧಿಕರಣ- ದಲ್ಲಿಯೂ; ತಥಾತ್ವೇ = ಎಲ್ಲೆಡೆ ಒಬ್ಬನೇ ಪೂರ್ವಪಕ್ಷಿಯಾದರೆ; ತತ್ರತ್ಯ = ಅಂತರಧಿಕರಣದಲ್ಲಿರುವ; ಅತ್ರಾಪಿ = ಆಕಾಶಾಧಿಕರಣದ; ರೂಢಂ ವಾ = ಶಬ್ದಾಶ್ರಯತ್ವರೂಪವಾದ ರೂಢವನ್ನಾಗಲೀ;

ಆಕಾಶನಂ = ಅವಕಾಶರೂಪದಿಂದ ಇರುವಿಕೆ; ವೈದಿಕಪ್ರಯೋಗಬಾಹುಲ್ಯಾದೇಃ = ವೇದದಲ್ಲಿರುವ ಬಹುಳವಾದ ಪ್ರಯೋಗ ಮತ್ತು ಪುಷ್ಕಲವಾದ ಪ್ರವೃತ್ತಿನಿಮಿತ್ತಗಳು; ಆಧ್ಯಾತ್ಮೈಃ = ಆಧ್ಯಾತ್ಮಿಕವಾದ ಪ್ರಾಣಾದಿಶಬ್ದಗಳಿಂದ; ವಕ್ಷ್ಯಮಾಣನ್ಯಾಯಂ = ಆಕಾಶಾಧಿಕರಣದಲ್ಲಿ ಹೇಳುವ ನ್ಯಾಯವನ್ನು.

**प्रकाशः** – ननूक्तपक्षद्वये तदधीनत्वनिरास एव श्लोकारूढो न तद्गतत्वनिरासः । नच 'तद्गतत्वं निमित्तमेव न' इति वाच्यम्, अनुव्याख्यानविरोधात् इत्यनुशयेन द्वयोरपि श्लोकारूढतया कल्पान्तरमाह – **यद्वा स्वातन्त्र्यमिति** ॥ **विवरत्वादिकमिति** ॥ श्लोके भावप्रधाननिर्देश इत्युक्तं भवति ।

**सापेक्षयोरिति** ॥ तद्गतत्वाभावतदनधीनत्वरूपहेतुद्वयं मध्ये अपेक्ष्य 'अचेतनस्वभावः' इत्यत्र विवक्षितं हेतुद्वयं निमित्तत्वाभावं साधयतीत्यर्थः ॥

**सार्वविभक्तिकेति** ॥ यद्यपि "पञ्चम्यास्तसिल्" इति पञ्चम्यर्थ एव तसिल् विहितः । तथाऽपि "प्रतियोगे पञ्चम्यास्तसिः" "आद्यादिभ्य उपसङ्ख्यानम्" इत्युक्तेः "यतो यतो निश्चलति मनश्चञ्चलम्" इत्यादाविव सप्तम्यर्थे तसिरित्यर्थः ।

ततश्चैवं योजना – विवरत्वादिकं 'कथं ततः' तत्र भगवति कथं, कुतः? अचेतनगतत्वात् । ततश्च तद्गतत्वाभावान्न निमित्तमिति । तथा विवरत्वं 'कथं ततः' तदधीनं कथं, कुतः? स्वभावत्वात् ततश्च तदधीनत्वाभावान्न निमित्तमिति ।

पूर्वोक्तपक्षयोरस्य च पक्षस्य विशेषं स्वयमेवाह – **अस्मिन्मत इति** ॥ **बहिरेवेति** ॥ उक्तमिदं प्राक्तत्रैवास्माभिः । एवं स्वयमनुव्याख्यानस्य त्रेधाऽभिप्रायमुक्त्वा, सुधोक्तमपि प्रकारान्तरमनुसन्धेयमिति भावेन तदुक्तं सङ्ग्रहेणानूद्य तदभिप्रायं चास्फुटत्वाद् व्यनक्ति – **सुधायां त्विति** ॥ 'स्वरूपतः' ज्ञानादिहेतुमनपेक्ष्य ।

नन्वेवं सुधायां "ननूक्तमन्यत्रान्यरूढेरविद्वत्सम्बन्धित्वाद् योगस्य च परमेश्वरायत्ताल्पनिमित्तत्वादमुख्यता' इति । सत्यं, 'तदन्नौषध्यादिपदार्थेषु स्यान्न तु पुरन्दरादिषु' इत्यादिना अचेतनस्यापि भगवदधीनत्वोक्तिरयुक्ता इति, अत आह – **यत्त्विति** ॥

नन्वत्रानङ्गीकुर्वन् पूर्वपक्षी तत्र कथमङ्गीकुर्यात्? इत्यत आह – **न हीति** ॥ उत्तरप्रस्थानाविरोधाय टीकार्थमाह – **अनुव्याख्यानेति** ॥

यद्वा – विवरत्वस्य भगवदधीनत्ववर्णनं टीकाविरुद्धम्, इत्यत आह – **अनुव्याख्यानेति** ॥ क्लृप्तो योगो नेत्युपपादितमुपसंहरति – **तस्मादिति** ॥ **रूढं वेति** ॥ शब्दाश्रयत्वादिरूपं वेत्यर्थः । 'निमित्तम्' इत्यन्वयः ।

ननु मास्तु क्लृप्तो योगः, कल्प्यो भविष्यतीति द्वितीयं पक्षं निरस्यति – **आ समन्तादिति**॥ असिद्धत्वे हेतुः – **वैदिकप्रयोगेति** ॥ आदिपदेन प्रवृत्तिनिमित्तपौष्कल्यग्रहणम् ।

ननु 'विद्वद्रूढिमहायोगावसिद्धौ' इति कथं, अनुव्याख्यानविरोधादित्यत आह – **यत्त्विति**॥ 'अन्नादिशब्दैर्भगवानेको मुख्यतयोदितः ।' इत्युत्तरार्धेनान्वयः ।

ननु यद्येवं तर्हि "यदि आनन्दमयोऽभ्यासात्" इति वदतः सूत्रकारस्यैतावानर्थोऽभिमतो भवेत् तर्हि तत एव गतार्थत्वात्, 'अन्तस्तद्धर्मोपदेशात्' इत्याद्यधिकरणानामनुत्थानमेव स्यात् इत्याशङ्क्य, 'अभ्यधिकाशङ्कासद्भावेनाधिकरणान्तरारम्भोपपत्तिः' इत्यन्तराधिकरणोपक्रमसुधाविरोधः, तत्र 'विद्वद्रूढिमहायोगौ सर्वशब्दानां सिद्धौ' इत्युपेत्य तदाच्छादकाभ्यधिकाशङ्कयाऽधिकरणारम्भसमर्थनोक्तिप्रतीतेरिति चेत्, मैवम् ।

उत्तरत्र तदाच्छादकाभ्यधिकाशङ्कोक्तेरदर्शनात् । "तदन्नौषध्यादिपदार्थेषु स्यान्न तु पुरन्दरादिषु" इति वाक्यस्य गतेरुक्तत्वात् । सूत्रकारस्याकाशाद्यधिकरणन्यायेन अभिमतस्य भाष्यकारेण तत्र कथनेऽपि विद्वद्रूढिमहायोगयोरसिद्धत्वादिनाऽऽक्षेपेण पूर्वपक्षप्रवृत्तिसम्भवेन तद्वाक्यस्याप्येवं योज्यत्वादिति भावः ।

तस्माद्विद्वद्रूढिमहायोगयोरेतत्सिद्धान्तात् पूर्वमसिद्धत्वात् अनुव्याख्यानोक्ता युक्तेत्यर्थः । 'इयम्' अनुव्याख्यानोक्ता आकाशपदप्रवृत्तिनिमित्तविवरत्वरूपप्रमेयमाश्रित्य प्रवृत्तेत्यर्थः ॥

ವಿವರಣೆ - ಇಲ್ಲಿಯ ತನಕ ಎರಡು ಬಗೆಯಲ್ಲಿ ಪೂರ್ವಪಕ್ಷವನ್ನು ತೋರಿಸಿದ್ದಾಯಿತು. ಈ ಎರಡೂ ಪೂರ್ವಪಕ್ಷಗಳು ಅಚೇತಸ್ವಭಾವತ್ವವಿವರಾದಿಃ ಕಥಂ ತತಃ? ಎಂಬ ಅನುವ್ಯಾಖ್ಯಾನಶ್ಲೋಕದಿಂದ ಸೂಚಿತವಾಗಿವೆ. ಸಕಲಪದಾರ್ಥಗಳು ಭಗವಂತನ. ಅಧೀನವಾಗಿವೆ. ಮತ್ತು ಆ ಪದಾರ್ಥಗಳನ್ನು ಪ್ರತಿಪಾದಿಸುವ ಶಬ್ದಗಳ ಪ್ರವೃತ್ತಿನಿಮಿತ್ತವು ಭಗವಂತನಲ್ಲಿಯೇ ಇವೆ ಎಂದು ಸಿದ್ಧಾಂತಿಗಳ ನಿಲುವು. ಇದನ್ನು ಪೂರ್ವಪಕ್ಷಿಗಳು ಎರಡು ಮುಖದಲ್ಲಿ ಆಕ್ಷೇಪಿಸಿದ್ದಾರೆ. ಯಾವುದೇ ಜಡಪದಾರ್ಥಗಳು

ಭಗವಂತನ ಅಧೀನವಾಗುವುದಿಲ್ಲ, ಜಡವಾಚಿಶಬ್ದಗಳ ಪ್ರವೃತ್ತಿನಿಮಿತ್ತವೂ ಸಹ ಭಗವಂತನಲ್ಲಿ ಬರುವುದಿಲ್ಲವೆಂದು ಪೂರ್ವಪಕ್ಷಿಗಳ ಧೋರಣೆ. ಅನುವ್ಯಾಖ್ಯಾನಶ್ಲೋಕದಿಂದಲೇ ಈ ವಿಷಯವು ತಿಳಿಯುತ್ತದೆ.

ಶಂಕೆ - ತದಧೀನತ್ವದ ನಿರಾಸವು ಅನುವ್ಯಾಖ್ಯಾನಶ್ಲೋಕದಿಂದ ಹೇಗೆ ತಿಳಿಯುತ್ತದೆಂದು ನಿರೂಪಿಸಿದಿರಿ, ಆದರೆ ತದ್ಗತತ್ವನಿರಾಸವನ್ನು ಅನುವ್ಯಾಖ್ಯಾನಶ್ಲೋಕದಿಂದ ಹೇಗೆ ಮಾಡಿದ್ದಾರೆಂದು ನೀವು ತೋರಿಸಿಲ್ಲ. ಆದ್ದರಿಂದ ತದ್ಗತತ್ವವು ಶಬ್ದಗಳ ಪ್ರವೃತ್ತಿನಿಮಿತ್ತವೇ ಆಗುವುದಿಲ್ಲವಲ್ಲ?

ಸಮಾಧಾನ - ಹಾಗೆ ಹೇಳಿದರೆ ಅನುವ್ಯಾಖ್ಯಾನದ ವಿರೋಧವು ಬರುತ್ತದೆ. ಆದ್ದರಿಂದ ತದ್ಗತತ್ವದ ನಿರಾಸವನ್ನೂ ಸಹ 'ಯದ್ವಾ ಸ್ವಾತಂತ್ರ್ಯಂ'' ಎಂಬ ಗ್ರಂಥದಿಂದ ಮತ್ತೊಂದು ಬಗೆಯಲ್ಲಿ ಶ್ಲೋಕಾರೂಢ ಮಾಡುತ್ತಿದ್ದಾರೆ. ಈ ಪಕ್ಷದಲ್ಲಿ ಶ್ಲೋಕದಿಂದ ಹೀಗೆ ತಿಳಿಯುತ್ತದೆ - 'ವಿವರತ್ವಾದಿಕಂ ಬ್ರಹ್ಮಣಿ ಆಕಾಶಾದಿಶಬ್ದವೃತ್ತೌ ನ ನಿಮಿತ್ತಂ ತದಧೀನತ್ವಾಭಾವಾತ್' (ವಿವರತ್ವಾದಿಗಳು ಭಗವಂತನ ಅಧೀನ-ವಾಗದ ಕಾರಣ ಆಕಾಶಾದಿಶಬ್ದಗಳು ಬ್ರಹ್ಮನನ್ನು ಪ್ರತಿಪಾದಿಸಲು ನಿಮಿತ್ತವಾಗುವುದಿಲ್ಲ). ಈ ಅನುಮಾನದಲ್ಲಿ ತದಧೀನತ್ವಾಭಾವವೆಂಬ ಹೇತುವೇ ಅಸಿದ್ಧವೆಂಬ ಪ್ರಶ್ನೆ ಬಂದರೆ, ಸ್ವಭಾವತ್ವಹೇತು-ವಿನಿಂದ ತದಧೀನತ್ವಾಭಾವವನ್ನು ಸಾಧಿಸಬೇಕು - ವಿವರತ್ವಾದಿಕಂ ಭಗವದಧೀನಂ ನ ಭವತಿ, ಅಚೇತನ-ಸ್ವಭಾವತ್ವಾತ್ (ಅಚೇತನಸ್ವಭಾವವಾದ್ದರಿಂದ ವಿವರತ್ವಾದಿಗಳು ಭಗವಂತನ ಅಧೀನವಾಗುವುದಿಲ್ಲ) ಮತ್ತು ವಿವರತ್ವಾದಿಕಂ ಆಕಾಶಾದಿಶಬ್ದವೃತ್ತೌ ನಿಮಿತ್ತಂ ನ ಭವತಿ ತದ್ಗತತ್ವಾಭಾವಾತ್ (ವಿವರತ್ವಾದಿಗಳು ಭಗವಂತನಲ್ಲಿ ಇಲ್ಲದ ಕಾರಣ ಆಕಾಶಾದಿಗಳ ಶಬ್ದಗಳ ಪ್ರವೃತ್ತಿಯಲ್ಲಿ ನಿಮಿತ್ತಗಳಾಗಲಾರವು) ಈ ಅನುಮಾನದಲ್ಲಿಯೂ ಸಹ ತದ್ಗತತ್ವಾಭಾವಹೇತುವೇ ಅಸಿದ್ಧವೆಂಬ ಪ್ರಶ್ನೆ ಬಂದರೆ, ಅಚೇತನಗತತ್ವ-ಹೇತುವಿನಿಂದ ಸಾಧಿಸಬೇಕು. 'ವಿವರತ್ವಾದಿಕಂ ನ ಭಗವದ್ಗತಂ ಅಚೇತನಗತತ್ವಾತ್ (ವಿವರತ್ವಾದಿಗಳು ಅಚೇತನನಿಷ್ಠವಾಗಿರುವುದರಿಂದ ಭಗವದ್ಗತವಾಗಲಾರವು) ಹೀಗೆ ಸ್ವಭಾವತ್ವ ಹಾಗೂ ಅಚೇತನಗತತ್ವಗಳು ಮಧ್ಯದಲ್ಲಿ ಮತ್ತೊಂದನ್ನು ಹೇತು ಮಾಡಿಕೊಂಡು ಬ್ರಹ್ಮನಲ್ಲಿ ಶಬ್ದಗಳ ಪ್ರವೃತ್ತಿಗೆ ನಿಮಿತ್ತವಲ್ಲವೆನ್ನಲು ಕಾರಣಗಳಾಗಿವೆ.

ಅನುವ್ಯಾಖ್ಯಾನಶ್ಲೋಕದಲ್ಲಿರುವ 'ತತಃ' ಎಂಬ ಶಬ್ದಕ್ಕೆ ತತ್ರ = ಭಗವಂತನಲ್ಲಿರುವ ಎಂದರ್ಥ. ತತ್ ಶಬ್ದದ ಮೇಲೆ ತಸಿಪ್ರತ್ಯಯವು ಸಪ್ತಮ್ಯರ್ಥದಲ್ಲಿ ಬಂದಿದೆ. ಆದ್ದರಿಂದ ತತಃ ಎಂಬ ಶಬ್ದಕ್ಕೆ ತತ್ರ ಎಂಬರ್ಥವು ವ್ಯಾಕರಣ ಸಮ್ಮತವಾಗಿದೆ. ವಸ್ತುತಸ್ತು 'ಪಂಚಮ್ಯಾಸ್ತಸಿಲ್' ಎಂಬ ಸೂತ್ರವು ಪಂಚಮ್ಯರ್ಥದಲ್ಲಷ್ಟೇ ತಸಿಲ್ ಪ್ರತ್ಯಯವನ್ನು ವಿಧಿಸಿದೆ. ಆದರೆ ಇಲ್ಲಿ ತಸಿಲ್ ಪ್ರತ್ಯಯವನ್ನು ವಿವಕ್ಷಿಸದೆ ತಸಿ ಪ್ರತ್ಯಯವನ್ನು ವಿವಕ್ಷಿಸಬೇಕು. 'ಪ್ರತಿಯೋಗೇ ಪಂಚಮ್ಯಾಸ್ತಸಿ' 'ಆದ್ಯಾದಿಭ್ಯಃ ಉಪಸಂಖ್ಯಾನಮ್' ಇತ್ಯಾದಿ ಸೂತ್ರದಿಂದ ಪಂಚಮ್ಯರ್ಥದಲ್ಲಷ್ಟೇ ಅಲ್ಲದೆ ಸಪ್ತಮ್ಯರ್ಥದಲ್ಲಿಯೂ ಸಹ ತಸಿಪ್ರತ್ಯಯವನ್ನು ಹೇಳಬಹುದು. ಈ ವಿಷಯದಲ್ಲಿ ಗೀತಾಚಾರ್ಯನ ಪ್ರಯೋಗವು ಸಮ್ಮತವಾಗಿದೆ. 'ಯತೋ ಯತೋ ನಿಶ್ಚಲತಿ ಮನಶ್ಚಂಚಲಮ್' (ಚಂಚಲವಾದ ಮನಸ್ಸು ಎಲ್ಲಿ ಎಲ್ಲಿ ಹೋಗುತ್ತದೋ) ಎಂದು ಯತ್ ಶಬ್ದದ ಮೇಲೆ ಸಪ್ತಮ್ಯರ್ಥದಲ್ಲಿ ತಸಿಪ್ರತ್ಯಯದ ಪ್ರಯೋಗವು ಕಾಣಸುತ್ತದೆ.

ತದ್ಗತತ್ವವನ್ನು ಶ್ಲೋಕಾರೂಢ ಮಾಡಿದಾಗ ಹೀಗೆ ಯೋಜನೆ - 'ವಿವರಾದಿಃ = ವಿವರತ್ವಾದಿಗಳು, ತತಃ = ಭಗವಂತನಲ್ಲಿ ಕಥಂ = ಹೇಗೆ ತಾನೆ ಬರುತ್ತವೆ?; ಅಚೇತನಸ್ವಭಾವಃ = ಅಚೇತನದಲ್ಲಿರುವು-ದರಿಂದ, ಭಗವಂತನಲ್ಲಿ ಬರುವುದಿಲ್ಲ. ಆದ್ದರಿಂದ ತದ್ಗತತ್ವವು ಶಬ್ದಪ್ರವೃತ್ತಿಗೆ ನಿಮಿತ್ತವಾಗುವುದಿಲ್ಲ. ಇದರಂತೆ ವಿವರಾದಿಃ = ವಿವರತ್ವಾದಿಗಳು, ಕಥಂ ತತಃ? = ಹೇಗೆ ಭಗವದಧೀನವಾಗುತ್ತವೆ? ಅಚೇತನಸ್ವಭಾವಃ = ಅಚೇತನಸ್ವಭಾವವಾದ್ದರಿಂದ. ಹೀಗೆ ವಿವರತ್ವಾದಿಗಳು ಭಗವದಧೀನವಾಗದ ಕಾರಣ ಆಕಾಶಾದಿಶಬ್ದಗಳ ಪ್ರವೃತ್ತಿಗೆ ನಿಮಿತ್ತಗಳಾಗುವುದಿಲ್ಲ.

ಹಿಂದೆ ಹೇಳಿದ ಎರಡು ಪಕ್ಷಗಳಿಗಿಂತ ಈ ಪಕ್ಷದಲ್ಲಿರುವ ವೈಶಿಷ್ಟ್ಯವನ್ನು ಸ್ವತಃ ಗ್ರಂಥಕಾರರೇ 'ಅಸ್ಮಿನ್ ಮತೇ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ಹಿಂದಿನ ಎರಡು ಪಕ್ಷಗಳಲ್ಲಿ ತದ್ಗತತ್ವಪಕ್ಷವನ್ನು ಶ್ಲೋಕದಿಂದ ದೂಷಣೆ ಮಾಡಿರಲಿಲ್ಲ. ಈ ಪಕ್ಷದಲ್ಲಿ ಅದನ್ನೂ ಶ್ಲೋಕದಿಂದಲೇ ದೂಷಿಸಿದ್ದಾರೆಂದು ಅಭಿಪ್ರಾಯ. ಶ್ಲೋಕದಲ್ಲಿ ತದ್ಗತತ್ವಪಕ್ಷವು ಹಿಂದೆ ಹೇಗೆ ದೂಷಿಸಿರಲಿಲ್ಲವೆಂದು ಆವಾಗಲೇ ಹೇಳಿದ್ದೇವೆ. ಈಗ ವಿವರಿಸುವ ಅವಶ್ಯಕತೆ ಇಲ್ಲ. ಹೀಗೆ ಅನುವ್ಯಾಖ್ಯಾನಕ್ಕೆ ಗ್ರಂಥಕಾರರು ಮೂರು ಬಗೆಯಲ್ಲಿ ಸ್ವತಃ ವ್ಯಾಖ್ಯಾನಿಸಿದರು. ಈಗ ಅದೇ ಅನುವ್ಯಾಖ್ಯಾನಶ್ಲೋಕಕ್ಕೆ ಸುಧಾಕಾರರು ಮಾಡಿದ ವ್ಯಾಖ್ಯಾನವನ್ನು ಮತ್ತೊಂದು ಪ್ರಕಾರದಲ್ಲಿಯೂ ಅನುಸಂಧಾನ ಮಾಡಿಕೊಳ್ಳಬೇಕೆಂದು 'ಸುಧಾಯಾಂ ತು' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. ಸುಧೆಯಲ್ಲಿ ಹೇಳಿದ ಅಭಿಪ್ರಾಯವು ಸ್ಪಷ್ಟವಾಗಿ ತಿಳಿಯದ ಕಾರಣ ಇಲ್ಲಿ ಗ್ರಂಥಕಾರರು ಸಂಗ್ರಹಿಸಿ ವ್ಯಾಖ್ಯಾನಿಸಿದ್ದಾರೆ.

ಹಿಂದೆ ಪೂರ್ವಪಕ್ಷದಲ್ಲಿ ಸುಧಾಕಾರರು ಹೀಗೆ ಶಂಕಿಸಿದ್ದಾರೆ 'ಬೇರೆಡೆ ವಿದ್ವದ್ರೂಢಿಯು ಇರುವುದಿಲ್ಲ. ಯೋಗವೂ ಸಹ ಭಗವಂತನ ಅಧೀನವಾಗಿರುತ್ತದೆ. ಪ್ರವೃತ್ತಿನಿಮಿತ್ತವೂ ಸಹ ಅಲ್ಪವಾಗಿರುತ್ತದೆ. ಆದ್ದರಿಂದ ಭಗವಂತನನ್ನು ಬಿಟ್ಟು ಉಳಿದ ಎಲ್ಲ ಪದಾರ್ಥಗಳು ಅಮುಖ್ಯವಾಗಿ ಪ್ರತಿಪಾದ್ಯಗಳಾಗುತ್ತವೆ' ಎಂದು ಹೇಳಿದ್ದಾರೆ. ಹೀಗಿರುವಾಗ ಆಕಾಶಾದಿಶಬ್ದಗಳು ಜಡಪದಾರ್ಥಗಳಲ್ಲಿಯೇ ಮುಖ್ಯವಾಗಿ ಬರುತ್ತದೆಂದು ಹೇಗೆ ಆಕ್ಷೇಪಿಸುತ್ತಿದ್ದೀರಿ? ಹೌದು, ಅನ್ನ ಓಷಧಾದಿಪದಾರ್ಥಗಳಲ್ಲಷ್ಟೇ ಅಮುಖ್ಯಪ್ರಯೋಗವೆಂದು ಹೇಳಬಹುದು ಹೊರತು ಪುರಂದರಾದಿಚೇತನಪದಾರ್ಥಗಳಲ್ಲಿ ಅಮುಖ್ಯಪ್ರಯೋಗವೆಂದು ಹೇಳ-ಲಾಗದು ಇತ್ಯಾದಿಯಾಗಿ ಜಡಪದಾರ್ಥಗಳಿಗೆ ಭಗವದಧೀನತ್ವವನ್ನು ಸುಧಾಕಾರರು ಹೇಳಿದ್ದಾರೆ. ಇದು ಈಗ ತಪ್ಪಾಗಬೇಕಾದೀತು ಎಂಬ ಶಂಕೆಗೆ ಗ್ರಂಥಕಾರರು ''ಯತ್ ತು''ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ಈ ಅಧಿಕರಣದ ಪೂರ್ವಪಕ್ಷಿಯು ಜಡಪದಾರ್ಥಗಳನ್ನು ಭಗವದಧೀನವೆಂದು ಒಪ್ಪದಿದ್ದಾಗ ಅಂತರಧಿಕರಣದ ಪೂರ್ವಪಕ್ಷಿಯು ಭಗವದಧೀನವೆಂದು ಹೇಗೆ ಒಪ್ಪುತ್ತಾನೆ? ಎಂಬ ಶಂಕೆಗೆ 'ನ ಹಿ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಉತ್ತರಪ್ರಸ್ಥಾನವೆನಿಸಿದ ಅನುವ್ಯಾಖ್ಯಾನ ಹಾಗೂ ಸುಧೆಗಳಿಗೆ ವಿರೋಧ ಬಾರದಂತೆ ಟೀಕೆಯ ಅರ್ಥವನ್ನು 'ಅನುವ್ಯಾಖ್ಯಾನ' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ. ಅಥವಾ ವಿವರತ್ವವು ಭಗವಂತನ ಅಧೀನವೆಂದು ಹೇಳಿದ್ದು ಟೀಕೆಗೆ ವಿರುದ್ಧವಾಗಿದೆ ಎಂಬ ಶಂಕೆಗೂ 'ಅನುವ್ಯಾಖ್ಯಾನ' ಎಂಬ ವಾಕ್ಯದಿಂದಲೇ ಉತ್ತರಿಸುತ್ತಿದ್ದಾರೆ.

ಹಿಂದಿನ ಮೂಲದಲ್ಲಿ ಹೀಗೆ ವಿಕಲ್ಪಿಸಿದ್ದರು - ಆಕಾಶಶಬ್ದವು ರೂಢಿಯಿಂದ ವಿಷ್ಣುವನ್ನು ಪ್ರತಿಪಾದಿಸುತ್ತದೋ? ಅಥವಾ ಯೋಗದಿಂದಲೋ? ಎರಡನೆಯ ಪಕ್ಷದಲ್ಲಿ ಯೋಗವು ಪ್ರಮಾಣ-

ಸಿದ್ಧವೋ ಅಲ್ಲವೋ? ಪ್ರಮಾಣಸಿದ್ಧವೆಂಬ ಪಕ್ಷದಲ್ಲಿಯೂ ಆಕಾಶಶಬ್ದದ ಪ್ರವೃತ್ತಿನಿಮಿತ್ತವು ಭಗವದಧೀನವೆಂದೋ? ಅಥವಾ ಭಗವದ್ಗತವೆಂದೋ? ಎಂದು ವಿಕಲ್ಪಿಸಿದ್ದರು. ಇಲ್ಲಿಯ ತನಕ ಪ್ರಮಾಣಸಿದ್ಧವಾದ ಯೋಗವನ್ನು ಭಗವಂತನಲ್ಲಿ ಹೇಳಲಾಗದೆಂದು ಸಮರ್ಥಿಸಿದ್ದಾಯಿತು. 'ತಸ್ಮಾತ್' ಇತ್ಯಾದಿ ಗ್ರಂಥದಿಂದ ಇದನ್ನೇ ಉಪಸಂಹಾರ ಮಾಡುತ್ತಿದ್ದಾರೆ. ಪ್ರಮಾಣಸಿದ್ಧವಾದ ಯೋಗವನ್ನು ಭಗವಂತನಲ್ಲಿ ಹೇಳುವುದು ಬೇಡ. ರೂಢನಿಮಿತ್ತವನ್ನು ಅಪೇಕ್ಷಿಸಿದ (ಪ್ರಮಾಣಸಿದ್ಧವಲ್ಲದ) ಯೋಗವನ್ನು ಭಗವಂತನಲ್ಲಿ ಹೇಳೋಣವೆಂಬ ಎರಡನೆಯ ಪಕ್ಷವನ್ನು 'ಆಸಮಂತಾತ್' ಎಂಬ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ. ಕಲ್ಪಿತವಾದ ಯೋಗವು ಪ್ರಮಾಣಸಿದ್ಧವಾದ ರೂಢಿಯಿಂದ ಬಾಧಿತವಾಗುತ್ತದೆ. ಇನ್ನು ವಿದ್ವದ್ರೂಢಿ ಮಹಾಯೋಗಗಳನ್ನು ಭಗವಂತನಲ್ಲಿ ಹೇಳಬೇಕು. ಇವೆರಡೂ ಸಹ ಅಸಿದ್ಧಗಳಾಗಿವೆ. ಅಸಿದ್ಧವಾಗುವುದಕ್ಕೆ ಕಾರಣವನ್ನು 'ವೈದಿಕಪ್ರಯೋಗ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. ಗ್ರಂಥದಲ್ಲಿರುವ ಆದಿಪದದಿಂದ ಪುಷ್ಕಲವಾದ ಪ್ರವೃತ್ತಿನಿಮಿತ್ತವನ್ನು ಸ್ವೀಕರಿಸಬೇಕು. 'ವಿದ್ವದ್ರೂಢಿ ಮಹಾಯೋಗಗಳನ್ನು ಅಸಿದ್ಧವೆಂದು ಹೇಗೆ ಹೇಳುತ್ತೀರಿ? ಅನುವ್ಯಾಖ್ಯಾನದಲ್ಲಿ ಸ್ಪಷ್ಟವಾಗಿ ಭಗವಂತನಲ್ಲಿ ಪ್ರತಿಪಾದಿಸಿದ್ದಾರಲ್ಲ?' ವೆಂಬ ಪ್ರಶ್ನೆಗೆ 'ಯತ್ ತು' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

''ಅಧ್ಯಾತ್ಮಗೈಶ್ಚ ಪ್ರಾಣಾದ್ಯೈಸ್ತಥೈವ ಹ್ಯಧಿಭೂತಗೈಃ।
ಅನ್ನಾದಿಶಬ್ದೈರ್ಭಗವಾನೇಕೋ ಮುಖ್ಯತಯೋದಿತಃ॥''

(ಆಧ್ಯಾತ್ಮಿಕವಾದ ಪ್ರಾಣಾದಿಶಬ್ದಗಳಿಂದಲೂ, ಅಧಿಭೂತವಾಚಿಯಾದ ಆಕಾಶಾದಿಶಬ್ದಗಳಿಂದಲೂ, ಅನ್ನಮೊದಲಾದ ಶಬ್ದಗಳಿಂದಲೂ ಭಗವಂತನೊಬ್ಬನೇ ಮುಖ್ಯವಾಗಿ ಪ್ರತಿಪಾದ್ಯನಾಗುತ್ತಾನೆ.)

ಆನಂದಮಯಾಧಿಕರಣದಲ್ಲಿರುವ ಅನುವ್ಯಾಖ್ಯಾನದ ಈ ಮಾತು ಆಕಾಶಾಧಿಕರಣದ ಸಿದ್ಧಾಂತನ್ಯಾಯವನ್ನು ಉಪಜೀವಿಸಿ ಹೊರಟಿದೆ. ಆದ್ದರಿಂದ ಪ್ರಕೃತ ಪೂರ್ವಪಕ್ಷಿಯು ಇದನ್ನೂ ಸಹ ಆಕ್ಷೇಪಿಸುತ್ತಾನೆ.

ಶಂಕೆ - ವಿದ್ವದ್ರೂಢಿ ಮಹಾಯೋಗಗಳು ಇಲ್ಲಿಯ ತನಕ ಸಿದ್ಧವಾಗಿಲ್ಲ, ಆಕಾಶಾಧಿಕರಣದ ಸಿದ್ಧಾಂತನ್ಯಾಯದಿಂದ ಸಿದ್ಧವಾಗುತ್ತದೆಂದು ಹೇಳಿದಿರಿ. ಹಾಗಾದರೆ ಅಂತರಧಿಕರಣದ ಪ್ರಾರಂಭದಲ್ಲಿರುವ ಸುಧಾವಾಕ್ಯದ ವಿರೋಧ ಬರುತ್ತದೆ. ಸುಧಾವಾಕ್ಯವು ಹೀಗಿದೆ - 'ಆನಂದಮಯೋಭ್ಯಾಸಾತ್ ಎಂದು ಹೇಳುವ ಸೂತ್ರಕಾರರಿಗೆ ಇಷ್ಟೆಲ್ಲಾ ಅಭಿಪ್ರಾಯವು ಒಂದು ವೇಳೆ ಸಮ್ಮತವಾಗಿದ್ದರೆ ಆವಾಗ ಆನಂದಮಯಾಧಿಕರಣದಿಂದಲೇ ಮುಂದಿನ ಅಧಿಕರಣಗಳ ಪ್ರಮೇಯವು ಸಿದ್ಧವಾಗುವಾಗ ಅಂತಃಸ್ಥದ್ಧರ್ಮೋಪದೇಶಾತ್, ಇತ್ಯಾದಿ ಅಧಿಕರಣಗಳು ವ್ಯರ್ಥವಾಗಬೇಕಾದೀತು' ಎಂದು ಆಶಂಕಿಸಿ ಹೀಗೆ ಉತ್ತರಿಸಿದ್ದಾರೆ. 'ಆನಂದಮಯಾಧಿಕರಣದಲ್ಲಿ ಪ್ರಮೇಯವು ಸಿದ್ಧವಾಗಿದ್ದರೂ ಅಭ್ಯಧಿಕಾಶಂಕೆಯು ಇರುವುದರಿಂದ ಮುಂದಿನ ಅಧಿಕರಣಗಳು ಸಾರ್ಥಕವಾಗಿವೆ'. ಆನಂದಮಯಾಧಿಕರಣದಲ್ಲಿಯೇ ಸುಧೆಯ ಈ ವಾಕ್ಯವನ್ನು ಗಮನಿಸಿದಾಗ ವಿದ್ವದ್ರೂಢಿ ಮತ್ತು ಮಹಾಯೋಗಗಳು ಸಕಲಶಬ್ದಗಳಲ್ಲಿಯೂ ಸಿದ್ಧವಾಗಿವೆ. ಇದನ್ನು ಅಂಗೀಕರಿಸಿ ಪುನಃ ಅಭ್ಯಧಿಕಾಶಂಕೆಯನ್ನು ಮಾಡುವ ಮೂಲಕ ಮುಂದಿನ ಅಧಿಕರಣಗಳ ಸಾರ್ಥಕ್ಯವನ್ನು ಹೇಳಬೇಕೆಂದು ತಿಳಿಯುತ್ತದೆ. ಆದರೆ ವಿದ್ವದ್ರೂಢಿ ಮಹಾಯೋಗಗಳು ಆಕಾಶಾಧಿ-

ಕರಣದಿಂದಲೇ ಸಿದ್ಧವಾಗುವ ಪ್ರಮೇಯ ಆನಂದಮಯಾಧಿಕರಣದಿಂದ ಸಿದ್ಧವಾಗುವುದಿಲ್ಲವೆಂದು ನೀವು ಹೇಳುತ್ತಿದ್ದೀರಿ. ಇದು ಹೇಗೆ ಸರಿ?

ಸಮಾಧಾನ - ನೀವು ಹೇಳಿದ್ದನ್ನು ಒಪ್ಪಬಹುದಿತ್ತು. ಒಂದು ವೇಳೆ ವಿದ್ವದ್ರೂಢಿ ಮಹಾಯೋಗ-ಗಳನ್ನು ಆಚ್ಛಾದಿಸುವ ಅಭ್ಯಧಿಕಾಶಂಕೆಯನ್ನು ಮುಂದಿನ ಅಧಿಕರಣಗಳಲ್ಲಿ ಮಾಡಿದ್ದರೆ, ಆದರೆ ಮುಂದಿನ ಯಾವುದೇ ಅಧಿಕರಣಗಳಲ್ಲಿಯೂ ಸಹ ಅಂತಹ ಅಭ್ಯಧಿಕಾಶಂಕೆಯು ಕಾಣಿಸುತ್ತಿಲ್ಲ.

ಶಂಕೆ - 'ಅನ್ನೌಷಧ್ಯಾದಿಪದಾರ್ಥೇಷು ಸ್ಯಾನ್ನ ತು ಪುರಂದರಾದಿಷು' ಎಂಬ ಅಂತರಧಿಕರಣದ ಸುಧೆಯಲ್ಲಿ ಅನ್ನಾದಿಶಬ್ದಗಳಿಗೆ ವಿದ್ವದ್ರೂಢಿಯನ್ನು ಅಂಗೀಕರಿಸಿ ಇಂದ್ರಾದಿಗಳಲ್ಲಿ ಅಂಗೀಕರಿಸಬಾರದೆಂಬ ಅಭ್ಯಧಿಕಾಶಂಕೆಯು ಕಾಣಿಸುತ್ತಿದೆಯಲ್ಲ?

ಸಮಾಧಾನ - ನೀವು ಹೇಳುವಂತೆ ಈ ವಾಕ್ಯದ ಅರ್ಥವಲ್ಲ. ಆಕಾಶಾಧಿಕರಣದ ಸಿದ್ಧಾಂತನ್ಯಾಯ-ವನ್ನೇ ಅವಲಂಬಿಸಿ ಈ ವಾಕ್ಯ ಹೊರಟಿದೆಯೆಂದು ಈಗಾಗಲೇ ಸಮರ್ಥಿಸಿದ್ದೇವೆ. ವಿದ್ವದ್ರೂಢಿ ಮಹಾಯೋಗಗಳನ್ನು ಸೂತ್ರಕಾರರು ಆಕಾಶಾಧಿಕರಣದಲ್ಲಿಯೇ ಸಮರ್ಥಿಸುತ್ತಾರೆ. ಸೂತ್ರಕಾರರಿಗೆ ಸಮ್ಮತವಾದದ್ದನ್ನು ಭಾಷ್ಯಕಾರರು ಆನಂದಮಯಾಧಿಕರಣದಲ್ಲಿಯೇ ಹೇಳಿದ್ದಾರಷ್ಟೇ ಹೊರತು ವಿದ್ವದ್ರೂಢಿ ಮಹಾಯೋಗಗಳು ಆನಂದಮಯಾಧಿಕರಣದ ಪ್ರಮೇಯವಲ್ಲ. ಹೀಗಿರುವಾಗ ವಿದ್ವದ್ರೂಢಿ ಮಹಾಯೋಗಗಳು ಅಸಿದ್ಧವೆಂದು ಆಕಾಶಾಧಿಕರಣದಲ್ಲಿ ಪೂರ್ವಪಕ್ಷ ಮಾಡುವುದು ತಪ್ಪಲ್ಲ. ಆದ್ದರಿಂದ ವಿದ್ವದ್ರೂಢಿ ಮಹಾಯೋಗಗಳು ಆಕಾಶಾಧಿಕರಣದ ಸಿದ್ಧಾಂತವೇ ಆಗಿದೆ. ಇಲ್ಲಿಯ ತನಕ ಸಿದ್ಧವೂ ಆಗಿಲ್ಲ. ಅನುವ್ಯಾಖ್ಯಾನದಲ್ಲಿ ಹೇಳಿದ್ದು ಅತ್ಯಂತ ಸಮಂಜಸವಾಗಿದೆ.

'ಚೇಷ್ಟಾ ಹಿ ಚೇತನಾನಾಂ' ಇತ್ಯಾದಿ ಅನುವ್ಯಾಖ್ಯಾನದಲ್ಲಿ ಹೇಳಿದ ಪೂರ್ವಪಕ್ಷವು ಆಕಾಶಶಬ್ದದ ಪ್ರವೃತ್ತಿನಿಮಿತ್ತವಾದ ವಿವರತ್ವವೆಂಬ ಪ್ರಮೇಯವನ್ನು ಆಶ್ರಯಿಸಿ ಹೊರಟಿದೆ.

**गुरुराजीयम्** – अस्मिन्पक्षे तद्गतत्वपक्षः श्लोकाद्बहिरेव दूष्यो भवतीत्य-स्वरसात् पक्षान्तरमाह – **यद्वेति** ॥

नन्वनुव्याख्याने विवरत्वादेरीश्वराधीनत्वाभाव एव विवरादिः कथं तत इत्यादिनोक्तः । भवद्भिश्च विवरादेरीश्वरगतत्वाभावोपि चेत्, उच्यते तर्ह्यनु-व्याख्यानविरोधः स्यादित्यत आह – **श्लोक इति** ॥

नन्वेवमनुव्याख्याने सुधाविरोध इत्यतस्तदुक्तं प्रकारान्तरमित्यभिप्रायेण तत्रानुपपत्तिपरिहारपूर्वकं तदनुवदति – **सुधायां त्विति** ॥ नन्वन्तरधिकरणपूर्व-पक्षीयसुधायाम् अचेतनस्वभावस्याप्यन्नत्वादेर्भगवदधीनत्वाभ्युपगमात् कथमत्र तदभावेन पूर्वपक्षकरणे तत्सुधाविरोधो न स्यात्, इत्यत आह – **यत्त्विति** ॥

ननु 'आकाशपदप्रवृत्तिनिमित्तविवरत्वादेर्भगवदधीनत्वाभावेन तद्गतत्वाभावेन शब्दप्रवृत्तिकारणीभूतस्वातन्त्र्यतद्गतत्वयोरभावाद् आकाशशब्दस्य ब्रह्मपरत्वं न सम्भवति' इति पूर्वपक्षे क्रियमाणे टीकाविरोधः स्यात् । टीकायामाकाशस्याचेतनत्वेनेश्वराधीनत्वासम्भवस्य प्रतिपादितत्वात्, इत्यत आह – **अनुव्याख्यानेति** ॥ 'आकाशपदं तत्पदप्रवृत्तिनिमित्तपरम्' इत्युपलक्षणम् । अचेतनेत्यत्र अचेतनपदं तद्गतपरमित्यपि द्रष्टव्यम् ।

ननु रूढस्याकाशशब्दप्रवृत्तिनिमित्तस्य भगवद्गतत्वाद्यसम्भवेपि यौगिकस्य तद्भविष्यतीत्याशङ्कामुपसंहारव्याजेन परिहरति – **तस्मादिति** ॥ हेतुद्वयं तूक्तमेवेति भावः । नन्वासमन्तात्काशत इति योगलभ्यप्रवृत्तिनिमित्तस्य प्रकाशत्वस्य भगवद्गतत्वात् तद्वाचकत्वम्' इत्यत आह – **आसमन्तादिति** ॥ 'रूढिर्योगमपहरति' इति न्यायादिति भावः । विद्वद्रूढिमहायोगाभ्यां तद्बाधः, इत्यत आह – **विद्वदिति** ॥ वैदिकप्रयोगादेव तत्सिद्धिः, इत्यत आह – **वैदिकेति** ॥

नन्वानन्दमयाधिकरणे 'अध्यात्मगैश्च' इत्यनुव्याख्यानेन विद्वद्रूढेः साधितत्वात्, इत्यत आह – **यत्त्विति** ॥ न केवलमुक्तैवाभ्यधिकाशङ्का किन्त्वन्यापि इत्याह – **इयश्चेति** ॥

## ಸಾರ

ಅಥವಾ ''ಸ್ವಾತಂತ್ರ್ಯಂ ತದ್‌ಗತತ್ವಂಚ ಶಬ್ದವೃತ್ತೇರ್ಹಿಕಾರಣಮ್'' ಎಂದು ಶಬ್ದ ಪ್ರಯೋಗಕ್ಕೆ 'ಸ್ವಾತಂತ್ರ್ಯ ಮತ್ತು ತದ್‌ಗತತ್ವ' ಎರಡೂ ಕಾರಣ ಎಂದು ಹೇಳಿದ್ದರಿಂದ ಆ ಎರಡನ್ನೂ ಇಲ್ಲಿಲ್ಲವೆಂದು ತೋರಿಸುತ್ತಾರೆ. ಇಂದ್ರಾದಿಪದಪ್ರವೃತ್ತಿನಿಮಿತ್ತವಾದ ಐಶ್ವರ್ಯಾದಿಗಳು ನಿರವಧಿಕವಾಗಿ ಬ್ರಹ್ಮನಲ್ಲಿರುವಂತೆ ವಿವರತ್ವಾದಿಗಳನ್ನು ಹೇಳಲು ಬರುವುದಿಲ್ಲ. ಅವುಗಳು ಅಚೇತನಧರ್ಮಗಳಾದ್ದರಿಂದ ಚೇತನನಲ್ಲಿ ಹೇಳಲು ಬರುವುದಿಲ್ಲ. ಹಾಗೆಯೇ ಇಂದ್ರಾದಿಗಳಲ್ಲಿರುವ ಐಶ್ವರ್ಯಾದಿಗಳು ಭಗವಂತನ ಅಧೀನವಾಗಿರುವಂತೆ ವಿವರತ್ವವು ಭಗವದಧೀನ ಎನ್ನಲೂ ಬರುವುದಿಲ್ಲ. ವಿವರತ್ವಾದಿಗಳು ಆಕಾಶಾದಿಗಳ ಸ್ವಭಾವವಾಗಿದೆ. ಹಾಗಾಗಿ ಭಗವಂತನ ಅಧೀನವೆನ್ನಲೂ ಬರುವುದಿಲ್ಲ. ಹೀಗಾಗಿ ಆಕಾಶಶಬ್ದವು ಬ್ರಹ್ಮನನ್ನು ಹೇಳಬೇಕಾದರೆ ಅದಕ್ಕೆ ಬೇಕಾದ ನಿಮಿತ್ತವಿಲ್ಲವಾದ್ದರಿಂದ ಆಕಾಶಶಬ್ದವಾಚ್ಯನು ವಿಷ್ಣುವಾಗಲಾರ. ಸುಧಾದಲ್ಲಿ ಇದೇ ಅಭಿಪ್ರಾಯವನ್ನಿಟ್ಟುಕೊಂಡು ಇನ್ನೂ ವಿಸ್ತಾರವಾಗಿ ಹೇಳಿದ್ದಾರೆ.

ಸುಧಾಗ್ರಂಥದ ಅಂತಸ್ಥತ್ವಾಧಿಕರಣಪೂರ್ವಪಕ್ಷದಲ್ಲಿ ಅಚೇತನನ ಸ್ವಭಾವವನ್ನು ಭಗವದಧೀನ ಎಂದಿಟ್ಟುಕೊಂಡು ಪೂರ್ವಪಕ್ಷ ಮಾಡಿದ್ದು ಹೇಗೆ ಎಂದರೆ ಈ ಅಧಿಕರಣದ ಸಿದ್ಧಾಂತ ನ್ಯಾಯವನ್ನಿಟ್ಟುಕೊಂಡು

ಹೇಳಿದ್ದಾರೆ. ಆದ್ದರಿಂದ ಅದು ಕೂಡುತ್ತದೆ. "ಆಕಾಶಸ್ಯಾಚೇತನತ್ವೇನ" ಎಂಬ ಟೀಕೆಯಲ್ಲಿ ಅನುವ್ಯಾಖ್ಯಾನ ಮತ್ತು ಸುಧಾಗ್ರಂಥದ ಅನುಸಾರವಾಗಿ 'ಆಕಾಶ' ಎಂದರೆ "ಆಕಾಶಪದ ಪ್ರವೃತ್ತಿ ನಿಮಿತ್ತ" ಎಂದಿಟ್ಟುಕೊಳ್ಳಬೇಕು.

ಹೀಗೆ ಆಕಾಶ ಶಬ್ದವು ಬ್ರಹ್ಮನಲ್ಲಿ ಮುಖ್ಯವಾಗಿದೆ ಎನ್ನಲು ವಿರೋಧಿಯಾದ ಪ್ರಮೇಯಾಶ್ರಿತವಾದ ಶಂಕೆಯು ಇದಾಗಿದೆ.

— — — — — —

## ಪ್ರಮಾಣಾಶ್ರಿತ ಪೂರ್ವಪಕ್ಷಗಳು

**तात्पर्यचन्द्रिका –**

**प्रमाणाश्रितावाक्यस्य ब्रह्मपरत्वविरोधिनी शङ्का तु – युक्तः पूर्वत्र श्रुतित्व–मात्रप्रयुक्तप्राबल्यात् निरवकाशत्वप्रयुक्तप्राबल्यस्य बलवत्त्वात् निरवकाशलिङ्गेन श्रुतिबाधः ।**

**अत्र त्वाकाशश्रुतेः ''आकाशादेव समुत्पद्यन्ते', 'आकाशं प्रत्यस्तं यन्ति', 'आकाशो ह्येवैभ्यो भूतेभ्यो ज्यायान्', 'आकाशः परायणम्'' इति बहुकृत्वः श्रुतित्वात्, श्रुतित्वबहुत्वोभयप्रयुक्तप्राबल्यात् निरवकाशत्वमात्रप्रयुक्तप्राबल्यस्य दुर्बलत्वात् निरवकाशस्यापि लिङ्गस्य बाधः । अत एव पूर्वत्र सवित्रादिश्रुतेरबहुत्वेन बाधेऽपि इन्द्रश्रुतेर्बहुत्वान्न बाधः ।**

**एवञ्चेन्द्रश्रुतिः श्रुतित्वेन तत्रोदाहरणं, बहुश्रुतित्वेनात्रापि । यथाऽग्निहोत्रादि–शब्दो नामधेयतया नामधेयपादे तूदाहरणम्, समुदायानुवादापवादतया शब्दान्तर–पादे,**

**यथा च जीवकारणता श्रुतिप्राप्ततया द्वितीयस्याद्यपाद उदाहृता, समयप्राप्ततया तु द्वितीयपादे,**

**यथा च अयमेवाकाशशब्दः अन्यत्रप्रसिद्धत्वेन अत्रोदाहरणम्, उभयत्र प्रसिद्धत्वेन तु तृतीये, तद्वत् – इत्येका ।**

**अपरा तु – युक्तमन्यत्र निरूढानामपीन्द्रादिशब्दानां श्येनादिशब्दानां यजि–सामानाधिकरण्यवत् ''मत्सीन्द्रमिन्दो पवमान विष्णुम्'' इत्यादौ विष्णु-**

शब्दसामानाधिकरण्यात्, ''यो देवानां नामधा'' इति विशेषश्रवणात्, अन्यत्रानिरूढान्तःस्थत्वमुखसद्भावाच्च विष्णुपरत्वम्, उत्पत्तिशिष्टसोमावरुद्धेऽपि यागे उत्पन्नशिष्टस्य फलचमसस्य भक्षणमुखेन अनुप्रवेशवदर्थान्तरावरुद्धेऽपीन्द्रादिशब्दे अन्तस्स्थत्वमुखेन ब्रह्मप्रवेशाविरोधात् । आकाशशब्दस्य तु क्वापि तत्सामानाधिकरण्याभावात् विशेषश्रुत्यभावादन्यत्रानिरूढमुखाभावाच्च, आमिक्षाऽवरुद्धे यागे वाजिनवद् विरोधात् न विष्णुपरत्वमिति ।

अन्या तु – आकाशशब्दस्योपक्रमस्थत्वेन श्रुतित्वेन च प्रबलत्वात् इन्द्रबृहस्पत्यादिशब्दवच्च परस्परविरुद्धनानार्थोपस्थापकत्वाभावेनैकवाक्यत्वभङ्गाभावात्, आकाशब्रह्मणोर्विरुद्धांशत्यागेनैक्याङ्गीकारे च पूर्वत्रेवात्र बाधकस्य भेदव्यपदेशस्य अभावाच्च आकाशशब्दः प्रसिद्धार्थपर इति । प्रबलश्रुत्यनुसारेण चानन्तत्वादिलिङ्गानि कथञ्चिद् भूताकाशे योज्यानि ।

एताश्च प्रमाणश्रिताः शङ्काः अनुव्याख्याने ''आकाश इति नाम च'' इति अन्यत्रानिरूढमुखान्तरेण विष्णुशब्दसामानाधिकरण्येन विशेषश्रवणेन च रहितनामोक्त्या, अत्र भाष्यटीकयोरसकृच्छ्रुतोपक्रमस्थाकाशैकशब्दवतो भेदव्यपदेशशून्यस्य च विषयवाक्यस्योदाहरणेन च सूचिताः ।

ಅನುವಾದ - ಸಮಗ್ರವಾಕ್ಯವು ಬ್ರಹ್ಮನಲ್ಲಿ ತಾತ್ಪರ್ಯಹೊಂದಿದೆ ಎಂಬುದಕ್ಕೆ ವಿರೋಧಿಯಾದ ಪ್ರಮಾಣಾಶ್ರಿತವಾದ ಶಂಕೆಯು ಹೀಗಿದೆ - ಹಿಂದಿನ ಅಂತಃಸ್ಥತ್ವಾಧಿಕರಣದಲ್ಲಿ ನಿರವಕಾಶತ್ವಪ್ರಯುಕ್ತವಾದ ಪ್ರಾಬಲ್ಯವನ್ನು ಲಿಂಗಕ್ಕೆ ಪ್ರತಿಪಾದಿಸಲಾಯಿತು. 'ಅನಂತತ್ವ ಮತ್ತು ಪರೋವರೀಯಸ್ತ್ವಾದಿ ಲಿಂಗಗಳಿಗಿಂತ ಇಂದ್ರಾದಿಶ್ರುತಿಗಳು ಸ್ವಭಾವತಃ ಬಲಿಷ್ಠವಾಗಿದ್ದರೂ ಲಿಂಗವು ನಿರವಕಾಶವಾಗಿದ್ದರಿಂದ ಬಾಧಿತವಾಗುತ್ತವೆಂದು ಸಮರ್ಥಿಸಲಾಯಿತು.

ಪ್ರಕೃತ ಈ ಅಧಿಕರಣದಲ್ಲಿ ನಿರವಕಾಶಲಿಂಗಕ್ಕಿಂತಲೂ ಶ್ರುತಿಯೇ ಪ್ರಬಲವಾಗಿದೆಯೆಂದು ಹೇಳುತ್ತಿದ್ದಾರೆ. ಅದು ಹೀಗೆ – 'ಆಕಾಶಾದೇವ ಸಮುತ್ಪದ್ಯಂತೇ ಆಕಾಶಂ ಪ್ರತ್ಯಸ್ತಂ ಯಂತಿ ಆಕಾಶೋ ಹ್ಯೇವೇಭ್ಯೋ ಜ್ಯಾಯಾನ್ ಆಕಾಶಃ ಪರಾಯಣಮ್' (ಛಾಂದೋಗ್ಯ) ಎಂಬ ಶ್ರುತಿಯಲ್ಲಿ ಅನೇಕಬಾರಿ ಆಕಾಶಪದವು ಕೇಳಿಸುತ್ತಿದೆ. ಆದ್ದರಿಂದ ಶ್ರುತಿತ್ವ ಮತ್ತು ಬಹುತ್ವಪ್ರಯುಕ್ತವಾದ ಪ್ರಾಬಲ್ಯವಿರುವುದರಿಂದ ಕೇವಲ ನಿರವಕಾಶತ್ವಪ್ರಯುಕ್ತವಾದ ಪ್ರಾಬಲ್ಯವು ದುರ್ಬಲವಾಗುತ್ತದೆ.

ಆದ್ದರಿಂದ ಲಿಂಗವು ನಿರವಕಾಶವಾಗಿದ್ದರೂ ಶ್ರುತಿಯಿಂದ ಲಿಂಗವೇ ಬಾಧಿತವಾಗುತ್ತದೆ. ಆದ್ದರಿಂದಲೇ ಹಿಂದಿನ ಅಧಿಕರಣದಲ್ಲಿ ಬೃಹಸ್ಪತ್ಯಾದಿಶ್ರುತಿಗಳಿಗೆ ಮಾತ್ರ ಬಾಧವನ್ನು ಹೇಳಿದ್ದಾರೆ; ಹೊರತು ಇಂದ್ರಪ್ರತಿಪಾದಕಶ್ರುತಿಗಳಿಗೆ ಬಾಧವನ್ನು ಹೇಳಿಲ್ಲ. ಏಕೆಂದರೆ ಇಂದ್ರಪ್ರತಿಪಾದಕಶ್ರುತಿಗೂ ಆಕಾಶಶ್ರುತಿಯಂತೆ ಬಹುತ್ವಪ್ರಯುಕ್ತವಾಗಿ ಮತ್ತು ಶ್ರುತಿತ್ವಪ್ರಯುಕ್ತವಾಗಿ ಎರಡು ಬಗೆಯಿಂದ ಪ್ರಾಬಲ್ಯವಿರುತ್ತದೆ. ಆದ್ದರಿಂದ ಇಂದ್ರಶ್ರುತಿಯನ್ನು ಸೇರಿಸಿಕೊಂಡೇ ಇಲ್ಲಿ ಆಕ್ಷೇಪಮಾಡಲಾಗಿದೆ-ಯೆಂದು ತಿಳಿಯಬೇಕು.

ಹಾಗಾದರೆ ಇಂದ್ರಶಬ್ದವನ್ನು ಹಿಂದಿನ ಅಧಿಕರಣದಲ್ಲಿ ಮತ್ತು ಈ ಅಧಿಕರಣದಲ್ಲಿ ಎರಡು ಕಡೆ ವಿಚಾರಮಾಡಿದಂತಾಯಿತಲ್ಲ! ಎಂಬ ಪ್ರಶ್ನೆ ಬರುತ್ತದೆ. ಆದರೆ ಹಿಂದಿನ ಅಧಿಕರಣದಲ್ಲಿ ಕೇವಲ ಶ್ರುತಿತ್ವೇನ ಇಂದ್ರಶ್ರುತಿಯನ್ನು ಉದಾಹರಿಸಿದ್ದಾರೆ. ಈ ಅಧಿಕರಣದಲ್ಲಿ ಬಹುತ್ವೇನ ಬಹುಶ್ರುತಿತ್ವ-ಪ್ರಯುಕ್ತವಾಗಿ ಇಂದ್ರಶ್ರುತಿಯನ್ನು ಉದಾಹರಿಸಿದ್ದಾರೆಂಬ ವ್ಯತ್ಯಾಸವನ್ನು ಗಮನಿಸಬೇಕು.

ಒಂದೇ ವಾಕ್ಯವನ್ನು ಎರಡು ಅಧಿಕರಣದಲ್ಲಿ ವಿಚಾರಮಾಡುವುದೇನೂ ತಪ್ಪಲ್ಲವೆಂದು ಪೂರ್ವಮೀಮಾಂಸಕರೂ ಒಪ್ಪಿದ್ದಾರೆ. ಅಗ್ನಿಹೋತ್ರಾದಿಶಬ್ದಗಳು ಯಾಗದ ನಾಮಧೇಯಗಳಾದ್ದರಿಂದ ನಾಮಧೇಯಪಾದದಲ್ಲಿ ವಿಷಯವಾಕ್ಯಗಳಾಗಿವೆ. ಅವೇ ಅಗ್ನಿಹೋತ್ರಾದಿಶಬ್ದಗಳು ಪುನಃ ಶಬ್ದಾಂತರ ಪಾದದಲ್ಲಿ ಸಮುದಾಯಾನುವಾದವನ್ನು ಅಪವಾದ ಮಾಡುವ ಮೂಲಕ ವಿಷಯಗಳಾಗಿವೆ.

ಉತ್ತರಮೀಮಾಂಸೆಯ ದೃಷ್ಟಾಂತವೂ ಇದೆ. ಜೀವನಿಗೆ ಪ್ರಾಪ್ತವಾದ ಜಗತ್ಕಾರಣತ್ವವು ಎರಡನೆಯ ಅಧ್ಯಾಯದ ಮೊದಲನೆಯ ಪಾದದಲ್ಲಿ ಶ್ರುತಿಪ್ರಾಪ್ತವೆಂದು ವಿಷಯವಾಗಿದೆ. ಸಾಂಖ್ಯಾದಿಸಮಯಪ್ರಾಪ್ತವೆಂದು ಪುನಃ ಅದೇ ಜೀವಕಾರಣತ್ವವು ಎರಡನೆಯ ಪಾದದಲ್ಲಿಯೂ ವಿಷಯವಾಗಿದೆ. ಅಷ್ಟೇ ಏಕೆ, ಇದೇ ಆಕಾಶಶಬ್ದವು ಅನ್ಯತ್ರಪ್ರಸಿದ್ಧವಾಗಿದೆಯೆಂಬ ವಿವಕ್ಷೆಯಿಂದ ಈ ಅಧಿಕರಣದಲ್ಲಿ ವಿಷಯವಾಗಿದೆ, ಉಭಯತ್ರಪ್ರಸಿದ್ಧವಾಗಿದೆಯೆಂಬ ವಿವಕ್ಷೆಯಿಂದ ಆಕಾಶಶಬ್ದವು ಮೂರನೆಯ ಪಾದದಲ್ಲಿಯೂ ವಿಷಯವಾಗಿದೆ.

ಎರಡನೆಯ ಪ್ರಮಾಣಾಶ್ರಿತವಾದ ಪೂರ್ವಪಕ್ಷ ಹೀಗಿದೆ — ಅನ್ಯತ್ರನಿರೂಢವಾದ ಇಂದ್ರಾದಿ-ಶಬ್ದಗಳ ಸಾಮಾನಾಧಿಕರಣ್ಯವು ವಿಷ್ಣುಶಬ್ದಕ್ಕಿರುತ್ತದೆ. ಆದ್ದರಿಂದ ಇಂದ್ರಾದಿಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನೆಂದು ಹಿಂದಿನ ಅಧಿಕರಣದ ಸಿದ್ಧಾಂತವನ್ನು ಒಪ್ಪಿಕೊಳ್ಳೋಣ. 'ಶ್ಯೇನೇನ ಅಭಿಚರನ್ ಯಜೇತ' ಎಂಬ ಪೂರ್ವಮೀಮಾಂಸೆಯಲ್ಲಿ ಉದಾಹರಿಸುವ ವಾಕ್ಯದಲ್ಲಿ 'ಯಜೇತ' ಎಂಬ ಪದಕ್ಕೆ 'ಯಾಗೇನ ಫಲಂ ಭಾವಯೇತ್' ಎಂದರ್ಥ. ಇಲ್ಲಿ 'ಶ್ಯೇನೇನ' ಎಂಬ ಪದಕ್ಕೂ 'ಯಾಗೇನ' ಎಂಬ ಪದಕ್ಕೂ ಸಾಮಾನಾಧಿಕರಣ್ಯವಿರುವುದರಿಂದ ಶ್ಯೇನಪದವು ಪಕ್ಷಿವಾಚಕವಲ್ಲ ಹೊರತು ಯಾಗ-ವಾಚಕವೆಂದು ನಿರ್ಣಯಿಸುತ್ತಾರೆ. ಅದರಂತೆ 'ಮತ್ಸೀಂದ್ರಮಿಂದೋ ಪವಮಾನವಿಷ್ಣುಂ' ಎಂಬಲ್ಲಿ ಇಂದ್ರಂ ಎಂಬ ಪದವು ಮತ್ತು ವಿಷ್ಣುಂ ಎಂಬ ಪದವು ಸಮಾನವಿಭಕ್ತಿಯಲ್ಲೇ ಇರುವುದರಿಂದ

ಇಂದ್ರಪದವು ದೇವೇಂದ್ರವಾಚಕವಲ್ಲ ಹೊರತು ವಿಷ್ಣುವಾಚಕವೆಂದು ನಿರ್ಣಯಿಸಬಹುದು. ಆದರೆ ವಿಷ್ಣುಶಬ್ದಸಾಮಾನಾಧಿಕರಣ್ಯವು ಆಕಾಶಪದಕ್ಕಿರುವುದಿಲ್ಲ. ಆದ್ದರಿಂದ ಆಕಾಶವನ್ನು ವಿಷ್ಣುವೆಂದು ಹೇಳಲಾಗದು.

ಮತ್ತು 'ಯೋ ದೇವಾನಾಂ ನಾಮಧಾ' ಎಂಬ ಶ್ರುತಿಯು ಸಕಲದೇವತಾವಾಚಕಪದಗಳನ್ನು ವಿಷ್ಣುವಿನ ಹೆಸರೆಂದು ಹೇಳುತ್ತಿದೆ. ಭೂತವಾಚಕವಾಗ ಆಕಾಶಾದಿಪದಗಳನ್ನು ವಿಷ್ಣುವಿನ ಹೆಸರೆಂದು ಹೇಳುವ ಇಂತಹ ಯಾವುದೇ ಶ್ರುತಿಗಳು ಇರುವುದಿಲ್ಲ.

ಅನ್ಯತ್ರನಿರೂಢವಲ್ಲದ ಅಂತಃಸ್ಥತ್ವದಂತಹ ಲಿಂಗದ ಮೂಲಕವಾಗಿ ಇಂದ್ರಾದಿಶಬ್ದಗಳು ವಿಷ್ಣುಪರವಾಗಬಹುದು. ಆದರೆ ಆಕಾಶಶಬ್ದವನ್ನು ವಿಷ್ಣುಪರವೆಂದು ಹೇಳಲು ಅಂತಃಸ್ಥತ್ವದಂತಹ ಯಾವುದೇ ಮುಖಗಳಿರುವುದಿಲ್ಲ.

ಮತ್ತೊಂದು ಬಗೆಯ ಪ್ರಮಾಣಾಶ್ರಿತವಾದ ಪೂರ್ವಪಕ್ಷ. 'ಅಸ್ಯ ಲೋಕಸ್ಯ ಕಾ ಗತಿಃ? ಆಕಾಶ ಇತಿ ಹೋವಾಚ' ಎಂಬ ವಾಕ್ಯದಲ್ಲಿ ಆಕಾಶಶಬ್ದವು ಉಪಕ್ರಮದಲ್ಲಿಯೇ ಕೇಳಿಸುತ್ತಿದೆ. ಆದ್ದರಿಂದ ಉಪಕ್ರಮಪ್ರಯುಕ್ತವಾಗಿ ಮತ್ತು ಶ್ರುತಿತ್ವಪ್ರಯುಕ್ತವಾಗಿ ಪ್ರಬಲವಾದ್ದರಿಂದ ಆಕಾಶಶ್ರುತಿಯು ಭೂತಾಕಾಶವನ್ನೇ ಹೇಳುತ್ತದೆ. ಮತ್ತು ಇಂದ್ರಬೃಹಸ್ಪತ್ಯಾದಿಶಬ್ದಗಳಂತೆ ಪರಸ್ಪರ ವಿರುದ್ಧವಾದ ಅನೇಕ ಅರ್ಥಗಳನ್ನು ಈ ವಿಷಯವಾಕ್ಯವು ನಿರೂಪಿಸದ ಕಾರಣ ಏಕವಾಕ್ಯತ್ವಕ್ಕೆ ಭಂಗವು ಬರುವುದಿಲ್ಲ. ಆದ್ದರಿಂದ ಭೂತಾಕಾಶಪರವೆನ್ನಬಹುದು.

ಮತ್ತು ಆಕಾಶ ಮತ್ತು ಬ್ರಹ್ಮರಲ್ಲಿರುವ ವಿರುದ್ಧಾಂಶವನ್ನು ತ್ಯಾಗಮಾಡಿ ಐಕ್ಯವನ್ನು ಅಂಗೀಕರಿಸಿದರೆ ಹಿಂದಿನ ಅಧಿಕರಣದಲ್ಲಿ 'ಭೇದವ್ಯಪದೇಶಾಚ್ಚಾನ್ಯಃ' ಎಂಬ ಸೂತ್ರದಲ್ಲಿ ಹೇಳಿದ ಬಾಧಕವು ಇಲ್ಲಿ ಬರುವುದಿಲ್ಲ. ಆದ್ದರಿಂದಲೂ ಆಕಾಶಪದವನ್ನು ಭೂತಾಕಾಶಪರವೆನ್ನಬಹುದು. ಭೂತಾಕಾಶವೆಂಬ ಅರ್ಥವನ್ನು ಸ್ವೀಕರಿಸಲು ಅನಂತತ್ವ ಮೊದಲಾದ ಲಿಂಗಗಳೇ ಬಾಧಕವಾಗಿವೆ-ಯಲ್ಲವೇ? ಎಂದು ಪ್ರಶ್ನಿಸಬಾರದು. ಆ ಲಿಂಗಗಳನ್ನು ಗೌಣಮಾಡಿ ಭೂತಾಕಾಶದಲ್ಲಿಯೇ ಯೋಜನೆ ಮಾಡಬೇಕು.

ಈ ಮೂರುವಿಧವಾದ ಪ್ರಮಾಣಾಶ್ರಿತಶಂಕೆಗಳನ್ನು ಅನುವ್ಯಾಖ್ಯಾನದಲ್ಲಿ 'ಆಕಾಶ ಇತಿ ನಾಮ ಚ' ಎಂಬ ಶ್ಲೋಕದಿಂದ ತಿಳಿಸಿದ್ದಾರೆ. ಬೇರೆಕಡೆ ನಿರೂಢವಾಗದ ಅಂತಃಸ್ಥತ್ವಾದಿಗಳಂತೆ ಆಕಾಶಶಬ್ದಕ್ಕೆ ಭೂತಕಾಶಪರವೆನ್ನಲು ಬೇರೆ ಯಾವುದೇ ಲಿಂಗಗಳು ಇರುವುದಿಲ್ಲ. ಮತ್ತು ವಿಷ್ಣುಶಬ್ದ ಸಾಮಾನಾಧಿ -ಕರಣ್ಯವಾಗಲೀ 'ಯೋ ದೇವಾನಾಂ ನಾಮಧಾ' ಇತ್ಯಾದಿಯಾದ ವಿಶೇಷಶ್ರುತಿಗಳಾಗಲೀ ಇಲ್ಲವೆಂದು ಹೇಳಿದ್ದಾರೆ.

ಮತ್ತು ಭಾಷ್ಯ ಹಾಗೂ ಟೀಕೆಗಳಲ್ಲಿ ಅನೇಕಬಾರಿ ಕೇಳಿಸುತ್ತಿರುವ ಉಪಕ್ರಮದಲ್ಲಿರುವ

ಆಕಾಶಶಬ್ದವನ್ನು ವಿಷಯವಾಕ್ಯವನ್ನಾಗಿ ಸ್ವೀಕರಿಸಿದ್ದರಿಂದಲೇ ಈ ಪ್ರಮಾಣಾಶ್ರಿತಪೂರ್ವಪಕ್ಷಗಳು ಸೂಚಿತಗಳಾಗಿವೆ.

### ಕಠಿಣಪದಾರ್ಥ

ಪ್ರಮಾಣಾಶ್ರಿತಾ = ಆಕಾಶ ಎಂಬ ಪದವನ್ನು ಆಶ್ರಯಿಸಿರುವ, ಪೂರ್ವತ್ರ = ಅಂತರಧಿಕರಣದಲ್ಲಿ, ಅತ ಏವ = ಉಭಯಪ್ರಯುಕ್ತವಾದ ಪ್ರಾಬಲ್ಯ-ವಿರುವುದರಿಂದಲೇ, ಸವಿತ್ರಾದಿಶ್ರುತೇಃ = ಬೃಹಸ್ಪತ್ಯಾದಿಶ್ರುತಿಗಳು (ಅತದ್ಗುಣ-ಸಂವಿಜ್ಞಾನಬಹುವ್ರೀಹಿಯಿಂದ ಸವಿತೃಶ್ರುತಿಯನ್ನು ಬಿಡಬೇಕು), ತತ್ರ = ಅಂತರಧಿಕರಣದಲ್ಲಿ, ಅತ್ರಾಪಿ = ಆಕಾಶಾಧಿಕರಣದಲ್ಲಿಯೂ, ಅಪರಾ ತು = ಪ್ರಮಾಣಾಶ್ರಿತವಾದ ಮತ್ತೊಂದು ಬಗೆಯ ಪೂರ್ವಪಕ್ಷವು, ಮತ್ಸಿ = ಸಂತೋಷಪಡಿಸು, ಅನ್ಯತ್ರ ಅನಿರೂಢ = ವಿಷ್ಣುವನ್ನು ಬಿಟ್ಟು ಬೇರೆಲ್ಲಿಯೂ ಪ್ರಸಿದ್ಧವಾಗದ, ಆಮೀಕ್ಷಾ = ಒಡೆದ ಹಾಲು, ವಾಜಿನ = ಒಡೆದ ಹಾಲಿನಿಂದ ಬರುವ ನೀರು, ಅನ್ಯಾ ತು = ಪ್ರಮಾಣಾಶ್ರಿತವಾದ ಮೂರನೆಯ ಪೂರ್ವಪಕ್ಷವು, ಕಥಂಚಿತ್ = ಭೂತಾಕಾಶದಲ್ಲಿ ಹೊಂದಾಣಿಕೆಯಾಗುವಂತೆ ಸಂಕೋಚ ಮಾಡಿ; ಉತ್ಪತ್ತಿಶಿಷ್ಟ = ಪ್ರಥಮತಃ ಕರ್ಮವನ್ನು ವಿಧಿಸುವ (ಶಿಷ್ಟ = ವಿಹಿತ), ಉತ್ಪನ್ನಶಿಷ್ಟಸ್ಯ = ಅನುವಾದ ಮಾಡಿ ವಿಧಿಸುವ,

**प्रकाशः – प्रमाणेति** ॥ 'आकाशपदरूपमाश्रित्य प्रवर्तमाने' इत्यर्थः ॥ **ब्रह्मपरत्वेति** ॥ शक्तितात्पर्यावधारणं हि समन्वयः । तत्र पूर्वं 'शक्तिर्न' इत्युक्तम्, अधुना 'तात्पर्यं न' इत्युच्यत इत्यर्थः । भाष्यादावुदाहृतबहुकृत्वःश्रुताकाश-पदोपेतविषयवाक्यसूचितामाह – **युक्त इति** ॥ 'पूर्वत्र' अन्तरधिकरणे, 'लिङ्गस्य' अनन्तत्वादिलिङ्गस्य 'बाधः' सङ्कोच इत्यर्थः ।

ननु पूर्वत्र बहुकृत्वः श्रुतस्यापीन्द्रशब्दस्य समुद्रशायित्वादिलिङ्गेन बाध उक्तः, इत्यत आह – **अत एवेति** ॥ 'उभयप्रयुक्तप्राबल्यस्य बलवत्त्वादेव' इत्यर्थः ॥ **सवित्रादीति** ॥ अतद्गुणसंविज्ञानेन बृहस्पत्यादिश्रुतिरिति ध्येयम्, सवितृश्रुति-बहुत्वस्यापि सत्त्वात् ।

ननु एकस्याकारभेदेनाप्यनेकत्रोदाहरणम् अदृष्टचरम्, इत्यत आह – **यथेति** ॥ ''अग्निहोत्रं जुहोति'' इत्यत्रत्याग्निहोत्रशब्दो यथा ''अग्निर्ज्योतिर्ज्योतिरग्निस्स्वाहेति सायं जुहोति'' इति नामधेयत्वापादकगुणप्रख्यापकशास्त्रान्तरविषयतया नामधेय-पादे ''तत्प्रख्यं चान्यशास्त्रम्'' इति तृतीयाधिकरणोदाहरणं, ''दध्ना जुहोति'' इत्यादिवाक्यप्राप्तहोमसमुदायानुवादकत्वशङ्काविषयतया द्वितीयाध्यायद्वितीयपादे पञ्चमाधिकरणे उदाहरणं तद्वदित्यर्थः ॥

**यथा च जीवकारणतेति** ॥ ''इतरव्यपदेशाद्धिताकरणादिदोषप्रसक्तिः'' इति शक्तिपादीयसप्तमाधिकरणे ''जीवाद्भवन्ति भूतानि'' इत्यादिश्रुतिसंवादिचेतनत्वादि-युक्तिप्राप्ततयोदाहृताऽपि जीवकर्तृता ''अन्यथाऽनुमितौ च ज्ञशक्तिवियोगात्'' इति समयचरणपञ्चमाधिकरणे प्रकृत्युपसर्जनपुरुषकर्तृकमतप्राप्ततयोदाहृता तद्व-दित्यर्थः । उक्तं च टीकायाम् ''इतरव्यपदेशात्'' इत्यत्र – अत्र 'जीवाद्भवन्ति भूतानि' इति श्रुतिप्राप्तो जीवकर्तृत्वपक्षो निराक्रियते, उत्तरत्र समयप्राप्त इत्यर्थभेदः – इति ॥ **तृतीय इति** ॥

द्युभ्वादिपादे ''आकाशोऽर्थान्तरत्वादिव्यपदेशात्'' इति द्वादशोऽधिकरणे उदाहरणमित्यर्थः।

> ................. **विवरादिः कथं ततः ।**
> **इति शङ्कानिवृत्त्यर्थं आकाश इति नाम च ।**
> **परतोऽपि वरीयस्त्वपूर्वाल्लिङ्गाद्धरेर्भवेत् ॥**

इत्यनुव्याख्याने नामपदसूचितशङ्कान्तरमाह – **अपरा त्विति** ॥ 'युक्तमिन्द्रादि-शब्दानां विष्णुपरत्वम्' इत्यन्वयः ।

तत्र हेतुद्वयमभिप्रेत्य सदृष्टान्तमाह – **श्येनेति** ॥ ''श्येनेनाभिचरन्यजेत'' इत्यत्र तृतीयान्ततया निर्दिष्टस्य श्येनशब्दस्यान्यत्र रूढस्यापि प्रत्ययार्थभूतभावना-करणतासमर्थयागवाचियजिधातुसामानाधिकरण्यात् ''यथा वै श्येनोऽयं निपत्या-दत्ते'' इति सादृश्यबोधकवाक्यशेषाच्च यागपरत्वं, तथा ''मत्सि सोम वरुणं मत्सि मित्रं मत्सीन्द्रमिन्द्रो पवमान विष्णुम्'' इति विष्णुशब्दसामानाधिकरण्यात् ''यो देवानाम्'' इति विशेषश्रवणाच्चेत्यर्थः । न च 'इन्द्रं विष्णुं च मत्सि मदयसि' इति पृथगन्वयोपपत्तेः सामानाधिकरण्यमसिद्धमिति वाच्यं, तथा सति वरुणादिषु पृथक् मत्सिशब्दवत् मत्सीन्द्रं मत्सि विष्णुम्'' इति पृथङ्मत्सिशब्दश्रवणापातात् । सर्वेषां पृथङ्मत्सिशब्ददर्शनेन एकस्यैवान्यथात्वायोगादश्रुतकल्पनापाताच्च ।

''मत्सि महामिन्द्रमिन्दो मदाय'' इत्यन्येन्द्रस्य पृथगुक्त्या पौनरुक्त्यापाताच्च । महत्त्वस्यादितिपुत्रत्वेनाग्रजत्वमात्रेणोपपत्तेश्चेति व्यक्तमेतदैतरेयभाष्य इति भावः । तृतीयहेतुं दृष्टान्तेनोपपादयति – **उत्पत्तिशिष्टेति** ॥

तृतीयेऽध्याये पञ्चमे पादे ''फलचमसो नैमित्तिको भक्षविकारः श्रुतिसंयोगात्'' इत्युपान्त्याधिकरणे चिन्तितम् । ''यदि राजन्यं वैश्यं वा याजयेत्स यदि सोमं बिभक्षयिषेत् न्यग्रोधस्तिभिनीराहृत्य ताः सम्पिष्य दधन्युन्मृज्य तमस्मै भक्षं प्रयच्छेत् सोमम्'' इत्यत्र राजन्यवैश्यनिमित्तेन सोमविकारतया श्रूयमाणः फलचमसः किं तद्भक्षमात्रे सोमं विकुर्यात् उत यागेऽपीति संशये, 'बिभक्षयिषेत्' इति 'भक्षं प्रयच्छेत्' इति तूपक्रमोपसंहाराभ्यां तत्रैव विकारो न यागेऽश्रवणादिति प्राप्ते, यागसाधनद्रव्यसंस्काररूपभक्षसम्बन्धित्वेन श्रूयमाणः फलचमसः अन्यथा तत्सम्बन्धायोगाद्यजमानचमसयागाभ्याससाधनत्वं प्रतिपद्यते । अतो यागेऽपि सोमविकार इति । अत्रोत्पत्तिशिष्टनित्यापेक्षया नैमित्तिकस्योत्पन्नशिष्टस्यापि प्राबल्यात् फलचमसस्य यागसाधनद्रव्यसंस्काररूपभक्षणद्वारा यागसाधनत्वेन यथायागेऽनुप्रवेशस्तथेन्द्रादिशब्देऽपि पुरन्दरादिरूपार्थान्तरवाचिन्यपि वाच्यतया ब्रह्मानुप्रवेश इत्यर्थः ।

प्रकृते तद्वैषम्यमाह – **आकाशेति** ॥ 'तत्' इति विष्णुवाचिशब्दः परामृश्यते । ननु ''आकाशो वै नाम नामरूपयोर्निर्वहिता ते यदन्तरा तद्ब्रह्म तदमृतं स आत्मा'' इति छान्दोग्ये विष्ण्वसाधारणब्रह्मात्मशब्दसामानाधिकरण्यमस्तीति चेन्न, तत्र प्रसिद्धिद्योतकनिपातबलेन ब्रह्मादिशब्दानां विष्णुवाचित्वस्य पूर्वपक्षिणोऽसम्मतेः ।

ननु तथाऽपि कथं 'विशेषश्रुत्यभावात्' इति, ''नामानि सर्वाणि यमाविशन्ति'' इति श्रुतेः सत्त्वादिति चेन्न, 'देवानाम्' इतिवत् भूतानामिति विशिष्याभावात् । अत एव 'विशेष' इत्युक्तम् । ''यो देवानाम्'' इति श्रुत्यनुसारेण ''सर्वाणि'' इति सामान्यशब्दस्य सङ्कोचोपपत्तेश्चेति भावः ॥

**आमिक्षाऽवरुद्ध इति** ॥ द्वितीयस्य द्वितीये पादे ''गुणश्चापूर्वसंयोगे वाक्ययोः समत्वात्'' इति नवमेऽधिकरणे चिन्तितम् । ''वैश्वदेव्यामिक्षा'' इति यागं विधायाम्नाते ''वाजिभ्यो वाजिनम्'' इत्यत्र किं पूर्वस्मिन्नामिक्षायागे वाजिनं गुणो विधीयते, किं वा कर्मान्तरमिति संशये, वाजिशब्देनामिक्षायागदेवतारूपविश्वेदेव-प्रत्यभिज्ञानात् तत्र सम्बध्यमानं वाजिनं पूर्वकर्मण्येव विहितं भवति । सम्भवति

चैवं गुणमात्रविधाने विशिष्टविधिगौरवं नाश्रयितुं युक्तम् । अतः पूर्वयागे वैकल्पिकद्रव्यविधानमिति प्राप्ते, आमिक्षायुक्तस्यैवोत्पत्तौ पूर्वयागस्यावगमाद् वाजिनविधौ तेनैव रूपेणानुवाद्यत्वात्तस्य द्रव्यान्तरसम्बन्धापेक्षायोग्यत्वयोरभावात् तत्र निवेशमलभमानं वाजिनं आत्मनिवेशक्षमं कर्मान्तरं साधयतीति कर्मान्तर-विधिरिति । तद्वद्विरोधान्न विष्णुपरत्वमित्यर्थः।

अत्रोदाहृतविषयवाक्यपर्यालोचनया प्राप्तं शङ्कान्तरमप्याह – **अन्यात्विति** ॥ उपक्रमाधिकरणन्यायेनोपक्रमस्य प्राबल्यं मन्वानस्य शङ्कितुः 'उपक्रमस्थत्वेन' इत्युक्तिः । ननु श्रुतेरपि पूर्वत्र लिङ्गात् बाध उक्त इत्यतो वैषम्यं द्वेधा दर्शयति – **इन्द्रेति** ॥ निरवकाशलिङ्गविरोध इत्यत आह – **प्रबलेति** ॥

**कथञ्चिदिति** ॥ सङ्कुचितानन्तत्वादिनेत्यर्थः । तदुक्तं सन्न्यायरत्नावल्यां – ''प्रथमं पठितत्वात् प्रसिद्धत्वाच्च तत्रैव वाक्यशेषो भाक्तो वर्णनीयः'' इति । सुधायां च ''प्रथमावगत-स्वभावबलवच्छ्रुत्यनुरोधेन लिङ्गानि कथञ्चिद्योज्यानि'' इति । उक्ताश्च प्रमाणाश्रितास्तिस्रः शङ्का नानवधेया इति भावेन मूलमाह – **एताश्चेति** ॥ आद्यतृतीये विषयवाक्यसूचिते । द्वितीया तु नामोक्त्येति ध्येयम् ।

ವಿವರಣೆ - ಈ ಹಿಂದೆ ಆಕಾಶ ಎಂಬ ಪದದಿಂದ ಪ್ರಮೇಯಾಶ್ರಿತವಾದ ಶಂಕೆಯನ್ನು ಮಾಡಿದ್ದಾಯಿತು. ಈಗ ಸಮಗ್ರವಾಕ್ಯವು ಬ್ರಹ್ಮನಲ್ಲಿ ತಾತ್ಪರ್ಯ ಹೊಂದಿದೆ ಎಂಬುದಕ್ಕೆ ವಿರೋಧಿಯಾದ ಪ್ರಮಾಣಾಶ್ರಿತವಾದ ಶಂಕೆಯನ್ನು ಮಾಡುತ್ತಿದ್ದಾರೆ. ಸಮನ್ವಯವೆಂದರೆ ಶಕ್ತಿತಾತ್ಪರ್ಯದ ನಿಶ್ಚಯವೆಂದರ್ಥ. ಹಿಂದೆ ಆಕಾಶಪದಕ್ಕೆ ಬ್ರಹ್ಮನಲ್ಲಿ ಶಕ್ತಿಯಿಲ್ಲವೆಂದು ಹೇಳಿದರು. ಈಗ ಬ್ರಹ್ಮನಲ್ಲಿ ತಾತ್ಪರ್ಯವಿಲ್ಲವೆಂದು ಹೇಳುತ್ತಿದ್ದಾರೆ. ಒಟ್ಟಾರೆ ಬ್ರಹ್ಮನಲ್ಲಿ ಸಮನ್ವಯ ಕೂಡುವುದಿಲ್ಲವೆಂದು ಅಭಿಪ್ರಾಯ.

ಭಾಷ್ಯಾದಿಗಳಲ್ಲಿ ಯಾವ ಶ್ರುತಿವಾಕ್ಯವನ್ನು ಉದಾಹರಿಸಿದ್ದಾರೋ ಅದರಲ್ಲಿ ಅನೇಕ ಬಾರಿ ಆಕಾಶ-ಶಬ್ದವು ಕೇಳಿಸುತ್ತಿದೆ. ಇದರಿಂದ ಶ್ರುತಿತ್ವಪ್ರಯುಕ್ತವಾಗಿ ಮತ್ತು ಬಹುತ್ವಪ್ರಯುಕ್ತವಾಗಿ ಪ್ರಾಬಲ್ಯವನ್ನು ಸೂಚಿಸಿದಂತಾಗುತ್ತದೆ. ಇದನ್ನೇ ಗ್ರಂಥಕಾರರು 'ಯುಕ್ತಃ' ಎಂದು ಹೇಳಿದ್ದಾರೆ.

ಹಿಂದಿನ ಅಧಿಕರಣದಲ್ಲಿ ಇಂದ್ರಶಬ್ದವು ಅನೇಕ ಬಾರಿ ಶ್ರುತವಾಗಿದ್ದರೂ ಸಹ ಸಮುದ್ರಶಾಯಿತ್ವಾದಿ-ಲಿಂಗದಿಂದ ಬಾಧವನ್ನು ಹೇಳಿದಿರಿ. ಆದರೆ ಈಗ ಬಹುತ್ವಪ್ರಯುಕ್ತವಾದ ಮತ್ತು ಶ್ರುತಿತ್ವಪ್ರಯುಕ್ತ-ವಾದ್ದರಿಂದ ಪ್ರಾಬಲ್ಯವನ್ನು ಹೇಳುತ್ತಿದ್ದೀರಿ. ಇದು ಹೇಗೆ ಕೂಡುತ್ತದೆ? ಎಂಬ ಪ್ರಶ್ನೆಗೆ 'ಅತ ಏವ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

ಗ್ರಂಥಕಾರರು ಸವಿತ್ರಾದಿ ಶ್ರುತಿಯಲ್ಲಿ ಬಹುತ್ವ ಇಲ್ಲವೆಂದು ಹೇಳಿದ್ದಾರೆ. ಆದರೆ ಸವಿತೃಶ್ರುತಿಯು ಅನೇಕ ಬಾರಿ ಕೇಳಿಸುತ್ತಿದೆಂಬ ಪ್ರಶ್ನೆ ಬರುತ್ತದೆ. ಅದಕ್ಕೋಸ್ಕರ 'ಸವಿತ್ರಾದಿಶ್ರುತೇಃ' ಎಂಬುದಕ್ಕೆ ಅತದ್ಗುಣಸಂವಿಜ್ಞಾನ-ಬಹುವ್ರೀಹಿಯನ್ನು ಮಾಡಬೇಕು. ಅಂದರೆ ಸವಿತೃಶ್ರುತಿಯನ್ನು ಬಿಟ್ಟು ಬೃಹಸ್ಪತ್ಯಾದಿಶ್ರುತಿಗಳು ಬಹುಶ್ರುತವಾಗಿವೆ ಎಂದು ಅಭಿಪ್ರಾಯ.

ಒಂದೇ ಶ್ರುತಿವಾಕ್ಯವು ಆಕಾರಭೇದದಿಂದ ಅನೇಕ ಬಾರಿ ಉದಾಹರಿಸಿದ್ದು ಎಲ್ಲಿಯೂ ಕಂಡಿಲ್ಲವಲ್ಲ? ಎಂಬ ಪ್ರಶ್ನೆಗೆ 'ಯಥಾ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಅಗ್ನಿಹೋತ್ರಂ ಜುಹೋತಿ' ಎಂಬ ಶ್ರುತಿಯಲ್ಲಿರುವ ಅಗ್ನಿಹೋತ್ರಶಬ್ದವು ಯಾಗದ ನಾಮಧೇಯವಾಗಿದೆ. ಯಾಗಕ್ಕೆ ಅಗ್ನಿಹೋತ್ರವೆಂಬ ಹೆಸರು ಬರಲು ಕಾರಣವೇನೆಂದರೆ, ಅದು ಗುಣವನ್ನು ತಿಳಿಸುತ್ತಿದೆ. 'ಅಗ್ನಿರ್ಜ್ಯೋತಿರ್ಜ್ಯೋತಿರಗ್ನಿಃ ಸ್ವಾಹೇತಿ ಸಾಯಂ ಜುಹೋತಿ' ಈ ಮಂತ್ರವು ಅಗ್ನಿಪ್ರತಿಪಾದಕವಾಗಿದೆ. ಮತ್ತು ಅಗ್ನಿಶಬ್ದ ಘಟಿತವಾಗಿದೆ. ಈ ಮಂತ್ರದಿಂದ ಯಾಗವನ್ನು ಆಚರಿಸುವುದರಿಂದ ಆ ಯಾಗಕ್ಕೆ ಅಗ್ನಿಹೋತ್ರ ಎಂದು ಹೆಸರು. ಹೀಗೆ ಅಗ್ನಿಹೋತ್ರಶಬ್ದವು ನಾಮಧೇಯವಾದ್ದರಿಂದ 'ತತ್ಪ್ರಖ್ಯಂ ಚಾನ್ಯಶಾಸ್ತ್ರಂ' ಎಂಬ ನಾಮಧೇಯಪಾದದ ಮೂರನೆಯ ಅಧಿಕರಣದಲ್ಲಿ ಉದಾಹರಿಸಲ್ಪಟ್ಟಿದೆ. ಅದರಂತೆ ಶಬ್ದಾಂತರಪಾದದಲ್ಲಿಯೂ ಸಹ 'ಅಗ್ನಿಹೋತ್ರಂ ಜುಹೋತಿ' ಎಂಬುದು ವಿಷಯವಾಕ್ಯವಾಗಿದೆ. ಅದು ಹೀಗೆ - 'ಯ ಏವಂ ವಿದ್ವಾನ್ ಅಮಾವಾಸ್ಯಾಯಾಂ ಯಜತೇ ಯ ಏವಂ ವಿದ್ವಾನ್ ಪೌರ್ಣಮಾಸ್ಯಾಂ ಯಜತೇ' ಎಂಬ ಶ್ರುತಿ-ಯಲ್ಲಿರುವ ಅಮಾವಾಸ್ಯಾ ಹಾಗೂ ಪೌರ್ಣಮಾಸೀ ಶಬ್ದಗಳು ಆರು ಯಾಗಗಳನ್ನು ಎರಡು ಭಾಗ ಮಾಡಿ ಯಾಗಸಮುದಾಯವನ್ನು ಅನುವಾದ ಮಾಡುತ್ತಿವೆ. ಇದರಂತೆ ಪ್ರಕೃತ ಅಗ್ನಿಹೋತ್ರಶಬ್ದವು 'ದಧ್ನಾ ಜುಹೋತಿ' ಇತ್ಯಾದಿ ವಾಕ್ಯಗಳಿಂದ ಪ್ರಾಪ್ತವಾದ ಅನೇಕ ಯಾಗಗಳ ಸಮುದಾಯವನ್ನು ಅನುವಾದ ಮಾಡಿ ಹೊಸದೊಂದು ಯಾಗವನ್ನು ವಿಧಿಸುತ್ತಿದೆ ಎಂಬ ಶಂಕೆಯನ್ನು ಎರಡನೆ ಅಧ್ಯಾಯದ ಎರಡನೇ ಪಾದದ ಪಂಚಮಾಧಿಕರಣದಲ್ಲಿ ನಿರಾಕರಿಸಿದ್ದಾರೆ. ಈ ನಿರಾಕರಣೆಗೋಸ್ಕರ ಅಗ್ನಿಹೋತ್ರಶಬ್ದವು ವಿಷಯ-ವಾಕ್ಯವಾಗಿದೆ. ಹೀಗೆ ಒಂದೇ ಅಗ್ನಿಹೋತ್ರಶಬ್ದವು ಆಕಾರಭೇದದಿಂದ ನಾಮಧೇಯಪಾದದಲ್ಲಿ ಮತ್ತು ಶಬ್ದಾಂತರಪಾದದಲ್ಲಿ ವಿಷಯವಾದಂತೆ ಒಂದೇ ಇಂದ್ರಶಬ್ದವು ಅಂತರಧಿಕರಣದಲ್ಲಿ ಮತ್ತು ಆಕಾಶಾಧಿ-ಕರಣದಲ್ಲಿ ಆಕಾರಭೇದದಿಂದ ವಿಷಯವಾಗಬಹುದು.

ಉತ್ತರಮೀಮಾಂಸೆಯ ದೃಷ್ಟಾಂತವೂ ಇದೆ. ''ಇತರವ್ಯಪದೇಶಾತ್ ಹಿತಾಕರಣಾದಿದೋಷಪ್ರಸಕ್ತಿಃ'' ಎಂಬ ಸೂತ್ರದಲ್ಲಿ ಜೀವಕರ್ತೃತ್ವವನ್ನು ಹೇಳುವ 'ಜೀವಾದ್ಭವಂತಿ ಭೂತಾನಿ' ಎಂಬ ಶ್ರುತಿಯನ್ನು ಉದಾಹರಿಸಿದ್ದಾರೆ. 'ಜೀವಃ ಜಗತ್ಕರ್ತಾ ಚೇತನತ್ವಾತ್ ವಿಷ್ಣುವತ್' ಎಂಬ ಯುಕ್ತಿಯಿಂದ ಜೀವನಲ್ಲಿ ಜಗತ್ಕರ್ತೃತ್ವವು ಪ್ರಾಪ್ತವಾಗುತ್ತದೆ. ಈ ಯುಕ್ತಿಗೆ 'ಜೀವಾದ್ ಭವಂತಿ ಭೂತಾನಿ' ಎಂಬ ಶ್ರುತಿಯ ಸಂವಾದವಿದೆ. ಹೀಗೆ ಶ್ರುತಿಸಂವಾದಿಯಾದ ಯುಕ್ತಿಯಿಂದ ಪ್ರಾಪ್ತವಾದ ಜೀವಕರ್ತೃತ್ವವನ್ನು ನಿರಾಕರಿಸಲು ಇತರವ್ಯಪದೇಶಾಧಿಕರಣವು ಹೊರಟಿದೆ. ಎರಡನೇ ಅಧ್ಯಾಯದ ಯುಕ್ತಿಪಾದದ ಏಳನೇ ಅಧಿಕರಣದಲ್ಲಿ ಜೀವಾದ್ಭವಂತಿ ಇತ್ಯಾದಿ ಶ್ರುತಿಯು ವಿಷಯವಾಕ್ಯವಾಗಿ ಪ್ರಾಪ್ತವಾಗಿದ್ದರೂ ಸಹ ಪುನಃ 'ಅನ್ಯಥಾನುಮಿತೌ ಚ ಜ್ಞಶಕ್ತಿವಿಯೋಗಾತ್' ಎಂಬ ಎರಡನೇ ಅಧ್ಯಾಯದ ಸಮಯಪಾದದ ಐದನೇ ಅಧಿಕರಣದಲ್ಲಿಯೂ

ವಿಷಯವಾಕ್ಯವಾಗಿ ಪ್ರಾಪ್ತವಾಗಿದೆ. ಪುರುಷನೇ ಜಗತ್ತಿಗೆ ಕರ್ತೃ, ಪ್ರಕೃತಿಯು ಉಪಸರ್ಜನವಾಗಿರುತ್ತದೆ ಎಂಬ ಮತವನ್ನು ನಿರಾಕರಣೆ ಮಾಡುವುದಕ್ಕೋಸ್ಕರ ಈ ವಾಕ್ಯವನ್ನು ಪುನಃ ಉದಾಹರಿಸಿದ್ದಾರೆ.

ಇದನ್ನೇ 'ಇತರವ್ಯಪದೇಶಾತ್' ಎಂಬ ಸೂತ್ರದ ಟೀಕೆಯಲ್ಲಿ ಹೀಗೆ ಹೇಳಿದ್ದಾರೆ. - "ಅತ್ರ ಜೀವಾದ್ಭವಂತಿ ಭೂತಾನಿ ಇತಿ ಶ್ರುತಿಪ್ರಾಪ್ತೋ ಜೀವಕರ್ತೃತ್ವಪಕ್ಷೋ ನಿರಾಕ್ರಿಯತೇ । ಉತ್ತರತ್ರ ತು ಸಮಯಪ್ರಾಪ್ತಃ ಇತ್ಯರ್ಥಭೇದಃ (ಇತರವ್ಯಪದೇಶಾಧಿಕರಣದಲ್ಲಿ ಜೀವಾದ್ಭವಂತಿ ಭೂತಾನಿ ಎಂಬ ಶ್ರುತಿಯಿಂದ ಪ್ರಾಪ್ತವಾದ ಜೀವಕರ್ತೃತ್ವಪಕ್ಷವನ್ನು ನಿರಾಕರಿಸಿದ್ದಾರೆ. ಮುಂದೆ ಸಮಯಪ್ರಾಪ್ತವಾದ ಜೀವಕರ್ತೃತ್ವಪಕ್ಷವನ್ನು ನಿರಾಕರಿಸಿದ್ದಾರೆಂಬ ಅರ್ಥಭೇದವಿದೆ)''. ಇಲ್ಲಿ ಯಾವ ರೀತಿಯಾಗಿ ಒಂದೇ ವಿಷಯವಾಕ್ಯವು ಎರಡು ಅಧಿಕರಣಗಳಲ್ಲಿ ಆಕಾರಭೇದದಿಂದ ಪ್ರಸಕ್ತವಾಗಿದೆಯೋ ಅದೇ ರೀತಿಯಾಗಿ ಪ್ರಕೃತದಲ್ಲಿಯೂ ಒಂದೇ ಇಂದ್ರಶಬ್ದವು ಎರಡು ಅಧಿಕರಣಗಳಲ್ಲಿ ವಿಷಯವಾಗಬಹುದು.

ಮತ್ತು ಇದೇ ಆಕಾಶಶಬ್ದವು ಈ ಅಧಿಕರಣದಲ್ಲಿ ವಿಷಯವಾದಂತೆ ಮೂರನೇ ಪಾದದ 'ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್' ಎಂಬ ಹನ್ನೆರಡನೆಯ ಅಧಿಕರಣದಲ್ಲಿಯೂ ವಿಷಯ-ವಾಗಿದೆ.

'ವಿವರಾದಿಃ ಕಥಂ ತತಃ ಇತಿ ಶಂಕಾನಿವೃತ್ತ್ಯರ್ಥಂ ಆಕಾಶ ಇತಿ ನಾಮ ಚ ।
ಪರತೋಽಪಿ ವರೀಯಸ್ತ್ವಪೂರ್ವಾಲ್ಲಿಂಗಾದ್ಧರೇರ್ಭವೇತ್'

ವಿವರತ್ವಾದಿಗಳು ಭಗವಂತನ ಅಧೀನಗಳು ಹೇಗಾಗುತ್ತವೆ? ಎಂಬ ಶಂಕೆಯನ್ನು ನಿರಾಕರಣೆ ಮಾಡುವುದಕ್ಕಾಗಿ ಆಕಾಶ ಎಂಬ ನಾಮವನ್ನು ಪರೋವರೀಯಸ್ತ್ವಲಿಂಗದಿಂದ ಭಗವಂತನಲ್ಲಿ ಸಮನ್ವಯ ಮಾಡಲಾಗಿದೆ. ಈ ಅನುವ್ಯಾಖ್ಯಾನ ಶ್ಲೋಕದಲ್ಲಿ 'ನಾಮ' ಎಂಬ ಪದವನ್ನು ಉಲ್ಲೇಖಿಸಿದ್ದಾರೆ. ಇದರಿಂದ ತಿಳಿಯುವ ಶಂಕೆಯೊಂದನ್ನು 'ಅಪರಾ ತು' ಇತ್ಯಾದಿ ವಾಕ್ಯದಿಂದ ವಿವರಿಸಿದ್ದಾರೆ. ಹಿಂದಿನ ಅಧಿಕರಣದಲ್ಲಿ ಹೇಳಿದಂತೆ ಇಂದ್ರಾದಿಶಬ್ದಗಳು ವಿಷ್ಣುಪರವಾಗಬಹುದು. ಆದರೆ ಈ ಅಧಿಕರಣದಲ್ಲಿ ಹೇಳುತ್ತಿರುವ ಆಕಾಶಾದಿಶಬ್ದಗಳು ವಿಷ್ಣುಪರವಾಗುವುದು ಸಾಧ್ಯವಿಲ್ಲ. ಈ ವಿಷಯದಲ್ಲಿ ಮೂರು ಹೇತುಗಳನ್ನು ದೃಷ್ಟಾಂತಪೂರ್ವಕವಾಗಿ 'ಶ್ಯೇನ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

'ಶ್ಯೇನೇನ ಅಭಿಚರನ್ ಯಜೇತ' (ಶ್ಯೇನಯಾಗದಿಂದ ಶತ್ರುವಧೆಯನ್ನು ಬಯಸುವವನು ಯಾಗ ಮಾಡಬೇಕು) ಈ ಶ್ರುತಿಯನ್ನು ನೋಡಿದಾಗ ಶ್ಯೇನಪಕ್ಷಿಯನ್ನು ದ್ರವ್ಯವನ್ನಾಗಿ ಮಾಡಿಕೊಂಡು ಯಾಗ ಮಾಡಬೇಕೋ? ಅಥವಾ ಶ್ಯೇನವೆಂಬುದು ಕೇವಲ ಯಾಗದ ಹೆಸರೋ? ಎಂದು ಸಂಶಯ ಬರುತ್ತದೆ. ಶ್ಯೇನಪದವು ದ್ರವ್ಯಪರವೆಂದು ಪೂರ್ವಪಕ್ಷ. ಯಾಗಪರವೆಂದು ಸಿದ್ಧಾಂತ.

ಯಾಗಪರವೆಂದು ಏಕೆ ಹೇಳಬೇಕೆಂದರೆ ಶ್ಯೇನಶಬ್ದವು ತೃತೀಯಾವಿಭಕ್ತ್ಯಂತವಾಗಿ ನಿರ್ದಿಷ್ಟವಾಗಿದೆ. ಈ ಶ್ಯೇನಶಬ್ದವು ಶ್ಯೇನಪಕ್ಷಿಯಲ್ಲಿ ರೂಢವಾಗಿದ್ದರೂ ಸಹ ಯಾಗಶಬ್ದದಿಂದ ಸಮಾನಾಧಿಕರಣವಾಗಿದೆ. 'ಯಜೇತ' ಎಂಬಲ್ಲಿ ಈತಪ್ರತ್ಯಯಕ್ಕೆ ಭಾವನಾ ಎಂದರ್ಥ. ಭಾವನಾದಲ್ಲಿ ಕರಣವಾಗಲು ಸಮರ್ಥ-ವಾದದ್ದು ಯಾಗ. ಈ ಯಾಗವನ್ನು ಯಜ್ ಧಾತುವು ಪ್ರತಿಪಾದಿಸುತ್ತದೆ. ಈ ಯಜ್‌ಧಾತುವಿನ

ವಿಭಕ್ತಿಯಲ್ಲಿಯೇ ಶ್ಯೇನ ಶಬ್ದವೂ ಪ್ರಯುಕ್ತವಾಗಿದೆ. ಅಂದರೆ 'ಶ್ಯೇನೇನ ಯಾಗೇನ (ಶತ್ರುವಧಂ) ಭಾವಯೇತ್' (ಶ್ಯೇನ ಯಾಗದಿಂದ ಶತ್ರುವಧೆಯನ್ನು ಹೊಂದಬಹುದು) ಎಂದು ಶ್ರುತಿಯ ಅರ್ಥ. ಹೀಗೆ ಸಾಮಾನಾಧಿಕರಣ್ಯದ ಜೊತೆಗೆ ವಾಕ್ಯಶೇಷದ ಸಂವಾದವೂ ಇದೆ. 'ಯಥಾ ವೈ ಶ್ಯೇನೋಽಯಂ ನಿಪತ್ಯಾದತ್ತೇ' (ಯಾವ ರೀತಿಯಾಗಿ ಶ್ಯೇನಪಕ್ಷಿಯು ಒಂದೇ ಬಾರಿಗೆ ಹಾರಿ ಶತ್ರುಗಳನ್ನು ನಾಶ ಮಾಡುತ್ತದೋ, ಅದೇ ರೀತಿಯಾಗಿ ಯಾಗವೂ ಸಹ ಶತ್ರುವಧೆಯನ್ನು ಮಾಡುತ್ತದೆ) ಎಂದು ವಾಕ್ಯಶೇಷವಿದೆ. ಹೀಗೆ ಶತ್ರುವಧ ಉಪಾಯತ್ವವೆಂಬ ಗುಣದ ಯೋಗದಿಂದ ಶ್ಯೇನಪದವು ಯಾಗಪರ-ವೆಂದು ತಿಳಿಯಬೇಕು.

ಅದೇ ರೀತಿಯಾಗಿ ಇಂದ್ರಶಬ್ದಕ್ಕೂ ಮತ್ತು ವಿಷ್ಣುಶಬ್ದಕ್ಕೂ ಸಾಮಾನಾಧಿಕರಣ್ಯ ಇರುವುದರಿಂದ ಇಂದ್ರಶಬ್ದವು ವಿಷ್ಣುಪರವೆಂದು ತೀರ್ಮಾನಿಸಬಹುದು. 'ಮತ್ಸಿ ಸೋಮಂ ವರುಣಂ ಮತ್ಸಿ ಮಿತ್ರಂ ಮತ್ಸೀಂದ್ರಮಿಂದೋ ಪವಮಾನ ವಿಷ್ಣುಂ'' (ಎಲೈ ಪವಮಾನನೇ ! ಸೋಮನನ್ನು ಸಂತೋಷಪಡಿಸು, ವರುಣನನ್ನು ಸಂತೋಷಪಡಿಸು, ಮಿತ್ರನನ್ನು ಸಂತೋಷಪಡಿಸು, ಇಂದ್ರನಾದ ವಿಷ್ಣುವನ್ನು ಸಂತೋಷ-ಪಡಿಸು) ಈ ಶ್ರುತಿಯಲ್ಲಿ ಇಂದ್ರಹಾಗೂ ವಿಷ್ಣುಶಬ್ದಗಳು ಸಮಾನಾಧಿಕರಣವಾಗಿ ಪ್ರಯೋಗಿಸಲ್ಪಟ್ಟಿವೆ. ಸಾಮಾನಾಧಿಕರಣ್ಯವಿದ್ದಲ್ಲಿ ಅಭೇದವನ್ನು ಹೇಳಬೇಕಾದ್ದರಿಂದ ಇಂದ್ರನನ್ನು ವಿಷ್ಣು- ವೆಂದು ಸುಲಭವಾಗಿ ತಿಳಿಯಬಹುದು.

ಅಷ್ಟೇ ಅಲ್ಲದೇ 'ಯೋ ದೇವಾನಾಂ' ಎಂಬ ಶ್ರುತಿಯು ಸಕಲದೇವತೆಗಳ ನಾಮವನ್ನು ವಿಷ್ಣುಪರ-ವೆಂದು ಸಮರ್ಥಿಸುತ್ತದೆ. ಈ ಶ್ರುತಿಯಲ್ಲಿ ಮತ್ಸಿ (ಸಂತೋಷಪಡಿಸು) ಎಂಬ ಪದವನ್ನು ವಿಷ್ಣುಪದದ ಜೊತೆಗೆ ಪ್ರತ್ಯೇಕವಾಗಿ ಅನ್ವಯ ಮಾಡಿಕೊಂಡಾಗ ಸಾಮಾನಾಧಿಕರಣ್ಯವು ಅಸಿದ್ಧವಾಗುತ್ತದಲ್ಲವೆ? ಎಂದು ಶಂಕಿಸಬಾರದು. ಹಾಗಾದಲ್ಲಿ ವರುಣಾದಿಶಬ್ದಗಳ ಜೊತೆಗೆ ಪ್ರತ್ಯೇಕ ಪ್ರತ್ಯೇಕವಾಗಿ ಮತ್ಸಿ ಶಬ್ದವನ್ನು ಹೇಳಿದಂತೆ 'ಇಂದ್ರಂ ಮತ್ಸಿ' 'ವಿಷ್ಣುಂ ಮತ್ಸಿ' ಎಂದು ಶ್ರುತಿಯೇ ಹೇಳಬೇಕಿತ್ತು. ಪ್ರತಿಯೊಬ್ಬರಿಗೂ ಶ್ರುತಿಯು ಪ್ರತ್ಯೇಕವಾಗಿ 'ಮತ್ಸಿ' ಎಂದು ಹೇಳಿ ವಿಷ್ಣುವಿಗೆ ಮಾತ್ರ 'ಮತ್ಸಿ' ಶಬ್ದವನ್ನು ಹೇಳಿಲ್ಲ. ಇದರಿಂದ ಇಂದ್ರನನ್ನೇ ವಿಷ್ಣುವೆಂದು ತಿಳಿಯಬೇಕು. ಇಲ್ಲವಾದರೆ ಅಶ್ರುತಕಲ್ಪನಾದೋಷವೂ ಸಹ ಬರುತ್ತದೆ.

ಅಷ್ಟೇ ಅಲ್ಲದೆ ಮುಂದೆ ಶ್ರುತಿಯಲ್ಲಿ 'ಮತ್ಸಿ ಮಹಾಮಿಂದ್ರವಿಂದೋ ಮದಾಯ' ಎಂದು ಇಂದ್ರನನ್ನು ಪ್ರತ್ಯೇಕವಾಗಿ ಮತ್ಸಿ ಎಂದು ಶ್ರುತಿಯು ಹೇಳುತ್ತಿದೆ. ಹೀಗಿರುವಾಗ ಮೊದಲೇ ಇಂದ್ರನನ್ನು ಮತ್ಸಿ ಎಂದು ಹೇಳಿ ಪುನಃ ಮುಂದೆ ಅದೇ ಇಂದ್ರನನ್ನು ಮತ್ಸಿ ಎಂದು ಹೇಳಿದರೆ ಪುನರುಕ್ತಿ ಬರುವುದಿಲ್ಲವೇ? ಮುಂದಿನ ಶ್ರುತಿಯಲ್ಲಿ ಮಹಾಶಬ್ದ ಇರುವುದರಿಂದ ಅದು ವಿಷ್ಣುಪರವೆಂದು ಶಂಕಿಸಬಾರದು. ಪುರಂದರನೇ ಮಹೇಂದ್ರ ಎಂದು ಕರೆಸಿಕೊಳ್ಳುತ್ತಾನೆ. ಅದಿತಿ ಪುತ್ರರಲ್ಲಿ ಅಗ್ರಜನು ಪುರಂದರನು. ವಿಷ್ಣುವು ಅನುಜನಾಗಿದ್ದಾನೆ. ಅಗ್ರಜನಾದ್ದರಿಂದ ಪುರಂದರನೇ ಮಹೇಂದ್ರನೆನಿಸುತ್ತಾನೆ. ವಿಷ್ಣುವು ಉಪೇಂದ್ರನೆನಿಸುತ್ತಾನೆ. (ಕುಲಪತಿ ಉಪಕುಲಪತಿಗಳಂತೆ ಪುರಂದರನು ಇಂದ್ರ, ವಿಷ್ಣು ಉಪೇಂದ್ರ). ಇದರ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಐತರೇಯಭಾಷ್ಯದಲ್ಲಿ ತಿಳಿಯಬೇಕು. ಮೂರನೇ ಹೇತುವನ್ನು ದೃಷ್ಟಾಂತಪುರಃಸರವಾಗಿ 'ಉತ್ಪತ್ತಿಶಿಷ್ಟ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

## 'ಫಲಚಮಸೋ ನೈಮಿತ್ತಿಕೋ ಭಕ್ಷವಿಕಾರಃ ಶ್ರುತಿಸಂಯೋಗಾತ್' (೩-೫- ಉಪಾಂತ್ಯ)

ವಿಷಯವಾಕ್ಯ - ಯದಿ ರಾಜನ್ಯಂ ವೈಶ್ಯಂ ವಾ ಯಾಜಯೇತ್ ಸ ಯದಿ ಸೋಮಂ ಬಿಭಕ್ಷ-ಯಿಷೇತ್ ನ್ಯಗ್ರೋಧಸ್ತಿಭಿನೀರಾಹೃತ್ಯ ತಾಃ ಸಂಪಿಷ್ಯ ದಧನಿ ಸಂಮೃಜ್ಯ ತಮಸ್ಮೈ ಭಕ್ಷಂ ಪ್ರಯಚ್ಛೇತ್ ಸೋಮಂ' (ಕ್ಷತ್ರಿಯ ಅಥವಾ ವೈಶ್ಯನು ಒಂದು ವೇಳೆ ಯಾಗವನ್ನು ಮಾಡುವುದಾದರೆ ಅವರಿಬ್ಬರೂ ಒಂದು ವೇಳೆ ಸೋಮವನ್ನು ತಿನ್ನಲು ಅಪೇಕ್ಷೆ ಪಟ್ಟರೆ, ಅವರಿಬ್ಬರಿಗೆ ಸೋಮವನ್ನು ಕೊಡಬಾರದು ಹೊರತಾಗಿ ವಟವೃಕ್ಷದ ಸಣ್ಣ ಸಣ್ಣ ಫಲಗಳನ್ನು ತೆಗೆದುಕೊಂಡು ಅವುಗಳನ್ನು ಚೆನ್ನಾಗಿ ಅರೆದು ಮೊಸರಿನಲ್ಲಿ ಅವರಿಗೆ ಕೊಡಬೇಕು) ಈ ಶ್ರುತಿವಾಕ್ಯದಲ್ಲಿ ಕ್ಷತ್ರಿಯ ಮತ್ತು ವೈಶ್ಯರಿಗೆ ಸೋಮ-ವಿಕಾರವೆನಿಸಿದ ಫಲಚಮಸವನ್ನು ಕೊಡಬೇಕೆಂದು ಕೇಳಿಸುತ್ತಿದೆ. ಇದನ್ನು ನೋಡಿದಾಗ ಕ್ಷತ್ರಿಯ ಮತ್ತು ವೈಶ್ಯರಿಗೆ ಯಾವುದೇ ಪಕ್ಷದಲ್ಲಿಯೂ ಸಹ ಸೋಮವನ್ನು ಕೊಡಬಾರದೆಂದು ಅಭಿಪ್ರಾಯವೋ? ಅಥವಾ ಯಾಗಕಾಲದಲ್ಲಷ್ಟೇ ಸೋಮವನ್ನು ಕೊಡಬಾರದೆಂದೋ? ಎಂದು ಸಂಶಯ ಬರುತ್ತದೆ.

---

भाट्टसङ्ग्रहः –

**फलचमसो नैमित्तिको भक्षविकारः श्रुतिसंयोगात् ॥ ४७ ॥**
**(इज्याविकारो वा संस्कारस्य तदर्थत्वात् ॥ ४८ ॥ होमात् ॥ ४९ ॥ चमसैश्च तुल्यकालत्वात् ॥ ५० ॥ लिङ्गदर्शनाच्च ॥ ५१ ॥)**

पूर्वन्यायेनात्र शङ्कनात्सङ्गतिः । ज्योतिष्टोमे 'यदि राजन्यं वैश्यं वा याजयेत्, स यदि सोमं बिभक्षयिषेत् न्यग्रोधस्तिभिनीराहृत्य, ताः सम्पिष्य, दधनि संसृज्य तमस्मै भक्षरं प्रयच्छेत्, न सोमम्, इति राजन्यवैश्यनिमित्तः फलाख्यचमसः श्रुतः । **स्तिभिन्यो वटमुकुलानीत्येके । वटफलानीत्यन्ये ।** तत्र **सन्देहः**, फलचमसो भक्षमात्रे सोमविकारः सन् सोमं बाधते, अथ यागसाधनमपि सोमं विकुर्वंस्तं बाधित्वा यागसाधनत्वेनापि स्वयं निविशत इति । बिभक्षयिषेत्, इत्युपक्रमात् 'भक्षं प्रयच्छेत्' इत्युपसंहारात्तत्रैव विकारो भूत्वा सोमं बाधते, नेज्यायामपीति, पूर्वत्र होतुरिव राजन्यवैश्ययोरपि सोमभक्षापनय इति **प्राप्तम्** । तदाह सूत्रे, **नैमित्तिकः फलचमसो भक्षविकार** एव । 'भक्षं प्रयच्छेत्' इति **श्रुत्या** भक्षेणैव **संयोगा**दिति । अनिज्यासाधनस्य भक्षरूप-प्रतिपत्तिसम्बन्धायोगाद् यागद्रव्यसोमविकारः सन् फलचमसो यागसाधनसोमद्रव्यं बाधित्वा स्वयं साधनत्वेन निविशत इति यागविकारो, न भक्षमात्रविकार इति **सिद्धान्तः** । तदाह सूत्रे, **इज्याविकारो वा संस्कारस्य तदर्थत्वा**दिति । **फलन्तु**, यागविकारः फलचमस इति व्यक्तम् ।

इत्यष्टादशं फलचमसस्येज्याविकारताधिकरणम् (सूत्राणि ४७-५१)

ವಾಗುವಂತೆ ಮಾಡಲು ಸಮರ್ಥವಾಗಿದ್ದಾನೆ. ಆದರೆ ಆ ರೀತಿಯಾದ ಇಚ್ಛೆಯನ್ನು ಮಾಡದ ಕಾರಣ ಆಕಾಶವು ನಿಬಿಡವಾಗುವುದಿಲ್ಲ.

ಔಷಧಾದಿವಶಾಲ್ಲೋಕೇ ತಾಮ್ರಾದೇರಪ್ಯತಾಮ್ರತಾಮ್
ಕುರ್ವನ್ನೀಶಾಸ್ತು ನೇಷ್ಟೇ ಕಿಂ ಛಿದ್ರಸ್ಯಾಚ್ಛಿದ್ರತಾಕೃತೇಃ ॥

ಲೋಕದಲ್ಲಿ ಜಡವಾದ ಔಷಧವೇ ತಾಮ್ರವನ್ನು ಬೆಳ್ಳಿಯನ್ನಾಗಿಸುತ್ತದೆ. ಹೀಗಿರುವಾಗ ಸರ್ವ-ಸಮರ್ಥನಾದ ಈಶ್ವರನಿಗೆ ಛಿದ್ರರೂಪವಾದ ಆಕಾಶವನ್ನು ನಿಬಿಡರೂಪವಾಗಿ ಮಾಡಲು ಸಾಧ್ಯವಿಲ್ಲವೇನು?

ಆದ್ದರಿಂದ ಭಗವಂತನು ಅಚೇತನಸ್ವಭಾವವನ್ನು ವ್ಯತ್ಯಾಸ ಮಾಡದಿದ್ದರೂ ವ್ಯತ್ಯಾಸ ಮಾಡಲು ಸಮರ್ಥನಾಗಿದ್ದಾನೆ (ಅನ್ಯಥಾಕರ್ತುಂ ಸಮರ್ಥನಾಗಿದ್ದಾನೆ). ಈ ಕಾರಣದಿಂದ ಆಕಾಶದಲ್ಲಿ ಯಥೇಷ್ಟವಿನಿಯೋಗಾರ್ಹತೆಯು ಬಂದೇ ಬರುತ್ತದೆ. (ಆಕಾಶವು ಭಗವಂತನಿಂದ ಛಿದ್ರರೂಪ-ವನ್ನಾಗಲೀ, ನಿಬಿಡರೂಪವನ್ನಾಗಲೀ ಹೊಂದಲು ಯೋಗ್ಯವಾಗಿದೆ). ಶ್ರುತಿಸ್ಮೃತಿಗಳೂ ಸಹ ಜಡಸ್ವಭಾವವು ಈಶ್ವರಾಧೀನವೆಂದೇ ಕೂಗಿ ಹೇಳುತ್ತಿವೆ.

ಸ್ಯಂದಂತೇ ಶಾಸನಾನ್ನದ್ಯೋ ಭೀಷಾಸ್ಮಾತ್ ಪವತೇಽನಿಲಃ ।
ನಭೋ ದದಾತಿ ಶ್ವಸತಾಂ ಮಾರ್ಗಮಿತ್ಯಾದಿಕಾಶ್ಚ ತಾಃ ॥

ಭಗವಂತನ ಆಜ್ಞೆಯಿಂದ ನದಿಗಳು ಹರಿಯುತ್ತಿವೆ. ಭಗವಂತನಿಗೆ ಹೆದರಿ ಗಾಳಿಯು ಬೀಸುತ್ತಿದೆ. ಮತ್ತು ಆಕಾಶವೂ ಸಹ ಪ್ರಾಣಿಗಳಿಗೆ ಮಾರ್ಗವನ್ನು ನೀಡುತ್ತಿದೆ. ಹೀಗೆ ಹಲವು ಶ್ರುತಿಗಳು ಅಚೇತನಸ್ವಭಾವವನ್ನು ಭಗವದಧೀನವೆನ್ನುತ್ತಿವೆ.

ಆಕಾಶಶಬ್ದಕ್ಕೆ ಯೋಗಾರ್ಥವನ್ನೇ ಹೇಳಲು ಬರುವಾಗ ರೂಢ್ಯರ್ಥವನ್ನು ಹೇಳಬೇಕಾಗಿಲ್ಲ. ಈ ವಿಷಯದಲ್ಲಿ ಪೂರ್ವಮೀಮಾಂಸೆಯ ದೃಷ್ಟಾಂತ ಹೀಗಿದೆ - 'ಸ್ರುವೇಣ ಪಾರ್ವಣೋ ಹೋಮೌ' ಈ ಶ್ರುತಿಯ ಬಗ್ಗೆ ಪೂರ್ವಮೀಮಾಂಸೆಯ ಒಂಬತ್ತನೆಯ ಅಧ್ಯಾಯದಲ್ಲಿ ವಿಚಾರ ಮಾಡಿದ್ದಾರೆ. ಶ್ರುತಿಯಲ್ಲಿರುವ ಪರ್ವಶಬ್ದಕ್ಕೆ ಪೂರ್ವಪಕ್ಷಕಾರರು ಪ್ರೀಯತೇ = ದೀಯತೇ ಅಸ್ಮಿನ್ನಿತಿ ಎಂದು ಅಧಿಕರಣ ವ್ಯುತ್ಪತ್ತಿಯನ್ನು ಮಾಡಿ ದರ್ಶಾದಿಕಾಲವೆಂಬ ಅರ್ಥವನ್ನು ಅಂಗೀಕರಿಸಿದ್ದಾರೆ. ಸಿದ್ಧಾಂತ-ದಲ್ಲಿಯೂ ಸಹ ಭಾವಾರ್ಥವನ್ನು ಅಂಗೀಕರಿಸಿ ಕರ್ಮವೆಂಬ ಅರ್ಥವನ್ನು ಅಂಗೀಕರಿಸಿದ್ದಾರೆ. ಅಂತೂ ಪೂರ್ವಪಕ್ಷದಲ್ಲಾಗಲೀ ಸಿದ್ಧಾಂತದಲ್ಲಾಗಲೀ ರೂಢ್ಯರ್ಥವನ್ನು ಅಂಗೀಕರಿಸದೆ ಯೋಗಾರ್ಥವನ್ನೇ ಒಪ್ಪಿದ್ದಾರೆ.

ಇದರಂತೆ ಪ್ರಕೃತದಲ್ಲಿಯೂ ಸಹ ಆಕಾಶನಂ ಎಂಬ ವ್ಯುತ್ಪತ್ತಿಯಿಂದ ಆಕಾಶಶಬ್ದವನ್ನು ನಿಷ್ಪನ್ನ-ಗೊಳಿಸಬೇಕು. ಆವಾಗ ಭೂತಾಕಾಶದಲ್ಲಿ ಯೋಗವೃತ್ತಿಯಿಂದಲೇ ಆಕಾಶಶಬ್ದವನ್ನು ಪ್ರಯೋಗಿಸಿ-

ದಂತಾಗುತ್ತದೆ. ಸುಧೆಯಲ್ಲಿ ಹೇಳಿದಂತೆ ಯೌಗಿಕವಾದ ಆಕಾಶಶಬ್ದದ ಪ್ರವೃತ್ತಿನಿಮಿತ್ತವು ಆಕಾಶದಲ್ಲಿ ಇದೆ. ಪ್ರವೃತ್ತಿನಿಮಿತ್ತವಾದ ಈ ವಿವರತ್ವವು (ಅವಕಾಶಪ್ರದತ್ವವು) ಭಗವದಧೀನವಾಗಿದೆ. ಆದ್ದರಿಂದ ಆಕಾಶಶಬ್ದವು ಭೂತಾಕಾಶದಲ್ಲಿ ಯೋಗವೃತ್ತಿಯಿಂದ ಇರುತ್ತದೆ. ಭಗವಂತನಲ್ಲಿ ಮಹಾಯೋಗ-ವೃತ್ತಿಯಿಂದ ಇರುತ್ತದೆ ಎಂಬ ಅಂಶವನ್ನು ಸ್ಪಷ್ಟವಾಗಿ ತಿಳಿಯಬೇಕು. ಆಕಾಶದಲ್ಲಿರುವ ವಿವರತ್ವವು ಭಗವದಧೀನವೆಂದಷ್ಟೇ ಅಲ್ಲ, ಭಗವಂತನಲ್ಲಿಯೂ ಸಹ ಅಪರಿಚ್ಛಿನ್ನವಾಗಿ ವೃತ್ತಿಯಾಗಿದೆ. ಪರಿಚ್ಛಿನ್ನವಾದ ಆಕಾಶಶಬ್ದದಲ್ಲಿರುವ ವಿವರತ್ವವು ಪರಿಚ್ಛಿನ್ನರೂಪದಿಂದಷ್ಟೇ ಇರಲು ಸಾಧ್ಯ. ಆದರೆ ಅಪರಿಚ್ಛಿನ್ನನಾದ ಭಗವಂತನಲ್ಲಿ ವಿವರತ್ವವು ನಿರವಧಿಕವಾಗಿಯೇ ಇರುತ್ತದೆ. ಸರ್ವಭೂತ-ಗುಣೈರ್ಯುಕ್ತಃ (ಸಕಲಭೂತಪದಾರ್ಥಗಳ ಗುಣಗಳಿಂದ ಭಗವಂತನು ಕೂಡಿದ್ದಾನೆ) ಎಂಬ ಮಾತಿನಂತೆ ಅಪರಿಚ್ಛಿನ್ನವಾದ ವಿವರತ್ವವನ್ನು ಭಗವಂತನಲ್ಲಿ ಹೇಳಬಹುದು.

ಆದ್ದರಿಂದಲೇ ಸುಧೆಯಲ್ಲಿ ಹೀಗೆ ಹೇಳಿದ್ದಾರೆ -- 'ನ ಹಿ ದೇಶಕಾಲಾಭ್ಯಾಂ ಪರಿಚ್ಛಿನ್ನಸ್ಯಾವ-ಕಾಶದಾತೃತ್ವಂ ನಿರವಧಿಕಮ್' (ದೇಶಕಾಲಗಳಿಂದ ಪರಿಚ್ಛಿನ್ನವಾದ ಆಕಾಶಕ್ಕೆ ಅವಕಾಶಪ್ರದತ್ವ-ಗುಣವನ್ನು ಭಗವಂತನೇ ನೀಡಿದ್ದಾನೆ. ಅಷ್ಟೇ ಅಲ್ಲದೆ ಈ ಗುಣವು ಭಗವಂತನಲ್ಲಿ ನಿರವಧಿಕವಾಗಿ ಇದೆ), 'ಆಕಾಶಸ್ಯಾವಕಾಶದಾತೃತ್ವಸ್ಯೇಶ್ವರಾಯತ್ತತ್ವಮೀಶ್ವರಸ್ಯಾಪಿ ಪೃಥಕ್ ತದ್ವತ್ವಂ ಚ' (ಆಕಾಶ-ದಲ್ಲಿರುವ ಅವಕಾಶದಾತೃತ್ವವು ಭಗವದಧೀನವಾಗಿದೆ; ಮತ್ತು ಭಗವಂತನಲ್ಲಿಯೂ ಪ್ರತ್ಯೇಕವಾಗಿ ಆ ಗುಣವು ನಿರವಧಿಕವಾಗಿ ಇದೆ) ಎಂದು.

ಆದ್ದರಿಂದ ಪೂರ್ವಪಕ್ಷಿಯು ಅವಕಾಶಪ್ರದತ್ವವನ್ನು ಅಚೇತನಸ್ವಭಾವವೆಂದು ಹೇಳಿದ್ದು ಕೇವಲ ಅಭಿಮಾನದಿಂದ. ಸಿದ್ಧಾಂತದಲ್ಲಿ ವಿವರತ್ವವನ್ನು ಭಗವದಧೀನವೆಂದು ಸಮರ್ಥಿಸಿದ್ದು ಆಕಾಶದ ಸ್ವಭಾವಕ್ಕೂ ಸಹ ಭಗವಂತನು ನಿಯಾಮಕನಾಗಿದ್ದಾನೆಂಬ ಮಹಾಗುಣದ ಸಿದ್ಧಿಗೋಸ್ಕರ. ಇದರಿಂದ ಜಡವಾಚಕವಾದ ಸಕಲಶಬ್ದಗಳ ಸಮನ್ವಯವನ್ನು ಭಗವಂತನಲ್ಲಿ ಹೇಳಿದಂತಾಗುತ್ತದೆ. ಜಡಪದಾರ್ಥಗಳ ಸ್ವಭಾವಕ್ಕೆ ಭಗವಂತನು ನಿಯಾಮಕನಾದ್ದರಿಂದ ಉಳಿದ ಜಡವಾಚಕಪದಗಳ ಸಮನ್ವಯವು ಸುಲಭವಾಗುತ್ತದೆ. ಈ ಉದ್ದೇಶದಿಂದ ಪೂರ್ವಪಕ್ಷದಲ್ಲಿ ಅವಕಾಶಪ್ರದತ್ವವನ್ನು ಅಚೇತನಸ್ವಭಾವವೆಂದು ಕೃತ್ವಾಚಿಂತೆಯಿಂದ ಶಂಕಿಸಿ, ಸಿದ್ಧಾಂತದಲ್ಲಿ ಉತ್ತರಿಸಿದ್ದಾರೆ.

ವಸ್ತುತಸ್ತು, ಪ್ರವೃತ್ತಿನಿಮಿತ್ತವು ಭಗವಂತನಲ್ಲಿ ಮುಖ್ಯವಾಗಿರುವುದರಿಂದಲೇ ಆಕಾಶಾದಿಶಬ್ದಗಳ ಸಮನ್ವಯವನ್ನು ಮಾಡಬಹುದು. ಆದರೂ ಸಹ ಭೂತಸ್ವಭಾವವೆಂದು ಶಂಕಿಸಿ, ಭಗವ-ದಧೀನವೆಂದು ಪ್ರಯತ್ನಪಟ್ಟು ಸಿದ್ಧಾಂತ ಮಾಡಿದ್ದು ವ್ಯರ್ಥವಾಗುವುದಿಲ್ಲ. ಕೃತ್ವಾಚಿಂತೆಯಿಂದ ಹೀಗೆ ಶಂಕೆ ಸಮಾಧಾನಗಳನ್ನು ಮಾಡುವುದು ತಪ್ಪೇನಲ್ಲ. ಪೂರ್ವಮೀಮಾಂಸೆಯಲ್ಲಿಯೂ ಕೂಡ ಈ ತರಹದ ಕೃತ್ವಾಚಿಂತೆಗಳು ಕಾಣಸುತ್ತವೆ --

ಪೂರ್ವಮೀಮಾಂಸೆಯ ತೃತೀಯಾಧ್ಯಾಯದಲ್ಲಿ ಹೀಗೆ ವಿಚಾರ ಮಾಡಿದ್ದಾರೆ. -- 'ಇಂದ್ರ-ಪೀತಸ್ಯ' ಎಂಬ ಮಂತ್ರವನ್ನು ಮೈತ್ರಾವರುಣಾದಿಗಳ ಸೋಮಶೇಷದ ಭಕ್ಷಣದಲ್ಲಿ ವಸ್ತುತಃ ಊಹಿಸ-ಬೇಕಾಗಿಲ್ಲ. ಆದರೂ ಕೂಡ ಸಿದ್ಧಾಂತನ್ಯಾಯದ ಸಿದ್ಧಿಗೋಸ್ಕರ ಊಹವಿಷಯಕವಾದ ಅನೇಕ ಬಗೆಯ ಪೂರ್ವಪಕ್ಷಗಳನ್ನು ಅನೇಕ ಅಧಿಕರಣಗಳಲ್ಲಿ ಮಾಡಲಾಗಿದೆ. ಈ ಎಲ್ಲಾ ಅಧಿಕರಣಗಳು ಕೇವಲ ಕೃತ್ವಾಚಿಂತೆಯಿಂದಷ್ಟೇ ಹೊರಟಿವೆ. ಇದರಂತೆ ಪ್ರಕೃತದಲ್ಲಿಯೂ ಕೃತ್ವಾಚಿಂತೆಯಿಂದ ಪ್ರವೃತ್ತಿನಿಮಿತ್ತವು ಭೂತಸ್ವಭಾವವೆಂದು ಶಂಕಿಸಿ ಉತ್ತರಿಸಿದ್ದು ತಪ್ಪಲ್ಲ.

ಆಕಾಶಾಧಿಕರಣದ ಭಾಷ್ಯದಲ್ಲಿ ಆಕಾಶಶಬ್ದಕ್ಕೆ ಯೋಗವೃತ್ತಿಯನ್ನು ಶ್ರೀಮದಾಚಾರ್ಯರು ಹೇಳಿಲ್ಲ. ಆದರೆ ಬೇರೆಡೆ ಆಕಾಶಶಬ್ದದ ಯೋಗವೃತ್ತಿಯನ್ನು ಆಚಾರ್ಯರೇ ಹೇಳಿದ್ದಾರೆ -- 'ಆ-ಸಮಂತಾತ್ ಕಾಶತೇ' (ಎಲ್ಲೆಡೆ ಪ್ರಕಾಶಿಸುತ್ತದೆ) ಮತ್ತು 'ಆಸಮಂತಾತ್ ಕಂ ಅಶ್ನಾತಿ' (ಸಮಸ್ತ-ಸುಖವನ್ನು ತಿನ್ನುತ್ತದೆ) - ಎಂದು. ಇಲ್ಲಿ ಹೇಳದಿರಲು ಕಾರಣವೇನೆಂದರೆ ಪೂರ್ವಪಕ್ಷಿಗೆ ಅಭಿಮತ-ವಾದ ರೂಢ್ಯರ್ಥವನ್ನೇ ಬ್ರಹ್ಮನಲ್ಲಿ ಸಮನ್ವಯ ಮಾಡಬಹುದು.

ಆದ್ದರಿಂದ ಭೂತಪ್ರಸಿದ್ಧಿಯೆಂಬ ರೂಢ್ಯರ್ಥವೂ ಸಹ ಸಮನ್ವಯಕ್ಕೆ ಬಾಧಕವಾಗುವುದಿಲ್ಲ. ಈ ಅಭಿಪ್ರಾಯದಿಂದ ಭಾಷ್ಯದ ಮಾತುಗಳು ಹೊರಟಿವೆ. ಈ ಸಂದರ್ಭದಲ್ಲಿ ಯೋಗಾರ್ಥ ಹೇಳು-ವುದು ಅನುಪಯುಕ್ತವೇ ಆಗುತ್ತದೆ. ಆದ್ದರಿಂದಲೇ ವಿದ್ವದ್ರೂಢಿಯನ್ನೂ ಸಹ ಭಗವಂತನಲ್ಲಿ ಸಮರ್ಥಿಸಿದಂತಾಯಿತು. ವೈದಿಕವಾದ ಬಹುಲಪ್ರಯೋಗವೇ ಇದಕ್ಕೆ ಕಾರಣ. ಇದರಂತೆ ಮುಂದಿನ ಅಧಿಕರಣಗಳಲ್ಲಿಯೂ ವಿದ್ವದ್ರೂಢಿಯನ್ನು ಸಮರ್ಥಿಸಬೇಕು. ಆದ್ದರಿಂದ ಆಕಾಶಶಬ್ದವು ಬ್ರಹ್ಮನಲ್ಲಿಯೇ ಮುಖ್ಯವಾಗಿದೆ.

### ಕಠಿಣಪದಾರ್ಥ

ನಿಪಾತಬಲಾತ್ = ವೈ ಎಂಬ ಅವ್ಯಯದ ಬಲದಿಂದ; ತನ್ನಿರಾಸಃ = ಭೂತಾಕಾಶವನ್ನು ನಿರಾಕರಿಸಲಾಗಿದೆ; ಅತ್ರಾಪಿ = ಈ ಆಕಾಶಾಧಿಕರಣದಲ್ಲಿಯೂ; ತಸ್ಯ = ಹ, ವಾ, ಎಂಬ ನಿಪಾತಕ್ಕೆ; ಭೂತಸನ್ನಿಧಾನೇನ = ಭೂತಾನಿ ಎಂಬ ಪದದ ಹತ್ತಿರವಿರುವುದರಿಂದ; ತನ್ನಿರಾಸಃ = ಪರಮಮುಖ್ಯವೃತ್ತಿಯಿಂದ ಭೂತಾಕಾಶವನ್ನು ನಿರಾಕರಿಸಲಾಗಿದೆ; ಏತದಧಿಕರಣಾಭಾವೇ = ಪ್ರಥಮಪಾದದ ಆಕಾಶಾಧಿಕರಣವೇ ಇಲ್ಲವಾದರೆ; ಕ್ವಾಪಿ ವಾಕ್ಯೇ = ಬೇರೆ ಪಾದದಲ್ಲಿರುವ ಆಕಾಶಾಧಿಕರಣಗಳ ವಾಕ್ಯ-ದಲ್ಲಿ; ತೈಃ = 'ತದಧೀನತ್ವಾತ್' ಇತ್ಯಾದಿ ಸೂತ್ರಗಳಿಂದ; ಚಿದ್ಗತಸ್ಯ = ಸಕಲ-ಚೇತನನಿಷ್ಠವಾದ ಧರ್ಮವು; ಈಶತಂತ್ರತ್ವೇ = ಭಗವದಧೀನವಾದ ಮೇಲೆ; ಅಚಿದ್ಗತಸ್ಯ = ಸಕಲಜಡನಿಷ್ಠವಾದ ಧರ್ಮಗಳು; ತತ್ = ಈಶಾಧೀನವೆಂದು; ಸ್ಯಾದೇವ = ಆಗಲೇಬೇಕು; ಸ್ವಭಾವತ್ವಾತ್ = ಜಡದ ಸ್ವಭಾವವಾದ್ದರಿಂದ; ತದನಧೀನತ್ವಂ = ಭಗವದಧೀನವಾಗುವುದಿಲ್ಲವೆಂಬ; ಖಂ = ಆಕಾಶವು; ತದ್ವಶಾತ್ = ಭಗವಂತನ ಅಧೀನವಾಗಿ; ನಿಬಿಡಂ = ಘನವಾಗಿ/ದಟ್ಟವಾಗಿ; ಶರಾವಃ = ಮಣ್ಣಿನ

ಪಾತ್ರೆ; ನಿಹ್ನೂಯ = ಮರೆಮಾಚಿ; ಅತಾಮ್ರತಾಮ್ = ಬೆಳ್ಳಿ ಚಿನ್ನಮೊದಲಾದ ರೂಪಾಂತರವನ್ನು; ನೇಷ್ಟೇ ಕಿಮ್ = ಸಮರ್ಥನಲ್ಲವೇನು?; ಯಥೇಷ್ಟ-ವಿನಿಯೋಗಾರ್ಹತಾ = ಭಗವಂತನ ಇಚ್ಛೆಯಂತೆ ನಿಬಿಡರೂಪವನ್ನಾಗಲೀ ಛಿದ್ರರೂಪವನ್ನಾಗಲೀ ಹೊಂದುವ ಯೋಗ್ಯತೆಯು; ಸ್ಯಂದಂತೇ = ಹರಿಯುತ್ತವೆ; ಶಾಸನಾತ್ = ಅಪ್ಪಣೆಯಿಂದ; ಭೀಷಾಸ್ಮಾತ್ = ಹೆದರಿಕೆಯಿಂದ; ಪವತೇ = ಬೀಸುತ್ತದೆ; ಶ್ವಸತಾಂ = ಉಸಿರಾಡುವ ಸಕಲಪ್ರಾಣಿಗಳಿಗೆ; ಮಾರ್ಗಂ = ಅವಕಾಶವನ್ನು; ಪಾರ್ವಣೌ ಹೋಮೌ = ಹುಣ್ಣಿಮೆ ಹಾಗೂ ಅಮಾವಾಸ್ಯೆಯಲ್ಲಿ ಮಾಡುವ ಎರಡು ಹೋಮಗಳು; ಆಕಾಶನಂ = ಅವಕಾಶವುಳ್ಳದ್ದು; ಅಭಿಮಾನಮಾತ್ರೇಣ = ತಪ್ಪೆಂದು ಗೊತ್ತಿದ್ದರೂ ಪೂರ್ವಪಕ್ಷಿಯ ಅಭಿಪ್ರಾಯವನ್ನನುಸರಿಸಿ ಹೇಳಿದ್ದು; ಸ್ವಭಾವನಿಯಾಮಕತ್ವರೂಪಮಹಾಗುಣ-ಸಿದ್ಧ್ಯರ್ಥಂ = 'ಸಕಲಜಡಸ್ವಭಾವಗಳಿಗೆ ಭಗವಂತನೇ ನಿಯಾಮಕನಾಗಿದ್ದಾನೆ' ಎಂಬ ಮಹಾಗುಣದ ಸಿದ್ಧಿಗೋಸ್ಕರ; ಶಬ್ದಾಂತರಸಮನ್ವಯೇ = ಉಳಿದ ಜಡವಾಚಕಶಬ್ದಗಳ ಸಮನ್ವಯದಲ್ಲಿ; ಕೃತ್ವಾಚಿಂತಯಾ = ಶಂಕೆಗಳನ್ನು ಸ್ವತಃ ಊಹಿಸಿಕೊಂಡು; ಮೈತ್ರಾವರುಣಾದಿಶೇಷಭಕ್ಷಣೇ = ಮಿತ್ರ,ವರುಣ ಮೊದಲಾದ ದೇವತೆಗಳ ಹೋಮಶಿಷ್ಟವಾದ ಸೋಮರಸದ ಭಕ್ಷಣೆಯಲ್ಲಿ; ಆಸಮಂತಾತ್ = ಎಲ್ಲೆಡೆ; ಕಾಶತೇ = ಪ್ರಕಾಶಿಸುತ್ತದೆ; ಕಂ = ಸುಖವನ್ನು; ತದ್ಬಾಧೋऽಪಿ = ರೂಢಿಯಿಂದ ಬಾಧವನ್ನು ಸಹ; ಇಹ = ಈ ಆಕಾಶಾಧಿಕರಣದಲ್ಲಿ; ಅತ ಏವ = ಮಹಾಯೋಗ ಇರುವುದರಿಂದಲೇ;

**प्रकाशः** – न्यायभेदमन्तरेण पूर्वपक्षे प्रकारभेदमात्रेणाधिकरणभेदेऽतिप्रसङ्गाच्चेति भावेन न्यायभेदमाह – **आकाशोऽर्थान्तरत्वादीति** ॥ **विष्णुपरतां चेति** ॥ अन्यथोभयत्र प्रसिद्धता न स्यादिति भावः ॥ **निपातेति** ॥ अत्र तु श्रुतिबलादिति भावः ॥ **तन्निरास इति** ॥ एतच्च तत्रैव स्पष्टीकरिष्यत इति भावः ।

ननु न्यायभेदोऽसिद्धः, अत्रापि तत्रेव निपातस्य सत्त्वादित्याशङ्क्य निराह – **नचेति** ॥ **भूतेष्विति** ॥ यानि प्रसिद्धानि भूतानीत्यर्थोपपत्तेरित्यर्थः । तत्र चाकाशस्यैव "आकाशो वै नाम" इति सन्निधानमिति भावः ।

नन्वेवमपि चतुर्थपादीयाधिकरणे विषयवाक्ये निपातस्याभावेन विषयादिभेद-मात्रस्याधिकरणान्तरारम्भानापादकत्वेन च तत्राप्याकाशशब्दस्य भगवत्परत्वोक्तेस्तेन पौनरुक्त्यम् इत्यत आह – **कारणत्वेन चेति** ॥ **उभयमिति** ॥ प्रवृत्तिनिमित्तस्य भगवदधीनत्वम्, "इति होवाच" इत्यादौ आकाशशब्दस्य विष्णुपरत्वं चेत्युभय-मित्यर्थः ॥ **तन्निरास इति** ॥ 'परममुख्यवृत्त्या' इति शेषः। अपरमुख्यवृत्त्या

भूतपरत्वस्याङ्गीकारादित्यर्थः । वक्ष्यमाणानां प्रमेयमुक्त्वा, तद्वैलक्षण्यज्ञापनायै-तत्प्रतिपाद्यमाह – **इह त्विति** ॥ ततः किं सिद्धम्? इत्यत आह – **ततश्चेति** ॥

नन्वेवमपि द्वितीयाध्यायतृतीयपादाद्यधिकरणे आकाशस्य भगवदधीनतोक्ते-स्तत्सिद्धिरित्यत आह – **न वियदिति** ॥ **तैरिति** ॥ ''तदधीनत्वात्'' इत्यादिभि-रित्यर्थः ।

ननु तथाऽप्यन्तर्याम्यधिकरणे ''य आकाशे तिष्ठन्'' इत्युपक्रम्य ''य आकाशमन्तरो यमयत्येष त आत्मान्तर्याम्यमृतः'' इत्याकाशान्तर्यामित्वमुच्यते । अतस्तदधीनत्वं तत्र सिद्धम् । उक्तं चानुव्याख्याने –

**स्वात्मनाऽनियतं वस्तु प्रतीपं ह्यात्मनो भवेत् ।**
**स्वाधीनसत्ताशक्त्यादि कथमात्मप्रतीपकम् ॥**

इति – इति चेन्न,

सत्तादेरेव तदधीनत्वात्त्या स्वभावस्य तदनुक्तेः, आकाशादेर्देवतात्वेन जडत्वा-भावाच्च, आकाशशब्दसमन्वयानुक्तेश्चेति भावः । समन्वयसूत्रात् 'तत्तु' इत्यनुवृत्तेः 'आकाशो विष्णुरेव' इति भाष्यप्रदर्शितसौत्रप्रतिज्ञाभागस्थावधारणेन विष्णौ महायोगविद्वद्रूढ्योस्सूचनाच्छब्दप्रवृत्तिनिमित्तस्य स्वातन्त्र्यतद्गतत्वाभ्यां महायोगं विद्वद्रूढिं च वक्तुं ''आकाशस्य भगवदधीनत्वेन तत्रैव मुख्यत्वात्, महा-योगविद्वद्रूढ्योर्भावाच्च'' इत्यादिटीकां विवृण्वानोऽचेतनगतं प्रति स्वातन्त्र्यं तावदाह – **चिद्गतस्येत्यादिना** ॥ यदा पूर्वत्रेन्द्रादिचेतनस्थैश्वर्यादेरीशाधीनतोक्ता, तदा कैमुत्यन्यायेन अचेतनस्थस्य छिद्रत्वादेरीशाधीनता सिद्ध्यति, तस्य चेतनादपि पराधीनताया दर्शनादित्यर्थः । एतेन 'अनधीनत्वेऽचेतनगतत्वमप्रयोजकम्' इति दर्शितम् ।

यदप्युक्तं जयिशब्दवज्जडवाचिशब्दस्य स्वतन्त्रे प्रयोगादृष्टेरिति, तदप्य-सिद्धमित्याह – **अस्ति चेति** ॥ ''चिद्गतस्य'' इत्याद्यत्रत्यन्यायेन तुल्यन्याय-तयाऽभिमान्यधीनत्वे सिद्धे, ''तदधीनत्वात्'' इति न्यायेनाभिमानिनि मृदादि-शब्दप्रयोगं सिद्धं कृत्वाऽभिमान्यधिकरणे मृदादिशब्देनाभिमानिदेवतोच्यत इति

सूत्रकृता वक्ष्यमाणत्वादिति भावः । "तस्योत्पत्तिमतोऽवकाशत्वसहितस्यैव परायत्तोत्पत्त्या तदुपपत्तेः" इति न्यायविवरणटीकां "धर्मिण एवाकाशादेरुत्पत्ति-विनाशवतो जन्मस्थितिलयेष्वीश्वराधीनत्वे धर्मस्याऽपि तथाभावोऽवर्जनीयः" इति गायत्र्यधिकरणसुधां च हृदि कृत्वा, स्वभावं प्रत्यपि स्वातन्त्र्यमाह – अस्तु खमिति ॥ 'हि' यतोऽत इति पूर्वेणान्वयः । 'जनिमतः स्वभावो जनकायत्तः' इत्येतल्लोकसिद्धम् इत्याह – लोकेऽपि हीति ॥ 'हि' यस्मात् 'न सिध्यत्यतः पुन्तन्त्रं' इति पूर्वेणान्वयः ।

ननु घटे कुलालानधीनविशेषवदीशानधीनं छिद्रत्वमस्त्विति प्रश्नोत्तरमाह – किन्त्विति ॥ एतेन स्वभावत्वमप्यनधीनत्वेऽप्रयोजकमित्युक्तम् । "तादृशत्वाच्च तच्छक्तेः" इति गायत्रीनयानुव्याख्यानं हृदि कृत्वा, यथेष्टविनियोगार्हत्वरूपं च तदधीनत्वमाह – किञ्चेति ॥ 'अताम्रताम्' स्वर्णादिरूपताम् । 'अच्छिद्रताकृतेः' निबिडीकरणस्य । "अधीगर्थदयेशां कर्मणि" इति षष्ठी । अन्यथेश्वरत्व-व्याघातादिति भावः ॥

स्यन्दन्त इति ॥ अनेन "एतस्य वा अक्षरस्य प्रशासने गार्गि प्राच्यो नद्यः स्यन्दन्ते" "भीषाऽस्माद् वातः पवते"

नभो ददाति श्वसतां मार्गं यन्नियमाददः ।
द्रव्यं कर्म च कालश्च स्वभावो जीव एव च ॥ इत्यादिका इत्यर्थः ।

एतेन यदप्यचेतनगतत्वेन प्रसादनायत्तत्वात् स्वभावत्वेनानागन्तुकत्वात् नेशाधीनं विवरत्वम्' इति परम्परया हेतुत्वमिति मतं, तदपि निरस्तम् । तथाविधस्याप्यधीनतायाः श्रुत्यादिसिद्धत्वात् । यथेष्टविनियोगयोग्यत्वरूपाधीनत्व-सम्भवाच्च ।

एतेन "आकाशस्य भगवदधीनत्वात्" इति टीका त्रेधा व्याख्याता । 'आकाशस्य' आकाशपदप्रवृत्तिनिमित्तस्येत्यर्थः। एवं विवरत्वादिकमीशाधीनमिति समर्थ्य, 'विवरत्वादिकं नेशगतमचेतनगतत्वात्' इति यत्तृतीयं मतं, तदपि निराकुर्वन्नेवं सति लब्धार्थमाह – एवञ्चेति ॥ 'न केवलं' इत्यादिनाऽन्वयः ।

ननु रूढ्या पद्मत्वादिहेतुकस्य पङ्कजादिशब्दस्येवाकाशशब्दस्याकाशे रूढत्वात् तन्निमित्तस्य शब्दसमवायित्वादेरन्यत्र रूढस्य कथं विष्णौ निरवधिकत्वम्? इत्यतः ''भवेतां यदि वृक्षस्य'' इत्युक्तन्यायेन भूतेऽपि यौगिक एवायं शब्द इति सदृष्टान्तमाह – **यथेति** ॥

नवमे द्वितीयपादे ''पार्वणहोमयोस्त्वप्रवृत्तिः समुदायार्थसंयोगात्तदभीज्या हि'' इति पञ्चविंशेऽधिकरणे दर्शपूर्णमासयोः श्रुतं ''स्रुवेण पार्वणौ जुहोति'' इति वाक्यमुदाहृत्य, तद्धितश्रुत्या पर्वदैवत्यौ होमौ विकृतिष्वतिदिश्येते न वेति सन्दिह्य, पर्वशब्दस्य काले मुख्यत्वात्तस्य चासंस्कार्यत्वेनासन्निपातित्वादारादुपकारकाविमौ विकृतिष्वतिदिश्येते इति प्रापय्य, पृणातेर्दानार्थधातोः पर्वशब्दो निष्पन्नः । स च 'प्रियते दीयतेऽस्मिन्' इत्यधिकरणव्युत्पत्त्या काले मुख्यः । भावव्युत्पत्त्या तु कर्मण्यपि । तत्र प्रकरणात् सामवायिकत्वलाभाच्च कर्मवाचित्वमङ्गीकृत्य तत्संस्कारार्थौ होमावित्युपेयम्, तेषां च कर्मणां तन्त्रेणोक्तानामग्नीषोमयोरिव व्यासक्तं देवतात्वमिति समुदायस्य देवतात्वात्तस्य च विकृतिष्वनतिदेशादविकारत्वाच्च सौर्यादेर्न तत्र होमयोरतिदेश इति सिद्धान्तितम्।

अत्र पर्वशब्दस्य पूर्वोत्तरपक्षयोर्मुख्यत्वाविशेषप्रदर्शनार्थं पृणातेरधिकरणव्युत्पत्त्या यौगिकत्वमङ्गीकृतं, तथेहापि भूतेऽपि योग एव, न तु रूढिः, लाघवादित्यर्थः ।

एतेन पूर्वपक्षिणा योगो न युक्त इति यदुक्तं तन्निरस्तं भवति ॥ **तस्येति** ॥ विवरत्वस्य । एवं योगान्महायोगस्य बलवत्त्वान्नात्र तद्ग्रहणम् ।

नन्वेवं प्रवृत्तिहेतोरीशगतत्वेनैव महायोगोपपत्तौ तस्य पूर्वपक्षे भूतस्वभावत्वोक्तिः, सिद्धान्ते यत्नेनेशाधीनतोक्तिश्च व्यर्था, इत्यत आह – **एवञ्चेति** ॥ **कृत्वेति** ॥ विवरत्वादिकमीशे नास्तीति कृत्वा चिन्तयेत्यर्थः ॥

**यथेति** ॥ तृतीये द्वितीयपादे एकादशाद्यधिकरणेषु चिन्तितम् । भक्षानुवाके श्रुतः ''इन्द्रपीतस्य नराशंसपीतस्य पितृपीतस्य मधुमत उपहूतस्योपहूतो भक्षयामि'' इति मन्त्रः किमनैन्द्रप्रदानशेषभक्षणे न प्रयोज्य उत तेष्वप्यूहेन

प्रयोज्यः, यद्वा सर्वत्र यथासमाम्नात एव प्रयोक्तव्य इति संशये, इन्द्रेण पीतो यस्मिन्निति बहुव्रीहेर्द्वयोः पदयोरन्यपरत्वेन दुर्बलत्वात् सवनविशेषणत्वायोगादिन्द्रेण पीत इति तत्पुरुषस्योत्तरपदे स्वार्थलाभेनाभ्यर्हिततया सोमविशेषणत्वात्, तस्यानैन्द्रेष्वसामर्थ्यात् समानकर्मणि प्रकृतिविकारासम्भवेनोहाभावादमन्त्रकं भक्षणमित्येकं पक्षमुक्त्वा, सत्यपि कर्मैक्ये प्रदानानां भिन्नतया प्रकृतिविकृतिभावसम्भवात् ''इन्द्राय त्वा वसुमते सोमं गृह्णामि'' इति मानग्रहणमन्त्रवशात् सोमस्याभिषवादेश्चैन्द्रप्रदानधर्मत्वादधर्मकाणां अनैन्द्रप्रदानानां तद्विकृतित्वात्तत्र चोदकप्राप्तस्यान्यमन्त्रस्योहेन प्रयोग इति द्वितीयं पक्षमुक्त्वा, अधिकरणमसमाप्य कृत्वाचिन्तारूपेण षड्भिरधिकरणैरूहविषयं विचार्य, मानग्रहणमन्त्रयोर्लिङ्गादैन्द्रप्रदानविषयत्वेऽप्युत्पत्तिवाक्ये श्रुतस्य सोमस्य सर्वाभ्याससाधारण्यात् समानविधानतया प्रकृतिविकृतिभावाभावान्नास्त्यूह इति द्वितीयं पक्षं निरस्य, प्रथमपक्षावलम्बेन पुनः कृत्वाचिन्तारूपेण अधिकरणद्वयमुपन्यस्य तत्पुरुषाश्रयणे च वसुमद्ग्रणस्य 'सोमदेवत' इत्यादि सम्बुध्यन्तेन सोमशब्देन 'ते' इति प्रत्यक्षविषयेण युष्मच्छब्देन निर्दिष्टस्य शिष्टस्य सोमावयवस्य विशेषणं स्यात् । तथा च हुताहुतसमुदायविषये इन्द्रपीतशब्दे लक्षणा स्यात् । अतो बहुव्रीह्याश्रयणेन सवनविशेषणत्वात्, अनैन्द्रेष्वपि यथाम्नातमन्त्रकं भक्षणमिति सिद्धान्त इति ।

इत्थं हि कृत्वाचिन्ताधिकरणं – सवनमुखीमयेषु चमसेषु ऐन्द्रेषु सर्वेषु हुतेषु ये होतृकशब्दितानां मैत्रावरुणब्राह्मणाच्छंसिपोत्रादीनां चमसाः । तेष्वभक्षितेषु सशेषेष्वेव पुनः सोममभ्युन्नीय देवतान्तरेभ्यो मित्रावरुणादिभ्यो हुत्वा भक्ष्यते । तत्र किं पूर्वप्रकृतप्रधानदेवतेन्द्रोऽप्युपलक्षणीयः इन्द्रमित्रावरुणपीतस्येति, किं वा नेति विशये, उन्नयनकाले देवतानिर्देशाभावात्प्रदानकाल एव तन्निर्देशात्, पूर्वशेषस्याप्युन्नीतस्य च चमसस्थत्वेन देवतान्तरसम्बन्धात्पूर्वदेवता अपेतसम्बन्धत्वान्नोपलक्षणीयेति प्राप्ते, यद्यप्युन्नयनकाले न देवतासङ्कल्पस्तथाऽपि उन्नयनं तावत्करिष्यमाणयागार्थम् इत्यसन्दिग्धम् । यश्च करिष्यमाणयागार्थस्तस्यैव तदीयदेवतासम्बन्धो नान्यस्य । तस्मात् 'पूर्वशेषस्य स्वदेवतासम्बन्धानपायात् साऽप्युपलक्षणीया' इति सिद्धान्तः, इति ।

तत्र बहुव्रीह्याश्रयणेन सवनविशेषणत्वान्मित्रावरुणप्रदानशेषभक्षणे मन्त्रस्य वस्तुत ऊहाभावेऽपि ऊहमुपेत्य प्रवृत्तान्यनेकान्यधिकरणानि यथा युक्तानि तथेत्यर्थः । एवं प्रसिद्धं विवरत्वादिकं प्रवृत्तिनिमित्तमीशगतं समर्थ्य, क्लृप्तो योगः समर्थितः । कल्प्योऽपि योगोऽन्यत्रोक्तोऽनुसन्धेयः । भूते रूढिरूपबाधकस्य त्याजितत्वादिति भावेन तस्यात्रानुक्तौ हेतुमाह – **आ समन्तादिति** ॥ 'कं' सुखमित्यर्थः ॥ **अन्यत्रेति** ॥ छान्दोग्यभाष्ये अष्टमाध्यायाद्यखण्डे "आसमन्तात् काशनादाकाशः आसमन्तात्कमश्नातीति वा" इत्युक्तत्वादित्यर्थः ।

हेत्वन्तरमाह – **पूर्वपक्षीति** ॥ **रूढार्थेति** ॥ प्रसिद्धप्रवृत्तिनिमित्तमुखेनेत्यर्थः । सन्न्यायरत्नावल्यां तदुक्तिस्तु सोऽप्यस्तीति दर्शयितुमिति भावः ॥ **अत एवेति** ॥ प्रसिद्धप्रवृत्तिनिमित्तेन प्रवृत्तेर्भगवति साधितत्वादित्यर्थः ।

**विद्वद्रूढिर्वैदिका स्यात् सा योगादेव लभ्यते ।**

इत्युक्तेरिति भावः ॥ **वैदिकेति** ॥ "यावान्वा अयमाकाशः" "आकाशो वै नाम" "योऽयं बहिर्वा पुरुषादाकाशः" इत्यादाविति भावः ।

एतेन 'आकाशे रूढस्य कथं योगमात्रेणापहारः, दुर्बलत्वात्' इति निरस्तम् । महायोगस्य तन्निमित्तस्यप्राज्ञप्रयोगबाहुल्यरूपरूढेश्चोक्तत्वात् ।

**प्रयोगहेतोर्बाहुल्यं ज्ञेयं परममुख्यता ।**
**तत्र प्रयोगबाहुल्यं ज्ञेयं तत्परता किमु ॥**

इत्युक्तमहायोगरूढिलक्षणसत्त्वादिति भावः । एतेन "महायोगविद्वद्रूढ्योर्भावाच्च" इति टीका विवृता ।

ವಿವರಣೆ ಶಂಕೆ - 'ತದಧೀನತ್ವ'ಸೂತ್ರದಿಂದ ಗತಾರ್ಥತ್ವವು ಬಾರದಿರಬಹುದು. ಆದರೆ ಮೂರನೆಯ ಪಾದದಲ್ಲಿರುವ 'ಆಕಾಶೋಽರ್ಥಾಂತರತ್ವಾತ್' ಎಂಬುದರಿಂದ ಪುನರುಕ್ತಿ ಬರುತ್ತದೆ. ಈ ಅಧಿಕರಣದಂತೆ ಅಲ್ಲಿಯೂ ಸಹ ಭಗವಂತನು ಆಕಾಶಶಬ್ದದಿಂದ ಪ್ರತಿಪಾದ್ಯನೆಂದು ಹೇಳಲಾಗಿದೆ. ಅಲ್ಲಿ ಆ ಅಧಿಕರಣದಲ್ಲಿ 'ಆಕಾಶೋ ವೈ ನಾಮ ನಾಮರೂಪಯೋಃ' ಎಂಬ ಬೇರೆ ಶ್ರುತಿವಾಕ್ಯವು ವಿಷಯವಾದ್ದರಿಂದ ಪುನರುಕ್ತಿ ಬರುವುದಿಲ್ಲವೆಂದು ಉತ್ತರಿಸಬಾರದು. ಹಾಗೆ ವಿಷಯವಾಕ್ಯಭೇದದಿಂದ ಅಧಿಕರಣಭೇದವನ್ನು ಹೇಳಿದರೆ ಶಾಸ್ತ್ರವು ಪರ್ಯವಸಾನವಾಗದಿರಬೇಕಾದೀತು. ಇನ್ನು ಮೂರನೇ

ಪಾದದ ಅಧಿಕರಣದಲ್ಲಿ ಅವ್ಯಾಕೃತಾಕಾಶವನ್ನು ಪೂರ್ವಪಕ್ಷ ಮಾಡಿದ್ದಾರೆ. ಈ ಅಧಿಕರಣದಲ್ಲಿ ಭೂತಾಕಾಶವನ್ನು ಪೂರ್ವಪಕ್ಷ ಮಾಡಿದ್ದಾರೆ. ಹಾಗಾಗಿ ಅಧಿಕರಣಭೇದವು ವ್ಯರ್ಥವಲ್ಲವೆಂದು ಹೇಳಬಾರದು. ನಿರವಕಾಶಲಿಂಗದಿಂದ ಅನ್ಯತ್ರಪ್ರಸಿದ್ಧವಾದ ಶ್ರುತಿಯು ಬಾಧಿತವಾಗುತ್ತದೆಂಬುದು ಎರಡೂ ಅಧಿಕರಣಗಳಲ್ಲಿ ಸಮಾನವಾಗಿದೆ. ಸಿದ್ಧಾಂತನ್ಯಾಯಗಳಲ್ಲಿ ಸೇರದಿದ್ದರೆ ಮಾತ್ರ ಅಧಿಕರಣಭೇದವನ್ನು ಹೇಳಬೇಕು. ಒಂದುವೇಳೆ ಸಿದ್ಧಾಂತನ್ಯಾಯದಲ್ಲಿ ಭೇದವಿಲ್ಲದೆ ಪೂರ್ವಪಕ್ಷದ ಪ್ರಕಾರದಲ್ಲಷ್ಟೇ ಭೇದವೊಪ್ಪಿ ಅಧಿಕರಣಭೇದವನ್ನು ಹೇಳುವುದಾದರೆ ಅತಿಪ್ರಸಂಗವು ಬಂದೇ ಬರುತ್ತದೆ. ಆದ್ದರಿಂದ ಪುನರುಕ್ತಿಯನ್ನು ಹೇಗೆ ಪರಿಹರಿಸುತ್ತೀರಿ?

ಸಮಾಧಾನ - ಈ ಶಂಕೆಯನ್ನು ಪರಿಹರಿಸುವುದಕ್ಕಾಗಿ ಗ್ರಂಥಕಾರರು 'ಆಕಾಶೋಽರ್ಥಾಂತರತ್ವಾತ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಆಕಾಶಾಧಿಕರಣದಲ್ಲಿ ಸಿದ್ಧವಾದ ಪ್ರಮೇಯವನ್ನು ಅಂಗೀಕರಿಸಿ ಛಾಂದೋಗ್ಯದಲ್ಲಿರುವ 'ಆಕಾಶೋ ವೈ' ಎಂಬ ವಾಕ್ಯದಲ್ಲಷ್ಟೇ ಮೂರನೆ ಪಾದದಲ್ಲಿ ವಿಚಾರ ಮಾಡಿದ್ದಾರೆ. 'ವೈ ನಾಮ'ವೆಂಬ ಪ್ರಸಿದ್ಧಿದ್ಯೋತಕವಾದ ಪೂರ್ವಪಕ್ಷನ್ಯಾಯವು ಬಲಿಷ್ಠವಾದ್ದರಿಂದ 'ಆಕಾಶೋಽರ್ಥಾಂತರತ್ವಾತ್' ಎಂಬ ಅಧಿಕರಣದ ಪ್ರಾರಂಭವು ಅನಿವಾರ್ಯವಾಗಿದೆ. ಆಕಾಶಾಧಿಕರಣದಲ್ಲಿ ಶ್ರುತಿಯ ಬಲದಿಂದ ಭೂತಾಕಾಶವೆಂದು ಶಂಕಿಸಿದ್ದಾರೆ, 'ಆಕಾಶೋಽರ್ಥಾಂತರತ್ವಾತ್' ಎಂಬಲ್ಲಿ ನಿಪಾತದ ಬಲದಿಂದ ಅನ್ಯತ್ರಪ್ರಸಿದ್ಧಿಯನ್ನು ಶಂಕಿಸಿದ್ದಾರೆ. ಈ ಸೂಕ್ಷ್ಮವನ್ನು ಗಮನಿಸಬೇಕು. ಹೆಚ್ಚಿನ ವಿಚಾರವನ್ನು ಆ ಅಧಿಕರಣದಲ್ಲಿಯೇ ಸ್ಪಷ್ಟ ಪಡಿಸುತ್ತಾರೆ.

ಶಂಕೆ - ಗ್ರಂಥಕಾರರು ಹೇಳಿದ ನ್ಯಾಯಭೇದವೇ ಅಸಿದ್ಧವಾಗಿದೆ. ಏಕೆಂದರೆ ಈ ಅಧಿಕರಣದಲ್ಲಿಯೂ ಸಹ ತೃತೀಯಪಾದದ ಆಕಾಶಾಧಿಕರಣದಂತೆ ನಿಪಾತವು ಕೇಳಿಸುತ್ತಿದೆ. ಆದ್ದರಿಂದ ನಿಪಾತದ ಬಲದಿಂದ ಅಧಿಕರಣಭೇದವನ್ನು ಹೇಗೆ ಸಮರ್ಥಿಸುತ್ತೀರಿ?

ಸಮಾಧಾನ - ಈ ಶಂಕೆಗೆ 'ನಚ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಇಲ್ಲಿರುವ ನಿಪಾತವು ಭೂತಶಬ್ದದ ಜೊತೆಗೆ ಇರುತ್ತದೆ. ತೃತೀಯಪಾದದ ಆಕಾಶಾಧಿಕರಣದಲ್ಲಿರುವ ನಿಪಾತವು ಆಕಾಶಶಬ್ದದ ಜೊತೆಗೆ ಇರುತ್ತದೆ. ಹಾಗಾಗಿ ಇಲ್ಲಿರುವ ನಿಪಾತವು ಭೂತಪ್ರಸಿದ್ಧಿಯನ್ನಷ್ಟೇ ಹೇಳುತ್ತದೆ. ಅಲ್ಲಿರುವ ನಿಪಾತವು ಭೂತಾಕಾಶಪ್ರಸಿದ್ಧಿಯನ್ನು ಹೇಳುತ್ತದೆ. ಈ ವ್ಯತ್ಯಾಸವನ್ನು ಗಮನಿಸಿ ಗ್ರಂಥಕಾರರು ನ್ಯಾಯಭೇದವನ್ನು ಹೇಳಿದ್ದಾರೆ.

ಶಂಕೆ - ಹಾಗಾದರೆ ನಾಲ್ಕನೇ ಪಾದದಲ್ಲಿರುವ ಆಕಾಶಾಧಿಕರಣದಿಂದ ಪುನರುಕ್ತಿ ಬರುತ್ತದೆ. ಏಕೆಂದರೆ ಆ ಅಧಿಕರಣದಲ್ಲಿ ಉಲ್ಲೇಖಿಸುವ ವಿಷಯವಾಕ್ಯದಲ್ಲಿ ನಿಪಾತವು ಇರುವುದಿಲ್ಲ. ಕೇವಲ ವಿಷಯವಾಕ್ಯದ ಭೇದದಿಂದಷ್ಟೇ ಪ್ರಥಮಪಾದದ ಆಕಾಶಾಧಿಕರಣಕ್ಕೂ ಮತ್ತು ಚತುರ್ಥಪಾದದ ಆಕಾಶಾಧಿಕರಣಕ್ಕೂ ವೈಲಕ್ಷಣ್ಯವನ್ನು ಹೇಳುವುದಾದರೆ ಶಾಸ್ತ್ರಾನಂತ್ಯದೋಷವು ತಪ್ಪಿದ್ದಲ್ಲ. ಹಾಗಾಗಿ ಈ ಅಧಿಕರಣದಲ್ಲಿ ಹೇಗೆ ಆಕಾಶಶಬ್ದವನ್ನು ಭಗವತ್ಪರವೆಂದು ಸಮರ್ಥಿಸುತ್ತಿದ್ದಾರೋ, ಅದರಂತೆ ಚತುರ್ಥಪಾದದ ಆಕಾಶಾಧಿಕರಣದಲ್ಲಿಯೂ ಸಹ ಆಕಾಶಶಬ್ದವನ್ನು ಭಗವತ್ಪರವೆಂದು ಸಮರ್ಥಿಸುವುದರಿಂದ ಪುನರುಕ್ತಿದೋಷವು ಬರುತ್ತದೆ.

ಸಮಾಧಾನ - ಈ ಶಂಕೆಗೆ 'ಕಾರಣತ್ವೇನ ಚ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಚತುರ್ಥಪಾದದ ಆಕಾಶಾಧಿಕರಣದಲ್ಲಿ ಪ್ರವೃತ್ತಿನಿಮಿತ್ತವು ಭಗವದಧೀನವೆಂದು ಅಂಗೀಕರಿಸಿದ್ದಾರೆ. ಮತ್ತು 'ಆಕಾಶ ಇತಿ ಹೋವಾಚ' ಎಂಬಲ್ಲಿರುವ ಆಕಾಶಶಬ್ದವು ವಿಷ್ಣುಪರವೆಂದು ಕೂಡ ಅಂಗೀಕರಿಸಿದ್ದಾರೆ. ಹೀಗೆ ಆಕಾಶಾಧಿಕರಣದ ಸಿದ್ಧಾಂತಪ್ರಮೇಯವನ್ನು ಅಂಗೀಕರಿಸಿ 'ಆತ್ಮನಃ ಆಕಾಶಃ ಸಂಭೂತಃ' ಎಂಬಲ್ಲಷ್ಟೇ ಇರುವ ಆಕಾಶಪದವು ಭೂತಾಕಾಶಪರವಾಗುತ್ತದೆಂದು ಆಶಂಕಿಸಿದ್ದಾರೆ. ಈ ಶಂಕೆಗೆ ಪರಮಮುಖ್ಯವೃತ್ತಿಯಿಂದ ಭಗವಂತನೇ ಆಕಾಶಃ ಸಂಭೂತಃ ಎಂಬಲ್ಲಿರುವ ಆಕಾಶಶಬ್ದದಿಂದಲೂ ಪ್ರತಿಪಾದ್ಯನಾಗುತ್ತಾನೆ. ಅಪರಮಮುಖ್ಯವೃತ್ತಿಯಿಂದ ಭೂತಾಕಾಶವು ಪ್ರತಿಪಾದ್ಯವಾಗುತ್ತದೆಂದು ಅಲ್ಲಿ ಸಿದ್ಧಾಂತ ಮಾಡಿದ್ದಾರೆ. ಚತುರ್ಥಪಾದದ ಆಕಾಶಾಧಿಕರಣದ ಪ್ರಮೇಯಕ್ಕಿಂತ ವಿಲಕ್ಷಣವಾದ ಪ್ರಮೇಯವನ್ನು ಈ ಅಧಿಕರಣದಲ್ಲಿ ಹೇಳಿದ್ದಾರೆಂದು 'ಇಹ ತು' ಇತ್ಯಾದಿ ಗ್ರಂಥವು ವಿವರಿಸುತ್ತಿದೆ. ಈ ಆಕಾಶಾಧಿಕರಣದಲ್ಲಿ 'ಆಕಾಶಶಬ್ದವು ಮುಖ್ಯವೃತ್ತಿಯಿಂದ ಭಗವಂತನನ್ನೇ ಹೇಳುತ್ತದೆ, ಆಕಾಶಶಬ್ದದ ಪ್ರವೃತ್ತಿನಿಮಿತ್ತವೂ ಸಹ ಭಗವದಧೀನವಾಗಿದೆ' ಎಂದು ಸಮರ್ಥಿಸಿದ್ದಾರೆ. ಈ ಅಧಿಕರಣವನ್ನು ಉಪಜೀವಿಸಿಕೊಂಡು ಚತುರ್ಥಪಾದದ ಆಕಾಶಾಧಿಕರಣವು ಹೊರಟಿದೆ. ಹೀಗಿರುವಾಗ ಪುನರುಕ್ತಿಯನ್ನು ಹೇಗೆ ಶಂಕಿಸುತ್ತೀರಿ? ಎಂದು ತತಶ್ಚ ಎಂಬ ಗ್ರಂಥವು ಪ್ರತಿಪಾದಿಸಿದೆ.

ಶಂಕೆ - ಇದುವರೆಗೂ ನಿರೂಪಿಸಿದಂತೆ ತೃತೀಯಪಾದದ ಆಕಾಶಾಧಿಕರಣದಿಂದಾಗಲೀ, ಚತುರ್ಥ-ಪಾದದ ಆಕಾಶಾಧಿಕರಣದಿಂದಾಗಲೀ ಪ್ರಥಮಪಾದದ ಆಕಾಶಾಧಿಕರಣಕ್ಕೆ ಪುನರುಕ್ತಿ ಬರುವುದಿಲ್ಲವೆಂದು ಒಪ್ಪಿಕೊಳ್ಳೋಣ. ಆದರೆ ಎರಡನೇ ಅಧ್ಯಾಯದಲ್ಲಿರುವ 'ನ ವಿಯದಶ್ರುತೇಃ' ಎಂಬ ಮೂರನೆಯ ಪಾದದಲ್ಲಿ ಬರುವ ವಿಯದಧಿಕರಣದಿಂದ ಪುನರುಕ್ತಿ ಬರುತ್ತಲ್ಲ. ಏಕೆಂದರೆ ಆಕಾಶಾದಿಪದಾರ್ಥಗಳಿಗೆ ಭಗವದಧೀನತ್ವವನ್ನು ವಿಯದಧಿಕರಣದಲ್ಲಿ ಸಮರ್ಥಿಸುತ್ತಾರೆ. ಅದೇ ವಿಷಯವನ್ನು ಈ ಅಧಿ ಕರಣದಲ್ಲಿಯೂ ಹೇಳಿದಾಗ ಹೇಳಿದ್ದನ್ನೇ ಹೇಳಿದಂತಾಗುತ್ತದೆ.

ಸಮಾಧಾನ - ಈ ಶಂಕೆಗೆ 'ನ ವಿಯತ್' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಭೂತಾಕಾಶ, ಜೀವ, ಕಾಲ ಮೊದಲಾದ ಪದಾರ್ಥಗಳು ಭಗವಂತನಿಂದ ಹುಟ್ಟುತ್ತವೆಂದು ವಿಯದಧಿಕರಣದಲ್ಲಿ ಸಮರ್ಥಿಸಿದ್ದಾರೆ ಹೊರತು ಆಕಾಶಾದಿಗಳ ಸ್ವಭಾವವು ಭಗವದಧೀನವಾಗಿದೆ ಎಂದು ಸಮರ್ಥಿಸಿಲ್ಲ. ಆದ್ದರಿಂದ ಭಗವದಧೀನತ್ವಾದಿ ಧರ್ಮಗಳನ್ನು ಈ ಆಕಾಶಾಧಿಕರಣದಲ್ಲಷ್ಟೇ ಹೇಳಿದ್ದಾರೆ. ಹೀಗಿರುವಾಗ ವಿಯದಧಿಕರಣದಲ್ಲಿ ಹೇಳಿದ ಪ್ರಮೇಯವನ್ನು ಇಲ್ಲಿ ಹೇಳಿದಂತಾಗುವುದಿಲ್ಲ.

ಶಂಕೆ - ಹಾಗಿದ್ದರೂ ಸಹ ಅಂತರ್ಯಾಮ್ಯಧಿಕರಣದಿಂದ ಪುನರುಕ್ತಿಯ ಸಂದೇಹ ಬಂದೇ ಬರುತ್ತದೆ. ಏಕೆಂದರೆ 'ಯ ಆಕಾಶೇ ತಿಷ್ಠನ್' ಎಂದು ಪ್ರಾರಂಭಿಸಿ 'ಯಃ ಆಕಾಶಮಂತರಾ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ' ಎಂಬುದರ ತನಕ ಶ್ರುತಿಯು ಭಗವಂತನು ಆಕಾಶದ ಅಂತರ್ಯಾಮಿಯಾಗಿದ್ದಾನೆಂದು ಶ್ರುತಿಯು ಹೇಳುತ್ತಿದೆ. ಭಗವಂತನು ಆಕಾಶದ ಅಂತರ್ಯಾಮಿ-ಯಾಗಬೇಕಾದರೆ ಆಕಾಶವು ಭಗವಂತನ ಅಧೀನವಾಗಬೇಕು. ಇದನ್ನೇ ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ.

ಸ್ವಾತ್ಮನಾऽನಿಯತಂ ವಸ್ತು ಪ್ರತೀಪಂ ಹ್ಯಾತ್ಮನೋ ಭವೇತ್ ।
ಸ್ವಾಧೀನ ಸತ್ತಾ ಶಕ್ತ್ಯಾದಿ ಕಥಮಾತ್ಮಪ್ರತೀಪಕಮ್ ॥

ತನ್ನ ನಿಯಂತ್ರಣಕ್ಕೊಳಪಡದ ಪದಾರ್ಥವು ತನಗೆ ವಿರೋಧವಾಗಬಹುದು. ಆದರೆ ಯಾವ ವಸ್ತುವಿನ ಇರುವಿಕೆ, ಮತ್ತು ಶಕ್ತಿಗಳು ಯಾರ ಅಧೀನವೋ ಆ ವಸ್ತುವು ವಿರೋಧಿಯಾಗುವುದಿಲ್ಲ.

ಅನುವ್ಯಾಖ್ಯಾನದ ಈ ಮಾತಿನಿಂದ ಆಕಾಶವು ಅಂತರ್ಯಾಮಿಯಾದ ಭಗವಂತನ ಅಧೀನವೆಂದು ತಿಳಿಯುತ್ತದೆ. ಅಂತರ್ಯಾಮ್ಯಧಿಕರಣದಲ್ಲಿ ಆಕಾಶಾದಿಗಳ ಇರುವಿಕೆಯನ್ನಷ್ಟೇ ಭಗವದಧೀನವೆಂದಿದ್ದಾರೆ. ಆಕಾಶದ ಸ್ವಭಾವಗಳನ್ನು ಭಗವದಧೀನವೆಂದು ಅಲ್ಲಿ ಹೇಳಿಯೇ ಇಲ್ಲ. ಅದನ್ನು ಇಲ್ಲಿ ಸಮರ್ಥಿಸುತ್ತಿದ್ದಾರೆ. ಮತ್ತು ಆಕಾಶಶಬ್ದವು ದೇವತಾವಾಚಕವಾದ್ದರಿಂದ ಜಡವೆಂದೂ ಹೇಳಲಾಗದು. ಮತ್ತು ಆಕಾಶಶಬ್ದದ ಸಮನ್ವಯವನ್ನೂ ಸಹ ಅಂತರ್ಯಾಮ್ಯಧಿಕರಣದಲ್ಲಿ ಮಾಡಿಲ್ಲ.

ಹಿಂದಿನ ಅಧಿಕರಣದಲ್ಲಿ ಹೇಳಿದಂತೆ ಈ ಅಧಿಕರಣದಲ್ಲಿಯೂ ಸಹ 'ತತ್ತು ಸಮನ್ವಯಾತ್' ಸೂತ್ರದಲ್ಲಿನ 'ತತ್ತು' ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಆವಾಗ ವಿಷ್ಣುವಿನ ಲಿಂಗಗಳಿರುವುದಿಂದ ಆಕಾಶಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ. ('ಆಕಾಶಃ ವಿಷ್ಣುರೇವ ತಲ್ಲಿಂಗಾತ್') ಈ ವಿಷಯವನ್ನು ಭಾಷ್ಯಕಾರರು ಸೂತ್ರಪ್ರತಿಜ್ಞೆಯ ಸಂದರ್ಭದಲ್ಲಿ ಹೇಳಿದ್ದಾರೆ. ಹೀಗೆ ಅವಧಾರಣದಿಂದ ಆಕಾಶಶಬ್ದವಾಚ್ಯತ್ವವನ್ನು ವಿಷ್ಣುವಿನಲ್ಲಿ ಸಮರ್ಥಿಸಿದಾಗ ಒಂದು ಮಹತ್ಪ್ರಯೋಜನವಿದೆ -- 'ಮಹಾಯೋಗ ಹಾಗೂ ವಿದ್ವದ್ರೂಢಿಗಳನ್ನು ಭಗವಂತನಲ್ಲಿ ಬಿಟ್ಟು ಬೇರೆಯವರಲ್ಲಿ ಹೇಳಲಾಗದು' ಎಂದು. ಮಹಾಯೋಗವನ್ನು ಹೇಳಿದಾಗ ಆಕಾಶಶಬ್ದದ ಪ್ರವೃತ್ತಿನಿಮಿತ್ತವು ಭಗವಂತನಲ್ಲಿ ಇದೆ ಮತ್ತು ಸ್ವತಂತ್ರವಾಗಿ ಇದೆ. ಎಂದು ತಿಳಿಯುತ್ತದೆ. ಇದನ್ನು ಆಕಾಶಸ್ಯ ಭಗವದಧೀನತ್ವೇನ ತತ್ರೈವ ಮುಖ್ಯತ್ವಾತ್, ಮಹಾಯೋಗವಿದ್ವದ್ರೂಢ್ಯೋಃ ಭಾವಾಚ್ಚ' (ಆಕಾಶವು ಭಗವಂತನ ಅಧೀನವಾದ್ದರಿಂದ ಭಗವಂತನಲ್ಲಿಯೇ ಮುಖ್ಯವಾಗಿ ಇದೆ. ಆದ್ದರಿಂದಲೇ ಮಹಾಯೋಗ ವಿದ್ವದ್ರೂಢಿಗಳನ್ನು ಭಗವಂತನಲ್ಲಷ್ಟೇ ಹೇಳಲು ಸಾಧ್ಯ) ಎಂಬ ಟೀಕೆಯು ಹೇಳಿದೆ. ಹೀಗೆ 'ತತ್ತು'ಶಬ್ದದ ಅನುವೃತ್ತಿಯಿಂದ ಅಪೂರ್ವವಾದ ಈ ಪ್ರಮೇಯವು ತಿಳಿಯುತ್ತದೆ. ಇದನ್ನು ಭಾಷ್ಯಕಾರರು ಹಾಗೂ ಟೀಕಾಕಾರರು ಎತ್ತಿ ತೋರಿಸಿದ್ದಾರೆ. ಅದನ್ನು ಪ್ರಕೃತ ಗ್ರಂಥಕಾರರು 'ಚಿದ್ಗತಸ್ಯ' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ.

ಹಿಂದಿನ ಅಧಿಕರಣದಲ್ಲಿ ಇಂದ್ರಾದಿ ಚೇತನರಲ್ಲಿರುವ ಐಶ್ವರ್ಯಾದಿಗಳು ಭಗವದಧೀನವೆಂದು ಸಮರ್ಥಿಸಿದರು. ಚೇತನರಲ್ಲಿರುವ ಧರ್ಮಗಳೇ ಭಗವದಧೀನವಾದ ಮೇಲೆ ಪುನಃ ಅಚೇತನಗಳಲ್ಲಿರುವ ಛಿದ್ರತ್ವಾದಿ ಧರ್ಮಗಳು ಭಗವದಧೀನವೆಂದು ಪ್ರತ್ಯೇಕ ಹೇಳಬೇಕೇನು? ಎಂಬ ಕೈಮುತ್ಯನ್ಯಾಯವನ್ನು ಶ್ಲೋಕದಲ್ಲಿ ಪ್ರದರ್ಶಿಸಿದ್ದಾರೆ. ಏಕೆಂದರೆ ಕೆಲವೊಮ್ಮೆ ಚೇತನರಲ್ಲಿ ಸ್ವತಂತ್ರಕರ್ತೃತ್ವಾದಿಗಳ ಭ್ರಾಂತಿಯಾದರೂ ಬರಲು ಸಾಧ್ಯವಿದೆ. (ಕುಂಬಾರನು ಘಟವನ್ನು ನಿರ್ಮಿಸಿದ ಇತ್ಯಾದಿಯಾಗಿ ಘಟಾದಿಕರ್ತೃತ್ವವು). ಆದರೆ ಅಚೇನಪದಾರ್ಥಗಳಲ್ಲಿ ಯಾವ ಮೂರ್ಖನಿಗೂ ಕರ್ತೃತ್ವದ ಭ್ರಾಂತಿ ಬರಲು ಸಾಧ್ಯವಿಲ್ಲ. ಹೀಗೆ ಹೇಳಿದ್ದರಿಂದ 'ವಿವರತ್ವಾದಿಕಂ ನ ಭಗವದಧೀನಂ, ಅಚೇತನಗತತ್ವಾತ್' ಎಂಬ ಅನುಮಾನದಲ್ಲಿ ಹೇತುವಿಗೆ ಅಪ್ರಯೋಜಕತ್ವವನ್ನು ಹೇಳಿದಂತಾಯಿತು.

'ಜಯಿ'ಶಬ್ದದ ಪ್ರಯೋಗವು ನಿಯಾಮಕವ್ಯಕ್ತಿಯಲ್ಲಿ ಬರುವಂತೆ ಜಡವಾಚಿಶಬ್ದಪ್ರಯೋಗವು ನಿಯಾಮಕನಲ್ಲಿ ಬಂದದ್ದು ಎಲ್ಲಿಯೂ ಕಂಡಿಲ್ಲವೆಂದು ಹೇಳಿದರೆ ಇದೂ ಸಹ ಅಸಿದ್ಧಿ ಎಂಬುದನ್ನು 'ಅಸ್ತಿ ಚ' ಎಂಬ ಗ್ರಂಥವು ಪ್ರತಿಪಾದಿಸುತ್ತಿದೆ. ಯಾವ ಕಾರಣದಿಂದ ಚೇತನಪದಾರ್ಥನಲ್ಲಿರುವ ಧರ್ಮಗಳೇ ಭಗವದಧೀನವಾದ ಮೇಲೆ ಅಚೇತನ ಧರ್ಮಗಳು ಭಗವದಧೀನವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ ಎಂಬ ತದಧೀನತ್ವನ್ಯಾಯದಂತೆ ಜಡವಾಚಿಶಬ್ದಗಳೂ ಸಹ ಚೇತನರಲ್ಲಿ ಪ್ರಯೋಗಿಸಬಹುದು. ಈ ವಿಷಯವನ್ನೇ ಅಭಿಮಾನ್ಯಧಿಕರಣದಲ್ಲಿ ಮಣ್ಣಿನಲ್ಲಿರುವ ವಕ್ತೃತ್ವವನ್ನು ಅಭಿಮಾನಿಚೇತನರಲ್ಲಿ ಸೂತ್ರಕಾರರೇ ಪ್ರತಿಪಾದಿಸಿದ್ದಾರೆ.

'ತಸ್ಯೋತ್ಪತ್ತಿಮತೋಽವಕಾಶತ್ವಸಹಿತಸ್ಯೈವ ಪರಾಯತ್ತೋತ್ಪತ್ತ್ಯಾ ತದುಪಪತ್ತೇಃ' (ಉತ್ಪತ್ತಿಯುಳ್ಳ ಆಕಾಶಕ್ಕೆ ಅವಕಾಶತ್ವಸಹಿತವಾಗಿಯೇ ಭಗವದಧೀನತ್ವವನ್ನು ಹೇಳಬೇಕು.) ಈ ನ್ಯಾಯವಿವರಣ-ಟೀಕೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಆಕಾಶಸ್ವಭಾವವೂ ಸಹ ಭಗವದಧೀನವಾಗಿದೆಯೆಂದು 'ಅಸ್ತು ಖಂ' ಎಂಬ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ. ಹುಟ್ಟುವ ಪದಾರ್ಥದ ಸ್ವಭಾವವು ಹುಟ್ಟಿಸುವ ವ್ಯಕ್ತಿಯ ಅಧೀನವಾಗಿದೆಯೆಂದು ಲೋಕದಲ್ಲಿಯೂ ಕಂಡಿದೆ. ಇದನ್ನು 'ಕುಂಭಸ್ವಭಾವ' ಎಂಬ ಶ್ಲೋಕದಿಂದ ಉದಾಹರಿಸಿದ್ದಾರೆ.

ಶಂಕೆ - ಘಟವು ಕುಲಾಲನ ಅಧೀನವಾಗಿರಬಹುದು; ಆದರೆ ಎಷ್ಟೋ ಬಾರಿ ಕುಲಾಲನ ಸಂಕಲ್ಪಕ್ಕೆ ವಿರುದ್ಧವಾಗಿ ಘಟದ ಆಕಾರದಲ್ಲಿ ಬದಲಾವಣೆಯು ಕಾಣಿಸುತ್ತದೆ. ಅಂತೂ ಕುಲಾಲನ ಆಧೀನ್ಯಕ್ಕೆ ಒಳಪಡದ ಧರ್ಮಗಳು ಘಟಾದಿಗಳಲ್ಲಿವೆಯೆಂದು ಎಲ್ಲರೂ ಅಂಗೀಕರಿಸಬೇಕಾಗುತ್ತದೆ. ಇದರಂತೆ ಆಕಾಶದಲ್ಲಿರುವ ಛಿದ್ರತ್ವವೂ ಸಹ ಭಗವದಧೀನವಾಗುವುದು ಬೇಡ?

ಸಮಾಧಾನ - ಈ ಪ್ರಶ್ನೆಗೆ 'ಕಿಂಚ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಹೀಗೆ ಹೇಳಿದ್ದರಿಂದ 'ವಿವರತ್ವಾದಿಕಂ ನ ಭಗವದಧೀನಂ ಆಕಾಶಸ್ವಭಾವವತ್ವಾತ್' ಎಂಬ ಅನುಮಾನದಲ್ಲಿ ಸ್ವಭಾವತ್ವಹೇತುವು ಅಪ್ರಯೋಜಕವೆಂದು ಹೇಳಿದಂತಾಯಿತು. 'ತಾದೃಶತ್ವಾಚ್ಚ ತಚ್ಛಕ್ತೇಃ' ಎಂಬ ಗಾಯತ್ರ್ಯಧಿಕರಣದಲ್ಲಿ ಬರುವ ಅನುವ್ಯಾಖ್ಯಾನಶ್ಲೋಕವನ್ನು ಮನಸ್ಸಿನಲ್ಲಿಟ್ಟುಕೊಂಡು 'ಕಿಂಚ' ಇತ್ಯಾದಿ ಗ್ರಂಥವು ಹೊರಟಿದೆ. ತದಧೀನತ್ವವೆಂದರೆ ಯಥೇಷ್ಟವಿನಿಯೋಗಾರ್ಹತ್ವವೆಂದರ್ಥ. ಇಂತಹ ತದಧೀನತ್ವವನ್ನು ಆಕಾಶಾದಿಗಳಲ್ಲಿ ಸುಲಭವಾಗಿ ಹೇಳಬಹುದೆಂದು 'ಔಷಧಾದಿ' ಎಂಬ ಶ್ಲೋಕವು ವಿವರಿಸಿದೆ.

ಛಿದ್ರಸ್ಯ ಛಿದ್ರತಾಕೃತೇಃ ನೇಷ್ಟೇ ಕಿಮ್? (ಛಿದ್ರಕ್ಕೆ ಅಚ್ಛಿದ್ರತ್ವವನ್ನು ತರಲು ಸಮರ್ಥನಲ್ಲವೇನು?) ಇಲ್ಲಿ ಅಚ್ಛಿದ್ರತಾಕೃತೇಃ ಎಂದು ಷಷ್ಠಿ ವಿಭಕ್ತಿ ಇದೆ. 'ಅಧೀಗರ್ತದಯೇಷಾಂ ಕರ್ಮಣಿ' (೨-೩-೫೨) ಎಂಬ ಸೂತ್ರದಿಂದ ಇಲ್ಲಿ ಷಷ್ಠಿ ವಿಭಕ್ತಿಯು ಬಂದಿದೆ. ಕರಣಾರ್ಥಕವಾದ ಧಾತು ದಯಧಾತು ಮತ್ತು ಈಶಧಾತು ಇವುಗಳಿಗೆ ಕರ್ಮಕಾರಕವು ಶೇಷತ್ವೇನ ವಿವಕ್ಷಿತವಾದಾಗ ಷಷ್ಠೀವಿಭಕ್ತಿಯು ಬರುತ್ತದೆಂದು ಈ ಸೂತ್ರದಲ್ಲಿ ಹೇಳಿದ್ದಾರೆ. ಪ್ರಕೃತ 'ಈಷ್ಟೇ' ಎಂದು ಈಶಧಾತುವಿನ ಯೋಗವಿರುವುದರಿಂದ ಇದರ ಯೋಗವನ್ನು ಹೊಂದಿದ ಕರ್ಮಕಾರಕವಾದ ಅಚ್ಛಿದ್ರಾಕೃತೇಃ ಎಂಬ ಪದಕ್ಕೆ ಷಷ್ಠಿವಿಭಕ್ತಿಯು ಬಂದಿದೆ. ಈ ಸೂತ್ರದಿಂದ ಷಷ್ಠಿವಿಭಕ್ತಿಯನ್ನು ಹೇಳದಿದ್ದರೆ ಈಶ್ವರತ್ವದ ಸಮರ್ಥನೆಯೇ ವ್ಯಾಹತವಾಗುತ್ತದೆ.

ಗ್ರಂಥಕಾರರು 'ಸ್ಯಂದಂತೇ' ಎಂಬ ಶ್ಲೋಕದಿಂದ ಕೆಲವು ಶ್ರುತಿಗಳನ್ನು ಅರ್ಥಶಃ ಅನುವಾದ ಮಾಡಿದ್ದಾರೆ -- 'ಏತಸ್ಯ ವಾಽಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋ ನದ್ಯಃ ಸ್ಯಂದಂತೇ' 'ಭೀಷಾಽಸ್ಮಾದ್ವಾತಃ ಪವತೇ' 'ನಭೋ ದದಾತಿ ಶ್ವಸತಾಂ ಮಾರ್ಗಂ ಯನ್ನಿಯಮಾದದಃ' 'ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ' ಈ ಶ್ರುತಿಸ್ಮೃತಿಗಳಿಂದ ಸಕಲಭೂತಗಳೂ ಭಗವದ-ಧೀನವೆಂದು ತಿಳಿಯುತ್ತದೆ.

'ವಿವರತ್ವಾದಿಕಂ ನ ಭಗವದಧೀನಂ ಅಚೇತನಸ್ವಭಾವತ್ವಾತ್, ತದ್ಗತತ್ವಾಭಾವಾತ್' ಈ ಎರಡು ಹೇತುಗಳು ಪ್ರಸಾದನಾಯತ್ತತ್ವ, ಅನಾಗಂತುಕತ್ವ ಇವುಗಳನ್ನು ಮಧ್ಯದಲ್ಲಿ ಹೇತುವನ್ನಾಗಿಸಿಕೊಂಡು ಈಶಾನನಧೀನತ್ವವನ್ನು ಪರಂಪರೆಯಿಂದ ಸಾಧಿಸುತ್ತವೆ ಎಂದು ಹಿಂದೆ ಹೇಳಿದಿರಿ. ಅದನ್ನೂ ಸಹ ಈಗ ನಿರಾಕರಿಸಿದಂತಾಯಿತು. ಯಾವ ಧರ್ಮಗಳು ಅಚೇತನದಲ್ಲಿ ಇವೆಯೋ, ಮತ್ತು ಅಚೇತನದ ಸ್ವಭಾವವೂ ಆಗಿವೆಯೋ ಅವೆಲ್ಲವೂ ಭಗವದಧೀನವಾಗಿವೆ ಎಂದು ಈಗ ತಾನೇ ಉದಾಹರಿಸಿದ ಶೃತಿಸ್ಮೃತಿಗಳಿಂದ ಸಿದ್ಧವಾಗಿದೆ. ಮತ್ತು ಯಥೇಷ್ಟವಿನಿಯೋಗಯೋಗ್ಯತ್ವರೂಪವಾದ ಅಸ್ವಾತಂತ್ರ್ಯವೂ ಸಹ ಅವುಗಳಲ್ಲಿ ಇರುತ್ತದೆ. ಇದರಿಂದ 'ಆಕಾಶಸ್ಯ ಭಗವದಧೀನತ್ವಾತ್' ಎಂಬ ಟೀಕೆಯನ್ನು ಮೂರು ಪ್ರಕಾರದಲ್ಲಿ ವ್ಯಾಖ್ಯಾನಿಸಿದಂತಾಯಿತು. 'ಆಕಾಶಸ್ಯ' ಎಂಬ ಪದಕ್ಕೆ ಆಕಾಶಪದದ ಪ್ರವೃತ್ತಿನಿಮಿತ್ತವೆಂಬ ಮೊದಲನೆಯ ಅರ್ಥವನ್ನು ಹಿಂದೆಯೇ ಹೇಳಿದ್ದಾಗಿದೆ.

ಆಕಾಶಪದದ ಪ್ರವೃತ್ತಿನಿಮಿತ್ತವಾದ ವಿವರತ್ವಾದಿಗಳು ಈಶಾಧೀನವೆಂದು ಇಲ್ಲಿಯ ತನಕ ಸಮರ್ಥಿಸಿದ್ದಾಯಿತು. ಮುಂದೆ ''ವಿವರತ್ವಾದಿಕಂ ನ ಈಶಗತಂ ಅಚೇತನಗತತ್ವಾತ್'' (ಅಚೇತನನಿಷ್ಠವಾದ್ದರಿಂದ ವಿವರತ್ವಾದಿಗಳು ಭಗವಂತನಲ್ಲಿ ಬರಲಾರವು) ಎಂಬ ಮೂರನೆಯ ಪಕ್ಷವನ್ನು ನಿರಾಕರಣೆ ಮಾಡುವುದಕ್ಕಾಗಿ 'ಏವಂಚ' ಇತ್ಯಾದಿ ಗ್ರಂಥವು ಹೊರಟಿರುತ್ತದೆ. ಆಕಾಶಪದದ ಪ್ರವೃತ್ತಿನಿಮಿತ್ತವೆನಿಸಿದ ವಿವರತ್ವಾದಿಗಳೂ ಕೂಡ ಭಗವಂತನಲ್ಲಿ ನಿರವಧಿಕವಾಗಿದೆ ಎಂದು ಇಲ್ಲಿ ಹೇಳಿದ್ದಾರೆ. ಆದರೆ ಆಕಾಶಪದದ ಪ್ರವೃತ್ತಿನಿಮಿತ್ತವೇ ಆದ ಶಬ್ದಸಮವಾಯಿತ್ವವೆಂಬ ಮತ್ತೊಂದು ಧರ್ಮವನ್ನು ಭಗವಂತನಲ್ಲಿ ನಿರವಧಿಕವಾಗಿ ಹೇಳಲು ಹೇಗೆ ಸಾಧ್ಯ ? ಕಮಲದಲ್ಲಿ 'ಪಂಕಜ'ಶಬ್ದವನ್ನು ಪ್ರಯೋಗಿಸಲು ರೂಢವಾದ ಪದತ್ವವು ಹೇತುವಾಗಿದೆ. ಅದರಂತೆ ಆಕಾಶದಲ್ಲಿ ಆಕಾಶಶಬ್ದವನ್ನು ಪ್ರಯೋಗಿಸಲು ಭೂತಾಕಾಶದಲ್ಲಿ ರೂಢವಾದ ಶಬ್ದಸಮವಾಯಿತ್ವವನ್ನು ಹೇತುವೆಂದು ಹೇಳಬೇಕು. ಸಮವಾಯಿಸಂಬಂಧದಿಂದ ಶಬ್ದವು ಆಕಾಶದಲ್ಲಷ್ಟೇ ಇರಬಹುದು ಹೊರತು ಭಗವಂತನಲ್ಲಿ ಇರಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ 'ಯಥಾ' ಇತ್ಯಾದಿಯಾಗಿ ದೃಷ್ಟಾಂತಪುರಃಸರವಾಗಿ ಉತ್ತರಿಸುತ್ತಿದ್ದಾರೆ. ಜನ್ಮಾಧಿ-ಕರಣದಲ್ಲಿ ಹೇಳಿದ 'ಭವೇತಾಂ ಯದಿ ವೃಕ್ಷಸ್ಯ' ಎಂಬ ನ್ಯಾಯವನ್ನು ಇಲ್ಲಿ ಅನುಸಂಧಾನ ಮಾಡಿ-ಕೊಳ್ಳಬೇಕು.

ಭವೇತಾಂ ಯದಿ ವೃಕ್ಷಸ್ಯ ವಾಜಿಕರ್ಣೌ ಕಥಂಚನ ।
ಅಕ್ಲೃಪ್ತಾಂ ಸಮುದಾಯಸ್ಯ ಕಃ ಶಕ್ತಿಂ ಜಾತು ಕಲ್ಪಯೇತ್ ॥

ಒಂದು ವೇಳೆ ವೃಕ್ಷಕ್ಕೆ ಕುದುರೆಯ ಕಿವಿ ಇದ್ದಿದ್ದರೆ ಯೋಗವನ್ನು ಹೇಳಬಹುದಿತ್ತು. ಆದರೆ ವೃಕ್ಷಕ್ಕೆ ಕಿವಿ

ಇರುವುದಿಲ್ಲ. ಆದಕ್ಕೋಸ್ಕರ ಪ್ರಮಾಣಸಿದ್ಧವಾಗದೇ ಇದ್ದರೂ ರೂಢಿಯನ್ನು ಕಲ್ಪಿಸುತ್ತೇವೆ. ಎಲ್ಲಿ ಅವಯವಶಕ್ತಿಯಿಂದಲೇ ಪ್ರಯೋಗವನ್ನು ಕೂಡಿಸಲು ಬರುತ್ತದೋ ಅಲ್ಲಿ ಮಾತ್ರ ಅದೃಷ್ಟವಾದ ಸಮುದಾಯಶಕ್ತಿಯನ್ನು ಹೇಳುವುದು ತಪ್ಪು. ಮೀಮಾಂಸಕರು ಹೇಳುವ ಈ ನ್ಯಾಯದಂತೆ ಪ್ರಕೃತ ಭೂತಾಕಾಶದಲ್ಲಿಯೂ ಆಕಾಶಶಬ್ದವನ್ನು ಯೌಗಿಕವಾಗಿಯೇ ಹೇಳಬೇಕು. ಆದ್ದರಿಂದ ರೂಢಿ ಎಂದು ಹೇಳುವ ಅವಶ್ಯಕತೆ ಇಲ್ಲ.

## ಪಾರ್ವಣಹೋಮಾದ್ಯನನುಷ್ಠಾನಾಧಿಕರಣಮ್

"ಪಾರ್ವಣಹೋಮಯೋಸ್ತ್ವಪ್ರವೃತ್ತಿಃ ಸಮುದಾಯಾರ್ಥಸಂಯೋಗಾತ್
ತದಭೀಜ್ಯಾ ಹಿ' (೯-೨-೨೫)

ದರ್ಶಪೂರ್ಣಮಾಸಪ್ರಕರಣದಲ್ಲಿ 'ಸ್ರುವೇಣ ಪಾರ್ವಣೋ ಜುಹೋತಿ' ಎಂಬ ವಾಕ್ಯವು ಕೇಳಿಸುತ್ತಿದೆ. ಈ ವಾಕ್ಯದಲ್ಲಿ ಪಾರ್ವಣೋ ಎಂಬ ತದ್ಧಿತಶ್ರುತಿಯಿಂದ ಸರ್ವದೇವತಾಕವಾದ ಎರಡು ಹೋಮಗಳನ್ನು ಮಾಡಬೇಕೆಂದು ತಿಳಿಯುತ್ತದೆ. ಪರ್ವಶಬ್ದದ ಮೇಲೆ ಅಣ್ ಎಂಬ ತದ್ಧಿತಪ್ರತ್ಯಯ ಬಂದು ಪಾರ್ವಣಶಬ್ದವು ನಿಷ್ಪನ್ನವಾಗಿದೆ. ಇದರಿಂದ ಪರ್ವದೇವತೆಗಳಿಗೆ ಸಂಬಂಧಿಸಿದ್ದೆಂಬ ಅರ್ಥವು ತಿಳಿಯುತ್ತದೆ. ದರ್ಶಪೂರ್ಣಮಾಸಯಾಗದ ವಿಕೃತಿಯಾಗದಲ್ಲಿ ಪರ್ವದೇವತಾಕವಾದ ಯಾಗಕ್ಕೆ ಅತಿದೇಶವಿದೆಯೋ? ಇಲ್ಲವೋ? ಎಂದು ಸಂದೇಹ.

ಪೂರ್ವಪಕ್ಷ - ಪರ್ವಶಬ್ದಕ್ಕೆ ಹುಣ್ಣಿಮೆಯ ಕಾಲ, ಅಮಾವಾಸ್ಯೆಯ ಕಾಲ ಎಂದರ್ಥ. ಆದ್ದರಿಂದ ಪಾರ್ವಣ ಎಂದರೆ ಕಾಲವೇ ದೇವತೆಯಾಗಿ ಉಳ್ಳ ಯಾಗವೆಂದರ್ಥ.

---

भाट्टसङ्ग्रहः –

**पार्वणहोमयोस्त्वप्रवृत्तिः समुदायार्थसंयोगात्तदभिज्या हि ॥ ५१ ॥**
**(कालस्येति चेत् ॥ ५२ ॥ नाप्रकरणत्वात् ॥ ५३ ॥ मन्त्रवर्णाच्च ॥ ५४ ॥**
**तदभावेऽग्निवदिति चेत् ॥ ५५॥ नाधिकारिकत्वात् ॥ ५६ ॥)**

**प्रासङ्गिकी सङ्गतिः** । दर्शपूर्णमासयोः श्रूयते "स्रुवेण पार्वणौ जुहोति" इति । तत्र वाक्ये पार्वणावित्यत्र तद्धितश्रुत्या पर्वदैवत्यौ द्वौ होमौ श्रुतौ । तत्र पर्वशब्दः किं कालपर अथ कर्मसमुदायपर इति सन्देहे, पर्वपदस्य तिथिविशेषरूपकाले सर्वजनप्रसिद्ध्या तत्र शब्दस्य मुख्यत्वात् पर्वरूपकालविशेषदेवताकाविमौ होमौ दर्शादेरारादुपकारकाविति **प्राप्ते सिद्धान्तः** । पृणातिधातुर्दानार्थः सन् "दीयते हविरस्मिन्, काले" इत्यधिकरणव्युत्पत्त्या पर्वकाल इव भावव्युत्पत्त्या दानरूपकर्मण्यपि मुख्यः । तथा लोके प्रयोगवशेन पर्वकाले प्रसिद्ध इव "पर्वेष्टिरद्य प्रवर्तते" इत्यभियुक्तप्रयोगबलेन दर्शपूर्णमासाख्यकर्मसमुदायेऽपि प्रसिद्ध एव । अतः काल इव कर्मण्यपि मुख्यत्वात् " ऋषभं वाजिनं वयं पूर्णमासं यजामहे" इति "अमावास्या

ಯಜ್ಞದಲ್ಲಿರುವ ಅಂಗಗಳು ಎರಡು ವಿಧ : ೧) ಸನ್ನಿಪತ್ಯೋಪಕಾರಕ ೨) ಆರಾದುಪಕಾರಕ. ಸನ್ನಿಪತ್ಯೋಪಕಾರಕವೆಂದರೆ ಯಾಗದ ಸ್ವರೂಪಕ್ಕೆ ಕಾರಣವಾಗಿರುವುದು ಎಂದರ್ಥ. ಉದಾಹರಣೆ - ಅವಘಾತ ಮಾಡದಿದ್ದರೆ ತಂಡುಲವು ನಿಷ್ಪನ್ನವಾಗುವುದಿಲ್ಲ. ಇದರಿಂದ ಪುರೋಡಾಶದ ನಿರ್ಮಾಣವು ಸಾಧ್ಯವಾಗುವುದಿಲ್ಲ. ಪುರೋಡಾಶದಿಂದ ಯಾಗವನ್ನು ಮಾಡಬೇಕೆಂದರೆ ವ್ರೀಹಿಯನ್ನು ಅವಹನನ ಮಾಡಬೇಕು. ಆದ್ದರಿಂದ ಅವಘಾತವು ಯಾಗಸ್ವರೂಪಕ್ಕೆ ಕಾರಣವಾಗಿದೆ.

ಆರಾದುಪಕಾರಕಕ್ಕೆ ಉದಾಹರಣೆ - 'ಇಡೋ ಯಜತಿ ಸಮಿದೋ ಯಜತಿ' ಇವುಗಳು ದರ್ಶಪೂರ್ಣಮಾಸಕ್ಕೆ ಅಂಗಗಳು. ಇವುಗಳು ಯಾಗದಿಂದ ಫಲ ಬರಲು ಕಾರಣವಾಗಿವೆ ಹೊರತು ನೇರವಾಗಿ ಯಾಗಸ್ವರೂಪಕ್ಕೆ ಕಾರಣವಾಗಿಲ್ಲ. ಅಂದರೆ ಸಮಿದಾದಿ ಯಾಗಗಳನ್ನು ಮಾಡದಿದ್ದರೆ ದರ್ಶಪೂರ್ಣಮಾಸಯಾಗವನ್ನು ಮಾಡಲು ಸಾಧ್ಯವಿಲ್ಲವೆಂದೇನಿಲ್ಲ. ದರ್ಶಪೂರ್ಣಮಾಸಯಾಗದಿಂದ ಫಲ ಬರುವುದಿಲ್ಲ ಎಂದಷ್ಟೇ ಅರ್ಥ. ಹಾಗಾಗಿ ಸಮಿದಾದಿಪಂಚಪ್ರಯಾಜಗಳು ಆರಾದುಪಕಾರಕವಾದ ಅಂಗವೆನಿಸುತ್ತವೆ. ಯಾವುದೇ ಪ್ರಕೃತಿಯಾಗದಲ್ಲಿ ಆರಾದುಪಕಾರಕ ಅಂಗಗಳನ್ನು ಹೇಳಿದರೆ ಅವುಗಳನ್ನು ವಿಕೃತಿಯಾಗದಲ್ಲಿಯೂ ಅತಿದೇಶ ಮಾಡಿಕೊಳ್ಳಬೇಕು. ಆದರೆ ಸ್ವರೂಪೋಪಕಾರಕ ಅಂಗಕ್ಕೆ ವಿಕೃತಿಯಾಗದಲ್ಲಿ ಅತಿದೇಶವಿರುವುದಿಲ್ಲ.

ಪ್ರಕೃತದಲ್ಲಿ ಪರ್ವವೆಂಬ ಕಾಲದಲ್ಲಿ ಪ್ರಸಿದ್ಧವಾದ ಎರಡು ಹೋಮಗಳು ಆರಾದುಪಕಾರಕವಾದ ಅಂಗಗಳಾಗಿವೆ. ಆದ್ದರಿಂದ ವಿಕೃತಿಯಾಗವಾದ ಸೌರ್ಯಾದಿ ಯಾಗಗಳಲ್ಲಿ ಅತಿದೇಶವನ್ನು ಮಾಡಬೇಕು. ಆದ್ದರಿಂದ ದರ್ಶಪೂರ್ಣಮಾಸದ ಯಾಗದ ವಿಕೃತಿಯಾಗವೆನಿಸಿದ ಸೌರ್ಯಾದಿ ಯಾಗದಲ್ಲಿ ಸ್ರುವೇಣ ಪಾರ್ವಣೌ ಜುಹೋತಿ ಎಂಬ ವಾಕ್ಯವನ್ನು ಅತಿದೇಶ ಮಾಡಬೇಕು.

ಸಿದ್ಧಾಂತ - ಪರ್ವಶಬ್ದವು ಪೃಣಧಾತುವಿನಿಂದ ನಿಷ್ಪನ್ನವಾಗಿದೆ. ಪೃಣಧಾತುವಿಗೆ 'ದಾನ' ಎಂದರ್ಥ. 'ಪ್ರೀಯತೇ = ದೀಯತೇ ಹವಿಃ ಅಗ್ನಿಂ ಕಾಲೇ' ಎಂಬ ಅಧಿಕರಣ ವ್ಯುತ್ಪತ್ತಿಯನ್ನು ಮಾಡಿದರೆ ಯಾವ ಕಾಲವಿಶೇಷದಲ್ಲಿ ದಾನಾದಿಗಳನ್ನು ಮಾಡುತ್ತೇವೋ ಆ ಕಾಲವೇ ಪರ್ವ ಎನಿಸುತ್ತದೆ. ಅಥವಾ ಪ್ರೀಣನಂ = ಪರ್ವ ಎಂದು ಭಾವವ್ಯುತ್ಪತ್ತಿಯನ್ನು ಮಾಡಿದರೆ ದಾನವೆಂಬ ಕರ್ಮವನ್ನು ಪರ್ವ ಎಂದಂತಾಗುತ್ತದೆ.

---

सुभगा सुशेवा'' इति च मन्त्रद्वयेन कर्मसमुदायद्वयस्मरणशत्प्रकरणानुग्रहाच्च कर्मसमुदायद्वयपरोऽत्र पर्वशब्द इति समुदायद्वयसंस्कारकतया दर्शपूर्णमासाख्यकर्मसमुदायद्वयदेवताकौ सन्निपात्यङ्गमिमौ होमाविति । तदाह **सूत्रे, पार्वणहोमयोर्विकृतिषु सौर्यादिष्वप्रवृत्तिः** पर्वशब्दस्य आग्नेयाकर्म**समुदायद्वय**रूपार्थवाचित्वेन **तत्संयोगात् तदभिज्या** तत्संस्कारकहोमो हि यत इति । **फलन्तु पूर्वपक्षे** कालदैवत्यत्वात्कालस्य चासंस्कार्यत्वेनाऽरादुपकारकौ होमाविति सौर्यादिविकृतिष्वेतयोः प्रवृत्तिः । **सिद्धान्ते तु,** समुदायदेवताकत्वात्सौर्यादेराग्नेयादिसमुदायिविकृतितया समुदायाविकरत्वान्नास्ति तत्र एतयोरतिदेश इति ।

ಹೀಗೆ ಪರ್ವಶಬ್ದಕ್ಕೆ ಅಧಿಕರಣವ್ಯುತ್ಪತ್ತಿಯನ್ನು ಮಾಡಿದಾಗ ಕಾಲವೆಂಬ ಅರ್ಥವೂ, ಭಾವವ್ಯುತ್ಪತ್ತಿಯನ್ನು ಮಾಡಿದಾಗ ಕರ್ಮ ಎಂಬರ್ಥವೂ ದೊರೆಯುತ್ತದೆ. ಈ ಎರಡು ವಿಧವಾದ ಅರ್ಥಗಳಲ್ಲಿ ಕರ್ಮವೆಂಬರ್ಥವನ್ನೇ ಸ್ವೀಕರಿಸಬೇಕು. ಏಕೆಂದರೆ 'ಸ್ರುವೇಣ ಪಾರ್ವಣೌ ಜುಹೋತಿ' ಎಂಬ ವಾಕ್ಯವು 'ವೃಷಭಂ ವಾಜಿನಂ ವಯಂ ಪೂರ್ಣಮಾಸಂ ಯಜಾಮಹೇ' ಮತ್ತು 'ಅಮಾವಾಸ್ಯಾ ಸುಭಗಾ ಸುಷೇವಾ' ಇತ್ಯಾದಿಯಾದ ಕರ್ಮಪ್ರಕರಣದಲ್ಲಿ ಪ್ರಸಕ್ತವಾಗಿದೆ. ಹಿಂದೆ ಯಜಾಮಹೇ ಇತ್ಯಾದಿಯಾಗಿ ಕರ್ಮವು ಪ್ರಸಕ್ತವಾದ್ದರಿಂದ ಕರ್ಮದ ಉಪಸ್ಥಿತಿಯೇ ಮನಸ್ಸಿನಲ್ಲಿರುತ್ತದೆ. ಆ ಸಂದರ್ಭದಲ್ಲಿ ಪ್ರಸಕ್ತವಾದ 'ಪಾರ್ವಣೌ ಜುಹೋತಿ' ಎಂಬ ವಾಕ್ಯವೂ ಸಹ ಕರ್ಮವಿಷಯಕವೆಂದೇ ಎಲ್ಲರೂ ತಿಳಿಯುತ್ತಾರೆ. ಮತ್ತು ಸಾಮವಾಯಿಕತ್ವದಿಂದಲೂ ಸಹ ಕರ್ಮವಾಚಿಯೆಂದು ಅಂಗೀಕರಿಸಬೇಕು.

ಹೀಗೆ ಪರ್ವಶಬ್ದವು ಅಧಿಕರಣವ್ಯುತ್ಪತ್ತಿಯಿಂದ ಕಾಲವನ್ನು ಹೇಳಿದರೂ, (ಅದಕ್ಕೆ) ಭಾವವ್ಯುತ್ಪತ್ತಿಯಿಂದ ಕರ್ಮವಾಚಿತ್ವವನ್ನು ಅಂಗೀಕರಿಸುವುದು ಅನಿವಾರ್ಯ. ಆದ್ದರಿಂದ ಪಾರ್ವಣೌ ಎಂದರೆ ಕರ್ಮದೇವತಾಕವಾದ ಎರಡು ಯಾಗಗಳು ಎಂದರ್ಥ. 'ಪರ್ವಣಶ್ಚ ಪರ್ವಣಶ್ಚ ಪರ್ವಣೌ' ಎಂದು ತಂತ್ರದಿಂದ ಪರ್ವಶಬ್ದವನ್ನು ಎರಡು ಬಾರಿ ಇಟ್ಟುಕೊಳ್ಳಬೇಕು. ಆವಾಗ 'ಅಮಾವಾಸ್ಯೆಯ ಮೂರು ಯಾಗಗಳು ಮತ್ತು ಪೂರ್ಣಮಾಸಿಯ ಮೂರು ಯಾಗಗಳು; ಈ ಮೂರು ಯಾಗಗಳೇ ದೇವತೆಯಾಗಿಯುಳ್ಳ ಮತ್ತೊಂದು ಯಾಗ' ಎಂದರ್ಥ.

ಅಂದರೆ - ಯಾಗವೆಂಬ ಕರ್ಮವೇ ಯಾವ ಯಾಗದಲ್ಲಿ ದೇವತೆಯಾಗಿ ಇದೆಯೋ ಅಂತಹ ಯಾಗವನ್ನು ಈ ವಾಕ್ಯವು ವಿಧಿಸುತ್ತಿದೆ. (ದೇವತೆಯೆಂದರೆ ಚೇತನವೇ ಆಗಿರಬೇಕೆಂದು ಮೀಮಾಂಸಕರು ಅಂಗೀಕರಿಸುವುದಿಲ್ಲ. ಕೆಲವೊಮ್ಮೆ ಕಾಲವನ್ನೂ ದೇವತೆಯೆನ್ನುತ್ತಾರೆ. ಕೆಲವೊಮ್ಮೆ ಇಂದ್ರಾದಿಗಳನ್ನೂ ದೇವತೆ ಎನ್ನುತ್ತಾರೆ. ಆದರೆ ಪ್ರಕೃತದಲ್ಲಿ ಯಾಗವೆಂಬ ಕರ್ಮವನ್ನೇ ದೇವತೆ ಎನ್ನುತ್ತಿದ್ದಾರೆ. ಕರ್ಮವನ್ನೇ ದೇವತೆಯಾಗಿ ಉಳ್ಳ ಯಾಗಕ್ಕೆ ಈ ಅಧಿಕರಣವು ಹೊಸದೊಂದು ಉದಾಹರಣೆಯಾಗಿದೆ). ಈ ಅರ್ಥದಲ್ಲಿ ದೇವತಾತ್ವವು ವ್ಯಾಸಜ್ಯವೃತ್ತಿಧರ್ಮವಾಗಿದೆ. ಯಾವ ರೀತಿಯಾಗಿ ಅಗ್ನಿ ಹಾಗೂ ಸೋಮ ಇಬ್ಬರಲ್ಲಿರುವ (ಅಗ್ನಿ ಸೋಮರಲ್ಲಿರುವ ದೇವತಾತ್ವವು ವ್ಯಾಸಜ್ಯವೃತ್ತಿಯಾಗಿದೆಯೋ, ಅದರಂತೆ ಯಾಗತ್ರಿಕದ್ವಯವೆಂಬ ಕರ್ಮದ್ವಯಗಳಲ್ಲಿ ದೇವತಾತ್ವವು ಇಲ್ಲಿ ವ್ಯಾಸಜ್ಯವೃತ್ತಿಯಾಗಿದೆ. ಅಂದರೆ ಅಮಾವಾಸ್ಯೆಯ ಮೂರು ಯಾಗಗಳು ಮತ್ತು ಪೂರ್ಣಮಾಸಿಯ ಮೂರು ಯಾಗಗಳು ಈ ಆರು ಯಾಗಗಳನ್ನು ಎರಡು ಭಾಗ ಮಾಡಿದರೆ ಯಾಗತ್ರಿಕದ್ವಯವಾಗುತ್ತದೆ. ಈ ತ್ರಿಕದ್ವಯಗಳಲ್ಲಿ ದೇವತಾತ್ವವು ಸಮಾನವಾಗಿ ಆಧೇಯವಾಗಿದೆ.

ಹೀಗೆ ದರ್ಶಪೂರ್ಣಮಾಸಯಾಗವೆಂಬ ಕರ್ಮಗಳೇ ದೇವತೆಯಾಗಿರುವ ಯಾಗವನ್ನು ವಿಕೃತಿಯಲ್ಲಿ ಅತಿದೇಶ ಮಾಡಲು ಹೇಗೆ ಸಾಧ್ಯ ? ಸೂರ್ಯದೇವತಾಕವಾದ ವಿಕೃತಿಯಾಗದಲ್ಲಿ ದರ್ಶಪೂರ್ಣಮಾಸ-ಯಾಗವೆಂಬ ಕರ್ಮವು ದೇವತೆಯಾಗಲು ಸಾಧ್ಯವೇ ಇಲ್ಲ. ದರ್ಶಪೂರ್ಣಮಾಸಯಾಗದಲ್ಲಷ್ಟೇ ದರ್ಶಪೂರ್ಣಮಾಸಯಾಗಗಳೆಂಬ ಕರ್ಮವು ದೇವತೆಯಾಗಬಹುದು. ಅಷ್ಟೇ ಅಲ್ಲದೆ ದರ್ಶಪೂರ್ಣಮಾಸ ಪ್ರಕರಣದಲ್ಲಿ ಒಟ್ಟು ಆರು ಯಾಗಗಳಿವೆ. ಸೌರ್ಯವೆಂಬ ವಿಕೃತಿಯಾಗವು ಸಮುದಾಯರೂಪವಾದ ಈ

ಆರು ಯಾಗಗಳ ವಿಕೃತಿಯಾಗವಲ್ಲ. ಹೊರತು ಈ ಆರು ಯಾಗಗಳ ಮಧ್ಯದಲ್ಲಿ ಒಂದು ಯಾಗಕ್ಕಷ್ಟೇ ವಿಕೃತಿಯಾಗವಾಗಿದೆ.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಸೌರ್ಯಯಾಗವು ಸಮುದಾಯವಿಕಾರವೇ ಹೊರತು ಸಮುದಾಯದ ವಿಕಾರವಲ್ಲ. ಆದರೆ ಪಾರ್ವಣ ಹೋಮವು ಸಮುದಾಯಯಾಗವೇ ದೇವತೆಯಾಗಿ-ಯುಳ್ಳದ್ದು. ಇದನ್ನು ಸಮುದಾಯವಿಕಾರವಾದ ಸೌರ್ಯಯಾಗದಲ್ಲಿ ದೇವತೆಯೆಂದು ಹೇಳಲು ಹೇಗೆ ಸಾಧ್ಯ ? ಆದ್ದರಿಂದ ಪೂರ್ವಪಕ್ಷಿಗಳು ಹೇಳುವಂತೆ ಪರ್ವಶಬ್ದಕ್ಕೆ ಅಧಿಕರಣವ್ಯುತ್ಪತ್ತಿಯಿಂದ ಕಾಲವೆಂಬ ಅರ್ಥವನ್ನೂ ಮಾಡಬಾರದು, ಮತ್ತು ಪಾರ್ವಣ ಹೋಮವನ್ನು ವಿಕೃತಿಯಾಗದಲ್ಲಿ ಅತಿದೇಶವನ್ನೂ ಮಾಡಬಾರದು. ಹೊರತಾಗಿ ಪರ್ವಶಬ್ದಕ್ಕೆ ಭಾವವ್ಯುತ್ಪತ್ತಿಯಿಂದ ಕರ್ಮವೆಂಬ ಅರ್ಥವನ್ನು ಮಾಡಬೇಕು. ಮತ್ತು ವಿಕೃತಿಯಾಗದಲ್ಲಿ ಪಾರ್ವಣಹೋಮದ ಅತಿದೇಶವನ್ನು ಮಾಡಬೇಕು.

ಈ ಪಾರ್ವಣಹೋಮಾಧಿಕರಣದಿಂದ ಏನು ತಿಳಿಯಬೇಕೆಂದರೆ ಪೂರ್ವಪಕ್ಷದಲ್ಲಾಗಲೀ ಸಿದ್ಧಾಂತದಲ್ಲಾಗಲೀ ಪಾರ್ವಣಶಬ್ದವನ್ನು ಯೌಗಿಕವೆಂದೇ ಅಂಗೀಕರಿಸಿದ್ದಾರೆ. ಪೂರ್ವಪಕ್ಷಿಗಳು ಅಧಿಕರಣವ್ಯುತ್ಪತ್ತಿಯಿಂದ ಕಾಲವೆಂಬ ಅರ್ಥವನ್ನು ಹೇಳುತ್ತಾರೆ. ಸಿದ್ಧಾಂತಿಗಳು ಭಾವವ್ಯುತ್ಪತ್ತಿಯಿಂದ ಕರ್ಮವೆಂಬ ಅರ್ಥವನ್ನು ಹೇಳುತ್ತಾರೆ. ಏನೇ ಆಗಲಿ ಪಾರ್ವಣಶಬ್ದಕ್ಕೆ ಯೋಗಾರ್ಥವನ್ನೇ ಸ್ವೀಕರಿಸಲು ಬರುವಾಗ ರೂಢ್ಯರ್ಥವನ್ನು ಪೂರ್ವಪಕ್ಷಿಗಳಾಗಲೀ ಸಿದ್ಧಾಂತಿಗಳಾಗಲೀ ಅಂಗೀಕರಿಸಿಲ್ಲ. ಈ ದೃಷ್ಟಾಂತದಂತೆ ಪ್ರಕೃತ ಆಕಾಶಶಬ್ದಕ್ಕೂ ಕೂಡ ಭೂತಾಕಾಶದಲ್ಲಿ ಯೋಗವನ್ನೇ ಹೇಳಲು ಬರುವಾಗ ರೂಢಿಯನ್ನು ಅಂಗೀಕರಿಸಬಾರದು. ಈಗಾಗಲೇ ಹೇಳಿದಂತೆ ಯೋಗವನ್ನು ಅಂಗೀಕರಿಸುವುದರಿಂದ ಲಾಘವವಿದೆ. ಆದ್ದರಿಂದ ಆಕಾಶಶಬ್ದಕ್ಕೆ ಯೋಗಾರ್ಥವು ಕೂಡುವುದಿಲ್ಲ ಎಂಬ ಪೂರ್ವಪಕ್ಷಿಯ ನಿಲುವು ಆಧಾರವಿಲ್ಲದಂತಾಗಿದೆ.

ಆಕಾಶಶಬ್ದಕ್ಕೆ ಭೂತಾಕಾಶದಲ್ಲಿ ಕೇವಲ ಯೋಗವನ್ನು ಹೇಳಬಹುದು. ಆದರೆ ವಿಷ್ಣುವಿನಲ್ಲಿ ಮಹಾಯೋಗದಿಂದ ಆಕಾಶಶಬ್ದದ ಪ್ರಯೋಗವಿದೆ. ಯೋಗಕ್ಕಿಂತ ಮಹಾಯೋಗವು ಬಲಿಷ್ಠವಾದ್ದರಿಂದ ವಿಷ್ಣುವೇ ಆಕಾಶಶಬ್ದವಾಚ್ಯನಾಗುತ್ತಾನೆ. ಆಕಾಶಶಬ್ದದ ಪ್ರವೃತ್ತನಿಮಿತ್ತವಾದ ವಿವರತ್ವವು ಭಗವಂತನಲ್ಲಿರುವುದರಿಂದ ಮಹಾಯೋಗವೃತ್ತಿಯನ್ನು ಹೇಳಿದಿರಿ. ಹಾಗಾದರೆ ಪೂರ್ವಪಕ್ಷದಲ್ಲಿ ವಿವರತ್ವವನ್ನು ಭೂತಾಕಾಶದ ಸ್ವಭಾವವೆಂದು ಹೇಳಿದ್ದು ಮತ್ತು ಸಿದ್ಧಾಂತದಲ್ಲಿ ಭಗವದಧೀನವೆಂದು ಹೇಳಿದ್ದು ಎರಡು ಸಹ ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ 'ಏವಂಚ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ.

### ಭಕ್ಷಮಂತ್ರಾಣಾಂ ಯಥಾಲಿಂಗಗ್ರಹಣಾದೌ ವಿನಿಯೋಗಾಧಿಕರಣಮ್<br>ಲಿಂಗಸಮಾಖ್ಯಾಯಾಂ ಭಕ್ಷಾರ್ಥತಾ ಅನುವಾಕಸ್ಯ - (೩-೨-೧೧)

'ಇಂದ್ರಪೀತಸ್ಯ ನರಾಶಂಸಪೀತಸ್ಯ ಪೀತೃಪೀತಸ್ಯ ಮಧುಮತ ಉಪಹೂತಸ್ಯೋಪಹೂತೋ ಭಕ್ಷಯಾಮಿ'

ಈ ಮಂತ್ರವು ಈ ಅಧಿಕರಣದ ವಿಷಯವಾಕ್ಯವಾಗಿದೆ.

ಸಂಶಯಪೂರ್ವಪಕ್ಷಾದಿಗಳನ್ನು ವಿಚಾರ ಮಾಡುವ ಮೊದಲು ಪ್ರಾಸಂಗಿಕವಾಗಿ ಕೆಲವು ವಿಚಾರಗಳನ್ನು ತಿಳಿದರೆ ಅನುಕೂಲವಾಗುತ್ತದೆ. ಪ್ರಾತಃಸವನ, ಮಾಧ್ಯಂದಿನಸವನ ಹಾಗೂ ಸಾಯಂಸವನಗಳನ್ನು ಅನುಷ್ಠಾನ ಮಾಡುವಾಗ ಸೋಮವನ್ನು ಅಭಿಷವ ಮಾಡಬೇಕು. ಆ ಸೋಮವನ್ನು ಬೇರೆ ಬೇರೆ ಪಾತ್ರೆಗಳಲ್ಲಿ ಇರಿಸಿ, ಆಹುತಿಯನ್ನಾಗಿ ಇಂದ್ರಾದಿ ದೇವತೆಗಳಿಗೆ ನೀಡಬೇಕು. ಒಬ್ಬೊಬ್ಬ ದೇವತೆಗೂ ನೀಡಿ ಉಳಿದದ್ದು ಹವಿಪ್ರದಾನಶೇಷವೆನಿಸುತ್ತದೆ. ಆವಾಗ ಪ್ರಾತಃಸವನಾದಿಗಳು ಇಂದ್ರ, ಅಗ್ನಿ, ಮೊದಲಾದ ದೇವತೆಗಳಿಂದ ಪೀತವಾದ ಶೇಷವುಳ್ಳದ್ದು ಎನಿಸುತ್ತವೆ. ಪಾತ್ರೆಯಲ್ಲಿ ಉಳಿದ ಹವಿಸ್ಸನ್ನು ಭಕ್ಷಣ ಮಾಡಬೇಕಾದರೆ ಮಂತ್ರವನ್ನು ಹೇಳಿ ಭಕ್ಷಿಸಬೇಕೋ? ಅಥವಾ ಹಾಗೆಯೇ ಭಕ್ಷಿಸಬೇಕೋ? ಎಂದು ಸಂಶಯ ಬಂದರೆ, ಮಂತ್ರವನ್ನು ಹೇಳಿಯೇ ಭಕ್ಷಿಸಬೇಕೆಂದು ತಿಳಿಸುವುದಕ್ಕೋಸ್ಕರ 'ಇಂದ್ರಪೀತಸ್ಯ' ಎಂಬ

---

भाट्टसङ्ग्रहः –

**लिङ्गसमाख्याभ्यां भक्षार्थताऽनुवाकस्य ॥ २४ ॥**

**(तस्य रूपोपदेशाभ्यामपकर्षोऽर्थस्य चोदितत्वात् ॥ २५ ॥)**

सामान्यसम्बन्धमपेक्ष्य लिङ्गं विनियोगकमित्यस्य क्वचिदपवादोप्यस्तीत्यत्रोच्यते इति **सङ्गतिः ।** ज्योतिष्टोमो हुतस्य सोमरसस्य शेषभक्षणं विहितं 'अभिषुत्याऽऽहवनीये हुत्वा प्रत्यञ्चः परेत्य सदसि सोमं भक्षयन्ति' इति । तस्मिन् भक्षणे ग्रहणावेक्षणनिगिरण-सम्यग्जरणरूपाश्चत्वारो व्यापाराभक्षानुवाकसंज्ञके भक्षमन्त्रे समाम्नाताः । "भक्षे हि मा विश दीर्घायुत्वाय शन्तनुत्वाय रायस्फोषाय वर्चसे सुप्रजास्त्वाय । एहि वसो पुरोवसो प्रियो मे हृदोऽस्यश्विनोस्त्वा बाहुभ्यां सख्यासम् । नृचक्षसं त्वा देव सोम सुचक्षा अवख्येषम् । हिन्व मे गात्रा हरिवो गणान्मे वा वीतीतृषः । शिवो मे सप्तर्षीनुपतिष्ठस्व मा मेऽवाङ्नाभिमतिगाः । मन्द्राभिभूतिः केतुर्यज्ञानां वाग्जुषणा सोमस्य तृप्यतु । वसुमद्गणस्य रुद्रवद्गणस्य आदित्यवद्गणस्य सोमदेव ते मतिविदः प्रातःसवनस्य माध्यन्दिनस्य सवनस्य तृतीयस्य सवनस्य गायत्रछन्दसस्त्रिष्टुप्छन्दसो जगती-च्छन्दसोऽभिष्टुत इन्द्रपीतस्य नराशँसपीतस्य पितृपीतस्य मधुमत उपहूतस्योपहूतो भक्षयामि'' इति ।

तत्र किं सर्वोऽपि भक्षानुवाकः सोमभक्षणे विनियुज्यते, उत 'एहि वसो' इत्यादिः सख्यासम्' इत्यन्तस्तद्ग्रहणे, 'नृचक्षसम्' इत्यादिः 'अवख्येषम्' इत्यन्तस्तद्दर्शने, 'हिन्व' इत्यादिः 'हे हरिवः सोम मे गात्राणि हिन्व प्रीणय । गणान् इन्द्रियाणि मा वितीतृषः वितृष्णानि मा कुरु । शिवस्सन् मे सप्तर्षीन् चक्षुर्द्वयनासाद्वारद्वय-श्रोत्रद्वयाऽस्यान् उपतिष्ठस्व व्याप्नुहि । मे नाभिमवाक् नाभेरधस्तात् मातिगाः' इति । **पूर्वपक्षस्तु** भक्षणवद्ग्रहणादिकं न साक्षाद्विहित् । किन्तु भक्षणं ग्रहणादिना विना न सम्भवतीत्यर्थतः प्राप्तम् । 'मन्त्रश्च क्रत्वर्थत्वेन विहितमेवार्थं प्रकाशयति' इत्यविहिते

ಶ್ರುತಿಯು ಹೊರಟಿದೆ. ಅನೇಕ ದೇವತೆಗಳಿಗೆ ಆಹುತಿಯನ್ನು ನೀಡಿ ಶಿಷ್ಟವಾದ ಹವಿಸ್ಸುಗಳು ಇರುತ್ತವೆ. ಅವುಗಳನ್ನು ಋತ್ವಿಜರು ಭಕ್ಷಿಸುವಾಗ 'ಇಂದ್ರಪೀತಸ್ಯ' ಎಂಬ ಒಂದೇ ಮಂತ್ರವನ್ನು ಹೇಳಬೇಕು. ಬೇರೆ ಬೇರೆ ಮಂತ್ರಗಳನ್ನು ಹೇಳುವ ಅವಶ್ಯಕತೆ ಇಲ್ಲವೆಂದು ಪೂರ್ವಮೀಮಾಂಸೆಯ ಮೂರನೇ ಅಧ್ಯಾಯ ಎರಡನೆಯ ಪಾದದಲ್ಲಿ ನಿರ್ಧರಿಸಲಾಗಿದೆ.

ಸಂಶಯ - ಇಂದ್ರನಿಗೆ ಸಂಬಂಧಿಸಿದ ಹವಿಪ್ರದಾನಶೇಷದ ಭಕ್ಷಣದಲ್ಲಿ ಇಂದ್ರಪೀತಸ್ಯ ಎಂಬ ಮಂತ್ರವನ್ನು ಹೇಳಬೇಕು ಹೊರತು ಇಂದ್ರನಿಗೆ ಸಂಬಂಧಪಡದ ಅಗ್ನಿ ಮಿತ್ರ ವರುಣ ಮೊದಲಾದವರ ಹವಿಸ್ಸಿನ ಶೇಷವನ್ನು ಭಕ್ಷಿಸುವಾಗ ಈ ಮಂತ್ರವನ್ನು ಪ್ರಯೋಗಿಸದೆ ಅಮಂತ್ರಕವಾಗಿ ಭಕ್ಷಿಸಬೇಕೆಂದು ಹೇಳುತ್ತೀರೋ? ಅಥವಾ ಅಲ್ಲಿಯೂ ಸಹ ಅಗ್ನಿ ಮೊದಲಾದ ಶಬ್ದಗಳನ್ನು ಊಹೆ ಮಾಡಿಕೊಂಡು ಮಂತ್ರವನ್ನು ಪ್ರಯೋಗಿಸಬೇಕೆನ್ನುತ್ತೀರೋ? ಅಥವಾ ಯಾವರೂಪದಲ್ಲಿ ಮಂತ್ರವಿದೆಯೋ ಅದೇ ರೂಪದಲ್ಲಿಯೇ ಉಳಿದ ದೇವತೆಗಳ ಹವಿಸ್ಸಿನ ಶೇಷವನ್ನು ಭಕ್ಷಣ ಮಾಡುವಾಗ ಹೇಳಬೇಕೆನ್ನುತ್ತೀರೋ?

ಮೊದಲನೆಯ ಪೂರ್ವಪಕ್ಷ - ಮೈತ್ರಾವರುಣಸೋಮಭಕ್ಷಣದಲ್ಲಾಗಲೀ ಅಥವಾ ಆಗ್ನೇಯಸೋಮಭಕ್ಷಣದಲ್ಲಾಗಲೀ 'ಇಂದ್ರಪೀತಸ್ಯ' ಎಂಬ ಮಂತ್ರವನ್ನು ಪ್ರಯೋಗಿಸುವುದು ಬೇಡ. ಯಾವುದೇ ಮಂತ್ರವನ್ನು ಉಚ್ಚರಿಸದೆ ಮೌನವಾಗಿ ಸೋಮವನ್ನು ಭಕ್ಷಿಸಬೇಕು. ಒಂದು ವೇಳೆ ಇಂದ್ರಪೀತಸ್ಯ ಎಂಬ ಪದವು ಬಹುವ್ರೀಹಿಸಮಾಸವಾಗಿದ್ದಲ್ಲಿ ಆಗ್ನೇಯಾದಿ ಸೋಮಭಕ್ಷಣದಲ್ಲಿ ಇಂದ್ರಪೀತಸ್ಯ ಎಂಬ ಮಂತ್ರವನ್ನು ಹೇಳಬಹುದು ಎಂದಾಗುತ್ತಿತ್ತು. ಆದರೆ ಬಹುವ್ರೀಹಿ ಎಂದು ಮಾಡ-ಲಾಗದು.

ಅದು ಹೀಗೆ -- 'ಇಂದ್ರೇಣ ಪೀತಃ ಯಸ್ಮಿನ್ ಸಃ ಇಂದ್ರಪೀತಃ, ಎಂದು ಬಹುವ್ರೀಹಿಯನ್ನು ಮಾಡಿ-ದಾಗ 'ಇಂದ್ರನಿಂದ ಕುಡಿಯಲ್ಪಟ್ಟ ಸೋಮದಿಂದ ಕೂಡಿದ ಪ್ರಾತಃಸವನಾದಿಗಳು' ಎಂದರ್ಥವಾಗುತ್ತದೆ. ಈ ಅರ್ಥದಲ್ಲಿ ಇಂದ್ರಪೀತಶಬ್ದವು ಸವನಕ್ಕೆ ವಿಶೇಷಣವಾಗುತ್ತದೆ. ಸವನಕ್ಕೆ ವಿಶೇಷಣವಾದ್ದರಿಂದ ಮೈತ್ರಾವರುಣಾದಿಗಳ ಸೋಮಭಕ್ಷಣದಲ್ಲಿಯೂ ಈ ಮಂತ್ರವನ್ನು ಹೇಳಬಹುದು ಎಂದಂತಾಗುತ್ತದೆ. ಏಕೆಂದರೆ ಈ ಮಂತ್ರದಲ್ಲಿ ಇಂದ್ರನಿಂದ ಪೀತವಾದ ಸೋಮವನ್ನು ಹೇಳಿಲ್ಲ, ಇಂದ್ರನಿಂದ ಪೀತವಾದ ಸೋಮವುಳ್ಳ ಸವನದಲ್ಲಿ ಹವಿಃಶೇಷವನ್ನು ಭಕ್ಷಣ ಮಾಡುತ್ತೇನೆ ಎಂದು ಹೇಳಲಾಗಿದೆ. ಹೀಗೆ ಹೇಳಿದಾಗ ಮೈತ್ರಾವರುಣಾಗ್ನೇಯಮೊದಲಾದ ಸೋಮಭಕ್ಷಣದಲ್ಲಿಯೂ ಈ ಮಂತ್ರವನ್ನು ಪ್ರಯೋಗಿಸಲು ತೊಂದರೆ ಇಲ್ಲ. ಬಹುವ್ರೀಹಿಸಮಾಸ ಮಾಡಿದರಷ್ಟೇ ಹೀಗೆ ಹೇಳಲು ಸಾಧ್ಯ. ಆದರೆ ಬಹುವ್ರೀಹಿ-

---

ग्रहणादौ मन्त्रस्य विनियोगायोगात् कृत्स्नोप्यनुवाकः 'सख्यासम्' 'अवख्येषम्' इत्यादेर्लक्षणया भक्षणप्रकाशनसामर्थ्यकल्पनेन भक्षण एव विनियुज्यते । तथा च **सूत्रम्, भक्षानुवाकस्य समस्तस्य भक्षार्थतैव ।** कुतः? **लिङ्गसमाख्याभ्यां** 'भक्षे हि' 'भक्षयामि' इत्यादिलिङ्गात्, भक्षानुवाक इति समाख्यानाच्चेति । **सिद्धान्तस्तु** ग्रहणादेः साक्षाद्विधानाभावेऽपि भक्षविधिनैवार्थात्कर्तव्यतया प्राप्तत्वाद्यथासामर्थ्यं विभज्य विनियोग इति । **फलन्तु** कृत्स्नाकृत्स्नविनियोग इति व्यक्तम् ।

ಸಂಶಯಪೂರ್ವಪಕ್ಷಾದಿಗಳನ್ನು ವಿಚಾರ ಮಾಡುವ ಮೊದಲು ಪ್ರಾಸಂಗಿಕವಾಗಿ ಕೆಲವು ವಿಚಾರಗಳನ್ನು ತಿಳಿದರೆ ಅನುಕೂಲವಾಗುತ್ತದೆ. ಪ್ರಾತಃಸವನ, ಮಾಧ್ಯಂದಿನಸವನ ಹಾಗೂ ಸಾಯಂಸವನಗಳನ್ನು ಅನುಷ್ಠಾನ ಮಾಡುವಾಗ ಸೋಮವನ್ನು ಅಭಿಷವ ಮಾಡಬೇಕು. ಆ ಸೋಮವನ್ನು ಬೇರೆ ಬೇರೆ ಪಾತ್ರೆಗಳಲ್ಲಿ ಇರಿಸಿ, ಆಹುತಿಯನ್ನಾಗಿ ಇಂದ್ರಾದಿ ದೇವತೆಗಳಿಗೆ ನೀಡಬೇಕು. ಒಬ್ಬೊಬ್ಬ ದೇವತೆಗೂ ನೀಡಿ ಉಳಿದದ್ದು ಹವಿಪ್ರದಾನಶೇಷವೆನಿಸುತ್ತದೆ. ಆವಾಗ ಪ್ರಾತಃಸವನಾದಿಗಳು ಇಂದ್ರ, ಅಗ್ನಿ, ಮೊದಲಾದ ದೇವತೆಗಳಿಂದ ಪೀತವಾದ ಶೇಷವುಳ್ಳದ್ದು ಎನಿಸುತ್ತವೆ. ಪಾತ್ರೆಯಲ್ಲಿ ಉಳಿದ ಹವಿಸ್ಸನ್ನು ಭಕ್ಷಣ ಮಾಡಬೇಕಾದರೆ ಮಂತ್ರವನ್ನು ಹೇಳಿ ಭಕ್ಷಿಸಬೇಕೋ? ಅಥವಾ ಹಾಗೆಯೇ ಭಕ್ಷಿಸಬೇಕೋ? ಎಂದು ಸಂಶಯ ಬಂದರೆ, ಮಂತ್ರವನ್ನು ಹೇಳಿಯೇ ಭಕ್ಷಿಸಬೇಕೆಂದು ತಿಳಿಸುವುದಕ್ಕೋಸ್ಕರ 'ಇಂದ್ರಪೀತಸ್ಯ' ಎಂಬ

---

भाट्टसङ्ग्रहः –

**लिङ्गसमाख्याभ्यां भक्षार्थताऽनुवाकस्य ॥ २४ ॥**

**(तस्य रूपोपदेशाभ्यामपकर्षोऽर्थस्य चोदितत्वात् ॥ २५ ॥)**

सामान्यसम्बन्धमपेक्ष्य लिङ्गं विनियोगकमित्यस्य क्वचिदपवादोप्यस्तीत्यत्रोच्यते इति **सङ्गतिः ।** ज्योतिष्टोमो हुतस्य सोमरसस्य शेषभक्षणं विहितं 'अभिषुत्याऽऽहवनीये हुत्वा प्रत्यञ्चः परेत्य सदसि सोमं भक्षयन्ति' इति । तस्मिन् भक्षणे ग्रहणावेक्षणनिगिरण-सम्यग्जरणरूपाश्चत्वारो व्यापाराभक्षानुवाकसंज्ञके भक्षमन्त्रे समाम्नाताः । "भक्षे हि मा विश दीर्घायुत्वाय शन्तनुत्वाय रायस्फोषाय वर्चसे सुप्रजास्त्वाय । एहि वसो पुरोवसो प्रियो मे हृदोऽस्यश्विनोस्त्वा बाहुभ्यां सख्यासम् । नृचक्षसं त्वा देव सोम सुचक्षा अवख्येषम् । हिन्व मे गात्रा हरिवो गणान्मे वा वीतीतृषः । शिवो मे सप्तर्षीनुपतिष्ठस्व मा मेऽवाङ्नाभिमतिगाः । मन्द्राभिभूतिः केतुर्यज्ञानां वाग्जुषणा सोमस्य तृप्यतु । वसुमद्गणस्य रुद्रवद्गणस्य आदित्यवद्गणस्य सोमदेव ते मतिविदः प्रातःसवनस्य माध्यन्दिनस्य सवनस्य तृतीयस्य सवनस्य गायत्रछन्दसस्त्रिष्टुप्छन्दसो जगती-च्छन्दसोऽभिष्टुत इन्द्रपीतस्य नराशँसपीतस्य पितृपीतस्य मधुमत उपहूतस्योपहूतो भक्षयामि" इति ।

तत्र किं सर्वोऽपि भक्षानुवाकः सोमभक्षणे विनियुज्यते, उत 'एहि वसो' इत्यादिः सख्यासम्' इत्यन्तस्तद्ग्रहणे, 'नृचक्षसम्' इत्यादिः 'अवख्येषम्' इत्यन्तस्तद्दर्शने, 'हिन्व' इत्यादिः 'हे हरिवः सोम मे गात्राणि हिन्व प्रीणय । गणान् इन्द्रियाणि मा वितीतृषः वितृष्णानि मा कुरु । शिवस्सन् मे सप्तर्षीन् चक्षुर्द्वयनासाद्वारद्वय-श्रोत्रद्वयाऽस्यान् उपतिष्ठस्व व्याप्नुहि । मे नाभिमवाक् नाभेरघस्तात् मातिगाः' इति । **पूर्वपक्षस्तु** भक्षणवद्ग्रहणादिकं न साक्षाद्विहित् । किन्तु भक्षणं ग्रहणादिना विना न सम्भवतीत्यर्थतः प्राप्तम् । 'मन्त्रश्च क्रत्वर्थत्वेन विहितमेवार्थं प्रकाशयति' इत्यविहिते

ಶ್ರುತಿಯು ಹೊರಟಿದೆ. ಅನೇಕ ದೇವತೆಗಳಿಗೆ ಆಹುತಿಯನ್ನು ನೀಡಿ ಶಿಷ್ಟವಾದ ಹವಿಸ್ಸುಗಳು ಇರುತ್ತವೆ. ಅವುಗಳನ್ನು ಋತ್ವಿಜರು ಭಕ್ಷಿಸುವಾಗ 'ಇಂದ್ರಪೀತಸ್ಯ' ಎಂಬ ಒಂದೇ ಮಂತ್ರವನ್ನು ಹೇಳಬೇಕು. ಬೇರೆ ಬೇರೆ ಮಂತ್ರಗಳನ್ನು ಹೇಳುವ ಅವಶ್ಯಕತೆ ಇಲ್ಲವೆಂದು ಪೂರ್ವಮೀಮಾಂಸೆಯ ಮೂರನೇ ಅಧ್ಯಾಯ ಎರಡನೆಯ ಪಾದದಲ್ಲಿ ನಿರ್ಧರಿಸಲಾಗಿದೆ.

ಸಂಶಯ - ಇಂದ್ರನಿಗೆ ಸಂಬಂಧಿಸಿದ ಹವಿಪ್ರದಾನಶೇಷದ ಭಕ್ಷಣದಲ್ಲಿ ಇಂದ್ರಪೀತಸ್ಯ ಎಂಬ ಮಂತ್ರವನ್ನು ಹೇಳಬೇಕು ಹೊರತು ಇಂದ್ರನಿಗೆ ಸಂಬಂಧಪಡದ ಅಗ್ನಿ ಮಿತ್ರ ವರುಣ ಮೊದಲಾದವರ ಹವಿಸ್ಸಿನ ಶೇಷವನ್ನು ಭಕ್ಷಿಸುವಾಗ ಈ ಮಂತ್ರವನ್ನು ಪ್ರಯೋಗಿಸದೆ ಅಮಂತ್ರಕವಾಗಿ ಭಕ್ಷಿಸಬೇಕೆಂದು ಹೇಳುತ್ತೀರೋ? ಅಥವಾ ಅಲ್ಲಿಯೂ ಸಹ ಅಗ್ನಿ ಮೊದಲಾದ ಶಬ್ದಗಳನ್ನು ಊಹೆ ಮಾಡಿಕೊಂಡು ಮಂತ್ರವನ್ನು ಪ್ರಯೋಗಿಸಬೇಕೆನ್ನುತ್ತೀರೋ? ಅಥವಾ ಯಾವರೂಪದಲ್ಲಿ ಮಂತ್ರವಿದೆಯೋ ಅದೇ ರೂಪದಲ್ಲಿಯೇ ಉಳಿದ ದೇವತೆಗಳ ಹವಿಸ್ಸಿನ ಶೇಷವನ್ನು ಭಕ್ಷಣ ಮಾಡುವಾಗ ಹೇಳಬೇಕೆನ್ನುತ್ತೀರೋ?

ಮೊದಲನೆಯ ಪೂರ್ವಪಕ್ಷ - ಮೈತ್ರಾವರುಣಸೋಮಭಕ್ಷಣದಲ್ಲಾಗಲೀ ಅಥವಾ ಆಗ್ನೇಯಸೋಮಭಕ್ಷಣದಲ್ಲಾಗಲೀ 'ಇಂದ್ರಪೀತಸ್ಯ' ಎಂಬ ಮಂತ್ರವನ್ನು ಪ್ರಯೋಗಿಸುವುದು ಬೇಡ. ಯಾವುದೇ ಮಂತ್ರವನ್ನು ಉಚ್ಚರಿಸದೆ ಮೌನವಾಗಿ ಸೋಮವನ್ನು ಭಕ್ಷಿಸಬೇಕು. ಒಂದು ವೇಳೆ ಇಂದ್ರಪೀತಸ್ಯ ಎಂಬ ಪದವು ಬಹುವ್ರೀಹಿಸಮಾಸವಾಗಿದ್ದಲ್ಲಿ ಆಗ್ನೇಯಾದಿ ಸೋಮಭಕ್ಷಣದಲ್ಲಿ ಇಂದ್ರಪೀತಸ್ಯ ಎಂಬ ಮಂತ್ರವನ್ನು ಹೇಳಬಹುದು ಎಂದಾಗುತ್ತಿತ್ತು. ಆದರೆ ಬಹುವ್ರೀಹಿ ಎಂದು ಮಾಡ-ಲಾಗದು.

ಅದು ಹೀಗೆ -- 'ಇಂದ್ರೇಣ ಪೀತಃ ಯಸ್ಮಿನ್ ಸಃ ಇಂದ್ರಪೀತಃ, ಎಂದು ಬಹುವ್ರೀಹಿಯನ್ನು ಮಾಡಿ-ದಾಗ 'ಇಂದ್ರನಿಂದ ಕುಡಿಯಲ್ಪಟ್ಟ ಸೋಮದಿಂದ ಕೂಡಿದ ಪ್ರಾತಃಸವನಾದಿಗಳು' ಎಂದರ್ಥವಾಗುತ್ತದೆ. ಈ ಅರ್ಥದಲ್ಲಿ ಇಂದ್ರಪೀತಶಬ್ದವು ಸವನಕ್ಕೆ ವಿಶೇಷಣವಾಗುತ್ತದೆ. ಸವನಕ್ಕೆ ವಿಶೇಷಣವಾದ್ದರಿಂದ ಮೈತ್ರಾವರುಣಾದಿಗಳ ಸೋಮಭಕ್ಷಣದಲ್ಲಿಯೂ ಈ ಮಂತ್ರವನ್ನು ಹೇಳಬಹುದು ಎಂದಂತಾಗುತ್ತದೆ. ಏಕೆಂದರೆ ಈ ಮಂತ್ರದಲ್ಲಿ ಇಂದ್ರನಿಂದ ಪೀತವಾದ ಸೋಮವನ್ನು ಹೇಳಿಲ್ಲ, ಇಂದ್ರನಿಂದ ಪೀತವಾದ ಸೋಮವುಳ್ಳ ಸವನದಲ್ಲಿ ಹವಿಃಶೇಷವನ್ನು ಭಕ್ಷಣ ಮಾಡುತ್ತೇನೆ ಎಂದು ಹೇಳಲಾಗಿದೆ. ಹೀಗೆ ಹೇಳಿದಾಗ ಮೈತ್ರಾವರುಣಾಗ್ನೇಯಮೊದಲಾದ ಸೋಮಭಕ್ಷಣದಲ್ಲಿಯೂ ಈ ಮಂತ್ರವನ್ನು ಪ್ರಯೋಗಿಸಲು ತೊಂದರೆ ಇಲ್ಲ. ಬಹುವ್ರೀಹಿಸಮಾಸ ಮಾಡಿದರಷ್ಟೇ ಹೀಗೆ ಹೇಳಲು ಸಾಧ್ಯ. ಆದರೆ ಬಹುವ್ರೀಹಿ-

---

ग्रहणादौ मन्त्रस्य विनियोगायोगात् कृस्नोप्यनुवाकः 'सख्यासम्' 'अवख्येषम्' इत्यादेर्लक्षणया भक्षणप्रकाशनसामर्थ्यकल्पनेन भक्षण एव विनियुज्यते । तथा च **सूत्रम्, भक्षानुवाकस्य समस्तस्य भक्षार्थतैव** । कुतः? **लिङ्गसमाख्याभ्यां** 'भक्षे हि' 'भक्षयामि' इत्यादिलिङ्गात्, भक्षानुवाक इति समाख्यानाच्चेति । **सिद्धान्तस्तु** ग्रहणादेः साक्षाद्विधानाभावेऽपि भक्षविधिनैवार्थात्कर्तव्यतया प्राप्तत्वाद्यथासामर्थ्यं विभज्य विनियोग इति । **फलन्तु** कृस्नाकृस्नविनियोग इति व्यक्तम् ।

ಸಮಾಸವನ್ನು ಮಾಡುವುದೇ ತಪ್ಪು. ಏಕೆಂದರೆ ಬಹುವ್ರೀಹಿಸಮಾಸದಲ್ಲಿ ಎರಡು ಪದಗಳಿಗೆ ಸ್ವಾರ್ಥದಲ್ಲಿ ತಾತ್ಪರ್ಯವಿರುವುದಿಲ್ಲ. ಅನ್ಯಪದಾರ್ಥವೇ ಪ್ರಧಾನವಾದ್ದರಿಂದ ಬಹುವ್ರೀಹಿಯು ದುರ್ಬಲವಾಗಿದೆ. ಇದಕ್ಕಿಂತ ತತ್ಪುರುಷವು ಪ್ರಬಲ.

ವಸ್ತುತಃ ತತ್ಪುರುಷದಲ್ಲಿಯೂ ಕೂಡ ಪೂರ್ವಪದಕ್ಕೆ ಸ್ವಾರ್ಥದಲ್ಲಿ ತಾತ್ಪರ್ಯವಿರುವುದಿಲ್ಲ. ಆದರೆ ಉತ್ತರಪದಾರ್ಥಕ್ಕೆ ಸ್ವಾರ್ಥದಲ್ಲಿ ತಾತ್ಪರ್ಯವಿರುವುದರಿಂದ ಬಹುವ್ರೀಹಿಗಿಂತ ಶ್ರೇಷ್ಠವಾಗಿದೆ. ಹೀಗೆ ತತ್ಪುರುಷವನ್ನು ಅನಿವಾರ್ಯವಾಗಿ ಆಶ್ರಯಿಸಬೇಕಾದ್ದರಿಂದ ಮೈತ್ರಾವರುಣಾದಿಗಳ ಸೋಮಭಕ್ಷಣದಲ್ಲಿ ಈ ಮಂತ್ರಕ್ಕೆ ಅವಕಾಶವಿರುವುದಿಲ್ಲ. ಆ ಅರ್ಥವನ್ನು ಪ್ರಕಾಶಿಸುವ ಸಾಮರ್ಥ್ಯವೇ ಇಂದ್ರಪೀತಸ್ಯ ಎಂಬ ಮಂತ್ರಕ್ಕೆ ಇರುವುದಿಲ್ಲ. ತತ್ಪುರುಷಸಮಾಸಮಾಡಿದಾಗ 'ಇಂದ್ರಪೀತ'ಶಬ್ದವು ಸೋಮಭಕ್ಷಣಕ್ಕೆ ವಿಶೇಷಣವಾಗುತ್ತದೆ ಹೊರತು, ಸವನಕ್ಕೆ ವಿಶೇಷಣವಾಗುವುದಿಲ್ಲ.

ಇನ್ನು ಮೈತ್ರಾವರುಣಾದಿ ಸೋಮಭಕ್ಷಣದಲ್ಲಿ ಆಯಾ ದೇವತಾವಾಚಕವಾದ ಪದಗಳನ್ನು ಊಹಿಸಿಕೊಂಡು ಮಂತ್ರವನ್ನು ಪ್ರಯೋಗಿಸಬೇಕೆನ್ನುವುದೂ ಸಹ ತಪ್ಪು. ಏಕೆಂದರೆ ಪ್ರಕೃತಿವಿಕೃತಿಭಾವವಿದ್ದರೆ ಮಾತ್ರ ಊಹೆಯನ್ನು ಮಾಡಬೇಕು. 'ಪ್ರಾಕೃತಸ್ಥಾನಪತಿತಪದಾರ್ಥಾಂತರಕಾರ್ಯತಃ ಊಹಃಪ್ರಯೋಗೋ ವಿಕೃತಿಃ' ಎಂದು ಊಹೆಯ ಲಕ್ಷಣವನ್ನು ಹೇಳಿದ್ದಾರೆ. ಪ್ರಕೃತಿಯಾಗದಲ್ಲಿರುವ ಶಬ್ದವನ್ನೇ ವಿಕೃತಿಯಾಗದಲ್ಲಿ ಪ್ರಯೋಗಿಸದೆ ಬೇರೆ ಶಬ್ದವನ್ನು ಪ್ರಯೋಗಿಸುವುದೇ ಊಹೆ ಎನಿಸುತ್ತದೆ. ಆದರೆ ಪ್ರಕೃತದಲ್ಲಿ ಜ್ಯೋತಿಷ್ಟೋಮವೆಂಬ ಒಂದೇ ಕರ್ಮವು ಪ್ರಸಕ್ತವಾದ್ದರಿಂದ ಪ್ರಕೃತಿವಿಕೃತಿಭಾವವನ್ನು ಹೇಳಲಾಗದು. (ಅಂದರೆ ಜ್ಯೋತಿಷ್ಟೋಮವೆಂಬ ಒಂದೇ ಯಾಗದಲ್ಲಿ ಪ್ರಾತಃಸವನಾದಿಗಳು ಪ್ರಸಕ್ತವಾಗಿವೆ. ಅವುಗಳಲ್ಲಿ ಇಂದ್ರಾದಿ ಅನೇಕದೇವತೆಗಳಿಗೆ ನೀಡಿದ ಹವಿಸ್ಸಿನ ಶೇಷವನ್ನು ಭಕ್ಷಣಮಾಡುವಂತಹ ಸಂದರ್ಭವಿರುತ್ತದೆ. ಹಾಗಾಗಿ ಐಂದ್ರಸೋಮಭಕ್ಷಣಕ್ಕೂ, ಮೈತ್ರಾವರುಣಸೋಮಭಕ್ಷಣಕ್ಕೂ ಪ್ರಕೃತಿವಿಕೃತಿಭಾವವನ್ನು ಹೇಳಲು ಸಾಧ್ಯವಿಲ್ಲ. ಇವೆಲ್ಲವೂ ಸಹ ಕೇವಲ ಅವಾಂತರಕರ್ಮಗಳಾಗಿವೆ. ಈ ಅಂಶವನ್ನು ಗಮನಿಸಬೇಕು.) ಪ್ರಕೃತಿವಿಕೃತಿಭಾವ ಇಲ್ಲದ ಕಾರಣ ಊಹಿಸಿ ಮಂತ್ರಪ್ರಯೋಗ ಮಾಡುವುದು ತಪ್ಪಾಗುತ್ತದೆ. ಆದ್ದರಿಂದ ಮೈತ್ರಾವರುಣಾದಿ ಸೋಮಭಕ್ಷಣಗಳನ್ನು ಅಮಂತ್ರಕವಾಗಿಯೇ ಮಾಡಬೇಕು.

ಎರಡನೆಯ ಪೂರ್ವಪಕ್ಷ - ಮೈತ್ರಾವರುಣಾದಿ ಸೋಮಭಕ್ಷಣದಲ್ಲಿಯೂ ಆಯಾದೇವತೆಗಳ ಶಬ್ದ(ಪದ)ಗಳನ್ನು ಊಹಿಸಿಕೊಂಡು ಮಂತ್ರವನ್ನು ಹೇಳಲೇ ಬೇಕು. ಪ್ರಕೃತಿವಿಕೃತಿಭಾವವಿಲ್ಲದ ಕಾರಣ ಊಹಿಸುವುದು ತಪ್ಪೆಂದು ಪ್ರಥಮಪೂರ್ವಪಕ್ಷಕಾರರು ಹೇಳಿದ್ದಾರಲ್ಲ ಎಂದರೆ ಇಲ್ಲಿ ಪ್ರಕೃತಿವಿಕೃತಿಭಾವವನ್ನು ಹೇಳಬಹುದು. ಒಂದೇ ಕರ್ಮವಾಗಿದ್ದರೂ ಸಹ ಆಯಾ ದೇವತಾಕವಾದ ಐಂದ್ರಪ್ರದಾನವೇ ಬೇರೆ, ಆಗ್ನೇಯಪ್ರದಾನವೇ ಬೇರೆ, ಮೈತ್ರಾವರುಣಪ್ರದಾನವೇ ಬೇರೆ. ಐಂದ್ರಪ್ರದಾನವನ್ನು ಶ್ರುತಿಯಲ್ಲಿ ಹೇಳುವಾಗ ಸೋಮ ಅಭಿಷವ ಮೊದಲಾದ ಧರ್ಮಗಳನ್ನು ಹೇಳಿದ್ದಾರೆ. - ಮೈತ್ರಾವರುಣಪ್ರದಾನವನ್ನು ಹೇಳುವಾಗ ಆ ಅಭಿಷವಾದಿಗಳನ್ನು ಹೇಳಿರುವುದಿಲ್ಲ.

ಆದ್ದರಿಂದ ಪ್ರಕೃತಿವಿಕೃತಿಭಾವಯಾಗದಲ್ಲಿ ಹೇಗೆ ಊಹೆಯನ್ನು ಮಾಡುತ್ತೇವೋ ಅದರಂತೆಯೇ ಇಲ್ಲೂ ಕೂಡ ಸಧರ್ಮಕಪ್ರದಾನವು ಪ್ರಕೃತಿಯಾಗಿದೆ. ಅಧರ್ಮಕಪ್ರದಾನವು ವಿಕೃತಿಯಾಗಿದೆ.

ವಿಕೃತಿಯೆನಿಸಿದ ಅಧರ್ಮಕಪ್ರದಾನದಲ್ಲಿ ಆಯಾದೇವತಾವಾಚಕವಾದ ಪದಗಳನ್ನು ಊಹಿಸಿಕೊಳ್ಳುವುದು ತಪ್ಪಾಗುವುದಿಲ್ಲ. 'ಇಂದ್ರಾಯ ತ್ವಾ ವಸುಮತೇ ಸೋಮಂ ಗೃಹ್ಣಾಮಿ' ಎಂಬ ಮಂತ್ರದಲ್ಲಿ ಸೋಮದ ಅಭಿಷವವನ್ನು ಹೇಳಿದ್ದಾರೆ. ಇದು ಐಂದ್ರಪ್ರದಾನದ ಧರ್ಮವಾಗಿದೆ. ಇದನ್ನು ಮೈತ್ರಾವರುಣಾದಿ-ಪ್ರದಾನಗಳಲ್ಲಿ ಹೇಳಿರುವುದಿಲ್ಲ. ಆದ್ದರಿಂದ 'ಪ್ರಕೃತಿವತ್‌ವಿಕೃತಿಃ ಕರ್ತವ್ಯಾ' ಎಂಬ ವಿಧಿಯಂತೆ ಪದಗಳನ್ನು ಊಹಿಸಿ ಮಂತ್ರವನ್ನು ಉಚ್ಚರಿಸಬೇಕು.

ಪೂರ್ವಮೀಮಾಂಸೆಯಲ್ಲಿ ಬರುವ ಮೂರನೇಯ ಅಧ್ಯಾಯದ ಎರಡನೆಯ ಪಾದದ ೧೧ನೆಯ ಅಧಿಕರಣದಲ್ಲಿ ಸಿದ್ಧಾಂತವನ್ನು ಮಾಡದೆ ಅಧಿಕರಣವನ್ನು ಮುಗಿಸಿದ್ದಾರೆ. ಪುನಃ ಕೃತ್ವಾ ಚಿಂತೆಯನ್ನು ಮಾಡಿ ಮುಂದಿನ ಆರು ಅಧಿಕರಣಗಳಿಂದ ಊಹೆಯನ್ನು ಮಾಡಬಹುದೋ ಇಲ್ಲವೋ? ಎಂದು ವಿಚಾರ ಮಾಡಿದ್ದಾರೆ. ಏಳನೆಯ ಅಧಿಕರಣದಲ್ಲಿ ಇವುಗಳಿಗೆಲ್ಲ ಸಿದ್ಧಾಂತವನ್ನು ಸ್ಥಾಪಿಸಿದ್ದಾರೆ. (ವಸ್ತುತಸ್ತು ವಿಷಯವಾಕ್ಯ, ಸಂಶಯ, ಪೂರ್ವಪಕ್ಷ, ಸಿದ್ಧಾಂತ, ಪ್ರಯೋಜನ ಈ ಐದು ಇದ್ದರೆ ಮಾತ್ರ ಅಧಿ-ಕರಣವೆಂದು ಜ್ಞಾನಿಗಳು ಹೇಳುತ್ತಾರೆ. ಆದರೆ ಪೂರ್ವಮೀಮಾಂಸೆಯ ಈ ಅಧಿಕರಣದಲ್ಲಿ ಕೇವಲ ಪೂರ್ವಪಕ್ಷ ಮಾಡಿ ಮುಗಿಸಿದ್ದಾರೆ. ಇದು ಹೇಗೆ ಎಂಬುದನ್ನು ದೊಡ್ಡವರು ವಿಚಾರ ಮಾಡಬೇಕು.)

ಸಿದ್ಧಾಂತ - ಎರಡನೆಯ ಪೂರ್ವಪಕ್ಷವನ್ನು ಮೊದಲು ನಿರಾಕರಿಸಲಾಗಿದೆ. ಒಂದೇ ಕರ್ಮ-ವಾಗಿದ್ದರೂ ಪ್ರಕೃತಿವಿಕೃತಿಭಾವವನ್ನು ಹೇಳಬಹುದೆಂದು ಆಕ್ಷೇಪಿಸಿದಿರಿ. ಆದರೆ ಒಂದು ಸಧರ್ಮಕ ಮತ್ತೊಂದು ಅಧರ್ಮಕವಾಗಿದ್ದರೆ ಪ್ರಕೃತಿವಿಕೃತಿಭಾವವನ್ನು ಹೇಳಬಹುದಿತ್ತು. ಆದರೆ ಎಲ್ಲವೂ ಸಧರ್ಮಕವೇ ಆಗಿದೆ. ಯಾವರೀತಿಯಾಗಿ ಐಂದ್ರಪ್ರದಾನದಲ್ಲಿ ಸೋಮಅಭಿಷವಾದಿ ಶಬ್ದಗಳು ಕೇಳಿಸು-ತ್ತಿವೆಯೋ ಅದರಂತೆ ಮೈತ್ರಾವರುಣಪ್ರದಾನದಲ್ಲಿಯೂ ಸೋಮಅಭಿಷವಾದಿ ಶಬ್ದಗಳು ಕೇಳಿಸುತ್ತಿವೆ.

ಆದ್ದರಿಂದ 'ಇಂದ್ರಾಯ ತ್ವಾ ವಸುಮತೇ ಸೋಮಂ ಗೃಹ್ಣಾಮಿ' ಎಂಬ ಮಾನಗ್ರಹಣ ಮಂತ್ರಕ್ಕೆ ಇಂದ್ರ-ಪ್ರಕಾಶಕಸಾಮರ್ಥ್ಯವಿರುವುದರಿಂದ ಮಂತ್ರವು ಇಂದ್ರಪ್ರದಾನ ಧರ್ಮವಾಗಿದೆ. ಮೈತ್ರಾವರುಣಾದಿ ಮಂತ್ರಗಳಿಗೆ ಇಂದ್ರಪ್ರಕಾಶಸಾಮರ್ಥ್ಯವು ಇರುವುದಿಲ್ಲ. ಈ ಅಂಶದಲ್ಲಿ ವ್ಯತ್ಯಾಸವಿದ್ದರೂ ಪ್ರಕೃತಿವಿಕೃತಿ-ಭಾವವನ್ನು ಹೇಳಲು ಬೇಕಾಗಿರುವ ಸೋಮಅಭಿಷವಾದಿಶಬ್ದಗಳ ಇರುವಿಕೆ ಇಲ್ಲದಿರುವಿಕೆಯಲ್ಲಿ ವ್ಯತ್ಯಾಸವನ್ನು ಹೇಳಲಾಗದು. ಪ್ರತಿಯೊಂದು ಮಂತ್ರಗಳಲ್ಲಿಯೂ ಸೋಮ ಅಭಿಷವಾದಿ ಶಬ್ದಗಳನ್ನು ಸಮಾನವಾಗಿ ವಿಧಿಸಿದ್ದರಿಂದ ಪ್ರಕೃತಿವಿಕೃತಿಭಾವವನ್ನು ಹೇಳಲಾಗದು. ಪ್ರಕೃತಿವಿಕೃತಿಭಾವವಿಲ್ಲದ ಕಾರಣ ಇಂದ್ರಪ್ರದಾನದಲ್ಲಿರುವುದನ್ನು ಮೈತ್ರಾವರುಣಪ್ರದಾನಗಳಲ್ಲಿಯೂ ಊಹಿಸಬೇಕೆಂಬ ಎರಡನೆಯ ಪಕ್ಷವು ಸಮಂಜಸವಲ್ಲ.

ಹೀಗೆ ಪೂರ್ವಮೀಮಾಂಸೆಯಲ್ಲಿ ಆರು ಅಧಿಕರಣಗಳಲ್ಲಿ ಕೃತ್ವಾಚಿಂತೆಯ ಮೂಲಕ ಊಹ-ವಿಷಯವನ್ನು ವಿಚಾರ ಮಾಡಿದ್ದಾರೆ. ಏಳನೆಯ ಅಧಿಕರಣದಲ್ಲಿ ಎರಡನೆಯ ಪೂರ್ವಪಕ್ಷವನ್ನು ನಿರಾಕರಿಸಿದ್ದಾರೆ. ಪುನಃ ಮುಂದಿನ ಎರಡು ಅಧಿಕರಣಗಳಲ್ಲಿ ಕೃತ್ವಾಚಿಂತೆಯ ಮೂಲಕ ಪ್ರಥಮಪಕ್ಷವನ್ನೇ ಸಮರ್ಥಿಸಿದ್ದಾರೆ. ಮುಂದಿನ ಅಧಿಕರಣದಲ್ಲಿ ಪ್ರಥಮಪಕ್ಷವನ್ನು ನಿರಾಕರಿಸಿ ಸಿದ್ಧಾಂತವನ್ನು ಸ್ಥಾಪಿಸಿದ್ದಾರೆ.

ಬಹುವ್ರೀಹಿಯನ್ನು ಮಾಡದೇ ತತ್ಪುರುಷವನ್ನೇ ಮಾಡಬೇಕೆಂದು ಪ್ರಥಮಪಕ್ಷದವರ ಆಗ್ರಹ. ಆದರೆ ತತ್ಪುರುಷವನ್ನು ಆಶ್ರಯಿಸಿದರೂ ಕ್ಲೇಶವು ತಪ್ಪಿದ್ದಲ್ಲ. 'ಇಂದ್ರೇಣ ಪೀತಃ ಇಂದ್ರಪೀತಃ' ಎಂದು ತತ್ಪುರುಷ ಮಾಡಿದಾಗ ಇಂದ್ರಪೀತವಾದದ್ದು ಶಿಷ್ಟವಾದ ಸೋಮದ ಅಭಿಷವ ಎಂದಂತಾಗುತ್ತದೆ. ಅಂದರೆ ಸೋಮದ ಅಭಿಷವಕ್ಕೆ ಇಂದ್ರಪೀತವು ವಿಶೇಷಣವಾಯಿತು. ಮತ್ತು ಆ ಮಂತ್ರದಲ್ಲಿ 'ಹೇ ಸೋಮದೇವ = ಎಲೈ ಸೋಮದೇವನೇ!, ತೇ = ಇಂದ್ರನಿಂದ ಪಾನಮಾಡಲ್ಪಟ್ಟ ನಿನ್ನನ್ನು (ಕರ್ಮಾರ್ಥದಲ್ಲಿ ಷಷ್ಠಿ), ನಾನು ಭಕ್ಷಿಸುತ್ತೇನೆ.' ಎಂದು ಅರ್ಥೈಸಬೇಕಾಗುತ್ತದೆ. ಹಾಗೆ ಮಾಡಿದಾಗ ಹುತಾಹುತಸಮುದಾಯದಲ್ಲಿ ಲಕ್ಷಣಾಮಾಡಬೇಕಾಗುತ್ತದೆ. ಆವಾಗ ಮಾತ್ರ ಹೋಮಶೇಷವನ್ನು ಇಟ್ಟುಕೊಳ್ಳಬಹುದು. ಇಂದ್ರಪೀತ-ಶಬ್ದವು ಹುತಾಹುತವಾಚಕಶಬ್ದವಾದ್ದರಿಂದ ಹೋಮದ ಏಕದೇಶವನ್ನು ತೆಗೆದುಕೊಂಡರೆ ಏಕದೇಶ-ಲಕ್ಷಣಾಪ್ರಸಂಗ ಬರುತ್ತದೆ. ತತ್ಪುರುಷದಲ್ಲಿಯೂ ಏಕದೇಶಲಕ್ಷಣಾಪ್ರಸಂಗವಿರುವುದರಿಂದ ಬಹುವ್ರೀಹಿ-ಯನ್ನು ಆಶ್ರಯಿಸಬೇಕು. ಆವಾಗ ಇಂದ್ರಪೀತಶಬ್ದವು ಸೋಮದಲ್ಲಿ ವಿಶೇಷಣವಾಗದೇ ಪ್ರಾತಃಸವನದಲ್ಲಿ ವಿಶೇಷಣವಾಗುತ್ತದೆ.

ಆದ್ದರಿಂದ ಈ ಮಂತ್ರವನ್ನು ಇಂದ್ರಸೋಮಶೇಷಭಕ್ಷಣದಲ್ಲಿ ಹೇಳುವಂತೆ ಮೈತ್ರಾವರುಣಶೇಷ-ಭಕ್ಷಣದಲ್ಲಿಯೂ ಹೇಳಬಹುದು. ಏಕೆಂದರೆ ಇಂದ್ರಪೀತದಿಂದ ಕೂಡಿರುವಂತಹದ್ದು ಪ್ರಾತಃಸವನ, ಅದರಲ್ಲಿ ಈ ಮಂತ್ರವನ್ನು ಹೇಳಬೇಕು. ಆವಾಗ ಇಂದ್ರನಿಂದ ಪೀತವಾದ ಪ್ರಾತಃಸವನಕ್ಕೆ ಸಂಬಂಧಿಸಿದ ಸೋಮವನ್ನು ನಾನು ಭಕ್ಷಿಸುತ್ತೇನೆ ಎಂದಂತಾಯಿತು. ಇದನ್ನು ಪ್ರತಿಯೊಬ್ಬ ದೇವತೆಗಳ ಹೋಮಶೇಷದ ಭಕ್ಷಣದಲ್ಲಿ ಸುಲಭವಾಗಿ ಉಚ್ಚರಿಸಬಹುದು. ಇಷ್ಟು ಸಿದ್ಧಾಂತ.

ಪೂರ್ವಮೀಮಾಂಸಾದಲ್ಲಿ ಪ್ರಥಮ ಹಾಗೂ ದ್ವಿತೀಯಪಕ್ಷಗಳನ್ನು ಪೂರ್ವಪಕ್ಷ ಮಾಡಿ ಅನಂತರ ಆರು ಅಧಿಕರಣಗಳಿಂದ ಕೃತ್ವಾಚಿಂತೆಯನ್ನು ಮಾಡಿದ್ದಾರೆ. ಅವುಗಳಲ್ಲಿ ಒಂದನ್ನು ವಿಚಾರ ಮಾಡೋಣ.

## ಅಭ್ಯುನ್ನೀತಸೋಮಭಕ್ಷಣಾಧಿಕರಣಮ್

### ಪುನರಭ್ಯುನ್ನೀತೇಷು ಸರ್ವೇಷಾಮುಪಲಕ್ಷಣಂ ದ್ವಿಶೇಷತ್ವಾತ್ (೩-೨-೨೯)

ಜ್ಯೋತಿಷ್ಟೋಮಪ್ರಕರಣದಲ್ಲಿ ಒಟ್ಟು ಹತ್ತು ಚಮಸಗಳಿವೆ. ಪಾತ್ರವಿಶೇಷದಲ್ಲಿ ಇಡಲ್ಪಟ್ಟ ಸೋಮರಸವೇ ಚಮಸ ಎನಿಸುತ್ತದೆ. (ಅಂದರೆ ಒಟ್ಟು ಹತ್ತುಪಾತ್ರೆಗಳಲ್ಲಿ ಸೋಮರಸವನ್ನು ಇಟ್ಟಿರುತ್ತಾರೆಂದರ್ಥ). ಜ್ಯೋತಿಷ್ಟೋಮದಲ್ಲಿ ಪ್ರಧಾನವಾಗಿ ಹೋಮ ಮಾಡುವವರು ನಾಲ್ಕು ಮಂದಿ - ಬ್ರಹ್ಮ, ಉದ್ಗಾತೃ, ಯಜಮಾನ, ಹೋತೃ ಎಂದು. ಈ ನಾಲ್ಕುಮಂದಿಗೆ ನಾಲ್ಕು ಚಮಸಗಳು ವಿಹಿತವಾಗಿವೆ.

---

भाट्टसङ्ग्रहः –

**पुनरभ्युन्नीतेषु सर्वेषामुपलक्षणं द्विशेषत्वात् ॥ २९ ॥**

**(अपनयाद्वा पूर्वस्यानुपलक्षणम् ॥३० ॥ ग्रहणाद्वाऽपनयः स्यात् ॥ ३१ ॥**

ज्योतिष्टमो सन्ति दश चमसाः । ब्रह्मोद्गातृयजमनहोतृसंज्ञकानां मध्यतःकारिणां

ಅಪ್ರಧಾನವಾಗಿ ಹೋಮ ಮಾಡುವವರು ಐದುಮಂದಿ - ಮೈತ್ರಾವರುಣ, ಬ್ರಾಹ್ಮಣಾಚ್ಛಂಸಿ, ಹೋತೃ, ನೇಷ್ಟ್ರು, ಆಗ್ನೀಧ್ರ. ಈ ಐದು ಮಂದಿಗೆ ಐದು ಚಮಸಗಳು ವಿಹಿತವಾಗಿವೆ. ಉಳಿದ ಒಂದು ಚಮಸವು ಅಚ್ಛಾವಾಕನಿಗೆ ವಿಹಿತವಾಗಿದೆ. ಮೈತ್ರಾವರುಣನು 'ಮಿತ್ರಂ ವಯಂ ಹವಾಮಹೇ' ಎಂಬ ಮಂತ್ರದಿಂದ ಮಿತ್ರಾವರುಣರನ್ನು ಹೋಮಿಸುತ್ತಾನೆ. ಬ್ರಾಹ್ಮಣಾಚ್ಛಂಸಿಯು 'ಇಂದ್ರ ತ್ವಾ ವೃಷಭಂ ವಯಮ್' ಎಂಬ ಮಂತ್ರದಿಂದ ಇಂದ್ರನನ್ನು, ಹೋತೃವು 'ಮರುತೋ ಯಸ್ಯ ಹಿ ಕ್ಷಯೇ' ಎಂಬ ಮಂತ್ರದಿಂದ ಮರುತ್ತನನ್ನೂ, ನೇಷ್ಟ್ರುವು 'ಅಗ್ನೇ ಪತ್ನೀರಿಹಾವಹ' ಎಂಬ ಮಂತ್ರದಿಂದ ತ್ವಷ್ಟ್ರು ಮತ್ತು ತ್ವಷ್ಟ್ರುಪತ್ನಿಯನ್ನು, ಆಗ್ನೀಧ್ರನು 'ಉಕ್ಷಾಂ ನಾಯ ವಶಾಂ ನಾಯ' ಎಂಬ ಮಂತ್ರದಿಂದ ಅಗ್ನಿಯನ್ನು ಕುರಿತು ಹೋಮಿಸುತ್ತಾರೆ. ಪ್ರಧಾನವಾಗಿ ಹೋಮ ಮಾಡುವ ನಾಲ್ಕು ಮಂದಿ ನಾಲ್ಕು ಚಮಸಗಳಿಂದ ಇಂದ್ರನನ್ನು ಉದ್ದೇಶಿಸಿ ಎರಡು ಬಾರಿ ಹೋಮಿಸಬೇಕು. ಐದು ಮಂದಿ ಹೋತೃಕರು ಐದು ಚಮಸಗಳಿಂದ ಇಂದ್ರನನ್ನೇ ಉದ್ದೇಶಿಸಿ ಹೋಮಿಸಬೇಕು. ಅನಂತರ ಇಂದ್ರಶೇಷವನ್ನು ಭಕ್ಷಣ ಮಾಡದೆ ಇಂದ್ರಶಿಷ್ಟವಾದ ಅದೇ ಪಾತ್ರೆಯಲ್ಲಿ ದೊಡ್ಡ ಪಾತ್ರೆಯಲ್ಲಿರುವ ಸೋಮವನ್ನು ಪುನಃ ಬೆರೆಸಿಕೊಂಡು ಮಿತ್ರಾವರುಣ, ಇಂದ್ರ, ಮರುತ್ಪತ್ನಿ, ತ್ವಷ್ಟ್ರು, ಅಗ್ನಿ ಮೊದಲಾದ ಉಳಿದ ದೇವತೆಗಳನ್ನು ಕುರಿತು ಹೋಮಿಸಬೇಕು.

---

चत्वारश्चमसाः । मैत्रावरुणब्राह्मणाच्छंसिपोतृनेष्ट्राग्नीध्रसंज्ञाकानां होतृकशब्दितानां पञ्च । अच्छावाकस्यैकः । तत्र मध्यतःकारिणां चतुर्भिश्चमसैरिन्द्रमुद्दिश्य द्विहोतव्यम् । होतृकाणां तु चमसैः पञ्चभिरिन्द्रमेवोद्दिश्य सकृद्धोमं विधायाभक्षितेषु सशेष्वेव तेषु द्रोणकलशात्सोमं पुनरानीय मित्रावरुणेन्द्रमरुत्पत्नीवत्त्वष्ट्रग्न्यादिभ्यो देवातन्तरेभ्यो हुत्वा भक्ष्यते । अच्छावाकचमसस्तु भक्षोत्तरकालमानेष्यते । तत्र होतृकाणां चसमेष्विन्द्रस्य मित्रावरुणादीनां च शेषोऽस्ति । तस्मिन् भक्ष्यमाणे सन्देहः मित्रावरुणपीतस्येत्येवाहेः कर्याः, उत इन्द्रमित्रावरुणपीतस्येति । **पूर्वपक्षस्तु** इन्द्रपीतशेषस्याप्युपादाने हि इन्द्रपीतस्य मित्रावरुणपीतस्य सोमस्य शेषं भक्षयामीत्यर्थः स्यात् । नच तत्र इन्द्रपीतसोमस्य शेषोऽस्ति । अभ्युन्नीतस्य पूर्वतनशेषेण सह मित्रावरुणादिभ्यो दत्तत्वेन तेभ्यो दत्तशेषस्य इन्द्रसम्बन्धाभावान्मित्रावरुणपीतस्येत्येवोहः कार्य इति ।

**सिद्धान्तस्तु** द्रोणकलशादानयनं करिष्यमाणां मित्रावरुणादियागार्थमिति बुद्ध्या आनीयमानस्यैव मित्रावरुणादिदेवतासम्बन्धावगमेन पूर्वशेषस्य इन्द्रदेवतासम्बन्धानपायात् इन्द्रमित्रावरुणपीतस्येत्येवाहः कार्य इति । तथा च **सूत्रम् । पुनरभ्युन्नीतेषु** हुत्वा भक्ष्यमाणेषु पूर्वदेवतानामभ्युन्नीतदेवतानां **चोपलक्षणत्वम् ।** कुतः? भक्ष्यमाणस्य **द्विशेषत्वात्** इति । **फलन्तु** इन्द्रपदानुपादानोपादाने ।

इति द्वादशमभ्युन्नीतसोमभक्षणाधिकरणम् (सूत्राणि २९-३१)

ಆಕಾಶಾಧಿಕರಣ (೧।೧।೮)

ಅನಂತರ ಪಾತ್ರೆಯಲ್ಲಿ ಉಳಿದ ಶೇಷವನ್ನು ಭಕ್ಷಿಸಬೇಕು. ಅಚ್ಛಾವಾಕನ ಚಮಸವು ಒಂಭತ್ತು-ಕಲಶದಲ್ಲಿರುವ ಹೋಮಶೇಷವನ್ನು ಭಕ್ಷಿಸಿದ ಅನಂತರ ತರಬೇಕು. ಹೀಗಿರಬೇಕಾದರೆ ಐದು ಮಂದಿ ಹೋತೃಕರಿಗೆ ಸಂಬಂಧಿಸಿದ ಚಮಸಪಾತ್ರೆಗಳಲ್ಲಿ ಇಂದ್ರ ಹಾಗೂ ಮಿತ್ರಾವರುಣಾದಿಗಳ ಶೇಷವು ಇದೆ. ಇದನ್ನು ಭಕ್ಷಿಸುವಾಗ ಸಂದೇಹ ಬರುತ್ತದೆ. ಮೈತ್ರಾವರುಣಚಮಸಪಾತ್ರೆಯಲ್ಲಿ ಮಿತ್ರಾವರುಣನಿಗೆ ಆಹುತಿ ನೀಡಿ ಉಳಿದ ಸೋಮರಸವಿದೆ. ಅದನ್ನು ಭಕ್ಷಿಸುವಾಗ 'ಮಿತ್ರಾವರುಣಶೇಷಂ ಭಕ್ಷಯಾಮಿ' ಎಂದು ಊಹಿಸಬೇಕು. ಇದರಂತೆ ಹೋತೃಚಮಸಪಾತ್ರಾದಿಗಳಲ್ಲಿರುವ ಶೇಷವನ್ನು ಭಕ್ಷಿಸುವಾಗ 'ಮರುಚ್ಛೇಷಂ ಭಕ್ಷಯಾಮಿ' ಎಂದು ಊಹಿಸಬೇಕು.ಆದ್ದರಿಂದ ಮಿತ್ರಾವರುಣಪೀತಸ್ಯ ಎಂದು ಊಹಿಸಬೇಕೋ? ಅಥವಾ ಇಂದ್ರಶಿಷ್ಟವೂ ಆಗಿದ್ದರಿಂದ ಇಂದ್ರಶಬ್ದವನ್ನು ಬಿಡದೆ 'ಇಂದ್ರಮಿತ್ರಾವರುಣಪೀತಸ್ಯ' ಎಂದು ಉಚ್ಚರಿಸಬೇಕೋ?

ಪೂರ್ವಪಕ್ಷ - ಇಂದ್ರಶಬ್ದವನ್ನು ಉಪಲಕ್ಷಣಯಾ ಇಟ್ಟುಕೊಳ್ಳುವ ಅವಶ್ಯಕತೆ ಇಲ್ಲ. ಏಕೆಂದರೆ ದೊಡ್ಡ ಪಾತ್ರೆಯಿಂದ ಇಂದ್ರಶಿಷ್ಟವಾದ ಪಾತ್ರೆಯಲ್ಲೇ ಸೋಮವನ್ನು ಹಾಕುವಾಗ ದೇವತೆಯನ್ನು ನಿರ್ದೇಶಿಸಿರುವುದಿಲ್ಲ. ಕೇವಲ ಯಾಗ ಮಾಡುವ ಸಂದರ್ಭದಲ್ಲಷ್ಟೇ ದೇವತೆಯ ನಿರ್ದೇಶವಿದೆ. ಒಂದು ವೇಳೆ ಇಂದ್ರಶಬ್ದವನ್ನು ಉಪಲಕ್ಷಣಯಾ ಇಟ್ಟುಕೊಂಡಲ್ಲಿ ಇಂದ್ರಪೀತವಾದ ಮತ್ತು ವರುಣಪೀತವಾದ ಸೋಮದ ಶೇಷವನ್ನು ಭಕ್ಷಿಸುತ್ತೇನೆ ಎಂದರ್ಥವಾದೀತು. ಆದರೆ ಇಂದ್ರಪೀತವಾದ ಸೋಮದ ಶೇಷ-ವನ್ನು ಹೇಳಲು ಸಾಧ್ಯವಿಲ್ಲ. ಯಾವ ಕಾಲದಲ್ಲಿ ದೊಡ್ಡಪಾತ್ರೆಯಲ್ಲಿರುವ ಸೋಮವನ್ನು ಇಂದ್ರಶಿಷ್ಟಪಾತ್ರೆಗೆ ಬೆರೆಸಿ ಅದರಿಂದ ಮಿತ್ರಾವರುಣರಿಗೆ ಆಹುತಿಯನ್ನು ನೀಡಿದ ಮೇಲೆ ಉಳಿದ ಭಾಗವು ಮಿತ್ರಾವರುಣ-ಶೇಷವೇ ಆಗುತ್ತದೆ ಹೊರತು, ಇಂದ್ರಶೇಷವೆನಿಸುವುದಿಲ್ಲ. ಆ ಶಿಷ್ಟವಾದ ಭಾಗಕ್ಕೂ ಇಂದ್ರನಿಗೂ ಯಾವುದೇ ಸಂಬಂಧವಿರುವುದಿಲ್ಲ. ಆದ್ದರಿಂದ ಇಂದ್ರಶಬ್ದವನ್ನು ಉಪಲಕ್ಷಣಯಾ ಸೇರಿಸದೆ ಮಿತ್ರಾ-ವರುಣಶಬ್ದವನ್ನು ಊಹಿಸಿ ಮಂತ್ರವನ್ನು ಉಚ್ಚರಿಸಬೇಕು.

ಸಿದ್ಧಾಂತ - ವಸ್ತುತಃ ದೊಡ್ಡಪಾತ್ರೆಯಿಂದ ಸೋಮವನ್ನು ಬೆರೆಸುವಾಗ ದೇವತೆಯ ನಿರ್ದೇಶ-ವಿರುವುದಿಲ್ಲ. ಆದರೂ ಸಹ ಯಾವುದೇ ವ್ಯಕ್ತಿಯು ಸೋಮರಸವನ್ನು ಬೆರೆಸುವಾಗ ಮುಂದೆ ಮಾಡುವಂತಹ ಯಾಗಕ್ಕೋಸ್ಕರವೇ ಈ ದ್ರವ್ಯವನ್ನು ಸೇರಿಸುತ್ತೇನೆಂದು ಸಂಕಲ್ಪಿಸಿರುತ್ತಾನೆ. ಆ ಯಾಗದ ದೇವತೆಗೆ ಈ ದ್ರವ್ಯವು ಸಂಬಂಧಿಸುತ್ತದೆ ಹೊರತು ಬೇರೆ ದೇವತೆಗೆ ಸಂಬಂಧಿಸಿರುವುದಿಲ್ಲವೆಂದು ತಿಳಿದಿರುತ್ತಾನೆ. ಆದ್ದರಿಂದ ಸೋಮರಸವು ಮಿತ್ರಾವರುಣರಿಗೆ ಸಂಬಂಧಿಸಿದೆಯೆಂದು ಸ್ಪಷ್ಟವಾಗುತ್ತದೆ. ಮತ್ತು ಪೂರ್ವಶಿಷ್ಟವಾದ ದ್ರವ್ಯವು ಇಂದ್ರನಿಗೂ ಸಂಬಂಧಪಟ್ಟಿರುತ್ತದೆ. ಆದ್ದರಿಂದ ಇಂದ್ರಪದವನ್ನೂ ಸಹ ಉಪಲಕ್ಷಣಯಾ ಇಟ್ಟುಕೊಂಡು 'ಇಂದ್ರಮಿತ್ರಾವರುಣಪೀತಸ್ಯ' ಎಂದು ಉಚ್ಚರಿಸಬೇಕು. ಸಕಲ-ದೇವತಾವಾಚಕವಾದ ಪದಗಳನ್ನು ಊಹಿಸುವುದು ತಪ್ಪಲ್ಲ.

ವಸ್ತುತಸ್ತು ಪರಮಸಿದ್ಧಾಂತದಲ್ಲಿ ಬಹುವ್ರೀಹಿಯನ್ನೇ ಆಶ್ರಯಿಸಿದ ಇಂದ್ರಪೀತವು ಸವನಕ್ಕೆ ವಿಶೇಷಣವೆಂದು ಸಮರ್ಥಿಸುತ್ತಾರೆ. ಬಹುವ್ರೀಹಿಸಮಾಸವನ್ನು ಆಶ್ರಯಿಸಿದಾಗ ಇಂದ್ರಪೀತವಾದದ್ದು ಪ್ರಾತಃಸವನವಾಗುತ್ತದೆ. ಅದಕ್ಕೆ ಸಂಬಂಧಿಸಿದ ಸೋಮವನ್ನು ನಾನು ಭಕ್ಷಿಸುತ್ತೇನೆ ಎಂದು ಇಂದ್ರಪೀತ

ಮಂತ್ರದ ಅರ್ಥ. ಈ ಅರ್ಥವನ್ನು ವಿವಕ್ಷಿಸಿದಾಗ ಮೈತ್ರಾವರುಣಾದಿಶಬ್ದಗಳನ್ನು ಊಹಿಸದೆ ಮೈತ್ರಾವರುಣಾದಿ ಶೇಷಭಕ್ಷಣದಲ್ಲಿಯೂ ಯಥಾಸ್ಥಿತವಾಗಿ ಈ ಮಂತ್ರವನ್ನು ಉಚ್ಚರಿಸಬಹುದು. ಆದರೆ ಮಿತ್ರಾವರುಣಾದಿ- ಶಬ್ದಗಳನ್ನು ಊಹಿಸಬೇಕೆಂದು ಅನೇಕ ಅಧಿಕರಣಗಳು ಕೃತ್ವಾಚಿಂತೆಯಿಂದ ಪೂರ್ವಪಕ್ಷವನ್ನೇ ಉಪೋದ್ಬಲಿಸುತ್ತಿವೆ. ಅದಕ್ಕೋಸ್ಕರ ಈ ಒಂದು ಅಧಿಕರಣವನ್ನು ಉದಾಹರಣೆಯಾಗಿ ನೀಡಿದ್ದೇವೆ.

ವಸ್ತುತಸ್ತು 'ಇಂದ್ರಪೀತಸ್ಯ' ಎಂಬ ಮಂತ್ರವನ್ನು ಊಹಿಸಬಾರದೆಂಬುದು ಪರಮಸಿದ್ಧಾಂತ. ಆದರೂ ಕೂಡ ಊಹೆಯನ್ನು ಅಂಗೀಕರಿಸಿ, ಅನೇಕ ಅಧಿಕರಣಗಳು ಇಲ್ಲಿ ಹೊರಟಿವೆ. ಇದರಂತೆ ಪ್ರಕೃತದಲ್ಲಿಯೂ ಸಹ ಆಕಾಶಶಬ್ದದ ಪ್ರವೃತ್ತಿನಿಮಿತ್ತಗಳು ಮಹಾಯೋಗವೃತ್ತಿಯಿಂದ ಭಗವಂತನಲ್ಲಿಯೇ ಇವೆ. ಪುನಃ 'ಆ ಪ್ರವೃತ್ತಿನಿಮಿತ್ತವು ಜಡವಾದ ಆಕಾಶದಲ್ಲಿದೆ' ಎಂಬ ಪೂರ್ವಪಕ್ಷವನ್ನಾಗಲೀ, 'ಇಲ್ಲ'ವೆಂಬ ಸಿದ್ಧಾಂತವನ್ನಾಗಲೀ ಮಾಡುವ ಅವಶ್ಯಕತೆ ಇಲ್ಲ. ಆದರೂ ಕೂಡ ಸ್ವಭಾವ-ನಿಯಾಮಕತ್ವವೆಂಬ ಮಹಾಗುಣದ ಸಿದ್ಧಿಗೋಸ್ಕರ ಕೃತ್ವಾಚಿಂತೆಯನ್ನು ಮಾಡಲಾಗಿದೆ. ಹೀಗೆ ಪ್ರಸಿದ್ಧವಾದ ವಿವರತ್ವಾದಿಪ್ರವೃತ್ತಿನಿಮಿತ್ತಗಳನ್ನು ಈಶಗತವೆಂದು ಸಮರ್ಥಿಸಿದ್ದಾಯಿತು. ಇದರಿಂದ ಆಕಾಶಶಬ್ದದ ಕ್ಲೃಪ್ತ(ಪ್ರಮಾಣಸಿದ್ಧವಾದ)ಯೋಗವು ಭಗವಂತನಲ್ಲಿ ಸಿದ್ಧವಾಯಿತು. ಅಷ್ಟೇ ಅಲ್ಲ ಕಲ್ಪ್ಯವಾದ ಯೋಗವೂ ಸಹ ಭಗವಂತನಲ್ಲಿಯೇ ಇರುತ್ತದೆಂದು ಬೇರೆ ಗ್ರಂಥಗಳಿಂದ ತಿಳಿಯಬೇಕು. ಆಕಾಶಶಬ್ದವು ಭಗವಂತನಲ್ಲಿ ಯೋಗವೃತ್ತಿಯಿಂದ ಇದೆ ಎನ್ನಲು ಭೂತಾಕಾಶದಲ್ಲಿ ಪ್ರಸಿದ್ಧವಾದ ರೂಢಿಯು ಬಾಧಕವಾಗುತ್ತದೆ ಎಂದು ಪೂರ್ವಪಕ್ಷಿಯು ಶಂಕಿಸಿದ್ದ. ಆದರೆ ರೂಢಿಯೂ ಸಹ ಭಗವಂತನಲ್ಲಿದೆ ಎಂದು ಇದುವರೆಗೂ ಸಮರ್ಥಿಸಿದರು. ಆದ್ದರಿಂದ ಆಕಾಶಶಬ್ದದ ಯೋಗವೃತ್ತಿಯನ್ನೇಕೆ ಭಾಷ್ಯಕಾರರು ಹೇಳಿಲ್ಲ? ಎಂಬ ಶಂಕೆಗೆ ಅವಕಾಶವಿಲ್ಲ. ಈ ಎಲ್ಲ ವಿಷಯವನ್ನು 'ಆಸಮಂತಾತ್' ಎಂಬ ಗ್ರಂಥವು ನಿರೂಪಿಸಿದೆ.

ಛಾಂದೋಗ್ಯಭಾಷ್ಯದ ಅಷ್ಟಮಾಧ್ಯಾಯದ ಪ್ರಥಮಖಂಡದಲ್ಲಿ 'ಆಸಮಂತಾತ್ ಕಾಶನಾತ್ ಆಕಾಶಃ' 'ಆಸಮಂತಾತ್ ಕಂ ಅಶ್ನಾತೀತಿ ವಾ' ಎಂಬ ಮಾತನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ಆಕಾಶಶಬ್ದದ ಯೋಗವೃತ್ತಿಯನ್ನು ಈ ಅಧಿಕರಣದಲ್ಲಿ ಭಾಷ್ಯಕಾರರು ಹೇಳದಿರಲು ಛಾಂದೋಗ್ಯಭಾಷ್ಯದಲ್ಲಿ ಹೇಳಿದ್ದಾಗಿದೆ ಎಂಬುದು ಒಂದು ಕಾರಣ. ಮತ್ತೊಂದು ಕಾರಣ ಪೂರ್ವಪಕ್ಷಿಗೆ ಅಭಿಮತವಾದ ರೂಢ್ಯರ್ಥವೇ ಭಗವಂತನಲ್ಲಿ ಇದೆ ಎಂದು ಸಮರ್ಥಿಸುವಿಕೆ. ಹಾಗಾದರೆ ಸನ್ನ್ಯಾಯರತ್ನಾವಲಿಯಲ್ಲಿ ಯೋಗ ಮತ್ತು ರೂಢಿ ಎರಡನ್ನೂ ಹೇಳಿದ್ದಾರಲ್ಲ? ಎಂದರೆ ರೂಢ್ಯರ್ಥದ ಜೊತೆಗೆ ಯೋಗಾರ್ಥವೂ ಇದೆ ಎಂದು ತಿಳಿಸುವ ಅಭಿಪ್ರಾಯದಿಂದ ಮಾತ್ರ ಹಾಗೆ ಹೇಳಿದ್ದಾರೆ. ಮಹಾಯೋಗವನ್ನು ಸಮರ್ಥಿಸುವುದರಿಂದ ವಿದ್ವದ್ರೂಢಿಯೂ ಸಿದ್ಧವಾಗುತ್ತದೆಂದು 'ವಿದ್ವದ್ರೂಢಿರ್ವೈದಿಕಾ ಸ್ಯಾತ್ ಸಾ ಯೋಗಾದೇವ ಲಭ್ಯತೇ' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. 'ಯಾವಾನ್ವಾಽಯಮಾಕಾಶಃ' 'ಆಕಾಶೋ ವೈ ನಾಮ' 'ಯೋಽಯಂ ಬಹಿರ್ಧಾ ಪುರುಷಾದಾಕಾಶಃ' ಎಂದು ಆಕಾಶಶಬ್ದವು ವೈದಿಕವೆಂದು ಸಿದ್ಧವಾಗುತ್ತದೆ. ಹೀಗೆ ಹೇಳಿದ್ದರಿಂದ ಆಕಾಶದಲ್ಲಿ ಪ್ರಸಿದ್ಧವಾದ ರೂಢಿಯನ್ನು ಯೋಗವು ಹೇಗೆ ತಾನೆ

ಅಪಹರಿಸುತ್ತದೆ? ಎಂಬ ಶಂಕೆಯನ್ನು ಪರಿಹರಿಸಿದ್ದಾಯಿತು. ಏಕೆಂದರೆ, ಭಗವಂತನಲ್ಲಿ ಇರುವ ಮಹಾಯೋಗವು ಪ್ರಯೋಗಬಾಹುಲ್ಯವೆಂಬ ಪ್ರಾಜ್ಞರೂಢಿಯನ್ನು ಒಳಗೊಂಡಿರುತ್ತದೆ. ಇದನ್ನು ಅನುವ್ಯಾಖ್ಯಾನವೇ ಹೇಳಿದೆ.

ಪ್ರಯೋಗಹೇತೋರ್ಬಾಹುಲ್ಯಂ ಜ್ಞೇಯಂ ಪರಮಮುಖ್ಯತಾ ।
ತತ್ರ ಪ್ರಯೋಗಬಾಹುಲ್ಯಂ ಜ್ಞೇಯಂ ತತ್ಪರತಾ ಕಿಮು ॥

ನಿರವಧಿಕವಾದ ಶಬ್ದಪ್ರವೃತ್ತಿನಿಮಿತ್ತವು ಎಲ್ಲಿ ಇರುತ್ತದೋ ಅದನ್ನು ಪರಮಮುಖ್ಯವೃತ್ತಿಯೆಂದು ತಿಳಿಯಬೇಕು. ನಿರವಧಿಕವಾದ ಪ್ರವೃತ್ತಿನಿಮಿತ್ತವುಳ್ಳ ಅದೇ ಅರ್ಥದಲ್ಲಿ ಪ್ರಯೋಗಬಾಹುಲ್ಯವಿದ್ದರೆ ಆ ಶಬ್ದಪ್ರವೃತ್ತಿನಿಮಿತ್ತವು ಮಹಾಯೋಗರೂಢಿರೂಪವಾದ ಪರಮಮುಖ್ಯವೃತ್ತಿಯಾಗುತ್ತದೆಂದು ಪ್ರತ್ಯೇಕ ಹೇಳಬೇಕೇನು?

'ಮಹಾಯೋಗವಿದ್ವದ್ರೂಢ್ಯೋಃ ಭಾವಾಚ್ಚ' (ಮಹಾಯೋಗವಿದ್ವದ್ರೂಢಿಗಳು ಆಕಾಶಶಬ್ದದಲ್ಲಿರುವುದರಿಂದ) ಎಂಬ ಟೀಕೆಯನ್ನು ಇಲ್ಲಿಯ ತನಕ ವ್ಯಾಖ್ಯಾನಿಸಿದ್ದಾಯಿತು.

**गुरुराजीयम्** – तत्रादावचेतनगतत्वेन विवरत्वादेरीश्वरानधीनत्वं यदुक्तं तद्दूषयन् सिद्धान्तयति – **चिद्गतस्येति** ॥

ननु भृत्यगतस्य जयस्य राजाधीनत्वेन 'राजा जयी' इति प्रयोगस्येवाचेतनगतप्रवृत्तिनिमित्तस्य चेतनानधीनत्वेन चेतने जडवाचिशब्दप्रयोगस्यादर्शनात् कथं तस्येश्वराधीनत्वम्? इत्यत आह – **अस्ति चेति** ॥ नच घटादिशब्दानां कुलालादौ प्रयोगापत्तिः । प्रयोगो नाम शक्तिश्चेदिष्टापत्तेः । अभिलापश्चेदतिसहजबलवति पुरुषे सिंहशब्दाप्रयोगेण निमित्तस्यैव प्रयोगानुरोधित्वेन प्रयोगस्य निमित्तानुसारित्वनियमाभावात् । अन्यथाऽतिप्रसङ्गादिति भावः ।

ननु कुम्भादिस्वभावस्य कुलालाधीनत्वे आकाशादिस्वभावस्येश्वराधीनत्वे च कुलालेश्वरयोः को विशेषः? इत्यत आह – **किं त्विति** ॥

ननु विवरत्वस्येश्वराधीनत्वेन कदाचित्तदपगमेनाविवरत्वमपि स्यात् । अन्याधीनेऽन्यथाभावस्यापि कदाचिद् दर्शनादित्यत आह – **किञ्चेति** ॥

ननु लोकेऽन्यस्य वस्तुनोऽन्यथाभावस्य कुत्राप्यदर्शनात् कथमीश्वरस्यान्यथाकरणसामर्थ्यम्? इत्यत आह – **औषधादीति** ॥ अच्छिद्रताकृतेरिति 'अधीगर्थदयेशां कर्मणि' इति षष्ठी । 'इन्द्रादिशब्दप्रवृत्तिनिमित्तानामैश्वर्यादीनामिव

विवरत्वादेः स्वभावत्वान्न ब्रह्माधीनत्वम्' इति परोक्तं बाधकं परिहरति – **बोधयन्ति चेति ॥** अत्र 'स्यन्दन्ते' इत्यनेन 'एतस्य वाक्षरस्य प्रशासने गार्गि प्राच्यो नद्यः स्यन्दन्ते' इति श्रुतेः 'नभ' इत्यनेन स्मृतेर्ग्रहणमिति ज्ञातव्यम् ।

नन्वाकाशशब्दप्रवृत्तिनिमित्तस्य भगवदधीनत्वेनाकाशशब्दस्य भगवत्परत्वे रूढत्वमेवोक्तं स्यात् । तथा च योगाभावान्न गुणपूर्तिसिद्धिः, इत्यत आह – **एवञ्चेति ॥**

नन्वेतस्य सुधादावनुक्तत्वात् तद्विरोधः, इत्यत आह – **अत एवेति ॥** नन्ववकाशप्रदत्वस्येश्वरगतत्वे कथं तस्याकाशस्वभावत्वम्? इत्यत आह – **एवञ्चेति ॥** तर्हि सिद्धान्ते ईशतन्त्रत्वकथनमयुक्तम्, इत्यत आह – **सिद्धान्त इति ॥ कृत्वा चिन्तयेति ॥** 'योगो मास्तु केवलरूढ्यैवेष्टसिद्धिः' इति कृत्वा चिन्तयेत्यर्थः । कृत्वा चिन्तयाधिकरणारम्भस्य काप्यदर्शनात्? इत्यत आह – **यथेति ॥** ननु 'आ समन्तात् काशते' इत्यादिरूपो योगः कुतो नोक्तः? इत्यत आह – **आ समन्तादिति ॥**

## ಸಾರ

ಈ ಆಕಾಶಾಧಿಕರಣದಲ್ಲಿ ಆಕಾಶಶಬ್ದವನ್ನು ವಿಷ್ಣುವಿನಲ್ಲಿ ಸಮರ್ಥನೆ ಮಾಡಲಾಗಿದೆ. ಮುಂದೆ "ಆಕಾಶೋ ಅರ್ಥಾಂತರವ್ಯಪದೇಶಾತ್" ಎಂಬಲ್ಲಿಯೂ, ಅದನ್ನೇ ಹೇಳುತ್ತಾರೆ. ವಿಯದಧಿಕರಣವೂ ಭೂತಾಕಾಶವಲ್ಲ ಕಿಂತು ವಿಷ್ಣುವೇ ಎಂದು ಹೇಳುತ್ತದೆ. ಹೀಗೆ ಒಂದೇ ವಿಷಯವನ್ನು ಕುರಿತು ಮೂರು ಅಧಿ -ಕರಣಗಳಿದ್ದರೆ ಪುನರುಕ್ತವಲ್ಲವೆ ? ಎಂದರೆ. ಆಕಾಶವಲ್ಲ ಕಿಂತು ವಿಷ್ಣುವೇ ಎಂಬ ಸಮರ್ಥನೆ ಮೂರರಲ್ಲಿಯೂ ಸಮಾನವಾಗಿದ್ದರೂ ನ್ಯಾಯಭೇದವಿರುವುದರಿಂದ ಅಧಿಕರಣಭೇದವಿದೆ; ಹಾಗಾಗಿ ಪುನರುಕ್ತವಲ್ಲ. ಹೇಗೆಂದರೆ ಈ ಅಧಿಕರಣದಲ್ಲಿ ಆಕಾಶಶಬ್ದವು ಭಗವಂತನಲ್ಲಿ ಮುಖ್ಯ ಎಂದು ಹೇಳಲು ಆಕಾಶಶಬ್ದದ ಪ್ರವೃತ್ತಿನಿಮಿತ್ತ ಭಗವದಧೀನ ಎಂದು ಸಮರ್ಥನೆ ಮಾಡುತ್ತಾರೆ ಮುಂದಿನ ಆಕಾಶಾಧಿಕರಣದಲ್ಲಿ ಪ್ರವೃತ್ತಿನಿಮಿತ್ತ ಭಗವದಧೀನ ಮತ್ತು ಆಕಾಶಶಬ್ದವು ವಿಷ್ಣುವಾಚಕ ಎಂದು ಸಿದ್ಧವಾದರೂ ಶ್ರುತಿಯಲ್ಲಿರುವ 'ವೈ' ಶಬ್ದವನ್ನಿಟ್ಟುಕೊಂಡು ಪೂರ್ವಪಕ್ಷ ಮಾಡಿದಾಗ ಅದರ ಪರಿಹಾರವನ್ನು ಮಾಡಿದೆ. ವಿಯದಧಿಕರಣದಲ್ಲಿ ಜನ್ಮಾದಿಕಾರಣತ್ವವು ಆಕಾಶಕ್ಕಿಲ್ಲ ಕಿಂತು ವಿಷ್ಣುವಿಗೇ ಎಂದು ಸಮರ್ಥನೆ ಮಾಡಿದೆ. ಆದ್ದರಿಂದ ಪುನರುಕ್ತಿದೋಷಕ್ಕೆ ಅವಕಾಶವಿಲ್ಲ.

ಸಿದ್ಧಾಂತ ಹೀಗಿದೆ - ಚೇತನರಲ್ಲಿರುವ ಪ್ರವೃತ್ತಿನಿಮಿತ್ತಗಳೇ ಭಗವಂತನ ಅಧೀನಗಳಾಗಿವೆಯೆಂದರೆ ಅಚೇತನಗಳಲ್ಲಿರುವ ಪ್ರವೃತ್ತಿ ನಿಮಿತ್ತಗಳು ಸರ್ವಥಾ ಭಗವದಧೀನಗಳೇ ಆಗುತ್ತವೆ. ಏಕೆಂದರೆ ಚೇತನಕ್ಕಿಂತ

ಅಚೇತನಗಳು ಅತ್ಯಂತ ಪರಾಧೀನಗಳು ಎಂಬುದು ಎಲ್ಲರಿಗೂ ಸಿದ್ಧವಾದ ವಿಷಯ. ಹಾಗಾಗಿ ಅಚೇತನದಲ್ಲಿರುವ ಧರ್ಮಗಳು ಭಗವದಧೀನವಾಗಲಿಕ್ಕೆ ಹೇಗೆ ಸಾಧ್ಯ? ಎನ್ನುವುದು ಸರಿಯಲ್ಲ.

ಹಾಗೆಯೇ ಭೃತ್ಯನ ಜಯವನ್ನು ರಾಜನ ಜಯವೆಂದು ವ್ಯವಹರಿಸುವಂತೆ ಜಡವಸ್ತುಗಳಲ್ಲಿರುವ 'ಮೃತ್ವ' ಮುಂತಾದ ಧರ್ಮಗಳು ಅವುಗಳ ಅಭಿಮಾನಿಗಳ ಅಧೀನವಾದ್ದರಿಂದ ಅದನ್ನಿಟ್ಟುಕೊಂಡು 'ಮೃದಬ್ರವೀತ್' ಎಂದು ಪ್ರಯೋಗಿಸಲಾಗುವುದು. ಹೀಗೆ ಅಭಿಮಾನಿದೇವತೆಗಳಲ್ಲಿ 'ಮೃತ್ವ' ವ್ಯವಹಾರ ಕಂಡಿದೆಯಾದ್ದರಿಂದ ಚೇತನಗತವಾದ ಧರ್ಮವನ್ನು ಭಗವಂತನಲ್ಲಿ ಹೇಳಿದಂತೆ ಜಡಗತಧರ್ಮವನ್ನು ಹೇಳಲು ಬರುವುದಿಲ್ಲ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ.

ಆಕಾಶದ ಸ್ವಭಾವವು ವಿಷ್ಣುವಿನ ಅಧೀನವಾಗಲಿಕ್ಕೆ ಹೇಗೆ ಸಾಧ್ಯ? ಎಂದರೆ. ಲೋಕದಲ್ಲಿ ಕುಂಬಾರನು ಘಟವನ್ನು ತಯಾರಿಸುವಾಗ ಘಟದ ಸ್ವಭಾವವಾದ ಘಟತ್ವವೂ ಅವನ ಅಧೀನವೇ ಆಗಿರುತ್ತದೆ. ಏಕೆಂದರೆ ಅವನು ಶರಾವವನ್ನು ಮಾಡಲು ಪ್ರಯತ್ನ ಮಾಡಿದಾಗ ಘಟವು ಹುಟ್ಟುವುದಿಲ್ಲ. ಘಟವನ್ನು ಮಾಡಲು ಯತ್ನಸಿದಾಗಷ್ಟೇ ಘಟವು ಹುಟುತ್ತದೆ. ಕೇವಲ ಮಣ್ಣಿನಿಂದ ಅವನು ಯಾವುದನ್ನಾದರೂ ಮಾಡಬಹುದು. ಹಾಗಾಗಿ ಘಟದ ಸ್ವಭಾವವಾದ ಘಟತ್ವ ಕುಂಬಾರನ ಅಧೀನವೇ ಆಗಿರುತ್ತದೆ. ಹೀಗಿರುವಾಗ ವಿಷ್ಣುವಿನಿಂದ ಹುಟ್ಟಿದ ಆಕಾಶದ ಸ್ವಭಾವವು ಭಗವದಧೀನ ಎಂದರೆ ಏನು ತೊಂದರೆ? ಅಲ್ಲದೆ ಅನೇಕ ಶ್ರುತಿಸ್ಮೃತಿಗಳೂ ಕೂಡ ಆಕಾಶದ ಸ್ವಭಾವವಾದ ವಿವರತ್ವವು ಭಗವಂತನ ಅಧೀನವೆಂದು ಸಾರುತ್ತಿವೆ. ಆದ್ದರಿಂದ ಆಕಾಶಸ್ವಭಾವವೂ ಭಗವದಧೀನವಾಗಿದೆ. ಮತ್ತು ನಿರವಧಿಕವಾದ ವಿವರತ್ವವು ಭಗವಂತನಲ್ಲಿಯೇ ಇರುವುದರಿಂದ ಆಕಾಶ ಶಬ್ದದ ಮುಖ್ಯ ವಾಚ್ಯತ್ವ ವಿಷ್ಣುವಿಗೆ ಕೊಡುತ್ತದೆ.

— — — — — —

**तात्पर्यचन्द्रिका –**

**अनन्तत्वादिलिङ्गानि तु निरवकाशानि ।**

**अन्तत्रयोज्झिते विष्णौ निरूढं लोकवेदयोः ।**
**अनन्तत्वं कथं तिष्ठेत् भूतेऽन्तत्रयसंयुते ॥**

**यद्यप्यव्याकृताकाशे गुणतोऽनन्तत्वाभावेऽपि देशकालाभ्यामानन्त्ये अनन्तशब्दस्य नैघण्टुकी प्रसिद्धिश्चास्ति । तथाऽपि पूर्वपक्ष्यभिमते अन्तत्रयवति भूताकाशे ते अपि न स्तः ।**

**निरूढश्चान्तत्रयहीने विष्णौ भाष्योक्तश्रुतितो लोकतश्च नामत्रयान्तर्गतोऽनन्तशब्दः । लोकप्रसिद्धिमाश्रित्यापि नाकाशश्रुत्या विष्णुलिङ्गं बाधार्हम् ।**

द्वाभ्यामावृत्तिजातिभ्यामेव हि प्रबला श्रुतिः ।
अगतित्वपरत्वानेकत्वैर्लिङ्गानि तु त्रिभिः ॥

श्रुतिर्हि जात्या आवृत्त्या च प्रबला । लिङ्गानि तु निरवकाशत्वचरमत्वानेकत्वैः । एवञ्च यदा च निरवकाशत्वप्रयुक्तमेव प्राबल्यं "परनित्यान्तरङ्गप्रतिपदविधिषु परबलीयस्त्वम्" इत्युक्तत्वात् कांस्यभोजिन्यायेन स वै प्राबल्यानां बाधकम्, तदा किमु वाच्यं चरमत्वादियुतमिति ।

परोवरीयस्त्वादिविष्णुलिङ्गानां तु निरवकाशता भाष्य एवोक्ता । दृश्यते च घृतादौ निरूढानामप्याज्यादिशब्दानां मुखान्तरं विनैव "आज्यैः स्तुवते" इत्यादौ तैस्तैर्हेतुभिः स्तोत्रादिनामधेयत्वम् । भूतकारणत्वादि तु भूतलिङ्गं श्रुत्यन्तरानुसारेण विष्णावेव मुख्यम् । तस्मादाकाशादिशब्दवाच्यो विष्णुरिति ।

ಅನುವಾದ - ಆಕಾಶದಲ್ಲಿರುವ ಅನಂತತ್ವಾದಿ ಲಿಂಗಗಳಂತೂ ನಿರವಕಾಶವಾಗಿವೆ.

ಅಂತತ್ರಯೋಜ್ಝಿತೇ ವಿಷ್ಣೌ ನಿರೂಢಂ ಲೋಕವೇದಯೋಃ।
ಅನಂತತ್ವಂ ಕಥಂ ತಿಷ್ಠೇದ್ಭೂತೇಽಂತತ್ರಯಸಂಯುತೇ ॥

ವಿಷ್ಣುವು ದೇಶತಃ ಕಾಲತಃ ಗುಣತಃ ಅನಂತನಾಗಿದ್ದಾನೆ. ಹೀಗೆ ವೇದಗಳಷ್ಟೇ ಹೇಳುತ್ತಿಲ್ಲ. ಲೋಕದಲ್ಲಿರುವವರೂ ಹೇಳುತ್ತಾರೆ. ಆದರೆ ಭೂತಾಕಾಶದಲ್ಲಿ ಈ ಮೂರುವಿಧವಾದ ಆನಂತ್ಯಗಳಲ್ಲಿ ಒಂದನ್ನೂ ಹೇಳಲಾಗದು. ಹೀಗಿರುವಾಗ ಭೂತಾಕಾಶದಲ್ಲಿ ಅನಂತತ್ವಧರ್ಮವು ಬರಲು ಹೇಗೆ ಸಾಧ್ಯ ?

ವಸ್ತುತಸ್ತು - ಅವ್ಯಾಕೃತಾಕಾಶದಲ್ಲಿ ಗುಣತಃ ಆನಂತ್ಯವಿಲ್ಲದಿರಬಹುದು, ಆದರೆ ದೇಶತಃ ಕಾಲತಃ ಆನಂತ್ಯವನ್ನು ಹೇಳಲು ಸಾಧ್ಯ. ಈ ನಿಟ್ಟಿನಲ್ಲಿಯೇ ಕೋಷಗಳು ಆಕಾಶವನ್ನು ಅನಂತವೆಂದು ಹೇಳುತ್ತವೆ. ಆದರೂ ಸಹ ಪೂರ್ವಪಕ್ಷಿಗೆ ಅಭಿಮತವಾದ ಭೂತಾಕಾಶದಲ್ಲಿ ದೇಶತಃ ಕಾಲತಃ ಆನಂತ್ಯವೂ ಸಹ ಇರುವುದಿಲ್ಲವೆಂದು ಇಲ್ಲಿ ವಿವಕ್ಷಿಸಲಾಗಿದೆ. ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯಂತೆ ಮೂರುವಿಧವಾದ ಆನಂತ್ಯವು ವಿಷ್ಣುವಿನಲ್ಲಿ ಪ್ರಸಿದ್ಧ(ನಿರೂಢ)ವಾಗಿವೆ. ಲೋಕದಲ್ಲಿಯೂ ಸಹ 'ಅಚ್ಯುತ, ಅನಂತ, ಗೋವಿಂದ' ಎಂದು ಭಗವಂತನನ್ನು ಯಾವುದೇ ತರಹದ ಅಂತಗಳಿಲ್ಲದವನೆಂದು ಕರೆಯುತ್ತಾರೆ. ಲೋಕಪ್ರಸಿದ್ಧಿಯನ್ನು ಆಶ್ರಯಿಸಿಯೂ ಸಹ ಆಕಾಶಶ್ರುತಿಯು ಅನಂತತ್ವವೆಂಬ ವಿಷ್ಣುಲಿಂಗವನ್ನು ಬಾಧಿಸಲು ಸಮರ್ಥವಾಗುವುದಿಲ್ಲ.

**ದ್ವಾಭ್ಯಾಮಾವೃತ್ತಿಜಾತಿಭ್ಯಾಮೇವ ಹಿ ಪ್ರಬಲಾ ಶ್ರುತಿಃ।**
**ಅಗತಿತ್ವಪರತ್ವಾನೇಕತ್ವೈರ್ಲಿಂಗಾನಿ ತು ತ್ರಿಭಿಃ॥**

ಸ್ವಭಾವತಃ ಮತ್ತು ಅನೇಕತ್ವದಿಂದಷ್ಟೇ ಶ್ರುತಿಯು ಪ್ರಬಲವಾಗಿದೆ. ಆದರೆ ನಿರವಕಾಶತ್ವ ಪರತ್ವ ಅನೇಕತ್ವವೆಂಬ ಮೂರು ಕಾರಣಗಳಿಂದ ಲಿಂಗವು ಪ್ರಬಲವಾಗಿದೆ.

ಇದರ ಅಭಿಪ್ರಾಯ ಇಷ್ಟು - ಶ್ರುತಿಯು ಸ್ವಭಾವತಃ ಮತ್ತು ಅನೇಕತ್ವಪ್ರಯುಕ್ತವಾಗಿ ಪ್ರಬಲವಾಗಿದೆ. ಅನಂತತ್ವ ಮೊದಲಾದ ಲಿಂಗಗಳಾದರೂ ಕೂಡ ನಿರವಕಾಶತ್ವ, ಚರಮತ್ವ ಮತ್ತು ಅನೇಕತ್ವ ಮೊದಲಾದವುಗಳಿಂದ ಯುಕ್ತವಾಗಿ ಶ್ರುತಿಗಿಂತಲೂ ಪ್ರಬಲವಾಗುತ್ತವೆ. ಕೇವಲ ನಿರ-ವಕಾಶತ್ವ ಇದ್ದರೆ ಸಾಕು ಸ್ವಭಾವತಃ ಪ್ರಬಲವಾದ ಶ್ರುತಿಗಿಂತಲೂ ಲಿಂಗವು ಪ್ರಬಲವಾಗುತ್ತದೆ; ಇನ್ನು ಚರಮತ್ವ ಮೊದಲಾದವುಗಳಿಂದ ಕೂಡಿದಾಗ ಶ್ರುತಿಗಿಂತ ಪ್ರಬಲವೆಂದು ಪ್ರತ್ಯೇಕ ಹೇಳಬೇಕೇನು? ವ್ಯಾಕರಣದಲ್ಲಿ ನಿರಕಾಶತ್ವ ಇದ್ದರೆ ಸಾಕು ಎಲ್ಲವನ್ನೂ ಬಾಧಿಸುತ್ತದೆಂದು ಪ್ರತಿಪಾದಿಸಿದ್ದಾರೆ. ಪರ, ನಿತ್ಯ, ಅಂತರಂಗ, ನಿರವಕಾಶವಿಧಿಗಳಲ್ಲಿ ಉತ್ತರೋತ್ತರಪ್ರಾಬಲ್ಯವು ಸರ್ವಸಿದ್ಧವಾಗಿದೆ. ಪೂರ್ವ-ಮೀಮಾಂಸೆಯಲ್ಲಿಯೂ ಸಹ ಕಾಂಸ್ಯಭೋಜಿನ್ಯಾಯವನ್ನು ಉದಾಹರಿಸುವ ಮುಖಾಂತರ ನಿರವಕಾಶವಿಧಿಗೆ ಸರ್ವಪ್ರಾಬಲ್ಯವನ್ನು ಒಪ್ಪಿದ್ದಾರೆ. ಪ್ರಕೃತ ಅನಂತತ್ವಾದಿ ಲಿಂಗಗಳು ನಿರವಕಾಶ-ಗಳಾದ್ದರಿಂದ ಆಕಾಶಶ್ರುತಿಯನ್ನು ಬಾಧಿಸುವುದರಲ್ಲಿ ಸಂಶಯವಿಲ್ಲ. ಅನಂತತ್ವಲಿಂಗವಷ್ಟೇ ನಿರವಕಾಶವಲ್ಲ. ಪರೋವರೀಯಸ್ತ್ವವೇ ಮೊದಲಾದ ಇನ್ನೂ ಅನೇಕ ಲಿಂಗಗಳು ನಿರವಕಾಶ-ಗಳಾಗಿವೆ. ಭಾಷ್ಯಕಾರರು ಅದನ್ನೆಲ್ಲಾ ಖಚಿತವಾಗಿ ಸ್ಪಷ್ಟಪಡಿಸಿದ್ದಾರೆ.

ಆಕಾಶಶಬ್ದವು ವಿಷ್ಣುವನ್ನು ಪ್ರತಿಪಾದಿಸುತ್ತದೆ ಎಂದು ಸಮರ್ಥಿಸಲು ಆಕಾಶಶ್ರುತಿಯ ಹತ್ತಿರ ಯಾವ ವಿಷ್ಣುಲಿಂಗಗಳೂ ಕಾಣಸುತ್ತಿಲ್ಲವಲ್ಲ? ಎಂದರೆ, ಯಾವರೀತಿಯಾಗಿ ಆಜ್ಯಾದಿಶಬ್ದಗಳು ಯಾವ ದ್ವಾರವೂ (ಲಿಂಗಗಳೂ) ಇಲ್ಲದೆ ಆಜ್ಯಸೂಕ್ತವನ್ನೇ ಪ್ರತಿಪಾದಿಸುತ್ತದೋ ಅದರಂತೆ ಆಕಾಶಾದಿಶಬ್ದಗಳೂ ಸಹ ಬೇರೆ ದ್ವಾರವಿಲ್ಲದಿದ್ದರೂ (ಲಿಂಗಗಳಿಲ್ಲದಿದ್ದರೂ) ವಿಷ್ಣುವನ್ನು ಸ್ವತಃ ಪ್ರತಿಪಾದಿಸಬಹುದು. ಇಲ್ಲಿ ಆಕಾಶಶಬ್ದವು ಹೇಗೆ ಭೂತಾಕಾಶದಲ್ಲಿ ನಿರೂಢವಾಗಿದೆಯೋ ಅದರಂತೆ ಆಜ್ಯಶಬ್ದವೂ ಸಹ ತುಪ್ಪದಲ್ಲಿ ನಿರೂಢವಾಗಿದೆ. ಆದರೆ 'ಆಜ್ಯೈಃ ಸ್ತುವತಃ' ಎಂದು ಹೇಳಿದಾಗ ತುಪ್ಪದಿಂದ ಸ್ತೋತ್ರ ಮಾಡುತ್ತಾರೆಂದು ಯಾರೂ ಹೇಳುವುದಿಲ್ಲ. ಆಜ್ಯಸೂಕ್ತದಿಂದ ಸ್ತೋತ್ರ ಮಾಡುತ್ತಾರೆಂದೇ ಎಲ್ಲರೂ ತಿಳಿಯುತ್ತಾರೆ. ಅದರಂತೆ ಆಕಾಶಶಬ್ದವೂ ಸಹ ವಿಷ್ಣುವನ್ನೇ ಪ್ರತಿ-ಪಾದಿಸುತ್ತದೆ.

ಆಕಾಶಶ್ರುತಿಯು ಭೂತಾಕಾಶಪರವೆನ್ನಲು ಕೂಡ ಸಮಸ್ತಭೂತಕಾರಣತ್ವವೆಂಬ ಲಿಂಗಗಳಿವೆ-ಯಲ್ಲ ಎಂದು ಪ್ರಶ್ನಿಸಬಹುದು. ಆದರೆ ಅವೆಲ್ಲವೂ ಸಹ ವಿಷ್ಣುವಿನಲ್ಲಿಯೇ ಮುಖ್ಯವೃತ್ತಿಯಿಂದ ಕೂಡುತ್ತವೆ. ಈ ಎಲ್ಲ ಕಾರಣಗಳಿಂದ ಆಕಾಶಶಬ್ದದಿಂದ ಮುಖ್ಯಪ್ರತಿಪಾದ್ಯವಾದದ್ದು ಭೂತಾಕಾಶ-ವಾಗುವುದಿಲ್ಲ, ವಿಷ್ಣುವೇ ಆಗುತ್ತಾನೆ.

ಪರಿಪೂರ್ಣಚಂದ್ರಿಕಾ

ಕಠಿಣಪದಾರ್ಥ -

ಅಂತತ್ರಯೋಜ್ಝಿತೇ = ದೇಶತಃ ಕಾಲತಃ ಗುಣತಃ ಕೊನೆಯಿಲ್ಲದ; ನಿರೂಢಂ = ಪ್ರಸಿದ್ಧವಾದ, ಅಂತತ್ರಯಸಂಯುತೇ = ದೇಶತಃ ಕಾಲತಃ ಗುಣತಃ ಕೊನೆಯಿರುವ; ನೈಘಂಟಿಕೀ ಪ್ರಸಿದ್ಧಿಃ = ಕೋಷಗಳಲ್ಲಿ ಪ್ರಸಿದ್ಧಿಯು; ಆವೃತ್ತಿಜಾತಿಭ್ಯಾಂ = ಅನೇಕತ್ವಪ್ರಯುಕ್ತವಾಗಿ ಮತ್ತು ಸ್ವಭಾವಪ್ರಯುಕ್ತವಾಗಿ; ದ್ವಾಭ್ಯಾಂ = ಎರಡು ಕಾರಣಗಳಿಂದ; ಅಗತಿತ್ವಾತ್ = ನಿರವಕಾಶತ್ವ; ಪರನಿತ್ಯಅಂತರಂಗಪ್ರತಿಪದವಿಧಿಷು = ಪರ - ಮುಂದಿನ ಸೂತ್ರ ಅಥವಾ ಮುಂದಿನ ಕಾರ್ಯ, ನಿತ್ಯ- ಕೃತಾಕೃತಪ್ರಸಂಗವಾದ ವಿಧಿ (ಉಳಿದದ್ದು ಬರಲಿ ಬಿಡಲಿ ತಾನಂತೂ ಬರುತ್ತೇನೆಂಬ ವಿಧಿ), ಅಂತರಂಗ - ಸ್ವಲ್ಪವನ್ನು ಅಪೇಕ್ಷಿಪಡುವಂತಹದ್ದು, ಪ್ರತಿಪದವಿಧಿಷು - ನಿರವಕಾಶವಿಧಿಗಳಲ್ಲಿ; ಪರಬಲೀಯಸ್ತ್ವಂ = ಉತ್ತರೋತ್ತರಪ್ರಾಬಲ್ಯವನ್ನು; ಉಕ್ತತ್ವಾತ್ = ವೈಯ್ಯಾಕರಣರಿಂದ ಹೇಳಲ್ಪಟ್ಟಿದ್ದರಿಂದ; ಮುಖಾಂತರಂ = ಬೇರೆ ದ್ವಾರ (ಬೇರೆ ಲಿಂಗ).

**प्रकाशः** – एवं प्रमेयाश्रितां शब्दस्य भगवति मुख्यत्वविरोधिनीं शङ्कां प्रवृत्तिनिमित्तस्येशगतत्वेशाधीनत्वयोः समर्थनपूर्वं मुख्यत्वप्रसाधनेन निरस्य, इदानीं प्रमाणाश्रितां वाक्यस्य तत्परत्वविरोधिनीं शङ्कां निरसितुं 'तल्लिङ्गात्' इत्यनेन अभिमतं न्यायं विशदयन् आह – **अनन्तत्वादीति** ॥ अनन्तत्वं तावन्निरवकाशमित्याह – **अन्तत्रयेति** ॥ देशकालगुणैरित्यर्थः। 'निरूढं' प्रसिद्धम् । उत्तरार्धे भूतपदव्यावर्त्यं शङ्कापूर्वमाह – **यद्यपीति** ॥ 'आनन्त्ये स्तः' इति योज्यम् । एतेन –

**नभोऽन्तरिक्षं गगनमनन्तं सुरवर्त्म खम् ।**

इति नैघण्टुकी प्रसिद्धिरव्याकृतविषया अज्ञानमूला वेत्युक्तं भवति । पूर्वार्धं विशदयति –**निरूढश्चेति** ॥ "विष्णोर्नु कं वीर्याणि" इत्यादिश्रुतित इत्यर्थः । लोकप्रसिद्धिः कथमित्यत आह – **लोकतश्च नामत्रयेति** ॥ "अच्युतानन्तगोविन्द" इति नामत्रयेत्यर्थः । 'निरूढः' इत्यनुवर्तनीयः । निरवकाशत्वोक्तेः फलमाह – **लोकेति** ॥ यदुक्तं 'श्रुतित्वबहुत्वोभयप्रयुक्तप्राबल्यात् निरवकाशत्वमात्रप्रयुक्तप्राबल्यस्य दुर्बलत्वात्' इति तदिदानीं निरस्यति – **द्वाभ्यामिति** ॥ "पूर्वान्तवत् स्वरः सन्धौ" इत्यादे नात्र यतिभङ्गः ।

श्लोकं व्याख्याति – **यदा चेति** ॥ 'प्राबल्यं बाधकम्' इत्यन्वयः । तत्र शाब्दिकमीमांसकसंवादावाह – **परनित्येति** ॥ **उक्तत्वादिति** ॥

**परं विदुः पूर्वपरोपपत्तौ परस्य नित्यस्य च नित्यमेव ।**
**नित्यान्तरङ्गोपगमेऽन्तरङ्गस्तथाविधात् प्रातिपदो बलीयान् ॥**

इति वदद्भिर्वैयाकरणैरिति शेषः । 'परं' पश्चात्तनं सूत्रं कार्यं वा । 'नित्यं' नाम कृताकृतप्रसङ्गि । 'अन्तरङ्गं' नामाल्पापेक्षम् । 'प्रतिपदिविधिः' नाम निरवकाशविधिः ।

यथा षष्ठे अङ्गपादे ''आडजादीनाम्'' इति सूत्रवृत्तावेव परापेक्षया नित्यस्य बलवत्त्वमुक्तम्। 'ऐज्यन्त' इति यजतेः कर्मणि लङि कृते तिङादेशः प्राप्नोति । ''लुङ्लङ्लृङ् क्ष्वट्'' इत्यडागमश्च । तत्र ''विप्रतिषेधे परं कार्यम्'' इत्याडागमे प्राप्ते लकारमात्रापेक्षत्वेनान्तरङ्गत्वाल्लादेशे सति ''सार्वधातुके यक्'' इत यक् प्राप्नोति, अडागमश्च । तत्र परत्वादटि प्राप्ते परमपि बाधित्वा यगेव कृताकृत-प्रसङ्गित्वेन नित्यत्वात्प्राप्नोति । तस्मिंश्च कृते पुनः परत्वादटि प्राप्ते ''वचिस्वपि-यजादीनां किति'' इति सम्प्रसारणमेव नित्यत्वाद्भवति । तत आडागम इति । नित्यादप्यन्तरङ्गस्य बलवत्त्वं तु तत्रैव नित्यादप्याडागमाल्लादेशस्य पूर्वं प्राप्तत्वाद् द्रष्टव्यम् । ''अचिश्नुधातुभ्रुवां य्वोरियङुवङौ'' इत्यादौ ''श्रियौ श्रियः'' इत्यादिषु अन्तरङ्गत्वाद्यणादेशे प्राप्ते निरवकाशत्वेनेयङेव कृत इति परबलीयस्त्वं द्रष्टव्यम् ॥ **कांस्यभोजीति ॥**

द्वादशे द्वितीयपादे ''अधिकश्च गुणः साधारणेऽविरोधात् कांस्यभोजि-वदमुख्येऽपि'' उपान्त्याधिकरणे चिन्तितम् । आग्रयणेष्ट्यां ऐन्द्राग्नवैश्वदेवद्यावा-पृथिव्यानि हवींष्याम्नातानि । तत्र द्यावापृथिव्यस्य वैश्वदेवपर्वस्थद्यावापृथिव्य-विकारत्वात् प्रसूनं बर्हिः प्राप्तम् । ऐन्द्राग्नादेस्तु प्रसूनमप्रसूनं वा बर्हिर्मात्रम् । तत्र समानतन्त्रेषु प्रसूनमप्रसूनं वोपादेयमुत प्रसूनमेवेति संशये, मुख्यत्वाद् भूयस्त्वाच्चानियम एव युक्त इति प्राप्ते, न ह्यनियमो नाम किञ्चिदङ्गं यदनुगृह्येत । बर्हिर्मात्रं त्वङ्गं, तच्च प्रसूनोपादानेऽप्यविरुद्धमिति न कस्यचिद्वैगुण्यम् । अनियमे तु द्यावापृथिव्यस्य वैगुण्यं स्यात् । न चावैगुण्यस्य सम्भवे तद्युक्तम् । अतः प्रसून-मेवोपादेयमिति सिद्धान्त इति ।

प्रसूनपदेन पुष्पितमुच्यते । अत्र मुख्यद्यावापृथिव्यबर्हिषः प्रसूनस्योपादाने दृष्टान्तत्वेन कांस्यभोजिन्यायस्सूत्रितः । यथा शिष्यस्य कांस्यभोजनव्रतनियमः,

गुरोः अनियमः । एकत्रोभयसमावेशे गुरुणा शिष्यानुरोधेन कांस्यपात्रमादतव्य-मिति, तन्न्यायेनेत्यर्थः ।

**चरमत्वेति** ॥ एतेन 'उपक्रमस्थत्वेनाकाशशब्दस्य प्राबल्यम्' इति तृतीय-शङ्कापि निरस्ता । ''प्रथमेऽश्रवणात्'' इत्यत्र चरमप्राबल्यस्य वक्ष्यमाणत्वादिति भावः । इतरलिङ्गानां परोवरीयस्त्वोद्गीथत्वादीनां निरवकाशता कुतो नोच्यते? इत्यत आह – **परोवरीयस्त्वादीति** ॥ ''परो मात्रया तन्वा वृधान'' ''ओमित्येत-दक्षरमुद्गीथमुपासीत'' इत्यादिवचनेनेत्यर्थः । 'तल्लिङ्गात्' इत्येकवचनं समुदायाभि-प्रायेण– इत्युक्तं भवति ।

एतेन ''श्रुत्या पूर्वपक्षितेऽपि'' इत्यादिटीका विवृता । एवं प्रमाणाश्रिता आद्या शङ्का निराकृता । द्वितीयशङ्कायामपि श्रुत्यन्तरे विष्ण्वादिशब्दसामानाधिकरण्या-भाव अप्यत्रैवानन्तादिपदसामानाधिकरण्यात्, ''आकाशो वै नाम'' इत्यादौ वक्ष्यमाणब्रह्मपदसामानाधिकरण्याच्च ''नामानि सर्वाणि'' इत्यादौ सङ्कोचे कारणा-भावेन विशेषश्रुतिसद्भावादिति परिहारस्य स्पष्टत्वादाद्यहेतुद्वयं निरस्तं मत्वा, अन्यत्र निरूढमुखाभावादिति हेतोः परिहारमाह – **दृश्यते चेति** ॥ चित्राज्याधिकरणं प्रागुक्तम् । 'मुखान्तरं' श्येनवन्निपत्यादानरूपक्रियादिद्वारकं गौरत्वं, विनैव तैस्तैर्वाक्यभेदादिहेतुभिरित्यर्थः ।

ननु ''सर्वाणि ह वा इमानि भूतानि'' इत्युक्तभूतकारणत्वविरोध इत्यत आह – **भूतेति** ॥ ''सर्वाणि भूतानि'' इत्याकाशादिसर्वभूतकारणत्वमुच्यमानम् ''आत्मन आकाशस्सम्भूतः'' इति श्रुत्यन्तरानुरोधेन आकाशशब्दितविष्णोरेव मुख्यमन्यथा सङ्कोचस्स्यादिति भावः । एतेन ''नच भूतकारणत्वोक्तिविरोधः'' इत्यादिटीका विवृता ।

यदपि 'यद्वा येन' इत्यादिनाऽभ्यधिकाशङ्कां विना पूर्वपक्षान्तरकरणं, तदपि लिङ्गानां वैष्णवत्वसमर्थनेन निरस्तम् । अभेदमतं त्वनेकमानविरुद्धमिति भावेना-काशपदमुपलक्षणमभिप्रेत्य, उपसंहरति – **तस्मादिति** ॥

ವಿವರಣೆ - ಅರ್ಥ - ಇಲ್ಲಿಯ ತನಕ ಆಕಾಶಶಬ್ದವು ಭಗವಂತನಲ್ಲಿ ಮುಖ್ಯವೃತ್ತಿಯಿಂದ ಇದೆ ಎನ್ನಲು ಬಾಧಕವಾದ ಪ್ರಮೇಯಾಶ್ರಿತಪೂರ್ವಪಕ್ಷವನ್ನು ನಿರಾಕರಿಸಿದರು. ಆಕಾಶಶಬ್ದದ ಪ್ರವೃತ್ತಿನಿಮಿತ್ತವು

ಮುಖ್ಯವಾಗಿ ಭಗವಂತನಲ್ಲಿಯೇ ಇದೆ. ಅಮುಖ್ಯವಾಗಿ ಆಕಾಶದಲ್ಲಿದ್ದರೂ ಸಹ ಭಗವದಧೀನವಾಗಿಯೇ ಇರುತ್ತದೆಂದು ಸಮರ್ಥಿಸುವ ಮೂಲಕ ಆಕಾಶಶಬ್ದದಿಂದ ಭಗವಂತನೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆಂದೂ ಸಹ ಸಮರ್ಥಿಸಿದ್ದಾಯಿತು. ಪ್ರಕೃತದಲ್ಲಿ ಸಮಗ್ರ ಆಕಾಶಶ್ರುತಿಯು ಭಗವಂತನಲ್ಲಿಯೇ ತಾತ್ಪರ್ಯ ಹೊಂದಿದೆ ಎಂಬುದಕ್ಕೆ ವಿರುದ್ಧವಾದ ಪ್ರಮಾಣಾಶ್ರಿತವಾದ ಶಂಕೆಯನ್ನು ನಿರಾಕರಿಸುವುದಕ್ಕಾಗಿ ಸೂತ್ರದಲ್ಲಿರುವ 'ತಲ್ಲಿಂಗಾತ್' ಎಂಬ ನ್ಯಾಯವನ್ನು ವಿವರಿಸುತ್ತಿದ್ದಾರೆ.

ಭಗವಂತನಲ್ಲಿರುವ ಅನಂತತ್ವಧರ್ಮವು ಬೇರೆ ಎಲ್ಲಿಯೂ ಇಲ್ಲವೆಂದು ನಿರವಕಾಶತ್ವವನ್ನು 'ಅಂತತ್ರಯ' ಎಂಬ ಶ್ಲೋಕದಿಂದ ಖಚಿತಪಡಿಸುತ್ತಿದ್ದಾರೆ. ಶ್ಲೋಕವನ್ನು ಸ್ವತಃ ಗ್ರಂಥಕಾರರೇ ವ್ಯಾಖ್ಯಾನಿಸುವವರಾಗಿ ಉತ್ತರಾರ್ಧದಲ್ಲಿರುವ ಭೂತಪದದ ಕೃತ್ಯವನ್ನು 'ಯದ್ಯಪಿ' ಎಂಬ ಗ್ರಂಥದಿಂದ ಹೇಳುತ್ತಿದ್ದಾರೆ. ಅವ್ಯಾಕೃತಾಕಾಶದಲ್ಲಿ ದೇಶತಃ ಕಾಲತಃ ಆನಂತ್ಯವು ಇರುತ್ತದೆಂದು ತಿಳಿಯಬೇಕು. ಇದರಿಂದ 'ನಭೋಽಂತರಿಕ್ಷಂ ಗಗನಮನಂತಂ ಸುರವರ್ತ್ಮ ಖಮ್' ಈ ಕೋಷವು ಕೇವಲ ಅವ್ಯಾಕೃತಾಕಾಶವಿಷಯವೆಂದು ತಿಳಿಯಬೇಕು. ಒಂದು ವೇಳೆ ಭೂತಾಕಾಶವಿಷಯವೆಂದು ಹೇಳಿದರೆ ಅದು ಅಜ್ಞಾನಮೂಲವೆಂದು ತಿಳಿಯಬೇಕು. ಶ್ಲೋಕದ ಪೂರ್ವಾರ್ಧವನ್ನು 'ನಿರೂಢಶ್ಚ' ಎಂಬ ಗ್ರಂಥದಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ವಿಷ್ಣೋರ್ನುಕಂ ವೀರ್ಯಾಣಿ' ಎಂಬ ಶ್ರುತಿಯಲ್ಲಿ ಭಗವಂತನಿಗೆ ಮೂರುವಿಧ ಆನಂತ್ಯವನ್ನು ಹೇಳಲಾಗಿದೆ. ಲೋಕಪ್ರಸಿದ್ಧಿಯೂ ಸಹ ಅಚ್ಯುತಾನಂತ ಗೋವಿಂದ ಎಂಬ ನಾಮತ್ರಯದಿಂದ ಎಂದು ಹೇಳಿದಂತಾಯಿತು. ಲೋಕತಶ್ಚ ಎಂಬ ವಾಕ್ಯದಲ್ಲಿ ಹಿಂದಿನ ವಾಕ್ಯದಲ್ಲಿರುವ ನಿರೂಢಃ ಎಂಬ ಪದವನ್ನು ಅನುವೃತ್ತಿ ಮಾಡಬೇಕು. ಹೀಗೆ ಅನಂತತ್ವ ಮೊದಲಾದ ವಿಷ್ಣುಲಿಂಗಗಳು ನಿರವಕಾಶಗಳಾಗಿವೆಯೆಂದು ಸಿದ್ಧವಾಯಿತು. ಇದರ ಪ್ರಯೋಜನವನ್ನು ಲೋಕಪ್ರಸಿದ್ಧಿಂ ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ಹಿಂದೆ ಪೂರ್ವಪಕ್ಷಿಯು ಶ್ರುತಿತ್ವ, ಬಹುತ್ವ ಉಭಯಪ್ರಯುಕ್ತವಾದ ಪ್ರಾಬಲ್ಯಕ್ಕಿಂತ ನಿರವಕಾಶತ್ವ ಮಾತ್ರ ಪ್ರಯುಕ್ತವಾದ ಪ್ರಾಬಲ್ಯವು ದುರ್ಬಲವಾಗುತ್ತದೆಂದು ಆಕ್ಷೇಪಿಸಿದ್ದ. ಅದನ್ನು ಈಗ ದ್ವಾಭ್ಯಾಂ ಇತ್ಯಾದಿ ಶ್ಲೋಕದಿಂದ ನಿರಾಕರಿಸುತ್ತಿದ್ದಾರೆ. ಈ ಶ್ಲೋಕದಲ್ಲಿ ಯತಿಭಂಗದೋಷವು ಆಪಾತತಃ ಕಾಣಿಸುತ್ತದೆ. 'ಅಗತಿತ್ವಪರತ್ವಾನೇ' 'ಕತ್ವೈರ್ಲಿಂಗಾನಿ ತು ತ್ರಿಭಿಃ' ಹೀಗೆ ಪದದ ಮಧ್ಯದಲ್ಲಿ ಮೂರನೆಯ ಪಾದವು ನಿಲ್ಲುವುದರಿಂದ ಯತಿಭಂಗದೋಷವು ಸ್ಪಷ್ಟ. ಆದರೆ ಸ್ವರಸಂಧಿಯಲ್ಲಿ ಮುಂದಿನ ಅಕ್ಷರವು ಪೂರ್ವಪದದ ಅಂತೋದ್ಭಾವವನ್ನು ಹೊಂದುವುದರಿಂದ 'ಪೂರ್ವಾಂತವತ್ ಸ್ವರಸ್ಸಂಧೌ' ಎಂಬ ಮಾತಿನಂತೆ ಇಲ್ಲಿ ಯತಿಭಂಗವನ್ನು ಶಂಕಿಸಬಾರದು. ಸ್ವತಃ ಗ್ರಂಥಕಾರರೇ ತಮ್ಮ ಶ್ಲೋಕವನ್ನು 'ಶ್ರುತಿರಿತ್ಯಾದಿ' ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. ಶ್ರುತಿಯು ಸ್ವಭಾವಪ್ರಯುಕ್ತವಾಗಿ ಮತ್ತು ಬಹುತ್ವ-ಪ್ರಯುಕ್ತವಾಗಿ ಪ್ರಬಲವಾಗುತ್ತದೆ. ಲಿಂಗವು ನಿರವಕಾಶಪ್ರಯುಕ್ತವಾಗಿ ಮತ್ತು ಚರಮತ್ವ ಅನೇಕತ್ವ-ಪ್ರಯುಕ್ತವಾಗಿಯೂ ಪ್ರಬಲವಾಗುತ್ತದೆ. ಈ ವಿಷಯದಲ್ಲಿ ವೈಯ್ಯಾಕರಣರ ಹಾಗೂ ಮೀಮಾಂಸಕರ ಸಮ್ಮತಿಯನ್ನು ಪರನಿತ್ಯ ಎಂಬ ವಾಕ್ಯದಿಂದ ತೋರಿಸಿದ್ದಾರೆ.

'ಪರಂ ವಿದುಃ ಪೂರ್ವಪರೋಪಪತ್ತೌ ಪರಸ್ಯ ನಿತ್ಯಸ್ಯ ಚ ನಿತ್ಯಮೇವ ।
ನಿತ್ಯಾಂತರಗೋಪಗಮೋಽಂತರಂಗಸ್ತಥಾವಿಧಾತ್ ಪ್ರಾತಿಪದೋ ಬಲೀಯಾನ್'

ಪೂರ್ವ ಮತ್ತು ಪರಗಳಲ್ಲಿ ಪರವೇ ಪ್ರಬಲವಾಗುತ್ತದೆ. (ಪರ = ಮುಂದಿನ ಸೂತ್ರ ಅಥವಾ ಮುಂದಿನ ಕಾರ್ಯ). ಪರ ಮತ್ತು ನಿತ್ಯಗಳಲ್ಲಿ ನಿತ್ಯವೇ ಪ್ರಬಲವಾಗುತ್ತದೆ. ನಿತ್ಯ ಮತ್ತು ಅಂತರಂಗಗಳಲ್ಲಿ ಅಂತರಂಗವೇ ಪ್ರಬಲವಾಗುತ್ತದೆ. ಅಂತರಂಗ ಮತ್ತು ನಿರವಕಾಶವಿಧಿಗಳಲ್ಲಿ ನಿರವಕಾಶವೇ ಪ್ರಬಲವಾಗುತ್ತದೆ. ಹೀಗೆ ವೈಯ್ಯಾಕರಣರು ಅಂಗೀಕರಿಸಿದ ಸಿದ್ಧಾಂತ.

ಪೂರ್ವಕ್ಕಿಂತ ಪರವೇ ಪ್ರಬಲವೆನ್ನಲು ಉದಾಹರಣೆ -- ಪಾಣಿನಿ ವ್ಯಾಕರಣದ ಆರನೇ ಅಧ್ಯಾಯದ ಅಂಗಪಾದದಲ್ಲಿ (ಚತುರ್ಥಪಾದ) ಹೀಗೆ ವಿಚಾರ ಮಾಡಿದ್ದಾರೆ. 'ಆಡಜಾದೀನಾಂ' 'ಆಡಾಗಮೋ ಭವತಿ ಅಜಾದೀನಾಂ ಲುಙ್ ಲಙ್ ಲೃಙ್ಕ್ಷು ಪರತಃ ಉದಾತ್ತಶ್ಚ ಸಃ ಭವತಿ । ಐಜ್ಯಂತ' ಈ ಸೂತ್ರದ ಕಾಶಿಕಾವೃತ್ತಿಯಲ್ಲಿ ಪರಕ್ಕಿಂತ ನಿತ್ಯವೇ ಪ್ರಬಲವೆಂದು ನಿರ್ಣಯಿಸಿ ಐಜ್ಯಂತ ಎಂಬ ರೂಪನಿಷ್ಪತ್ತಿಯನ್ನು ಮಾಡಿದ್ದಾರೆ. ಯಜ್ ಧಾತುವಿಗೆ ಕರ್ಮಾರ್ಥದಲ್ಲಿ ಲಙ್‌ಲಕಾರವನ್ನು ವಿಧಿಸಿದ ಮೇಲೆ ತಿಜಾದೇಶವು ಪ್ರಾಪ್ತವಾಗುತ್ತದೆ. ಅದೇ ಕಾಲದಲ್ಲಿ 'ಲುಙ್‌ಲಙ್‌ಲೃಙ್‌ಕ್ಷ್ವಡುದಾತ್ತಃ' ಎಂಬ ಸೂತ್ರದಿಂದ ಅಡಾಗಮವು ಪ್ರಾಪ್ತವಾಗುತ್ತದೆ. ಇಲ್ಲಿ ಪ್ರಶ್ನೆ -- ಯಜ್ ಧಾತುವಿಗೆ ಲಙ್‌ಲಕಾರವನ್ನು ಹೇಳಿದ ಮೇಲೆ 'ತಿಪ್‌ತಸ್‌ಝಿ' ಇತ್ಯಾದಿ ಸೂತ್ರದಿಂದ ತಿಜಾದೇಶವನ್ನು ಹೇಳಬೇಕೋ? ಅಥವಾ 'ಲುಙ್‌ಲಙ್' ಇತ್ಯಾದಿ ಸೂತ್ರದಿಂದ ಅಡಾಗಮವನ್ನು ಹೇಳಬೇಕೋ? ಎಂದು. ಹೀಗಿರುವಾಗ 'ವಿಪ್ರತಿಷೇಧೇ ಪರಂ ಕಾರ್ಯಮ್' (ವಿರೋಧ ಬಂದಾಗ ಪರವೇ ಶ್ರೇಷ್ಠ) ಎಂಬ ನಿಯಮದಂತೆ ಪರವಾದ್ದರಿಂದ ಅಡಾಗಮವೇ ಬರಬೇಕು. ಆದರೆ ಪರಸೂತ್ರಕ್ಕಿಂತಲೂ ಅಂತರಂಗಸೂತ್ರವು ಪ್ರಬಲವಾದ್ದರಿಂದ ತಿಜಾದೇಶವೇ ಬರುತ್ತದೆ. ಏಕೆಂದರೆ ತಿಜಾದೇಶವು ಕೇವಲ ಲಕಾರವನ್ನಷ್ಟೇ ಅಪೇಕ್ಷಿಸುವುದರಿಂದ ಅಂತರಂಗವಾಗಿದೆ. ಆದರೆ ಅಡಾಗಮವು ಲುಙ್ ಮೊದಲಾದ ಲಕಾರಗಳನ್ನು ಮತ್ತು ಅಂಗಸಂಜ್ಞೆಯನ್ನು ಅಪೇಕ್ಷಿಸುವುದರಿಂದ ಬಹಿರಂಗವಾಗಿದೆ.

ಹೀಗೆ ಯಜ್ ಧಾತುವಿಗೆ ತಿಜಾದೇಶವು ಬಂದ ಮೇಲೆ ಪುನಃ 'ಸಾರ್ವಧಾತುಕೇ ಯಕ್' ಎಂಬ ಸೂತ್ರದಿಂದ ಯಕ್ ಪ್ರತ್ಯಯ ಬರಲು ಪ್ರಸಕ್ತಿ ಇದೆ. ಅದರ ಜೊತೆಗೆ 'ಲುಙ್‌ಲಙ್‌ಲೃಙ್‌ಕ್ಷ್ವಡುದಾತ್ತಃ' ಎಂಬ ಸೂತ್ರದಿಂದ ಅಡಾಗಮವು ಬರಲು ಪ್ರಸಕ್ತಿ ಇದೆ. ಇಲ್ಲಿಯೂ ಸಹ ಯಕ್ ಪ್ರತ್ಯಯವನ್ನು ಹೇಳಬೇಕೋ? ಅಡಾಗಮವನ್ನು ಹೇಳಬೇಕೋ? ಎಂಬ ಪ್ರಶ್ನೆ ಬಂದರೆ ಪರಸೂತ್ರವಾದ್ದರಿಂದ ಅಡಾಗಮವು ಪ್ರಾಪ್ತವಾಗುತ್ತದೆ. ಆದರೆ ಇದನ್ನೂ ಸಹ ಬಾಧಿಸಿ ನಿತ್ಯಸೂತ್ರವಾದ 'ಸಾರ್ವಧಾತುಕೇ ಯಕ್' ಎಂಬ ಸೂತ್ರದಿಂದ ಯಕ್‌ಪ್ರತ್ಯಯವು ಬರುತ್ತದೆ. ಆದರೆ ಯಕ್‌ಪ್ರತ್ಯಯಕ್ಕೆ ಸಂಪ್ರಸಾರಣ-ಸಂಜ್ಞೆಯಿರುವುದರಿಂದ ಸಂಪ್ರಸಾರಣವು ಪರದಲ್ಲಿದ್ದಾಗ ಅಡಾಗಮವು ಬರುವುದಿಲ್ಲ. ಆದ್ದರಿಂದ 'ಸಾರ್ವಧಾತುಕೇ ಯಕ್' ಎಂಬ ಸೂತ್ರವು ನಿತ್ಯವೆನಿಸಿದೆ. (ಕೃತಾಕೃತಪ್ರಸಂಗೀ ಯೋ ವಿಧಿಃ ಸಃ ನಿತ್ಯಃ = ಉಳಿದದ್ದು ಬರಲಿ ಬಾರದಿರಲಿ ತಾನಂತೂ ಬರುತ್ತದೆ)

ಹೀಗೆ ಯಜ್‌ಧಾತುವಿಗೆ ಮೊದಲು ತಿಜಾದೇಶ ಬಂದು ಅನಂತರ ಯಕ್‌ಪ್ರತ್ಯಯವು ಪ್ರಾಪ್ತ-ವಾಗುತ್ತದೆ. ಯಕ್‌ಪ್ರತ್ಯಯ ಬಂದ ಮೇಲೆ ಪುನಃ 'ವಚಿ ಸ್ವಪಿ ಯಜಾದೀನಾಂ ಕಿತಿ' ಎಂಬ ಸೂತ್ರದಿಂದ ಸಂಪ್ರಸಾರಣ ಬರುವ ಪ್ರಸಕ್ತಿ ಇದೆ. ಅದರಂತೆ 'ಲುಙ್‌ಲಙ್‌ಲೃಙ್‌ಕ್ಷ್ವಡುದಾತ್ತಃ' ಎಂಬ ಸೂತ್ರದಿಂದ ಅಡಾಗಮವು ಬರುವ ಪ್ರಸಕ್ತಿ ಇದೆ. ಹೀಗಿರುವಾಗ ಸಂಪ್ರಸಾರಣಸಂಜ್ಞೆಯನ್ನು ಹೇಳಬೇಕೋ?

ಅಡಾಗಮವನ್ನು ಹೇಳಬೇಕೋ? ಎಂಬ ಪ್ರಶ್ನೆ ಬಂದರೆ, ಪರಸೂತ್ರಕ್ಕಿಂತ ನಿತ್ಯಸೂತ್ರವೇ ಪ್ರಬಲವಾದ್ದರಿಂದ ಸಂಪ್ರಸಾರಣಸಂಜ್ಞೆಯೇ ಬರುತ್ತದೆ. ಇದರಿಂದ ಪೂರ್ವಸೂತ್ರಕ್ಕಿಂತ ಪರವು ಪ್ರಬಲವೆಂದೂ, ಪರಸೂತ್ರಕ್ಕಿಂತ ಅಂತರಂಗಸೂತ್ರವು ಪ್ರಬಲವೆಂದೂ ನಿಶ್ಚಿತವಾಗುತ್ತದೆ. ಸಂಪ್ರಸಾರಣಸಂಜ್ಞೆಯು ಬಂದ ಮೇಲೆ 'ಆಡಜಾದೀನಾಂ' ಎಂಬ ಸೂತ್ರದಿಂದ ಅಡಾಗಮವು ಬರುತ್ತದೆ. ಆದರ ಜೊತೆಗೆ 'ಲುಙ್‌ಲಙ್ ಲೃಙ್‌ಕ್ಷ್ವಡುದಾತ್ತಃ' ಎಂಬ ಸೂತ್ರದಿಂದ ಪುನಃ ಆಡಾಗಮವು ಬರಲು ಪ್ರಸಕ್ತಿ ಇದೆ. ಆದರೆ ಪೂರ್ವಕ್ಕಿಂತ ಪರವು ಪ್ರಬಲವಾದ್ದರಿಂದ ಅಡಾಗಮವೇ ಬರುತ್ತದೆ. ಅನಂತರ ಐಜ್ಯಂತ ಎಂಬ ರೂಪವು ನಿಷ್ಪನ್ನವಾಗುತ್ತದೆ. ಹೀಗೆ ಪರಸೂತ್ರಕ್ಕಿಂತ ನಿತ್ಯಸೂತ್ರವೂ ಮತ್ತು ಪರಸೂತ್ರಕ್ಕಿಂತ ಅಂತರಂಗಸೂತ್ರವು ಪ್ರಬಲವೆಂದು ನಿಶ್ಚಯವಾಯಿತು.

ನಿತ್ಯಸೂತ್ರಕ್ಕಿಂತ ಅಂತರಂಗವು ಪ್ರಬಲ -- ಐಜ್ಯಂತ ಎಂಬ ರೂಪನಿಷ್ಪತ್ತಿ ಸಂದರ್ಭದಲ್ಲಿಯೇ ಲಾದೇಶವು ಬರಲು ಪ್ರಸಕ್ತಿ ಇದೆ. ಅದರಂತೆ ಆಡಾಗಮವು ಬರಲು ಪ್ರಸಕ್ತಿ ಇದೆ. ಆಡಾಗಮವು ಪರವಾದರೂ ಸಹ ಅಂತರಂತವೆನಿಸಿದ ಲಾದೇಶವೇ ಮೊದಲು ಬರುತ್ತದೆ.

ಅಂತರಂಗಕ್ಕಿಂತ ನಿರವಕಾಶವು ಪ್ರಬಲ -- 'ಅಚಿಶ್ನುಧಾತುಭ್ರುವಾಂ ಯ್ವೋರಿಯಙುವಙೌ' 'ಶ್ನುಪ್ರತ್ಯಯಾಂತಸ್ಯ ಅಂಗಸ್ಯ ಧಾತೋಃ ಇವರ್ಣೋವರ್ಣಾಂತಸ್ಯ ಭ್ರುರಿತ್ಯೇತಸ್ಯ ಚ ಇಯಙ್‌ಉವಙ್ ಇತ್ಯೇತಾವಾದೇಶೌ ಭವತಃ ಅಚಿಪರತಃ (ಶ್ನುಪ್ರತ್ಯಯಾಂತವಾದ ಮತ್ತು ಇವರಣಾಂತವಾದ ಉವರ್ಣಾಂತವಾದ ಧಾತುವಿಗೆ ಮತ್ತು ಭ್ರುಶಬ್ದಕ್ಕೆ ಅಚ್‌ಪರದಲ್ಲಿದ್ದಾಗ ಇಯಙ್ ಹಾಗೂ ಉವಙ್ ಆದೇಶಗಳು ಬರುತ್ತವೆ). ಪ್ರಕೃತ 'ಶ್ರೀ+ಔ' ಎಂದಿರಬೇಕಾದರೆ ಈ ಸೂತ್ರದಿಂದ ಇವರ್ಣಾಂತವಾದ ಶ್ರೀಶಬ್ದಕ್ಕೆ ಅಚ್ ಪರದಲ್ಲಿರುವುದರಿಂದ ಇಯಙ್ ಆದೇಶವು ಬರಲು ಪ್ರಸಕ್ತಿ ಇದೆ. ಇದರಂತೆ 'ಇಕೋ ಯಣಚಿ' ಎಂಬ ಸೂತ್ರದಿಂದ ಯಣಾದೇಶವು ಬರಲು ಪ್ರಸಕ್ತಿ ಇದೆ. ವಸ್ತುತಃ 'ಇಕೋ ಯಣಚಿ' ಎಂಬ ಸೂತ್ರವು ಅಂತರಂಗವಾದ್ದರಿಂದ ಯಣಾದೇಶವೇ ಬರಬೇಕು. ಆದರೆ 'ಅಚಿಶ್ನುಧಾತು' ಇತ್ಯಾದಿ ಸೂತ್ರವು ನಿರವಕಾಶವಾದ್ದರಿಂದ ಅಂತರಂಗಕ್ಕಿಂತ ಪ್ರಬಲವಾಗಿದೆ. ಹಾಗಾಗಿ ಶ್ರೀಶಬ್ದದ ಮೇಲೆ ಇಯಙ್‌ಆದೇಶ ಬಂದರೆ ಶ್ರಿಯೌ ಮತ್ತು ಶ್ರಿಯಃ ಇತ್ಯಾದಿ ರೂಪಗಳು ಸಿದ್ಧವಾಗುತ್ತವೆ. ಈ ಉದಾಹರಣೆಯಿಂದ ಅಂತರಂಗಸೂತ್ರಕ್ಕಿಂತ ನಿರವಕಾಶಸೂತ್ರವು ಪ್ರಬಲವೆಂದು ಸ್ಪಷ್ಟವಾಗುತ್ತದೆ.

### ಆಗ್ರಯಣೇ ಪ್ರಸೂನಬರ್ಹಿಷಾಮೇವ ಗ್ರಹಣಾಧಿಕರಣಮ್ (೧೨-೨-೧೪)
### 'ಅಧಿಕಶ್ಚ ಗುಣಃ ಸಾಧಾರಣೇಽವಿರೋಧಾತ್ ಕಾಂಸ್ಯಭೋಜಿವದಮುಖ್ಯೇಪಿ' (ಸೂತ್ರ)

ಆಗ್ರಯಣೇಷ್ಟಿಯಲ್ಲಿ ಇಂದ್ರಾಗ್ನಿದೇವತಾವಿಷಯಕವಾದ ವೈಶ್ವದೇವವಿಷಯಕವಾದ ಮತ್ತು ದ್ಯಾವಾಪೃಥ್ವೀವಿಷಯಕವಾದ ಮೂರು ಬರ್ಹಿಗಳು (ದರ್ಭೆಮುಷ್ಟಿಗಳು) ಹೇಳಲ್ಪಟ್ಟಿವೆ. ಈ ಮೂರರ ಮಧ್ಯದಲ್ಲಿ ದ್ಯಾವಾಪೃಥಿವೀ ವಿಷಯಕವಾದ ದರ್ಭೆಮುಷ್ಟಿಯು ವೈಶ್ವದೇವಪರ್ವದಲ್ಲಿರುವ ದ್ಯಾವಾಪೃಥ್ವಿಯ ವಿಕಾರವಾಗಿದೆ. ಅಂದರೆ ಈ ಮೂರನ್ನು ಬಿಟ್ಟು ವೈಶ್ವದೇವಪರ್ವದಲ್ಲಿ ಬೇರೆ ಇಷ್ಟಿಯನ್ನೇ ಹೇಳಿದ್ದಾರೆ. ಅದು ಪ್ರಕೃತಿಯೆನಿಸುತ್ತದೆ. ಈ ಮೂರರ ಮಧ್ಯದಲ್ಲಿರುವುದು ವಿಕೃತಿಯಾಗಿದೆ. ಪ್ರಕೃತಿಯಲ್ಲಿ ಬರ್ಹಿ ಎಂದರೆ ಪ್ರಸೂನಬರ್ಹಿಯು (ಹೂಬಿಟ್ಟ ದರ್ಭೆಮುಷ್ಟಿಯು) ಪ್ರಾಪ್ತವಾಗಿದೆ. ಆದರ ವಿಕೃತಿಯೆನಿಸಿದ

ಮೂರರ ಮಧ್ಯದಲ್ಲಿರುವ ದ್ಯಾವಾಪೃಥಿವಿಯ ದರ್ಭಮುಷ್ಟಿಯೂ ಸಹ ಪ್ರಸೂನಬರ್ಹಿ-ವಿಷಯವಾಗುತ್ತದೆ.

ಸಂದೇಹ - ಪ್ರಕೃತಿಯಲ್ಲಿ ಪ್ರಸಕ್ತವಾದದ್ದೇ ವಿಕೃತಿಯಲ್ಲಿಯೂ ಅನುವೃತ್ತವಾಗುವುದರಿಂದ ದ್ಯಾವಾಪೃಥಿವಿಯಲ್ಲಿ ಪ್ರಸೂನಬರ್ಹಿಯೇ ಪ್ರಸಕ್ತವಾಗುತ್ತದೆ. ಉಳಿದೆರಡರಲ್ಲಿ ಕೇವಲ ಬರ್ಹಿಯಷ್ಟೇ ಪ್ರಸಕ್ತವಾಗಿದೆ. ಸಮಾನನ್ಯಾಯದಂತೆ ಮೂರರಲ್ಲಿಯೂ ಪ್ರಸೂನಬರ್ಹಿಯನ್ನಾಗಲೀ, ಅಪ್ರಸೂನ-ಬರ್ಹಿಯನ್ನಾಗಲೀ ಇಟ್ಟುಕೊಳ್ಳಬಹುದೆಂಬ ಅನಿಯಮವನ್ನು ಹೇಳಬೇಕೋ? ಅಥವಾ ದ್ಯಾವಾಪೃಥಿವಿ-ಯಲ್ಲಿ ಪ್ರಸಕ್ತವಾದ್ದರಿಂದ ಪ್ರಸೂನಬರ್ಹಿಯನ್ನೇ ಮೂರರಲ್ಲಿಯೂ ಇಟ್ಟುಕೊಳ್ಳಬೇಕೋ?

ಪೂರ್ವಪಕ್ಷ - ಮೂರರ ಮಧ್ಯದಲ್ಲಿ ಐಂದ್ರಾಗ್ನ ಮತ್ತು ವೈಶ್ವದೇವಗಳೇ ಮುಖ್ಯ. ದ್ಯಾವಾಪೃಥಿವಿಯು ಅಮುಖ್ಯ. ಮತ್ತು ಐಂದ್ರಾಗ್ನ, ವೈಶ್ವದೇವಗಳು ಅನೇಕವಾಗಿವೆ. ದ್ಯಾವಾಪೃಥಿವಿಯು ಒಂದೇ ಆಗಿದೆ. ಹೀಗೆ ಮುಖ್ಯತ್ವ ಮತ್ತು ಅನೇಕತ್ವಲಿಂಗಗಳಿಂದ ಪ್ರಸೂನಬರ್ಹಿಯನ್ನಾಗಲೀ ಅಪ್ರಸೂನಬರ್ಹಿಯನ್ನಾಗಲೀ ಇಟ್ಟುಕೊಳ್ಳಬಹುದೆಂಬ ಅನಿಯಮಪಕ್ಷವೇ ಗ್ರಾಹ್ಯ. ದ್ಯಾವಾಪೃಥಿವಿಯಲ್ಲಿ ಪ್ರಸಕ್ತವಾದ ಪ್ರಸೂನಬರ್ಹಿಯೆಂಬ ನಿಯಮವು ಗೌಣವಾದ್ದರಿಂದ ಅಗ್ರಾಹ್ಯ.

---

भाट्टसङ्ग्रहः –

**अथ चतुर्दशमाग्रयणे प्रसूनबर्हिषामेव ग्रहणाधिकरणम् (सूत्र ३३)**

**अधिकश्च गुणस्साधारणेऽविरोधात्कांस्यभोजिवदमुख्येऽपि ॥ ३३ ॥**

पूर्वन्यायेन शङ्कनात्सङ्गतिः । आग्रयणेष्टौ ऐन्द्राग्नवैश्वदेवद्यावापृथिव्यानि त्रीणि बर्हिषि । तत्र द्यावापृथिव्यस्य वैश्वदैविकद्यावापृथिव्यविकारत्वात्प्रसूनं बर्हिः प्राप्तम् । **पुष्पितकाशमयं बर्हिरित्यर्थः** । उतरयोस्तु प्रसूनमप्रसूनं वा बर्हिर्मात्रम् । तत्र समानतन्त्रेषु किं प्रसूनमप्रसूनं वोपादेयम्, उत प्रसूनमेवेति **संदेहे**, ऐन्द्राग्नवैश्व-देवयोर्मुख्यत्वादनेकत्वात्तदीयबर्हिषि प्रसूनमप्रसूनं वेत्यनियमरूपो गुणस्स्यात् । द्यावापृथिव्यस्य तु जघन्यत्वादेकत्वाच्च न तदीयः प्रसूनमेवेति नियमरूपो गुणः । एवं पूर्वत्र प्रकृतिरिव द्यावापृथिव्यैककपालोऽपि प्रसङ्गीति **प्राप्ते सिद्धान्तः**, यद्विहितं तदेवाङ्गम् । ऐन्द्राग्नवैश्वदेवयोस्तु बर्हिर्मात्रमेव विहितम् । अतस्तदेवाङ्गम् । अनियमस्त्वविहितत्वादनङ्गम् । अतो न तदनुग्राह्यमिति प्रसूनमेवोपादेयम् । तदुपादाने हि द्यावापृथिव्यस्यैन्द्राग्नादेश्च त्रयाणामप्यवैगुण्यम् । मुख्यानुरोधेनानियमे तु द्यावा-पृथिव्यस्य वैगुण्यं स्यात् । तस्मात्प्रसूनमेव ग्राह्यमिति । तदाह **सूत्रे, अधिकः** प्रसूनतारूपो **गुणः साधारणे** मुख्साधारण्ये **सत्यविरोधान्मुख्य**विरोधाभावदमुख्येऽपि स्यात् । यथा शिष्यस्य कांस्यभोजित्वनियमः । गुरोस्तदनियमः । तन्त्र तयोर्यद्येकस्मिन् पात्रे भोजनं प्रसक्तं चेत्तदा गुरुधर्मलोपेन शिष्यस्यामुख्यस्यापि धर्मोनुगृह्यते तद्वदिति ।

इति चतुर्दशमाग्रयणे प्रसूनबर्हिषामेव ग्रहणाधिकरणम् (सूत्रम् ३३)

ಸಿದ್ಧಾಂತ - ವಿಹಿತವಾದದ್ದೇ ಅಂಗವೆನಿಸುತ್ತದೆ. ಐಂದ್ರಾಗ್ನ ಮತ್ತು ವೈಶ್ವದೇವಗಳಲ್ಲಿ ಕೇವಲ (ವಿಶೇಷಣರಹಿತವಾದ) ಬರ್ಹಿಯು ವಿಧಿಸಲ್ಪಟ್ಟಿದೆ. ಆದ್ದರಿಂದ ಕೇವಲಬರ್ಹಿಯೇ ಅಂಗವಾಗುತ್ತದೆ. ನಿಯಮವಿಲ್ಲದ ಬರ್ಹಿಯು ವಿಧಿಸಲ್ಪಡದ ಕಾರಣ ಅಂಗವಾಗುವುದಿಲ್ಲ. ಕೇವಲಬರ್ಹಿಯೇ ಅಂಗ-ವೆನಿಸುವುದರಿಂದ ಮೂರರಲ್ಲಿಯೂ ಪ್ರಸೂನಬರ್ಹಿಯನ್ನೇ ಇಟ್ಟುಕೊಳ್ಳಬೇಕು. ಪ್ರಸೂನಬರ್ಹಿ-ಯನ್ನಾಗಲೀ, ಅಪ್ರಸೂನಬರ್ಹಿಯನ್ನಾಗಲೀ ಇಟ್ಟುಕೊಳ್ಳಲು ಪ್ರಸಕ್ತಿ ಇರುವಾಗ ಪ್ರಸೂನಬರ್ಹಿಯನ್ನು ಇಟ್ಟುಕೊಳ್ಳುವುದರಿಂದ ಯಾವುದೇ ಹಾನಿ ಇಲ್ಲ. ಮತ್ತು ದ್ಯಾವಾಪೃಥಿವಿಯಲ್ಲಿ ಪ್ರಸಕ್ತವಾದ ಪ್ರಸೂನ-ಬರ್ಹಿಯನ್ನು ಉಳಿದೆರಡರಲ್ಲಿ ವಿವಕ್ಷಿಸಿದಾಗ ಯಾವುದೇ ವೈಗುಣ್ಯವು ಬರುವುದಿಲ್ಲ. ಒಂದು ವೇಳೆ ಪೂರ್ವಪಕ್ಷಿಗಳು ಹೇಳಿದಂತೆ ಮೂರರಲ್ಲಿಯೂ ಸಮಾನವಾಗಿ ಅನಿಯಮಪಕ್ಷವನ್ನು ಆಶ್ರಯಿಸಿದರೆ ದ್ಯಾವಾಪೃಥಿವಿಗೆ ವೈಗುಣ್ಯದೋಷ ಬರುತ್ತದೆ. ಅಂದರೆ ಚೋದಕಪ್ರಾಪ್ತವಾದ ನಿಯಮವನ್ನು ಬಿಟ್ಟಂತಾಗು-ತ್ತದೆ. ವೈಗುಣ್ಯದೋಷವಿಲ್ಲದೆ ಕೂಡಿಸಲು ಬರುವಾಗ ವೈಗುಣ್ಯದೋಷವನ್ನು ಸಹಿಸಿಕೊಂಡು ಅನಿಯಮಪಕ್ಷವನ್ನು ಆಶ್ರಯಿಸುವುದು ತಪ್ಪಲ್ಲವೇ? ಆದ್ದರಿಂದ ಪ್ರಸೂನಬರ್ಹಿಯನ್ನೇ ಮೂರರಲ್ಲಿಯೂ ಇಟ್ಟುಕೊಳ್ಳಬೇಕು.

ಪೂರ್ವಮೀಮಾಂಸೆಯ ಈ ಸೂತ್ರದಲ್ಲಿ 'ಕಾಂಸ್ಯಭೋಜ'ನ್ಯಾಯವನ್ನು ಉದಾಹರಿಸಿದ್ದಾರೆ. ದ್ಯಾವಾ-ಪೃಥಿವಿಯ ಬರ್ಹಿಯು ಅಮುಖ್ಯವಾದರೂ ಸಹ ವೈಗುಣ್ಯದೋಷವು ಬರಬಾರದೆಂದು ಪ್ರಸೂನ-ಬರ್ಹಿಯನ್ನೇ ಎಲ್ಲೆಡೆ ಇಟ್ಟುಕೊಂಡಿದ್ದಾರೆ. ಅಂದರೆ ಮುಖ್ಯಕ್ಕೆ ವಿರೋಧವು ಬಾರದಿದ್ದಾಗ ಅಮುಖ್ಯವನ್ನು ಉಪೇಕ್ಷಿಸಬಾರದು.

ಹೇಗೆಂದರೆ -- ಒಂದೆಡೆ ಗುರು ಹಾಗೂ ಶಿಷ್ಯರು ಒಟ್ಟಿಗೆ ಹೋಗಿರುತ್ತಾರೆ. ಅಲ್ಲಿ ಊಟ ಮಾಡುವ ಸಂದರ್ಭ ಬಂದಾಗ ಒಂದು ಊಟದ ಎಲೆ ಮತ್ತೊಂದು ಕಂಚಿನ ತಟ್ಟೆ ಇರುತ್ತದೆ. ವಸ್ತುತಃ ಎಲೆಗಿಂತ ಕಂಚಿನ ತಟ್ಟೆಯು ಶ್ರೇಷ್ಠವಾದ್ದರಿಂದ ಗುರುವು ಕಂಚಿನ ತಟ್ಟೆಯಲ್ಲಿ ಊಟ ಮಾಡಬೇಕು; ಶಿಷ್ಯನು ಎಲೆಯಲ್ಲಿ ಊಟ ಮಾಡಬೇಕು. ಆದರೆ ಶಿಷ್ಯನಾದವನು 'ಕಂಚಿನ ತಟ್ಟೆಯಲ್ಲಿಯೇ ಊಟ ಮಾಡುತ್ತೇನೆ' ಎಂಬ ನಿಯಮದಲ್ಲಿರುತ್ತಾನೆ. ಗುರುವಿಗೆ ಆ ನಿಯಮವಿರುವುದಿಲ್ಲ. ಒಂದು ವೇಳೆ ಗುರುವು ಪೂಜ್ಯನೆಂದು ಕಾಂಸ್ಯಪಾತ್ರವನ್ನು ಗುರುವಿಗೆ ನೀಡಿದರೆ ಶಿಷ್ಯನಿಗೆ ಊಟವೇ ಇಲ್ಲದಂತಾಗುತ್ತದೆ. ಆದ್ದರಿಂದ ಆ ಸಂದರ್ಭದಲ್ಲಿ ಪೂಜ್ಯನಾಗಿದ್ದರೂ ಸಹ ಗುರುವಾದವನು ಎಲೆಯಲ್ಲಿ ಊಟ ಮಾಡುತ್ತಾನೆ. ಶಿಷ್ಯ-ನಾದವನು ಕಂಚಿನ ತಟ್ಟೆಯಲ್ಲಿ ಊಟ ಮಾಡುತ್ತಾನೆ. ಆದ್ದರಿಂದ ಶಿಷ್ಯನು ಸ್ವಭಾವತಃ ದುರ್ಬಲ-ನಾಗಿದ್ದರೂ ನಿರವಕಾಶಪ್ರಯುಕ್ತವಾಗಿ ಪ್ರಬಲನಾಗಿದ್ದಾನೆ. ಗುರುವು ಸ್ವಭಾವತಃ ಪ್ರಬಲನಾಗಿದ್ದರೂ ನಿರವಕಾಶಶಿಷ್ಯನಿಂದ ಬಾಧಿತನಾಗಿದ್ದಾನೆ. ಇದರಂತೆ ಪ್ರಕೃತದಲ್ಲಿ ಶ್ರುತಿಗಿಂತ ಲಿಂಗಗಳು ಸ್ವಭಾವತಃ ದುರ್ಬಲವಾಗಿವೆ. ಶ್ರುತಿಗಳು ಸ್ವಭಾವತಃ ಪ್ರಬಲವಾಗಿವೆ. ಆದರೂ ಕೂಡ ಲಿಂಗಗಳು ನಿರವಕಾಶ-ವಾಗಿದ್ದರೆ ಸ್ವಭಾವತಃ ಪ್ರಬಲವಾಗಿರುವ ಶ್ರುತಿಗಳನ್ನು ಬಾಧಿಸಲು ಸಮರ್ಥವಾಗುತ್ತವೆ. ಹೀಗೆ ಕಾಂಸ್ಯಭೋಜಿನ್ಯಾಯದಿಂದ ವಿಷ್ಣುವಿನಲ್ಲಿ ಪ್ರಸಿದ್ಧವಾದ ಅನಂತತ್ವಾದಿ ನಿರವಕಾಶಲಿಂಗಗಳಿಂದ ಆಕಾಶಶ್ರುತಿಯು ಬಾಧಿತವಾಗುತ್ತದೆಂದು ತಿಳಿಸಲು ಕಾಂಸ್ಯಭೋಜಿನ್ಯಾಯವನ್ನು ಉದಾಹರಿಸಿದ್ದಾರೆ.

ಪೂರ್ವಮೀಮಾಂಸೆಯ ಸೂತ್ರದಲ್ಲಿ ಈ ನ್ಯಾಯವನ್ನು ಉದಾಹರಣವಾಗಿ ಹೇಗೆ ಉಪಯೋಗಿಸಿ-ಕೊಂಡಿದ್ದಾರೆಂದು ಸಮರ್ಥಿಸಿದ್ದರಿಂದ ಈ ವಿಷಯವು ಅತ್ಯಂತ ಸ್ಪಷ್ಟವಾಗುತ್ತದೆ.

ಹಿಂದೆ ಪೂರ್ವಪಕ್ಷಿಯು ಪ್ರಮೇಯಾಶ್ರಿತ ಶಂಕೆಯನ್ನು ಮತ್ತು ಪ್ರಮಾಣಾಶ್ರಿತಶಂಕೆಗಳನ್ನು ಮಾಡಿದ್ದ. ಪ್ರಮಾಣಾಶ್ರಿತಶಂಕೆಯಲ್ಲಿ 'ಆಕಾಶಶಬ್ದವು ಪ್ರಥಮಶ್ರುತವಾದ್ದರಿಂದ ಪ್ರಬಲವಾಗಿದೆ' ಎಂದು ಸಮರ್ಥಿಸಿದ್ದ. ಆದನ್ನು ಗ್ರಂಥಕಾರರು ಇಲ್ಲಿ ನಿರಾಕರಿಸಿದ್ದಾರೆ. ಉಪಕ್ರಮಕ್ಕಿಂತ ಉಪಸಂಹಾರವೇ ಪ್ರಬಲ. 'ಪ್ರಥಮೇ ಅಶ್ರವಣಾತ್' ಇತ್ಯಾದಿ ಸೂತ್ರದಲ್ಲಿ ಈ ವಿಷಯವನ್ನು ವಿವರವಾಗಿ ಸಮರ್ಥಿಸಲಾಗಿದೆ.

ವಿಷ್ಣುವಿನಲ್ಲಿ ಕೇವಲ ಅನಂತತ್ವಾದಿ ಲಿಂಗಗಳಷ್ಟೇ ಕೇಳಿಸುತ್ತಿಲ್ಲ. ಪರೋವರೀಯಸ್ತ್ವಾದಿ ಲಿಂಗಗಳೂ ಸಹ ಕೇಳಿಸುತ್ತಿವೆ. ಅನಂತತ್ವಾದಿ ಲಿಂಗಗಳಿಗಷ್ಟೇ ನಿರವಕಾಶತ್ವವನ್ನು ಇಲ್ಲಿಯ ತನಕ ಸಮರ್ಥಿಸಿದ್ದಾಯಿತು. ಪರೋವರೀಯಸ್ತ್ವಾದಿ ಲಿಂಗದಲ್ಲಿ ನಿರವಕಾಶತ್ವವನ್ನು ಏಕೆ ಸಮರ್ಥಿಸಲಿಲ್ಲ? ಎಂಬ ಪ್ರಶ್ನೆ ಬಂದರೆ 'ಪರೋವರೀಯಸ್ತ್ವಾದಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ವಸ್ತುತಸ್ತು, ಅನಂತತ್ವಾದಿ ಲಿಂಗಗಳಂತೆ ಪರೋವರೀಯಸ್ತ್ವಾದಿ ಲಿಂಗಗಳೂ ಸಹ ನಿರವಕಾಶಗಳಾಗಿವೆ. 'ಪರೋ ಮಾತ್ರಯಾ ತನ್ವಾ ವೃಧಾನ', 'ಓಮಿತ್ಯೇತದಕ್ಷರಮುದ್ಗೀಥಮುಪಾಸೀತ' ಇತ್ಯಾದಿ ಮಾತುಗಳಿಂದ ಭಾಷ್ಯಕಾರರು ನಿರವಕಾಶತ್ವವನ್ನು ಸಮರ್ಥಿಸಿದ್ದಾರೆ. ಭಾಷ್ಯದಲ್ಲಿಯೇ ನಿರವಕಾಶತ್ವವನ್ನು ಸಮರ್ಥಿಸಿದ ಮೇಲೆ ಪುನಃ ಅದರ ಸಮರ್ಥನೆ ಇಲ್ಲಿ ಅನಾವಶ್ಯಕವೆಂದು ಹೇಳಿಲ್ಲ. ಹೀಗೆ ವಿಷ್ಣುವಿಷಯಕವಾದ ಅನೇಕ ಲಿಂಗಗಳಿರುವುದರಿಂದ ಸೂತ್ರ-ದಲ್ಲಿರುವ 'ತಲ್ಲಿಂಗಾತ್' ಎಂಬ ಏಕವಚನವನ್ನು ಸಮುದಾಯಾರ್ಥದಲ್ಲಿ ವಿವಕ್ಷಿಸಬೇಕು. ಸಮಸ್ತ-ಜಗತ್ಕರ್ತೃತ್ವ, ಅನಂತತ್ವ, ಬ್ರಹ್ಮಾಂಡವೀರ್ಯತ್ವ, ಪರೋವರೀಯಸ್ತ್ವ, ಉದ್ಗೀಥತ್ವ ಇವೇ ಮೊದಲಾದ ನಿರವಕಾಶವಾದ ಅನೇಕ ವಿಷ್ಣುಲಿಂಗಗಳಿರುವುದರಿಂದ ಆಕಾಶಶಬ್ದವಾಚ್ಯನಾದವನು ವಿಷ್ಣುವೇ ಆಗುತ್ತಾನೆಂದು ಸೂತ್ರದ ಅರ್ಥ. ಇದರಿಂದ 'ಶ್ರುತ್ಯಾ ಪೂರ್ವಪಕ್ಷೇತಿ' ಇತ್ಯಾದಿ ಟೀಕೆಯನ್ನು ವ್ಯಾಖ್ಯಾನಿಸಿದಂತಾಯಿತು.

ಇಲ್ಲಿಯ ತನಕ ಪ್ರಮಾಣಾಶ್ರಿತವಾದ ಮೊದಲನೆಯ ಶಂಕೆಯನ್ನು ನಿರಾಕರಿಸಿದ್ದಾಯಿತು.

ಹಿಂದೆ ಪೂರ್ವಪಕ್ಷವನ್ನು ಮಾಡುವಾಗ ಮೂರು ಬಗೆಯಲ್ಲಿ ಶಂಕಿಸಲಾಗಿತ್ತು -

(೧) ಆಕಾಶಶಬ್ದಕ್ಕೆ ವಿಷ್ಣುಶಬ್ದದ ಸಾಮಾನಾಧಿಕರಣ್ಯವಿಲ್ಲ; ಆದರೆ ಇಂದ್ರಾದಿ ಶಬ್ದಗಳಿಗೆ ವಿಷ್ಣುಶಬ್ದದ ಸಾಮಾನಾಧಿಕರಣ್ಯವಿದೆ. ಆದ್ದರಿಂದ ಆಕಾಶಶಬ್ದದಿಂದ ಇಂದ್ರಾದಿಗಳೇ ಪ್ರತಿಪಾದ್ಯರಾಗಲಿ.

(೨) ದೇವತಾವಾಚಕವಾದ ಪದಗಳು ವಿಷ್ಣುವನ್ನು ಪ್ರತಿಪಾದಿಸುತ್ತವೆ ಎನ್ನಲು 'ಯೋ ದೇವಾನಾಂ' ಇತ್ಯಾದಿಯಾದ ವಿಶೇಷಶ್ರುತಿಯು ಇರುತ್ತದೆ. ಆದರಂತೆ ಭೂತವಾಚಕಶಬ್ದಗಳೂ ಸಹ ವಿಷ್ಣುವನ್ನು ಪ್ರತಿಪಾದಿಸುತ್ತವೆನ್ನಲು ಅಂತಹ ವಿಶೇಷಶ್ರುತಿಯು ಇರಬೇಕು. ಆದರೆ 'ಯೋ ಭೂತಾನಾಂ ನಾಮಧಾ' ಇತ್ಯಾದಿಯಾಗಿ ಯಾವ ಶ್ರುತಿಗಳೂ ಹೇಳುತ್ತಿಲ್ಲ.

(೩) ಇಂದ್ರಾದಿಶಬ್ದಗಳು ಅಂತಃಸ್ಥತ್ವಮುಖದಿಂದ ವಿಷ್ಣುವನ್ನು ಪ್ರತಿಪಾದಿಸುತ್ತವೆ. ಆದರೆ ಆಕಾಶ-ಶಬ್ದವು ವಿಷ್ಣುವನ್ನು ಪ್ರತಿಪಾದಿಸಲು ಅಂತಹ ಮುಖಗಳು (ದ್ವಾರಗಳು) ಯಾವುದೂ ಇರುವುದಿಲ್ಲ ಎಂದು.

ಈ ಮೂರು ಶಂಕೆಗಳಲ್ಲಿ ಮೊದಲೆರಡು ಶಂಕೆಗಳ ನಿರಾಕರಣೆಯು ಸುಲಭವಾಗಿದೆ. ಆಕಾಶಶಬ್ದಕ್ಕೆ ವಿಷ್ಣುಶಬ್ದದ ಸಾಮಾನಾಧಿಕರಣ್ಯವಿಲ್ಲದಿರಬಹುದು; ಆದರೆ ಅದೇ ಪ್ರಕರಣದಲ್ಲಿ ಶ್ರುತವಾದ ಅನಂತತ್ವ ಮೊದಲಾದ ಲಿಂಗಸಾಮಾನಾಧಿಕರಣ್ಯವು ಇರುತ್ತದೆ. ಮತ್ತು 'ಆಕಾಶೋ ವೈ ನಾಮ' ಎಂಬುದಾಗಿ ಮುಂದೆ ಬ್ರಹ್ಮಪದ ಸಾಮಾನಾಧಿಕರಣ್ಯವು ಕಾಣಿಸುತ್ತಿದೆ.

ಅಷ್ಟೇ ಅಲ್ಲದೆ ಆಕಾಶಶಬ್ದವು ವಿಷ್ಣುವನ್ನು ಪ್ರತಿಪಾದಿಸದಿದ್ದರೆ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯನ್ನು ಸಂಕೋಚ ಮಾಡಬೇಕಾಗುತ್ತದೆ. ಆದರೆ ಸಂಕೋಚ ಮಾಡಲು ವಿಶೇಷಕಾರಣವಿಲ್ಲದ ಕಾರಣ ಆಕಾಶಶಬ್ದಕ್ಕೆ ವಿಷ್ಣುವಾಚಕಶಬ್ದಸಾಮಾನಾಧಿಕರಣ್ಯವು ಇದೆ; 'ನಾಮಾನಿ ಸರ್ವಾಣಿ' ಎಂಬ ಶ್ರುತಿಯೂ ಪ್ರಮಾಣವಾಗಿರುವ ಕಾರಣದಿಂದಲೇ ವಿಷ್ಣು ಆಕಾಶನೆನಿಸುತ್ತಾನೆ. ಅಂತಸ್ಥತ್ವಮುಖದಿಂದ ಇಂದ್ರಾದಿಶಬ್ದಗಳು ವಿಷ್ಣುವನ್ನೇ ಪ್ರತಿಪಾದಿಸುತ್ತವೆ. ಸಮಸ್ತಜಗತ್ಕರ್ತೃತ್ವ, ಬ್ರಹ್ಮಾಂಡವೀರ್ಯತ್ವ ಮೊದಲಾದ ವಿಷ್ಣುಲಿಂಗಗಳು ಹತ್ತಿರವಿರುವುದರಿಂದ ಅಂತಃಸ್ಥತ್ವವು ವಿಷ್ಣುಲಿಂಗವಾಗುತ್ತದೆ. ಅದರ ಮೂಲಕ ಇಂದ್ರಾದಿಶಬ್ದಗಳು ವಿಷ್ಣುವಿನಲ್ಲಿ ಬರುತ್ತವೆಂದು ಹಿಂದಿನ ಅಧಿಕರಣದಲ್ಲಿ ಸಮರ್ಥಿಸಿದ್ದಾಯಿತು. ಆದರೆ, ಅದರಂತೆ ಆಕಾಶಶಬ್ದವನ್ನು ವಿಷ್ಣುವಿನಲ್ಲಿ ಸಮರ್ಥಿಸಲು ಯಾವುದೇ ಲಿಂಗಗಳು ಇರುವುದಿಲ್ಲವಲ್ಲಾ? ಎಂಬ ಪ್ರಶ್ನೆಗೆ 'ದೃಶ್ಯತೇ ಚ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

ಆಜ್ಯಾದಿಶಬ್ದಗಳು ಬೇರೆ ದ್ವಾರವಿಲ್ಲದಿದ್ದರೂ ತುಪ್ಪವನ್ನೇ ಪ್ರತಿಪಾದಿಸುವಂತೆ ಆಕಾಶಶಬ್ದವು ಬೇರೆ ದ್ವಾರವಿಲ್ಲದಿದ್ದರೂ ವಿಷ್ಣುವನ್ನು ಪ್ರತಿಪಾದಿಸುತ್ತದೆ. 'ಶ್ಯೇನೇನ ಯಾಗೇನ' ಎಂಬಲ್ಲಿ ಶ್ಯೇನಶಬ್ದಕ್ಕೆ ಯಾಗಶಬ್ದದಿಂದ ಸಾಮಾನಾಧಿಕರಣ್ಯವಿದೆ. ಮತ್ತು ಶ್ಯೇನಶಬ್ದಕ್ಕೆ ಸಾದೃಶ್ಯಾರ್ಥವನ್ನು ಹೇಳಿದ್ದರಿಂದ ಗೌಣೀವೃತ್ತಿಯಿಂದ ಯಾಗವನ್ನು ಪ್ರತಿಪಾದಿಸುತ್ತದೆ. ಇದರಂತೆ 'ಆಜ್ಯೈಃ ಸ್ತುವತೇಃ' ಎಂಬಲ್ಲಿ ಆಜ್ಯಶಬ್ದಕ್ಕೆ ಸಾಮಾನಾಧಿಕರಣ್ಯವಾಗಲೀ ಸಾದೃಶ್ಯವಾಗಲೀ ಇರುವುದಿಲ್ಲ. ಆದರೂ ಸಹ ಬೇರೆ ಬೇರೆ ಮುಖಗಳಿಂದ ಸೂಕ್ತದ ನಾಮಧೇಯವಾಗಿದೆ.

'ಸರ್ವಾಣಿ ಹ ವಾ ಇಮಾನಿ ಭೂತಾನಿ' ಎಂಬ ಶ್ರುತಿಯು ಸಮಗ್ರಭೂತಕಾರಣತ್ವವನ್ನು ಭೂತಾಕಾಶದಲ್ಲಿ ಪ್ರತಿಪಾದಿಸುತ್ತಿದೆ. ಈಗ ಆಕಾಶಶಬ್ದದಿಂದ ವಿಷ್ಣುವು ಪ್ರತಿಪಾದ್ಯನಾದರೆ ಈ ಆಕಾಶಶ್ರುತಿ-ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಭೂತಕಾರಣತ್ವಾದಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಸಮಗ್ರಭೂತಕಾರಣತ್ವವು ವಿಷ್ಣುವಿನಲ್ಲಿಯೇ ಮುಖ್ಯವಾಗಿ ಉಪಪನ್ನವಾಗುತ್ತದೆ ಹೊರತು ಭೂತಾಕಾಶ-ದಲ್ಲಲ್ಲ. 'ಆತ್ಮನಃ ಆಕಾಶಃ ಸಂಭೂತಃ' ಎಂಬ ಹಿಂದಿನ ಶ್ರುತಿಯ ಬಲದಿಂದ ಆಕಾಶಶಬ್ದವು ವಿಷ್ಣುವಿನಲ್ಲಿ ಮುಖ್ಯವಾಗುತ್ತದೆ. ಹೀಗೆ ಒಪ್ಪದಿದ್ದರೆ 'ಸರ್ವಾಣಿ ಹ ವಾ' ಎಂಬ ಶ್ರುತಿಯಲ್ಲಿ ಸರ್ವಶಬ್ದಕ್ಕೆ 'ಆಕಾಶವನ್ನು ಬಿಟ್ಟು' ಎಂಬರ್ಥದಲ್ಲಿ ಸಂಕೋಚ ಮಾಡಬೇಕಾಗುತ್ತದೆ. ಇದರಿಂದ 'ನ ಭೂತಕಾರಣತ್ವೋಕ್ತಿವಿರೋಧಃ' (ಭೂತಕಾರಣತ್ವಶ್ರುತಿಯ ವಿರೋಧವು ಬರುವುದಿಲ್ಲ) ಎಂಬ ಟೀಕೆಯನ್ನು ವ್ಯಾಖ್ಯಾನಿಸಿದಂತಾಯಿತು. ಇನ್ನು ಹಿಂದೆ ಪೂರ್ವಪಕ್ಷ ಮಾಡುವಾಗ ಅಭ್ಯಧಿಕಾಶಂಕೆಯನ್ನು ಮಾಡಿಕೊಳ್ಳದಿದ್ದರೂ ಮತ್ತೊಂದು ಪೂರ್ವಪಕ್ಷವನ್ನು ಮಾಡಬಹುದೆಂದು ಹೇಳಿದ್ದರು. ಅದನ್ನೂ ಸಹ ಈಗ ಸಕಲಲಿಂಗಗಳು ವಿಷ್ಣುವಾಚಕ-ವೆಂದು ಸಮರ್ಥಿಸಿದ್ದರಿಂದ ನಿರಾಕರಿಸಿದಂತಾಯಿತು.

ಪರಿಪೂರ್ಣಚಂದ್ರಿಕಾ

ಭೂತಾಕಾಶಕ್ಕೂ ವಿಷ್ಣುವಿಗೂ ಅಭೇದವನ್ನು ಹೇಳುವ ಮತವು ಅನೇಕಪ್ರಮಾಣವಿರುದ್ಧವಾದ್ದರಿಂದ ಸ್ವೀಕಾರಾರ್ಹವಲ್ಲ. ಹಾಗಾಗಿ ವಿಷ್ಣುವೇ ಆಕಾಶಶಬ್ದದಿಂದ ಮುಖ್ಯವಾಗಿ ಪ್ರತಿಪಾದ್ಯನಾಗುತ್ತಾನೆ.

**गुरुराजीयम्** – एवम् 'आकाशश्रुतेर्ब्रह्मणि मुख्यत्वमुपपाद्य यदुक्तं परेण प्रबलश्रुत्यनुसारेणानन्तत्वादिलिङ्गानि कथञ्चिद्भूताकाशे नेयानि' इति, तद्दूषयति – **अनन्तत्वादीति** ॥ नन्वेतावता निरवकाशत्वप्रयुक्तं प्राबल्यं यदि बहुत्व-श्रुतित्वप्रयुक्तप्राबल्यापेक्षया दुर्बलं तदा पूर्वोक्तत्यागः यदि च प्रबलं तर्हि त्रितयोक्तिरनुपपन्ना इत्यत आह – **एवञ्चेति** ॥

यद्वा नन्वन्तरधिकरणन्यायस्यैवातिदेशात् परिहारे विशेषन्यायोक्तिरयुक्ता । तदभावे पूर्वोक्तदृढपूर्वपक्षस्योक्तरीत्या पूर्वन्यायेनापरिहारात् सिद्धान्तानुत्थाना-दतिदेशानुपपत्तिः, इत्यत आह – **एवञ्चेति** ॥ **परनित्यान्तरङ्गप्रतिपदविधिषु परबलीयस्त्वमित्युक्तत्वादिति** ॥

यद्यप्यत्रातुल्यबलयोरेकत्र प्रसक्तौ न परेण पूर्वबाधः । यथा सुग्लः सुम्ल इत्यत्र श्याद्व्यधा इत्याकारान्तलक्षणं णप्रत्ययमनुपसर्गे सावकाशत्वाद्दुर्बलं परमपि बाधित्वा ''आतश्चोपसर्गे'' इति पूर्वः कप्रत्यय एव भवति । तथाऽपि तुल्यबलयोर्विरुद्धयोरेकत्र प्रसङ्गे परेण पूर्वस्य बाधः । यथा वृक्षाभ्यामित्यत्र ''सुपिचेति'' दीर्घत्वं सावकाशं वृक्षेष्वित्यत्र ''बहुवचने झल्येत्'' इत्येतत् सावकाशं वृक्षेभ्य इत्यत्रोभयोः प्रसङ्गे परत्वेन दीर्घस्यैव बाधः । रन्धयतीत्यत्र ''रधिजंभोरचीति'' नुमागमस्य ''अत उपधाया'' इत्युपधावृद्धौ कृतायामकृतायां वा प्राप्यमाणस्य कृताकृतप्रसङ्गी यो विधिः स नित्य इति नित्यत्वादुपधावृद्धेश्च नुमि कृते ''अलोन्त्यात्पूर्व उपधेति'' नकारस्यैवोपधात्वेनाकारस्यानुप-धात्वादप्राप्तेः अनित्यत्वात्पूर्वेणापि नित्येनानुमाऽनित्यायाः परस्या अपि वृद्धेर्बाधः । तथा प्रजग्ध्येत्यत्र समासावयवभूतानेकपदाश्रयत्वाद् बहिरङ्गो ल्यप् जग्ध्यादेशो कृतेऽकृतेपि जायमानत्वान्नित्योपि ल्यप्यकृते कृते ''पिसिद्धं बहिरङ्गमन्तरङ्ग'' इत्यसिद्धेः प्राप्तेर्नित्यमप्यन्तरङ्गं जग्ध्यादेशं बाधते ।

नित्यस्य सर्वथा बाधासम्भवात् प्रथमतः स्वारस्येन प्राप्तस्य जघन्यतया स्वाधीनतासम्पादनादिनाऽस्वारस्यमेव बाध इति नित्यस्यापि नित्येन बाधे

उदाहरणम् । अशिश्रयत् अदुद्रवत् । इत्यत्रान्तर्भूतचङपेक्षत्वादियङुवङावन्तरङ्गौ बहिर्भूततिबपेक्षत्वाद् बहिरङ्गं लघूपधलक्षणं गुणं बाधेते । न चात्र चङा व्यवधानेन गुणप्राप्तेरेवाभावात्कथं तद्बाधकत्वमियङुवङोरिति - वाच्यम् । अप्राप्तेरेवात्र बाधत्वम् । उपचारात् । यद्वा शिवे हीत्यत्र धातूपसर्गकार्यत्वे-नान्तरङ्गो गुणः उप- सर्गपदान्तरकार्यत्वेन बहिरङ्गसवर्णदीर्घं बाधते । अश्नुवन्तीत्यत्र प्राप्तं ''इको यणची''ति यण् ''अचिश्नुधात्विति'' श्नुप्रत्यय-रूपप्रतिपदनिमित्त उवङादेशो बाधते । यथोक्तं पदमञ्जर्यां विप्रतिषेधसूत्रे -

**परं विदुः पूर्वपरोपपत्तौ परस्य नित्यस्य च नित्यमेव ।**
**नित्यान्तरङ्गोपगमेन्तरङ्गं तस्माद्विधिः प्रातिपदो बलीयानिति ।**

एतेषां निरवकाशेन प्रतिपदादिना सावकाशान्तरङ्गादेर्बाधान्निरवकाशत्व-प्रयुक्तप्राबल्यस्यान्तरङ्गत्वादिस्वभावप्रयुक्तप्राबल्याद्बलवत्त्वमिति ज्ञायत इति भावः ।

स्वभावदुर्बलमपि निरवकाशं स्वभावप्रबलमपि सावकाशं बाधत इत्यत्र दृष्टान्तमाह – **कांस्यभोजिन्यायेनेति ॥** कांस्यभोजिनयस्यायमर्थः । गुरुशिष्या-वेकत्र स्तः । तत्र शिष्यस्य कांस्यपात्रेणैव भोजननियमः । गुरोरनियमः । तथा चैकं कांस्यपात्रम् । इतरत्रार्कपत्रामत्रम् । तत्र गुरोः पूज्यतया स्वारस्येन कांस्यपात्रं प्राप्तम् । इतरच्छिष्यस्य । प्रधानस्योपसर्जनभूतशिष्यानुरोध्यत्वात् । तथा च सति शिष्यस्य नियमभङ्गेन भोजनमेव न स्यात् । तस्माद् गुणस्यात्यन्तबाधापेक्षया प्रधानस्वारस्यहानमात्रं युक्तमिति कांस्यपात्रं शिष्यस्यैवेति । तथा च स्वभावतो दुर्बलस्यापि शिष्यस्य निरवकाशत्वेन प्रबलत्वात्तेन स्वभावतः प्रबलस्यापि गुरोर्बाधवत् लिङ्गानां निरवकाशत्वेन तैः स्वभावप्रबलश्रुत्यादिबाधो युक्तः ।

ननु तथापीन्द्रादिशब्दानां विष्णुपरत्वेऽतस्स्थत्वादिरूपनिरूढमुखान्तरवत् प्रकृतेऽपि निरूढमुखान्तराभावात्कथं तस्य ब्रह्मपरत्वमित्यत आह – **दृश्यते चेति ॥** तर्हि भूतलिङ्गस्य का गतिरित्यत आह – **भूतेति ॥**

## ಸಾರ

ಪ್ರಮಾಣಾಶ್ರಿತವಾದ ಆಕಾಶಶಬ್ದವು ಭಗವಂತನಲ್ಲಿ ಮುಖ್ಯವಲ್ಲ ಎಂಬ ಶಂಕೆಯನ್ನು ನಿರಾಕರಿಸುತ್ತಾರೆ.

ಅನಂತತ್ವ ಮೊದಲಾದ ಲಿಂಗಗಳು ವಿಷ್ಣುವಿನಲ್ಲಿ ನಿರವಕಾಶಗಳು. ಏಕೆಂದರೆ ಅನಂತತ್ವ ಎಂದರೆ ಅಂತ ತ್ರಯವಿಲ್ಲದ್ದು ಎಂದರ್ಥ. ದೇಶತಃ ಕಾಲತಃ ಗುಣತಃ ಅಂತವಿಲ್ಲದವನು ವಿಷ್ಣುವೇ ಹೊರತು ಮೂರು ರೀತಿಯ ಅಂತವುಳ್ಳ ಭೂತಾಕಾಶವಲ್ಲ.

ಅವ್ಯಾಕೃತಾಕಾಶವನ್ನಿಟ್ಟುಕೊಂಡರೆ ಅದೂ ಕೂಡ ದೇಶತಃ ಕಾಲತಃ ಅಂತರಹಿತವಾದದ್ದು ಎಂದು ಕೋಶಗಳು ಹೇಳುತ್ತವೆಯಾದರೂ ಪೂರ್ವಪಕ್ಷಿಯು ಭೂತಕಾಶವನ್ನು ಆಕಾಶ ಶಬ್ದವಾಚ್ಯವೆಂದು ಹೇಳುತ್ತಾನೆ. ಅಲ್ಲಿ ಅದೂ ಕೂಡ ಇಲ್ಲ. ಹೀಗಾಗಿ ಭಾಷ್ಯದಲ್ಲಿ ಹೇಳಿದ ಶ್ರುತಿಯಿಂದ ಮತ್ತು ಲೋಕಪ್ರಸಿದ್ಧಿಯಿಂದ 'ಅನಂತ' ಶಬ್ದವು ವಿಷ್ಣುವಿನಲ್ಲೇ ಮುಖ್ಯವಾದ್ದರಿಂದ ಸಾವಕಾಶವಾದ ಆಕಾಶಶಬ್ದದಿಂದ ಬಾಧವನ್ನು ಹೇಳಲು ಬರುವುದಿಲ್ಲ.

ಬಲಾಬಲವನ್ನು ಪರೀಕ್ಷೆ ಮಾಡಿದಾಗ ಸ್ವಭಾವತಃ ಶ್ರುತಿ ಪ್ರಬಲವಾಗಿದ್ದರೂ ನಿರವಕಾಶತ್ವ ಮೊದಲಾದ ಪ್ರಾಬಲ್ಯ ಹೇತುಗಳಿಂದ ಕೂಡಿದ ಲಿಂಗವು ಅದಕ್ಕಿಂತಲೂ ಪ್ರಬಲವಾಗುತ್ತದೆಯಾದ್ದರಿಂದ ಇಲ್ಲಿ ಆಕಾಶಶ್ರುತಿಯಿಂದ ವಿಷ್ಣುವಿನ ಲಿಂಗಕ್ಕೆ ಬಾಧವನ್ನು ಹೇಳಲು ಬರುವುದಿಲ್ಲ. ಹಾಗೆಯೇ ಭೂತಾಕಾಶದ ಲಿಂಗವಾದ ಭೂತಕಾರಣತ್ವವೂ ಕೂಡ ಬೇರೆ ಶ್ರುತಿಯಲ್ಲಿ ಹೇಳಿದಂತೆ ವಿಷ್ಣುವಿನಲ್ಲಿಯೇ ಮುಖ್ಯವಾಗಿದೆ. ಆದ್ದರಿಂದ ಆಕಾಶಶಬ್ದವು ವಿಷ್ಣುವನ್ನೇ ಮುಖ್ಯವಾಗಿ ಹೇಳುತ್ತದೆ.

---

### तात्पर्यचन्द्रिका –

**अत्रोभयेऽप्याहुः – ''आकाश इति होवाच'' इति आकाशे निरूढप्रथमानुपसञ्जातविरोध्याकाशपदानुरोधेन बहून्यपि चरमाणि सर्वकारणत्वज्यायस्त्वानन्तत्वादीनि भूताकाशे कथञ्चिद्योज्यानीति प्राप्ते(*)**

(*) शङ्करभाष्यम् – इदमामनन्ति – 'अस्य लोकस्य का गतिरित्याकाश इति होवाच सर्वाणि ह वा इमानि भूतान्याकाशादेव समुत्पद्यन्त आकाशं प्रत्यस्तं यन्त्याकाशो ह्येवैभ्यो ज्यायानाकाशः परायणम्' (छान्दो. १।९।१) इति । तत्र संशयः – किमाकाशशब्देन परं ब्रह्माभिधीयत उत भूताकाशमिति । कुतः संशयः; उभयत्र प्रयोगदर्शनात् । भूतविशेषे तावत्सुप्रसिद्धो लोकवेदयोराकाशशब्दः । ब्रह्मण्यपि क्वचित्प्रयुज्यमानो दृश्यते । यत्र वाक्यशेषवशादसाधरणगुणश्रवणाद्वा निर्धारितं ब्रह्म भवति, यथा –'यदेव आकाश आनन्दो न स्यात्' (तै. २।७) इति । 'आकाशो वै

नाम नामरूपयोर्निर्वहिता ते यदन्तरा तद्ब्रह्म' (छा. ८।१४।१) इति चैवमादौ । अतः संशयः । किं पुनरत्र युक्तं, भूताकाशमिति । कुतः, तद्धि प्रसिद्धतरेण प्रयोगेण शीघ्रं बुद्धिमारोहति ।

न चायमाकशशब्द उभयोः साधारणः शक्यो विज्ञातुं, अनेकार्थत्वप्रसङ्गात् । तस्माद्ब्रह्मणि गौण आकाशशब्दो भवितुमर्हति । विभुत्वादिभिर्हि बहुभिर्धर्मैः सदृशमाकाशेन ब्रह्म भवति । न च मुख्यसंभवे गौणोऽर्थो ग्रहणमर्हति । सम्भवति चेह मुख्यैवाकाशस्य ग्रहणम् । ननु भूताकाशपरिग्रहे । वाक्यशेषो नोपपद्यते - 'सर्वाणि ह वा इमानि भूतान्याकाशादेव समुत्पद्यन्ते' इत्यादिः । नैष दोषः । भूताकाशस्यापि वाय्वादिक्रमेण कारणत्वोपपत्तेः । विज्ञायते हि – 'तस्माद्वा एतस्मादात्मन आकाशः सम्भूत । आकाशाद्वायुः । वायोरग्निः' (तै. २।१) इत्यादि । ज्यायस्त्वपरायणत्वे अपि भूतान्तरापेक्षयोपपद्येते भूताकाशस्यापि । तस्मादाकाशशब्देन भूताकाशस्य ग्रहणमित्येवं प्राप्ते,

ब्रूमः – 'आकाशस्तल्लिङ्गात्'। आकाशशब्देन ब्रह्मणो ग्रहणं युक्तम् । कुतः, तल्लिङ्गात् । परस्य हि ब्रह्मण इदं लिङ्गम् – 'सर्वाणि ह वा इमानि भूतान्याकाशादेव समुत्पद्यन्ते' इति । परस्माद्धि ब्रह्मणो भूतानामुत्पत्तिरिति वेदान्तेषु मर्यादा । ननु भूताकाशस्यापि वाय्वादिक्रमेण कारणत्वं दर्शितम् । सत्यं, दर्शितम् । तथापि मूलकारणस्य ब्रह्मणोऽपरिग्रहादाकाशादेवेत्यवधारणं, सर्वाणीति च भूतविशेषणं नानुकूलं स्यात् । तथा 'आकाशं प्रत्यस्तं यन्ति' इति ब्रह्मलिङ्गं 'आकाशो ह्येवैभ्यो ज्यायानाकाशः परायणम्' इति च ज्यायस्त्वपरायणत्वे। ज्यायस्त्वं ह्यनापेक्षिकं परमात्मन्येवैकस्मिन्नाम्नातम् - 'ज्यायान्पृथिव्या ज्यायानन्तरिक्षाज्जयायान्दिवो ज्यायान् एभ्यो लोकेभ्यः' (छा. ३।१४।३) इति । तथा परायणात्वमपि परमकारणत्वात् परमात्मन्येवोपपन्नतरम् । श्रुतिश्च भवति – 'विज्ञानमानन्दं ब्रह्म रातेर्दातुः परायणम्' (बृ. ३।९।२८) इति । अपि चान्तवत्त्वदोषेण शालावत्यस्य पक्षं निन्दित्वा, अनन्तं किञ्चिद्वक्तुकामेन जैवलिना आकाशः परिगृहितः, तं चाकाशमुद्गीथे सम्पाद्योपसंहरति – 'स एष परोवरीयानुद्गीथः स एषोऽनन्तः' (छ. १।९।२) इति ।

तच्चानन्त्यं ब्रह्म- लिङ्गम् । यत्पुनरुक्तं भूताकाशं प्रसिद्धिबलेन प्रथमतरं प्रतीयत इति, अत्र ब्रूमः – प्रथमतरं प्रतीतमपि सत् वाक्यशेषगतान्ब्रह्मगुणान्दृष्ट्वा न परिगृह्यते । दर्शितश्च ब्रह्मण्यप्याकाशशब्दः – 'आकाशो वै नाम नामरूपयोर्निर्वहिता' इत्यादौ । तथाकाशपर्यायवाचिनामपि ब्रह्मणि प्रयोगो दृश्यते - 'ऋचो अक्षरे परमे

व्योमन्यस्मिन्देवा अधि विश्वे निषेदुः' (ऋ. सं. १।१६४।३९) 'सैषा भार्गवी वारुणी विद्या परमे व्योमन्प्रतिष्ठिता' (तै. ३।६) 'ॐ कं ब्रह्म खं ब्रह्म' (छा. ४।१०।५) 'खं पुराणम्' (बृ. ५।१) इति चैवमादौ । वाक्योपक्रमेऽपि वर्तमानस्या- काशशब्दस्य वाक्यशेषवशाद्युक्ता ब्रह्मविषयत्वानवधारणा । 'अग्निरधीतेऽनुवाकम्' इति हि वाक्योपक्रमगतोऽप्यग्निशब्दो माणवकविषयो दृश्यते । तस्मादाकाशशब्दं ब्रह्मेति सिद्धम् ॥२२॥

**भामातीव्याख्या – अकाशस्तल्लिङ्गात् ।**

पूर्वस्मिन्नधिकरणे ब्रह्मणोऽसाधारणधर्मदर्शनाद्विवक्षितोपाधिनोऽस्यैवोपासना, न त्वादित्यशरीराभिमानिनो जीवात्मन इति निरूपितम् । इदानीं त्वसाधारण-धर्मदर्शनात्तदेवोद्गीथे संपाद्योपास्यत्वेनोपदिश्यते, न भूताकाश इति निरूप्यते । तत्र 'आकाश इति होवाच' इति किं मुख्याकाशपदानुरोधेन 'अस्य लोकस्य का गतिः' इति 'सर्वाणि ह वा इमानि भूतानि' इति च 'ज्यायान्' इति च 'परायणम्' इति च कथञ्चिद्व्याख्यायतां, उतैतदनुरोधेनाकाशशब्दो भक्त्या परात्मनि व्याख्यायता-मिति । तत्र

**'प्रथमत्वात्प्रधानत्वादाकाशं मुख्यमेव नः ।**
**तदानुगुण्येनान्यानि व्याख्येयानीति निश्चयः ॥'**

'अस्य लोकस्य का गतिः' इति प्रश्नोत्तरे 'आकाश इति होवाच' इत्याकाशस्य गतित्वेन प्रतिपाद्यतया प्राधान्यात्, 'सर्वाणि ह वा' इत्यादीनां तु तद्विशेषणतया गुणत्वात्, गुणे त्वन्याय्यकल्पना' इति बहून्यप्यप्रधानानि प्रधानानुरोधेन नेतव्यानि । अपिच 'आकाश इति होवाच' इत्युत्तरे प्रथमावगतमाकाशमनुपजातविरोधि, तेन तदनुरक्तायां बुद्धौ यद्यदेव तदेकवाक्यगतमुपनिपतति तत्तज्जघन्यतया उपसंजातविरोधि तदानुगुण्येनैव व्यवस्थानमर्हति । नच कचिदाकाशशब्दो भक्त्या ब्रह्मणि प्रयुक्त इति सर्वत्र तेन तत्परेण भवितव्यम् । नहि गङ्गायां घोष इत्यत्र गङ्गापदमनुपपत्त्या तीरपरमिति यादांसि गङ्गायामित्यत्राप्यनेन तत्परेण भवितव्यम् । सम्भवश्चोभयत्र तुल्यः ।

नच ब्रह्मण्यप्याकाशशब्दो मुख्यः, अनेकार्थत्वस्यान्याय्यत्वात्, भक्त्या च ब्रह्मणि प्रयोगदर्शनोपपत्तेः । लोके चास्य नभसि निरूढतरत्वात्, तत्पूर्वकत्वाच्च वैदिकार्थप्रतितेर्वैपरीत्यानुपपत्तेः। तदानुगुण्येन च 'सर्वाणि ह वा' इत्यादीनि भाष्यकृता स्वयमेव नीतानि । तस्माद्भूताकाशमेवात्रोपास्यत्वेनोपदिश्यते, न परमात्मेति प्राप्तम् ।

**यद्यप्याकाशपदं "सर्वाणि" इत्यादितः प्रथमम्, तथाऽपि परिहारवाक्यस्थाकाशपदादपि प्रथमानुपसञ्जातविरोधिप्रश्नानुसारेण चरमस्योत्तरस्य नेयत्वात्, "अस्य लोकस्य का गतिः" इति प्रश्नस्य च दृश्यमानसर्वप्रपञ्चविषयत्वात्**

---

एवं प्राप्तेऽभिधीयते – **आकाशशब्देन ब्रह्मणो ग्रहणम्** । कुतः, तल्लिङ्गात् । तथाहि – 'सामानाधिकरण्येन प्रश्नतत्प्रतिवाक्ययोः । पौर्वापर्यपरामर्शात्प्रधानत्वेऽपि गौणता ॥' यद्यप्याकाशपदं प्रधानार्थं तथापि यत्पृष्टं तदेव प्रतिवक्तव्यम् । न खल्वनुन्मत्त आम्रान्पृष्टः कोविदारानाचष्टे । तदिह, 'अस्य लोकस्य का गतिः' इति प्रश्नो दृश्यमाननामरूपप्रपञ्चमात्रगतिविषय इति तदनुरोधाद्य एव सर्वस्य लोकस्य गतिः स एवाकाशशब्देन प्रतिवक्तव्यः । नच भूताकाशः सर्वस्य लोकस्य गतिः, तस्यापि लोकमध्यपातित्वात् । तदेव तस्य गतिरित्यनुपपत्तेः । न चोत्तरे भूताकाशश्रवणाद् भूताकाशकार्यमेव पृष्टमिति युक्तं, प्रश्नस्य प्रथमावगतस्यानुपजातविरोधिनो लोकसामान्यविषयस्योपजातविरोधिनोत्तरेण सङ्कोचानुपपत्तेस्तदनुरोधेनोत्तरव्याख्यानात् । नच प्रश्नेन पूर्वपक्ष-रूपेणानवस्थितार्थेनोत्तरं व्यवस्थितार्थं न शक्यं नियन्तुमिति युक्तं, तन्निमित्तानामज्ञानसंशयविपर्यासानामनवस्थानेऽपि तस्य स्वविषये व्यवस्थानात् । अन्यथोत्तरस्यानालम्बनत्वापत्तेर्वैयधिकरण्यापत्तेर्वा । अपि चोत्तरेऽपि बह्वसमञ्जसम् ।

तथाहि – 'सर्वाणि ह वा इमानि भूतान्याकाशादेव समुत्पद्यन्ते' इति सर्वशब्दः कथञ्चिदल्पविषयो व्याख्येयः । एवमेवकारोऽप्यसमञ्जसः । न खल्वपामाकाश एव कारणमपि तु तेजोऽपि । एवमन्नस्यापि नाकाशमेव कारणमपि तु पावकपाथसी अपि । मूलकारणविवक्षायां तु ब्रह्मण्येवावधारणं समञ्जसम् । असमञ्जसं तु भूताकाशे । एवं सर्वेषां भूतानां लयो ब्रह्मण्येव । एवं सर्वेभ्यो ज्यायस्त्वं ब्रह्मण एव । परमयनं ब्रह्मैव । तस्मात्सर्वेषां लोकानामिति प्रश्नेनोपक्रमात्, उत्तरे च तत्तदसाधारणब्रह्मगुणपरामर्शात् पृष्टायाश्च गतेः परमयनमित्यसाधारणब्रह्मगुणोपसंहारात्, भूयसीनां श्रुतीनामनुग्रहाय 'त्यजेदेकं कुलस्यार्थे' इतिवद्वरमाकाशपदमात्रमसमञ्जसमस्तु । एतावता हि बहु समञ्जसं स्यात् ।

न चाकाशस्य प्राधान्यमुत्तरे, किंतु पृष्टार्थत्वादुत्तरस्य, लोकसामान्यगतेश्च पृष्टत्वात्, 'परायणम्' इति च तस्यैवोपसंहाराद्ब्रह्मैव प्रधानम् । तथा च तदर्थं सत् आकाशपदं प्रधानार्थं भवति, नान्यथा । तस्माद्ब्रह्मैव प्रधानमाकाशपदेनेहोपास्यत्वेनोपक्षिप्तं, न भूताकाशमिति सिद्धम् ।

**सर्वलोकगतिरेवाकाशपदेन प्रतिवक्तव्या । नच लोकान्तर्गतो भूताकाशः सर्वलोकगतिः(*) ।**

**किञ्च सर्वलोककारणत्वादिबह्वनुग्रहार्थमेकमाकाशपदं जघन्यवृत्त्या ब्रह्मपरम्, ''त्यजेदेकं कुलस्यार्थे'' इति न्यायात् ।**

**तस्मात्सोपाधिकं ब्रह्मैव आकाशपदेनोपास्यत्वेनोपक्षिप्तमिति सिद्धान्त इति ।**

---

(*)श्रीभाष्यम् - इदमाम्नायते छान्दोग्ये, 'अस्य लोकस्य का गतिरिति । आकाश इति होवाच, सर्वाणि ह वा इमानि भूतान्याकाशादेव समुत्पद्यन्ते; आकाशं प्रति अस्तं यन्ति । आकाशो ह्येवैभ्यो ज्यायान् आकाशः परायणम्' (छा. १-९-१) इति ।
तत्र सन्देहः - किं प्रसिद्धाकाश एवात्राकाशशब्देनाभिधीयते, उतोक्तलक्षणमेव ब्रह्मेति । किं प्राप्तम् । प्रसिद्धाकाश इति । कुतः । शब्दैकसमधिगम्ये वस्तुनि य एवार्थो व्युत्पत्तिसिद्धः शब्देन प्रतीयते, स एव ग्रहीतव्यः । अतः प्रसिद्धाकाश एव चराचरभूतजातस्य कृत्स्नस्य कारणम् । अतस्तस्मादनतिरिक्तं ब्रह्म । नन्वीक्षापूर्वकसृष्ट्यादिभिरचेतनात् जीवाच्च व्यतिरिक्तं ब्रह्मेत्युक्तम् ॥

सत्यमुक्तम्; अयुक्तं तु तत् । तथा हि - 'यतो वा इमानि भूतानि जायन्ते.....तद्ब्रह्म' इत्युक्ते, (तै. ३-१-१) कुत इमानि भूतानि जायन्त इत्यादिविशेषापेक्षायाम्, 'सर्वाणि ह वा इमानि भूतान्याकाशादेव समुत्पद्यन्ते' (छा. १-९-१) इत्यादिना विशेषप्रतीतेर्जगज्जन्मादिकारणमाकाश एवेति निश्चिते सति, 'सदेव सोम्येदमग्र आसीत्' (छा. ६-२-१) इत्यादिष्वपि सदादिशब्दाः साधारणाकाराः तमेव विशेषमाकाशमभिदधति । 'आत्मा वा इदमेक एवाग्र आसीत्' (ऐ. १-१-१) इत्यादिष्वात्मशब्दोऽपि तत्रैव वर्तते । तस्यापि हि चेतनैकान्तत्वं न सम्भवति; यथा 'मृदात्मको घटः' इति । आप्नोतीत्यात्मेति व्युत्पत्त्या सुतरामाकाशेऽप्यात्मशब्दो वर्तते । अत एव-आकाश एव कारणं ब्रह्मेति निश्चिते सति ईक्षणादयः तदनुगुणागौणा वर्णनीयाः । यदि हि साधारणशब्दैरेव सदादिभिः कारणमभ्यधायिष्यत, ईक्षणाद्यर्थानुरोधेन चेतन-विशेष एव कारणमिति निरचेष्यत । आकाशशब्देन तु विशेष एव निश्चित इति नार्थस्वाभाव्यान्निर्णेतव्यमस्ति ॥

ननु 'आत्मन आकाशः सम्भूतः' (तै. २-१-१) इति आकाशस्यापि कार्यत्वं प्रतीयते ॥ सत्यम् । सर्वेषामेवाकाशवाय्वादीनां सूक्ष्मावस्था स्थूलावस्था चेत्यवस्थाद्वयमस्ति । तत्राकाशस्य सूक्ष्मावस्था कारणम्; स्थूलावस्था तु कार्यम् । 'आत्मन आकाशस्सम्भूतः' (तै. २-१-१) इति, स्वस्मादेव सूक्ष्मरूपात् स्वयं स्थूलरूपः सम्भूत

**अत्र ब्रूमः – प्रथमानुसारेण चरमास्वारस्ये पूर्वाधिकरणेऽपि प्रथमहिरण्यश्मश्रुत्वाद्यनुसारेण चरमं पापातीतत्वं जीवे कथञ्चिन्नेयं स्यात् । इहापि हि प्रश्नस्य अनुरोध्यत्वे प्राथम्यमेव हेतुः, । प्रश्नोत्तरयोरेकविषयत्वस्य उत्तरानुसारेण प्रश्नव्याख्यानेऽपि सिद्धेः । किञ्च –**

**प्रकृतां पृथिवीं वक्ति प्रश्नस्थं सर्वनाम यत् ।**
**तस्मात्तदनुरोधी चेत् समाधिश्च तथा भवेत् ॥**

**तथा हि – ''असौ लोकः'' इत्यादिना दाल्भ्योक्तं स्वर्गलोकस्य सामाश्रयत्वं शालावत्यः ''अप्रतिष्ठितं वै किल'' इत्यादिना दूषयित्वा ''अयं लोकः'' इत्यादिना पृथिवीलोकः सामाश्रय इत्यूचे । प्रवाहणस्तु तं ''अन्तवद्वै किल'' इत्यादिना अदूषयत् । तर्हि ''अस्य लोकस्य का गतिः'' इति शालावत्येन प्रकृतपृथिवीलोकगतिरेव पृष्टा, न सर्वगतिः, 'अस्य' इति सर्वनाम्नः ''प्रास्मा अग्निम्'' इत्यादाविव प्रकृतपरत्वात् । तथा च प्रश्नानुसारेणोत्तरव्याख्याने ''सर्वाणि ह वा'' इत्यत्र सर्वशब्दः पृथिवीमात्रपरः स्यात् । नच पृथिवीकारणस्य**

---

इत्यर्थः । 'सर्वाणि ह वा इमानि भूतान्याकाशादेव समुत्पद्यन्ते' (छा. १-९-१) इति सर्वस्य जगतः आकाशादेव प्रभवाप्ययादिश्रवणात् तदेव हि कारणं ब्रह्मेति निश्चितम् । यत एवं प्रसिद्धाकाशादनतिरिक्तं ब्रह्म, अत एव (च) 'यदेष आकाश आनन्दो न स्यात्', (तै. २-७-१) 'आकाशो वै नाम नामरूपयोर्निर्वहिता' (छा. ८-१४-१) इत्येवमादिनिर्देशोऽप्युपपन्नतरः । अतः प्रसिद्धाकाशादनतिरिक्तं ब्रह्मेति ॥

॥ सिद्धान्तः ॥

एवं प्राप्ते ब्रूमः-आकाशस्तल्लिङ्गात् । आकाशशब्दाभिधेयः प्रसिद्धाकाशादचेतनादर्थान्तरभूतो यतोक्तलक्षणः परमात्मैव । कुतः । तल्लिङ्गात् । निखिलजगदेककारणत्वं सर्वस्मात् ज्यायस्त्वं परायणत्वमित्यादीनि परमात्मलिङ्गान्युपलभ्यन्ते । निखिलकारणत्वं ह्यचिद्वस्तुनः प्रसिद्धाकाशशब्दाभिधेयस्य नोपपद्यते; चेतनवस्तुनस्तत्कार्यत्वासंभवात् । परायणत्वं च चेतानानां परमप्राप्यत्वम् । तच्चाचेतनस्य हेयस्य सकलपुरुषार्थविरोधिनो न सम्भवति । सर्वस्माज्ज्यायस्त्वं च निरुपाधिकं सर्वैः कल्याणगुणैः सर्वेभ्यो निरतिशयोत्कर्षः । तदप्यचितो नोपपद्यते ।

अपां प्रसिद्धत्वेन प्रश्नवैयर्थ्यम्, सर्वलोककारणस्यापि वाक्यान्तरतः प्रसिद्धेः । लोकतस्तु अपां पृथिवीकारणत्वस्याप्यप्रसिद्धेः ।

नच पृथिवीमात्रकारणप्रश्ने आप इति वक्तव्यत्वात् प्रतिवचने आकाशपदं, 'सर्वाणि' इति सर्वपदं, ''आकाशादेव'' इत्यवधारणं च युक्तम् । तस्मात्प्रश्नोऽपि सर्वलोकगतिविषय इति वाच्यम् ।

भामत्यां 'प्रश्नानुरोधेन उत्तरव्याख्यानात्'' इत्युक्तत्वेन उत्तरानुसारेण प्रश्नव्याख्याने अन्योन्याश्रयात् ।

ಅನುವಾದ - ಆಕಾಶಾಧಿಕರಣದ ರಚನೆಯ ಬಗ್ಗೆ ಅದ್ವೈತಿಗಳು ಮತ್ತು ವಿಶಿಷ್ಟಾದ್ವೈತಿಗಳು ಹೀಗೆ ಹೇಳುತ್ತಾರೆ.

ಪೂರ್ವಪಕ್ಷ - 'ಆಕಾಶೇತಿ ಹೋವಾಚ' ಎಂಬಲ್ಲಿ ಆಕಾಶಶಬ್ದವು ಭೂತಾಕಾಶದಲ್ಲಿ ಪ್ರಸಿದ್ಧವಾಗಿದೆ. ಮತ್ತು ಯಾವ ವಿರೋಧಗಳೂ ಇಲ್ಲದೆ ಮೊದಲೇ ಹೇಳಲ್ಪಟ್ಟಿದೆ. ಈ ಎರಡು ಕಾರಣಗಳಿಂದ ಆಕಾಶಶಬ್ದವು ಭೂತಾಕಾಶವನ್ನೇ ಪ್ರತಿಪಾದಿಸಬೇಕು. ಇನ್ನು ಅದೇ ಶ್ರುತಿಯಲ್ಲಿ ಸರ್ವಕಾರಣತ್ವ, ಜ್ಯಾಯಸ್ತ್ವ, ಅನಂತತ್ವ ಮೊದಲಾದ ಲಿಂಗಗಳು ಕೇಳಿಸಬಹುದು. ಆದರೆ ಆ ಎಲ್ಲ ಲಿಂಗಗಳನ್ನು ಭೂತಾಕಾಶಪರವಾಗಿಯೇ ಹೇಗಾದರೂ ಮಾಡಿ ಯೋಜಿಸಬೇಕು.

ಸಿದ್ಧಾಂತ - ವಸ್ತುತಃ ಆಕಾಶಪದವು 'ಸರ್ವಾಣಿ ಹ ವಾ' ಎಂಬ ಉತ್ತರ ನೀಡುವ ಶ್ರುತಿಗಿಂತಲೂ ಮೊದಲೇ ಪ್ರಸಕ್ತವಾಗಿದೆ. ಆದರೂ ಕೂಡ ಪರಿಹಾರವಾಕ್ಯದಲ್ಲಿರುವ ಆಕಾಶಪದವನ್ನು ಪ್ರಶ್ನೆಗೆ ಅನುಸಾರವಾಗಿ ಅರ್ಥೈಸಬೇಕು. ಪ್ರಶ್ನೆಯ ವಾಕ್ಯದಲ್ಲಿ ಆಕಾಶಪದವು ವಿರೋಧವಿಲ್ಲದೆ ಮೊದಲು ಪ್ರಸಕ್ತವಾದ್ದರಿಂದ ಪ್ರಬಲವಾಗಿದೆ. 'ಅಸ್ಯ ಲೋಕಸ್ಯ ಕಾ ಗತಿಃ?' ಎಂಬಲ್ಲಿ ಕಣ್ಣಿಗೆ ಕಾಣಿಸುವ ಸಮಗ್ರಪ್ರಪಂಚಕ್ಕೆ ಯಾರು ಆಶ್ರಯ? ಎಂದು ಪ್ರಶ್ನಿಸಲಾಗಿದೆ. ಇದಕ್ಕೆ ಅನುಗುಣವಾಗಿ ಸರ್ವಲೋಕಕ್ಕೆ ಆಶ್ರಯವನ್ನು ಆಕಾಶಪದದಿಂದಷ್ಟೇ ಉತ್ತರಿಸಬೇಕು. ಆದರೆ ಈ ಲೋಕದಲ್ಲಿಯೇ ಸೇರಿಕೊಂಡ ಭೂತಾಕಾಶವು ಸರ್ವಲೋಕಕ್ಕೆ ಆಶ್ರಯವಾಗಲು ಹೇಗೆ ಸಾಧ್ಯ?

ಮತ್ತು ಸರ್ವಲೋಕಕಾರಣತ್ವವೇ ಮೊದಲಾದ ಅನೇಕ ಲಿಂಗಗಳನ್ನು ಹೊಂದಿಸುವುದಕ್ಕೋಸ್ಕರ (ಅನುಗ್ರಹಿಸುವುದಕ್ಕೋಸ್ಕರ) ಗೌಣೀವೃತ್ತಿಯಿಂದ ಆಕಾಶಪದವು ಬ್ರಹ್ಮನನ್ನೇ ಪ್ರತಿಪಾದಿಸುತ್ತದೆಂದು ಒಪ್ಪಬೇಕು. 'ತ್ಯಜೇದೇಕಂ ಕುಲಸ್ಯಾರ್ಥೇ' (ಕುಲದ ಸಂರಕ್ಷಣೆಗಾಗಿ ಒಬ್ಬನನ್ನು ಹೊರಹಾಕಿದರೂ ತೊಂದರೆಯಿಲ್ಲ) ಎಂಬ ನ್ಯಾಯದಂತೆ ಸರ್ವಜಗತ್ಕಾರಣತ್ವಾದಿಗಳನ್ನು ಮುಖ್ಯವಾಗಿ ಕೂಡಿಸಲು ಕೇವಲ ಆಕಾಶಪದವನ್ನು ಗೌಣವಾಗಿ ಒಪ್ಪುವುದು (ಬಿಡುವುದು) ಉಚಿತ. ಆದ್ದರಿಂದ

ಸೋಪಾಧಿಕನಾದ ಬ್ರಹ್ಮನೇ (ಆಕಾಶರೂಪ ಉಪಾಧಿಯಿಂದ ಅವಚ್ಛಿನ್ನನಾದ ಬ್ರಹ್ಮನೇ) ಆಕಾಶಪದದಿಂದ ಪ್ರತಿಪಾದ್ಯನಾಗಿದ್ದಾನೆ. ಬ್ರಹ್ಮನ ಉಪಾಸನೆಯನ್ನು ಆಕಾಶಪದದಿಂದ ಮಾಡ-ಬೇಕೆನ್ನಲು ಶ್ರುತಿಯು ಹೊರಟಿದೆ.

ಅದ್ವೈತಿಗಳ ಈ ವಾದ ತಪ್ಪು. ಇಷ್ಟನ್ನು ಪ್ರಶ್ನಿಸುತ್ತೇವೆ -- ಪ್ರಥಮವಾಕ್ಯವನ್ನು ಅನುಸರಿಸಿ ಕೊನೆಯ ವಾಕ್ಯಕ್ಕೆ ಅಸ್ವಾರಸ್ಯ ಹೇಳಿದರೆ ಹಿಂದಿನ ಅಧಿಕರಣದಲ್ಲಿ ತೀರ್ಮಾನಿಸಿದ ನಿಮ್ಮ ಸಿದ್ಧಾಂತವೇ ತಪ್ಪಾದೀತು. ಏಕೆಂದರೆ ಪ್ರಥಮದಲ್ಲಿ ಶ್ರುತವಾದ ಹಿರಣ್ಯಶ್ಮಶ್ರುತ್ವ ಮೊದಲಾದ ಧರ್ಮಗಳನ್ನು ಅನುಸರಿಸಿ ಕೊನೆಯಲ್ಲಿ ಶ್ರುತವಾದ ಪಾಪರಾಹಿತ್ಯವನ್ನು ಜೀವನಲ್ಲಿ ಹೇಗಾದರೂ ಮಾಡಿ ಯೋಜಿಸಬೇಕಾಗುತ್ತದೆ. ಆದರೆ ನೀವು ಹಾಗೆ ಮಾಡದೆ ಎರಡನ್ನೂ ಬ್ರಹ್ಮನಲ್ಲಿ ಹೇಳುತ್ತೀರಿ. ಈ ಅಧಿಕರಣದಲ್ಲಿ ಪ್ರಶ್ನವಾಕ್ಯವನ್ನು ಅನುಸರಿಸಲು ಪ್ರಾಥಮ್ಯವೇ ಕಾರಣವಷ್ಟೇ. ಇನ್ನು ಪ್ರಶ್ನೆ ಹಾಗೂ ಉತ್ತರಗಳಲ್ಲಿ ಏಕವಿಷಯತ್ವವು ಬರಬೇಕೆಂದು ಪ್ರಶ್ನೆವಾಕ್ಯವನ್ನು ಅನುಸರಿಸಿ ಚರಮವಾಕ್ಯವನ್ನು ಯೋಜಿಸಬೇಕೆಂದು ಹೇಳಬೇಕು. ಆದರೆ ಚರಮವಾಕ್ಯವನ್ನು ಅನುಸರಿಸಿಯೂ ಕೂಡ ಪ್ರಶ್ನೆವಾಕ್ಯವನ್ನು ಹೊಂದಿಸಿದಾಗಲೂ ಏಕವಾಕ್ಯತ್ವವು ಕೂಡುತ್ತದೆ.

''ಪ್ರಕೃತಾಂ ಪೃಥಿವೀಂ ವಕ್ತಿ ಪ್ರಶ್ನಸ್ಥಂ ಸರ್ವನಾಮ ಯತ್ ।
ತಸ್ಮಾತ್ ತದನುರೋಧೀ ಚೇತ್ ಸಮಾಧಿಶ್ಚ ತಥಾ ಭವೇತ್ ॥''

ಪ್ರಶ್ನವಾಕ್ಯದಲ್ಲಿರುವ ಸರ್ವನಾಮಶಬ್ದವು ಪ್ರಕೃತವಾದ ಪೃಥಿವಿಯನ್ನು ಹೇಳುತ್ತಿದೆ. ಆದ್ದರಿಂದ ಅದಕ್ಕನುಗುಣವಾಗಿ ಸಮಾಧಾನವನ್ನು ಹೇಳಬೇಕು.

ಅದು ಹೀಗೆ -- ದಾಲ್ಭ್ಯ ಋಷಿಗಳು 'ಅಸೌ ಲೋಕಃ' ಇತ್ಯಾದಿಯಾಗಿ ಸ್ವರ್ಗಲೋಕವು ಸಾಮಕ್ಕೆ ಆಶ್ರಯವೆನ್ನುತ್ತಾರೆ. ಆವಾಗ ಶಾಲಾವತ್ಯ ಋಷಿಗಳು 'ಅಪ್ರತಿಷ್ಠಿತಂ ವೈ' ಇತ್ಯಾದಿಯಾಗಿ ಅದನ್ನು ದೂಷಿಸಿ, 'ಅಯಂ ಲೋಕಃ' ಇತ್ಯಾದಿಯಾಗಿ ಸಾಮಕ್ಕೆ ಪೃಥಿವಿಯೇ ಆಶ್ರಯವೆನ್ನುತ್ತಾರೆ. ಆವಾಗ ಪ್ರವಾಹಣ ಋಷಿಗಳು 'ಅಂತವದ್ವೈ ಕಿಲ' ಇತ್ಯಾದಿಯಾಗಿ ಅದನ್ನು ನಿಂದಿಸಿದ್ದಾರೆ. ಆವಾಗ ಶಾಲಾವತ್ಯ ಋಷಿಗಳು 'ಹಾಗಾದರೆ ಈ ಲೋಕಕ್ಕೆ ಯಾವುದು ಆಶ್ರಯ?' ಎಂದು ಪ್ರಶ್ನಿಸಿದಾಗ ಪ್ರಕೃತವಾದ ಪೃಥಿವೀಲೋಕದ ಗತಿಯನ್ನಷ್ಟೇ ಪ್ರಶ್ನಿಸಿದ್ದಾರೆ ಹೊರತು, ಸಕಲಲೋಕದ ಗತಿಯನ್ನು ಪ್ರಶ್ನಿಸಿಲ್ಲ. ಸರ್ವನಾಮಶಬ್ದದಿಂದ ಪೂರ್ವಪ್ರಕೃತವಾದದ್ದನ್ನಷ್ಟೇ ಪರಾಮರ್ಶಿಸಬೇಕು. ಪೂರ್ವ-ಮೀಮಾಂಸೆಯಲ್ಲಿ 'ಪ್ರಾಸ್ಮೈ ಅಗ್ನಿ' ಎಂಬಲ್ಲಿ ಈ ವಿಷಯವನ್ನು ನಿರ್ಣಯಿಸಿದ್ದಾರೆ. ಅಂತೂ ಪ್ರಶ್ನೆಗೆ ಅನುಸಾರಿಯಾಗಿಯೇ ಉತ್ತರವಾಕ್ಯವನ್ನು ವ್ಯಾಖ್ಯಾನಿಸಬೇಕು. ಆದ್ದರಿಂದ 'ಸರ್ವಾಣಿ ಹ ವಾ' ಎಂಬಲ್ಲಿರುವ ಸರ್ವಶಬ್ದವು ಕೇವಲ ಪೃಥ್ವಿಯನ್ನಷ್ಟೇ ಹೇಳುತ್ತದೆ ಹೊರತು, ಅದ್ವೈತಿಗಳು ಹೇಳುವಂತೆ ಸಕಲಲೋಕವನ್ನು ಹೇಳುತ್ತಿಲ್ಲ.

ಪರಿಪೂರ್ಣಚಂದ್ರಿಕಾ

ನೀರು ಪೃಥಿವಿಗೆ ಕಾರಣವೆಂದು ಲೋಕಪ್ರಸಿದ್ಧವಾಗಿದೆ. ಪ್ರಸಿದ್ಧವಾದ ವಿಚಾರವನ್ನೇ ಪುನಃ ಪ್ರಶ್ನಿಸುವುದರಲ್ಲಿ ಅರ್ಥವಿಲ್ಲದ ಕಾರಣ ಸಕಲಲೋಕದ ಆಶ್ರಯದ ಬಗ್ಗೆ ಪ್ರಶ್ನೆಯನ್ನು ಹೇಳ-ಬೇಕಲ್ಲವೇ? ಎಂದು ಶಂಕಿಸಬಾರದು. ಸಕಲಲೋಕಕಾರಣತ್ವವೂ ಕೂಡ ಬೇರೆ ಸೃಷ್ಟಿವಾಕ್ಯಗಳಿಂದಲೇ ಸಿದ್ಧವಾಗಿರುವಾಗ ಪುನಃ ಅದನ್ನೇ ಇಲ್ಲಿ ಹೇಳುವ ಅವಶ್ಯಕತೆ ಇಲ್ಲ. ಸಕಲಲೋಕಕಾರಣತ್ವವು ಲೋಕಪ್ರಸಿದ್ಧಿಯಿಂದ ಸಿದ್ಧವಾಗಿಲ್ಲ. ಅದನ್ನು ತಿಳಿಸಲು ಈ ಶ್ರುತಿ ಹೊರಟಿದೆಯೆಂದೂ ಶಂಕಿಸಬಾರದು. ಹಾಗಾದರೆ ನೀರು ಪೃಥಿವಿಗೆ ಕಾರಣವೆಂದೂ ಕೂಡ ಲೋಕದಲ್ಲಿ ಪ್ರಸಿದ್ಧವಾಗಿಲ್ಲ. ಅದನ್ನು ತಿಳಿಸಲು ಶ್ರುತಿಯು ಹೊರಡುವುದು ಸಾರ್ಥಕವಲ್ಲವೇ? ಕೇವಲ ಪೃಥಿವಿಗಷ್ಟೇ ಕಾರಣತ್ವವನ್ನು ಶ್ರುತಿಯು ಹೇಳುವುದಾದರೆ 'ಆಪಃ' ಎಂದು ಹೇಳಬೇಕು. ಮತ್ತು ಉತ್ತರವಾಕ್ಯದಲ್ಲಿ ಆಕಾಶಪದವೂ 'ಸರ್ವಾಣಿ' ಎಂಬ ಸರ್ವಪದವೂ 'ಆಕಾಶಾದೇವ' ಎಂಬ ಅವಧಾರಣವೂ ತಪ್ಪಾಗುತ್ತದೆ. ಆದ್ದರಿಂದ ಉತ್ತರವಾಕ್ಯವನ್ನು ಅನುಸರಿಸಿ ಪ್ರಶ್ನೆವಾಕ್ಯವು ಸರ್ವಲೋಕಗತಿಯನ್ನೇ ವಿಷಯೀಕರಿಸುತ್ತದೆ ಎಂದು ಹೇಳಬೇಕಲ್ಲವೇ? ಇದೂ ಕೂಡ ತಪ್ಪು. ಭಾಮತಿಯಲ್ಲಿ 'ಪ್ರಶ್ನಾನುರೋಧೇನ ಉತ್ತರವ್ಯಾಖ್ಯಾನಾತ್' (ಪ್ರಶ್ನೆಗೆ ಅನುಸರಿಸಿ ಉತ್ತರವನ್ನು ವ್ಯಾಖ್ಯಾನಿಸಬೇಕು) ಎನ್ನಲಾಗಿದೆ. ಆದರೆ ನೀವು ಉತ್ತರವನ್ನು ಅನುಸರಿಸಿ ಪ್ರಶ್ನೆಯನ್ನು ವ್ಯಾಖ್ಯಾನಿಸುತ್ತಿದ್ದೀರಿ. ಇದರಿಂದ ಪ್ರಶ್ನೆಗೆ ಅನುಸಾರಿಯಾಗಿ ಉತ್ತರವಾಕ್ಯದ ವ್ಯಾಖ್ಯಾನ, ಉತ್ತರವಾಕ್ಯದ ವ್ಯಾಖ್ಯಾನಕ್ಕೆ ಅನುಸಾರಿಯಾಗಿ ಪ್ರಶ್ನೆಗೆ ವ್ಯಾಖ್ಯಾನವೆಂದು ಅನ್ಯೋನ್ಯಾಶ್ರಯದೋಷವು ಬರುತ್ತದೆ.

### ಕಠಿಣಪದಾರ್ಥ

ಪ್ರಥಮ ಅನುಪಸಂಜಾತವಿರೋಧಿ = ಆಕಾಶಪದವು ಪ್ರಥಮದಲ್ಲಿ ಕೇಳಲ್ಪಟ್ಟಿದೆ. ಮತ್ತು ಯಾವುದೇ ವಿರೋಧಗಳನ್ನೂ ಹೊಂದಿಲ್ಲ; ಉತ್ತರಸ್ಯ = ಆಕಾಶ ಇತಿ ಹೋವಾಚ ಎಂಬ ಪರಿಹಾರವಾಕ್ಯದ; ಯತ್ = ಯಾವ ಕಾರಣದಿಂದ; ಸೋಪಾಧಿಕಂ = ಆಕಾಶವೆಂಬ ಉಪಾಧಿಯಿಂದ ಅವಚ್ಛಿನ್ನನಾದ; ವಾಕ್ಯಾಂತರತಃ = 'ಸ ಇಮಾನ್ ಲೋಕಾನಸೃಜತ' ಇತ್ಯಾದಿ ಬೇರೆ ವಾಕ್ಯದಿಂದ; ಆಪ ಇತಿ = 'ಅದ್ಭ್ಯಃ ಪೃಥಿವೀ' ಎಂಬ ಮಾತಿನಿಂದ;

**प्रकाशः – उत्तरस्येति ॥** ''आकाश इति होवाच'' इति परिहारस्येत्यर्थः । तथाऽपि कथमुत्तरस्य ब्रह्मपरत्वमित्यत आह – **अस्य लोकस्येति ॥** 'अस्य' इति न पृथिवीमात्रपरामर्शः, किन्तु ''जन्माद्यस्य'' इतिवत् प्रत्यक्षादिसिद्धस्य सर्वस्य । 'अस्य' इति परामर्शेन सर्वलोकगतिप्रश्ने तदनुरोधेनोत्तरे ब्रह्मैवाकाशपदवाच्य-मित्यर्थः ।

ननु रूढ्या परिहारस्याकाशपरत्वात्तदनुसारेण प्रश्नो नेतव्य इत्यत आह – **किञ्चेति ॥**

**त्यजेदेकं कुलस्यार्थे ग्रामस्यार्थे कुलं त्यजेत् ।**
**ग्रामं जनपदस्यार्थे आत्मार्थे पृथिवीं त्यजेत् ॥**

इति भारतोक्तन्यायेनेत्यर्थः ॥ **सोपाधिकमिति** ॥ आकाशरूपोपाध्यवच्छिन्नमित्यर्थः । अत्र प्रश्नानुसारेण प्रतिवचनस्य नयने प्राथम्यं हेतुत्वेन विवक्षितं, प्रश्नप्रतिवचनयोरेकविषयत्वं वा । आद्ये दोषमाह – **प्रथमेति** ॥ द्वितीये त्वाह – **प्रश्नेति** ॥ यदपि प्रश्नस्य सर्वलोकगतिविषयत्वात्तदनुरोधेनोत्तरं नेयमिति, तदपि नेत्याह – **किञ्चेति** ॥ 'सर्वनाम' 'अस्य' इति पदं, 'यत्' तस्मादित्यर्थः । 'तथा भवेत्' पृथिवीगतित्वेन भूताकाशपर एव भवेत् । पृथिव्याः प्रकृतत्वं विशदयन् श्लोकं व्याख्याति – **तथा हीति** ॥

छान्दोग्ये आद्येऽध्याये "त्रयो होद्गीथे कुशला बभूवुः शिलकः शालावत्यश्चैकितायनेयो दाल्भ्यः प्रवाहणो जैबिलिरिति । ते होचुः उद्गीथे वै कुशलास्स्मः हन्तोद्गीथे कथां वदामः" इत्युपक्रम्योच्यते शालावत्येन का साम्नो गतिरित्यादिप्रश्ने कृते "असौ लोक इति दाल्भ्य उवाच" इति । दाल्भ्येनोक्तमित्यर्थः । उपालब्धेन दाल्भ्येन अमुष्य लोकस्य का गतिरिति प्रश्ने कृते शालावत्यः 'अयं लोकः' इति पृथिवीलोकः सामाश्रय इत्युवाचेत्यर्थः ॥ 'ऊचे' इति "ब्रूञ् व्यक्तायां वाचि" इत्यस्य "ब्रुवो वचिः" इति वच्यादेशे रूपम् । तेनात्मनेपदं साधु । 'तं' शालावत्यमपि, उपालब्धेन शालावत्येनेत्यर्थः ।

ननु पृथिव्याः प्रस्तुतत्वेऽपि 'अस्य' इत्येतत्सर्वपदं किं न स्यादित्यत आह – **अस्येतीति** ॥

नवमाद्यपादे "लिङ्गविशेषनिर्देशात् समानविधानेष्वप्राप्ताः सारस्वती स्त्रीत्वात्" इति पञ्चदशोऽधिकरणे चिन्तितम् । ज्योतिष्टोमे सवनीयाः पशवः श्रुताः "आग्नेयमग्निष्टोम आलभेत ऐन्द्राग्नमुक्थ्ये द्वितीयम् ऐन्द्रं षोडशिनि तृतीयं सारस्वतीं मेषीं चतुर्थीमतिरात्रे" इति । तत्र "प्रास्मा अग्निं भरत" इति अध्रिगुवचनं मेष्यां भवत्युत नेति संशये, प्रकरणाविशेषात् "प्रास्मै पशवः" इति पशुत्वाभिप्रायेण स्त्रियामपि 'प्रास्मै' इति पुल्लिङ्गोपपत्तेश्चात्राप्यस्त्वध्रिगुवचनमिति प्राप्ते, प्रत्यक्षपशुशब्दाभावात् 'प्रास्मै' इति पुल्लिङ्गस्य प्रत्यक्षस्थितपुंपशौ कृतार्थत्वान्नास्ति

मेष्यामधिगुवचनमिति सिद्धान्त इति । तत्र यथा 'प्रास्मै' इति शब्दस्य प्रकृताजादिपरत्वं तथाऽत्रापीत्यर्थः ।

'अस्य' इत्यस्य पृथिवीपरत्वे प्रश्नायोगमाशङ्क्य निरस्यति – **नचेति** ॥ प्रसिद्धत्वं किं वेदादुत लोकतः?

आद्य आह – **सर्वेति** ॥ **वाक्यान्तरत इति** ॥ ''स इमान् लोकानसृजत'' इत्यादित इत्यर्थः ।

द्वितीय आह – **लोकत इति** ॥ प्रश्नस्य पृथिवीगतिमात्रपरत्वे बाधकान्याशङ्क्य निरस्यति – **नचेति** ॥ **आप इतीति** ॥ ''अद्भ्यः पृथिवी'' इति वचनादिति भावः ॥

**सर्वाणीति** ॥ पृथिवीकारणमात्रात् सर्वोत्पत्तेरभावादन्यस्यापि जनकत्वेनावधारणस्याप्ययोगादिति भावः । 'अन्योन्याश्रयात्' इत्युपलक्षणम् । अपां पृथिवीगतित्वेऽपि मूलकारणत्वाभिप्रायेणाकाशोक्तिसम्भवान्मूलकारणतोपपादनार्थमेव ''सर्वाणि ह वै'' इत्यादेरुपपत्तेः । सर्वपदस्य स्वव्यतिरिक्तसर्वपरत्वोपपत्तेः । नच तर्हि ''आत्मन आकाशः'' इत्यादेरात्मा वाच्य इति वाच्यम्, भूतविषयविचारे वियत एव वाच्यत्वात् । परम्परया भूतोपादानस्यापरस्याभावेनावधारणोपपत्तेश्चेत्यपि ध्येयम् ।

ವಿವರಣೆ - ಇಲ್ಲಿಯ ತನಕ ಸಿದ್ಧಾಂತದ ಪ್ರಕಾರ ಅಧಿಕರಣವನ್ನು ರಚಿಸಿದ್ದಾಯಿತು. ಈಗ ಅದ್ವೈತಿಗಳು ಹೇಳುವ ಅಧಿಕರಣಶರೀರವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ.

ಅದ್ವೈತಿಗಳ ಪ್ರಕಾರ 'ಅಸ್ಯಲೋಕಸ್ಯ ಕಾ ಗತಿಃ? ಆಕಾಶ ಇತಿ ಹೋವಾಚ' ಎಂಬುದು ವಿಷಯವಾಕ್ಯ. 'ಅಸ್ಯ ಲೋಕಸ್ಯ' ಎಂಬ ವಾಕ್ಯದಿಂದ ಕೇವಲ ಪೃಥಿವಿಗೆ ಆಶ್ರಯವನ್ನಷ್ಟೇ ಪ್ರಶ್ನಿಸಿಲ್ಲ; ಸಮಸ್ತಲೋಕಕ್ಕೆ ಯಾರು ಆಶ್ರಯವೆಂದು ಪ್ರಶ್ನಿಸಲಾಗಿದೆ. ಈ ಪ್ರಶ್ನೆಗೆ ಅನುಗುಣವಾಗಿಯೇ ಉತ್ತರ ನೀಡುವ ವಾಕ್ಯವನ್ನು ಅರ್ಥೈಸಬೇಕು. 'ಜನ್ಮಾದ್ಯಸ್ಯ' ಇತ್ಯಾದಿ ಸೂತ್ರಗಳಲ್ಲಿ ನಿರೂಪಿಸಿದಂತೆ ಪ್ರತ್ಯಕ್ಷಸಿದ್ಧವಾದ ಸಮಸ್ತ ಜಗತ್ತನ್ನು 'ಅಸ್ಯ' ಎಂಬ ಪದದಿಂದ ಪರಾಮರ್ಶಿಸಿ ಪ್ರಶ್ನಿಸಿದಾಗ ಅದಕ್ಕೆ ಅನುಗುಣವಾಗಿ ಬ್ರಹ್ಮನೆಂದೇ ಉತ್ತರಿಸಬೇಕು. ಆದ್ದರಿಂದ 'ಆಕಾಶ ಇತಿ ಹೋವಾಚ' ಎಂಬ ಉತ್ತರ ನೀಡುವ ವಾಕ್ಯದಲ್ಲಿರುವ ಆಕಾಶಪದದಿಂದ ಬ್ರಹ್ಮನೇ ವಾಚ್ಯನಾಗುತ್ತಾನೆ. ಈ ಎಲ್ಲ ವಿಷಯಗಳನ್ನು ಗ್ರಂಥಕಾರರು 'ಆಕಾಶ ಇತಿ' ಇತ್ಯಾದಿ ಗ್ರಂಥದಿಂದ ಅನುವಾದ ಮಾಡಿದ್ದಾರೆ. ಉತ್ತರ ನೀಡುವ

ವಾಕ್ಯದಲ್ಲಿರುವ ಆಕಾಶಶಬ್ದವು ಲೋಕರೂಢಿಯಿಂದ ಭೂತಾಕಾಶವನ್ನೇ ಹೇಳುತ್ತದೆ. ಇದಕ್ಕೆ ಅನುಗುಣವಾಗಿ ಪ್ರಶ್ನೆವಾಕ್ಯವನ್ನು ಯೋಜಿಸಬೇಕಲ್ಲವೇ? ಎಂಬ ಶಂಕೆಗೆ 'ಕಿಂಚ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಆಕಾಶಪದಕ್ಕೆ ಭೂತಾಕಾಶವೆಂದು ಮುಖ್ಯಾರ್ಥವಿರಬಹುದು. ಆದರೆ ಸಕಲ-ಜಗತ್ಕಾರಣತ್ವಾದಿಗಳನ್ನು ಕೂಡಿಸುವುದಕ್ಕೋಸ್ಕರ ಕೇವಲ ಒಂದು ಆಕಾಶಪದಕ್ಕೆ ಗೌಣಾರ್ಥವನ್ನು ಆಶ್ರಯಿಸಬೇಕಾಗುತ್ತದೆ. ಮಹಾಭಾರತದಲ್ಲಿ ಹೇಳಿದ ನ್ಯಾಯದಂತೆ ಇದೇನೂ ತಪ್ಪಾಗುವುದಿಲ್ಲ.

ತ್ಯಜೇದೇಕಂ ಕುಲಸ್ಯಾರ್ಥೇ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ ।
ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್ ॥

ಕುಲದ ಉದ್ಧಾರಕ್ಕೋಸ್ಕರ ದುಷ್ಟನಾದ ಒಬ್ಬನನ್ನು ಹೊರಹಾಕಬೇಕಾಗುತ್ತದೆ; ಗ್ರಾಮದ ಉದ್ಧಾರ-ಕ್ಕೋಸ್ಕರ ದುಷ್ಟವಾದ ಕುಲವನ್ನೇ ಬಿಡಬೇಕಾಗುತ್ತದೆ; ದೊಡ್ಡ ಪಟ್ಟಣದ ಉದ್ಧಾರಕ್ಕೋಸ್ಕರ ಸಣ್ಣಗ್ರಾಮ-ವನ್ನಾದರೂ ಬಿಟ್ಟರೆ ತಪ್ಪಿಲ್ಲ; ಆದರೆ ಆತ್ಮೋದ್ಧಾರಕ್ಕೋಸ್ಕರ ಸಮಸ್ತ ಭೂಲೋಕವನ್ನೇ ಬಿಡಬೇಕು.

-- ಇಷ್ಟು ಅದ್ವೈತಿಗಳ ಸಿದ್ಧಾಂತ.

ಅದ್ವೈತಿಗಳ ಈ ಅಧಿಕರಣಶರೀರ ಸರಿಯಿಲ್ಲ. ಅದ್ವೈತಿಗಳು ಉಪಕ್ರಮಕ್ಕೆ ಪ್ರಾಬಲ್ಯವನ್ನು ಅಂಗೀಕರಿಸಿ ಪ್ರಶ್ನೆಗೆ ಅನುಗುಣವಾಗಿ ಉತ್ತರವಾಕ್ಯವನ್ನು ಕೊಂಡೊಯ್ಯಬೇಕೆಂದು ವಾದಿಸಿದರು. ಇವರ ಅಭಿಪ್ರಾಯವೇನು? ಪ್ರಶ್ನೆವಾಕ್ಯವು ಉಪಕ್ರಮದಲ್ಲಿದೆ ಎಂಬ ಕಾರಣದಿಂದಲೇ ಉತ್ತರವಾಕ್ಯವನ್ನು ಪ್ರಶ್ನೆ ವಾಕ್ಯಕ್ಕೆ ಅನುಗುಣವಾಗಿ ಯೋಜಿಸಬೇಕೆಂದೋ ಅಥವಾ ಪ್ರಶ್ನೆ ಹಾಗೂ ಉತ್ತರವಾಕ್ಯಗಳಿಗೆ ಏಕವಿಷಯತ್ವವಿರಬೇಕೆಂದೋ? ಮೊದಲನೆಯ ಪಕ್ಷವನ್ನು 'ಪ್ರಥಮಾನುಸಾರೇಣ' ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ. ಹಿಂದಿನ ಅಂತಃಸ್ಥತ್ವಾಧಿಕರಣದಲ್ಲಿ ಅದ್ವೈತಿಗಳು 'ಯ ಏಷಃ ಅಂತರಾದಿತ್ಯೇ ಹಿರಣ್ಮಯಃಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುಃ ಹಿರಣ್ಯಕೇಶಃ' ಇತ್ಯಾದಿಯಾಗಿ ಪ್ರಾರಂಭಿಸಿ 'ಯ ಏಷು ಅಂತರಕ್ಷಿಣಿ ಪುರುಷೋ ದೃಶ್ಯತೇ' ಎಂಬಲ್ಲಿಯ ತನಕ ಇರುವ ಶ್ರುತಿಯು ಪರಮಾತ್ಮನನ್ನೇ ಪ್ರತಿಪಾದಿಸುತ್ತದೆಂದು ಸಿದ್ಧಾಂತ ಮಾಡಿದ್ದಾರೆ. ಈಗ ಉಪಕ್ರಮದಂತೆ ಉಪಸಂಹಾರವನ್ನು ಅಂಗೀ-ಕರಿಸಬೇಕೆಂದು ಹೇಳುವುದಾದರೆ ಅಲ್ಲಿಯೂ ಕೂಡ ಹಿರಣ್ಯಶ್ಮಶ್ರುತ್ವಾದಿಗಳನ್ನು ಅನುಸರಿಸಿ, ಉಪ-ಸಂಹಾರದಲ್ಲಿ ಶ್ರುತವಾದ ಪಾಪರಾಹಿತ್ಯವನ್ನು ಜೀವನಲ್ಲಿ ಹೇಗಾದರೂ ಮಾಡಿ ಯೋಜಿಸಬೇಕಾಗುತ್ತದೆ.

ಎರಡನೆ ಪಕ್ಷವನ್ನು 'ಪ್ರಶ್ನೋತ್ತರಯೋಃ' ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ. ಪ್ರಶ್ನೆಯು ಸರ್ವಲೋಕಗತಿವಿಷಯಕವಾಗಿದೆ. ಅದಕ್ಕೆ ಅನುಸಾರಿಯಾಗಿ ಉತ್ತರವಾಕ್ಯವನ್ನು ಸರ್ವಲೋಕಗತಿ-ವಿಷಯಕವೆಂದೇ ಹೇಳಬೇಕೆಂಬ ವಿಚಾರವನ್ನು ಅಂಗೀಕರಿಸಿ ಇಲ್ಲಿಯ ತನಕ ನಿರಾಕರಿಸಿದರು. ಮುಂದೆ 'ಕಿಂಚ' ಇತ್ಯಾದಿ ಗ್ರಂಥದಿಂದ ಪ್ರಶ್ನೆಯು ಸರ್ವಲೋಕಗತಿವಿಷಯಕವೇ ಆಗುವುದಿಲ್ಲವೆಂದು ನಿರಾಕರಿಸುತ್ತಿದ್ದಾರೆ. ಶ್ಲೋಕದಲ್ಲಿ ಹೇಳಿದ್ದನ್ನು 'ತಥಾ ಹಿ' ಇತ್ಯಾದಿ ಗ್ರಂಥದಿಂದ ಸ್ವತಃ ಗ್ರಂಥಕಾರರೇ ವ್ಯಾಖ್ಯಾನಿಸುತ್ತಿದ್ದಾರೆ.

ಛಾಂದೋಗ್ಯದ ಮೊದಲನೆಯ ಅಧ್ಯಾಯದಲ್ಲಿ "ತ್ರಯೋ ಹೋದ್ಗೀಥೇ ಕುಶಲಾ ಬಭೂವುಃ ಶಿಲಕಃ ಶಾಲಾವತ್ಯಃ, ಚೈಕಿತಾಯನೇಯೋ ದಾಲ್ಭ್ಯಃ, ಪ್ರವಾಹಣೋ ಜೈಬಿಲಿರಿತಿ । ತೇ ಹೋಚುರುದ್ಗೀಥೇ

ವೈ ಕುಶಲಾಃ ಸ್ಮಃ । ಹಂತೋದ್ಗೀಥೇ ಕಥಾಂ ವದಾಮಃ'' (ಶಾಲಾವತಿಯ ಮಗನಾದ ಶಿಲಕ, ಚಿಕಿತಾಯನನ ಮಗನಾದ ದಾಲ್ಭ್ಯ, ಜಿಬಿಲನ ಮಗ ಪ್ರವಾಹಣ ಎಂಬ ಮೂರು ಜನ ಉದ್ಗೀಥನಾಮಕ ಪರಮಾತ್ಮನ ವಿಷಯದಲ್ಲಿ ವಿದ್ವಾಂಸರಾಗಿದ್ದರು. ಅವರು ತಮ್ಮೊಳಗೆ ಪರಸ್ಪರ ಮಾತನಾಡಿಕೊಂಡರು. 'ನಾವು ಉದ್ಗೀಥನ ವಿಷಯದಲ್ಲಿ ವಿದ್ವಾಂಸರಾಗಿದ್ದೇವೆ. ಆದ್ದರಿಂದ ಉದ್ಗೀಥನ ವಿಷಯದಲ್ಲಿ ವಿಚಾರ-ಗೋಷ್ಠಿ ನಡೆಸೋಣ' ಇತೀತ್ಯುಪಕ್ರಮ್ಯೋಚ್ಯತೇ ಶಾಲಾವತ್ಯೇನ ''ಕಾ ಸಾಮ್ನೋ ಗತಿಃ'' ಇತ್ಯಾದಿಪ್ರಶ್ನೇ ಕೃತೇ ಶಾಲಾವತ್ಯಃ ''ಅಯಂ ಲೋಕ ಇತಿ ಅಸೌ ಲೋಕ ಇತಿ ದಾಲ್ಭ್ಯ ಉವಾಚೇತಿ''

ಪ್ರಶ್ನೆ - ಗ್ರಂಥಕಾರರು 'ಊಚೇ' ಎಂಬ ಆತ್ಮನೇಪದಪ್ರಯೋಗ ಮಾಡಿದ್ದಾರೆ. ಆದರೆ 'ವಚ ಪರಿಭಾಷಣೇ' ಎಂಬ ಧಾತುವಿಗೆ ಆತ್ಮನೇ ಪದದಲ್ಲಿ ಪ್ರಯೋಗವೇ ಇಲ್ಲ. ಆದ್ದರಿಂದ ಈ ಪ್ರಯೋಗವು ವ್ಯಾಕರಣವಿರುದ್ಧವಲ್ಲವೇ?

ಉತ್ತರ - 'ವಚ ಪರಿಭಾಷಣೇ' ಧಾತುವಿನ ರೂಪವಾಗಿದ್ದರೆ ನಿಮ್ಮ ಪ್ರಶ್ನೆಯು ಸರಿಯಾಗುತ್ತಿತ್ತು. ಆದರೆ ಇದು 'ಬ್ರೂಞ್ ವ್ಯಕ್ತಯಾಂ ವಾಚಿ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. 'ಬ್ರೂ'ಧಾತುವಿಗೆ 'ಬ್ರುವೋ ವಚಿ' ಎಂಬ ಸೂತ್ರದಿಂದ 'ವಚಿ' ಎಂಬ ಆದೇಶ ಬಂದಿದೆ. ಬ್ರೂಞ್ ಧಾತುವು ಪರಸ್ಮೈಪದ ಹಾಗೂ ಆತ್ಮನೇಪದ ಎರಡರಲ್ಲಿಯೂ ಇರುವುದರಿಂದ ಪ್ರಕೃತ ಗ್ರಂಥಕಾರರು ಮಾಡಿದ 'ಊಚೇ' ಎಂಬ ಆತ್ಮನೇಪದ ಪ್ರಯೋಗವು ವ್ಯಾಕರಣವಿರುದ್ಧವಾಗಿಲ್ಲ.

ಪೃಥಿವಿಯು ಹಿಂದೆ ಪ್ರಸ್ತುತವಾದ್ದರಿಂದ ಅಸ್ಯ ಎಂಬ ಸರ್ವನಾಮಶಬ್ದದಿಂದ ಪೃಥಿವಿಯನ್ನೇ ಪರಾಮರ್ಶಿಸಬೇಕು ಹೊರತು ಸಮಸ್ತಜಗತ್ತನ್ನು ಪರಾಮರ್ಶಿಸಬಾರದಲ್ಲವೇ? ಎಂಬ ಪ್ರಶ್ನೆಗೆ ಗ್ರಂಥಕಾರರು 'ಅಸ್ಯ ಇತಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

## 'ಸಾರಸ್ವತ್ಯಾಂ ಮೇಷ್ಯಾಂ ಮಧ್ರಿಗುವಚನಾಭಾವಾಧಿಕರಣಮ್

## 'ಲಿಂಗವಿಶೇಷನಿರ್ದೇಶಾತ್ ಸಮಾನವಿಧಾನೇಷ್ವಪ್ರಾಪ್ತಿಃ ಸಾರಸ್ವತೀ ಸ್ತ್ರೀತ್ವಾತ್' (೯-೧-೧೫)

ಜ್ಯೋತಿಷ್ಟೋಮದಲ್ಲಿ ಸಂಸ್ಥಾಭೇದದಿಂದ ಆಹುತಿನೀಡಬೇಕಾದ ಪಶುಗಳು ಅನೇಕ ಕೇಳಿಸುತ್ತಿವೆ. 'ಆಗ್ನೇಯಮಗ್ನಿಷ್ಟೋಮ ಆಲಭತೇ । ಐಂದ್ರಾಗ್ನಮುಕ್ಥೇ ದ್ವಿತೀಯಮ್ । ಐಂದ್ರಂ ವೃಷ್ಣಿಂ ಷೋಡಶಿನಿ ತೃತೀಯಮ್ । ಸಾರಸ್ವತೀಂ ಮೇಷೀಂ ಚತುರ್ಥೀಮತಿರಾತ್ರೇ ।' -- ಅಗ್ನಿಷ್ಟೋಮವೆಂಬ ಇಷ್ಟಿಯಲ್ಲಿ ಅಗ್ನಿಯನ್ನು ಉದ್ದೇಶಿಸಿ ಅಜವೆಂಬ ಪಶುವನ್ನು ಆಲಂಭನ ಮಾಡಬೇಕು. ಉಕ್ಥ್ಯ ಎಂಬ ಇಷ್ಟಿಯಲ್ಲಿ ಇಂದ್ರಾಗ್ನಿಯನ್ನು ಉದ್ದೇಶಿಸಿ ಎರಡನೆಯ ಪಶುವನ್ನು ಆಲಂಭನ ಮಾಡಬೇಕು. ಐಂದ್ರ ಮತ್ತು ವೃಷ್ಣಿಯನ್ನು ಉದ್ದೇಶಿಸಿ ಷೋಡಶಿ ಎಂಬ ಇಷ್ಟಿವಿಶೇಷದಲ್ಲಿ ಮೂರನೆಯ ಪಶುವನ್ನು ಆಲಂಭನ ಮಾಡಬೇಕು. ಅತಿರಾತ್ರ ಎಂಬ ಇಷ್ಟಿವಿಶೇಷದಲ್ಲಿ ಹೆಣ್ಣು ಮೇಕೆಯನ್ನು ನಾಲ್ಕನೆಯದ್ದಾಗಿ ಆಲಂಭನ ಮಾಡಬೇಕು - ಎಂದು.

ಮುಖ್ಯ ಋತ್ವಿಜನಾದ ಅಧ್ವರ್ಯುವು ಅವಾಂತರ ಋತ್ವಿಜನಾದ ಅಧ್ರಿಗು ಎಂಬುವನನ್ನು ಕುರಿತು ಮಂತ್ರವನ್ನು ಹೇಳುತ್ತಾನೆ. ಅದನ್ನು ಅಧ್ರಿಗುಪ್ರೈಷಮಂತ್ರವೆನ್ನುತ್ತಾರೆ. 'ಪ್ರಾಸ್ಮಾ ಅಗ್ನಿಂ ಭರತ'

(ಪಶುವಿಗೋಸ್ಕರ ಅಗ್ನಿಯನ್ನು ಜ್ವಲಿಸಿರಿ ಎಂದು ಅಧ್ರಿಗುಪ್ರೈಷಮಂತ್ರದ ಅಭಿಪ್ರಾಯ.) ಈ ಪ್ರೈಷಮಂತ್ರವು ಅಜಾದಿ ಮೂರು ಪ್ರಾಣಿಗಳ ವಿಷಯದಲ್ಲಿ ಸಂಬಂಧ ಪಡುತ್ತದೆ. ನಾಲ್ಕನೆಯ ಹೆಣ್ಣು ಮೇಕೆಯಲ್ಲಿ ಸಂಬಂಧಪಡುತ್ತದೋ ಇಲ್ಲವೋ? ಎಂದು ಸಂದೇಹ. ಹೆಣ್ಣು ಮೇಕೆಗೂ ಸಂಬಂಧಿಸಿದೆಯೆಂದು ಪೂರ್ವಪಕ್ಷ. ಏಕೆಂದರೆ ಪಶುಧರ್ಮಗಳು ಹೆಣ್ಣು ಹಾಗೂ ಗಂಡು ಎರಡೂ ಪಶುಗಳಲ್ಲಿ

---

भाट्टसङ्ग्रहः –

**लिङ्गविशेषनिर्देशात्समानविधानेष्वप्राप्ता सारस्वती स्त्रीत्वात् ॥ ४४ ॥**
**(पश्वभिधानाद्वा तद्धि चोदनाभूतं पुंविषयं पुनः पशुत्वम् ॥ ४५ ॥ विशेषो वा तदर्थनिर्देशात् ॥ ४६ ॥ पशुत्वञ्चैकशब्द्यात् ॥ ४७ ॥ यथोक्तं वा सन्निधानात् ॥ ४८॥ )**

अत्रापि पूर्वन्यायेन शङ्कनात्सङ्गतिः । ज्योतिष्टोमे संस्थाभेदेन सवनीयाः पशवः पूर्वपूर्वसाहित्येनोत्तरोत्तरवृद्ध्या नाना श्रूयन्ते । ''आग्नेयमजमग्निष्टोम आलभते । ऐन्द्राग्नमुक्थ्ये द्वितीयम् । ऐन्द्रं वृष्णिं षोडशिनि तृतीयम् । सारस्वतीं मेषीं चतुर्थीमतिरात्रे'' इति । तत्र ''दैव्याः शमितारः आरभध्वम् । उत मनुष्याः । उपनयत मेध्यादुर आशासाना मेधपतिभ्यां मेघम् । पास्मा अग्निं भरता'' इत्यध्रिगुशब्दित-शमितॄन् प्रत्युच्यमानमध्रिगुप्रैषवचनमिदमजादिषु त्रिषु प्रवर्तमानं मेष्यां चतुर्थ्यामपि प्रवर्तते, अथ नेति **सन्देहे,** प्रवर्तत इति **प्राप्तम्** । कुतः? पशुधर्माणां सर्वपशु-साधारण्यात्संस्थानामपि समानविधानत्वात् सर्वनाम्नः सन्निहितपरत्वेन प्रकरण-सन्निधापितमेषीपरत्वस्याप्यध्रिगुवचनान्तर्गतास्मैशब्दस्य न्याय्यत्वात् । नच पुल्लिङ्ग-विरोधः । पशुशब्दाध्याहारेण पूर्वत्र त्रिवत्से साण्डे ''तस्यै शृतम्'' इत्यादेरिव ''प्रास्मै पशवः'' इति मेष्यामप्युक्तर्चविरोधादिति । **सिद्धान्तस्तु,** स्यादेवं पशुशब्दश्रवणे मेष्यामपि प्रवृत्तिर्वचनस्य । न चात्र पशुशब्दोस्ति । प्रयोगवेलायां प्रत्यक्ष-सन्निहिताजादिपरत्वेन ''अस्मै'' इति शब्द उपपन्नः सन्न मेष्यां स्त्रियां लिङ्गविरोधात् प्रवर्तते । कल्पकाभावान्नाध्याहार इति । तदाह सूत्रे, **समानविधानेषु** पशुषु **सारस्वती मेषी स्त्रीत्वा**दध्रिगुवचनमप्राप्तेति । **फलन्तु** मेष्यामध्रिवचनाप्रवृत्तिरिति व्यक्तम् ।

इदं तु कृत्वाचिन्तया प्रवृत्तम् । **तुल्यः सर्वेषां पशुविधिरिति** सूत्रे पशुधर्माणामग्नीषोमीयार्थत्वस्य **संस्थास्तु समानविधाना** इति संस्थानामग्निष्टोम-संस्थाविकृतित्वस्य तार्तीयषष्ठपादेऽभिधशनेनाग्नीषोमीयः सवनीयस्य प्रकृतिरित्य-ष्टमाद्यपादे **दैक्षस्य चेतरेषु** इति सूत्रेऽभिधानेन च समानविधित्वाभावेन पश्वन्तरेषूहेन प्रवृत्तिसिद्धेरिति ध्येयम् ।

इत्यष्टादशं सारस्वत्यां मेष्यामध्रिगुवचनाभावाधिकरणम् (४४ - ४८)

ಪರಿಪೂರ್ಣಚಂದ್ರಿಕಾ

ಸಾಧಾರಣವಾಗಿರುತ್ತದೆ. ಮತ್ತು ವಿಧಿವಾಕ್ಯಗಳಲ್ಲಿಯೂ ಕೂಡ ಲಿಂಗವನ್ನು ನಿರ್ದೇಶಿಸದೇ ಏಕಪ್ರಕಾರದಲ್ಲಿ ನಿರ್ದೇಶಿಸಲಾಗಿದೆ. 'ಅಸ್ಯೈ' ಎಂಬ ಸರ್ವನಾಮವೂ ಕೂಡ ಮೊದಲು ಸನ್ನಿಹಿತವಾದ ಸ್ತ್ರೀಪಶುವನ್ನು ಅನುಕರ್ಷಿಸುತ್ತದೆ. ಹಾಗಾಗಿ ಅಧ್ರಿಗುವಚನದಲ್ಲಿರುವ ಅಸ್ಯೈಶಬ್ದದಿಂದ ನಾಲ್ಕೂ ಪಶುಗಳನ್ನು ವಿವಕ್ಷಿಸಬೇಕು. ಸ್ತ್ರೀಲಿಂಗಪದವನ್ನು 'ಅಸ್ಯೈ' ಎಂಬ ಪುಲ್ಲಿಂಗಶಬ್ದದಿಂದ ಅನುಕರ್ಷಿಸುವುದು ಹೇಗೆ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಪುಲ್ಲಿಂಗವಾದ ಪಶುಶಬ್ದವನ್ನು ಅಧ್ಯಾಹಾರ ಮಾಡಿದಾಗ ಸಮಸ್ಯೆ ಪರಿಹಾರವಾಗುತ್ತದೆ.

ಸಿದ್ಧಾಂತ - ಪ್ರತ್ಯಕ್ಷವಾಗಿ ಪಶುಶಬ್ದವು ಕಾಣಿಸುತ್ತಿಲ್ಲ. ಮತ್ತು ಪುಲ್ಲಿಂಗದಲ್ಲಿರುವ ಮೂರು ಪಶುಗಳೂ ಪ್ರತ್ಯಕ್ಷವಾಗಿವೆ. ಆ ಮೂರನ್ನೇ ಸುಲಭವಾಗಿ ಅನುಕರ್ಷ ಮಾಡಲು ಬರುವಾಗ ಸ್ತ್ರೀಪಶುವನ್ನು ಅನುಕರ್ಷ ಮಾಡುವ ಅಗತ್ಯವಿಲ್ಲ. ಮತ್ತು ಸ್ತ್ರೀವಾಚಕವಾದ್ದರಿಂದ ಅನುಕರ್ಷ ಮಾಡಲೂ ಸಾಧ್ಯವಿಲ್ಲ. ಹೀಗೆ ಲಿಂಗವಿರೋಧವಿರುವುದರಿಂದಲೇ ಸ್ತ್ರೀಪಶುವನ್ನು ಬಿಟ್ಟು ಉಳಿದ ಮೂರು ಪಶುಗಳ ವಿಷಯದಲ್ಲಷ್ಟೇ ಪ್ರೈಷಮಂತ್ರವು ಉಪಯುಕ್ತವಾಗುತ್ತದೆ. 'ಪ್ರಾಸ್ಮೈ' ಎಂಬಲ್ಲಿರುವ ಸರ್ವನಾಮವಾಚಕವಾದ ಅಸ್ಮೈ ಎಂಬ ಪುಲ್ಲಿಂಗಶಬ್ದದಿಂದ ಪೂರ್ವಪ್ರಕೃತವಾದ ಅಜಾದಿ ಮೂರು ಪ್ರಾಣಿಗಳನ್ನು ಅನುಕರ್ಷಿಸುವುದು ಅತ್ಯಂತ ಸೂಕ್ತ.

ಪೂರ್ವಮೀಮಾಂಸೆಯ ಈ ಅಧಿಕರಣದಲ್ಲಿ ಸರ್ವನಾಮಶಬ್ದದಿಂದ ಪೂರ್ವಪ್ರಕೃತವಾದದ್ದನ್ನೇ ಅನುಕರ್ಷಿಸಬೇಕೆಂದು ಸಿದ್ಧಾಂತ ಮಾಡಲಾಗಿದೆ. ಆದರಂತೆ ಪ್ರಕೃತದಲ್ಲಿಯೂ ಕೂಡ 'ಅಸ್ಯ' ಎಂಬ ಸರ್ವನಾಮಶಬ್ದದಿಂದ ಪೂರ್ವಪ್ರಕೃತವಾದ ಪೃಥಿವೀಲೋಕವನ್ನೇ ಪರಾಮರ್ಶಿಸಬೇಕು; ಹೊರತು ಸರ್ವನಾಮಶಬ್ದವೆಂದು ಪೂರ್ವಪ್ರಸಕ್ತವಾಗದ ಸಮಸ್ತ ಜಗತ್ತನ್ನು ಅನುಕರ್ಷಿಸುವುದು ತಪ್ಪು.

'ಅಸ್ಯ' ಎಂಬ ಸರ್ವನಾಮಶಬ್ದದಿಂದ ಕೇವಲ ಪೃಥಿವಿಯನ್ನು ಅನುಕರ್ಷ ಮಾಡುವುದಾದರೆ ಪ್ರಶ್ನೆಯೇ ಕೂಡುವುದಿಲ್ಲವಲ್ಲ? ಎಂಬ ಶಂಕೆಯನ್ನು 'ನಚ' ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ನೀರು ಪೃಥಿವಿಗೆ ಕಾರಣವೆಂದು ವೇದದಿಂದ ಸಿದ್ಧವಾಗಿದೆಯೋ ಅಥವಾ ಲೋಕದಿಂದ ಸಿದ್ಧವಾಗಿದೆಯೋ? ಮೊದಲನೆಯ ಪಕ್ಷಕ್ಕೆ 'ಸರ್ವಲೋಕ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಎರಡನೆಯ ಪಕ್ಷಕ್ಕೆ 'ಲೋಕತಃ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಒಂದು ವೇಳೆ ಪ್ರಶ್ನೆವಾಕ್ಯವು ಪೃಥಿವಿಗತಿಯನ್ನಷ್ಟೇ ವಿಷಯೀಕರಿಸುವುದಾದರೆ ಅನೇಕ ಬಾಧಕಗಳನ್ನು ಆಶಂಕಿಸಿ 'ನಚ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ. ಪೃಥಿವಿಗೆ ಯಾವುದು ಕಾರಣವಾಗಿದೆಯೋ ಆ ಕಾರಣದಿಂದ ಕೇವಲ ಪೃಥಿವಿಯು ಹುಟ್ಟುತ್ತದೆ ಹೊರತು ಸಮಸ್ತ ಜಗತ್ತು ಹುಟ್ಟಲಾರದು. ಆದ್ದರಿಂದ ಸರ್ವಪದವು ತಪ್ಪಾಗುತ್ತದೆ. ಮತ್ತು ಪೃಥಿವಿಗೆ ಕಾರಣವಾದದ್ದು ಆಕಾಶದ ಜೊತೆಗೆ ಇನ್ನೂ ಕೆಲವು ಇರುವುದರಿಂದ ಏವಕಾರವು ತಪ್ಪಾಗುತ್ತದೆ.

ಗ್ರಂಥಕಾರರು ಹೇಳಿದ ಅನ್ಯೋನ್ಯಾಶ್ರಯದೋಷವು ಕೇವಲ ಉಪಲಕ್ಷಣವಾಗಿದೆ -- ನೀರು ಪೃಥಿವಿಗೆ ಕಾರಣವಾಗಿರಬಹುದು. ಆದರೆ ಪೃಥಿವಿಗೆ ಮೂಲಕಾರಣವಾದದ್ದು ಆಕಾಶವಾಗಿದೆ. ಮೂಲಕಾರಣವನ್ನು ಹೇಳುವ ಉದ್ದೇಶದಿಂದ 'ಸರ್ವಾಣಿ ಹ ವಾ' ಇತ್ಯಾದಿ ವಾಕ್ಯಗಳೆಲ್ಲವೂ ಹೊರಟಿವೆ.

ಇಲ್ಲಿರುವ ಸರ್ವಪದದಿಂದ ಆಕಾಶವನ್ನು ವಿವಕ್ಷಿಸಬೇಕೆಂಬ ನಿಯಮವಿಲ್ಲ. ಆಕಾಶವನ್ನು ಬಿಟ್ಟು ಉಳಿದ ಭೂತಪದಾರ್ಥಗಳನ್ನು ವಿವಕ್ಷಿಸಬಹುದು. ಆದ್ದರಿಂದ ಪೃಥಿವೀಗತಿಯ ಬಗ್ಗೆ ಪ್ರಶ್ನೆ ಮಾಡಿದರೆ ಏನು ತಪ್ಪು? ಹಾಗಾದರೆ 'ಆತ್ಮನಃ ಆಕಾಶಃ ಸಂಭೂತಃ' ಎಂಬ ಮಾತಿರುವುದರಿಂದ ಮೂಲಕಾರಣನಾದ ಆತ್ಮನನ್ನು ಹೇಳಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಕೇವಲ ಭೂತಪದಾರ್ಥಗಳ ವಿಷಯದಲ್ಲಷ್ಟೇ ಕಾರ್ಯಕಾರಣಭಾವವನ್ನು ಶ್ರುತಿಯು ಹೇಳುತ್ತದೆ. ಪೃಥಿವಿ ಎಂಬ ಭೂತಪದಾರ್ಥಕ್ಕೆ ಆಕಾಶವೆಂಬ ಭೂತಪದಾರ್ಥವು ಮೂಲ ಉಪಾದಾನಕಾರಣವಾಗಿದೆ ಹೊರತು ಬೇರೆ ಯಾವುದೂ ಮೂಲ-ಕಾರಣವಲ್ಲ. ಈ ಅಭಿಪ್ರಾಯದಿಂದಲೇ ಏವಕಾರವನ್ನು ಶ್ರುತಿಯು ಹೇಳಿದೆ.

**गुरुराजीयम्** – ननु प्रश्नोप्याकाशपर एवास्त्वित्यत आह – **अस्येति** ॥ प्रत्यक्षादिसिद्धस्येत्यर्थः । ननु प्रश्नोत्तरयोरेकविषयता प्रश्नानुसारेणोत्तरव्याख्यान इवोत्तरानुसारेण प्रश्नव्याख्याने सम्भवत्येवेति सन्देह एव स्यात् । न तु निश्चय इत्यरुचेराह – **किञ्चेति** ॥

ननु प्रकृतपृथिवीलोकगतिरेव पृष्टेत्ययुक्तम् । तथासत्यस्येत्यनुपपन्नं स्यात् । एतच्छब्दस्य दृश्यमानसर्वप्रपञ्चविषयत्वादित्यत आह – **अस्येति** ॥ सर्वशब्दः पृथिवीमात्रपरः स्यादिति ॥ पार्थिवकार्यबहुत्वाद्बहुवचनाद्युपपत्तेरिति भावः । प्रसिद्धत्वं किं श्रुतितः किं वा लोकतः? नाद्य इत्याह – **सर्वेति** ॥ न द्वितीय इत्याह – **लोकत इति** ॥ **नन्वेवं प्रश्नस्य** पृथिवीमात्रविषयत्वे परिहार-वाक्यानुपपत्तिरित्याशङ्क्य निषेधति – **नचेति** ॥ **अन्योन्याश्रयादिति** ॥

नच सर्वाणि ह वा इमानि भूतानीत्युत्तरवाक्यबलेन प्रश्नवाक्यं व्याख्याय तदनुरोधेनाकाश इति होवाचेति प्रतिवचनवाक्यं व्याख्यायत इति नान्योन्याश्रय इति वाच्यम् । अनुपसञ्जातविरोधिनः पूर्वस्य व्याख्यानायोत्तरानुसरणे उत्तरेण मध्यस्थस्याकाश इति होवाचेत्यस्यैव व्याख्याने लाघवात् । स्वन्यायविरोधा-पत्तेः ।

## ಸಾರ

ಅದ್ವೈತ ಹಾಗೂ ವಿಶಿಷ್ಟಾದ್ವೈತಮತಗಳ ವಿಮರ್ಶೆಯನ್ನು ಮಾಡುತ್ತಾರೆ. ಅದ್ವೈತಿಗಳು ಮತ್ತು ವಿಶಿಷ್ಟಾದ್ವೈತಿಗಳು ಇಬ್ಬರೂ ಹೀಗೆ ಹೇಳುತ್ತಾರೆ - ಈ ಅಧಿಕರಣದಲ್ಲಿ 'ಆಕಾಶ ಇತಿ ಹೋವಾಚ' ಎಂಬಲ್ಲಿ ಬಹುಕಾಲದಿಂದ ಭೂತಾಕಾಶದಲ್ಲಿ ಲೋಕ ಪ್ರಸಿದ್ಧವಾದ ಆಕಾಶ ಪದವು ಮೊದಲಿರುವುದರಿಂದ

ಅದಕ್ಕನುಸಾರಿಯಾಗಿ ಕೊನೆಯಲ್ಲಿರುವ 'ಸರ್ವಕಾರಣತ್ವ' ಮೊದಲಾದ ಲಿಂಗಗಳನ್ನು ಹೇಗಾದರೂ ಅರ್ಥೈಸ-ಬೇಕು ಎಂದು ಪೂರ್ವಪಕ್ಷ ಮಾಡಿ. ಉತ್ತರ ವಾಕ್ಯದಲ್ಲಿ ಆಕಾಶ ಪದವು ಮೊದಲು ಶ್ರುತವಾಗಿದ್ದರೂ, ಮೊದಲು ಶ್ರುತವಾದ ಪ್ರಶ್ನೆಗೆ ಅನುಸಾರವಾಗಿ ನಂತರದಲ್ಲಿರುವ ಉತ್ತರವನ್ನು ಕೊಡುವ ವಾಕ್ಯದಲ್ಲಿರುವ ಆಕಾಶ ಪದವನ್ನು ವ್ಯಾಖ್ಯಾನಿಸಬೇಕಾದ್ದರಿಂದ, 'ಅಸ್ಯಲೋಕಸ್ಯ ಕಾ ಗತಿಃ' ಎಂದು ಸಕಲಪ್ರಪಂಚಕ್ಕೆ ಯಾರು ಕಾರಣ? ಎಂಬ ಪ್ರಶ್ನೆಗೆ ಅನುಗುಣವಾದ ಉತ್ತರನೀಡುವ ಆಕಾಶ ಪದವನ್ನು ಹೇಳಿದಾಗ ಭೂತಾಕಾಶವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಭೂತಾಕಾಶವೂ ಪ್ರಪಂಚದಲ್ಲಿ ಸೇರಿದೆ. ಮತ್ತು ರೂಢಿಯಿಂದ ಭೂತಾಕಾಶದ ಪ್ರಾಪ್ತಿಯಿದ್ದರೂ 'ಸರ್ವಕಾರಣತ್ವ ಮುಂತಾದ ಅನೇಕ ಲಿಂಗಗಳ ಅನುಕೂಲಕ್ಕಾಗಿ 'ತ್ಯಜೇದೇಕಂ ಕುಲಸ್ಯಾರ್ಥೇ' ಎಂಬ ನ್ಯಾಯಾನುಸಾರವಾಗಿ ಆಕಾಶಪದಕ್ಕೆ ರೂಢಿಯನ್ನು ಬಿಟ್ಟು ಲಕ್ಷಣಾದಿವೃತ್ತಿಯಿಂದ ಸೋಪಾಧಿಕ ಬ್ರಹ್ಮನೇ ಅರ್ಥ-ವಾಗಿದ್ದಾನೆಂದು ಹೇಳಬೇಕು. ಹೀಗೆ ಸಿದ್ಧಾಂತ ಮಾಡುತ್ತಾರೆ.

ಆದರೆ ಇದು ಉಚಿತವಲ್ಲ. ಪ್ರಾರಂಭಕ್ಕೆ ಅನುಸಾರಿಯಾಗಿ ಕೊನೆಯಲ್ಲಿರುವುದಕ್ಕೆ ಅರ್ಥೈಸಬೇಕು ಎನ್ನುವುದಾದರೆ ಹಿಂದಿನ ಅಧಿಕರಣದಲ್ಲೂ ಹೀಗೆ ಜೀವನೆಂದೇ ಸಿದ್ಧಾಂತ ಮಾಡಬೇಕಾಗುತ್ತದೆ.

ಹಾಗೆಯೆ ಈ ಪ್ರಶ್ನೆಯು ಸರ್ವಲೋಕ ಗತಿವಿಷಯಕವಾದದ್ದು ಎನ್ನುವುದೂ ಸರಿಯಲ್ಲ. ಪ್ರಶ್ನೆವಾಕ್ಯದಲ್ಲಿ 'ಅಸ್ಯ' ಎಂಬ ಸರ್ವನಾಮದಿಂದ ಪೃಥಿವಿಯನ್ನೇ ಇಟ್ಟುಕೊಳ್ಳಬೇಕು ಹೊರತು 'ಸರ್ವಪ್ರಪಂಚವನ್ನಲ್ಲ'.

ಪೃಥಿವಿಯನ್ನು ಮಾತ್ರ 'ಅಸ್ಯ' ಪದದಿಂದ ಸ್ವೀಕರಿಸಿದರೆ ಪೃಥಿವಿಗೆ ಜಲವು ಕಾರಣವೆಂಬುದು ಲೋಕ-ಪ್ರಸಿದ್ಧವಾದ್ದರಿಂದ ಪ್ರಶ್ನೆಯೇ ವ್ಯರ್ಥವೆಂದರೆ ಸಕಲ ಪ್ರಪಂಚಕ್ಕೂ ಕಾರಣ ಭಗವಂತನೆಂದು ಬೇರೆ ಶ್ರುತಿಗಳಿಂದ ತಿಳಿಯುವುದರಿಂದ ನೀವು ಹೇಳುವುದೂ ವ್ಯರ್ಥ. ಮತ್ತು ಪೃಥಿವಿಗೆ ಜಲವು ಕಾರಣ ಎಂದು ಶಾಸ್ತ್ರದಿಂದ ಸಿದ್ಧವೇ ಹೊರತು ಲೋಕಪ್ರಸಿದ್ಧಿಯಿಂದಲ್ಲ.

ಹಾಗಿದ್ದರೆ ಪೃಥಿವಿಗೆ ಕಾರಣ ಜಲ ಎಂದಿಷ್ಟೇ ಹೇಳಬಹುದಿತ್ತು. ಆಕಾಶ ಎಂದು ಹೇಳಿದ್ದು ಏಕೆ? ಹಾಗೆಯೇ 'ಸರ್ವಾಣಿ' ಎಂದು ಸರ್ವಪದ ಹೇಳಿದ್ದು. 'ಆಕಾಶಾದೇವ' ಎಂದು ಅವಧಾರಣೆ ಮಾಡಿದ್ದೂ ಕೂಡುವುದಿಲ್ಲವಾದ್ದರಿಂದ ನಾವು ಅರ್ಥೈಸಿದಂತೆಯೇ ಹೇಳಬೇಕು ಎಂದರೆ, ಭಾಮತಿಯಲ್ಲಿ ಪ್ರಶ್ನಾನುಸಾರಿಯಾಗಿ ಉತ್ತರವನ್ನು ವ್ಯಾಖ್ಯಾನಿಸಬೇಕು ಎಂದು ಹೇಳಿದೆ. ಆದರೆ ನೀವು ಉತ್ತರಾನುಸಾರಿಯಾಗಿ ಪ್ರಶ್ನೆಯನ್ನು ವ್ಯಾಖ್ಯಾನಿ-ಸಬೇಕು ಎನ್ನುತ್ತಿರುವಿರಿಯಾದ್ದರಿಂದ ನಿಮ್ಮಲ್ಲೇ ಪರಸ್ಪರ ವಿರೋಧವಿದೆ.

---

## तात्पर्यचन्द्रिका

यच्चोक्तम् – ''त्यजेदेकं कुलस्यार्थे'' इति,

तन्न, आकाशश्रुतः प्रधानत्वादप्रधानानेकलिङ्गबाधस्यापि ''आत्मार्थे पृथिवीं त्यजेत्'' इति न्यायसिद्धत्वात् । उक्तं हि षष्ठे प्रधानखदिराबाधाय तक्षणाद्यनेक-गुणबाधेन तक्षणाद्ययोग्योऽपि पशुनियोजनयोग्यः खदिर एवोपादेयः, न तु

तक्षणादियोग्यः खदिरप्रतिनिधिः कदर इति । न हि त्वत्पक्षे ब्रह्मण्याकाशशब्दो मुख्यः । किञ्च –

कारणे कार्यगा यद्वत् तथा कार्येऽपि हेतुगाः ।
व्यपदेष्टुं हि शक्यन्ते धर्मा ऐक्याविशेषतः ॥

पूर्वाधिकरणे त्वत्पक्षे कार्यगतस्य हिरण्यश्मश्रुत्वादेः कारणे व्यपदेश इव, इह कारणब्रह्मधर्माणां सर्वकारणत्वादीनां भूताकाशे व्यपदेशोऽस्तु, तयोरभेदाविशेषात् । किञ्च –

विशिष्टविषयत्वं चेत् अनन्तत्वाद्यसम्भवः ।
विशुद्धविषयत्वं चेत् ज्यायस्त्वादेरसम्भवः ॥

न हि सोपाधिके परिच्छिन्ने ब्रह्मण्यनन्तत्वादिकम् । नापि निर्विशेषे ज्यायस्त्वादिकम् । न हि ज्यायस्त्वमपरिच्छिन्नत्वम्, 'अनन्तः' इत्यनेन पुनरुक्तेः । किन्तु परिमाणाधिक्यं गुणाधिक्यं वा । नच तन्निर्विशेषेऽस्ति ।

यद्यपि वस्तुतो निर्विशेषे आरोपितो विशेषो न विरुद्धः । तथाऽपि त्वदुक्तः सविशेषनिर्विशेषविद्ययोरधिकारिभेदः, फलभेदः, विद्याभेदेन पादभेदश्च न स्यात् । एवमुत्तराधिकरणविषयवाक्येष्वपि सगुणनिर्गुणोभयलिङ्गयुक्तेषु दोष ऊह्यः । किञ्च सूत्रोक्तं लिङ्गं न तावद् ब्रह्मणि तत्वतोऽस्ति ।

यदि चारोपितं लिङ्गं तत्साध्या ब्रह्मताऽपि हि ।
आरोपिता स्यादेवञ्च पूर्वपक्षः स्थिरो भवेत् ॥

तस्मान्मतान्तरमयुक्तम् ॥

टीकाक्षरार्थस्तु – अस्ति शास्त्रादिसङ्गतिरिति ॥ अत्र 'ब्रह्मणि' इत्यनेन शास्त्रसङ्गतिः, 'समन्वय' इत्यनेन अध्यायसङ्गतिः, 'अन्यत्र प्रसिद्धनाम्नः' इत्यनेन पादसङ्गतिः सूचिता । एवमुत्तरत्रापि द्रष्टव्यम् ॥

॥ इति श्रीब्रह्मण्यतीर्थपूज्यश्रीपादशिष्यव्यासतीर्थविरचिता
तात्पर्यचन्द्रिकायां आकाशाधिकरणं सम्पूर्णम् ॥८॥

ಪರಿಪೂರ್ಣಚಂದ್ರಿಕಾ

ಅನುವಾದ - ಅದ್ವೈತಿಗಳು ಹೇಳಿದ 'ತ್ಯಜೇದೇಕಂ ಕುಲಸ್ಯಾರ್ಥೇ' (ಕುಲದ ಉದ್ಧಾರಕ್ಕೋಸ್ಕರ ಒಬ್ಬ ವ್ಯಕ್ತಿಯನ್ನು ತ್ಯಜಿಸಬೇಕು) ಎಂಬ ನ್ಯಾಯವು ತಪ್ಪು. 'ಆತ್ಮರಕ್ಷಣೆಗೋಸ್ಕರ ಸಕಲ ಪೃಥಿವಿಯನ್ನೇ ಬಿಡಬೇಕು' ಎಂದು ಅದೇ ಶ್ಲೋಕದಲ್ಲಿ ಇರುವಂತೆ ಪ್ರಧಾನವಾದ್ದನ್ನು ಅನುಸರಿಸಿ ಅಪ್ರಧಾನವಾದ ಅನೇಕವನ್ನು ಬಿಡಬೇಕೆಂದು ತಿಳಿಯುತ್ತದೆ. ಪ್ರಕೃತ ಆಕಾಶಶ್ರುತಿ ಪ್ರಧಾನವಾದ್ದರಿಂದ ಸರ್ವಕಾರಣತ್ವಾದಿ ಅನೇಕ ಲಿಂಗಗಳನ್ನು ಬಿಡುವುದು ತಪ್ಪಾಗುವುದಿಲ್ಲ. ಪೂರ್ವಮೀಮಾಂಸೆಯ ಆರನೆಯ ಅಧ್ಯಾಯವೂ ಕೂಡ ಇದನ್ನು ಸಮ್ಮತಿಸುತ್ತದೆ. ಖದಿರವು ಪ್ರಧಾನವಾಗಿದೆ. ಕದರವು ಅಪ್ರಧಾನವಾಗಿದೆ. ಪ್ರಧಾನವಾದ ಖದಿರವನ್ನು ಆಶ್ರಯಿಸಿದಾಗ ತಕ್ಷಣ ಮೊದಲಾದ ಅನೇಕ ಗುಣಗಳ ಹಾನಿಯುಂಟಾಗುತ್ತದೆ. ಆದರೂ ಕೂಡ ಪಶುವನ್ನು ಕಟ್ಟಲು ಯೋಗ್ಯವಾದ್ದರಿಂದ ಖದಿರ-ವನ್ನೇ ಸ್ವೀಕರಿಸಬೇಕು. ತಕ್ಷಣಾದಿ ಅನೇಕಗುಣಗಳಿಗೆ ಯೋಗ್ಯವಾಗಿದ್ದರೂ ಕೂಡ ಖದಿರಪ್ರತಿನಿಧಿ-ಯಾದ ಕದರವನ್ನು ಬಿಡುವುದು ತಪ್ಪಲ್ಲ. ಪ್ರಧಾನವನ್ನು ಅನುಸರಿಸುವುದೇ ಮುಖ್ಯ ಹೊರತು ಅಪ್ರಧಾನವನ್ನು ಅನುಸರಿಸಿ ಅನೇಕ ಗುಣಗಳನ್ನಾಗಲೀ ಲಿಂಗಗಳನ್ನಾಗಲೀ ಕೂಡಿಸುವುದು ಮುಖ್ಯವಲ್ಲ. ನಿಮ್ಮ ಪಕ್ಷದಲ್ಲಿ ಆಕಾಶಶಬ್ದವನ್ನು ಬ್ರಹ್ಮನಲ್ಲಿ ಮುಖ್ಯವೆಂದು ಹೇಳುವುದಿಲ್ಲವಷ್ಟೇ! ಅಷ್ಟೇ ಅಲ್ಲದೆ --

ಕಾರಣೇ ಕಾರ್ಯಗಾ ಯದ್ವತ್ತಥಾ ಕಾರ್ಯೇಽಪಿ ಹೇತುಗಾಃ ।
ವ್ಯಪದೇಷ್ಟುಂ ಹಿ ಶಕ್ಯಂತೇ ಧರ್ಮಾ ಐಕ್ಯಾವಿಶೇಷತಃ ॥

ಕಾರ್ಯದಲ್ಲಿರುವ ಧರ್ಮಗಳನ್ನು ಕಾರಣದಲ್ಲಿ ಹೇಳುವಂತೆ ಬರುತ್ತವೆಂದು ನೀವು ಹೇಳುವಂತೆ ಕಾರಣದಲ್ಲಿರುವ ಧರ್ಮಗಳನ್ನು ಕಾರ್ಯದಲ್ಲಿಯೂ ಹೇಳಬಹುದು. ಕಾರ್ಯಕಾರಣಗಳಲ್ಲಿ ಐಕ್ಯವಿರುವುದರಿಂದ.

ಹಿಂದಿನ ಅಧಿಕರಣದಲ್ಲಿ ಅದ್ವೈತಿಗಳಾದ ನೀವು ಕಾರ್ಯಭೂತನಾದ ಜೀವನಲ್ಲಿರುವ ಹಿರಣ್ಯ-ಶ್ಮಶ್ರುತ್ವ ಮೊದಲಾದ ಧರ್ಮಗಳನ್ನು ಕಾರಣಭೂತನಾದ ಬ್ರಹ್ಮನಲ್ಲಿ ವ್ಯಪದೇಶಿಸಿದ್ದೀರಿ. ಅದರಂತೆ ಈ ಅಧಿಕರಣದಲ್ಲಿಯೂ ಕೂಡ ಕಾರಣಭೂತನಾದ ಬ್ರಹ್ಮನಲ್ಲಿರುವ ಸರ್ವಕಾರಣತ್ವಾದಿ ಧರ್ಮಗಳನ್ನು ಭೂತಾಕಾಶದಲ್ಲಿಯೂ ವ್ಯಪದೇಶಿಸಬಹುದು. ಭೂತಾಕಾಶಕ್ಕೂ ಬ್ರಹ್ಮನಿಗೂ ನೀವು ಅಭೇದವನ್ನು ಹೇಳುವುದರಿಂದ. ಮತ್ತು

ವಿಶಿಷ್ಟವಿಷಯತ್ವಂ ಚೇದನಂತತ್ವಾದ್ಯಸಂಭವಃ ।
ವಿಶುದ್ಧವಿಷಯತ್ವಂ ಚೇಜ್ಜ್ಯಾಯಸ್ತ್ವಾದೇರಸಂಭವಃ ॥

ನೀವು ಉದಾಹರಿಸಿದ ವಿಷಯವಾಕ್ಯವು ವಿಶಿಷ್ಟಬ್ರಹ್ಮನನ್ನು ವಿಷಯೀಕರಿಸುತ್ತದೋ ಅಥವಾ ಶುದ್ಧಬ್ರಹ್ಮನನ್ನು ವಿಷಯೀಕರಿಸುತ್ತದೋ? ವಿಶಿಷ್ಟಬ್ರಹ್ಮವಿಷಯಕವಾದರೆ ಅನಂತತ್ವಾದಿಧರ್ಮಗಳು ಕೂಡುವುದಿಲ್ಲ. ಶುದ್ಧಬ್ರಹ್ಮನ ವಿಷಯಕವಾದರೆ ಜ್ಯಾಯಸ್ತ್ವಾದಿಗಳು ಕೂಡುವುದಿಲ್ಲ.

ಪರಿಚ್ಛಿನ್ನನಾದ ಸೋಪಾಧಿಕಬ್ರಹ್ಮನಲ್ಲಿ ಅನಂತತ್ವಾದಿಧರ್ಮಗಳು ಕೂಡುವುದಿಲ್ಲ. ನಿರ್ವಿಶೇಷ-ವಾದ ಶುದ್ಧಬ್ರಹ್ಮನಲ್ಲಿ ಜ್ಯಾಯಸ್ತ್ವಾದಿಗಳು ಕೂಡುವುದಿಲ್ಲ. ಏಕೆಂದರೆ ಜ್ಯಾಯಸ್ತ್ವಶಬ್ದಕ್ಕೆ ಅಪರಿಚ್ಛಿನ್ನತ್ವ ಎಂಬರ್ಥವನ್ನು ಹೇಳಲಾಗದು. ಹಾಗಾದಲ್ಲಿ ಅನಂತಶಬ್ದದಿಂದ ಪುನರುಕ್ತಿ ಬರುತ್ತದೆ. ಹೊರತು ಪರಿಮಾಣದಿಂದ ಆಧಿಕ್ಯವನ್ನು ಗುಣದಿಂದ ಆಧಿಕ್ಯವನ್ನು ಹೇಳಬೇಕು. ಆದರೆ ನಿರ್ವಿಶೇಷಬ್ರಹ್ಮನಲ್ಲಿ ಇವೆರಡೂ ಅಸಂಭಾವಿತ.

ವಸ್ತುತಸ್ತು ನಿರ್ವಿಶೇಷಬ್ರಹ್ಮನಲ್ಲಿ ಪಾರಮಾರ್ಥಿಕವಾದ ಧರ್ಮಗಳಿಲ್ಲದಿದ್ದರೂ ಕಲ್ಪಿತವಾದ ಧರ್ಮಗಳನ್ನು ಹೇಳಲು ಅಡ್ಡಿಯಿಲ್ಲ. ಆದರೂ ಕೂಡ ಅದ್ವೈತಿಗಳಿಗೆ ಇಲ್ಲಿ ಹಾಗೆ ಹೇಳುವುದು ಕಷ್ಟ. ಏಕೆಂದರೆ ಸವಿಶೇಷಬ್ರಹ್ಮನ ಜ್ಞಾನದಿಂದ ದೊರೆಯುವ ಫಲವೇ ಬೇರೆ; ನಿರ್ವಿಶೇಷಬ್ರಹ್ಮನ ಜ್ಞಾನದಿಂದ ದೊರೆಯುವ ಫಲವೇ ಬೇರೆ. ಈ ಎರಡೂ ಜ್ಞಾನವನ್ನು ಹೊಂದುವ ಅಧಿಕಾರಿಗಳೂ ಬೇರೆ. ಈ ಎರಡೂ ಜ್ಞಾನಗಳಲ್ಲಿ ಭೇದವಿರುವುದರಿಂದಲೇ ಪ್ರಥಮಾಧ್ಯಾಯದ ಪಾದಭೇದವು ಸುಸಂಗತವಾಗುತ್ತದೆ. ಇತ್ಯಾದಿ ಮಾತುಗಳನ್ನು ಅದ್ವೈತಿಗಳು ಹೇಳುತ್ತಾರೆ. ಇದರಂತೆ ಮುಂದಿನ ಅಧಿಕರಣಗಳ ವಿಷಯವಾಕ್ಯಗಳಲ್ಲೂ ಸಗುಣ ಹಾಗೂ ನಿರ್ಗುಣ ಎರಡೂವಿಧ ಬ್ರಹ್ಮರಲ್ಲಿರುವ ಲಿಂಗವನ್ನು ಹೇಳಿದಾಗ ದೋಷವನ್ನು ಊಹಿಸಿಕೊಳ್ಳಬೇಕು. ಅಷ್ಟೇ ಅಲ್ಲದೆ ಅದ್ವೈತಿಗಳು ಹೇಳುವ ಪ್ರಕಾರ ಸೂತ್ರದಲ್ಲಿ ಉಕ್ತವಾದ ಲಿಂಗವು ಬ್ರಹ್ಮನಲ್ಲಿ ಕೂಡುವುದೇ ಇಲ್ಲ. --

''ಯದಿ ಚಾರೋಪಿತಂ ಲಿಂಗಂ ತತ್ಸಾಧ್ಯಾಬ್ರಹ್ಮತಾಪಿ ಹಿ ।
ಆರೋಪಿತಾ ಸ್ಯಾದೇವಂ ಚ ಪೂರ್ವಪಕ್ಷಃ ಸ್ಥಿರೋ ಭವೇತ್ ॥

(ಒಂದು ವೇಳೆ ಬ್ರಹ್ಮನಲ್ಲಿ ಆರೋಪಿತವಾದ ಲಿಂಗವನ್ನು ಹೇಳಿದರೆ ಅದರಿಂದ ಸಾಧಿಸಲ್ಪಟ್ಟ ಬ್ರಹ್ಮತ್ವವೂ ಕೂಡ ಆರೋಪಿತವೇ ಆಗುತ್ತದೆ. ಇದರಿಂದ ಪೂರ್ವಪಕ್ಷವೇ ದೃಢವಾಗುತ್ತದೆ ಹೊರತು ಸಿದ್ಧಾಂತದ ಸ್ಥಾಪನೆಯಾಗುವುದಿಲ್ಲ.)

ಆದ್ದರಿಂದ ಅದ್ವೈತಮತವು ಅಯುಕ್ತವಾಗುತ್ತದೆ.

**ಟೀಕೆಯ ಕಠಿಣಪದಾರ್ಥ**

ಅಸ್ತಿ ಶಾಸ್ತ್ರಾದಿಸಂಗತಿಃ = ಈ ವಾಕ್ಯದಲ್ಲಿ 'ಬ್ರಹ್ಮಣಿ' ಎಂದು ಹೇಳಿದ್ದರಿಂದ ಶಾಸ್ತ್ರಸಂಗತಿಯು 'ಸಮನ್ವಯ' ಎಂದು ಹೇಳಿದ್ದರಿಂದ ಅಧ್ಯಾಯಸಂಗತಿಯು, 'ಅನ್ಯತ್ರ ಪ್ರಸಿದ್ಧನಾಮ್ನಃ' ಎಂದು ಹೇಳಿದ್ದರಿಂದ ಪಾದಸಂಗತಿಯು ಸೂಚಿಸಲ್ಪಟ್ಟಿದೆ. ಇದರಂತೆ ಮುಂದಿನ ಅಧಿಕರಣಗಳಲ್ಲಿಯೂ ಸಂಗತಿತ್ರಯಗಳನ್ನು ತಿಳಿಯಬೇಕು.

ಇಲ್ಲಿಗೆ ಶ್ರೀವ್ಯಾಸತೀರ್ಥರು ವಿರಚಿಸಿದ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಆಕಾಶಾಧಿಕರಣವು ಸಂಪೂರ್ಣವಾಯಿತು.

ಪರಿಪೂರ್ಣಚಂದ್ರಿಕಾ

**प्रकाशः** – **उक्तं हीति** ॥ षष्ठे तृतीयपादे "द्रव्यसंस्कारविरोधे द्रव्यं तदर्थत्वात्" इत्येकोनविंशेऽधिकरणे चिन्तितम् । यदापुनस्तनुत्वात् तक्षणादि-संस्काराणामयोग्यः खदिरः नियोजनमात्रे योग्यो लब्धः, कदरो महान् संस्कारयोग्यः तदा कस्योपादानमिति संशये, खदिरोपादाने संस्काराणां बहूनां लोपः स्यात्, कदरोपादाने कृते तेषामनुग्रहः । खदिरशास्त्रमपि किञ्चिन्न्यूनं सम्पादितं भवति अतस्तस्योपादानमिति प्राप्ते, बहवोऽपि द्रव्यार्था एव संस्कारास्तेषां नान्यत्प्रयोजनं, न तद्वशेन द्रव्यपरित्यागो युक्तः । अतः प्रधानभूतः खदिर एवोपादातव्यः । तक्षणादीनि लुप्येरन्निति सिद्धान्त इति प्रधानानुग्रहादप्रधानानेक-बाधनमुक्तमित्यर्थः ।

नन्वाकाशशब्दो भूत इव ब्रह्मण्यपि मुख्य एवातो न ब्रह्मपक्षेऽपि मुख्यबाध इत्यत आह – **न हीति** ॥ "त्यजेदेकं कुलस्यार्थे" इति न्यायेन बह्वनुग्रहाय आकाशपदं बाध्यमित्यत्र दोषान्तरमाह – **किऽञ्च – कारण इति** ॥ 'तयोः' उपादानोपादेयभावापन्नयोरित्यर्थः । इदं विषयवाक्यमद्वैतिमते अत्यन्तायुक्तमित्याह – **किञ्चेति** ॥ श्लोकं व्याख्याति – **न हीति** ॥ निर्विशेषे ज्यायस्त्वं नेत्युक्तमुपपादयति – **न हीति** ॥

ननु वास्तवगुणाभावेऽपि निर्विशेषे कल्पितः परिमाणादिः स्यादित्याशङ्क्य अतिप्रसङ्गमाह – **यद्यपीति** ॥ **अधिकारीति** ॥ मन्दामन्दरूपाधिकारीत्यर्थः । **फलेति** । निर्विशेषज्ञानमोक्षरूपफलभेद इत्यर्थः ॥ **विद्येति** ॥ सविशेषनिर्विशेष-विद्येत्यर्थः । परमते सूत्रं चायुक्तमित्याह – **किञ्चेति** ॥

एतेन यदत्र मूर्खप्रलपनम् – "आकाशाद्वायुः" इति श्रुत्यन्तरे आकाशस्य सर्वभूतकारणत्वेनोक्तेः "इति होवाच" इत्यत्राप्याकाशो भूतमेवेति प्राप्ते, सर्व-कारणत्वात् तल्लिङ्गात् परमाकाशभिन्नः शिव एवात्रोच्यते इति । तदुक्तम् –

**आकाशस्याम्नानाच्छान्दोग्ये सर्वभूतकारणता ।**
**आम्नायबोधितेऽर्थे नच विमतिः कर्तुमुचिता नः ॥**
**अस्तु स परमाकाशस्तदभेदस्त्वीश्वरोऽपि तद्धर्मी ।**

इत्यादि । तन्निरस्तम्, सर्वभूतकारणत्वस्य भूताकाश एव सावकाशितत्वात् । वैष्णवनामत्रयान्तर्गतानन्तशब्दसामानाधिकरण्यविरोधाच्च ॥

**ब्रह्मैव हि पृथिव्यात्मा विष्णुराकाशनामकः ।**
**आदीप्तत्वाद्वरीयांश्च परमो हरिरेव हि ॥**

इति स्मृतिविरोधाच्च । भाष्यादावुदाहृतवचनविरोधाच्च । लिङ्गानां भाष्यादौ वैष्णवत्वसमर्थनाच्चेति ॥

''लोकतोऽन्यत्र प्रसिद्धाकाशनाम्नो ब्रह्मणि समन्वयप्रतिपादनादस्ति शास्त्रादि-सङ्गतिः'' इत्यत्र कथं सङ्गतित्रयलाभ इत्यत आह – **अत्रेति** ॥ उपन्यासमुखेन शिष्टं विवृतमिति भावः॥

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे आकाशाधिकरणं सम्पूर्णम् ॥८॥**

ವಿವರಣೆ -

ಸಂಸ್ಕಾರಾಯೋಗ್ಯಸ್ಯಾಪಿ ಮುಖ್ಯಸ್ಯೈವ ಉಪಾದಾನಾಧಿಕರಣಮ್
''ದ್ರವ್ಯಸಂಸ್ಕಾರವಿರೋಧೇ ದ್ರವ್ಯಂ ತದರ್ಥತ್ವಾತ್' -(೬/೩/೧೯)(*)

ಈ ಅಧಿಕರಣದಲ್ಲಿ ಹೀಗೆ ವಿಚಾರ ಮಾಡಿದ್ದಾರೆ -- ಯಾಗಕಾಲದಲ್ಲಿ ಖದಿರಮರವನ್ನು ಉಪಯೋಗಿಸಬೇಕೋ ಅಥವಾ ಕದರ ಮರವನ್ನು ಉಪಯೋಗಿಸಬೇಕೋ? ಖದಿರ ಮರವು ಕೃಶವಾಗಿರುತ್ತದೆ. ಕದರ ಮರವು ಸ್ಥೂಲವಾಗಿರುತ್ತದೆ. ಖದಿರಮರವು ಕೃಶವಾದ್ದರಿಂದ ಅದರಲ್ಲಿ ತಕ್ಷಣ ಮತ್ತು ಅಷ್ಟಾಶ್ರೀಕರಣ ಮೊದಲಾದ ಸಂಸ್ಕಾರಗಳನ್ನು ಮಾಡುವುದು ಕಷ್ಟ. ಆದರೆ ಕದರ ಮರವು ಸ್ಥೂಲವಾಗಿರುವುದರಿಂದ ತಕ್ಷಣಾದಿ ಸಂಸ್ಕಾರಗಳನ್ನು ಸುಲಭವಾಗಿ ಪೂರೈಸಬಹುದು. ಕದರಮರವನ್ನು ಸ್ವೀಕರಿಸುವುದರಿಂದ ಅನೇಕಸಂಸ್ಕಾರಗಳನ್ನು ಸಾಧಿಸಿದಂತಾಗುತ್ತದೆ. 'ಖಾದಿರೋ ಯೂಪೋ ಭವತಿ' ಎಂಬ ಪ್ರಮಾಣವಿದ್ದರೂ ಕೂಡ ಖದಿರಮರವನ್ನು ವಿವಕ್ಷಿಸಿದರೆ ಅನೇಕ ಸಂಸ್ಕಾರಗಳು ಲೋಪ-ವಾಗುವುದರಿಂದ ಖದಿರವಿಧಿಯನ್ನು ಬಿಡಬೇಕಾಗುತ್ತದೆ. ಇದಿಷ್ಟು ಪೂರ್ವಪಕ್ಷ.

ಸಿದ್ಧಾಂತ - ಸಂಸ್ಕಾರಗಳನ್ನು ಮುಖ್ಯವೆಂದು ಪರಿಗಣಿಸಿ ದ್ರವ್ಯವನ್ನೇ ಬಿಡುತ್ತಿದ್ದೀರಿ. ಆದರೆ ಖದಿರ-ವೆಂಬ ದ್ರವ್ಯವು ಸಿದ್ಧವಾದರಷ್ಟೇ ಉಳಿದ ಸಂಸ್ಕಾರಗಳು ಸಾಧ್ಯ. ಆದ್ದರಿಂದ ಸಂಸ್ಕಾರಗಳನ್ನು ಸ್ವೀಕರಿಸ-ಬೇಕಾದರೆ ಖದಿರದ್ರವ್ಯವು ಬೇಕೇ ಬೇಕು. ಇನ್ನು ಖದಿರದ್ರವ್ಯವನ್ನು ಸ್ವೀಕರಿಸಿದರೆ ಸಂಸ್ಕಾರಾದಿಗಳೇ ಸಾಧ್ಯವಿಲ್ಲವಲ್ಲ? ಎಂಬ ಪ್ರಶ್ನೆ ಬರಬಹುದು. ಆದರೆ ದ್ರವ್ಯವು ಮುಖ್ಯವಾದ್ದರಿಂದ ಸಂಸ್ಕಾರಗಳನ್ನು

ಬಿಟ್ಟರೂ ಪರವಾಗಿಲ್ಲ. ಪ್ರಧಾನವಾದ ಖದಿರದ್ರವ್ಯವನ್ನೇ ಸ್ವೀಕರಿಸಬೇಕು. ತಕ್ಷಣ ಅಷ್ಟಾಶ್ರೀಕರಣ ಮೊದಲಾದ ಸಂಸ್ಕಾರಗಳು ಲೋಪವಾದರೆ ಆಗಲಿ.

ಪ್ರಧಾನವಾದ್ದನ್ನು ಸ್ವೀಕರಿಸಿ ಅಪ್ರಧಾನವಾದ ಅನೇಕಕ್ಕೆ ಬಾಧವನ್ನು ಅಂಗೀಕರಿಸಿರುವುದು ಪೂರ್ವಮೀಮಾಂಸೆಯ ಈ ಅಧಿಕರಣದಲ್ಲಿ ಕಂಡಿದೆ. ಅದರಂತೆ ಪ್ರಕೃತದಲ್ಲಿಯೂ ಕೂಡ ಪ್ರಧಾನವಾದದ್ದು ಆಕಾಶಶ್ರುತಿ, ಜಗತ್ಕಾರಣತ್ವಾದಿ ಲಿಂಗಗಳು ಅಪ್ರಧಾನವಾಗಿವೆ. ಪ್ರಧಾನವಾದ ಆಕಾಶಶ್ರುತಿಯನ್ನು ಅನುಸರಿಸಿ ಅಪ್ರಧಾನವಾದ ಸರ್ವಕಾರಣತ್ವಾದಿ ಅನೇಕಲಿಂಗಗಳನ್ನು ಬಾಧಿಸುವುದು ತಪ್ಪಾಗುವುದಿಲ್ಲ.

ಆಕಾಶಶಬ್ದವು ಭೂತದಲ್ಲಿ ಹೇಗೆ ಮುಖ್ಯವಾಗಿದೆಯೋ ಅದರಂತೆ ಬ್ರಹ್ಮನಲ್ಲಿಯೂ ಮುಖ್ಯವಾಗಿದೆ. ಹಾಗಾಗಿ ಬ್ರಹ್ಮಪಕ್ಷದಲ್ಲಿಯೂ ಮುಖ್ಯವಾದದ್ದಕ್ಕೆ ಬಾಧವು ಬಂದೇ ಬರುತ್ತದೆಂಬ ಪ್ರಶ್ನೆಗೆ 'ನ ಹಿ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. 'ತ್ಯಜೇದೇಕಂ ಕುಲಸ್ಯಾರ್ಥೇ' ಎಂಬ ನ್ಯಾಯದಂತೆ ಅನೇಕ ಲಿಂಗಗಳನ್ನು ಹೊಂದಿಸುವುದಕ್ಕೋಸ್ಕರ ಒಂದು ಆಕಾಶಶ್ರುತಿಯನ್ನು ಬಾಧಿಸುವುದು ತಪ್ಪೇನಲ್ಲವಲ್ಲ? ಎಂಬ ಪ್ರಶ್ನೆಗೆ ಮತ್ತೊಂದು ದೋಷವನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಅದ್ವೈತಿಗಳು ಉದಾಹರಿಸಿದ ವಿಷಯವಾಕ್ಯವು ಅವರಿಗೇ ಬಾಧಕವಾಗುತ್ತದೆ ಎಂದು 'ಕಿಂಚ' ಇತ್ಯಾದಿ ಗ್ರಂಥವು ವಿವರಿಸಿದೆ. ಸ್ವತಃ ಗ್ರಂಥಕಾರರೇ 'ವಿಶಿಷ್ಟವಿಷಯತ್ವಂ' ಎಂಬ ಶ್ಲೋಕವನ್ನು 'ನ ಹಿ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನಿಸುತ್ತಿದ್ದಾರೆ. ನಿರ್ವಿಶೇಷಬ್ರಹ್ಮನಲ್ಲಿ ಜ್ಯಾಯಸ್ತ್ವಗುಣವನ್ನು ಹೇಳಲು ಸಾಧ್ಯವೇ ಇಲ್ಲ ಎಂಬ ವಿಷಯವನ್ನು 'ನ ಹಿ ಜ್ಯಾಯಸ್ತ್ವಂ' ಎಂಬ ಗ್ರಂಥವು ವಿವರಿಸಿದೆ. ನಿರ್ವಿಶೇಷವಾದ ಬ್ರಹ್ಮನಲ್ಲಿ ಪಾರಮಾರ್ಥಿಕವಾದ ಗುಣಗಳು ಇರದೇ ಇರಬಹುದು, ಕಲ್ಪಿತವಾದ ಪರಿಮಾಣಾದಿಗುಣಗಳು ಇರಲು ಏನು ತೊಂದರೆ?

---

(*)**भाट्टसङ्ग्रहः – अथैकोनविंशं संस्कारायोग्यस्यापि मुख्यस्यैवोपादानाधिकरणम्**

**द्रव्यसंस्कारविरोधे द्रव्यं तदर्थत्वात् ॥ ३८ ॥**

अत्रापि पूर्वन्यायेन शङ्कनात्**सङ्गतिः । यदा** तनुत्वात्तक्षणादिसंस्कारायोग्यः खदिरो नियोजनमात्रयोग्यो लब्धः, कदरश्च महान् संस्कारयोग्यः, तदा कस्योपादानमिति **सन्देहे,** खदिरग्रहे संस्काराणां बहूनां तक्षाणाष्टाश्रीकरणादीनां लोपापत्तेः, कदरग्रहे तदपरिलोपात् संस्कारविधीनां बहूनां बाधापेक्षया ''खादिरो यूपो भवति'' इति खदिरविधिमात्रपीडनस्यादोषत्वात् पूर्वत्रेव खदिरो नादर्तव्यः, किन्तु कदर एवेति **प्राप्ते सिद्धान्तः,** खदिरविकारयूपद्रव्यस्य प्रधानत्वात्, तक्षणादिसंस्काराणाञ्च गुणत्वात्, गुणानुरोधेन प्रधानं किञ्चिदपि नोपरोद्धुं युक्तमिति संस्कारहीनोपि खदिर एवोपादेय इति तत्रैव पशुनि याजनमिति । **तदाह ''द्रव्यसंस्कारविरोधे द्रव्यमेव''** ग्राह्यम् । कुतः? संस्कारस्य द्रव्यार्थत्वादिति । **फलं** तु व्यक्तम् ।

॥ इत्येकोनविंशं संस्कारायोग्यस्यापि मुख्यस्यैवोपादनाधिकरणम् ॥

ಎಂದು ಶಂಕೆಯನ್ನು 'ಯದ್ಯಪಿ' ಎಂಬ ಗ್ರಂಥದಿಂದ ಹೇಳಿ, ಅದಕ್ಕೆ ಅತಿಪ್ರಸಂಗದೋಷವನ್ನು 'ತಥಾ ಪಿ' ಎಂಬ ಗ್ರಂಥದಿಂದ ಹೇಳುತ್ತಿದ್ದಾರೆ. ಸವಿಶೇಷಬ್ರಹ್ಮನ ಜ್ಞಾನದಿಂದ ನಿರ್ವಿಶೇಷಬ್ರಹ್ಮನ ಜ್ಞಾನವು ಬರುತ್ತದೆ; ನಿರ್ವಿಶೇಷಬ್ರಹ್ಮನ ಜ್ಞಾನದಿಂದ ಮೋಕ್ಷವೆಂಬ ಫಲವು ದೊರೆಯುತ್ತದೆ. ಹೀಗೆ ನಿರ್ವಿಶೇಷಬ್ರಹ್ಮನ ಜ್ಞಾನಕ್ಕೂ ಸವಿಶೇಷಬ್ರಹ್ಮನ ಜ್ಞಾನಕ್ಕೂ ಫಲದಲ್ಲಿರುವ ವ್ಯತ್ಯಾಸವನ್ನು ಗಮನಿಸಬೇಕು. ಅದ್ವೈತಮತದಲ್ಲಿ ಸೂತ್ರಾರ್ಥವು ತಪ್ಪಾಗಿದೆಯೆಂದು 'ಕಿಂಚ' ಇತ್ಯಾದಿ ಗ್ರಂಥವು ನಿರೂಪಿಸುತ್ತಿದೆ.

ಶೈವರ ಅಧಿಕರಣಶರೀರ - 'ಆಕಾಶಾದ್ವಾಯುಃ' ಎಂಬ ಶ್ರುತಿಯಲ್ಲಿ ಆಕಾಶಕ್ಕೆ ಸರ್ವಭೂತ-ಕಾರಣತ್ವವನ್ನು ಹೇಳಿದ್ದಾರೆ. ಸರ್ವಭೂತಕಾರಣತ್ವವನ್ನು ಕೇವಲ ಭೂತಾಕಾಶದಲ್ಲಷ್ಟೇ ಹೇಳಲು ಸಾಧ್ಯ. ಹಾಗಾಗಿ ಆಕಾಶಶಬ್ದದಿಂದ ಪ್ರತಿಪಾದ್ಯವಾದದ್ದು ಭೂತಕಾಶವಾಗುತ್ತದೆಂದು ಪೂರ್ವಪಕ್ಷ. ಸರ್ವಕಾರಣತ್ವಲಿಂಗವು ಶಿವನಲ್ಲಿ ಇರುವುದರಿಂದ ಶಿವನು ಆಕಾಶಶಬ್ದದಿಂದ ವಾಚ್ಯನಾಗುತ್ತಾನೆ. ವಸ್ತುತಃ ಸಕಲಭೂತಪದಾರ್ಥಗಳಿಗೆ ಭೂತಾಕಾಶವು ಉಪಾದಾನಕಾರಣವಾಗಿರಬಹುದು; ಆದರೆ ಆ ಭೂತಾಕಾಶ-ದಿಂದ ಶಿವನು ಅಭಿನ್ನನಾದ್ದರಿಂದ ಶಿವನಲ್ಲಿ ಆಕಾಶಶಬ್ದವನ್ನು ಹೇಳಲು ಏನೂ ತೊಂದರೆ ಇಲ್ಲ. ಆದ್ದರಿಂದಲೇ ಛಾಂದೋಗ್ಯದಲ್ಲಿ ಆಕಾಶಕ್ಕೆ ಸರ್ವಭೂತಕಾರಣತ್ವ ಹೇಳಿದ್ದು ತಪ್ಪಾಗುವುದಿಲ್ಲ. ಹೀಗೆ ಶಿವನೇ ಆಕಾಶಶಬ್ದವಾಚ್ಯನೆಂದು ಶ್ರುತಿಯಿಂದ ತಿಳಿಯುತ್ತಿರುವಾಗ ಆ ವಿಷಯದಲ್ಲಿ ವಿಪ್ರತಿಪತ್ತಿ ಮಾಡುವುದು ತಪ್ಪಾಗುತ್ತದೆ. ಆಕಾಶದಿಂದ ಈಶ್ವರನಲ್ಲಿ ಅಭೇದವನ್ನು ಒಪ್ಪಿದರೆ ಏನೂ ಬಾಧಕವಿಲ್ಲ.

ಅಜ್ಞಾನಿಗಳಾದ ಶೈವರ ಈ ಮಾತು ತಪ್ಪು. ಈಗಾಗಲೇ ನಾವು ಹೇಳಿದಂತೆ ಸರ್ವಭೂತಕಾರಣತ್ವವನ್ನು ಭೂತಾಕಾಶದಲ್ಲಿ ಸಾವಕಾಶ ಮಾಡಲು ಬರುತ್ತದೆ. ಸಾವಕಾಶಲಿಂಗದಿಂದ ಶಿವನನ್ನು ಆಕಾಶಶಬ್ದ-ವಾಚ್ಯನೆಂದು ಹೇಳಲಾಗದು. ಅಷ್ಟೇ ಅಲ್ಲದೆ ವಿಷ್ಣುವಿನಲ್ಲಿ ಪ್ರಸಿದ್ಧವಾದ ನಾಮತ್ರಯಗಳಲ್ಲಿ ಒಂದಾದ ಅನಂತಶಬ್ದದ ಸಾಮಾನಾಧಿಕರಣ್ಯದ ವಿರೋಧವು ಬರುತ್ತದೆ. ಮತ್ತು

'ಬ್ರಹ್ಮೈವ ಹಿ ಪೃಥಿವ್ಯಾತ್ಮಾ ವಿಷ್ಣುರಾಕಾಶನಾಮಕಃ ।
ಆದೀಪ್ತತ್ವಾದ್ವರೀಯಾಂಶ್ಚ ಪರಮೋ ಹರಿರೇವ ಹಿ ॥

(ಬ್ರಹ್ಮನೇ ಪೃಥಿವಿಯಾಗಿದ್ದಾನೆ; ಎಲ್ಲಡೆ ಪ್ರಕಾಶರೂಪನಾದ್ದರಿಂದ ಶ್ರೇಷ್ಠನೂ ಆದ್ದರಿಂದ ವಿಷ್ಣುವು ಆಕಾಶನೆನಿಸಿದ್ದಾನೆ) ಇತ್ಯಾದಿ ಸ್ಮೃತಿಯ ವಿರೋಧವು ಬರುತ್ತದೆ. ಭಾಷ್ಯದಲ್ಲಿ ಉದಾಹರಿಸಿದ ಅನೇಕ ವಚನಗಳ ವಿರೋಧವಂತೂ ಸುಸ್ಪಷ್ಟ. ಮತ್ತು ಶ್ರುತಿಯಲ್ಲಿ ಹೇಳಿರುವ ಎಲ್ಲ ಲಿಂಗಗಳು ವಿಷ್ಣುವಿನಲ್ಲಷ್ಟೇ ಕೂಡುತ್ತವೆಂದು ಭಾಷ್ಯದಲ್ಲಿ ಸಮರ್ಥಿಸಿದ್ದಾರೆ. ಹುರುಳಿಲ್ಲದ ಶೈವರ ನಿರಾಕರಣೆಗೆ ಹೆಚ್ಚು ಮಾತುಗಳ ಅವಶ್ಯಕತೆ ಇಲ್ಲ.

''ಲೋಕತೋಽನ್ಯತ್ರ ಪ್ರಸಿದ್ಧಾಕಾಶನಾಮ್ನೋ ಬ್ರಹ್ಮಣಿ ಸಮನ್ವಯಪ್ರತಿಪಾದನಾದಸ್ತಿ ಶಾಸ್ತ್ರಾದಿ-ಸಂಗತಿಃ'' (ಲೋಕತಃ ಅನ್ಯತ್ರಪ್ರಸಿದ್ಧವಾದ ಆಕಾಶನಾಮವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುತ್ತಿರು-ವುದರಿಂದ ಶಾಸ್ತ್ರಾದಿಸಂಗತಿಗಳು ಲಭಿಸುತ್ತವೆ). ಭಾಷ್ಯದ ಈ ಮಾತಿನಿಂದ ಮೂರುವಿಧಸಂಗತಿಗಳನ್ನು ಹೇಗೆ ತಿಳಿಯಬೇಕು? ಎಂಬ ಪ್ರಶ್ನೆಗೆ 'ಅತ್ರ' ಇತ್ಯಾದಿ ಗ್ರಂಥವು ಉತ್ತರಿಸುತ್ತಿದೆ. ಆಕಾಶಾಧಿಕರಣದಲ್ಲಿರುವ

ಟೀಕೆಯ ಕಠಿಣಪದದ ಅರ್ಥವನ್ನು ಗ್ರಂಥಕಾರರು ಒಂದನ್ನಷ್ಟೇ ನಿರೂಪಿಸಿದ್ದಾರೆ. ಉಳಿದ ಪದದ ಅರ್ಥಗಳನ್ನು ಉಪನ್ಯಾಸಮುಖದಿಂದಲೇ ಆಯಾ ಸಂದರ್ಭಗಳಲ್ಲಿ ವಿವರಿಸಿದ್ದಾರೆ.

ಇಲ್ಲಿಗೆ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಮುಕ್ತಾಯವಾಯಿತು.

**गुरुराजीयम्** – ननु प्रधानानुसारेणाप्रधानबाध इत्येतत्कोपलब्धमित्यत आह – **उक्तं हीति** ॥ ननु दृष्टान्तदार्ष्टान्तिकयोर्वैषम्यम् । दृष्टान्ते हि तल्लक्षणादियोग्यत्वरूपानेकलिङ्गैःखदिरप्रतिनिधिकदरग्रहणे खादिरो यूपो भवतीत्यादिना प्रधानत्वेन श्रुतखादिरादिबाधवत् प्रकृते कारणत्वादिलिङ्गैराकाशशब्दस्य ब्रह्मपरत्वेन प्रधानाबाधात् । प्रधानीभूताकाशश्रुतेर्ब्रह्मणि मुख्यत्वाभ्युपगमादित्यत आह – **न हि त्वत्पक्ष इति** ॥ **पादभेदश्च न स्यादिति** ॥ द्वितीयतृतीयपादभेदश्च न स्यादित्यर्थः । नन्वारोपाविशेषेपि प्रातिस्विकशेषस्य व्यावहारिकविशेषाभावेन निर्विशेषत्वात् पादभेदादिकं युक्तमिति चेन्न । आरोपेऽवान्तरविशेषस्यैवाप्रामाणिकत्वात् । भावेपि वा पदार्थविनिमयस्यापि व्याख्यानसम्भवेनोक्तव्यवस्थायोगापरिहारात् ॥ **शास्त्रादिसङ्गतिरितीति** ॥ पूर्वाधिकरणद्वये लिङ्गविचारात् फलतः पादसङ्गतावपि मुख्यतस्तदभावादक्षरार्थकथनास्वारस्यादुपन्यासमुखेनैव व्याख्यातत्वाच्चात्र सङ्गतिटीकाक्षरानुक्तिरिति ज्ञेयम् – **एवमुत्तरत्रापीति** ॥ उपलक्षणमेतत् । पूर्वत्रापीत्यपि द्रष्टव्यम् ॥

॥ इति श्रीकेशवभट्टारकेण विरचितायां भावदीपिकायाम्
आकाशाधिकरणं सम्पूर्णम् ॥

## ಸಾರ

"ತ್ಯಜೇದೇಕಂ ಕುಲಸ್ಯಾರ್ಥೇ" ಎಂಬ ನ್ಯಾಯಾನುಸಾರಿಯಾಗಿ ಆಕಾಶಪದಕ್ಕೆ ರೂಢಿಯನ್ನು ಬಿಟ್ಟು ಬೇರೆ ಅರ್ಥವನ್ನು ಮಾಡಬೇಕು ಎಂದು ಹೇಳಿದ್ದು ಸರಿಯಲ್ಲ. ಆಕಾಶಶ್ರುತಿಯು ಪ್ರಧಾನವಾದ್ದರಿಂದ ಅಪ್ರಧಾನವಾದ 'ಸರ್ವಕಾರಣತ್ವ' ಮೊದಲಾದ ಲಿಂಗಗಳಿಗೇ "ಆತ್ಮಾರ್ಥೇ ಪೃಥಿವೀಂ ತ್ಯಜೇತ್" ಎಂಬ ನ್ಯಾಯಾನುಸಾರವಾಗಿ ಬಾಧವನ್ನು ಹೇಳಬೇಕು. ಇದು ಮೀಮಾಂಸಕರಿಗೂ ಸಮ್ಮತವಾದ ವಿಷಯ. ಆಕಾಶಶಬ್ದವು ಬ್ರಹ್ಮನಲ್ಲಿ ಮುಖ್ಯವಾಗಿದೆ ಎಂದು ನೀವು ಒಪ್ಪಿಲ್ಲವಾದ್ದರಿಂದ ಈ ನ್ಯಾಯಾನುಸಾರಿಯಾಗಿ ಆಕಾಶಪದಕ್ಕೆ ಬ್ರಹ್ಮನೆಂದು ಅರ್ಥೈಸುವುದು ಸರಿಯಲ್ಲ.

ಮತ್ತು ನೀವು ಹಿಂದಿನ ಅಧಿಕರಣದಲ್ಲಿ ಹೇಳಿದ ನ್ಯಾಯವನ್ನಿಟ್ಟುಕೊಂಡರೂ ಈ ಅಧಿಕರಣದಲ್ಲಿ ಪೂರ್ವಪಕ್ಷ ಸಿದ್ಧಾಂತಗಳಿಗೆ ಅವಕಾಶವಿಲ್ಲ. ಅಲ್ಲದೆ ಈ ಅಧಿಕರಣದಲ್ಲಿ ಹೇಳಿದ ವಾಕ್ಯವನ್ನು ವಿಷಯವಾಕ್ಯವನ್ನಾಗಿ ಸ್ವೀಕರಿಸುವುದೂ ನಿಮ್ಮ ಮತದಂತೆ ಬ್ರಹ್ಮನು ನಿರ್ವಿಶೇಷನಾದ್ದರಿಂದ ವಿರುದ್ಧವಾಗುತ್ತದೆ. ಈ ವಿರೋಧ ಪರಿಹಾರಕ್ಕಾಗಿ ಸವಿಶೇಷ ನಿರ್ವಿಶೇಷ ಎಂಬ ವಿಂಗಡನೆ ಮಾಡುವುದಾದರೆ ಫಲಭೇದ ಮತ್ತು ಪಾದಭೇದ ಮಾಡಿರುವುದು ಕೂಡುವುದಿಲ್ಲ. ಮತ್ತು ಸೂತ್ರದಲ್ಲಿ ಹೇಳಿರುವ ಲಿಂಗವೂ ಕೂಡ ವಾಸ್ತವಿಕವಾಗಿ ನಿಮ್ಮ ಮತದಂತೆ ಬ್ರಹ್ಮನಲ್ಲಿ ಇಲ್ಲ. ಹೀಗಾಗಿ ಅದನ್ನಿಟ್ಟುಕೊಂಡು ಸಿದ್ಧಾಂತ ಮಾಡುವುದೂ ಸರಿಯಲ್ಲ. ಆದ್ದರಿಂದ ಅದ್ವೈತಿಗಳು ಮತ್ತು ವಿಶಾಷ್ಟಾದ್ವೈತಿಗಳು ಇಬ್ಬರು ಹೇಳಿದ್ದೂ ಸರಿಯಲ್ಲ.

॥ ಪರಿಪೂರ್ಣಚಂದ್ರಿಕಾದಲ್ಲಿ ಆಕಾಶಾಧಿಕರಣದ ಚಂದ್ರಿಕಾಸಾರವು ಮುಗಿಯಿತು ॥

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ೦೦೮-ಆಕಾಶಾಧಿಕರಣ

ಭಾಗ -೧

ನ್ಯಾಯವಿವರಣ, ನ್ಯಾಯವಿವರಣಟೀಕಾ,
ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿಃ,
ಸೂತ್ರಾರ್ಥರತ್ನಾವಳಿಃ

श्रीमदानन्दतीर्थभगवत्पादाचार्यविरचितम्

# अणुभाष्यम्

## अन्तःस्थत्वाधिकरणम्

**अणुभाष्यम् –**

**..... ..... .. पूर्णानन्दोऽन्तरः खवत् ।**
**प्रणेता ज्योतिरित्याद्यैः प्रसिद्धैरन्यवस्तुषु ।**
**उच्यते विष्णुरेवैकः सर्वैः सर्वगुणत्वतः ॥**

ಮಹಾವಿಷ್ಣುವು ಪರಿಪೂರ್ಣವಾದ ಆನಂದವುಳ್ಳವನು. ಎಲ್ಲರ ಅಂತರ್ಯಾಮಿಯು. ಅವಕಾಶಪ್ರದನಾದ್ದರಿಂದ ಆಕಾಶನೂ ಸಕಲಕ್ಕೂ ಪ್ರೇರಕನೂ, ಜ್ಯೋತಿಯೂ ಆಗಿದ್ದಾನಾದ್ದರಿಂದ ಈ ಶಬ್ದಗಳಿಂದೆಲ್ಲಾ ಪ್ರತಿಪಾದ್ಯನಾಗಿದ್ದಾನೆ. ಬೇರೆ ವಸ್ತುಗಳಲ್ಲಿ ಪ್ರಸಿದ್ಧವಾದ ಎಲ್ಲಾ ಶಬ್ದಗಳಿಂದ ವಿಷ್ಣು ಒಬ್ಬನೇ ಪ್ರಸಿದ್ಧನಾಗಿದ್ದಾನೆ. ಏಕೆಂದರೆ ಎಲ್ಲಾ ಶಬ್ದಗಳು ಹೇಳುವ ಗುಣಗಳು ಅವನಲ್ಲಿ ಮಾತ್ರ ಇರುವುದರಿಂದ.

* * * *

श्री राघवेन्द्रतीर्थविरचिता

# तत्वमञ्जरी

## आकाशाधिकरणम्

नन्वथापि न पूर्णानन्दो विष्णुरिति युक्तम् । तत्प्रकरणे 'यदेष आकाश आनन्दो न स्यात्' इत्याकाशस्य निरुपपदानन्दपदेन पूर्णनन्दोक्तेः, तस्यैवाकाशस्य छांदोग्ये प्रथमेऽध्याये 'अस्य लोकस्य का गतिरिति । आकाश इति होवाच । सर्वाणि इवा इमानि भूतान्याकाशादेव समुत्पद्यन्ते' इत्यादिवाक्ये पुथिवीगतिप्रश्नविषयत्वेन

**वाय्वादिभूतकारणत्वेन च श्रुततया लोकप्रसिद्ध्या न भूताकाशत्वादित्यतः ॐ आकाशस्तल्लिंगादिति ।**

ಆನಂದಮಯಾಧಿಕರಣದಲ್ಲಿ ಪೂರ್ಣಾನಂದನು ವಿಷ್ಣು ಎಂದು ಹೇಳಿದ್ದು ಸರಿಯಲ್ಲ. ಏಕೆಂದರೆ ಆ ಪ್ರಕರಣದಲ್ಲಿ 'ಯದೇಶ ಆಕಾಶ ಆನಂದೋ ನ ಸ್ಯಾತ್' ಎಂದು ಆಕಾಶನಿಗೆ ಉಪಪದವಿಲ್ಲದ 'ಆನಂದ'ಪದದಿಂದ ಪೂರ್ಣಾನಂದವನ್ನು ಹೇಳಿಸ್ಟಾರೆ. ಅದೇ ಆಕಾಶಕ್ಕೆ ಛಾಂದೋಗ್ಯೋಪನಿಷತ್ತಿನ ಪ್ರಥಮಾಧ್ಯಾಯದಲ್ಲಿ 'ಅಸ್ಯ ಲೋಕಸ್ಯ ಕಾ ಗತಿರಿತಿ । ಆಕಾಶ ಇತಿ ಹೋವಾಚ । ಸರ್ವಾಣಿ ಹವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ' ಇತ್ಯಾದಿ ವಾಕ್ಯದಲ್ಲಿ ಪೃಥಿವಿಗೆ ಯಾವುದು ಗತಿ? ಎಂಬ ಪ್ರಶ್ನೆಗೆ ಉತ್ತರರೂಪವಾಗಿ ಮತ್ತು ವಾಯು ಮುಂತಾದ ಭೂತಗಳಿಗೆ ಕಾರಣವಾಗಿ ಶ್ರುತವಾದ್ದರಿಂದ ಮತ್ತು ಲೋಕಪ್ರಸಿದ್ಧಿಯೂ ಇರುವುದರಿಂದ ಆಕಾಶವೆಂದರೆ ಭೂತಾಕಾಶ ಎಂದರ್ಥವಲ್ಲವೇ? ಎಂಬ ಪ್ರಶ್ನೆ ಬಂದರೆ ''ಓಂ ಆಕಾಶಸ್ತಲ್ಲಿಂಗಾತ್'' ಎಂಬುದಾಗಿ ಸೂತ್ರಕಾರರು ಹೇಳುತ್ತಾರೆ.

**तदर्थः खवदिति । अंतर इत्यस्ति । स चावकाशवाची सन् पूर्ववददर्श आद्यच्प्रत्ययान्तः । विष्णुः खवदाकाशवदंतरोऽवकाशवान् । 'यथाऽकाशः प्राणिसंचाराद्यनुकूलविवरत्वशब्दितावकाशवांस्तथा विष्ण्वाख्याकाशः आ काशनमवकाशः' इति सुधोक्तदिशा आकाशपदप्रवृत्तिनिमित्तभूतविवरत्वशब्दितप्राणिसंचारानुकूलावकाशवान् । 'सर्वभूतगुणैर्युक्तं देवं त्वं ज्ञातुमर्हसि' इति नवमगीताभाष्योक्तेर्निरवधिकाकाशशब्दप्रवृत्तिनिमित्तवानित्यर्थः । यद्वा खवत् अंतरो विवरः प्राणिसंचारानुकूल इत्यर्थः । उक्तमेव तात्पर्यम् ।**

ಅದರ ಸಂಗ್ರಹವೇ ''ಖವತ್''. ಇಲ್ಲಿ ''ಅಂತರಃ'' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಅದನ್ನು ಅವಕಾಶ ಎಂಬರ್ಥದಲ್ಲಿ ಹಿಂದಿನಂತೆ 'ಅರ್ಶ ಆದ್ಯಚ್' ಪ್ರತ್ಯಯಾಂತವನ್ನಾಗಿ ಇಟ್ಟುಕೊಳ್ಳಬೇಕು. ಆಗ ವಿಷ್ಣುಃ ಖವತ್ = ಆಕಾಶದಂತೆ, ಅಂತರಃ = ಅವಕಾಶವುಳ್ಳವನು ಎಂದರ್ಥ. ಹೇಗೆ ಆಕಾಶವು ಪ್ರಾಣಿಗಳ ಸಂಚಾರಕ್ಕೆ ಅನುಕೂಲವಾದ ವಿವರತ್ವಶಬ್ದವಾಚ್ಯವಾದ ಅವಕಾಶವುಳ್ಳದ್ದೋ ಹಾಗೆ ವಿಷ್ಣುವೆಂಬ ಆಕಾಶವೂ ಕೂಡ ಆ ಕಾಶನಮ್(ಅವಕಾಶಃ) ಅಂದರೆ ಅವಕಾಶವುಳ್ಳದ್ದು' (ಯಥಾಽಕಾಶಃ ಪ್ರಾಣಿಸಂಚಾರಾದ್ಯನುಕೂಲವಿವರತ್ವಶಬ್ದಿತಾವಕಾಶವಾನ್ ತಥಾ ವಿಷ್ಣ್ವಾಖ್ಯಾಕಾಶಃ ಆ ಕಾಶನಮವಕಾಶಃ) ಎಂದು ಸುಧೆಯಲ್ಲಿ ಹೇಳಿದಂತೆ ಆಕಾಶಪದಪ್ರವೃತ್ತಿನಿಮಿತ್ತವಾದ ವಿವರತ್ವಶಬ್ದದಿಂದ ಕರೆಯಲ್ಪಡುವ ಪ್ರಾಣಿಸಂಚಾರಕ್ಕೆ ಅನುಕೂಲವಾದ ಅವಕಾಶವುಳ್ಳವನು ವಿಷ್ಣುವು. ''ಸರ್ವಭೂತಗುಣೈರ್ಯುಕ್ತಂ ದೇವಂ ತ್ವಂ ಜ್ಞಾತುಮರ್ಹಸಿ'' (ಸಕಲಭೂತಗಳ ಗುಣದಿಂದ ಕೂಡಿದ ದೇವನನ್ನು ನೀನು ತಿಳಿಯಲು ಯೋಗ್ಯನಾಗಿದ್ದಿ) ಎಂದು ಒಂಭತ್ತನೇ ಅಧ್ಯಾಯದ ಗೀತಾಭಾಷ್ಯದಲ್ಲಿ ಹೇಳಿದಂತೆ, ನಿರವಧಿಕವಾದ ಆಕಾಶಪದಪ್ರವೃತ್ತಿನಿಮಿತ್ತವುಳ್ಳವನು ಎಂದು ಅಭಿಪ್ರಾಯ. ಅಥವಾ ಖವತ್ = ಆಕಾಶದಂತೆ, ಅಂತರಃ =

ವಿವರತ್ವವುಳ್ಳವನು; ಪ್ರಾಣಸಂಚಾರಕ್ಕೆ ಅನುಕೂಲವುಳ್ಳವನು ಎಂದರ್ಥ. ಈ ರೀತಿಯ ಯೋಜನೆಯಲ್ಲಿಯೂ ತಾತ್ಪರ್ಯವನ್ನು ಹಿಂದಿನಂತೆ ಸ್ವೀಕರಿಸಬೇಕು.

**शब्दांतरनिमित्तस्याप्युपलक्षकमिदम् । तथाऽन्यवस्तुषु प्रसिद्धैराकाशाद्यधिभूतगतैः सर्वैः शब्दैरेको विष्णुरेवोच्यते । न तु भूतकाशादिस्तदर्थः । अवकाशदातृत्वादेर्वैष्णवत्वे तच्छब्दानां वैष्णवत्वावश्यंभावादिति भावः । कुतः? सर्वगुणत्वतः । तस्य 'स एष परोवरीयानुद्गीथः' 'स एषोऽनंतः' 'को ह्येवान्यात्कः प्राण्यात्' इत्यादिसर्वगुणत्त्वात् । भूते तदयोगादित्यर्थः ।**

ಈ ಅಧಿಕರಣದಲ್ಲಿ ಸಮನ್ವಯ ಮಾಡಿದ ಆಕಾಶಶಬ್ದವು ಉಪಲಕ್ಷಣ. ಆದ್ದರಿಂದ 'ಅನ್ಯವಸ್ತುಷು ಪ್ರಸಿದ್ಧೈಃ' ಆಕಾಶ ಮೊದಲಾದ ಬೇರೆ ಭೂತಗಳಲ್ಲಿ ಪ್ರಸಿದ್ಧವಾದ ಎಲ್ಲಾ ಶಬ್ದಗಳಿಂದಲೂ ವಿಷ್ಣುವೊಬ್ಬನೇ ''ಉಚ್ಯತೇ'' ಹೇಳಲ್ಪಡುತ್ತಾನೆ ಹೊರತು ಭೂತಾಕಾಶ ಮೊದಲಾದವುಗಳಲ್ಲ. ಅವಕಾಶದಾತೃತ್ವ ಮೊದಲಾದ ಧರ್ಮಗಳು ವಿಷ್ಣುವಿನದ್ದು ಎಂದಾದರೆ ಅದನ್ನು ನಿಮಿತ್ತೀಕರಿಸಿ ಪ್ರವೃತ್ತವಾಗುವ ಶಬ್ದಗಳೂ ವಿಷ್ಣುವಾಚಕಗಳೇ ಆಗಬೇಕು ಎಂದಭಿಪ್ರಾಯ. ಏಕೆಂದರೆ ''ಸರ್ವಗುಣತ್ವತಃ''. ಆ ವಿಷ್ಣುವು 'ಸ ಏಷ ಪರೋವರೀಯಾನುದ್ಗೀಥಃ' 'ಸ ಏಷೋಽನಂತಃ' 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್' ಇತ್ಯಾದಿ ಶ್ರುತ್ಯುಕ್ತವಾದ ಪರೋವರೀಯಸ್ತ್ವಮುಂತಾದ ಸರ್ವಗುಣವುಳ್ಳವನಾಗಿದ್ದಾನೆ.

**उच्यत इति मुख्यवृत्तिरुक्ता । सा केन निमित्तेन? इत्यतोत्यतोऽपि प्रागुक्तमाकाशपदप्रवृत्तिनिमित्तवत्त्वमुपलक्षणमिति भावेनाह – सर्वगुणत्वत इति ॥ तच्छब्दप्रवृत्तिनिमित्तावकाशदातृत्वादिसर्वगुणवत्त्वात् अन्यगतप्रवृत्तिनिमित्तं प्रति स्वातंत्र्याच्चेत्यर्थः ।**

''ಉಚ್ಯತೇ'' ಎಂದು ಅನುಭಾಷ್ಯದಲ್ಲಿ ಹೇಳುವುದರ ಮೂಲಕ ಮುಖ್ಯವೃತ್ತಿಯಿಂದ ಎಂದು ಹೇಳಿದೆ. ಅದಕ್ಕೇನು ಕಾರಣ? ಎಂದರೆ ಹಿಂದೆ ಹೇಳಿದ ಆಕಾಶಪದಪ್ರವೃತ್ತಿನಿಮಿತ್ತವತ್ತ್ವವು ಉಪಲಕ್ಷಣ ಎನ್ನುವ ಅಭಿಪ್ರಾಯದಿಂದ ''ಸರ್ವಗುಣತ್ವತಃ'' ಎಂದು ಹೇಳುತ್ತಾರೆ. ಆಕಾಶಪದಪ್ರವೃತ್ತಿನಿಮಿತ್ತವಾದ ಅವಕಾಶದಾತೃತ್ವ ಮೊದಲಾದ ಸಕಲಗುಣವುಳ್ಳವನಾದ್ದರಿಂದ ಮತ್ತು ಭೂತಾಕಾಶದಲ್ಲಿರುವ (ತದನ್ಯಗತ) ಪ್ರವೃತ್ತಿನಿಮಿತ್ತವನ್ನು ಕುರಿತು ಸ್ವಾತಂತ್ರ್ಯವೂ ಇರುವುದರಿಂದ (ಅವನು ಮುಖ್ಯವೃತ್ತಿಯಿಂದ ವಾಚ್ಯ) ಎಂದರ್ಥ.

आकाशादिशब्दानां विष्णौ यौगिकत्वद्योतनाय **अन्तर** इत्युक्तिः। खेऽपि तच्छब्दप्रवृत्तिहेतुरयमेवेति द्योतनाय **खवत्** इत्युक्तिः ॥८॥

ಆಕಾಶಾದಿಶಬ್ದಗಳು ವಿಷ್ಣುವಿನಲ್ಲಿ ಯೌಗಿಕ ಎಂದು ತೋರಿಸುವುದಕ್ಕಾಗಿ ಅಣುಭಾಷ್ಯದಲ್ಲಿ ಅಂತರಃ

ಎಂದು ಹೇಳಿದ್ದಾರೆ. ಆಕಾಶದಲ್ಲಿಯೂ ಆ ಶಬ್ದಪ್ರವೃತ್ತವಾಗಲು ಈ ವಿಷ್ಣುವೇ ಕಾರಣ ಎಂದು ತಿಳಿಸಲು "ಖವತ್" ಎಂದು ಹೇಳಿದ್ದಾರೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ
ತತ್ವಮಂಜರಿಯ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಮುಗಿಯಿತು.

* * * * *

॥श्रीः ॥

श्रीराघवेन्द्रतीर्थविरचिता

# तन्त्रदीपिका

## आकाशाधिकरणम्

॥ ॐ आकाशस्तल्लिङ्गात् ॐ ॥ १-१-२२

अत्र नये आधिभौतिकसर्वनामसमन्वय उच्यते । प्राधान्यादन्योपलक्षकत्वेनाकाशस्योक्तिः । तत्त्विति वर्तते । ''आकाश इति होवाच'' इति छान्दोग्यस्थाकाशो हरिरेव । महायोगविद्वद्रूढिभ्यां मुख्यवृत्त्या ब्रह्मपर आकाशशब्द इति यावत् । न तु रूढ्या भूताकाशम् । ''स एषः परोवरीयानुद्गीथः स एषोऽनन्तः'' इति परोवरीयस्त्वादेस्तत्राकाशे तस्य विष्णोर्लिङ्गादित्यर्थः । ब्रह्माव्यभिचारिलिङ्गस्याकाशे श्रवणादिति यावत् । लिङ्गादित्युक्तिः समुदायाशया । प्रतिनयं तत्त्वित्यवधारणार्थकतोरनुवृत्तिः ''अभिमानिव्यपदेशस्तु'' इत्यत्राभिमानिदेवतेव महायोगविद्वद्रूढिभ्यामीश एव तत्तच्छब्दमुख्यार्थ इति दर्शयितुम् । अन्यस्य मुख्यत्वे वा अस्यामुख्यत्वे वा तदयोगात् । एवं च मुख्यामुख्यन्यायेनैव श्रुतिषु तैस्तैः शब्दैः विष्णुग्रहणसिद्धवाप्यभ्यासतद्धर्मतल्लिङ्गाद्युक्तिस्तात्पर्यज्ञप्त्यर्था । मुख्यत्वं नेत्यभ्युपेत्य, अनुवादेन वेति ज्ञेयम् ॥८॥

ಈ ಅಧಿಕರಣದಲ್ಲಿ ಆಧಿಭೌತಿಕಸಕಲಶಬ್ದಗಳ ಸಮನ್ವಯನ್ನು ಹೇಳುತ್ತಾರೆ. ಮುಖ್ಯವಾದ್ದರಿಂದ ಭೂತಗಳನ್ನು ಹೇಳುವ ಪದಗಳಿಗೆ ಉಪಲಕ್ಷಕವಾದ್ದರಿಂದ ಆಕಾಶಪದವನ್ನು ಹೇಳುತ್ತಾರೆ. 'ತತ್ ತು' ಎಂಬ ಪದಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು.

ಆಕಾಶ ಇತಿ ಹೋವಾಚ' ಎಂದು ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಲ್ಪಟ್ಟ ಆಕಾಶನು (ಆಕಾಶಶಬ್ದವಾಚ್ಯನು) ವಿಷ್ಣುವೇ ಆಗಿದ್ದಾನೆ. ಮಹಾಯೋಗವಿದ್ವದ್‌ರೂಢಿಗಳಿಂದ ಮುಖ್ಯವೃತ್ತಿಯಿಂದ ಆಕಾಶಶಬ್ದವು ಬ್ರಹ್ಮನನ್ನೇ ಹೇಳುತ್ತಿದೆ ಎಂದು ಅಭಿಪ್ರಾಯ ಹೊರತು ರೂಢಿಯಿಂದ ಭೂತಾಕಾಶವನ್ನಲ್ಲ. ಏಕೆಂದರೆ 'ಸ ಏಷಃ ಪರೋವರೀಯಾನುದ್ಗೀಥಃ ಸ ಏಷೋಽನಂತಃ' ಎಂದು ಪರೋವರೀಯಸ್ತ್ವ ಮುಂತಾದ ಲಿಂಗಗಳು ಆಕಾಶನಲ್ಲಿವೆ ಎಂದು ಶ್ರುತಿ ಹೇಳುತ್ತಿದೆ. ಅವು ವಿಷ್ಣುಲಿಂಗಗಳಾಗಿವೆ. ಪರೋವರೀಯಸ್ತ್ವವು ಆಕಾಶನಲ್ಲಿದ್ದು, ಆ ಪರೋವರೀಯಸ್ತ್ವವು ವಿಷ್ಣುಲಿಂಗವಾಗಿದೆ ಎಂದರ್ಥ. ಬ್ರಹ್ಮನನ್ನು ಬಿಟ್ಟು ಬೇರೆ ಕಡೆ ಇರದ ಗುಣಗಳು ಆಕಾಶನಲ್ಲಿ ಶ್ರುತವಾಗಿವೆ ಎಂದಭಿಪ್ರಾಯ. 'ಲಿಂಗಾತ್' ಎಂದು ಏಕವಚನವನ್ನು ಹೇಳಿದ್ದು ಸಮೂಹದ ಅಭಿಪ್ರಾಯದಿಂದ. ಪ್ರತಿಯೊಂದು ಅಧಿಕರಣದಲ್ಲಿಯೂ 'ತತ್ ತು' ಎಂಬಿತ್ಯಾದಿ ಅವಧಾರಣಾರ್ಥಕವಾದ ತುಶಬ್ದದ ಅನುವೃತ್ತಿಯು. 'ಅಭಿಮಾನಿವ್ಯಪದೇಶಸ್ತು' ಎಂಬ ಸೂತ್ರದಲ್ಲಿ ಹೇಳಿದಂತೆ ಅಭಿಮಾನಿದೇವತೆಯು ಆಯಾಯ ಶಬ್ದದ ಮುಖ್ಯಾರ್ಥವಾಗುವಂತೆ, ಮಹಾಯೋಗ ಮತ್ತು ವಿದ್ವದ್‌ರೂಢಿಗಳಿಂದ ಆಯಾಯ ಶಬ್ದಗಳ ಮುಖ್ಯಾರ್ಥನು ಭಗವಂತನೇ ಆಗಿದ್ದಾನೆ ಎಂದು ತೋರಿಸುವುದಕ್ಕಾಗಿ ಹೇಳಿದ್ದು. ಬೇರೆಯವರು ಮುಖ್ಯಾರ್ಥರಾಗಿದ್ದರೆ ಅಥವಾ ಬ್ರಹ್ಮನು ಅಮುಖ್ಯಾರ್ಥನಾಗಿದ್ದರೆ ಆ ರೀತಿಯ ಅವಧಾರಣೆಯು ಕೂಡುವುದಿಲ್ಲ. ಹೀಗೆ ಮುಖ್ಯಾರ್ಥ ಮತ್ತು ಅಮುಖ್ಯಾರ್ಥಗಳೆರಡರಲ್ಲಿ ''ಮುಖ್ಯಾಮುಖ್ಯಯೋರ್ಮುಖ್ಯೇ ಕಾರ್ಯಸಂಪ್ರತ್ಯಯಃ' (ಮುಖ್ಯ ಮತ್ತು ಅಮುಖ್ಯಗಳೆರಡು ಇದ್ದಾಗ ಮುಖ್ಯವಾದುದನ್ನೇ ಸ್ವೀಕರಿಸಬೇಕು) ಎಂಬ ನ್ಯಾಯದಂತೆ ಶ್ರುತಿಗಳಲ್ಲಿ ಆಯಾಯ ಶಬ್ದಗಳಿಂದ ವಿಷ್ಣುವನ್ನೇ ಸ್ವೀಕರಿಸಬೇಕು ಎಂದು ಸಿದ್ಧವಾದರೂ ಸೂತ್ರದಲ್ಲಿ ಬ್ರಹ್ಮಶಬ್ದಾಭ್ಯಾಸ, ಬ್ರಹ್ಮಲಿಂಗ ಇವುಗಳನ್ನು ಯುಕ್ತಿಯನ್ನಾಗಿ ಹೇಳಿರುವುದು ತಾತ್ಪರ್ಯಜ್ಞಾನಕ್ಕೋಸ್ಕರ. ಅಥವಾ ಬ್ರಹ್ಮನಿಗೆ ಆ ಶಬ್ದಗಳ ಮುಖ್ಯತ್ವವು ಇಲ್ಲ ಎಂಬುದನ್ನು ಅಂಗೀಕರಿಸಿ ಹೇಳಿದ್ದು ಅಥವಾ ಅನುವಾದ ಮಾಡಿದ್ದು ಎಂದು ತಿಳಿಯಬೇಕು.

॥ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಮುಗಿಯಿತು ॥

* * * * *

श्रीराघवेन्द्रयतिकृता

# न्यायमुक्तावळिः

## आकाशाधिकरणम्

॥ ॐ आकाशस्तल्लिङ्गात् ॐ ॥ ८ ॥

अधिकाशङ्कां कृत्वा पूर्वन्यायस्यातिदेशात् आतिदेशिकी वा पूर्ववैषम्येण पूर्वपक्षोत्थानात् प्रत्युदाहरणरूपा वा सङ्गतिः ॥ छान्दोग्ये आद्येऽध्याये आम्नायते (छां. १-९) 'अस्य लोकस्य का गतिरित्याकाश इति होवाच' इत्यादि तत्र शालावत्यप्रश्नोत्तरत्वेन श्रुत आकाशशब्दः किं भूताकाशवाची उत विष्णुवाची? इति सन्देहः । आकशशब्दः किं भूताकाशवाची उत विष्णुवाचीति सन्देहः ।

आकाशशब्दस्य आकाशे रूढत्वात् भूताकाशमेवेति प्राप्तम् । न च विष्णुलिङ्गविरोधः । श्रुतितो लिङ्गस्य दुर्बलत्वात् ।

न च 'लिङ्गस्य निरवाकाशत्वान्निरवकाशलिङ्गेन रूढिबाधः पूर्वत्रेव सिद्धः' इति नास्योत्थितिरिति शंक्यम् । इन्द्रादिगतैश्वर्यादेरीशप्रसादलब्धत्वेन तदधीनत्वादिति यायेन इन्द्रादिशब्दानामीशवाचित्वेऽपि अचेतने तत्प्रसादाभावेन आकाशपद-प्रवृत्तिहेतोर्विवरत्वस्य तदनधीनत्वादतद्गतत्वाच्चेत्यधिकाशङ्क्योत्थानाद्वा येन लिङ्गेन पूर्वत्र सिद्धान्तः न तेनैवात्र किंत्वन्येन । एवं च प्रागुक्तलिङ्गेन वैष्णवत्वस्य भाष्योक्तश्रुत्यादिना निश्चयेऽप्यत्र तदनिश्चयात् निरूढाकाशश्रुत्या भूताकाश एवेति पूर्वः पक्षः । एवमग्रेपि ॥

ಈ ಅಧಿಕರಣಕ್ಕೆ ಹೆಚ್ಚಿನ ಪ್ರಶ್ನೆಯನ್ನು ಮಾಡಿ ಹಿಂದಿನ ಅಧಿಕರಣದ ನ್ಯಾಯವನ್ನು ಅತಿದೇಶಮಾಡುವುದರಿಂದ ಆತಿದೇಶಕೀ ಸಂಗತಿ. ಅಥವಾ ಹಿಂದಿನ ಅಧಿಕರಣದ ಪೂರ್ವಪಕ್ಷಕ್ಕಿಂತ ಭಿನ್ನವಾಗಿ ಪೂರ್ವಪಕ್ಷ ಹೇಳುವುದರಿಂದ ಪ್ರತ್ಯುದಾಹರಣರೂಪವಾದ ಸಂಗತಿ. ಛಾಂದೋಗ್ಯೋ-ಪನಿಷತ್ತಿನ ಮೊದಲನೆಯ ಅಧ್ಯಾಯದಲ್ಲಿ ಹೀಗೆ ಹೇಳಿದೆ -- 'ಅಸ್ಯ ಲೋಕಸ್ಯ ಕಾ ಗತಿರಿತಿ । ಆಕಾಶ ಇತಿ ಹೋವಾಚ' ಎಂದು ಶಾಲಾವತ್ಯರ ಪ್ರಶ್ನೆಗೆ ಉತ್ತರರೂಪವಾಗಿ ಹೇಳಲ್ಪಟ್ಟ ಆಕಾಶಶಬ್ದವು ಭೂತಾಕಾಶವನ್ನು ಹೇಳುತ್ತದೋ ಅಥವಾ ವಿಷ್ಣುವನ್ನು ಹೇಳುತ್ತದೋ ಎಂದು ಸಂದೇಹ.

ಆಕಾಶಶಬ್ದವು ಭೂತಾಕಾಶದಲ್ಲಿ ರೂಢವಾಗಿರುವುದರಿಂದ ಭೂತಾಕಾಶವೇ ಎಂದು ಪೂರ್ವಪಕ್ಷ. ಭೂತಾಕಾಶವೆಂದು ಹೇಳಿದರೆ ಅಲ್ಲಿ ವಿಷ್ಣುಲಿಂಗದ ವಿರೋಧವು ಬರುವುದಿಲ್ಲವೇ? ಎಂದರೆ ಶ್ರುತಿಗಿಂತ ಲಿಂಗವು ದುರ್ಬಲವಾದ್ದರಿಂದ ವಿರೋಧವಿಲ್ಲ.

ಲಿಂಗವು ನಿರವಕಾಶವಾದ್ದರಿಂದ ನಿರವಕಾಶವಾದ ಲಿಂಗದಿಂದ ರೂಢಿಗೆ (ಶ್ರುತಿಗೆ) ಬಾಧವು ಪೂರ್ವಾಧಿಕರಣದಲ್ಲೇ ಸಿದ್ಧವಾಗಿರುವುದರಿಂದ ಈ ರೀತಿ ಪೂರ್ವಪಕ್ಷ ಮಾಡುವುದು ಸರಿಯಲ್ಲ ಎಂದರೆ, 'ಇಂದ್ರಾದಿದೇವತೆಗಳಲ್ಲಿರುವ ಐಶ್ವರ್ಯ ಮೊದಲಾದವುಗಳು ಭಗವಂತನ ಪ್ರಸಾದದಿಂದ ಹೊಂದಿ-ದವುಗಳಾದ್ದರಿಂದ ತದಧೀನತ್ವನ್ಯಾಯದಿಂದ ಇಂದ್ರಾದಿಶಬ್ದಗಳು ಭಗವಂತನನ್ನು ಹೇಳುತ್ತವೆಯಾದರೂ, ಅಚೇತನವಾದುದರಲ್ಲಿ ಈಶ್ವರನ ಪ್ರಸಾದಕ್ಕೆ ಅವಕಾಶವಿಲ್ಲದ್ದರಿಂದ ಆಕಾಶಪದಪ್ರವೃತ್ತಿನಿಮಿತ್ತವಾದ ವಿವರತ್ವವು ಅವನ ಅಧೀನವಾಗಿಲ್ಲ ಮತ್ತು ಅವನಲ್ಲಿ ಇಲ್ಲ ಎಂದು ಹೆಚ್ಚಿನ ಸಂದೇಹ ಇರುವುದರಿಂದ ಮತ್ತು ಹಿಂದಿನ ಅಧಿಕರಣದಲ್ಲಿ ಯಾವ ಲಿಂಗದಿಂದ ಸಿದ್ಧಾಂತಮಾಡಲಾಗಿತ್ತೋ ಅದೇ ಲಿಂಗದಿಂದ ಇಲ್ಲಿ ಸಿದ್ಧಾಂತವಲ್ಲ ಹೊರತು ಬೇರೆಯ ಲಿಂಗದಿಂದ ಸಿದ್ಧಾಂತ. ಹಾಗಾಗಿ ಹಿಂದಿನ ಅಧಿಕರಣದಲ್ಲಿ ಹೇಳಿದ ಲಿಂಗದಿಂದ ಆ ಅಧಿಕರಣದಲ್ಲಿ ಭಾಷ್ಯೋಕ್ತಶ್ರುತ್ಯಾದಿಗಳಿಂದ ವಿಷ್ಣುತ್ವವನ್ನು ನಿಶ್ಚಯ ಮಾಡಿದ್ದರೂ ಈ ಅಧಿಕರಣದಲ್ಲಿ ಆ ಲಿಂಗದಿಂದ ವಿಷ್ಣುತ್ವನಿಶ್ಚಯವಿಲ್ಲದ್ದರಿಂದ ಲೋಕಪ್ರಸಿದ್ಧ ಆಕಾಶಶ್ರುತಿಯಿಂದ ಭೂತಾಕಾಶವೇ ಆಕಾಶಶಬ್ದವಾಚ್ಯ ಎಂದು ಹಿಂದಿನ ಅಧಿಕರಣದ ಮೇಲೆ ಪೂರ್ವಪಕ್ಷ. ಹೀಗೆಯೇ ಮುಂದಿನ ಅಧಿಕರಣಗಳಲ್ಲೂ ತಿಳಿಯಬೇಕು.

**सिद्धान्तस्तु** ॥ 'स एष परोवरीयानुद्गीथः' 'स एषोऽनन्तः' इति परोवरीयस्त्वो-द्गीथत्वानन्तत्वलिङ्गानां 'परस्मादुत्तमं प्रोक्तम्' इतिस्मृत्या 'परो मात्रया' इतिश्रुत्या (ऋ.७-९९-१) 'विष्णोर्नुकम्' इतिश्रुत्या (ऋ. १-१५४-१) च विष्णवेकनिष्ठत्वात् तद्बलेन श्रुतेर्लोकप्रसिद्धित्यागेन विष्णुवाचित्वावश्यम्भावादाकाशो विष्णुरेव ।

न च निमित्ताभावः । 'नभो ददाति श्वसतां मार्गं यन्नियमाददः' इति स्मृत्या (भाग. ३-३०-४३) चेतनस्येशाधीनत्वे सुतरां जडस्येति लोकन्यायाच्च तदधीनत्वेन विवरत्वस्य तत्पदनिमित्तस्येशगतत्वाभावेऽपि तत्प्रति स्वातन्त्र्येण 'तदधीनत्वात्' इति वक्ष्यमाणन्यायेन 'सर्वभूतगुणैर्युक्तम्' इत्यादिस्मृत्या तद्गतत्वेन च मुख्यतो विष्णुवाचित्वोपपत्तेरिति ॥ अत्रायमाकाशोऽन्यश्चेत् 'यदेष आकाश आनन्दो न स्यात्' इत्युक्तोऽपि विष्णोरन्य इति तदाक्षेपसमाधाने पूर्वोत्तरपक्षफले ॥८॥

ಸಿದ್ಧಾಂತ ಹೀಗಿದೆ — ''ಸ ಏಷ ಪರೋವರೀಯಾನುದ್ಗೀಥಃ' 'ಸ ಏಷೋऽನಂತಃ' ಎಂದು ಶ್ರುತಿಯಲ್ಲಿ ಪರೋವರೀಯಸ್ತ್ವ, ಉದ್ಗೀಥತ್ವ, ಅನಂತತ್ವ ಮುಂತಾದ ಲಿಂಗಗಳು 'ಪರಸ್ಮಾದುತ್ತಮಂ ಪ್ರೋಕ್ತಮ್' ಇತ್ಯಾದಿ ಸ್ಮೃತಿಗಳಿಂದ ಮತ್ತು 'ಪರೋ ಮಾತ್ರಯಾ' ಎನ್ನುವ ಶ್ರುತಿಯಿಂದ;

'ವಿಷ್ಣೋರ್ನುಕಮ್' ಎನ್ನುವ ಶ್ರುತಿಯಿಂದ ವಿಷ್ಣುವಿನಲ್ಲಿ ಮಾತ್ರ ಇರುವವುಗಳೆಂದು ಸಿದ್ಧವಾಗುವುದರಿಂದ ಆ ಲಿಂಗಗಳ ಬಲದಿಂದ ಶ್ರುತಿಯು ಲೋಕಪ್ರಸಿದ್ಧವಾದ ಭೂತಾಕಾಶವನ್ನು ಬಿಟ್ಟು ವಿಷ್ಣುವನ್ನು ಹೇಳಲೇ ಬೇಕಾಗುತ್ತದೆಯಾದ್ದರಿಂದ ಆಕಾಶಶಬ್ದವಾಚ್ಯನು ವಿಷ್ಣುವೇ.

ಆಕಾಶಪದಪ್ರವೃತ್ತಿನಿಮಿತ್ತ ವಿವರತ್ವವಿಲ್ಲದಿರುವುದರಿಂದ ಆಕಾಶಪದವಾಚ್ಯನು ಹೇಗೆ? ಎನ್ನುವುದೂ ಸರಿಯಲ್ಲ. 'ನಭೋ ದದಾತಿ ಶ್ವಸತಾಂ ಮಾರ್ಗಂ ಯನ್ನಿಯಮಾದದಃ' ಎನ್ನುವ (ಭಾಗವತ) ಸ್ಮೃತಿಯಿಂದ 'ಚೇತನವು ಈಶಾಧೀನವಾದರೆ ಜಡವು ಖಂಡಿತಾ ಈಶ್ವರನ ಅಧೀನವೇ' ಎಂಬ ಲೋಕದ ನ್ಯಾಯದಿಂದಲೂ ಆಕಾಶವು ಅವನ ಅಧೀನವಾದ್ದರಿಂದ.

ಹಾಗೆಯೇ ಆಕಾಶಪದಪ್ರವೃತ್ತಿನಿಮಿತ್ತ ವಿವರತ್ವವು ಭಗವಂತನಲ್ಲಿ ಇಲ್ಲದಿದ್ದರೂ ಆಕಾಶದಲ್ಲಿರುವ ವಿವರತ್ವವನ್ನು ಕುರಿತು ಸ್ವಾತಂತ್ರ್ಯವಿರುವುದರಿಂದ 'ತದಧೀನತ್ವಾತ್' ಎಂದು ಮುಂದೆ ಹೇಳುವ ನ್ಯಾಯದಿಂದಲೂ,

'ಸರ್ವಭೂತಗುಣೈರ್ಯುಕ್ತಂ' ಎನ್ನುವ ಸ್ಮೃತಿಯಿಂದ ವಿವರತ್ವವು ಅವನಲ್ಲಿದೆಯಾದ್ದರಿಂದ

ಆಕಾಶಶಬ್ದವು ಮುಖ್ಯವಾಗಿ ವಿಷ್ಣುವನ್ನು ಹೇಳುತ್ತದೆ ಎನ್ನಬಹುದು.

ಈ ಅಧಿಕರಣದಲ್ಲಿಯೂ ಇಲ್ಲಿ ಹೇಳಿದ ಆಕಾಶಶಬ್ದವು ಬೇರೆಯವನೆಂದಾದರೆ 'ಯದೇಷ ಆಕಾಶೋ ಆನಂದೋ ನ ಸ್ಯಾತ್' ಎಂದು ಹೇಳಿದಂತೆ ಆಕಾಶನೂ ಕೂಡ ವಿಷ್ಣುವಿನಿಗಿಂತ ಭಿನ್ನ ಎಂದು ಆಕ್ಷೇಪ ಮತ್ತು ಅದರ ಪರಿಹಾರ ಈ ಅಧಿಕರಣದ ಫಲ.

॥ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಮುಗಿಯಿತು ॥

* * * *

श्रीपद्मनाभतीर्थविरचितसत्तर्कदीपावळ्याम्

## - प्राणाधिकरणम् –(००९)

ॐ ॥ अत एव प्राणः ॥ॐ

उक्तन्यायेन श्रुत्यन्तरस्य विष्णुपरत्वं च साधयत् सूत्रमुपन्यस्य व्याचष्टे – अत एवेत्यादिना ॥ इदमाम्नायते । 'तद्वै त्वं प्राणोऽभवः' इति प्राणशब्दस्य वायौ रूढत्वात् तेनात्र तावद् वायुरेवोच्यते ।

न च गताधिकरणन्यायेन प्राणशब्दार्थो विष्णुरिति सिद्ध्यति । 'यद् देवान् प्राणयो नव' इति वाक्यशेषविरोधात् । नवशब्दोपलक्षितेन्द्रियदेवादिप्रणेतृत्वस्य प्राणलिङ्गत्वात् ।

आनन्दमयत्वं विष्णुरेवोक्तम् । तदपि न युज्यते 'महान् भोगः' इति प्राणशब्दार्थस्य वायोः परानन्दश्रवणात् । 'भुज्यत इति भोगः' इति आनन्दस्य भोगशब्देन ग्रहणादित्येतं पक्षं प्रतिक्षिपति – न चैवमित्यादिना ॥

'श्रीश्च ते लक्ष्मीश्च पत्न्यौ' इति श्रूयमाणं द्विरूपलक्ष्मीपतित्वं प्राणशब्दार्थो विष्णुरेवेति ज्ञापयति । न हि वायोर्लक्ष्मीपतित्वं युज्यते । यदुक्तं देवप्रणेतृत्वं प्राणलिङ्गं तत्प्रेरके हृषीकेश एव मुख्यं 'प्राणस्य प्राणम्' इति श्रुतेरित्यर्थः ।

ಹಿಂದಿನ ಅಧಿಕರಣದ ನ್ಯಾಯದಂತೆ ಮತ್ತೊಂದು ಶ್ರುತಿಗೆ ವಿಷ್ಣುಪರತ್ವವನ್ನು ಸಾಧಿಸುವುದಕ್ಕಾಗಿ ಸೂತ್ರವನ್ನು ಪಠಿಸುತ್ತಾ "ಅತ ಏವ" ಎಂಬುದರಿಂದ ವ್ಯಾಖ್ಯಾನಿಸುತ್ತಿದ್ದಾರೆ. ಇಲ್ಲಿ ತಿಳಿಯುವ ವಿಚಾರ ಹೀಗಿದೆ. 'ತದ್ ವೈ ತ್ವಂ ಪ್ರಾಣೋಽಭವಃ' ಎಂಬಲ್ಲಿರುವ ಪ್ರಾಣಶಬ್ದವು ಮುಖ್ಯ-ವಾಯುವಿನಲ್ಲಿ ರೂಢವಾಗಿದೆ. ಆದ್ದರಿಂದ ಮುಖ್ಯವಾಯುವೇ ಪ್ರಾಣಶಬ್ದವಾಚ್ಯನು.

ಹಿಂದಿನ ಅಧಿಕರಣದ ನ್ಯಾಯದಿಂದ ವಿಷ್ಣುವೇ ಪ್ರಾಣಶಬ್ದವಾಚ್ಯನೆಂದು ಹೇಳಬಾರದು. ಏಕೆಂದರೆ 'ಯದ್ದೇವಾನ್ ಪ್ರಾಣಯೋ ನವ' ಎಂಬ ವಾಕ್ಯಶೇಷದ ವಿರೋಧ ಬರುತ್ತದೆ. 'ನವ' ಎಂಬ ಶಬ್ದದಿಂದ ಉಪಲಕ್ಷಿತವಾದ ಇಂದ್ರಿಯಾಭಿಮಾನಿದೇವತೆಗಳನ್ನು ನಿಯಮನಮಾಡುವ ಮುಖ್ಯಪ್ರಾಣನ ಲಿಂಗವು ಕೇಳಿಸುತ್ತಿದೆ. ಮತ್ತು ಆನಂದಮಯತ್ವವನ್ನು ವಿಷ್ಣುವಿಗೆ ಹೇಳಿದ್ದೂ ಸಹ ಕೂಡುವುದಿಲ್ಲ. ಏಕೆಂದರೆ, 'ಮಹಾನ್ ಭೋಗಃ' ಎಂಬುದಾಗಿ ಪ್ರಾಣಶಬ್ದಪ್ರತಿಪಾದ್ಯನಾದ

ಮುಖ್ಯವಾಯುವಿನಲ್ಲಿಯೇ ಆನಂದಮಯತ್ವವು ಕೇಳಿಸುತ್ತಿದೆ. 'ಭುಜ್ಯತೇ ಇತಿ ಭೋಗಃ' ಎಂಬ ವ್ಯುತ್ಪತ್ತಿಯನ್ನು ಆಶ್ರಯಿಸಿದಾಗ ಭೋಗಶಬ್ದಕ್ಕೆ ಆನಂದ ಎಂಬ ಅರ್ಥವು ತಿಳಿಯುತ್ತದೆ. ಆದ್ದರಿಂದ ಮುಖ್ಯವಾಯುವೇ ಪ್ರಾಣಶಬ್ದವಾಚ್ಯನು ಮತ್ತು ಆನಂದಮಯನು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷವನ್ನು ''ನಚ'' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ. ಪ್ರಾಣಶಬ್ದದಿಂದ ವಿಷ್ಣುವೇ ಮುಖ್ಯವಾಗಿ ವಾಚ್ಯನಾಗಿದ್ದಾನೆ. ಏಕೆಂದರೆ, 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂಬುದಾಗಿ ಶ್ರೀಪತಿತ್ವ ಹಾಗೂ ಲಕ್ಷ್ಮೀಪತಿತ್ವ ಎಂಬ ಲಿಂಗಗಳು ವಿಷ್ಣುವಿನಲ್ಲಿ ಅಸಾಧಾರಣವಾಗಿ ಕೇಳಿಸುತ್ತಿವೆ. ಈ ಲಿಂಗಗಳು ಮುಖ್ಯವಾಯುವಿನಲ್ಲಿ ಸರ್ವಥಾ ಕೂಡಲಾರವು.

ಇನ್ನು ದೇವಪ್ರಣೇತೃತ್ವವೆಂಬ ಮುಖ್ಯಪ್ರಾಣನ ಲಿಂಗವೂ ಸಹ ವಿಷ್ಣುವಿನಲ್ಲೇ ಮುಖ್ಯವಾಗಿದೆ. ಮುಖ್ಯಪ್ರಾಣನಲ್ಲಿರುವ ದೇವಪ್ರೇರಕತ್ವಕ್ಕೆ ನಿಯಾಮಕನಾದವನು ವಿಷ್ಣುವೇ ಆಗಿದ್ದಾನೆಂದು 'ಪ್ರಾಣಸ್ಯ ಪ್ರಾಣಮ್' ಎಂಬ ಶ್ರುತಿಯು ಹೇಳುತ್ತಿದೆ.

ಆದ್ದರಿಂದಲೇ ವಿಷ್ಣುವಿಗೆ ಹೃಷೀಕೇಶನೆಂಬ ಬಿರುದು ಪ್ರಸಿದ್ಧವಾಗಿದೆ.

ಇಲ್ಲಿಗೆ ಶ್ರೀಪದ್ಮನಾಭತೀರ್ಥಶ್ರೀಮಚ್ಚರಣರಿಂದ ವಿರಚಿತವಾದ
ಸತ್ತರ್ಕದೀಪಾವಳಿಯ ಕನ್ನಡಾನುವಾದದಲ್ಲಿ ಪ್ರಾಣಾಧಿಕರಣವು ಮುಗಿಯಿತು
॥ ಶ್ರೀಮಧ್ವೇಶಾರ್ಪಣಮಸ್ತು ॥

# ಭಾಗ -೨

## ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ, ಭಾಟ್ಟಸಂಗ್ರಹ, ಶಂಕರಭಾಷ್ಯ, ಭಾಮತೀ, ಶ್ರೀಭಾಷ್ಯ, ಶ್ರುತಪ್ರಕಾಶ ಇವುಗಳ ಆಯ್ದ ಭಾಗಗಳು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

॥ ಶ್ರೀಮಧ್ವರಾಜೋ ವಿಜಯತೇತರಾಮ್ ॥

॥ ಶ್ರೀಗುರುಭ್ಯೋ ನಮಃ ॥

# ಪ್ರಾಣಾಧಿಕರಣದ ಸಾರ

ಪ್ರಾಣಾಧಿಕರಣದ ಉದ್ದೇಶ ಪ್ರಾಣಶಬ್ದ ಸಮನ್ವಯದ ಮೂಲಕ ಆಧ್ಯಾತ್ಮಿಕ ಸಕಲಶಬ್ದಗಳನ್ನು ಭಗವಂತನಲ್ಲಿ ಸಮನ್ವಯ ಮಾಡುವುದು. ಜೀವನಹೇತುತ್ವವೇ ಪ್ರಾಣಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ಅನ್ವಯ ವ್ಯತಿರೇಕದಿಂದ ಈ ಪ್ರವೃತ್ತಿನಿಮಿತ್ತವು ಮುಖ್ಯವಾಯುವಿನಲ್ಲಿ ಸಿದ್ಧವಾಗಿದೆ. ಆದ್ದರಿಂದ ಭಗವಂತನು ಪ್ರತಿಪಾದ್ಯನಾಗಲಾರನೆಂಬ ಅಧಿಕಾಶಂಕೆಯ ಪರಿಹಾರಕ್ಕಾಗಿ ಈ ಅಧಿಕರಣ ಹೊರಟಿದೆ. ಹಿಂದಿನ ಆಕಾಶಾಧಿಕ-ರಣದಲ್ಲಿ ಹೀಗೆ ಅನ್ವಯವ್ಯತಿರೇಕದಿಂದ ಪೂರ್ವಪಕ್ಷ ಮಾಡಲಾಗದ ಕಾರಣ ಇದು ಅಧಿಕಾಶಂಕೆಯೆನಿಸಿದೆ. ಹಿಂದೆ ಸಮರ್ಥಿಸಿದ ಆನಂದಮಯತ್ವವನ್ನೇ ಈ ಅಧಿಕರಣದಲ್ಲಿ ಆಕ್ಷೇಪಿಸಬೇಕು. ಪ್ರಾಣಮಯತ್ವವನ್ನು ಆಕ್ಷೇಪಿಸಬಾರದು. ಹಾಗಾದಲ್ಲಿ ಅಸ್ವಾರಸ್ಯ ಮತ್ತು ಪುನರುಕ್ತಿದೋಷಗಳು ಬರುತ್ತವೆ.

ಈ ಅಧಿಕರಣದಲ್ಲಿ ಸಿದ್ಧಾಂತಸ್ಥಾಪನೆಯಾಗಬೇಕೆಂದರೆ ಮೊದಲು ಪೂರ್ವಪಕ್ಷ ಮಾಡಬೇಕು? ಆದರೆ ಪೂರ್ವಪಕ್ಷ ಮಾಡುವುದೇ ಕಠಿಣವಾಗಿದೆ. ಜಡವಾಯುವನ್ನಾಗಲೀ ಚೇತನವಾಯುದೇವತೆಯನ್ನಾಗಲೀ ಪ್ರಾಣ-ನೆಂದು ಪೂರ್ವಪಕ್ಷ ಮಾಡಬೇಕು. ಆದರೆ ಜಡವಾಯುವಿನಲ್ಲಿ ಸಂಬೋಧನೆ ಮೊದಲಾದವುಗಳು ಕೂಡುವುದಿಲ್ಲ. ಮುಖ್ಯವಾಯುವಿನಲ್ಲಿ ಅನ್ವಯವ್ಯತಿರೇಕದಿಂದ ಜೀವನಹೇತುತ್ವವಿರುವುದು ಯಾರಿಗೂ ಸಿದ್ಧವಾಗಿಲ್ಲ.

ಜಡವಾಯುವಿನಲ್ಲಿ ಅಭಿಮಾನಿವಿವಕ್ಷೆಯಿಂದ ಸಂಬೋಧನೆಯನ್ನೇನೋ ಕೂಡಿಸಬಹುದು. ಆದರೆ ಅನುವ್ಯಾಖ್ಯಾನ ಮತ್ತು ಟೀಕೆಗಳಲ್ಲಿ ಮುಖ್ಯವಾಯುವನ್ನು ಪೂರ್ವಪಕ್ಷ ಮಾಡಿದ್ದಾರೆ. ಹಾಗಾಗಿ ಅವುಗಳ ವಿರೋಧ ಬರುತ್ತದೆ. ಮತ್ತು ಅನೇಕ ಶ್ರುತಿಗಳಿಗೆ ಅಮುಖ್ಯಾರ್ಥಮಾಡಬೇಕಾದ ಪ್ರಸಂಗವಿದೆ. ಹೀಗೆ ಜಡವಾಯುವಂತೂ ಪ್ರಾಣ ಎನಿಸಲು ಸಾಧ್ಯವಿಲ್ಲ. ಮುಖ್ಯವಾಯುವನ್ನು ಪ್ರಾಣ ಎನ್ನೋಣವೆಂದರೆ ಹೇತ್ವಸಿದ್ಧಿ ತಪ್ಪಿದ್ದಲ್ಲ. ಹೀಗಿರುವಾಗ ಪೂರ್ವಪಕ್ಷವನ್ನು ಹೇಗೆ ರಚಿಸೋಣ?

ಜೀವನಹೇತುತ್ವವು ಪ್ರತ್ಯಕ್ಷಪ್ರಮಾಣದಿಂದ ಮುಖ್ಯಪ್ರಾಣನಲ್ಲಿ ಇದೆಯೆಂದು ತಿಳಿಯದಿರಬಹುದು. ಆದರೆ 'ತತ್ಪ್ರಾಣೇ' ಇತ್ಯಾದಿ ಶ್ರುತಿಸ್ಮೃತಿಗಳಿಂದ ತಿಳಿಯುತ್ತದೆ. ಆದ್ದರಿಂದ ಮುಖ್ಯವಾಯುವೇ ಪ್ರಾಣನಾಗುತ್ತಾನೆಂಬ ಪೂರ್ವಪಕ್ಷವು ಸಿದ್ಧವಾಗುತ್ತದೆ.

'ತತ್ಪ್ರಾಣೇ' ಎಂಬ ಶ್ರುತಿಯು ವಿಷ್ಣುಪರವೆಂದು ಅಂತಿಮಪ್ರಾಣಾಧಿಕರಣದಲ್ಲಿ ನಿರ್ಣಯಿಸಿದ್ದಾರೆ. ಆದರೆ ಇಲ್ಲಿ ಮಾಡಿದ ಸಿದ್ಧಾಂತವನ್ನು ಅವಲಂಬಿಸಿ ಅಂತಿಮಪ್ರಾಣಾಧಿಕರಣವು ಹೊರಟಿದೆ. ಹೀಗಿರುವಾಗ ಈ ಅಧಿ ಕರಣದ ಪೂರ್ವಪಕ್ಷದ ದೆಸೆಯಲ್ಲಿ ಅಂತಿಮಪ್ರಾಣಾಧಿಕರಣದ ಸಿದ್ಧಾಂತವು ಅಸಿದ್ಧವಾಗಿದೆ. ಪ್ರಥಮಪಾದದ ಆಕಾಶಾಧಿಕರಣಕ್ಕೆ ಮೂರನೆಯ ಪಾದದ ಆಕಾಶಾಧಿಕರಣದ ಸಿದ್ಧಾಂತವು ಹೇಗೆ ತಿಳಿದಿಲ್ಲವೋ ಅದರಂತೆ. ಮತ್ತು ಅಂತಿಮಪ್ರಾಣಾಧಿಕರಣದಿಂದ ಪುನರುಕ್ತಿದೋಷಕ್ಕೂ ಆಸ್ಪದವಿಲ್ಲ. ಈ ಅಧಿಕರಣದ ಸಿದ್ಧಾಂತವು ಸ್ಥಾಪಿತವಾದ

ಮೇಲಷ್ಟೇ ಅಂತಿಮಪ್ರಾಣಾಧಿಕರಣದ ಪೂರ್ವಪಕ್ಷವು ಹೊರಡಲು ಸಾಧ್ಯ. ಈ ಪುನರುಕ್ತಿಯ ಪರಿಹಾರವನ್ನು ಸೂಚಿಸುವುದಕ್ಕಾಗಿಯೇ ಗ್ರಂಥಕಾರರು 'ತತ್ಪ್ರಾಣೇ' ಎಂಬ ಶ್ರುತಿಯನ್ನು ಉಲ್ಲೇಖಿಸಿದ್ದಾರೆ.

ಜಡವಾಯುವು ಮುಖ್ಯಪ್ರಾಣನ ಶರೀರ. ಜಡವಾಯುವಿದ್ದರೆ ನಮ್ಮ ಜೀವನ ಇಲ್ಲದಿದ್ದರೆ ಇಲ್ಲವೆಂಬ ಅನ್ವಯವ್ಯತಿರೇಕ ನಮಗೆಲ್ಲ ಸಿದ್ಧವಾಗಿದೆ. ಇದರಿಂದ ಮುಖ್ಯವಾಯುವು ಜೀವನಕಾರಣನೆಂದು ಹೇಳಿದಂತಾಗುತ್ತದೆ. ಕುಲಾಲನ ಶರೀರವಿದ್ದರೆ ಮಾತ್ರ ಘಟವು ಹುಟ್ಟುವುದನ್ನು, ಕುಲಾಲಶರೀರವಿಲ್ಲದಿದ್ದರೆ ಘಟ ಹುಟ್ಟದಿರು- ವುದನ್ನು ನಾವು ಕಂಡಿದ್ದೇವೆ. ಇದರಿಂದ ಕುಲಾಲಶರೀರದ ಒಳಗಿರುವ ಆತ್ಮನು ಘಟಕಾರಣನೆಂದು ಎಲ್ಲರೂ ಒಪ್ಪಿರುವ ವಿಚಾರ. ಅದರಂತೆ ಮುಖ್ಯಪ್ರಾಣನ ವಿಷಯದಲ್ಲಿಯೂ ತಿಳಿಯಬೇಕು.

ಆದರೆ ಬ್ರಹ್ಮನಲ್ಲಿ ಈ ಅನ್ವಯವ್ಯತಿರೇಕವನ್ನು ಹೇಳಲು ಸಾಧ್ಯವಿಲ್ಲ. ಹಾಗೆ ಹೇಳಬೇಕಾದರೆ ಮೊದಲು ಬ್ರಹ್ಮನಿಗೆ ಶರೀರವಿರಬೇಕು. ಮತ್ತು ನಮ್ಮ ದೇಹದಲ್ಲಿ ಬ್ರಹ್ಮನಿಲ್ಲವೆಂದು ಹೇಳಬೇಕು. ಆದರೆ ಶ್ರುತಿಗಳೇ ಹೇಳುವಂತೆ ಬ್ರಹ್ಮನಿಗೆ ಶರೀರವೇ ಇಲ್ಲ. ಅಂತರ್ಯಾಮ್ಯಧಿಕರಣದಲ್ಲಿ ವಿಷ್ಣುವಿಗೆ ಗೌಣಶರೀರವನ್ನು ಹೇಳಿದ್ದಾರೆ. ಆದರೆ ಗೌಣಶರೀರವು ಕಾರ್ಯತ್ವಕ್ಕೆ ಸಾಧಕವಾಗುವುದಿಲ್ಲ. ಮತ್ತು ಬ್ರಹ್ಮನು ಸರ್ವಗತನಾಗಿದ್ದಾನೆ. ಭೂಮಾಧಿ ಕರಣದಲ್ಲಿ ನಮ್ಮ ಶರೀರದಿಂದ ಬ್ರಹ್ಮನು ಉತ್ಕ್ರಮಣನಾಗುತ್ತಾನೆಂದು ಹೇಳಿದ್ದರೂ ಮತ್ತೊಂದು ರೂಪದಿಂದ ನಮ್ಮ ಶರೀರದಲ್ಲಿಯೇ ಇರುತ್ತಾನೆಂದು ಹೇಳಿದ್ದಾರೆ. ಆದ್ದರಿಂದ ವ್ಯತಿರೇಕವ್ಯಾಪ್ತಿಯನ್ನು ವಿಷ್ಣುವಿನಲ್ಲಿ ಹೇಳುವುದು ಕಷ್ಟ.

ಇನ್ನು ಶ್ರುತಿಯಿಂದ ಬ್ರಹ್ಮನು ಜೀವನಕಾರಣನಾಗಿದ್ದಾನೆಂದು ಹೇಳಬೇಕು. ಆದರೆ ಆ ಶ್ರುತಿಗಳನ್ನೆಲ್ಲಾ ಮುಖ್ಯಪ್ರಾಣನಲ್ಲಿಯೇ ಸಮನ್ವಯ ಮಾಡಲು ಬರುತ್ತದೆ. ಆದ್ದರಿಂದ ಮುಖ್ಯಪ್ರಾಣನೇ ಜೀವನಕಾರಣನಾಗುತ್ತಾನೆ. ವಿಷ್ಣುವಲ್ಲವೆಂದು ಪೂರ್ವಪಕ್ಷ.

ಹೇತುರೂಪವಾದ ಜೀವನಹೇತುತ್ವವನ್ನು ಅನ್ವಯವ್ಯತಿರೇಕಗಳಿಂದಷ್ಟೇ ತಿಳಿಯಬಹುದು; ಶ್ರುತಿಯಿಂದ ತಿಳಿಯಲು ಸಾಧ್ಯವೇ ಇಲ್ಲ. ಹೀಗಿರುವಾಗ ಶ್ರುತಿಪ್ರಮಾಣದ ಉಲ್ಲೇಖ ಮತ್ತು ನಿರಾಕರಣೆಗಳು ಅಸಂಗತವೆಂದು ಕೆಲವರ ವಾದ.

ಇದು ತಪ್ಪು. ಹಾಗಾದರೆ ಯಾಗವು ಸ್ವರ್ಗಕ್ಕೆ ಹೇತುವೆಂದು ಹೇಳಬೇಕಾದರೆ ಅನ್ವಯವ್ಯತಿರೇಕವನ್ನೇ ಹೇಳಬೇಕೆಂದಂತಾಯಿತು. ಆದರೆ ಸ್ವರ್ಗಯಾಗಗಳ ಕಾರ್ಯಕಾರಣಭಾವದಲ್ಲಿ ಅನ್ವಯವ್ಯತಿರೇಕವು ಪ್ರತ್ಯಕ್ಷಸಿದ್ಧವಾಗಿಲ್ಲ.

ಭಗವಂತನು ಜೀವನಕಾರಣನೆಂದು ಶ್ರುತಿಯಿಂದ ಸಾಧಿಸಲಾಗದು. ಯಾವುದೇ ಕಾರಣತ್ವವಾದರೂ ಕೂಡ ವ್ಯತಿರೇಕವ್ಯಾಪ್ತಿಯಿಂದ ಗರ್ಭಿತವಾಗಿರುತ್ತದೆ. ಆದರೆ ಎಲ್ಲೆಡೆ ವ್ಯಾಪ್ತನಾದ ಭಗವಂತನಲ್ಲಿ ವ್ಯತಿರೇಕವ್ಯಾಪ್ತಿಯನ್ನು ಹೇಗೆ ಹೇಳುತ್ತೀರಿ? ಎಂದು ಕೆಲವರ ಗೊಂದಲ.

ಇವರ ಗೊಂದಲಕ್ಕೆ ಆಸ್ಪದವಿಲ್ಲ. ಹಾಗಾದರೆ ಎಲ್ಲೆಡೆ ವ್ಯಾಪ್ತವಾಗಿರುವ ಪ್ರಕೃತ್ಯಾದಿಗಳಿಗೆ ಕಾರಣತ್ವವೇ ಸಿದ್ಧವಾಗದಿರಬೇಕಾದೀತು!

ಅಂತೂ ಜೀವನಹೇತುತ್ವವನ್ನು ಬ್ರಹ್ಮನಲ್ಲಿ ಒಪ್ಪಲು ಸಾಧ್ಯವಿಲ್ಲ. ಮುಖ್ಯಪ್ರಾಣಾದಿಗಳಲ್ಲಿರುವ ಜೀವನಹೇತುತ್ವಕ್ಕೆ ಬ್ರಹ್ಮನು ನಿಯಾಮಕನೂ ಆಗಲು ಸಾಧ್ಯವಿಲ್ಲವೆಂದು ಒಪ್ಪುವುದು ಅನಿವಾರ್ಯ. ಹಾಗಾದಲ್ಲಿ

ಜನ್ಮಾದಿಸೂತ್ರದಲ್ಲಿ ಸಾಧಿಸಿದ ಸ್ಥಿತಿಹೇತುತ್ವಲಕ್ಷಣಕ್ಕೆ ಅಸಂಭವ ಹಾಗೂ ಅತಿವ್ಯಾಪ್ತಿದೋಷಗಳು ಬರುತ್ತವೆ. ಆದ್ದರಿಂದ ಜೀವನಕಾರಣನೆಂದು ನಿರ್ಣೀತನಾದ ಮುಖ್ಯಪ್ರಾಣನೇ ಆನಂದಮಯನಾಗಬೇಕು. ಆನಂದ-ಮಯನಿಂದ ಮುಖ್ಯಪ್ರಾಣನಲ್ಲಿ ಭೇದವೂ ಕೇಳಿಸುತ್ತಿಲ್ಲ ಮತ್ತು ಚೇತನನೂ ಆಗಿರುವುದರಿಂದ ಮುಖ್ಯಪ್ರಾಣನೇ ಪ್ರಾಣಶಬ್ದದಿಂದ ವಾಚ್ಯನಾಗುತ್ತಾನೆ ಮತ್ತು ಆನಂದಮಯನಾಗುತ್ತಾನೆಂಬುದು ಪ್ರಮೇಯಾಶ್ರಿತಪೂರ್ವಪಕ್ಷ.

ಲಕ್ಷ್ಮೀಪತಿತ್ವಲಿಂಗವಿರುವುದು ಬೇರೆ ಅನುವಾಕದಲ್ಲಿ. ಅದಕ್ಕೂ 'ತದ್ವೈ ತ್ವಂ ಪ್ರಾಣಃ' ಎಂಬ ಅನುವಾಕಕ್ಕೂ ಯಾವುದೇ ಸಂಬಂಧವಿಲ್ಲ. ಹೀಗಿರುವಾಗ ಮುಖ್ಯಪ್ರಾಣನು ಪ್ರಾಣಶಬ್ದದಿಂದ ವಾಚ್ಯನಾಗಲು ಲಕ್ಷ್ಮೀಪತಿತ್ವಲಿಂಗವು ಬಾಧಕವಲ್ಲ. ಈ ಅನುವಾಕದಿಂದ ಮುಖ್ಯಪ್ರಾಣನೇ ವಾಚ್ಯನೆನ್ನಲು ಮಾತರಿಶ್ವಶ್ರುತಿಯು ಅಪಾನಶ್ರುತಿಯ ಸಾಹಿತ್ಯವು ಪೂರಕವಾಗಿವೆ. ಇಲ್ಲಿಗೆ ಎರಡು ಬಗೆಯ ಪ್ರಮೇಯಾಶ್ರಿತವಾದ ಪೂರ್ವಪಕ್ಷಗಳು ಮತ್ತು ನಾಲ್ಕುಬಗೆಯ ಪ್ರಮಾಣಾಶ್ರಿತಪೂರ್ವಪಕ್ಷಗಳು ಮುಗಿದವು.

ನಮ್ಮೆಲ್ಲರ ಜೀವನಕ್ಕೆ ಕಾರಣನಾದವನು ಭಗವಂತನೇ ಆಗಿದ್ದಾನೆ. ಭೌತಿಕವಾದ ಪ್ರಾಣವಾಯುವು ವಾಯುದೇವನಿಗೆ ಹೇಗೆ ಶರೀರವಾಗಿದೆಯೋ ಅದರಂತೆ ವಾಯುದೇವರು ಭಗವಂತನ ಶರೀರದಂತಿದ್ದಾರೆ. ಸರ್ವರ ಜೀವನಕ್ಕೆ ಕಾರಣನಾದ ವಾಯುದೇವರೇ ಭಗವಂತನ ಶರೀರವಾಗಿರುವಾಗ ಅವನಿಗೆ ಪ್ರೇರಕನಾದ ಭಗವಂತನು ಸಕಲಜೀವರ ಜೀವನಕ್ಕೆ ಕಾರಣನಾಗಿರಲೇ ಬೇಕು. ದೇಹದ ಕ್ರಿಯೆಗೆ ಜೀವನು ಹೇಗೆ ಪ್ರವರ್ತಕನಾಗಿರುತ್ತಾನೋ, ಅದರಂತೆ ಸಕಲಪ್ರಾಣಾದಿದೇವತೆಗಳ ಕ್ರಿಯೆಗಳಿಗೂ ಭಗವಂತನೇ ಪ್ರವರ್ತಕನಾಗಿದ್ದಾನೆ. ಆದ್ದರಿಂದ ಎಲ್ಲರಲ್ಲಿರುವ ಧರ್ಮಗಳಿಗೂ ಅವನೇ ನಿಯಾಮಕನು.

ಭಗವಂತನು ಯಾವಾಗಲೂ ಎಲ್ಲಾ ಕಡೆಯಿದ್ದರೂ ತನ್ನ ವಿಶಿಷ್ಟವಾದ ಒಂದುರೂಪವನ್ನು ಪ್ರಕಟಮಾಡಿ ಜೀವನಕ್ಕೆ ಕಾರಣನಾಗಿದ್ದಾನೆ. ಆ ರೂಪವನ್ನು ಅಂತರ್ಧಾನಗೊಳಿಸಿದಾಗ ಸಾವಿಗೆ ತುತ್ತಾಗುತ್ತಾರೆ.

ಮತ್ತು ಕಾಠಕದಲ್ಲಿರುವ 'ಇತರೇಣ ತು' ಎಂಬ ಶ್ರುತಿಯು ಪ್ರಾಣಪರವಾಗುವುದಿಲ್ಲ. ಇಲ್ಲಿರುವ ಇತರಶಬ್ದವು ಬ್ರಹ್ಮಪರವೆ ಆಗಿದೆ. ಹಿಂದಿನ ಮುಂದಿನ ವಾಕ್ಯಗಳು ಬ್ರಹ್ಮನನ್ನೇ ಪ್ರತಿಪಾದಿಸುತ್ತಿರುವಾಗ ಮಧ್ಯದ ಈ ವಾಕ್ಯವು ಬ್ರಹ್ಮನನ್ನು ಪ್ರತಿಪಾದಿಸದೆ ಇರಲಾರದಲ್ಲವೇ?

'ತದ್ವೈ ತ್ವಂ ಪ್ರಾಣೋ ಅಭವಃ' ಎಂಬ ಉಪನಿಷತ್ತಿನಲ್ಲಿ ಸಾಮಾನ್ಯವಾಗಿ ಪ್ರಾಣ ಎಂದು ಹೇಳಿಲ್ಲ. ಪರಮಾತ್ಮನಲ್ಲಿರುವ ಅನೇಕವಿಶಿಷ್ಟಗುಣಗಳನ್ನು ಧರ್ಮಗಳನ್ನು ಪ್ರಾಣನಲ್ಲಿ ನಿರೂಪಿಸಲಾಗಿದೆ. ಪ್ರಾಣನು ಶ್ರೀದೇವಿ ಲಕ್ಷ್ಮೀದೇವಿಯರ ಅಧಿಪತಿಯೆಂದು ಸ್ಪಷ್ಟವಾಗಿ ಶ್ರುತಿ ಹೇಳಿದೆ. ಜಗನ್ಮಾತೆಗೆ ಶ್ರೀಹರಿಯನ್ನು ಬಿಟ್ಟು ಬೇರೆ ಯಾರನ್ನೂ ಅಧಿಪತಿಗಳೆಂದು ಮನಸ್ಸಿನಿಂದಲೂ ಆಲೋಚಿಸಲು ಸಾಧ್ಯವಿಲ್ಲ. ಆದ್ದರಿಂದ ಲಕ್ಷ್ಮೀ, ಶ್ರೀ ಮೊದಲಾದ ಶಬ್ದಗಳನ್ನು ಭಾರತೀ ಮೊದಲಾದವರಲ್ಲಿ ಪ್ರಯೋಗಿಸಬಾರದು. ಆದರೆ 'ಪ್ರಾಣಸ್ಯ ಪ್ರಾಣಃ' ಎಂಬಲ್ಲಿ ಪ್ರಾಣಶಬ್ದದಿಂದ ಭಗವಂತನು ವಾಚ್ಯನಾಗಿದ್ದಾನೆನ್ನಲು ಸಾಕಷ್ಟು ಪ್ರಮಾಣಗಳಿವೆ.

ಮತ್ತು ಮುಖ್ಯಪ್ರಾಣನಲ್ಲಿ ಆಪೇಕ್ಷಿಕವಾದ ಮುಖ್ಯತ್ವವಷ್ಟೇ ಇದೆ. ಯಾವರೀತಿಯಾಗಿ ಜಡಪ್ರಕೃತಿಗಿಂತ ಚೇತನಪ್ರಕೃತಿಯು ಮುಖ್ಯವಾದ್ದರಿಂದ ಪರಾಕ್ಷರ ಎನಿಸಿದೆಯೋ ಅದರಂತೆ ಭೌತಿಕವಾಯುವಿಗಿಂತ ಮುಖ್ಯನಾದ್ದರಿಂದ ವಾಯುವು ಮುಖ್ಯಪ್ರಾಣನೆನಿಸಿದ್ದಾನೆ.

ಶ್ರೀಪತಿತ್ವಲಿಂಗವಿರುವ ಅನುವಾಕವು ಬೇರೆಯಾಗಿರಬಹುದು. ಆದರೂ 'ತದ್ವೈ ತ್ವಂ' ಎಂಬ ಪ್ರಾಣಶ್ರುತಿಯಿರುವ ಅನುವಾಕವೂ ಸಹ ಭಗವಂತನಲ್ಲಿ ಅಸಾಧಾರಣವಾದ ಮಾರಕತ್ವಾದಿ ಗುಣಗಳನ್ನು ಹೇಳುತ್ತಿದೆ. ಆದ್ದರಿಂದ ಈ ಅನುವಾಕವು

ಭಗವತ್ಪರವಾಗಿದೆ ಎಂದು ನಿರ್ಣಯವಾಗುತ್ತದೆ. ಮತ್ತು 'ಶ್ರೀಶ್ಚ ತೇ' ಎಂಬಲ್ಲಿ ಯುಷ್ಮಚ್ಛಬ್ದದಿಂದ ಹೇಳಿದವನನ್ನೇ 'ತದ್ವೈ ತ್ವಂ' ಎಂಬ ಯುಷ್ಮಚ್ಛಬ್ದದಿಂದಲೂ ಹೇಳಲಾಗಿದೆ. ಆದ್ದರಿಂದ ಎರಡೂ ಅನುವಾಕಗಳು ಒಬ್ಬನನ್ನೇ ಪ್ರತಿಪಾದಿಸುತ್ತಿವೆ.

ಮಾತರಿಶ್ವಶ್ರುತಿಯಲ್ಲಿಯೂ ಭಗವಂತನ ಸಕಲಸಂಹರ್ತೃತ್ವಗುಣವನ್ನು ಹೇಳಿದ್ದರಿಂದ ಇದು ಮುಖ್ಯ-ಪ್ರಾಣಪರವಾಗುವುದಿಲ್ಲ. ಇನ್ನು ತನ್ನಿಂದ ತನಗೆ ಸಾಹಿತ್ಯವು ಅಸಂಭಾವಿತವಾದ್ದರಿಂದ ಅಪಾನಸಾಹಿತ್ಯಲಿಂಗವು ಮುಖ್ಯಪ್ರಾಣನಿಗೆ ಪೂರಕವಲ್ಲ. ಆದ್ದರಿಂದ ಪ್ರಾಣಶಬ್ದದಿಂದ ಮುಖ್ಯಪ್ರಾಣನು ಪ್ರತಿಪಾದ್ಯನಾಗುವುದಿಲ್ಲ; ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ.

ಶಾಂಕರಭಾಷ್ಯದಲ್ಲಿ ಪ್ರಾಣಾಧಿಕರಣವನ್ನು ಹೀಗೆ ರಚಿಸಿದ್ದಾರೆ. 'ಕತಮಾ ಸಾ ದೇವತಾ ಇತಿ ಪ್ರಾಣ ಇತಿ ಹೋವಾಚ। ಸರ್ವಾಣಿ ಹ ವಾ ಭೂತಾನಿ ಪ್ರಾಣಮೇವಾಭಿಸಂವಿಶಂತಿ ಛಾಂದೋಗ್ಯದ ಈ ವಾಕ್ಯದಲ್ಲಿ ಪ್ರಾಣಶಬ್ದದಿಂದ ಯಾರು ವಾಚ್ಯರು? ಪ್ರಸಿದ್ಧವಾದ ಪ್ರಾಣವಾಯುವೋ ಅಥವಾ ಬ್ರಹ್ಮನೋ?

ಪೂರ್ವಪಕ್ಷ - ಪ್ರಾಣವಾಯುವೇ ಪ್ರಾಣಶಬ್ದದ ಮುಖ್ಯಾರ್ಥವೆಂದು ಛಾಂದೋಗ್ಯ ಹೇಳುತ್ತಿದೆ. ಏಕೆಂದರೆ ಅಲ್ಲಿಯೇ ಮುಂದೆ 'ಸರ್ವಾಣಿ ಹ ವಾ ಭೂತಾನಿ' ಎಂದು ಸಮಸ್ತಭೂತಪದಾರ್ಥಗಳ ಉತ್ಪತ್ತಿಲಯಗಳಿಗೆ ಪ್ರಾಣನೇ ಕಾರಣನೆಂದು ಹೇಳಲಾಗಿದೆ. ಸುಷುಪ್ತಿಕಾಲದಲ್ಲಿ ಬೇರೆ ಯಾವುದೇ ಇಂದ್ರಿಯಗಳ ವ್ಯಾಪಾರವಿಲ್ಲದೇ ಪ್ರಾಣವಾಯುವಿನ ವ್ಯಾಪಾರವಷ್ಟೇ ಇರುತ್ತದೆ. ಹಾಗಾಗಿ ಉಳಿದೆಲ್ಲ ಇಂದ್ರಿಯಗಳು ಸುಷುಪ್ತಿಕಾಲದಲ್ಲಿ ಪ್ರಾಣವಾಯುವಿನಲ್ಲಿ ಲಯ ಹೊಂದಿ, ಎಚ್ಚರಾವಸ್ಥೆಯಲ್ಲಿ ಪುನಃ ಹುಟ್ಟುತ್ತವೆ. ಈ ಪಂಚೇಂದ್ರಿಯಗಳು ಪಂಚಭೂತಗಳ ಸಾರರೂಪವಾದ್ದರಿಂದ ಸಮಸ್ತಭೂತಗಳ ಉತ್ಪತ್ತಿಲಯಗಳಿಗೆ ಜಡವಾಯುವೇ ಕಾರಣವೆಂದು ಇದರಿಂದ ಸಿದ್ಧವಾಗುತ್ತದೆ. ಆದ್ದರಿಂದ ಛಾಂದೋಗ್ಯದಲ್ಲಿರುವ ಪ್ರಾಣನೆಂದರೆ ಜಡವಾಯುವೇ ಹೊರತು ಬ್ರಹ್ಮನಲ್ಲ.

ಸಿದ್ಧಾಂತ - 'ಸರ್ವಾಣಿ ಹ ವಾ' ಎಂಬ ಛಾಂದೋಗ್ಯವು ಸಕಲಪ್ರಾಣಿಗಳ ಉತ್ಪತ್ತಿಲಯಕಾರಣತ್ವವನ್ನು ಸ್ಪಷ್ಟವಾಗಿ ಹೇಳುತ್ತಿದೆ. ಅದನ್ನು ಸಂಕೋಚಮಾಡಿ ಕೇವಲ ಇಂದ್ರಿಯಗಳಲ್ಲಷ್ಟೇ ಉತ್ಪತ್ತಿಲಯಕಾರಣತ್ವವನ್ನು ಹೇಳುವುದು ತಪ್ಪಾಗುತ್ತದೆ. ಆದ್ದರಿಂದ ಪ್ರಪಂಚಕಾರಣನಾದ ಬ್ರಹ್ಮನೇ ಪ್ರಾಣಶಬ್ದದಿಂದ ವಾಚ್ಯನಾಗಿದ್ದಾನೆ.

ಪ್ರಾಣಾಧಿಕರಣದ ಸಿದ್ಧಾಂತವು ಆಕಾಶಾಧಿಕರಣದಿಂದ ಗತಾರ್ಥವಾಗಿದೆ ಎಂದು ಶಂಕಿಸಬಾರದು. ಎರಡು ಬಗೆಯಲ್ಲಿ ಅಧಿಕಾಶಂಕೆಗೆ ಪ್ರಸಕ್ತಿ ಇರುವುದರಿಂದ ಪ್ರಾಣಾಧಿಕರಣವು ಆರಂಭಣೀಯವಾಗಿದೆ.

೧. ಪ್ರತ್ಯಕ್ಷಾನುಮಾನಗಳ ಬೆಂಬಲವಿರುವ ಸ್ವಾಪಶ್ರುತಿಯು ಸಕಲಭೂತಗಳ ಲಯವನ್ನು ಜಡವಾಯುವಿನಲ್ಲಿ ಪ್ರತಿಪಾದಿಸುತ್ತಿದೆ. ಅದಕ್ಕನುಗುಣವಾಗಿ ಪ್ರಸ್ತಾವವಾಕ್ಯವೂ ಕೂಡ ಜಡವಾಯುವನ್ನೇ ಪ್ರತಿಪಾದಿಸುತ್ತದೆ.

೨. ಅಥವಾ ಸ್ವಾಪವಾಕ್ಯಕ್ಕೆ ಅನುಗುಣವಾಗಿ ಪ್ರಸ್ತಾವವಾಕ್ಯವೇ ಇಂದ್ರಿಯಗಳ ಲಯವನ್ನು ಜಡವಾಯುವಿನಲ್ಲಿ ಪ್ರತಿಪಾದಿಸುತ್ತಿದೆ.

ಸ್ವಾಪವಾಕ್ಯದಂತೆ ಆಕಾಶಶ್ರುತಿಗೆ ಪ್ರಮಾಣಾಂತರಗಳ ಬೆಂಬಲವಿಲ್ಲದ ಕಾರಣ ಇಲ್ಲಿ ಅಧಿಕಾಶಂಕೆಗೆ ಅವಕಾಶವಿದೆ. ಈ ಅಧಿಕಾಶಂಕೆಯ ನಿರಾಕರಣೆಗಾಗಿ ಪ್ರಾಣಾಧಿಕರಣವು ಹೊರಡಲೇಬೇಕು.

* * * *

ಪ್ರಾಣಾಧಿಕರಣ-(೧।೧।೯)

ಜನ್ಮಾದಿಸೂತ್ರದಲ್ಲಿ ಸಾಧಿಸಿದ ಸ್ಥಿತಿಹೇತುತ್ವಲಕ್ಷಣಕ್ಕೆ ಅಸಂಭವ ಹಾಗೂ ಅತಿವ್ಯಾಪ್ತಿದೋಷಗಳು ಬರುತ್ತವೆ. ಆದ್ದರಿಂದ ಜೀವನಕಾರಣನೆಂದು ನಿರ್ಣೀತನಾದ ಮುಖ್ಯಪ್ರಾಣನೇ ಆನಂದಮಯನಾಗಬೇಕು. ಆನಂದ-ಮಯನಿಂದ ಮುಖ್ಯಪ್ರಾಣನಲ್ಲಿ ಭೇದವೂ ಕೇಳಿಸುತ್ತಿಲ್ಲ ಮತ್ತು ಚೇತನನೂ ಆಗಿರುವುದರಿಂದ ಮುಖ್ಯಪ್ರಾಣನೇ ಪ್ರಾಣಶಬ್ದದಿಂದ ವಾಚ್ಯನಾಗುತ್ತಾನೆ ಮತ್ತು ಆನಂದಮಯನಾಗುತ್ತಾನೆಂಬುದು ಪ್ರಮೇಯಾಶ್ರಿತಪೂರ್ವಪಕ್ಷ.

ಲಕ್ಷ್ಮೀಪತಿತ್ವಲಿಂಗವಿರುವುದು ಬೇರೆ ಅನುವಾಕದಲ್ಲಿ. ಅದಕ್ಕೂ 'ತದ್ವೈ ತ್ವಂ ಪ್ರಾಣಃ' ಎಂಬ ಅನುವಾಕಕ್ಕೂ ಯಾವುದೇ ಸಂಬಂಧವಿಲ್ಲ. ಹೀಗಿರುವಾಗ ಮುಖ್ಯಪ್ರಾಣನು ಪ್ರಾಣಶಬ್ದದಿಂದ ವಾಚ್ಯನಾಗಲು ಲಕ್ಷ್ಮೀಪತಿತ್ವಲಿಂಗವು ಬಾಧಕವಲ್ಲ. ಈ ಅನುವಾಕದಿಂದ ಮುಖ್ಯಪ್ರಾಣನೇ ವಾಚ್ಯನೆನ್ನಲು ಮಾತರಿಶ್ವಶ್ರುತಿಯು ಅಪಾನಶ್ರುತಿಯ ಸಾಹಿತ್ಯವು ಪೂರಕವಾಗಿವೆ. ಇಲ್ಲಿಗೆ ಎರಡು ಬಗೆಯ ಪ್ರಮೇಯಾಶ್ರಿತವಾದ ಪೂರ್ವಪಕ್ಷಗಳು ಮತ್ತು ನಾಲ್ಕುಬಗೆಯ ಪ್ರಮಾಣಾಶ್ರಿತಪೂರ್ವಪಕ್ಷಗಳು ಮುಗಿದವು.

ನಮ್ಮೆಲ್ಲರ ಜೀವನಕ್ಕೆ ಕಾರಣನಾದವನು ಭಗವಂತನೇ ಆಗಿದ್ದಾನೆ. ಭೌತಿಕವಾದ ಪ್ರಾಣವಾಯುವು ವಾಯುದೇವನಿಗೆ ಹೇಗೆ ಶರೀರವಾಗಿದೆಯೋ ಅದರಂತೆ ವಾಯುದೇವರು ಭಗವಂತನ ಶರೀರದಂತಿದ್ದಾರೆ. ಸರ್ವರ ಜೀವನಕ್ಕೆ ಕಾರಣನಾದ ವಾಯುದೇವರೇ ಭಗವಂತನ ಶರೀರವಾಗಿರುವಾಗ ಅವನಿಗೆ ಪ್ರೇರಕನಾದ ಭಗವಂತನು ಸಕಲಜೀವರ ಜೀವನಕ್ಕೆ ಕಾರಣನಾಗಿರಲೇ ಬೇಕು. ದೇಹದ ಕ್ರಿಯೆಗೆ ಜೀವನು ಹೇಗೆ ಪ್ರವರ್ತಕನಾಗಿರುತ್ತಾನೋ, ಅದರಂತೆ ಸಕಲಪ್ರಾಣಾದಿದೇವತೆಗಳ ಕ್ರಿಯೆಗಳಿಗೂ ಭಗವಂತನೇ ಪ್ರವರ್ತಕನಾಗಿದ್ದಾನೆ. ಆದ್ದರಿಂದ ಎಲ್ಲರಲ್ಲಿರುವ ಧರ್ಮಗಳಿಗೂ ಅವನೇ ನಿಯಾಮಕನು.

ಭಗವಂತನು ಯಾವಾಗಲೂ ಎಲ್ಲಾ ಕಡೆಯಿದ್ದರೂ ತನ್ನ ವಿಶಿಷ್ಟವಾದ ಒಂದುರೂಪವನ್ನು ಪ್ರಕಟಮಾಡಿ ಜೀವನಕ್ಕೆ ಕಾರಣನಾಗಿದ್ದಾನೆ. ಆ ರೂಪವನ್ನು ಅಂತರ್ಧಾನಗೊಳಿಸಿದಾಗ ಸಾವಿಗೆ ತುತ್ತಾಗುತ್ತಾರೆ.

ಮತ್ತು ಕಾಠಕದಲ್ಲಿರುವ 'ಇತರೇಣ ತು' ಎಂಬ ಶ್ರುತಿಯು ಪ್ರಾಣಪರವಾಗುವುದಿಲ್ಲ. ಇಲ್ಲಿರುವ ಇತರಶಬ್ದವು ಬ್ರಹ್ಮಪರವೆ ಆಗಿದೆ. ಹಿಂದಿನ ಮುಂದಿನ ವಾಕ್ಯಗಳು ಬ್ರಹ್ಮನನ್ನೇ ಪ್ರತಿಪಾದಿಸುತ್ತಿರುವಾಗ ಮಧ್ಯದ ಈ ವಾಕ್ಯವು ಬ್ರಹ್ಮನನ್ನು ಪ್ರತಿಪಾದಿಸದೆ ಇರಲಾರದಲ್ಲವೇ?

'ತದ್ವೈ ತ್ವಂ ಪ್ರಾಣೋ ಅಭವಃ' ಎಂಬ ಉಪನಿಷತ್ತಿನಲ್ಲಿ ಸಾಮಾನ್ಯವಾಗಿ ಪ್ರಾಣ ಎಂದು ಹೇಳಿಲ್ಲ. ಪರಮಾತ್ಮನಲ್ಲಿರುವ ಅನೇಕವಿಶಿಷ್ಟಗುಣಗಳನ್ನು ಧರ್ಮಗಳನ್ನು ಪ್ರಾಣನಲ್ಲಿ ನಿರೂಪಿಸಲಾಗಿದೆ. ಪ್ರಾಣನು ಶ್ರೀದೇವಿ ಲಕ್ಷ್ಮೀದೇವಿಯರ ಅಧಿಪತಿಯೆಂದು ಸ್ಪಷ್ಟವಾಗಿ ಶ್ರುತಿ ಹೇಳಿದೆ. ಜಗನ್ಮಾತೆಗೆ ಶ್ರೀಹರಿಯನ್ನು ಬಿಟ್ಟು ಬೇರೆ ಯಾರನ್ನೂ ಅಧಿ ಪತಿಗಳೆಂದು ಮನಸ್ಸಿನಿಂದಲೂ ಆಲೋಚಿಸಲು ಸಾಧ್ಯವಿಲ್ಲ. ಆದ್ದರಿಂದ ಲಕ್ಷ್ಮೀ, ಶ್ರೀ ಮೊದಲಾದ ಶಬ್ದಗಳನ್ನು ಭಾರತೀ ಮೊದಲಾದವರಲ್ಲಿ ಪ್ರಯೋಗಿಸಬಾರದು. ಆದರೆ 'ಪ್ರಾಣಸ್ಯ ಪ್ರಾಣಃ' ಎಂಬಲ್ಲಿ ಪ್ರಾಣಶಬ್ದದಿಂದ ಭಗವಂತನು ವಾಚ್ಯನಾಗಿದ್ದಾನೆನ್ನಲು ಸಾಕಷ್ಟು ಪ್ರಮಾಣಗಳಿವೆ.

ಮತ್ತು ಮುಖ್ಯಪ್ರಾಣನಲ್ಲಿ ಆಪೇಕ್ಷಿಕವಾದ ಮುಖ್ಯತ್ವವಷ್ಟೇ ಇದೆ. ಯಾವರೀತಿಯಾಗಿ ಜಡಪ್ರಕೃತಿಗಿಂತ ಚೇತನಪ್ರಕೃತಿಯು ಮುಖ್ಯವಾದ್ದರಿಂದ ಪರಾಕ್ಷರ ಎನಿಸಿದೆಯೋ ಅದರಂತೆ ಭೌತಿಕವಾಯುವಿಗಿಂತ ಮುಖ್ಯನಾದ್ದರಿಂದ ವಾಯುವು ಮುಖ್ಯಪ್ರಾಣನೆನಿಸಿದ್ದಾನೆ.

ಶ್ರೀಪತಿತ್ವಲಿಂಗವಿರುವ ಅನುವಾಕವು ಬೇರೆಯಾಗಿರಬಹುದು. ಆದರೂ 'ತದ್ವೈ ತ್ವಂ' ಎಂಬ ಪ್ರಾಣಶ್ರುತಿಯಿರುವ ಅನುವಾಕವೂ ಸಹ ಭಗವಂತನಲ್ಲಿ ಅಸಾಧಾರಣವಾದ ಮಾರಕತ್ವಾದಿ ಗುಣಗಳನ್ನು ಹೇಳುತ್ತಿದೆ. ಆದ್ದರಿಂದ ಈ ಅನುವಾಕವು

ಭಗವತ್ಪರವಾಗಿದೆ ಎಂದು ನಿರ್ಣಯವಾಗುತ್ತದೆ. ಮತ್ತು 'ಶ್ರೀಶ್ಚ ತೇ' ಎಂಬಲ್ಲಿ ಯುಷ್ಮಚ್ಛಬ್ದದಿಂದ ಹೇಳಿದವನನ್ನೇ 'ತದ್ವೈತ್ವಂ' ಎಂಬ ಯುಷ್ಮಚ್ಛಬ್ದದಿಂದಲೂ ಹೇಳಲಾಗಿದೆ. ಆದ್ದರಿಂದ ಎರಡೂ ಅನುವಾಕಗಳು ಒಬ್ಬನನ್ನೇ ಪ್ರತಿಪಾದಿಸುತ್ತಿವೆ.

ಮಾತರಿಶ್ವಶ್ರುತಿಯಲ್ಲಿಯೂ ಭಗವಂತನ ಸಕಲಸಂಹರ್ತೃತ್ವಗುಣವನ್ನು ಹೇಳಿದ್ದರಿಂದ ಇದು ಮುಖ್ಯ-ಪ್ರಾಣಪರವಾಗುವುದಿಲ್ಲ. ಇನ್ನು ತನ್ನಿಂದ ತನಗೆ ಸಾಹಿತ್ಯವು ಅಸಂಭಾವಿತವಾದ್ದರಿಂದ ಅಪಾನಸಾಹಿತ್ಯಲಿಂಗವು ಮುಖ್ಯಪ್ರಾಣನಿಗೆ ಪೂರಕವಲ್ಲ. ಆದ್ದರಿಂದ ಪ್ರಾಣಶಬ್ದದಿಂದ ಮುಖ್ಯಪ್ರಾಣನು ಪ್ರತಿಪಾದ್ಯನಾಗುವುದಿಲ್ಲ; ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ.

ಶಾಂಕರಭಾಷ್ಯದಲ್ಲಿ ಪ್ರಾಣಾಧಿಕರಣವನ್ನು ಹೀಗೆ ರಚಿಸಿದ್ದಾರೆ. 'ಕತಮಾ ಸಾ ದೇವತಾ ಇತಿ ಪ್ರಾಣ ಇತಿ ಹೋವಾಚ। ಸರ್ವಾಣಿ ಹ ವಾ ಭೂತಾನಿ ಪ್ರಾಣಮೇವಾಭಿಸಂವಿಶಂತಿ ಛಾಂದೋಗ್ಯದ ಈ ವಾಕ್ಯದಲ್ಲಿ ಪ್ರಾಣಶಬ್ದದಿಂದ ಯಾರು ವಾಚ್ಯರು? ಪ್ರಸಿದ್ಧವಾದ ಪ್ರಾಣವಾಯುವೋ ಅಥವಾ ಬ್ರಹ್ಮನೋ?

ಪೂರ್ವಪಕ್ಷ - ಪ್ರಾಣವಾಯುವೇ ಪ್ರಾಣಶಬ್ದದ ಮುಖ್ಯಾರ್ಥವೆಂದು ಛಾಂದೋಗ್ಯ ಹೇಳುತ್ತಿದೆ. ಏಕೆಂದರೆ ಅಲ್ಲಿಯೇ ಮುಂದೆ 'ಸರ್ವಾಣಿ ಹ ವಾ ಭೂತಾನಿ' ಎಂದು ಸಮಸ್ತಭೂತಪದಾರ್ಥಗಳ ಉತ್ಪತ್ತಿಲಯಗಳಿಗೆ ಪ್ರಾಣನೇ ಕಾರಣನೆಂದು ಹೇಳಲಾಗಿದೆ. ಸುಷುಪ್ತಿಕಾಲದಲ್ಲಿ ಬೇರೆ ಯಾವುದೇ ಇಂದ್ರಿಯಗಳ ವ್ಯಾಪಾರವಿಲ್ಲದೇ ಪ್ರಾಣವಾಯುವಿನ ವ್ಯಾಪಾರವಷ್ಟೇ ಇರುತ್ತದೆ. ಹಾಗಾಗಿ ಉಳಿದೆಲ್ಲ ಇಂದ್ರಿಯಗಳು ಸುಷುಪ್ತಿಕಾಲದಲ್ಲಿ ಪ್ರಾಣವಾಯುವಿನಲ್ಲಿ ಲಯ ಹೊಂದಿ, ಎಚ್ಚರಾವಸ್ಥೆಯಲ್ಲಿ ಪುನಃ ಹುಟ್ಟುತ್ತವೆ. ಈ ಪಂಚೇಂದ್ರಿಯಗಳು ಪಂಚಭೂತಗಳ ಸಾರರೂಪವಾದ್ದರಿಂದ ಸಮಸ್ತಭೂತಗಳ ಉತ್ಪತ್ತಿಲಯಗಳಿಗೆ ಜಡವಾಯುವೇ ಕಾರಣವೆಂದು ಇದರಿಂದ ಸಿದ್ಧವಾಗುತ್ತದೆ. ಆದ್ದರಿಂದ ಛಾಂದೋಗ್ಯದಲ್ಲಿರುವ ಪ್ರಾಣನೆಂದರೆ ಜಡವಾಯುವೇ ಹೊರತು ಬ್ರಹ್ಮನಲ್ಲ.

ಸಿದ್ಧಾಂತ - 'ಸರ್ವಾಣಿ ಹ ವಾ' ಎಂಬ ಛಾಂದೋಗ್ಯವು ಸಕಲಪ್ರಾಣಿಗಳ ಉತ್ಪತ್ತಿಲಯಕಾರಣತ್ವವನ್ನು ಸ್ಪಷ್ಟವಾಗಿ ಹೇಳುತ್ತಿದೆ. ಅದನ್ನು ಸಂಕೋಚಮಾಡಿ ಕೇವಲ ಇಂದ್ರಿಯಗಳಲ್ಲಷ್ಟೇ ಉತ್ಪತ್ತಿಲಯಕಾರಣತ್ವವನ್ನು ಹೇಳುವುದು ತಪ್ಪಾಗುತ್ತದೆ. ಆದ್ದರಿಂದ ಪ್ರಪಂಚಕಾರಣನಾದ ಬ್ರಹ್ಮನೇ ಪ್ರಾಣಶಬ್ದದಿಂದ ವಾಚ್ಯನಾಗಿದ್ದಾನೆ.

ಪ್ರಾಣಾಧಿಕರಣದ ಸಿದ್ಧಾಂತವು ಆಕಾಶಾಧಿಕರಣದಿಂದ ಗತಾರ್ಥವಾಗಿದೆ ಎಂದು ಶಂಕಿಸಬಾರದು. ಎರಡು ಬಗೆಯಲ್ಲಿ ಅಧಿಕಾಶಂಕೆಗೆ ಪ್ರಸಕ್ತಿ ಇರುವುದರಿಂದ ಪ್ರಾಣಾಧಿಕರಣವು ಆರಂಭಣೀಯವಾಗಿದೆ.

೧. ಪ್ರತ್ಯಕ್ಷಾನುಮಾನಗಳ ಬೆಂಬಲವಿರುವ ಸ್ವಾಪಶ್ರುತಿಯು ಸಕಲಭೂತಗಳ ಲಯವನ್ನು ಜಡವಾಯುವಿನಲ್ಲಿ ಪ್ರತಿಪಾದಿಸುತ್ತಿದೆ. ಅದಕ್ಕನುಗುಣವಾಗಿ ಪ್ರಸ್ತಾವವಾಕ್ಯವೂ ಕೂಡ ಜಡವಾಯುವನ್ನೇ ಪ್ರತಿಪಾದಿಸುತ್ತದೆ.

೨. ಅಥವಾ ಸ್ವಾಪವಾಕ್ಯಕ್ಕೆ ಅನುಗುಣವಾಗಿ ಪ್ರಸ್ತಾವವಾಕ್ಯವೇ ಇಂದ್ರಿಯಗಳ ಲಯವನ್ನು ಜಡವಾಯುವಿನಲ್ಲಿ ಪ್ರತಿಪಾದಿಸುತ್ತಿದೆ.

ಸ್ವಾಪವಾಕ್ಯದಂತೆ ಆಕಾಶಶ್ರುತಿಗೆ ಪ್ರಮಾಣಾಂತರಗಳ ಬೆಂಬಲವಿಲ್ಲದ ಕಾರಣ ಇಲ್ಲಿ ಅಧಿಕಾಶಂಕೆಗೆ ಅವಕಾಶವಿದೆ. ಈ ಅಧಿಕಾಶಂಕೆಯ ನಿರಾಕರಣೆಗಾಗಿ ಪ್ರಾಣಾಧಿಕರಣವು ಹೊರಡಲೇಬೇಕು.

* * * *

ಪ್ರಾಣಾಧಿಕರಣ-(೧।೧।೯)

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ प्राणाधिकरणम्

### ಸಂಗತಿ ಮತ್ತು ಭಾಷ್ಯೋಕ್ತ ಫಲವಿಚಾರ

**॥ ॐ अत एव प्राणः ॐ ॥ अत्र आध्यात्मिकप्राणादिशब्दसमन्वय उच्यते । अत्रापि 'प्राणशब्दप्रवृत्तिनिमित्तं जीवनादिहेतुत्वमन्वयव्यतिरेकाभ्यां प्राणशब्दार्थत्वेन प्रसिद्धस्य वायोरेवेति, स एव प्राणशब्दवाच्यो न तु विष्णुरित्याद्यधिकाशङ्कानिरासेन पूर्वन्याय एवातिदिश्यते' इत्यातिदेशिकी अवान्तरसङ्गतिः । भूताकाशस्य त्ववकाशहेतुत्वेऽन्वयव्यतिरेकौ न स्तः, परिच्छिन्नस्य तस्याभावेऽपि क्वचिदवकाशदर्शनात् ।**

**यद्यप्यत्र "तद्वै त्वं प्राणः" इत्यत्र प्राणस्य विष्णोः अन्यत्वे "प्राणं देवाः" इत्यादावप्यन्यत्वं स्यात् इत्यपि प्रयोजनं वक्तुं शक्यम् । तथाऽपि सूत्रे कण्ठोक्तानन्दमयत्वाक्षेपो दर्शनीय इति भाष्यादौ तदुक्तिः । अत एवानन्दमयोक्ताया विष्णोः प्राणतायाः इहाक्षेपान्न तेन गतार्थता, नापि प्राणशब्दस्योभयत्रप्रसिद्धता ।**

ಅನುವಾದ - ॥ ಓಂ ಅತ ಏವ ಪ್ರಾಣಃ ಓಂ ॥ ಪ್ರಾಣಾಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದಲ್ಲಿ ಪ್ರಾಣಶಬ್ದವನ್ನು ಸಮನ್ವಯ ಮಾಡುವ ಮೂಲಕ ಇಂದ್ರಿಯ ಮನಸ್ಸು ಮೊದಲಾದ ಸಕಲ ಆಧ್ಯಾತ್ಮಿಕಶಬ್ದಗಳ ಸಮನ್ವಯವನ್ನು ಮಾಡುತ್ತಿದ್ದಾರೆ. ಈ ಅಧಿಕರಣದಲ್ಲಿಯೂ ಸಹ ಪ್ರಾಣಶಬ್ದದಿಂದ ವಿಷ್ಣುವು ಪ್ರತಿಪಾದ್ಯನಾಗಲಾರ ಎಂದು ಪೂರ್ವಪಕ್ಷ. ಏಕೆಂದರೆ ಜೀವನಾದಿಹೇತುತ್ವವು ಪ್ರಾಣಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ದೇಹದಲ್ಲಿ ಮುಖ್ಯವಾಯುವಿದ್ದರೆ ಮಾತ್ರ ಜೀವನ ಇಲ್ಲದಿದ್ದರೆ ಇಲ್ಲ ಎಂಬ ಅನ್ವಯವ್ಯತಿರೇಕದಿಂದ ಪ್ರಾಣಶಬ್ದದ ಪ್ರವೃತ್ತಿನಿಮಿತ್ತವು ಮುಖ್ಯವಾಯುವಿನಲ್ಲೇ ಕೂಡುತ್ತದೆ. ಆದ್ದರಿಂದ ಮುಖ್ಯವಾಯುವೇ ಪ್ರಾಣಶಬ್ದದಿಂದ ವಾಚ್ಯನಾಗುತ್ತಾನೆ ಹೊರತು ವಿಷ್ಣುವಲ್ಲ ಎಂಬ ಅಧಿಕಾಶಂಕೆಯನ್ನು ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯದಿಂದಲೇ ನಿರಾಕರಿಸುತ್ತಿದ್ದಾರೆ. ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯವನ್ನು ಇಲ್ಲಿ ಅತಿದೇಶ ಮಾಡುತ್ತಿರುವುದರಿಂದ ಆತಿದೇಶಕೀ ಎಂಬ ಅವಾಂತರಸಂಗತಿಯನ್ನು ತಿಳಿಯಬೇಕು. ಇದು ಏಕೆ ಅಧಿಕಾಶಂಕೆಯೆಂದರೆ

ಭೂತಾಕಾಶದಲ್ಲಿ ಅನ್ವಯವ್ಯತಿರೇಕವನ್ನು ಹೇಳಲು ಬರುವುದಿಲ್ಲ. ಅವಕಾಶಹೇತುತ್ವವೆಂಬ ಪ್ರವೃತ್ತಿ-ನಿಮಿತ್ತವನ್ನು ಭೂತಾಕಾಶದಲ್ಲಿ ಹೇಳಬೇಕೆಂದರೆ, ಭೂತಾಕಾಶ ಇಲ್ಲದ ಕಡೆ ಅವಕಾಶವು ಇರ-ಬಾರದು, ಆದರೆ ಪರಿಚ್ಛಿನ್ನವಾದ ಭೂತಾಕಾಶ ಇಲ್ಲದಿದ್ದರೂ ಸಹ ಬ್ರಹ್ಮಾಂಡದ ಹೊರಗೆ ಅವಕಾಶ ಇರುವುದು ಸಿದ್ಧವಾಗಿದೆ.

ವಸ್ತುತಸ್ತು ಈ ಅಧಿಕರಣದಲ್ಲಿ 'ತದ್ವೈ ತ್ವಂ ಪ್ರಾಣಃ' ಎಂಬ ತೈತ್ತಿರೀಯದ ಪ್ರಾಣಶಬ್ದದಿಂದ ವಿಷ್ಣುವು ವಾಚ್ಯನಾಗದಿದ್ದರೆ 'ಪ್ರಾಣಂ ದೇವಾಃ' ಎಂಬ ಹಿಂದಿನ ಪ್ರಾಣಶಬ್ದದಿಂದಲೂ ವಿಷ್ಣುವು ವಾಚ್ಯನಾಗಲಾರ ಎಂದು ಆಕ್ಷೇಪಿಸಬಹುದು. ಆದರೆ ಸೂತ್ರಕಾರರು 'ಆನಂದಮಯೋಽಭ್ಯಾಸಾತ್' ಎಂದು ಆನಂದಮಯನನ್ನೇ ಆಕ್ಷೇಪಿಸಿದ್ದಾರೆ. ಅದಕ್ಕೆ ಅನುಸಾರಿಯಾಗಿಯೇ ಭಾಷ್ಯಾದಿಗಳಲ್ಲಿ ವ್ಯಾಖ್ಯಾನಿಸಿದ್ದಾರೆ. ಆದ್ದರಿಂದಲೇ 'ವಿಷ್ಣುವು ಆನಂದಮಯ'ನೆಂದು ಹಿಂದೆ ಸಿದ್ಧಾಂತ ಮಾಡಿದ್ದೀರಿ. ಆದರೆ ಆ ವಿಷ್ಣುವು ಪ್ರಾಣನಾದ್ದರಿಂದ ಆನಂದಮಯನಾಗಲಾರ ಎಂದು ಇಲ್ಲಿ ಆಕ್ಷೇಪಿಸಿದ್ದಾರೆ. ಇದರಿಂದ ಪುನರುಕ್ತಿದೋಷವು ಬರುವುದಿಲ್ಲ. ಆಕಾಶಾದಿಶಬ್ದಗಳಂತೆ ಪ್ರಾಣಶಬ್ದವು ಉಭಯತ್ರ-ಪ್ರಸಿದ್ಧವಾಗಿಲ್ಲ.

### ಕಠಿಣಪದಾರ್ಥ

ಅತ್ರ = ಆಕಾಶಾಧಿಕರಣದಲ್ಲಿ, ಆಧ್ಯಾತ್ಮಿಕ = ಇಂದ್ರಿಯ ಮನಸ್ಸು ಶರೀರ ಮೊದಲಾದವುಗಳಿಗೆ ಸಂಬಂಧಿಸಿದ, ಪೂರ್ವನ್ಯಾಯಃ = ನಿರವಕಾಶಲಿಂಗದಿಂದ ಪ್ರಸಿದ್ಧಿಗೆ ಬಾಧವೆಂಬ ಹಿಂದಿನ ನ್ಯಾಯವು, ತಸ್ಯ = ಆಕಾಶಕ್ಕೆ, ಕ್ವಚಿತ್ = ಬ್ರಹ್ಮಾಂಡದ ಹೊರಗೆ, ಪ್ರಾಣತಾಯಾಃ = 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್' ಎಂಬಲ್ಲಿ ಹೇಳಿರುವ ಚೇಷ್ಟಾಪ್ರದತ್ವವನ್ನು, ತೇನ = ಆನಂದಮಯಾಧಿಕರಣದಿಂದ.

**प्रकाशः – ॥ ॐ अत एव प्राणः ॐ ॥** ''आध्यात्मिकाशेषशब्दोपलक्षकप्राण-शब्दवाच्यो हरिः'' इति टीकां मनसि निधायाधिकरणोपाधिमाह – **अत्रेति** ॥ प्राधान्यात् प्राणशब्दस्य सूत्रे मुखतः कीर्तनमिति भावः । अत्र भाष्यदिशाऽऽनन्द-मयाधिकरणानन्तर्यप्रतीतेः ''अतिदेशो हि तादृशः'' इत्यनुभाष्यदिशान्तरधिकरणेन सङ्गतिमाह – **अत्रापीति** ॥ न केवलं पूर्वत्रेत्यपेरर्थः । 'जीवनादिहेतुत्वमन्वय-व्यतिरेकाभ्यां वायोरेव' इत्यन्वयः ॥ **इत्यादीति** ॥ 'प्रमाणाश्रिता तु' इत्यादिना वक्ष्यमाणदिशाऽऽदिशब्दः । तर्हि पूर्वानन्तर्ये को हेतुरित्यतः पूर्ववैषम्यमाह – **भूतेति** ॥ नच भाष्यविरोध इति शङ्क्यं, तस्य, ''तद्वै त्वं प्राणः'' इति प्राणस्य विष्ण्वन्यत्वे महाभोगशब्दोक्तं पूर्णानन्दत्वमपि तस्यैवेत्यानन्दमयोऽप्यन्यस्स्यादिति पूर्वपक्षे तदाक्षेपेण सिद्धान्ते तत्समाधानेन प्रयोजनमात्रपरत्वेनोपपत्तेः ।

नच पूर्वं ब्रह्मशब्दादिना विष्णुनिष्ठतयाऽवधारितस्यानन्दमयत्वरूप-पूर्णानन्दत्वस्य अत्र प्राणे श्रवणात् प्राणो विष्णुरेवेति वैपरीत्यस्यापि सम्भवान्नेदं प्रयोजनं युक्तमिति वाच्यं, टीकोक्तदिशा सावकाशेन लिङ्गमात्रेण निरवकाशप्राणश्रुतिबाधायोगात् । उक्तञ्च टीकायां – **''नच महाभोगत्वं श्रुतिबाधकं, श्रुतितो लिङ्गस्य दौर्बल्यात्''** इति । कथं तर्ह्यानन्दमये श्रुतस्य ब्रह्मशब्दादेर्बाधः? इति चेत्, अत्रत्यपूर्वपक्षन्यायेन अन्यत्रप्रसिद्धनिरवकाशप्राणश्रुतिसाहचर्येण अनन्द-मयत्वस्य अन्यत्रप्रसिद्धत्वापत्त्या तद्बलेन ब्रह्मशब्दादेर्मुख्यप्राण एव कथञ्चित् सावकाशत्वादिति भावः ।

भाष्योक्तं फलं प्रकारान्तरेणाक्षिप्य समाधत्ते – **यद्यपीति** ॥ नन्वेवमयं प्राणोऽन्यश्चेत् ''प्राणं देवा अनुप्राणन्ति'' इत्युक्तोऽप्यन्यस्स्यादिति साक्षात् प्राणमयाक्षेपसमाधानेन साफल्यसम्भवे महाभोगत्वमुखेनाक्षेपस्तु वक्रो नाश्रयणीय इति शङ्कार्थः । नचात्र वक्ष्यमाणरीत्या प्राणश्रुतिबाहुल्यापादनसाहित्यादिरूपस्येव तत्र विशेषहेतोरभावान्न तदाक्षेप इति वाच्यं, एकत्र निर्णीतस्यैवार्थस्य बाधकाभावे सर्वत्र ग्राह्यत्वात् । नच तत्र विष्णुपरत्वं बाधकं, अद्याप्यसिद्धेः। नच तत्र मुक्तप्राप्यत्वादिब्रह्मलिङ्गमेव बाधकमिति वाच्यं, अन्यत्र प्रसिद्ध्या ब्रह्मलिङ्गाना-मन्यथा नेयनस्यात्रेव तत्रापि तुल्यत्वादित्युक्तत्वात् ॥

**कण्ठोक्तेति** ॥ उपलक्षणमेतत्, महाभोगत्वमुखेनानाक्षेपे विष्णुधर्मतया निर्णीतेन महाभोगत्वेन विष्णुरेव प्राण इति शङ्का स्यात् । सा मा भूत्, महाभोगत्वस्यापि वायुधर्मत्वादिति दर्शयितुमित्यपि ध्येयम् । एवं हि प्राणत्वस्या- नाक्षेपे गतार्थता इत्यत आह – **अत एवेति** ॥ 'प्राणतायाः' 'को ह्येवान्यात् कः प्राण्यात्'' इत्युक्तायाः अन्यथः तत्रैव विष्णोर्जीवनहेतुत्वरूपप्राणदत्वस्य सिद्धत्वादिह सिद्धान्ते तत्समर्थनं न स्यादिति भावः ॥ **नापीति** ॥ 'अत एव' इत्यनुवर्तते । प्राणपदप्रवृत्तिनिमित्तस्य विष्णावाक्षेपेण प्राणपदस्य(शब्दस्य) भगवति वृत्तेर-सम्मतेः । अन्यथा ''आकाशोऽर्थान्तरत्वात्'' इत्यत्र पूर्वपक्षे ''आकाश इति होवाच'' इत्यत्र विष्णोराकाशतायाः अनाक्षेपेणोभयत्रप्रसिद्धिवदु- भयत्रप्रसिद्धता स्यादिति भावः ।

ವಿವರಣೆ - ಆಕಾಶಾಧಿಕರಣದಲ್ಲಿ ಆಧಿಭೌತಿಕವಾದ ಸಕಲಶಬ್ದಗಳನ್ನು ಸಮನ್ವಯ ಮಾಡಿದ್ದಾಯಿತು. ಪ್ರಕೃತ ಪ್ರಾಣಾಧಿಕರಣದಲ್ಲಿ ಆಧ್ಯಾತ್ಮಿಕವಾದ ಸಕಲಶಬ್ದಗಳನ್ನು ಸಮನ್ವಯ ಮಾಡುತ್ತಿದ್ದಾರೆ. 'ಆಧ್ಯಾತ್ಮಿಕಾಶೇಷಶಬ್ದೋಪಲಕ್ಷಕಪ್ರಾಣಶಬ್ದವಾಚ್ಯೋ ಹರಿಃ' (ಪ್ರಾಣಶಬ್ದವು ಆಧ್ಯಾತ್ಮಿಕ ಸಕಲಶಬ್ದಗಳನ್ನು ಉಪಲಕ್ಷಿಸುತ್ತಿದೆ. ಆ ಎಲ್ಲ ಶಬ್ದಗಳಿಂದ ಹರಿಯು ಪ್ರತಿಪಾದ್ಯನಾಗಿದ್ದಾನೆ) ಎಂಬ ಟೀಕೆಯನ್ನು ವ್ಯಾಖ್ಯಾನಿಸುತ್ತ ಮೊದಲು ಅಧಿಕರಣದ ಉಪಾಧಿಯನ್ನು ಹೇಳಿದ್ದಾರೆ. ಆಧ್ಯಾತ್ಮಿಕಸಕಲಶಬ್ದಗಳ ಮಧ್ಯದಲ್ಲಿ ಪ್ರಾಣಶಬ್ದವೇ ಪ್ರಧಾನವಾದ್ದರಿಂದ ಅದನ್ನು ಸೂತ್ರದಲ್ಲಿ ಕಂಠತಃ ಉಚ್ಚರಿಸಿದ್ದಾರೆ.

ಭಾಷ್ಯವನ್ನು ನೋಡಿದಾಗ ಆನಂದಮಯಾಧಿಕರಣದ ಅನಂತರದಲ್ಲಿ ಪ್ರಾಣಾಧಿಕರಣವು 'ಬರಬೇಕೆಂದು ತೋರುತ್ತದೆ. ಆದರೆ ಅನುವ್ಯಾಖ್ಯಾನದಲ್ಲಿ 'ಅತಿದೇಶೋ ಹಿ ತಾದೃಶಃ' ಎಂದು ಸ್ಪಷ್ಟವಾಗಿ ಆಕಾಶಾಧಿಕರಣದಿಂದ ಸಂಗತಿಯನ್ನು ಹೇಳಿದ್ದಾರೆ. ಅನುವ್ಯಾಖ್ಯಾನದಲ್ಲಿ ಹೇಳಿದ ಸಂಗತಿಯನ್ನೇ 'ಅತ್ರಾಪಿ' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ. ಆಕಾಶಾಧಿಕರಣದ ಹಾಗೂ ಪ್ರಾಣಾಧಿಕರಣದ ಸಿದ್ಧಾಂತವು ಒಂದೇ ಆಗಿದೆ ಎಂದು ಹೇಳಿದರು. ಹಾಗಾದರೆ ಮೊದಲು ಪ್ರಾಣಾಧಿಕರಣವನ್ನು ಹೇಳಿ, ಅನಂತರ ಆಕಾಶಾಧಿಕರಣವನ್ನು ಹೇಳಬಹುದು. ಆಕಾಶಾಧಿಕರಣದ ಅನಂತರದಲ್ಲಿಯೇ ಪ್ರಾಣಾಧಿಕರಣವನ್ನು ಹೇಳಲು ಏನು ಕಾರಣ? ಎಂಬ ಶಂಕೆಗೆ 'ಭೂತಾಕಾಶಸ್ಯ' ಎಂಬ ಮಾತಿನಿಂದ ಉತ್ತರಿಸುತ್ತಿದ್ದಾರೆ. ಪ್ರಾಣಶಬ್ದದ ಪ್ರವೃತ್ತಿನಿಮಿತ್ತಕ್ಕೆ ಅನ್ವಯವ್ಯತಿರೇಕದಿಂದ ಪೂರ್ವಪಕ್ಷವು ಕೂಡುತ್ತದೆ. ಆದರೆ ಆಕಾಶಶಬ್ದದ ಪ್ರವೃತ್ತಿನಿಮಿತ್ತಕ್ಕೆ ಅನ್ವಯವ್ಯತಿರೇಕವು ಕೂಡುವುದಿಲ್ಲ. ಪೂರ್ವಪಕ್ಷದಲ್ಲಿರುವ ಈ ಅಧಿಕಾಂಶವನ್ನು ವಿವಕ್ಷಿಸಿ ಆಕಾಶಾಧಿಕರಣದ ಅನಂತರ ಪ್ರಾಣಾಧಿಕರಣವನ್ನು ಹೇಳಿದ್ದಾರೆ.

ಶಂಕೆ - ಭಾಷ್ಯದಲ್ಲಿ ಆನಂದಮಯಾಧಿಕರಣದಿಂದ ನೇರವಾಗಿ ಪ್ರಾಣಾಧಿಕರಣಕ್ಕೆ ಸಂಗತಿಯನ್ನು ಹೇಳಿದ್ದಾರೆ. ಆದರೆ ನೀವು ಆಕಾಶಾಧಿಕರಣದಿಂದ ಸಂಗತಿಯನ್ನು ಹೇಳುತ್ತಿದ್ದೀರಿ. ಹಾಗಾದರೆ ಭಾಷ್ಯವಿರೋಧ ಬರುತ್ತದಲ್ಲವೇ?

ಸಮಾಧಾನ - ಭಾಷ್ಯದಲ್ಲಿ ಆನಂದಮಯಾಧಿಕರಣದಿಂದ ಸಂಗತಿಯನ್ನು ತೋರಿಸಿಲ್ಲ. ಹೊರತು ಪೂರ್ವಪಕ್ಷದ ಪ್ರಯೋಜವನ್ನು ಮತ್ತು ಸಿದ್ಧಾಂತದ ಪ್ರಯೋಜನವನ್ನಷ್ಟೇ ಆನಂದಮಯಾಧಿಕರಣದಿಂದ ತೋರಿಸಿದ್ದಾರೆ. 'ತದ್ವೈ ತ್ವಂ ಪ್ರಾಣಃ' ಎಂಬಲ್ಲಿರುವ ಮುಖ್ಯವಾಯುವು ಪ್ರತಿಪಾದ್ಯನಾದರೆ ಅದೇ ಶ್ರುತಿಯಲ್ಲಿ ಮಹಾಭೋಗಶಬ್ದದಿಂದ ಹೇಳಲ್ಪಟ್ಟ ಪೂರ್ಣಾನಂದತ್ವವು ಮುಖ್ಯವಾಯುವಿಗೇ ಬರಬೇಕು. ಹಾಗಾಗಿ ಆನಂದಮಯನೂ ಸಹ ಮುಖ್ಯವಾಯುವೇ ಆಗುತ್ತಾನೆ ಎಂದು ಪೂರ್ವಪಕ್ಷದ ಫಲ. ಪ್ರಾಣಶಬ್ದದಿಂದ ಮುಖ್ಯವಾಯುವು ವಾಚ್ಯನಾಗುವುದಿಲ್ಲ ಹೊರತು ವಿಷ್ಣುವೇ ವಾಚ್ಯನಾಗುತ್ತಾನೆ. ಆದ್ದರಿಂದ ಮಹಾಭೋಗಶಬ್ದದಿಂದ ಹೇಳಲ್ಪಟ್ಟ ಪೂರ್ಣಾನಂದತ್ವವು ವಿಷ್ಣುವಿಗೇ ಕೂಡುತ್ತದೆ; ಆನಂದಮಯಶಬ್ದದಿಂದ ವಿಷ್ಣುವೇ ವಾಚ್ಯನಾಗುತ್ತಾನೆ ಎಂಬುದು ಸಿದ್ಧಾಂತದ ಫಲ.

ಶಂಕೆ - ಹಿಂದೆ ಬ್ರಹ್ಮಶಬ್ದದ ಬಲದಿಂದ ಆನಂದಮಯತ್ವರೂಪವಾದ ಪೂರ್ಣಾನಂದತ್ವರೂಪವನ್ನು ವಿಷ್ಣುವಿನ ಧರ್ಮವೆಂದು ನಿಶ್ಚಯಿಸಲಾಗಿತ್ತು. ಆದರೆ ಅದೇ ಪೂರ್ಣಾನಂದತ್ವವು ಪ್ರಕೃತ ಶ್ರುತಿಯಲ್ಲಿ ಪ್ರಾಣನಲ್ಲಿ ಕೇಳಿಸುತ್ತಿದೆ. ಆದ್ದರಿಂದ ಪ್ರಾಣಶಬ್ದದಿಂದಲೂ ವಿಷ್ಣುವೇ ವಾಚ್ಯನಾಗಬೇಕು ಎಂದು

ವಿಪರೀತವಾಗಿಯೂ ಸಹ ಹೊಂದಿಸಬಹುದಾದ್ದರಿಂದ ಆನಂದಮಯಶಬ್ದದಿಂದ ವಿಷ್ಣುವೇ ವಾಚ್ಯನಾಗುತ್ತಾನೆಂಬ ಸಿದ್ಧಾಂತದ ಫಲವನ್ನು ಹೇಳಲಾಗದು ಅಲ್ಲವೇ?

ಸಮಾಧಾನ - ಪೂರ್ಣಾನಂದತ್ವವೆಂಬ ಲಿಂಗವು ಟೀಕೆಯಲ್ಲಿ ಹೇಳಿದ ಪ್ರಕಾರ ಸಾವಕಾಶವಾಗಿದೆ. ಆದರೆ ಪ್ರಾಣಶ್ರುತಿಯು ನಿರವಕಾಶವಾಗಿದೆ. ಸಾವಕಾಶಲಿಂಗದಿಂದ ನಿರವಕಾಶಶ್ರುತಿಯನ್ನು ಬಾಧಿಸಲು ಹೇಗೆ ಸಾಧ್ಯ ? ಹಾಗಾಗಿ ಪೂರ್ಣಾನಂದತ್ವಲಿಂಗದಿಂದ ಪ್ರಾಣಶಬ್ದವು ವಿಷ್ಣುವನ್ನು ಪ್ರತಿಪಾದಿಸುತ್ತದೆಂದು ನಿರ್ಣಯಿಸಲಾಗದು. ಟೀಕೆಯ ಮಾತು ಹೀಗಿದೆ - "ನಚ ಮಹಾಭೋಗತ್ವಂ ಶ್ರುತಿಬಾಧಕಮ್ । ಶ್ರುತಿತೋ ಲಿಂಗಸ್ಯ ದೌರ್ಬಲ್ಯಾತ್' (ಪೂರ್ಣಾನಂದತ್ವವು ಶ್ರುತಿಗೆ ಬಾಧಕವಾಗುವುದಿಲ್ಲ; ಶ್ರುತಿಗಿಂತ ಲಿಂಗವು ದುರ್ಬಲವಾದ್ದರಿಂದ).

ಶಂಕೆ - ಹಾಗಾದರೆ ಆನಂದಮಯನಲ್ಲಿ ಶ್ರುತವಾದ ಬ್ರಹ್ಮಶ್ರುತಿಗೆ ಬಾಧವನ್ನು ಹೇಗೆ ಹೇಳುತ್ತೀರಿ? ಈಗ ಹೇಳಿದಂತೆ ಶ್ರುತಿಗಿಂತ ಲಿಂಗವು ದುರ್ಬಲವಲ್ಲವೇ?

ಸಮಾಧಾನ - ಆನಂದಮಯನಲ್ಲಿ ಶ್ರುತವಾದ ಬ್ರಹ್ಮಶಬ್ದವೂ ಸಹ ಸಾವಕಾಶವೇ ಆಗಿದೆ. ಏಕೆಂದರೆ ಈ ಅಧಿಕರಣದ ಪೂರ್ವಪಕ್ಷದ ನ್ಯಾಯದಂತೆ ಅನ್ಯತ್ರಪ್ರಸಿದ್ಧವಾದ ಪ್ರಾಣಶ್ರುತಿಯು ನಿರವಕಾಶವಾಗಿ ಬಲಿಷ್ಠವಾಗಿದೆ. ಇದರ ಜೊತೆಗೆ ಶ್ರುತವಾದ ಆನಂದಮಯತ್ವವೂ ಸಹ ಪ್ರಬಲವಾಗಿ ಅನ್ಯತ್ರಪ್ರಸಿದ್ಧವಾಗುತ್ತದೆ. ಈ ಆನಂದಮಯತ್ವದ ಬಲದಿಂದ ಬ್ರಹ್ಮಶ್ರುತಿಯನ್ನು ಸಹ ಮುಖ್ಯಪ್ರಾಣನಲ್ಲಿಯೇ ಸಮನ್ವಯ ಮಾಡಬಹುದು. ಈ ಅಧಿಕರಣದ ಪೂರ್ವಪಕ್ಷದ ನ್ಯಾಯವನ್ನು ಅವಲಂಬಿಸಿ ಸಾವಕಾಶವಾದ ಬ್ರಹ್ಮಶ್ರುತಿಯು ದುರ್ಬಲವಾಗಿದೆ. ದುರ್ಬಲವಾದ ಬ್ರಹ್ಮಶ್ರುತಿಗೆ ಬಾಧಹೇಳುವುದು ತಪ್ಪೇನಲ್ಲ.

ಭಾಷ್ಯದಲ್ಲಿ ಹೇಳಿರುವ ಆನಂದಮಯಾಧಿಕರಣದಿಂದ ಈ ಅಧಿಕರಣಕ್ಕಿರುವ ಇರುವ ಪ್ರಯೋಜನವನ್ನು ಒಂದು ಬಗೆಯಲ್ಲಿ ವ್ಯಾಖ್ಯಾನಿಸಿದ್ದಾಯಿತು. ಈಗ ಮತ್ತೊಂದು ಬಗೆಯಲ್ಲಿ ಆಕ್ಷೇಪಿಸಿ ಸಮಾಧಾನ 'ಯದ್ಯಪಿ' ಇತ್ಯಾದಿ ಗ್ರಂಥದಿಂದ ನೀಡುತ್ತಿದ್ದಾರೆ.

ಶಂಕೆ - 'ತದ್ವೈ ತ್ವಂ ಪ್ರಾಣಃ' ಎಂಬಲ್ಲಿರುವ ಪ್ರಾಣನು ಬೇರೆಯವನಾದರೆ ಆನಂದಮಯಾಧಿಕರಣದಲ್ಲಿ 'ಪ್ರಾಣಂ ದೇವಾ ಅನುಪ್ರಾಣಂತಿ' ಎಂಬ ಶ್ರುತಿಯಿಂದ ಪ್ರತಿಪಾದ್ಯನಾದ ಪ್ರಾಣಮಯನೂ ಸಹ ಬೇರೆಯವನೇ ಆಗುತ್ತಾನೆ. ಹೀಗೆ ನೇರವಾಗಿಯೇ ಪ್ರಾಣಮಯನನ್ನು ಆಕ್ಷೇಪಿಸಿ ಸಮಾಧಾನವನ್ನು ಹೇಳಬಹುದು. ಇದರಿಂದಲೂ ಆನಂದಮಯಾಧಿಕರಣದಿಂದ ಪ್ರಯೋಜನವನ್ನುತೋರಿಸಿದಂತಾಗುತ್ತದೆ. ಪ್ರತ್ಯೇಕವಾಗಿ ಮಹಾಭೋಗತ್ವವನ್ನು ಆಕ್ಷೇಪಿಸಿ ತನ್ಮೂಲಕವಾಗಿ ಆನಂದಮಯನನ್ನು ಆಕ್ಷೇಪಿಸುವುದು ವಕ್ರಮಾರ್ಗವಲ್ಲವೇ?

ಸಮಾಧಾನ - 'ತದ್ವೈ ತ್ವಂ ಪ್ರಾಣಃ' ಎಂಬ ಶ್ರುತಿಯು ಅನ್ಯಪರವೆನ್ನಲು ಪ್ರಬಲಕಾರಣಗಳಿವೆ. ಬಹುಲವಾದ ಪ್ರಾಣಶ್ರುತಿ, ಆಪಾದನಸಾಹಿತ್ಯ ಇತ್ಯಾದಿ ಅನೇಕ ಕಾರಣಗಳಿರುವುದರಿಂದ 'ತದ್ವೈ ತ್ವಂ ಪ್ರಾಣಃ' ಎಂಬಲ್ಲಿರುವ ಪ್ರಾಣನು ಅನ್ಯನೆಂದು ಆಕ್ಷೇಪಿಸಬಹುದು. ಆದರೆ 'ಪ್ರಾಣಂ ದೇವಾಃ'

ಎಂಬಲ್ಲಿರುವ ಪ್ರಾಣನು ಅನ್ಯನೆಂದು ಆಕ್ಷೇಪಿಸಲು ಇಂತಹ ಯಾವುದೇ ವಿಶೇಷಕಾರಣಗಳಿರುವುದಿಲ್ಲ. ಆದ್ದರಿಂದ ನೇರವಾಗಿ ಪ್ರಾಣಮಯನನ್ನು ಆಕ್ಷೇಪಿಸಲಾಗದು.

ಶಂಕೆ - ಬಾಧಕವಿಲ್ಲದಿದ್ದಾಗ ಮಾತ್ರ ಒಂದು ಕಡೆ ನಿರ್ಣೀತವಾದ ಅರ್ಥವನ್ನು ಎಲ್ಲೆಡೆ ಇಟ್ಟುಕೊಳ್ಳಬಹುದು. 'ತದ್ವೈ ತ್ವಂ ಪ್ರಾಣಃ' ಎಂಬಲ್ಲಿ ಪ್ರಾಣನು ಅನ್ಯನೆಂದು ನಿರ್ಣೀತವಾಗಿದೆ; ಅದನ್ನು ಎಲ್ಲಾ ಪ್ರಾಣಶಬ್ದಗಳಲ್ಲಿಯೂ ಅನ್ವಯಿಸಬೇಕಾದರೆ ಬಾಧಕಗಳು ಇರಬಾರದು. 'ಪ್ರಾಣಂ ದೇವಾಃ' ಎಂಬ ಶ್ರುತಿಯಲ್ಲಿ ಪ್ರಾಣಪರವೆನ್ನಲು ಯಾವುದೇ ಬಾಧಕವು ಕಾಣಿಸುತ್ತಿಲ್ಲ. ಆದ್ದರಿಂದ ನೇರವಾಗಿ ಪ್ರಾಣಮಯನನ್ನು ಆಕ್ಷೇಪಿಸಲು ಏನು ತೊಂದರೆ?

ಸಮಾಧಾನ - 'ಪ್ರಾಣಂ ದೇವಾಃ' ಎಂಬ ಶ್ರುತಿಯು ವಿಷ್ಣುಪರವೆಂದು ಅಂಗೀಕರಿಸುತ್ತೇವೆ. ವಿಷ್ಣುಪರವಾಗಿರುವಿಕೆಯೇ ಬಾಧಕವಾದ್ದರಿಂದ ಇಲ್ಲಿರುವ ಪ್ರಾಣನು ಅನ್ಯನಾಗಲಾರ.

ಶಂಕೆ - ಒಂದು ವೇಳೆ 'ಪ್ರಾಣಂ ದೇವಾಃ' ಎಂಬ ಶ್ರುತಿಯು ವಿಷ್ಣುಪರವೆಂದು ಸಿದ್ಧವಾಗಿದ್ದರೆ, ವಿಷ್ಣುಪರತ್ವವು ಬಾಧಕವಾಗುತ್ತಿತ್ತು. ಆದರೆ ಪೂರ್ವಪಕ್ಷಿಗಳಾದ ನಾವು ವಿಷ್ಣುಪರತ್ವವೆಂದು ಅಂಗೀಕರಿಸುವುದಿಲ್ಲ. ವಿಷ್ಣುಪರವೆಂಬ ವಿಷಯ ಇಲ್ಲಿಯ ತನಕ ನಿರ್ಣಯವಾಗಿಲ್ಲ.

ಸಮಾಧಾನ - ಹಾಗಿದ್ದರೆ ಮುಕ್ತಪ್ರಾಪ್ಯತ್ವ ಮೊದಲಾದ ಬ್ರಹ್ಮಲಿಂಗಗಳು ಶ್ರುತಿಯಲ್ಲಿ ಕೇಳಿಸುತ್ತಿವೆ. ಇವುಗಳು ಬಾಧಕವಾಗುತ್ತವೆ.

ಶಂಕೆ - ಅನ್ಯತ್ರಪ್ರಸಿದ್ಧವಾದ ಪ್ರಾಣಶ್ರುತಿಯು ಪ್ರಬಲವಾದ್ದರಿಂದ ಮುಕ್ತಪ್ರಾಪ್ಯತ್ವಾದಿಬ್ರಹ್ಮಲಿಂಗಗಳನ್ನು ಬೇರೆ ರೀತಿಯಾಗಿ ಅರ್ಥೈಸಬೇಕಲ್ಲವೇ?

ಸಮಾಧಾನ - 'ಪ್ರಾಣಂ ದೇವಾಃ' ಎಂಬ ಶ್ರುತಿಯಲ್ಲಿ ಮುಕ್ತಪ್ರಾಪ್ಯತ್ವಾದಿ ಬ್ರಹ್ಮಲಿಂಗಗಳಿರುವುದರಿಂದ ವಿಷ್ಣುಪರವೆಂದು ನಿರ್ಣಯಿಸುತ್ತಿದ್ದೀರಿ. ಹಾಗಾದರೆ 'ತದ್ವೈ ತ್ವಂ ಪ್ರಾಣಃ' ಎಂಬಲ್ಲಿಯೂ ಸಹ ಇಂತಹ ಶ್ರೀಪತಿತ್ವ ಮೊದಲಾದ ವಿಷ್ಣುಲಿಂಗಗಳಿರುವುದರಿಂದ ಈ ಶ್ರುತಿಯು ವಿಷ್ಣುಪರವಾಗುತ್ತದೆ. ಹಾಗಾಗಿ 'ತದ್ವೈ ತ್ವಂ ಪ್ರಾಣಃ' ಎಂಬ ಶ್ರುತಿಯು ಅನ್ಯಪರವಾದ ಕಾರಣದಿಂದ 'ಪ್ರಾಣಂ ದೇವಾಃ' ಎಂಬ ಶ್ರುತಿಯೂ ಕೂಡ ಅನ್ಯಪರವಾಗಬೇಕೆಂಧೇನೂ ನಿಯಮವಿಲ್ಲ. ಆದ್ದರಿಂದ ನೇರವಾಗಿ ಪ್ರಾಣಮಯನನ್ನು ಆಕ್ಷೇಪಿಸದೆ ಮಹಾಭೋಗತ್ವಮೂಲಕವಾಗಿ ಆಕ್ಷೇಪಿಸಿದ್ದಾರೆ. ಈ ಅಭಿಪ್ರಾಯದಿಂದ ಗ್ರಂಥಕಾರರು ಸೂತ್ರಕಾರರು ಕಂಠತಃ ಹೇಳಿದ ಆನಂದಮಯತ್ವವನ್ನೇ ಆಕ್ಷೇಪಿಸುವುದು ಭಾಷ್ಯಕಾರರ ಅಭಿಪ್ರಾಯವೆಂದು ವ್ಯಾಖ್ಯಾನಿಸಿದ್ದಾರೆ.

ಉಪಲಕ್ಷಣಯಾ ಇದನ್ನು ತಿಳಿಯಬೇಕು. ಮಹಾಭೋಗತ್ವಮೂಲಕವಾಗಿ ಆಕ್ಷೇಪ ಮಾಡುವುದೇ ಸ್ವರಸ. ಹಾಗೆ ಮಾಡದಿದ್ದರೆ ಮಹಾಭೋಗತ್ವವು ವಿಷ್ಣುಧರ್ಮವೆಂದು ಆನಂದಮಯಾಧಿಕರಣದಲ್ಲಿ ನಿರ್ಣಯವಾಗಿರುವುದರಿಂದ ಮಹಾಭೋಗತ್ವಲಿಂಗದಿಂದ ವಿಷ್ಣುವೇ ಪ್ರಾಣನಾಗುತ್ತಾನೆಂಬ ಶಂಕೆಯು ಬರುತ್ತದೆ. ಹೀಗೆ ವಿಷ್ಣುವು ಪ್ರಾಣನೆಂದು ಸಿದ್ಧವಾದಮೇಲೆ ಪುನಃ ಅದೇ ವಿಷಯವನ್ನು ಪ್ರಾಣಾಧಿಕರಣದಲ್ಲಿ ಸಿದ್ಧಾಂತ ಮಾಡುವುದು ಪುನರುಕ್ತವಾಗುತ್ತದೆ. ಆದ್ದರಿಂದ ಮಹಾಭೋಗತ್ವಲಿಂಗದಿಂದ ವಿಷ್ಣುವು ಪ್ರಾಣನೆಂಬ ಶಂಕೆಯು ಬರಬಾರದು. ಈ ಶಂಕೆ ಬರಬಾರದೆಂದರೆ ಮಹಾಭೋಗತ್ವಧರ್ಮವೂ

ಕೂಡ ವಾಯುವಿನ ಧರ್ಮವೆಂದು ಆಕ್ಷೇಪಿಸಬೇಕು. ಈ ಅಭಿಪ್ರಾಯದಿಂದ 'ಅತ ಏವ' ಎಂಬ ವಾಕ್ಯವು ಹೊರಟಿದೆ. ಪ್ರಾಣಶ್ರುತಿಯಲ್ಲಿ ಚೇಷ್ಟಾಪ್ರದತ್ವ, ಜೀವನಹೇತುತ್ವಧರ್ಮಗಳೂ ಸಹ ಕೇಳಿಸುತ್ತಿವೆ. ಒಂದು ವೇಳೆ ಮಹಾಭೋಗತ್ವಧರ್ಮವು ವಿಷ್ಣುವಿನಲ್ಲಿ ಸಿದ್ಧವಾದ್ದರಿಂದ ಪ್ರಾಣನು ವಿಷ್ಣುವಾಗುತ್ತಾನೆಂದು ಶಂಕಿಸುವುದಾದರೆ ಪ್ರಾಣಶ್ರುತಿಯಲ್ಲಿ ಕೇಳಿಸುತ್ತಿರುವ ಚೇಷ್ಟಾಪ್ರದತ್ವಾದಿ ಧರ್ಮಗಳೂ ಸಹ ವಿಷ್ಣುವಿನ ಧರ್ಮವೆಂದು ನಿರ್ಣಯಿಸಲಾಗಿದೆ. ಪುನಃ ಅವುಗಳನ್ನೇ ವಿಷ್ಣುವಿನಲ್ಲಿ ಈ ಅಧಿಕರಣದಲ್ಲಿ ಸಮನ್ವಯ ಮಾಡಿದರೆ ಪುನರುಕ್ತಿ ಬಂದೇ ಬರುತ್ತದೆ. ಆದ್ದರಿಂದ ಹಿಂದಿನ ಅಧಿಕರಣಗಳಲ್ಲಿ ಸಿದ್ಧವಾದ ಮಹಾಭೋಗತ್ವ, ಚೇಷ್ಟಾಪ್ರದತ್ವ, ಜೀವನಹೇತುತ್ವ ಇತ್ಯಾದಿ ಎಲ್ಲ ವಿಷ್ಣುವಿನ ಧರ್ಮಗಳನ್ನು ಪ್ರಕೃತ ಅಧಿಕರಣದಲ್ಲಿ ವಿಷ್ಣುವಿನಲ್ಲಿ ಇಲ್ಲವೆಂದು ಆಕ್ಷೇಪಿಸಲಾಗಿದೆ. ಹೀಗೆ ಆಕ್ಷೇಪ ಮಾಡದಿದ್ದರೆ ಪ್ರಾಣಾಧಿಕರಣಕ್ಕೆ ಕೃತ್ಯವೇ ಇಲ್ಲ. ಹಿಂದಿನ ಅಧಿಕರಣದಲ್ಲಿ ಸಿದ್ಧವಾದ ಪ್ರಮೇಯವನ್ನು ಆಕ್ಷೇಪಿಸುವುದು ತಪ್ಪಲ್ಲ. ಏಕೆಂದರೆ ಆಕಾಶಾಧಿಕರಣದಲ್ಲಿ 'ಆಕಾಶ ಇತಿ ಹೋವಾಚ' ಎಂಬ ಶ್ರುತಿಯಿಂದ ಭಗವಂತನೇ ಆಕಾಶನೆಂದು ನಿರ್ಣಯಿಸಲಾಗಿದೆ. ಪುನಃ 'ಆಕಾಶೋಽರ್ಥಾಂತರತ್ವಾದಿ' ಇತ್ಯಾದಿಸೂತ್ರದಲ್ಲಿ ಆಕಾಶಾಧಿಕರಣದ ಪ್ರಮೇಯವನ್ನು ಆಕ್ಷೇಪ ಮಾಡುವುದಿಲ್ಲ.

**गुरुराजीयम् – ॥ ॐ अत एवप्राणः ॐ ॥** अधिकरणोपाधिप्रदर्शनपूर्वकमधिकरणप्रतिपाद्यं दर्शयति – **अत्रेति** ॥ ननु प्राणशब्दप्रवृत्तिनिमित्तस्य जीवनादिहेतुत्वस्यान्वयव्यतिरेकाभ्यां वायौ प्रसिद्धत्ववत् आकाशशब्दप्रवृत्तिनिमित्तस्यावकाशप्रदत्वस्यान्वयव्यतिरेकाभ्यां भूताकाशेपि प्रसिद्धत्वात् कथमियमभ्यधिकाशङ्का? इत्यत आह – **भूताकाशस्य त्विति** ॥ 'परिच्छिन्नस्य' इति हेतुगर्भविशेषणम् । परिच्छिन्नत्वात् क्वचिद् भूताकाशव्यतिरेके वक्तव्ये तत्रैवावकाशदर्शनादिति भावः। नन्वानन्दमयाधिकरणे प्राणशब्दस्य भगवत्परत्वस्य प्रतिपादितत्वेनात्रापि तत्प्रतिपादने तेन गतार्थत्वं स्यात् । किं च 'आकाशस्तल्लिङ्गात्' इत्यादिना इति 'होवाच' इति वाक्ये आकाशशब्दस्य विष्णुपरत्वस्य प्रतिपादितत्वेन आकाशोर्थान्तरत्वादीत्यत्राकाशशब्दस्योभयत्रप्रसिद्धत्ववत् । आनन्दमयाधिकरणे प्राणशब्दस्य भगवत्परत्वेन समर्थितत्वादस्याप्युभयत्रप्रसिद्धत्वापत्त्या पादासङ्गतिश्च स्यात्, इत्यत आह – **अत एवेति** ॥ तस्यैव विवरणम् **'आनन्दमयोक्तायाः'** इत्यादि ।

## ಸಾರ

ಪ್ರಾಣಾಧಿಕರಣದ ಉದ್ದೇಶ ಪ್ರಾಣಶಬ್ದ ಸಮನ್ವಯದ ಮೂಲಕ ಆಧ್ಯಾತ್ಮಿಕ ಸಕಲಶಬ್ದಗಳನ್ನು ಭಗವಂತನಲ್ಲಿ ಸಮನ್ವಯ ಮಾಡುವುದು. ಜೀವನಹೇತುತ್ವವೇ ಪ್ರಾಣಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ಅನ್ವಯ ವ್ಯತಿರೇಕದಿಂದ ಈ ಪ್ರವೃತ್ತಿನಿಮಿತ್ತವು ಮುಖ್ಯವಾಯುವಿನಲ್ಲಿ ಸಿದ್ಧವಾಗಿದೆ. ಆದ್ದರಿಂದ ಭಗವಂತನು

ಪ್ರತಿಪಾದ್ಯನಾಗಲಾರನೆಂಬ ಅಧಿಕಾಶಂಕೆಯ ಪರಿಹಾರಕ್ಕಾಗಿ ಈ ಅಧಿಕರಣ ಹೊರಟಿದೆ. ಹಿಂದಿನ ಆಕಾಶಾಧಿಕರಣದಲ್ಲಿ ಹೀಗೆ ಅನ್ವಯವ್ಯತಿರೇಕದಿಂದ ಪೂರ್ವಪಕ್ಷ ಮಾಡಲಾಗದ ಕಾರಣ ಇದು ಅಧಿಕಾಶಂಕೆಯೆನಿಸಿದೆ. ಹಿಂದೆ ಸಮರ್ಥಿಸಿದ ಆನಂದಮಯತ್ವವನ್ನೇ ಈ ಅಧಿಕರಣದಲ್ಲಿ ಆಕ್ಷೇಪಿಸಬೇಕು. ಪ್ರಾಣಮಯತ್ವವನ್ನು ಆಕ್ಷೇಪಿಸಬಾರದು. ಹಾಗಾದಲ್ಲಿ ಅಸ್ವಾರಸ್ಯ ಮತ್ತು ಪುನರುಕ್ತಿದೋಷಗಳು ಬರುತ್ತವೆ.

— — — — — —

## ಸಂಶಯಪರಂಪರೆ

**तात्पर्यचन्द्रिका –**

**अत्र प्राणः किं मुख्यवायुः उत ब्रह्म? इति चिन्ता । तदर्थम्, किं प्राणश्रुतिप्रसिद्ध्यनुसारेण श्रीपतित्वादिलिङ्गं बाध्यं किं वा विपरीतम्? इति । तदर्थं, प्रसिद्धिबाधे किं श्रुतेर्मुख्यत्वहानिरुत न? इति । तदर्थम्, प्राणशब्दप्रवृत्तिनिमित्तं जीवनहेतुत्वं किं ब्रह्मणि नास्ति उतास्ति? इति । तदर्थम्, किं जीवनं मुख्यप्राणान्वयव्यतिरेकानुविधाय्युतेश्वरान्वयव्यतिरेकानुविधायि? इति । तथा, "भर्ता सन् भ्रियमाणो बिभर्ति" इत्यनुवाकस्थेन "तद्वै त्वं प्राणः" इति वाक्येनोक्तः प्राणः किं "अद्भ्यः सम्भूतः" इत्यनुवाकस्थेन "श्रीश्च ते लक्ष्मीश्च पत्न्यौ" इति वाक्येन उक्तादन्यः किं वा अनन्यः? इति ।**

ಅನುವಾದ - ಪ್ರಾಣಾಧಿಕರಣದ ಸಂಶಯಕೋಟಿ

ಪ್ರಾಣಶ್ರುತಿಯನ್ನು ನೋಡಿದಾಗ ಪ್ರಾಣಶಬ್ದದಿಂದ ಪ್ರತಿಪಾದ್ಯನಾದವನು ಮುಖ್ಯವಾಯುವೋ ಅಥವಾ ಬ್ರಹ್ಮನೋ? ಎಂದು ಸಂಶಯ ಬರುತ್ತದೆ. ಈ ಸಂಶಯವು ಪರಿಹಾರವಾಗಬೇಕಾದರೆ ಪ್ರಸಿದ್ಧಿಯನ್ನು ಅನುಸರಿಸಿ ಬಲಿಷ್ಠವಾದ ಪ್ರಾಣಶ್ರುತಿಯು ಶ್ರೀಪತಿತ್ವಾದಿಲಿಂಗಗಳನ್ನು ಬಾಧಿಸುತ್ತದೋ ಅಥವಾ ಶ್ರೀಪತಿತ್ವಾದಿಲಿಂಗಗಳಿಂದ ತಾನೇ ಬಾಧಿತವಾಗುತ್ತದೋ? ಎಂಬ ಸಂಶಯವು ಪರಿಹಾರವಾಗಬೇಕು. ಈ ಸಂಶಯ ಪರಿಹಾರವಾಗಬೇಕೆಂದರೆ ಪ್ರಸಿದ್ಧಿಗೆ ಬಾಧವನ್ನು ಹೇಳಿದರೆ ಶ್ರುತಿಗೆ ಮುಖ್ಯತ್ವದ ಹಾನಿಯಾಗುತ್ತದೋ ಇಲ್ಲವೋ? ಎಂಬ ಸಂಶಯವು ಪರಿಹಾರವಾಗಬೇಕು. ಈ ಸಂಶಯವು ಪರಿಹಾರವಾಗಬೇಕೆಂದರೆ ಪ್ರಾಣಶಬ್ದದ ಪ್ರವೃತ್ತಿನಿಮಿತ್ತವಾದ ಜೀವನಹೇತುತ್ವವು ಬ್ರಹ್ಮನಲ್ಲಿ ಇಲ್ಲವೋ ಅಥವಾ ಇದೆಯೋ? ಎಂಬ ಸಂಶಯವು ಪರಿಹಾರವಾಗಬೇಕು. ಈ ಸಂಶಯವು ಪರಿಹಾರವಾಗಬೇಕೆಂದರೆ ಜೀವನವು ಅನ್ವಯವ್ಯತಿರೇಕದಿಂದ ಮುಖ್ಯಪ್ರಾಣನನ್ನು ಅನುಸರಿಸಿದೆಯೋ ಅಥವಾ ಈಶ್ವರನನ್ನೋ? ಎಂಬ ಸಂಶಯವು ಪರಿಹಾರವಾಗಬೇಕು. ಇದರಂತೆ

'ಭರ್ತಾ ಸಂಭ್ರಿಯಮಾಣಃ' ಎಂಬ ಅನುವಾಕದಲ್ಲಿರುವ 'ತದ್ವೈ ತ್ವಂ ಪ್ರಾಣಃ' ಎಂಬ ವಾಕ್ಯದಿಂದ ಪ್ರತಿಪಾದ್ಯನಾದ ಪ್ರಾಣನು 'ಅದ್ಭ್ಯಃ ಸಂಭೂತಃ' ಎಂಬ ಮತ್ತೊಂದು ಅನುವಾಕದಲ್ಲಿರುವ 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂದು ಹೇಳಲ್ಪಟ್ಟವನಿಗಿಂತ ಬೇರೆಯವನೋ ಅಥವಾ ಒಬ್ಬನೋ? ಎಂಬ ಸಂಶಯವು ಪರಿಹಾರವಾಗ ಬೇಕು.

**प्रकाशः** – एवं सङ्गतिमुक्त्वा, भाष्योक्तप्रयोजनटीकां च समर्थ्य, विषयसंशयटीकां व्यनक्ति – **अत्रेति** ॥ ''तद्वै त्वं प्राणो अभवः महान् भोगः प्रजापतेः भुजः करिष्यमाणः यद्देवान् प्राणयो नव'' इति तैत्तरीये श्रुतः प्राणो विषय इति ध्येयम् । **मुख्येति** ॥ प्राणशब्दस्य वायुवृत्त्यादिसाधारणत्वेऽपि तस्यात्रासम्भवप्रकारस्य वक्ष्यमाणत्वात् 'मुख्यवायुः'' इत्युक्तम् ॥ **विपरीतमिति** ॥ लिङ्गानुसारेण श्रुतिर्बाध्येत्यर्थः ॥ **जीवनेति** ॥ ''यद्देवान् प्राणयो नव'' इति वाक्यशेषे तथोक्तेरिति भावः ॥ **जीवनमिति** ॥ 'जीवानां' इति शेषः । यदि जीवनं मुख्या-न्वयव्यतिरेकानुविधायि, तदा प्राणशब्दप्रवृत्तिनिमित्तं ब्रह्मणि नेति मुख्यत्वहानेर्न श्रुतिबाधः कार्य इति वायुरेवेति पूर्वपक्षे फलम् । यदा तु विपरीतं तदा ब्रह्मेति सिद्धान्ते फलम् । इयं च चिन्तापरम्परा 'प्राणस्तत्तु' इति सौत्र-प्रतिज्ञांशव्यावर्त्यप्रमेयाश्रिताभ्यधिकाशङ्कोपयुक्ता । एषा शङ्काऽनुव्याख्याने कण्ठोक्तेति तदुपयुक्तचिन्तैव प्रथमं विशदीकृता । हेत्वंशव्यावर्त्यप्रमाणाश्रिता-भ्यधिकाशङ्कोपयुक्तां चिन्तामाह – **तथेति** ॥ तत्रैवं द्रष्टव्यम् – प्राणो मुख्यवायुरुत ब्रह्मेति चिन्ता । तदर्थं ब्रह्मत्वसाधकं लिङ्गादिकं नास्त्युतास्तीति । तदर्थं ''भर्ता सन् भ्रियमाणः'' इत्युक्तचिन्तेति । यदा त्वन्यस्तदा ब्रह्मलिङ्गमत्र नास्तीति साधकाभावाद्वायुरेवेति पूर्वपक्षे फलम् । यदा त्वनन्यस्तदा ब्रह्मलिङ्गसत्त्वाद्ब्रह्मेति सिद्धान्ते फलमिति ध्येयम् ।

ವಿವರಣೆ - ಇಲ್ಲಿಯ ತನಕ ಸಂಗತಿಯನ್ನು ಮತ್ತು ಭಾಷ್ಯ, ಟೀಕೆಗಳಲ್ಲಿ ಹೇಳಿದ ಪ್ರಯೋಜನವನ್ನು ಸಮರ್ಥಿಸಿದ್ದಾಯಿತು. ಈಗ ವಿಷಯ, ಸಂಶಯಗಳನ್ನು ವ್ಯಾಖ್ಯಾನಿಸುವ ಟೀಕೆಯ ಅರ್ಥವನ್ನು ವಿವರಿಸುತ್ತಿದ್ದಾರೆ. 'ತದ್ವೈ ತ್ವಂ ಪ್ರಾಣೋಽಭವಃ ಮಹಾನ್‌ಭೋಗಃ ಪ್ರಜಾಪತೇಃ ಭುಜಃ ಕರಿಷ್ಯಮಾಣಃ ಯದ್ದೇವಾನ್ ಪ್ರಾಣಯೋ ನವ' (ಎಲೈ ಪ್ರಾಣನೇ ನೀನು ಬ್ರಹ್ಮನೇ ಮೊದಲಾದ ಜೀವರಿಗೆ ಆನಂದವನ್ನು ಕೊಡುವುದರಿಂದ ಮಹಾನಂದರೂಪನಾಗಿರುವಿ. ಮತ್ತು ಸಕಲಚೇತನರ ಒಂಭತ್ತು ಇಂದ್ರಿಯಗಳನ್ನು ಪ್ರೇರಣೆ ಮಾಡುವುದರಿಂದ ಪ್ರಾಣನಾಗಿರುವಿ) ಈ ತೈತ್ತಿರೀಯವಾಕ್ಯದಲ್ಲಿ ಕೇಳಿಸುತ್ತಿರುವ ಪ್ರಾಣನೇ ಈ ಅಧಿಕರಣಕ್ಕೆ ವಿಷಯನಾಗಿದ್ದಾನೆ. ಗ್ರಂಥಕಾರರು 'ವಾಯುಃ' ಎಂದಷ್ಟೇ

ಹೇಳಬಹುದಿತ್ತು. 'ಮುಖ್ಯವಾಯುಃ' ಎಂದು ಹೇಳಲು ಕಾರಣವಿದೆ. ಕೇವಲ ವಾಯುವಿನಲ್ಲಿ ಪ್ರಾಣ-ಶಬ್ದವು ಕೂಡುವುದಿಲ್ಲ; ಮುಖ್ಯವಾಯುವಿಲ್ಲಷ್ಟೇ ಕೂಡುತ್ತದೆಂದು ಮುಂದೆ ಹೇಳುತ್ತಾರೆ.

ಪೂರ್ವಪಕ್ಷದ ಫಲ - ಒಂದು ವೇಳೆ ಜೀವನವು ಅನ್ವಯವ್ಯತಿರೇಕದಿಂದ ಮುಖ್ಯವಾಯುವನ್ನು ಅನುಸರಿಸುವುದಾದರೆ ಪ್ರಾಣಶಬ್ದದ ಪ್ರವೃತ್ತಿನಿಮಿತ್ತವು ಬ್ರಹ್ಮನಲ್ಲಿ ಬರುವುದಿಲ್ಲ. ಬ್ರಹ್ಮಪರವೆಂದು ಹೇಳಿದರೆ ಶ್ರುತಿಗೆ ಮುಖ್ಯಾರ್ಥವನ್ನು ಬಿಟ್ಟಂತಾಗುತ್ತದೆ. ಆದ್ದರಿಂದ ಶ್ರುತಿಬಾಧವನ್ನು ಮಾಡಬಾರದು. ಆದ್ದರಿಂದ ವಾಯುವೇ 'ತದ್ವೈ ತ್ವಂ ಪ್ರಾಣಃ' ಎಂಬ ಪ್ರಾಣಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ.

ಸಿದ್ಧಾಂತದ ಫಲ - ಒಂದು ವೇಳೆ ಜೀವನವು ಅನ್ವಯವ್ಯತಿರೇಕದಿಂದ ಈಶ್ವರನನ್ನು ಅನುಸರಿಸಿದರೆ ಆವಾಗ ಪ್ರಾಣಶಬ್ದದ ಪ್ರವೃತ್ತಿನಿಮಿತ್ತವಾದ ಜೀವನಹೇತುತ್ವವು ಬ್ರಹ್ಮನಲ್ಲಿ ಸಂಭವಿಸುತ್ತದೆ. ಆವಾಗ ಶ್ರುತಿಯು ಬ್ರಹ್ಮಪರವೆಂದು ಹೇಳಿದರೂ ಶ್ರುತಿಗೆ ಮುಖ್ಯಾರ್ಥವನ್ನು ಬಿಟ್ಟಂತಾಗುವುದಿಲ್ಲ. ಶ್ರೀಪತಿತ್ವಾದಿ ಲಿಂಗಗಳಿಂದ ಪ್ರಾಣಶ್ರುತಿಯೇ ಬಾಧಿತವಾಗುತ್ತದೆ. ಆದ್ದರಿಂದ 'ತದ್ವೈ ತ್ವಂ ಪ್ರಾಣಃ' ಎಂಬಲ್ಲಿರುವ ಪ್ರಾಣಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನಾಗುತ್ತಾನೆ.

ಈ ಸಂಶಯಕೋಟಿಗಳು 'ಪ್ರಾಣಃ ತತ್ತು' ಎಂಬ ಸೂತ್ರದ ಪ್ರತಿಜ್ಞಾಂಶದಿಂದ ವ್ಯಾವರ್ತ್ಯವಾದ ಪ್ರಮೇಯಾಶ್ರಿತ ಪೂರ್ವಪಕ್ಷಕ್ಕೆ ಉಪಯುಕ್ತವಾಗಿವೆ. ಪ್ರಮೇಯಾಶ್ರಿತವಾದ ಶಂಕೆಯನ್ನು ಅನು-ವ್ಯಾಖ್ಯಾನದಲ್ಲಿ ಕಂಠತಃ ಹೇಳಿದ್ದರಿಂದ ಅದಕ್ಕೆ ಉಪಯುಕ್ತವಾದ ಚಿಂತೆಯನ್ನೇ ಮೊದಲು ತೋರಿಸಿದ್ದಾರೆ. ಸೂತ್ರದಲ್ಲಿರುವ 'ಅತ ಏವ' ಎಂಬ ಹೇತ್ವಂಶದಿಂದ ಪ್ರಮಾಣಾಶ್ರಿತಪೂರ್ವಪಕ್ಷವು ವ್ಯಾವೃತ್ತವಾಗಿದೆ. ಅದಕ್ಕೆ ಉಪಯುಕ್ತವಾದ ಚಿಂತೆಯನ್ನು 'ತಥಾ' ಎಂಬ ವಾಕ್ಯದಿಂದ ಗ್ರಂಥಕಾರರು ತೋರಿಸುತ್ತಿದ್ದಾರೆ.

ಪ್ರಮಾಣಾಶ್ರಿತಶಂಕೆಗೆ ಉಪಯುಕ್ತವಾದ ಚಿಂತಾಪರಂಪರೆ ಹೀಗಿದೆ -- ಪ್ರಾಣಶಬ್ದದಿಂದ ಮುಖ್ಯ-ವಾಯುವು ಪ್ರತಿಪಾದ್ಯನೋ ಅಥವಾ ಬ್ರಹ್ಮನೋ? ಅದಕ್ಕೋಸ್ಕರ ಬ್ರಹ್ಮತ್ವಸಾಧಕವಾದ ಲಿಂಗಾದಿಗಳು ಇಲ್ಲವೋ ಅಥವಾ ಇವೆಯೋ? ಅದಕ್ಕೋಸ್ಕರ 'ಭರ್ತಾ ಸಂಭ್ರಿಯಮಾಣಃ' ಎಂಬ ಅನುವಾಕದ 'ತದ್ವೈ ತ್ವಂ ಪ್ರಾಣಃ' ಎಂಬಲ್ಲಿರುವ ಪ್ರಾಣಶಬ್ದದಿಂದ ಪ್ರತಿಪಾದ್ಯನಾದವನು 'ಶ್ರೀಶ್ಚ ತೇ' ಎಂಬ ವಾಕ್ಯಪ್ರತಿಪಾದ್ಯ-ನಿಗಿಂತ ಭಿನ್ನನೋ ಅಥವಾ ಒಬ್ಬನೋ. ಒಂದು ವೇಳೆ ಬೇರೆಯವನಾದರೆ ಬ್ರಹ್ಮನ ಲಿಂಗವು ಇಲ್ಲದ ಕಾರಣ ವಾಯುವೇ ಪ್ರಾಣನಾಗುತ್ತಾನೆಂದು ಪೂರ್ವಪಕ್ಷದ ಫಲ. ಒಂದು ವೇಳೆ ಒಬ್ಬನೇ ಆದರೆ ಬ್ರಹ್ಮಲಿಂಗಗಳಿರುವುದರಿಂದ ಬ್ರಹ್ಮನೇ ಪ್ರಾಣನಾಗುತ್ತಾನೆಂದು ಸಿದ್ಧಾಂತದ ಫಲ. ಹೀಗೆ ಎರಡು ವಿಧ ಸಂಶಯಕೋಟಿಗಳನ್ನು ಸ್ಪಷ್ಟವಾಗಿ ಗಮನಿಸಬೇಕು.

ಮುಂದಿನ ಗ್ರಂಥದಲ್ಲಿರುವ ಪೂರ್ವಪಕ್ಷದ ಹಂತಗಳು.

೧. ಮುಖ್ಯವಾಯುವು ಪ್ರಾಣಶಬ್ದದಿಂದ ವಾಚ್ಯನಾಗುತ್ತಾನೆ.

೨. ಪ್ರಸಿದ್ಧಪ್ರಾಣಶ್ರುತಿಯಿಂದ ವಿಷ್ಣುಲಿಂಗಗಳಿಗೆ ಬಾಧ.

೩. ಪ್ರಾಣನು ವಾಚ್ಯನಾಗದಿದ್ದರೆ ಮುಖ್ಯಾರ್ಥವನ್ನು ಬಿಟ್ಟಂತಾಗುತ್ತದೆ.

೪. ಜೀವನ ಹೇತುತ್ವವೆಂಬ ಪ್ರಾಣಶಬ್ದದ ಪ್ರವೃತ್ತಿನಿಮಿತ್ತವು ಬ್ರಹ್ಮನಲ್ಲಿ ಬರುವುದಿಲ್ಲ.

೫. ಅದು ಅನ್ವಯವ್ಯತಿರೇಕದಿಂದ ಪ್ರಾಣನಲ್ಲಿ ಬರುತ್ತದೆ.

ಸಿದ್ಧಾಂತದ ಹಂತಗಳು --

೧. ಪ್ರಾಣಶಬ್ದದಿಂದ ಭಗವಂತನೇ ವಾಚ್ಯನಾಗಿದ್ದಾನೆ.

೨. ವಿಷ್ಣುಲಿಂಗಗಳಿಂದ ಪ್ರಸಿದ್ಧಪ್ರಾಣಶ್ರುತಿಯು ಬಾಧಿತವಾಗಿದೆ.

೩. ಪ್ರಾಣನು ವಾಚ್ಯನಾಗದಿದ್ದರೆ ಮುಖ್ಯಾರ್ಥವನ್ನು ಬಿಟ್ಟಂತಾಗುವುದಿಲ್ಲ.

೪. ಪ್ರಾಣಶಬ್ದದ ಪ್ರವೃತ್ತಿನಿಮಿತ್ತವು ಬ್ರಹ್ಮನಲ್ಲಿ ಬರುತ್ತದೆ.

೫. ಅನ್ವಯವ್ಯತಿರೇಕದಿಂದ ಬ್ರಹ್ಮನಲ್ಲಿ ಬರುತ್ತದೆ.

## ಪೂರ್ವಪಕ್ಷಮಾಡಲು ಸಾಧ್ಯವೇ?

**तात्पर्यचन्द्रिका –**

**नन्वत्र प्राणो न तावत् जडरूपो वायुरिति पूर्वः पक्षः, जडं प्रति "त्वं प्राणो अभवः" इत्याद्युक्त्ययोगात् । "ओषधे त्रायस्वैनम्" इत्यादेश्च स्वमतेऽभिमानि-देवतापरत्वात्, मीमांसकमते चान्यपरत्वेन अचेतनसम्बोधनपरत्वाभावात् । नापि मुख्यप्राण इति, जीवनस्य तदन्वयव्यतिरेकानुविधानादर्शनेन अधिकाशङ्काऽ-योगात् ।**

**ननु आकाशाधिकरणपूर्वपक्षे जडस्याप्याकाशस्य आनन्दमयत्वादिकमिव, अत्रापि जडस्याप्यभिमानिद्वारा सम्बोधनादि युक्तम् । नच मुख्ये मुख्यत्वात् प्राणशब्दस्य कथं जडपरत्वेन पूर्वपक्ष इति युक्तम्, लोकप्रसिद्ध्या पूर्वपक्षयतो ब्रह्मणीव मुख्येऽपि मुख्यत्वज्ञानाभावादिति चेन्न, "मुख्यवायावेव मुख्यत्वात्" इत्यादिपूर्वपक्षटीकया "प्रेरकोऽस्यापि यद्धरिः" इत्याद्यनुव्याख्यानेन च विरोधात् । 'त्वमभवः करिष्यमाणः प्राणयः' इत्यादीनां बहूनाममुख्यार्थत्वापाताच्चेति चेत्,**

ಅನುವಾದ - ಪೂರ್ವಪಕ್ಷವನ್ನು ಹೇಗೆ ಮಾಡುತ್ತೀರಿ? ಜಡರೂಪವಾದ ವಾಯುವು ಪ್ರಾಣಶಬ್ದದಿಂದ ವಾಚ್ಯವೆಂದು ಪೂರ್ವಪಕ್ಷ ಮಾಡಲಾಗದು. ಏಕೆಂದರೆ ಜಡವಾಯುವನ್ನು ಕುರಿತು 'ತ್ವಂ ಪ್ರಾಣೋ ಅಭವಃ' (ನೀನು ಪ್ರಾಣನಾಗಿದ್ದಿ) ಇತ್ಯಾದಿಯಾಗಿ ಸಂಬೋಧನೆಯನ್ನು

ಮಾಡಲಾಗದು. 'ಓಷಧೇ ತ್ರಾಯಸ್ವೈನಮ್' (ಎಲೈ ಔಷಧವೇ! ಇವನನ್ನು ರಕ್ಷಿಸು) ಇತ್ಯಾದಿ-ಯಾಗಿ ಜಡಪದಾರ್ಥವನ್ನು ಸಂಬೋಧಿಸಿದ್ದು ಕಂಡಿದೆಯಲ್ಲ ಎಂದು ಪ್ರಶ್ನಿಸಬಾರದು. ಓಷಧಶಬ್ದಕ್ಕೆ ಸಿದ್ಧಾಂತದಲ್ಲಿ ಅಭಿಮಾನಿದೇವತೆಯೆಂದರ್ಥ. ಮೀಮಾಂಸಕಮತದಲ್ಲಿಯೂ ಕೂಡ ಅರ್ಥವಾದ-ಪರವೆಂದು ಹೇಳುವುದರಿಂದ ಸಂಬೋಧನೆ ಎಂದು ಹೇಳಬೇಕಾಗಿಲ್ಲ.

ಮುಖ್ಯವಾಯುವು ಪ್ರಾಣನೆಂದೂ ಸಹ ಪೂರ್ವಪಕ್ಷ ಮಾಡಲಾಗದು. ಏಕೆಂದರೆ ಜೀವನ-ಹೇತುತ್ವ ಎಂಬ ಪ್ರಾಣಶಬ್ದದ ಪ್ರವೃತ್ತಿನಿಮಿತ್ತವು ಅನ್ವಯವ್ಯತಿರೇಕದಿಂದ ಮುಖ್ಯಪ್ರಾಣನಲ್ಲಿ ಸಿದ್ಧ ವಾಗಿಲ್ಲ. ಹೇತ್ವಸಿದ್ಧಿ ದೋಷ ಬರುವುದರಿಂದ ಅಧಿಕಾಶಂಕೆಯು ಮುಖ್ಯಪ್ರಾಣನಲ್ಲಿ ಕೂಡುವುದಿಲ್ಲ.

ಪ್ರಶ್ನೆ - ಜಡವಾಯುವೆಂದೇ ಪೂರ್ವಪಕ್ಷ ಮಾಡುತ್ತೇವೆ. ಆಕಾಶಾಧಿಕರಣ ಪೂರ್ವಪಕ್ಷದಲ್ಲಿ ಜಡವಾದ ಆಕಾಶದಲ್ಲಿ ಅಂತರ್ಯಾಮಿವಿವಕ್ಷೆಯಿಂದ ಆನಂದಮಯತ್ವವನ್ನು ಹೇಳಿದಂತೆ ಇಲ್ಲಿಯೂ ಸಹ ಜಡವಾದ ವಾಯುವಿನಲ್ಲಿ ಅಭಿಮಾನಿದೇವತೆಯ ವಿವಕ್ಷೆಯಿಂದ ಸಂಬೋಧನಾದಿಗಳನ್ನು ಕೂಡಿಸಬಹುದು. ಮುಖ್ಯಪ್ರಾಣನಲ್ಲಿ ಪ್ರಾಣಶಬ್ದವು ಮುಖ್ಯವಾಗಿರುವಾಗ ಜಡಪರವೆಂಬ ಪೂರ್ವ-ಪಕ್ಷವು ತಪ್ಪಲ್ಲವೇ? ಎಂದು ಶಂಕಿಸಬಾರದು. ಲೋಕಪ್ರಸಿದ್ಧಿಯಿಂದಷ್ಟೇ ಇಲ್ಲಿ ಪೂರ್ವಪಕ್ಷ ಮಾಡಲಾಗಿದೆ. ಯಾವರೀತಿಯಾಗಿ ಬ್ರಹ್ಮನಲ್ಲಿ ಲೋಕಪ್ರಸಿದ್ಧಿ ಇಲ್ಲವೋ ಅದರಂತೆ ಮುಖ್ಯಪ್ರಾಣ-ನಲ್ಲಿಯೂ ಸಹ ಪ್ರಾಣಶಬ್ದದ ಪ್ರಸಿದ್ಧಿ ಇಲ್ಲ. ಆದ್ದರಿಂದ ಬ್ರಹ್ಮನಲ್ಲಿ ಪ್ರಾಣಶಬ್ದವು ಮುಖ್ಯವಾಗಿದೆ ಎಂಬ ಜ್ಞಾನವು ಹೇಗೆ ಇಲ್ಲವೋ ಅದರಂತೆ ಮುಖ್ಯಪ್ರಾಣನಲ್ಲೂ ಇಲ್ಲ. ಆದ್ದರಿಂದ ಜಡವಾಯುವೇ ಪ್ರಾಣನೆಂದು ಪೂರ್ವಪಕ್ಷ ಮಾಡಬಹುದಲ್ಲವೇ?

ಉತ್ತರ - ಹಾಗಾದಲ್ಲಿ ಟೀಕೆ ಮತ್ತು ಅನುವ್ಯಾಖ್ಯಾನಗಳಿಗೆ ವಿರೋಧ ಬರುತ್ತದೆ. ''ಮುಖ್ಯ-ವಾಯಾವೇವ ಮುಖ್ಯತ್ವಾತ್'' ಪ್ರಾಣಶಬ್ದವು ಮುಖ್ಯವಾಯುವಿನಲ್ಲೇ ಮುಖ್ಯವಾಗಿದೆ ಎಂದು ಪೂರ್ವಪಕ್ಷ ಟೀಕೆಯು ಹೇಳುತ್ತಿದೆ. ಮತ್ತು 'ಪ್ರೇರಕೋಽಸ್ಯಾಪಿ ಯದ್ಧರಿಃ' (ಮುಖ್ಯಪ್ರಾಣನಿಗೂ ಯಾವ ಹರಿಯು ಪ್ರೇರಕನಾಗಿದ್ದಾನೋ) ಎಂದು ಅನುವ್ಯಾಖ್ಯಾನವು ಹೇಳುತ್ತಿದೆ. ಹೀಗಿರುವಾಗ ನೀವು ಜಡವಾಯು ಎಂಬ ಪೂರ್ವಪಕ್ಷವನ್ನು ಹೇಗೆ ಮಾಡುತ್ತೀರಿ? ಅಷ್ಟೇ ಅಲ್ಲದೆ 'ತ್ವಂ ಅಭವಃ' 'ಕರಿಷ್ಯಮಾಣಃ' 'ಪ್ರಾಣಯಃ' ಈ ಎಲ್ಲ ಶಬ್ದಗಳು ಚೇತನವನ್ನು ಹೇಳುತ್ತಿವೆ. ಜಡವಾಯು ಎಂದು ಪೂರ್ವಪಕ್ಷ ಮಾಡಿದರೆ ಇಂತಹ ಅನೇಕ ಶಬ್ದಗಳಿಗೆ ಅಮುಖ್ಯಾರ್ಥವನ್ನು ಮಾಡಬೇಕಾಗುತ್ತದೆ.

ಆದ್ದರಿಂದ ಜಡವಾಯುವೆಂದು ಪೂರ್ವಪಕ್ಷ ಮಾಡುವುದು ಕಷ್ಟ. ಚೇತನವಾಯುವನ್ನು ಪೂರ್ವಪಕ್ಷ ಮಾಡಿದರೆ ಅಸಿದ್ಧಿದೋಷ ತಪ್ಪಿದ್ದಲ್ಲ. ಹೀಗಿರುವಾಗ ಪೂರ್ವಪಕ್ಷರಚನೆ ಹೇಗೆ ಸಾಧ್ಯ ?

ಕಠಿಣಪದಾರ್ಥ -

ಜಡಂ ಪ್ರತಿ = ಜಡವಾದ ವಾಯುವನ್ನು ಕುರಿತು, ತದನ್ವಯವ್ಯತಿರೇಕ ಅನುವಿಧಾನ
ಅದರ್ಶನೇನ = ಮುಖ್ಯವಾಯುವಿನಲ್ಲಿ ಜೀವನಹೇತುತ್ವದ ಅನ್ವಯವ್ಯತಿರೇಕ ಇರುವುದು
ಕಂಡಿಲ್ಲವಾದ ಕಾರಣ, ಅಸ್ಯಾಪಿ = ಮುಖ್ಯಪ್ರಾಣನಿಗೂ

**प्रकाशः** – अत्रैवं पूर्वपक्षक्रमः – प्राणशब्दस्य वायावेव प्रसिद्धेः वायुरेव प्राणो न विष्णुरिति । यद्यपि निरवकाशलिङ्गैर्लोकप्रसिद्धिबाध इह पूर्वत्र च अविशिष्टः, विषयवाक्यभेदेन च नाधिकरणभेदः। तथाऽपि –

**.........अध्यात्ममन्वयव्यतिरेकतः ।**
**प्राणादिहेतुतादृष्टेरतिदेशो हि तादृशः ॥**

इत्यनुव्याख्यानोक्तरीत्या, "प्राणशब्दप्रवृत्तिनिमित्तजीवनकारणत्वस्यान्वयव्यतिरेकाभ्यां वायावेव दर्शनात्" इति टीकोक्ताभ्यधिकाशङ्कया पूर्वपक्षोत्थानसम्भवो वाच्यः । स चायुक्तः, प्राणो जडवायुरिति वा मुख्यवायुदेवतेति वा पूर्वपक्षयितव्यत्वात् । तत्राद्यस्त्वयुक्तः, अन्त्ये हेतोरसिद्धिरिति भावेन "प्राणशब्दस्यान्यत्र वृत्तौ" इत्यादिटीकां विवृण्वन्नाक्षिपति – **नन्विति ॥ जडं प्रतीति ॥** चेतनं प्रतीव सम्बोधनादिरूपोक्त्ययोगादित्यर्थः । एतेन टीकायां मुख्यत्वोक्तिरुपलक्षणेति सूचितम् ।

ननु "ओषधे त्रायस्व" इत्यादौ जडस्यापि सम्बोधनं दृश्यत इत्यत आह – **ओषध इति ॥ अन्यपरत्वेनेति ॥** "अभिधानेऽर्थवाद" इति मन्त्राधिकरणगुणसूत्रे यत्राचेतना ओषधिग्रावादयस्त्राणश्रवणार्थमामन्त्र्यन्ते, किं पुनर्विद्वांसो ब्राह्मणा इति कर्मसमुत्साहार्थमित्युक्तेरुत्साहपरत्वेनेत्यर्थः । एतेन "न ह्यचेतनं प्रति त्वमेवमभव इति बुद्धिमतोच्यते" इति सुधावाक्यं विवृतम् – **तदन्वयेति ॥** वायुविकारान्वयव्यतिरेकानुविधायित्वस्यैव जीवनादेः प्रतीयमानत्वेन मुख्यान्वयव्यतिरेकानुविधानादर्शनादित्यर्थः ।

मन्दानां जडपरत्वेनापि पूर्वपक्षसम्भवभ्रममाशङ्क्य टीकादिविरोधेन निरस्यति – **नन्विति ॥ आनन्दमयत्वादिकमिति ॥** पूर्वत्र स्पष्टमेतत् । 'अस्यापि' मुख्यप्राणस्यापीत्यर्थः । टीकादेरपि किं मूलम्? इत्यत आह – **त्वमभव इति ॥**

ವಿವರಣೆ - ಈ ಅಧಿಕರಣದ ಪೂರ್ವಪಕ್ಷದ ಕ್ರಮ ಹೀಗಿದೆ - ವಾಯುವಿನಲ್ಲಿ ಪ್ರಾಣಪದವು ಪ್ರಸಿದ್ಧವಾದ್ದರಿಂದ ವಾಯುವೇ ಪ್ರಾಣನಾಗುತ್ತಾನೆ ವಿಷ್ಣುವಲ್ಲ. ವಸ್ತುತಃ 'ನಿರವಕಾಶಲಿಂಗದಿಂದ ಲೋಕಪ್ರಸಿದ್ಧಿಬಾಧ' ಎಂಬುದೇ ಈ ಅಧಿಕರಣ ಸಿದ್ಧಾಂತನ್ಯಾಯ. ಹಿಂದಿನ ಅಧಿಕರಣದ ನ್ಯಾಯವೂ ಇದೇ ಆಗಿದೆ. ಹಾಗಾಗಿ ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಲು ಕಾರಣವಿಲ್ಲ. ಕೇವಲ ವಿಷಯವಾಕ್ಯ

ಭೇದದಿಂದ ಅಧಿಕರಣಭೇದವೆಂಬುದು ಮೂರ್ಖತನ. ಆದರೂ ಕೂಡ ಅಭ್ಯಧಿಕಾಶಂಕೆಯಿಂದ ಪೂರ್ವಪಕ್ಷವು ಹೊರಟಾಗ ಪ್ರತ್ಯೇಕ ಅಧಿಕರಣದ ಅವಶ್ಯಕತೆ ಇದೆ. ಇದನ್ನೇ ಅನುವ್ಯಾಖ್ಯಾನದಲ್ಲಿ

'...................... ಅಧ್ಯಾತ್ಮಮನ್ವಯವ್ಯತಿರೇಕತಃ ।
ಪ್ರಾಣಾದಿಹೇತುತಾದೃಷ್ಟೇರತಿದೇಶೋ ಹಿ ತಾದೃಶಃ ॥'

ಜೀವನಹೇತುತ್ವ ಎಂಬ ಪ್ರಾಣಶಬ್ದದ ಪ್ರವೃತ್ತಿನಿಮಿತ್ತವು ಅನ್ವಯವ್ಯತಿರೇಕದಿಂದ ಮುಖ್ಯವಾಯು-ವಿನಲ್ಲಿ ಕಾಣಿಸುತ್ತಿದೆ. ಆದರೆ ಹಿಂದಿನ ಅಧಿಕರಣದ ಸಿದ್ಧಾಂತವೇ ಈ ಅಧಿಕಾಶಂಕೆಯನ್ನು ನಿರಾಕರಿಸುತ್ತದೆ. ಮತ್ತು 'ಪ್ರಾಣಶಬ್ದಪ್ರವೃತ್ತಿನಿಮಿತ್ತಸ್ಯ ಜೀವನಕಾರಣತ್ವಸ್ಯಾನ್ವಯವ್ಯತಿರೇಕಾಭ್ಯಾಂ ವಾಯಾವೇವ ದರ್ಶನಾತ್' (ಜೀವನಕಾರಣತ್ವವೆಂಬ ಪ್ರಾಣಶಬ್ದದ ಪ್ರವೃತ್ತಿನಿಮಿತ್ತವು ಅನ್ವಯವ್ಯತಿರೇಕದಿಂದ ಮುಖ್ಯ-ಪ್ರಾಣನಲ್ಲಿಯೇ ಕಾಣಿಸುತ್ತಿದೆ ಎಂಬ ಟೀಕೆಯಲ್ಲಿಯೂ ಅಧಿಕಾಶಂಕೆಯಿಂದ ಪೂರ್ವಪಕ್ಷವನ್ನು ಮಾಡಲಾಗಿದೆ. ಇದನ್ನು ಪರಿಹರಿಸಲು ಪ್ರಾಣಾಧಿಕರಣವು ಸಾರ್ಥಕವಾಗಿದೆ.

ಇದು ಹೇಗೆ ಸರಿ? ಏಕೆಂದರೆ, ಜಡವಾಯುವನ್ನಾಗಲೀ ಅಥವಾ ಮುಖ್ಯವಾಯುವನ್ನಾಗಲೀ ಪ್ರಾಣನೆಂದು ಪೂರ್ವಪಕ್ಷ ಮಾಡಬೇಕು? ಜಡವಾಯುವನ್ನು ಪ್ರಾಣನೆಂಬುವುದು ತಪ್ಪು. ಮುಖ್ಯ-ವಾಯುವನ್ನು ಪ್ರಾಣನೆಂದರೆ ಹೇತ್ವಸಿದ್ಧಿ ಬರುತ್ತದೆ ಎಂಬ ಅಭಿಪ್ರಾಯದಿಂದ 'ಪ್ರಾಣಶಬ್ದಸ್ಯ ಅನ್ಯತ್ರ ವೃತ್ತಾವಪಿ' (ಪ್ರಾಣಶಬ್ದವು ಜಡವಾಯುವಿನಲ್ಲಿ ಇದ್ದರೂ ಕೂಡ) ಇತ್ಯಾದಿ ಟೀಕೆಯನ್ನು ವಿವರಿಸುತ್ತಾ ಆಕ್ಷೇಪ ಮಾಡುತ್ತಿದ್ದಾರೆ.

'ಓಷಧೇ ತ್ರಾಯಸ್ವ' ಇತ್ಯಾದಿ ಸ್ಥಳದಲ್ಲಿ ಜಡದಲ್ಲಿಯೂ ಸಂಬೋಧನೆ ಕಾಣಿಸುತ್ತದಲ್ಲ? ಎಂಬ ಪ್ರಶ್ನೆಗೆ 'ಓಷಧೇ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅಂದರೆ ಓಷಧಿಯಲ್ಲಿರುವ ಅಭಿಮಾನಿದೇವತೆಗಳನ್ನು ಉದ್ದೇಶಿಸಿ ಸಂಬೋಧನೆ ಮಾಡಿದ್ದಾರೆಂದು ನಮ್ಮ ಸಿದ್ಧಾಂತ. ಮೀಮಾಂಸಕರೂ ಕೂಡ ಜಡದಲ್ಲಿ ಸಂಬೋಧನೆ ಎಂದು ಒಪ್ಪುವುದಿಲ್ಲ. 'ಅಭಿಧಾನೇ ಅರ್ಥವಾದಃ' ಎಂಬ ಮಂತ್ರಾಧಿ ಕರಣದ ಗುಣಸೂತ್ರದಲ್ಲಿ ಇದರ ಬಗ್ಗೆ ಹೇಳಿದ್ದಾರೆ. 'ಔಷಧಿ, ಕಲ್ಲು ಮೊದಲಾದ ಅಚೇತನಗಳನ್ನು ಕುರಿತು ರಕ್ಷಣಾಮಂತ್ರದಲ್ಲಿ ಆಮಂತ್ರಿಸಲಾಗಿದೆ. ಜಡವಾದ ಪದಾರ್ಥಗಳನ್ನೇ ಆಮಂತ್ರಿಸಿದ ಮೇಲೆ ವಿದ್ವಾಂಸರಾದ ಬ್ರಾಹ್ಮಣರ ಆಮಂತ್ರಣವನ್ನು ಮಾಡಲಾಗಿದೆ ಎಂದು ಪುನಃ ಹೇಳಬೇಕೇನು? ಅಂದರೆ ವಿದ್ವಾಂಸರು ಅವಶ್ಯವಾಗಿ ಬರಲೇಬೇಕು ಎಂದರ್ಥ. ಈ ಅರ್ಥವಾದದ ವಿವಕ್ಷೆಯಿಂದ ಜಡಪದಾರ್ಥ-ಗಳಲ್ಲಿ ಸಂಬೋಧನಾದಿಗಳನ್ನು ಮಾಡಲಾಗಿದೆ. ಇದರಿಂದ ವಿದ್ವಾಂಸರ ಆಹ್ವಾನದಲ್ಲಿ ಉತ್ಸಾಹವನ್ನು ತೋರಿಸಿದಂತಾಗುತ್ತದೆ. ಇದರಿಂದ 'ನ ಹ್ಯಚೇತನಂ ಪ್ರತಿ ತ್ವಮೇವಮಭವಃ ಇತಿ ಬುದ್ಧಿಮತೋಚ್ಯತೇ' (ಅಚೇತನವನ್ನು ಕುರಿತು ನೀನು ಹೀಗಿದ್ದಿ ಇತ್ಯಾದಿರೀತಿಯಲ್ಲಿ ಯಾವ ಬುದ್ಧಿವಂತನೂ ಮಾತನಾಡು-ವುದಿಲ್ಲ) ಎಂಬ ಸುಧಾವಾಕ್ಯವನ್ನು ವಿವರಿಸಿದಂತಾಯಿತು.

ಮುಖ್ಯವಾಯುವಿನಲ್ಲಿ ಅನ್ವಯವ್ಯತಿರೇಕವು ಕಾಣಿಸುತ್ತಿಲ್ಲ. ಹೊರತಾಗಿ ಜಡವಾದ ವಾಯು-ವಿಕಾರದಲ್ಲಿಯೇ ಜೀವನಹೇತುತ್ವವೆಂಬ ಅನ್ವಯವ್ಯತಿರೇಕವು ಕಾಣಿಸುತ್ತಿದೆ.

ಪ್ರಾಣಾಧಿಕರಣ-(೧।೧।೯)

ಪ್ರಾಣಶಬ್ದದಿಂದ ಜಡವಾಯುವೇ ಪ್ರತಿಪಾದ್ಯವಾಗುತ್ತದೆಂದು ಮಂದಾಧಿಕಾರಿಗಳಿಗೆ ಭ್ರಾಂತಿ ಬರುತ್ತದೆ. ಅವರ ವಿವಕ್ಷೆಯನ್ನು ಶಂಕೆ ಮಾಡಿ ಟೀಕಾವಿರೋಧ ಬರುತ್ತದೆಂದು 'ನನು' ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ. ಆಕಾಶದಲ್ಲಿ ಅನಂದಮಯತ್ವವನ್ನು ಹಿಂದಿನ ಅಧಿಕರಣದಲ್ಲಿ ಹೇಳಿದ್ದಾರೆ. ಆ ವಿಚಾರವು ಅಲ್ಲಿಯೇ ಸ್ಪಷ್ಟವಾದ್ದರಿಂದ ಇಲ್ಲಿ ವಿವರಿಸಿಲ್ಲ. ಮುಖ್ಯವಾಯುವಿನಲ್ಲಿ ಪ್ರಾಣಶಬ್ದವು ಮುಖ್ಯವಾಗಿದೆಯೆಂದು ಟೀಕೆ ಮತ್ತು ಅನುವ್ಯಾಖ್ಯಾನಗಳಲ್ಲಿ ಹೇಳಿದ್ದು ಸತ್ಯ. ಆದರೆ ಅನುವ್ಯಾಖ್ಯಾನ ಮತ್ತು ಟೀಕೆಯ ಈ ಮಾತಿಗೆ ಏನು ಆಧಾರ? ಎಂಬ ಪ್ರಶ್ನೆಗೆ ಶ್ರುತಿಯನ್ನು 'ತ್ವಮಭವಃ' ಎಂಬುದಾಗಿ ಉಲ್ಲೇಖಿಸುತ್ತಿದ್ದಾರೆ.

**गुरुराजीयम्** – ननु जडं प्रत्यपि 'त्वमभवः' इत्यादि प्रयुज्यते । 'ओषधे त्रायस्वैनम्' इत्यादौ तथा दर्शनात्, इत्यत आह – **ओषध इति ॥ मीमांसकमते चान्यपरत्वेनेति ॥** अर्थवादे तथा शास्त्राधिकरणे 'अचेतनेऽर्थबन्धनात्' इत्यस्मिन् सूत्रे 'ओषधे त्रायस्व' 'शृणोत ग्रावाणः' इति च सम्बोधनं कार्यनियोगाभिमुख्यकरणार्थम् । न चाचेतनस्याभिमुख्यं सम्भवति ।

नच पशुत्राणे प्रातरनुवाकश्रवणे वाऽचेतनप्रेरणप्रवृत्तिरुपपद्यत इत्यानर्थक्यमर्थविवक्षायाम् । अतोऽदृष्टपरत्वेनाचेतनसम्बोधनपरत्वाभावादिति भावः । अथवा स्तुतिपरत्वेनाचेतनसम्बोधनपरत्वाभावादिति भावः । तथाचोक्तं वार्तिके एवम् 'ओषधे त्रायस्व' इत्याद्यचेतनसम्बोधनानि स्तुतिपरत्वेन योज्यानि । यस्मिंश्चयन ओषधिरपि त्रायेत, तत्र चयनकर्ता त्रायत इति किमु वाच्यम् । तथा ग्रावाणोपि प्रातरनुवाकं शृण्वन्ति किमुत विद्वांसो ब्राह्मणा इत्यामन्त्रणाभिप्रायः ।

यद्वा 'अभिधानेऽर्थवादे' इति मन्त्राधिकरणगुणसूत्रोक्तरीत्या 'ओषधे त्रायस्वैनम्' इत्यादेश्चैतन्यारोपेण क्रतुसाधनीभूतोपकरणविहितस्तुतिपरत्वेन इत्यर्थः ।

अस्तु जडवायुरेव प्राण इति पूर्वपक्षः । नचैवं 'त्वमभवः' इत्याद्ययोग इति वाच्यम् । अभिमानिद्वारोपपत्तेरित्याशङ्कते – **नन्विति ॥** ननु टीकानुव्याख्यानयोरन्यथापि योजयितुं शक्यत्वान्न तद्विरोध इत्यत आह – **त्वमभव इति ॥**

## ಸಾರ

ಈ ಅಧಿಕರಣದಲ್ಲಿ ಸಿದ್ಧಾಂತಸ್ಥಾಪನೆಯಾಗಬೇಕೆಂದರೆ ಮೊದಲು ಪೂರ್ವಪಕ್ಷ ಮಾಡಬೇಕು? ಆದರೆ ಪೂರ್ವಪಕ್ಷ ಮಾಡುವುದೇ ಕಠಿಣವಾಗಿದೆ. ಜಡವಾಯುವನ್ನಾಗಲೀ ಚೇತನವಾಯುದೇವತೆಯನ್ನಾಗಲೀ ಪ್ರಾಣನೆಂದು ಪೂರ್ವಪಕ್ಷ ಮಾಡಬೇಕು. ಆದರೆ ಜಡವಾಯುವಿನಲ್ಲಿ ಸಂಬೋಧನೆ ಮೊದಲಾದವುಗಳು ಕೂಡುವುದಿಲ್ಲ. ಮುಖ್ಯವಾಯುವಿನಲ್ಲಿ ಅನ್ವಯವ್ಯತಿರೇಕದಿಂದ ಜೀವನಹೇತುತ್ವವಿರುವುದು ಯಾರಿಗೂ ಸಿದ್ಧವಾಗಿಲ್ಲ.

ಜಡವಾಯುವಿನಲ್ಲಿ ಅಭಿಮಾನಿವಿವಕ್ಷೆಯಿಂದ ಸಂಬೋಧನೆಯನ್ನೇನೋ ಕೂಡಿಸಬಹುದು. ಆದರೆ ಅನುವ್ಯಾಖ್ಯಾನ ಮತ್ತು ಟೀಕೆಗಳಲ್ಲಿ ಮುಖ್ಯವಾಯುವನ್ನು ಪೂರ್ವಪಕ್ಷ ಮಾಡಿದ್ದಾರೆ. ಹಾಗಾಗಿ ಅವುಗಳ ವಿರೋಧ ಬರುತ್ತದೆ. ಮತ್ತು ಅನೇಕ ಶ್ರುತಿಗಳಿಗೆ ಅಮುಖ್ಯಾರ್ಥಮಾಡಬೇಕಾದ ಪ್ರಸಂಗವಿದೆ. ಹೀಗೆ ಜಡವಾಯುವಂತೂ ಪ್ರಾಣ ಎನಿಸಲು ಸಾಧ್ಯವಿಲ್ಲ. ಮುಖ್ಯವಾಯುವನ್ನು ಪ್ರಾಣ ಎನ್ನೋಣವೆಂದರೆ ಹೇತ್ವಸಿದ್ಧಿ ತಪ್ಪಿದ್ದಲ್ಲ. ಹೀಗಿರುವಾಗ ಪೂರ್ವಪಕ್ಷವನ್ನು ಹೇಗೆ ರಚಿಸೋಣ?

### ವಾಕ್ಯಪ್ರಮಾಣದಿಂದ ಮುಖ್ಯಪ್ರಾಣನು ಪೂರ್ವಪಕ್ಷವಿಷಯ.
### ಅಂತಿಮಪ್ರಾಣಾಧಿಕರಣದಿಂದ ಪುನರುಕ್ತಿಪರಿಹಾರ

**तात्पर्यचन्द्रिका –**

उच्यते – प्रत्यक्षेण जीवनस्य मुख्यप्राणान्वयव्यतिरेकानुविधानाज्ञानेऽपि ''तत्प्राणे प्रपन्न उदतिष्ठत्'' ''तत्प्राण उत्क्रान्तेऽपद्यत'' इत्यादिवाक्यात् तज्ज्ञानम् । नच ''प्राणस्तथाऽनुगमात्'' इति वक्ष्यमाणन्यायेन ''तत्प्राणे'' इत्यत्र प्राणो विष्णुरिति युक्तम्, अत्रत्यसिद्धान्तन्यायेन प्राणशब्दप्रवृत्तिनिमित्तं जीवनादिहेतुत्वं विष्णोरङ्गीकृत्य निरवकाशान्यलिङ्गेन तत्र पूर्वपक्षोदयेन तद्विचार-स्यैतत्सिद्धान्तोत्तरभावितया एतत्पूर्वपक्षदशायां तत्रत्यसिद्धान्तासिद्धेः । यथा – ''आकाशोऽर्थान्तर'' इत्यस्य ''आकाशस्तल्लिङ्गात्'' इत्येतत्सिद्धान्तानन्तरभावि-तया ''आकाशस्तल्लिङ्गात्'' इत्येतत्पूर्वपक्षदशाया ''आकाशोऽर्थान्तर'' इत्येतत् सिद्धान्तासिद्धिः, तद्वत् । एतेन ''प्राणस्तथा'' इत्यनेन अस्य गतार्थत्वशङ्काऽपि निरस्ता । एतदभावे ब्रह्मणो जीवनहेतुत्वाभावेन तत्र प्राणशब्दस्य मुख्यत्वा-सिद्धेः । अत एव टीकायां अन्वयव्यतिरेकयोः ''यत्प्राप्तिर्यत्परित्यागः'' इति स्मृतिरेवोक्ता ।

ಅನುವಾದ - ಹೀಗೆ ಉತ್ತರಿಸುತ್ತೇವೆ -- ಜೀವನಹೇತುತ್ವವು ಮುಖ್ಯಪ್ರಾಣನಲ್ಲಿ ಅನ್ವಯ ವ್ಯತಿರೇಕದಿಂದ ಇದೆ ಎಂಬುದು ಪ್ರತ್ಯಕ್ಷದಿಂದ ಸಿದ್ಧವಾಗದಿದ್ದರೂ ಶ್ರುತಿಯಿಂದ ಸಿದ್ಧವಾಗಿದೆ. 'ತತ್ಪ್ರಾಣೇ ಉತ್ಕ್ರಾಂತೇ' ಅಪದ್ಯತೇ (ಬ್ರಹ್ಮದೇವರ ಶರೀರವನ್ನು ಮುಖ್ಯಪ್ರಾಣದೇವರು ಪ್ರವೇಶಿಸಿದಾಗ ಆ ಶರೀರವು ಎಚ್ಚರವಾಯಿತು, ಮುಖ್ಯಪ್ರಾಣದೇವರು ಹೊರಟಾಗ ಮರಣಹೊಂದಿತು) ಎಂಬ ಶ್ರುತಿಯಿಂದ ಜೀವನಹೇತುತ್ವದ ಅನ್ವಯವ್ಯತಿರೇಕವು ಮುಖ್ಯಪ್ರಾಣನಲ್ಲಿ ಇದೆಯೆಂದು ಸ್ಪಷ್ಟವಾಗಿ ತಿಳಿಯುತ್ತಿದೆ. ಆದ್ದರಿಂದ ಪೂರ್ವಪಕ್ಷ ಮಾಡಲು ಯಾವುದೇ ಬಾಧಕವಿಲ್ಲ.

ಪ್ರಶ್ನೆ - 'ಪ್ರಾಣಸ್ತಥಾನುಗಮಾತ್' ಎಂಬ ಅಂತಿಮಪ್ರಾಣಾಧಿಕರಣದ ನ್ಯಾಯದಂತೆ 'ತತ್ಪ್ರಾಣೇ' ಎಂಬ ಶ್ರುತಿಯು ವಿಷ್ಣುಪರವೆಂದು ನಿರ್ಣಯವಾಗಿದೆ. ವಿಷ್ಣುಪರವಾದ ಶ್ರುತಿಯಿಂದ ಮುಖ್ಯಪ್ರಾಣನಲ್ಲಿ ಅನ್ವಯವ್ಯತಿರೇಕವನ್ನು ಹೇಗೆ ಸಾಧಿಸುತ್ತೀರಿ?

ಉತ್ತರ - ಅಂತಿಮಪ್ರಾಣಾಧಿಕರಣದ ಸಿದ್ಧಾಂತವನ್ನು ಇಲ್ಲಿ ಇಟ್ಟುಕೊಳ್ಳಬಾರದು. ಏಕೆಂದರೆ, ಈ ಪ್ರಾಣಾಧಿಕರಣದ ಸಿದ್ಧಾಂತನ್ಯಾಯವನ್ನು ಅವಲಂಬಿಸಿ ಅಂತಿಮಪ್ರಾಣಾಧಿಕರಣವು ಹೊರಟಿದೆ. ಅಂದರೆ ಪ್ರಾಣಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಜೀವನಾದಿ ಹೇತುತ್ವವನ್ನು ವಿಷ್ಣುವಿನಲ್ಲಿ ಅಂಗೀಕರಿಸಿ ನಿರವಕಾಶವಾದ ಬೇರೆ ಲಿಂಗದಿಂದ ಪೂರ್ವಪಕ್ಷವನ್ನು ಮಾಡಿಕೊಂಡು ಅಂತಿಮಪ್ರಾಣಾಧಿಕರಣವು ಹೊರಟಿದೆ. ಹೀಗಿರುವಾಗ ಅಂತಿಮಪ್ರಾಣಾಧಿಕರಣದ ವಿಚಾರವು ಪ್ರಾಣಾಧಿಕರಣದ ಸಿದ್ಧಾಂತದ ಅನಂತರವಷ್ಟೇ ತಿಳಿಯಲು ಸಾಧ್ಯ. ಈ ಅಧಿಕರಣದ ಪೂರ್ವಪಕ್ಷದ ಅವಸ್ಥೆಯಲ್ಲಿ ಪ್ರಾಣಾಧಿಕರಣದ ಸಿದ್ಧಾಂತವು ಸಿದ್ಧವಾಗಿರುವುದಿಲ್ಲ. ಉದಾಹರಣೆ -- ಪ್ರಥಮಪಾದದ ಆಕಾಶಾಧಿಕರಣದ ಸಿದ್ಧಾಂತವನ್ನು ಅವಲಂಬಿಸಿ ಮೂರನೆಯ ಪಾದದ ಆಕಾಶಾಧಿಕರಣವು ಹೊರಟಿದೆ. ಆದ್ದರಿಂದ ಪ್ರಥಮಪಾದದ ಆಕಾಶಾಧಿಕರಣದ ಪೂರ್ವಪಕ್ಷದೆಶೆಯಲ್ಲಿ ಮೂರನೇ ಪಾದದ ಆಕಾಶಾಧಿಕರಣದ ಸಿದ್ಧಾಂತವು ಹೇಗೆ ಸಿದ್ಧವಾಗಿರುವುದಿಲ್ಲವೋ? ಅದರಂತೆ ಇಲ್ಲಿಯೂ ತಿಳಿಯಬೇಕು.

ಪ್ರಾಣಾಧಿಕರಣದ ಪೂರ್ವಪಕ್ಷದೆಶೆಯಲ್ಲಿ ಅಂತಿಮಪ್ರಾಣಾಧಿಕರಣದ ಸಿದ್ಧಾಂತವು ಸಿದ್ಧವಾಗಿರುವುದಿಲ್ಲವೆಂದು ಹೇಳಿದ್ದರಿಂದ ಅಂತಿಮಪ್ರಾಣಾಧಿಕರಣದಿಂದ ಈ ಅಧಿಕರಣಕ್ಕೆ ಪುನರುಕ್ತಿದೋಷ ಬರುತ್ತದೆಂಬ ಶಂಕೆಯು ಪರಿಹಾರವಾಯಿತು. ಏಕೆಂದರೆ ಈ ಅಧಿಕರಣದ ಸಿದ್ಧಾಂತನ್ಯಾಯವಿಲ್ಲದೆ ವಿಷ್ಣುವಿನಲ್ಲಿ ಜೀವನಹೇತುತ್ವವೇ ಸಿದ್ಧವಾಗುವುದಿಲ್ಲ. ಆದ್ದರಿಂದ ಅಂತಿಮಪ್ರಾಣಾಧಿಕರಣದಲ್ಲಿ ಪ್ರಾಣಪದದ ಮುಖ್ಯಾರ್ಥವು ವಿಷ್ಣುವೆಂದೂ ಸಹ ಹೇಳಲಾಗುವುದಿಲ್ಲ.

ಜೀವನಹೇತುತ್ವದ ಅನ್ವಯವ್ಯತಿರೇಕವನ್ನು ಮುಖ್ಯಪ್ರಾಣನಲ್ಲಿ ಶ್ರುತಿಯಿಂದ ತಿಳಿಯಬೇಕೆಂದು ಇಲ್ಲಿಯ ತನಕ ಸಮರ್ಥಿಸಿದ್ದರಿಂದಲೇ ಟೀಕೆಯ ಮಾತು ಸಮಂಜಸವಾಗುತ್ತದೆ. ಅನ್ವಯವ್ಯತಿರೇಕದ ವಿಷಯದಲ್ಲಿ 'ಯತ್ಪ್ರಾಪ್ತಿರ್ಯತ್ಪರಿತ್ಯಾಗಃ' (ಯಾವ ಮುಖ್ಯಪ್ರಾಣನ ಪ್ರವೇಶದಿಂದ ಜೀವನವು

ಮುಖ್ಯಪ್ರಾಣನ ನಿರ್ಗಮನದಿಂದ ಮರಣವು) ಎಂಬ ಸ್ಮೃತಿಯನ್ನು ಉದಾಹರಿಸಿದ್ದು ಸಮಂಜಸ-ವಾಗಿದೆ.

### ಕಠಿಣಪದಾರ್ಥ

ತತ್ = ಬ್ರಹ್ಮದೇವರ ಶರೀರವನ್ನು, ಉತ್ಕ್ರಾಂತೇ = ಹೊರಟಾಗ, ನಿರವಕಾಶಅನ್ಯಲಿಂಗೇನ = ನಿರವಕಾಶವಾದ ಪ್ರಾಣಸಂವಾದಾದಿ ಲಿಂಗದಿಂದ, ತತ್ರ = ಅಂತಿಮಪ್ರಾಣಾಧಿ-ಕರಣದಲ್ಲಿ, ಏತತ್ಪೂರ್ವಪಕ್ಷದಶಾಯಾಂ = ಪ್ರಾಣಾಧಿಕರಣದ ಪೂರ್ವಪಕ್ಷದ ಸಂದರ್ಭದಲ್ಲಿ, ತತ್ರತ್ಯ = ಅಂತಿಮಪ್ರಾಣಾಧಿಕರಣದಲ್ಲಿರುವ, ಏತೇನ = ಅಂತಿಮಪ್ರಾಣಾಧಿಕರಣದಲ್ಲಿ ಹೇಳಲ್ಪಟ್ಟ ಪ್ರಾಣನು ವಾಯುವೆಂದು ಪೂರ್ವಪಕ್ಷ ಮಾಡಿದ್ದರಿಂದ, ಏತದಭಾವೇ = ಈ ಅಧಿಕರಣವು ಇಲ್ಲದಿದ್ದರೆ, ಅತಏವ = (೧) ಮುಖ್ಯವಾಯುವಿನಲ್ಲಿ ಜೀವನಹೇತುತ್ವವು ಪ್ರತ್ಯಕ್ಷದಿಂದ ತಿಳಿಯವುದಿಲ್ಲವೆಂದು ಹೇಳಿದ್ದರಿಂದಲೇ (೨) ಜೀವನ ಹೇತುತ್ವವು ವಚನಪ್ರಮಾಣದಿಂದ ಸಿದ್ಧವಾದ್ದರಿಂದಲೇ.

**प्रकाशः** – यदुक्तं जडरूपो वायुरिति वा मुख्य इति वा पूर्वपक्ष इति, तत्र त्वदुक्तानुपपत्त्यैव जडायोगान्मुख्य एवेति ब्रूम इति भावेन तत्रोक्तं दोषं परिहर्तुमाह – **उच्यत इति** ॥ ''प्राणशब्दप्रवृत्तिनिमित्त'' इत्यादिटीकां विवृण्वन् तत्र ''यत्प्राप्तिः'' इति स्मृत्युक्तिरुपलक्षणमिति भावेनाह – **तदिति** ॥ ब्रह्मणश्शरीर-मित्यर्थः । आदिपदेन – **'यत्प्राप्तिर्यत्परित्याग उत्पत्तिर्मरणं तथा'** इत्यादि, ''श्रेष्ठश्च'' इत्यत्र भाष्यस्थमत्र टीकोक्तं ग्राह्यम् । ''तत्प्राणे'' इति वाक्यं विष्णुपरं न वायुपरम् । अतोऽस्मादपि न जीवनहेतुत्वज्ञानं मुख्यस्येत्याक्षिपति – **नचेति** ॥ **वक्ष्यमाणेति** ॥

तत्र हि ''तावा एताः शीर्षन् श्रियःश्रिता'' इत्यारभ्य बहुस्थलेषु श्रूयमाणः प्राणो विष्णुरन्यो वेति विशये, प्राणसंवादादिलिङ्गात् मुख्यप्राणादिरन्य एवेति प्राप्ते,

''तं देवाः प्राणयन्त'' इत्यादिना देवोपदेशश्यत्वादिविष्णुलिङ्गानामस्मिन्प्रकरणे अनुगमादनुवृत्तेरन्यप्रापकाणामन्तर्यामिणि सम्भवात् प्राणो विष्णुरिति वक्ष्य-माणन्यायेन – इत्यर्थः । एतदुपजीवनेन तदधिकरणसिद्धान्तोत्थानादेतत् पूर्वपक्ष-दशायां तत्रत्यन्यायेनास्य वाक्यस्य न विष्णुपरत्वं शङ्कार्हमिति भावेन समाधत्ते – **अत्रत्येति** ॥ **सिद्धान्तासिद्धेरिति** ॥ अन्यथा स्वर्गकामाधिकरणसिद्धफलान्वयमुपेत्य किं भावार्थस्य फलकरणता किं वा नामार्थस्येति विचारात्मकभावार्थाधिकरण-

**सिद्धान्तेन फलाभावरूपस्वर्गकामाधिकरणपूर्वपक्षानुदयः स्यादिति भावः ॥ यथाऽऽ-काशोऽर्थान्तरेत्यादि ॥ प्रागेव विस्तृतमेतत् ।**

**एतेनेति ॥ एतत्पूर्वपक्षदशायां तत्रत्यस्य प्राणस्य वायुपरत्वकथनेनेत्यर्थः । अन्यथा "तत्प्राणे" इति श्रुतेः तत्रैव विष्णुपरत्वसिद्धौ विष्णोरेव श्रौतान्वय-व्यतिरेकाभ्यां जीवनहेतुत्वसिद्ध्या प्राणपदमुख्यार्थत्वसिद्धेरेतदनारम्भ एव स्यादिति भावः। तदेव व्यनक्ति –एतदिति ॥ वाक्यात्तज्ज्ञानमित्युक्तपरिहारं टीकारूढं करोति – अत एवेति ॥ प्रत्यक्षेण जीवनहेतुत्वस्य ज्ञानायोगादेवेति वा, वचनगम्यत्वा-देवेति वाऽर्थः । टीकायां स्मृत्युदाहरणेऽपि वक्ष्यमाणप्राणनयेनागतार्थत्वादि द्योतयितुमस्माभिः श्रुतिरुदाहृतेति हृदयम् ।**

ವಿವರಣೆ - ಪ್ರಾಣಶಬ್ದದಿಂದ ಜಡವಾಯುವು ಪ್ರತಿಪಾದ್ಯವೋ? ಮುಖ್ಯವಾಯುವು ಪ್ರತಿ-ಪಾದ್ಯನೋ? ಎಂದು ಪ್ರಶ್ನಿಸಲಾಗಿತ್ತು. ಮುಖ್ಯವಾಯುವೆಂದೇ ಉತ್ತರಿಸುತ್ತೇವೆ. ಶ್ರುತಿಯಲ್ಲಿ ಹೇಳಲ್ಪಟ್ಟ ಸಂಬೋಧನಾದಿಗಳು ಅನುಪಪನ್ನವಾದ್ದರಿಂದ ಜಡವಾಯುವನ್ನು ವಿವಕ್ಷಿಸುವುದು ನೀವೇ ಹೇಳಿದಂತೆ ತಪ್ಪಾಗುತ್ತದೆ. ಮುಖ್ಯವಾಯುವನ್ನು ವಿವಕ್ಷಿಸಿದರೆ ಹೇತ್ವಸಿದ್ಧಿದೋಷಕ್ಕೆ ಅವಕಾಶವಿಲ್ಲ. ಏಕೆಂದರೆ ಪ್ರತ್ಯಕ್ಷ-ಪ್ರಮಾಣದಿಂದ ಜೀವನದ ಅನ್ವಯವ್ಯತಿರೇಕವನ್ನು ಮುಖ್ಯವಾಯುವಿನಲ್ಲಿ ಹೇಳಲು ಆಗದಿರಬಹುದು. ಆದರೆ ಶ್ರುತಿಪ್ರಮಾಣದಿಂದ ಅನ್ವಯವ್ಯತಿರೇಕವನ್ನು ಹೇಳಲು ಏನು ತೊಂದರೆ? ಏಕೆಂದರೆ ಶ್ರುತಿಯಲ್ಲಿ ಸ್ಪಷ್ಟವಾಗಿ 'ಮುಖ್ಯವಾಯು ಇದ್ದರೆ ಮಾತ್ರ ಜೀವನ, ಮುಖ್ಯವಾಯುವಿಲ್ಲದಿದ್ದರೆ ಮರಣ' ಎಂಬ ಅನ್ವಯವ್ಯತಿರೇಕವು ಕಾಣಿಸುತ್ತಿದೆ ಎಂಬ ಪರಿಹಾರವನ್ನು 'ಉಚ್ಯತೇ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

ಪ್ರಾಣಶಬ್ದಪ್ರವೃತ್ತಿನಿಮಿತ್ತ' ಇತ್ಯಾದಿ ಟೀಕೆಯನ್ನು ಈ ವಾಕ್ಯದಿಂದಲೇ ವ್ಯಾಖ್ಯಾನಿಸಿದ್ದಾರೆ. ಟೀಕೆಯಲ್ಲಿ ಉದಾಹರಿಸಿದ ಸ್ಮೃತಿವಾಕ್ಯವು ಉಪಲಕ್ಷಣವೆಂದು ಗ್ರಂಥಕಾರರು ಇಲ್ಲಿ ಉದಾಹರಿಸಿದ ಶ್ರುತಿಯಿಂದ ತಿಳಿಯುತ್ತದೆ. ಅಂದರೆ ಟೀಕೆಯಲ್ಲಿ 'ಯತ್ಪ್ರಾಪ್ತಿಃ' ಎಂಬ ಸ್ಮೃತಿಯ ಜೊತೆಗೆ 'ತತ್ಪ್ರಾಣೇ' ಎಂಬ ಶ್ರುತಿ-ಯನ್ನೂ ಪ್ರಮಾಣವನ್ನಾಗಿ ವಿವಕ್ಷಿಸಬೇಕು. ಗ್ರಂಥದಲ್ಲಿರುವ ಆದಿಪದದಿಂದ ಟೀಕೆಯಲ್ಲಿ ಉದಾಹರಿಸಿದ ಸ್ಮೃತಿಯನ್ನು ಇಟ್ಟುಕೊಳ್ಳಬೇಕು. ಅಂದರೆ 'ತತ್ಪ್ರಾಣೇ' ಎಂಬ ಶ್ರುತಿಯ ಜೊತೆಗೆ ಟೀಕೆಯಲ್ಲಿ ಹೇಳಿದ 'ಯತ್ಪ್ರಾಪ್ತಿಃ' ಎಂಬ ಸ್ಮೃತಿವಾಕ್ಯವನ್ನು ಜೋಡಿಸಿಕೊಳ್ಳಬೇಕು.

ಶಂಕೆ - 'ತತ್ಪ್ರಾಣೇ' ಎಂಬ ಶ್ರುತಿವಾಕ್ಯವು ವಿಷ್ಣುಪರವಾಗಿರುವುದರಿಂದ ಮುಖ್ಯವಾಯುವನ್ನು ಹೇಳುವುದಿಲ್ಲ. ಈ ಶ್ರುತಿಯ ಆಧಾರದಿಂದ ಜೀವನಹೇತುತ್ವವನ್ನು ಮುಖ್ಯವಾಯುವಿನಲ್ಲಿ ಹೇಗೆ ತಿಳಿಯುತ್ತೀರಿ? ಎಂಬ ಆಕ್ಷೇಪವನ್ನು 'ನಚ' ಇತ್ಯಾದಿ ವಾಕ್ಯದಿಂದ ಮಾಡಿದ್ದಾರೆ. ಅಂತಿಮಪ್ರಾಣಾಧಿ-ಕರಣದಲ್ಲಿ 'ತಾ ವಾ ಏತಾಃ ಶೀರ್ಷನ್ ಶ್ರಿಯಃಶ್ರಿತಾಃ' ಎಂಬುದರಿಂದ ಪ್ರಾರಂಭಿಸಿ ಅನೇಕಸ್ಥಳಗಳಲ್ಲಿ

ಕೇಳಿಸಲ್ಪಡುವ ಪ್ರಾಣಶಬ್ದವು ವಿಷ್ಣುವನ್ನು ಹೇಳುತ್ತದೋ? ಅಥವಾ ಬೇರೆಯವರನ್ನು ಹೇಳುತ್ತದೋ? ಎಂಬ ಸಂಶಯ ಬಂದರೆ ಪ್ರಾಣಸಂವಾದವೇ ಮೊದಲಾದ ಲಿಂಗಗಳಿರುವುದರಿಂದ ಮುಖ್ಯಪ್ರಾಣ, ಇಂದ್ರ, ಅಥವಾ ಜೀವಾದಿಗಳೇ ಪ್ರಾಣರಾಗುತ್ತಾರೆಂದು ಪೂರ್ವಪಕ್ಷ ಮಾಡಿದ್ದಾರೆ. 'ತಂ ದೇವಾಃ ಪ್ರಾಣಯಂತ' ಇತ್ಯಾದಿಶ್ರುತಿಗಳ ಆಧಾರದಿಂದ ದೇವೋಪದೇಶ್ಯತ್ವಾದಿಲಿಂಗಗಳು ಕೇವಲ ವಿಷ್ಣುವಿನ ಲಿಂಗಗಳಾಗಿವೆ ಎಂದು ತಿಳಿಯುತ್ತದೆ. ಅವುಗಳನ್ನು ಈ ಪ್ರಕರಣದಲ್ಲಿಯೂ ಅನುವೃತ್ತಿ ಮಾಡಿಕೊಳ್ಳಬೇಕು. ಆವಾಗ ಎಲ್ಲಾ ಸ್ಥಳಗಳಲ್ಲಿರುವ ಪ್ರಾಣಶಬ್ದಗಳಿಂದ ವಿಷ್ಣುವೇ ವಾಚ್ಯನಾಗುತ್ತಾನೆ. ಮತ್ತು ಬೇರೆಯಲ್ಲಿರುವ ಧರ್ಮಗಳನ್ನು ಅಂತರ್ಯಾಮಿಯಾದ ವಿಷ್ಣುವಿನಲ್ಲಿ ಸುಲಭವಾಗಿ ಸಮರ್ಥಿಸಬಹುದು ಎಂಬುದು ಮುಂದಿನ ಅಂತಿಮಪ್ರಾಣಾಧಿಕರಣದಲ್ಲಿ ಹೇಳುವ ನ್ಯಾಯ. ಈ ನ್ಯಾಯದಿಂದ 'ತತ್ಪ್ರಾಣೇ' ಎಂಬ ಶ್ರುತಿಯಲ್ಲಿ ವಿಷ್ಣುವೇ ವಾಚ್ಯನೆಂದು ತಿಳಿಯುತ್ತದೆ. ಆದ್ದರಿಂದ ಪ್ರಕೃತದಲ್ಲಿ 'ತತ್ಪ್ರಾಣೇ' ಎಂಬ ಶ್ರುತಿಯನ್ನು ಮುಖ್ಯಪ್ರಾಣನಲ್ಲಿ ಹೇಳುವುದು ತಪ್ಪಲ್ಲವೇ?

ಸಮಾಧಾನ - ಪ್ರಾಣಾಧಿಕರಣವನ್ನು ಉಪಜೀವಿಸಿ ಅಂತಿಮಪ್ರಾಣಾಧಿಕರಣದ ಸಿದ್ಧಾಂತವು ಸ್ಥಾಪಿತವಾಗಿದೆ. ಹೀಗಿರುವಾಗ ಪ್ರಾಣಾಧಿಕರಣದ ಪೂರ್ವಪಕ್ಷದ ದಶೆಯಲ್ಲಿ ಅಂತಿಮಪ್ರಾಣಾಧಿಕರಣದ ಸಿದ್ಧಾಂತದ ನ್ಯಾಯವನ್ನು ಅವಲಂಬಿಸುವುದು ತಪ್ಪು. ಆದ್ದರಿಂದ 'ತತ್ಪ್ರಾಣೇ' ಎಂಬ ಶ್ರುತಿಯು ವಿಷ್ಣುಪರವೆಂದು ಇಲ್ಲಿಯ ತನಕ ನಿರ್ಣಯವಾಗಿಲ್ಲವೆಂದೇ ತಿಳಿಯಬೇಕು. ಈ ಸಮಾಧಾನವನ್ನು 'ಅತ್ರತ್ಯ' ಎಂಬ ವಾಕ್ಯವು ಹೇಳಿದೆ. ಈ ವಿಷಯವನ್ನು ಪೂರ್ವಮೀಮಾಂಸೆಯೂ ಸಮ್ಮತಿಸಿದೆ.

ಸ್ವರ್ಗಕಾಮಾಧಿಕರಣದಲ್ಲಿ ಹೀಗೆ ವಿಚಾರ ಮಾಡಿದ್ದಾರೆ - 'ವಿಶ್ವಜಿದಾ ಯಜೇತ' ಎಂಬ ವಾಕ್ಯದಲ್ಲಿ ಯಾಗದ ಫಲವನ್ನು ಹೇಳಿಲ್ಲ. ಆದ್ದರಿಂದ ವಾಕ್ಯಕ್ಕೆ ಅಪ್ರಾಮಾಣ್ಯಬರುತ್ತದೆಂದು ಪೂರ್ವಪಕ್ಷ. ಅಧ್ಯಾಹಾರದಿಂದ ಫಲಾನ್ವಯವನ್ನು ಮಾಡಬೇಕೆಂದು ಸಿದ್ಧಾಂತ. ಸ್ವರ್ಗಕಾಮಾಧಿಕರಣದಲ್ಲಿ ಹೇಳಿದ ಈ ಸಿದ್ಧಾಂತನ್ಯಾಯವನ್ನು ಅವಲಂಬಿಸಿ ಭಾವಾರ್ಥಾಧಿಕರಣವು ಹೊರಟಿದೆ. ಭಾವಾರ್ಥಾಧಿಕರಣದಲ್ಲಿ ಫಲವೆಂದರೆ ಭಾವಾರ್ಥವಾದ ಸ್ವರ್ಗವೋ ಅಥವಾ ನಾಮಾರ್ಥವಾದ ಯಾಗವೋ? ಎಂದು ವಿಚಾರ ಮಾಡಿದ್ದಾರೆ. ಭಾವಾರ್ಥಾಧಿಕರಣದ ಸಿದ್ಧಾಂತವು ಸ್ವರ್ಗಕಾಮಾಧಿಕರಣದ ಪೂರ್ವಪಕ್ಷದ ಸಂದರ್ಭದಲ್ಲಿ ತಿಳಿದಿರುವುದಿಲ್ಲ. ಏಕೆಂದರೆ ಸ್ವರ್ಗಕಾಮಾಧಿಕರಣದ ಸಿದ್ಧಾಂತವನ್ನು ಅವಲಂಬಿಸಿ ಭಾವಾರ್ಥಾಧಿಕರಣವು ಹೊರಟಿರುತ್ತದೆ. ಪ್ರಕೃತ ನೀವು ಒಂದುವೇಳೆ ಅಂತಿಮಪ್ರಾಣಾಧಿಕರಣದ ಸಿದ್ಧಾಂತವನ್ನು ಪ್ರಾಣಾ-ಧಿಕರಣದಲ್ಲಿ ಅವಲಂಬಿಸುವುದಾದರೆ ಭಾವಾರ್ಥಾಧಿಕರಣದ ಸಿದ್ಧಾಂತವನ್ನು ಅವಲಂಬಿಸಿ ಸ್ವರ್ಗಕಾಮಾಧಿ ಕರಣದ ಪೂರ್ವಪಕ್ಷವೇ ಹುಟ್ಟದಿರಬೇಕಾದೀತು?

ಮೂರನೆಯ ಪಾದದ ಆಕಾಶಾಧಿಕರಣದ ವಿಚಾರವನ್ನು ಈ ಹಿಂದೆಯೇ ವಿವರಿಸಿದ್ದೇವೆ.

ಆದ್ದರಿಂದ ಒಟ್ಟು ಯಾವ ಯಾವ ಶ್ರುತಿಯಲ್ಲಿ ಪ್ರಾಣಶಬ್ದವಿದೆಯೋ ಅವೆಲ್ಲವೂ ಸಹ ಮುಖ್ಯ-ವಾಯುವನ್ನೇ ಹೇಳುತ್ತವೆಂದು ಈ ಅಧಿಕರಣದ ಪೂರ್ವಪಕ್ಷ. ಅಂತಿಮಪ್ರಾಣಾಧಿಕರಣದ ವಿಷಯವಾಕ್ಯದಲ್ಲಿ ಪ್ರಸಕ್ತವಾದ ಪ್ರಾಣಶಬ್ದವೂ ಸಹ ಆಕ್ಷೇಪಕ್ಕೆ ವಿಷಯವಾಗಿದೆ. ಹೀಗೆ ಒಪ್ಪಿರುವುದರಿಂದ ಅಂತಿಮಪ್ರಾಣಾಧಿಕರಣದಿಂದ ಪುನರುಕ್ತಿದೋಷ ಬರುವುದಿಲ್ಲ. ಇಲ್ಲದಿದ್ದರೆ 'ತತ್ಪ್ರಾಣೇ' ಎಂಬ ಶ್ರುತಿಯು

ವಿಷ್ಣುಪರವೆಂದು ಅಂತಿಮಪ್ರಾಣಾಧಿಕರಣದಲ್ಲಿ ನಿರ್ಣಯವಾಗಿದೆ. ಶ್ರುತಿಯಲ್ಲಿ ಹೇಳಲ್ಪಟ್ಟ ಜೀವನದ ಅನ್ವಯವ್ಯತಿರೇಕವೂ ಸಹ ವಿಷ್ಣುವಿನಲ್ಲೇ ಸಿದ್ಧವಾಗುತ್ತದೆಂದು ನಿರ್ಣಯವಾದ ಮೇಲೆ ಪುನಃ ಈ ಅಧಿಕರಣವು ವ್ಯರ್ಥವಾಗಬೇಕಾದೀತು. ಈ ವಿಷಯವನ್ನು "ಏತದಭಾವ" ಎಂಬ ಗ್ರಂಥವು ವಿವರಿಸಿದೆ.

ಜೀವನಹೇತುತ್ವದ ಅನ್ವಯವ್ಯತಿರೇಕವು ಮುಖ್ಯಪ್ರಾಣನಲ್ಲಿ ಇದೆಯೆನ್ನಲು ವಾಕ್ಯವೇ ಪ್ರಮಾಣ-ವಾಗಿದೆ. ಆದ್ದರಿಂದಲೇ ಟೀಕೆಯಲ್ಲಿ ಸ್ಮೃತಿವಾಕ್ಯವನ್ನು ಉದಾಹರಿಸಿದ್ದಾರೆ. ಗ್ರಂಥಕಾರರು ತಾವು ಹೇಳಿದ ವಿಷಯವನ್ನು 'ಅತ ಏವ' ಎಂಬ ವಾಕ್ಯದಿಂದ ಟೀಕಾರೂಢ ಮಾಡುತ್ತಿದ್ದಾರೆ. ವಸ್ತುತಃ ಟೀಕೆಯಲ್ಲಿ ಸ್ಮೃತಿಯನ್ನು ಉದಾಹರಿಸಿರುವುದರಿಂದ ಗ್ರಂಥಕಾರರು ಅದನ್ನೇ ಉದಾಹರಿಸಬೇಕಿತ್ತು. ಆದರೆ ಅಂತಿಮ-ಪ್ರಾಣಾಧಿಕರಣದಿಂದ ಗತಾರ್ಥತ್ವದೋಷವನ್ನು ಪರಿಹರಿಸುವುದಕ್ಕಾಗಿ ಶ್ರುತಿಯನ್ನು ಉಲ್ಲೇಖಿಸಿದ್ದಾರೆ. ಶ್ರುತಿಯ ಉಲ್ಲೇಖದಿಂದ ತಿಳಿಯುವ ಈ ಸೂಕ್ಷ್ಮಾಂಶವನ್ನು ಗಮನಿಸಬೇಕು.

**ಗುರುರಾಜೀಯಮ್ – अत एव टीकायामिति ॥** प्रत्यक्षेणान्वयव्यतिरेकग्रहा-सम्भवेपि श्रुत्या तत्सम्भवस्य टीकाकृदभिप्रेतत्वादेवेत्यर्थः ।

## ಸಾರ

ಜೀವನಹೇತುತ್ವವು ಪ್ರತ್ಯಕ್ಷಪ್ರಮಾಣದಿಂದ ಮುಖ್ಯಪ್ರಾಣನಲ್ಲಿ ಇದೆಯೆಂದು ತಿಳಿಯದಿರಬಹುದು. ಆದರೆ 'ತತ್ಪ್ರಾಣೇ' ಇತ್ಯಾದಿ ಶ್ರುತಿಸ್ಮೃತಿಗಳಿಂದ ತಿಳಿಯುತ್ತದೆ. ಆದ್ದರಿಂದ ಮುಖ್ಯವಾಯುವೇ ಪ್ರಾಣನಾಗುತ್ತಾನೆಂಬ ಪೂರ್ವಪಕ್ಷವು ಸಿದ್ಧವಾಗುತ್ತದೆ.

'ತತ್ಪ್ರಾಣೇ' ಎಂಬ ಶ್ರುತಿಯು ವಿಷ್ಣುಪರವೆಂದು ಅಂತಿಮಪ್ರಾಣಾಧಿಕರಣದಲ್ಲಿ ನಿರ್ಣಯಿಸಿದ್ದಾರೆ. ಆದರೆ ಇಲ್ಲಿ ಮಾಡಿದ ಸಿದ್ಧಾಂತವನ್ನು ಅವಲಂಬಿಸಿ ಅಂತಿಮಪ್ರಾಣಾಧಿಕರಣವು ಹೊರಟಿದೆ. ಹೀಗಿರುವಾಗ ಈ ಅಧಿ-ಕರಣದ ಪೂರ್ವಪಕ್ಷದ ದೆಸೆಯಲ್ಲಿ ಅಂತಿಮಪ್ರಾಣಾಧಿಕರಣದ ಸಿದ್ಧಾಂತವು ಅಸಿದ್ಧವಾಗಿದೆ. ಪ್ರಥಮಪಾದದ ಆಕಾಶಾಧಿಕರಣಕ್ಕೆ ಮೂರನೆಯ ಪಾದದ ಆಕಾಶಾಧಿಕರಣದ ಸಿದ್ಧಾಂತವು ಹೇಗೆ ತಿಳಿದಿಲ್ಲವೋ ಅದರಂತೆ. ಮತ್ತು ಅಂತಿಮಪ್ರಾಣಾಧಿಕರಣದಿಂದ ಪುನರುಕ್ತಿದೋಷಕ್ಕೂ ಆಸ್ಪದವಿಲ್ಲ. ಈ ಅಧಿಕರಣದ ಸಿದ್ಧಾಂತವು ಸ್ಥಾಪಿತವಾದ ಮೇಲಷ್ಟೇ ಅಂತಿಮಪ್ರಾಣಾಧಿಕರಣದ ಪೂರ್ವಪಕ್ಷವು ಹೊರಡಲು ಸಾಧ್ಯ. ಈ ಪುನರುಕ್ತಿಯ ಪರಿಹಾರವನ್ನು ಸೂಚಿಸುವುದಕ್ಕಾಗಿಯೇ ಗ್ರಂಥಕಾರರು 'ತತ್ಪ್ರಾಣೇ' ಎಂಬ ಶ್ರುತಿಯನ್ನು ಉಲ್ಲೇಖಿಸಿದ್ದಾರೆ.

## ಮುಖ್ಯಪ್ರಾಣನ ಜೀವನಹೇತುತ್ವದಲ್ಲಿ ಪ್ರತ್ಯಕ್ಷಪ್ರಮಾಣ

**तात्पर्यचन्द्रिका –**

**यद्वा – कुलालशरीरस्य घटं प्रतीव मुख्यप्राणशरीरभूतवायोर्जीवनं प्रत्यन्वय-व्यतिरेकदर्शनमात्रेण तस्य तत्र हेतुत्वम् । अत एवोक्तं सुधायाम् – ''वायुविकार-शरीरत्वान्मुख्यस्य'' इति । ब्रह्मणस्तु सर्वगतत्वादशरीरत्वाच्च तस्य वा तच्छरीरस्य**

**वा नास्मदादिशरीरे अभाव इति, न तद्व्यतिरेकाज्जीवनव्यतिरेकः । यद्यपि ''अन्तर्यामी'' इत्यत्रेशस्य गौणं यौगिकं वा शरीरमस्तीति वक्ष्यते, तथाऽपि न जीवनव्यतिरेकस्य गौणादिशरीरव्यतिरेकानुविधानेन तत्कार्यत्वमतिप्रसङ्गात् । भूमाधिकरणे तु सर्वगतस्यापि ईशस्य अस्मदादिशरीरादुत्क्रमणमस्तीति च वक्ष्यते, नतु तत्राभावः । तस्मान्न विष्णोर्जीवनादिहेतुत्वं अन्वयव्यतिरेककल्प्यम् । नापि श्रुतिसिद्धम्, अन्वयव्यतिरेकानुसारेण ''येन जातानि जीवन्ति'' इत्यादेर्मुख्यप्राणविषयत्वात् । ''इतरेण तु जीवन्ति'' इत्यादावितरशब्दस्तु वायुवृत्तिरूपप्रसिद्धप्राणेतरत्वविवक्षया मुख्यप्राणेऽपि युक्तः ।**

ಅನುವಾದ - ಅಥವಾ ಜೀವನಹೇತುತ್ವವು ಮುಖ್ಯವಾಯುವಿನ ಅಧೀನವಾಗಿದೆ ಎಂದು ಪ್ರತ್ಯಕ್ಷದಿಂದಲೇ ಸಿದ್ಧವಾಗಿದೆ. ಅದು ಹೀಗೆ -- "ಕುಲಾಲಶರೀರವಿದ್ದರೆ ಘಟವು ಹುಟ್ಟುತ್ತದೆ. ಕುಲಾಲನ ಶರೀರವಿಲ್ಲದಿದ್ದರೆ ಘಟವು ಹುಟ್ಟುವುದಿಲ್ಲ. ಹೀಗೆ ಕುಲಾಲಶರೀರದ ಅನ್ವಯವ್ಯತಿರೇಕದಿಂದ ಘಟಕ್ಕೆ ಕುಲಾಲನು ಕಾರಣವೆಂದು ಸಿದ್ಧವಾಗುತ್ತದೆ. ಇದರಂತೆ ಮುಖ್ಯಪ್ರಾಣನ ಶರೀರವೆನಿಸಿದ ಜಡವಾಯು ಇದ್ದರೆ ಮಾತ್ರ ಜೀವನ ನಡೆಯುತ್ತದೆ. ಅದಿಲ್ಲದಿದ್ದರೆ ಜೀವನವು ನಡೆಯುವುದಿಲ್ಲ ಎಂದು ಮುಖ್ಯಪ್ರಾಣನ ಶರೀರವಾದ ಜಡವಾಯುವಿನ ಜೊತೆಗೆ ಅನ್ವಯವ್ಯತಿರೇಕವಿರುವುದರಿಂದ ಮುಖ್ಯಪ್ರಾಣನು ಜೀವನಕ್ಕೆ ಕಾರಣವೆಂದು ಸಿದ್ಧವಾಗುತ್ತದೆ. ಈ ಅನ್ವಯವ್ಯತಿರೇಕದಿಂದ ಜೀವನಹೇತುತ್ವವಿಷಯದಲ್ಲಿ ಪ್ರತ್ಯಕ್ಷಪ್ರಮಾಣವನ್ನು ಹೇಳಿದಂತಾಗುತ್ತದೆ. ಆದ್ದರಿಂದಲೇ ಶ್ರುತಿಯಲ್ಲಿ ಈ ಮಾತಿದೆ. 'ವಾಯುವಿಕಾರಶರೀರತ್ವಾತ್ ಮುಖ್ಯಸ್ಯ' (ವಿಕಾರಭೂತವಾದ ಜಡವಾಯುವು ಮುಖ್ಯಪ್ರಾಣನ ಶರೀರವಾದ್ದರಿಂದ) ಎಂದು. ಈ ಅನ್ವಯವ್ಯತಿರೇಕವನ್ನು ಮುಖ್ಯಪ್ರಾಣನಲ್ಲಷ್ಟೇ ಹೇಳಬಹುದು. ವಿಷ್ಣುವಿನಲ್ಲಿ ಹೇಳಲಾಗದು. ಏಕೆಂದರೆ ವಿಷ್ಣುವು ಸರ್ವಗತನಾಗಿದ್ದಾನೆ ಮತ್ತು ಅಶರೀರಿಯಾಗಿದ್ದಾನೆ. ಆದಕಾರಣ ವಿಷ್ಣುವಿನ ಶರೀರವಾಗಲಿ ಅಥವಾ ವಿಷ್ಣುವಾಗಲೀ ನಮ್ಮ ಶರೀರದಲ್ಲಿ ಇಲ್ಲವೆಂದು ಹೇಳಲು ಸಾಧ್ಯವಿಲ್ಲ. ವಿಷ್ಣುವಿನ ಅಭಾವದಿಂದ ಜೀವನ ಅಭಾವವೆಂಬ ವ್ಯತಿರೇಕವ್ಯಾಪ್ತಿಯನ್ನು ಹೇಳಲು ಬರುವುದಿಲ್ಲ.

ವಸ್ತುತಸ್ತು, ಅಂತರ್ಯಾಮ್ಯಧಿಕರಣದಲ್ಲಿ ಗೌಣವಾದ ಶರೀರವನ್ನು ಅಥವಾ ಯೌಗಿಕವಾದ ಶರೀರವನ್ನು ವಿಷ್ಣುವಿಗೆ ಹೇಳಿದ್ದಾರೆ. ಆದ್ದರಿಂದ ವ್ಯತಿರೇಕವ್ಯಾಪ್ತಿಯನ್ನು ಹೇಳಬಹುದೆನ್ನಿಸುತ್ತದೆ. ಆದರೆ ಗೌಣಾದಿಶರೀರಗಳ ವ್ಯತಿರೇಕಗಳ ಜೀವನದ ವ್ಯತಿರೇಕಾಭಾವವನ್ನು ಹೇಳುವುದರಿಂದ ಜೀವನ ಹೇತುತ್ವವನ್ನು ವಿಷ್ಣುವಿನಲ್ಲಿ ಸಮರ್ಥಿಸಲಾಗದು. ಹಾಗಾದಲ್ಲಿ ಅತಿಪ್ರಸಂಗ ಬರುತ್ತದೆ. ಭೂಮಾಧಿಕರಣದಲ್ಲಿ ಸರ್ವಗತನಾಗಿದ್ದರೂ ಸಹ ವಿಷ್ಣುವಿಗೆ ನಮ್ಮ ಶರೀರದಿಂದ ಉತ್ಕ್ರಮಣವನ್ನು

ಹೇಳಿದ್ದಾರೆ. ಆದರೆ ನಮ್ಮ ಶರೀರದಲ್ಲಿ ವಿಷ್ಣುವಿನ ಅಭಾವವನ್ನು ಹೇಳಿಲ್ಲ. ಆದ್ದರಿಂದ ಜೀವನಾದಿಹೇತುತ್ವವು ಅನ್ವಯವ್ಯತಿರೇಕದಿಂದ ವಿಷ್ಣುವಿನಲ್ಲಿ ಸಿದ್ಧವಾಗುವುದಿಲ್ಲ. ಶ್ರುತಿಯಿಂದಲೂ ಸಹ ಸಿದ್ಧವಾಗುವುದಿಲ್ಲ. ಏಕೆಂದರೆ ಅನ್ವಯವ್ಯತಿರೇಕಪ್ರಮಾಣದಂತೆ 'ಯೇನ ಜಾತಾನಿ ಜೀವಂತಿ' ಇತ್ಯಾದಿಶ್ರುತಿಗಳು ಮುಖ್ಯಪ್ರಾಣವಿಷಯಕವೇ ಆಗಿವೆ. ಅಷ್ಟೇ ಅಲ್ಲದೆ 'ಇತರೇಣ ತು ಜೀವಂತಿ' ಎಂಬ ಸ್ಮೃತಿಯಲ್ಲಿರುವ ಇತರಶಬ್ದವು ಪ್ರಸಿದ್ಧಪ್ರಾಣನನ್ನು ಬಿಟ್ಟು ಅಮುಖ್ಯಜಡವಾಯುವನ್ನು ಹೇಳುತ್ತದೆ. ಹಾಗಾಗಿ ಮುಖ್ಯಪ್ರಾಣನು ಜೀವನಕಾರಣನಾಗಲು ಯಾವುದೇ ಬಾಧಕವಿಲ್ಲ.

### ಕಠಿಣಪದಾರ್ಥ

ವಾಯೋಃ = ಜಡವಾಯುವಿಗೆ, ತಸ್ಯ = ಮುಖ್ಯಪ್ರಾಣನಿಗೆ, ತತ್ರ = ಜೀವನದಲ್ಲಿ, ಅತ ಏವ = ಶರೀರಕ್ಕೆ ಅನ್ವಯವ್ಯತಿರೇಕವು ಇರುವುದರಿಂದ ಶರೀರಿಗೆ ಕಾರಣತ್ವವು ಸಿದ್ಧವಾಗುತ್ತದೆಂದು ಹೇಳಿದ್ದರಿಂದಲೇ, ವಾಯುವಿಕಾರಶರೀರತ್ವಾತ್ = ಜಡವಾಯುವು ಶರೀರವಾದ್ದರಿಂದ, ತಸ್ಯ ವಾ = ಬ್ರಹ್ಮನಾಗಲೀ, ತಚ್ಛರೀರಸ್ಯ ವಾ = ಬ್ರಹ್ಮನ ಶರೀರವಾಗಲೀ, ತದ್ವ್ಯತಿರೇಕಾತ್ = ಬ್ರಹ್ಮನ ಇಲ್ಲದಿರುವಿಕೆಯಿಂದ, ನ ಅನ್ವಯವ್ಯತಿರೇಕಕಲ್ಪ್ಯಮ್ = ಪ್ರತ್ಯಕ್ಷ ಅಥವಾ ಆಗಮದಿಂದ ಸಿದ್ಧವಾದ ಅನ್ವಯವ್ಯತಿರೇಕಗಳಿಂದ ವಿಷ್ಣುವು ಕಲ್ಪ್ಯನಾಗುವುದಿಲ್ಲ.

**प्रकाशः** – एवं 'टीकानुरोधेन जीवनहेतुत्वादेर्मुख्याधीनत्वं वाक्यसिद्धम्' इत्युक्त्वा, इदानीं सुधानुसारेण प्रत्यक्षेणैव सिद्धमित्याह – **यद्वेति** ॥ 'यथा घटं प्रति कुलालशरीरस्य अन्वयव्यतिरेकदर्शनमात्रेण कुलालात्मनो हेतुत्वं गम्यते, तथा' इत्यर्थः। **वायोरिति** ॥ जडभूतस्येत्यर्थः । **'तस्य'** मुख्यप्राणस्य । **'तत्र'** जीवने ॥ **अत एवेति** ॥ शरीरान्वयव्यतिरेकदर्शनमात्रेण तच्छरीरिणो हेतुत्वावगमादेवेत्यर्थः । एतेन टीकायामपि 'दर्शनात्' इत्यस्य 'प्रत्यक्षेण दर्शनात्' इत्यर्थः । स्मृत्युक्तिश्चाभ्युच्चयत्वेनेत्यपि सूचितम् ।

ननु ब्रह्मणोऽप्येवं किं न स्यात्? इत्यतः **''वायावेव दर्शनात्''** इति टीकास्थावधारणव्यावर्त्यं विवृण्वन्, तत्किं प्रत्यक्षादिसिद्धाभ्यामन्वयव्यतिरेकाभ्यां जीवनहेतुत्वं विष्णोरुच्यते अथ श्रुत्या इति विकल्पौ हृदि निधायाद्य आह – **ब्रह्मणस्त्विति** ॥ **सर्वगतत्वादिति** ॥ ''स एवाधस्तात्स उवोपरिष्टात्'' ''सर्वगतं सुसूक्ष्मं'' ''अशरीरः प्रज्ञात्मा'' इत्यादेरिति भावः ॥ **अभाव इति** ॥

नन्वक्षराधिकरणे अणुत्वस्यापि वक्ष्यमाणत्वात् तद्व्यतिरेकोऽपि सम्भवतीति चेन्न, सर्वगतत्वासमानाधिकरणाणुत्वस्यैव व्यतिरेके प्रयोजकत्वादित्याशयात् ।

नन्वन्तर्याम्यधिकरणे ''यस्य पृथिवी शरीरम्'' इत्यादिना सशरीरत्वं वक्ष्यते । तत्कथमशरीरत्वम्' इत्याशङ्क्य, निरस्यति – **यद्यपीति** ॥

नन्वथाऽपि ''**भूमा सम्प्रसादात्**'' इत्यत्र – ''**उत्क्रान्तप्राणान् शूलेन समासं व्यतिषं दहेत्**'' इत्युत्क्रमणलिङ्गात् प्राणो वायुः – इति प्राप्ते, '**पूर्णसुखत्वलिङ्गात् उत्क्रमणस्य च रूपविशेषेण विष्णावपि सम्भवाद्विष्णुरेव प्राणः**' इत्युक्तन्यायेन विष्णोरप्यभावो युक्त इत्यत आह – **भूमेति** ॥ यथा शरीरस्थस्यैव चक्षुषो ध्रुवादिमण्डलपर्यन्तं निर्गमनं, तथा विष्णोरपि विचित्रशक्तिवशाद्रूपविशेषादिना देहे सत एव महत्त्वस्य शक्त्याऽणुत्वस्य व्यक्त्या उत्क्रमणोपपत्तेरिति भावः । **अन्वयेति** ॥ प्रत्यक्षेण वा आगमेन वा सिद्धाभ्यामन्वयव्यतिरेकाभ्यां कल्प्यं न भवतीत्यर्थः ।

यद्यप्यत्र विष्णोर्व्यतिरेकमुपेत्यापि किमन्वयव्यतिरेकौ प्रत्यक्षगम्यौ उतागमगम्यौ? आद्येऽपि किं साक्षादुत शरीरद्वारा? नाद्यः, अयोग्यत्वात् । न द्वितीयः, अशरीरत्वात् । नान्त्यः, ''तत्प्राणे प्रपन्ने'' इत्यादेरिव तद्बोधकागमस्याभावात् । भावे वा तस्य वायुपरत्वादित्यपि वक्तुं शक्यं भाति । तथाऽप्यस्य स्पष्टत्वादन्वयव्यतिरेकासिद्धत्वेऽपि श्रुत्या जीवनहेतुत्वं सिध्यतीत्यस्यावश्यापाकर्तव्यत्वाद् वास्तवाभिप्रायेण व्यतिरेकाभावेनैवान्वयव्यतिरेकाकल्प्यत्वमुक्तम् । एतेन '**प्राणादिहेतुता दृष्टेः**' इत्यत्र प्राणादिहेतुतायाः परमात्मन्यन्वयव्यतिरेकतः 'अदृष्टेरदर्शनात्' इत्यनुव्याख्यानयोजना, सुधोक्ता 'व्यतिरेकायोगेनोपपादनीया' इति स्पष्टीकृता । एवं – '**अदृष्टेरागमेनाप्यदर्शनात्**' इत्यर्थान्तरमप्यभिप्रेत्य द्वितीयपक्षमपि निषेधति – **नापीति** ॥ **मुख्यप्राणेति** ॥ अन्यथा श्रुत्या प्रत्यक्षेण चोक्तान्वयव्यतिरेकानुपपत्तेरिति भावः । ननु च–

**न प्राणेन नापानेन मर्त्यो जीवति कश्चन ।**
**इतरेण तु जीवन्ति यस्मिन्नेतावुपाश्रितौ ॥**

इत्यत्र प्राणस्य जीवनहेतुत्वनिरासपूर्वं विष्णोरेव तदुक्तेस्तद्विरोध इत्यतः, प्राणापानशब्दयोः जडवायुपरत्वेनेतरशब्देन तद्भिन्नचेतनस्य वायोरेव ग्रहणादित्याह – **इतरेण त्विति** ॥

ವಿವರಣೆ - ಇಲ್ಲಿಯ ತನಕ ಜೀವನಹೇತುತ್ವವು ಮುಖ್ಯಪ್ರಾಣನ ಅಧೀನವಾಗಿದೆ ಎಂಬ ವಿಷಯದಲ್ಲಿ ಶ್ರುತಿಪ್ರಮಾಣವನ್ನು ಟೀಕೆಯಪ್ರಕಾರ ಹೇಳಿದ್ದಾಯಿತು. ಪ್ರಕೃತ ಪ್ರತ್ಯಕ್ಷಪ್ರಮಾಣವನ್ನು ಸುಧೆಯ ಪ್ರಕಾರ ಹೇಳುತ್ತಿದ್ದಾರೆ. ಕುಲಾಲನ ಶರೀರದಿಂದಷ್ಟೇ ಅನ್ವಯವ್ಯತಿರೇಕವು ಘಟಕ್ಕೆ ಕಂಡಿದೆ. ಆದರೂ ಸಹ ಕುಲಾಲನೆಂಬ ಜೀವನು ಘಟಕ್ಕೆ ಕಾರಣನೆಂದು ನಾವು ತಿಳಿಯುತ್ತೇವೆ. ಆದರಂತೆ ಮುಖ್ಯಪ್ರಾಣನಿಗೆ ಜಡವಾಯುವು ಶರೀರವಾಗಿದೆ. ಜಡವಾಯುವಿನಿಂದ ಅನ್ವಯವ್ಯತಿರೇಕವು ಜೀವನದಲ್ಲಿ ಕಂಡಿದೆ. ಇದರಿಂದ ಜಡವಾಯುಶರೀರದೊಳಗಿರುವ ಮುಖ್ಯಪ್ರಾಣನು ಜೀವನಕಾರಣನೆಂದು ನಾವು ತಿಳಿಯ-ಬಹುದು. ಈ ಪ್ರತ್ಯಕ್ಷಪ್ರಮಾಣವನ್ನು ಟೀಕೆಯು ಕೂಡ ಸುಧೆಯಂತೆ 'ದರ್ಶನಾತ್' ಎಂಬ ಪದದಿಂದ ಸೂಚಿಸಿದೆ. ದರ್ಶನಾತ್ ಎಂದರೆ ಪ್ರತ್ಯಕ್ಷಪ್ರಮಾಣಸಿದ್ಧವಾದ್ದರಿಂದ ಎಂದರ್ಥ.

ಇದೇ ಅನ್ವಯವ್ಯತಿರೇಕದಿಂದ ಬ್ರಹ್ಮನಲ್ಲಿಯೂ ಕೂಡ ಜೀವನಹೇತುತ್ವವನ್ನು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಏಕೆಂದರೆ ಪ್ರತ್ಯಕ್ಷಸಿದ್ಧವಾದ ಅನ್ವಯವ್ಯತಿರೇಕದಿಂದ ವಿಷ್ಣುವಿನಲ್ಲಿ ಜೀವನಹೇತುತ್ವವನ್ನು ಹೇಳುತ್ತಿದ್ದೀರೋ ಅಥವಾ ಶ್ರುತಿಸಿದ್ಧವಾದ ಅನ್ವಯವ್ಯತಿರೇಕದಿಂದ ವಿಷ್ಣುವಿನಲ್ಲಿ ಜೀವನಹೇತುತ್ವವನ್ನು ಹೇಳುತ್ತಿದ್ದೀರೋ? ಎಂದು ವಿಕಲ್ಪಿಸಿ ಮೊದಲನೆಯ ಪಕ್ಷವನ್ನು 'ಬ್ರಹ್ಮಣಸ್ತು' ಎಂಬ ವಾಕ್ಯದಿಂದ ನಿರಾಕರಿಸಿದ್ದಾರೆ. ಮತ್ತು 'ವಾಯಾವೇವ ದರ್ಶನಾತ್' ಎಂಬ ಟೀಕೆಯಲ್ಲಿರುವ ಅವಧಾರಣದಿಂದ ವ್ಯಾವರ್ತ್ಯವಾದದ್ದನ್ನು ವಿವರಿಸುತ್ತಿದ್ದಾರೆ. 'ಸ ಏವ ಅಧಸ್ತಾತ್, ಸ ಏವ ಉಪರಿಷ್ಟಾತ್' 'ಸರ್ವಗತಂ ಸುಸೂಕ್ಷ್ಮಮ್' ಇತ್ಯಾದಿ ಶ್ರುತಿಗಳು ವಿಷ್ಣುವನ್ನು ಸರ್ವಗತವೆನ್ನುತ್ತಿವೆ. 'ಅಶರೀರಃ ಪ್ರಜ್ಞಾತ್ಮಾ' ಇತ್ಯಾದಿ ಶ್ರುತಿಗಳು ವಿಷ್ಣುವಿಗೆ ಶರೀರವಿಲ್ಲವೆನ್ನುತ್ತಿವೆ.

ಶಂಕೆ - ಅಕ್ಷರಾಧಿಕರಣದಲ್ಲಿ ವಿಷ್ಣುವು ಅಣುವಾಗಿದ್ದಾನೆಂದು ಹೇಳುತ್ತಾರೆ. ಅಣುವಾದ ವಿಷ್ಣುವಿನಲ್ಲಿ ವ್ಯತಿರೇಕವನ್ನು ಹೇಳುವುದು ಸುಲಭವಲ್ಲವೇ?

ಸಮಾಧಾನ - ಅಕ್ಷರಾಧಿಕರಣದಲ್ಲಿ ವಿಷ್ಣುವಿನಲ್ಲಿ ಅಣುತ್ವದ ಜೊತೆಗೆ ಮಹತ್ವವನ್ನೂ ಹೇಳಿದ್ದಾರೆ. ಸರ್ವಗತನಾಗಿಲ್ಲವೆಂದು ಹೇಳಿಲ್ಲ. ಸರ್ವಗತತ್ವದ ಜೊತೆಗೆ ಇಲ್ಲದ ಅಣುತ್ವವಷ್ಟೇ ವ್ಯತಿರೇಕವ್ಯಾಪ್ತಿಗೆ ಪ್ರಯೋಜಕ. ಆದ್ದರಿಂದ ಅಕ್ಷರಾಧಿಕರಣದಲ್ಲಿ ಹೇಳಿದ ಅಣುತ್ವದಿಂದ ವ್ಯತಿರೇಕವ್ಯಾಪ್ತಿಯನ್ನು ಸಮರ್ಥಿಸಲಾಗದು.

ಶಂಕೆ - ಅಂತರ್ಯಾಮ್ಯಧಿಕರಣದಲ್ಲಿ 'ಯಸ್ಯ ಪೃಥಿವೀ ಶರೀರಮ್' ಇತ್ಯಾದಿ ವಾಕ್ಯದಿಂದ ವಿಷ್ಣುವಿಗೆ ಶರೀರವನ್ನು ಹೇಳಿದ್ದಾರೆ. ನೀವು ಈಗ ಶರೀರವಿಲ್ಲವೆಂದು ಹೇಳುವುದು ತಪ್ಪಲ್ಲವೇ?

ಸಮಾಧಾನ - ಅಂತರ್ಯಾಮ್ಯಧಿಕರಣದಲ್ಲಿ ಕೇವಲ ಗೌಣವಾದ ಅಥವಾ ಯೌಗಿಕವಾದ ಶರೀರವನ್ನು ಹೇಳಿದ್ದಾರೆ ಹೊರತು ಮುಖ್ಯವಾದ ಶರೀರವನ್ನು ಹೇಳಿಲ್ಲ. ಗೌಣಶರೀರವನ್ನು ಇಟ್ಟುಕೊಂಡು ಕಾರ್ಯಕಾರಣಭಾವವನ್ನು ನಿಶ್ಚಯಿಸಲಾಗದು. ಹಾಗಾದಲ್ಲಿ ಅತಿಪ್ರಸಂಗ ಬರುತ್ತದೆ. ಗೃಹಾದಿಗಳೂ ಸಹ ದೇವದತ್ತನಿಗೆ ನಿಯಮ್ಯತ್ವೇನ ಅಥವಾ ಅಧಿಷ್ಠಾನತ್ವೇನ ಗೌಣಶರೀರವಾಗಿವೆ. ಆ ಮನೆಯು ಯಾವ ವಸ್ತುವಿನ ಜೊತೆಗೆ ಅವಿನಾಭಾವವಾಗಿದೆಯೋ ಆ ವಸ್ತುವು ದೇವದತ್ತನ ಕಾರ್ಯವಾಗಬೇಕಾದೀತು. ಇಷ್ಟು ಅಭಿಪ್ರಾಯ -- ಮುಖ್ಯಪ್ರಾಣನಿಗೂ ಕೂಡ ಜಡವಾಯುವು ಅಭಿಮನ್ಯಮಾನವಾದ್ದರಿಂದ

ಗೌಣಶರೀರವೇ ಆಗಿದೆ. ಗೌಣಶರೀರದ ಅನ್ವಯವ್ಯತಿರೇಕದಿಂದ ವಾಯುವಿನಲ್ಲಿ ಜೀವನ ಹೇತುತ್ವವನ್ನು ಹೇಳಿದಂತೆ ಪೃಥಿವ್ಯಾದಿರೂಪವಾದ ಗೌಣಶರೀರವು ವಿಷ್ಣುವಿಗೂ ಇರುವುದರಿಂದ ವಿಷ್ಣುವಿನಲ್ಲಿಯೂ ಜೀವನಾದಿಹೇತುತ್ವವನ್ನು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ ಈಗ ಅವಕಾಶವಿಲ್ಲ. ಶರೀರಶಬ್ದಕ್ಕೆ ಮುಖ್ಯಶರೀರವೆಂದರ್ಥ. ಮುಖ್ಯಪ್ರಾಣನಿಗೆ ಜಡವಾಯುವು ಅಭಿಮನ್ಯಮಾನವಾದ ಮುಖ್ಯಶರೀರವೇ ಆಗಿದೆ. ಸುಖಾದಿಗಳೆಲ್ಲವೂ ಸಹ ಮುಖ್ಯಪ್ರಾಣನಿಗೆ ಆ ಜಡಶರೀರದಿಂದಲೇ ಆಗುತ್ತದೆ. ಆದರೆ ಗೌಣವಾದ ಪೃಥಿವ್ಯಾದಿಶರೀರಗಳಿಂದ ವಿಷ್ಣುವಿಗೆ ಸುಖಾದಿಗಳು ಉಂಟಾಗುವುದಿಲ್ಲ. ಬ್ರಹ್ಮನಿಗೆ ಜನ್ಯಸುಖವು ಪ್ರಮಾಣಬಾಧಿತವಾದ್ದರಿಂದ ಪೃಥಿವ್ಯಾದಿಗಳನ್ನು ಮುಖ್ಯಶರೀರವೆಂದು ಹೇಳಲಾಗದು.

ಶಂಕೆ - 'ಭೂಮಾ ಸಂಪ್ರಸಾದಾತ್' ಎಂಬ ಅಧಿಕರಣದಲ್ಲಿ ವಿಷ್ಣುವಿಗೂ ಕೂಡ ದೇಹದಿಂದ ಉತ್ಕ್ರಮಣವನ್ನು ಹೇಳಿದ್ದಾರೆ. 'ಉತ್ಕ್ರಾಂತಪ್ರಾಣಾನ್ ಶೂಲೇನ ಸಮಾಸಂ ವ್ಯತಿಷಂ ದಹೇತ್' ಎಂಬ ಶ್ರುತಿಯಲ್ಲಿ ಉತ್ಕ್ರಮಣಲಿಂಗವು ಕೇಳಿಸುತ್ತಿರುವುದರಿಂದ ಪ್ರಾಣಶಬ್ದದಿಂದ ವಾಯು ವಾಚ್ಯನಾಗುತ್ತಾನೆಂಬ ಪೂರ್ವಪಕ್ಷ ಬಂದರೆ ಪೂರ್ಣಸುಖತ್ವ ಎಂಬ ಲಿಂಗದಿಂದ ಉತ್ಕ್ರಮಣಲಿಂಗವನ್ನು ವಿಷ್ಣುವಿನಲ್ಲಿ ಸಾಧಿಸಿದ್ದಾರೆ. ಭಗವಂತನ ರೂಪವಿಶೇಷದಿಂದ ಉತ್ಕ್ರಮಣವನ್ನು ಹೇಳಬಹುದಾದ್ದರಿಂದ ಪ್ರಾಣಶಬ್ದದಿಂದ ವಿಷ್ಣುವೇ ವಾಚ್ಯನಾಗುತ್ತಾನೆ ಎಂದು ಸಿದ್ಧಾಂತ ಮಾಡಿದ್ದಾರೆ. ಹೀಗೆ ಉತ್ಕ್ರಮಣವನ್ನು ಭಗವಂತನಲ್ಲಿ ಸಾಧಿಸಿದ್ದರಿಂದ ನಮ್ಮ ದೇಹದಲ್ಲಿ ವಿಷ್ಣುವಿನ ಇಲ್ಲದಿರುವಿಕೆಯೆಂಬ ವ್ಯತಿರೇಕವ್ಯಾಪ್ತಿಯನ್ನು ಹೇಳಬಹುದಲ್ಲವೇ?

ಸಮಾಧಾನ - ಭೂಮಾಧಿಕರಣದಲ್ಲಿ ಉತ್ಕ್ರಮಣವನ್ನು ವಿಷ್ಣುವಿನಲ್ಲಿ ಹೇಳಿದ್ದು ಸತ್ಯ. ಆದರೆ ಶರೀರದಲ್ಲಿ ವಿಷ್ಣುವಿನ ಇಲ್ಲದಿರುವಿಕೆಯನ್ನು ಸರ್ವಥಾ ಪ್ರತಿಪಾದಿಸಿಲ್ಲ. ಶರೀರದಲ್ಲಿ ಒಂದು ರೂಪದಿಂದ ಭಗವಂತನು ನೆಲೆಸಿ ಮತ್ತೊಂದು ರೂಪದಿಂದ ಉತ್ಕ್ರಮಣನಾಗುತ್ತಾನೆಂದು ಅಲ್ಲಿ ಸಾಧಿಸಿದ್ದಾರೆ. ಯಾವ ರೀತಿಯಾಗಿ ನಮ್ಮ ಶರೀರದಲ್ಲಿ ಇರುವ ಚಕ್ಷುರಿಂದ್ರಿಯವು ಧ್ರುವಮಂಡಲದ ತನಕ ಹೋದರೂ ನಮ್ಮ ಶರೀರದಲ್ಲಿಯೇ ಮತ್ತೊಂದು ಅಂಶದಿಂದ ಇರುತ್ತದೋ ಅದರಂತೆ ವಿಷ್ಣುವೂ ಕೂಡ ತನ್ನ ವಿಚಿತ್ರಶಕ್ತಿಯಿಂದ ಒಂದು ರೂಪದಿಂದ ದೇಹದಿಂದ ಹೊರಟರೂ ಮತ್ತೊಂದು ರೂಪದಿಂದ ದೇಹದಲ್ಲಿಯೇ ಇರುತ್ತಾನೆ. ಆ ಸಂದರ್ಭದಲ್ಲಿ ಭಗವಂತನಲ್ಲಿರುವ ಮಹತ್ವಗುಣವು ಶಕ್ತಿರೂಪದಲ್ಲಿಯು ಅಣುತ್ವಗುಣವು ವ್ಯಕ್ತಿರೂಪದಲ್ಲಿಯೂ ಇರುತ್ತದೆ. ಆದ್ದರಿಂದ ಉತ್ಕ್ರಮಣವನ್ನು ಹೇಳಿದರೂ ಸರ್ವಗತತ್ವಕ್ಕೆ ವಿರೋಧ ಬರುವುದಿಲ್ಲ.

ಶಂಕೆ - ಗ್ರಂಥಕಾರರು ವ್ಯತಿರೇಕವ್ಯಾಪ್ತಿಯನ್ನು ವಿಷ್ಣುವಿನಲ್ಲಿ ಅಂಗೀಕರಿಸದೆ ಜೀವನಹೇತುತ್ವವನ್ನು ಅಲ್ಲಗಳೆದಿದ್ದಾರೆ. ವಿಚಾರಮಾಡಿದರೆ ವ್ಯತಿರೇಕವ್ಯಾಪ್ತಿಯನ್ನು ಅಂಗೀಕರಿಸಿಯೂ ಕೂಡ ಜೀವನಹೇತುತ್ವವನ್ನು ವಿಷ್ಣುವಿನಲ್ಲಿ ನಿರಾಕರಿಸಬಹುದು. ಅದು ಹೀಗೆ -- ವಿಷ್ಣುವಿನಲ್ಲಿ ಅನ್ವಯವ್ಯತಿರೇಕವನ್ನು ಪ್ರತ್ಯಕ್ಷದಿಂದ ಹೇಳುತ್ತೀರೋ ಅಥವಾ ಆಗಮದಿಂದ ಹೇಳುತ್ತೀರೋ? ಪ್ರಥಮಪಕ್ಷದಲ್ಲಿ ಸಾಕ್ಷಾತ್ತಾಗಿ ಅನ್ವಯವ್ಯತಿರೇಕಗಳು ವಿಷ್ಣುವಿನಲ್ಲಿ ಕಾಣಿಸುತ್ತಿವೆಯೆಂದೋ ಅಥವಾ ವಿಷ್ಣುವಿನ ಶರೀರದ ಮೂಲಕ ಕಾಣಿಸುತ್ತಿದೆಯೋ? ಮೊದಲನೆಯ ಪಕ್ಷ ತಪ್ಪು. ಭಗವಂತನು ಪ್ರಾಕೃತ ಇಂದ್ರಿಯಗಳಿಂದ ಗೋಚರಿಸದ

ಕಾರಣ ಸಾಕ್ಷಾತ್ತಾಗಿ ಅನ್ವಯವ್ಯತಿರೇಕವನ್ನು ವಿಷ್ಣುವಿನಲ್ಲಿ ತಿಳಿಯಲು ಸಾಧ್ಯವಿಲ್ಲ. ಇನ್ನು ಶರೀರದ ಮೂಲಕವಾಗಿ ಅನ್ವಯವ್ಯತಿರೇಕವನ್ನು ತಿಳಿಯಬೇಕು. ಆದರೆ ಶ್ರುತಿಗಳು ಹೇಳುವಂತೆ ಭಗವಂತನಿಗೆ ಶರೀರವೇ ಇಲ್ಲ. ಕೊನೆಯ ಪಕ್ಷವೂ ತಪ್ಪು. 'ತತ್ಪ್ರಾಣೇ ಪ್ರಪನ್ನೇ' ಎಂಬ ಶ್ರುತಿಯು ಮುಖ್ಯಪ್ರಾಣನಲ್ಲಿ ಅನ್ವಯವ್ಯತಿರೇಕವನ್ನು ಹೇಳುವಂತೆ ವಿಷ್ಣುವಿನಲ್ಲಿ ಅನ್ವಯವ್ಯತಿರೇಕವನ್ನು ಹೇಳುವ ಯಾವುದೇ ಶ್ರುತಿಗಳಿರುವುದಿಲ್ಲ. ಒಂದು ವೇಳೆ ಇದ್ದರೂ ಸಹ ಆ ಶ್ರುತಿಗಳನ್ನು ವಾಯುಪರವಾಗಿ ಅರ್ಥೈಸಬಹುದು. ಹೀಗೆ ಅನ್ವಯವ್ಯತಿರೇಕವನ್ನು ಒಪ್ಪಿಯೇ ಜೀವನಹೇತುತ್ವವನ್ನು ವಿಷ್ಣುವಿನಲ್ಲಿ ನಿರಾಕರಿಸಲು ಬರುವಾಗ ವ್ಯತಿರೇಕವ್ಯಾಪ್ತಿಯನ್ನು ನಿರಾಕರಣೆ ಮಾಡಿದ್ದು ಅನಾವಶ್ಯಕವಲ್ಲವೇ?

ಸಮಾಧಾನ - ಹೌದು. ವ್ಯತಿರೇಕವ್ಯಾಪ್ತಿಯನ್ನು ಅಂಗೀಕರಿಸಿಯೂ ಜೀವನಹೇತುತ್ವವನ್ನು ನಿರಾಕರಿಸಬಹುದು. ಆದರೂ ಕೂಡ ವ್ಯತಿರೇಕವ್ಯಾಪ್ತಿಯಿಲ್ಲವೆಂದು ಹೇಳಿದಾಗ ವಿಷಯವು ಸ್ಪಷ್ಟವಾಗಿ ತಿಳಿಯುತ್ತದೆ. ಮತ್ತು ವ್ಯತಿರೇಕವ್ಯಾಪ್ತಿಯಿಂದ ತಿಳಿಯದಿದ್ದರೂ ಶ್ರುತಿಯಿಂದ ಜೀವನಹೇತುತ್ವವನ್ನು ಸಾಧಿಸಬಹುದಲ್ಲವೇ? ಎಂಬ ಶಂಕೆಯನ್ನು ಅವಶ್ಯವಾಗಿ ನಿರಾಕರಿಸಬೇಕಾಗಿದೆ. ಅದಕ್ಕೋಸ್ಕರ ವಾಸ್ತವವಿಚಾರವನ್ನು ಅನುಸರಿಸಿ ವ್ಯತಿರೇಕವ್ಯಾಪ್ತಿಯನ್ನು ನಿರಾಕರಿಸುವ ಮೂಲಕವಾಗಿ ಅನ್ವಯವ್ಯತಿ-ರೇಕದಿಂದ ಗಮ್ಯನಲ್ಲವೆಂದು ಗ್ರಂಥಕಾರರು ಹೇಳಿದ್ದು ಸಮಂಜಸವಾಗಿದೆ. ಇದರಿಂದ 'ಪ್ರಾಣಾದಿ-ಹೇತುತಾದೃಷ್ಟೇಃ' ಎಂಬ ಅನುವ್ಯಾಖ್ಯಾನವನ್ನು ವ್ಯಾಖ್ಯಾನಿಸಿದಂತಾಯಿತು. 'ಪರಮಾತ್ಮನಲ್ಲಿ ಅನ್ವಯ-ವ್ಯತಿರೇಕಗಳು ಕಾಣಿಸದಿರುವುದರಿಂದ' ಎಂಬ ಅಭಿಪ್ರಾಯದಿಂದ ಸುಧೆಯು ಅನುವ್ಯಾಖ್ಯಾನವನ್ನು ವ್ಯಾಖ್ಯಾನಿಸುತ್ತಿದೆ. ಅನುವ್ಯಾಖ್ಯಾನದಲ್ಲಿರುವ 'ಅದೃಷ್ಟೇಃ' ಎಂಬ ಪದಕ್ಕೆ ಅನ್ವಯವ್ಯತಿರೇಕದಿಂದ ಕಂಡಿಲ್ಲವೆಂದು ಒಂದು ಅರ್ಥ. ಮತ್ತೊಂದು ಅರ್ಥ ಆಗಮದಿಂದಲೂ ಕಂಡಿಲ್ಲವೆಂದು. ಅದನ್ನು 'ನಾಪಿ' ಇತ್ಯಾದಿ ಗ್ರಂಥದಿಂದ ವಿವರಿಸಿದ್ದಾರೆ.

'ಯೇನ ಜಾತಾನಿ ಜೀವಂತಿ' ಇತ್ಯಾದಿ ಶ್ರುತಿಗಳು ವಿಷ್ಣುವಿನಲ್ಲಿ ಜೀವನಹೇತುತ್ವವನ್ನು ಹೇಳು-ತ್ತಿರುವಂತೆ ಕಾಣುತ್ತದೆ. ಆದರೆ ಇಲ್ಲಿಯ ತನಕ ಸಮರ್ಥಿಸಿದ ಅನ್ವಯವ್ಯತಿರೇಕದ ಬಲದಿಂದ ಮುಖ್ಯವಾಯುವಿನಲ್ಲಿ ಆ ಶ್ರುತಿಗಳನ್ನು ಹೊಂದಿಸಬೇಕು. ಇಲ್ಲದಿದ್ದರೆ ಶ್ರುತಿಯಿಂದ ಹಾಗೂ ಪ್ರತ್ಯಕ್ಷದಿಂದ ಮುಖ್ಯಪ್ರಾಣನಲ್ಲಿ ಅನ್ವಯವ್ಯತಿರೇಕವನ್ನು ಸಾಧಿಸಿದಂತಾಗುವುದಿಲ್ಲ.

ಶಂಕೆ - 'ಯತೋ ವಾ' ಎಂಬ ಶ್ರುತಿಯನ್ನು ಸಾವಕಾಶವೆಂದು ಹೇಳಬಹುದು. ಆದರೆ ನಿರವಕಾಶ-ವಾದ ಅನೇಕ ಸ್ಮೃತಿಗಳನ್ನು ಸಾವಕಾಶವೆನ್ನಲಾಗದು.

> ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ ।
> ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ ॥

'ಪ್ರಾಣನಿಂದಾಗಲೀ ಅಥವಾ ಅಪಾನನಿಂದಾಗಲೀ ಮನುಷ್ಯನು ಜೀವಿಸುವುದಿಲ್ಲ; ಹೊರತಾಗಿ ಪ್ರಾಣ ಅಪಾನರು ಯಾವ ವಿಷ್ಣುವನ್ನು ಆಶ್ರಯಿಸಿದ್ದಾರೋ ಆ ವಿಷ್ಣುವಿನಿಂದಲೇ ಜೀವಿಸುತ್ತಾರೆ'

ಈ ಶ್ರುತಿಯು ಜೀವನಹೇತುತ್ವವನ್ನು ಮುಖ್ಯಪ್ರಾಣನಲ್ಲಿ ನಿರಾಕರಿಸಿ ವಿಷ್ಣುವಿನಲ್ಲಿ ಸಮರ್ಥಿಸುತ್ತಿದೆ. ಮುಖ್ಯಪ್ರಾಣನಲ್ಲಿ ಜೀವನಹೇತುತ್ವವನ್ನು ಹೇಳಿದರೆ ಈ ಸ್ಮೃತಿಯ ವಿರೋಧ ಬರುತ್ತದಲ್ಲವೇ?

ಸಮಾಧಾನ - ಇದೂ ಸಹ ಸಾವಕಾಶವಾಗಿದೆ. ಪ್ರಾಣ ಅಪಾನ ಮೊದಲಾದ ಜಡವಾಯುಗಳಿಂದ ಮನುಷ್ಯನು ಜೀವಿಸುವುದಿಲ್ಲ. ಜಡವಾಯುಗಳು ಯಾವ ಮುಖ್ಯಪ್ರಾಣನನ್ನು ಆಶ್ರಯಿಸಿವೆಯೋ ಆ ಮುಖ್ಯಪ್ರಾಣನಿಂದ ಜೀವಿಸುತ್ತಾನೆಂದು ಇದರ ಅರ್ಥ. ಆದ್ದರಿಂದ ಸಕಲಶ್ರುತಿಸ್ಮೃತಿಗಳೂ ಮತ್ತು ಪ್ರತ್ಯಕ್ಷಾದಿಗಳೂ ಮುಖ್ಯಪ್ರಾಣನೇ ಜೀವನಕಾರಣನೆಂದು ಹೇಳುತ್ತಿವೆ.

**गुरुराजीयम्** – टीकानुसारेण पूर्वपक्षमुक्त्वा सुधानुसारेण तमाह – **यद्वेति ॥ अतिप्रसङ्गादिति ॥** गृहादिरूपं यद्देवदत्तस्य गौणं शरीरं तदविनाभूतं यत्किञ्चित् तस्य देवदत्तकार्यत्वप्रसङ्गादित्यर्थः । जडवायुरपि प्राणस्य गौणं शरीरम् । अभिमन्यमानत्वात् । तथाच गौणशरीरान्वयव्यतिरेकाभ्यां वायोर्जीवनादिहेतुत्ववत् अत्रापि पृथिव्यादिरूपगौणशरीरान्वयव्यतिरेकाभ्यां ब्रह्मणोपि जीवनादिहेतुत्वं किं न स्यादिति चेन्मैवम् । अत्र शरीरशब्दस्य मुख्यावच्छेदकशरीरपरत्वात् । मुख्यस्य त्वभिमन्यमानशरीरावच्छेदेनापि सुखोत्पादनात् । न चैवं प्रकृते गौणपृथिव्यादिशरीरावच्छेदेन सुखं वक्तुं युक्तम् । जन्यसुखस्य ब्रह्मणः प्रमाणबाधितत्वादिति भावः । तर्हिभूमाधिकरणे वक्ष्यमाणमुत्क्रमणमयुक्तं स्यादित्यत आह – **भूमेति ॥**

## ಸಾರ

ಜಡವಾಯುವು ಮುಖ್ಯಪ್ರಾಣನ ಶರೀರ. ಜಡವಾಯುವಿದ್ದರೆ ನಮ್ಮ ಜೀವನ ಇಲ್ಲದಿದ್ದರೆ ಇಲ್ಲವೆಂಬ ಅನ್ವಯವ್ಯತಿರೇಕ ನಮಗೆಲ್ಲ ಸಿದ್ಧವಾಗಿದೆ. ಇದರಿಂದ ಮುಖ್ಯವಾಯುವು ಜೀವನಕಾರಣನೆಂದು ಹೇಳಿದಂತಾಗುತ್ತದೆ. ಕುಲಾಲನ ಶರೀರವಿದ್ದರೆ ಮಾತ್ರ ಘಟವು ಹುಟ್ಟುವುದನ್ನು, ಕುಲಾಲಶರೀರವಿಲ್ಲದಿದ್ದರೆ ಘಟ ಹುಟ್ಟದಿರುವುದನ್ನು ನಾವು ಕಂಡಿದ್ದೇವೆ. ಇದರಿಂದ ಕುಲಾಲಶರೀರದ ಒಳಗಿರುವ ಆತ್ಮನು ಘಟಕಾರಣನೆಂದು ಎಲ್ಲರೂ ಒಪ್ಪಿರುವ ವಿಚಾರ. ಅದರಂತೆ ಮುಖ್ಯಪ್ರಾಣನ ವಿಷಯದಲ್ಲಿಯೂ ತಿಳಿಯಬೇಕು.

ಆದರೆ ಬ್ರಹ್ಮನಲ್ಲಿ ಈ ಅನ್ವಯವ್ಯತಿರೇಕವನ್ನು ಹೇಳಲು ಸಾಧ್ಯವಿಲ್ಲ. ಹಾಗೆ ಹೇಳಬೇಕಾದರೆ ಮೊದಲು ಬ್ರಹ್ಮನಿಗೆ ಶರೀರವಿರಬೇಕು. ಮತ್ತು ನಮ್ಮ ದೇಹದಲ್ಲಿ ಬ್ರಹ್ಮನಿಲ್ಲವೆಂದು ಹೇಳಬೇಕು. ಆದರೆ ಶ್ರುತಿಗಳೇ ಹೇಳುವಂತೆ ಬ್ರಹ್ಮನಿಗೆ ಶರೀರವೇ ಇಲ್ಲ. ಅಂತರ್ಯಾಮ್ಯಧಿಕರಣದಲ್ಲಿ ವಿಷ್ಣುವಿಗೆ ಗೌಣಶರೀರವನ್ನು ಹೇಳಿದ್ದಾರೆ. ಆದರೆ ಗೌಣಶರೀರವು ಕಾರ್ಯತ್ವಕ್ಕೆ ಸಾಧಕವಾಗುವುದಿಲ್ಲ. ಮತ್ತು ಬ್ರಹ್ಮನು ಸರ್ವಗತನಾಗಿದ್ದಾನೆ. ಭೂಮಾಧಿಕರಣದಲ್ಲಿ ನಮ್ಮ ಶರೀರದಿಂದ ಬ್ರಹ್ಮನು ಉತ್ಕ್ರಮಣನಾಗುತ್ತಾನೆಂದು ಹೇಳಿದ್ದರೂ ಮತ್ತೊಂದು ರೂಪದಿಂದ ನಮ್ಮ ಶರೀರದಲ್ಲಿಯೇ ಇರುತ್ತಾನೆಂದು ಹೇಳಿದ್ದಾರೆ. ಆದ್ದರಿಂದ ವ್ಯತಿರೇಕವ್ಯಾಪ್ತಿಯನ್ನು ವಿಷ್ಣುವಿನಲ್ಲಿ ಹೇಳುವುದು ಕಷ್ಟ. ಇನ್ನು ಶ್ರುತಿಯಿಂದ ಬ್ರಹ್ಮನು ಜೀವನಕಾರಣನಾಗಿದ್ದಾನೆಂದು ಹೇಳಬೇಕು. ಆದರೆ ಆ ಶ್ರುತಿಗಳನ್ನೆಲ್ಲಾ ಮುಖ್ಯಪ್ರಾಣನಲ್ಲಿಯೇ ಸಮನ್ವಯ ಮಾಡಲು ಬರುತ್ತದೆ. ಆದ್ದರಿಂದ ಮುಖ್ಯಪ್ರಾಣನೇ ಜೀವನಕಾರಣನಾಗುತ್ತಾನೆ. ವಿಷ್ಣುವಲ್ಲವೆಂದು ಪೂರ್ವಪಕ್ಷ.

## ಪೂರ್ವಪಕ್ಷವಿಷಯದಲ್ಲಿ ಸ್ವಯೂಥ್ಯರ ನಿರಾಕರಣೆ

**तात्पर्यचन्द्रिका –**

**केचित्तु "अन्वयव्यतिरेकाभ्यां हि हेतुता कल्प्या" इति सुधायाः प्रातीतिकार्थं गृहीत्वा हेतुताया अन्वयव्यतिरेकमात्रगम्यत्वान्न श्रुतिस्तत्र प्रमाणमिति पूर्वपक्ष्यभिप्राय इत्याहुः । तन्न, यागादेः स्वर्गादौ अहेतुत्वापातात् ।**

ಅನುವಾದ - ನಮಲ್ಲೇ ಕೆಲವು ವಿದ್ವಾಂಸರ ಅಭಿಪ್ರಾಯ -- 'ಅನ್ವಯವ್ಯತಿರೇಕಾಭ್ಯಾಂ ಹಿ ಹೇತುತಾ ಕಲ್ಪ್ಯಾ' (ಹೇತುತ್ವವನ್ನು ಅನ್ವಯವ್ಯತಿರೇಕಗಳಿಂದಷ್ಟೇ ಹೇಳಬೇಕು) ಎಂಬ ಸುಧೆಯ ಮಾತನ್ನು ಮೇಲ್ನೋಟಕ್ಕೆ ಹೀಗೆ ವ್ಯಾಖ್ಯಾನಿಸುತ್ತಾರೆ - ಜೀವನಹೇತುತ್ವವು ಹೇತುರೂಪವಾಗಿರು-ವುದರಿಂದ ಅನ್ವಯವ್ಯತಿರೇಕಗಳಿಂದಷ್ಟೇ ತಿಳಿಯಲು ಸಾಧ್ಯ, ಹೊರತು ಜೀವನಹೇತುತ್ವವಿಷಯ-ದಲ್ಲಿ ಶ್ರುತಿಯು ಪ್ರಮಾಣವಾಗುವುದಿಲ್ಲವೆಂದು ಪೂರ್ವಪಕ್ಷಿಗಳ ಅಭಿಪ್ರಾಯವೆಂದು ಇವರ ವಾದ.

ಇದು ತಪ್ಪು. ಹೇತುತ್ವವು ಅನ್ವಯವ್ಯತಿರೇಕದಿಂದಷ್ಟೇ ತಿಳಿಯುವುದಾದರೆ ಯಾಗಾದಿಗಳಿಗೆ ಸ್ವರ್ಗಹೇತುತ್ವವು ಸಿದ್ಧವಾಗದಿರಬೇಕಾದೀತು.

ಕಠಿಣಪದಾರ್ಥ

ಕೇಚಿತ್ತು = ಸ್ವಯೂಥ್ಯರು; ಅನ್ವಯವ್ಯತಿರೇಕಮಾತ್ರಗಮ್ಯತ್ವಾತ್ = ಪ್ರತ್ಯಕ್ಷಸಿದ್ಧವಾದ ಅನ್ವಯವ್ಯತಿರೇಕದಿಂದಷ್ಟೇ ತಿಳಿಯುವುದರಿಂದ, ತತ್ರ = ಅನ್ವಯವ್ಯತಿರೇಕಮೂಲಕವಾದ ಹೇತುತ್ವದಲ್ಲಿ.

**प्रकाशः** – ननु 'नापि श्रुतिसिद्धं' इत्याशङ्कानिरासावयुक्तौ, **"अन्वयव्यतिरेकाभ्यां हि हेतुता कल्प्या । नच परमात्मनः प्राणशब्दप्रवृत्तिनिमित्तजीवनादिहेतुतावगमकान्वयव्यतिरेकौ पश्यामः"** इति सुधाविरोधात् । तत्रान्वयव्यतिरेककल्प्यताया एव हेतुत्वस्य प्रतीतेरित्युत्तानदृशां भ्रममनूद्य निरस्यति – **केचित्त्विति** ॥ **अन्वयव्यतिरेकमात्रेति** ॥ प्रत्यक्षसिद्धान्वयव्यतिरेकेत्यर्थः ॥ **तत्रेति** ॥ अन्वयव्यतिरेकद्वारकहेतुतायाम् ॥ **यागादेरिति** ॥ तत्र प्रत्यक्षसिद्धान्वयव्यतिरेकयोरप्रसरादिति भावः । एतेन **'नच पश्यामः'** इति सुधागतस्यागमेन न पश्यामः **"येन जीवन्ति"** इत्यादेरपि मुख्यविषयत्वादित्यपि तात्पर्यमुक्तं भवति । एतेन **"अन्वयव्यतिरेकप्रमाणकत्वाद्धेतुहेतुमद्भावस्य'** इति न्यायविवरणटीकाऽपि काचित्कत्वाशयेति दर्शितम् ।

ಪರಿಪೂರ್ಣಚಂದ್ರಿಕಾ

ವಿವರಣೆ - ಈ ಹಿಂದೆ ಗ್ರಂಥಕಾರರು ಜೀವನಹೇತುತ್ವವು ವಿಷ್ಣುವಿನಲ್ಲಿ ಇದೆ ಎನ್ನಲು ಅನ್ವಯವ್ಯತಿರೇಕವಾಗಲೀ, ಶ್ರುತಿಯಾಗಲೀ ಪ್ರಮಾಣವಾಗಿಲ್ಲವೆಂದು ಪ್ರತಿಪಾದಿಸಿದರು. ಆದರೆ ಪೂರ್ವಪಕ್ಷವಿಷಯದಲ್ಲಿ ನಮ್ಮಲ್ಲೇ ಕೆಲವು ವಿದ್ವಾಂಸರು ಸ್ವಲ್ಪವ್ಯತ್ಯಾಸ ಮಾಡಿದ್ದಾರೆ. ಅಂದರೆ ಜೀವನಹೇತುತ್ವವು ಶ್ರುತಿಸಿದ್ಧವೆಂಬ ಶಂಕೆಯನ್ನಾಗಲೀ, ನಿರಾಕರಣೆಯನ್ನಾಗಲೀ ಮಾಡುವುದು ತಪ್ಪು. ಹಾಗೆ ಮಾಡಿದರೆ 'ಅನ್ವಯವ್ಯತಿರೇಕಾಭ್ಯಾಂ ಹಿ ಹೇತುತಾ ಕಲ್ಪ್ಯಾ । ನ ಚ ಪರಮಾತ್ಮನಃ ಪ್ರಾಣಶಬ್ದ-ಪ್ರವೃತ್ತಿನಿಮಿತ್ತಜೀವನಾದಿಹೇತುತಾವಗಮಕಾನ್ವಯವ್ಯತಿರೇಕೌ ಪಶ್ಯಾಮಃ ॥' (ಹೇತುತ್ವವನ್ನು ಅನ್ವಯ-ವ್ಯತಿರೇಕಗಳಿಂದಷ್ಟೇ ಕಲ್ಪಿಸಬೇಕು. ಪ್ರಾಣಶಬ್ದದ ಪ್ರವೃತ್ತಿನಿಮಿತ್ತವಾದ ಜೀವನಹೇತುತ್ವವನ್ನು ಪರಮಾತ್ಮ-ನಲ್ಲಿ ಅನ್ವಯವ್ಯತಿರೇಕಗಳಿಂದ ಕಾಣಲು ಸಾಧ್ಯವಿಲ್ಲ.) ಎಂಬ ಸುಧಾವಾಕ್ಯಕ್ಕೆ ವಿರೋಧ ಬರುತ್ತದೆ. ಏಕೆಂದರೆ ಹೇತುತ್ವವು ಕೇವಲ ಅನ್ವಯವ್ಯತಿರೇಕಗಳಿಂದಷ್ಟೇ ಹೇಳಬೇಕು. ಆದರೆ ನೀವು ಶ್ರುತಿಯಿಂದ ಜೀವನಹೇತುತ್ವವನ್ನು ನಿರಾಕರಿಸುತ್ತಿದ್ದೀರಿ. ಇದು ಹೇಗೆ ಸರಿ? ಎಂದು ಇವರ ಅಭಿಪ್ರಾಯ. ಆದರೆ ಆಳಕ್ಕಿಳಿಯದೇ ಮೇಲ್ನೋಟದ ವಿದ್ವತ್ತಿನಿಂದ ಇವರು ಗ್ರಂಥಕ್ಕೆ ವ್ಯಾಖ್ಯಾನಿಸುತ್ತಾರೆ ಹೊರತು ನಿಜವಾದ ಸುಧೆಯ ಅರ್ಥವನ್ನು ಹೇಳಲು ಇವರು ಅಸಮರ್ಥರು. ಇಂತಹ ಕೆಲವು ಮಾಧ್ವ- ವಿದ್ವಾಂಸರನ್ನು ಪ್ರಕೃತದಲ್ಲಿ ಗ್ರಂಥಕಾರರು ನಿರಾಕರಿಸುತ್ತಿದ್ದಾರೆ. ಯಾಗದಲ್ಲಿ ಸ್ವರ್ಗಹೇತುತ್ವವು ಅನುಭವಸಿದ್ಧವಾಗಿದೆ. ಅನ್ವಯವ್ಯತಿರೇಕಗಳಿಂದಷ್ಟೇ ಹೇತುತ್ವವನ್ನು ನಿರ್ಣಯಿಸುವುದಾದರೆ ಯಾಗದಲ್ಲಿ ಸ್ವರ್ಗಹೇತುತ್ವವನ್ನು ಹೇಳಲು ಹೇಗೆ ಸಾಧ್ಯ ? 'ಯಾಗವಿದ್ದರೆ ಸ್ವರ್ಗ; ಇಲ್ಲದಿದ್ದರೆ ಇಲ್ಲ'ವೆಂಬ ಅನ್ವಯವ್ಯತಿರೇಕವನ್ನು ಪ್ರತ್ಯಕ್ಷದಿಂದ ಯಾಗಕ್ಕೂ ಸ್ವರ್ಗಕ್ಕೂ ಕಾರ್ಯಕಾರಣಭಾವವನ್ನು ಯಾರಿಂದಲೂ ನಿರ್ಣಯಿಸಲಾಗದು.

ಹೀಗೆ ಹೇಳಿದ್ದರಿಂದ ಸುಧೆಯಲ್ಲಿರುವ 'ನ ಚ ಪಶ್ಯಾಮಃ' ಎಂಬ ಮಾತಿಗೆ ''ಅನ್ವಯ-ವ್ಯತಿರೇಕದಿಂದಾಗಲೀ, ಅಥವಾ ಶ್ರುತಿಯಿಂದಾಗಲೀ ಜೀವನಹೇತುತ್ವವನ್ನು ಸಾಧಿಸಲಾಗದು. ಏಕೆಂದರೆ 'ಯೇನ ಜಾತಾನಿ ಜೀವಂತಿ' ಇತ್ಯಾದಿ ಶ್ರುತಿಗಳೆಲ್ಲವೂ ಮುಖ್ಯಪ್ರಾಣನನ್ನೇ ಹೇಳುತ್ತವೆ'' ಎಂದು ವ್ಯಾಖ್ಯಾನಿಸಿದಂತಾಯಿತು. ಅಷ್ಟೇ ಅಲ್ಲದೆ ನ್ಯಾಯವಿವರಣದ 'ಅನ್ವಯವ್ಯತಿರೇಕಪ್ರಮಾಣಕತ್ವಾದ್ ಹೇತುಹೇತುಮದ್ಭಾವಸ್ಯ' ಎಂಬ ಟೀಕೆಯನ್ನು 'ದಂಡ,ಘಟಾದಿ ಕೆಲವು ಸ್ಥಳಗಳಲ್ಲಿ ಮಾತ್ರ ಹೊರತು ಎಲ್ಲೆಡೆ ಹೇಳಬಾರದು' ಎಂದು ವ್ಯಾಖ್ಯಾನಿಸಿದಂತಾಯಿತು.

## ಸಾರ

ಹೇತುರೂಪವಾದ ಜೀವನಹೇತುತ್ವವನ್ನು ಅನ್ವಯವ್ಯತಿರೇಕಗಳಿಂದಷ್ಟೇ ತಿಳಿಯಬಹುದು; ಶ್ರುತಿಯಿಂದ ತಿಳಿಯಲು ಸಾಧ್ಯವೇ ಇಲ್ಲ. ಹೀಗಿರುವಾಗ ಶ್ರುತಿಪ್ರಮಾಣದ ಉಲ್ಲೇಖ ಮತ್ತು ನಿರಾಕರಣೆಗಳು ಅಸಂಗತವೆಂದು ಕೆಲವರ ವಾದ.

ಇದು ತಪ್ಪು. ಹಾಗಾದರೆ ಯಾಗವು ಸ್ವರ್ಗಕ್ಕೆ ಹೇತುವೆಂದು ಹೇಳಬೇಕಾದರೆ ಅನ್ವಯವ್ಯತಿರೇಕವನ್ನೇ ಹೇಳಬೇಕೆಂದಂತಾಯಿತು. ಆದರೆ ಸ್ವರ್ಗಯಾಗಗಳ ಕಾರ್ಯಕಾರಣಭಾವದಲ್ಲಿ ಅನ್ವಯವ್ಯತಿರೇಕವು ಪ್ರತ್ಯಕ್ಷಸಿದ್ಧವಾಗಿಲ್ಲ.

## ಜೀವನಕಾರಣನಾದ ಮುಖ್ಯಪ್ರಾಣನೇ ಆನಂದಮಯ

### तात्पर्यचन्द्रिका

**अन्ये तु – व्यतिरेकगर्भिताया हेतुतायास्तद्रहिते परमात्मनि अयोगान्न तस्य जीवनहेतुता श्रुत्याऽपि बोधयितुं शक्येति तदभिप्राय इत्याहुः ।**

**तदपि न, नित्यविभूनामहेतुत्वापत्तेः । तस्माज्जीवनादिहेतुत्वं न ब्रह्मगतम् । नाप्यन्यगतं तदधीनम्, जन्मादिसूत्रोक्तस्थितिहेतुताया असम्भवादिप्रसङ्गात् । तस्मान्मुख्यवायुरेव प्राण इति स एवानन्दमयः, तस्यान्तरधिकरणे पूर्वपक्षितेन्द्रादिवदानन्दवल्ल्यामानन्दमयात् भेदव्यपदेशाभावेन, आकाशाधिकरणे पूर्वपक्षिताकाशवच्च जडत्वाभावेन स्वत एवानन्दमयत्वसम्भवात् । तस्मात् ''अन्वयव्यतिरेकतः'' इत्यनुव्याख्यानोक्ताऽधिकाशङ्का युक्ता । इयञ्च प्रमेयाश्रिता ।**

ಅನುವಾದ - 'ವ್ಯತಿರೇಕವ್ಯಾಪ್ತಿಯಿಂದ ಗರ್ಭಿತವಾದ ಜೀವನಹೇತುತ್ವವನ್ನು ಪರಮಾತ್ಮನಲ್ಲಿ ಹೇಳುವುದು ಕಷ್ಟ. ಆದ್ದರಿಂದ ಶ್ರುತಿಯಿಂದಲೂ ಸಹ ಪರಮಾತ್ಮನಲ್ಲಿ ಜೀವನಹೇತುತ್ವವನ್ನು ಹೇಳಲು ಸಾಧ್ಯವಿಲ್ಲ' ಎಂದು ಸ್ವಯೂಥ್ಯರಲ್ಲಿ ಇನ್ನು ಕೆಲವರ ಅಭಿಪ್ರಾಯ.

ಇದೂ ಸಹ ತಪ್ಪು. ಹಾಗಾದರೆ ಎಲ್ಲೆಡೆ ವ್ಯಾಪ್ತವಾದ ಪ್ರಕೃತ್ಯಾದಿಗಳಿಗೆ ಕಾರಣತ್ವವನ್ನೇ ಹೇಳದಿರಬೇಕಾದೀತು. ಆದ್ದರಿಂದ ಜೀವನಾದಿಹೇತುತ್ವವು ಬ್ರಹ್ಮನಲ್ಲಿ ಬರುವುದಿಲ್ಲ. ಅಷ್ಟೇ ಅಲ್ಲದೆ ಮುಖ್ಯಪ್ರಾಣನಲ್ಲಿರುವ ಜೀವನಹೇತುತ್ವವು ವಿಷ್ಣುವಿನ ಅಧೀನವೆಂದು ಹೇಳಬಾರದು. ಹಾಗಾದಲ್ಲಿ ಜನ್ಮಾದಿಸೂತ್ರದಲ್ಲಿ ಸಮರ್ಥಿಸಿದ ಸ್ಥಿತಿಹೇತುತ್ವಕ್ಕೆ (ಜೀವನಹೇತುತ್ವಕ್ಕೆ) ವಿಷ್ಣುವಿನಲ್ಲಿ ಅಸಂಭವದೋಷವು ಮುಖ್ಯಪ್ರಾಣನಲ್ಲಿ ಅತಿವ್ಯಾಪ್ತಿದೋಷವು ಬರಬೇಕಾದೀತು. ಹಾಗಾಗಿ ಪ್ರಾಣಶಬ್ದದಿಂದ ಮುಖ್ಯವಾಯುವೇ ವಾಚ್ಯನಾಗುತ್ತಾನೆ. ಆನಂದಮಯನೂ ಕೂಡ ಮುಖ್ಯವಾಯುವೇ ಆಗಬೇಕು. ಏಕೆಂದರೆ, ಹಿಂದಿನ ಅಂತರಧಿಕರಣದ ಪೂರ್ವಪಕ್ಷಕ್ಕೆ ವಿಷಯವಾದ ಇಂದ್ರಾದಿಗಳಿಗೆ ಆನಂದಮಯತ್ವವನ್ನು ನಿರಾಕರಿಸಲಾಗಿತ್ತು. ಅದರಂತೆ ಪ್ರಾಣನಿಗೆ ಆನಂದಮಯನಿಂದ ಭೇದವನ್ನು ಆನಂದವಲ್ಲಿಯಲ್ಲಿ ಹೇಳಿಲ್ಲ. ಆದಕಾರಣ ಪ್ರಾಣನು ಆನಂದಮಯನಾಗಬಹುದು. ಮತ್ತು ಆಕಾಶಾಧಿಕರಣದ ಪೂರ್ವಪಕ್ಷಕ್ಕೆ ವಿಷಯವಾದ ಆಕಾಶವು ಜಡವಾದ್ದರಿಂದ ಆನಂದಮಯವಲ್ಲವೆಂದು ಹೇಳಲಾಗಿತ್ತು. ಆದರೆ ಇಲ್ಲಿ ಪ್ರಾಣನು ಚೇತನನಾದ್ದರಿಂದ ಆನಂದಮಯನಾಗಬಹುದು. ಈ ಎಲ್ಲಕಾರಣದಿಂದ 'ಅನ್ವಯವ್ಯತಿರೇಕತಃ' ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದ ಅಧಿಕಾಶಂಕೆಯು ಅತ್ಯಂತ ಸಮಂಜಸವಾಗಿದೆ. ಇಷ್ಟು ಪ್ರಮೇಯಾಶ್ರಿತ ಪೂರ್ವಪಕ್ಷ.

ಕಠಿಣಪದಾರ್ಥ

ಅನ್ಯೇ ತು = ಮಾಧ್ವರಲ್ಲಿ ಕೆಲವು ವಿದ್ವಾಂಸರು, ತದ್ರಹಿತೇ = ವ್ಯತಿರೇಕಕ್ಕೆ ಆಶ್ರಯನಾಗದ, ತಸ್ಯ = ಪರಮಾತ್ಮನಿಗೆ, ತದಭಿಪ್ರಾಯಃ = ಅನುವ್ಯಾಖ್ಯಾನದ ಅಭಿಪ್ರಾಯ, ನಿತ್ಯವಿಭೂನಾಂ = ಪ್ರಕೃತ್ಯಾದಿಗಳಿಗೆ, ಅನ್ಯಗತಮ್ = ಮುಖ್ಯಪ್ರಾಣನಲ್ಲಿರುವ ಜೀವನಹೇತುತ್ವವು, ನಾಪಿ ತದಧೀನಂ = ಭಗವದಧೀನವಲ್ಲ, ಸ್ಥಿತಿಹೇತುತಾಯಾಃ = ಜೀವನಹೇತುತ್ವಲಕ್ಷಣಕ್ಕೆ, ತಸ್ಯ = ಪ್ರಾಣನಿಗೆ, ಇಂದ್ರಾದಿವತ್ = ಇಂದ್ರಾದಿಗಳಂತೆ, ಭೇದವ್ಯಪದೇಶಾಭಾವೇನ = ಭೇದವ್ಯಪದೇಶಾಚ್ಚ ಎಂಬ ಸೂತ್ರದಲ್ಲಿ ಹೇಳಿದ ಭೇದವಿಲ್ಲದ ಕಾರಣ, ಇಯಂಚ = ಅನುವ್ಯಾಖ್ಯಾನದಲ್ಲಿ ಹೇಳಿದ ಪ್ರಾಣಪದದ ಪ್ರವೃತ್ತಿನಿಮಿತ್ತವನ್ನು ಆಶ್ರಯಿಸಿದ ಪೂರ್ವಪಕ್ಷವು.

**प्रकाशः** – नन्वस्त्वीश्वरहेतुत्वे श्रुतिप्रमाणशङ्का, तन्निरासस्तु न मुख्यप्राण-विषयत्वमुपेत्य, किं त्वन्यथैवेति भ्रममनूद्य निरस्यति – **अन्ये त्विति** ॥ **तद्रहित इति** ॥ नित्यविभुत्वाद्देशतः कालतो वा स नास्तीति भावः । 'नित्यविभूनां' प्रकृत्यादीनाम् । ''प्राणशब्दप्रवृत्तिनिमित्तस्य वायावेव'' इति टीकास्थावधारणस्य स्वातन्त्र्यरूपस्यापि न विष्णावित्यर्थान्तरमप्युपेत्याह – **नापीति** ॥ स्वातन्त्र्यस्यापि शब्दप्रवृत्तिहेतुत्वेन प्राणो विष्णुस्स्यात् इति शङ्काभिप्रायः ॥ **असम्भवादीति** ॥ भगवति जीवनरूपस्थितिहेतुत्वस्याभावेनान्यत्र भावेन चासम्भवातिव्याप्ती स्यातामिति भावः ।

टीकोक्तमानन्दमयाक्षेपमनूद्य समर्थयते – **स एवेति** ॥ 'महाभोगः' इत्यानन्द-मयत्वेनोक्तस्य प्राणस्य मुख्यत्वात् प्रागुक्तानन्दमयोऽपि स एव स्यादित्यर्थः । 'इन्द्रादिवत्' इन्द्रादेरिव ॥ **भेदव्यपदेशेति** ॥ ''भेदव्यपदेशाच्च'' इति सूत्रभाष्योक्त-दिशेति भावः । ''प्राणशब्दप्रवृत्ति'' इत्यादिटीकाया मूलं दर्शयन्नुपसंहरति – **तस्मादिति** ॥ **इयञ्चेति** ॥ अनुव्याख्यानोक्ता प्राणपदप्रवृत्तिनिमित्ताश्रितेत्यर्थः ।

ವಿವರಣೆ - ಭಗವಂತನು ಜೀವನಕ್ಕೆ ಕಾರಣನಾಗಿದ್ದಾನೆ ಎಂಬ ವಿಷಯದಲ್ಲಿ ಗ್ರಂಥಕಾರರು ಮಾಡಿದ ಶ್ರುತಿಪ್ರಮಾಣವನ್ನು ಉಲ್ಲೇಖಿಸಿದ್ದು ತಪ್ಪಲ್ಲ. ಆದರೆ ನಿರಾಕರಣೆಯಲ್ಲಿ ಸ್ವಲ್ಪವ್ಯತ್ಯಾಸ ಮಾಡಬೇಕು. ಗ್ರಂಥಕಾರರು ಶ್ರುತಿಪ್ರಮಾಣವನ್ನು ವಿಷ್ಣುವಿನಲ್ಲಿ ನಿರಾಕರಿಸುವಾಗ ಶ್ರುತಿಯು ಮುಖ್ಯಪ್ರಾಣ-ವಿಷಯಕವಾಗಿದೆ ಎಂದು ಹೇಳಿದರು. ಹೀಗೆ ಹೇಳುವುದಕ್ಕಿಂತ ವ್ಯತಿರೇಕವ್ಯಾಪ್ತಿಯಿಂದ ಗರ್ಭಿತವಾದ ಹೇತುತ್ವವು ಪರಮಾತ್ಮನಲ್ಲಿ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಜೀವನಹೇತುತ್ವವಿಷಯದಲ್ಲಿ ಶ್ರುತಿಯು ಪ್ರಮಾಣವಲ್ಲ ಎಂದು ಹೇಳುವುದು ಹೆಚ್ಚು ಸ್ವರಸವಲ್ಲವೇ ! ಎಂದು ಮತ್ತೆ ಕೆಲವು ವಿದ್ವಾಂಸರ ವಾದ.

ಆದರೆ ಇವರ ವಾದವೂ ಕೂಡ ಭ್ರಾಂತಿಮೂಲಕವಾಗಿದೆ. ಸರ್ವತ್ರವ್ಯಾಪ್ತನಾದ ಭಗವಂತನಲ್ಲಿ ವ್ಯತಿರೇಕವನ್ನು ಹೇಳಲಾಗದ ಕಾರಣ ಕಾರಣತ್ವವು ತೀರ್ಮಾನವಾಗುವುದಿಲ್ಲವೆನ್ನುವುದಾದರೆ ನಿತ್ಯವಿಭು ಪದಾರ್ಥಗಳಾದ ಪ್ರಕೃತ್ಯಾದಿಗಳಿಗೂ ಕಾರಣತ್ವವನ್ನು ಹೇಳದಿರಬೇಕಾದೀತು. ಆದರೆ ಅನೇಕಶ್ರುತಿಗಳು ಪ್ರಕೃತ್ಯಾದಿಗಳಿಗೆ ಕಾರಣತ್ವವನ್ನು ಹೇಳುತ್ತಿವೆ.

'ಪ್ರಾಣಶಬ್ದಪ್ರವೃತ್ತಿನಿಮಿತ್ತಸ್ಯ ವಾಯಾವೇವ' (ಪ್ರಾಣಶಬ್ದದ ಪ್ರವೃತ್ತಿನಿಮಿತ್ತವು ಮುಖ್ಯಪ್ರಾಣನಲ್ಲಷ್ಟೇ ಬರುತ್ತದೆ) ಎಂಬ ಟೀಕೆಯಲ್ಲಿರುವ 'ಏವ'ಕಾರವು ಸ್ವಾತಂತ್ರ್ಯರೂಪವಾದ ಪ್ರವೃತ್ತಿನಿಮಿತ್ತವೂ ಕೂಡ ವಿಷ್ಣುವಿನಲ್ಲಿ ಬರುವುದಿಲ್ಲ ಎಂದು ಹೇಳುತ್ತಿದೆ. ಅಂದರೆ ಜೀವನಹೇತುತ್ವವು ಮುಖ್ಯಪ್ರಾಣನಲ್ಲಿದ್ದರೂ ಕೂಡ ಅದರ ಸ್ವಾತಂತ್ರ್ಯ ಭಗವಂತನಲ್ಲಿರುವುದರಿಂದ ಅವನೇ ಪ್ರಾಣನಾಗುತ್ತಾನೆ ಎಂದು ಶಂಕೆಯ ಅಭಿಪ್ರಾಯ. ಇದನ್ನು ಗ್ರಂಥಕಾರರು 'ನಾಪಿ' ಇತ್ಯಾದಿ ವಾಕ್ಯದಿಂದ ನಿರಾಕರಿಸಿದ್ದಾರೆ. ಜೀವನಹೇತುತ್ವವು ಮುಖ್ಯಪ್ರಾಣನಲ್ಲಿಯೇ ಇದ್ದು, ಅದರ ಸ್ವಾತಂತ್ರ್ಯವಷ್ಟೇ ಭಗವಂತನಲ್ಲಿ ಇದೆ ಎಂದು ನೀವು ಶಂಕಿಸುತ್ತಿದ್ದೀರಿ. ಹಾಗಾದರೆ ಜನ್ಮಾಧಿಕರಣದಲ್ಲಿ ಸ್ಥಿತಿಹೇತುತ್ವವು (ಜೀವನಕಾರಣತ್ವವು) ಭಗವಂತನ ಲಕ್ಷಣವೆಂದು ಹೇಳಿದ್ದು ತಪ್ಪಾಯಿತು. ಏಕೆಂದರೆ ಈಗ ಆ ಜೀವನಕರ್ತೃತ್ವವನ್ನು ಪ್ರಾಣನಲ್ಲಿ ಹೇಳುತ್ತಿದ್ದೀರಿ. ಆದ್ದರಿಂದ ವಿಷ್ಣುವಿನ ಲಕ್ಷಣ ವಿಷ್ಣುವಿನಲ್ಲಿ ಬಾರದ ಕಾರಣ ಅಸಂಭವದೋಷವೂ, ಮುಖ್ಯಪ್ರಾಣನಲ್ಲಿ ಬರುವ ಕಾರಣ ಅತಿವ್ಯಾಪ್ತಿದೋಷವೂ ಬರುತ್ತದೆ. ಪ್ರಾಣನಲ್ಲಿ ಆನಂದಮಯತ್ವವನ್ನು ಕೂಡ ಸುಲಭವಾಗಿ ಹೇಳಬಹುದೆಂದು ಟೀಕೆಯಲ್ಲಿ ಹೇಳಿದ್ದಾರೆ. ಅದನ್ನು ''ಸ ಏವ'' ಎಂಬ ಗ್ರಂಥದಿಂದ ವ್ಯಾಖ್ಯಾನಿಸಿದ್ದಾರೆ. 'ಮಹಾಭೋಗ' ಎಂಬ ಶಬ್ದದಿಂದ ಆನಂದಮಯತ್ವೇನ ಹೇಳಲ್ಪಟ್ಟ ಪ್ರಾಣನು ಮುಖ್ಯವಾಯುವೇ ಆಗಿರುವುದರಿಂದ ಆನಂದಮಯಾಧಿಕರಣದಲ್ಲಿ ಹೇಳಿದ ಆನಂದಮಯನೂ ಕೂಡ ಮುಖ್ಯವಾಯುವೇ ಆಗುತ್ತಾನೆ. ''ಪ್ರಾಣಶಬ್ದಪ್ರವೃತ್ತಿ'' ಇತ್ಯಾದಿ ಟೀಕೆಗೆ ವ್ಯಾಖ್ಯೇಯವಾದ ಮೂಲವನ್ನು ತೋರಿಸುತ್ತಾ ''ತಸ್ಮಾತ್'' ಎಂದು ಉಪಸಂಹಾರಮಾಡುತ್ತಿದ್ದಾರೆ. ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಈ ಅಧಿಕಾಶಂಕೆಯು ಪ್ರಾಣಪದದ ಪ್ರವೃತ್ತಿನಿಮಿತ್ತವನ್ನು ಆಶ್ರಯಿಸಿ ಹೊರಟಿದೆ. ಇದು ಪ್ರಮೇಯಾಶ್ರಿತಪೂರ್ವಪಕ್ಷವೆಂದು ತಿಳಿಯಬೇಕು.

**गुरुराजीयम्** – ननु यतो वेत्यादिश्रुत्यैव ब्रह्मणो जीवनादिहेतुत्वमस्त्वित्यत आह – **नापीति ॥ असम्भवादिप्रसङ्गादिति ॥** जीवनादिहेतुत्वस्य ब्रह्मगतत्वाभावेनासम्भवः । जीवनादिहेतुत्वस्यान्यगतत्वेनातिव्याप्तिरित्यर्थः । ननु मुख्यप्राणस्यापि नानन्दमयत्वं युक्तम् । पूर्वत्र चात्रापि भेदव्यपदेशरूपबाधकसत्वादिति तत्राह – **तस्येति ॥**

## ಸಾರ

ಭಗವಂತನು ಜೀವನಕಾರಣನೆಂದು ಶ್ರುತಿಯಿಂದ ಸಾಧಿಸಲಾಗದು. ಯಾವುದೇ ಕಾರಣತ್ವವಾದರೂ ಕೂಡ ವ್ಯತಿರೇಕವ್ಯಾಪ್ತಿಯಿಂದ ಗರ್ಭಿತವಾಗಿರುತ್ತದೆ. ಆದರೆ ಎಲ್ಲೆಡೆ ವ್ಯಾಪ್ತನಾದ ಭಗವಂತನಲ್ಲಿ ವ್ಯತಿರೇಕ-

ವ್ಯಾಪ್ತಿಯನ್ನು ಹೇಗೆ ಹೇಳುತ್ತೀರಿ? ಎಂದು ಕೆಲವರ ಗೊಂದಲ. ಇವರ ಗೊಂದಲಕ್ಕೆ ಆಸ್ಪದವಿಲ್ಲ. ಹಾಗಾದರೆ ಎಲ್ಲೆಡೆ ವ್ಯಾಪ್ತವಾಗಿರುವ ಪ್ರಕೃತ್ಯಾದಿಗಳಿಗೆ ಕಾರಣತ್ವವೇ ಸಿದ್ಧವಾಗದಿರಬೇಕಾದೀತು!

ಅಂತೂ ಜೀವನಹೇತುತ್ವವನ್ನು ಬ್ರಹ್ಮನಲ್ಲಿ ಒಪ್ಪಲು ಸಾಧ್ಯವಿಲ್ಲ. ಮುಖ್ಯಪ್ರಾಣಾದಿಗಳಲ್ಲಿರುವ ಜೀವನಹೇತುತ್ವಕ್ಕೆ ಬ್ರಹ್ಮನು ನಿಯಾಮಕನೂ ಆಗಲು ಸಾಧ್ಯವಿಲ್ಲವೆಂದು ಒಪ್ಪುವುದು ಅನಿವಾರ್ಯ. ಹಾಗಾದಲ್ಲಿ ಜನ್ಮಾದಿಸೂತ್ರದಲ್ಲಿ ಸಾಧಿಸಿದ ಸ್ಥಿತಿಹೇತುತ್ವಲಕ್ಷಣಕ್ಕೆ ಅಸಂಭವ ಹಾಗೂ ಅತಿವ್ಯಾಪ್ತಿದೋಷಗಳು ಬರುತ್ತವೆ. ಆದ್ದರಿಂದ ಜೀವನಕಾರಣನೆಂದು ನಿರ್ಣೀತನಾದ ಮುಖ್ಯಪ್ರಾಣನೇ ಆನಂದಮಯನಾಗಬೇಕು. ಆನಂದಮಯನಿಂದ ಮುಖ್ಯಪ್ರಾಣನಲ್ಲಿ ಭೇದವೂ ಕೇಳಿಸುತ್ತಿಲ್ಲ ಮತ್ತು ಚೇತನನೂ ಆಗಿರುವುದರಿಂದ ಮುಖ್ಯಪ್ರಾಣನೇ ಪ್ರಾಣಶಬ್ದದಿಂದ ವಾಚ್ಯನಾಗುತ್ತಾನೆ ಮತ್ತು ಆನಂದಮಯನಾಗುತ್ತಾನೆಂಬುದು ಪ್ರಮೇಯಾಶ್ರಿತಪೂರ್ವಪಕ್ಷ.

## ನಾಲ್ಕುಬಗೆಯ ಪ್ರಮಾಣಾಶ್ರಿತ ಪೂರ್ವಪಕ್ಷಗಳು

**तात्पर्यचन्द्रिका –**

**प्रमाणाश्रिता तु – पूर्वत्राकाशश्रुतेरिव इह न श्रुतेरावृत्तिमात्रम्, किन्तु "त्वं प्राणः" देवान् प्राणयः" "मातरिश्वा" इति श्रुतिबहुत्वमस्तीति निरवकाशेनापि न बाध इत्येका । इयञ्च भाष्ये बहुश्रुतियुक्तविषयवाक्योदाहरणात् सूचिता ।**

**अन्या तु – यदि प्राणशब्दस्य योगेन विष्णुपरता, तर्हि लक्ष्म्यादिशब्दानामपि योगेन प्राणभार्यापरत्वसम्भवात् लक्ष्मीपतित्वादिलिङ्गस्यैवासिद्धिः । अथ लक्ष्म्यादिशब्देषु न प्रसिद्धार्थत्यागः, तर्हि प्राणशब्देऽपि तथा । इयञ्च "प्रसिद्धेर्वायुः" इति भाष्ये सूचिता । इयं यद्यपि आकाशादिशब्दसाधारणी, आकाशश्रुतेः प्रसिद्धार्थहानौ अनन्तत्वादिलिङ्गानामपि तद्धानिस्स्यात् इति शङ्कोदयात् । तथाऽपि पूर्वाधिकरणे अनुद्धृतेत्यधिकाशङ्का ।**

**अपरा तु – मुख्यवायौ मुख्यप्राणत्वप्रसिद्धेः "मुखे मुख्यः प्रकीर्तितः" इति वचनाच्च प्राणशब्दस्य परमात्मनि मुख्यत्वायोगात् मुख्यसम्भवे चामुख्यग्रहणायोगात् नात्र प्राणशब्दः परमात्मपरः। आकाशशब्दस्य तु भूते मुख्यत्वेन प्रमाणमस्तीति । इयञ्च टीकायां मुख्यपदप्रयोगादिना सूचिता ।**

**इतरातु पूर्ववन्निरवकाशब्रह्मलिङ्गाभावान्न ब्रह्मपरतेति ।**

ಅನುವಾದ - ಪ್ರಮಾಣಾಶ್ರಿತಪೂರ್ವಪಕ್ಷ ಹೀಗಿದೆ - ಹಿಂದಿನ ಅಧಿಕರಣದಲ್ಲಿ ಆಕಾಶಶ್ರುತಿಯಲ್ಲಿ ಆವೃತ್ತಿಯನ್ನು ಹೇಳಲಾಗಿತ್ತು. ಅದರಂತೆ ಇಲ್ಲಿಯೂ ಪ್ರಾಣಶ್ರುತಿಯ ಆವೃತ್ತಿ ಇದೆ. ಅಷ್ಟೇ ಅಲ್ಲ

'ತ್ವಂ ಪ್ರಾಣಃ ದೇವಾನ್ ಪ್ರಾಣಯಃ ಮಾತರಿಶ್ವಾ' ಎಂದು ಪ್ರಾಣ, ಮಾತರಿಶ್ವಾ ಇತ್ಯಾದಿಯಾಗಿ ಶ್ರುತಿಯಲ್ಲಿ ಬಹುತ್ವವೂ ಇದೆ. ಇಂತಹ ಶ್ರುತಿಬಹುತ್ವವನ್ನು ಲಿಂಗವು ನಿರವಕಾಶವಾದರೂ ಕೂಡ ಬಾಧಿಸಲು ಸಮರ್ಥವಾಗುವುದಿಲ್ಲ.' ಈ ಪೂರ್ವಪಕ್ಷವನ್ನು ಭಾಷ್ಯದಲ್ಲಿ 'ಬಹುಶ್ರುತಿಗಳಿಂದ ಕೂಡಿದ ವಿಷಯವಾಕ್ಯಗಳನ್ನು ಉದಾಹರಿಸುವ ಮೂಲಕವಾಗಿ ಸೂಚಿಸಿದ್ದಾರೆ.

ಮತ್ತೊಂದು ಪೂರ್ವಪಕ್ಷ - ಒಂದು ವೇಳೆ ಪ್ರಾಣಶಬ್ದವು ಯೋಗವೃತ್ತಿಯಿಂದ ವಿಷ್ಣುವನ್ನು ಪ್ರತಿಪಾದಿಸುವುದಾದರೆ ಆವಾಗ ಲಕ್ಷ್ಮೀ ಮೊದಲಾದ ಶಬ್ದಗಳೂ ಕೂಡ ಯೋಗವೃತ್ತಿಯಿಂದ ಭಾರತಿಯನ್ನು ಪ್ರತಿಪಾದಿಸಬಹುದಲ್ಲವೇ? ಆವಾಗ ಲಕ್ಷ್ಮೀಪತಿತ್ವಲಿಂಗವು ನಿರವಕಾಶವೆಂದೇ ಹೇಳ-ಲಾಗದು. ಒಂದು ವೇಳೆ ಲಕ್ಷ್ಮೀ ಮೊದಲಾದ ಶಬ್ದಗಳಿಗೆ ಪ್ರಸಿದ್ಧಾರ್ಥವನ್ನು ಬಿಡಬಾರದೆಂದರೆ ಆವಾಗ ಪ್ರಾಣಶಬ್ದದ ಪ್ರಸಿದ್ಧಾರ್ಥವನ್ನು ಬಿಡಬಾರದು. ಈ ಪೂರ್ವಪಕ್ಷವನ್ನು ಭಾಷ್ಯದಲ್ಲಿ 'ಪ್ರಸಿದ್ಧೇರ್ವಾಯುಃ' ಎಂದು ಸೂಚಿಸಿದ್ದಾರೆ.

ಪ್ರಶ್ನೆ - ಎರಡನೆಯ ಈ ಪೂರ್ವಪಕ್ಷವನ್ನು ಆಕಾಶಾಧಿಕರಣದಲ್ಲಿ ಮಾಡಬಹುದಿತ್ತು. ಏಕೆಂದರೆ ಆಕಾಶಸ್ಮೃತಿಗೆ ಪ್ರಸಿದ್ಧಾರ್ಥವನ್ನು ಬಿಡುವುದಾದರೆ ವಿಷ್ಣುವಿನಲ್ಲಷ್ಟೇ ಪ್ರಸಿದ್ಧವಾದ ಅನಂತತ್ವಾದಿ-ಲಿಂಗಗಳನ್ನು ಆಕಾಶಾದಿಗಳಲ್ಲಿ ಶಂಕಿಸಬಹುದಲ್ಲವೇ?

ಉತ್ತರ - ಆಕಾಶಾಧಿಕರಣದ ಸೂತ್ರದಲ್ಲಿ ಈ ಪೂರ್ವಪಕ್ಷವನ್ನು ನಿರಾಕರಿಸಿಲ್ಲ. ಆದರೆ 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿ 'ಏವ'ಕಾರದಿಂದ ನಿರಾಕರಿಸುವುದರಿಂದ ಇಲ್ಲಿಯೇ ಪೂರ್ವ-ಪಕ್ಷವನ್ನು ಮಾಡಿದ್ದಾರೆ.

ಇನ್ನೊಂದು ಪೂರ್ವಪಕ್ಷ ಹೀಗಿದೆ - ಪ್ರಾಣಶಬ್ದವು ಮುಖ್ಯವಾಯುವಿನಲ್ಲಷ್ಟೇ ಲೋಕದಲ್ಲಿ ಪ್ರಸಿದ್ಧವಾಗಿದೆ. ಮತ್ತು 'ಮುಖೇ ಮುಖ್ಯಃ ಪ್ರಕೀರ್ತಿತಃ' ಎಂಬ ಪ್ರಮಾಣವು ಮುಖ್ಯವಾಯು-ವಿನಲ್ಲಷ್ಟೇ ಪ್ರಾಣಶಬ್ದವನ್ನು ಹೇಳುತ್ತಿದೆ. ಹೀಗೆ ಮುಖ್ಯವಾಯುವಿನಲ್ಲಿ ಪ್ರಾಣಶಬ್ದವು ಮುಖ್ಯವೆಂದು ಒಪ್ಪಬೇಕು. ಪರಮಾತ್ಮನಲ್ಲಿ ಮುಖ್ಯವಾಗಿರಲು ಸಾಧ್ಯವಿಲ್ಲ. ಪ್ರಾಣಶಬ್ದದಿಂದ ಮುಖ್ಯಾರ್ಥವನ್ನೇ ಇಟ್ಟುಕೊಳ್ಳಲು ಬರುವಾಗ ಅಮುಖ್ಯಾರ್ಥನಾದ ಪರಮಾತ್ಮನನ್ನು ವಿವಕ್ಷಿಸಬಾರದು. ಜಡಾಕಾಶದಲ್ಲಿ ಇದರಂತೆ ಆಕಾಶಶಬ್ದದ ಮುಖ್ಯಪ್ರಯೋಗವಿದೆಯೆನ್ನಲು ಯಾವುದೇ ಪ್ರಮಾಣವಿರುವುದಿಲ್ಲ. ಈ ಪೂರ್ವಪಕ್ಷವನ್ನು ಟೀಕೆಯಲ್ಲಿ ಮುಖ್ಯಪದಪ್ರಯೋಗದಿಂದ ಸೂಚಿಸಿದ್ದಾರೆ.

ಮಗದೊಂದು ಪೂರ್ವಪಕ್ಷ ಹೀಗಿದೆ - ಹಿಂದಿನ ಅಧಿಕರಣದಲ್ಲಿ ಅನಂತತ್ವವೆಂಬ ನಿರವಕಾಶ-ಬ್ರಹ್ಮಲಿಂಗದಿಂದ ಬ್ರಹ್ಮನನ್ನು ಆಕಾಶವೆಂದು ಸಾಧಿಸಿದರು. ಆದರೆ ಪ್ರಾಣನನ್ನು ಬ್ರಹ್ಮನೆನ್ನಲು ಅಂತಹ ಯಾವುದೇ ನಿರವಕಾಶಲಿಂಗಗಳಿರುವುದಿಲ್ಲ.

**प्रकाशः – ''प्राणशब्दस्य तस्मिन् प्रसिद्धेः''** इत्यादिटीकायां श्रुतित्वनिरव-काशत्वाभ्यां लिङ्गात् श्रुतेः प्राबल्येन पूर्वपक्षोक्तिरुपलक्षणमिति मत्वाऽऽह –

**आवृत्तीति** ॥ "प्राणः, प्राणयः" इत्यावृत्तिमात्रं नेत्यर्थः । "त्वं भर्ता मातरिश्वा प्रजानाम्" इति मातरिश्वश्रुतिर्ध्येया । 'निरवकाशेनापि' श्रीपतित्वालिङ्गेनेत्यर्थः । 'अपि' इत्यभ्युपगमः, तदभावस्याग्रे स्पष्टत्वात् ।

नन्वियं शङ्का गायत्र्यधिकरणे क्रियते । यदाहुः – '**कथं प्रसिद्धबहुलशब्दाना-मन्यथार्थता**' इतीति चेन्न, अनेकश्रुतिप्रसिद्ध्युपजीवनेन तत्र प्रवृत्तत्वात्, इह बहुत्वमात्रस्योपजीवनात् । यद्वा – गायत्रीवाक्पृथिव्यादिश्रुतीनां भिन्नविषयत्वा-दिहैकविषयतद्बाहुल्यस्याभिप्रेतत्वात् । नन्वथापि पादान्त्यप्राणाधिकरणे तादृक् श्रुतिबाहुल्यशङ्काऽपाक्रियते । तदुक्तं "बाहुल्यात् श्रुतिलिङ्गयोः" इति । सत्यं, तत्र बहुश्रुतिगतनिरवकाशत्वोपजीवनेन पूर्वपक्षप्रवृत्तिरिह तु बहुत्वमात्रोपजीवनेन प्रवृत्तिरिति ध्येयम् । वक्ष्यते चैतत्तत्रैव ॥ **योगेनेति** ॥ "लक्ष दर्शने" इति धातोर्लक्षयति सर्वमित्यादियोगेनेत्यर्थः ॥ **भाष्ये सूचितेति** ॥ "भाष्येऽप्यस्य सर्वस्यापि स्वीकारार्थं प्रसिद्धेरित्याह" इति सुधायां दिक्प्रदर्शनस्य कृतत्वादिति भावः ॥ **अनुद्धृतेति** ॥ इहैव सौत्रैवकारेण लिङ्गनिरवकाशत्ववाचिनादृध्रियते । तथा चानेन रूपेण तदप्यत्रोदाहरणमित्युक्तं भवति ॥ **वचनाच्चेति** ॥

**चेष्टायां बाह्यवायौ च मुख्यप्राणे च गीयते ।**
**प्राणशब्दस्त्रिषु ह्येषु मुख्ये मुख्यः प्रकीर्तितः ॥**

इति वचनाच्चेत्यर्थः ॥ **मुख्यत्वायोगादिति** ॥ प्रसिद्धिवचनयोरभावादिति भावः ।

नन्वाकाशशब्दस्य भूते मुख्यस्यापि बाधः कथमित्यत आह – **आकाशेति** ॥ उपलक्षणमेतत् । इन्द्रादिशब्दस्य तत्र "मुख्ये मुख्यः" इत्यादिवदिन्द्राकाशादौ मुख्य इति वचनाभावात् । अत एव 'वचनाच्च' इत्युक्तम् । 'आदिना' इत्यादिपदेन प्रमाणकथनादिर्ग्राह्यः । 'पूर्ववत्' आकाशाधिकरण इवेत्यर्थः ।

ವಿವರಣೆ - ಇಲ್ಲಿಯ ತನಕ ಪ್ರಮೇಯಾಶ್ರಿತವಾದ ಪೂರ್ವಪಕ್ಷವನ್ನು ಮಾಡಿದ್ದಾಯಿತು. ಈಗ ನಾಲ್ಕು ಬಗೆಯಲ್ಲಿ ಪ್ರಮಾಣಾಶ್ರಿತವಾದ ಪೂರ್ವಪಕ್ಷಗಳನ್ನು ಮಾಡುತ್ತಿದ್ದಾರೆ.

'ಪ್ರಾಣಶಬ್ದಸ್ಯ ತಸ್ಮಿನ್ ಪ್ರಸಿದ್ಧೇಃ' (ಪ್ರಾಣಶಬ್ದವು ಮುಖ್ಯಪ್ರಾಣನಲ್ಲಿ ಪ್ರಸಿದ್ಧವಾದ್ದರಿಂದ) ಇತ್ಯಾದಿ ಟೀಕೆಯಲ್ಲಿ ಲಿಂಗಕ್ಕಿಂತ ಶ್ರುತಿತ್ವನಿರವಕಾಶತ್ವಪ್ರಯುಕ್ತವಾದ ಶ್ರುತಿಯೇ ಪ್ರಬಲವೆಂದು ಪೂರ್ವಪಕ್ಷ

ಮಾಡಿದ್ದಾರೆ. ಈ ಪೂರ್ವಪಕ್ಷವು ಕೇವಲ ಉಪಲಕ್ಷಣವೆಂದು ಇನ್ನೂ ಹಲವು ಬಗೆಯ ಪೂರ್ವಪಕ್ಷಗಳನ್ನು ತೋರಿಸುತ್ತಿದ್ದಾರೆ.

'ಪ್ರಾಣಃ ಪ್ರಾಣಯಃ' ಎಂದು ಪ್ರಾಣಶ್ರುತಿಯಲ್ಲಿ ಆವೃತ್ತಿಯಿದೆ. ಅಷ್ಟೇ ಅಲ್ಲ 'ತ್ವಂ ಭರ್ತಾ ಮಾತರಿಶ್ವಾ ಪ್ರಜಾನಾಮ್' ಎಂದು ಬಹುತ್ವವೂ ಇದೆ. ಹೀಗೆ ಬಹುತ್ವಪ್ರಯುಕ್ತವಾದ ಶ್ರುತಿಯನ್ನು ಶ್ರೀಪತಿತ್ವ ಮೊದಲಾದ ನಿರವಕಾಶಲಿಂಗದಿಂದ ಬಾಧಿಸಲು ಸಾಧ್ಯವಿಲ್ಲ. ನಿರವಕಾಶಲಿಂಗದಿಂದ ಶ್ರುತಿಗೆ ಬಾಧವನ್ನು ಅಂಗೀಕರಿಸಿ ಹೇಳಿರುವ ಮಾತಿದು. ವಸ್ತುತಃ ಇದು ಸಮ್ಮತವಲ್ಲವೆಂದು ಮುಂದೆ ಸ್ಪಷ್ಟ ಮಾಡುತ್ತೇವೆ. ಈ ಅಭ್ಯುಪಗಮವಾದವು 'ನಿರವಕಾಶೇನಾಪಿ' ಎಂಬಲ್ಲಿರುವ ಅಪಿಶಬ್ದದಿಂದ ತಿಳಿಯುತ್ತದೆ.

ಶಂಕೆ - ನಿರವಕಾಶಲಿಂಗಕ್ಕಿಂತಲೂ ಶ್ರುತಿಬಾಹುಲ್ಯಕ್ಕೆ ಪ್ರಾಧಾನ್ಯವೆಂಬ ಶಂಕೆಯನ್ನು ಗಾಯತ್ರ್ಯ-ಧಿಕರಣದಲ್ಲಿ ಮಾಡುವವರಿದ್ದಾರೆ. ಅಲ್ಲಿ ಕೇಳಿಸುವ ಮಾತು -- 'ಕಥಂ ಪ್ರಸಿದ್ಧಬಹುಲಶಬ್ದಾನಾಮ್ ಅನ್ಯತಾರ್ಥತಾ?' (ಶ್ರುತಿಯಲ್ಲಿ ಬಾಹುಲ್ಯವಿದ್ದಮೇಲೆ ಅನ್ಯಾರ್ಥವು ಹೇಗೆ ಸಾಧ್ಯ?) ಎಂದು. ಅಲ್ಲಿ ಮಾಡುವ ಆಕ್ಷೇಪವನ್ನು ಪುನಃ ಇಲ್ಲಿ ಮಾಡಿದರೆ ಗತಾರ್ಥತ್ವ ಬರುತ್ತದಲ್ಲವೇ?

ಸಮಾಧಾನ - ವ್ಯತ್ಯಾಸವಿದೆ. ಗಾಯತ್ರ್ಯಧಿಕರಣದಲ್ಲಿ ಅನೇಕಶ್ರುತಿಪ್ರಸಿದ್ಧಿಯನ್ನು ಉಪಜೀವಿಸಿ ಶಂಕೆಯು ಹೊರಟಿದೆ. ಆದರೆ ಇಲ್ಲಿ ಶ್ರುತಿಬಹುತ್ವವನ್ನಷ್ಟೇ ಉಪಜೀವಿಸಿ ಶಂಕೆಯು ಹೊರಟಿದೆ. ಅಥವಾ ಗಾಯತ್ರ್ಯಧಿಕರಣದಲ್ಲಿ ಉದಾಹರಿಸುವ ಶ್ರುತಿಗಳು 'ಗಾಯತ್ರೀ, ವಾಕ್, ಪೃಥಿವೀ' ಮೊದಲಾದ ಅನೇಕ ಪದಾರ್ಥಗಳನ್ನು ವಿಷಯೀಕರಿಸುತ್ತಿವೆ. ಆದರೆ ಇಲ್ಲಿ ಉದಾಹರಿಸುವ ಪ್ರಾಣಶ್ರುತಿಯು ಪ್ರಾಣನನ್ನಷ್ಟೇ ವಿಷಯೀಕರಿಸುತ್ತಿದೆ.

ಶಂಕೆ - ಆದರೂ ಪಾದಾಂತ್ಯಪ್ರಾಣಾಧಿಕರಣದಿಂದ ಗತಾರ್ಥತ್ವ ಬರುತ್ತದೆ. ಏಕ ವಿಷಯಕವಾದ ಶ್ರುತಿಬಾಹುಲ್ಯಶಂಕೆಯನ್ನು ಅಲ್ಲಿ ನಿರಾಕರಿಸಿದ್ದಾರೆ. ಅಲ್ಲಿ ಕೇಳಿಸುವ ಮಾತು -- 'ಬಾಹುಲ್ಯಾತ್ ಶ್ರುತಿ-ಲಿಂಗಯೋಃ' (ಶ್ರುತಿಲಿಂಗಗಳಲ್ಲಿ ಬಾಹುಲ್ಯವಿರುವುದಕ್ಕೆ ಪ್ರಾಧಾನ್ಯ) ಎಂದು ಹೇಳಿದೆಯಲ್ಲ.

ಪಾದಾಂತ್ಯಪ್ರಾಣಾಧಿಕರಣದಿಂದಲೂ ವೈಲಕ್ಷಣ್ಯವಿದೆ. ಅನೇಕಶ್ರುತಿಗಳಲ್ಲಿರುವ ನಿರವಕಾಶತ್ವವನ್ನು ಉಪಜೀವಿಸಿ ಪಾದಾಂತ್ಯಪ್ರಾಣಾಧಿಕರಣದ ಪೂರ್ವಪಕ್ಷವು ಹೊರಟಿದೆ. ಆದರೆ ಇಲ್ಲಿ ಕೇವಲ ಶ್ರುತಿಯಲ್ಲಿರುವ ಬಹುತ್ವವನ್ನು ಉಪಜೀವಿಸಿ ಪೂರ್ವಪಕ್ಷವು ಹೊರಟಿದೆ. ಹೆಚ್ಚಿನ ವಿಚಾರವನ್ನು ಅಲ್ಲಿಯೇ ವಿಮರ್ಶಿಸೋಣ.

ಲಕ್ಷ್ಮೀಶಬ್ದದ ಯೋಗಾರ್ಥವನ್ನು ಭಾರತಿಯಲ್ಲಿಯೂ ಹೇಳಬಹುದು. '' 'ಲಕ್ಷ ದರ್ಶನೇ' ಎಂಬ ಧಾತುವಿನಿಂದ ನಿಷ್ಪನ್ನವಾದ ಲಕ್ಷ್ಮೀಶಬ್ದಕ್ಕೆ 'ಎಲ್ಲವನ್ನೂ ತಿಳಿಸುತ್ತಾಳೆ' ಎಂಬ ಅರ್ಥವನ್ನು ಹೇಳಬಹುದು.'' ಎಂದು ಯೋಗೇನ ಎಂಬ ಗ್ರಂಥದಿಂದ ಹೇಳಿದ್ದಾರೆ.

'ಭಾಷ್ಯೇಽಪ್ಯಸ್ಯ ಸರ್ವಸ್ಯಾಪಿ ಸ್ವೀಕಾರಾರ್ಥಂ ಪ್ರಸಿದ್ಧೇರಿತ್ಯಾಹ' (ಭಾಷ್ಯದಲ್ಲಿಯೂ ಇದೆಲ್ಲವನ್ನೂ ತಿಳಿಯಬೇಕೆಂದು ಆಚಾರ್ಯರು ಪ್ರಸಿದ್ಧೇಃ ಎಂಬ ಪದವನ್ನು ಪ್ರಯೋಗಿಸಿದ್ದಾರೆ) ಎಂದು ಸುಧೆಯಲ್ಲಿ ದಿಕ್ಪ್ರದರ್ಶನ ಮಾಡಿದ್ದನ್ನು ಪ್ರಕೃತ ಗ್ರಂಥಕಾರರು 'ಭಾಷ್ಯೇ ಸೂಚಿತಾ' ಎಂದು ವಿವರಿಸಿದ್ದಾರೆ.

ಆಕಾಶಾಧಿಕರಣದಲ್ಲಿ ಎರಡನೆಯ ಈ ಪೂರ್ವಪಕ್ಷವನ್ನು ಏಕೆ ಮಾಡಿಲ್ಲವೆಂದರೆ ಸೂತ್ರಕಾರರು ಯಾವುದೇ ಪದಗಳಿಂದಲೂ ಈ ಪೂರ್ವಪಕ್ಷವನ್ನು ನಿರಾಕರಿಸಿಲ್ಲ. ಆದರೆ ಪ್ರಕೃತ ಪ್ರಾಣಾಧಿಕರಣದಲ್ಲಿ ಲಿಂಗಕ್ಕೆ ನಿರವಕಾಶತ್ವವನ್ನು ಸಮರ್ಥಿಸುವ 'ಏವ'ಕಾರದಿಂದ ಈ ಪೂರ್ವಪಕ್ಷವನ್ನು ನಿರಾಕರಿಸಿದ್ದಾರೆ. ಆದ್ದರಿಂದ ಈ ಮುಖದ ಪೂರ್ವಪಕ್ಷಕ್ಕೆ ಆಕಾಶಾಧಿಕರಣದ ಉದಾಹರಣವಾಕ್ಯವು ವಿಷಯವಾಗುತ್ತದೆ.

ಚೇಷ್ಟಾಯಾಂ ಬಾಹ್ಯವಾಯೌ ಚ ಮುಖ್ಯಪ್ರಾಣೇ ಚ ಗೀಯತೇ ।
ಪ್ರಾಣಶಬ್ದಸ್ತ್ರಿಷು ಹ್ಯೇಷು ಮುಖೇ ಮುಖ್ಯಃ ಪ್ರಕೀರ್ತಿತಃ ॥

'ಚೇಷ್ಟೆ(ಕ್ರಿಯೆ) ಮತ್ತು ಜಡವಾಯು ಮುಖ್ಯಪ್ರಾಣ ಈ ಮೂರರಲ್ಲಿ ಪ್ರಾಣಶಬ್ದವು ಮುಖ್ಯವಾಗಿ ಮುಖ್ಯಪ್ರಾಣನಲ್ಲಿ ಪ್ರಸಿದ್ಧವಾಗಿದೆ.' ಎಂಬ ಪ್ರಮಾಣದಿಂದ ಮುಖ್ಯಪ್ರಾಣನೇ ಮುಖ್ಯವಾಚ್ಯನೆಂದು ತಿಳಿಯುತ್ತದೆ. ಆದರೆ ವಿಷ್ಣುವೂ ಮುಖ್ಯವಾಚ್ಯನೆನ್ನಲು ಯಾವುದೇ ಪ್ರಮಾಣವಿಲ್ಲವೆಂದು ತಿಳಿಯಬೇಕು.

ಹಾಗಾದರೆ ಆಕಾಶಶಬ್ದವು ಜಡಾಕಾಶದಲ್ಲಿ ಮುಖ್ಯವಾಗಿರುವಾಗ ಬಾಧವನ್ನು ಹೇಗೆ ಹೇಳಿದಿರಿ? ಎಂಬ ಪ್ರಶ್ನೆಗೆ 'ಆಕಾಶ' ಎಂಬ ಮಾತಿನಿಂದ ಉತ್ತರಿಸಿದ್ದಾರೆ. ಜಡಾಕಾಶದಲ್ಲಿ ಆಕಾಶಶಬ್ದದ ಮುಖ್ಯಪ್ರಯೋಗಕ್ಕೆ ಪ್ರಮಾಣವಿಲ್ಲ. ಇದು ಉಪಲಕ್ಷಣ. ಇಂದ್ರಾದಿಶಬ್ದಗಳೂ ಸಹ ಇಂದ್ರಾದಿಗಳಲ್ಲಿ ಮುಖ್ಯವಾಗಿದೆ ಎನ್ನಲು ಯಾವುದೇ ಪ್ರಮಾಣವಿಲ್ಲ. ಆದ್ದರಿಂದಲೇ ಗ್ರಂಥಕಾರರು ಕೇವಲ 'ವಚನಾಚ್ಚ' ಎಂದಷ್ಟೇ ಹೇಳಿದ್ದಾರೆ. 'ಮುಖ್ಯಪದಪ್ರಯೋಗಾದಿನಾ' ಎಂಬಲ್ಲಿರುವ ಆದಿಪದದಿಂದ ಪ್ರಮಾಣಗಳ ಉಲ್ಲೇಖವನ್ನು ವಿವಕ್ಷಿಸಬೇಕು.

**गुरुराजीयम् – यद्यपीति** ॥ तथाच नेयमभ्यधिकाशङ्केति शेषः । ननु मुख्यवायौ प्राणत्वप्रसिद्ध्यादेरिव भूताकाशस्य घटाकाशत्वप्रसिद्धेः सत्वेन परमात्मनि मुख्यत्वायोगात् मुख्यसम्भवे चामुख्यग्रहणायोगादाकाशशब्दो न ब्रह्मपर इति पूर्वाधिकरणेऽपि शङ्कासम्भवात् कथमियमभ्यधिकाशङ्केत्यत आह – **आकाशशब्दस्येति** ॥

## ಪೂರ್ವಪಕ್ಷಿಗಳಿಗೆ ಲಕ್ಷ್ಮೀಪತಿತ್ವಲಿಂಗವು ಬಾಧಕವಲ್ಲ

### तात्पर्यचन्द्रिका –

**नच श्रीपतित्वादिकं लिङ्गं निरवकाशमिति वाच्यम्; ''अद्भ्यः सम्भूतः'' इत्यनुवाके ''ह्रीश्च ते लक्ष्मीश्च पत्न्यौ''इति उक्तस्य विष्णुत्वेऽपि ''भर्ता सन् भ्रियमाणः'' इत्यनुवाके ''तद्वै त्वं प्राणः'' इत्युक्तस्य ''त्वं भर्ता मातरिश्वा प्रजानाम्'' इति मातरिश्वश्रुत्या ''प्राणापानावजिरꣳसञ्चरन्तौ'' इत्यपान-**

**साहित्यलिङ्गेन चाविष्णुत्वात् । इयमपि शङ्का ''न चात्र वाक्ये पूर्ववदनन्यथासिद्धं लिङ्गमस्ति'' इति सुधाग्रन्थेऽत्रपदेन सूचिता । तस्माद्युक्ता अधिकाशङ्का ।**

ಅನುವಾದ - ಪ್ರಾಣಶಬ್ದದಿಂದ ಪ್ರಾಣನು ವಾಚ್ಯನಾಗಲಾರ. ಏಕೆಂದರೆ ನಿರವಕಾಶವಾದ ಲಕ್ಷ್ಮೀಪತಿತ್ವಲಿಂಗವು ಬಾಧಕವಾಗಿದೆಯಲ್ಲ ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಏಕೆಂದರೆ, 'ಅದ್ಭ್ಯಃ ಸಂಭೂತಃ' ಎಂಬ ಅನುವಾಕದಲ್ಲಿ 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂಬ ಲಕ್ಷ್ಮೀಪತಿತ್ವವನ್ನು ಹೇಳುವ ಶ್ರುತಿಯು ಪ್ರಸಕ್ತವಾಗಿದೆ. ಆದ್ದರಿಂದ 'ಅದ್ಭ್ಯಃ ಸಂಭೂತಃ' ಎಂಬ ಸಂಪೂರ್ಣ ಅನುವಾಕವು ವಿಷ್ಣುಪರವಾಗುತ್ತದೆ. ಆದರೆ 'ತದ್ವೈ ತ್ವಂ ಪ್ರಾಣಃ' ಎಂಬ ಶ್ರುತಿಯು ಈ ಅನುವಾಕದಲ್ಲಿ ಪ್ರಸಕ್ತವೇ ಆಗಿಲ್ಲ ಹೊರತಾಗಿ 'ಭರ್ತಾ ಸನ್ ಭ್ರಿಯಮಾಣಃ' ಎಂಬ ಬೇರೆ ಅನುವಾಕದಲ್ಲಿಯೇ ಪ್ರಸಕ್ತ - ವಾಗಿದೆ. 'ಭರ್ತಾ ಸನ್ ಭ್ರಿಯಮಾಣಃ' ಎಂಬ ಅನುವಾಕವು ವಿಷ್ಣುಪರವಲ್ಲ ಹೊರತು ಪ್ರಾಣ-ಪರವೇ ಆಗಿದೆ. ಏಕೆಂದರೆ, 'ತ್ವಂ ಭರ್ತಾ ಮಾತರಿಶ್ವಾ ಪ್ರಜಾನಾಂ' (ಎಲ್ಲ ಪ್ರಜೆಗಳಿಗೆ ಒಡೆಯನಾದ್ದರಿಂದ ನೀನು ಮಾತರಿಶ್ವನಾಗಿದ್ದಿ) ಎಂಬ ಮಾತರಿಶ್ವಶ್ರುತಿಯು ಮುಖ್ಯಪ್ರಾಣನನ್ನು ಹೇಳುತ್ತಿದೆ. ಅಷ್ಟೇ ಅಲ್ಲದೆ 'ಪ್ರಾಣಾಪಾನಾವಜಿರಂ ಸಂಚರಂತೌ' (ಪ್ರಾಣಾಪಾನರು ಜೊತೆಗೆ ಅಂಗಳದಲ್ಲಿ ಸಂಚರಿಸುತ್ತಾರೆ) ಎಂಬ ಅಪಾನಸಾಹಿತ್ಯಲಿಂಗವು ಕೇಳಿಸುತ್ತಿದೆ. ಇದರಿಂದ ಅನುವಾಕವು ಪ್ರಾಣಪರವೇ ಆಗಬೇಕು.

ಈ ಶಂಕೆಯನ್ನು ಸುಧೆಯಲ್ಲಿ 'ನ ಚಾತ್ರ ವಾಕ್ಯೇ ಪೂರ್ವವದನನ್ಯಥಾಸಿದ್ಧಂ ಲಿಂಗಮಸ್ತಿ' ಎಂಬ ವಾಕ್ಯದಲ್ಲಿರುವ 'ಅತ್ರ' ಎಂಬ ಪದದಿಂದ ಸೂಚಿಸಿದ್ದಾರೆ. ಆದ್ದರಿಂದ ಅಧಿಕಾಶಂಕೆಯು ಯುಕ್ತವಾಗಿದೆ.

**प्रकाशः –** तत्र निरवकाशलिङ्गमाशङ्क्य तस्य भिन्नप्रकरणगतत्वेन परिहारमाह – **नचेति ॥ अत्रपदेनेति ॥** तदनेन **''नचात्र वाक्ये पूर्ववदनन्यथासिद्धं किमपीश्वरलिङ्गमस्ति, येन श्रुतिबाधं प्रत्येष्यामः''** इति वाक्यं, श्रीपतित्वादिलिङ्गं भिन्नप्रकरणगतं, महाभोगत्वादिकं त्वन्यथासिद्धमित्याशयतया योज्यमित्युक्तं भवति ।

ವಿವರಣೆ - 'ತದ್ವೈ ತ್ವಂ ಪ್ರಾಣೋ ಅಭವಃ' ಎಂಬ ಉಪನಿಷತ್ತಿನಲ್ಲಿರುವ ಪ್ರಾಣಶಬ್ದದಿಂದ ಮುಖ್ಯವಾಯುವು ವಾಚ್ಯವೆನ್ನಲು ನಿರವಕಾಶಶ್ರೀಪತಿತ್ವಲಿಂಗವು ಬಾಧಕವಾಗಿದೆಯಲ್ಲ ಎಂದು ಶಂಕಿಸಿ ಶ್ರೀಪತಿತ್ವಲಿಂಗವು ಬೇರೆ ಪ್ರಕರಣದಲ್ಲಿರುವುದರಿಂದ ಬಾಧಕವಾಗುವುದಿಲ್ಲವೆಂಬ ಪರಿಹಾರವನ್ನು ಪ್ರಕೃತ ಮಾಡುತ್ತಿದ್ದಾರೆ. ಈ ವ್ಯಾಖ್ಯಾನದಿಂದ ಸುಧೆಯ ಮಾತು ಸ್ಪಷ್ಟವಾಯಿತು - 'ನ ಚಾತ್ರ ವಾಕ್ಯೇ ಪೂರ್ವವದನನ್ಯಥಾಸಿದ್ಧಂ ಕಿಮಪೀಶ್ವರಲಿಂಗಮಸ್ತಿ । ಯೇನ ಶ್ರುತಿಬಾಧಂ ಪ್ರತ್ಯೇಷ್ಯಾಮಃ' ಈ ವಾಕ್ಯದಲ್ಲಿ

ಹಿಂದಿನಂತೆ ಅನ್ಯಥಾ ಸಿದ್ಧವಾಗದ ಯಾವುದೇ ಈಶ್ವರಲಿಂಗವಿರುವುದಿಲ್ಲ. ಹಾಗಿದ್ದಲ್ಲಿ ಶ್ರುತಿಬಾಧವನ್ನು ತಿಳಿಯಬಹುದಿತ್ತು. ಅಂದರೆ ಶ್ರೀಪತಿತ್ವಲಿಂಗವು ಬೇರೆ ಪ್ರಕರಣದಲ್ಲಿದೆ. ಮಹಾಭೋಗತ್ವಲಿಂಗವು ಅನ್ಯಥಾಸಿದ್ಧವಾಗಿದೆ. ಹಾಗಾಗಿ ಯಾವುದೇ ನಿರವಕಾಶವಾದ ವಿಷ್ಣುಲಿಂಗಗಳಿರುವುದಿಲ್ಲವೆಂದು ಸುಧೆಯ ಅಭಿಪ್ರಾಯ.

## ಸಾರ

ಲಕ್ಷ್ಮೀಪತಿತ್ವಲಿಂಗವಿರುವುದು ಬೇರೆ ಅನುವಾಕದಲ್ಲಿ. ಅದಕ್ಕೂ 'ತದ್ವೈ ತ್ವಂ ಪ್ರಾಣಃ' ಎಂಬ ಅನುವಾಕಕ್ಕೂ ಯಾವುದೇ ಸಂಬಂಧವಿಲ್ಲ. ಹೀಗಿರುವಾಗ ಮುಖ್ಯಪ್ರಾಣನು ಪ್ರಾಣಶಬ್ದದಿಂದ ವಾಚ್ಯನಾಗಲು ಲಕ್ಷ್ಮೀಪತಿತ್ವಲಿಂಗವು ಬಾಧಕವಲ್ಲ. ಈ ಅನುವಾಕದಿಂದ ಮುಖ್ಯಪ್ರಾಣನೇ ವಾಚ್ಯನೆನ್ನಲು ಮಾತರಿಶ್ವಶ್ರುತಿಯು ಅಪಾನಶ್ರುತಿಯ ಸಾಹಿತ್ಯವು ಪೂರಕವಾಗಿವೆ.

ಇಲ್ಲಿಗೆ ಎರಡು ಬಗೆಯ ಪ್ರಮೇಯಾಶ್ರಿತವಾದ ಪೂರ್ವಪಕ್ಷಗಳು ಮತ್ತು ನಾಲ್ಕುಬಗೆಯ ಪ್ರಮಾಣಾಶ್ರಿತಪೂರ್ವಪಕ್ಷಗಳು ಮುಗಿದವು.

------

## ಸಿದ್ಧಾಂತ
## (ವಿಷ್ಣುವಿನ ಶರೀರ ಮುಖ್ಯಪ್ರಾಣ)

**तात्पर्यचन्द्रिका –**

**तत्परिहारेण सिद्धान्तस्तु –**

**वायुवृत्तिर्यथा मुख्यप्राणदेहस्तथैव सः ।**
**विष्णोर्देहस्ततस्तस्यैवान्वयव्यतिरेकिता ॥**

**वायुवृत्तिर्मुख्यप्राणस्येव सोऽपि हि ब्रह्मणो देहस्थानीयः । युक्तश्च भूमाधिकरण ईश्वरस्यास्मदादिशरीरादुत्क्रमणस्य वक्ष्यमाणत्वादजीवनदशायां रूपविशेषस्य व्यक्त्यात्मना तत्संयोगाभावात् व्यतिरेकः । "इतरेण" इति श्रुतौ इतरशब्दो ब्रह्मपरः, पूर्वत्र "मध्ये वामनं" इति वामनशब्दात्, उत्तरत्र च "गुह्यं ब्रह्म सनातनं" इति ब्रह्मशब्दात् । किञ्च मुख्यप्राणस्य जीवनादिहेतुत्वेऽपि तस्य भगवदधीनत्वेनापि तत्र प्राणशब्दो मुख्यः ।**

ಅನುವಾದ - ಎಲ್ಲ ಪೂರ್ವಪಕ್ಷಗಳನ್ನು ಪರಿಹರಿಸುವ ಸಿದ್ಧಾಂತ ಹೀಗಿದೆ -

ವಾಯುವೃತ್ತಿರ್ಯಥಾ ಮುಖ್ಯಪ್ರಾಣದೇಹಸ್ತಥೈವ ಸಃ ।
ವಿಷ್ಣೋರ್ದೇಹಸ್ತತಸ್ತಸ್ಯೈವಾನ್ವಯವ್ಯತಿರೇಕತಾ ॥

ಭೌತಿಕವಾದ ಪ್ರಾಣವಾಯುವು ಹೇಗೆ ಮುಖ್ಯಪ್ರಾಣನ ಶರೀರವಾಗಿದೆಯೋ, ಅದರಂತೆ ಮುಖ್ಯಪ್ರಾಣನು ವಿಷ್ಣುವಿನ ಶರೀರ. ಆದ್ದರಿಂದ ಅನ್ವಯವ್ಯತಿರೇಕವು ವಿಷ್ಣುವಿನಲ್ಲಷ್ಟೇ ಬರುತ್ತದೆ.

ಶ್ಲೋಕವ್ಯಾಖ್ಯಾನ - ಭೌತಿಕಪ್ರಾಣವಾಯುವು ಮುಖ್ಯಪ್ರಾಣನ ಶರೀರವಾದಂತೆ ಮುಖ್ಯಪ್ರಾಣನು ವಿಷ್ಣುವಿನ ಶರೀರನಾಗಿದ್ದಾನೆ. ಅನ್ವಯವ್ಯತಿರೇಕವನ್ನು ವಿಷ್ಣುವಿನಲ್ಲಿ ಸುಲಭವಾಗಿ ಹೇಳಬಹುದು. ಮುಂದೆ ಭೂಮಾಧಿಕರಣದಲ್ಲಿ ಹೇಳುವಂತೆ ನಮ್ಮೆಲ್ಲರ ಶರೀರದಿಂದ ಭಗವಂತನಿಗೆ ಉತ್ಕ್ರಮಣ-ವಿದೆ. ಮರಣವನ್ನು ಅಪ್ಪಿದಾಗ ಭಗವಂತನ ರೂಪವಿಶೇಷಕ್ಕೆ ನಮ್ಮ ಶರೀರದಿಂದ ವ್ಯಕ್ತ್ಯಾತ್ಮನಾ-ಸಂಯೋಗವಿರುವುದಿಲ್ಲ ಅಂದರೆ ಮೃತದೇಹದಲ್ಲಿ ಭಗವಂತನು ಶಕ್ತಿರೂಪದಿಂದ ಇದ್ದರೂ ವ್ಯಕ್ತಿರೂಪದಿಂದ ಇರುವುದಿಲ್ಲ. ಆದ್ದರಿಂದ ವ್ಯತಿರೇಕವ್ಯಾಪ್ತಿಯನ್ನು ವ್ಯಕ್ತ್ಯಾತ್ಮನಾ ಹೇಳಬಹುದು.

'ಇತರೇಣ' ಎಂಬ ಕಾಠಕಶ್ರುತಿಯಲ್ಲಿ ಇತರಶಬ್ದವು ಬ್ರಹ್ಮಪರವೇ ಆಗಿದೆ. ಏಕೆಂದರೆ, ಈ ಶ್ರುತಿಯ ಹಿಂದೆ 'ಮಧ್ಯೇ ವಾಮನಮ್' ಎಂದು ವಿಷ್ಣುಪರವಾದ ವಾಮನಶ್ರುತಿಯಿದೆ. ಮುಂದೆಯೂ 'ಗುಹ್ಯಂ ಬ್ರಹ್ಮ ಸನಾತನಮ್' ಎಂದು ವಿಷ್ಣುಪರವಾದ ಬ್ರಹ್ಮಶ್ರುತಿಯಿದೆ.

ಮತ್ತು ಮುಖ್ಯಪ್ರಾಣನು ಜೀವನಕಾರಣನಾದರೂ ಅವನಲ್ಲಿರುವ ಜೀವನಕಾರಣತ್ವವು ಭಗವದಧೀನವಾಗಿದೆ. ಆದ್ದರಿಂದಲೂ ವಿಷ್ಣುವೇ ಪ್ರಾಣಶಬ್ದದಿಂದ ಮುಖ್ಯವಾಚ್ಯನಾಗುತ್ತಾನೆ.

### ಕಠಿಣಪದಾರ್ಥ

ತತ್ಪರಿಹಾರೇಣ = ಪೂರ್ವಪಕ್ಷದ ಪರಿಹಾರದಿಂದ, ವಾಯುವೃತ್ತಿಃ = ಜಡವಾದ ಪ್ರಾಣವಾಯುವು, ಸಃ = ಮುಖ್ಯಪ್ರಾಣನು, ತಸ್ಯೈವ = ವಿಷ್ಣುವಿಗೆ, ಸೋಽಪಿ = ಮುಖ್ಯಪ್ರಾಣನಾದರೂ, ದೇಹಸ್ಥಾನೀಯಃ = ದೇಹದಂತಿದ್ದಾನೆ, ವ್ಯಕ್ತ್ಯಾತ್ಮನಾ = ಪ್ರಕಟರೂಪದಿಂದ, ತತ್ಸಂಯೋಗಾಭಾವಾತ್ = ರೂಪವಿಶೇಷದ ಸಂಯೋಗವಿಲ್ಲದ್ದರಿಂದ, ಪೂರ್ವತ್ರ = ಇತರೇಣ ಎಂಬ ಶ್ರುತಿಯ ಹಿಂದೆ, ತಸ್ಯ = ಮುಖ್ಯಪ್ರಾಣನ, ತತ್ರ = ವಿಷ್ಣುವಿನಲ್ಲಿ.

**प्रकाशः** – ननु 'एतच्छङ्कानिरासकन्यायं सूत्रे नोपलभामहे' इत्याशङ्क्य, 'प्राणस्तत्तु', इति प्रतिज्ञांशतात्पर्यं व्यञ्जयन्, आदावनुव्याख्यानोक्तप्रमेयाश्रिताभ्य-धिकाशङ्कयोर्मध्ये, न विष्णोर्जीवनादिहेतुत्वमन्वयव्यतिरेककल्प्यमिति यदुक्तं, तच्छङ्कानिवर्तनप्रकारं सङ्गृह्णाति – **तत्परिहारेणेति** ॥ **''प्राणगतजीवनादिकारणत्व-स्यापि भगवदधीनत्वात्''** इति टीका उपलक्षणम् । अत एव **''प्रेरकोऽस्यापि''** इत्यनुव्याख्यानं 'अस्यापि' जीवनादेरपि इत्यपि इति सुधायां व्याख्यातमिति

भावः । 'देह' इत्युक्त्या मुख्यदेहभ्रमं वारयन् व्याचष्टे – **वायुवृत्तिरिति** । 'सोऽपि' मुख्योऽपि ।

तथाच यथा प्राणशरीरभूतवायोर्जीवनं प्रत्यन्वयादिदर्शनमात्रेण मुख्यस्य तत्र हेतुत्वं, तथा मुख्यस्यापि साक्षात्प्रयत्नाधिष्ठेयत्वेन विष्णुदेहत्वात्तदन्वयादिदर्शनमात्रेण तस्य तत्र हेतुत्वं भविष्यतीत्यर्थः । एतेनाशरीरत्वान्न तच्छरीरस्यास्मदादिशरीरे व्यतिरेक इति निरस्तम् । प्राणस्य तच्छरीरत्वेन व्यतिरेकसम्भवात् ।

यदप्यस्मदादिशरीरे तस्य सर्वगतत्वात् व्यतिरेको नेति, तन्निरस्यति – **युक्तश्चेति** ॥ **व्यक्त्यात्मनेति** ॥ शक्त्यात्मना तत्संयोगस्य सत्त्वेन सर्वगतत्वोक्तिरिति भावः । विवरिष्यते चैतद्भूमादिनये । यदपि नापि श्रुतिसिद्धमित्यादि, तच्च 'येन जीवन्ति' इत्यादेर्ब्रह्मपरत्वं **जन्मादिसूत्रे सिद्धमिति भावेन टीकोक्तकाठकश्रुते**र्ब्रह्मपरत्वं साधयति – **इतरेणेति** ॥ **वामनेति** ॥ वक्ष्यते च **वामनश्रुतेर्वैष्णवत्वं** "**शब्दादेव**" इत्यत्र । प्राणगतस्येशाधीनत्वे साक्षितया **टीकोक्ताऽपि** 'इतरेण' इति श्रुतिस्तद्गतत्वेऽपि प्रमाणं भवतीति भावः ।

एवं 'जीवनहेतुत्वं प्राणपदप्रवृत्तिनिमित्तं भगवद्गतम्' इति समर्थ्य, इदानीं 'टीकोक्तरीत्याऽन्यगतं च भगवदधीनमेव ततश्च प्राणशब्दार्थो भगवानेव' इत्यभिप्रेत्याह – **किञ्चेति** ॥ नच प्रागुक्तासम्भवादिप्रसङ्गः, अनन्याधीनजीवनहेतुत्वस्य भगवन्मात्रगतत्वेनान्यगतत्वाभावात् तस्यैव लक्षणत्वेन **जन्मादिसूत्रे** अभिप्रेतत्वादिति तात्पर्यात् । अत एव तद्गतत्वस्यापि समर्थनमकारि । **टीकायां तु** जन्मादिसूत्रादौ सिद्धत्वात्कण्ठतो नोक्तम् ।

ವಿವರಣೆ - ಇಲ್ಲಿಯ ತನಕ ಎರಡು ಬಗೆಯ ಪ್ರಮೇಯಾಶ್ರಿತಪೂರ್ವಪಕ್ಷಗಳನ್ನು ನಾಲ್ಕುಬಗೆಯ ಪ್ರಮಾಣಾಶ್ರಿತಪೂರ್ವಪಕ್ಷಗಳನ್ನು ಮಾಡಿದ್ದಾಯಿತು. ಆ ಎಲ್ಲ ಪೂರ್ವಪಕ್ಷಗಳನ್ನು ಪ್ರಕೃತ ನಿರಾಕರಿಸಿ ಸಿದ್ಧಾಂತವನ್ನು ಸ್ಥಾಪಿಸುತ್ತಿದ್ದಾರೆ. ಪೂರ್ವಪಕ್ಷ ನಿರಾಸಕವಾದ ನ್ಯಾಯವು ಸೂತ್ರದಲ್ಲಿ ಕಾಣಿಸುತ್ತಿಲ್ಲವೆಂಬ ಗೊಂದಲಕ್ಕೆ ಅವಕಾಶವಿಲ್ಲ. 'ಪ್ರಾಣಃ ತತ್ತು' ಎಂಬ ಪ್ರತಿಜ್ಞೆಯಿಂದಲೇ ಪೂರ್ವಪಕ್ಷಗಳನ್ನು ನಿರಾಕರಿಸಿದ್ದಾರೆ. ಹಿಂದೆ ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಎರಡು ಬಗೆಯಲ್ಲಿ ಪ್ರಮೇಯಾಶ್ರಿತ ಪೂರ್ವಪಕ್ಷಗಳನ್ನು ಮಾಡಿದ್ದರು. ಅವುಗಳಲ್ಲಿ ಅನ್ವಯವ್ಯತಿರೇಕದಿಂದ ಜೀವನಕಾರಣತ್ವವನ್ನು ವಿಷ್ಣುವಿನಲ್ಲಿ ಹೇಳಲಾಗದೆಂಬ ಶಂಕೆಯನ್ನು ಪರಿಹರಿಸುತ್ತಿದ್ದಾರೆ. ಪರಿಹಾರದ ವಿವರಣೆಯನ್ನು ಶ್ಲೋಕದ ಮೂಲಕ ಸಂಗ್ರಹಿಸಿದ್ದಾರೆ.

ವಾಯುವೃತ್ತಿರ್ಯಥಾ ಮುಖ್ಯಪ್ರಾಣದೇಹಸ್ತಥೈವ ಸಃ।
ವಿಷ್ಣೋರ್ದೇಹಸ್ತತಸ್ತಸ್ಯೈವಾನ್ವಯವ್ಯತಿರೇಕತಾ ॥

ಭೌತಿಕವಾದ ಪ್ರಾಣವಾಯುವು ಹೇಗೆ ಮುಖ್ಯಪ್ರಾಣನ ಶರೀರವಾಗಿದೆಯೋ, ಅದರಂತೆ ಮುಖ್ಯಪ್ರಾಣನು ವಿಷ್ಣುವಿನ ಶರೀರ. ಆದ್ದರಿಂದ ಅನ್ವಯವ್ಯತಿರೇಕವು ವಿಷ್ಣುವಿನಲ್ಲಷ್ಟೇ ಬರುತ್ತದೆ.

ಶ್ಲೋಕವ್ಯಾಖ್ಯಾನ - ಭೌತಿಕಪ್ರಾಣವಾಯುವು ಮುಖ್ಯಪ್ರಾಣನ ಶರೀರವಾದಂತೆ ಮುಖ್ಯಪ್ರಾಣನು ವಿಷ್ಣುವಿನ ಶರೀರನಾಗಿದ್ದಾನೆ. ಅನ್ವಯವ್ಯತಿರೇಕವನ್ನು ವಿಷ್ಣುವಿನಲ್ಲಿ ಸುಲಭವಾಗಿ ಹೇಳಬಹುದು. ಮುಂದೆ ಭೂಮಾಧಿಕರಣದಲ್ಲಿ ಹೇಳುವಂತೆ ನಮ್ಮೆಲ್ಲರ ಶರೀರದಿಂದ ಭಗವಂತನಿಗೆ ಉತ್ಕ್ರಮಣ-ವಿದೆ. ಮರಣವನ್ನು ಅಪ್ಪಿದಾಗ ಭಗವಂತನ ರೂಪವಿಶೇಷಕ್ಕೆ ನಮ್ಮ ಶರೀರದಿಂದ ವ್ಯಕ್ತ್ಯಾತ್ಮನಾ-ಸಂಯೋಗವಿರುವುದಿಲ್ಲ ಅಂದರೆ ಮೃತದೇಹದಲ್ಲಿ ಭಗವಂತನು ಶಕ್ತಿರೂಪದಿಂದ ಇದ್ದರೂ ವ್ಯಕ್ತಿರೂಪದಿಂದ ಇರುವುದಿಲ್ಲ. ಆದ್ದರಿಂದ ವ್ಯತಿರೇಕವ್ಯಾಪ್ತಿಯನ್ನು ವ್ಯಕ್ತ್ಯಾತ್ಮನಾ ಹೇಳಬಹುದು.

'ಇತರೇಣ' ಎಂಬ ಕಾಠಕಶ್ರುತಿಯಲ್ಲಿ ಇತರಶಬ್ದವು ಬ್ರಹ್ಮಪರವೇ ಆಗಿದೆ. ಏಕೆಂದರೆ, ಈ ಶ್ರುತಿಯ ಹಿಂದೆ 'ಮಧ್ಯೇ ವಾಮನಮ್' ಎಂದು ವಿಷ್ಣುಪರವಾದ ವಾಮನಶ್ರುತಿಯಿದೆ. ಮುಂದೆಯೂ 'ಗುಹ್ಯಂ ಬ್ರಹ್ಮ ಸನಾತನಮ್' ಎಂದು ವಿಷ್ಣುಪರವಾದ ಬ್ರಹ್ಮಶ್ರುತಿಯಿದೆ.

ಮತ್ತು ಮುಖ್ಯಪ್ರಾಣನು ಜೀವನಕಾರಣನಾದರೂ ಅವನಲ್ಲಿರುವ ಜೀವನಕಾರಣತ್ವವು ಭಗವದಧೀನವಾಗಿದೆ. ಆದ್ದರಿಂದಲೂ ವಿಷ್ಣುವೇ ಪ್ರಾಣಶಬ್ದದಿಂದ ಮುಖ್ಯವಾಚ್ಯನಾಗುತ್ತಾನೆ.

### ಕಠಿಣಪದಾರ್ಥ

ತತ್ಪರಿಹಾರೇಣ = ಪೂರ್ವಪಕ್ಷದ ಪರಿಹಾರದಿಂದ, ವಾಯುವೃತ್ತಿಃ = ಜಡವಾದ ಪ್ರಾಣವಾಯುವು, ಸಃ = ಮುಖ್ಯಪ್ರಾಣನು, ತಸ್ಯೈವ = ವಿಷ್ಣುವಿಗೆ, ಸೋಽಪಿ = ಮುಖ್ಯಪ್ರಾಣನಾದರೂ, ದೇಹಸ್ಥಾನೀಯಃ = ದೇಹದಂತಿದ್ದಾನೆ, ವ್ಯಕ್ತ್ಯಾತ್ಮನಾ = ಪ್ರಕಟರೂಪದಿಂದ, ತತ್ಸಂಯೋಗಾಭಾವಾತ್ = ರೂಪವಿಶೇಷದ ಸಂಯೋಗವಿಲ್ಲದ್ದರಿಂದ, ಪೂರ್ವತ್ರ = ಇತರೇಣ ಎಂಬ ಶ್ರುತಿಯ ಹಿಂದೆ, ತಸ್ಯ = ಮುಖ್ಯಪ್ರಾಣನ, ತತ್ರ = ವಿಷ್ಣುವಿನಲ್ಲಿ.

**प्रकाशः** – ननु 'एतच्छङ्कानिरासकन्यायं सूत्रे नोपलभामहे' इत्याशङ्क्य, 'प्राणस्तत्तु', इति प्रतिज्ञांशतात्पर्यं व्यञ्जयन्, आदावनुव्याख्यानोक्तप्रमेयाश्रिताभ्य-धिकाशङ्कयोर्मध्ये, न विष्णोर्जीवनादिहेतुत्वमन्वयव्यतिरेककल्प्यमिति यदुक्तं, तच्छङ्कानिवर्तनप्रकारं सङ्गृह्णाति – **तत्परिहारेणेति** ॥ **''प्राणगतजीवनादिकारणत्व-स्यापि भगवदधीनत्वात्''** इति टीका उपलक्षणम् । अत एव **''प्रेरकोऽस्यापि''** **इत्यनुव्याख्यानं** 'अस्यापि' जीवनादेरपि इत्यपि इति सुधायां व्याख्यातमिति

भावः । 'देह' इत्युक्त्या मुख्यदेहभ्रमं वारयन् व्याचष्टे – **वायुवृत्तिरिति** । 'सोऽपि' मुख्योऽपि ।

तथाच यथा प्राणशरीरभूतवायोर्जीवनं प्रत्यन्वयादिदर्शनमात्रेण मुख्यस्य तत्र हेतुत्वं, तथा मुख्यस्यापि साक्षात्प्रयत्नाधिष्ठेयत्वेन विष्णुदेहत्वात्तदन्वयादिदर्शन-मात्रेण तस्य तत्र हेतुत्वं भविष्यतीत्यर्थः । एतेनाशरीरत्वान्न तच्छरीरस्यास्मदादि-शरीरे व्यतिरेक इति निरस्तम् । प्राणस्य तच्छरीरत्वेन व्यतिरेकसम्भवात् ।

यदप्यस्मदादिशरीरे तस्य सर्वगतत्वात् व्यतिरेको नेति, तन्निरस्यति – **युक्तश्चेति** ॥ **व्यक्त्यात्मनेति** ॥ शक्त्यात्मना तत्संयोगस्य सत्त्वेन सर्वगतत्वोक्ति-रिति भावः । विवरिष्यते चैतद्भूमादिनये । यदपि नापि श्रुतिसिद्धमित्यादि, तच्च 'येन जीवन्ति' इत्यादेर्ब्रह्मपरत्वं **जन्मादिसूत्रे सिद्धमिति भावेन टीकोक्तकाठकश्रुते-**र्ब्रह्मपरत्वं साधयति – **इतरेणेति** ॥ **वामनेति** ॥ वक्ष्यते च **वामनश्रुतेर्वैष्णवत्वं** "**शब्दादेव**" इत्यत्र । प्राणगतस्येशाधीनत्वे साक्षितया **टीकोक्ताऽपि** 'इतरेण' इति श्रुतिस्तद्गतत्वेऽपि प्रमाणं भवतीति भावः ।

एवं 'जीवनहेतुत्वं प्राणपदप्रवृत्तिनिमित्तं भगवद्गतम्' इति समर्थ्य, इदानीं 'टीकोक्तरीत्याऽन्यगतं च भगवदधीनमेव ततश्च प्राणशब्दार्थो भगवानेव' इत्यभिप्रेत्याह – **किञ्चेति** ॥ नच प्रागुक्तासम्भवादिप्रसङ्गः, अनन्याधीनजीवन-हेतुत्वस्य भगवन्मात्रगतत्वेनान्यगतत्वाभावात् तस्यैव लक्षणत्वेन **जन्मादिसूत्रे** अभिप्रेतत्वादिति तात्पर्यात् । अत एव तद्गतत्वस्यापि **समर्थनमकारि** । **टीकायां तु** जन्मादिसूत्रादौ सिद्धत्वात्कण्ठतो नोक्तम् ।

ವಿವರಣೆ - ಇಲ್ಲಿಯ ತನಕ ಎರಡು ಬಗೆಯ ಪ್ರಮೇಯಾಶ್ರಿತಪೂರ್ವಪಕ್ಷಗಳನ್ನು ನಾಲ್ಕುಬಗೆಯ ಪ್ರಮಾಣಾಶ್ರಿತಪೂರ್ವಪಕ್ಷಗಳನ್ನು ಮಾಡಿದ್ದಾಯಿತು. ಆ ಎಲ್ಲ ಪೂರ್ವಪಕ್ಷಗಳನ್ನು ಪ್ರಕೃತ ನಿರಾಕರಿಸಿ ಸಿದ್ಧಾಂತವನ್ನು ಸ್ಥಾಪಿಸುತ್ತಿದ್ದಾರೆ. ಪೂರ್ವಪಕ್ಷ ನಿರಾಸಕವಾದ ನ್ಯಾಯವು ಸೂತ್ರದಲ್ಲಿ ಕಾಣಸುತ್ತಿಲ್ಲವೆಂಬ ಗೊಂದಲಕ್ಕೆ ಅವಕಾಶವಿಲ್ಲ. 'ಪ್ರಾಣಃ ತತ್ತು' ಎಂಬ ಪ್ರತಿಜ್ಞೆಯಿಂದಲೇ ಪೂರ್ವಪಕ್ಷಗಳನ್ನು ನಿರಾಕರಿಸಿದ್ದಾರೆ. ಹಿಂದೆ ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಎರಡು ಬಗೆಯಲ್ಲಿ ಪ್ರಮೇಯಾಶ್ರಿತ ಪೂರ್ವಪಕ್ಷಗಳನ್ನು ಮಾಡಿದ್ದರು. ಅವುಗಳಲ್ಲಿ ಅನ್ವಯವ್ಯತಿರೇಕದಿಂದ ಜೀವನಕಾರಣತ್ವವನ್ನು ವಿಷ್ಣುವಿನಲ್ಲಿ ಹೇಳಲಾಗದೆಂಬ ಶಂಕೆಯನ್ನು ಪರಿಹರಿಸುತ್ತಿದ್ದಾರೆ. ಪರಿಹಾರದ ವಿವರಣೆಯನ್ನು ಶ್ಲೋಕದ ಮೂಲಕ ಸಂಗ್ರಹಿಸಿದ್ದಾರೆ.

ಪ್ರಾಣಗತಜೀವನಕಾರಣಸ್ಯಾಪಿ ಭಗವದಧೀನತ್ವಾತ್' (ಪ್ರಾಣನಲ್ಲಿರುವ ಜೀವನಕಾರಣತ್ವವು ಭಗವದಧೀನವಾಗಿದೆ) ಎಂಬ ಟೀಕೆಯ ಮಾತು ಉಪಲಕ್ಷಣವಾಗಿದೆ. ಆದ್ದರಿಂದಲೇ 'ಪ್ರೇರಕೋಽಸ್ಯಾಪಿ' ಎಂಬ ಅನುವ್ಯಾಖ್ಯಾನವನ್ನು ಸುಧೆಯಲ್ಲಿ 'ಅಸ್ಯಾಪಿ = ಜೀವನಸ್ಯಾಪಿ' ಎಂದು ವ್ಯಾಖ್ಯಾನಿಸಿದ್ದಾರೆ. ಟೀಕೆಯಲ್ಲಿ ಸ್ವಾತಂತ್ರ್ಯಪ್ರವೃತ್ತಿನಿಮಿತ್ತವನ್ನಷ್ಟೇ ಹೇಳಿದ್ದಾರೆ. ತದ್ಗತತ್ವವನ್ನು ಉಪಲಕ್ಷಣಯಾ ಇಟ್ಟು-ಕೊಳ್ಳಬೇಕೆಂದು ಸುಧೆಯ ಈ ಮಾತಿನಿಂದ ತಿಳಿಯುತ್ತದೆ. ಮುಖ್ಯಪ್ರಾಣನು ಭಗವಂತನ ಮುಖ್ಯ-ಶರೀರನೆಂಬ ಭ್ರಾಂತಿಯನ್ನು ಉದಾಹರಣೆಯ ಮೂಲಕ 'ವಾಯುವೃತ್ತಿ' ಎಂಬ ವಾಕ್ಯದಿಂದ ಪರಿಹರಿಸು-ತ್ತಿದ್ದಾರೆ. ಹೇಗೆ ಮುಖ್ಯಪ್ರಾಣನಿಗೆ ಭೌತಿಕಪ್ರಾಣವು ಸಾಕ್ಷಾತ್‌ಪ್ರಯತ್ನಕ್ಕೆ ಅಧಿಷ್ಠಾನವಾದ ಮಾತ್ರದಿಂದ ಶರೀರ ಎನಿಸಿದೆಯೋ ಅದೇ ರೀತಿಯಲ್ಲಿ ಭಗವಂತನ ಸಾಕ್ಷಾತ್‌ಪ್ರಯತ್ನಕ್ಕೆ ಅಧಿಷ್ಠಾನನಾದ ಕಾರಣ ಮುಖ್ಯಪ್ರಾಣನು ಶರೀರ ಎನಿಸಿದ್ದಾನೆ. ಭೌತಿಕಪ್ರಾಣಶರೀರಕ್ಕೂ ಮುಖ್ಯಪ್ರಾಣನಿಗೂ ಅನ್ವಯವ್ಯಾಪ್ತಿ-ಯಿಂದಷ್ಟೇ ಕಾರಣತ್ವವನ್ನು ನಿರ್ಣಯಿಸಲಾಗಿದೆ. ಅದೇ ರೀತಿಯಲ್ಲಿ ಮುಖ್ಯಪ್ರಾಣನಿಗೂ ವಿಷ್ಣುವಿಗೂ ಅನ್ವಯವ್ಯಾಪ್ತಿ ಇರುವುದರಿಂದ ಜೀವನಕಾರಣತ್ವವನ್ನು ಸಾಧಿಸಬಹುದು. ಹೀಗೆ ಹೇಳಿದ್ದರಿಂದ ಅಶರೀರಿಯಾದ ವಿಷ್ಣುವಿಗೆ ನಮ್ಮ ಶರೀರದಲ್ಲಿ ವ್ಯತಿರೇಕವನ್ನು ಹೇಳಲಾಗದೆಂಬ ಆಕ್ಷೇಪವನ್ನು ಪರಿಹರಿಸಿದಂತಾಯಿತು. ಭಗವಂತನಿಗೆ ಮುಖ್ಯಪ್ರಾಣನು ಶರೀರನಾಗಿರುವುದರಿಂದ ವ್ಯತಿರೇಕವನ್ನು ಹೇಳಬಹುದು.

ಸರ್ವಗತನಾದ ಭಗವಂತನಿಗೆ ನಮ್ಮ ಶರೀರದಲ್ಲಿ ವ್ಯತಿರೇಕವನ್ನು ಹೇಳಲು ಹೇಗೆ ಸಾಧ್ಯ ? ಎಂಬ ಶಂಕೆಯನ್ನು ''ಯುಕ್ತಶ್ಚ'' ಎಂಬ ವಾಕ್ಯದಿಂದ ನಿರಾಕರಿಸಿದ್ದಾರೆ. ಶಕ್ತ್ಯಾತ್ಮನಾ ಭಗವಂತನ ರೂಪಕ್ಕೆ ಸಂಯೋಗ ಇರುವುದರಿಂದ ಸರ್ವಗತತ್ವವನ್ನು ಶಾಸ್ತ್ರಗಳಲ್ಲಿ ಹೇಳಿದ್ದಾರೆ. ಆದರೆ ವ್ಯಕ್ತ್ಯಾತ್ಮನಾ ರೂಪವಿಶೇಷಕ್ಕೆ ಸಂಯೋಗವಿಲ್ಲದ ಕಾರಣ ವ್ಯತಿರೇಕವನ್ನು ಹೇಳಬಹುದು. ಹೆಚ್ಚಿನ ವಿಚಾರವನ್ನು ಭೂಮಾಧಿಕರಣದಲ್ಲಿ ಹೇಳಲಾಗಿದೆ.

ಇನ್ನು ಹಿಂದೆ ಪೂರ್ವಪಕ್ಷ ಮಾಡುವಾಗ ಜೀವನಕಾರಣತ್ವವು ಭಗವಂತನಲ್ಲಿ ಶ್ರುತಿಯಿಂದಲೂ ಸಿದ್ಧವಾಗಿಲ್ಲವೆಂದು ಆಕ್ಷೇಪಿಸಲಾಗಿತ್ತು. ಆದರೆ ಜನ್ಮಾಧಿಕರಣದಲ್ಲಿ ಸಾಧಿಸಿದಂತೆ 'ಯೇನ ಜಾತಾನಿ ಜೀವಂತಿ' ಎಂಬ ಶ್ರುತಿಯನ್ನು ವಿಷ್ಣುಪರವಾಗಿಯೇ ಅರ್ಥೈಸಬೇಕು. ಮುಖ್ಯಪ್ರಾಣಪರವಾಗಿ ಅರ್ಥೈಸಲಾಗದು. ಈ ಅಭಿಪ್ರಾಯದಿಂದ ಟೀಕೆಯಲ್ಲಿ ಹೇಳಿದ 'ಇತರೇಣ ತು ಜೀವಂತಿ' ಎಂಬ ಕಾಠಕ ಶ್ರುತಿಗೆ 'ಇತರೇಣ' ಎಂಬ ಗ್ರಂಥದಿಂದ ಬ್ರಹ್ಮಪರತ್ವವನ್ನು ಸಾಧಿಸುತ್ತಿದ್ದಾರೆ. 'ಇತರೇಣ ತು' ಎಂಬ ಶ್ರುತಿಯ ಹಿಂದೆ ವಾಮನಶ್ರುತಿಯಿದೆ. 'ಶಬ್ದಾದೇವ ಪ್ರಮಿತಃ' ಎಂಬ ಸೂತ್ರದಲ್ಲಿ ಸಮರ್ಥಿಸುವಂತೆ ಈ ವಾಮನಶ್ರುತಿಯು ವಿಷ್ಣುಪರವಾಗಿದೆ. ಆದ್ದರಿಂದ 'ಇತರೇಣ' ಎಂಬ ಶ್ರುತಿಯು ವಿಷ್ಣುಪರವೇ ಆಗಬೇಕು. ಅಷ್ಟೇ ಅಲ್ಲದೆ 'ಗುಹ್ಯಂ ಬ್ರಹ್ಮ'ನೆಂಬ ಮುಂದಿನ ಶ್ರುತಿಯು ವಿಷ್ಣುಪರವಾಗಿದೆ. ಪ್ರಾಣನಲ್ಲಿರುವ ಜೀವನಕಾರಣತ್ವವು ವಿಷ್ಣುವಿನ ಅಧೀನವಾಗಿದೆ. ಅಷ್ಟೇ ಅಲ್ಲದೆ ಭಗವದ್ಗತವೂ ಆಗಿದೆ. ಹೀಗೆ ಸ್ವಾತಂತ್ರ್ಯ ಮತ್ತು ತದ್ಗತತ್ವವೆಂಬ ಎರಡು ಪ್ರವೃತ್ತಿನಿಮಿತ್ತಗಳು ಭಗವಂತನಲ್ಲಿರುವುದರಿಂದ ಭಗವಂತನು ಪ್ರಾಣನಾಗುತ್ತಾನೆನ್ನಲು 'ಇತರೇಣ' ಎಂಬ ಶ್ರುತಿಯೇ ಪ್ರಮಾಣವಾಗಿದೆ. ಆದ್ದರಿಂದ ಜೀವನಹೇತುತ್ವವು ಪ್ರಾಣಪದದ ಪ್ರವೃತ್ತಿನಿಮಿತ್ತವಾಗಿದೆ; ಇದರಿಂದ ಭಗವದ್ಗತವಾಗಿದೆ ಎಂದು ಸಮರ್ಥಿಸಿದಂತಾಯಿತು.

ಪರಿಪೂರ್ಣಚಂದ್ರಿಕಾ

ಮುಂದೆ ಟೀಕೆಯಲ್ಲಿ ಹೇಳಿದಂತೆ ಪ್ರಾಣನಲ್ಲಿರುವ ಜೀವನಹೇತುತ್ವವು ಭಗವದಧೀನವಾಗಿದೆ. ಆದ್ದರಿಂದಲೂ ಭಗವಂತನು ಪ್ರಾಣನೆನಿಸುತ್ತಾನೆ ಎಂದು 'ಕಿಂಚ' ಎಂಬ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ. ಹಾಗಾದರೆ ಮುಖ್ಯಪ್ರಾಣನಲ್ಲಿ ಜೀವನಕಾರಣತ್ವವಿದೆ; ಅದು ಭಗವಂತನ ಅಧೀನವೆಂದು ಹೇಳಿದಂತಾಯಿತು. ಇದರಿಂದ ಭಗವಂತನ ಲಕ್ಷಣಕ್ಕೆ ಅತಿವ್ಯಾಪ್ತಿ ಹಾಗೂ ಅಸಂಭವ ದೋಷಗಳು ಬರುತ್ತವಲ್ಲವೇ? ಎಂಬ ಶಂಕೆಗೆ ಅವಕಾಶವಿಲ್ಲ. ಏಕೆಂದರೆ ಅನನ್ಯಾಧೀನವಾದ ಜೀವನಹೇತುತ್ವವು ಭಗವಂತನ ಲಕ್ಷಣ. ಇದನ್ನೇ ಜನ್ಮಾದಿಸೂತ್ರದಲ್ಲಿ ಹಿಂದೆ ಸಮರ್ಥಿಸಿದ್ದೇವೆ. ಮುಖ್ಯಪ್ರಾಣನಲ್ಲಿರುವ ಜೀವನಹೇತುತ್ವವು ಭಗವದಧೀನವಾದ್ದರಿಂದ ಅನನ್ಯಾಧೀನವಾಗಿಲ್ಲ. ಆದ್ದರಿಂದ ಅತಿವ್ಯಾಪ್ತಿ ಮತ್ತು ಅಸಂಭವದೋಷಗಳಿಗೆ ಅವಕಾಶವಿಲ್ಲ.

ಅಥವಾ ಈ ದೋಷಗಳು ಬರಬಾರದೆಂದೇ ತದ್ಗತತ್ವವನ್ನು ವಿಷ್ಣುವಿನಲ್ಲಿ ಸಮರ್ಥಿಸಿದ್ದಾರೆ. ಟೀಕೆಯಲ್ಲಿ ತದ್ಗತತ್ವವನ್ನು ಹೇಳದಿದ್ದರೂ ಜನ್ಮಾದಿಸೂತ್ರದಲ್ಲಿ ಸಿದ್ಧವಾಗಿದೆಯೆಂದು ಅವರ ಅಭಿಪ್ರಾಯ. ಹಾಗಾಗಿ ಸ್ವಾತಂತ್ರ್ಯ ಮತ್ತು ತದ್ಗತತ್ವವೆಂಬ ಎರಡು ಪ್ರವೃತ್ತಿನಿಮಿತ್ತಗಳನ್ನು ಆಧರಿಸಿ ಪ್ರಾಣಾದಿಶಬ್ದಗಳಿಂದ ಭಗವಂತನೇ ಮುಖ್ಯವಾಗಿ ವಾಚ್ಯನಾಗುತ್ತಾನೆ. ಪ್ರಮೇಯಾಶ್ರಿತವಾದ ಯಾವುದೇ ಶಂಕೆಗಳಿಗೂ ಅವಕಾಶವಿಲ್ಲ. ಇಲ್ಲಿಗೆ ಪ್ರಮೇಯಾಶ್ರಿತಪೂರ್ವಪಕ್ಷದ ನಿರಾಕರಣೆಯು ಮುಗಿಯಿತು.

**गुरुराजीयम्** – यदुक्तं 'कुलालशरीरस्य घटं प्रतीव मुख्यप्राणशरीरभूतवायोर्जीवनं प्रत्यन्वयव्यतिरेकदर्शनमात्रेण तस्य तत्र हेतुत्वम्' इति तं पूर्वपक्षं निराकरोति – **वायुवृत्तिरित्यादिना** ॥ अत्रोक्तं ब्रह्मणः सर्वगतत्वादशरीरत्वाच्च तस्य वा तच्छरीरस्य वाऽस्मदादिशरीरेऽभावेन तद्व्यतिरेकेण जीवनव्यतिरेको न सम्भवतीति बाधकं परिहरति – **युक्तश्चेति** ॥

एवं विष्णोर्जीवनादिहेतुत्वमन्वयव्यतिरेकाभ्यामुपपाद्य श्रुत्याप्युपपादयति – **इतरेणेति** ॥ ननु कथमनया श्रुत्या ब्रह्मणो जीवनहेतुताग्रहः । तस्याः प्राणपरत्वात् । नच प्राणपरत्वे इतरशब्दानुपपत्तिः । वायुवृत्तिरूपप्रसिद्धप्राणेतरत्वविवक्षया प्राणेपि सम्भवादित्यत आह – **पूर्वत्रेति** ॥ एवं प्रमेयाश्रितां शङ्कां निराकृत्याधुनाऽन्यात्वित्यादिनोक्तां प्रमाणाश्रितां शङ्कां निराकर्तुमाह – **किञ्चेति** ॥

## ಸಾರ

ನಮ್ಮೆಲ್ಲರ ಜೀವನಕ್ಕೆ ಕಾರಣನಾದವನು ಭಗವಂತನೇ ಆಗಿದ್ದಾನೆ. ಭೌತಿಕವಾದ ಪ್ರಾಣವಾಯುವು ವಾಯುದೇವನಿಗೆ ಹೇಗೆ ಶರೀರವಾಗಿದೆಯೋ ಅದರಂತೆ ವಾಯುದೇವರು ಭಗವಂತನ ಶರೀರದಂತಿದ್ದಾರೆ. ಸರ್ವರ ಜೀವನಕ್ಕೆ ಕಾರಣನಾದ ವಾಯುದೇವರೇ ಭಗವಂತನ ಶರೀರವಾಗಿರುವಾಗ ಅವನಿಗೆ ಪ್ರೇರಕನಾದ

ಭಗವಂತನು ಸಕಲಜೀವರ ಜೀವನಕ್ಕೆ ಕಾರಣನಾಗಿರಲೇ ಬೇಕು. ದೇಹದ ಕ್ರಿಯೆಗೆ ಜೀವನು ಹೇಗೆ ಪ್ರವರ್ತಕನಾಗಿರುತ್ತಾನೋ, ಅದರಂತೆ ಸಕಲಪ್ರಾಣಾದಿದೇವತೆಗಳ ಕ್ರಿಯೆಗಳಿಗೂ ಭಗವಂತನೇ ಪ್ರವರ್ತಕನಾಗಿದ್ದಾನೆ. ಆದ್ದರಿಂದ ಎಲ್ಲರಲ್ಲಿರುವ ಧರ್ಮಗಳಿಗೂ ಅವನೇ ನಿಯಾಮಕನು.

ಭಗವಂತನು ಯಾವಾಗಲೂ ಎಲ್ಲಾ ಕಡೆಯಿದ್ದರೂ ತನ್ನ ವಿಶಿಷ್ಟವಾದ ಒಂದುರೂಪವನ್ನು ಪ್ರಕಟಮಾಡಿ ಜೀವನಕ್ಕೆ ಕಾರಣನಾಗಿದ್ದಾನೆ. ಆ ರೂಪವನ್ನು ಅಂತರ್ಧಾನಗೊಳಿಸಿದಾಗ ಸಾವಿಗೆ ತುತ್ತಾಗುತ್ತಾರೆ.

ಮತ್ತು ಕಾಠಕದಲ್ಲಿರುವ 'ಇತರೇಣ ತು' ಎಂಬ ಶ್ರುತಿಯು ಪ್ರಾಣಪರವಾಗುವುದಿಲ್ಲ. ಇಲ್ಲಿರುವ ಇತರಶಬ್ದವು ಬ್ರಹ್ಮಪರವೆ ಆಗಿದೆ. ಹಿಂದಿನ ಮುಂದಿನ ವಾಕ್ಯಗಳು ಬ್ರಹ್ಮನನ್ನೇ ಪ್ರತಿಪಾದಿಸುತ್ತಿರುವಾಗ ಮಧ್ಯದ ಈ ವಾಕ್ಯವು ಬ್ರಹ್ಮನನ್ನು ಪ್ರತಿಪಾದಿಸದೆ ಇರಲಾರದಲ್ಲವೇ?

— — — — — —

## ಪ್ರಾಣನು ವಿಷ್ಣುವಾಗಬಹುದು; ಲಕ್ಷ್ಮಿಯು ಭಾರತಿಯಾಗುವುದಿಲ್ಲ

**तात्पर्यचन्द्रिका –**

**लक्ष्म्यादिशब्दानां तु बहुत्वादन्यत्रप्रयोगाभावात् मुख्यार्थत्यागापातात् अन्यपरत्वे मानाभावाच्च नान्यत्र यौगिकता । प्राणशब्दस्य त्वेकत्वात् 'प्राणस्य प्राणः' इत्यादौ ब्रह्मणि प्रयोगात् तत्र परममुख्यत्वेन मुख्यार्थात्यागात् ''नामानि सर्वाणि'' इत्यादिमानसद्भावाच्च ब्रह्मपरता ।**

**आपेक्षिकाच्च मुख्यत्वाद्वायौ मुख्यपदं भवेत् ।**
**यथा पराक्षरपदं श्रीतत्त्वे मध्यमाक्षरे ॥**

**मुख्यप्राणो हि करणभूतचक्षुरादिप्राणापेक्षया मुख्यः । दृश्यते च मध्यमाक्षरेऽपि श्रीतत्त्वे 'तामक्षरं परं प्राहुः' इत्यादौ परशब्दः, जडप्रकृतिरूपाधमाक्षरात् परत्वात् । अत एव श्रुतिः ''प्राण एवाकरणः तस्मान्मुख्यस्तस्मान्मुख्यः'' इति, ''योऽयं मध्यमः प्राणः'' इति च ।**

ಅನುವಾದ - ಮುಖ್ಯಪ್ರಾಣನಲ್ಲಷ್ಟೇ ಪ್ರಸಿದ್ಧವಾದ ಪ್ರಾಣಶಬ್ದವನ್ನು ಭಗವಂತನಲ್ಲಿ ಸಮನ್ವಯ ಮಾಡುವುದಾದರೆ ಲಕ್ಷ್ಮಿಯಲ್ಲಷ್ಟೇ ಪ್ರಸಿದ್ಧವಾದ ಲಕ್ಷ್ಮ್ಯಾದಿಶಬ್ದಗಳನ್ನು ಭಾರತಿಯಲ್ಲೇಕೆ ಸಮನ್ವಯ ಮಾಡಬಾರದು? ಎಂಬ ಶಂಕೆಗೆ ಅವಕಾಶವಿಲ್ಲ. ಏಕೆಂದರೆ ಲಕ್ಷ್ಮ್ಯಾದಿಶಬ್ದಗಳು 'ಶ್ರೀ ಹ್ರೀ' ಇತ್ಯಾದಿಯಾಗಿ ಬಹಳ ಇವೆ. ಮತ್ತು ಬೇರೆಲ್ಲಿಯೂ ಈ ಶಬ್ದಗಳ ಪ್ರಯೋಗವಿಲ್ಲ. ಬೇರೆ ಬೇರೆ ಪ್ರಯೋಗಿಸಿದರೆ ಮುಖ್ಯಾರ್ಥಹಾನಿಯೆಂಬ ದೋಷ ಬರುತ್ತದೆ. ಮತ್ತು ಭಾರತ್ಯಾದಿ ಪರವೆನ್ನಲು

ಯಾವುದೇ ಪ್ರಮಾಣವಿರುವುದಿಲ್ಲ. ಆದ್ದರಿಂದ ಯೌಗಿಕವಾಗಿ ಲಕ್ಷ್ಮ್ಯಾದಿಶಬ್ದಗಳು ಭಾರತಿಯನ್ನು ಪ್ರತಿಪಾದಿಲಾರವು. ಆದರೆ ಪ್ರಾಣಶಬ್ದವು ಭಗವಂತನು ಪ್ರತಿಪಾದಿಸಲು ಅಡ್ಡಿಯಿಲ್ಲ. ಏಕೆಂದರೆ ಪ್ರಾಣಶಬ್ದವು ಒಂದೇ ಆಗಿದೆ. 'ಪ್ರಾಣಸ್ಯ ಪ್ರಾಣಃ' ಇತ್ಯಾದಿಯಾಗಿ ಬ್ರಹ್ಮನಲ್ಲಿ ಪ್ರಯೋಗವೂ ಇದೆ. ಬ್ರಹ್ಮನಲ್ಲಿ ಪರಮಮುಖ್ಯವೃತ್ತಿಯಿಂದ ಇರುವ ಕಾರಣ ಮುಖ್ಯಾರ್ಥಹಾನಿದೋಷವಿಲ್ಲ. ನಾಮಾನಿ ಸರ್ವಾಣಿ' ಇತ್ಯಾದಿಯಾಗಿ ಅನೇಕ ಪ್ರಮಾಣಗಳೂ ಆಧಾರವಾಗಿವೆ.

ಆಪೇಕ್ಷಿಕಾಚ್ಚ ಮುಖ್ಯತ್ವಾದ್ವಾಯೌ ಮುಖ್ಯಪದಂ ಭವೇತ್ ।
ಯಥಾ ಪರಾಕ್ಷರಪದಂ ಶ್ರೀತತ್ವೇ ಮಧ್ಯಮಾಕ್ಷರೇ ॥

ಮುಖ್ಯಪ್ರಾಣನಲ್ಲಿ ಆಪೇಕ್ಷಿಕವಾದ ಮುಖ್ಯತ್ವವಿರುವುದರಿಂದ ಮುಖ್ಯಪದದ ಪ್ರಯೋಗವಿದೆ. ಜಡಪ್ರಕೃತಿಗಿಂತ ಶ್ರೇಷ್ಠವಾದ ಶ್ರೀತತ್ವದಲ್ಲಿ ಪರಾಕ್ಷರಪದವಾಚ್ಯತ್ವವು ಹೇಗೆ ಇದೆಯೋ ಅದರಂತೆ.

ಮುಖ್ಯಪ್ರಾಣನಾದರೋ ಕರಣಭೂತವಾದ ಚಕ್ಷುರಾದಿ ಜಡಪ್ರಾಣಗಳಿಗಿಂತ ಮುಖ್ಯನಾಗಿದ್ದಾನೆ. ಇದರಿಂದಷ್ಟೇ ಅವನು ಮುಖ್ಯವಾಯು ಹೊರತು ಇವನಿಗಿಂತ ಮತ್ತೊಬ್ಬ ಮುಖ್ಯವಾಯುವಿಲ್ಲ-ವೆಂದಲ್ಲ. ಉದಾಹರಣೆ -- ಶ್ರೀತತ್ವವು ವಸ್ತುತಃ ಮಧ್ಯಮಾಕ್ಷರವಾಗಿದೆ. ಆದರೂ 'ತಾಮಕ್ಷರಂ ಪರಂ ಪ್ರಾಹುಃ' ಎಂಬಲ್ಲಿ ಪರಾಕ್ಷರಪದದಿಂದ ಪ್ರತಿಪಾದ್ಯವಾಗಿದೆ. ಅಧಮಾಕ್ಷರವಾದ ಜಡಪ್ರಕೃತಿ-ಗಿಂತ ಶ್ರೇಷ್ಠವಾದ್ದರಿಂದ ಮಧ್ಯಮಾಕ್ಷರವನ್ನು ಪರಾಕ್ಷರವೆನ್ನುವುದು ತಪ್ಪಲ್ಲ. ಇಲ್ಲಿ ಕೇವಲ ಆಪೇಕ್ಷಿಕ-ಪರತ್ವವನ್ನಷ್ಟೇ ನಾವು ತಿಳಿಯುತ್ತೇವೆ. ಆದರಂತೆ ಮುಖ್ಯಪ್ರಾಣವಿಷಯದಲ್ಲಿಯೂ ತಿಳಿಯಬೇಕು. ಆದ್ದರಿಂದ 'ಪ್ರಾಣ ಏವಾಕರಣಸ್ತಸ್ಮಾನ್ಮುಖ್ಯಸ್ತಮಾನ್ಮುಖ್ಯಃ' ಎಂಬ ಶ್ರುತಿಯು ಭಗವಂತನನ್ನೇ ಮುಖ್ಯನೆನ್ನುತ್ತಿದೆ. ಮತ್ತು 'ಯೋಽಯಂ ಮಧ್ಯಮಪ್ರಾಣಃ' ಎಂಬ ಶ್ರುತಿಯು ಇದನ್ನೇ ಹೇಳಿದೆ.

### ಕಠಿಣಪದಾರ್ಥ

ಲಕ್ಷ್ಮ್ಯಾದಿಶಬ್ದಾನಾಂ = ಲಕ್ಷ್ಮೀ, ಶ್ರೀ, ಹ್ರೀ ಇತ್ಯಾದಿ ಶಬ್ದಗಳು; ಅನ್ಯತ್ರ = ಭಾರತಿಯಲ್ಲಿ, ಪ್ರಯೋಗಾಭಾವಾತ್ = ಲೋಕದಲ್ಲಿ ಪ್ರಸಿದ್ಧವಾಗದ ಕಾರಣ, ಏಕತ್ವಾತ್ = ಪ್ರಾಣನನ್ನು ಹೇಳುವ ಇತರಶಬ್ದಗಳು ಇಲ್ಲದ ಕಾರಣ; ಇತ್ಯಾದೌ = ತಲವಕಾರದಲ್ಲಿ; ಮಧ್ಯಮಾಕ್ಷರೇ = ಲಕ್ಷ್ಮಿಯಲ್ಲಿ; ಅಧಮಾಕ್ಷರಾತ್ = ಜಡಪ್ರಕೃತಿಗಿಂತ; ಅತ ಏವ = ಆಪೇಕ್ಷಿಕವಾದ ಮುಖ್ಯತ್ವವಿರುವುದರಿಂದಲೇ;

**प्रकाशः** – एवं प्रमेयाश्रिता शङ्कां परिहृत्य, याऽपि प्राणशब्दस्य योगेन विष्णुपरत्वे लक्ष्म्यादिशब्दानामपि प्राणभार्यापरत्वमिति प्रमाणाश्रिता, तां तावत् सङ्गतत्वात् परिहरति – **लक्ष्म्यादीति** ॥ लक्ष्मीश्रीह्रीशब्दानां सत्त्वादिति भावः । 'अन्यत्र' प्राणभार्यायाम् । 'लोकतः' इति योज्यम् । तेन न रूढिरिति भावः ।

**शंरूपमाश्रिता वायुं श्रीरित्येव च कीर्त्यते ।**

इत्यादिस्तु न प्रसिद्ध इति भावः । लक्ष्मीशब्दे तदभावाच्च । अत एव 'लक्ष्म्यादि' इत्युक्तम् । **एकत्वादिति** ॥ मातरिश्वश्रुतेर्गतेर्वक्ष्यमाणत्वादिति भावः । 'इत्यादौ' तलवकारे । **''प्राणादयो वाक्यशेषात्''** इत्यत्र ''प्राणस्य प्राण'' इत्यादौ वक्ष्यमाणप्राणप्राणदत्वादिलिङ्गसाम्याद्वैष्णवत्वमिति भावः ॥ **परमेति** ॥ प्रवृत्तिनिमित्तपौष्कल्यादिति भावः । याऽपि मुख्यपदप्रयोगादिना सूचिता शङ्का, तां निराचष्टे **आपेक्षिकाचेति** ॥ श्लोकं व्याचष्टे – **मुख्यप्राणो हीति** ॥ आपेक्षिकत्वे कथं मुख्यत्वमित्यत उत्तरार्धं व्याचष्टे – **दृश्यते चेति** ॥

**अपरं त्वक्षरं या सा प्रकृतिर्जडरूपिका ।**
**श्रीः परा प्रकृतिः प्रोक्ता चेतना विष्णुसंश्रया ।**
**तामक्षरं परं प्राहुः परतः परमक्षरम् ।**
**हरिमेवाखिलगुणमक्षरत्रयमीरितम् ॥**

इत्यदृश्यत्वनयभाष्यस्थस्मृतावित्यर्थः । 'अत एव' आपेक्षिकमुख्यत्वादेव ॥ **श्रुतिरिति** ॥ ''चक्षुरादिवत्तु'' इत्यत्र भाष्योक्ता । तथाच न प्राणशब्दपरम-मुख्यार्थत्वं मुख्यप्राणस्य, किन्तु हरेरेव,

**अन्यव्यपेक्षया वायौ मुख्यवृत्तिर्विधीयते ।**
**तस्मात्प्राणादिशब्दाश्च विष्णावेव हि मुख्यतः ॥**

इत्यैतरेयभाष्योक्तेरिति भावः । **''अयं वाव शिशुः योऽयं मध्यमः प्राणः''** इति बृहदारण्यकोक्त्या हरिरेवोत्तमप्राण इति लाभादिति भावः ।

ವಿವರಣೆ - ಮುಂದೆ ನಾಲ್ಕುಬಗೆಯ ಪ್ರಮಾಣಾಶ್ರಿತಪೂರ್ವಪಕ್ಷಗಳನ್ನು ಪರಿಹರಿಸುತ್ತಿದ್ದಾರೆ. ಪ್ರಾರಂಭದಲ್ಲಿ ಪ್ರಾಣಶಬ್ದವನ್ನು ಯೋಗವೃತ್ತಿಯಿಂದ ವಿಷ್ಣುವಿನಲ್ಲಿ ಸಮನ್ವಯ ಮಾಡುವುದಾದರೆ ಲಕ್ಷ್ಮ್ಯಾದಿಶಬ್ದಗಳನ್ನು ಭಾರತ್ಯಾದಿಗಳಲ್ಲೇಕೆ ಸಮನ್ವಯ ಮಾಡಬಾರದು? ಎಂಬ ಪ್ರಮಾಣಾಶ್ರಿತವಾದ ಪೂರ್ವಪಕ್ಷವನ್ನು ಮೊದಲು "ಲಕ್ಷ್ಮ್ಯಾದಿ" ಎಂಬ ವಾಕ್ಯದಿಂದ ಪರಿಹರಿಸುತ್ತಿದ್ದಾರೆ. ವಸ್ತುತಃ ಬಹು-ಶ್ರುತಿತ್ವದೋಷವನ್ನು ಮೊದಲು ಪರಿಹರಿಸಬೇಕು. ಆದರೆ, ಹಿಂದೆ ಆಕ್ಷೇಪದಿಂದ ಪ್ರಸಕ್ತವಾದ್ದರಿಂದ ಎರಡನೆಯ ಪ್ರಮಾಣಾಶ್ರಿತಪೂರ್ವಪಕ್ಷವನ್ನೇ ಮೊದಲು ಪರಿಹರಿಸುತ್ತಿದ್ದಾರೆ. 'ಲಕ್ಷ್ಮೀ, ಶ್ರೀ, ಹ್ರೀ' ಇತ್ಯಾದಿ ಅನೇಕಶಬ್ದಗಳನ್ನು ಭಾರತಿಯಲ್ಲಿ ಸಮನ್ವಯ ಮಾಡುವುದು ಕಷ್ಟ. ಮತ್ತು ಲೋಕದಲ್ಲಿ ಈ ಶಬ್ದಗಳನ್ನು ಕೇವಲ ಲಕ್ಷ್ಮಿಯಲ್ಲಷ್ಟೇ ಪ್ರಯೋಗಿಸುತ್ತಾರೆ; ಭಾರತ್ಯಾದಿಗಳಲ್ಲಿ ಪ್ರಯೋಗಿಸುವುದಿಲ್ಲ.

ಆದ್ದರಿಂದ ಭಾರತ್ಯಾದಿಗಳಲ್ಲಿ ರೂಢಿಯನ್ನು ಆಕ್ಷೇಪಿಸಲಾಗದು. ''ಶಂ ರೂಪಮಾಶ್ರಿತಾ ವಾಯುಂ ಶ್ರೀರಿತ್ಯೇವ ಚ ಕೀರ್ತ್ಯತೇ'' 'ಶಂಶಬ್ದದಿಂದ ವಾಚ್ಯನಾದ ವಾಯುವನ್ನು ಆಶ್ರಯಿಸಿದ ಕಾರಣ ಭಾರತಿಯು ಶ್ರೀ ಎನಿಸಿದ್ದಾಳೆ ಎಂದು ಈ ಮಾತಿನ ಅರ್ಥ. ಆದ್ದರಿಂದ ಶ್ರೀಶಬ್ದವನ್ನು ಭಾರತಿಯಲ್ಲಿ ಪ್ರಯೋಗಿಸ-ಬಹುದಲ್ಲವೇ? ಎಂದು ಶಂಕಿಸಬಾರದು. ಏಕೆಂದರೆ ಲೋಕದಲ್ಲಿ ಯಾರೂ ಸಹ ಈ ಅರ್ಥವನ್ನು ತಿಳಿದಿಲ್ಲ. ಅಪ್ರಸಿದ್ಧವಾದ್ದರಿಂದ ಶ್ರೀಶಬ್ದದ ರೂಢಿಯನ್ನು ಭಾರತಿಯಲ್ಲಿ ಹೇಳುವುದು ಕಷ್ಟ. ಮತ್ತು ಶ್ರೀಶಬ್ದಕ್ಕೆ ಹೀಗೆ ಪ್ರಮಾಣವಿದ್ದರೂ ಲಕ್ಷ್ಮೀಶಬ್ದದಿಂದ ಭಾರತಿ ವಾಚ್ಯವಾಗಲು ಯಾವುದೇ ಪ್ರಮಾಣವಿಲ್ಲ. ಆದ್ದರಿಂದಲೇ ಗ್ರಂಥಕಾರರು ಶ್ರೀಶಬ್ದವನ್ನು ಉಲ್ಲೇಖಿಸದೆ ಲಕ್ಷ್ಮೀಶಬ್ದವನ್ನು ಉಲ್ಲೇಖಿಸಿದ್ದಾರೆ.

ಲಕ್ಷ್ಮೀವಾಚಕಶಬ್ದಗಳು ಅನೇಕವಿದ್ದಂತೆ ಪ್ರಾಣವಾಚಕಶಬ್ದಗಳು ಅನೇಕವಿಲ್ಲ. ವಸ್ತುತಃ ಮಾತರಿಶ್ವಾದಿ ಶಬ್ದಗಳು ಇರಬಹುದು. ಆದರೆ ಆ ಶಬ್ದಗಳಿಗೆಲ್ಲ ವಿಷ್ಣುಪರತ್ವವನ್ನು ಅಂಗೀಕರಿಸುವುದು ಅನಿವಾರ್ಯ-ವೆಂದು ಮುಂದೆ ನಿರೂಪಿಸುತ್ತೇವೆ. 'ಪ್ರಾಣಾದಯೋ ವಾಕ್ಯಶೇಷಾತ್' ಎಂಬ ಸೂತ್ರದಲ್ಲಿ 'ಪ್ರಾಣಸ್ಯ ಪ್ರಾಣಮ್' ಎಂಬ ಶ್ರುತಿಯನ್ನು ಉಲ್ಲೇಖಿಸಿದ್ದಾರೆ. ಇದು ನೇರವಾಗಿ ಭಗವಂತನನ್ನೇ ಪ್ರಾಣನೆಂದು ಕರೆಯುತ್ತಿದೆ. ಇಲ್ಲಿರುವ ಪ್ರಾಣಪ್ರಾಣದತ್ವಲಿಂಗದಿಂದ 'ತದ್ವೈ ತ್ವಂ ಪ್ರಾಣಃ' ಎಂಬಲ್ಲಿರುವ ಪ್ರಾಣಶಬ್ದ-ದಿಂದಲೂ ವಿಷ್ಣುವೇ ಪ್ರಾಣನಾಗಿದ್ದಾನೆಂದು ತಿಳಿಯಬೇಕು. ಏಕೆಂದರೆ ಪ್ರಾಣಶಬ್ದದ ಪ್ರವೃತ್ತಿನಿಮಿತ್ತವು ವಿಷ್ಣುವಿನಲ್ಲಿ ಪುಷ್ಕಲವಾಗಿದೆ.

ಇನ್ನು 'ಪ್ರಾಣಶಬ್ದವು ಮುಖ್ಯಪ್ರಾಣನಲ್ಲೇ ಪ್ರಸಿದ್ಧವಾಗಿದೆ' ಎಂಬ ಮೂರನೆಯ ಪ್ರಮಾಣಾಶ್ರಿತ-ಶಂಕೆಯನ್ನು 'ಆಪೇಕ್ಷಿಕಾಚ್ಚ' ಎಂಬ ಶ್ಲೋಕದಿಂದ ನಿರಾಕರಿಸುತ್ತಿದ್ದಾರೆ. ಸ್ವತಃ ಗ್ರಂಥಕಾರರೇ ಶ್ಲೋಕವನ್ನು ವ್ಯಾಖ್ಯಾನಿಸುತ್ತಿದ್ದಾರೆ. ಆಪೇಕ್ಷಿಕವಸ್ತುವಿನಲ್ಲಿ ಮುಖ್ಯಪದಪ್ರಯೋಗವು ತಪ್ಪಲ್ಲವೇ? ಎಂಬ ಪ್ರಶ್ನೆಗೆ 'ದೃಶ್ಯತೇ ಚ' ಎಂಬ ಮಾತಿನಿಂದ ಶ್ಲೋಕದ ಉತ್ತರಾರ್ಧವನ್ನು ವ್ಯಾಖ್ಯಾನಿಸುತ್ತಿದ್ದಾರೆ.

> ಅಪರಂ ತ್ವಕ್ಷರಂ ಯಾ ಸಾ ಪ್ರಕೃತಿರ್ಜಡರೂಪಿಕಾ ।
> ಶ್ರೀಃ ಪರಾ ಪ್ರಕೃತಿಃ ಪ್ರೋಕ್ತಾ ಚೇತನಾ ವಿಷ್ಣುಸಂಶ್ರಯಾ ।
> ತಾಮಕ್ಷರಂ ಪರಂ ಪ್ರಾಹುಃ ಪರತಃ ಪರಮಕ್ಷರಮ್ ।
> ಹರಿಮೇವಾಖಿಲಗುಣಮಕ್ಷರತ್ರಯಮೀರಿತಮ್ ॥

(ಜಡ ಪ್ರಕೃತಿಯು ಅಪರಾಕ್ಷರ ಎಂಬ ಶಬ್ದದಿಂದ ವಾಚ್ಯವಾಗಿದೆ; ಉತ್ತಮಪ್ರಕೃತಿಯು ಚಿದ್ರೂಪಳು ವಿಷ್ಣುವನ್ನು ಆಶ್ರಯಿಸಿರುವ ಲಕ್ಷ್ಮೀದೇವಿ ಎಂದು ಹೇಳಲ್ಪಟ್ಟಿದೆ. ಅವಳನ್ನು 'ಪರಂ ಅಕ್ಷರಂ' = ಪರಾಕ್ಷರ ಎಂದು ಹೇಳುತ್ತಾರೆ. ಅವಳಿಗಿಂತಲೂ ಗುಣಪೂರ್ಣನಾದ ಪರಮಾತ್ಮನೇ ಪರಮಾಕ್ಷರ ಎಂದು ಪ್ರತಿಪಾದ್ಯನಾಗಿದ್ದಾನೆ. ಹೀಗೆ ಅಕ್ಷರಗಳು ಒಟ್ಟು ಮೂರುಬಗೆಯಲ್ಲಿ ವಿಂಗಡಿಸಲ್ಪಟ್ಟಿವೆ)

ಸ್ಕಾಂದಪುರಾಣದ ಈ ಮಾತನ್ನು ಅದೃಶ್ಯತ್ವಾಧಿಕರಣದ ಭಾಷ್ಯದಲ್ಲಿ ಗಮನಿಸಬಹುದು. ''ಪ್ರಾಣ ಏವಾಕರಣಃ'' ಇತ್ಯಾದಿಶ್ರುತಿಯು 'ಚಕ್ಷುರಾದಿವತ್' ಎಂಬ ಸೂತ್ರದ ಭಾಷ್ಯದಲ್ಲಿ ಹೇಳಲ್ಪಟ್ಟಿದೆ. ಯಾವ ರೀತಿಯಾಗಿ ಮೂರುವಿಧವಾದ ಅಕ್ಷರಗಳು ಪ್ರಸಿದ್ಧವಾಗಿವೆಯೋ ಅದರಂತೆ ಮೂರುವಿಧಪ್ರಾಣರೂ

ಪ್ರಸಿದ್ಧರಾಗಿದ್ದಾರೆ. ಆದ್ದರಿಂದ ಪ್ರಾಣಶಬ್ದಕ್ಕೆ ಪರಮಮುಖ್ಯಾರ್ಥನಾದವನು ಭಗವಂತನೇ ಆಗುತ್ತಾನೆ ಹೊರತು ಮುಖ್ಯಪ್ರಾಣನಲ್ಲ.

ಅನ್ಯವ್ಯಪೇಕ್ಷಯಾ ವಾಯೌ ಮುಖ್ಯವೃತ್ತಿರ್ವಿಧೀಯತೇ ।
ತಸ್ಮಾತ್ ಪ್ರಾಣಾದಿಶಬ್ದಾಶ್ಚ ವಿಷ್ಣಾವೇವ ಹಿ ಮುಖ್ಯತಃ ॥

(ಭಗವದಧೀನವಾಗಿ ವಾಯುವಿನಲ್ಲಿ ಮುಖ್ಯಪದದ ಪ್ರಯೋಗವು ಮಾಡಲ್ಪಟ್ಟಿದೆ. ಆದ್ದರಿಂದ ಪ್ರಾಣಾದಿಶಬ್ದಗಳು ಮುಖ್ಯವಾಗಿ ಭಗವಂತನನ್ನೇ ಪ್ರತಿಪಾದಿಸಬೇಕು)

ಐತರೇಯಭಾಷ್ಯದ ಈ ಶ್ಲೋಕದಿಂದ ಮುಖ್ಯಪ್ರಾಣನು ಪ್ರಾಣಶಬ್ದದಿಂದ ವಾಚ್ಯನಲ್ಲವೆಂದು ಸ್ಪಷ್ಟವಾಗುತ್ತದೆ. ''ಅಯಂ ವಾವ ಶಿಶುಃ ಯೋಽಯಂ ಮಧ್ಯಮಃ ಪ್ರಾಣಃ'' 'ಮಧ್ಯಮಪ್ರಾಣನೆನಿಸಿದ ಮುಖ್ಯಪ್ರಾಣನು ಭಗವಂತನ ಮಗು' ಎಂಬ ಬೃಹದಾರಣ್ಯಕದ ಮಾತಿನಿಂದ ಭಗವಂತನೇ ಉತ್ತಮಪ್ರಾಣನೆಂದು ಸ್ಪಷ್ಟವಾಗುತ್ತದೆ.

**गुरुराजीयम्** – यदत्रोक्तं तर्हि लक्ष्म्यादिशब्दानामपि योगेन प्राणभार्यापरत्वसम्भवात् विष्णुलिङ्गस्यैवासिद्धेर्न प्राणशब्दस्य विष्णुपरत्वमिति तत्परिहरति – **लक्ष्म्यादिशब्दानां त्विति** ॥ 'ह्रीश्च ते लक्ष्मी श्च' इति पाठान्तरानुसारेण वा पत्न्याविति द्विवचनश्रुतिसाहित्येन वा बहुत्वोपपत्तिः । प्राणशब्दे उक्तन्यायवैषम्यमाह– **प्राणशब्दस्य त्वेकत्वादिति** ॥ अपरा तु मुख्यवायौ मुख्यत्वप्रसिद्धेरित्यारभ्य नात्र प्राणशब्दः परमात्मपर इत्यन्तां शङ्कां निराकरोति – **आपेक्षिकाचेत्यादिना** ॥

## ಸಾರ

'ತದ್ವೈ ತ್ವಂ ಪ್ರಾಣೋ ಅಭವಃ' ಎಂಬ ಉಪನಿಷತ್ತಿನಲ್ಲಿ ಸಾಮಾನ್ಯವಾಗಿ ಪ್ರಾಣ ಎಂದು ಹೇಳಿಲ್ಲ. ಪರಮಾತ್ಮನಲ್ಲಿರುವ ಅನೇಕವಿಶಿಷ್ಟಗುಣಗಳನ್ನು ಧರ್ಮಗಳನ್ನು ಪ್ರಾಣನಲ್ಲಿ ನಿರೂಪಿಸಲಾಗಿದೆ. ಪ್ರಾಣನು ಶ್ರೀದೇವಿ ಲಕ್ಷ್ಮೀದೇವಿಯರ ಅಧಿಪತಿಯೆಂದು ಸ್ಪಷ್ಟವಾಗಿ ಶ್ರುತಿ ಹೇಳಿದೆ. ಜಗನ್ಮಾತೆಗೆ ಶ್ರೀಹರಿಯನ್ನು ಬಿಟ್ಟು ಬೇರೆ ಯಾರನ್ನೂ ಅಧಿಪತಿಗಳೆಂದು ಮನಸ್ಸಿನಿಂದಲೂ ಆಲೋಚಿಸಲು ಸಾಧ್ಯವಿಲ್ಲ. ಆದ್ದರಿಂದ ಲಕ್ಷ್ಮೀ, ಶ್ರೀ ಮೊದಲಾದ ಶಬ್ದಗಳನ್ನು ಭಾರತೀ ಮೊದಲಾದವರಲ್ಲಿ ಪ್ರಯೋಗಿಸಬಾರದು. ಆದರೆ 'ಪ್ರಾಣಸ್ಯ ಪ್ರಾಣಃ' ಎಂಬಲ್ಲಿ ಪ್ರಾಣಶಬ್ದದಿಂದ ಭಗವಂತನು ವಾಚ್ಯನಾಗಿದ್ದಾನೆನ್ನಲು ಸಾಕಷ್ಟು ಪ್ರಮಾಣಗಳಿವೆ.

ಮತ್ತು ಮುಖ್ಯಪ್ರಾಣನಲ್ಲಿ ಆಪೇಕ್ಷಿಕವಾದ ಮುಖ್ಯತ್ವವಷ್ಟೇ ಇದೆ. ಯಾವರೀತಿಯಾಗಿ ಜಡಪ್ರಕೃತಿಗಿಂತ ಚೇತನಪ್ರಕೃತಿಯು ಮುಖ್ಯವಾದ್ದರಿಂದ ಪರಾಕ್ಷರ ಎನಿಸಿದೆಯೋ ಅದರಂತೆ ಭೌತಿಕವಾಯುವಿಗಿಂತ ಮುಖ್ಯನಾದ್ದರಿಂದ ವಾಯುವು ಮುಖ್ಯಪ್ರಾಣನೆನಿಸಿದ್ದಾನೆ.

ಪರಿಪೂರ್ಣಚಂದ್ರಿಕಾ

## ಎರಡು ಅನುವಾಕಗಳ ಹೃದಯ ಒಂದೇ

**तात्पर्यचन्द्रिका –**

**"अद्भ्यः" इत्याद्यनुवाकद्वयस्य भिन्नार्थत्वेऽपि "अद्भ्यः" इत्यत्र श्रीपतित्वादेरिव, "भर्ता सन्" इत्यत्र**

**तमेव मृत्युममृतं तमाहुः तं भर्तारं तमु गोप्तारमाहुः।**
**यस्तद्वेद यत आबभूव सन्धां च याꣳसन्दधे ब्रह्मणैषः ॥**

**इत्यादिब्रह्मलिङ्गानां सत्त्वात् । एतदेवाभिप्रेत्य भाष्यादौ "इत्यादितल्लिङ्गात्" इत्यादावादिशब्दः ।**

**कथं चानुवाकद्वयं भिन्नार्थम्, "श्रीश्च ते" इति युष्मच्छब्देनोक्तस्य "तद्वै त्वं प्राणः" इत्यत्रापि युष्मच्छब्देन प्रत्यभिज्ञानात् । मातरिश्वश्रुतिरपि अन्तराधिकरणन्यायेन "हरिꣳ हरन्तमनुयन्तु देवाः" इति हरिश्रुत्या 'हरन्तं' इति निरुपपदसंहर्तृत्वलिङ्गेन च ब्रह्मपरा । अपानसाहित्यं तु मुख्यप्राणेऽपि न स्वरसम् । तस्मात्प्राणो विष्णुरेवेति । यद्यपि तैत्तिरीयशाखायां "ह्रीश्च ते" इति पाठः । तथाऽपि भाष्ये शाखान्तरमाश्रित्य "श्रीश्च ते" इति पठितमिति द्रष्टव्यम् ॥**

ಅನುವಾದ - 'ಅದ್ಭ್ಯಃ ಸಂಭೂತಃ' ಎಂಬ ಅನುವಾಕವು ಮತ್ತು 'ಭರ್ತಾ ಸನ್ ಭ್ರಿಯಮಾಣಃ' ಎಂಬ ಅನುವಾಕವು ಭಿನ್ನಾರ್ಥಕವೆಂದು ಆಕ್ಷೇಪಿಸಲಾಗಿತ್ತು. ಇದೂ ಕೂಡ ತಪ್ಪು. ಭಿನ್ನಾರ್ಥಕವೆಂದು ಒಪ್ಪೋಣ. ಅಂದಮಾತ್ರಕ್ಕೆ 'ಭರ್ತಾ ಸನ್ ಭ್ರಿಯಮಾಣಃ' ಎಂಬ ಅನುವಾಕವು ವಿಷ್ಣುವನ್ನು ಪ್ರತಿಪಾದಿಸಲಾರದೆಂದೇಕೆ ಹೇಳಬೇಕು? ಯಾವ ರೀತಿಯಾಗಿ 'ಅದ್ಭ್ಯಃ' ಎಂಬ ಅನುವಾಕದಲ್ಲಿ ಶ್ರೀಪತಿತ್ವಲಿಂಗವಿದೆಯೋ ಅದೇ ರೀತಿಯಾಗಿ 'ಭರ್ತಾ ಸನ್' ಎಂಬ ಅನುವಾಕದಲ್ಲಿಯೂ ಅನೇಕ ವಿಷ್ಣುಲಿಂಗಗಳಿವೆ.

ತಮೇವ ಮೃತ್ಯುಂ ಅಮೃತಂ ತಮಾಹುಃ ಭರ್ತಾರಂ ತಮು ಗೋಪ್ತಾರಮಾಹುಃ।
ಯಸ್ತದ್ವೇದ ಯತ ಆಬಭೂವ ಸಂಧಾಂ ಚ ಯಾಂ ಸಂದಧೇ ಬ್ರಹ್ಮಣೈಷ ತೇ ॥

ಇತ್ಯಾದಿಯಾಗಿ ಅನೇಕ ವಿಷ್ಣುಲಿಂಗಗಳು ಶ್ರುತವಾಗಿವೆ. ಈ ಎಲ್ಲ ಬ್ರಹ್ಮಲಿಂಗಗಳನ್ನು ಮನಸ್ಸಿನಲ್ಲಿಟ್ಟುಕೊಂಡೇ ಭಾಷ್ಯಾದಿಗಳಲ್ಲಿ "ಇತ್ಯಾದಿ ತಲ್ಲಿಂಗಾತ್" ಎಂದು ಆದಿಶಬ್ದವನ್ನು ಪ್ರಯೋಗಿಸಿದ್ದಾರೆ.

ಮತ್ತು ಈ ಎರಡು ಅನುವಾಕಗಳು ಭಿನ್ನಾರ್ಥಕವೇ ಅಲ್ಲ. ಏಕೆಂದರೆ 'ಶ್ರೀಶ್ಚ ತೇ' ಎಂಬಲ್ಲಿ 'ಯುಷ್ಮತ್'ಶಬ್ದದಿಂದ ಹೇಳಲ್ಪಟ್ಟವನನ್ನೇ 'ತದ್ವೈ ತ್ವಂ ಪ್ರಾಣಃ' ಎಂಬಲ್ಲಿ 'ಯುಷ್ಮತ್'ಶಬ್ದದಿಂದ ಸ್ಮರಿಸಿಕೊಳ್ಳಲಾಗಿದೆ. ಆದ್ದರಿಂದ ಎರಡೂ ಅನುವಾಕಗಳು ಒಬ್ಬನನ್ನೇ ಪ್ರತಿಪಾದಿಸಬೇಕು.

ಮಾತರಿಶ್ವಶ್ರುತಿಯು ವಿಷ್ಣುವನ್ನು ಪ್ರಾಣನೆನ್ನಲು ಬಾಧಕವಲ್ಲ. ಅಂತರಧಿಕರಣದಲ್ಲಿ ಸಕಲ ಆದಿದೈವಿಕ ಶಬ್ದಗಳ ಪ್ರವೃತ್ತಿನಿಮಿತ್ತಗಳನ್ನು ಭಗವಂತನಲ್ಲಿ ಸಮರ್ಥಿಸಿದ್ದಾರೆ. ಅದರಂತೆ ಮಾತರಿಶ್ವಾ ಶ್ರುತಿಯು ಮುಖ್ಯವಾಗಿ ಭಗವಂತನಲ್ಲಿಯೇ ಹೊಂದುತ್ತದೆ. ಮತ್ತು 'ಹರಿಂ ಹರಂತಮ್ ಅನುಯಾಂತಿ ದೇವಾಃ' (ಸಂಹಾರಮಾಡುವ ಭಗವಂತನನ್ನು ದೇವತೆಗಳು ಅನುಸರಿಸುತ್ತಾರೆ) ಎಂಬ ಹರಿಶ್ರುತಿಯಲ್ಲಿ ಸಂಹರ್ತೃತ್ವಲಿಂಗವನ್ನು ಹೇಳಿದ್ದಾರೆ. ಯಾವುದೇ ಉಪಪದವನ್ನು ಸೇರಿಸದೆ 'ಹರಂತಂ' ಎಂದು ಹೇಳಿದ್ದರಿಂದ ಸಕಲಸಂಹರ್ತೃತ್ವಗುಣವನ್ನು ವಿವಕ್ಷಿಸಬೇಕು. ಇಂತಹ ಸಂಹರ್ತೃತ್ವಲಿಂಗದಿಂದ ಮಾತರಿಶ್ವಶ್ರುತಿಯು ಬ್ರಹ್ಮಪರವೆಂದು ನಿರ್ಣಯವಾಗುತ್ತದೆ.

ಅಪಾನಸಾಹಿತ್ಯದಿಂದ ಪ್ರಾಣಶಬ್ದವು ಮುಖ್ಯಪ್ರಾಣನಲ್ಲಿ ಪ್ರಯೋಗಿಸಬೇಕೆಂಬ ಆಕ್ಷೇಪವು ತಪ್ಪು. ತನ್ನ ಸ್ವರೂಪವೇ ಆದ ಅಪಾನನ ಜೊತೆಗಿರುವಿಕೆಯನ್ನು ಪ್ರಾಣನಲ್ಲಿ ಹೇಳುವುದು ಅಸಂಭಾವಿತ. ಆದ್ದರಿಂದ ಹಿಂದೆ ಆಕ್ಷೇಪಿಸಿದ ಅಪಾನಸಾಹಿತ್ಯಲಿಂಗವು ಅಸ್ವರಸವಾಗಿದೆ. ಆದ್ದರಿಂದ ವಿಷ್ಣುವೇ ಪ್ರಾಣನೆನಿಸಿದ್ದಾನೆ.

ವಸ್ತುತಃ ತೈತ್ತಿರೀಯಶಾಖೆಯಲ್ಲಿ 'ಶ್ರೀಶ್ಚ ತೇ' ಎಂಬ ಪಾಠವಿದೆ. ಆದರೆ ಮತ್ತೊಂದು ಶಾಖೆಯನ್ನು ಆಶ್ರಯಿಸಿ ಭಾಷ್ಯಕಾರರು 'ಹ್ರೀಶ್ಚ ತೇ' ಎಂಬ ಪಾಠವನ್ನು ಸ್ವೀಕರಿಸಿದ್ದಾರೆಂದು ತಿಳಿಯಬೇಕು.

### ಕಠಿಣಪದಾರ್ಥ

ಅದ್ಭ್ಯಃ ಇತ್ಯತ್ರ = ಅದ್ಭ್ಯಃ ಎಂಬ ಪದದಿಂದ ಶುರುವಾಗುವ ಅನುವಾಕದಲ್ಲಿ, ಯುಷ್ಮಚ್ಛಬ್ದೇನ = ತೇ ಎಂಬ ಪದದಿಂದ, ೨. ತ್ವಂ ಎಂಬ ಪದದಿಂದ; ಅಂತರಧಿಕರಣನ್ಯಾಯೇನ = ಅಧಿದೈವಗತಸರ್ವಶಬ್ದಗಳ ಪ್ರವೃತ್ತಿನಿಮಿತ್ತವು ಭಗವಂತನಲ್ಲಿ ಬರುತ್ತದೆ ಎಂಬ ನ್ಯಾಯದಂತೆ,

**प्रकाशः** – यदपि श्रीपतित्वादेर्भिन्नप्रकरणगतत्वेन ब्रह्मलिङ्गाभावादिति चोद्यं, तत्राभ्युपेत्य सन्निहितलिङ्गानि तावद्दर्शयति – **अद्भ्य इत्यादीति** ॥ मारकत्वा-मृतत्वभर्तृत्वगोप्तृत्वमुक्तिहेतुवेदनविषयत्वादिलिङ्गानामित्यर्थः ।

एकवाक्यतां साधयति – **कथञ्चेति** ॥ मातरिश्वश्रुतिविरोध इत्यत आह – **मातरिश्वेति** । **अन्तरिति** । तत्राधिदैवगतसर्वशब्दप्रवृत्तिनिमित्तस्य भगवति समर्थना -दिति भावः । एतेन श्रुतिबहुत्वमस्तीति प्रथमपक्षोऽपि निरस्तो ध्येयः ।

ननु ‘‘प्राणापानावजिरम्’’ इत्यपानसाहित्यरूपमुख्यप्राणलिङ्गविरोध इत्यत आह – **अपानेति ॥ न स्वरसमिति ॥** स्वस्य स्वेन साहित्यस्यायोगादिति भावः । भाष्योक्तं श्रीपतित्वलिङ्गं न सिद्धमित्याशङ्क्याह – **यद्यपीति ॥**

ವಿವರಣೆ - ಶಂಕೆ - ಶ್ರೀಪತಿತ್ವಲಿಂಗದ ಬಲದಿಂದ ಪ್ರಾಣಶಬ್ದದಿಂದ ಭಗವಂತನನ್ನು ಪ್ರತಿಪಾದ್ಯ-ನೆನ್ನಲಾಗದು. ಏಕೆಂದರೆ ಶ್ರೀಪತಿತ್ವಲಿಂಗವಿರುವ ಅನುವಾಕವೇ ಬೇರೆ ಪ್ರಾಣಶಬ್ದವಿರುವ ಅನುವಾಕವೇ ಬೇರೆ. ಪ್ರಾಣಶಬ್ದವಿರುವ ಅನುವಾಕದಲ್ಲಿ ಯಾವುದೇ ಬ್ರಹ್ಮಲಿಂಗಗಳಿಲ್ಲದ ಕಾರಣ ಭಗವಂತನು ಪ್ರಾಣನಾಗಬೇಕಿಲ್ಲ.

ಸಮಾಧಾನ - ವಸ್ತುತಃ ಶ್ರೀಪತಿತ್ವಲಿಂಗವಿರುವ ಅನುವಾಕವಾಗಲೀ ಪ್ರಾಣಶಬ್ದವಿರುವ ಅನುವಾಕ-ವಾಗಲೀ ಬೇರೆ ಬೇರೆ ವ್ಯಕ್ತಿಗಳನ್ನು ಪ್ರತಿಪಾದಿಸುತ್ತಲೇ ಇಲ್ಲ. ಹಾಗೆ ಪ್ರತಿಪಾದಿಸಿದ್ದಲ್ಲಿ ನಿಮ್ಮ ಆಕ್ಷೇಪವು ಸಮಂಜಸವಾಗುತ್ತಿತ್ತು. ಅಥವಾ ಬೇರೆಯವುಗಳನ್ನು ಪ್ರತಿಪಾದಿಸುತ್ತಿವೆಯೆಂದು ಒಪ್ಪಿದರೂ ತೊಂದರೆ ಇಲ್ಲ. ಯಾವ ಅನುವಾಕದಲ್ಲಿ ಪ್ರಾಣಶಬ್ದವಿದೆಯೋ ಅದೇ ಅನುವಾಕದಲ್ಲಿ ಬ್ರಹ್ಮನ ಅಸಾಧಾರಣ-ಧರ್ಮಗಳು ಹೇಳಲ್ಪಟ್ಟಿವೆ. 'ತಮೇವ ಮೃತ್ಯುಂ' ಇತ್ಯಾದಿ ವಾಕ್ಯದಲ್ಲಿ ಮಾರಕತ್ವ, ಅಮೃತತ್ವ, ಭರ್ತೃತ್ವ, ಗೋಪ್ತೃತ್ವ, ಮುಕ್ತಿಹೇತುವೇದನವಿಷಯತ್ವ ಮೊದಲಾದ ಧರ್ಮಗಳನ್ನು ಹೇಳಲಾಗಿದೆ. ಆದ್ದರಿಂದ ಶ್ರೀಪತಿತ್ವಲಿಂಗವಿಲ್ಲದಿದ್ದರೂ ಉಳಿದ ಈ ಬ್ರಹ್ಮನ ಅಸಾಧಾರಣಲಿಂಗಗಳಿಂದ ಪ್ರಾಣಪ್ರಕರಣವು ಬ್ರಹ್ಮಪರ-ವಾಗಿದೆಯೆಂದು ನಿಶ್ಚಯಿಸಬಹುದು.

ಮತ್ತು ಎರಡು ಅನುವಾಕಗಳನ್ನು ಬೇರೆ ಬೇರೆ ವ್ಯಕ್ತಿಪರವಾಗಿ ಅರ್ಥೈಸಲು ಸಾಧ್ಯವೇ ಇಲ್ಲವೆಂದು ''ಕಥಂ ಚ'' ಎಂಬ ವಾಕ್ಯದಿಂದ ವಿವರಿಸಿದ್ದಾರೆ.

''ತದ್ವೈ ತ್ವಂ ಪ್ರಾಣಃ'' ಎಂಬಲ್ಲಿರುವ ಪ್ರಾಣಶಬ್ದದಿಂದ ಭಗವಂತನು ವಾಚ್ಯನಾದರೆ ಮಾತರಿಶ್ವಶ್ರುತಿ ವಿರೋಧ ಬರುತ್ತದೆಂದು ಹಿಂದೆ ಆಕ್ಷೇಪಿಸಿದ್ದರು. ಅದನ್ನು 'ಮಾತರಿಶ್ವಶ್ರುತಿಃ' ಎಂಬ ವಾಕ್ಯದಿಂದ ನಿರಾಕರಿಸಿದ್ದಾರೆ. ಅಂತರಧಿಕರಣದಲ್ಲಿ ಆಧಿದೈವಿಕವಾದ ಸರ್ವಶಬ್ದಗಳ ಪ್ರವೃತ್ತಿನಿಮಿತ್ತವನ್ನು ಭಗವಂತನಲ್ಲಿ ಸಮರ್ಥಿಸಿದ್ದಾರೆ. ಅದರಂತೆ ಮಾತರಿಶ್ವಶಬ್ದದ ಪ್ರವೃತ್ತಿನಿಮಿತ್ತವು ಭಗವಂತನಲ್ಲಿ ಬರುತ್ತದೆಂದು ಅರಿಯಬೇಕು. ಆದ್ದರಿಂದಲೇ ಮುಖ್ಯಪ್ರಾಣನ ವಿಷಯದಲ್ಲಿ ಅನೇಕಶ್ರುತಿಗಳು ಆಧಾರವಾಗಿವೆ ಎಂಬ ಮೊದಲನೆಯ ಪಕ್ಷವು ನಿರಾಕೃತವಾಯಿತು.

'ಪ್ರಾಣಾಪಾನಾವಜಿರಮ್' ಎಂದು ಅಪಾನಸಾಹಿತ್ಯವು ಪ್ರಾಣನಲ್ಲಿ ಕೇಳಿಸುತ್ತಿರುವುದರಿಂದ ಪ್ರಾಣಶಬ್ದದಿಂದ ಮುಖ್ಯಪ್ರಾಣನೇ ವಾಚ್ಯನಾಗಬೇಕಲ್ಲವೇ? ಎಂಬ ಆಕ್ಷೇಪವನ್ನು 'ಅಪಾನಸಾಹಿತ್ಯಮ್' ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಪ್ರಾಣನಾಗಲೀ, ಅಪಾನನಾಗಲೀ ಒಬ್ಬನೇ ಆಗಿರುವುದರಿಂದ ತನಗೆ ತನ್ನ ಸಾಹಿತ್ಯವನ್ನು ಹೇಳುವುದು ಅಸ್ವರಸವಾಗಿದೆ. ಆದ್ದರಿಂದ ಎರಡು ಬಗೆಯ ಪ್ರಮೇಯಾಶ್ರಿತ-ವಾದ ಪೂರ್ವಪಕ್ಷಗಳು, ನಾಲ್ಕುಬಗೆಯ ಪ್ರಮಾಣಾಶ್ರಿತವಾದ ಪೂರ್ವಪಕ್ಷಗಳು ನಿರಾಕೃತವಾದವು.

ಭಾಷ್ಯದಲ್ಲಿ ಶ್ರೀಪತಿತ್ವಲಿಂಗವನ್ನು ಹೇಳಿದ್ದಾರೆ. ಆದರೆ ಶ್ರುತಿಯಲ್ಲಿ ಹ್ರೀಪತಿತ್ವವನ್ನು ಹೇಳಲಾಗಿದೆ. ಆದ್ದರಿಂದ ಭಾಷ್ಯದ ಲಿಂಗವು ಅಸಿದ್ಧವಲ್ಲವೇ? ಎಂಬ ಪ್ರಶ್ನೆಯನ್ನು ಯದ್ಯಪಿ ಎಂಬ ವಾಕ್ಯದಿಂದ ಮಾಡಿಕೊಂಡು ಉತ್ತರಿಸಿದ್ದಾರೆ.

**गुरुराजीयम्** – इतरातु पूर्ववन्निरवकाशलिङ्गाभावादित्यादिनोक्ताशङ्का न युक्ता । श्रीपतित्वादिरूपनिरवकाशलिङ्गसद्भावात् । यदत्रोक्तम् 'अद्भ्यः सम्भूतः' इत्यनुवाके 'श्रीश्च ते लक्ष्मीश्च पत्न्यौ' इत्युक्तस्य विष्णुत्वेपि 'भर्ता सन् भ्रियमाणो बिभर्ति' इत्यनुवाके 'तद्वै त्वं प्राणः' इत्युक्तस्य मातरिश्वा प्रजानाम् इत्यादिमातरिश्वादिश्रुतिसाहित्येन न विष्णुपरत्वमिति तदाशङ्क्य भिन्नार्थत्वेना-भ्युपेत्य समाधानं तावदाह – **अद्भ्य इत्याद्यनुवाकद्वयस्येति** ॥

वस्तुतस्तु तदेव नास्तीत्याह – **कथश्चेति** ॥ **युष्मच्छब्देनेति** ॥ ते इति युष्मच्छब्देनेत्यर्थः ॥ **युष्मच्छब्देनेति** ॥ त्वमित्यनेनेत्यर्थः । एवं विष्णुलिङ्गानां निरवकाशत्वमुपपाद्य परेण प्राणशब्दस्य विष्णुपरत्वे बाधकत्वेनोदाहृतं मातरिश्व-श्रुत्यादिकं विष्णौ सावकाशमित्याह – **मातरिश्वश्रुतिरिति** ॥ यत्किञ्चित् संहर्तृत्वस्य प्राणेपि सम्भवात्कथमेतत्प्राणस्य विष्णुपरत्वसाधकमित्यत उक्तं **निरुपपदेति** ॥ ननु तर्हि 'प्राणापानावजिरं सञ्चरन्तौ' इत्यपानसाहित्यरूपलिङ्गं ब्रह्मपक्षे न स्वरस- मित्यत आह – **अपानसाहित्यं त्विति** ॥

## ಸಾರ

ಶ್ರೀಪತಿತ್ವಲಿಂಗವಿರುವ ಅನುವಾಕವು ಬೇರೆಯಾಗಿರಬಹುದು. ಆದರೂ 'ತದ್ವೈ ತ್ವಂ' ಎಂಬ ಪ್ರಾಣಶ್ರುತಿಯಿರುವ ಅನುವಾಕವೂ ಸಹ ಭಗವಂತನಲ್ಲಿ ಅಸಾಧಾರಣವಾದ ಮಾರಕತ್ವಾದಿ ಗುಣಗಳನ್ನು ಹೇಳುತ್ತಿದೆ. ಆದ್ದರಿಂದ ಈ ಅನುವಾಕವು ಭಗವತ್ಪರವಾಗಿದೆ ಎಂದು ನಿರ್ಣಯವಾಗುತ್ತದೆ. ಮತ್ತು 'ಶ್ರೀಶ್ಚ ತೇ' ಎಂಬಲ್ಲಿ ಯುಷ್ಮಚ್ಛಬ್ದದಿಂದ ಹೇಳಿದವನನ್ನೇ 'ತದ್ವೈ ತ್ವಂ' ಎಂಬ ಯುಷ್ಮಚ್ಛಬ್ದದಿಂದಲೂ ಹೇಳಲಾಗಿದೆ. ಆದ್ದರಿಂದ ಎರಡೂ ಅನುವಾಕಗಳು ಒಬ್ಬನನ್ನೇ ಪ್ರತಿಪಾದಿಸುತ್ತಿವೆ.

ಮಾತರಿಶ್ವಶ್ರುತಿಯಲ್ಲಿಯೂ ಭಗವಂತನ ಸಕಲಸಂಹರ್ತೃತ್ವಗುಣವನ್ನು ಹೇಳಿದ್ದರಿಂದ ಇದು ಮುಖ್ಯಪ್ರಾಣಪರವಾಗುವುದಿಲ್ಲ. ಇನ್ನು ತನ್ನಿಂದ ತನಗೆ ಸಾಹಿತ್ಯವು ಅಸಂಭಾವಿತವಾದ್ದರಿಂದ ಅಪಾನಸಾಹಿತ್ಯಲಿಂಗವು ಮುಖ್ಯಪ್ರಾಣನಿಗೆ ಪೂರಕವಲ್ಲ. ಆದ್ದರಿಂದ ಪ್ರಾಣಶಬ್ದದಿಂದ ಮುಖ್ಯಪ್ರಾಣನು ಪ್ರತಿಪಾದ್ಯನಾಗುವುದಿಲ್ಲ; ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ.

## ಅದ್ವೈತಿಗಳ ಪ್ರಾಣಾಧಿಕರಣ

**तात्पर्यचन्द्रिका –**

अन्ये तु – ''प्रस्तोतर्या देवता प्रस्तावं'' इत्युपक्रम्य श्रूयते, ''कतमा सा देवता । प्राण इति होवाच । सर्वाणि ह्वा इमानि भूतानि प्राणमेवाभिसंविशन्ति'' इति । तत्र प्राणशब्दः प्रसिद्धप्राणपर इति प्राप्ते, ब्रह्मपर एव, सर्वभूतसंवेशनादि-ब्रह्मलिङ्गादिति सिद्धान्तः । न चैवं पूर्वेणेदं गतार्थम्, ''यदा वै पुरुषः स्वपिति । प्राणं तर्हि वागप्येति । प्राणं चक्षुः'' इत्यादिश्रुतेः स्वापकाले प्रसिद्धप्राणे सर्वभूतसारेन्द्रियलयाद्युक्तिद्वारा सर्वभूतलयादिपरायाः मानान्तरानुगृहीतत्वेन प्रबलत्वात् । ब्रह्मणि भूतलयादिबोधिकायाश्च ''यतो वा इमानि'' इत्यादिश्रुतेः तदननुगृहीतत्वेन दुर्बलत्वात् । प्रस्तावावाक्यमपि प्रबलानुसारेण प्रसिद्धप्राणे सर्वभूतलयादिपरम्, नतु ब्रह्मणि सर्वभूतलयादिपरम् ।

यद्वा – प्रबलस्वापवाक्यानुसारेण प्रस्तावावाक्यमपि प्रसिद्ध प्राणे इन्द्रियमात्र-लयादिपरम् । ''आकाशाद्वायुः'' इत्यादिवाक्यं तु न मानान्तरानुगृहीतमिति तदनुसारेण ''सर्वाणि भूतान्याकाशादेव'' इति वाक्यं न वाय्वादिमात्रकारणभूता-काशपरमिति पूर्वस्मादधिकाशङ्कायां, पुंवाक्ये मानान्तरानुग्रहतदभावाभ्यां प्राबल्य-दौर्बल्ये स्तः, अपुंवाक्येऽनाशङ्कितदोषे न ताभ्यां ते स्त इति, तन्निरासार्थत्वाद-स्येत्याहुः । तदुक्तं भामत्यां –

पुंवाक्यस्य बलीयस्त्वं मानान्तरसमागमात् ।
अपौरुषेयवाक्ये तत्सङ्गतिः किं करिष्यति । इति ।

ಅನುವಾದ - ಅದ್ವೈತಿಗಳ ಅಧಿಕರಣ ರಚನೆ ಹೀಗಿದೆ. 'ಪ್ರಸ್ತೋತರ್ಯಾ ದೇವತಾಪ್ರಸ್ತಾವಮ್' (ಎಲೈ ಪ್ರಸ್ತೋತೃವೇ! ಯಾರು ಪ್ರಸ್ತಾವದೇವತೆ) ಎಂದು ಪ್ರಾರಂಭವಾಗಿ 'ಕತಮಾ ಸಾ ದೇವತಾ । ಪ್ರಾಣ ಇತಿ ಹೋವಾಚ । ಸರ್ವಾಣಿ ಹ ವಾ ಇಮಾನಿ ಭೂತಾನಿ ಪ್ರಾಣಮೇವಾಭಿಸಂವಿಶಂತಿ' (ಯಾರು ಪ್ರಸ್ತಾವ ದೇವತೆ? ಎಂಬ ಪ್ರಶ್ನೆಗೆ ಪ್ರಾಣನೆಂದು ಉಷಸ್ತಿಗಳ ಉತ್ತರ. ಏಕೆಂದರೆ ಸಕಲ-ಭೂತಗಳು ಪ್ರಾಣನಲ್ಲಿಯೇ ಲಯ ಹೊಂದುತ್ತವೆ) ಎಂದು ಛಾಂದೋಗ್ಯದಲ್ಲಿ ಕೇಳಿಸುತ್ತಿದೆ. ಈ ವಾಕ್ಯದಲ್ಲಿರುವ ಪ್ರಾಣಶಬ್ದದಿಂದ ಜಡವಾಯುವು ಪ್ರತಿಪಾದ್ಯವೋ ಅಥವಾ ಬ್ರಹ್ಮನೋ? ಎಂದು

ಸಂಶಯ. ಜಡವಾಯುವೆಂದು ಪೂರ್ವಪಕ್ಷ. ಸರ್ವಭೂತಲಯವೆಂಬ ಬ್ರಹ್ಮಲಿಂಗವಿರುವುದರಿಂದ ಬ್ರಹ್ಮನೇ ಪ್ರಾಣನೆಂದು ಸಿದ್ಧಾಂತ.

ಆಕಾಶಾಧಿಕರಣದಿಂದ ಪುನರುಕ್ತಿಯನ್ನು ಶಂಕಿಸಬಾರದು. 'ಯದಾ ವೈ ಪುರುಷಃ ಸ್ವಪಿತಿ । ಪ್ರಾಣಂ ತರ್ಹಿ ವಾಗಪ್ಯೇತಿ । ಪ್ರಾಣಂ ಚಕ್ಷುಃ' (ಯಾವಾಗ ಪುರುಷನು ಸುಷುಪ್ತಿ ಹೊಂದು-

---

शङ्करभाष्यम् – उद्गीथे - 'प्रस्तोतर्या देवता प्रस्तावमन्वायत्ता' इत्युपक्रम्य श्रूयते - 'कतमा सा देवतेति प्राण इति होवाच सर्वाणि ह वा इमानि भूतानि प्राणमेवाभिसंविशन्ति प्राणमभ्युज्जिहते सैषा देवता प्रस्तावमन्वायत्ता' (छा. १।११।४, ५) इति । तत्र संशयनिर्णयौ पूर्ववदेय द्रष्टव्यौ । 'प्राणबन्धनं हि सोम्य मनः' (छा. ६।८।२) 'प्राणस्य प्राणम्' (बृ. ४।४।१८) इति चैवमादौ ब्रह्मविषयः प्राणशब्दो दृश्यते, वायुविकारे तु प्रसिद्धतरो लोकवेदयोः, अत इह प्राणशब्देन कतरस्योपादानं युक्तमिति भवति संशयः । किं पुनरत्र युक्तम् । वायुविकारस्य पञ्चवृत्तेः प्राणस्योपादानं युक्तम् । तत्र हि प्रसिद्धतरः प्राणशब्द इत्यवोचाम । ननु पूर्ववदिहापि तल्लिङ्गाद्ब्रह्मण एव ग्रहणं युक्तम् । इहापि वाक्यशेषे भूतानां संवेशनोदोद्गमनं पारमेश्वरं कर्म प्रतीयते । न । मुख्येऽपि प्राणे भूतसंवेशनोद्गमनस्य दर्शनात् । एवं ह्याम्नायते - 'यदा वै पुरुषः स्वपिति प्राणं तर्हि वागप्येति प्राणं चक्षुः प्राणं श्रोत्रं प्राणं मनः स यदा प्रबुध्यते प्राणादेवाधि पुनर्जायन्ते' (श. ब्रा. १०।३।३।६) इति । प्रत्यक्षं चैतत्स्वापकाले प्राणवृत्तावपरिलुप्यमानायामिन्द्रियवृत्तयः परिलुप्यन्ते प्रबोधकाले च प्रादुर्भवन्तीति । इन्द्रियसारत्वाच्च भूतानामविरुद्धो मुख्ये प्राणेऽपि भूतसंवेशनोद्गमनवादी वाक्यशेषः । अपि चादित्योऽन्नं चाद्गीथप्रतिहारयोर्देवते प्रस्तावदेवतायाः प्राणस्यानन्तरं निर्दिश्येते । नच तयोर्ब्रह्मत्वमस्ति, तत्सामान्याच्च प्राणस्यापि न ब्रह्मत्वमित्येवं प्राप्ते सूत्रकार आह – 'अत एव प्राणः' इति । 'तल्लिङ्गात्' इति पूर्वसूत्रे निर्दिष्टम् । अत एव तल्लिङ्गात्प्राणशब्दमपि परं ब्रह्म भवितुमर्हति । प्राणस्यापि हि ब्रह्मलिङ्गसम्बन्धः श्रूयते – 'सर्वाणि ह वा इमानि भूतानि प्राणमेवाभिसंविशन्ति प्राणमभ्युज्जिहते' (छा. १।११।५) इति । प्राणनिमित्तौ सर्वेषां भूतानामुत्पत्तिप्रलयावुच्यमानौ प्राणस्य ब्रह्मतां गमयतः ।

ननूक्तं मुख्यप्राणपरिग्रहेऽपि संवेशनोद्गमनदर्शनमविरुद्धं, स्वापप्रबोधोर्दर्शनादिति । अत्रोच्यते – स्वापप्रबोधयोरिन्द्रियाणामेव केवलानां प्राणाश्रयं संवेशनोद्गमनं दृश्यते, न सर्वेषां भूतानाम् । इहतु सेन्द्रियाणां सशरीराणां च जीवाविष्टानां भूतानां, 'सर्वाणि ह वा इमानि भूतानि' इति श्रुतेः । यदापि भूतश्रुतिर्महाभूतविषया परिगृह्यते तदापि ब्रह्मलिङ्गत्वमविरुद्धम् । ननु सहापि विषयैरिन्द्रियाणां स्वापप्रबोधयोः प्राणेऽप्ययं

ತ್ಮಾನೋ, ಆವಾಗ ವಾಕ್ ಚಕ್ಷುಸ್ಸು ಮೊದಲಾದ ಇಂದ್ರಿಯಗಳು ಪ್ರಾಣನಲ್ಲಿ ಲಯವಾಗುತ್ತವೆ.) ಇತ್ಯಾದಿ ಶ್ರುತಿಯಲ್ಲಿ ಜಡವಾಯುವಿನಲ್ಲಿ ಎಲ್ಲ ಇಂದ್ರಿಯಗಳ ಲಯವನ್ನು ಹೇಳಲಾಗಿದೆ. ಭೌತಿಕ ಇಂದ್ರಿಯಗಳು ಸಕಲಭೂತ ಪದಾರ್ಥಗಳ ಸಾರವಾದ್ದರಿಂದ, ಸಕಲಭೂತಗಳ ಲಯವನ್ನೇ ಇದರಿಂದ ಹೇಳಿದಂತಾಗುತ್ತದೆ. ಈ ಶ್ರುತಿಯು ಪ್ರತ್ಯಕ್ಷ ಅನುಮಾನವೆಂಬ ಪ್ರಮಾಣಗಳಿಂದ ಉಪೋದ್ಬಲಿತ-ವಾದ್ದರಿಂದ ಪ್ರಬಲವಾಗಿದೆ. ಆದರೆ ಬ್ರಹ್ಮನಲ್ಲಿ ಭೂತಲಯವನ್ನು ಹೇಳುವ 'ಯತೋ ವಾ ಇಮಾನಿ' ಎಂಬ ಶ್ರುತಿಗೆ ಯಾವುದೇ ಪ್ರಮಾಣಗಳ ಬೆಂಬಲವಿಲ್ಲದ ಕಾರಣ ದುರ್ಬಲವಾಗಿದೆ. ಹೀಗಿರುವಾಗ ಪ್ರಸ್ತಾವವಾಕ್ಯವು ಪ್ರಬಲವಾದ ಸ್ವಾಪವಾಕ್ಯಕ್ಕೆ ಅನುಸಾರಿಯಾಗಿ ಜಡವಾಯುವಿನಲ್ಲಿಯೇ ಸರ್ವ-ಭೂತಲಯವನ್ನು ಹೇಳುತ್ತಿದೆ, ಹೊರತು ದುರ್ಬಲವಾದ 'ಯತೋ ವಾ' ಎಂಬ ವಾಕ್ಯಕ್ಕೆ ಅನುಸಾರಿಯಾಗಿ ಬ್ರಹ್ಮನಲ್ಲಿ ಸರ್ವಭೂತಲಯವನ್ನು ಹೇಳುತ್ತಿಲ್ಲ.

ಅಥವಾ, ಪ್ರಬಲವಾದ ಸ್ವಾಪವಾಕ್ಯವನ್ನು ಅನುಸರಿಸಿ ಪ್ರಸ್ತಾವವಾಕ್ಯವೇ ಪ್ರಸಿದ್ಧಪ್ರಾಣನಲ್ಲಿ ಇಂದ್ರಿಯಾದಿ ಲಯವನ್ನು ಹೇಳುತ್ತಿದೆ. (ಹಿಂದಿನ ಪಕ್ಷದಲ್ಲಿ ಸ್ವಾಪವಾಕ್ಯವು ಭೂತಲಯವನ್ನು ಹೇಳುತ್ತಿದೆ ಆದಕ್ಕೆ ಅನುಸಾರಿಯಾಗಿ ಪ್ರಸ್ತಾವವಾಕ್ಯವು ಭೂತಲಯವನ್ನೇ ಹೇಳುತ್ತಿದೆ ಎಂದು ವ್ಯಾಖ್ಯಾನಿಸಲಾಗಿತ್ತು. ಈ ಪಕ್ಷದಲ್ಲಿ ಸ್ವಾಪವಾಕ್ಯದಲ್ಲಿರುವ ಇಂದ್ರಿಯಪದಕ್ಕೆ ಭೂತಲಯವೆಂದು

---

प्राणाच्च प्रभवं शृणुमः – 'यदा सुप्तः स्वप्नं न कञ्चन पश्यत्यथास्मिन्प्राण एवैकधा भवति तदैनं वाक्सर्वैर्णामभिः सहाप्येति'(कौ.३।३) इति । तत्रापि तल्लिङ्गात्प्राणशब्दं ब्रह्मैव । यत्पुनरन्नादित्यसन्निधानात्प्राणस्याब्रह्मत्वमिति, तदयुक्तम् । वाक्यशेषबलेन प्राणशब्दस्य ब्रह्मविषयतायां प्रतीयमानायां सन्निधानस्याकिञ्चित्करत्वात् । यत्पुनः प्राणशब्दस्य पञ्चवृत्तौ प्रसिद्धतरत्वं, तदाकाशशब्दस्येव प्रतिविधेयम् । तस्मात्सिद्धं प्रस्तावदेवतायाः प्राणस्य ब्रह्मत्वम् । अत्र केचिदुदाहरन्ति – 'प्राणस्य प्राणम्' 'प्राणबन्धनं हि सोम्यमनः' इति च । तदयुक्तम् । शब्दभेदात्प्रकरणाच्च संशयानुपपत्तेः । यथा पितुः पितेति प्रयोगेऽन्यः पिता षष्ठीनिर्दिष्टोऽन्यः प्रथमानिर्दिष्टः पितुः पितेति गम्यते, तद्वत् 'प्राणस्य प्राणम्' इति शब्दभेदात्प्रसिद्धात्प्राणादन्यः प्राणस्य प्राण इति निश्चीयते । नहि स एव तस्येति भेदनिर्देशार्हो भवति । यस्य च प्रकरणे यो निर्दिश्यते नामान्तरेणापि स एव तत्र प्रकरणीनिर्दिष्ट इति गम्यते । यथा ज्योतिष्टोमाधिकारे – 'वसन्ते वसन्ते ज्योतिषा यजेत' इत्यत्र ज्योतिःशब्दो ज्योतिष्टोमविषयो भवति, तथा परस्य ब्रह्मणः प्रकरणे 'प्राणबन्धनं हि सोम्य मनः' इति श्रुतः प्राणशब्दो वायुविकारमात्रं कथमवगमयेत् । अतः संशयाविषयत्वान्नैतदुदाहरणं युक्तम् । प्रस्ताव-देवतायां तु प्राणे संशयपूर्वपक्षनिर्णया उपपादिताः ॥ २३ ॥

भामातीव्याख्या – अत एव प्राणः । उद्गीथे – 'या देवता प्रस्तावमन्वायत्ता' इत्युपक्रम्य

ಹೇಳುತ್ತಿದೆ ಎಂದು ಒಪ್ಪದೆ, ಇಂದ್ರಿಯಲಯವನ್ನೇ ಅಂಗೀಕರಿಸಿ ಅದಕ್ಕೆ ಅನುಸಾರಿಯಾಗಿ ಪ್ರಸ್ತಾವ-ವಾಕ್ಯವು ಕೂಡ ಇಂದ್ರಿಯಲಯವನ್ನು ಹೇಳುತ್ತಿದೆ ಎಂದು ಸಮರ್ಥಿಸಿದ್ದಾರೆ.) ಹಿಂದಿನ ಅಧಿಕರಣದ 'ಆಕಾಶಾದ್ವಾಯುಃ' ಎಂಬ ವಾಕ್ಯವು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಉಪೋದ್ಬಲಿತ-ವಾಗಿಲ್ಲ. ಹಾಗಾಗಿ ಆಕಾಶಾದ್ವಾಯುಃ ಎಂಬ ವಾಕ್ಯಕ್ಕೆ ಅನುಸಾರಿಯಾಗಿ 'ಸರ್ವಾಣಿ ಭೂತಾನಿ ಆಕಾಶಾದೇವ' ಎಂಬ ವಾಕ್ಯವು ವಾಯ್ವಾದಿಗಳಿಗೆ ಕಾರಣವಾದ ಭೂತಾಕಾಶಪರವೆಂದು ಅರ್ಥೈಸಲು ಸಾಧ್ಯವಿಲ್ಲ. ಹೀಗೆ ಹಿಂದಿನ ಅಧಿಕರಣದಿಂದ ಅಧಿಕಾಶಂಕೆಯು ಪ್ರಾಪ್ತವಾದಾಗ ಪ್ರಾಣಾಧಿಕರಣವು ಹೊರಡಲೇ ಬೇಕು.

---

श्रूयते – 'कतमा सा देवतेति प्राण इति होवाच' उषस्तिश्चाक्रायणः । उद्गीथोपासनप्रसङ्गेन प्रस्तावोपासनमप्युद्गिथा इत्युक्तं भाष्यकृता । प्रस्ताव इति साम्नो भक्तिविशेषस्तमन्वायत्ता अनुगता प्राणो देवता । अत्र प्राणशब्दस्य ब्रह्मणि वायुविकारे च दर्शनात्संशयः – किमयं ब्रह्मवचन उत वायुविकारवचन इति । तत्र अत एव ब्रह्मलिङ्गादेव प्राणोऽपि ब्रह्मैव न वायुविकार इति युक्तम् । यद्येवं तेनैव गतार्थमेतदिति कोऽधिकरणान्तरस्यारम्भार्थः । तत्रोच्यते – 'अर्थेश्रुत्यैकगम्ये हि श्रुतिमेवाद्रियामहे । मानान्तरावगम्ये तु तद्वशात्तद्व्यवस्थितिः ॥' ब्रह्मणो वा सर्वभूतकारणत्वं, आकाशस्य वा वाय्वादिभूतकारणत्वं प्रति नागमादृते मानान्तरं प्रभवति । तत्र पौर्वापर्य-पर्यालोचनया यत्रार्थे समञ्जस आगमः स एवार्थस्तस्य गृह्यते, त्यज्यते चेतरः । इह तु संवेशनोद्गमने भूतानां प्राणं प्रत्युच्यमाने किं ब्रह्म प्रत्युच्येते आहो वायुविकारं प्रतीति विशये 'यदा वै पुरुषः स्वपिति प्राणं तर्हि वागप्येति' इत्यादिकायाः श्रुतेः सर्वभूतसारेन्द्रियसंवेशनोद्गमनप्रतिपादनद्वारा सर्वभूतसंवेशनोद्गमनप्रतिपादिकाया माना-न्तरानुग्रहलब्धसामर्थ्याया बलात्संवेशनोद्गमने वायुविकारस्यैव प्राणस्य, न ब्रह्मणः । अपि चात्रोद्गीथप्रतिहारयोः सामभक्त्योर्ब्रह्मणोऽन्ये आदित्यश्चान्नं च देवते अभिहिते कार्यकारणसङ्घातरूपे, तत्साहचर्यात्प्राणोऽपि कार्यकारणसङ्घातरूप एव देवता भवितुमर्हति । निरस्तोऽप्ययमर्थ ईक्षत्यधिकरणे, पूर्वोक्तपूर्वपक्षहेतूपोद्बलनाय पुन-रुपन्यस्तः । तस्माद्वायुविकार एवात्र प्राणशब्दार्थ इति प्राप्तम् । एवं प्राप्तेऽभिधीयते - **'पुंवाक्यस्य बलीयस्त्वं मानान्तरसमागमात् । अपौरुषेये वाक्ये तत्सङ्गतिः किं करिष्यति ॥'** नो खलु स्वतःसिद्धप्रमाणभावमपौरुषेयं वचः स्वविषयज्ञानोत्पादे वा तद्व्यवहारे वा मानान्तरमपेक्षते, तस्यापौरुषेयस्य निरस्तसमस्तदोषशङ्कस्य स्वत एव निश्चायकत्वात्, निश्चयपूर्वकत्वाद्व्यवहारप्रवृत्तेः । तस्मादसंवादिनो वा चक्षुष इव रूपे त्वगिन्द्रियसंवादिनो वा तस्यैव द्रव्ये नादार्ढ्यं दार्ढ्यं वा । तेन स्तामिन्द्रियमात्र-

ಅಧಿಕಾಶಂಕೆಗೆ ಇಷ್ಟು ಉತ್ತರ. ಪೌರುಷೇಯವಾಕ್ಯದಲ್ಲಷ್ಟೇ ಪ್ರಮಾಣಾಂತರಸಂವಾದವಿದ್ದರೆ ಪ್ರಾಬಲ್ಯವನ್ನು ಇಲ್ಲದಿದ್ದರೆ ದೌರ್ಬಲ್ಯವನ್ನು ಹೇಳಬಹುದು. ಆದರೆ ಅಪೌರುಷೇಯವಾಕ್ಯದಲ್ಲಿ ಶಂಕೆಗೆ ಅವಕಾಶವೇ ಇಲ್ಲದ ಕಾರಣ ಪ್ರಮಾಣಾಂತರಸಂವಾದ, ತದಭಾವಗಳಿಂದ ಪ್ರಾಬಲ್ಯ-ದೌರ್ಬಲ್ಯಗಳನ್ನು ನಿಶ್ಚಯಿಸುವುದು ತಪ್ಪಾಗುತ್ತದೆ. ಹೀಗೆ ಅಧಿಕಾಶಂಕೆಯ ನಿರಾಸಕ್ಕೋಸ್ಕರ ಪ್ರಾಣಾಧಿ-ಕರಣ ಹೊರಟಿದ್ದು ಸಾರ್ಥಕ. ಇದನ್ನೇ ಭಾಮತಿಯಲ್ಲಿ

ಪುಂವಾಕ್ಯಸ್ಯ ಬಲೀಯಸ್ತ್ವಂ ಮಾನಾಂತರಸಮಾಗಮಾತ್ ।
ಅಪೌರುಷೇಯವಾಕ್ಯೇ ತತ್ಸಂಗತಿಃ ಕಿಂ ಕರಿಷ್ಯತಿ ॥

(ಪ್ರತ್ಯಕ್ಷಾದಿಪ್ರಮಾಣಗಳ ಸಮಾಗಮದಿಂದ ಪೌರುಷೇಯವಾಕ್ಯವು ಪ್ರಬಲವಾಗಬಹುದು. ಆದರೆ ಅಪೌರುಷೇಯವಾಕ್ಯದಲ್ಲಿ ಪ್ರತ್ಯಕ್ಷಾದಿಪ್ರಮಾಣಗಳ ಸಮಾಗಮವೇ ದುರ್ಲಭ. ಆದ್ದರಿಂದ ಪ್ರಮಾಣಾಂತರಸಂವಾದದ ಸಂಗತಿಯು ಅಪೌರುಷೇಯವಾಕ್ಯದಲ್ಲಿ ಏನು ಮಾಡೀತು?) ಎಂದು ಹೇಳಲಾಗಿದೆ.

### ಕಠಿಣ ಪದಾರ್ಥ

ಅನ್ಯೇತು = ಅದ್ವೈತಿಗಳು, ಅಭಿಸಂವಿಶಂತಿ = ಲೀನವಾಗುತ್ತವೆ. ಮಾನಾಂತರಾ-ನುಗೃಹೀತತ್ವೇನ = ಸರ್ವಾಣಿ ಭೂತಾನಿ ಪ್ರಾಣೇ ವಿಲೀಯಂತೇ ಸರ್ವಭೂತ-ಸಾರೇಂದ್ರಿಯಲಯಾಧಿಕರಣತ್ವಾತ್ 'ಸಕಲಭೂತಗಳು ಪ್ರಾಣನಲ್ಲೇ ಲಯ ಹೊಂದುತ್ತವೆ. ಸಕಲಭೂತಗಳ ಸಾರವಾದ ಇಂದ್ರಿಯಗಳ ಲಯಕ್ಕೆ ಅಧಿಕರಣವಾದ್ದರಿಂದ' ಎಂಬ

संवेशनोद्गमने वायुविकारे प्राणे । सर्वभूतसंवेशनोद्गमने तु न ततो वाक्यत्प्रतीयेते । प्रतीतौ वा तत्रापि प्राणो ब्रह्मैव भवेन्न वायुविकारः । 'यदा सुप्तः स्वप्नं न कञ्चन पश्यत्यथास्मिन्प्राण एवैकधा भवति' इत्यत्र वाक्ये यथा प्राणशब्दो ब्रह्मवचनः । न चास्मिन्वायुविकारे सर्वेषां भूतानां संवेशनोद्गमने मानन्तरेण दृश्येते । नच मानान्तरसिद्धसंवादेन्द्रियसंवेशनोद्गमनवाक्यदार्ढ्यात्सर्वभूतसंवेशनोद्गमनवाक्यं कथञ्चिदिन्द्रियविषयतया व्याख्यानमर्हति, स्वतः सिद्धप्रमाणभावस्य स्वभावदृढस्य मानान्तरानुपयोगात् । न चास्य तेनैकवाक्यता । एकवाक्यतायां च तदपि ब्रह्मपरमेव स्यादित्युक्तम् । इन्द्रियसंवेशनोद्गमनं त्ववयुत्यानुवादेनापि घटिष्यते, एकं वृणीते द्वौ वृणीते इतिवत् । नतु सर्वशब्दार्थः सङ्कोचमर्हति । तस्मात्प्रस्तावभक्तिं प्राणशब्दाभिधेयब्रह्मदृष्ट्योपसीत, न वायुविकारदृष्ट्येति सिद्धम् । तथा चोपासकस्य प्राणप्राप्तिः कर्मसमृद्धिर्वा फलं भवतीति । वाक्यशेषबलेनेति । वाक्यात्सन्निधानं दुर्बलमित्यर्थः । उदाहरणान्तरं तु निगदव्याख्यानेन भाष्येण दूषितम् ॥ २३ ॥

ಅನುಮಾನಪ್ರಮಾಣದಿಂದ ಉಪೋದ್ಬಲಿತವಾದ್ದರಿಂದ. ತದನನುಗೃಹೀತತ್ವೇನ = ಅನುಮಾನಪ್ರಮಾಣದಿಂದ ಉಪೋದ್ಬಲಿತವಾಗದ ಕಾರಣ. ಪ್ರಸ್ತಾವವಾಕ್ಯಮಪಿ = ಪ್ರಸ್ತೋತರ್ಯಾ ದೇವತಾ ಪ್ರಸ್ತಾವಂ ಎಂಬ ವಾಕ್ಯವೂ ಕೂಡ. ಪ್ರಬಲಾನುಸಾರೇಣ = 'ಯದಾ ವೈ ಪುರುಷಃ' ಎಂಬ ವಾಕ್ಯಕ್ಕೆ ಅನುಸಾರಿಯಾಗಿ, ತದನುಸಾರೇಣ = 'ಆಕಾಶಾದ್ವಾಯುಃ' ಎಂಬ ಶ್ರುತಿಯನ್ನು ಅನುಸರಿಸಿ, ಅಪುಂವಾಕ್ಯೇ = ಅಪೌರುಷೇಯ-ವಾಕ್ಯದಲ್ಲಿ, ತಾಭ್ಯಾಂ = ಮಾನಾಂತರ ಅನುಗ್ರಹ ಹಾಗೂ ತದಭಾವಗಳಿಂದ, ತೇ = ಪ್ರಾಬಲ್ಯದೌರ್ಬಲ್ಯಗಳು, ತತ್ಸಂಗತಿಃ = ಮಾನಾಂತರಸಂಗತಿಯು.

**प्रकाशः** – एवं स्वमतेऽधिकरणशरीरं समर्थ्य परोक्तं निरसितुमाह – **अन्ये त्विति** ॥ **''कतमा सा''** इति तच्छब्दपरामर्शविषयं दर्शयितुं 'इत्युपक्रम्य' इत्युक्तम् । **'अभिसंविशन्ति प्राणमभ्युज्जिहते सैषा देवता प्रस्थावमन्वायत्ता''** इति छान्दोग्यप्रथमाध्यायगतप्राणशब्दो विषय इत्यर्थः ॥

**प्रसिद्धेति** ॥ वायुवृत्तिपरो ब्रह्मपरो वेति विषये,

'प्राणशब्दस्य प्रसिद्धप्राणे रूढत्वेन प्रथमत्वेनानुपसञ्जातविरोधित्वेन च प्रबलत्वात् तदनुसारेण चरमस्योपसञ्जातविरोधित्वेन दुर्बलस्य सर्वभूतसंवेशनादेर्नेतव्यत्वाद्वायुवृत्तिरूपप्राणपरः' इति प्राप्ते,

प्राणशब्दादपि प्रथमत्वेनानुपसञ्जातविरोधिनः **''कतमा सा देवता''** इति प्रश्नस्य चेतनवाचिदेवतापदमहिम्ना ब्रह्मविषयत्वात् प्रश्नानुसारेण परिहारस्य व्याख्येयत्वात् रूढ्या प्राणपरपरिहारानुरोधेन प्रश्नव्याख्याने च प्राणे सर्वभूत-संवेशनादिलिङ्गानुपपत्तेर्ब्रह्मपर एव' – इति सिद्धान्त इत्यर्थः ।

ननु 'आकाशाधिकरण एवास्यार्थस्योक्तत्वान्नेदमारभ्यम्' इत्याशङ्क्य, 'अधिकाशङ्कयाऽऽरम्भः' इत्याह – **नचेति** ॥ **''प्रस्तोतर्या देवता''** इत्यादि प्रस्ताववाक्यं स्वापवाक्यानुसारात् प्रसिद्धप्राणे भूतलयादिपरं, **''यतो वै''** इत्यादिकारणवाक्यानुसारात् ब्रह्मणि वेति चिन्तायां, **''यदा वै पुरुषस्स्वपिति''** इत्यादि स्वापवाक्यानुसारात् प्राण एव ।

नच 'स्वापवाक्यं न प्रसिद्धप्राणपरम्' इति वाच्यम्; स्वापकाले प्राणवृत्ताव-परिलुप्यमानायां इन्द्रियवृत्तीनां परिलुप्यमानत्वेन प्रबोधकाले प्रादुर्भाववत्त्वेन च प्रत्यक्षेणानुमानेन च सम्भवात् । ननु 'स्वापवाक्ये इन्द्रियाणां लय उच्यते,

प्रस्ताववाक्ये भूतानामिति किं केन सङ्गतम्?' इति चेन्न, भूतसारत्वादिन्द्रियाणां तद्वारा सर्वभूतलयप्रतिपादने तात्पर्यात् ।

नच "यत्प्रयन्त्यभिसंविशन्ति" इति ब्रह्मणि सर्वभूतलयप्रतिपादककारण-वाक्यानुसारेण प्रस्ताववाक्यं ब्रह्मणि सर्वभूतलयपरं किं न? – इति वाच्यं, स्वापवाक्यस्य प्रत्यक्षादिमानान्तरसंवादित्वेन प्रबलत्वात् कारणवाक्यस्य ब्रह्मणि भूतलयस्य प्रत्यक्षाद्यसिद्धतया तद्रहितत्वेन दुर्बलत्वात् प्रस्ताववाक्यं स्वाप-वाक्यानुरोधेन प्राण एव सर्वभूतलयादिपरमित्यर्थः ।

ವಿವರಣೆ - ಇಲ್ಲಿಯ ತನಕ ಸಿದ್ಧಾಂತದ ಪ್ರಕಾರ ಅಧಿಕರಣದ ಶರೀರವನ್ನು ಸಮರ್ಥಿಸಿದ್ದಾಯಿತು. ಮುಂದೆ ಅದ್ವೈತಿಗಳ ಅಧಿಕರಣಶರೀರವನ್ನು ನಿರಾಕರಿಸುವುದಕ್ಕಾಗಿ ಮೊದಲು ಅವರ ಮತವನ್ನು ಅನುವಾದ ಮಾಡುತ್ತಿದ್ದಾರೆ.

ಯಜ್ಞಕಾಲದಲ್ಲಿ ಉಷಸ್ತಿ ಋಷಿಗಳು ಬಂದು ಪ್ರಸ್ತೋತೃ ಮೊದಲಾದವರನ್ನು ಕುರಿತು ಅನೇಕ ಪ್ರಶ್ನೆಗಳನ್ನು ಮಾಡುತ್ತಾರೆ. ಅವುಗಳ ಮಧ್ಯದಲ್ಲಿ 'ಯಾವ ಪ್ರಸ್ತಾವನನ್ನು ಕುರಿತು ಹೋಮಿಸುತ್ತಿದ್ದೀರೋ, ಅವನ ಬಗ್ಗೆ ವಿವರಿಸಿ ಹೇಳಿರಿ. ಇಲ್ಲದಿದ್ದರೆ ನಿಮ್ಮ ತಲೆಯು ಹೋಳಾಗುತ್ತದೆ' ಎಂದು ಪ್ರಶ್ನಿಸುತ್ತಾರೆ. ಆ ಸಂದರ್ಭದಲ್ಲಿ ಅಲ್ಲಿರುವ ಪ್ರಸ್ತೋತ್ರಾದಿಗಳು ಉಷಸ್ತಿ ಋಷಿಗಳನ್ನೇ ಪುನಃ 'ನಮಗೆ ಗೊತ್ತಿಲ್ಲದ ವಿಚಾರವನ್ನು ತಾವೇ ತಿಳಿಸಬೇಕೆಂದು ಪ್ರಾರ್ಥಿಸುತ್ತಾರೆ. ಆ ಸಂದರ್ಭದಲ್ಲಿ ಪ್ರಸಕ್ತವಾದ ಪ್ರಸ್ತೋತೃ ಮಾತು ಹೀಗಿದೆ -

'ಪ್ರಸ್ತೋತರ್ಯಾ ದೇವತಾ ಪ್ರಸ್ತಾವಮನ್ವಾಯತ್ತಾ ತಾಂ ಚೇದವಿದ್ವಾನ್ ಪ್ರಸ್ತೋಷ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ ಮಾ ಭಗವಾನವೋಚತ್ । ಕತಮಾ ಸಾ ದೇವತಾ ಇತಿ । ಪ್ರಾಣ ಇತಿ ಹೋವಾಚ । ಸರ್ವಾಣಿ ಹ ವಾ ಇಮಾನಿ ಭೂತಾನಿ ಪ್ರಾಣಮೇವಾಭಿಸಂವಿಶಂತಿ ।' ಪ್ರಸ್ತಾವಪ್ರತಿಪಾದ್ಯ ದೇವತೆಯನ್ನು ತಿಳಿಯದೇ ಪ್ರಸ್ತಾವಗಾನ ಮಾಡಿದರೆ ನಿನ್ನ ತಲೆಯುರುಳುವುದು ಎಂದು ನೀವು ಹೇಳಿದಿರಿ. ಆ ಪ್ರಸ್ತಾವದೇವತೆಯು ಯಾರು? ಅದಕ್ಕೆ ಉಷಸ್ತಿಗಳು 'ಪ್ರಾಣನೇ ಆ ದೇವತೆ. ಎಲ್ಲಾ ಭೂತಗಳು ಪ್ರಾಣನನ್ನು ಹೊಂದುತ್ತವೆ' ಎಂದು ಉತ್ತರಿಸಿದರು. (ಛಾಂ ೧/೧೧/೪೫)

ಇಲ್ಲಿ ಪ್ರಾಣನೆಂದರೆ ಯಾರು? ಎಂದು ಜಿಜ್ಞಾಸೆ. ಬ್ರಹ್ಮನಲ್ಲಿ ಹಾಗೂ ಜಡವಾಯುವಿನಲ್ಲಿ ಪ್ರಾಣನೆಂಬ ಹೆಸರು ಸಮಾನವಾಗಿದೆ.

ಪೂರ್ವಪಕ್ಷ - ಪ್ರಸಿದ್ಧವಾದ ಜಡವಾಯುವೇ ಪ್ರಾಣಶಬ್ದದ ಮುಖ್ಯಾರ್ಥವಾಗಿದೆ. ಮತ್ತು ಯಾವುದೇ ವಿರೋಧವಿಲ್ಲದೆ ಪ್ರಥಮಪ್ರಾಪ್ತವಾಗಿದ್ದರಿಂದ ಜಡವಾಯುವಿನಲ್ಲಿ ಪ್ರಾಣಶಬ್ದವು ಪ್ರಬಲ-ವಾಗಿದೆ. ಇದಕ್ಕೆ ಅನುಸಾರಿಯಾಗಿ ಅನಂತರ ಶ್ರುತವಾದ ಸರ್ವಭೂತಕಾರಣತ್ವವನ್ನು ಅರ್ಥೈಸಬೇಕು. ಇದು ಉಪಸಂಜಾತವಿರೋಧಿಯಾದ್ದರಿಂದ ದುರ್ಬಲವಾಗಿದೆ.

ಸಿದ್ಧಾಂತ - ಪ್ರಾಣಶಬ್ದಕ್ಕಿಂತಲೂ ಮೊದಲು ಪ್ರಾಪ್ತವಾದದ್ದು ದೇವತಾಪದ. ಇದು ಚೇತನ-ವಿಷಯಕವಾಗಿದೆ. ಆ ಚೇತನವಾಚಕಪದವನ್ನು ಜಡದಲ್ಲಿ ಹೇಳಲಾಗದ ಕಾರಣ ಬ್ರಹ್ಮನೇ ಆಗಿದ್ದಾನೆಂದು ತಿಳಿಯಬೇಕು. ಪ್ರಶ್ನೆಗೆ ಅನುಸಾರಿಯಾಗಿ ಉತ್ತರವಾಕ್ಯವನ್ನು ಅರ್ಥೈಸಬೇಕಾದ್ದರಿಂದ ಪ್ರಾಣಶಬ್ದದಿಂದಲೂ ಬ್ರಹ್ಮನೇ ಪ್ರತಿಪಾದ್ಯನೆಂದು ಉತ್ತರವಾಕ್ಯದ ಅರ್ಥ. ಈ ಅರ್ಥದಲ್ಲಿ ಸರ್ವಭೂತಕಾರಣತ್ವವೂ ಸಹ ಸಮಂಜಸವಾಗುತ್ತದೆ. ಒಂದು ವೇಳೆ ಜಡವಾಯುವೆಂಬ ಅರ್ಥವನ್ನು ಹೇಳಿದರೆ ಸರ್ವಭೂತ-ಕಾರಣತ್ವವನ್ನು ಜಡವಾಯುವಿನಲ್ಲಿ ಸಮರ್ಥಿಸುವುದು ಕಷ್ಟ. ಆದ್ದರಿಂದ ಪ್ರಪಂಚಕಾರಣನಾದ ಬ್ರಹ್ಮನೇ ಇಲ್ಲಿ ಪ್ರಾಣಶಬ್ದವಾಚ್ಯನಾಗಿದ್ದಾನೆ.

ಶಂಕೆ - ಹಾಗಾದರೆ ಪ್ರಾಣಾಧಿಕರಣದಲ್ಲಿ ಪ್ರಾಣಶಬ್ದದ ಸಮನ್ವಯದಿಂದ ಸರ್ವಭೂತಕಾರಣತ್ವವನ್ನು ಬ್ರಹ್ಮನಲ್ಲಿ ಸಮರ್ಥಿಸಿದಂತಾಯಿತು. ಆದರೆ ಹಿಂದಿನ ಆಕಾಶಾಧಿಕರಣದಲ್ಲಿಯೂ ಈ ವಿಷಯವನ್ನೇ ಸಮರ್ಥಿಸಿದ್ದರಿಂದ ಪುನರುಕ್ತಿದೋಷ ಬರುತ್ತದಲ್ಲವೇ?

ಸಮಾಧಾನ - ಎರಡು ಬಗೆಯಲ್ಲಿ ಅಧಿಕಾಶಂಕೆಗೆ ಅವಕಾಶವಿರುವುದರಿಂದ ಪುನರುಕ್ತಿ ಬರುವುದಿಲ್ಲ. ಅದು ಹೀಗೆ -- (೧) 'ಪ್ರಸ್ತೋತರ್ಯಾ ದೇವತಾ' ಎಂಬ ಪ್ರಸ್ತಾವವಾಕ್ಯವು ಸ್ವಾಪವಾಕ್ಯವನ್ನು ಅನುಸರಿಸಿ ಪ್ರಸಿದ್ಧಜಡವಾಯುವಿನಲ್ಲಿ ಭೂತಲಯವನ್ನು ಹೇಳುತ್ತಿದೆಯೋ, ಅಥವಾ 'ಯತೋ ವಾ' ಇತ್ಯಾದಿ ಕಾರಣವಾಕ್ಯವನ್ನನುಸರಿಸಿ ಬ್ರಹ್ಮನಲ್ಲಿ ಭೂತಲಯವನ್ನು ಹೇಳುತ್ತಿದೆಯೋ? ಎಂಬ ಸಂಶಯವು ಪ್ರಸಕ್ತವಾಗುತ್ತದೆ. ಆ ಸಂದರ್ಭದಲ್ಲಿ 'ಯದಾ ವೈ ಸ್ವಪಿತಿ' ಎಂಬ ಸ್ವಾಪವಾಕ್ಯಕ್ಕೆ ಅನುಸಾರಿಯಾಗಿ ಪ್ರಾಣನಲ್ಲಿ ಭೂತಲಯಪರವಾಗಿಯೇ ಪ್ರಸ್ತಾವವಾಕ್ಯವನ್ನು ಅರ್ಥೈಸಬೇಕು. ಇನ್ನು ಸ್ವಾಪವಾಕ್ಯವೇ ಜಡವಾಯುಪರವಲ್ಲವಲ್ಲವಲ್ಲ! ಎಂದು ಶಂಕಿಸಬಾರದು. ಪ್ರತ್ಯಕ್ಷ ಹಾಗೂ ಅನುಮಾನಪ್ರಮಾಣಗಳಿಂದ ಸ್ವಾಪವಾಕ್ಯವು ಜಡವಾಯುಪರವೆಂದು ತೀರ್ಮಾನವಾಗಿದೆ. ಏಕೆಂದರೆ ಸುಷುಪ್ತಿಕಾಲದಲ್ಲಿ ಜಡವಾಯು-ವಿನ ಸಂಚಾರವಿದ್ದರೂ ಉಳಿದ ಚಕ್ಷುರಾದಿ ಇಂದ್ರಿಯಗಳು ಲಯ ಹೊಂದಿರುತ್ತವೆ. ಎಚ್ಚರವಾದಾಗ ಚಕ್ಷುರಾದಿ ಇಂದ್ರಿಯಗಳು ಜಾಗ್ರತವಾಗಿರುತ್ತವೆ. ಹೀಗೆ ಪ್ರತ್ಯಕ್ಷ ಹಾಗೂ ಅನುಮಾನಗಳಿಂದ ಉಳಿದೆಲ್ಲ ಇಂದ್ರಿಯಗಳು ಜಡವಾಯುವಿನಲ್ಲಿ ಲೀನಹೊಂದಿ ಜಡವಾಯುವಿನಿಂದಲೇ ಜಾಗ್ರತಗೊಳ್ಳುತ್ತಿವೆ ಎಂದು ಸಿದ್ಧವಾಗುತ್ತದೆ. ಸಕಲಭೂತಗಳ ಸೂಕ್ಷ್ಮರೂಪವಾದ ಇಂದ್ರಿಯಗಳ ಲಯವನ್ನು ಸ್ವಾಪವಾಕ್ಯವು ಜಡವಾಯುವಿನಲ್ಲಿ ಸಮರ್ಥಿಸುತ್ತಿದೆ ಎಂದು ನಿಶ್ಚಯವಾಗಿ ಹೇಳಬಹುದು. ಹೀಗೆ ಪ್ರತ್ಯಕ್ಷಾನುಮಾನ-ಗಳಿಂದ ಉಪೋದ್ಬಲಿತವಾದ ಸ್ವಾಪವಾಕ್ಯಕ್ಕೆ ಅನುಸಾರಿಯಾಗಿ ಪ್ರಸ್ತಾವವಾಕ್ಯವನ್ನು ಅರ್ಥೈಸಬೇಕೇ ಹೊರತು ಪ್ರತ್ಯಕ್ಷಾನುಮಾನಗಳ ಬೆಂಬಲವಿಲ್ಲದ 'ಯತೋ ವಾ' ಎಂಬ ಕಾರಣವಾಕ್ಯಕ್ಕೆ ಅನುಸಾರಿಯಾಗಿ ಪ್ರಸ್ತಾವವಾಕ್ಯವನ್ನು ಅರ್ಥೈಸುವುದು ತಪ್ಪಾಗುತ್ತದೆ.

ಶಂಕೆ - ಪ್ರಸ್ತಾವವಾಕ್ಯಕ್ಕೂ ಸ್ವಾಪವಾಕ್ಯಕ್ಕೂ ಸಂಬಂಧವೇ ಇಲ್ಲ. ಇಂದ್ರಿಯಗಳ ಲಯವನ್ನು ಸ್ವಾಪವಾಕ್ಯವು ಹೇಳಿದರೆ ಪ್ರಸ್ತಾವವಾಕ್ಯವು ಭೂತಗಳ ಲಯವನ್ನು ಹೇಳುತ್ತಿದೆ. ಹೀಗಿರುವಾಗ ಸ್ವಾಪವಾಕ್ಯವನ್ನು ಅನುಸರಿಸಿ ಪ್ರಸ್ತಾವವಾಕ್ಯವನ್ನು ಹೇಗೆ ಅರ್ಥೈಸುವುದು.

ಸಮಾಧಾನ - ಇಂದ್ರಿಯಗಳೆಂದರೆ ಸಕಲಭೂತಪದಾರ್ಥಗಳ ಸಾರವೆಂದರ್ಥ. ಇಂದ್ರಿಯಗಳ

ಲಯವನ್ನು ಹೇಳಿದರೆ ಸಕಲಭೂತಗಳ ಸಾರದ ಲಯವನ್ನು ಹೇಳಿದಂತಾಯಿತು. ಆದ್ದರಿಂದ ಸ್ವಾಪವಾಕ್ಯದ ತಾತ್ಪರ್ಯ ಸಕಲಭೂತಲಯವೇ ಆಗಿದೆ ಎಂದು ತಿಳಿಯಬೇಕು.

ಶಂಕೆ - 'ಯತ್ಪ್ರಯಂತ್ಯಭಿಸಂವಿಶಂತಿ' ಎಂಬ ವಾಕ್ಯವು ಬ್ರಹ್ಮನಲ್ಲಿ ಸಕಲಭೂತಲಯವನ್ನು ಹೇಳುತ್ತಿದೆ. ಇದಕ್ಕೆ ಅನುಸಾರಿಯಾಗಿ ಪ್ರಸ್ತಾವವಾಕ್ಯವು ಬ್ರಹ್ಮನಲ್ಲಿ ಸಕಲಭೂತಲಯವನ್ನು ಹೇಳುತ್ತಿದೆ ಎಂದು ಹೇಳಿದರೆ ಏನು ತಪ್ಪು?

ಸಮಾಧಾನ - ಸ್ವಾಪವಾಕ್ಯವು ಪ್ರತ್ಯಕ್ಷಾದಿಪ್ರಮಾಣಾಂತರಗಳಿಂದ ಸಂವಾದಿಯಾದ್ದರಿಂದ ಪ್ರಬಲವಾಗಿದೆ; ಬ್ರಹ್ಮನಲ್ಲಿ ಭೂತಲಯವನ್ನು ಪ್ರತಿಪಾದಿಸುತ್ತಿರುವ ಕಾರಣವಾಕ್ಯಕ್ಕೆ ಪ್ರತ್ಯಕ್ಷಾದಿ ಪ್ರಮಾಣಗಳ ಸಂವಾದವಿಲ್ಲದ ಕಾರಣ ದುರ್ಬಲವಾಗಿದೆ. ಹಾಗಾಗಿ ಸ್ವಾಪವಾಕ್ಯಕ್ಕೆ ಅನುಸಾರಿಯಾಗಿ ಪ್ರಸ್ತಾವವಾಕ್ಯವನ್ನು ವ್ಯಾಖ್ಯಾನಿಸುವುದೇ ಉಚಿತ.

ಇಲ್ಲಿಯ ತನಕ ಸ್ವಾಪವಾಕ್ಯದಲ್ಲಿರುವ ಇಂದ್ರಿಯಪದವು ಭೂತಪರವಾಗಿದೆಯೆಂಬ ಅರ್ಥವನ್ನು ಅಂಗೀಕರಿಸಿ ಉತ್ತರಿಸಿದ್ದಾಯಿತು. ಪ್ರಕೃತ ಪ್ರಸ್ತಾವವಾಕ್ಯದಲ್ಲಿರುವ ಭೂತಪದವೇ ಭೂತಸಾರವಾದ ಇಂದ್ರಿಯಪರವಾಗಿದೆ ಎಂದು ಅಂಗೀಕರಿಸಿ ಎರಡೂ ವಾಕ್ಯಗಳ ಅಭಿಪ್ರಾಯ ಒಂದೇ ಆಗಿದೆ ಎಂದು ಸಮರ್ಥಿಸುತ್ತಿದ್ದಾರೆ. ಆದ್ದರಿಂದ ಸ್ವಾಪವಾಕ್ಯದ ಬೆಂಬಲವನ್ನು ಪ್ರಸ್ತಾವವಾಕ್ಯಕ್ಕೆ ಪ್ರತಿಪಾದಿಸಬಹುದೆಂಬ ಮತ್ತೊಂದು ಪಕ್ಷವನ್ನು ಯದ್ವಾ ಇತ್ಯಾದಿ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ.

(೨) ಜಡವಾಯುವು ಭೂತಸಾರವಾದ ಸಕಲ ಇಂದ್ರಿಯಗಳಿಗೆ ಆಶ್ರಯವಾಗಿದೆ. ಇಂತಹ ಜಡ-ವಾಯುವನ್ನು ಪ್ರಸ್ತಾವವಾಕ್ಯವು ಪ್ರತಿಪಾದಿಸುತ್ತಿದೆ.

ಶಂಕೆ - ಪ್ರಮಾಣಾಂತರಗಳಿಂದ ಉಪೋದ್ಬಲಿತವಾದ ಸ್ವಾಪವಾಕ್ಯಕ್ಕೆ ಅನುಸಾರಿಯಾಗಿ ಪ್ರಸ್ತಾವ-ವಾಕ್ಯವು ಜಡವಾಯುವನ್ನು ಪ್ರತಿಪಾದಿಸುತ್ತಿದೆ ಎಂದು ಈ ಅಧಿಕರಣದಲ್ಲಿ ಸಮರ್ಥಿಸುತ್ತಿದ್ದೀರಿ. ಆದರೆ ಆಕಾಶಾಧಿಕರಣದಲ್ಲಿಯೂ ಹೀಗೆಯೇ ಹೇಳಬಹುದು. ಸಂಭೂತವಾಕ್ಯಕ್ಕೆ ಅನುಸಾರಿಯಾಗಿ 'ಆಕಾಶಾ-ದೇವ' ಎಂಬಲ್ಲಿರುವ ಆಕಾಶಪದವು ಭೂತಾಕಾಶಪರವಾಗಿದೆ. ಹೀಗೆ ಹೇಳಿದಾಗ ಪ್ರಾಣಾಧಿಕರಣದ ಪೂರ್ವಪಕ್ಷವು ಅಭ್ಯಧಿಕಾಶಂಕೆ ಎನಿಸದು.

ಸಮಾಧಾನ - ವ್ಯತ್ಯಾಸವಿದೆ. ಆಕಾಶಾದ್ವಾಯುಃ ಎಂಬ ವಾಕ್ಯವು ಬೇರೆ ಪ್ರಮಾಣಗಳಿಂದ ಉಪೋದ್ಬಲಿತವಾಗದ ಕಾರಣ ದುರ್ಬಲವಾಗಿದೆ. ಹೀಗಿರುವಾಗ ಇದಕ್ಕೆ ಅನುಸಾರಿಯಾಗಿ ಆಕಾಶಾದೇವ ಎಂಬ ವಾಕ್ಯವನ್ನು ಭೂತಪರವೆನ್ನುವುದು ಕಷ್ಟ. ಪ್ರಕೃತ ಪ್ರಾಣಾಧಿಕರಣದ ಸ್ವಾಪವಾಕ್ಯವು ಹಾಗಲ್ಲದ ಕಾರಣ ಪ್ರಬಲವಾಗಿದೆ. ಈ ವ್ಯತ್ಯಾಸದಿಂದ ಅಭ್ಯಧಿಕಾಶಂಕೆಯನ್ನು ಮಾಡುವುದು ತಪ್ಪಲ್ಲ.

ಮೇಲೆ ಹೇಳಿದ ಅಧಿಕಾಶಂಕೆಯ ನಿರಾಸಕ್ಕೋಸ್ಕರ ಪ್ರಾಣಾಧಿಕರಣವು ಹೊರಡಲೇ ಬೇಕೆಂದು 'ಪುಂವಾಕ್ಯೇ' ಎಂಬ ಗ್ರಂಥದಿಂದ ಪ್ರತಿಪಾದಿಸಿದ್ದಾರೆ. ಪ್ರತ್ಯಕ್ಷಾದಿ ಪ್ರಮಾಣಗಳ ಸಂವಾದವನ್ನು ಪೌರುಷೇಯವಾಕ್ಯಕ್ಕೆ ಹೇಳಬಹುದೇ ಹೊರತು ಅಪೌರುಷೇಯವಾಕ್ಯಕ್ಕೆ ಹೇಳಲಾಗದು. ಆದ್ದರಿಂದ ಸ್ವಾಪವಾಕ್ಯವು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಪ್ರಬಲವಾಗಿದೆ ಎನ್ನುವುದೇ ತಪ್ಪು. ಇದಕ್ಕೆ ಅನುಸಾರಿಯಾಗಿ

ಪ್ರಸ್ತಾವವಾಕ್ಯವು ಜಡವಾಯುವನ್ನು ಪ್ರತಿಪಾದಿಸಲು ಸಾಧ್ಯವಿಲ್ಲ, ಹೊರತಾಗಿ 'ಯತೋ ವಾ' ಇತ್ಯಾದಿ ಶ್ರುತಿಗೆ ಅನುಸಾರಿಯಾಗಿ ಜಗತ್ಕಾರಣತ್ವಲಿಂಗದಿಂದ ಬ್ರಹ್ಮನನ್ನೇ ಪ್ರತಿಪಾದಿಸುತ್ತದೆ. ಇಷ್ಟು ಅದ್ವೈತಿಗಳ ವಾದ.

**गुरुराजीयम् – मानान्तरानुगृहीतत्वेनेति ॥** सर्वाणि भूतानि प्राणे विलीयन्ते सर्वभूतसारेन्द्रियलयाधिकरणत्वादितिमानान्तरानुगृहीतत्वेनेत्यर्थः । ननु ब्रह्मण्यपि भूतलयादिबोधकश्रुतिः प्रबला, इत्यत आह – **ब्रह्मणीति ॥** सन्दिग्धवाक्यानुसारेणासन्दिग्धवाक्यस्य नयनेऽरुच्याह – **यद्वेति ॥**

## ಸಾರ

ಶಾಂಕರಭಾಷ್ಯದಲ್ಲಿ ಪ್ರಾಣಾಧಿಕರಣವನ್ನು ಹೀಗೆ ರಚಿಸಿದ್ದಾರೆ. -- 'ಕತಮಾ ಸಾ ದೇವತಾ ಇತಿ ಪ್ರಾಣ ಇತಿ ಹೋವಾಚ । ಸರ್ವಾಣಿ ಹ ವಾ ಭೂತಾನಿ ಪ್ರಾಣಮೇವಾಭಿಸಂವಿಶಂತಿ' ಛಾಂದೋಗ್ಯದ ಈ ವಾಕ್ಯದಲ್ಲಿ ಪ್ರಾಣಶಬ್ದದಿಂದ ಯಾರು ವಾಚ್ಯರು? ಪ್ರಸಿದ್ಧವಾದ ಪ್ರಾಣವಾಯುವೋ ಅಥವಾ ಬ್ರಹ್ಮನೋ?

**ಪೂರ್ವಪಕ್ಷ** - ಪ್ರಾಣವಾಯುವೇ ಪ್ರಾಣಶಬ್ದದ ಮುಖ್ಯಾರ್ಥವೆಂದು ಛಾಂದೋಗ್ಯ ಹೇಳುತ್ತಿದೆ. ಏಕೆಂದರೆ ಅಲ್ಲಿಯೇ ಮುಂದೆ 'ಸರ್ವಾಣಿ ಹ ವಾ ಭೂತಾನಿ' ಎಂದು ಸಮಸ್ತಭೂತಪದಾರ್ಥಗಳ ಉತ್ಪತ್ತಿ ಲಯಗಳಿಗೆ ಪ್ರಾಣನೇ ಕಾರಣನೆಂದು ಹೇಳಲಾಗಿದೆ. ಸುಷುಪ್ತಿಕಾಲದಲ್ಲಿ ಬೇರೆ ಯಾವುದೇ ಇಂದ್ರಿಯಗಳ ವ್ಯಾಪಾರವಿಲ್ಲದೇ ಪ್ರಾಣವಾಯುವಿನ ವ್ಯಾಪಾರವಷ್ಟೇ ಇರುತ್ತದೆ. ಹಾಗಾಗಿ ಉಳಿದೆಲ್ಲ ಇಂದ್ರಿಯಗಳು ಸುಷುಪ್ತಿಕಾಲದಲ್ಲಿ ಪ್ರಾಣವಾಯುವಿನಲ್ಲಿ ಲಯ ಹೊಂದಿ, ಎಚ್ಚರಾವಸ್ಥೆಯಲ್ಲಿ ಪುನಃ ಹುಟ್ಟುತ್ತವೆ. ಈ ಪಂಚೇಂದ್ರಿಯಗಳು ಪಂಚಭೂತಗಳ ಸಾರರೂಪವಾದ್ದರಿಂದ ಸಮಸ್ತಭೂತಗಳ ಉತ್ಪತ್ತಿಲಯಗಳಿಗೆ ಜಡ-ವಾಯುವೇ ಕಾರಣವೆಂದು ಇದರಿಂದ ಸಿದ್ಧವಾಗುತ್ತದೆ. ಆದ್ದರಿಂದ ಛಾಂದೋಗ್ಯದಲ್ಲಿರುವ ಪ್ರಾಣನೆಂದರೆ ಜಡವಾಯುವೇ ಹೊರತು ಬ್ರಹ್ಮನಲ್ಲ.

ಸಿದ್ಧಾಂತ - 'ಸರ್ವಾಣಿ ಹ ವಾ' ಎಂಬ ಛಾಂದೋಗ್ಯವು ಸಕಲಪ್ರಾಣಿಗಳ ಉತ್ಪತ್ತಿಲಯಕಾರಣತ್ವವನ್ನು ಸ್ಪಷ್ಟವಾಗಿ ಹೇಳುತ್ತಿದೆ. ಅದನ್ನು ಸಂಕೋಚಮಾಡಿ ಕೇವಲ ಇಂದ್ರಿಯಗಳಲ್ಲಷ್ಟೇ ಉತ್ಪತ್ತಿಲಯಕಾರಣತ್ವವನ್ನು ಹೇಳುವುದು ತಪ್ಪಾಗುತ್ತದೆ. ಆದ್ದರಿಂದ ಪ್ರಪಂಚಕಾರಣನಾದ ಬ್ರಹ್ಮನೇ ಪ್ರಾಣಶಬ್ದದಿಂದ ವಾಚ್ಯನಾಗಿದ್ದಾನೆ.

ಪ್ರಾಣಾಧಿಕರಣದ ಸಿದ್ಧಾಂತವು ಆಕಾಶಾಧಿಕರಣದಿಂದ ಗತಾರ್ಥವಾಗಿದೆ ಎಂದು ಶಂಕಿಸಬಾರದು. ಎರಡು ಬಗೆಯಲ್ಲಿ ಅಧಿಕಾಶಂಕೆಗೆ ಪ್ರಸಕ್ತಿ ಇರುವುದರಿಂದ ಪ್ರಾಣಾಧಿಕರಣವು ಆರಂಭಣೀಯವಾಗಿದೆ.

೧. ಪ್ರತ್ಯಕ್ಷಾನುಮಾನಗಳ ಬೆಂಬಲವಿರುವ ಸ್ವಾಪಶ್ರುತಿಯು ಸಕಲಭೂತಗಳ ಲಯವನ್ನು ಜಡವಾಯು-ವಿನಲ್ಲಿ ಪ್ರತಿಪಾದಿಸುತ್ತಿದೆ. ಅದಕ್ಕನುಗುಣವಾಗಿ ಪ್ರಸ್ತಾವವಾಕ್ಯವೂ ಕೂಡ ಜಡವಾಯುವನ್ನೇ ಪ್ರತಿಪಾದಿಸುತ್ತದೆ.

೨. ಅಥವಾ ಸ್ವಾಪವಾಕ್ಯಕ್ಕೆ ಅನುಗುಣವಾಗಿ ಪ್ರಸ್ತಾವವಾಕ್ಯವೇ ಇಂದ್ರಿಯಗಳ ಲಯವನ್ನು ಜಡವಾಯುವಿನಲ್ಲಿ ಪ್ರತಿಪಾದಿಸುತ್ತಿದೆ.

ಸ್ವಾಪವಾಕ್ಯದಂತೆ ಆಕಾಶಶ್ರುತಿಗೆ ಪ್ರಮಾಣಾಂತರಗಳ ಬೆಂಬಲವಿಲ್ಲದ ಕಾರಣ ಇಲ್ಲಿ ಅಧಿಕಾಶಂಕೆಗೆ ಅವಕಾಶವಿದೆ. ಈ ಅಧಿಕಾಶಂಕೆಯ ನಿರಾಕರಣೆಗಾಗಿ ಪ್ರಾಣಾಧಿಕರಣವು ಹೊರಡಲೇಬೇಕು.

- - - - - -

## ಅದ್ವೈತಮತವಿಮರ್ಶೆ

### तात्पर्यचन्द्रिका

तन्न, पूर्वपक्षे प्राणस्य जडवायुत्वे, प्रश्ने "कतमा सा देवता" इति, प्रतिवचने च "सैषा देवता" इति देवताशब्दायोगात् । तदभिमानिचेतनत्वे च 'वायुविकारस्य पञ्चवृत्तेः प्राणस्योपादानं युक्तम्' इत्यादित्वत्पूर्वपक्षभाष्यविरोधात् । स्वापवाक्ये मानान्तरसंवादस्यैव आभावेन तं स्वीकृत्य पूर्वोत्तरपक्षोक्तययोगाच्च । तथा हि –

नहि स्वापे पृथिव्यादेरक्षाणां वा विनाशधीः ।
प्रत्यक्षादनुमानाद्वा देवतायां जडेऽथवा ॥

न तावत्स्वापकाले जडे वा देवतायां वा महाभूतानां लयादौ मानान्तरसंवादः, तेषां स्वापकालेऽप्यलीनानामेवानुभावात् । दृष्टिसृष्टिमते च तदा वायुविकारादेरप्यभावेन तत्र भूतलयायोगात् । नापि स्वापकाले जडे वा देवतायां इन्द्रियाणां लये प्रत्यक्षसंवादः, तेषामतीन्द्रियत्वात् । नापि 'स्वापकाले वायुवृत्तेरलोपादिन्द्रियवृत्तीनां च लोपात् तत्र तेषां लयोऽनुमीयते' इति अनुमानसंवादोऽस्तीति वाच्यम्; त्वया जन्मादिसूत्रे ब्रह्मण उपादानत्वेऽपि श्रुतिसंवाद्यनुमानानामुक्तत्वात् । 'यस्मिन् सव्यापारे सति यन्निर्व्यापारं तत्तत्र लीयते' इति व्याप्त्यभावाच्च । 'पूर्वेद्युर्येन दृष्टं तेनैव चक्षुषा पश्यामि' इत्यादिप्रत्यभिज्ञाविरोधाच्च । "यथा सोम्य वयांसि वासो वृक्षं सम्प्रतिष्ठन्त एव ᳚ हवैतत्सर्वं परे आत्मनि सम्प्रतिष्ठते" इति प्रक्रम्य "चक्षुश्च द्रष्टव्यं च श्रोत्रं च श्रोतव्यं च" इत्यादिना सुप्तौ चक्षुरादीनामनाशस्यैव श्रवणाच्च ।

किञ्च आकाशाद्वाय्वाद्युत्पत्तिरपि मानान्तरसंवादिनी, अवकाशात् पवनस्य, पवनाच्च फूत्कारादहनस्य, दहनाच्चोष्मतः स्वेदस्य, वृष्टितश्च पार्थिवपदार्थाना-

**मुत्पत्तेर्दर्शनादिति नाकाशवाक्यात् प्राणवाक्येऽधिकाशङ्का । नच 'कतमा सा देवतोद्गीथमन्वायत्ता । आदित्य इति होवाच'' इत्यादिना 'उद्गीथादावादित्यादेरब्रह्मण एव देवतात्वेनोक्तत्वात् तत्सन्निहिते प्रस्तावेऽप्यब्रह्मण एव देवतात्वम्' त्यधिका शङ्केति वाच्यम्, पूर्वाधिकरणेऽपि ''अपां का गतिरिति । असौ लोकस्य इति होवाच'' इत्यादिकेनाब्रह्मण एव गतित्वेनोक्ततया तत्सन्निधानात् ''अस्य लोकस्य का गतिः'' इति वाक्येऽप्याकाशस्याब्रह्मत्वं युक्तमिति साम्यात् ।**

ಅನುವಾದ - ಅದ್ವೈತಿಗಳ ಅಧಿಕರಣ ರಚನೆ ಸರಿಯಿಲ್ಲ. ಮೊದಲು ಜಡವಾಯುವೆಂಬ ಪೂರ್ವಪಕ್ಷವೇ ತಪ್ಪು. ಛಾಂದೋಗ್ಯಪ್ರಶ್ನೆಯಲ್ಲಿ 'ಕತಮಾ ಸಾ ದೇವತಾ?' ಎಂದು ದೇವತಾವಾಚಕ ಪದವಿದೆ. ಉತ್ತರವಾಕ್ಯದಲ್ಲಿ 'ಸೈಷಾ ದೇವತಾ' ಎಂಬ ದೇವತಾಪದವಿದೆ. ದೇವತಾಪದವು ಚೇತನರನ್ನು ಪ್ರತಿಪಾದಿಸಬಹುದೇ ಹೊರತು ಜಡವನ್ನು ಪ್ರತಿಪಾದಿಸಲು ಸಾಧ್ಯವಿಲ್ಲ. ತದಭಿಮಾನಿ ಚೇತನರನ್ನೇ ಪ್ರಾಣಶಬ್ದದಿಂದ ವಾಚ್ಯರೆನ್ನಬೇಕು. ಆದರೆ ವಾಯುವಿಕಾರಸ್ಯ ಅಪಂಚವೃತ್ತೇಃ ಪ್ರಾಣಸ್ಯೋಪಾದಾನಂ ಯುಕ್ತಮ್' (ಪ್ರಾಣಶಬ್ದವು ವಾಯುವಿಕಾರದಲ್ಲಿಯೇ ಪ್ರಸಿದ್ಧವಾದ್ದರಿಂದ ವಾಯುವಿಕಾರವನ್ನೇ ಸ್ವೀಕರಿಸಬೇಕು) ಎಂಬ ಶಂಕರಭಾಷ್ಯಕ್ಕೆ ವಿರೋಧ ಬರುತ್ತದೆ. ಅಷ್ಟೇ ಅಲ್ಲದೇ ಸ್ವಾಪವಾಕ್ಯಕ್ಕೆ ಬೇರೆ ಪ್ರಮಾಣದ ಸಂವಾದವಿಲ್ಲದ ಕಾರಣ ಅದರ ಬೆಂಬಲವನ್ನು ಆಶ್ರಯಿಸಿ ಪೂರ್ವಪಕ್ಷವನ್ನಾಗಲೀ ಸಿದ್ಧಾಂತವನ್ನಾಗಲೀ ಮಾಡುವುದೇ ತಪ್ಪು. ಅದು ಹೀಗೆ --

ನಹಿ ಸ್ವಾಪೇ ಪೃಥಿವ್ಯಾದೇರಕ್ಷಾಣಾಂ ವಾ ವಿನಾಶಧೀಃ ।
ಪ್ರತ್ಯಕ್ಷಾದನುಮಾನಾದ್ವಾ ದೇವತಾಯಾಂ ಜಡೇऽಥವಾ ॥

(ಸುಷುಪ್ತಿಕಾಲದಲ್ಲಿ ಪೃಥಿವ್ಯಾದಿಸಕಲಭೂತಪದಾರ್ಥಗಳು ಅಥವಾ ಚಕ್ಷುರಾದಿ ಇಂದ್ರಿಯಗಳು ದೇವತೆಯಲ್ಲಾಗಲೀ ಅಥವಾ ವಾಯುವಿಕಾರದಲ್ಲಾಗಲೀ ಲಯವಾಗುತ್ತವೆ ಎಂಬ ಜ್ಞಾನವು ಪ್ರತ್ಯಕ್ಷದಿಂದಾಗಲೀ ಅನುಮಾನದಿಂದಾಗಲೀ ಸಿದ್ಧವಾಗಿಲ್ಲ. )

ಸುಷುಪ್ತಿಕಾಲದಲ್ಲಿ ಜಡವಾಯುವಿನಲ್ಲಾಗಲೀ ಚೇತನವಾಯುವಿನಲ್ಲಾಗಲೀ ಮಹಾಭೂತಗಳ ಲಯವಾಗುತ್ತವೆಂಬ ವಿಷಯದಲ್ಲಿ ಯಾವುದೇ ಪ್ರಮಾಣದ ಸಂವಾದವಿಲ್ಲ ಹೊರತಾಗಿ ಲಯ ಹೊಂದಿಲ್ಲವೆಂಬ ಅನುಭವವೇ ಎಲ್ಲರಿಗೂ ಇದೆ. ದೃಷ್ಟಿಸೃಷ್ಟಿಮತದಲ್ಲಿ ವಾಯುವಿಕಾರವೇ ಇಲ್ಲದ ಕಾರಣ ಅಲ್ಲಿ ಭೂತಲಯವನ್ನು ಕೂಡಿಸಲು ಸಾಧ್ಯವಿಲ್ಲ.

ಸುಷುಪ್ತಿಕಾಲದಲ್ಲಿ ಜಡವಾಯುವಿನಲ್ಲಿ ಅಥವಾ ಚೇತನವಾಯುವಿನಲ್ಲಿ ಇಂದ್ರಿಯಗಳು ಲೀನವಾಗುತ್ತವೆ ಎನ್ನಲು ಪ್ರತ್ಯಕ್ಷಪ್ರಮಾಣವಿಲ್ಲ. ಏಕೆಂದರೆ ಎಲ್ಲಾ ಇಂದ್ರಿಯಗಳು ಅತೀಂದ್ರಿಯವಾದ್ದರಿಂದ ಪ್ರತ್ಯಕ್ಷದಿಂದ ವಾಯುವಿನಲ್ಲಿ ಲಯವಾದದ್ದನ್ನು ನಿರ್ಣಯಿಸಲಾಗದು. ಇನ್ನು

''ಇಂದ್ರಿಯವೃತ್ತಯಃ ಸ್ವಾಪಕಾಲೇ ವಾಯುವೃತ್ತೇರಲೋಪಾತ್ ವಾಯೌ ಲೀನಾಃ' (ಸುಷುಪ್ತಿಕಾಲದಲ್ಲಿ ವಾಯುವೃತ್ತಿಯು ಜಾಗ್ರತವಾದ್ದರಿಂದ ಸಕಲ ಇಂದ್ರಿಯಗಳು ವಾಯುವಿನಲ್ಲಿ ಲೀನವಾಗಿವೆ) ಎಂಬ ಅನುಮಾನವನ್ನು ಪ್ರಮಾಣವೆನ್ನಬೇಕು. ಆದರೆ ಜನ್ಮಾದಿಸೂತ್ರದಲ್ಲಿ ಶ್ರುತಿಸಂವಾದಿಯಾದ ಅನುಮಾನವಷ್ಟೇ ಬ್ರಹ್ಮನ ಉಪಾದಾನವಿಷಯದಲ್ಲಿ ಪ್ರಮಾಣವಾಗುತ್ತದೆಂದು ಅದ್ವೈತಿಗಳು ಹೇಳಿದ್ದಾರೆ. ಹೀಗಿರುವಾಗ ಶ್ರುತಿಸಂವಾದಿಯಾಗದ ಅನುಮಾನವು ಪ್ರಕೃತ ಪ್ರಮಾಣವೆನಿಸುವುದಿಲ್ಲ. ಅಷ್ಟೇ ಅಲ್ಲದೇ 'ಯಸ್ಮಿನ್ ಸವ್ಯಾಪರೇ ಸತಿ ಯನ್ನಿರ್ವ್ಯಾಪಾರಂ ತತ್ತತ್ರ ಲೀಯತೇ' (ಯಾವುದು ಜಾಗ್ರತವಾಗಿರುವಾಗ ಉಳಿದವುಗಳು ನಿಶ್ಚೇಷ್ಟವಾಗಿರುತ್ತವೋ ಅವುಗಳು ಜಾಗ್ರತವಾದ ಪದಾರ್ಥದಲ್ಲಿ ಲಯ ಹೊಂದುತ್ತವೆ) ಎಂಬ ವ್ಯಾಪ್ತಿಯನ್ನೂ ಹೇಳಲಾಗದು. ಮತ್ತು ಹಿಂದಿನ ದಿವಸ ಯಾವ ಕಣ್ಣಿನಿಂದ ನೋಡಿದ್ದೆನೋ, ಅದೇ ಕಣ್ಣಿನಿಂದ ಇವತ್ತೂ ನೋಡುತ್ತಿದ್ದೇನೆ' ಎಂಬ ಪ್ರತ್ಯಭಿಜ್ಞೆಯ ವಿರೋಧವು ಬರುತ್ತದೆ.

'ಯಥಾ ಸೋಮ್ಯ ವಯಾಂಸಿ ವಾಸೋ ವೃಕ್ಷಂ ಸಂಪ್ರತಿಷ್ಠಂತೇ ಏವಂ ಹ ವೈ ತತ್ಸರ್ವಂ ಪರ ಆತ್ಮನಿ ಸಂಪ್ರತಿಷ್ಠತೇ' (ಎಲೈ ಸೋಮ್ಯನೇ! ಯಾವ ರೀತಿಯಾಗಿ ಪಕ್ಷಿಗಳು ವೃಕ್ಷದಲ್ಲಿ ಆಶ್ರಯ ಹೊಂದುತ್ತವೋ ಅದರಂತೆ ಸಕಲರೂ ಪರಮಾತ್ಮನಲ್ಲಿ ಆಶ್ರಯ ಹೊಂದುತ್ತಾರೆ) ಎಂದು ಪ್ರಾರಂಭವಾಗಿ 'ಚಕ್ಷುಶ್ಚ ದ್ರಷ್ಟವ್ಯಂ ಚ ಶ್ರೋತ್ರಂ ಚ ಶ್ರೋತವ್ಯಂ ಚ' (ಚಕ್ಷುರಿಂದ್ರಿಯ, ಚಾಕ್ಷುಷಪದಾರ್ಥ ಶ್ರೋತ್ರೇಂದ್ರಿಯ, ಶ್ರೋತವ್ಯಪದಾರ್ಥ) ಇತ್ಯಾದಿ ಶ್ರುತಿಯಲ್ಲಿ ಚಕ್ಷುರಾದಿ ಇಂದ್ರಿಯಗಳಿಗೆ ಸುಷುಪ್ತಿಯಲ್ಲೂ ನಾಶವಿಲ್ಲವೆಂದು ಹೇಳಲಾಗಿದೆ.

'ಆಕಾಶಾದ್ವಾಯುಃ' ಎಂಬ ಉತ್ಪತ್ತಿವಾಕ್ಯವೂ ಕೂಡ ಪ್ರಸ್ತಾವವಾಕ್ಯದಂತೆ ಪ್ರಮಾಣಾಂತರಸಂವಾದಿಯಾಗಿದೆ. ಅವಕಾಶದಿಂದ ಗಾಳಿಯ ಉತ್ಪತ್ತಿಯು, ಫೂತ್ಕಾರಮಾಡಿದಾಗ ಗಾಳಿಯಿಂದ ಬೆಂಕಿಯ ಉತ್ಪತ್ತಿಯು, ಬೇಗೆಯಿಂದ ಬೆಂಕಿಯ ಮೂಲಕ ನೀರಿನ(ಬೆವರಿನ) ಉತ್ಪತ್ತಿಯು, ಮಳೆಯ ನೀರಿನಿಂದ ಪಾರ್ಥಿವಪದಾರ್ಥಗಳ ಉತ್ಪತ್ತಿಯು ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾಗಿದೆ. ಆದ್ದರಿಂದ 'ಆಕಾಶಾದ್ವಾಯುಃ' ಇತ್ಯಾದಿ ಶ್ರುತಿಯಲ್ಲಿ ಹೇಳಿದ ಉತ್ಪತ್ತಿಯು ಪ್ರತ್ಯಕ್ಷಪ್ರಮಾಣದಿಂದ ಸಂವಾದಿಯಾಗಿದೆ. ಹೀಗಿರುವಾಗ ಆಕಾಶವಾಕ್ಯದಲ್ಲಿ ಇಲ್ಲದಿರುವ ಅಭ್ಯಧಿಕಾಶಂಕೆಯನ್ನು ಪ್ರಾಣವಾಕ್ಯದಲ್ಲಿ ಹೇಗೆ ತಾನೆ ಮಾಡುವಿರಿ?

ಪ್ರಶ್ನೆ - 'ಕತಮಾ ದೇವತೋದ್ಗೀಥಮನ್ವಾಯತ್ತಾ । ಆದಿತ್ಯ ಇತಿ ಹೋವಾಚ' ಇತ್ಯಾದಿಯಾಗಿ ಛಾಂದೋಗ್ಯದಲ್ಲಿ ಬ್ರಹ್ಮನಲ್ಲದ ಆದಿತ್ಯಾದಿಗಳನ್ನು ಉದ್ಗೀಥನೆನ್ನಲಾಗಿದೆ. ಅಂತಹ ಆದಿತ್ಯನೇ ದೇವತೆಯಾಗಿದ್ದಾನೆಂದು ಹೇಳಿದ್ದರಿಂದ ಅದರ ಸನ್ನಿಧಾನದಲ್ಲಿರುವ ಪ್ರಸ್ತಾವವಾಕ್ಯವು ಬ್ರಹ್ಮನಲ್ಲದವನನ್ನೇ ದೇವತೆಯೆನ್ನುತ್ತಿದೆ ಎಂಬ ಅಭ್ಯಧಿಕಾಶಂಕೆಯನ್ನು ಹೇಳಬಹುದಲ್ಲವೇ?

ಉತ್ತರ - ಇದನ್ನು ಆಕಾಶಾಧಿಕರಣದಲ್ಲಿ ಹೇಳಬಹುದು. 'ಅಪಾಂ ಕಾ ಗತಿರಿತಿ । ಅಸೌ ಲೋಕ ಇತಿ ಹೋವಾಚ' (ನೀರಿಗೆ ಯಾರು ಗತಿ? ಎಂದು ಪ್ರಶ್ನಿಸಿದಾಗ ಈ ಲೋಕವೇ ಗತಿಯೆಂದು

ಹೇಳಿದ್ದಾರೆ) ಇತ್ಯಾದಿಯಾಗಿ ಛಾಂದೋಗ್ಯದ ಮಾತಿನಲ್ಲೇ ಬ್ರಹ್ಮವಲ್ಲದ ಪದಾರ್ಥವನ್ನು ಆಶ್ರಯ-ವೆಂದು ಹೇಳಿದ್ದರಿಂದ ಅದರ ಸನ್ನಿಧಾನದಲ್ಲಿರುವ 'ಅಸ್ಯ ಲೋಕಸ್ಯ ಕಾ ಗತಿಃ?' ಎಂಬ ವಾಕ್ಯವು ಬ್ರಹ್ಮನಲ್ಲದ ಆಕಾಶವನ್ನು ಹೇಳುತ್ತದೆಂದು ಅಭ್ಯಧಿಕಾಶಂಕೆಯನ್ನು ಮಾಡಬಹುದು. ಆದ್ದರಿಂದ ಅದ್ವೈತಿಗಳು ತೋರಿಸಿದ ಆಕಾಶಾಧಿಕರಣಕ್ಕಿಂತ ಪ್ರಾಣಾಧಿಕರಣದಲ್ಲಿರುವ ವೈಷಮ್ಯವು ಅಸಮಂಜಸವಾಗಿದೆ.

**प्रकाशः** – एवं स्वापवाक्ये इन्द्रियपदं भूतपरमुपेत्यैकार्थत्वमुक्तम्, इदानीं प्रस्तवाक्यगतभूतपदमेव भूतसारेन्द्रियपरं, स्वापवाक्यस्योक्तदिशा बलवत्त्वात् इत्याशयेन पक्षान्तरमाह – **यद्वेति** ॥ 'तथा चेन्द्रियलयाद्याधारत्वं वायुवृत्तेरेवेति, प्रस्तववाक्यं प्रसिद्धप्राणपरमेवेति भावः ।

ननु 'यथा प्रबलस्वापवाक्यानुरोधेन प्रस्तववाक्यं प्रसिद्धप्राणपरमिति शङ्काऽत्रोच्यते, तथा पूर्वत्रापि सम्भूतवाक्यानुरोधेन ''आकाशादेव'' इत्यत्र आकाशपदं भूतपरमिति शङ्का स्यादतो नेयमभ्यधिकाशङ्का' – इत्याशङ्क्य, सम्भूत-वाक्यस्यैतदद्बाधने प्राबल्याभावादित्याह – **आकाशाद्वायुरिति** ॥ परिहारप्रकारमाह – **पुंवाक्य इति** । तस्य सम्भावितदोपत्वादिति भावः । तथा च स्वापवाक्यस्य प्राबल्याभावान्न तदनुरोधेन प्रस्तावववाक्यं प्राणपरं, किन्तु **''यतो वै''** इत्याद्यनुरोधेन ब्रह्मलिङ्गेन च ब्रह्मपरमिति । 'तत्सङ्गतिः' मानान्तरसङ्गति ।

'प्राणशब्दस्य जडपरत्वं वा चेतनपरत्वं वा' इति विकल्प्य, क्रमेण निरस्यति – **पूर्वपक्ष इति** ॥ उपलक्षणमेतत्, **'प्रस्तावान्वायत्तत्वस्य चायोगात्'** इत्यपि ध्येयम्, चेतन एव देवताशब्दस्य मन्त्राधिष्ठातृत्वस्य च योगात् । ननु **''कतमा सा देवता प्रतिहारमन्वायत्ता अन्नमिति होवाच''** इत्यादावचेतनेऽपि देवताशब्दो-स्तीति चेत् विप्रतिपत्तेरिति भावः ।

यदपि गतार्थतामाशङ्क्य, द्वेधाऽभ्यधिकाशङ्काप्रदर्शनम्, तदपि नेत्याह – **स्वापवाक्य इति** ॥ स्यादेवं, यदि **''यदा वै पुरुषः स्वपिति''** इति वाक्ये विवक्षितं लक्षणया भूतलयाधारत्वं मुख्यवृत्त्या वागादीन्द्रियाधारत्वं च प्रसिद्धप्राणस्य मानान्तरसिद्धं स्यात्, तदा तदनुसारात् प्रस्तावववाक्येऽपि तथा स्यात्, न चैवमस्ति – इत्यर्थः ।

मानान्तरसंवादाभावमेवाह – **नहीति** ॥ इन्द्रियलयद्वारा भूतलयपरत्वाशयेनोक्तं – **पृथिव्यादेरिति** ॥ मुख्यवृत्त्या इन्द्रियलयपरत्वपक्षाशयेनोक्तं – **अक्षाणामिति** ॥ लयशब्दार्थः – **विनाशेति** ॥ **प्रत्यक्षादिति** ॥ एतेन 'मानान्तरं प्रत्यक्षमनुमानं वेति विकल्प्य, नोभाभ्याम्, इत्युक्तं भवति ॥

**देवतायामिति** ॥ एतेन ''प्राणं वागप्येति'' इत्यत्र प्राणशब्दः किं जडवायुपरः उत तदभिमानिदेवताचेतनपरः? इति विकल्पः सूचितः । 'वागादीनां भूतपरत्वमुपेत्य प्राणे पृथिव्यादिलयाधारत्वमुच्यते' इत्याद्यः पक्षः। तत्र तावत् मानान्तरसंवादाभावमुपपादयति – **न तावदिति** ॥ 'जडः' इति प्राणशब्दार्थस्य विकल्पेनानुवादः ॥ **मानान्तरेति** ॥ प्रत्यक्षानुमानरूपेत्यर्थः ॥ **अनुभवादिति** ॥ प्रत्युत तद्विसंवाद एवेति भावः । ननु दृष्टिसृष्टिपक्षे सर्वदृष्टेरभावात् कथमेतत्? इत्यत आह – **दृष्टीति** ॥ **अक्षाणां वेति** ॥

द्वितीयपक्षोपलम्भं विशदयति – **नापीति** ॥ **तेषाम्** इन्द्रियाणाम् । एतेन 'प्रत्यक्षान्न विनाशधीः' इत्युपपादितम् । अनुमानादित्येतदुपपादयति – **नापीति** ॥ '**तत्र**' वायुविकारे । '**तेषां**' इन्द्रियाणाम् । इन्द्रियाणि प्राणे लीयन्ते, प्राणवृत्तौ सत्यामपि इन्द्रियवृत्तीनां परिलुप्यमानत्वात्। 'यस्मिन् सव्यापारे सति यन्निर्व्यापारं तत्तत्र लीयते, यथासम्प्रतिपन्नम्' इत्यनुमीयत इत्यर्थः ।

**उक्तत्वादिति** ॥ तथाच ''**यतो वै**'' इत्यादिवाक्यस्यापि मानान्तरसंवादेन प्राबल्याद्दौर्बल्योक्त्ययोगादिति भावः । नच 'उपादानत्वे मानान्तरसंवादेऽपि न भूतलयाधारत्वे इति वाच्यं, उपादानस्यैव लयाधारत्वात्' इति तात्पर्यात् ॥ **व्याप्त्यभावाच्चेति** ॥ सम्प्रतिपन्नदृष्टान्ताभावादिति भावः । यद्वा – परमात्मनोऽपि तथाविधस्य सत्त्वेन तत्र लयाद्यनङ्गीकारेण व्यभिचारादिति भावः । यद्वा – कुठारे सव्यापारे सति निर्व्यापारं खड्गादिकं तत्र न लीयत इति व्यभिचारादिति भावः ।

प्रत्यक्षविरोधं चानुमानस्याह – **पूर्वेद्युरिति** ॥ एतेन ''वागप्येति'' इत्यादिश्रुतिविरोधात्प्रत्यभिज्ञा भ्रान्तिरिति निरस्तम् । प्रत्यक्षस्य बलवत्त्वेन श्रुतिगताप्ययशब्दस्य निर्व्यापारत्वार्थान्तरपरत्वेन सावकाशत्वादिति भावः ।

ಹೇಳಿದ್ದಾರೆ) ಇತ್ಯಾದಿಯಾಗಿ ಛಾಂದೋಗ್ಯದ ಮಾತಿನಲ್ಲೇ ಬ್ರಹ್ಮವಲ್ಲದ ಪದಾರ್ಥವನ್ನು ಆಶ್ರಯವೆಂದು ಹೇಳಿದ್ದರಿಂದ ಅದರ ಸನ್ನಿಧಾನದಲ್ಲಿರುವ 'ಅಸ್ಯ ಲೋಕಸ್ಯ ಕಾ ಗತಿಃ?' ಎಂಬ ವಾಕ್ಯವು ಬ್ರಹ್ಮನಲ್ಲದ ಆಕಾಶವನ್ನು ಹೇಳುತ್ತದೆಂದು ಅಭ್ಯಧಿಕಾಶಂಕೆಯನ್ನು ಮಾಡಬಹುದು. ಆದ್ದರಿಂದ ಅದ್ವೈತಿಗಳು ತೋರಿಸಿದ ಆಕಾಶಾಧಿಕರಣಕ್ಕಿಂತ ಪ್ರಾಣಾಧಿಕರಣದಲ್ಲಿರುವ ವೈಷಮ್ಯವು ಅಸಮಂಜಸವಾಗಿದೆ.

**प्रकाशः** – एवं स्वापवाक्ये इन्द्रियपदं भूतपरमुपेत्यैकार्थत्वमुक्तम्, इदानीं प्रस्तवाक्यगतभूतपदमेव भूतसारेन्द्रियपरं, स्वापवाक्यस्योक्तदिशा बलवत्त्वात् इत्याशयेन पक्षान्तरमाह – **यद्वेति** ॥ 'तथा चेन्द्रियलयाद्याधारत्वं वायुवृत्तेरेवेति, प्रस्तववाक्यं प्रसिद्धप्राणपरमेवेति भावः ।

ननु 'यथा प्रबलस्वापवाक्यानुरोधेन प्रस्तववाक्यं प्रसिद्धप्राणपरमिति शङ्काऽत्रोच्यते, तथा पूर्वत्रापि सम्भूतवाक्यानुरोधेन "आकाशादेव" इत्यत्र आकाशपदं भूतपरमिति शङ्का स्यादतो नेयमभ्यधिकाशङ्का' – इत्याशङ्क्य, सम्भूतवाक्यस्यैतदद्बाधने प्राबल्याभावादित्याह – **आकाशाद्वायुरिति** ॥ परिहारप्रकारमाह – **पुंवाक्य इति** । तस्य सम्भावितदोपत्वादिति भावः । तथा च स्वापवाक्यस्य प्राबल्याभावान्न तदनुरोधेन प्रस्तावववाक्यं प्राणपरं, किन्तु "यतो वै" इत्याद्यनुरोधेन ब्रह्मलिङ्गेन च ब्रह्मपरमिति । 'तत्सङ्गतिः' मानान्तरसङ्गति ।

'प्राणशब्दस्य जडपरत्वं वा चेतनपरत्वं वा' इति विकल्प्य, क्रमेण निरस्यति – **पूर्वपक्ष इति** ॥ उपलक्षणमेतत्, **'प्रस्तावान्वायत्तत्वस्य चायोगात्'** इत्यपि ध्येयम्, चेतन एव देवताशब्दस्य मन्त्राधिष्ठातृत्वस्य च योगात् । ननु **"कतमा सा देवता प्रतिहारमन्वायत्ता अन्नमिति होवाच"** इत्यादावचेतनेऽपि देवताशब्दोऽस्तीति चेत् विप्रतिपत्तेरिति भावः ।

यदपि गतार्थतामाशङ्क्य, द्वेधाऽभ्यधिकाशङ्काप्रदर्शनम्, तदपि नेत्याह – **स्वापवाक्य इति** ॥ स्यादेवं, यदि **"यदा वै पुरुषः स्वपिति"** इति वाक्ये विवक्षितं लक्षणया भूतलयाधारत्वं मुख्यवृत्त्या वागादीन्द्रियाधारत्वं च प्रसिद्धप्राणस्य मानान्तरसिद्धं स्यात्, तदा तदनुसारात् प्रस्तावववाक्येऽपि तथा स्यात्, न चैवमस्ति – इत्यर्थः ।

मानान्तरसंवादाभावमेवाह – **नहीति** ॥ इन्द्रियलयद्वारा भूतलयपरत्वाशयेनोक्तं – **पृथिव्यादेरिति** ॥ मुख्यवृत्त्या इन्द्रियलयपरत्वपक्षाशयेनोक्तं – **अक्षाणामिति** ॥ लयशब्दार्थः – **विनाशेति** ॥ **प्रत्यक्षादिति** ॥ एतेन 'मानान्तरं प्रत्यक्षमनुमानं वेति विकल्प्य, नोभाभ्याम्, इत्युक्तं भवति ॥

**देवतायामिति** ॥ एतेन ''प्राणं वागप्येति'' इत्यत्र प्राणशब्दः किं जडवायुपरः उत तदभिमानिदेवताचेतनपरः? इति विकल्पः सूचितः । 'वागादीनां भूतपरत्वमुपेत्य प्राणे पृथिव्यादिलयाधारत्वमुच्यते' इत्याद्यः पक्षः। तत्र तावत् मानान्तरसंवादाभावमुपपादयति – **न तावदिति** ॥ 'जडः' इति प्राणशब्दार्थस्य विकल्पेनानुवादः ॥ **मानान्तरेति** ॥ प्रत्यक्षानुमानरूपेत्यर्थः ॥ **अनुभवादिति** ॥ प्रत्युत तद्विसंवाद एवेति भावः । ननु दृष्टिसृष्टिपक्षे सर्वदृष्टेरभावात् कथमेतत्? इत्यत आह – **दृष्टीति** ॥ **अक्षाणां वेति** ॥

द्वितीयपक्षोपलम्भं विशदयति – **नापीति** ॥ **तेषाम्** इन्द्रियाणाम् । एतेन 'प्रत्यक्षान्न विनाशधीः' इत्युपपादितम् । अनुमानादित्येतदुपपादयति – **नापीति** ॥ **'तत्र'** वायुविकारे । **'तेषां'** इन्द्रियाणाम् । इन्द्रियाणि प्राणे लीयन्ते, प्राणवृत्तौ सत्यामपि इन्द्रियवृत्तीनां परिलुप्यमानत्वात्। 'यस्मिन् सव्यापारे सति यन्निर्व्यापारं तत्तत्र लीयते, यथासम्प्रतिपन्नम्' इत्यनुमीयत इत्यर्थः ।

**उक्तत्वादिति** ॥ तथाच ''**यतो वै**'' इत्यादिवाक्यस्यापि मानान्तरसंवादेन प्राबल्याद्दौर्बल्योक्त्ययोगादिति भावः । नच 'उपादानत्वे मानान्तरसंवादेऽपि न भूतलयाधारत्वे इति वाच्यं, उपादानस्यैव लयाधारत्वात्' इति तात्पर्यात् ॥ **व्याप्त्यभावाच्चेति** ॥ सम्प्रतिपन्नदृष्टान्ताभावादिति भावः । यद्वा – परमात्मनोऽपि तथाविधस्य सत्त्वेन तत्र लयाद्यनङ्गीकारेण व्यभिचारादिति भावः । यद्वा – कुठारे सव्यापारे सति निर्व्यापारं खड्गादिकं तत्र न लीयत इति व्यभिचारादिति भावः ।

प्रत्यक्षविरोधं चानुमानस्याह – **पूर्वेद्युरिति** ॥ एतेन ''वागप्येति'' इत्यादिश्रुतिविरोधात्प्रत्यभिज्ञा भ्रान्तिरिति निरस्तम् । प्रत्यक्षस्य बलवत्त्वेन श्रुतिगताप्ययशब्दस्य निर्व्यापारत्वार्थान्तरपरत्वेन सावकाशत्वादिति भावः ।

श्रुतिविरोधं चाह – **यथेति ॥ एतत्सर्वमिति** । सर्वशब्दार्थमेव दर्शयति – **चक्षुश्चेति ॥ अनाशस्येति ॥** सम्प्रतिष्ठिति शब्दस्यापि लयार्थत्वे पक्षिणामावास-वृक्षाश्रयत्वदृष्टान्तानुपपत्तिरिति भावः । "**कस्मिन् सर्वे प्रतिष्ठिताः**" इति गार्ग्यकृतप्रश्नं प्रति परिहारत्वानुपपत्तिश्चेति भावः । "**परे आत्मनि**" इत्युक्त्या च वायुवृत्तौ चक्षुरादीनामप्ययानुमानमसमञ्जसमिति सूचितम् । '**श्रवणात्**' षट्प्रश्ने ।

एवं, स्वापवाक्यं न मानान्तरसंवादीति तदनुसारेण प्रस्ताववाक्यं न प्राणपरं, प्रत्युत जन्माधिकरणे त्वदुक्तदिशा "**यतो वै**" इत्यादि वाक्यमेव मानान्तरसंवादीति तदनुसारेण ब्रह्मपरमेवेति नाभ्यधिकाशङ्कावकाश इत्युक्तम् ।

इदानीं, यदपि "**आकाशाद्वायुः**" इत्यादि वाक्यं त्वित्यादिना पूर्ववैषम्यवर्णनं, तदपि नेत्याह – **किञ्चेति ॥** 'पवनस्य दहनस्य' इत्यादेः 'उत्पत्तेः दर्शनात्' इत्यन्वयः । अवकाशाभावे पवनादर्शनादिति भावः । कथं पवनाद्दहनस्योत्पत्ति-दर्शनम्? इत्यत उक्तं – **फूत्कारादिति ॥** एवम् 'ऊष्मत' इत्यपि ध्येयम् । वक्ष्यते च भाष्ये भगवत्पादैः – "आपः" इत्यत्र "घर्मात्स्वेदादिदृष्टेः" इति ।

यत् "अपि च आदित्योऽन्नं चोद्गीथप्रतिहारयोः देवते" इत्यादिनोक्तं परभाष्ये – "**कतमा सा देवतेति । आदित्य इति होवाच सर्वाणि ह वा इमानि भूतान्यादित्यमुच्चैस्सन्तं गायन्ति, सैषा देवतोद्गीथमन्वायत्ता**" इति, यथा "**कतमा सा देवतेति । अन्नमिति होवाच सर्वाणि हवा इमानि भूतान्यन्नमेव प्रतिहरमाणानि जीवन्ति, सैषा देवता प्रतिहारमन्वायत्ता**" इत्यादित्यान्नयोरब्रह्मत्वदर्शनात् तत्-समाख्यानात्प्राणस्याप्यब्रह्मत्वमिति शङ्कान्तरं, तदप्यनूद्य पूर्ववैषम्येण निरस्यति – **नचेति ॥** "उद्गीथमन्वायत्ता" इत्यर्थानुवादोऽयम् ।

पूर्वाधिकरणविषयवाक्येऽपि "**का साम्नो गतिरिति स्वर इति होवाच, स्वरस्य का गतिरिति प्राण इति होवाच, प्राणस्य का गतिरिति अन्नमिति होवाच, अन्नस्य का गतिरिति आप इति होवाच, अपां का गतिरिति असौ लोक इति होवाच**" इति शालावत्यप्रश्नोत्तरत्वेन दाल्भ्येन स्वर्गलोकस्य गतित्वेनोक्तौ, "**अप्रतिष्ठितं वै किल ते दाल्भ्य साम**" इति तत्पक्षे प्रत्याख्याते, दाल्भ्येन पुनः "**अमुष्य लोकस्य का गतिः?**" इति प्रश्ने कृते, "**अयं लोक इति होवाच**" इति पृथिवीलोकं गतित्वेन

शालावत्यो दाल्भ्यमुवाच । तत्पक्षे च जैबिलिना "अन्तवद्वै किल ते शालावत्य साम" इति प्रत्याख्याते, तर्हि "अस्य लोकस्य का गतिः" इति शालावत्य-कृतप्रश्नोत्तरत्वेन "आकाश इति होवाच" इति श्रवणात् प्रायपाठरूपसन्निधाना-दित्यर्थः ।

ननु "असौ लोकः" इत्यादौ ब्रह्मलिङ्गाभावात्, "अप्रतिष्ठितं किल" इत्यादिना तस्य दूषितत्वाच्च, स्वर्गादेरब्रह्मत्वेऽप्याकाशस्य सर्वभूतकारणत्वादिब्रह्मलिङ्गवत्त्वात्, "परोवरीयो हास्य भवति" इत्यादिफलश्रवणाच्च ब्रह्मत्वमेव । प्रायपाठस्य संशये सत्येव निर्णायकत्वेनेह सन्देहाभावात् । उक्तञ्च पूर्वतन्त्रे – "विशये प्रायदर्शनात्" इतीति चेद्धन्त तर्हीहापि भूतसंवेशनादिब्रह्मलिङ्गाद् ब्रह्मपरमस्तु । तदेतदुक्तं – साम्यादिति ॥ नच "आदित्यादावुच्चैस्सन्तं गायन्ति" इत्यादिब्रह्मलिङ्गाव-भासान्न स्वर्गादिवाक्यतौल्यमिति वाच्यं, एवं तर्हि तस्य तत एव ब्रह्मपरत्वावश्य-म्भावेनाब्रह्मसन्निधानमसिद्धम् – इति नाभ्यधिकाशङ्का युक्ता । उक्तञ्च –

"आदित्यसंस्थितो विष्णुर्यत्सदा सर्वगीतभुक् ।
राजादौ गीतमप्यज्ञैर्भुङ्क्ते गानस्य देवता ।
उद्गीथदेवता तस्य स एव पुरुषोत्तमः ।
अन्नस्थेनैव जीवन्ति भूतान्येतानि विष्णुना ।
प्रतिहारदेवताऽतः स प्रतिहारो हि भोजनम् ॥

इति स्मृतावादित्यादेर्विष्णुत्वम् । उक्तञ्च सुधायां – "आदित्यान्न-योरब्रह्मत्वस्याप्यसिद्धेः"। तत्रापि "सर्वाणि ह वा इमानि भूतान्यादित्यमुच्चैस्सन्तं गायनन्ति" इत्यादिब्रह्मलिङ्गसद्भावात् । "अन्नमेव प्रतिहरमाणानि" इत्येतस्य तु प्रायपाठादुपजीवनार्थत्वेन ग्राह्यत्वात्" इति । एतेन 'एतत्प्राणस्य ब्रह्मत्व-निर्णयावश्यम्भावात् तन्निर्णायकस्यान्यस्याभावादत्रैव निर्णीयते इति निरस्तम् । ब्रह्मलिङ्गस्यात्र सत्त्वात् । पक्षान्तरप्रापकस्य चाभावेन संशयपूर्वपक्षयोरयोगेन पूर्वन्यायेनैव निर्णयसिद्धेरिति । उक्तञ्च – सुधायां 'अत्रापि संशयाद्ययोगात्' इति ।

ವಿವರಣೆ - ಛಾಂದೋಗ್ಯದಲ್ಲಿರುವ ಪ್ರಾಣಶಬ್ದವು ಜಡವಾಯುವನ್ನು ಹೇಳುತ್ತಿದೆಯೋ ಅಥವಾ ಚೇತನವಾಯುವನ್ನು ಹೇಳುತ್ತಿದೆಯೋ? ಎಂದು ವಿಕಲ್ಪಿಸಿ ಅದ್ವೈತಿಗಳು ರಚಿಸಿದ ಪೂರ್ವಪಕ್ಷವೇ

ತಪ್ಪೆಂದು ಕ್ರಮವಾಗಿ ನಿರಾಕರಿಸುತ್ತಿದ್ದಾರೆ. ಜಡವಾಯುವೆಂದರೆ ದೇವತಾಪದವು ಅನುಪಪನ್ನವಾಗುತ್ತದೆ. ಮತ್ತು ಪ್ರಸ್ತಾವಾನ್ವಾಯತ್ತತ್ವವು ತಪ್ಪಾಗುತ್ತದೆ. ಅಂದರೆ ಪ್ರಸ್ತಾವವೆಂಬ ಮಂತ್ರದಿಂದ ದೇವತೆಯಷ್ಟೇ ಪ್ರತಿಪಾದ್ಯವಾಗಬಹುದು ಜಡಪದಾರ್ಥವಾಗುವುದಿಲ್ಲ. ಹಾಗೆಯೇ ದೇವತಾಪದವೂ ಸಹ ಚೇತನನಲ್ಲಷ್ಟೇ ಪ್ರಯೋಗಿಸಲು ಸಾಧ್ಯ.

ಶಂಕೆ - 'ಕತಮಾ ಸಾ ದೇವತಾ .......' ಇತ್ಯಾದಿ ಶ್ರುತಿಯಲ್ಲಿ ಅಚೇತನಪದಾರ್ಥದಲ್ಲಿಯೂ ದೇವತಾಶಬ್ದವನ್ನು ಪ್ರಯೋಗಿಸಿದ್ದಾರೆ. ಆದರೆ ನೀವು ಜಡಪದಾರ್ಥವು ಪ್ರತಿಪಾದ್ಯವಲ್ಲವೆಂದು ಹೇಳುವುದು ತಪ್ಪಲ್ಲವೇ?

ಸಮಾಧಾನ - ಕತಮಾ ಸಾ ಎಂಬ ಶ್ರುತಿಯಲ್ಲಿಯೂ ಸಹ ದೇವತಾಪದದಿಂದ ಚೇತನವೇ ಪ್ರತಿಪಾದ್ಯವೆಂದು ನಮ್ಮ ಅಭಿಪ್ರಾಯ. ಹೀಗೆ ವಿಪ್ರತಿಪನ್ನವಾದ ದೃಷ್ಟಾಂತ ನೀಡುವುದು ಸರಿಯಲ್ಲ.

ಅದ್ವೈತಿಗಳು ಆಕಾಶಾಧಿಕರಣದಿಂದ ಗತಾರ್ಥತ್ವವನ್ನು ಶಂಕಿಸಿ ಎರಡು ಬಗೆಯಲ್ಲಿ ಅಭ್ಯಧಿಕಾಶಂಕೆಯನ್ನು ಪ್ರದರ್ಶಿಸಿದ್ದರು. ಅದನ್ನು ಪ್ರಕೃತ 'ಸ್ವಾಪವಾಕ್ಯೇ' ಎಂಬ ಗ್ರಂಥದಿಂದ ನಿರಾಕರಿಸಿದ್ದಾರೆ. 'ಯದಾ ವೈ ಪುರುಷಃ ಸ್ವಪಿತಿ' ಎಂಬ ವಾಕ್ಯದಲ್ಲಿ ಮುಖ್ಯವಾಗಿ ಇಂದ್ರಿಯಲಯಗಳನ್ನು ಹೇಳಲಾಗಿದೆ. ಲಕ್ಷಣಯಾ ಭೂತಲಯವು ಸಿದ್ಧವಾಗುತ್ತದೆ. ಆದ್ದರಿಂದ ಇಂದ್ರಿಯಗಳ ಮತ್ತು ಭೂತಗಳ ಲಯಕ್ಕೆ ಪ್ರಾಣನೇ ಆಧಾರನಾಗಿದ್ದಾನೆಂದು ಶ್ರುತಿಯು ಹೇಳುತ್ತಿದೆ ಎಂದು ಅದ್ವೈತಿಗಳು ಹೇಳಿದ್ದರು. ಆದರೆ ಈ ಶ್ರುತಿಯು ಪ್ರಮಾಣಾಂತರದ ಸಂವಾದಿಯಾದರೆ ಮಾತ್ರ ಅದ್ವೈತಿಗಳ ವ್ಯಾಖ್ಯಾನವು ಸರಿಯೆನ್ನಬಹುದು. ಆವಾಗ ಸ್ವಾಪವಾಕ್ಯಕ್ಕೆ ಅನುಸಾರಿಯಾಗಿ ಪ್ರಸ್ತಾವವಾಕ್ಯವನ್ನು ವ್ಯಾಖ್ಯಾನಿಸಬಹುದು. ಆದರೆ ಸ್ವಾಪವಾಕ್ಯಕ್ಕೆ ಪ್ರಮಾಣಾಂತರಗಳ ಸಂವಾದವೇ ಅಸಾಧ್ಯ. ಇದನ್ನೇ ಗ್ರಂಥಕಾರರು 'ನ ಹಿ' ಎಂಬ ಶ್ಲೋಕದಿಂದ ವಿವರಿಸಿದ್ದಾರೆ. ಇಂದ್ರಿಯಲಯಗಳ ಮೂಲಕ ಭೂತಗಳ ಲಯವೆಂಬ ಅಭಿಪ್ರಾಯದಿಂದ 'ಪೃಥಿವ್ಯಾದೇಃ' ಎಂದಿದ್ದಾರೆ. ನೇರವಾಗಿ ಇಂದ್ರಿಯಗಳ ಲಯವೆಂಬ ಅಭಿಪ್ರಾಯದಿಂದ ಅಕ್ಷಾನಾಂ ಎಂದಿದ್ದಾರೆ. ಪ್ರಮಾಣಾಂತರಸಂವಾದವೆಂದರೆ ಆ ಪ್ರಮಾಣ ಪ್ರತ್ಯಕ್ಷವೋ ಅನುಮಾನವೋ? ಎಂದು ವಿಕಲ್ಪಿಸಿ, ಎರಡೂ ಸಾಧ್ಯವಿಲ್ಲವೆಂದು 'ಪ್ರತ್ಯಕ್ಷಾದ್ ಅನುಮಾನಾದ್ವಾ' ಎಂಬ ಮಾತಿನಿಂದ ನಿರಾಕರಿಸಿದ್ದಾರೆ. 'ಪ್ರಾಣಂ ವಾಗಪ್ಯೇತಿ' ಎಂಬಲ್ಲಿಯೂ ಪ್ರಾಣಶಬ್ದವು ಜಡವಾಯುಪರವೋ? ಅಥವಾ ಅಭಿಮಾನಿದೇವತಾ ಪರವೋ? ಎಂಬ ವಿಕಲ್ಪವನ್ನು ದೇವತಾಯಾಂ ಜಡೇ ಎಂಬ ಪದಗಳಿಂದ ಸೂಚಿಸಿದ್ದಾರೆ.

ವಾಗಾದಿಶಬ್ದಗಳು ಭೂತಪರವಾಗಿದೆ ಎಂದು ಅಂಗೀಕರಿಸಿ, ಪ್ರಾಣನಲ್ಲಿ ಭೂತಲಯವನ್ನು ಹೇಳಬೇಕೆಂಬುದು ಪ್ರಥಮಪಕ್ಷ. ಈ ವಿಷಯದಲ್ಲಿ ಪ್ರಮಾಣಾಂತರಸಂವಾದವಿಲ್ಲವೆಂದು 'ನ ತಾವತ್' ಎಂಬ ವಾಕ್ಯದಿಂದ ನಿರಾಕರಿಸಿದ್ದಾರೆ.

ದೃಷ್ಟಿಸೃಷ್ಟಿಮತದ ಪ್ರಕಾರ ಸುಷುಪ್ತ್ಯವಸ್ಥೆಯಲ್ಲಿ ಯಾವುದೇ ಜ್ಞಾನವಿಲ್ಲದ ಕಾರಣ ಇಂದ್ರಿಯಲಯವನ್ನು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ ದೃಷ್ಟಿಸೃಷ್ಟಿಮತೇ ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಇಂದ್ರಿಯಲಯ-ವಿಷಯದಲ್ಲಿ ಪ್ರತ್ಯಕ್ಷಪ್ರಾಮಾಣವಿಲ್ಲವೆಂಬುದನ್ನು 'ನಾಪಿ' ಇತ್ಯಾದಿವಾಕ್ಯದಿಂದ ವಿವರಿಸಿದ್ದಾರೆ.

ಅನುಮಾನವು ಪ್ರಮಾಣವಾಗದೆಂದು ಮುಂದಿನ 'ನಾಪಿ'ಗ್ರಂಥವು ವ್ಯಾಖ್ಯಾನಿಸಿದೆ. ಅನುಮಾನದ ಸ್ವರೂಪ -- ''ತೇಷಾಮಿಂದ್ರಿಯಾಣಿ ಪ್ರಾಣೇ ಲೀಯಂತೇ ಪ್ರಾಣವೃತ್ತೌ ಸತ್ಯಾವಪಿ ಇಂದ್ರಿಯವೃತ್ತೀನಾಂ ಪರಿಲುಪ್ಯಮಾನತ್ವಾತ್, ಯಸ್ಮಿನ್ ಸವ್ಯಾಪಾರೇ ಸತಿ ಯನ್ನಿರ್ವ್ಯಾಪಾರಂ ತತ್ತತ್ರ ಲೀಯತೇ ಯಥಾ ಸಂಪ್ರತಿಪನ್ನಮ್'' (ಸವ್ಯಾಪಾರವಸ್ತುವಿನಲ್ಲಿ ನಿರ್ವ್ಯಾಪಾರವಸ್ತುವು ಲೀನವಾಗುವುದು ಕಂಡಿದೆ; ಸುಷುಪ್ತಿಯಲ್ಲಿ ಪ್ರಾಣವಾಯುವು ಸವ್ಯಾಪಾರವಾಗಿದ್ದು ಚಕ್ಷುರಾದಿ ಇಂದ್ರಿಯಗಳು ನಿರ್ವ್ಯಾಪಾರವಾದ್ದರಿಂದ ಪ್ರಾಣವಾಯುವಿನಲ್ಲಿ ಲೀನವಾಗುತ್ತವೆ.)

ಜನ್ಮಾಧಿಕರಣದಲ್ಲಿ 'ಯತೋ ವಾ' ಇತ್ಯಾದಿ ಶ್ರುತಿಯು ಬ್ರಹ್ಮನ ಉಪಾದಾನಕಾರಣವಿಷಯದಲ್ಲಿ ಪ್ರಮಾಣವಾಗಿದೆಯೆಂದು ಅದ್ವೈತಿಗಳು ಹೇಳುತ್ತಾರೆ. ಈ ಶ್ರುತಿಯ ಬೆಂಬಲದಿಂದ ಬ್ರಹ್ಮನಲ್ಲಿ ಜಗತ್ಕಾರಣತ್ವವನ್ನು ಸಾಧಿಸಬಹುದೆಂದು ಅದ್ವೈತಿಗಳೇ ಹೇಳಿದ್ದಾರೆ. ಆದ್ದರಿಂದಲೇ 'ಯತೋ ವಾ' ಇತ್ಯಾದಿವಾಕ್ಯಕ್ಕೆ ಅನುಮಾನಸಂವಾದವನ್ನು ಹೇಳಿದಂತಾಗುತ್ತದೆ. ಹೀಗೆ ಅದ್ವೈತಿಗಳ ಪ್ರಕಾರವೇ 'ಯತೋ ವಾ' ಇತ್ಯಾದಿ ವಾಕ್ಯವು ಪ್ರಮಾಣಾಂತರಸಂವಾದಿಯಾಯಿತು. ಪ್ರಬಲವಾದ ಈ ಶ್ರುತಿಗನುಗುಣವಾಗಿ ಪ್ರಸ್ತಾವವಾಕ್ಯಕ್ಕೆ ಬ್ರಹ್ಮಪರವಾಗಿ ವ್ಯಾಖ್ಯಾನಿಸುವುದು ತಪ್ಪಾಗುವುದಿಲ್ಲ. ಆದ್ದರಿಂದ ಪ್ರಮಾಣಾಂತರಸಂವಾದಿಯಾದ ಮಾತ್ರದಿಂದ ಸ್ವಾಪವಾಕ್ಯವನ್ನು ಪ್ರಬಲವೆನ್ನಲಾಗದು. ಬ್ರಹ್ಮನ ಉಪಾದಾನಕಾರಣವಿಷಯದಲ್ಲಿ ಪ್ರಮಾಣಾಂತರಸಂವಾದವಿದ್ದರೂ ಭೂತಲಯಾಧಾರದ ವಿಷಯದಲ್ಲಿ ಪ್ರಮಾಣವಿಲ್ಲವೆಂದು ಶಂಕಿಸಬಾರದು. ಉಪಾದಾನಶಬ್ದಕ್ಕೆ ಲಯಾಧಾರವೆಂದೇ ಅರ್ಥ.

ಮತ್ತು ಸಂಪ್ರತಿಪನ್ನವಾದ ದೃಷ್ಟಾಂತವಿಲ್ಲದ ಕಾರಣ ವ್ಯಾಪ್ತಿಯನ್ನು ಹೇಳಲಾಗದು. ಸವ್ಯಾಪಾರವಾದ್ದರಲ್ಲಿ ನಿರ್ವ್ಯಾಪಾರವಸ್ತುವಿಗೆ ಲಯವನ್ನು ಹೇಳುವುದಾದರೆ ವ್ಯಭಿಚಾರದೋಷ ಬರುತ್ತದೆ. ಪರಮಾತ್ಮನೂ ಕೂಡ ಸುಷುಪ್ತಿಕಾಲದಲ್ಲಿ ಜಡವಾಯುವಂತೆ ಸವ್ಯಾಪಾರನಾಗಿದ್ದಾನೆ. ಆದರೆ ನೀವು ಜಡವಾಯುವಿನಲ್ಲಷ್ಟೇ ಲಯವನ್ನು ಹೇಳುತ್ತೀರಿ, ಪರಮಾತ್ಮನಲ್ಲಿ ಹೇಳದ ಕಾರಣ ವ್ಯಾಪ್ತಿಯು ವ್ಯಭಿಚರಿತವಾಗಿದೆ. ಅಥವಾ ಕುಠಾರವು ಸವ್ಯಾಪಾರವಾಗಿದೆ. ಖಡ್ಗವು ನಿರ್ವ್ಯಾಪಾರವಾಗಿದೆ. ಸವ್ಯಾಪಾರವಸ್ತುವಿನಲ್ಲಿ ನಿರ್ವ್ಯಾಪಾರವಸ್ತುವಿಗೆ ಲಯ ಹೇಳುವುದಾದರೆ ಖಡ್ಗಕ್ಕೂ ಕುಠಾರದಲ್ಲಿ ಲಯವನ್ನು ಹೇಳಬೇಕಾದೀತು.

ಅನುಮಾನಕ್ಕೆ ಪ್ರತ್ಯಕ್ಷವಿರೋಧವನ್ನು 'ಪೂರ್ವೇದ್ಯುಃ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. 'ವಾಗಪ್ಯೇತಿ' ಎಂಬ ಶ್ರುತಿವಿರೋಧದಿಂದ ಪ್ರತ್ಯಭಿಜ್ಞೆಯು ಭ್ರಾಂತಿಯೆನಿಸುತ್ತದೆ ಎಂಬ ಶಂಕೆಯನ್ನು ಇದರಿಂದ ಪರಿಹರಿಸಿದಂತಾಯಿತು. ಏಕೆಂದರೆ ಶ್ರುತಿಗಿಂತ ಪ್ರತ್ಯಕ್ಷವೇ ಬಲಿಷ್ಠವಾದ್ದರಿಂದ ಪ್ರತ್ಯಕ್ಷದಿಂದ ಶ್ರುತಿಯೇ ಬಾಧಿತವಾಗುತ್ತದೆ. ಆದ್ದರಿಂದ ಶ್ರುತಿಯಲ್ಲಿರುವ ಅಪ್ಯಯಶಬ್ದಕ್ಕೆ ನಿರ್ವ್ಯಾಪಾರವೆಂಬ ಅರ್ಥವನ್ನು ಹೇಳಿ ಸಾವಕಾಶ ಮಾಡಬೇಕು. ಅನುಮಾನಕ್ಕೆ ಪ್ರತ್ಯಕ್ಷವಿರೋಧದ ಜೊತೆಗೆ ಶ್ರುತಿವಿರೋಧವೂ ಬರುತ್ತದೆಂದು 'ಯಥಾ ಸೋಮ್ಯ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಶ್ರುತಿಯಲ್ಲಿರುವ ಸರ್ವಶಬ್ದದ ಅರ್ಥವನ್ನೇ 'ಚಕ್ಷುಶ್ಚ ದ್ರಷ್ಟವ್ಯಂ' ಎಂಬ ಮತ್ತೊಂದು ಶ್ರುತಿಯಿಂದ ವ್ಯಾಖ್ಯಾನಿಸಿದ್ದಾರೆ. ಶ್ರುತಿಯಲ್ಲಿರುವ 'ಸಂಪ್ರತಿಷ್ಠಂತೇ' ಎಂಬ ಶಬ್ದಕ್ಕೆ ಲಯ ಎಂಬರ್ಥವನ್ನು ಹೇಳಿದರೆ ಪಕ್ಷಿಗಳಿಗೆ

ಆಶ್ರಯಭೂತವಾದ ವೃಕ್ಷದ ದೃಷ್ಟಾಂತವು ಅನುಪಪನ್ನವಾಗುತ್ತದೆ. ಹಾಗಾಗಿ ಆಶ್ರಯ ಹೊಂದುತ್ತವೆ ಎಂದಷ್ಟೇ ಅರ್ಥೈಸಬೇಕು. ಮತ್ತು 'ತಸ್ಮಿನ್ ಸರ್ವೇ ಪ್ರತಿಷ್ಠಿತಾಃ' ಎಲ್ಲ ಇಂದ್ರಿಯಗಳು ಯಾರಲ್ಲಿ ಆಶ್ರಿತವಾಗಿವೆ? ಎಂಬ ಪ್ರಶ್ನೆಗೆ 'ಆತ್ಮನಲ್ಲಿ ಲಯ ಹೊಂದುತ್ತವೆ' ಎಂಬ ಉತ್ತರವು ತಪ್ಪಾಗುತ್ತದೆ. ಪ್ರಶ್ನೆಗೆ ಅನುಗುಣವಾಗಿ ಇಂದ್ರಿಯಗಳು ಆತ್ಮನಲ್ಲಿ ಆಶ್ರಿತವಾಗಿವೆ ಎಂದೇ ಹೇಳಬೇಕು. ಶ್ರುತಿಯಲ್ಲಿ 'ಪರೇ ಆತ್ಮನಿ' ಎಂದು ಹೇಳಿದ್ದರಿಂದ ಚಕ್ಷುರಾದಿ ಇಂದ್ರಿಯಗಳು ಜಡವಾಯುವಿನಲ್ಲಿ ಲಯ ಹೊಂದುತ್ತವೆ ಎಂಬ ಅನುಮಾನವು ಪ್ರಮಾಣಬಾಧಿತವೆಂದು ಸೂಚಿಸಿದಂತಾಯಿತು. ಆದ್ದರಿಂದ ಜಡವಾಯುವಿನಲ್ಲಿ ಸಕಲ ಇಂದ್ರಿಯಗಳಿಗೆ ಲಯವನ್ನು ಸಾಧಿಸುವ ಅದ್ವೈತಿಗಳ ಅನುಮಾನವನ್ನು ನಿರಾಕರಿಸಿದಂತಾಯಿತು.

ಇಲ್ಲಿಯ ತನಕ ಸ್ವಾಪವಾಕ್ಯವು ಮಾನಾಂತರಸಂವಾದಿಯಾಗಿಲ್ಲ; ಅದಕ್ಕನುಸಾರಿಯಾಗಿ ಪ್ರಸ್ತಾವವಾಕ್ಯವನ್ನು ಪ್ರಾಣಪರವಾಗಿ ಅರ್ಥೈಸಬಾರದು ಹೊರತು ಜನ್ಮಾಧಿಕರಣದಲ್ಲಿ ಅದ್ವೈತಿಗಳೇ ಹೇಳಿದಂತೆ 'ಯತೋ ವಾ' ಇತ್ಯಾದಿ ವಾಕ್ಯವೇ ಪ್ರಮಾಣಾಂತರಸಂವಾದಿಯಾಗಿದೆ ಅದಕ್ಕನುಸಾರಿಯಾಗಿ ಪ್ರಸ್ತಾವವಾಕ್ಯವು ಬ್ರಹ್ಮಪರವಾಗುತ್ತದೆ ಆದ್ದರಿಂದ ಅಭ್ಯಧಿಕಾಶಂಕೆಗೆ ಅವಕಾಶವಿಲ್ಲವೆಂದು ಸಮರ್ಥಿಸಿದ್ದಾಯಿತು. ಈಗ ಹಿಂದಿನ ಅಧಿಕರಣದಿಂದ ಅದ್ವೈತಿಗಳು ತೋರಿಸಿದ ವೈಷಮ್ಯವು ತಪ್ಪೆಂದು 'ಆಕಾಶಾದ್ವಾಯುಃ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ಯಾವರೀತಿಯಾಗಿ ಪ್ರಾಣಾಧಿಕರಣದ ಪ್ರಸ್ತಾವವಾಕ್ಯವು ಮಾನಾಂತರಸಂವಾದಿಯೆಂದು ಹೇಳುವಿರೋ, ಅದರಂತೆ ಆಕಾಶಾಧಿಕರಣದ 'ಆಕಾಶಾದ್ವಾಯುಃ' ಎಂಬ ವಾಕ್ಯವೂ ಕೂಡ ಮಾನಾಂತರಸಂವಾದಿಯಾಗಿದೆ.

'ಪವನಸ್ಯ, ದಹನಸ್ಯ' ಇತ್ಯಾದಿ ಷಷ್ಠ್ಯಂತಪದಗಳಿಗೆ 'ಉತ್ಪತ್ತೇರ್ದರ್ಶನಾತ್' ಎಂಬಲ್ಲಿ ಅನ್ವಯ. ಅವಕಾಶವೇ ಇಲ್ಲದಿದ್ದರೆ ಗಾಳಿಯಿರಲು ಹೇಗೆ ಸಾಧ್ಯ? ಆದ್ದರಿಂದ ಆಕಾಶದಿಂದ ಗಾಳಿಯ ಹುಟ್ಟನ್ನು ತಿಳಿಯಬೇಕು. ಗಾಳಿಯಿಂದ ಬೆಂಕಿಯ ಉತ್ಪತ್ತಿಯು ಎಲ್ಲಿ ಕಂಡಿದೆ? ಎಂಬ ಪ್ರಶ್ನೆಗೆ ಫೂತ್ಕಾರದಿಂದ (ಊದುವುದರಿಂದ) ಎಂದು ಉತ್ತರಿಸುತ್ತಿದ್ದಾರೆ. ಇದರಂತೆ ಬೇಗೆಯಿಂದ ಬೆವರಿನ ಸೃಷ್ಟಿಯನ್ನು ತಿಳಿಯಬೇಕು. ಭಾಷ್ಯಕಾರರು 'ಆಪ' ಎಂಬ ಸೂತ್ರದಲ್ಲಿ 'ಘರ್ಮಾತ್ ಸ್ವೇದಾದಿದೃಷ್ಟೇಃ' (ಶಕೆಯಿಂದ ಬೆವರಿನ ಸೃಷ್ಟಿಯು ಕಂಡಿದೆ) ಎಂದಿದ್ದಾರೆ.

ಶಾಂಕರಭಾಷ್ಯದ 'ಆದಿತ್ಯೋಽನ್ನಂ ಚೋದ್ಗೀಥಪ್ರತಿಹಾರದೇವತಾ' ಇತ್ಯಾದಿ ಮಾತುಗಳನ್ನು ಪ್ರಕೃತ ನಿರಾಕರಿಸುತ್ತಿದ್ದಾರೆ -- 'ಕತಮಾ ಸಾ ದೇವತೇತಿ ॥ ಆದಿತ್ಯ ಇತಿ ಹೋವಾಚ । ಸರ್ವಾಣಿ ಹ ವಾ ಇಮಾನಿ ಭೂತಾನ್ಯಾದಿತ್ಯಮುಚ್ಚೈಸ್ಸಂತಂ ಗಾಯಂತಿ । ಸೈಷಾ ದೇವತೋದ್ಗೀಥಮನ್ವಾಯತ್ತಾ' ('ಯಾರು ಆ ದೇವತೆ' ಎಂಬ ಆ ಉದ್ಗಾತನ ಪ್ರಶ್ನೆಗೆ ಉಷಸ್ತಿಯ ಉತ್ತರ 'ಆದಿತ್ಯನೇ ಆ ದೇವತೆಯಾಗಿದ್ದಾನೆ. ಏಕೆಂದರೆ ಸಕಲಭೂತಗಳು ಆದಿತ್ಯನನ್ನು ಸರ್ವೋತ್ತಮನಾಗಿದ್ದಾನೆಂದು ಗಾನ ಮಾಡುತ್ತವೆ. ಆದ್ದರಿಂದ ಆ ಆದಿತ್ಯನನ್ನು ಉದ್ಗೀಥನೆಂದು ಸರ್ವೋತ್ತಮನೆಂದು ತಿಳಿಯಬೇಕು. ಉದಾಹರಣೆಗೆ - 'ಕತಮಾ ಸಾ ದೇವತೇತಿ ॥ ಅನ್ನಮಿತಿ ಹೋವಾಚ । ಸರ್ವಾಣಿ ಹವಾ ಇಮಾನಿ ಭೂತಾನ್ಯನ್ನಮೇವ ಪ್ರತಿಹರಮಾಣಾನಿ ಜೀವಂತಿ । ಸೈಷಾ ದೇವತಾ ಪ್ರತಿಹಾರಮನ್ವಾಯತ್ತಾ' (ಯಾರು ಆ ದೇವತೆಯೆಂಬ ಪ್ರತಿಹರ್ತನ ಪ್ರಶ್ನೆಗೆ ಉಷಸ್ತಿಯ ಉತ್ತರ. ಅನ್ನವೇ ದೇವತೆಯಾಗಿದೆ. ಏಕೆಂದರೆ ಸಕಲಪ್ರಾಣಿಗಳು ಅನ್ನವನ್ನು ಆಶ್ರಯಿಸಿ

ಜೀವಿಸುತ್ತವೆ. ಅಂತಹ ದೇವತೆಯೇ ಪ್ರತಿಹಾರವೆಂದು ತಿಳಿಯಬೇಕು) ಹೀಗೆ ಉದ್ಗಾತನ ಹಾಗೂ ಪ್ರತಿಹರ್ತೃವಿನ ಎರಡೂ ಪ್ರಶ್ನೆಗಳಿಗೆ ಬ್ರಹ್ಮವಲ್ಲದ ಪದಾರ್ಥವನ್ನೇ ದೇವತೆ ಎನ್ನಲಾಗಿದೆ. ಇದರ ಜೊತೆಗಿರುವ ''ಪ್ರಸ್ತೋತೃವಿನ ಪ್ರಶ್ನೆಗೆ ಉತ್ತರಿಸುವ 'ಕತಮಾ ಸಾ ದೇವತೇತಿ । ಪ್ರಾಣ ಇತಿ ಹೋವಾಚ । ಸರ್ವಾಣಿ ಹವಾ ಇಮಾನಿ ಭೂತಾನಿ ಪ್ರಾಣಮೇವಾಭಿಸಂವಿಶಂತಿ ।' ಎಂಬಲ್ಲಿ ಹೇಳಲ್ಪಟ್ಟ ಪ್ರಾಣನೂ ಸಹ ಬ್ರಹ್ಮನಾಗಲಾರ'' ಎಂಬ ಅದ್ವೈತಿಗಳ ಮತ್ತೊಂದು ಶಂಕೆಯನ್ನು ಹಿಂದಿನ ಅಧಿಕರಣಕ್ಕೆ ಸಮಾನವಾಗಿದೆ ಎಂದು ನಿರಾಕರಿಸುತ್ತಿದ್ದಾರೆ.

ಈ ಕ್ರಮದಲ್ಲಿ ಅದ್ವೈತಿಗಳು ಅಭ್ಯಧಿಕಾಶಂಕೆಯನ್ನು ತೋರಿಸುವುದಾದರೆ ಆಕಾಶಾಧಿಕರಣದಲ್ಲಿಯೂ ಇದೇ ಶಂಕೆಯನ್ನು ಮಾಡಬಹುದು. ಆಕಾಶಾಧಿಕರಣದ ವಿಷಯವಾಕ್ಯ ಹೀಗಿದೆ 'ಕಾ ಸಾಮ್ನೋ ಗತಿರಿತಿ । ಸ್ವರ ಇತಿ ಹೋವಾಚ । ಸ್ವರಸ್ಯ ಕಾ ಗತಿರಿತಿ । ಪ್ರಾಣ ಇತಿ ಹೋವಾಚ । ಪ್ರಾಣಸ್ಯ ಕಾ ಗತಿರಿತಿ । ಅನ್ನಮಿತಿ ಹೋವಾಚ । ಅನ್ನಸ್ಯ ಕಾ ಗತಿರಿತಿ । ಆಪ ಇತಿ ಹೋವಾಚ । ಅಪಾಂ ಕಾ ಗತಿರಿತಿ । ಅಸೌ ಲೋಕ ಇತಿ ಹೋವಾಚ' ( ಸಾಮಕ್ಕೆ ಯಾರು ಆಶ್ರಯ? ಸ್ವರನು ಎಂದು ಉತ್ತರ. ಸ್ವರಕ್ಕೆ ಯಾರು ಆಶ್ರಯ? ಪ್ರಾಣನು; ಪ್ರಾಣಕ್ಕೆ ಯಾರು ಆಶ್ರಯ? ಅನ್ನವು; ಅನ್ನಕ್ಕೆ ಯಾರು ಆಶ್ರಯ? ನೀರು; ನೀರಿಗೆ ಯಾರು ಆಶ್ರಯ? ಸ್ವರ್ಗಲೋಕ.) ಹೀಗೆ ಶಾಲಾವತ್ಯರ ಮಗನಾದ ಶಿಲಕರ ಪ್ರಶ್ನೆಗೆ ದಾಲ್ಭ್ಯರು ಸ್ವರ್ಗಲೋಕವೇ ಗತಿಯೆಂದು ಉತ್ತರಿಸಿದ್ದಾರೆ. ಪುನಃ ಶಿಲಕರು ದಾಲ್ಭ್ಯರಿಗೆ ಹೇಳಿದರು 'ಅಪ್ರತಿಷ್ಠಿತಂ ವೈ ಕಿಲ ತೇ ದಾಲ್ಭ್ಯಸಾಮ' ಎಲೈ ದಾಲ್ಭ್ಯರೇ ! ಸಾಮಪ್ರತಿಪಾದ್ಯನೆಂದು ನೀನು ತಿಳಿದ ದೇವತೆಯು ಸರ್ವೋತ್ತಮನಲ್ಲ ಎಂದು ನಿರಾಕರಿಸಿದಾಗ ದಾಲ್ಭ್ಯರು ಪುನಃ ಹೀಗೆ ಪ್ರಶ್ನಿಸುತ್ತಾರೆ 'ಅಮುಷ್ಯ ಲೋಕಸ್ಯ ಕಾ ಗತಿಃ?' (ಈ ಸ್ವರ್ಗಲೋಕಕ್ಕೆ ಯಾರು ಆಶ್ರಯ?) ಶಿಲಕರ 'ಅಯಂ ಲೋಕ ಇತಿ ಹೋವಾಚ' (ಪೃಥಿವೀಲೋಕವೇ ಆಶ್ರಯ) ಎಂಬ ಉತ್ತರ. ದಾಲ್ಭ್ಯರ ಪಕ್ಷದಲ್ಲಿ ಜೈಬಲಿಗಳ (ಪ್ರವಾಹಣರ) ಮಾತು ಹೀಗಿದೆ - 'ಅಂತವದ್ವೈ ಕಿಲ ತೇ ಶಾಲಾವತ್ಯಸಾಮ' (ಶಾಲಾವತಿಯ ಮಗನಾದ ಶಿಲಕರೇ! ನೀವು ಸಾಮಪ್ರತಿಪಾದ್ಯನೆಂದು ತಿಳಿದ ದೇವತೆಯು ಸರ್ವೋತ್ತಮನಲ್ಲ) ಎಂದು. ಪುನಃ ಶಿಲಕರ ಪ್ರಶ್ನೆ - 'ಹಾಗಾದರೆ ಅಸ್ಯಲೋಕಸ್ಯ ಕಾ ಗತಿಃ?' (ಪೃಥಿವೀಲೋಕಕ್ಕೆ ಯಾರು ಆಶ್ರಯ?) ಎಂದು. ಆದಕ್ಕೆ ಉತ್ತರ 'ಆಕಾಶ ಇತಿ ಹೋವಾಚ?' (ಆಕಾಶವೇ ಪೃಥಿವಿಗೆ ಆಶ್ರಯ) ಎಂದು. ಇಷ್ಟು ಛಾಂದೋಗ್ಯದಲ್ಲಿರುವ ಪ್ರಕರಣ. ಈ ಪ್ರಾಯಪಾಠದಿಂದ ಆಕಾಶವು ಬ್ರಹ್ಮನಲ್ಲವೆಂದು ತಿಳಿಯುತ್ತದೆ.

ಶಂಕೆ - ಅಸೌ ಲೋಕಃ ಇತ್ಯಾದಿವಾಕ್ಯಗಳಲ್ಲಿ ಬ್ರಹ್ಮಲಿಂಗಗಳು ಇರುವುದಿಲ್ಲ. ಆದ್ದರಿಂದ 'ಅಪ್ರತಿಷ್ಠಂ ಕಿಲ ಇತ್ಯಾದಿ' ವಾಕ್ಯದಿಂದ ದೂಷಿಸಿದ್ದಾರೆ. ಹೀಗಿರುವಾಗ ಪ್ರಸಕ್ತವಾದ ಸ್ವರ್ಗಾದಿಗಳನ್ನು ಬ್ರಹ್ಮನೆಂದು ನಿರ್ಣಯಿಸಲಾಗದು. ಆದರೆ ಸರ್ವಭೂತಕಾರಣತ್ವವೆಂಬ ಬ್ರಹ್ಮಲಿಂಗವಿರುವ ಆಕಾಶವಾಕ್ಯವು ಬ್ರಹ್ಮನನ್ನು ಪ್ರತಿಪಾದಿಸಬಹುದು. ಅಷ್ಟೇ ಅಲ್ಲದೆ 'ಪರೋವರೀಯೋಹಾಸ್ಯ ಭವತಿ' ಎಂದು ಆಕಾಶವನ್ನು ಅತ್ಯಂತ ಉತ್ತಮವೆನ್ನಲಾಗಿದೆ. ಆದ್ದರಿಂದ ಹಿಂದೆ ಪ್ರಸಕ್ತವಾದ ಸ್ವರ್ಗಾದಿಗಳು ಬ್ರಹ್ಮವಾಗದಿದ್ದರೂ ಆಕಾಶವು ಬ್ರಹ್ಮವಾಗಬಹುದಲ್ಲವೇ? ಮತ್ತು ಪ್ರಾಯಪಾಠದಿಂದ ಆಕಾಶವನ್ನು ಬ್ರಹ್ಮನಲ್ಲವೆಂದು ನಿರ್ಣಯಿಸ-ಲಾಗದು. ಸಂಶಯವಿದ್ದರೆ ಮಾತ್ರ ಪ್ರಾಯಪಾಠವು ನಿರ್ಣಾಯಕವಾಗುತ್ತದೆ. ಪ್ರಕೃತ ಆಕಾಶಶಬ್ದದ ಪ್ರತಿಪಾದ್ಯವಿಷಯದಲ್ಲಿ ಸಂಶಯವಿಲ್ಲದ ಕಾರಣ ಪ್ರಾಯಪಾಠದ ಬಲದಿಂದ ನಿರ್ಣಯಿಸಲಾಗದು.

ಇದನ್ನೇ ಪೂರ್ವಮೀಮಾಂಸೆಯಲ್ಲಿ 'ವಿಶಯೇ ಪ್ರಾಯದರ್ಶನಾತ್' (ಸಂಶಯ ಬಂದಾಗ ಪ್ರಾಯಪಾತವು ನಿರ್ಣಾಯಕವೆಂದು ಕಂಡಿದ್ದರಿಂದ) ಎಂದು ಹೇಳಲಾಗಿದೆ.

ಸಮಾಧಾನ - ಹಾಗಾದರೆ ಪ್ರಾಣಾಧಿಕರಣದ ವಿಷಯವಾಕ್ಯದಲ್ಲಿಯೂ ಇದು ಸಮಾನ. ಭೂತಸಂವೇಶನಾದಿ ಬ್ರಹ್ಮಲಿಂಗಗಳು ಪ್ರಕೃತದಲ್ಲಿಯೂ ಕೇಳಿಸುತ್ತಿವೆ. ಹೀಗಿರುವಾಗ ಆಕಾಶಾಧಿಕರಣದಿಂದ ಪ್ರಾಣಾಧಿಕರಣಕ್ಕೆ ವೈಷಮ್ಯವನ್ನು ನಿಮ್ಮಿಂದ ತೋರಿಸಲಾಗದು. ಇದನ್ನೇ ಗ್ರಂಥಕಾರರು 'ಸಾಮ್ಯಾತ್' ಎಂದಿದ್ದಾರೆ.

ಶಂಕೆ - 'ಉಚ್ಚೈಸ್ಸಂತಂ ಗಾಯಂತಿ' ಇತ್ಯಾದಿಯಾಗಿ ಆದಿತ್ಯಾದಿಗಳಲ್ಲಿಯೂ ಬ್ರಹ್ಮಲಿಂಗಗಳು ಕೇಳಿಸುತ್ತಿವೆ. ಹೀಗೆ ವಿಚಾರಮಾಡಿದರೆ ಆಕಾಶವಾಕ್ಯದಲ್ಲಷ್ಟೇ ಅಲ್ಲದೆ ಆದಿತ್ಯಾದಿವಾಕ್ಯಗಳಲ್ಲಿಯೂ ಬ್ರಹ್ಮಲಿಂಗಗಳು ಕೇಳಿಸುತ್ತಿರುವುದರಿಂದ ಸ್ವರ್ಗಾದಿವಾಕ್ಯಗಳಂತೆ ಎಂಬ ದೃಷ್ಟಾಂತವೇ ತಪ್ಪಾಗುತ್ತದೆ.

ಸಮಾಧಾನ - ಹಾಗಾದರೆ ನೀವೇ ಹೇಳುವಂತೆ ಆದಿತ್ಯಾದಿಗಳನ್ನು ಬ್ರಹ್ಮನೆನ್ನಬೇಕು. ಹೀಗಿರುವಾಗ ಅಬ್ರಹ್ಮಸನ್ನಿಧಾನವೆಂಬ ಹೇತುವೇ ಅಸಿದ್ಧವಾಗುತ್ತದೆ. ಆದ್ದರಿಂದ ಯಾವುದೇ ಕಾರಣದಿಂದಲೂ ಅಭ್ಯಧಿಕಾಶಂಕೆಯು ಕೂಡುವುದಿಲ್ಲ.

> ಆದಿತ್ಯಸಂಸ್ಥಿತೋ ವಿಷ್ಣುಃ ಯತ್ಸದಾ ಸರ್ವಗೀತಭುಕ್ ।
> ರಾಜಾದೌ ಗೀತಮಪ್ಯಜ್ಞೈಃ ಭುಂಕ್ತೇ ಗಾನಸ್ಯ ದೇವತಾ ॥
> ಉದ್ಗೀಥದೇವತಾ ತಸ್ಮಾತ್ ಸ ಏವ ಪುರುಷೋತ್ತಮಃ ।
> ಅನ್ನಸ್ಥೇನೈವ ಜೀವಂತಿ ಭೂತಾನ್ಯೇತಾನಿ ವಿಷ್ಣುನಾ ॥
> ಪ್ರತಿಹಾರದೇವತಾತಸ್ಥಃ ಪ್ರತಿಹಾರೋ ಹಿ ಭೋಜನಮ್ ।

(ಆದಿತ್ಯನಲ್ಲಿರುವ ವಿಷ್ಣುವೇ ಸರ್ವಕಾಲದಲ್ಲಿಯೂ ಎಲ್ಲರಿಂದ ಗಾನಮಾಡಿಸಿಕೊಳ್ಳುತ್ತಾನೆ. ಅಜ್ಞಜನರು ತಮ್ಮ ರಾಜರುಗಳನ್ನುದ್ದೇಶಿಸಿ ಗಾನ ಮಾಡಬಹುದು. ಆ ಗಾನವನ್ನೂ ಕೂಡ ಗಾನ-ದೇವತೆಯಾದ ಆದಿತ್ಯನಲ್ಲಿರುವ ವಿಷ್ಣುವೇ ಸ್ವೀಕರಿಸುತ್ತಾನೆ. ಆದ್ದರಿಂದ ಪುರುಷೋತ್ತಮನಾದ ಆದಿತ್ಯಾಂತರ್ಗತ ವಿಷ್ಣುವೇ ಉದ್ಗೀಥಪ್ರತಿಪಾದ್ಯದೇವತೆ. ಅನ್ನನಲ್ಲಿರುವ ವಿಷ್ಣುವಿನಿಂದಲೇ ಎಲ್ಲ ಪ್ರಾಣಿಗಳು ಜೀವಿಸುತ್ತವೆ. ಆದ್ದರಿಂದ ಆ ವಿಷ್ಣುವೇ ಪ್ರತಿಹಾರ ಪ್ರತಿಪಾದ್ಯದೇವತೆ. ಏಕೆಂದರೆ ಪ್ರತಿಹಾರ-ವೆಂದರೆ ಭೋಜನವೆಂದು ಪ್ರಸಿದ್ಧಿಯಿದೆ) ಹೀಗೆ ಸ್ಮೃತಿವಾಕ್ಯಗಳಿಂದ ಆದಿತ್ಯಾದಿ ಶಬ್ದಗಳು ವಿಷ್ಣುವನ್ನು ಪ್ರತಿಪಾದಿಸುತ್ತಿವೆ ಎಂದು ತಿಳಿಯುತ್ತದೆ. ನ್ಯಾಯಸುಧೆಯೂ ಕೂಡ ಇದನ್ನು ಸಮ್ಮತಿಸಿದೆ. 'ಆದಿತ್ಯಾ-ನ್ನಯೋಃ ಅಬ್ರಹ್ಮತ್ವಸ್ಯಾಪಿ ಅಸಿದ್ಧೇಃ । ತತ್ರಾಪಿ ಸರ್ವಾಣಿ ಹ ವಾ ಇಮಾನಿ ಭೂತಾನಿ ಆದಿತ್ಯಮುಚ್ಚೈಸ್ಸಂತಂ ಗಾಯಂತಿ ಇತ್ಯಾದಿ ಬ್ರಹ್ಮಲಿಂಗಸದ್ಭಾವಾತ್ ಅನ್ನಮೇವ ಪ್ರತಿಹಾರಮಾಣಾನಿ ಇತ್ಯೇತಸ್ಯ ತು ಪ್ರಾಯಪಾತಾತ್ ಉಪಜೀವನಾರ್ಥತ್ವೇನ ಗ್ರಾಹ್ಯತ್ವಾತ್' (ಆದಿತ್ಯ ಅನ್ನರನ್ನು ಅಬ್ರಹ್ಮರೆಂದು ಹೇಳಿದ್ದೂ ತಪ್ಪು. ಅಲ್ಲಿಯೂ ಕೂಡ ಸಕಲಭೂತಕಾರಣತ್ವ, ಸಕಲಗಾನಪ್ರತಿಪಾದ್ಯತ್ವವೆಂಬ ಬ್ರಹ್ಮನ ಅಸಾಧಾರಣಲಿಂಗಗಳು ಕೇಳಿಸುತ್ತಿವೆ. ಇನ್ನು ಅನ್ನಮೇವ ಪ್ರತಿಹಾರಮಾಣಾನಿ ಎಂಬುದನ್ನು ಪ್ರಾಯಪಾತದ ಬಲದಿಂದ ಭಗವಂತನು ಉಪಜೀವ್ಯನಾಗಿದ್ದಾನೆಂದು ತಿಳಿಯಬೇಕು) ಎಂದು.

ಪರಿಪೂರ್ಣಚಂದ್ರಿಕಾ

ಹೀಗೆ ಹೇಳಿದ್ದರಿಂದ ಈ ಪ್ರಾಣನು ಬ್ರಹ್ಮನೆಂದು ಅವಶ್ಯನಿರ್ಣಯಿಸಬೇಕಾಗಿರುವುದರಿಂದ ಈ ಅಧಿಕರಣದಲ್ಲಿಯೇ ಪ್ರಾಣಶಬ್ದವಾಚ್ಯತ್ವವನ್ನು ಬ್ರಹ್ಮನಲ್ಲಿ ನಿರ್ಣಯಿಸಲಾಗಿದೆ ಎಂಬ ಅದ್ವೈತಿಗಳ ಕಲ್ಪನೆಯನ್ನು ನಿರಾಕರಿಸಿದಂತಾಯಿತು. ಬ್ರಹ್ಮಲಿಂಗಗಳು ಪ್ರಾಣಪ್ರಕರಣದಲ್ಲಿರುವಂತೆ ಆಕಾಶಪ್ರಕರಣದಲ್ಲಿಯೂ ಸಮಾನವಾಗಿದೆ ಎಂದು. ಪಕ್ಷಾಂತರಪ್ರಾಪಕವಾದ ಬೇರೆ ಹೇತುವಿಲ್ಲದ ಕಾರಣ ಈ ಅಧಿಕರಣದ ಸಂಶಯಪೂರ್ವಪಕ್ಷಗಳೇ ಹುಟ್ಟಲಾರವು. ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯದಿಂದಲೇ ಪ್ರಾಣನು ಬ್ರಹ್ಮನೆಂದು ನಿರ್ಣಯವಾಗುತ್ತದೆ. ಸುಧಾಕಾರರು 'ಅತ್ರಾಪಿ ಸಂಶಯಾದ್ಯಯೋಗಾತ್' (ಅದ್ವೈತಿಗಳ ಪಕ್ಷದಲ್ಲಿ ಸಂಶಯಾದಿಗಳು ಕೂಡುವುದಿಲ್ಲವೆಂದು ಹೇಳಿದ್ದಾರೆ.

**गुरुराजीयम्** – अत्र हि पूर्वपक्षे प्राणशब्देन जडवायुः किं वा तदभिमानिचेतनः? इति विकल्पं मनसि निधाय, आद्ये दोषमाह – **पूर्वपक्ष इति** ॥ जडे देवताशब्दस्य क्वाप्यप्रयोगादिति भावः । द्वितीयं दूषयति – **तदभिमानीति** ॥ मानान्तरसंवादेन प्राबल्यमाश्रित्याभ्यधिकाशङ्कया कृतं पूर्वपक्षं दूषयति – **स्वापवाक्य इति** ॥ अक्षाणामतीन्द्रियत्वेन प्रत्यक्षादनुमानाद्वेति अन्यवस्थितविकल्पायोगाद्व्यवस्थां दर्शयति – **न तावदित्यादिना** ॥

ननु दृष्टिसृष्टिपक्षमनुसृत्य स्वापइन्द्रियाणां लय उच्यत इत्यत आह – **दृष्टिसृष्टिमत इति** ॥ नन्विन्द्रियाणि वायौ स्वापकाले विलीयन्ते वायुव्यापार-दशायां लुप्तव्यापारत्वादित्यनुमानेन लयोऽनुमीयत इत्याशङ्क्य निराकरोति – **नापीति** ॥ **व्याप्त्यभावाच्चेति** ॥ देवदत्ते सव्यापारेपि निर्व्यापारस्य यज्ञदत्तस्य तत्र लयाभावादिति भावः । अप्राधान्यक्रमेणादौ व्यभिचारमुक्त्वा बाधमाह **पूर्वेद्युरिति** ॥

## ಅದ್ವೈತಿಗಳ ಸಿದ್ಧಾಂತವೂ ತಪ್ಪು

**तात्पर्यचन्द्रिका–**

**यच्चोक्तम् 'पुंवाक्यस्य' इत्यादि, तत्र ब्रूमः –**
**अपुंवाक्यद्वयेऽप्येकेनान्यानुसरणे ध्रुवम् ।**
**कर्तव्ये सति क्लृप्तत्वात्संवाद्येवानुरुध्यताम् ॥**

**तथाहि – प्रमाणभूते पुंवाक्ये प्रत्यक्षादौ च संवादिन एव अनुसरणीयत्वं क्लृप्तम्, इति इहापि तथैव युक्तम्; अर्थाबाधरूपप्रामाण्यस्य संवादेन दार्ढ्यात्,**

**अनपेक्षत्वस्य च दैवात्संवादेन आहानेः । सप्रयोजनत्वाय च प्रस्ताव-वाक्यस्यापूर्वार्थत्वे स्वापवाक्येऽपि तत्प्रसङ्गात् । स्वापवाक्यस्याप्यभिमानिदेवता-परत्वे अपूर्वार्थत्वसम्भवाच । अनाशङ्कितदोषत्वात्तु द्वयोरपि प्रामाण्यम्, न त्वन्योन्यमननुसरणम् । अन्यथा श्रुत्या श्रुत्यन्तरसंवादः उपक्रमाद्यानुगुण्यं च नानुसरणीयं स्यात् । मानान्तरविरोधश्च न परिहार्यः स्यात् । तदुक्तं भामत्यामपि – 'यद्यपि श्रुतयः स्वतः प्रमाणतयानपेक्षाः । तथाऽपि मानान्तरोपनीतार्थवशेन व्यवस्थाप्यन्ते'' इति । तस्मात्परेषामधिकरणमयुक्तम् ॥**

ಅನುವಾದ - 'ಪುಂವಾಕ್ಯಸ್ಯ' ಇತ್ಯಾದಿ ವಾಕ್ಯದಿಂದ ಅದ್ವೈತಿಗಳು ಮಾಡಿದ ಸಿದ್ಧಾಂತವು ಕೂಡ ತಪ್ಪು.

ಅಪುಂವಾಕ್ಯದ್ವಯೇಪ್ಯೇಕೇನಾನ್ಯಾನುಸರಣೇ ಧ್ರುವಮ್ ।
ಕರ್ತವ್ಯೇ ಸತಿ ಕ್ಲೃಪ್ತತ್ವಾತ್ ಸಂವಾದ್ಯೇವಾನುರುದ್ಧ್ಯತಾಮ್ ॥

(ಎರಡು ಅಪೌರುಷೇಯವಾಕ್ಯಗಳಿದ್ದಾಗ ಒಂದು ವಾಕ್ಯದಿಂದ ಮತ್ತೊಂದನ್ನು ಅನುಸರಿಸಿ ಅದರ ತಾತ್ಪರ್ಯವನ್ನು ಅವಶ್ಯವಾಗಿ ನಿಶ್ಚಯಿಸಬೇಕಾಗುತ್ತದೆ. ಆ ಸಂದರ್ಭದಲ್ಲಿ ಪ್ರಮಾಣಸಿದ್ಧವಾದ್ದರಿಂದ ಮಾನಾಂತರಸಂವಾದಿವಾಕ್ಯವನ್ನೇ ಅನುಸರಿಸಬೇಕು.)

ಅದು ಹೀಗೆ - ಪ್ರಮಾಣಭೂತವಾದ ಪೌರುಷೇಯವಾಕ್ಯದಲ್ಲಿ ಮತ್ತು ಪ್ರತ್ಯಕ್ಷಾದಿಗಳಲ್ಲಿ ಮಾನಾಂತರ ಸಂವಾದಿಯನ್ನೇ ಅನುಸರಿಸುವುದು ಪ್ರಮಾಣಸಿದ್ಧವಾಗಿದೆ. ಅದರಂತೆ ಅಪೌರುಷೇಯ-ವಾಕ್ಯದಲ್ಲಿಯೂ ಮಾನಾಂತರಸಂವಾದಿಯಾದದ್ದನ್ನು ಅನುಸರಿಸುವುದು ಉಚಿತ. ಅರ್ಥ ಅಬಾಧ-ರೂಪವಾದ ಪ್ರಾಮಾಣ್ಯಕ್ಕೆ ಪ್ರಮಾಣಾಂತರಸಂವಾದದಿಂದ ದಾರ್ಢ್ಯ ಬರುತ್ತದೆ. ವಸ್ತುತಃ ವಾಕ್ಯವು ಪ್ರಮಾಣವಾಗಲು ಮತ್ತೊಂದರ ಅಪೇಕ್ಷೆ ಇಲ್ಲ. ಆದರೆ ಅದೃಷ್ಟವಶಾತ್ ಪ್ರಮಾಣಾಂತರ-ಸಂವಾದಿಯಾದರೆ ಏನೂ ಹಾನಿಯಿಲ್ಲ. ಇನ್ನು ಪ್ರಸ್ತಾವವಾಕ್ಯಕ್ಕೆ ಪ್ರಯೋಜನಕ್ಕೋಸ್ಕರ ಅಪೂರ್ವ-ವಾದ ಅರ್ಥವನ್ನು ಹೇಳಬೇಕು. ಹಾಗಾದಲ್ಲಿ ಸ್ವಾಪವಾಕ್ಯವೂ ಅಪೂರ್ವಾರ್ಥವಾಗ- ಬೇಕಾದೀತು. ಮತ್ತು ಸ್ವಾಪವಾಕ್ಯವು ಅಭಿಮಾನಿಯಾದ ದೇವತೆಯನ್ನು ಪ್ರತಿಪಾದಿಸುವುದಾದರೆ ಅಪೂರ್ವಾ-ರ್ಥವುಳ್ಳದ್ದಾಗಬೇಕಾದೀತು.

ಎರಡೂ ವಾಕ್ಯಗಳು ಅಪೌರುಷೇಯವಾಗಿದ್ದಾಗ ದೋಷಶಂಕೆಗೆ ಅವಕಾಶವಿರುವುದಿಲ್ಲ. ಆ ಸಂದರ್ಭದಲ್ಲಿ ಎರಡಕ್ಕೂ ಪ್ರಾಮಾಣ್ಯ ಹೇಳಬೇಕು. ಹೊರತು ಪರಸ್ಪರವಾಗಿ ಒಂದನ್ನೊಂದು ಅನುಸರಿಸದೇ ಇರಬಾರದು. ಇಲ್ಲದಿದ್ದರೆ ಒಂದು ಶ್ರುತಿಗೆ ಮತ್ತೊಂದು ಶ್ರುತಿಯ ಸಂವಾದ-ವನ್ನಾಗಲೀ ಉಪಕ್ರಮಾದಿಗಳ ಅನುಗುಣ್ಯವನ್ನಾಗಲೀ ಅನುಸರಿಸುವುದು ತಪ್ಪಾಗುತ್ತದೆ. ಮತ್ತು

ಅಪೌರುಷೇಯವಾಕ್ಯಕ್ಕೆ ಪ್ರಮಾಣಾಂತರದಿಂದ ವಿರೋಧ ಬಂದಾಗ ಅದನ್ನು ಪರಿಹರಿಸಬೇಕಾಗಿಲ್ಲ. ನಿಮ್ಮ ಪ್ರಕಾರ ಅಪೌರುಷೇಯವಾದ್ದರಿಂದಲೇ ಪ್ರಮಾಣವಾಗಿರುವಾಗ ಪ್ರಮಾಣಾಂತರವಿರೋಧವು ಏನು ತಾನೆ ಮಾಡೀತು? ಇದನ್ನೇ ಭಾಮತಿಯಲ್ಲಿ ಹೀಗೆ ಹೇಳಲ್ಪಟ್ಟಿದೆ. '' 'ಯದ್ಯಪಿ ಶ್ರುತಯಃ ಸ್ವತಃ ಪ್ರಮಾಣತಯಾನಪೇಕ್ಷಾಃ । ತಥಾಪಿ ಮಾನಾಂತರೋಪನೀತಾರ್ಥವಶೇನ ವ್ಯವಸ್ಥಾಪ್ಯಂತೇ' ವಸ್ತುತಃ ಶ್ರುತಿಗಳು ಸ್ವತಃಪ್ರಮಾಣವಾದ್ದರಿಂದ ಮತ್ತೊಂದು ಪ್ರಮಾಣವನ್ನು ಅಪೇಕ್ಷಿಸಲಾರವು. ಆದರೂ ಕೂಡ ಪ್ರಮಾಣಾಂತರದಿಂದ ತಿಳಿಯಲ್ಪಟ್ಟ ಅರ್ಥದ ಅಧೀನವಾಗಿ ಶ್ರುತಿಯ ಅರ್ಥವನ್ನು ನಿಶ್ಚಯಿಸಬಹುದು'' ಎಂದು. ಆದ್ದರಿಂದ ಅದ್ವೈತಿಗಳ ಅಧಿಕರಣವು ಅಯುಕ್ತವಾಗಿದೆ.

**प्रकाशः** – एवमभ्यधिकाशङ्काप्रकारं निरस्य, तन्निवर्तकतयोक्तं सिद्धान्तप्रकारं च निरस्यति – **यच्चोक्तमिति** ॥ **अपुंवाक्येति** ॥ प्रस्ताववाक्यं तावदवश्यं स्वापवाक्य-कारणवाक्यान्यतरानुरोधेन नेयं, भूतसंवेशनादिलिङ्गमात्रस्यात्र निर्णायकत्वे पूर्वेण गतार्थत्वस्योक्तत्वात्। तत्र द्वयोरपौरुषेयत्वेऽपि पूर्वपक्ष्युक्तरीत्या मानान्तरसंवादि - स्वापवाक्यमेवानुरोद्धव्यं, लोके तथा क्लृप्तत्वात् । तथाच प्रस्ताववाक्यं प्रसिद्ध-प्राणपरमेवेति न पूर्वपक्षोपमर्द इत्यर्थः ।

'क्लृप्तत्वात्' इत्येतदुपपादयति – **प्रमाणेति** ॥ ननु मानान्तरसंवादिनोऽ-प्रामाण्यात् कथं तदनुसरणम्? इति चेत् किमिदमप्रामाण्यं किं ज्ञातार्थकत्वम् उत मानान्तरसापेक्षत्वरूपम् ?

आद्य आह – **अर्थेति** ॥ विषयाबाधरूपं याथार्थ्यमेव प्रामाण्यं, न त्वनधिगतार्थत्वम् । अन्यत्र निरस्तत्वादिति भावः । एतेन – प्रमाणसिद्धे मानान्तरसंवादो व्यर्थः' इति निरस्तम् । प्रमाणसिद्धत्वेपि तत्रानाश्वासशङ्कानिरासेन दार्ढ्यार्थत्वात् – इति ।

द्वितीय आह – **अनपेक्षत्वस्येति** ॥ स्वापवाक्यं च न मानान्तरमपेक्ष्यार्थं बोधयति, किन्तु तदुक्तेऽर्थे दैवान्मानान्तरसंवादः । नच तावता सापेक्षत्वम् । उक्तञ्च वाचस्पत्ये – **'यत्र तु प्रमाणान्तरसंवादस्तत्र प्रमाणान्तरादिवार्थवादादपि सोऽर्थः प्रसिध्यति, द्वयोः परस्परानपेक्षयो; प्रत्यक्षानुमानयोरिवैकत्रार्थे प्रवृत्तेः'** इतीति भावः । स्वापवाक्याननुसरणे कारणवक्यस्यैवानुसरणे बीजान्तरमाशङ्क्याह –

**सप्रयोजनत्वायेति ॥** ब्रह्मपरत्व एवापूर्वार्थत्वं, न तु प्राणपरत्व इति भावः । 'तत्प्रसङ्गात्' अपूर्वार्थत्वप्रसङ्गात् ।

नन्वत्र ब्रह्मपरत्वेनापूर्वार्थत्ववत्तत्र तन्न सम्भवति, प्राणपरत्वेन सिद्धत्वादित्यत आह – **स्वापवाक्यस्येति ॥** प्राणवाय्वभिमानीत्यर्थः । एवञ्च स्वापवाक्यगत-प्राणशब्दस्य तदभिमानिदेवतापरत्वे तदनुसारेण प्रस्ताववाक्यस्यापि देवतापरत्वे अपूर्वतालाभान्न ब्रह्मपरत्वसिद्धिरिति भावः ।

यद्यप्युक्तं – 'अपुंवाक्यतयाऽनाशङ्कितदोषत्वान्नान्यानुसरणं' इति, तदपि न , इत्याह – **अनाशङ्कितेति ॥ संवाद इति ॥** 'नानुसरणीयः' इति योज्यम् – **मानान्तरेति ॥** 'अन्यथा' इत्यनुवर्तते । 'अपौरुषेयेऽप्यन्यानुसरणम्' इत्यत्र तद्वचनमेव संवादयति – **उक्तश्चेति ॥**

एतेन – 'स्वापवाक्यं संवर्गविद्यायां श्रूयते, प्रस्ताववाक्यं तु उद्गीथविद्यायां, अतस्तयोर्नैकवाक्यत्वमिति सिद्धान्तः' इति निरस्तम् । ब्रह्मकारणवाक्यस्यापि तथात्वात् – इति । यदत्र कैश्चिदुक्तं 'प्राणस्य प्राणः प्राणबन्धनं हि सोम्य मनः' इति चोदाहरणमिति, तत्तु परभाष्य एव संशयानुदयेन दूषितत्वान्न निराकृतम् ।

ಅನುವಾದ - ಇಲ್ಲಿಯ ತನಕ ಅದ್ವೈತಿಗಳು ತೋರಿಸಿದ ಅಭ್ಯಧಿಕಶಂಕಾಪ್ರಕಾರವನ್ನು ನಿರಾಕರಿಸಿದ್ದಾಯಿತು. ಅಂದರೆ ಅದ್ವೈತಿಗಳ ಅಧಿಕರಣಪೂರ್ವಪಕ್ಷವನ್ನು ನಿರಾಕರಿಸಿದಂತಾಯಿತು. ಪ್ರಕೃತ ಅಭ್ಯಧಿಕಾಶಂಕೆಯನ್ನು ನಿವಾರಿಸುವ ಸಿದ್ಧಾಂತವನ್ನೂ ನಿರಾಕರಿಸುತ್ತಿದ್ದಾರೆ.

"ಪೌರುಷೇಯವಾಕ್ಯದಲ್ಲಿ ಪ್ರಮಾಣಾಂತರಸಂವಾದವಿರುವುದರಿಂದ ಪ್ರಾಬಲ್ಯವನ್ನು ಪ್ರಮಾಣಾಂತರ-ಸಂವಾದವಿಲ್ಲದ್ದರಿಂದ ದೌರ್ಬಲ್ಯವನ್ನು ಹೇಳಬಹುದು. ಆದರೆ ಅಪೌರುಷೇಯವಾಕ್ಯದಲ್ಲಿ ವಕ್ತೃದೋಷದ ಶಂಕೆಗೆ ಆಸ್ಪದವಿಲ್ಲದ್ದರಿಂದ ಪ್ರಮಾಣಾಂತರಸಂವಾದದಿಂದ ಪ್ರಾಬಲ್ಯವನ್ನಾಗಲೀ, ಪ್ರಮಾಣಾಂತರಸಂವಾದ ವಿಲ್ಲದ್ದರಿಂದ ದೌರ್ಬಲ್ಯವನ್ನಾಗಲೀ ಹೇಳುವುದು ತಪ್ಪು" ಎಂದು ಅದ್ವೈತಿಗಳು ಹೇಳಿದ ಸಿದ್ಧಾಂತ. ಇದು ತಪ್ಪು. 'ಯದಾ ವೈ ಪುರುಷಃ ಸ್ವಪಿತಿ' ಎಂಬ ಸ್ವಾಪವಾಕ್ಯ, 'ಯತೋ ವಾ ಇಮಾನಿ' ಇತ್ಯಾದಿ ಕಾರಣ-ವಾಕ್ಯ ಇವೆರಡನ್ನೂ ಅನುಸರಿಸಿ 'ಪ್ರಸ್ತೋತರ್ಯಾ ದೇವತಾ' ಎಂಬ ಪ್ರಸ್ತಾವವಾಕ್ಯದ ತಾತ್ಪರ್ಯವನ್ನು ನಿಶ್ಚಯಿಸಬೇಕು. ಹೊರತು ಕೇವಲ ಭೂತಸಂವೇಶನಾದಿಲಿಂಗದಿಂದ ಪ್ರಸ್ತಾವವಾಕ್ಯದ ತಾತ್ಪರ್ಯವನ್ನು ನಿಶ್ಚಯಿಸುವುದಾದರೆ ಹಿಂದಿನ ಆಕಾಶಾಧಿಕರಣದಿಂದ ಗತಾರ್ಥತ್ವದೋಷ ಬರುತ್ತದೆ. ಸ್ವಾಪವಾಕ್ಯ ಹಾಗೂ ಕಾರಣವಾಕ್ಯಗಳೆರಡೂ ಅಪೌರುಷೇಯವಾಗಿದ್ದರೂ ಪೂರ್ವಪಕ್ಷಿ ಹೇಳಿದಂತೆ ಮಾನಾಂತರಸಂವಾದಿಯಾದ

ಸ್ವಾಪವಾಕ್ಯವನ್ನೇ ಅನುಸರಿಸಿ ಪ್ರಸ್ತಾವವಾಕ್ಯದ ತಾತ್ಪರ್ಯವನ್ನು ನಿಶ್ಚಯಿಸಬೇಕು. ಏಕೆಂದರೆ ಲೋಕದಲ್ಲಿ ಮಾನಾಂತರಸಂವಾದಿಯಾದ ಪ್ರಮಾಣವನ್ನು ಅನುಸರಿಸಿ ತಾತ್ಪರ್ಯವನ್ನು ನಿಶ್ಚಯಿಸುವುದು ಕಂಡಿದೆ. ಹೀಗಿರುವಾಗ ಪ್ರಸ್ತಾವವಾಕ್ಯವು ಸ್ವಾಪವಾಕ್ಯಕ್ಕೆ ಪ್ರಸಿದ್ಧನಾದ ಪ್ರಾಣನನ್ನೇ ಪ್ರತಿಪಾದಿಸುತ್ತದೆ ಹೊರತು ಬ್ರಹ್ಮನನ್ನು ಪ್ರತಿಪಾದಿಸಲಾರದು. ಆದ್ದರಿಂದ ಸಿದ್ಧಾಂತದಿಂದ ಪೂರ್ವಪಕ್ಷವು ಹೇಗೆ ನಿರಾಕೃತವಾಗುತ್ತದೆ.

ಶ್ಲೋಕದಲ್ಲಿರುವ ಕ್ಲೃಪ್ತತ್ವಾತ್ ಎಂಬುದನ್ನು 'ಪ್ರಮಾಣಭೂತೇ' ಎಂಬ ವಾಕ್ಯದಿಂದ ವಿಸ್ತರಿಸು-ತ್ತಿದ್ದಾರೆ.

ಶಂಕೆ - ಯಾವ ವೇದವಾಕ್ಯವು ಪ್ರಮಾಣಾಂತರಸಂವಾದಿಯಾಗಿರುತ್ತದೋ, ಅದು ಅಪ್ರಮಾಣ-ವಾಗುತ್ತದೆ. ಹೀಗಿರುವಾಗ ಮಾನಾಂತರಸಂವಾದಿವಾಕ್ಯವನ್ನು ಅನುಸರಿಸುವುದು ತಪ್ಪಲ್ಲವೇ?

ಸಮಾಧಾನ - ನಿಮ್ಮ ಅಭಿಪ್ರಾಯವೇನು? ಜ್ಞಾತಜ್ಞಾಪಕವಾಗುವುದರಿಂದ ಅಪ್ರಮಾಣವಾಗು-ತ್ತದೆಂದೋ ಅಥವಾ ಪ್ರಮಾಣಾಂತರವನ್ನು ಅಪೇಕ್ಷಿಸುವುದರಿಂದ ಅಪ್ರಮಾಣವಾಗುತ್ತದೆಂದೋ? ಪ್ರಥಮಪಕ್ಷದಲ್ಲಿ 'ಅರ್ಥಾಬಾಧ' ಎಂಬ ವಾಕ್ಯವು ಉತ್ತರಿಸುತ್ತಿದೆ. ಯಥಾವಸ್ಥಿತಜ್ಞೇಯವಿಷಯಕಾರಿತ್ವವು ಪ್ರಮಾಣದ ಲಕ್ಷಣ ಹೊರತು ಅನಧಿಗತಾರ್ಥತ್ವವು ಅಲ್ಲ. ಇದನ್ನು ಬೇರೆ ಗ್ರಂಥಗಳಲ್ಲಿ ನಿರಾ-ಕರಿಸಲಾಗಿದೆ. ಒಂದು ವೇಳೆ ಅನಧಿಗತಾರ್ಥತ್ವವೇ ಪ್ರಮಾಣದ ಲಕ್ಷಣವಾಗಿದ್ದಲ್ಲಿ ಮಾನಾಂತರ-ಸಂವಾದಿಯಾದ ಕಾರಣ ಅಪ್ರಮಾಣವಾಗುತ್ತದೆಂಬ ನಿಲುವನ್ನು ಒಪ್ಪಬಹುದಿತ್ತು. ಇದರಿಂದ ಪ್ರಮಾಣ-ಸಿದ್ಧವಾದ ಮೇಲೆ ಪುನಃ ಪ್ರಮಾಣಾಂತರಸಂವಾದವು ಅನಾವಶ್ಯಕ ಎಂಬ ಮತ್ತೊಂದು ಶಂಕೆಯನ್ನು ನಿರಾಕರಿಸಿದಂತಾಯಿತು. ಏಕೆಂದರೆ ಪ್ರಮಾಣಸಿದ್ಧವಾದರೂ ಅವಿಶ್ವಾಸದ ಶಂಕೆ ಬಂದಾಗ ಅವಿಶ್ವಾಸವನ್ನು ಪರಿಹರಿಸಿ ದಾರ್ಢ್ಯವನ್ನು ತಂದು ಕೊಡುವುದಕ್ಕಾಗಿ ಬೇರೆ ಪ್ರಮಾಣದ ಅವಶ್ಯಕತೆ ಇದೆ.

ಎರಡನೆಯ ಪಕ್ಷವನ್ನು 'ಅನಪೇಕ್ಷತ್ವಸ್ಯ' ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಸ್ವಾಪವಾಕ್ಯವು ಪ್ರಮಾಣಾಂತರವನ್ನು ಅಪೇಕ್ಷಿಸಿ ಅರ್ಥವನ್ನು ತಿಳಿಸುತ್ತಿಲ್ಲ; ಹೊರತು ಸ್ವಾಪವಾಕ್ಯವು ಪ್ರತಿಪಾದಿಸುವ ಅರ್ಥದಲ್ಲಿ ಅದೃಷ್ಟವಶಾತ್ ಪ್ರಮಾಣಾಂತರದ ಸಂವಾದವಿದೆ. ಇಷ್ಟರಿಂದ ಸ್ವಾಪವಾಕ್ಯವೇನೂ ಪ್ರಮಾಣಾಂತರವನ್ನು ಅವಲಂಬಿಸಿದಂತಾಗುವುದಿಲ್ಲ. ಇದನ್ನು ವಾಚಸ್ಪತ್ಯದಲ್ಲಿ ''ಯತ್ರ ತು ಪ್ರಮಾ-ಣಾಂತರಸಂವಾದಸ್ತತ್ರ ಪ್ರಮಾಣಾಂತರಾದಿವಾರ್ಥವಾದಾದಪಿ ಸೋಽರ್ಥಃ ಪ್ರಸಿದ್ಧ್ಯತಿ । ದ್ವಯೋಃ ಪರಸ್ಪರಾನಪೇಕ್ಷಯೋಃ ಪ್ರತ್ಯಕ್ಷಾನುಮಾನಯೋರಿವೈಕತ್ರಾರ್ಥೇ ಪ್ರವೃತ್ತೇರಿತಿ'' (ಎಲ್ಲಿ ಪ್ರಮಾಣಾಂತರ-ಸಂವಾದವಿರುತ್ತದೋ ಅಲ್ಲಿ ಬೇರೆ ಪ್ರಮಾಣದಂತೆ ಅರ್ಥ ಹೇಳಿದೆ ವಾದದಿಂದಲೂ ಪ್ರತಿಪಾದ್ಯವಾದ ಅರ್ಥವು ಸಿದ್ಧವಾಗುತ್ತದೆ. ಏಕೆಂದರೆ ಪರಸ್ಪರನಿರಪೇಕ್ಷಿತವಾದ ಎರಡು ಪ್ರಮಾಣಗಳು ಒಂದೇ ಅರ್ಥದಲ್ಲಿ ಪ್ರವೃತ್ತವಾದ್ದರಿಂದ ಪರಸ್ಪರ ನಿರಪೇಕ್ಷಿತಗಳಾದ ಪ್ರತ್ಯಕ್ಷಾನುಮಾನಗಳಂತೆ ಎಂದು)

ಸ್ವಾಪವಾಕ್ಯವನ್ನು ಅನುಸರಿಸದಿದ್ದರೆ ಮತ್ತೊಂದು ತೊಂದರೆಯನ್ನು 'ಸಪ್ರಯೋಜನತ್ವಾಯ' ಎಂಬ ವಾಕ್ಯದಿಂದ ಆಕ್ಷೇಪಿಸುತ್ತಿದ್ದಾರೆ. ಪ್ರಸ್ತಾವವಾಕ್ಯವು ಬ್ರಹ್ಮಪರವಾದಾಗ ಮಾತ್ರ ಅಪೂರ್ವಾರ್ಥವನ್ನು ಬೋಧಿಸುತ್ತದೆ. ಪ್ರಾಣಪರವಾದರೆ ಅಲ್ಲ ಎಂದು ಈ ವಾಕ್ಯದ ಅಭಿಪ್ರಾಯ.

'ಪ್ರಸ್ತಾವವಾಕ್ಯವು ಬ್ರಹ್ಮಪರವಾದಾಗ ಅಪೂರ್ವಾರ್ಥವಾಗುತ್ತದೆ. ಆದರೆ ಸ್ವಾಪವಾಕ್ಯವು ಬ್ರಹ್ಮಪರವಾದ ಮಾತ್ರದಿಂದ ಅಪೂರ್ವಾರ್ಥವಾಗುವುದಿಲ್ಲ. ಏಕೆಂದರೆ ಸ್ವಾಪವಾಕ್ಯವು ಪ್ರಾಣಪರವೆಂದು ಈಗಾಗಲೇ ಸಿದ್ಧವಾಗಿದೆ' ಎಂಬ ಪ್ರಶ್ನೆಗೆ 'ಸ್ವಾಪವಾಕ್ಯಸ್ಯ' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಆದ್ದರಿಂದ ಸ್ವಾಪವಾಕ್ಯದಲ್ಲಿರುವ ಪ್ರಾಣಶಬ್ದವು ಅಭಿಮಾನಿದೇವತೆಯಾದ ಮುಖ್ಯಪ್ರಾಣಪರವಾಗಿದೆ. ಅದನ್ನು ಅನುಸರಿಸಿದಾಗ ಪ್ರಸ್ತಾವವಾಕ್ಯವೂ ಕೂಡ ಮುಖ್ಯಪ್ರಾಣಪರವೇ ಆಗಬೇಕು. ಆವಾಗ ಸ್ವಾಪವಾಕ್ಯದಂತೆ ಪ್ರಸ್ತಾವವಾಕ್ಯವೂ ಕೂಡ ಅಪೂರ್ವಾರ್ಥವಾಗುತ್ತದೆ. ಅದ್ವೈತಿಗಳಿಗೆ ಬ್ರಹ್ಮಪರತ್ವವನ್ನು ಸಾಧಿಸಲು ಸಾಧ್ಯವಿಲ್ಲ.

ಅಪೌರುಷೇಯವಾಕ್ಯದಲ್ಲಿ ದೋಷಶಂಕೆಗೆ ಅವಕಾಶವಿಲ್ಲದ ಕಾರಣ ಮತ್ತೊಂದನ್ನು ಅನುಸರಿಸು-ವುದಿಲ್ಲವೆಂದು ಅದ್ವೈತಿಗಳು ಹೇಳಿದ್ದರು. ಇದೂ ಕೂಡ ತಪ್ಪೆಂದು 'ಅನಾಶಂಕಿತ' ಎಂಬ ವಾಕ್ಯದಿಂದ ವಿವರಿಸಿದ್ದಾರೆ. 'ಅನ್ಯಥಾ' ಎಂಬ ವಾಕ್ಯದಲ್ಲಿ ಶ್ರುತ್ಯಂತರಸಂವಾದಃ ಎಂದು ಪುಲ್ಲಿಂಗ ಪದವನ್ನು ಅನು-ಸರಣೀಯಂ ಎಂಬ ನಪುಂಸಕಲಿಂಗಪದವನ್ನು ವಿಶೇಷ್ಯವಿಶೇಷಣವಾಗಿ ಹೇಳಿದ್ದಾರೆ. ಇದು ತಪ್ಪಲ್ಲವೇ? ಎಂಬ ಪ್ರಶ್ನೆಗೆ 'ನಾನುಸರಣೀಯಃ' ಎಂಬ ಪುಲ್ಲಿಂಗಪದವನ್ನು ಶೇಷಪೂರಣ ಮಾಡಿಕೊಳ್ಳಬೇಕು. ಅಪೌರುಷೇಯವಾಕ್ಯದಲ್ಲಿಯೂ ಮತ್ತೊಂದು ವಾಕ್ಯವನ್ನು ಅನುಸರಿಸಬಹುದೆನ್ನಲು ಅದ್ವೈತಿಗಳ ಮಾತನ್ನೇ ಸಂವಾದವನ್ನಾಗಿ ನೀಡುತ್ತಿದ್ದಾರೆ 'ಉಕ್ತಂಚ' ಇತ್ಯಾದಿ ಗ್ರಂಥದಿಂದ.

ಮತ್ತೊಂದು ಆಕ್ಷೇಪವೂ ಇದರಿಂದ ಪರಿಹಾರವಾಯಿತು. ''ಸ್ವಾಪವಾಕ್ಯವು ಸಂವರ್ಗವಿದ್ಯೆಯಲ್ಲಿ ಕೇಳಿಸುತ್ತಿದೆ. ಪ್ರಸ್ತಾವವಾಕ್ಯವು ಉದ್ಗೀಥವಿದ್ಯೆಯಲ್ಲಿ ಕೇಳಿಸುತ್ತಿದೆ. ಹೀಗಿರುವಾಗ ಸ್ವಾಪವಾಕ್ಯಕ್ಕೂ ಪ್ರಸ್ತಾವವಾಕ್ಯಕ್ಕೂ ಏಕವಾಕ್ಯತ್ವವೆಂಬ ಸಿದ್ಧಾಂತವನ್ನು ಮಾಡಲು ಸಾಧ್ಯವಿಲ್ಲವಲ್ಲವೇ?'' ಎಂದರೆ ಬ್ರಹ್ಮಕಾರಣವಾಕ್ಯವೂ ಬೇರೆ ಪ್ರಕರಣಗಳಲ್ಲಿ ಇರುವುದರಿಂದ ಆದರಿಂದಲೂ ಏಕವಾಕ್ಯತ್ವವನ್ನು ಹೇಳದಿರಬೇಕಾದೀತು.

ಇನ್ನು ಕೆಲವರು 'ಪ್ರಾಣಸ್ಯ ಪ್ರಾಣಃ ಪ್ರಾಣಬಂಧನಂ ಹಿ ಸೋಮ್ಯ ಮನ ಇತಿ ಚೋದಾಹರಣಮ್' ಎಂಬ ವಾಕ್ಯವನ್ನು ವಿಷಯವಾಕ್ಯವೆನ್ನುತ್ತಾರೆ. ಆದರೆ ಈ ವಾಕ್ಯವು ವಿಷಯವಾಕ್ಯವಾಗಲಾರದೆಂದು ಶಂಕರಭಾಷ್ಯದಲ್ಲಿಯೇ ದೂಷಿಸಲಾಗಿದೆ. ಪುನಃ ನಾವು ಅದನ್ನು ದೂಷಿಸಬೇಕಾಗಿಲ್ಲ.

**गुरुराजीयम्** – अधिकाशङ्कां निरस्य सिद्धान्तमपि दूषयति – **यच्चोक्त-मिति** ॥ ननु 'संवादानुसरणमयुक्तम् । वैयर्थ्यात्', इत्यत आह – **अर्था- बाधेति** ॥ ननु 'संवादानुसरणे सापेक्षत्वेन निरपेक्षत्वहानिः' इत्यत आह – **अनपेक्षत्वस्येति** ॥ ननु 'प्रस्तावववाक्यस्य प्राणपरत्वे बोधितार्थबोधकत्वेन वैयर्थ्यं स्यात् । ब्रह्मपरत्वे त्वपूर्वार्थत्वेन न वैयर्थ्यमिति तदेव स्वीक्रियते' इत्यत आह – **सप्रयोजनत्वायेति** ॥

किञ्च स्वापवाक्यस्याभिमानिदेवतापरत्वेऽपूर्वार्थत्वसम्भवात् प्रस्ताववाक्य-मप्यभिमानिदेवतापरत्वेनापूर्वार्थं स्यादिति न ब्रह्मपरत्वमेवेष्टव्यम्, इत्याह – **स्वापवाक्यस्यापीति** ॥ ब्रह्मपरत्वेप्यपूर्वतालाभसम्भवेपि प्रस्ताववाक्य-समानार्थत्वात् 'अग्निहोत्रं जुहोति' इति प्राप्तहोमांशे 'दध्नेन्द्रियकामो जुहुयात्' इत्यस्येवापूर्वार्थत्वा- भावादभिमानिदेवतापरत्वमुक्तमिति ज्ञेयम् ।

ननु 'अन्योन्यानुसरणे सापेक्षत्वेनाप्रामाण्यापत्तिः', इत्यत आह – **अना-शङ्कितेति** ॥ ननु विरुद्धार्थत्वेन द्वयोरप्रामाण्यमित्यत आह – **नन्विति** ॥ तथाच 'संवादरहितवाक्ये संवादिवाक्यमनुसरणीयमिति न तयोर्विरुद्धार्थत्वेनाप्रामाण्यम्' इति भावः ॥ **अन्यथेति** ॥ अन्योन्यानुसरणेऽप्रामाण्ये चेत्यर्थः ॥

॥ इति श्रीकेशवभट्टारकेण विरचितायां
भावदीपिकायां प्राणाधिकरणं सम्पूर्णम् ॥९॥

## ರಾಮಾನುಜರ ಅಧಿಕರಣ ವಿಮರ್ಶೆ

**तात्पर्यचन्द्रिका –**

**केचित्तु – कृत्स्नस्य जगतः प्रसिद्धप्राणाधीनप्रवृत्त्यादिदर्शनात् प्रस्ताववाक्ये प्रसिद्धप्राण एवोच्यते इत्याकाशाधिकरणादधिकाशङ्कायां, शिलाकाष्ठादिषु तदभावात् 'सर्वाणि' इत्यस्यायोग इति परिहारोऽभिप्रेतः – इत्याहुः । तन्न, प्राणाधीनप्रवृत्तिकं शरीरमिव तदनधीनप्रवृत्तिकं शरीरादन्यदपि बहु पश्यतः पूर्वपक्षिणः सर्वं प्राणाधीनप्रवृत्तिकमिति शङ्काऽयोगात् । ग्रन्थस्तु स्पष्टार्थः ॥**

॥ इति श्रीब्रह्मण्यतीर्थपूज्यश्रीपादशिष्यव्यासतीर्थविरचिता
तात्पर्यचन्द्रिकायां प्राणाधिकरणं सम्पूर्णम् ॥९॥

ಅನುವಾದ - "ಸಮಸ್ತಜಗತ್ತು ಪ್ರಸಿದ್ಧವಾದ ಜಡವಾಯುವಿನ ಅಧೀನವಾಗಿ ನಡೆಯುತ್ತಿದೆಯೆಂದು ಎಲ್ಲರಿಂದಲೂ ಸಿದ್ಧವಾಗಿದೆ. ಹಾಗಾಗಿ ಪ್ರಸ್ತಾವವಾಕ್ಯದಲ್ಲಿಯೂ ಪ್ರಸಿದ್ಧವಾದ ಜಡವಾಯುವೇ ಪ್ರತಿಪಾದ್ಯವಾಗಬೇಕು" ಎಂದು ಪೂರ್ವಪಕ್ಷ. ಆಕಾಶಾಧಿಕರಣದ ಮೇಲೆ ಬರುವ ಈ ಅಭ್ಯಧಿಕಾಶಂಕೆಯನ್ನು ಪರಿಹರಿಸಲು ಈ ಪ್ರಾಣಾಧಿಕರಣವು ಹೊರಟಿದೆ. ಸಮಸ್ತಜಗತ್ತು ಜಡವೃತ್ತಿವಾಯುವಿನ ಅಧೀನವಾಗಿ ನಡೆಯುತ್ತದೆ ಎಂಬುದೇ ತಪ್ಪು. ಕಲ್ಲು, ಕಟ್ಟಿಗೆ ಮೊದಲಾದ-

ವುಗಳ ಸ್ಥಿತಿಗೆ ಜಡವಾಯುವಿನ ಅವಶ್ಯಕತೆ ಇಲ್ಲ. ಹಾಗಾಗಿ ಪ್ರಸ್ತಾವವಾಕ್ಯದಲ್ಲಿರುವ 'ಸರ್ವಾಣಿ' ಎಂಬ ಪದದ ಅರ್ಥವನ್ನು ಸಂಕೋಚ ಮಾಡಬೇಕಾಗುತ್ತದೆ. ಆದ್ದರಿಂದ ಪ್ರಸ್ತಾವವಾಕ್ಯದಲ್ಲಿರುವ 'ಪ್ರಾಣ'ಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನಾಗುತ್ತಾನೆಂದು ಸಿದ್ಧಾಂತ.

(*)ರಾಮಾನುಜರ ಈ ಅಧಿಕರಣಶರೀರ ತಪ್ಪು. ಜಡವಾಯುವಿನ ಅಧೀನವಾಗಿ ಶರೀರಾದಿ-ಗಳಿರುವುದು ಕಂಡಿದೆ. ಆದರೆ ಶರೀರವನ್ನು ಬಿಟ್ಟು ಅನೇಕ ಜಡಪದಾರ್ಥಗಳು ಜಡವಾಯುವಿನ ಅಧೀನವಾಗಿಲ್ಲದಿರುವುದು ಲೋಕದಲ್ಲಿ ಕಂಡಿದೆ. ಹೀಗಿರುವಾಗ ಪೂರ್ವಪಕ್ಷಿಯು ಸಮಸ್ತಜಗತ್ತು

---

**श्रीभाष्यम्** – इदमाम्नायते छान्दोग्ये, 'प्रस्तोतर्या देवता प्रस्तावमन्वायत्ता'' (छा. १-१०-९) इति प्रस्तुत्य 'कतमा सा देवेतेति । प्राण इति होवाच, सर्वाणि ह वा इमानि भूतानि प्राणमेवाभिसंविशन्ति, प्राणमभ्युज्जिहते (छा. १-११-४) सैषा देवता प्रस्तावमन्वायत्ता । तां चेदविद्वान् प्रास्तोष्यः मूर्द्धा ते व्यपतिष्यत्' (छा. १-११-५) इति ॥ अत्र प्राणशब्दोऽप्याकाशशब्दवत् प्रसिद्धप्राणव्यतिरेके परस्मिन्नेव ब्रह्मणि वर्तते, तदसाधारणनिखिलजगत्प्रवेशनिष्क्रमाणदिलिङ्गात् प्रसिद्धवन्निर्दिष्टात् ।

अधिकाशङ्का तु कृत्स्नस्य भूतजातस्य प्राणाधीनस्थितिप्रवृत्त्यादिदर्शनात् प्रसिद्ध एव प्राणो जगत्कारणतया निर्देशमर्हतीति ॥

परिहारस्तु शिलाकाष्ठादिषु, चेतनस्वरूपे च तदभावात्, 'सर्वाणि ह वा इमानि भूतानि प्राणमेवाभिसंविशन्ति प्राणमभ्युज्जिहते' (छा. १-११-५) इति नोपपद्यत इति । अतः प्राणयति सर्वाणि भूतानीति कृत्वा परं ब्रह्मैव प्राणशब्देनाभिधीयते । अतः प्रसिद्धाकाशप्राणादेरन्यदेव निखिलजगदेककारणमहतपाप्मत्वसार्वज्ञ्यसत्यसङ्कल्पत्वाद्यनन्तकल्याणगुणगणं परं ब्रह्मैवाकाशप्राणादिशब्दाभिधेयमिति सिद्धम् ॥ २४ ॥ इति प्राणाधिकरणम् ॥ ९ ॥

**श्रुतप्रकाशिका** – उक्ताधिकरणन्यायमतिदिशति अत एव प्राणः ॥ विषयमाह – इदमिति । मूर्द्धा ते व्यपतिष्यत् – आत्मसत्ता न लभ्येतेत्यर्थः । किं वेदान्तवेद्यः प्रसिद्धः प्राणः, उत परमात्मा; तदर्थं प्राण इति होवाच, प्राणमेवाभिसंविशन्तीत्युक्तः प्राणः किं प्रसिद्धः, उत परः, तदर्थं किं प्राणशब्दो रूढः, उत यौगिकः, तदर्थं भूतजातस्य प्रसिद्धप्राणायत्तस्थितिप्रवृत्तित्वमस्ति, उत न – इति विचारः । यदाऽस्ति, तदा रूढत्वात् विषयवाक्यस्थप्राणशब्दः प्रसिद्धप्राणपर इति सर्ववेदान्तवेद्यः प्रसिद्धः प्राण इति पूर्वपक्षे फलितम् । राद्धान्ते तु यदा प्राणायत्तस्थितिप्रवृत्तित्वं नास्ति, तदाऽवयवशक्त्या विषयवाक्यस्थप्राणशब्दः परमात्मपर इति सर्ववेदान्तवेद्यः परमात्मेति फलफलिभावः । अक्षरार्थमाह अत्रेति । आकाशशब्दवदित्यत्र रूढिप्राबल्यतत्परिहारादिकं

ಜಡವಾಯುವಿನ ಅಧೀನವಾಗಿದೆಯೆಂದು ಹೇಗೆ ತಾನೆ ಶಂಕಿಸುತ್ತಾನೆ? ಆದ್ದರಿಂದ ರಾಮಾನುಜರ ಪೂರ್ವಪಕ್ಷವೇ ಹುಟ್ಟಲಾರದು. ಪೂರ್ವಪಕ್ಷವೇ ಹುಟ್ಟದಿದ್ದಾಗ ಸಿದ್ಧಾಂತಕ್ಕೆ ಅವಕಾಶವಿಲ್ಲ.

---

पूर्वोक्तं सर्वमनुसन्धेयम् । न हि प्रत्युदाहरणन्यायोऽतिदेष्टव्यः । अतिदेशस्य हि प्रयोजनम् अधिकाशङ्कापरिहारः । अतः सूत्रकाराभिमताम-धिकाशङ्कां दर्शयति – कृत्स्नस्येति । अत्र अविरोधशङ्कया प्रत्यवस्थानं विरोधफुटीकरणं चानुसन्धेयम् । स्थितिप्रवृत्त्यादीत्यादिशब्देन निवृत्तिरुच्यते; प्रवृत्तिहेतुभूतज्ञानचिकीर्षे च । स्थितिप्रवृत्तिहेतुत्वेनोत्पत्तिकारणत्वमर्थसिद्धमिति भावः । यद्वा – 'यदा वै पुरुषः स्वपिति प्राणं तर्हि वागप्येति, प्राणं चक्षुः, प्राणं श्रोत्रम्, प्राणं मनः । यदा प्रबुद्ध्यते, प्राणादेवाधि पुनर्जायन्ते' इति प्रसिद्धवन्निर्देशरहितया श्रुत्या प्राणस्य अप्ययोद्गमनहेतुत्वावगमश्च आदिशब्देन विवक्षितः । अस्मिन् प्रकरणे उद्गीथप्रतिहारयोर्देवतात्वेन अन्नादित्यावुक्तौ । तयोश्चाब्रह्मत्वात् प्राणोऽपि ब्रह्मव्यतिरिक्तः प्रसिद्ध एव ग्राह्य इतीदं भाष्येऽनादृतम्; प्रकरणोक्तानाम् अन्नमयादीनामब्रह्मत्वेऽपि कारणस्य परब्रह्मत्वमानन्दवल्ल्यां समर्थितमिति प्रकरणमात्रस्य पूर्वपक्षावलम्बनत्वेन बुद्धावनारोहात् । जगत्कारणतयेति । संसृष्टं प्रति कारणत्वं सम्भवतीति भावः ॥

अधिकं परिहारं दर्शयति – परिहारस्त्विति । आदिशब्दोक्त आकाशादिः । 'प्राणं तर्हि वागप्येति' इत्यादि श्रुतिरिन्द्रियव्यापारविषया । प्राणशब्दस्य परब्रह्मवाचित्वं कथमिति शङ्कां परिहरन् अधिकरणार्थमुपसंहरति – अत इति । वृत्ताधिकरणद्वयस्य अवान्तरपेटिकात्वं दर्शयति – अतः प्रसिद्धेति ॥ वर्तिष्यमाणाधिकरणद्वयस्य पेटिकान्तरत्वमाह – अतः परमिति ॥ वस्त्वन्तरासाधारणैः शब्दैर्जगत्कारणे निर्दिश्य-मानेऽपि कारणत्वाभिधायिनां वाक्यानां विशेषपर्यवसानं कृतम् । अथ कारणत्वाक्षेपक-लिङ्ग(विशेष) वाचिनां वाक्यानमभिमतविशेषपर्यवसानमुच्यत इत्यवान्तरपेटिकाभेद-स्तत्सङ्गतिश्चेत्यर्थः । ज्योतिश्शब्देनावान्तरसङ्गतिश्च द्योतिता । प्राणः वायुविशेषः; आदित्यादिज्योतिः तेजोविशेषः; अतः आकाशप्राणज्योतिषां क्रमो युक्त इति ॥ नन्वाकाशादिशब्दत्रयं परमात्मपरमिति सिद्धान्तितम् ॥ सत्यम्; तथापि प्रसिद्ध्यनुसारिण्या पूर्वपक्षदृष्ट्या सङ्गत्युपपत्तिः । येन केनापीति न लिङ्गाल्पत्वं विवक्षितम्; किन्तु उदाहृतविषयवाक्यप्रतिपन्नोऽयमेव गुणः कारणत्वाक्षेपक इति गुणविशेषानियम इति भावः । उभयोः पेटिकयोरनुयायिनमाकारं दर्शयति अर्थान्तर-प्रसिद्धैरपीति ॥ २४ ॥

ಗ್ರಂಥದ ಕಠಿಣಪದಗಳ ಅರ್ಥವು ಸ್ಪಷ್ಟವಾಗಿರುವುದರಿಂದ ಪ್ರತ್ಯೇಕವಾಗಿ ಉಲ್ಲೇಖಿಸಿಲ್ಲ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ ಪ್ರಾಣಾಧಿಕರಣವು ಸಂಪೂರ್ಣವಾಯಿತು.

**प्रकाशः** – रामानुजीयमतमपाकरोति – **केचित्त्विति** ॥ ''प्रस्तोतर्या देवता' इति वाक्ये निखिलजगत्कारणतया प्राणशब्दनिर्दिष्टः प्रसिद्धः प्राण; परात्मा वेति सन्देहे पूर्वपक्षादिकमनुवदति – **कृत्स्नस्येति** ॥

**शिलेति** ॥ शिलाकाष्टाद्यचेतनेषु प्राणायत्तस्थित्यदर्शनात् **''सर्वाणि ह वा इमानि भूतानि प्राणमेवाभिसंविशन्ति प्राणमभ्युज्जिहते''** इति सर्वपदायोगात् अत एव **''सर्वाणि ह वा इमानि''** इति प्रसिद्धवन्निर्देशादेव हेतोः प्राणशब्दनिर्दिष्टः परमात्मैवेति सिद्धान्त इत्यर्थः । पूर्वपक्षस्य निर्दलत्वेनानूदितं निरस्यति – **तन्नेत्यादिना** ॥

एतेन, यत्केनचित्प्रलपितं – पूर्वत्राकाशपदेन परमाकाशस्य परप्रकृतिरूपस्य ग्रहणेन तदभेदादस्त्वीश्वर आकाशः । 'प्रस्तावावाक्यगतप्राणस्तु **''प्राणाद्ध्येव खल्विमानि भूतानि''** इत्यादिश्रुतेः प्रसिद्धप्राण एव' इति शङ्कायां, सर्वकारणत्वादिलिङ्गात् प्राणश्शिव एव, **''प्राणाद्ध्येव''** इति श्रुतेस्त्वानन्दरूपस्य ब्रह्मणः कारणत्व एव तात्पर्यमिति परिहार इति । उक्तञ्च –

> **प्राणे तु का गतिरिह प्राणाद्ध्येवेत्यपि श्रुतेर्नैतत् ।**
> **शिव एव सोऽपि लिङ्गात् सा श्रुतिरानन्दविश्रान्ता ॥** – इति तन्निरस्तम् ।

पूर्वत्रापि **''आकाशाद्वायुः''** इत्यपि श्रुतेस्सत्वात् । ऐकाधिकरण्ये तु **''अत एव''** इति विन्यासायोगात् । **''प्राणाद्ध्येव''** इत्यादेर्विष्णुपरत्वेनानन्दमयाधिकरण एव साधितत्वाच्च ।

सिद्धान्तोऽप्ययुक्तः,

> **प्राणस्थविष्णुना सर्वे प्रसूयन्ते यतस्ततः ।**
> **प्रस्तावदेवता स स्यात् प्रस्तावस्तु जनिर्यतः ॥**

इत्यादि व्याख्यानरूपस्मृतिविरोधाच्च । "प्राणः स्थूणा अयं वाव शिशुर्योऽयं मध्यमः प्राणः" इति श्रुतिविरोधाच्च ।

द्वावात्मानौ हि देवेषु द्वौ प्राणौ द्वौ च चेतनौ ।
अज्ञानाभिभवास्पृष्टौ वायुर्नारायणश्च तौ ।
तदन्ये चेतनास्सर्वे प्राणाश्चात्मान एव च ।
अज्ञानाभिभवस्पृष्टास्तस्मात्ते ह्यधमाः स्मृताः ।
मध्यमो वायुरेवैक उत्तमः केवलो हरिः ॥

इति ब्रह्माण्डपुराणविरोधाच्चेति । उपन्यासमुखेनैव टीकाग्रन्थस्य विवृतत्वान्नाक्षरार्थवर्णने यतितव्यमित्याह – ग्रन्थस्त्विति ॥

इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते
चन्द्रिकाप्रकाशे प्राणाधिकरणं सम्पूर्णम् ॥९॥

ವಿವರಣೆ - ಇಲ್ಲಿಯ ತನಕ ಅದ್ವೈತಮತವನ್ನು ಪ್ರಕೃತ ರಾಮಾನುಜಮತವನ್ನು ನಿರಾಕರಿಸುತ್ತಿದ್ದಾರೆ. ರಾಮಾನುಜಮತದಲ್ಲಿಯೂ 'ಪ್ರಸ್ತೋತರ್ಯಾ ದೇವತಾ' ಎಂಬ ಶ್ರುತಿಯೇ ಪ್ರಾಣಾಧಿಕರಣದ ವಿಷಯವಾಕ್ಯ. ಸಮಸ್ತಜಗತ್ತಿಗೆ ಕಾರಣವಾದದ್ದು ಪ್ರಾಣನೆಂದು ಈ ಶ್ರುತಿಯು ಹೇಳುತ್ತಿದೆ. ಈ ಪ್ರಾಣಶಬ್ದದಿಂದ ಜಡವೃತ್ತಿವಾಯುವು ಪ್ರತಿಪಾದ್ಯವೋ? ಪರಮಾತ್ಮನು ಪ್ರತಿಪಾದ್ಯನೋ? ಎಂದು ಸಂದೇಹ. ಪೂರ್ವಪಕ್ಷವನ್ನು ಗ್ರಂಥಕಾರರು 'ಕೃತ್ಸ್ನಸ್ಯ' ಎಂಬ ಮಾತಿನಿಂದ ವಿವರಿಸಿದ್ದಾರೆ. ಸಿದ್ಧಾಂತವನ್ನು 'ಶಿಲಾಕಾಷ್ಠಾದಿಷು' ಎಂಬ ಗ್ರಂಥದಿಂದ ವಿವರಿಸಿದ್ದಾರೆ. ಕಲ್ಲು ಕಟ್ಟಿಗೆ ಮೊದಲಾದ ಜಡಪದಾರ್ಥಗಳಲ್ಲಿ ಜಡವಾಯುವಿನ ಆಧೀನ್ಯವು ಕಾಣದಿದ್ದರಿಂದ 'ಸರ್ವಾಣಿ ಹ ವಾ ಇಮಾನಿ ಭೂತಾನಿ ಪ್ರಾಣಮೇವಾಭಿಸಂವಿಶಂತಿ ಪ್ರಾಣಮಭ್ಯುಜ್ಜಿಹತೇ' ಎಂಬ ಶ್ರುತಿಯಲ್ಲಿರುವ ಸರ್ವಪದದ ಅರ್ಥವು ಸಮಂಜಸವಾಗುವುದಿಲ್ಲ. ಆದ್ದರಿಂದ 'ಸರ್ವಾಣಿ ಹ ವಾ ಇಮಾನಿ' ಎಂದು ಪ್ರಸಿದ್ಧಿಯನ್ನು ಹೇಳಿದ್ದರಿಂದಲೇ ಪ್ರಾಣಶಬ್ದದಿಂದ ಪರಮಾತ್ಮನೇ ವಾಚ್ಯನಾಗುತ್ತಾನೆಂದು ಸಿದ್ಧವಾಗುತ್ತದೆ ಎಂದು ರಾಮಾನುಜರ ಅಭಿಪ್ರಾಯ. ಆದರೆ ರಾಮಾನುಜರ ಪೂರ್ವಪಕ್ಷವೇ ನಿರ್ದಲವಾದ್ದರಿಂದ ಸಿದ್ಧಾಂತಸ್ಥಾಪನೆಯು ಸಮಂಜಸವಾಗುವುದಿಲ್ಲವೆಂದು "ತನ್ನ" ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ.

ಶೈವಮತನಿರಾಸ - ಶೈವರ ಅಧಿಕರಣಶರೀರ

ಹಿಂದಿನ ಅಧಿಕರಣದಲ್ಲಿ ಆಕಾಶಪದದಿಂದ ಪರಪ್ರಕೃತಿರೂಪವಾದ ಪರಮಾಕಾಶವು ವಾಚ್ಯವಾಗಿದೆಯೆಂದು ಹೇಳಲಾಗಿತ್ತು. ಪರಮಾಕಾಶದಿಂದ ಅಭಿನ್ನನಾದ ಕಾರಣ ಈಶ್ವರನೂ ಕೂಡ ಆಕಾಶದಿಂದ ವಾಚ್ಯನಾಗುತ್ತಾನೆ. ಆದರೆ ಪ್ರಸ್ತಾವವಾಕ್ಯದಲ್ಲಿರುವ ಪ್ರಾಣಶಬ್ದದಿಂದ ಈಶ್ವರನು

ವಾಚ್ಯನಾಗಬೇಕಾಗಿಲ್ಲ. 'ಪ್ರಾಣಾದ್ಧ್ಯೇವ ಖಲ್ವಿಮಾನಿ ಭೂತಾನಿ' ಎಂಬ ಶ್ರುತಿಯು ಪ್ರಾಣಾಧಿಕರಣದ ವಿಷಯವಾಕ್ಯ. ಇಲ್ಲಿರುವ ಪ್ರಾಣಶಬ್ದದಿಂದ ಜಡವಾಯುವು ಪ್ರತಿಪಾದ್ಯವಾಗುತ್ತದೆಂದು ಪೂರ್ವಪಕ್ಷ. ಸರ್ವಕಾರಣತ್ವಲಿಂಗವಿರುವುದರಿಂದ ಶಿವನೇ ಪ್ರಾಣಶಬ್ದವಾಚ್ಯನಾಗುತ್ತಾನೆಂದು ಸಿದ್ಧಾಂತ. 'ಪ್ರಾಣಾದ್ಧ್ಯೇವ' ಎಂಬ ಶ್ರುತಿಯಲ್ಲಿರುವ ಪ್ರಾಣಶಬ್ದಕ್ಕೆ ಆನಂದವೆಂದು ಅರ್ಥ. ಆನಂದರೂಪನಾದ ಬ್ರಹ್ಮನು ಜಗತ್ಕಾರಣನಾಗಿದ್ದಾನೆಂದು ಶ್ರುತಿಯ ತಾತ್ಪರ್ಯ. ಹಾಗಾಗಿ ಶಿವನ ಜಗತ್ಕಾರಣತ್ವವನ್ನೇ ಶ್ರುತಿಯು ಹೇಳಿದಂತಾಗುತ್ತದೆ. ಇದನ್ನೇ ವಿವರಿಸುವ ಕಾರಿಕೆ ಹೀಗಿದೆ --

'ಪ್ರಾಣೇ ತು ಕಾ ಗತಿರಿಹ ಪ್ರಾಣಾದ್ಧ್ಯೇವೇತ್ಯಪಿ ಶ್ರುತೇರ್ನ್ಯತ್ರ ।
ಶಿವ ಏವ ಸೋಽಪಿ ಲಿಂಗಾತ್ ಸಾ ಶ್ರುತಿರಾನಂದವಿಶ್ರಾಂತಾ ॥'

(ಪ್ರಾಣಶಬ್ದದಿಂದ ಯಾರು ವಾಚ್ಯ? ಎಂದು ಪ್ರಶ್ನೆ ಬಂದರೆ ಪ್ರಾಣಾದ್ಧ್ಯೇವ ಎಂಬ ಶ್ರುತಿಯೇ ಉತ್ತರಿಸುತ್ತಿದೆ. ಲಿಂಗರೂಪನಾದ ಶಿವನೇ ಪ್ರಾಣನಾಗಿದ್ದಾನೆ; ಅಂತಹ ಶಿವನು ಆನಂದರೂಪನಾಗಿದ್ದಾನೆಂಬರ್ಥದಲ್ಲಿ ಶ್ರುತಿಯು ವಿಶ್ರಾಂತವಾಗಿದೆ.) ಎಂದು.

ಶೈವರ ಈ ಅಧಿಕರಣಶರೀರವು ನಿರಸ್ತವಾಯಿತು. ಈ ವಿಷಯವಾಕ್ಯದಲ್ಲಿ ಜಗತ್ಕಾರಣತ್ವವು ಕೇಳಿಸುತ್ತಿರುವಂತೆ ಹಿಂದಿನ ಆಕಾಶವಾಕ್ಯದಲ್ಲಿಯೂ 'ಆಕಾಶಾದ್ವಾಯುಃ' ಎಂಬ ಜಗತ್ಕಾರಣತ್ವ-ಪ್ರತಿಪಾದಕವಾದ ಮಾತು ಕೇಳಿಸುತ್ತಿದೆ. ಆದ್ದರಿಂದ ಆಕಾಶಸೂತ್ರದಿಂದ ಪ್ರಾಣಸೂತ್ರಕ್ಕೆ ಅಭ್ಯಧಿಕಾಶಂಕೆಯನ್ನೇ ತೋರಿಸಲಾಗದು. ಮತ್ತು ಶೈವರು ಆಕಾಶಸೂತ್ರ ಹಾಗೂ ಪ್ರಾಣಸೂತ್ರಗಳನ್ನು ಒಂದೇ ಅಧಿಕರಣದಲ್ಲಿ ನಿವೇಶಿಸಿದ್ದಾರೆ. ಒಂದೇ ಅಧಿಕರಣವಾದರೆ 'ಅತ ಏವ' ಎಂಬ ಪದಗಳ ವಿನ್ಯಾಸವು ತಪ್ಪಾಗುತ್ತದೆ. ಇನ್ನು 'ಪ್ರಾಣಾದ್ಧ್ಯೇವ' ಇತ್ಯಾದಿ ಶ್ರುತಿಯು ವಿಷ್ಣುಪರವಾಗಿದೆಯೆಂದು ಈಗಾಗಲೇ ಆನಂದಮಯಾಧಿಕರಣದಲ್ಲಿ ಸಮರ್ಥಿಸಿದ್ದಾಗಿದೆ. ಇನ್ನು ಶೈವರ ಸಿದ್ಧಾಂತವೂ ತಪ್ಪು.

ಪ್ರಾಣಸ್ಥವಿಷ್ಣುನಾ ಸರ್ವೇ ಪ್ರಸ್ತೂಯಂತೇ ಯತಸ್ತತಃ ।
ಪ್ರಸ್ತಾವದೇವತಾ ಸ ಸ್ಯಾತ್ ಪ್ರಸ್ತಾವಸ್ತು ಜನಿರ್ಯತಃ ॥

(ಮುಖ್ಯಪ್ರಾಣನಲ್ಲಿರುವ ವಿಷ್ಣುವಿನಿಂದಲೇ ಸಮಸ್ತ ಜಗತ್ತು ಹುಟ್ಟಿದೆ; ಆದ್ದರಿಂದ ಪ್ರಸ್ತಾವ-ದೇವತೆಯು ವಿಷ್ಣುವೇ ಆಗುತ್ತಾನೆ. ಪ್ರಸ್ತಾವಶಬ್ದಕ್ಕೆ ಹುಟ್ಟು ಎಂಬ ಅರ್ಥವು ಪ್ರಸಿದ್ಧವಾಗಿದೆಯಷ್ಟೇ.) ಇತ್ಯಾದಿ ಪ್ರಾಣಶ್ರುತಿಯನ್ನು ವ್ಯಾಖ್ಯಾನಿಸುವ ಸ್ಮೃತಿಯ ವಿರೋಧವು ಬರುತ್ತದೆ. ಮತ್ತು 'ಪ್ರಾಣಸ್ಥೂಣಾ ಅಯಂ ವಾವ ಶಿಶುರ್ಯೋಽಯಂ ಮಧ್ಯಮಃ ಪ್ರಾಣಃ' ಎಂಬ ಶ್ರುತಿಯು ಮುಖ್ಯಪ್ರಾಣನನ್ನು ಮಧ್ಯಮಪ್ರಾಣನೆಂದು ವಿಷ್ಣುವನ್ನು ಉತ್ತಮಪ್ರಾಣನೆಂದು ಹೇಳುತ್ತಿದೆ ಹೊರತು ಶಿವನನ್ನು ಪ್ರಾಣನೆಂದು ಹೇಳಿಲ್ಲ. ಈ ಶ್ರುತಿಯ ವಿರೋಧವು ಶೈವರಿಗೆ ತಪ್ಪಿದ್ದಲ್ಲ.

ದ್ವಾವಾತ್ಮಾನೌ ಹಿ ದೇವೇಷು ದ್ವೌ ಪ್ರಾಣೌ ದ್ವೌ ಚ ಚೇತನೌ ।
ಅಜ್ಞಾನಾಭಿಭವಾಸ್ಪೃಷ್ಟೌ ವಾಯುರ್ನಾರಾಯಣಶ್ಚ ತೌ ।
ತದನ್ಯೇ ಚೇತನಾಃ ಸರ್ವೇ ಪ್ರಾಣಾಶ್ಚಾತ್ಮಾನ ಏವ ಚ ।

ಅಜ್ಞಾನಾಭಿಭವಸ್ಪೃಷ್ಟಾಸ್ತಸ್ಮಾತ್ ತೇ ಹ್ಯಧಮಾಃ ಸ್ಮೃತಾಃ ।
ಮಧ್ಯಮೋ ವಾಯುರೇವೈಕ ಉತ್ತಮಃ ಕೇವಲೋ ಹರಿಃ ॥

''ದೇವತೆಗಳ ಮಧ್ಯದಲ್ಲಿ ಆತ್ಮ, ಪ್ರಾಣ, ಚೇತನರೆನ್ನಿಸಿದ ಇಬ್ಬರು ಮಾತ್ರ ಅಜ್ಞಾನದ ಸಂಪರ್ಕವಿಲ್ಲದವರು - ವಾಯುದೇವರು ಮತ್ತು ನಾರಾಯಣರಿಬ್ಬರು. ಅವರನ್ನು ಬಿಟ್ಟು ಉಳಿದ ಚೇತನರು ಪ್ರಾಣರು ಮತ್ತು ಆತ್ಮರು ಅಜ್ಞಾನದ ಸಂಪರ್ಕಕ್ಕೊಳಗಾದವರು. ಆದ್ದರಿಂದ ಉಳಿದೆಲ್ಲ ದೇವತೆಗಳು ಅಧಮರೆನ್ನಿಸುತ್ತಾರೆ. ವಾಯುದೇವರೊಬ್ಬರೇ ಮಧ್ಯಮರೆನ್ನಿಸುತ್ತಾರೆ. ಹರಿಯು ಉತ್ತಮನೆನ್ನಿಸಿದ್ದಾರೆ.'' ಎಂಬ ಬ್ರಹ್ಮಾಂಡಪುರಾಣದ ವಿರೋಧವು ಬರುತ್ತದೆ.

ಪ್ರತಿಯೊಂದು ಅಧಿಕರಣದ ಕೊನೆಯಲ್ಲಿ ಗ್ರಂಥಕಾರರು (ಚಂದ್ರಿಕಾಚಾರ್ಯರು) ಟೀಕೆಯ ಕಠಿಣಪದಾರ್ಥಗಳನ್ನು ಹೇಳುತ್ತಾರೆ. ಆದರೆ ಈ ಅಧಿಕರಣದ ಉಪನ್ಯಾಸಶೈಲಿಯಲ್ಲಿಯೇ ವಿವರಿಸಿದ್ದರಿಂದ ಪ್ರತ್ಯೇಕವಾಗಿ ಹೇಳಿಲ್ಲ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಪ್ರಾಣಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ಭಾಗ -೧

# ನ್ಯಾಯವಿವರಣ, ನ್ಯಾಯವಿವರಣಟೀಕಾ, ಅಣುಭಾಷ್ಯ, ತತ್ವಮಂಜರೀ, ತಂತ್ರದೀಪಿಕಾ, ನ್ಯಾಯಮುಕ್ತಾವಳೀಃ, ಸೂತ್ರಾರ್ಥರತ್ನಾವಳೀಃ

श्रीमदानन्दतीर्थभगवत्पादाचार्यविरचितम्

# अणुभाष्यम्

## प्राणाधिकरणम्

श्री राघवेन्द्रतीर्थविरचिता

# तत्वमञ्जरी

## प्राणाधिकरणम्

नन्वथापि न पूर्णानन्दो विष्णुरिति युक्तम् । 'तद्वै त्वं प्राणोऽभवः महान् भोगः प्रजापतेः' इति श्रुतौ प्राणस्यैव महाभोगशब्दितपूर्णानन्दत्वोक्तेः प्राणपदस्य च प्रसिद्ध्या मुख्यप्राणपरत्वात् । न हि द्वयोः पूर्णानन्दत्वं युक्तं विरोधादित्यतः प्राप्तम् ॥ ॐ अत एव प्राण इति ॥

ಇಷ್ಟು ಹೇಳಿದರೂ ಸಹ ವಿಷ್ಣುವು ಆನಂದಮಯನಾಗಲಾರನು. ಏಕೆಂದರೆ, 'ತದ್ ವೈ ತ್ವಂ ಪ್ರಾಣೋ ಅಭವಃ ಮಹಾನ್ ಭೋಗಃ ಪ್ರಜಾಪತೇಃ' ಇತ್ಯಾದಿ ಶ್ರುತಿಯಲ್ಲಿ ಮಹಾಭೋಗಶಬ್ದದಿಂದ ಪೂರ್ಣಾನಂದತ್ವವನ್ನು ಮುಖ್ಯಪ್ರಾಣನಲ್ಲಿ ಹೇಳಬೇಕು. ಏಕೆಂದರೆ ಈ ಶ್ರುತಿಯಲ್ಲಿ ಕೇಳಿಸುತ್ತಿರುವ ಪ್ರಾಣಶಬ್ದವು ಮುಖ್ಯಪ್ರಾಣನನ್ನೇ ಪ್ರತಿಪಾದಿಸುತ್ತಿದೆ. ವಿಷ್ಣು ಹಾಗೂ ಮುಖ್ಯಪ್ರಾಣರು ಇಬ್ಬರೂ ಸಹ ಪೂರ್ಣಾನಂದರಾಗಲಿ ಎಂದು ಹೇಳಬಾರದು. ಇಬ್ಬರಿಗೆ ಪೂರ್ಣಾನಂದತ್ವವನ್ನು ಹೇಳುವುದು ಪರಸ್ಪರ ವಿರುದ್ಧವಾಗಿದೆ. ಈ ಶಂಕೆಯನ್ನು ಪರಿಹರಿಸಲು 'ಓಂ ಅತ ಏವ ಪ್ರಾಣಃ' ಎಂಬ ಸೂತ್ರವು ಹೊರಟಿದೆ.

तदर्थः प्रणेतेति ॥ प्रणेता जीवनहेतुः । उपलक्षणमेतत् । प्रणेत्रादिरेको मुख्यो विष्णुरेव । तथाच प्राण इत्याद्यैरध्यात्मगैरन्यवस्तुषु प्रसिद्धैः सर्वैः शब्दैर्विष्णुरेवोच्यते । नतु मुख्यप्राणादिः ।

ಈ ಅಧಿಕರಣದ ಸಾರವನ್ನೇ "ಪ್ರಣೇತಾ" ಎಂಬ ಪದದಿಂದ ಶ್ರೀಮದಾಚಾರ್ಯರು ಸಂಗ್ರಹಿಸಿದ್ದಾರೆ. 'ಪ್ರಣೇತಾ' ಎಂಬ ಪದಕ್ಕೆ ಜೀವನಕಾರಣನೆಂದರ್ಥ. ಜೀವನಪ್ರದತ್ವವು ವಿಷ್ಣುವಿನಲ್ಲಿರುವುದರಿಂದ ವಿಷ್ಣುವೇ ಪ್ರಾಣಶಬ್ದವಾಚ್ಯನಾಗುತ್ತಾನೆ. ಉಪಲಕ್ಷಣಯಾ ಉಳಿದ ಧರ್ಮಗಳನ್ನೂ ಸಹ ತಿಳಿಯಬೇಕು. ಆದ್ದರಿಂದ ಬೇರೆ ವಸ್ತುಗಳಲ್ಲಿ ಪ್ರಸಿದ್ಧವಾದ ಆಧ್ಯಾತ್ಮಿಕಪದಗಳೆಲ್ಲವೂ ವಿಷ್ಣುವನ್ನೇ ಪ್ರತಿಪಾದಿಸುತ್ತದೆ ಹೊರತು ಮುಖ್ಯಪ್ರಾಣನನ್ನು ಪ್ರತಿಪಾದಿಸುವುದಿಲ್ಲ.

कुतः ? **सर्वगुणत्वतः** । **'ह्रीश्च ते लक्ष्मीश्च पत्न्या'** विति **'भर्ता सन् भ्रियमाण'** इति ह्रीशब्दितश्रीपतित्वविश्वभर्तृत्वाद्येतत्प्रकरणस्थसर्वगुणवत्त्वादित्यर्थः । केन निमित्तेनोच्यते? आह – **सर्वगुणत्वत इति** । **'यद्देवान्प्राणयो नवे'**ति वाक्यशेषोक्त-नवदेवोपलक्षितसर्वप्राणिजीवनहेतुत्वादिरूपगुणत्वादन्यगतं प्रति स्वातन्त्र्याच्चे-त्यर्थः । अत्र प्राण इति वाच्ये **प्रणेतेति** तदर्थोक्तिः । प्राणपदस्य हरौ यौगिकत्वस्य, एव इत्युक्तिः प्रवृत्तिहेतोर्मुख्यत्वस्य सूचनाय ॥ ९ ॥

ಹೀಗೇಕೆ ಒಪ್ಪಬೇಕು? ಎಂದರೆ "ಸರ್ವಗುಣತ್ವತಃ" ಎಂದು ಉತ್ತರಿಸಿದ್ದಾರೆ. ಅಂದರೆ, ಈ ಪ್ರಕರಣದಲ್ಲಿ ಕೇಳಿಸುತ್ತಿರುವ ಎಲ್ಲ ಧರ್ಮಗಳೂ ವಿಷ್ಣುವಿನ ಅಸಾಧಾರಣಗುಣಗಳಾಗಿವೆ. 'ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂಬ ಶ್ರುತಿಯಲ್ಲಿ ಶ್ರೀಪತಿತ್ವ ಹಾಗೂ ಲಕ್ಷ್ಮೀಪತಿತ್ವಧರ್ಮಗಳು ಕೇಳಿಸುತ್ತಿವೆ. 'ಭರ್ತಾ ಸನ್ ಭ್ರಿಯಮಾಣಃ' ಎಂಬ ಶ್ರುತಿಯಲ್ಲಿ ವಿಶ್ವಪಾಲಕತ್ವವೆಂಬ ವಿಷ್ಣುವಿನ ಅಸಾಧಾರಣಧರ್ಮವು ಕೇಳಿಸುತ್ತಿದೆ. ಈ ಪ್ರಕರಣದಲ್ಲಿ ವಿಷ್ಣುವಿನ ಅನೇಕ ಗುಣಗಳು ಕೇಳಿಸುತ್ತಿರುವುದರಿಂದ ವಿಷ್ಣುವೇ ಪ್ರಾಣಶಬ್ದವಾಚ್ಯನು. ಯಾವ ಕಾರಣದಿಂದ ಇವುಗಳನ್ನು ವಿಷ್ಣುವಿನ ಅಸಾಧಾರಣಧರ್ಮಗಳೆಂದು ಗುರುತಿಸುತ್ತೀರಿ? ಎಂಬ ಪ್ರಶ್ನೆಗೂ "ಸರ್ವಗುಣತ್ವತಃ" ಎಂದೇ ಉತ್ತರ. 'ಯದ್ದೇವಾನ್ ಪ್ರಾಣಯೋ ನವ' ಇತ್ಯಾದಿ ವಾಕ್ಯಶೇಷದಲ್ಲಿ ನವದೇವತೆಗಳಿಂದ ಉಪಲಕ್ಷಿತರಾದ ಸಕಲಪ್ರಾಣಿಗಳ ಜೀವನಹೇತುತ್ವವು ವಿಷ್ಣುವಿನಲ್ಲಿಯೇ ಇದೆ. ಮುಖ್ಯಪ್ರಾಣನಲ್ಲಿರುವ ಸರ್ವಪ್ರಾಣಿಜೀವನಹೇತುತ್ವವು ವಿಷ್ಣುವಿನ ಅಧೀನ-ವಾಗಿದೆ. ಶ್ರೀಮದಾಚಾರ್ಯರು ಈ ಅಧಿಕರಣದ ಸಾರವನ್ನು 'ಪ್ರಾಣಃ' ಎಂದು ಸಂಗ್ರಹಿಸದೆ ಪ್ರಣೇತಾ ಎಂದು ಸಂಗ್ರಹಿಸಲು ಏನುಕಾರಣ? ಎಂದರೆ ಪ್ರಾಣಶಬ್ದವು ಮಹಾಯೋಗವೃತ್ತಿಯಿಂದ ವಿಷ್ಣುವಾಚಕ-ವಾಗಿದೆ. ಮತ್ತು ಏವಕಾರದಿಂದ ಪರಮಮುಖ್ಯವೃತ್ತಿಯಿಂದ ವಿಷ್ಣುವೊಬ್ಬನೇ ವಾಚ್ಯನೆಂದು ತಿಳಿಸಿದ್ದಾರೆ. ॥೯॥

* * * * *

॥श्रीः ॥

श्रीराघवेन्द्रतीर्थविरचिता

# तन्त्रदीपिका

## प्राणाधिकरणम्

॥ ॐ अत एव प्राणः ॐ ॥ १-१-२३

अत्र नये आध्यात्मिकाशेषनामसमन्वय उच्यते । प्राधान्यादन्योपलक्षणत्वेन प्राणोक्तिः । ''तद्वै त्वं प्राण'' इत्युक्तः प्राणो ब्रह्मैव । न तु रूढ्या मुख्यप्राणः । कुतः? अत एव ''श्रीश्च ते लक्ष्मीश्च पत्न्यौ'' इति निरवकाशश्रीलक्ष्मीपतित्व-लिङ्गादेवेत्यर्थः । एवेति ''शब्दादेव'' इत्यत्रेव लिङ्गस्य निरवकाशत्वमाह ॥९॥

ಈ ಅಧಿಕರಣದಲ್ಲಿ ಆಧ್ಯಾತ್ಮಿಕವಾದ (ದೇಹೇಂದ್ರಿಯಾದಿಗಳಿಗೆ ಸಂಬಂಧಪಟ್ಟ) ಸಮಸ್ತವಿಧವಾದ ನಾಮಾತ್ಮಕಶಬ್ದಗಳ ಸಮನ್ವಯವನ್ನು ಹೇಳುತ್ತಿದ್ದಾರೆ. ಆಧ್ಯಾತ್ಮಿಕಶಬ್ದಗಳ ಮಧ್ಯದಲ್ಲಿ ಪ್ರಾಣನಿಗೆ ಪ್ರಾಧಾನ್ಯವಿರುವುದರಿಂದ ಪ್ರಾಣಶಬ್ದವನ್ನು ಮುಖ್ಯವಾಗಿ ಸ್ವೀಕರಿಸಿ ಉಳಿದ ಶಬ್ದಗಳನ್ನು ಉಪಲಕ್ಷಣವಾಗಿ ಸಮನ್ವಯ ಮಾಡುತ್ತಿದ್ದಾರೆ.

ಸೂತ್ರಾರ್ಥ ಹೀಗಿದೆ — ಪ್ರಾಣಃ = 'ತದ್ ವೈ ತ್ವಂ ಪ್ರಾಣಃ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಪ್ರಾಣನು ಬ್ರಹ್ಮನೇ ಆಗಿದ್ದಾನೆ, ಹೊರತು ರೂಢಿಯಿಂದ ಮುಖ್ಯಪ್ರಾಣನು ಪ್ರತಿಪಾದ್ಯನಾಗಿಲ್ಲ. ಅತ ಏವ = ಏಕೆಂದರೆ 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂಬುದಾಗಿ ಶ್ರೀಪತಿತ್ವ ಲಕ್ಷ್ಮೀಪತಿತ್ವವೆಂಬ ನಿರವಕಾಶವಾದ ವಿಷ್ಣುಲಿಂಗವಿರುವುದರಿಂದಲೇ ಎಂದರ್ಥ. ಏವ = ಶಬ್ದಾದೇವ ಪ್ರಮಿತಃ ಎಂಬ ಸೂತ್ರದಲ್ಲಿ ಏವಕಾರವು ಹೇಗೆ ನಿರವಕಾಶತ್ವವನ್ನು ಹೇಳುತ್ತಿದೆಯೋ ಅದರಂತೆ ಈ ಸೂತ್ರದಲ್ಲಿರುವ ಏವಕಾರವೂ ಸಹ ಲಿಂಗಕ್ಕೆ ನಿರವಕಾಶತ್ವವನ್ನು ಹೇಳುತ್ತಿದೆ.

* * * *

श्रीराघवेन्द्रयतिकृता

# न्यायमुक्तावलिः

## प्राणाधिकरणम्

॥ ॐ अत एव प्राणः ॐ ॥ १ ॥

अत्राप्यातिदेशिकी वा पूर्ववैषम्येण पूर्वपक्षोत्थानात् प्रत्युदाहरणरूपा वा आकाशाद्वायुरिति श्रौतक्रमेण विचारणाद्वा सङ्गतिः । तद्वै त्वं प्राणो अभव इति तैत्तिरीये (तै. आ. ३-१४) **'भर्ता सन् भ्रियमाणः'** इत्यनुवाके श्रुतः प्राणः किं मुख्यवायुरुत विष्णुरिति सन्देहः ।

प्राणशब्दस्य मुख्यवायौ रूढत्वात् प्राणो मुख्यवायुरेवेत्यस्य पूर्वन्यायेन अत्रत्यनिरवकाशलिङ्गेन निरासेऽपि प्राणपदस्य विष्णौ रूढेरभावात् तत्प्रवृत्ति-निमित्तप्राणनाख्यजीवनहेतुत्वस्य **'तत्प्राणे प्रपन्न उदतिष्ठत्'**(ऐ.२-१-४) **'यत्प्राप्ति-र्यत्परित्यागः'** (ब्र. सू. भा. २-४-१) इति श्रुतिस्मृतिभिर्वासुधोक्तदिशा कुलाल-शरीरस्य घटं प्रतीव मुख्यप्राणशरीरभूतवायोर्जीवनं प्रत्यन्वयव्यतिरेकदर्शनेन प्रत्यक्षेण चावगतान्वयव्यतिरेकाभ्यां वा मुख्यवायुगतत्वेन योगस्याप्यभावदिति न प्राणो विष्णुरिति विशेषशङ्कयोत्थानाद्वा पूर्ववन्निरवकाशलिङ्गाभवादिति वा पूर्वः पक्षः ॥

ಈ ಅಧಿಕರಣದಲ್ಲಿಯೂ ಸಹ ಆತಿದೇಶಿಕೀಸಂಗತಿಯನ್ನು ಹೇಳಬಹುದು. ಅಥವಾ ಹಿಂದಿನ ಅಧಿ-ಕರಣಕ್ಕಿಂತ ವಿಲಕ್ಷಣವಾದ ಪೂರ್ವಪಕ್ಷವನ್ನು ಮಾಡುತ್ತಿರುವುದರಿಂದ ಪ್ರತ್ಯುದಾಹರಣವೆಂಬ ಸಂಗತಿಯನ್ನು ಹೇಳಬಹುದು. ಅಥವಾ ಆಕಾಶಾದ್ ವಾಯುಃ ಇತ್ಯಾದಿ ಶ್ರುತಿಕ್ರಮವನ್ನು ಅನುಸರಿಸಿ ವಿಚಾರ ಮಾಡುತ್ತಿರುವುದರಿಂದಲೂ ಆಕಾಶಾಧಿಕರಣದ ಅನಂತರ ಈ ಅಧಿಕರಣಕ್ಕೆ ಸಂಗತಿಯು ಇರುತ್ತದೆ. ತೈತ್ತಿರೀಯದಲ್ಲಿ ಕೇಳಿಸುತ್ತಿರುವ 'ತದ್ವೈ ತ್ವಂ ಪ್ರಾಣೋಽಭವಃ' ಎಂಬ ಶ್ರುತಿಯಲ್ಲಿರುವ ಪ್ರಾಣಶಬ್ದವು 'ಭರ್ತಾ ಸನ್ ಭ್ರಿಯಮಾಣಃ' ಎಂಬಲ್ಲಿ ಕೇಳಿಸುತ್ತಿರುವ ಪ್ರಾಣಶಬ್ದವು ಮುಖ್ಯಪ್ರಾಣನನ್ನು ಪ್ರತಿಪಾದಿಸುತ್ತದೋ ಅಥವಾ ವಿಷ್ಣುವನ್ನೋ? ಎಂದು ಸಂದೇಹ.

ಇಲ್ಲಿರುವ ಪ್ರಾಣಶಬ್ದದಿಂದ ಮುಖ್ಯಪ್ರಾಣನೇ ಪ್ರತಿಪಾದ್ಯನು. ಏಕೆಂದರೆ, ಪ್ರಾಣಶಬ್ದವು ಮುಖ್ಯಪ್ರಾಣನಲ್ಲೇ ರೂಢವಾಗಿದೆ. ವಸ್ತುತಃ ಪ್ರಾಣನು ಮುಖ್ಯಪ್ರಾಣನೇ ಆಗಿದ್ದಾನೆ ಎಂಬುದನ್ನು

ಹಿಂದಿನ ಅಧಿಕರಣದ ನ್ಯಾಯದಿಂದ ಮತ್ತು ಇಲ್ಲಿ ಹೇಳುತ್ತಿರುವ ನಿರವಕಾಶಲಿಂಗದಿಂದ ನಿರಾಸಮಾಡಬಹುದು. ಆದರೆ ವಿಷ್ಣುವಿನಲ್ಲಿ ಪ್ರಾಣಪದಕ್ಕೆ ರೂಢಿಯೇ ಇರುವುದಿಲ್ಲ. ಅಷ್ಟೇ ಅಲ್ಲದೆ ಪ್ರಾಣಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಜೀವನಹೇತುತ್ವವೂ ಸಹ ಇರುವುದಿಲ್ಲ. ಹೊರತಾಗಿ ಮುಖ್ಯಪ್ರಾಣನಲ್ಲಿಯೇ ಜೀವನಹೇತುತ್ವವು ಶ್ರುತವಾಗಿದೆ. 'ತತ್ಪ್ರಾಣೇ ಪ್ರಪನ್ನೇ ಉದತಿಷ್ಠತ್' ಎಂಬ ಐತರೇಯದಲ್ಲಿ ಕೇಳಿಸುತ್ತಿರುವಂತೆ ಮತ್ತು 'ಯತ್ಪ್ರಾಪ್ತಿರ್ಯತ್ ಪರಿತ್ಯಾಗಃ' ಎಂಬ ಭಾಷ್ಯದ ಮಾತಿನಂತೆ, ಹೀಗೆ ಶ್ರುತಿಸ್ಮೃತಿಗಳಿಂದ ಸುಧೆಯಲ್ಲಿ ಹೇಳಿದಂತೆ ಜೀವನಹೇತುತ್ವವು ಮುಖ್ಯಪ್ರಾಣನಲ್ಲೇ ಇರುತ್ತದೆ. ಯಾವ ರೀತಿಯಾಗಿ ಘಟಕ್ಕೆ ಕುಲಾಲನ ಶರೀರವು ಕಾರಣವಾಗಿದೆಯೋ ಅದರಂತೆ ಮುಖ್ಯಪ್ರಾಣನ ಶರೀರವೆನಿಸಿದ ಭೂತವಾಯುವಿಗೆ ಮಾತ್ರ ಜೀವನದ ಅನ್ವಯವ್ಯತಿರೇಕವು ಕಾಣಿಸುತ್ತಿದೆ. ಹೀಗೆ ಪ್ರತ್ಯಕ್ಷದಿಂದ ಸಿದ್ಧವಾದ ಅನ್ವಯವ್ಯತಿರೇಕಗಳಿಂದ ಪ್ರಾಣಶಬ್ದದ ಪ್ರವೃತ್ತಿನಿಮಿತ್ತವು ಮುಖ್ಯವಾಯುವಿನಲ್ಲೇ ಇರುತ್ತದೆಂದು ನಿರ್ಣಯವಾಗುತ್ತದೆ. ಯೋಗ ವೃತ್ತಿಯನ್ನೂ ಸಹ ಮುಖ್ಯಪ್ರಾಣನಲ್ಲಿಯೇ ಹೇಳಬಹುದಾದ್ದರಿಂದ ಪ್ರಾಣಶಬ್ದದಿಂದ ವಿಷ್ಣುವು ಪ್ರತಿಪಾದ್ಯನಾಗುವುದಿಲ್ಲ. ಹೀಗೆ ವಿಶೇಷವಾದ ಸಂಶಯವು ಬರುವುದರಿಂದ ಮತ್ತು ಹಿಂದಿನ ಅಧಿಕರಣದಂತೆ ನಿರವಕಾಶಲಿಂಗವು ಇಲ್ಲದ ಕಾರಣ ಮುಖ್ಯಪ್ರಾಣನೇ ಪ್ರಾಣಶಬ್ದವಾಚ್ಯನೆಂದು ಪೂರ್ವಪಕ್ಷ ಹುಟ್ಟುತ್ತದೆ.

**सिद्धान्तस्तु ॥ 'अद्भ्यः सम्भूतः'** इति पूर्वानुवाके **'ह्रीश्च ते लक्ष्मीश्च पत्न्यौ'** इति श्रुतेन श्रीलक्ष्मीपतित्वरूपनिरवकाशलिङ्गने लोकप्रसिद्धेस्त्याज्यत्वात् । 'श्रीश्च ते' इति युष्मच्छब्देनोक्तस्य 'तद्वै त्वं प्राणः' इति अत्रापि युष्मच्छब्देन प्रत्यभिज्ञानेन तयोरनुवाकयोर्भिन्नार्थत्वशङ्कानुदयात् भर्ता सन्नित्यनुवाके 'तमेव मृत्युममृतं तमाहुः' इत्यादिना अमृतत्वादिलिङ्गश्रवणात् **'तत्प्राण'** इति श्रुतेः (ऐ. २-१-४) **'प्राणस्तथा'** इयत्रत्यन्यायेन(ब्र.सू. १-१-२८) वैष्णवत्वात् वायुवृत्तेर्मुख्यप्राणदेहत्वमिव मुख्यप्राणस्यापि विष्णुदेहत्वेनान्वयव्यतिरेकयोरपि तदीयतया तस्यैव जीवनहेतुत्वात् वायुगतस्यापि तदधीनत्वेन तदधीनत्वन्यायात् **'प्राणस्य प्राणः'** इत्यादौ (तल. १-२) प्रयोगाच्च योगरूढिभ्यां विष्णुरेव प्राणपदवाच्य इति । **'ह्रीश्च ते लक्ष्मीश्च पत्न्यौ'** इति भाष्योक्तश्रुत्यन्तरबलात् ह्रीरत्र श्रीरेवेति ध्येयम् ॥ प्रयोजनं तु महान्भोग इति महाभोगशब्दितपूर्णानन्दत्व-मुखेनानन्दयाक्षेपः तत्समाधिश्च ॥९॥

ಸಿದ್ಧಾಂತ ಹೀಗಿದೆ -- 'ಅದ್ಭ್ಯಃ ಸಂಭೂತಃ' ಎಂಬ ಹಿಂದಿನ ಅನುವಾಕದಲ್ಲಿ 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂದು ಶ್ರುತವಾಗಿದೆ. ಈ ಶ್ರುತಿಯಲ್ಲಿ ಶ್ರೀಲಕ್ಷ್ಮೀಪತಿತ್ವವೆಂಬ ವಿಷ್ಣುವಿನ ನಿರವಕಾಶಲಿಂಗ-ವಿರುವುದರಿಂದ ಲೋಕರೂಢಿಯನ್ನು ಬಿಡಬೇಕಾಗುತ್ತದೆ. ಮತ್ತು ಶ್ರೀಶ್ಚ ತೇ' ಎಂಬಲ್ಲಿರುವ ಯುಷ್ಮತ್-

ಶಬ್ದದಿಂದ ಯಾರು ಪ್ರತಿಪಾದ್ಯನಾಗಿದ್ದಾನೋ ಅವನೇ 'ತದ್ವೈ ತ್ವಂ ಪ್ರಾಣಃ' ಎಂಬಲ್ಲಿರುವ ಯುಷ್ಮತ್ ಶಬ್ದದಿಂದಲೂ ಪ್ರತಿಪಾದ್ಯನಾಗುತ್ತಿದ್ದಾನೆಂಬ ಪ್ರತ್ಯಭಿಜ್ಞೆಯು ಬರುತ್ತದೆ. ಆದ್ದರಿಂದ ಎರಡೂ ಅನುವಾಕಗಳು ಭಿನ್ನ ಭಿನ್ನ ವಿಷಯಕವೆಂಬ ಶಂಕೆಯೇ ಹುಟ್ಟುವುದಿಲ್ಲ.

ಇದರಂತೆ 'ಭರ್ತಾ ಸನ್' ಎಂಬ ಅನುವಾಕದಲ್ಲೂ 'ತಮೇವ ಮೃತ್ಯುಂ ಅಮೃತಂ ತಮಾಹುಃ' ಇತ್ಯಾದಿಯಾಗಿ ಅಮೃತತ್ವಾದಿಲಿಂಗಗಳು ಕೇಳಿಸುತ್ತಿವೆ. ಈ ಲಿಂಗಗಳು ತತ್ಪ್ರಾಣ ಎಂಬ ಐತರೇಯಶ್ರುತಿಯಂತೆ ಮತ್ತು ಪ್ರಾಣಸ್ತಥಾ ಎಂಬ ಸೂತ್ರದಲ್ಲಿ ಹೇಳುವ ನ್ಯಾಯದಂತೆ ವಿಷ್ಣುವಿನಲ್ಲೇ ಇರುತ್ತವೆಂದು ಸಿದ್ಧವಾಗುತ್ತದೆ. ಮತ್ತು ಪಂಚವಾಯುವೃತ್ತಿಗಳು ಯಾವ ರೀತಿಯಾಗಿ ಮುಖ್ಯಪ್ರಾಣದೇವರ ಶರೀವಾಗಿವೆಯೋ ಅದರಂತೆ ಮುಖ್ಯಪ್ರಾಣನೂ ಸಹ ವಿಷ್ಣುವಿನ ಶರೀರನೆನಿಸಿದ್ದಾನೆ. ಆದ್ದರಿಂದ ಜೀವನಹೇತುತ್ವದ ಅನ್ವಯವ್ಯತಿರೇಕವು ಮುಖ್ಯಪ್ರಾಣನಲ್ಲಿರುವಂತೆ ವಿಷ್ಣುವಿನಲ್ಲಿಯೂ ಇವೆ. ವಾಯುವಿನಲ್ಲಿರುವ ಜೀವನ ಹೇತುತ್ವವು ತದಧೀನತ್ವನ್ಯಾಯದಿಂದ ವಿಷ್ಣುವಿನ ಅಧೀನವಾಗಿರುತ್ತದೆ. ಮತ್ತು 'ಪ್ರಾಣಸ್ಯ ಪ್ರಾಣಃ' ಎಂಬ ತಲವಕಾರದ ಮಾತು ಈ ವಿಷಯದಲ್ಲಿ ಆಧಾರವಾಗಿದೆ. ಈ ಎಲ್ಲ ಕಾರಣಗಳಿಂದ ಪ್ರಾಣಶಬ್ದದ ಯೋಗ ಹಾಗೂ ರೂಢಿಗಳಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ.

'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂಬ ಭಾಷ್ಯದಲ್ಲಿ ಹೇಳಲ್ಪಟ್ಟ ಶ್ರುತ್ಯಂತರದ ಆಧಾರದಿಂದ ಇಲ್ಲಿರುವ ಹ್ರೀಶಬ್ದದಿಂದ ಶ್ರೀದೇವಿಯನ್ನು ವಿವಕ್ಷಿಸಬೇಕು. ಇದರ ಪ್ರಯೋಜನವೇನೆಂದರೆ 'ಮಹಾನ್ ಭೋಗಃ' ಎಂಬಲ್ಲಿ ಕೇಳಿಸುತ್ತಿರುವ ಮಹಾಭೋಗಶಬ್ದದಿಂದ ತಿಳಿಯುವ ಪೂರ್ಣಾನಂದತ್ವಮುಖದಿಂದ ಆನಂದಮಯತ್ವವನ್ನು ಆಕ್ಷೇಪಿಸುವುದು ಮತ್ತು ಸಮಾಧಾನವನ್ನು ನೀಡುವುದು.

* * * *

# सूत्रार्थरत्नावळिः

**सूत्रार्थरत्नावळिः –**

(अत्र लोकतोऽन्यत्रप्रसिद्ध्याध्यामिकाशेषशब्दोपलक्षकप्राणशब्दस्य ब्रह्मणि समन्वयः क्रियते)

ॐ॥ अत एव प्राणः ॥ॐ

नन्वयं प्राणो वायुरेव । प्राणशब्दस्य तत्र रूढत्वात् । विष्णौ रूढेरभावात् प्राणश्रुतेस्तत्र सावकाशत्वाभावात् । यौगिकार्थस्य जीवनकारणत्वस्यान्वयव्यतिरेकाभ्यां वायावेव दर्शनात् । ततश्च प्राणो वायुरेवेति प्राप्ते, सूत्रमाह –

ॐ॥ अत एव प्राणः ॥ॐ – अस्यार्थः । 'तद्वै त्वं प्राणोऽभवः' इत्युक्तप्राणो विष्णुरेव । नान्यः । कुतः? अत एव 'श्रीश्च ते'(तै.आ.३/१३) इति श्रीपतित्व-लिङ्गादेवेत्यर्थः ।

एवंच निरवकाशश्रीपतित्वलिङ्गात् । 'ईशानः प्राणदः प्राणः' इति विद्वद्रूढेर्महायोगस्य च विष्णौ सत्वेन श्रुतेः सावकाशत्वात् । प्राणगतजीवनान्वयव्यतिरेकस्यापि 'न प्राणेन' इति श्रुतेर्भगवधीनत्वात् । अतः प्राणशब्दवाच्यो विष्णुरेवेति सिद्धम् ॥

* * * * *

॥ इति परिपूर्णचन्द्रिकायां प्राणाधिकरणम् ॥

॥ श्रीमध्वेशार्पणमस्तु ॥

# ೦೧೦-ಜ್ಯೋತಿರಧಿಕರಣ

ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ಭಾಷ್ಯದೀಪಿಕಾ,
ಸತ್ತರ್ಕದೀಪಾವಳೀ, ತತ್ವಪ್ರಕಾಶಿಕಾ,
ಭಾವದೀಪ, ವಾಕ್ಯಾರ್ಥಮಂಜರೀ

॥ ಶ್ರೀಗುರುಭ್ಯೋ ನಮಃ ॥

ದೇವದೇವೋತ್ತಮ ದೇವತಾಸಾರ್ವಭೌಮ

ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ

ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

# ಬ್ರಹ್ಮಮೀಮಾಂಸಾಶಾಸ್ತ್ರ

## ॥ १०. अथ ज्योतिरधिकरणम् ॥

**॥ ॐ ज्योतिश्चरणाभिधानात् ॐ ॥**

ಕಿವಿ ಮೊದಲಾದ ಇಂದ್ರಿಯಗಳಿಗೆ ಅಗೋಚರನೆಂದು ಶ್ರುತಿ ಹೇಳುತ್ತಿರುವುದರಿಂದ ವಿಷ್ಣುವೇ ಜ್ಯೋತಿಃಶಬ್ದವಾಚ್ಯನು.

ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಜ್ಯೋತಿರಧಿಕರಣವು ಮುಗಿಯಿತು

* * * * * *

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदिपिका – ज्योतिः** = ज्योतिःशब्दवाच्यं ब्रह्म एव न त्वन्यत् । कुतः? **चरणाभिधानात्** = कर्णादीनां विचरणाभिधानात् । विमे कर्णा (ऋ.६/९/६) इति ज्योतिषः साकल्येन कर्णादिविदूरत्वश्रवणादित्यर्थः ।

ಜ್ಯೋತಿಃ = ಜ್ಯೋತಿಸ್ ಶಬ್ದದಿಂದ ಬ್ರಹ್ಮನೇ ವಾಚ್ಯನಾಗಿದ್ದಾನೆ. ಬೇರೆಯವರಲ್ಲ. ಏಕೆಂದರೆ ಚರಣಾಭಿಧಾನಾತ್ = ಕಿವಿ ಮೊದಲಾದ ಇಂದ್ರಿಯಗಳಿಗೆ ಅತೀತವಾಗಿದೆಯೆಂದು ಜ್ಯೋತಿಯನ್ನು ಹೇಳಿದ್ದರಿಂದ. 'ವಿಮೇ ಕರ್ಣಾ' ಎಂಬ ಋಗ್ವೇದವಾಕ್ಯವು ಜ್ಯೋತಿಯು ಕಿವಿ ಮೊದಲಾದ ಇಂದ್ರಿಯಗಳಿಂದ ಬಹುದೂರವೆಂದು ಹೇಳಿದೆ.

ಶ್ರೀಜಗನ್ನಾಥಯತಿಗಳಿಂದ ರಚಿತವಾದ ಸೂತ್ರದೀಪಿಕಾದಲ್ಲಿ

ಜ್ಯೋತಿರಧಿಕರಣವು ಮುಗಿಯಿತು.

श्रीमदानन्दतीर्थभगवत्पादाचार्यविरचित-

# ब्रह्मसूत्रभाष्यम्

## ९.ज्योतिरधिकरणम्

ಜ್ಯೋತಿಯೆನಿಸಿದ ಅಗ್ನಿಯೇ ಆನಂದಮಯನೆಂದು ಪೂರ್ವಪಕ್ಷ

**भाष्यम् – 'यो वेद निहितं गुहायाम्' (तै.उ. २-१) इत्युक्तम् ।**

**तच्च गुहानिहितम् – 'वि मे कर्णा पतयतो विचक्षुर्वी३दं ज्योतिर्हृदय आहितं यत् । वि मे मनश्चरति दूर आधीः किं स्विद् वक्ष्यामि किमु नू मनिष्ये' (ऋ. ६-९-६) इति ज्योतिरुक्तम् ।**

ತೈತ್ತಿರೀಯೋಪನಿಷತ್ತಿನಲ್ಲಿ 'ಎಲ್ಲರ ಹೃದಯಗುಹೆಯಲ್ಲಿರುವ ಆನಂದಮಯನನ್ನು ಯಾರು ತಿಳಿದಿದ್ದಾನೆ?' ಎಂದು ಪ್ರಶ್ನಿಸಲ್ಪಟ್ಟಿದೆ. ಅಂತಹ ಹೃದಯಗುಹೆಯಲ್ಲಿರುವ ವ್ಯಕ್ತಿಯು ಜ್ಯೋತಿರೂಪನಾಗಿದ್ದಾನೆ. ಇವನನ್ನು 'ನನ್ನ ಕಿವಿ ಮೊದಲಾದ ಇಂದ್ರಿಯಗಳು, ಕಿವಿಗಳು, ಕಣ್ಣುಗಳು ಹೊಂದಲು ಸಾಧ್ಯವಿಲ್ಲ. ಹೃದಯದಲ್ಲೇ ಇವನು ಸನ್ನಿಹಿತನಾಗಿದ್ದರೂ ನನ್ನ ಮನಸ್ಸು ಇವನಿಂದ ದೂರವೇ ಉಳಿದಿದೆ. ಇವನ ಬಗ್ಗೆ ನಾನು ಏನು ತಾನೇ ಹೇಳಬಲ್ಲೆನು. ಇವನನ್ನು ಏನೆಂದು ತಿಳಿದೇನು? ಹೀಗೆ ಜ್ಯೋತಿಯನ್ನು ಆನಂದಮಯನೆಂದು ಶ್ರುತಿಯು ಹೇಳಿದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವಾದ ಜ್ಯೋತಿ ಎಂಬ ನಾಮಾತ್ಮಕಶಬ್ದವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಗಿದೆ. ಹಿಂದಿನ ಅಧಿಕರಣದಿಂದ ಮತ್ತು ಅದರ ವಿಷಯವಾಕ್ಯದಿಂದ ಸಂಗತಿಯನ್ನು ತೋರಿಸುವ ಮೂಲಕ ವಿಷಯ ಮತ್ತು ಸಂಶಯಗಳನ್ನು ತೋರಿಸುತ್ತಿದ್ದಾರೆ(०१).

---

(०१) भाष्यदीपिका – ॥ १०. अथ ज्योतिरधिकरणम् ॥

अत्राधिकरणे तत्तत्सूक्तगताशेषशब्दोपलक्षकस्य लोकतोऽन्यत्रप्रसिद्धस्य ज्योतिर्नाम्नो ब्रह्मणि समन्वयः क्रियते । पूर्वाधिकरणतद्विषयसङ्गती विषयवाक्योदाहरणपूर्वकं विषयसंशयौ च दर्शयति - यो वेदेति ॥ ततः किमित्यत आह - तच्चेति ॥ चोऽवधारणे । तथा च यत् पूर्वं मान्त्रवर्णिकपदोपात्तमन्त्रवर्णगतेन 'यो वेद' इति वाक्येन गुहानिहितं वस्तूक्तं तदेवाऽनन्दमयाद्याख्यमित्युक्तम् । तदेव 'विमे कर्णा' इति वाक्ये 'ज्योतिरुक्तं' ज्योतिश्शब्देनोक्तमित्यर्थः । अनेन वक्ष्यमाणपूर्वपक्षपर्यालोचनया ज्योतिषो विष्णव-

॥ ಶ್ರೀಗುರುಭ್ಯೋ ನಮಃ ॥

ದೇವದೇವೋತ್ತಮ ದೇವತಾಸಾರ್ವಭೌಮ

ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ

ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

# ಬ್ರಹ್ಮಮೀಮಾಂಸಾಶಾಸ್ತ್ರ

## ॥ १०. अथ ज्योतिरधिकरणम् ॥

**॥ ॐ ज्योतिश्चरणाभिधानात् ॐ ॥**

ಕಿವಿ ಮೊದಲಾದ ಇಂದ್ರಿಯಗಳಿಗೆ ಅಗೋಚರನೆಂದು ಶ್ರುತಿ ಹೇಳುತ್ತಿರುವುದರಿಂದ ವಿಷ್ಣುವೇ ಜ್ಯೋತಿಃಶಬ್ದವಾಚ್ಯನು.

ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಜ್ಯೋತಿರಧಿಕರಣವು ಮುಗಿಯಿತು

* * * * * *

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदिपिका – ज्योतिः** = ज्योतिःशब्दवाच्यं ब्रह्म एव न त्वन्यत् । कुतः? **चरणाभिधानात्** = कर्णादीनां विचरणाभिधानात् । विमे कर्णा (ऋ.६/९/६) इति ज्योतिषः साकल्येन कर्णादिविदूरत्वश्रवणादित्यर्थः ।

ಜ್ಯೋತಿಃ = ಜ್ಯೋತಿಸ್ ಶಬ್ದದಿಂದ ಬ್ರಹ್ಮನೇ ವಾಚ್ಯನಾಗಿದ್ದಾನೆ. ಬೇರೆಯವರಲ್ಲ. ಏಕೆಂದರೆ ಚರಣಾಭಿಧಾನಾತ್ = ಕಿವಿ ಮೊದಲಾದ ಇಂದ್ರಿಯಗಳಿಗೆ ಅತೀತವಾಗಿದೆಯೆಂದು ಜ್ಯೋತಿಯನ್ನು ಹೇಳಿದ್ದರಿಂದ. 'ವಿಮೇ ಕರ್ಣಾ' ಎಂಬ ಋಗ್ವೇದವಾಕ್ಯವು ಜ್ಯೋತಿಯು ಕಿವಿ ಮೊದಲಾದ ಇಂದ್ರಿಯಗಳಿಂದ ಬಹುದೂರವೆಂದು ಹೇಳಿದೆ.

ಶ್ರೀಜಗನ್ನಾಥಯತಿಗಳಿಂದ ರಚಿತವಾದ ಸೂತ್ರದೀಪಿಕಾದಲ್ಲಿ

ಜ್ಯೋತಿರಧಿಕರಣವು ಮುಗಿಯಿತು.

श्रीमदानन्दतीर्थभगवत्पादाचार्यविरचित-

# ब्रह्मसूत्रभाष्यम्

## ९.ज्योतिरधिकरणम्

### ಜ್ಯೋತಿಯೆನಿಸಿದ ಅಗ್ನಿಯೇ ಆನಂದಮಯನೆಂದು ಪೂರ್ವಪಕ್ಷ

**भाष्यम् – 'यो वेद निहितं गुहायाम्' (तै.उ. २-१) इत्युक्तम् ।**

**तच्च गुहानिहितम् – 'वि मे कर्णा पतयतो विचक्षुर्वी३दं ज्योतिर्हृदय आहितं यत् । वि मे मनश्चरति दूर आधीः किं स्विद् वक्ष्यामि किमु नू मनिष्ये' (ऋ. ६-९-६) इति ज्योतिरुक्तम् ।**

ತೈತ್ತಿರೀಯೋಪನಿಷತ್ತಿನಲ್ಲಿ 'ಎಲ್ಲರ ಹೃದಯಗುಹೆಯಲ್ಲಿರುವ ಆನಂದಮಯನನ್ನು ಯಾರು ತಿಳಿದಿದ್ದಾನೆ?' ಎಂದು ಪ್ರಶ್ನಿಸಲ್ಪಟ್ಟಿದೆ. ಅಂತಹ ಹೃದಯಗುಹೆಯಲ್ಲಿರುವ ವ್ಯಕ್ತಿಯು ಜ್ಯೋತಿರೂಪನಾಗಿದ್ದಾನೆ. ಇವನನ್ನು 'ನನ್ನ ಕಿವಿ ಮೊದಲಾದ ಇಂದ್ರಿಯಗಳು, ಕಿವಿಗಳು, ಕಣ್ಣುಗಳು ಹೊಂದಲು ಸಾಧ್ಯವಿಲ್ಲ. ಹೃದಯದಲ್ಲೇ ಇವನು ಸನ್ನಿಹಿತನಾಗಿದ್ದರೂ ನನ್ನ ಮನಸ್ಸು ಇವನಿಂದ ದೂರವೇ ಉಳಿದಿದೆ. ಇವನ ಬಗ್ಗೆ ನಾನು ಏನು ತಾನೇ ಹೇಳಬಲ್ಲೆನು. ಇವನನ್ನು ಏನೆಂದು ತಿಳಿದೇನು? ಹೀಗೆ ಜ್ಯೋತಿಯನ್ನು ಆನಂದಮಯನೆಂದು ಶ್ರುತಿಯು ಹೇಳಿದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವಾದ ಜ್ಯೋತಿ ಎಂಬ ನಾಮಾತ್ಮಕಶಬ್ದವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಗಿದೆ. ಹಿಂದಿನ ಅಧಿಕರಣದಿಂದ ಮತ್ತು ಅದರ ವಿಷಯವಾಕ್ಯದಿಂದ ಸಂಗತಿಯನ್ನು ತೋರಿಸುವ ಮೂಲಕ ವಿಷಯ ಮತ್ತು ಸಂಶಯಗಳನ್ನು ತೋರಿಸುತ್ತಿದ್ದಾರೆ(०१).

---

(०१) भाष्यदीपिका – ॥ १०. अथ ज्योतिरधिकरणम् ॥

अत्राधिकरणे तत्तत्सूक्तगताशेषशब्दोपलक्षकस्य लोकतोऽन्यत्रप्रसिद्धस्य ज्योतिर्नाम्नो ब्रह्मणि समन्वयः क्रियते । पूर्वाधिकरणतद्विषयसङ्गती विषयवाक्योदाहरणपूर्वकं विषयसंशयौ च दर्शयति - यो वेदेति ॥ ततः किमित्यत आह - तच्चेति ॥ चोऽवधारणे । तथा च यत् पूर्वं मान्त्रवर्णिकपदोपात्तमन्त्रवर्णगतेन 'यो वेद' इति वाक्येन गुहानिहितं वस्तूक्तं तदेवाऽनन्दमयाद्याख्यमित्युक्तम् । तदेव 'विमे कर्णा' इति वाक्ये 'ज्योतिरुक्तं' ज्योतिश्शब्देनोक्तमित्यर्थः । अनेन वक्ष्यमाणपूर्वपक्षपर्यालोचनया ज्योतिषो विष्णव-

ಗುಹಾಯಾಂ = ಹೃದಯಗುಹೆಯಲ್ಲಿ, ನಿಹಿತಂ = ನೆಲೆಸಿರುವ ಆನಂದಮಯನನ್ನು, ಯಃ = ಯಾವ ವ್ಯಕ್ತಿಯು, ವೇದ = ತಿಳಿದಿದ್ದಾನೆ? ಇತ್ಯುಕ್ತಂ = ಹೀಗೆ ಹೇಳಲ್ಪಟ್ಟಿದೆ. ತಚ್ಚ = ಅಂತಹ, ಗುಹಾನಿಹಿತಂ = ಹೃದಯಗುಹೆಯಲ್ಲಿರುವುದು (ಜ್ಯೋತಿಯೇ ಆಗಿದೆ). ಇದಂ = ಇದನ್ನು, ಮೇ = ನನ್ನ, ಕರ್ಣ = ಕಿವಿಗಳು, ಚಕ್ಷುಃ = ಕಣ್ಣುಗಳು, ವಿ ಪತಯತಃ = ಹೊಂದಲಾರವು. ಯತ್ = ಯಾವ ಜ್ಯೋತಿಯು, ಹೃದಯೇ ಆಹಿತಂ = ಹೃದಯದಲ್ಲಿಯೇ ಸನ್ನಿಹಿತವಾಗಿದೆ. ಮೇ = ನನ್ನ, ಮನಃ = ಮನಸ್ಸು, ವಿಚರತಿ = ವಿಷಯೀಕರಿಸಲು ಅಸಮರ್ಥವಾಗಿದೆ. ಆದ್ದರಿಂದಲೇ ದೂರೇ ಆಧೀಃ = ದೂರದಲ್ಲಿ ಉಳಿದಿದೆ. ಕಿಂಸ್ವಿತ್ = ಅದರ ವಿಷಯದಲ್ಲಿ, ಏನನ್ನು ತಾನೇ, ವಕ್ಷ್ಯಾಮಿ = ಹೇಳಬಲ್ಲೆನು. ಕಿಂ = ಏನೆಂದು, ಮನೀಷೇ = ತಿಳಿಯುವೆನು. ಇತಿ = ಹೀಗೆ, ಜ್ಯೋತಿಃ = ಜ್ಯೋತಿಯು, ಉಕ್ತಮ್ = ಆನಂದಮಯಸ್ವರೂಪವೆಂದು ಹೇಳಲ್ಪಟ್ಟಿದೆ.

**तच्च ज्योतिरग्निसूक्तत्वात् प्रसिद्धेश्चाग्निरेवेति प्राप्तम् ।**

ಆ ಜ್ಯೋತಿಃಶಬ್ದವು ಅಗ್ನಿಯಲ್ಲೇ ಪ್ರಸಿದ್ಧವಾಗಿದೆ. ಅಗ್ನಿಪ್ರಕರಣವೂ ಆಗಿರುವುದರಿಂದ ಅಗ್ನಿಯೇ ಆನಂದಮಯನೆಂದು ಪೂರ್ವಪಕ್ಷ[೧೨].

---

न्यत्वसाधनमुखेन आनन्दमयत्वस्यान्यनिष्ठत्वाक्षेपादानन्दमयाधिकरणेन अस्याऽक्षेपिकी सङ्गतिः सूचिता भवति । ज्योतिर्विषयः, किमग्निरुत विष्णुरिति सन्देहश्च सूचितो भवति । 'वि मे' इति ऋङ्मन्त्रे वीत्युपसर्गाणां क्रियापदेनान्वयः । तत्र धातोरेव विचरणाभिधायकत्वम् । उपसर्गास्तु द्योतकाः, न वाचकाः । अत एव सूत्रे 'चरणाभिधानात्' इत्येवोक्तम् । भाष्ये तु 'विचरणाभिधानात्' इति स्पष्टार्थमुक्तम् । अत एव तत्त्वप्रदीपे 'स्पष्टत्वाय विचरणाभिधानाद् इत्युक्तम्' इत्युक्तम् । 'मे' इत्यस्मच्छब्देन मन्त्रद्रष्टा ऋषिरुच्यते । 'दूर आधीः' इत्यस्य एकपदत्वेऽप्यवग्रहदर्शनेन द्विखण्डत्वाद् विभज्यान्वयः । आङ् ईषदभिव्याप्त्युभयार्थकः । वर्तत इति शेषः । तथा च यतो मे कर्णौ ज्योतिषो विरुद्धं पतयतः पततः । स्वार्थे णिच् । चक्षुश्च विरुद्धं पततीति विपरिणामेनान्वयः । यथा कर्णादेर्ज्योतिर्विदूरत्वम् एवं ज्योतिषोऽपि कर्णादिविदूरत्वमित्याह - वीदमिति ॥ कम्पोऽत्यन्तमित्यर्थे । तथा च यदिदं हृदये 'आहितम्' आ समन्तात् स्थितं ज्योतिस्तदत्यन्तं कर्णादिविरुद्धं वर्तते । एवं मे मनः ज्योतिषो दूरे विचरति अतीव तद्दर्शनविरुद्धं वर्तते । मनश्चरणस्य तत्त्वनिष्ठाविरोधित्वं 'चञ्चलं हि मनः कृष्ण' इति गीतायामुक्तम् । अतः कारणात् 'आधीः' ईषद्बुद्धिरहं व्याप्तबुद्धिरपीति वा 'किं स्वित्' किं नु वक्ष्यामि । किमु किं वा नु इदानीं 'मनिष्ये' चिन्तयामीति मन्त्रार्थः । तत्त्वप्रदीपे तु - आ समन्ताद् दूरस्थबुद्धिरहमित्येकान्वयेन व्याख्यातम् ।

ಪ್ರತಿಪದಾರ್ಥ -- ತಚ್ಚ ಜ್ಯೋತಿಃ = ಆ ಜ್ಯೋತಿಯಾದರೋ, ಅಗ್ನಿಸೂಕ್ತತ್ವಾತ್ = ಅಗ್ನಿಪ್ರಕರಣದಲ್ಲಿರುವುದರಿಂದ, ಪ್ರಸಿದ್ಧೇಶ್ಚ = ಅಗ್ನಿಯಲ್ಲಿ ಲೋಕಪ್ರಸಿದ್ಧವಾದ್ದರಿಂದ, ಅಗ್ನಿರೇವ = ಅಗ್ನಿಯೇ ಆಗಿದೆ, ಇತಿ = ಎಂದು, ಪ್ರಾಪ್ತಮ್ = ತಿಳಿಯುತ್ತದೆ.

तत्त्वप्रकाशिका –

अत्र लोकतोऽन्यत्र प्रसिद्धज्योतिर्नाम्नो ब्रह्मणि समन्वयप्रतिपादनादस्ति शास्त्रादिसङ्गतिः । श्रुत्यधिकरणसङ्गती विषयवाक्योदाहरणपूर्वकं विषयसंशयौ च सूचयति – यो वेदेति ॥ यो वेद निहितं गुहायामित्यानन्दमयस्य हृदयगुहा-निहितत्वमुक्तम् । मन्त्रवर्णोक्तस्यैवान्नमयादिशब्दैरुच्यमानत्वात् । तद्गुहानिहितत्वं 'वि मे कर्णा पतयत' इति कस्यचिद् ज्योतिषः प्रतीयते । मे कर्णौ ज्योतिषो विरुद्धं पततः । चक्षुश्च विरुद्धं पतति । यदिदं हृदय आहितं ज्योतिस्तदप्यत्यन्तं कर्णादिविरुद्धं वर्तते । मे मनश्चातीव विरुद्धं चरति । अतो व्याप्तबुद्धिरप्यहं किं नु वक्ष्यामि किं वेदानीं न्तियामीति ।

एतच्च यदि विष्णोरन्यत्तर्ह्यानन्दमयत्वं चान्यस्यैव प्रसज्येतेति निर्णेयं भवति । तज्ज्योतिरत्र विषयः । किं विष्णुरुताग्निः? इति सन्देहः । गुहानिहितत्वं ज्योतिःशब्दस्याग्नौ प्रसिद्धिश्च सन्देहबीजमिति भावः ।

तत्र सयुक्तिकं पूर्वपक्षयति – तच्चेति ॥ तज्ज्योतिरग्निरेव भवेत् । एतत् सूक्तस्याग्निसूक्तत्वात् । न च वाच्यं प्रकरणादपि लिङ्गस्य बलीयस्त्वाद्

---

भाष्यदीपिका – अथ सयुक्तिकं पूर्वपक्षयति तच्चेति ॥ चः समुच्चये । तदिति चाऽवर्तते । अग्निशब्दो भूततद्देवतापरः । द्वितीयचशब्दो भिन्नक्रमः । तथा च तज्ज्योतिर्गुहानिहितं चाग्निरेव भवेदिति प्राप्तं, कुतः ? 'प्रसिद्धेः' ज्योतिश्श्रुतेस्तस्याश्च तस्मिन्नग्नावेव प्रसिद्धेः रूढत्वात् । न केवलं श्रुतेरेवेदं ज्योतिरग्निः, किन्तु तस्य ज्योतिषः 'अग्निसूक्तत्वात्' अग्निप्रकरणगतत्वाच्चेति योजना । अत एव पूर्वपक्षोपसंहारटीकायां श्रुतिप्रकरणयो-र्बलवत्त्वादिति प्रसिद्धपदलक्षितायाः श्रुतेः प्रथममुक्तिः । अत एव चन्द्रिकायां भाष्ये अग्निसूक्तस्थत्वाच्चेति चशब्दप्रयोगादित्युक्तम् । तथा च श्रुतिप्रकरणाभ्यां गुहानिहितत्वलिङ्गमात्रस्य बाधाद् अग्निरेवेदं ज्योतिर्गुहानिहितं चेति भावः ।

**गुहानिहित्वलिङ्गेनास्य बाध इति । ज्योतिःश्रुतेरग्नावेव रूढत्वात् । न हि लिङ्गं श्रुतिप्रकरणापबाधने शक्तं यावता श्रुतित एव दुर्बलम् ।**

**श्रुतिः सावकाशेति चेन्न । जाठरजातवेदसि लिङ्गस्यापि सावकाशत्वात् । तथाच सावकाशलिङ्गमात्रात्सावकाशश्रुतिप्रकरणयोर्बलवत्वादग्निरेवेदं ज्योतिस्ततश्च गुहा- निहितत्वमानन्दमयत्वं च तस्यैवेत्यर्थः ।**

ಅನುವಾದ -- ಜ್ಯೋತಿರಧಿಕರಣದಲ್ಲಿ ಲೋಕದಲ್ಲಿ ಅನ್ಯತ್ರಪ್ರಸಿದ್ಧವಾದ 'ಜ್ಯೋತಿ' ಎಂಬ ನಾಮವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಗಿದೆ. ಇದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಪಾದಸಂಗತಿಗಳನ್ನು ತೋರಿಸಿದಂತಾಯಿತು. ಶ್ರುತಿ ಮತ್ತು ಅಧಿಕರಣಗಳ ಸಂಗತಿಯನ್ನು ವಿಷಯ- ವಾಕ್ಯವನ್ನು ಉದಾಹರಿಸುವ ಮೂಲಕ ತೋರಿಸುತ್ತಾರೆ. ಮತ್ತು ವಿಷಯಸಂಶಯಗಳನ್ನು 'ಯೋ ವೇದ' ಇತ್ಯಾದಿ ವಾಕ್ಯದಿಂದ ಆಚಾರ್ಯರು ಸೂಚಿಸಿದ್ದಾರೆ.

'ಯೋ ವೇದ ನಿಹಿತಂ ಗುಹಾಯಾಮ್' ಎಂಬ ಶ್ರುತಿಯಲ್ಲಿ ಆನಂದಮಯನಿಗೆ ಹೃದಯ- ಗುಹಾನಿಹಿತತ್ವವು ಹೇಳಲ್ಪಟ್ಟಿದೆ. ಏಕೆಂದರೆ 'ಸತ್ಯಂ ಜ್ಞಾನಂ' ಎಂಬ ಮಂತ್ರವರ್ಣದಲ್ಲಿ ಹೇಳ- ಲ್ಪಟ್ಟದ್ದನ್ನೇ ಮುಂದೆ ಅನ್ನಮಯಾದಿಶಬ್ದಗಳಿಂದ ಹೇಳಲಾಗಿದೆ. ಆ ಹೃದಯಗುಹಾನಿಹಿತತ್ವವು 'ವಿ ಮೇ ಕರ್ಣಾ ಪತಯತಃ' ಎಂಬ ಶ್ರುತಿಯಿಂದ ಯಾವುದೋ ಒಂದು ಜ್ಯೋತಿಯಲ್ಲಿ ಕೇಳಿಸುತ್ತಿದೆ.

ಶ್ರುತ್ಯರ್ಥ -- ''ನನ್ನ ಎರಡು ಕಿವಿಗಳು ಜ್ಯೋತಿಗೆ ವಿರುದ್ಧವಾಗಿ ನಿಂತಿವೆ. ಚಕ್ಷುರಿಂದ್ರಿಯವೂ ವಿರುದ್ಧವಾಗಿ ಹೋಗುತ್ತಿದೆ. ಈ ಹೃದಯದಲ್ಲಿರುವ ಜ್ಯೋತಿಯೂ ಕೂಡ ಕಿವಿಕಣ್ಣು ಮೊದಲಾದ ಇಂದ್ರಿಯಗಳಿಗೆ ಅತ್ಯಂತ ವಿರುದ್ಧವಾಗಿಯೇ ಇದೆ. ನನ್ನ ಮನಸ್ಸೂ ಜ್ಯೋತಿಯಿಂದ ಅತ್ಯಂತ ವಿರುದ್ಧವಾಗಿ ಸಂಚಾರ ಮಾಡುತ್ತಿದೆ. ಆದ ಕಾರಣ ನಾನು ವಿಶಾಲಬುದ್ಧಿಯವನಾದರೂ ಜ್ಯೋತಿ- ವಿಷಯದಲ್ಲಿ ಏನು ತಾನೆ ಹೇಳಲಿ? ಅಥವಾ ಜ್ಯೋತಿಯೆಂದು ಏನೆಂದು ಚಿಂತನೆ ಮಾಡಲಿ?'

ಶ್ರುತಿಯಲ್ಲಿ ಕೇಳಿಸುತ್ತಿರುವ ಈ ಜ್ಯೋತಿಯು ಒಂದು ವೇಳೆ ವಿಷ್ಣುವಿನಿಂದ ಬೇರೆಯಾದರೆ ಆವಾಗ ಆನಂದಮಯವೂ ಅದೇ ಆಗುತ್ತದೆ. ಈ ಕಾರಣಕ್ಕೋಸ್ಕರ ಜ್ಯೋತಿಶಬ್ದದ ಅರ್ಥವನ್ನು ಅವಶ್ಯವಾಗಿ ನಿರ್ಣಯಿಸಬೇಕು. ಈ ಅಧಿಕರಣಕ್ಕೆ ಜ್ಯೋತಿಃಶಬ್ದವು ವಿಷಯವಾಗಿದೆ. ಜ್ಯೋತಿಃಶಬ್ದ- ದಿಂದ ವಿಷ್ಣುವು ಪ್ರತಿಪಾದ್ಯನೋ? ಅಗ್ನಿಯೋ? ಎಂದು ಸಂದೇಹ. ಹೃದಯಗುಹಾನಿಹಿತತ್ವವು ಮತ್ತು ಜ್ಯೋತಿಃಶಬ್ದದ ಪ್ರಸಿದ್ಧಿಯು ಅಗ್ನಿಯಲ್ಲಿ ಇರುವಿಕೆಯು ಸಂದೇಹಕ್ಕೆ ಕಾರಣವಾಗಿದೆ ಎಂದು ತಿಳಿಯಬೇಕು.

ಈ ವಿಷಯವಾಕ್ಯವನ್ನು ವಿವಕ್ಷಿಸಿ ಯುಕ್ತಿಬದ್ಧವಾದ ಪೂರ್ವಪಕ್ಷವನ್ನು 'ತಚ್ಚ' ಇತ್ಯಾದಿ ವಾಕ್ಯದಿಂದ ಭಾಷ್ಯಕಾರರು ತೋರಿಸುತ್ತಿದ್ದಾರೆ. ಆ ಜ್ಯೋತಿಯು ಅಗ್ನಿಯೇ ಆಗಬೇಕು. ಏಕೆಂದರೆ

ಜ್ಯೋತಿಃಶಬ್ದವಿರುವ ಶ್ರುತಿಯು ಅಗ್ನಿಸೂಕ್ತವೆನಿಸಿದೆ. ಅಗ್ನಿಪ್ರಕರಣದ ಬಲದಿಂದ ಜ್ಯೋತಿಃಶಬ್ದದಿಂದ ಅಗ್ನಿಯೇ ಪ್ರತಿಪಾದ್ಯವೆಂದು ಹೇಳಬೇಕು.

ಇನ್ನು ಪ್ರಕರಣಕ್ಕಿಂತ ಲಿಂಗವು ಬಲಿಷ್ಠವಾಗಿದೆ. ಗುಹಾನಿಹಿತತ್ವವೆಂಬ ಲಿಂಗವಾದರೋ ವಿಷ್ಣುವಿನಲ್ಲೇ ಕೂಡುತ್ತದೆ ಹೊರತು, ಅಗ್ನಿಯಲ್ಲಿ ಕೂಡುವುದಿಲ್ಲ. ಆದ್ದರಿಂದ ಜ್ಯೋತಿಃಶಬ್ದಕ್ಕೆ ಅಗ್ನಿ ಎಂಬ ಅರ್ಥವನ್ನು ಇಟ್ಟುಕೊಂಡರೆ ಲಿಂಗದಿಂದ ಬಾಧಬರುತ್ತದಲ್ಲವೇ?

ಇದು ತಪ್ಪು. ಜ್ಯೋತಿ ಎಂಬ ಶಬ್ದವು ಅಗ್ನಿಯಲ್ಲಿಯೇ ಪ್ರಸಿದ್ಧವಾಗಿದೆ. ಲಿಂಗವು ಶ್ರುತಿ ಮತ್ತು ಪ್ರಕರಣಗಳೆರಡನ್ನೂ ಬಾಧಿಸಲು ಸಮರ್ಥವಾದುದಲ್ಲ. ಏಕೆಂದರೆ ಶ್ರುತಿಗಿಂತ ಲಿಂಗವು ದುರ್ಬಲವೇ ಆಗಿರುತ್ತದೆ. ಶ್ರುತಿಯು ಸಾವಕಾಶವಾದ್ದರಿಂದ ನಿರವಕಾಶಲಿಂಗವು ಬಲಿಷ್ಠವಾಗುತ್ತದೆಂದು ಹೇಳಬಾರದು. ಏಕೆಂದರೆ ಜಠರಾಗ್ನಿಯಲ್ಲಿ ಗುಹಾನಿಹಿತತ್ವವೆಂಬ ಲಿಂಗವೂ ಸಾವಕಾಶವಾಗಿದೆ. ಜಠರಾಗ್ನಿಯು ಉದರಗುಹೆಯಲ್ಲಿ ಇರುವುದರಿಂದ ಗುಹಾನಿಹಿತತ್ವವನ್ನು ಹೇಳಬಹುದು. ಆದ್ದರಿಂದ ಕೇವಲ ಸಾವಕಾಶಲಿಂಗಕ್ಕಿಂತ ಸಾವಕಾಶಗಳಾದ ಶ್ರುತಿ ಮತ್ತು ಪ್ರಕರಣಗಳು ಪ್ರಬಲವಾಗುತ್ತವೆ. ಆದ್ದರಿಂದ ಜ್ಯೋತಿಃಶಬ್ದದ ಅರ್ಥವು ಅಗ್ನಿಯೆನ್ನಲು ತೊಂದರೆ ಇಲ್ಲ. ಆದಕಾರಣ ಗುಹಾನಿಹಿತತ್ವ ಮತ್ತು ಆನಂದಮಯತ್ವಧರ್ಮಗಳೂ ಸಹ ಅಗ್ನಿಯಲ್ಲಿಯೇ ಇರುತ್ತವೆ ಎಂದು ಹೇಳಬಹುದು.

भावदीपः – ॐ ज्योतिश्चरणाभिधानात् ॥ 'लोकतः' इत्यादि तु पूर्ववद् व्याख्येयम् । शेषोक्त्या सङ्गतिपरत्वेन तावद्भाष्यं व्यनक्ति – **यो वेदेति** ॥ मन्त्रवर्णस्थलिङ्गस्य कथमानन्दमयस्थत्वम्? इत्यतः प्रागुक्तं स्मारयति – **मन्त्रवर्णेति*** ॥

तच्च गुहानिहितम् इत्यादेर्ज्योतिरुक्तमित्यन्तस्य व्याख्यानं **तदित्यादि** । प्रतीयत इत्युक्तं श्रुत्यर्थोक्त्या व्यनक्ति – **म इति** ॥ वीत्युपसर्गस्य व्यवहिताश्चेति पाणिन्युक्तेर्धातुनान्वयमुपेत्यार्थमाह – **विरुद्धमिति** ॥ पतयत इति स्वार्थे णिजिति मत्वोक्तम् – **पतत इति** ॥ कम्पार्थोऽत्यन्तमिति । 'दूर आधीः' इत्यस्यैकपदत्वेऽपि दुःखण्डत्वाद्दूर इत्यस्य पूर्वेणान्वयमाह – **अतीवेति** ॥ पूर्वोक्तं हेतुत्वेनोपादायाधीरित्यादि व्याचष्टे – **अत इति** ॥ तत्वप्रदीपे तु अत आ समन्ताद्

---

* ननु 'यो वेद निहितं गुहायाम्' इति वाक्यं न आनन्दमयप्रकरणगतं किन्तु 'ब्रह्मविदाप्नोति परम्' इति प्रकरणगतं तथा च कथं तेनानन्दमयस्य गुहानिहितत्ववचनमित्यत आह – मन्त्रवर्णोक्तस्यैवेति ॥ – तत्वसुखबोधिनी

**दूरस्थबुद्धिरहमिति दूर आधीरित्येतदेकान्वयेनैव व्याख्यातमिति भाति । 'किंस्विद्' इत्यस्यार्थः किन्त्विति । नु इत्यस्यार्थ इदानीमिति । 'इति प्रतीयते' इति 'इति'शब्दस्य पूर्वेणान्वयः । भाष्ये तच्च गुहानिहितं ज्योतिर्हृदय आहितं यदिति ज्योतिरुक्तमित्येव वाच्ये शेषोक्तिरर्थसङ्गत्यर्थं वा सिद्धान्तोपयोगार्थं वेति भावेन समग्रवाक्यार्थोक्तिः ।**

''ಲೋಕತಃ'' ಇತ್ಯಾದಿ ಗ್ರಂಥಗಳಲ್ಲಿ ಹೇಳಿದ ವಿಷಯವನ್ನು ಹಿಂದಿನ ಅಧಿಕರಣಗಳಲ್ಲಿ ಹೇಳಿದಂತೆ ವ್ಯಾಖ್ಯಾನ ಮಾಡಿಕೊಳ್ಳಬೇಕು. ''ಯೋ ವೇದ'' ಇತ್ಯಾದಿ ವಾಕ್ಯಗಳಿಂದ ಶೇಷಪೂರ್ವಕ ಮಾಡಿಕೊಳ್ಳು-ವುದರ ಮೂಲಕ ಸಂಗತಿಪರವಾಗಿ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಮಂತ್ರವರ್ಣದಲ್ಲಿರುವ ಲಿಂಗಕ್ಕೆ ಆನಂದಮಯನಲ್ಲಿ ಇರುವಿಕೆಯು ಹೇಗೆ? ಎಂಬ ಆಶಂಕೆಗೆ ಸಮಾಧಾನವಾಗಿ ಹಿಂದೆ ಹೇಳಿದ ಅಂಶವನ್ನು ''ಮಂತ್ರವರ್ಣ'' ಇತ್ಯಾದಿ ವಾಕ್ಯಗಳಿಂದ ನೆನಪಿಸಿಕೊಡುತ್ತಿದ್ದಾರೆ. ''ತಚ್ಚ ಗುಹಾನಿಹಿತಮ್'' ಎಂದು ಪ್ರಾರಂಭವಾದ ''ಜ್ಯೋತಿರುಕ್ತಮ್'' ಎಂಬಲ್ಲಿಯವರೆಗಿರುವ ಭಾಷ್ಯದ ವ್ಯಾಖ್ಯಾನವನ್ನು 'ತತ್' ಎಂಬಲ್ಲಿಂದ 'ಪ್ರತೀಯತೇ' ಎಂಬಲ್ಲಿಯ ವರೆಗಿನ ವಾಕ್ಯಗಳಿಂದ ಮಾಡಿ, ಈ ವಿಷಯವನ್ನು ಶ್ರುತಿಯ ಅರ್ಥವನ್ನು ಹೇಳುವುದರ ಮೂಲಕ 'ಮೇ' ಇತ್ಯಾದಿ ವಾಕ್ಯಗಳಿಂದ ಸ್ಪಷ್ಟಪಡಿಸುತ್ತಿದ್ದಾರೆ. 'ವಿ' ಎಂಬ ಉಪಸರ್ಗಕ್ಕೆ 'ವ್ಯವಹಿತಾಶ್ಚ' ಎಂಬ ಪಾಣಿನಿಯ ಸೂತ್ರದಂತೆ ಧಾತುವಿನೊಂದಿಗೆ ಅನ್ವಯವನ್ನು ಹೇಳುವುದರ ಮೂಲಕ ''ವಿರುದ್ಧಮ್'' ಎಂಬುದಾಗಿ ಅರ್ಥವನ್ನು ಹೇಳುತ್ತಿದ್ದಾರೆ. 'ಪತಯತಃ' ಎಂಬಲ್ಲಿ ಪತ್ ಧಾತುವಿಗೆ ಸ್ವಾರ್ಥದಲ್ಲಿ ಣಿಚ್‌ಪ್ರತ್ಯಯ ಬಂದಿದೆ ಎಂಬ ಅಭಿಪ್ರಾಯದಿಂದ ''ಪತತಃ'' ಎಂದು ವ್ಯಾಖ್ಯಾನ ಮಾಡಿದ್ದಾರೆ. 'ವೀಇದಮ್' ಎಂಬಲ್ಲಿ ಇರುವ ಕಂಪದ ಅರ್ಥವನ್ನು ಅತ್ಯಂತಮ್ ಎಂಬುದಾಗಿ ಬಿಡಿಸಿದ್ದಾರೆ(*). 'ದೂರೇ ಆಧೀಃ' ಎಂಬುದು ಒಂದೇ ಪದವಾಗಿದ್ದರೂ ಅದು ಖಂಡಪದವಾದುದರಿಂದ ದೂರೇ ಎಂಬ ಖಂಡಕ್ಕೆ ಹಿಂದಿನ ಭಾಗದೊಂದಿಗೆ ಅನ್ವಯವನ್ನು ''ಅತೀವ'' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಹಿಂದೆ ಹೇಳಿದ ಅಂಶವನ್ನು ಕಾರಣವಾಗಿ ಕೊಟ್ಟು ''ಆಧೀಃ'' ಇತ್ಯಾದಿಭಾಗವನ್ನು ''ಅತಃ'' ಇತ್ಯಾದಿವಾಕ್ಯದಿಂದ ವ್ಯಾಖ್ಯಾನಮಾಡಿದ್ದಾರೆ. ತತ್ತ್ವಪ್ರದೀಪದಲ್ಲಿಯಾದರೂ 'ದೂರೇ ಆಧೀಃ' ಎಂಬ ಪದಕ್ಕೆ 'ಆ' ಎಂದರೆ ಚೆನ್ನಾಗಿ ದೂರಸ್ಥಬುದ್ಧಿಯುಳ್ಳವನಾಗಿದ್ದೇನೆ ಎಂಬುದಾಗಿ ಏಕಪದತ್ವವನ್ನು ಒಪ್ಪಿಕೊಂಡೇ ಏಕಾನ್ವಯದಿಂದಲೇ ವ್ಯಾಖ್ಯಾನ ಮಾಡಿದಂತೆ ಕಾಣುತ್ತದೆ.

---

**(*) वीदम् इत्यत्र कम्पार्थोत्यन्तमिति ।**

**किं शेषग्रहे कापि लज्जायां वा पुरातने ।**

**पृथक्त्वे धृष्यतायां च हरिणां संहितेरितः'**

इति ऋग्भाष्ये शेषग्रहार्थकत्वोक्तेरिहात्यन्तमशेषेन्द्रियदूरत्वमर्थ इति भावः । दूर इत्यस्यार्थो अतीवेति । यद्यपि दूर आधीरित्येकं पदम् । तथाप्यग्रहदर्शनात् तस्य पृथक्पदतुल्यत्वात् । बुद्ध्याविवेकेन मनश्च दूरे विचरति इति व्याख्यातम् । आधीरित्याङोर्थः । **– वाक्यार्थमुक्तावली**

'ಕಿಂಸ್ವಿತ್' ಎಂಬುದರ ಅರ್ಥವನ್ನು "ಕಿನ್ನು" ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ. 'ನು' ಎಂಬ ಪದದ ಅರ್ಥವನ್ನು "ಇದಾನೀಮ್" ಎಂಬುದಾಗಿ ಬಿಡಿಸಿದ್ದಾರೆ. 'ಇತಿ'ಶಬ್ದಕ್ಕೆ 'ಇತಿ ಪ್ರತೀಯತೇ' ಎಂಬುದಾಗಿ ಹಿಂದಿನಿಂದ ಅನ್ವಯವನ್ನು ಹೇಳಬೇಕು.

ಭಾಷ್ಯದಲ್ಲಿ 'ತಚ್ಚ ಗುಹಾನಿಹಿತಂ ಜ್ಯೋತಿರ್ಹೃದಯ ಆಹಿತಂ ಯತ್ ಇತಿ ಜ್ಯೋತಿರುಕ್ತಮ್' ಎಂಬ ಇಷ್ಟೇ ವಾಕ್ಯವನ್ನು ಹೇಳಬಹುದಾಗಿದ್ದರೂ ಶ್ರುತಿಯ ಉಳಿದ ಅಂಶವನ್ನೂ ಸೇರಿಸಿ ಸಮಗ್ರವಾಕ್ಯವನ್ನು ಹೇಳಿರುವುದು ಅರ್ಥಸಂಗತಿಯನ್ನು ತೋರಿಸುವುದಕ್ಕಾಗಿ ಅಥವಾ ಸಿದ್ಧಾಂತದಲ್ಲಿ ಉಪಯೋಗಿಸಿಕೊಳ್ಳುವುದಕ್ಕಾಗಿ ಎಂಬ ಅಭಿಪ್ರಾಯದಿಂದ ಎಂದು ತಿಳಿಯಬೇಕು.

भावदीपः – तच्च ज्योतिरित्यादेर्भावमाह – **एतच्चेति** ॥ गुहास्थं ज्योतिरग्निसूक्तस्थत्वादिना यद्यग्निरित्यर्थः । **'यो वेद'** इतिवाक्यभावमाह – **तर्हीति** ॥ अत्रापीतिशब्दो हेतौ इति यतः अतः पूर्वाक्षेपरूपसङ्गतिसम्भवादित्यर्थः । ज्योतिरुक्तमित्याद्युक्तिसूचितविषयाद्याह – **तज्ज्योतिरिति** ॥ (*)एवमवश्यनिर्णेयं ज्योतिरित्यर्थः । **अग्निरिति**(**) ॥ ज्योतिश्शब्दस्य तमोविरोधिमात्रवृत्तावपि इह हृदयाहितत्वलिङ्गात् **'त्वामग्ने तमसि'** इत्यग्निश्रुतेश्च नान्यस्य संशयविषयत्वमिति भावेन भाष्योक्त्यनुरोधादग्निरित्युक्तिः । **प्रसिद्धिश्चेति** ॥ 'प्राबल्याद्यविवेकेन' इति ध्येयम् । एकस्य निरवकाशत्वेनान्यस्य श्रुतित्वेन च प्राबल्याभिधानात् ।

"ತಚ್ಚ ಜ್ಯೋತಿಃ" ಇತ್ಯಾದಿವಾಕ್ಯದ ಅಭಿಪ್ರಾಯವನ್ನು "ಏತಚ್ಚ" ಇತ್ಯಾದಿವಾಕ್ಯದಿಂದ ವಿವರಿಸಿದ್ದಾರೆ. ಹೃದಯಗುಹೆಯಲ್ಲಿರುವ ಜ್ಯೋತಿಯು ಅಗ್ನಿಸೂಕ್ತದಲ್ಲಿ ವಿವರಿಸಲ್ಪಟ್ಟಿರುವುದರಿಂದ ಒಂದು ವೇಳೆ ಅಗ್ನಿಯಾಗಿದ್ದರೆ ಎಂಬ ಅರ್ಥವನ್ನು ಸ್ವೀಕರಿಸಬೇಕು. "ತರ್ಹಿ" ಇತ್ಯಾದಿವಾಕ್ಯದಿಂದ 'ಯೋ ವೇದ' ಇತ್ಯಾದಿ ಶ್ರುತಿಯ ಅಭಿಪ್ರಾಯವನ್ನು ವಿವರಿಸಿದ್ದಾರೆ. ಇಲ್ಲೂ ಕೂಡ 'ಇತಿ'ಶಬ್ದವನ್ನು ಹೇತ್ವರ್ಥದಲ್ಲಿ

---

* अत्र ज्योतिः किमग्निरुत विष्णुरिति चिन्ता । तदर्थं ज्योतिःश्रुतिः कर्णादिविदूरत्वलिङ्गबाधिका, उत तद्बाध्या इति । तदर्थं श्रुत्युपोद्बलकमग्निसूक्तरूपमग्निप्रकरणं निरवकाशमुत सावकाशमिति । तदर्थं सूक्तस्य सावकाशत्वे तत्कल्पकत्वेनाभिमतस्य कर्णादिविदूरत्वलिङ्गस्य निरवकाशत्वे च प्रमाणं नास्युतास्तीति । – **भावबोधः**

**ननु कथमग्नावेव इत्यवधारणं ज्योतिश्शब्दस्य तमोविरोधिमात्रे रूढत्वादिति चेन्न । एतत्सूक्तस्य अग्निसूक्तत्वेन सामान्यशब्दस्य विशेषपर्यवसानात् ।
अग्निर्ज्योतिरिति द्वेधैवार्चिषः सम्प्रतिष्ठितिः ।
अग्निं गत्वा ज्योतिरेति ..................' इत्यादौ अग्नौ रूढत्वाच्चेति ज्ञेयम् ।
– **वाक्यार्थमुक्तावली**

ಸ್ವೀಕರಿಸಬೇಕು. 'ಇತಿ' ಯಾವ ಕಾರಣದಿಂದ ಅತಃ ಆದ್ದರಿಂದ ಅಂದರೆ ಪೂರ್ವಾಕ್ಷೇಪರೂಪಸಂಗತಿಯು ಹೊಂದುವುದರಿಂದ ಎಂದು ಅರ್ಥೈಸಿಕೊಳ್ಳಬೇಕು. 'ಜ್ಯೋತಿರುಕ್ತಮ್'' ಇತ್ಯಾದಿ ಯುಕ್ತಿಯಿಂದ ಸೂಚಿತವಾದ ವಿಷಯಾದಿಗಳನ್ನು ''ತಜ್ಜ್ಯೋತಿಃ'' ಇತ್ಯಾದಿವಾಕ್ಯದಿಂದ ವಿವರಿಸಿದ್ದಾರೆ. ಹೀಗೆ ಈ ಜ್ಯೋತಿಯು ಅವಶ್ಯವಾಗಿ ನಿರ್ಣಯಿಸಲ್ಪಡಬೇಕಾದದ್ದು ಎಂದರ್ಥ. 'ಜ್ಯೋತಿಃ'ಶಬ್ದಕ್ಕೆ ಕತ್ತಲೆಯ ವಿರೋಧಿಯಾದದ್ದು ಎಂಬ ಅರ್ಥದಲ್ಲಿ ಮಾತ್ರ ವೃತ್ತಿ ಇದ್ದರೂ ಇಲ್ಲಿ ಹೃದಯಾಹಿತತ್ವರೂಪವಾದ ಲಿಂಗ ಇರುವುದರಿಂದ 'ತ್ವಾಮಗ್ನೇ ತಮಸಿ' ಎಂಬುದಾಗಿ ಇದು ಅಗ್ನಿಶ್ರುತಿಯೂ ಆಗಿರುವುದರಿಂದ ಬೇರೆ ವಸ್ತುವಿಗೆ ಸಂಶಯದಲ್ಲಿ ವಿಷಯತ್ವವು ಬರಲಾರದು ಎಂಬ ಅಭಿಪ್ರಾಯದಿಂದ ಭಾಷ್ಯೋಕ್ತಿಯನ್ನು ಅನುಸರಿಸಿ ''ಅಗ್ನಿಃ'' ಎಂಬುದಾಗಿ ಹೇಳಿದ್ದಾರೆ.

''ಪ್ರಸಿದ್ಧಿಶ್ಚ'' ಎಂಬಲ್ಲಿ ಪ್ರಾಬಲ್ಯಾದಿಗಳ ಅವಿವೇಕದಿಂದ ಇಲ್ಲಿ ಪ್ರಸಿದ್ಧಿಯನ್ನು ಹೇಳಲಾಗಿದೆ ಎಂದು ತಿಳಿಯಬೇಕು. ಒಂದು ಕಡೆ ನಿರವಕಾಶತ್ವ ಇರುವ ಪ್ರಯುಕ್ತ ಪ್ರಾಬಲ್ಯವನ್ನೂ, ಇನ್ನೊಂದು ಕಡೆ ಇದು ಶ್ರುತಿಯಾಗಿರುವುದರಿಂದ ಪ್ರಾಬಲ್ಯವನ್ನೂ ಇಲ್ಲಿ ಹೇಳಲಾಗಿದೆ.

**भावदीपः – पूर्वपक्षादिपरत्वेनापि भाष्यं व्याचष्टे – तत्रेति ॥ प्रमाणाश्रय-पूर्वपक्षमाह – अग्निसूक्तत्वादिति ॥ प्रसिद्धेश्चेत्येतद्धेतुं व्यावर्त्य शङ्कापूर्वमाह न च वाच्यमिति ॥ प्रकरणात् सूक्तरूपात् – बाध इति ॥** यथा द्युभ्वादिनयपूर्वपक्षे जायमानत्वलिङ्गेन 'द्वे विद्ये वेदितव्ये' इति ब्रह्मप्रकरणस्य बाधः, तद्वदिति भावः । **अग्नावेवेति ॥** न तु विष्णावित्यर्थः । तमोविरोधिमात्रे रूढेः सत्वेऽपि प्रकृताशयेनैवमुक्तिः । 'यावता' इति निपातो यस्मादित्यर्थे । तथा च श्रुत्यैव पूर्वपक्षे प्रकरणोक्तिरभ्युचयत्वेन । अत एव भाष्ये अग्निसूक्तत्वाचेति चशब्दो भिन्नक्रम इति सूचितम् ।

''ತತ್ರ'' ಇತ್ಯಾದಿ ವಾಕ್ಯದಿಂದ ಭಾಷ್ಯವನ್ನು ಪೂರ್ವಪಕ್ಷಾದಿ ಪರವಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಪ್ರಮಾಣವನ್ನು ಆಶ್ರಯಿಸಿಕೊಂಡು ಪೂರ್ವಪಕ್ಷವನ್ನು ''ಅಗ್ನಿಸೂಕ್ತತ್ವಾತ್'' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ''ಪ್ರಸಿದ್ಧೇಶ್ಚ'' ಎಂಬ ಹೇತುವನ್ನು ಪ್ರತ್ಯೇಕವಾಗಿ ಇರಿಸಿಕೊಂಡು ಶಂಕೆಗಿಂತ ಮೊದಲ ಅಭಿಪ್ರಾಯವನ್ನು ''ನಚ ವಾಚ್ಯಮ್'' ಇತ್ಯಾದಿವಾಕ್ಯದಿಂದ ವಿವರಿಸಿದ್ದಾರೆ. ''ಪ್ರಕರಣಾತ್'' ಎಂಬ ಪದಕ್ಕೆ 'ಸೂಕ್ತರೂಪವಾದ ಪ್ರಕರಣವಾಗಿರುವುದರಿಂದ' ಎಂದು ಅರ್ಥ.

ಯಾವ ರೀತಿಯಾಗಿ ದ್ಯುಭ್ವಾದ್ಯಧಿಕರಣದ ಪೂರ್ವಪಕ್ಷದಲ್ಲಿ ಜಾಯಮಾನತ್ವಲಿಂಗದಿಂದ 'ದ್ವೇ ವಿದ್ಯೇ ವೇದಿತವ್ಯೇ' ಎಂಬ ಬ್ರಹ್ಮಪ್ರಕರಣಕ್ಕೆ ಬಾಧವು ಹೇಳಲ್ಪಟ್ಟಿದೆಯೋ ಅದರಂತೆ ಇಲ್ಲಿಯೂ ಸಹ ಗುಹಾನಿಹಿತತ್ವಲಿಂಗದಿಂದ ಅಗ್ನಿಪ್ರಕರಣಕ್ಕೆ ಬಾಧವನ್ನು ಹೇಳಬಹುದಲ್ಲವೇ? ಎಂದು ಅಭಿಪ್ರಾಯ. ''ಅಗ್ನಾವೇವ'' ಎಂಬಲ್ಲಿರುವ ಏವಕಾರದಿಂದ ವಿಷ್ಣುವಿನಲ್ಲಿರುವ ರೂಢಿಯನ್ನು ಅಲ್ಲಗಳೆಯಲಾಗಿದೆ. ವಸ್ತುತಃ ತಮೋವಿರೋಧಿ ಎಂಬರ್ಥದಲ್ಲಿ ರೂಢಿಯನ್ನು ಹೇಳಬಹುದು. ಆದರೆ ಪ್ರಕೃತಕ್ಕೆ ಉಪ-

ಯೋಗವಾಗುವಂತೆ ಅಗ್ನಿ ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. 'ಯಾವತಾ' ಎಂಬ ನಿಪಾತಕ್ಕೆ 'ಯಸ್ಮಾತ್' (ಯಾವಕಾರಣದಿಂದ) ಎಂದರ್ಥ. ಆದ್ದರಿಂದ ಶ್ರುತಿಯಿಂದಲೇ ಪೂರ್ವಪಕ್ಷಮಾಡಲು ಬರುವಾಗ ಹೆಚ್ಚುಗಾರಿಕೆಗೋಸ್ಕರವಷ್ಟೇ ಪ್ರಕರಣವನ್ನು ತೆಗೆದುಕೊಂಡಿದ್ದಾರೆ. ಆದ್ದರಿಂದಲೇ ಭಾಷ್ಯದಲ್ಲಿ 'ಅಗ್ನಿಸೂಕ್ತತ್ವಾಚ್ಚ' ಎಂಬಲ್ಲಿರುವ ಚಶಬ್ದವು ಭಿನ್ನಕ್ರಮದಲ್ಲಿದೆ ಎಂದು ಸೂಚಿಸಿದಂತಾಯಿತು.

भावदीपः – ननु ज्योतिःश्रुतिरग्निदेवतापरा चेदन्तर्नयन्यायेन विष्णुपरा जडपरा चेदाकाशनयन्यायेन विष्णुपरा सेत्स्यतीति भावेन शङ्कते – **श्रुतिरिति** ॥ तथा च श्रुतेः सावकाशत्वे तद्युक्तस्यापि प्रकरणस्य सावकाशतया निरवकाशलिङ्गेन तयोर्बाधः स्यादिति भावः । **सावकाशेति** ॥ सावकाशयोः श्रुतिप्रकरणयोरित्यर्थः । यद्वा उक्तदिशा श्रुतेः सावकाशत्वेऽपि इदमग्निसूक्तं न विष्णुसूक्तम् इत्यध्यापकप्रसिद्ध्य-न्यथानुपपत्त्या सूक्तं निरवकाशम् । तथा च सावकाशत्वं श्रुतेरेव विशेषणम् । अत एव कर्णादिविदूरत्वमप्यनेकवैभवातिशयेनाग्नावेव कथञ्चिद्योज्यम् । श्रुतिप्रकरणयो-र्बलवत्वादिति भावेन भाष्यमुपसंहरति – **अग्निरेवेति** ॥ 'यो वेद' इति भाष्यं फलपरमिति भावेन तत् तात्पर्योक्तिः – **अनन्दमयत्वं चेति** ॥

ಜ್ಯೋತಿಶ್ರುತಿಯು ಅಗ್ನಿದೇವತೆಯನ್ನು ಪ್ರತಿಪಾದಿಸುವುದಾದರೆ ಅಂತರಧಿಕರಣದ ನ್ಯಾಯದಂತೆ ವಿಷ್ಣುಪರವಾಗುತ್ತದೆ. ಜ್ಯೋತಿಶ್ರುತಿಯು ಜಡವಾದ ಅಗ್ನಿಯನ್ನು ಪ್ರತಿಪಾದಿಸುವುದಾದರೆ ಆಕಾಶಾಧಿ-ಕರಣದ ನ್ಯಾಯದಿಂದ ವಿಷ್ಣುಪರವಾಗುತ್ತದೆಂಬ ಅಭಿಪ್ರಾಯದಿಂದ "ಶ್ರುತಿ" ಎಂಬುದಾಗಿ ಶಂಕಿಸು-ತ್ತಿದ್ದಾರೆ. ಆದ್ದರಿಂದ ಶ್ರುತಿಯು ಸಾವಕಾಶವಾದರೆ ಶ್ರುತಿಯಿಂದ ಕೂಡಿರುವಂತಹ ಪ್ರಕರಣವೂ ಸಹ ಸಾವಕಾಶವಾಗುತ್ತದೆ. ಆವಾಗ ನಿರವಕಾಶವಾದ ಲಿಂಗದಿಂದ ಶ್ರುತಿ ಹಾಗೂ ಪ್ರಕರಣಗಳಿಗೆ ಬಾಧವನ್ನು ಹೇಳಬಹುದೆಂದು ಅಭಿಪ್ರಾಯ. 'ಸಾವಕಾಶಯೋಃ' ಎಂದರೆ ಸಾವಕಾಶವಾದ ಶ್ರುತಿ ಹಾಗೂ ಪ್ರಕರಣಗಳು ಎಂದರ್ಥ.

ಅಥವಾ ಹಿಂದೆ ಹೇಳಿದ ಪ್ರಕಾರ ಶ್ರುತಿಯು ಸಾವಕಾಶವಾದರೂ ಸಹ 'ಇದು ಅಗ್ನಿಸೂಕ್ತ ಹೊರತು ವಿಷ್ಣುಸೂಕ್ತವಲ್ಲ' ಎಂಬ ಅಧ್ಯಾಪಕಪ್ರಸಿದ್ಧಿಯ ಬಲದಿಂದ ಪ್ರಕರಣವು ನಿರವಕಾಶವಾಗುತ್ತದೆ. ಈ ಪಕ್ಷದಲ್ಲಿ ಸಾವಕಾಶತ್ವವು ಕೇವಲ ಶ್ರುತಿಯಲ್ಲಷ್ಟೇ ವಿಶೇಷಣವಾಗುತ್ತದೆ. ಆದ್ದರಿಂದಲೇ 'ಕರ್ಣಾದಿವಿದೂರತ್ವ'ವನ್ನೂ ಸಹ ಅನೇಕವೈಭೋಗಗಳಿರುವಂತಹ ಅಗ್ನಿಯಲ್ಲಿಯೇ ಹೇಗಾದರೂ ಮಾಡಿ ಕೂಡಿಸಬೇಕು. ಏಕೆಂದರೆ ಶ್ರುತಿ ಹಾಗೂ ಪ್ರಕರಣಗಳು ಬಲಿಷ್ಠವಾಗಿರುವುದರಿಂದ. ಈ ಅಭಿಪ್ರಾಯದಿಂದ 'ಅಗ್ನಿರೇವ'' ಎಂಬುದಾಗಿ ಭಾಷ್ಯವನ್ನು ಉಪಸಂಹಾರಮಾಡುತ್ತಿದ್ದಾರೆ.

'ಯೋ ವೇದ' ಎಂಬ ಭಾಷ್ಯವು ಈ ಅಧಿಕರಣದ ಫಲವನ್ನು ಸೂಚಿಸುತ್ತಿದೆಯೆಂಬಭಿಪ್ರಾಯದಿಂದ "ಆನಂದಮಯತ್ವಂ ಚ" ಎಂಬುದಾಗಿ ಅದರ ತಾತ್ಪರ್ಯವನ್ನು ಹೇಳುತ್ತಿದ್ದಾರೆ.

ಜ್ಯೋತಿರಧಿಕರಣ (೧।೧।೧೦)

## ಕರ್ಣಾದಿವಿದೂರತ್ವಲಿಂಗದಿಂದ ವಿಷ್ಣುವೇ ಜ್ಯೋತಿಯು

**भाष्यम् – अत आह -**

**सू – ॐ ॥ ज्योतिश्चरणाभिधानात् ॥ ॐ ॥ २४ ॥**

**विष्णुरेव ज्योतिः । कर्णादीनां विचरणाभिधानात् ।**

ಇದಕ್ಕೆ ಉತ್ತರರೂಪವಾಗಿ ಸೂತ್ರವು ಹೊರಟಿದೆ. ಆನಂದಮಯಪ್ರಕರಣದಲ್ಲಿ ಹೇಳಲ್ಪಟ್ಟ ಮತ್ತು ಅಗ್ನಿಸೂಕ್ತದಲ್ಲಿ ಹೇಳಲ್ಪಟ್ಟ ಜ್ಯೋತಿಯು ವಿಷ್ಣುವೇ ಆಗಿದ್ದಾನೆ. ಏಕೆಂದರೆ, ಕಿವಿಮೊದಲಾದ ಇಂದ್ರಿಯಗಳಿಗೆ ಅಗೋಚರನೆಂದು ಹೇಳಿರುವುದರಿಂದ(*).

ಪ್ರತಿಪದಾರ್ಥ -- ಅತ ಆಹ = ಇದಕ್ಕೆ ಉತ್ತರಿಸುವುದಕ್ಕಾಗಿಯೇ ಸೂತ್ರಕಾರರು ಹೇಳುತ್ತಿದ್ದಾರೆ. ಸಿದ್ಧಾಂತ ಹೀಗಿದೆ -- ಜ್ಯೋತಿಃ = ಅಗ್ನಿಪ್ರಕರಣದಲ್ಲಿ ಹೇಳಲ್ಪಟ್ಟ ಜ್ಯೋತಿಯು ವಿಷ್ಣುರೇವ = ವಿಷ್ಣುವೇ ಆಗಿದ್ದಾನೆ. ಕರ್ಣಾದೀನಾಂ = ಕಿವಿ ಮೊದಲಾದ ಇಂದ್ರಿಯಗಳಿಗೆ, ವಿಚರಣಾಭಿಧಾನಾತ್ = ಅತ್ಯಂತ ದೂರನಾಗಿದ್ದಾನೆಂದು ಹೇಳಿದ್ದರಿಂದ.

**स हि 'परो मात्रया तन्वा वृधान' (ऋ. ७/९९/१)**
**इत्यादिना कर्णादिविदूरः ॥ १० ॥**

**॥ इति ज्योतिरधिकरणम् ॥१०॥**

ವಿಷ್ಣುವೇ ಜ್ಯೋತಿಯು ಏಕೆಂದರೆ, ಕಿವಿ ಮೊದಲಾದ ಯಾವುದೇ ಇಂದ್ರಿಯಗಳಿಗೆ ಗೋಚರನಲ್ಲವೆಂದು ಹೇಳಿದ್ದರಿಂದ. ಹಿಂದೆ ಹೇಳಲ್ಪಟ್ಟ 'ಪರೋ ಮಾತ್ರಯಾ' ಶ್ರುತಿ ಮೊದಲಾದ ಪ್ರಮಾಣಗಳಿಂದ ಸಕಲ ಇಂದ್ರಿಯಗಳಿಗೆ ವಿಷ್ಣುವು ಅಗೋಚರನೆಂದು

---

**भाष्यदीपिका –** सिद्धान्तयत्सूत्रमवतारयति – अत इति ॥ यतः पूर्वपक्षः प्राप्तोऽतः उत्तरं सूत्रमाह भगवान् बादरायण इत्यर्थः । तदेव सूत्रं पठति – ज्योतिरिति ॥ सूत्रे तत्त्वित्यस्यानुवृत्तिं विपरिणामं चाभिप्रेत्य प्रतिज्ञांशं व्याचष्टे – विष्णुरेवेति ॥ 'ज्योतिः' तच्छब्दवाच्यो विष्णुरेव भवेदिति योजना । कुत इत्यतः प्राप्तं 'चरणाभिधानात्' इति हेत्वंशं चरणशब्दस्य विचरणार्थत्वं कर्णादीनामित्यस्याध्याहारं चाभिप्रेत्य व्याचष्टे – कर्णादीनामिति ॥ अत्र वाक्ये कर्णादीनामेतज्ज्योतिः प्रति विरुद्धचरणोक्तेः कर्णादिविदूरत्वलिङ्गश्रवणादित्यर्थः। अत्र कर्णादिविदूरत्वं नाम तैरियदिति परिच्छेदायोग्यवैभवत्वं, न तु कर्णादिविदूरत्वमात्रम् । तद्विषये तस्यासम्भवात् । अभिधानपर्यन्तधावनं हेत्वसिद्धिपरिहारायेति द्रष्टव्यम् ।

ತೀರ್ಮಾನವಾಗಿದೆ. ಆದರೆ ಅಗ್ನಿಯು ಎಲ್ಲ ಇಂದ್ರಿಯಗಳಿಂದಲೂ ವೇದ್ಯನೇ ಆಗಿದ್ದಾನೆ. ಆದ್ದರಿಂದ ಆನಂದಮಯನಾದ ವಿಷ್ಣುವೇ ಜ್ಯೋತಿಃಶಬ್ದವಾಚ್ಯನೆಂದು ಸಿದ್ಧಾಂತ.

ಪ್ರತಿಪದಾರ್ಥ — ಸ ಹಿ = ಆ ವಿಷ್ಣುವೇ, ಪರೋ ಮಾತ್ರಯಾ ತನ್ವಾ ವೃಧಾನ ಇತ್ಯಾದಿನಾ = 'ಪರೋ ಮಾತ್ರಯಾ' ಎಂಬಿತ್ಯಾದಿ ಶ್ರುತಿ ಮೊದಲಾದ ಪ್ರಮಾಣಗಳಿಂದ, ಕರ್ಣಾದಿವಿದೂರಃ = ಸಕಲೇಂದ್ರಿಯಗಳಿಗೆ ಗೋಚರನಾಗಲಾರನೆಂದು ಹೇಳಲ್ಪಟ್ಟಿದ್ದಾನೆ(*).

**तत्वप्रकाशिका – सिद्धान्तयत्सूत्रमवतारयति अत इति ॥ यस्मादिति प्राप्तमत आह सूत्रकार इत्यर्थः । सूत्रं व्याचष्टे – विष्णुरेवेति ॥ विष्णुरेवेदं ज्योतिर्भवेत् । कर्णादीनामेतज्ज्योतिर्विरुद्धाचरणाभिधानात् । कर्णादिविदूरत्वलिङ्गात् इत्यर्थः ।**

**कर्णादिविदूरत्वाभिधानेऽपि कुतो विष्णुरिदं ज्योतिरित्यत आह – स हीति ॥ मीयन्ते विषया अनेनेति मात्रा इन्द्रियगणस्ततस्त्वं परोसीत्यर्थः । न च प्रकरणविरोधः । लिङ्गेन प्रकरणबाधोपपत्तेः ।**

---

**भाष्यदीपिका** – नन्वस्तु ज्योतिषः कर्णादिविदूरत्वोक्तिः, तावता तस्य विष्णुत्वं कुत इत्यतः कर्णादिविदूरत्वस्य विष्ण्वेकलिङ्गत्वे श्रुतिमुदाहरन् तत् प्रतिजानीते - स हीति ॥ एवेत्यनुषज्यते । आदिशब्देन 'न ते विष्णो' इत्यादिकं गृह्यते । तथा च 'हि' यस्मात् 'सः' विष्णुरेव 'परो मात्रया' इत्यादिवाक्येन कर्णादिविदूर इति प्रमितः तस्मान्नाप्रयोजकता, न वा हेतुविशेषणासिद्धिरित्यध्याहारेण योजना । अनेन 'ज्योतिः' तच्छब्दवाच्यं ब्रह्मैव । कुतः? अत्र कर्णादीनामेतज्ज्योतिः प्रति साकल्येन तदविषयीकरणरूपविरुद्ध 'चरणाभिधानात्' कर्णादिविदूरत्वलिङ्गश्रवणाद् इत्यावृत्त्यध्याहाराभ्यां सूत्रार्थ उक्तो भवति । मापयति ज्ञापयति विषयानिति वा मीयन्ते विषया अनेनेति वा मात्रा इन्द्रियगणः तया ततस्त्वं 'परो' दूरोऽसीति हे विष्णो ! अन्यमहिम्नः परमन्तं सीमानं ते महिमानं कोऽपि श्रोत्रादिना नाऽपेति च प्रकृतानुगुण्येन श्रुतिर्व्याख्येया ।
अत्र तत्त्वप्रदीपसन्न्यायरत्नावलीकारयोः ज्योतिरित्यादिचतुस्सूत्री एकमेवान्तर्भेदाधिकरणमित्यभिप्रेतम् । अग्निसूक्तच्छान्दोग्यगतविषयवाक्यभेदादनयोर्भेदः । टीकाकृतस्तु ज्योतिस्सूत्रमेकमधिकरणं 'छन्दः' इत्यादित्रिसूत्री अधिकरणान्तरमिति ज्ञातव्यम् ॥१०॥
॥इति ज्योतिरधिकरणम् ॥१०॥

**न च श्रुतिविरोधः । श्रुतेर्विष्णावपि सावकाशत्वात् । महायोगविद्वद्रूढिसद्भावेन मुख्यत्त्वाच्च । निरवकाशलिङ्गेन सावकाशश्रुत्यादेर्बाधोपपत्तेः । अतो 'विष्णुरेवेदं ज्योतिरिति तस्यैव गुहानिहितत्वमानन्दमयत्वं च' इति सिद्धम् ॥२४॥**

**॥ इति श्रीमज्जयतीर्थभिक्षुविरचितायां तत्वप्रकाशिकायां ज्योतिरधिरकणम् ॥**

ಈ ಪೂರ್ವಪಕ್ಷವನ್ನು ನಿರಾಕರಿಸಲು ಸಿದ್ಧಾಂತಸ್ಥಾಪಕವಾದ ಸೂತ್ರವು ಹೊರಟಿದೆ. ಆ ಸೂತ್ರಕ್ಕೆ ಆಚಾರ್ಯರು ''ಅತಃ'' ಎಂಬುದರಿಂದ ಅವತಾರಿಕೆ ನೀಡಿದ್ದಾರೆ. ಯಾವ ಅರ್ಥದಲ್ಲಿ ಈ ಪೂರ್ವಪಕ್ಷವು ಬಂದಿದೆಯೋ ಅದೇ ಅರ್ಥದಲ್ಲಿ ಸೂತ್ರಕಾರರು ಹೇಳಿದ್ದಾರೆ. ಸೂತ್ರದ ವ್ಯಾಖ್ಯಾನವನ್ನು ''ವಿಷ್ಣುರೇವ'' ಎಂಬ ವಾಕ್ಯದಿಂದ ಆಚಾರ್ಯರು ಮಾಡಿದ್ದಾರೆ.

''ಜ್ಯೋತಿಃಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. ಕಿವಿ ಮೊದಲಾದ ಇಂದ್ರಿಯಗಳಿಗೆ ವಿರುದ್ಧವಾದ ಗಮನವನ್ನು ಹೇಳಿದ್ದರಿಂದಲೇ ಜ್ಯೋತಿಯು ವಿಷ್ಣುವೆಂದು ನಿಶ್ಚಯವಾಗುತ್ತದೆ'' ಎಂದು ಸೂತ್ರದ ಅಭಿಪ್ರಾಯ.

ಕಿವಿಮೊದಲಾದ ಇಂದ್ರಿಯಗಳಿಗೆ ದೂರವಾದ ಮಾತ್ರದಿಂದ ಜ್ಯೋತಿಯು ವಿಷ್ಣುವೇಕೆ ಆಗಬೇಕು? ಎಂಬ ಪ್ರಶ್ನೆಗೆ ''ಸ ಹಿ'' ಎಂಬುದರಿಂದ ಉತ್ತರಿಸಿದ್ದಾರೆ. ಯಾವುದರ ಸಂಪರ್ಕದಿಂದ ವಿಷಯಗಳು ತಿಳಿಯುತ್ತವೋ ಅದನ್ನು ಮಾತ್ರಾ ಎನ್ನುತ್ತಾರೆ. ಅಂದರೆ ಸಕಲ ಇಂದ್ರಿಯಗಳು. ಈ ಇಂದ್ರಿಯಗಳಿಂದ ನೀನು ಶ್ರೇಷ್ಠನಾಗಿದ್ದೀಯೆ. ಜ್ಯೋತಿಃಶಬ್ದದಿಂದ ವಿಷ್ಣುವಾಚ್ಯನಾದರೆ ಅಗ್ನಿಪ್ರಕರಣದ ವಿರೋಧ ಬರುತ್ತದೆಂದು ಶಂಕಿಸಬಾರದು. ಏಕೆಂದರೆ ಲಿಂಗದಿಂದ ಪ್ರಕರಣವು ಬಾಧಿತವಾಗುತ್ತದೆ.

ಹಾಗಾದರೆ ಜ್ಯೋತಿಃಶ್ರುತಿಯ ವಿರೋಧವು ಬರುತ್ತದಲ್ಲವೇ? ಎಂಬ ಪ್ರಶ್ನೆಗೂ ಅವಕಾಶವಿಲ್ಲ. ಜ್ಯೋತಿಃಶ್ರುತಿಯು ವಿಷ್ಣುವಿನಲ್ಲಿ ಸಾವಕಾಶವಾಗಿದೆ. ಅಷ್ಟೇ ಅಲ್ಲದೇ ಮಹಾಯೋಗ, ವಿದ್ವದ್ರೂಢಿಗಳು ವಿಷ್ಣುವಿನಲ್ಲಿರುವುದರಿಂದ ಜ್ಯೋತಿಃಶಬ್ದದ ಮುಖ್ಯಾರ್ಥವು ವಿಷ್ಣುವೇ ಆಗಬೇಕು. ಇಂದ್ರಿಯವಿದೂರತ್ವಾದಿ ನಿರವಕಾಶಲಿಂಗದಿಂದ ಸಾವಕಾಶವಾದ ಜ್ಯೋತಿಃಶ್ರುತಿಗೆ ಬಾಧವು ಬರುತ್ತದೆ.

ಈ ಎಲ್ಲಾ ಕಾರಣಗಳಿಂದ ಶ್ರುತಿಯಲ್ಲಿರುವ ಜ್ಯೋತಿಃಶಬ್ದವು ವಿಷ್ಣುವನ್ನೇ ಪ್ರತಿಪಾದಿಸುತ್ತದೆ. ಅಂತಹ ವಿಷ್ಣುವಿನಲ್ಲಿಯೇ ಗುಹಾನಿಹಿತತ್ವ ಮತ್ತು ಆನಂದಮಯತ್ವಧರ್ಮಗಳು ಬರುತ್ತವೆಂದು ಸಿದ್ಧವಾಯಿತು.

॥ ಇಲ್ಲಿಗೆ ತತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ ಜ್ಯೋತಿರಧಿಕರಣವು ಮುಗಿಯಿತು ॥

**भावदीपः** – 'ज्योतिस्तत्तु' इति सौत्रप्रतिज्ञाभागमभिप्रेत्य भाष्यं व्याचष्टे –

**विष्णुरेवेति** ॥ 'स हि' इत्यग्रेतनभाष्यानुरोधाद्धेतुसाध्ययोः सामानाधिकरण्याय हेतोः पक्षनिष्ठतामाह **कर्णेति** ॥ सूत्रे वीत्युपसर्गस्यानुक्तिकृत्यं चन्द्रिकायां व्यक्तम् । श्रुतौ पतनस्यादित्वेऽपि तस्य 'स्पृहिगृहिपतिदयि' इति निर्दिष्टस्य 'पतगतौ' इत्यस्य चुराद्यदन्ततया स्वार्थिकण्यन्तत्वेन पतनाभिधानादित्युक्तौ कर्णादिविदूरत्वस्य स्पष्टमप्रतीतेश्चरणस्य च ज्योतिःसान्निध्यात् प्रधानमनोन्वितक्रियात्वात् पतनार्थ-स्यात्रप्राप्तेश्च सूत्रादौ (*)चरणेत्युक्तिः ।

जन्मादिसूत्रे 'मात्राया मितेः' इत्यर्थोक्तावपि इहोपयोगितया अर्थान्तरमाह – **मीयन्त इति** ॥ श्रुतिप्रकरणाभ्यां कृतपूर्वपक्षस्य कथं लिङ्गमात्रेणापवादः? इत्यतः **'सन्दिग्धश्रुतिलिङ्गाभ्याम् उक्ताभ्यामसन्दिग्धयोः केवलयोरेव बलवत्वात्'** इति न्यायविवरणमत्राप्याकृष्य विवृण्वन् लिङ्गमुपलक्षणमुपेत्य शङ्कापूर्वं निर्णयमाह – **न चेति** ॥ सन्दिग्धाभ्यां सावकाशाभ्यामित्यर्थात् ।

**प्रकरणबाधेति** ॥ 'अभिव्यक्तेरित्याश्मरथ्यः' इत्यादिवक्ष्यमाणन्यायेनाग्निसूक्त-मित्यादिव्यवहारः, तत्तत् सूक्तप्रतिपाद्यविष्ण्वधिष्ठाननिमित्तक औपचारिकः । इदं न विष्णुसूक्तमिति प्रसिद्धिस्तु विष्ण्वादिशब्दाभावादज्ञानमूलेति । न तस्य निरवकाशत्वमिति भावः ।

---

(*) पतनस्याऽऽदिमत्वेऽप्यमङ्गलत्वात् सूत्रकृता चरणमेव गृहीतमिति भावष्टीकाकारस्य । वस्तुतस्तु कर्णादिनिष्ठज्योतिर्विषयकविचरणहेतूकरणे हेतुसाध्ययोर्वैय्यधिकरणप्रसङ्गात् कर्णादीनां विषयेऽपि 'इदं ज्योतिर्हृदय आहितं यत्' इति यज्ज्योतिषो विचरणं श्रुतावुक्तं तस्याभिधानादिति ज्योतिर्निष्ठमेव विचरणं भाष्यकृतोऽभिमतम् । एवं च सतीदं ज्योतिरित्यत्र क्रियाभावादध्याहारस्य बहिरङ्गत्वात् श्रौतमेव पतत इति पदमावर्तनीयं वा वाच्यं चरतीत्युत्तरपदमाकर्षणीयं वा स्यात् । तत्र च पतत इति द्विवचनान्तपदस्य विभक्तिव्यत्ययेनाऽऽवर्तने गौरवात् समानविभक्तिकं चरतीत्येव पदमाकर्षणीयम् । अतः 'चरणाभिधानात्' इति सूत्रे भाष्ये च चरणपदस्यैव ग्रहणं चोक्तं जायते । .................. चरणाभिधानात् पादाभिधानात् इति केचित् । तदयुक्तम् । तथा सत्यल्पाक्षरत्वेन पादाभिधानादित्येव सूत्रं स्यात् । भूतादिपादव्यपदेशोपपत्तेश्चेवम्' इति सूत्रेण पौनरुक्त्यप्रसङ्गाच्च । – गुर्वर्थदीपिका

**श्रुतेरिति** ॥ अन्तर्नयाद्युक्तन्यायादिति भावः । श्रुतेरग्नौ रूढत्वात् विष्णावमुख्यता इत्यत आह – **महायोगेति** ॥ ज्योतिःपदप्रवृत्तिनिमित्तस्य प्रकाशत्वादिरूपज्योतिष्ट्वस्य विष्णुगतत्वादन्यगतस्यापि 'तमेव भान्तमनुभाति सर्वम्' इत्यादिना तदधीनत्वाच्च महायोगस्य **'तद्देवा ज्योतिषां ज्योतिरायुर्होपासतेऽमृतम्'** इति वाजसनेये । **'नारायणपरो ज्योतिः'** इति तैत्तिरीये, **'विष्णुरेव ज्योतिः'** इत्यादिचतुर्वेदशिखादिश्रुतिषु । **'ज्योतिषामपि तज्ज्योतिस्तमसः परमुच्यते'** इत्यादिस्मृतिषु च प्रयोगबाहुल्येन रूढेरपि सद्भावेनेत्यर्थः । **अत इति** ॥ निरवकाशलिङ्गसद्भावादिति चरणाभिधानादित्यस्यार्थः । 'ज्योतिस्तत्तु' इत्यस्योपसंहारो **'विष्णुरेव'** इत्यादि । अत्रापि पूर्वोत्तरत्रेव च सर्वसूक्तगततत्तच्छब्दोपलक्षितेति बोध्यम् । **'चरणाभिधानात्'** इत्यस्य तत्तत्सूक्तस्थनिरवकाशलिङ्गोपलक्षणत्वात् । **'आनन्दमयत्वं च'** इति फलपरभाष्यतात्पर्योपसंहारः ।

यत् तु अत्र कश्चिदाह – चरणं हि प्रतिसम्बन्धिसापेक्षम् । न चेन्द्रियरूपप्रतिसम्बन्धि सूत्रे निर्दिष्टम् । चरणशब्दस्य पादपरत्वे तु ज्योतिष एव प्रतिसम्बन्धित्वेनान्वयात् न दोष इति छान्दोग्यवाक्यमेव सूत्रानुगुणं न त्वग्निसूक्तगतम् – इति । तन्न । तद्वाक्ये चन्द्रिकायामनेकदोषोद्भावनात् । प्रतिसम्बन्धिनो विषयवाक्ये सन्निहितस्यार्थादन्वयसम्भवे **'कम्पनात्'** इत्यादाविव निर्देशस्यानपेक्षितत्वात् । 'चरणपदस्य पादपरत्वे पादेत्येव वाच्यत्वाच्च' - इति यत्किञ्चिदेतत् ॥२४॥

**॥ इति श्रीराघवेन्द्रयतिकृते भावदीपे ज्योतिरधिकरणम् ॥**

'ತತ್ತು ಸಮನ್ವಯಾತ್' ಎಂಬ ಸೂತ್ರದಿಂದ ತತ್ತು ಎಂಬುದನ್ನು ಅನುವೃತ್ತಿ ಮಾಡಿದಾಗ ವಿಷ್ಣುವೇ ಜ್ಯೋತಿಃಶಬ್ದವಾಚ್ಯನು ಎಂಬುದಾಗಿ ಸೂತ್ರದ ಪ್ರತಿಜ್ಞೆಯಾಗುತ್ತದೆ. ಈ ಅಭಿಪ್ರಾಯದಿಂದ ಭಾಷ್ಯವನ್ನು "ವಿಷ್ಣುರೇವ" ಎಂಬುದಾಗಿ ವ್ಯಾಖ್ಯಾನಿಸುತ್ತಿದ್ದಾರೆ. 'ಸ ಹಿ ಪರೋ ಮಾತ್ರಯಾ' ಎಂಬ ಮುಂದಿನ ಭಾಷ್ಯವನ್ನು ಅನುಸರಿಸಿ ಹೇತು ಮತ್ತು ಸಾಧ್ಯಗಳಿಗೆ ಸಾಮಾನಾಧಿಕರಣ್ಯವನ್ನು(ಏಕಾಧಿಕರಣವೃತ್ತಿತ್ವವನ್ನು) ಸಂಪಾದಿಸುವುದಕ್ಕಾಗಿ ಹೇತುವಿಗೆ ಪಕ್ಷನಿಷ್ಠತ್ವವನ್ನು "ಕರ್ಣ" ಇತ್ಯಾದಿವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ. ಶ್ರುತಿಯಲ್ಲಿರುವ 'ವಿ' ಎಂಬ ಉಪಸರ್ಗವನ್ನು ಸೂತ್ರದಲ್ಲೇಕೆ ಹೇಳಿಲ್ಲ? ಎಂಬ ಪ್ರಶ್ನೆಯು ಸಹಜವಾಗಿಯೇ ಬರುತ್ತದೆ. ಇದರ ವಿಚಾರವನ್ನು ಚಂದ್ರಿಕೆಯಲ್ಲಿ ತಿಳಿಯಬೇಕು.

ಶ್ರುತಿಯಲ್ಲಿ ಪತನವನ್ನು ಹೇಳಿದ್ದಾರೆ. ಆದರೆ ಸೂತ್ರದಲ್ಲಿ ಚರಣವನ್ನು ಮೊದಲು ಹೇಳಿದ್ದಾರೆ. ಈ

ರೀತಿಯಾದ ವ್ಯತ್ಯಾಸಕ್ಕೆ ಕಾರಣವನ್ನು ಹೀಗೆ ತಿಳಿಯಬೇಕು – 'ಸ್ಪೃಹಿಗೃಹಿಪತಿದಯಿ' ಇತ್ಯಾದಿಯಾದ ಪಾಣಿನಿಯ ಸೂತ್ರದಂತೆ 'ಪತಗತೌ' ಎಂಬ ಧಾತುವು ಚುರಾದಿಗಣದಲ್ಲಿ ಸೇರಿದೆ. ಆದ್ದರಿಂದ ಸ್ವಾರ್ಥದಲ್ಲಿ ಬಂದಿರುವ ಣ್ಯಂತಪ್ರತ್ಯಯಾಂತವಾಗಿದೆ. ಒಂದು ವೇಳೆ ಸೂತ್ರದಲ್ಲಿ 'ಪತನಾಭಿಧಾನಾತ್' ಎಂದು ಹೇಳಿದರೆ ಕರ್ಣಾದಿವಿದೂರತ್ವವು ಸ್ಪಷ್ಟವಾಗಿ ತಿಳಿಯುವುದೇ ಇಲ್ಲ. ಆದರೆ ಚರಣಾಭಿಧಾನಾತ್ ಎಂದು ಹೇಳಿದಾಗ ಕರ್ಣಾದಿವಿದೂರತ್ವವು ಸ್ಫುಟವಾಗಿ ತಿಳಿಯುತ್ತದೆ. ಏಕೆಂದರೆ ಚರಣಶಬ್ದದ ಜೊತೆಗೆ ಜ್ಯೋತಿಃಶಬ್ದವು ಕೇಳಿಸುತ್ತಿದೆ. ಪ್ರಧಾನವಾದ ಮನಸ್ಸಿನ ಜೊತೆಗೆ ಅನ್ವಿತವಾದ ಕ್ರಿಯೆಯು ಚರಣಶಬ್ದದಿಂದ ತಿಳಿಯುತ್ತಿರುವುದರಿಂದ ಪತನ ಎಂಬರ್ಥವೂ ಸಹ ಇದರಿಂದ ಸುಲಭವಾಗಿ ತಿಳಿಯುತ್ತದೆ. ಈ ದೃಷ್ಟಿಯಿಂದ ಸೂತ್ರದಲ್ಲಿ ಪತನಶಬ್ದವನ್ನು ಪ್ರಯೋಗಿಸದೆ 'ಚರಣ'ಶಬ್ದವನ್ನು ಪ್ರಯೋಗಿಸಿದ್ದಾರೆ.

ಟೀಕೆಯಲ್ಲಿ 'ಮಾತ್ರಾ' ಎಂಬ ಶಬ್ದಕ್ಕೆ 'ಇಂದ್ರಿಯಸಮೂಹ' ಎಂಬರ್ಥವನ್ನು ಹೇಳಿದ್ದಾರೆ. ಆದರೆ ಜನ್ಮಾದಿಸೂತ್ರದಲ್ಲಿ 'ಪರಿಮಾಣ'ಎಂಬರ್ಥವನ್ನು ಹೇಳಿದ್ದಾರೆ. ಪ್ರಕೃತ ಉಪಯುಕ್ತವಾದ್ದರಿಂದ ಮತ್ತೊಂದು ಅರ್ಥವನ್ನು ಇಲ್ಲಿ ''ಮೀಯಂತೇ'' ಎಂಬ ವಾಕ್ಯದಿಂದ ಹೇಳಿದ್ದಾರೆಂದು ತಿಳಿಯಬೇಕು.

ಶ್ರುತಿ ಹಾಗೂ ಪ್ರಕರಣಗಳಿಂದ ಮಾಡಲ್ಪಟ್ಟ ಪೂರ್ವಪಕ್ಷವನ್ನು ಕೇವಲ ಲಿಂಗದಿಂದ ಹೇಗೆ ನಿರಾಕರಿಸುತ್ತೀರಿ? ಎಂದರೆ, ಶ್ರುತಿ ಹಾಗೂ ಪ್ರಕರಣಗಳು ಸಂದಿಗ್ಧವಾಗಿವೆ. ಲಿಂಗವು ಅಸಂದಿಗ್ಧವಾಗಿದೆ. ಆದ್ದರಿಂದ ಅಸಂದಿಗ್ಧವಾದ ಲಿಂಗದಿಂದ ಸಂದಿಗ್ಧವಾದ ಶ್ರುತಿ ಪ್ರಕರಣಗಳು ಬಾಧಿತವಾಗಬಹುದು. ಈ ವಿಷಯದಲ್ಲಿ 'ಸಂದಿಗ್ಧಶ್ರುತಿಲಿಂಗಾಭ್ಯಾಮ್ ಉಕ್ತಾಭ್ಯಾಮಸಂದಿಗ್ಧಯೋಃ ಕೇವಲಯೋರೇವ ಬಲವತ್ವಾತ್' ಎಂಬುದಾಗಿ ನ್ಯಾಯವಿವರಣದ ಸಮ್ಮತಿ ಇದೆ. ಇದನ್ನು ಇಲ್ಲಿಯೂ ಅನುವೃತ್ತಿ ಮಾಡಿಕೊಂಡು ವಿವರಿಸುತ್ತಾ ಲಿಂಗವನ್ನು ಉಪಲಕ್ಷಣವೆಂದು ವಿವಕ್ಷಿಸಿ ಶಂಕೆಯನ್ನು ಮಾಡುತ್ತಾ ''ನಚ'' ಇತ್ಯಾದಿ-ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಸಂದಿಗ್ಧಾಭ್ಯಾಂ ಎಂಬ ಪದಕ್ಕೆ ಸಾವಕಾಶಗಳಾದ ಎಂಬ ಅರ್ಥವು ಅರ್ಥಾತ್ ತಿಳಿಯುತ್ತದೆ.

'ಅಭಿವ್ಯಕ್ತೇರಿತ್ಯಾಶ್ಮರಥ್ಯಃ' ಎಂಬ ಮುಂದೆ ಹೇಳುವ ನ್ಯಾಯವನ್ನು ಅನುಸರಿಸಿ 'ಅಗ್ನಿಸೂಕ್ತಂ' ಎಂಬ ವ್ಯವಹಾರವನ್ನು ಮಾಡಿದ್ದಾರೆ. ವಸ್ತುತಃ ಆಯಾಸೂಕ್ತಗಳಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. ಆದರೆ ಅದನ್ನು ಇಲ್ಲಿ ಔಪಚಾರಿಕವಾಗಿ ವಿವಕ್ಷಿಸಬೇಕು. ಎಲ್ಲಾ ಸೂಕ್ತಗಳಿಂದ ವಿಷ್ಣುವೇ ಪ್ರತಿಪಾದ್ಯನಾದರೆ 'ಇದಂ ನ ವಿಷ್ಣುಸೂಕ್ತಮ್' ಎಂಬ ಪ್ರಸಿದ್ಧಿಯನ್ನು ಹೇಗೆ ಕೂಡಿಸುತ್ತೀರಿ? ಎಂದರೆ ವಿಷ್ಣ್ವಾದಿ ಶಬ್ದಗಳಿಲ್ಲದ್ದರಿಂದ ಅಜ್ಞಾನಮೂಲಕವೆಂದು ತಿಳಿಯಬೇಕು. ಆದ್ದರಿಂದ ಅಗ್ನಿಸೂಕ್ತಕ್ಕೆ ನಿರವಕಾಶತ್ವವು ಇರುವುದಿಲ್ಲವೆಂದು ತಿಳಿಯಬೇಕು.

ಟೀಕೆಯಲ್ಲಿ 'ಶ್ರುತೇಃ ವಿಷ್ಣಾವಪಿ ಸಾವಕಾಶತ್ವಾತ್'' ಎಂದಿದ್ದಾರೆ. ಅಂತರಧಿಕರಣದಲ್ಲಿ ಹೇಳಲ್ಪಟ್ಟ ನ್ಯಾಯದಂತೆ ಈ ಸಾವಕಾಶತ್ವವನ್ನು ತಿಳಿಯಬೇಕು. ಶ್ರುತಿಯು ಅಗ್ನಿಯಲ್ಲಿ ರೂಢವಾದ್ದರಿಂದ ವಿಷ್ಣುವಿನಲ್ಲಿ ಮುಖ್ಯಾರ್ಥವನ್ನು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ ''ಮಹಾಯೋಗ'' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

ಪ್ರಕಾಶತ್ವವು ಜ್ಯೋತಿಃಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ಈ ಪ್ರಕಾಶತ್ವವೇ ಜ್ಯೋತಿಷ್ಟ್ವ ಎನಿಸಿದೆ. ಇದು ವಿಷ್ಣುವಿನಲ್ಲಿರುವುದರಿಂದ ಬೇರೆಯವರಲ್ಲಿರುವ ಜ್ಯೋತಿಷ್ಟ್ವವು ವಿಷ್ಣುವಿನ ಅಧೀನವಾಗಿದೆ ಎಂದು 'ತಮೇವ ಭಾಂತಮನುಭಾತಿ ಸರ್ವಮ್' ಇತ್ಯಾದಿ ಪ್ರಮಾಣಗಳು ಹೇಳುತ್ತಿವೆ. 'ತದ್ದೇವಾ ಜ್ಯೋತಿಷಾಂ ಜ್ಯೋತಿಃ, ಆಯುರ್ಹೋಪಾಸತೇ ಅಮೃತಮ್' ಎಂಬ ಬೃಹದಾರಣ್ಯಕದ ಮಾತಿನಂತೆ ಮಹಾಯೋಗವೃತ್ತಿಯು ವಿಷ್ಣುವಿನಲ್ಲೇ ಇರುತ್ತದೆ. ಮತ್ತು 'ನಾರಾಯಣ ಪರೋ ಜ್ಯೋತಿಃ' ಎಂದು ತೈತ್ತಿರೀಯದಲ್ಲಿ, 'ವಿಷ್ಣುರೇವ ಜ್ಯೋತಿಃ' ಎಂದು ಚತುರ್ವೇದಶಿಖಾದಿ ಶ್ರುತಿಗಳಲ್ಲಿ 'ಜ್ಯೋತಿಷಾಮಪಿ ಜ್ಯೋತಿಃ ತಮಸಃ ಪರಮುಚ್ಯತೇ' ಇತ್ಯಾದಿ ಸ್ಮೃತಿಗಳಲ್ಲಿ ಜ್ಯೋತಿಃಶಬ್ದದ ಪ್ರಯೋಗಬಾಹುಲ್ಯವು ವಿಷ್ಣುವಿನಲ್ಲಿರುವುದರಿಂದ ವಿಷ್ಣುವಿನಲ್ಲಿ ರೂಢಿಯು ಸಹ ಹೇಳಿದಂತಾಗುತ್ತದೆ.

ಟೀಕೆಯಲ್ಲಿರುವ 'ಅತಃ' ಎಂಬ ಪದಕ್ಕೆ 'ನಿರವಕಾಶಲಿಂಗಸದ್ಭಾವಾತ್' ಎಂದರ್ಥ. ಅಂದರೆ 'ಚರಣಾಭಿಧಾನಾತ್' ಎಂದರ್ಥ. 'ಜ್ಯೋತಿಃ ತತ್ತು' ಎಂಬುದರ ಉಪಸಂಹಾರವನ್ನು ''ವಿಷ್ಣುರೇವ'' ಎಂಬುದಾಗಿ ಮಾಡುತ್ತಿದ್ದಾರೆ. ಈ ಅಧಿಕರಣದಲ್ಲಿಯೂ ಸಹ ಹಿಂದಿನ ಮುಂದಿನ ಅಧಿಕರಣಗಳಂತೆ ಸಕಲ ಸೂಕ್ತಗಳಲ್ಲಿರುವ ಆಯಾ ಶಬ್ದಗಳನ್ನು ಉಪಲಕ್ಷಣಯಾ ಸ್ವೀಕರಿಸಬೇಕೆಂದು ತಿಳಿಯಬೇಕು. 'ಚರಣಾಭಿ- ಧಾನಾತ್' ಎಂಬುದರಿಂದ ಆಯಾ ಸೂಕ್ತಗಳಲ್ಲಿರುವ ನಿರವಕಾಶಲಿಂಗಗಳನ್ನು ಉಪಲಕ್ಷಣಯಾ ಸ್ವೀಕರಿಸಬೇಕು. 'ಆನಂದಮಯತ್ವಮ್' ಎಂಬುದು ಫಲಪ್ರತಿಪಾದಕವಾದ ಭಾಷ್ಯದ ತಾತ್ಪರ್ಯವನ್ನು ಉಪಸಂಹಾರ ಮಾಡುತ್ತಿದೆ.

ಕೆಲವರು ಹೀಗೆನ್ನುತ್ತಾರೆ -- 'ಚರಣವು ಪ್ರತಿಸಂಬಂಧಿಯನ್ನು ಅಪೇಕ್ಷಿಸುತ್ತದೆ. ಆ ಪ್ರತಿಸಂಬಂಧಿಯನ್ನು ಇಂದ್ರಿಯಗಳೆಂದು ಸೂತ್ರದಲ್ಲಿ ನಿರ್ದೇಶಿಸಿಲ್ಲ. ಒಂದು ವೇಳೆ ಚರಣಶಬ್ದಕ್ಕೆ ಪಾದವೆಂಬರ್ಥವನ್ನು ವಿವಕ್ಷಿಸಿದರೆ ಜ್ಯೋತಿಯ ಪಾದವೆಂದೇ ಅರ್ಥವಾಗುತ್ತದೆ. ಆದ್ದರಿಂದ ಚರಣಕ್ಕೆ ಪ್ರತಿಸಂಬಂಧಿಯಾದದ್ದು ಜ್ಯೋತಿಯೇ ಆಗಿದೆ. ಹಾಗಾಗಿ ಛಾಂದೋಗ್ಯದಲ್ಲಿರುವ ವಾಕ್ಯವೇ ಸೂತ್ರಕ್ಕನುಗುಣವಾಗಿದೆ ಹೊರತು ಅಗ್ನಿಸೂಕ್ತದಲ್ಲಿರುವ ವಾಕ್ಯವು ಸೂತ್ರಕ್ಕೆ ಅನುಗುಣವಾಗಿಲ್ಲ.

ಇವರ ವಿಚಾರ ಸರಿಯಿಲ್ಲ. ಏಕೆಂದರೆ ಛಾಂದೋಗ್ಯದಲ್ಲಿರುವ ವಾಕ್ಯದಲ್ಲಿ ಅನೇಕ ಸಮಸ್ಯೆಗಳಿವೆ ಎಂಬುದನ್ನು ಚಂದ್ರಿಕೆಯಲ್ಲಿ ತೋರಿಸಲಾಗಿದೆ.

ವಿಷಯವಾಕ್ಯದಲ್ಲಿ ಪ್ರತಿಸಂಬಂಧಿಯು ಕಾಣಿಸದಿದ್ದರೂ ಸನ್ನಿಹಿತಕ್ಕೆ ಅರ್ಥಾತ್ ಅನ್ವಯಮಾಡಲು ಬರುತ್ತದೆ. 'ಕಂಪನಾತ್' ಎಂಬ ಸೂತ್ರದಲ್ಲಿ ಈ ಸಮಸ್ಯೆಯನ್ನು ಪರಿಹರಿಸಿದ್ದಾರೆ. ಅಷ್ಟೇ ಅಲ್ಲದೆ ಚರಣಪದಕ್ಕೆ ಪಾದವೆಂಬರ್ಥವನ್ನು ವಿವಕ್ಷಿಸಿದರೆ ಸೂತ್ರದಲ್ಲಿ ಪಾದಶಬ್ದವನ್ನು ಬಿಟ್ಟು ಚರಣಪದವನ್ನು ಹೇಳಲು ಅರ್ಥವೇ ಇಲ್ಲ. ಆದ್ದರಿಂದ ಇವರ ವಿಚಾರವು ಧೂಳೀಪಟವಾಯಿತು.

ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಜ್ಯೋತಿರಧಿಕರಣವು ಮುಗಿಯಿತು.

**वाक्यार्थमञ्जरी** – ननु गुहानिहितत्वं मन्त्रवर्णे श्रूयते, नत्वानन्दमयप्रकरणे । अतः कथं तदानन्दमयनिष्ठतयोच्यते? इत्यतः प्रागुक्तं स्मारयति – **मन्त्रवर्णेति** ॥ पततः

चरतः वोदमित्यत्र कम्पार्थोऽत्यन्तमिति । दूर इत्यस्यार्थः – **अतीवेति** ॥ आङोऽर्थः – **व्याप्तेति** ॥ 'दूर आधि' इत्यस्यैकपदत्वेऽपि दुःखं अदर्शनाद्दूर इत्येतत् पृथक्कृत्यास्य पूर्वत्रान्वयकरणमुपपन्नम् । नुशब्दार्थः – **इदानीमिति** ॥ प्रकरणमात्रस्य लिङ्गतो दौर्बल्येऽपि श्रुतिसहितस्य प्राबल्यं सम्भवतीत्याशयेनाह – **ज्योतिः श्रुते- रिति** ॥ **यावता** येन प्रकारेण ॥ ॐ ज्योतिश्चरणाभिधानात् ॐ ॥ ज्योतिर्हृदय इत्युक्तम् ज्योतिर्ब्रह्मैव । 'वि मे कर्णा' इत्यादिना विरुद्धचरणोक्तेः । कर्णादि-सर्वेन्द्रियदूरत्वलिङ्गादित्यर्थः । वैय्यधिकरण्यनिरासाय कर्णादिविदूर इत्युत्तरभाष्यानु-सारेणाह – **कर्णादिविदूरत्वेति** ॥ अत्र कर्णादिविदूरत्वं नाम इयदिति परिच्छेद-रहितवैभवत्वं बोध्यम् । यापयति ज्ञापयति ॥ **महायोगेति** ॥ निरवधिकप्रकाशवत्त्वाद् अग्न्यादिनिष्ठप्रकाशनियामकत्वात् । ज्योतिषां ज्योतिः । नारायणः परो ज्योतिः । विष्णुरेव ज्योतिरित्यादिवैदिकप्रयोगबाहुल्याच्चेति भावः ॥ **निरवकाशलिङ्गेनेति** ॥ 'अग्निर्वै देवानामवमः' इत्यवमतया 'भीषाऽस्मादग्निस्तपति' इति सभयतया 'परिह्येनं म्रियन्ते विद्युद् वृष्टिश्चन्द्रमा आदित्योऽग्निः' इति मरणादिमत्तया च श्रुतस्याग्नेरपरिच्छिन्नवैभवासम्भवादिति भावः ॥

**॥इति श्रीशर्कराश्रीनिवासाचार्यविरचिता वाक्यार्थमञ्जर्यां ज्योतिरधिकरणम् ॥**

ಶ್ರೀಪದ್ಮನಾಭತೀರ್ಥಶ್ರೀಮಚ್ಚರಣರಿಂದ ರಚಿಸಲ್ಪಟ್ಟ

## ಸತ್ತರ್ಕದೀಪಾವಳಿ

**सत्तर्कदीपावळिः – ॐ ज्योतिश्चरणाभिधानात् ॐ ॥** ऐतरेये श्रूयते – 'वि मे कर्णा पतयत' इत्यादि । अत्र परमात्मधर्मेण 'यो वेद निहितं गुहायाम्' इति श्रुतिसिद्धेन विशिष्टं ज्योतिरुच्यते । 'इदं ज्योतिर्हृदय आहितं यत्' इति । अतो विचार्यते । किमयं ज्योतिःशब्दोऽग्निपरः उत विष्णुपर इति ज्योतिःशब्दस्याग्निसूक्तगत्वादग्नौ प्रसिद्धत्वात् । तेनाग्निरेवोच्यत इत्येतत् पक्षं प्रतिक्षिपत् सूत्रमुपन्यस्य व्याचष्टे – ज्योतिश्चरणाभिधानादित्यादिना ॥

अत्र तावत् कर्णादीन्द्रियाणां विपतनं विचरणं अन्तर्ज्योतिर्विपरीतगमनमेव ज्योतिषश्च तद्विपरीतावस्थानं 'किंस्विद् वक्ष्यामि किमु नू मनिष्ये' इति वाक्यशेषादवगम्यते । अतो 'यन्मनसा न मनुते' इत्यादिश्रुत्यन्तरसिद्धादिन्द्रियविदूरत्वाख्यविष्णुलिङ्गात् हृदयाहितं ज्योतिर्विष्णुरेव हि । मनआदिविदूरत्वं नाम मन आदिभिरपरिमेयत्वमेव । न तु सर्वथाऽग्राह्यत्वम् । 'श्रोतव्यो मन्तव्यः' इत्यादिश्रुतिविरोधापत्तेः । अप्रमेयत्वं च विष्णोरेव श्रुतम् । 'परो मात्रया तन्वा वृधान' इत्यादिश्रुत्यन्तरेण । अत्र परशब्दस्यावध्यपेक्षत्वात् मात्राशब्दः पञ्चम्यन्तः कार्यः । ततश्च मात्रया मितेः परोऽपरिमेयप्रभावो मितिसाधनत्वेन मात्राशब्दोदितेन्द्रियगणपथातीतश्चेत्युक्तं भवति ॥

ಐತರೇಯಶ್ರುತಿಯಲ್ಲಿ ಹೀಗೆ ಕೇಳಿಸುತ್ತಿದೆ. 'ವಿ ಮೇ ಕರ್ಣಾ ಪತಯತಃ' ಇತ್ಯಾದಿಯಾಗಿ. ಪರಮಾತ್ಮನ ಅಸಾಧಾರಣಧರ್ಮವಾದ ಗುಹಾನಿಹಿತತ್ವವನ್ನು 'ಯೋ ವೇದ ನಿಹಿತಂ ಗುಹಾಯಾಮ್' ಎಂಬ ಶ್ರುತಿಯು ಹೇಳುತ್ತಿದೆ. ಈ ಗುಹಾನಿಹಿತತ್ವವಿಶಿಷ್ಟವಾದ ವ್ಯಕ್ತಿಯನ್ನು ಜ್ಯೋತಿಃಶಬ್ದವು ಪ್ರತಿಪಾದಿಸುತ್ತಿದೆ. 'ಜ್ಯೋತಿರ್ಹೃದಯ ಆಹಿತಂ ಯತ್' ಎಂಬ ಶ್ರುತಿಯಿಂದ ಈ ವಿಚಾರವು ಸ್ಪಷ್ಟವಾಗುತ್ತದೆ. ಆದ್ದರಿಂದ ಈ ಶ್ರುತಿಯನ್ನು ವಿಚಾರಮಾಡಬೇಕು. ಇಲ್ಲಿ ಕೇಳಿಸುತ್ತಿರುವ ಜ್ಯೋತಿಃಶಬ್ದವು ಅಗ್ನಿಪ್ರತಿಪಾದಕವೋ ವಿಷ್ಣುಪ್ರತಿಪಾದಕವೋ ಎಂದು. ಏಕೆಂದರೆ ಜ್ಯೋತಿಃಶಬ್ದವು ಅಗ್ನಿಪ್ರಕರಣದಲ್ಲಿರುವುದರಿಂದ ಅಗ್ನಿಯಲ್ಲಿಯೂ ಪ್ರಸಿದ್ಧವಾಗಿದೆ. ಲೋಕಪ್ರಸಿದ್ಧಿಯು ಬಲಿಷ್ಠವಾದ್ದರಿಂದ ಅಗ್ನಿಯೇ ಜ್ಯೋತಿಃಶಬ್ದಪ್ರತಿಪಾದ್ಯನೆಂದು ಪೂರ್ವಪಕ್ಷ. ಈ ಪೂರ್ವಪಕ್ಷವನ್ನು

ನಿರಾಕರಣೆ ಮಾಡುವುದಕ್ಕಾಗಿ ಸೂತ್ರವನ್ನು ಪಠಿಸುತ್ತಾ ವ್ಯಾಖ್ಯಾನಿಸುತ್ತಿದ್ದಾರೆ ''ಜ್ಯೋತಿಶ್ಚರಣಾ-ಭಿಧಾನಾತ್'' ಇತ್ಯಾದಿಯಾಗಿ.

ಜ್ಯೋತಿಃಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನು. ಏಕೆಂದರೆ ಈ ಶ್ರುತಿಯಲ್ಲಿ 'ಕರ್ಣಾದಿ ಇಂದ್ರಿಯಗಳಿಗೆ ಅಂತರ್ಜ್ಯೋತಿಯು ಗೋಚರನಾಗಲಾರ' ಎಂಬುದಾಗಿ ಇಂದ್ರಿಯಗಳ ವಿಪರೀತ-ಗಮನವನ್ನು ಜ್ಯೋತಿಗೆ ಹೇಳಲಾಗಿದೆ. 'ಕಿಂ ಸ್ವಿದ್ ವಕ್ಷ್ಯಾಮಿ ಕಿಮು ನೂ ಮನಿಷ್ಯೇ' ಎಂಬ ವಾಕ್ಯಶೇಷದಿಂದ ಕರ್ಣಾದಿವಿದೂರತ್ವವೇ ಪ್ರಕೃತವಾದ ಜ್ಯೋತಿಗೆ ತಿಳಿಯುತ್ತದೆ. ಆದ್ದರಿಂದ 'ಯನ್ಮನಸಾ ನ ಮನುತೇ' ಇತ್ಯಾದಿ ಶ್ರುತ್ಯಂತರದಿಂದ ಸಿದ್ಧವಾದ ಇಂದ್ರಿಯವಿದೂರತ್ವವೆಂಬ ವಿಷ್ಣುವಿನ ಅಸಾಧಾರಣವಾದ ಧರ್ಮವಿರುವುದರಿಂದ ಹೃದಯದಲ್ಲಿರುವ ಜ್ಯೋತಿಯು ವಿಷ್ಣುವೇ ಆಗಿದ್ದಾನೆಂದು ನಿರ್ಣಯವಾಗುತ್ತದೆ. 'ಮನ ಆದಿ ವಿದೂರತ್ವ' ಎಂಬ ಶಬ್ದಕ್ಕೆ ಮನಸ್ಸು ಮೊದಲಾದವುಗಳಿಂದ ಪರಿಪೂರ್ಣವಾಗಿ ತಿಳಿಯಲಾರ ಎಂದಷ್ಟೇ ಅರ್ಥ ಹೊರತು ಸರ್ವಥಾ ತಿಳಿಯಲಾರ ಎಂದರ್ಥವಲ್ಲ. ಹಾಗೆ ಅರ್ಥ ಹೇಳಿದರೆ 'ಶ್ರೋತವ್ಯೋ ಮಂತವ್ಯಃ' ಎಂಬ ಶ್ರುತಿಯ ವಿರೋಧ ಬರುತ್ತದೆ. ಸಂಪೂರ್ಣವಾಗಿ ತಿಳಿಯಲಾರನೆಂಬ ಅಪ್ರಮೇಯತ್ವಧರ್ಮವು ವಿಷ್ಣುವಿನದ್ದೇ ಆಗಿದೆ ಎಂಬುದು 'ಪರೋ ಮಾತ್ರಯಾ ತನ್ವಾ ವೃಧಾನ' ಇತ್ಯಾದಿ ಶ್ರುತ್ಯಂತರದಿಂದ ನಿರ್ಣಯ-ವಾಗಿದೆ. 'ಪರೋ ಮಾತ್ರಯಾ' ಎಂಬ ಶ್ರುತಿಯಲ್ಲಿರುವ ಪರಃ ಎಂಬ ಪದವು ಅವಧಿಯನ್ನು ಅಪೇಕ್ಷಿಸುತ್ತಿದೆ. ಆದ್ದರಿಂದ ಮಾತ್ರಾಶಬ್ದವನ್ನು ಪಂಚಮ್ಯಂತ ಮಾಡಬೇಕು. ಆದ್ದರಿಂದ 'ಮಾತ್ರಯಾಃ ಮಿತೇಃ ಪರಃ' ಎಂದು ಹೇಳಿದಂತಾಗುತ್ತದೆ. ಇದರಿಂದ ಅಪ್ರಮೇಯತ್ವವು ಸ್ಪಷ್ಟವಾಗುತ್ತದೆ. ಮಾತ್ರಾ ಶಬ್ದಕ್ಕೆ ಮಿತಿಸಾಧನತ್ವವನ್ನು ವಿವಕ್ಷಿಸಿದಾಗ ಇಂದ್ರಿಯಗಣಾತೀತತ್ವವೆಂಬ ಧರ್ಮವು ತಿಳಿಯುತ್ತದೆ.

ಇಲ್ಲಿಗೆ ಶ್ರೀಪದ್ಮನಾಭತೀರ್ಥಶ್ರೀಮಚ್ಚರಣರಿಂದ ವಿರಚಿತವಾದ ಸತ್ತರ್ಕದೀಪಾವಳಿಯ ಕನ್ನಡಾನುವಾದದಲ್ಲಿ ಜ್ಯೋತಿರಧಿಕರಣವು ಮುಗಿಯಿತು ॥ ಇತಿ ಶಮ್ ॥

# ೦೧೦-ಜ್ಯೋತಿರಧಿಕರಣ

## ಭಾಗ -೨

## ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ, ಭಾಟ್ಟಸಂಗ್ರಹ, ಶಂಕರಭಾಷ್ಯ, ಭಾಮತೀ, ಶ್ರೀಭಾಷ್ಯ, ಶ್ರುತಪ್ರಕಾಶ ಇವುಗಳ ಆಯ್ದ ಭಾಗಗಳು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

॥ ಶ್ರೀಮಧ್ವರಾಜೋ ವಿಜಯತೇತರಾಮ್ ॥

॥ ಶ್ರೀಗುರುಭ್ಯೋ ನಮಃ ॥

# ಜ್ಯೋತಿರಧಿಕರಣದ ಸಾರ

ಜ್ಯೋತಿರಧಿಕರಣದ ವಿಷಯದಲ್ಲಿ ಮೂವರು ಜ್ಞಾನಿಗಳು ವಿಭಿನ್ನಾಭಿಪ್ರಾಯಗಳನ್ನೊಳಗೊಂಡಿದ್ದಾರೆ.

ತ್ರಿವಿಕ್ರಮಪಂಡಿತರು -- ಈ ಸೂತ್ರವು ಪ್ರತ್ಯೇಕ ಅಧಿಕರಣವಲ್ಲ. ಮುಂದಿನ ಮೂರು ಸೂತ್ರಗಳು ಸೇರಿ ಒಟ್ಟು ನಾಲ್ಕು ಸೂತ್ರಗಳು ಒಂದೇ ಅಧಿಕರಣ. 'ಜ್ಯೋತಿರ್ಹೃದಯ ಆಹಿತಂ ಯತ್' ಎಂಬ ಋಗ್ವೇದದ ಅಗ್ನಿಸೂಕ್ತವು ವಿಷಯವಾಕ್ಯ.

ಪದ್ಮನಾಭತೀರ್ಥರು -- ನಾಲ್ಕುಸೂತ್ರಗಳು ಒಂದೇ ಅಧಿಕರಣವಾಗಿವೆ. ಆದರೆ 'ಅಥ ಯದತಃ ಪರೋ ದಿವೋ ಜ್ಯೋತಿಃ' ಎಂಬ ಛಾಂದೋಗ್ಯವು ವಿಷಯವಾಕ್ಯ. ಅಗ್ನಿಸೂಕ್ತದ ಮಂತ್ರವು ವಿಷಯವಾಕ್ಯವಲ್ಲ.

ಟೀಕಾರಾಯರು – ಮೊದಲನೆಯ ಸೂಕ್ತವು ಜ್ಯೋತಿರಧಿಕರಣ. ಅನಂತರದ ಮೂರು ಸೂತ್ರಗಳು ಗಾಯತ್ರ್ಯಧಿಕರಣ. ಹೀಗೆ ಎರಡೂ ಕೂಡ ಪ್ರತ್ಯೇಕ ಅಧಿಕರಣಗಳಾಗಿವೆ. ಜ್ಯೋತಿರಧಿಕರಣದಲ್ಲಿ ಅಗ್ನಿಸೂಕ್ತದ ಮಂತ್ರವು ವಿಷಯವಾಕ್ಯ. ಗಾಯತ್ರ್ಯಧಿಕರಣದಲ್ಲಿ ಛಾಂದೋಗ್ಯದ ಮಂತ್ರವು ವಿಷಯವಾಕ್ಯ.

ಅಗ್ನಿಸೂಕ್ತದಲ್ಲಿ ಹಾಗೂ ಛಾಂದೋಗ್ಯದಲ್ಲಿ ಹೇಳಲ್ಪಟ್ಟ ತೇಜಸ್ಸು ಹಾಗೂ ಗಾಯತ್ರಿಯು ಒಂದೇ ಹೊರತು ಬೇರೆಯಲ್ಲ. ಈ ವಿಷಯದಲ್ಲಿ 'ತೇಜೋ ವೈ ಬ್ರಹ್ಮವರ್ಚಸಂ ಗಾಯತ್ರೀ' ಎಂಬ ಶ್ರುತಿಯು ಆಧಾರ. ಅಗ್ನಿಸೂಕ್ತದಲ್ಲಿ ಹೇಳಿದ ಕರ್ಣಾದಿವಿದೂರತ್ವಕ್ಕೆ ವಿರುದ್ಧವಾಗಿ ದೃಷ್ಟತ್ವಧರ್ಮವನ್ನು ಛಾಂದೋಗ್ಯವು ಹೇಳಿರಬಹುದು. ಆದರೆ ಭಗವಂತನು ಸಂಪೂರ್ಣ ತಿಳಿಯಲಾರದ ಕಾರಣ ಕರ್ಣಾದಿವಿದೂರನೆಂಬುದು ಅಗ್ನಿಸೂಕ್ತದ ಅಭಿಪ್ರಾಯ. ಏಕದೇಶದಿಂದ ಎಲ್ಲರಿಗೂ ತಿಳಿಯುತ್ತಾನೆಂಬುದು ಛಾಂದೋಗ್ಯದ ಅಭಿಪ್ರಾಯ.

ತತ್ವಪ್ರದೀಪಕಾರರಂತೆ ಸನ್ನ್ಯಾಯರತ್ನಾವಲೀಕಾರರೂ ಕೂಡ ನಾಲ್ಕೂ ಸೂತ್ರಗಳನ್ನು ಜ್ಯೋತಿರಧಿಕರಣ-ವೆನ್ನುತ್ತಾರೆ. ಆದರೆ ಅಗ್ನಿಸೂಕ್ತವು ವಿಷಯವಲ್ಲ. 'ಅಥ ಯದತಃ ಪರೋ ದಿವೋ ಜ್ಯೋತಿಃ' ಎಂಬ ಛಾಂದೋಗ್ಯವೇ ವಿಷಯವಾಕ್ಯ. ಪ್ರಥಮಸೂತ್ರದಲ್ಲಿ ಹೇಳಿದ ವಿಚರಣಾಭಿಧಾನಹೇತುವು ಈ ವಿಷಯವಾಕ್ಯದಲ್ಲಿ ಇಲ್ಲದಿರಬಹುದು. ಆದರೆ ಛಾಂದೋಗ್ಯದಲ್ಲಿ ಪ್ರತಿಪಾದ್ಯನಾದ ಜ್ಯೋತಿಯೇ ಅಗ್ನಿಸೂಕ್ತದಲ್ಲಿ ಪ್ರತಿಪಾದ್ಯನಾಗಿದ್ದಾನೆ ಹಾಗಾಗಿ ವಿಚರಣಾಭಿಧಾನಹೇತುವಿನಿಂದ ಛಾಂದೋಗ್ಯದ ಜ್ಯೋತಿಯು ವಿಷ್ಣುವೆಂದು ಪ್ರಥಮಸೂತ್ರವು ಪ್ರತಿಪಾದಿಸುತ್ತಿದೆ.

ವಾಸ್ತವಿಕವಾಗಿ ನಿರವಕಾಶವಾದ ಅನೇಕ ವಿಷ್ಣುಲಿಂಗಗಳು ಛಾಂದೋಗ್ಯದಲ್ಲಿಯೇ ಇದೆ. ಅವುಗಳಿಂದಲೇ ಜ್ಯೋತಿಯನ್ನು ವಿಷ್ಣುವೆಂದು ಸಾಧಿಸಬಹುದು. ಅಗ್ನಿಸೂಕ್ತವು ಬೇಕಾಗಿಲ್ಲ. ಆದರೆ ಬೇರೆ ಬೇರೆ ಜ್ಯೋತಿಃಶ್ರುತಿಯಲ್ಲಿರುವ ನಿರವಕಾಶಲಿಂಗಗಳಿಂದ ವಿಷ್ಣುವೇ ಪ್ರತಿಪಾದ್ಯನೆಂದು ಸಾಧಿಸಿದಾಗ ಅನೇಕ ಶ್ರುತಿಗಳ ಸಮನ್ವಯವು ವಿಷ್ಣುವಿನಲ್ಲಿ ಸಿದ್ಧವಾಗುತ್ತದೆ. ವಾಮನನು ಬಲಿಯ ಮೂಲಕ ಮೂರು ಹೆಜ್ಜೆಗಳನ್ನಷ್ಟೇ ಬೇಡಿ, ಅನಂತರ ತ್ರಿವಿಕ್ರಮನಾಗಿ ಸಮಸ್ತ ಜಗತ್ತನ್ನೇ ವ್ಯಾಪಿಸಿದನು. ಇದರಂತೆ ಬೇರೆ ಬೇರೆ ವೇದಗಳಲ್ಲಿರುವ

ವಿಷ್ಣುಲಿಂಗಗಳನ್ನು ಉಲ್ಲೇಖಿಸಿದಾಗ ಕ್ರಮವಾಗಿ ತ್ರಿವಿಕ್ರಮನಂತೆ ಸಮಸ್ತ ವೇದದ ಸಮನ್ವಯವು ಸಿದ್ಧವಾಗುತ್ತದೆ. ಹೀಗೆ ಪದ್ಮನಾಭತೀರ್ಥರು ಚಮತ್ಕಾರಮಯವಾಗಿ ಸೂತ್ರಗಳಿಗೆ ವ್ಯಾಖ್ಯಾನಿಸಿದ್ದಾರೆ.

ತತ್ವಪ್ರದೀಪಕಾರರ ಮತ್ತು ಸನ್ನ್ಯಾಯರತ್ನಾವಲೀಕಾರರ ಪ್ರಕಾರ ಅಗ್ನಿಸೂಕ್ತ ಹಾಗೂ ಛಾಂದೋಗ್ಯ-ವಾಕ್ಯಗಳೆರಡೂ ವಿಷಯವಾಕ್ಯಗಳಾಗಬಹುದು. ವಿಷಯವಾಕ್ಯಗಳು ಬೇರೆ ಬೇರೆಯಾದ ಮಾತ್ರದಿಂದ ಅಧಿಕರಣಗಳಲ್ಲಿ ಭೇದವು ಬರಬೇಕಾಗಿಲ್ಲ. ನ್ಯಾಯಭೇದವಿದ್ದರಷ್ಟೇ ಅಧಿಕರಣಭೇದವನ್ನು ಒಪ್ಪಬೇಕು. ಪ್ರಕೃತ ಎರಡೂ ವಿಷಯವಾಕ್ಯಗಳಲ್ಲಿ ಪ್ರಕರಣದ ಬೆಂಬಲ ಪಡೆದ ಶ್ರುತಿಯೆಂಬ ಪೂರ್ವಪಕ್ಷ ನ್ಯಾಯವು ನಿರತಿಶಯವೈಭವತ್ವವೆಂಬ ಸಿದ್ಧಾಂತನ್ಯಾಯವು ಸಮಾನವಾಗಿದೆ. ಪೂರ್ವಮೀಮಾಂಸೆಯ ಆಘಾರಾಗ್ನಿಹೋತ್ರಾಧಿ-ಕರಣದಲ್ಲಿ ಅನೇಕವಾಕ್ಯಗಳು ವಿಷಯವಾಕ್ಯಗಳಾಗಿವೆ. ಆದರೆ ದ್ರವ್ಯದೇವತಾರೂಪವಾದ ಯಾಗಸ್ವರೂಪದ ಇಲ್ಲದಿರುವಿಕೆಯೆಂಬ ಪೂರ್ವಪಕ್ಷನ್ಯಾಯವು ಮಂತ್ರವರ್ಣಾದಿರೂಪವಾದ ಯಾಗಸ್ವರೂಪದ ನಿಷ್ಪತ್ತಿ-ಯಾಗುವಿಕೆಯೆಂಬ ಸಿದ್ಧಾಂತನ್ಯಾಯವು ಆ ವಿಷಯವಾಕ್ಯಗಳಲ್ಲಿ ಸಮಾನವಾಗಿವೆ. ಆದ್ದರಿಂದ ಒಂದೇ ಅಧಿಕರಣ -ದಲ್ಲಿ ಅವುಗಳನ್ನು ವಿಚಾರ ಮಾಡಿದ್ದಾರೆ. ಹೀಗೆ ಮೀಮಾಂಸಕರಂತೆ ನಾವೂ ಹೇಳಬಹುದು.

ಗಮನಿಸಬೇಕಾದ ಮತ್ತೊಂದು ಸೂಕ್ಷ್ಮವಿಚಾರ. ಮೊದಲೆರಡು ಸೂತ್ರಗಳಿಗೆ ಮಾತ್ರ ಎರಡೂ ವಿಷಯ-ವಾಕ್ಯಗಳಾಗುತ್ತವೆ. ಅನಂತರದ ಎರಡು ಸೂತ್ರಗಳಿಗೆ ಛಾಂದೋಗ್ಯವಾಕ್ಯವಷ್ಟೇ ವಿಷಯವಾಕ್ಯವಾಗುತ್ತದೆ. ಎರಡು ಹಂತದಲ್ಲಿ ವಿಚಾರಮಾಡುವ ಈ ಪದ್ಧತಿಯನ್ನು ಪೂರ್ವಮೀಮಾಂಸೆಯ ಅರ್ಥವಾದಾಧಿಕರಣದಲ್ಲಿ ನೋಡಬಹುದು. ಇಷ್ಟೆಲ್ಲಾ ಅಭಿಪ್ರಾಯದಿಂದ ತತ್ವಪ್ರದೀಪಕಾರರು ಗರ್ಭಿಣಿಸ್ತ್ರೀಯಂತೆ ಈ ಅಧಿಕರಣವನ್ನು ಅಂತರ್ಭೇದಾಧಿಕರಣವೆಂದಿದ್ದಾರೆ.

'ಜ್ಯೋತಿಶ್ಚರಣಾಭಿಧಾನಾತ್' ಎಂಬ ಒಂದೇ ಸೂತ್ರ ಪ್ರತ್ಯೇಕ ಅಧಿಕರಣವೆಂದು ಟೀಕಾರಾಯರ ಪಕ್ಷ. ಹಾಗಾದರೆ ಮುಂದಿನ ಗಾಯತ್ರ್ಯಧಿಕರಣದಲ್ಲಿ, ಸಮನ್ವಯ ಮಾಡಬೇಕಾದ ಶಬ್ದವನ್ನು ಉಲ್ಲೇಖಿಸಿಲ್ಲವಲ್ಲ? ಎಂಬ ಗೊಂದಲಕ್ಕೆ ಅವಕಾಶವಿಲ್ಲ. ಸಮನ್ವಯ ಮಾಡಬೇಕಾದ ಶಬ್ದವನ್ನು ಪ್ರತಿಯೊಂದು ಅಧಿಕರಣಗಳಲ್ಲಿ ಸೂತ್ರಕಾರರು ಉಲ್ಲೇಖಿಸುತ್ತಾರೆಂಬ ನಿಯಮವಿಲ್ಲ. ಕಂಪನಾಧಿಕರಣದಲ್ಲಿ ಸಮನ್ವಯ ಮಾಡುವ ವಜ್ರಶಬ್ದವನ್ನು ಉಲ್ಲೇಖಿಸಿದ್ದು ಕಾಣುತ್ತಿಲ್ಲ. ಆದರೆ ವಜ್ರಶಬ್ದದ ಅರ್ಥವನ್ನು ಕಂಪನಶಬ್ದದಿಂದ ಸೂಚಿಸಿದ್ದಾರೆ. ಅದರಂತೆ ಇಲ್ಲಿಯೂ 'ಛಂದೋಭಿಧಾನಾತ್' ಎಂಬುದರಿಂದ ಗಾಯತ್ರೀಶಬ್ದದ ಸಮನ್ವಯವನ್ನು ಸೂಚಿಸಿದ್ದಾರೆ.

ಇಲ್ಲಿ ಬರುವ ಮತ್ತೊಂದು ಪ್ರಶ್ನೆ – 'ಛಂದೋಭಿಧಾನಾತ್' ಇತ್ಯಾದಿ ಮೂರು ಸೂತ್ರಗಳು ಗಾಯತ್ರೀಶಬ್ದದ ಸಮನ್ವಯಕ್ಕೋಸ್ಕರ ಹೊರಟಿದ್ದೇ ಆದರೆ ಭಾಷ್ಯಕಾರರು ಅಗ್ನಿಗಾಯತ್ರ್ಯಾದಿ ಎಂದು ಅಗ್ನಿಶಬ್ದದ ಸಮನ್ವಯವನ್ನು ಹೇಳಿದ್ದು ತಪ್ಪಾಗುತ್ತದಲ್ಲವೇ? ಎಂದು.

ಭಾಷ್ಯಕಾರರ ಮಾತಿನಲ್ಲಿರುವ ಸೂಕ್ಷ್ಮವನ್ನು ಗಮನಿಸಬೇಕು. ಅಗ್ನಿಶಬ್ದದ ಸಮನ್ವಯಕ್ಕೋಸ್ಕರ ಅಗ್ನಿಶಬ್ದವನ್ನು ಉಲ್ಲೇಖಿಸಿಲ್ಲ ಹೊರತಾಗಿ ಅನ್ಯತ್ರಪ್ರಸಿದ್ಧವಾದ ಗಾಯತ್ರೀಶಬ್ದವನ್ನು ಸಮನ್ವಯ ಮಾಡಿದ್ದರಿಂದ ವಿಷ್ಣುವನ್ನು ಗಾಯತ್ರೀರೂಪದಿಂದ ಉಪಾಸನೆ ಮಾಡಬೇಕು. ಇದರಂತೆ ಹಿಂದಿನ ಮುಂದಿನ ಅಧಿಕರಣಗಳಲ್ಲಿ ಮಾಡಿರುವ ಆಯಾಯ ಶಬ್ದಗಳ ಸಮನ್ವಯದ ಉದ್ದೇಶ ಉಪಾಸನೆಗೋಸ್ಕರ. ಇದನ್ನು ತಿಳಿಸುವುದಕ್ಕಾಗಿ ಹಿಂದಿನ ಅಧಿಕರಣದ ಅಗ್ನಿಶಬ್ದವನ್ನು ಉಪಲಕ್ಷಕವಾಗಿ ಉಲ್ಲೇಖಿಸಿದ್ದಾರೆ. ತತ್ವಪ್ರದೀಪಕಾರರು ಹಾಗೂ ಸನ್ನ್ಯಾಯ-ರತ್ನಾವಲೀಕಾರರೂ ಕೂಡ ಅಗ್ನಿಗಾಯತ್ರ್ಯಾದಿ ಎಂಬಲ್ಲಿರುವ ಆದಿ ಪದದ ಸಾರ್ಥಕ್ಯವನ್ನು ಹೀಗೆಯೇ ಹೇಳಬೇಕಾಗುತ್ತದೆ.

ವಸ್ತುತಃ ಅನುವ್ಯಾಖ್ಯಾನ ನ್ಯಾಯವಿವರಣಗಳಲ್ಲಿ ಜ್ಯೋತಿರಧಿಕರಣಕ್ಕೆ ಪ್ರತ್ಯೇಕವಾದ ಅಧಿಕಾಶಂಕೆಯನ್ನು ತೋರಿಸಿಲ್ಲ. 'ಅಗ್ನಿಸೂಕ್ತಸ್ಥತ್ವಾತ್' ಎಂಬ ಭಾಷ್ಯದಲ್ಲಿಯೇ ಅಧಿಕಾಶಂಕೆಯನ್ನು ತೋರಿಸಿದ್ದರಿಂದ ಪುನಃ ಹೇಳಬೇಕಾಗಿಲ್ಲವೆಂದಷ್ಟೇ ಅಭಿಪ್ರಾಯ ಹೊರತು ಪ್ರತ್ಯೇಕ ಅಧಿಕರಣವೆಂದಲ್ಲ. ಪ್ರತಿಯೊಂದು ಅಧಿಕರಣಗಳ ಉಪಾಧಿಯನ್ನು ಹೇಳುವ ನ್ಯಾಯವಿವರಣೆಯ ಅಭಿಪ್ರಾಯವೂ ಇದೇ ಆಗಿದೆ. -- ಆಕಾಶಾಧಿಕರಣದಂತೆ ಅಧಿಭೂತಶಬ್ದವಿಷಯತ್ವ ಅಥವಾ ಅಂತರಧಿಕರಣದಂತೆ ಅಧಿದೈವಗತಶಬ್ದವಿಷಯತ್ವವು ಉಪಾಧಿಯಾಗುತ್ತದೆಂದು ಅಭಿಪ್ರಾಯ. ಸೂಕ್ತವಿಷಯತ್ವವೆಂಬುದು ಅಧಿಕರಣವೈಲಕ್ಷಣ್ಯಕ್ಕೆ ಕಾರಣವಾಗಿದೆ.

ಈ ಮೂರು ಮತಗಳೂ ಸೂತ್ರದ ಯೋಜನೆಯಲ್ಲಷ್ಟೇ ಚರ್ಚಿಸಿವೆ. ಪ್ರಮೇಯವಿಚಾರದಲ್ಲಿ ಚರ್ಚಿಸಿಲ್ಲ. ಮೂವರೂ ಮಹಾಜ್ಞಾನಿಗಳಾದ್ದರಿಂದ ಯಾವ ಪಕ್ಷವನ್ನೂ ಕಡೆಗಾಣಿಸಬಾರದು.

ಎರಡು ಪೂರ್ವಪಕ್ಷಗಳನ್ನು ಸಂಕ್ಷೇಪವಾಗಿ ಹೀಗೆ ಹೇಳಬಹುದು. (೧) ಹಿಂದಿನ ಪ್ರಾಣಾಧಿಕರಣದಲ್ಲಿ ಶ್ರೀಪತಿತ್ವಾದಿಲಿಂಗಗಳು ವಿಷ್ಣುವಿನಲ್ಲಿ ನಿರವಕಾಶಗಳಾಗಿವೆ. ಪ್ರಾಣಶ್ರುತಿಯು ಸಾವಕಾಶವಾದ್ದರಿಂದ ಬಾಧಿತವಾಗು-ತ್ತದೆಂದು ಸಮರ್ಥಿಸಲಾಯಿತು. ಅದರಂತೆ ಈ ಅಧಿಕರಣದಲ್ಲಿ ಶ್ರುತಿಗೆ ಬಾಧವನ್ನು ಹೇಳಲಾಗದು. ಏಕೆಂದರೆ ಅಗ್ನಿಶ್ರುತಿಗೆ ಅಗ್ನಿಪ್ರಕರಣದ ಬೆಂಬಲವಿದೆ. ಇದು ಸುಧೆಯ ಪೂರ್ವಪಕ್ಷ.

(೨) ಜ್ಯೋತಿಃಶ್ರುತಿ ಹಾಗೂ ವಿಷ್ಣುಲಿಂಗಗಳು ಎರಡೂ ಸಾವಕಾಶವಾಗಿವೆ. ಇವೆರಡರಲ್ಲಿ ಸ್ವಭಾವತಃ ಸಾವಕಾಶ- ಶ್ರುತಿಯೇ ಪ್ರಬಲವೆನಿಸುತ್ತದೆ. ಇಂತಹ ಶ್ರುತಿಯಿಂದ ವಿಷ್ಣುಲಿಂಗವು ಬಾಧಿತವಾಗುತ್ತದೆ. ಇದು ಟೀಕೆಯ ಪೂರ್ವಪಕ್ಷ.

ಸಹಜವಾಗಿ ಇಲ್ಲೊಂದು ಪ್ರಶ್ನೆ ಬರುತ್ತದೆ. ''ಜ್ಯೋತಿಶಬ್ದವು ದೇವತಾಪರವಾದರೆ ಅಂತರಧಿಕರಣನ್ಯಾಯದಿಂದ ವಿಷ್ಣುಪರವೆಂದು ಸಿದ್ಧವಾಗುತ್ತದೆ. ಭೂತಪರವಾದರೆ ಆಕಾಶಾಧಿಕರಣನ್ಯಾಯದಿಂದ ವಿಷ್ಣುಪರವಾಗುತ್ತದೆ. ಹೀಗೆ ಸಾವಕಾಶವಾದ ಜ್ಯೋತಿಶ್ರುತಿಯು ನಿರವಕಾಶವಿಷ್ಣುಲಿಂಗದಿಂದ ಬಾಧಿತವಾಗುತ್ತದಲ್ಲವೇ? ಹೀಗಿರುವಾಗ ಜ್ಯೋತಿರಧಿಕರಣದ ಪೂರ್ವಪಕ್ಷವನ್ನು ಹೇಗೆ ಮಾಡುತ್ತೀರಿ? ಇನ್ನು ಪ್ರಕರಣದ ಬೆಂಬಲವನ್ನು ಜ್ಯೋತಿಶ್ರುತಿಗೆ ಹೇಳಬೇಕು. ಆದರೆ ಶ್ರುತಿಯಂತೆ ಪ್ರಕರಣವೂ ಕೂಡ ಸಾವಕಾಶವಾದಾಗ ಶ್ರುತಿಯನ್ನು ಹೇಗೆ ತಾನೇ ಉಜ್ಜೀವನ ಮಾಡುತ್ತದೆ?'' ಎಂದು. ಈ ಪ್ರಶ್ನೆಗೆ ಇಷ್ಟೇ ಉತ್ತರ -- ಶ್ರುತಿ ಹಾಗೂ ಲಿಂಗಗಳು ಎರಡೂ ಸಾವಕಾಶವಾದಾಗ ಶ್ರುತಿಯೇ ಪ್ರಬಲವಾಗುತ್ತದೆ. ಆದ್ದರಿಂದ ಜ್ಯೋತಿರಧಿಕರಣದ ಪೂರ್ವಪಕ್ಷ ಹೊರಡಲು ಏನೂ ತೊಂದರೆ ಇಲ್ಲ.

ಲಿಂಗ ಹಾಗೂ ಶ್ರುತಿ ಎರಡೂ ಸಾವಕಾಶಗಳಾದಾಗ ಶ್ರುತಿಯು ಸ್ವಭಾವತಃ ಬಲಿಷ್ಠ; ಲಿಂಗವು ಸ್ವಭಾವತಃ ದುರ್ಬಲ ಎನಿಸುತ್ತದೆ. ಇಷ್ಟೇ ಹೇಳಿದರೆ ಸಾಕು. ಶ್ರುತಿಗೆ ಪ್ರಕರಣದ ಬೆಂಬಲ ಹೇಳುವುದು ಅನಾವಶ್ಯಕ. ಜ್ಯೋತಿಶಬ್ದವು ಅಗ್ನಿಯನ್ನು ಪ್ರತಿಪಾದಿಸುತ್ತದೆಂಬ ವಿಚಾರವು ಹೃದಯಾಹಿತತ್ವಲಿಂಗದಿಂದಾಗಲೀ, ಅಥವಾ ಅಗ್ನಿಶಬ್ದದ ಸನ್ನಿಧಾನದಿಂದಾಗಲೀ ತಿಳಿಯುತ್ತದೆ. ಪ್ರಕರಣವು ಬೇಕಾಗಿಲ್ಲ. ಆದರೆ ಭಾಷ್ಯದಲ್ಲಿ ಪ್ರಕರಣವನ್ನು ಪ್ರತ್ಯೇಕವಾಗಿ ಉಲ್ಲೇಖಿಸಿದ್ದಾರೆ. ಭಾಷ್ಯದ ಆಂತರ್ಯವನ್ನು ಹೀಗೆ ತಿಳಿಯಬೇಕು -- 'ಶ್ರುತಿಯು ಸ್ವಾಭಾವಿಕವಾಗಿಯೇ ಲಿಂಗವನ್ನು ಬಾಧಿಸುತ್ತದೆ. ಇದರ ಜೊತೆಗೆ ಪ್ರಕರಣದ ಬೆಂಬಲವಿದ್ದಾಗ ನಿಶ್ಚಯವಾಗಿ ಬಾಧಿಸುತ್ತದೆ' ಎಂದು.

ಇನ್ನು ವಿಷ್ಣುವಿನಲ್ಲಿರುವ ಲಿಂಗಗಳು ನಿರವಕಾಶಗಳಾಗಿದ್ದರೂ ಶ್ರುತಿಯಿಂದ ಬಾಧವು ಬರುತ್ತಿರಲಿಲ್ಲ.

ಆದರೆ ಗುಹಾನಿಹಿತತ್ವಲಿಂಗವು ಜಾಠರಾಗ್ನಿಯಲ್ಲಿ ಸಾವಕಾಶವಾಗಿದೆ. ನಿರತಿಶಯವೈಭವತ್ವವನ್ನೂ ಸಹ ಅಗ್ನಿಶ್ರುತಿಯು ಅಗ್ನಿಯಲ್ಲಿ ಸಾವಕಾಶ ಮಾಡಿದೆ. ಹೀಗೆ ಎಲ್ಲಾ ವಿಷ್ಣುಲಿಂಗಗಳೂ ಸಾವಕಾಶಗಳೇ ಆಗಿವೆ.

'ಅಧಿಕಾಶಂಕಾ ಅಗ್ನಿಸೂಕ್ತಸ್ಥತ್ವಾತ್ ಭಾಷ್ಯ ಏವ ದರ್ಶಿತಾ' ಎಂಬ ಸುಧಾವಾಕ್ಯಕ್ಕೆ ಕೇವಲ ಶ್ರುತಿಯಿಂದ ಪೂರ್ವಪಕ್ಷ ಹುಟ್ಟದ ಕಾರಣ ಅಧಿಕಾಶಂಕೆಯು ಹೊರಟಿದೆ ಎಂದರ್ಥವಲ್ಲ. ಕೇವಲ ಶ್ರುತಿಯಿಂದಲೇ ಪೂರ್ವಪಕ್ಷ ಹುಟ್ಟುತ್ತದೆ; ಆದರ ದಾರ್ಢ್ಯಕ್ಕಾಗಿ ಅಧಿಕಾಶಂಕೆಯ ಪ್ರವೃತ್ತಿಯನ್ನು ತಿಳಿಯಬೇಕು. ಅಥವಾ ಹಿಂದಿನ ಅಧಿಕರಣಗಳಲ್ಲಿ ಅಧಿಕಾಶಂಕೆಯನ್ನು ತೋರಿಸಿದ್ದಾರೆ. ಆದರಂತೆ ಇಲ್ಲಿಯೂ ಪೂರ್ವನ್ಯಾಯದಿಂದ ಗತಾರ್ಥತ್ವವನ್ನು ಪರಿಹರಿಸಲು ಅಧಿಕಾಶಂಕೆಯನ್ನು ತೋರಿಸಿದ್ದಾರೆಂದು ಸುಧೆಯ ಅಭಿಪ್ರಾಯವಾಗಿದೆ.

ಲಿಂಗ ಹಾಗೂ ಶ್ರುತಿ ಎರಡೂ ನಿರವಕಾಶಗಳಾಗಿವೆ. ಶ್ರುತಿಗೆ ನಿರವಕಾಶಪ್ರಕರಣದ ಅನುಗ್ರಹವಿದೆ. ಮತ್ತು ಸ್ವಭಾವತಃ ಪ್ರಾಬಲ್ಯವಿದೆ. ಇಂತಹ ಶ್ರುತಿಯಿಂದ ನಿರವಕಾಶಲಿಂಗವೇ ಬಾಧಿತವಾಗುತ್ತದೆ ಎಂದು ಟೀಕೆಯ ಪೂರ್ವಪಕ್ಷ.

ಟೀಕೆಯ ಪೂರ್ವಪಕ್ಷವನ್ನು ಹಿಂದೆ ಉಪಪಾದಿಸಿದ್ದಾಯಿತು. ಇಲ್ಲಿ ಸುಧೆಯ ಪೂರ್ವಪಕ್ಷವನ್ನು ವಿವರಿಸುತ್ತಿದ್ದಾರೆ. -- ಹಿಂದಿನ ಅಧಿಕರಣದ ನ್ಯಾಯದಂತೆ ಸಾವಕಾಶಶ್ರುತಿಗೆ ಬಾಧವನ್ನು ಹೇಳಬಹುದು. ಆದರೆ ಶ್ರುತಿಯು ಯಾವ ಪ್ರಕರಣವನ್ನು ಅವಲಂಬಿಸಿದೆಯೋ ಆ ಪ್ರಕರಣವು ನಿರವಕಾಶವಾಗಿದೆ. ಇದು ಅಗ್ನಿಸೂಕ್ತ ಹೊರತು ವಿಷ್ಣುಸೂಕ್ತವಲ್ಲ ಎಂಬ ಅಧ್ಯಾಪಕಪ್ರಸಿದ್ಧಿಯೇ ನಿರವಕಾಶತ್ವಸಂಪಾದಕವಾಗಿದೆ. ಹೀಗೆ ನಿರವಕಾಶ-ಪ್ರಕರಣದ ಅನುಗ್ರಹವಿರುವುದರಿಂದ ಶ್ರುತಿಯು ಬಲಿಷ್ಠವಾಗುತ್ತದೆ. ಅಷ್ಟೇ ಅಲ್ಲದೆ ಶ್ರುತಿತ್ವಪ್ರಯುಕ್ತವಾಗಿಯೂ ಬಲಿಷ್ಠವಾಗಿದೆ. ಹೀಗೆ ಎರಡು ಮುಖಗಳಿಂದ ಶ್ರುತಿಯು ಅತ್ಯಂತ ಪ್ರಬಲವೆನಿಸಿದೆ. ಆದರೆ ಲಿಂಗವು ಕೇವಲ ನಿರವಕಾಶಪ್ರಯುಕ್ತವಾಗಿ ಪ್ರಬಲವಾಗಿದೆ. ಈ ಲಿಂಗವು ನಿರವಕಾಶಪ್ರಕರಣದ ಅನುಗ್ರಹವಿರುವ ಶ್ರುತಿಯಿಂದ ಬಾಧಿತವಾಗುವುದರಲ್ಲಿ ಸಂದೇಹವಿಲ್ಲ. ಇನ್ನು ದುರ್ಬಲವಾದ ಅನೇಕ ಲಿಂಗಗಳ ಬೆಂಬಲವನ್ನು ಮುಂದಿಡ-ಬಹುದು ಆದರೆ ಬಲಿಷ್ಠವಾದ ಶ್ರುತಿಯು ಆ ಎಲ್ಲ ಲಿಂಗಗಳನ್ನು ಶಕ್ತಿ ಇಲ್ಲದಂತೆ ಮಾಡುತ್ತದೆ. ನಿರವಕಾಶ-ಪ್ರಕರಣದ ಅನುಗ್ರಹವಿರುವ ಶ್ರುತಿಯಿಂದ ಲಿಂಗವು ಬಾಧಿತವಾಗುತ್ತದೆಂಬ ಈ ಪೂರ್ವಪಕ್ಷವನ್ನು ಹಿಂದಿನ ಮುಂದಿನ ಯಾವುದೇ ಅಧಿಕರಣಗಳಿಂದಲೂ ಪರಿಹರಿಸಲು ಸಾಧ್ಯವಿಲ್ಲದ ಕಾರಣ ಈ ಅಧಿಕರಣದ ಪ್ರವೃತ್ತಿಯು ಅನಿವಾರ್ಯವಾಗಿದೆ.

ಸುಧೆಗೆ ಅನುಸಾರಿಯಾಗಿಯೇ ಟೀಕೆಯ ಪೂರ್ವಪಕ್ಷವನ್ನು ಹೊಂದಿಸಬಹುದು. ಸುಧೆಗೆ ವಿರುದ್ಧವಾಗಿ ಟೀಕೆಯಲ್ಲಿ ಲಿಂಗ ಸಾವಕಾಶ ಎಂಬ ಮಾತು ಕಾಣಿಸುತ್ತದೆ. ಆದರೆ ಕರ್ಣಾದಿವಿದೂರತ್ವಲಿಂಗವು ಸಾವಕಾಶವೆಂದು ಇದರ ಅರ್ಥವಲ್ಲ. ಗುಹಾನಿಹಿತತ್ವವು ಸಾವಕಾಶ ಎಂದರ್ಥ. ಅಥವಾ ಕರ್ಣಾದಿವಿದೂರತ್ವಲಿಂಗವು ಸ್ವತಃ ನಿರವಕಾಶವಾಗಿದ್ದರೂ ನಿರವಕಾಶಪ್ರಕರಣದ ಅನುಗ್ರಹವಿರುವ ಶ್ರುತಿಯ ಬಲದಿಂದ ಕರ್ಣಾದಿವಿದೂರತ್ವವನ್ನು ಅಗ್ನಿಯಲ್ಲಿ ಸಾವಕಾಶ ಮಾಡಬಹುದು. ಹೀಗೆ ಟೀಕೆಯನ್ನು ಅರ್ಥೈಸಿದಾಗ ಸುಧೆಯ ಅಭಿಪ್ರಾಯವನ್ನೇ ಸ್ಪಷ್ಟಪಡಿಸಿದಂತಾಗುತ್ತದೆ.

ಹೀಗೆ ಪ್ರಮಾಣಾಶ್ರಿತಪೂರ್ವಪಕ್ಷವನ್ನು ಎರಡು ಬಗೆಯಲ್ಲಿ ತಿಳಿಯಬೇಕು.

ಪ್ರಮೇಯಾಶ್ರಿತಪೂರ್ವಪಕ್ಷ. ತಮೋವಿರೋಧಿತ್ವವು ಜ್ಯೋತಿಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ತಮಸ್ಸಿನ ಜೊತೆಯಲ್ಲಿ ವಾಸಮಾಡುವ ಬ್ರಹ್ಮನಲ್ಲಿ ಈ ಪ್ರವೃತ್ತಿನಿಮಿತ್ತವನ್ನು ಕೂಡಿಸಲು ಸಾಧ್ಯವಿಲ್ಲ. ಆದ್ದರಿಂದ ಜ್ಯೋತಿಶಬ್ದದಿಂದ ಅಗ್ನಿಯೇ ಪ್ರತಿಪಾದ್ಯನಾಗುತ್ತಾನೆ; ವಿಷ್ಣುವಲ್ಲ.

ಈ ಅಧಿಕರಣದ ಸಿದ್ಧಾಂತ : ಕರ್ಣಾದಿವಿದೂರತ್ವಲಿಂಗವು ವಿಷ್ಣುವಿನಲ್ಲಿ ನಿರವಕಾಶವಾಗಿದೆಯೆಂದು 'ಪರೋ ಮಾತ್ರಯಾ' ಇತ್ಯಾದಿ ಶ್ರುತಿಗಳು ಸಾಧಿಸುತ್ತಿವೆ. ಅಪರಿಮಿತಗುಣಗಳಿದ್ದು ಯಾವುದೇ ದೋಷವಿಲ್ಲದ ವ್ಯಕ್ತಿಯಲ್ಲಷ್ಟೇ ಕರ್ಣಾದಿ ವಿದೂರತ್ವವನ್ನು ಹೇಳಲು ಸಾಧ್ಯ. ಭಯ ಮರಣ ಮೊದಲಾದ ದೋಷಗಳಿಂದ ಕೂಡಿದ ಅಧಮನಾದ ಅಗ್ನಿದೇವತೆಯಲ್ಲಿ ಕರ್ಣಾದಿವಿದೂರತ್ವವನ್ನು ಹೇಳಲು ಹೇಗೆ ತಾನೆ ಸಾಧ್ಯ? ಹೀಗೆ ಯಾವುದೇ ಕಾರಣದಿಂದಲೂ ವಿಷ್ಣುವನ್ನು ಬಿಟ್ಟು ಅಗ್ನಿದೇವತೆಯಲ್ಲಿ ಕರ್ಣಾದಿವಿದೂರತ್ವವನ್ನು ಹೇಳಲಾಗದು. ಆದ್ದರಿಂದ ಕರ್ಣಾದಿವಿದೂರತ್ವಲಿಂಗವು ಅಗ್ನಿಯಲ್ಲಿ ಸಾವಕಾಶವಾಗಿದೆಯೆಂಬ ಪೂರ್ವಪಕ್ಷವು ನಿರಾಕೃತವಾಯಿತು.

ಇನ್ನು ಅಗ್ನಿಪ್ರಕರಣ ಹಾಗೂ ಶ್ರುತಿಗಳು ನಿರವಕಾಶವೆಂಬ ಪೂರ್ವಪಕ್ಷವು ಸರಿಯಲ್ಲ. ಹತ್ತಾರು ಶ್ರುತಿಸ್ಮೃತಿಗಳು ವಿಷ್ಣುವನ್ನೇ 'ಅಗ್ನಿ, ಜ್ಯೋತಿ' ಎಂದು ಸಾರಿ ಹೇಳುತ್ತಿರುವಾಗ ಈ ಶಬ್ದಗಳು ಅಗ್ನಿದೇವತೆಯಲ್ಲಿ ನಿರವಕಾಶಗಳಾಗುವುದಿಲ್ಲ. 'ಇದು ಅಗ್ನಿಸೂಕ್ತವೇ ಹೊರತು ವಿಷ್ಣುಸೂಕ್ತವಲ್ಲ' ಎಂದು ಕೆಲವು ಅಧ್ಯಾಪಕರು ಹೇಳಿದರೆ ಅದು ಕೇವಲ ಅವರ ಅಜ್ಞಾನ ಹೊರತು ಯಥಾರ್ಥಸಂಗತಿಯಲ್ಲ.

ಅಗ್ನಿಸೂಕ್ತವಾಗಿದ್ದರೂ ಸಹ ಕರ್ಣಾದಿವಿದೂರತ್ವ ಮೊದಲಾದ ನಿರವಕಾಶಲಿಂಗಬಲದಿಂದ ವಿಷ್ಣುಪರವೇ ಆಗುತ್ತದೆ. ಈ ನ್ಯಾಯವು ಅಗ್ನಿಸೂಕ್ತದಲ್ಲಷ್ಟೇ ಅಲ್ಲ. ಇಂದ್ರ ಬೃಹಸ್ಪತಿ ಸೂರ್ಯ ವರುಣ ವಿಶ್ವಕರ್ಮ ಮೊದಲಾದವರ ಸೂಕ್ತಗಳಲ್ಲಿಯೂ ಅನ್ವಯಿಸುತ್ತದೆ. ಮತ್ತು ಸೌರಸೂಕ್ತದಲ್ಲಿ ಪಾವಕವರುಣ ಮೊದಲಾದ ಬೇರೆ ಬೇರೆ ದೇವತೆಗಳನ್ನು ಸಂಬೋಧನೆ ಮಾಡುವ ಶಬ್ದಗಳಿವೆ. ವರುಣಸೂಕ್ತದಲ್ಲಿ ಆದಿತ್ಯ ಎಂದಿದೆ. ಅಗ್ನಿಸೂಕ್ತದಲ್ಲಿ ಇಂದ್ರ ಎಂದಿದೆ. ಹೀಗೆ ಆಯಾಯ ದೇವತೆಗಳನ್ನು ಹೇಳುವ ಸೂಕ್ತಗಳಲ್ಲಿ ಬೇರೆ ದೇವತೆಗಳನ್ನು ಸಂಬೋಧಿಸುವ ಪದಗಳು ಬಹಳಷ್ಟು ಕಾಣಿಸುತ್ತವೆ. ಆದ್ದರಿಂದ ನಿರವಕಾಶಬ್ರಹ್ಮಲಿಂಗಗಳಿರುವ ಸೂಕ್ತಗಳೆಲ್ಲವೂ ವಿಷ್ಣುವನ್ನಷ್ಟೇ ಪ್ರತಿಪಾದಿಸುತ್ತವೆ ಎಂದು ಒಪ್ಪಿದಾಗ ಮಾತ್ರ ಈ ಅನುಪಪತ್ತಿಯು ಪರಿಹಾರವಾಗಲು ಸಾಧ್ಯ.

ಈ ಸೂಕ್ತಗಳಲ್ಲಿರುವ ಬ್ರಹ್ಮಲಿಂಗಗಳು ಕೇವಲ ಸ್ತೋತ್ರಪರವೆಂದು ಕೆಲವರ ಅಭಿಪ್ರಾಯ. ಹಾಗಾದಲ್ಲಿ ಆಕಾಶಪ್ರಾಣಾದಿಗಳಲ್ಲಿ ಹೇಳಿದ ಪರೋವರೀಯಸ್ತ್ವಾದಿ ಲಿಂಗಗಳೂ ಸಹ ಸ್ತೋತ್ರಪರವೆಂದಾಗಿ ಬ್ರಹ್ಮಲಿಂಗಗಳೇ ಆಗದಿರಬೇಕಾದೀತು? ಆವಾಗ ಆಕಾಶಾದ್ಯಧಿಕರಣಗಳು ಹೊರಟಿದ್ದೇ ವ್ಯರ್ಥವಾಗಬೇಕಾದೀತು.

ನಿರವಕಾಶಲಿಂಗದಿಂದ ಪ್ರಕರಣಾನುಗ್ರಹವಿರುವ ಶ್ರುತಿಯು ಸಹ ಬಾಧಿತವಾಗುತ್ತದೆಂಬುದು ಈ ಅಧಿಕರಣದ ಸಿದ್ಧಾಂತನ್ಯಾಯ. ಈ ನ್ಯಾಯದಿಂದಲೇ ಅಂತರಧಿಕರಣದ ಪೂರ್ವಪಕ್ಷವೂ ಸಹ ನಿರಾಕೃತವಾಗುತ್ತದೆ. ಪುನಃ ಅಂತರಧಿಕರಣದ ಸಿದ್ಧಾಂತನ್ಯಾಯವು ಅನಾವಶ್ಯಕವಲ್ಲವೇ? ಎಂಬ ಪ್ರಶ್ನೆಗೆ ಹೀಗೆ ಉತ್ತರ -- ಅಂತರಧಿಕರಣದ ನ್ಯಾಯವನ್ನು ಅವಲಂಬಿಸಿಯೇ ಈ ಅಧಿಕರಣವು ಹೊರಟಿದೆ. ಈ ಅಧಿಕರಣವು ಪುನಃ ತನಗೆ ಆಶ್ರಯವಾದ ಅಂತರಧಿಕರಣವನ್ನೇ ಅಲ್ಲಗಳೆಯಲು ಸಾಧ್ಯವಿಲ್ಲ.

ಮೂರನೆಯ ಪಾದದ ಜ್ಯೋತಿರುಪಕ್ರಮಾಧಿಕರಣದಿಂದ ಈ ಅಧಿಕರಣದಿಂದ ಪುನರುಕ್ತಿ ಬರುತ್ತದೆಂದು ಮತ್ತೊಂದು ಪ್ರಶ್ನೆ. ಆದರೆ ಬೃಹದಾರಣ್ಯಕದಲ್ಲಿ ಬರುವ ಉಪಕ್ರಮ ಉಪಸಂಹಾರಗಳು ವಿಷ್ಣುಪರವಾದ್ದರಿಂದ ಜೀವಲಿಂಗವೆನಿಸಿದ ಮ್ರಿಯಮಾಣತ್ವಾದಿಗಳು ಕಥಂಚಿತ್ ವಿಷ್ಣುವಿನಲ್ಲಿ ಯೋಜನೆ ಮಾಡಬೇಕೆಂಬುದು ಜ್ಯೋತಿರುಪಕ್ರಮಾಧಿಕರಣದ ಸಿದ್ಧಾಂತನ್ಯಾಯ. ನಿರವಕಾಶಲಿಂಗದಿಂದ ಸಾವಕಾಶವು ಬಾಧಿತವಾಗುತ್ತದೆಂಬುದು ಈ ಅಧಿಕರಣದ ಸಿದ್ಧಾಂತನ್ಯಾಯ. ಹೀಗೆ ಎರಡೂ ಅಧಿಕರಣದ ಸಿದ್ಧಾಂತನ್ಯಾಯಗಳು ವಿಭಿನ್ನವಾಗಿರುವಾಗ ಪುನರುಕ್ತಿಗೆ ಅವಕಾಶವಿಲ್ಲ.

ಪರಿಪೂರ್ಣಚಂದ್ರಿಕಾ

ಪ್ರಕಾಶತ್ವವು ಜ್ಯೋತಿಶಬ್ದದ ಪ್ರವೃತ್ತಿನಿಮಿತ್ತವಾದ್ದರಿಂದ ಪ್ರಮೇಯಾಶ್ರಿತ ಪೂರ್ವಪಕ್ಷಕ್ಕೆ ಅವಕಾಶವಿಲ್ಲ.

ಸೂತ್ರಕಾರರು ಕರ್ಣಾದಿವಿದೂರತ್ವಲಿಂಗವನ್ನೇ ಉಲ್ಲೇಖಿಸಲು ಕಾರಣವೇನೆಂದರೆ ವಿಷಯವಾಕ್ಯದಲ್ಲಿ ಸ್ಪಷ್ಟವಾಗಿ ಕೇಳಿಸುತ್ತಿದೆ ಎಂದು. ಮತ್ತು ಉಳಿದೆಲ್ಲ ಲಿಂಗಗಳು ಅಪರಿಮಿತವೈಭವದಲ್ಲಿಯೇ ಸೇರಿಹೋಗಿವೆ ಎಂದು. ವಸ್ತುತಃ ಸೂತ್ರಕಾರರು ವಿಚರಣಾಭಿಧಾನಾತ್ ಎಂದೇ ಹೇಳಬೇಕು. ಆದರೆ ಶ್ರುತಿಯಲ್ಲಿ ಈ ಶಬ್ದವು ದೂರದಲ್ಲಿದ್ದು ಚರಣಾಭಿಧಾನ 'ಶಬ್ದವು' ಎಂದಷ್ಟೇ ಕೇಳಿಸುತ್ತಿದೆ. ಆದರ ಅನುಗಮಕ್ಕಾಗಿ 'ಚರಣಾಭಿಧಾನಾತ್' ಎಂದಿದ್ದಾರೆ. ಜ್ಯೋತಿಶಬ್ದದ ಪ್ರವೃತ್ತಿನಿಮಿತ್ತವು ಮುಖ್ಯವಾಗಿ ಭಗವಂತನಲ್ಲಿಯೇ ಬರುವುದರಿಂದ ಭಗವಂತನೇ ಜ್ಯೋತಿಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ.

* * * * *

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ ज्योतिरधिकरणम्

### ಜ್ಯೋತಿರಧಿಕರಣ - ಅಧಿಕರಣವಿಭಾಗದಲ್ಲಿ ದ್ವೈತಸಿದ್ಧಾಂತದ ವಿಭಿನ್ನ ಅಭಿಪ್ರಾಯಗಳು

ॐ ज्योतिश्चरणाभिधानात् ॐ ॥ अत्र त्रीणि दर्शनानि । 'ज्योतिः'इत्यादि-चतुस्सूत्री एकमधिकरणम् । विषयवाक्यं तु अग्निसूक्तस्थं ''ज्योतिर्हृदय आहितं यत्'' इति वाक्यमेवेत्येकं मतम् । इदं च ''ज्योतिः'' इत्यस्य सूत्रस्य अग्निसूक्तस्थं वाक्यमेव उदाहृत्य, ''इदं चैकमधिकरण'' इति वदतः तत्त्वप्रदीपकृतोऽभिप्रेतम् ।

मतान्तरं तु – चतुस्सूत्र्या एकाधिकरणत्वेऽपि, विषयवाक्यं ''ज्योतिः'' इत्यस्यापि ''अथ यदतः परोदिवो ज्योतिः'' इति छान्दोग्यवाक्यमेवेति । इदं च ''छन्दोऽभिधानात्'' इति सूत्रव्याख्यानरूपं ''नित्यत्वादेव शब्दानाम्'' इत्यनु-व्याख्यानं, 'ज्योतिश्चरणाभिधानात्' इत्यधिकरणं तात्पर्यतो विवृणोतीत्यवतार्य, ''ज्योतिः'' इति सूत्रस्य छान्दोग्यवाक्यमेवोदाहरतः सन्न्यायरत्नावलीकारस्याभि-प्रेतम् ।

मतान्तरं तु – ज्योतिस्सूत्रमेकाधिकरणं, ''छन्दः'' इत्यादि त्रिसूत्री त्वधि-करणान्तरमिति । इदं च टीकाकारस्याभिप्रेतम् ।

ಅನುವಾದ - ಜ್ಯೋತಿರಧಿಕರಣದ ವಿಭಾಗದಲ್ಲಿ ಮೂರು ಮತಗಳಿವೆ.

೧. ಜ್ಯೋತಿರಿತ್ಯಾದಿ ನಾಲ್ಕು ಸೂತ್ರಗಳು ಸೇರಿ ಒಂದೇ ಅಧಿಕರಣ. ಅಗ್ನಿಸೂಕ್ತದಲ್ಲಿರುವ 'ಜ್ಯೋತಿರ್ಹೃದಯ ಆಹಿತಂ ಯತ್' ಎಂಬ ವಾಕ್ಯವೇ ಅಧಿಕರಣದ ವಿಷಯವಾಕ್ಯವೆಂದು ಮೊದಲನೆಯ ಮತ. ಈ ಮತದವರು 'ಜ್ಯೋತಿಶ್ಚರಣಾಭಿಧಾನಾತ್' ಎಂಬ ಸೂತ್ರಕ್ಕೆ ಅಗ್ನಿಸೂಕ್ತ-ದಲ್ಲಿರುವ ವಾಕ್ಯವನ್ನೇ ಉದಾಹರಿಸಿ 'ಇದಂ ಚ ಏಕಮಧಿಕರಣಮ್' (ಇದು ಒಂದೇ ಅಧಿಕರಣ-ವಾಗಿದೆ) ಎಂಬುದು ತತ್ವಪ್ರದೀಪಕಾರರ ಅಭಿಪ್ರಾಯವಾಗಿದೆ.

೨. ಮತ್ತೊಂದು ಮತ ನಾಲ್ಕುಸೂತ್ರಗಳು ಒಂದೇ ಅಧಿಕರಣವಾಗಿದ್ದರೂ 'ಜ್ಯೋತಿಶ್ಚರಣಾ-

ಭಿಧಾನಾತ್' ಎಂಬ ಸೂತ್ರಕ್ಕೆ 'ಅಥ ಯದತಃ ಪರೋ ದಿವೋ ಜ್ಯೋತಿಃ' ಎಂಬ ಛಾಂದೋಗ್ಯ-ಶ್ರುತಿಯು ವಿಷಯವಾಕ್ಯವಾಗಿದೆ. 'ಛಂದೋಭಿಧಾನಾತ್' ಎಂಬ ಸೂತ್ರವ್ಯಾಖ್ಯಾನರೂಪವಾದ 'ನಿತ್ಯತ್ವಾದೇವ ಶಬ್ದಾನಾಮ್' ಎಂಬ ಅನುವ್ಯಾಖ್ಯಾನದ ಅವತಾರಿಕೆ ಹೀಗಿದೆ - 'ಜ್ಯೋತಿಶ್ಚರಣಾಭಿ-ಧಾನಾತ್ ಇತ್ಯಧಿಕರಣಂ ತಾತ್ಪರ್ಯತಃ ವಿವೃಣೋತಿ' (ಜ್ಯೋತಿರಧಿಕರಣದ ತಾತ್ಪರ್ಯವನ್ನು ವಿವರಿಸುತ್ತಿದ್ದಾರೆ' ಎಂದು) ಹೀಗೆ ಅವತಾರಿಕೆ ನೀಡಿ ಛಾಂದೋಗ್ಯವಾಕ್ಯವನ್ನೇ ಸೂತ್ರದ ವಿಷಯ-ವಾಕ್ಯವನ್ನಾಗಿ ಉದಾಹರಿಸುವುದು. ಇದು ಸನ್ನ್ಯಾಯರತ್ನಾವಲೀಕಾರರ ಅಭಿಪ್ರಾಯ.

೩. ಮತ್ತೊಂದು ಮತ. 'ಜ್ಯೋತಿಶ್ಚರಣಾಭಿಧಾನಾತ್' ಎಂಬ ಒಂದು ಸೂತ್ರವು ಪ್ರತ್ಯೇಕ ಅಧಿಕರಣವಾಗಿದೆ. 'ಛಂದೋಭಿಧಾನಾತ್' ಇತ್ಯಾದಿ ಮೂರು ಸೂತ್ರಗಳು ಮತ್ತೊಂದು ಅಧಿಕರಣ-ವಾಗಿದೆ. ಇದು ತತ್ತ್ವಪ್ರಕಾಶಿಕಾಕಾರರಿಗೆ ಸಮ್ಮತವಾದದ್ದು.

### ಕಠಿಣಪದಾರ್ಥ

ಅತ್ರ = ಅಧಿಕರಣವಿಭಾಗವಿಷಯದಲ್ಲಿ; ತ್ರೀಣಿ ದರ್ಶನಾನಿ = ಸಿದ್ಧಾಂತಿಗಳ ಮೂರು ವಿಭಿನ್ನ ಅಭಿಪ್ರಾಯಗಳಿವೆ; ಇದಂ ಚ = ಈ ಮತವು; ತತ್ತ್ವಪ್ರದೀಪಕೃತಃ = ಪ್ರಾಚೀನಭಾಷ್ಯವ್ಯಾಖ್ಯಾನಕಾರರೆಂದು ಪ್ರಸಿದ್ಧರಾದ ತ್ರಿವಿಕ್ರಮಪಂಡಿತಚಾರ್ಯರರಿಗೆ ಅಭಿಪ್ರೇತವಾಗಿದೆ; ಸನ್ನ್ಯಾಯರತ್ನಾವಲೀಕಾರಸ್ಯ = ಪ್ರಾಚೀನ ಅನುವ್ಯಾಖ್ಯಾನ ವ್ಯಾಖ್ಯಾನಕಾರರೆಂದು ಪ್ರಸಿದ್ಧರಾದ ಪದ್ಮನಾಭತೀರ್ಥರಿಗೆ, ಟೀಕಾಕಾರಸ್ಯ = ತತ್ತ್ವಪ್ರಕಾಶಿಕಾಕಾರರಾದ ಟೀಕಾರಾಯರಿಗೆ

**प्रकाशः – ॐ ज्योतिश्चरणाभिधानात् ॐ** ॥ ''टीकासु च यदस्पष्टम्'' इति प्रतिज्ञानुरोधेन टीकाकृतां योजनाभेदेषूपपत्तीर्विवक्षुर्विरोधं च परिजिहीर्षुस्तदुक्त-योजनाभेदान् दर्शयति – **अत्रेति** ॥ ''त्रीणि दर्शनानि'' इत्युक्त्या त्रयमप्युपादेय-मिति सूचयति – **चतुस्सूत्रीति**॥ 'ज्योतिः' इत्येकम्, **'छन्दोऽभिधानान्नेति चेन्न तथा चेतोर्पणनिगदात्तथा हि दर्शनम्' 'भूतादिपादव्यपदेशोपपत्तेश्चैवम्' 'उपदेशभेदान्नेति चेन्नोभयस्मिन्नप्यविरोधात्'** इति चतुस्सूत्री ॥ **तत्त्वप्रदीपेति** ॥ प्राचीनभाष्यव्याकर्तुः ।

''इति सूत्रव्याख्यानरूपं'' इति सुधारीत्योक्तम्, एतन्मते ज्योतिस्सूत्रस्यापि तात्पर्यतो व्याख्यानरूपत्वात् । यद्वा – साक्षाच्छन्दस्सूत्रस्यैव व्याख्यानरूपत्वा-भिप्रायेणैवमुक्तम् 'इत्यनुव्याख्यानं इत्यवतार्य' इत्यन्वयः ॥ **सन्न्यायेति** ॥ प्राचीनानुव्याख्यानव्याख्यातुः ॥ **टीकाकारस्येति** ॥ तत्वप्रकाशिकाकृतः ।

ವಿವರಣೆ - ಜ್ಯೋತಿರಧಿಕರಣವು ಪ್ರಾರಂಭವಾಗುತ್ತಿದೆ. 'ಟೀಕಾಸು ಚ ಯದಸ್ಪಷ್ಟಮ್' ಎಂದು ಗ್ರಂಥಕಾರರು ಎಲ್ಲಾ ಟೀಕೆಗಳ ವಿರೋಧವನ್ನು ಪರಿಹಾರ ಮಾಡುತ್ತೇವೆಂದು ಪ್ರತಿಜ್ಞೆ ಮಾಡಿದ್ದರು. ಅದರಂತೆ ಜ್ಯೋತಿರಧಿಕರಣದ ವಿಷಯದಲ್ಲಿ ಆಪಾತತಃ ತೋರುವ ಟೀಕೆಗಳ ವಿರೋಧವನ್ನು ಪರಿಹರಿಸುತ್ತಿದ್ದಾರೆ. 'ಜ್ಯೋತಿಶ್ಚರಣಾಭಿಧಾನಾತ್' ಇತ್ಯಾದಿ ನಾಲ್ಕು ಸೂತ್ರಗಳು ಸೇರಿ ಒಂದೇ ಅಧಿಕರಣವೋ? ಅಥವಾ ಎರಡು ಅಧಿಕರಣಗಳೋ? ಒಂದೇ ಅಧಿಕರಣವಾದರೂ ಅಗ್ನಿಸೂಕ್ತದಲ್ಲಿರುವ ಶ್ರುತಿಯು ವಿಷಯವಾಕ್ಯವೋ? ಛಾಂದೋಗ್ಯಶ್ರುತಿಯು ವಿಷಯವಾಕ್ಯವೋ? ಎಂದು ಮೂರು ಟೀಕೆಗಳಿಗೆ ಪರಸ್ಪರವಿರೋಧ ಕಾಣಿಸುತ್ತಿದೆ. ಗ್ರಂಥಕಾರರು 'ತ್ರೀಣಿ ದರ್ಶನಾನಿ' ಎಂದು ಹೇಳಿದ್ದರಿಂದ (ಕೇಚಿತ್ತು ಇತ್ಯಾದಿ ಪದಗಳನ್ನಾಗಲೀ, ಆಹುಃ ಇತ್ಯಾದಿ ಪದಗಳನ್ನಾಗಲೀ ಉಲ್ಲೇಖಿಸದ ಕಾರಣ) ಮೂರೂ ಮತಗಳು ಉಪಾದೇಯವೆಂದು ಸೂಚಿಸಿದ್ದಾರೆ.

ಓಂ ಜ್ಯೋತಿಶ್ಚರಣಾಭಿಧಾನಾತ್ ಓಂ, 'ಓಂ ಛಂದೋಽಭಿಧಾನಾತ್ ನೇತಿ ಚೇನ್ನ ತಥಾ ಚೇತೋಽರ್ಪಣನಿಗದಾತ್ ತಥಾ ಹಿ ದರ್ಶನಮ್ ಓಂ', 'ಓಂ ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಂ ಓಂ' 'ಓಂ ಉಪದೇಶಭೇದಾತ್ ನೇತಿ ಚೇನ್ನ ಉಭಯಸ್ಮಿನ್ನಪ್ಯವಿರೋಧಾತ್ ಓಂ' ಈ ನಾಲ್ಕುಸೂತ್ರಗಳನ್ನೂ ಸೇರಿಸಿ ಒಂದೇ ಅಧಿಕರಣವೆಂದು ತತ್ವಪ್ರದೀಪಕಾರರು ಹೇಳುತ್ತಾರೆ. ಆದರೆ ಶ್ರೀಪದ್ಮನಾಭತೀರ್ಥರು ಅಧಿಕರಣ ಒಂದೇ ಆಗಿದ್ದರೂ ವಿಷಯವಾಕ್ಯಮಾತ್ರ ಭಿನ್ನ ಭಿನ್ನವೆನ್ನುತ್ತಾರೆ. 'ನಿತ್ಯತ್ವಾದೇವ ಶಬ್ದಾನಾಮ್' ಎಂಬ ಅನುವ್ಯಾಖ್ಯಾನವು ಛಂದೋಽಭಿಧಾನಾತ್ ಎಂಬ ಸೂತ್ರದ ವ್ಯಾಖ್ಯಾನರೂಪವಾಗಿದೆ ಎಂದು ನ್ಯಾಯಸುಧಾಪ್ರಕಾರ ಹೇಳಿದ್ದು. ಆದರೆ ಪದ್ಮನಾಭತೀರ್ಥರ ಪ್ರಕಾರ ಜ್ಯೋತಿಃಸೂತ್ರದ ತಾತ್ಪರ್ಯವನ್ನು ಈ ವಾಕ್ಯವು ವ್ಯಾಖ್ಯಾನಿಸುತ್ತಿದೆ. ಅಥವಾ ಛಂದಸೂತ್ರಕ್ಕೆ ಸಾಕ್ಷಾತ್ತಾಗಿ ವ್ಯಾಖ್ಯಾನವಾಗಿದೆ ಎಂದು ಹೇಳಬಹುದು. ತತ್ವಪ್ರಕಾಶಿಕಾಕಾರರು ಮಾತ್ರ ಈ ನಾಲ್ಕುಸೂತ್ರಗಳನ್ನು ಒಂದೇ ಅಧಿಕರಣದಲ್ಲಿ ಸೇರಿಸುವುದಿಲ್ಲ. ಜ್ಯೋತಿರಧಿಕರಣದಲ್ಲಿ 'ಜ್ಯೋತಿಶ್ಚರಣಾಭಿಧಾನಾತ್' ಎಂಬ ಸೂತ್ರವು ಸೇರಿದೆ. ಗಾಯತ್ರ್ಯಧಿಕರಣದಲ್ಲಿ ಉಳಿದ ಮೂರು ಸೂತ್ರಗಳು ಸೇರಿವೆ ಎನ್ನುತ್ತಾರೆ.

**गुरुराजीयम् – ॐ ज्योतिश्चरणाभिधानात् ॐ** ॥ ननु ज्योतिरधिकरण-टीका न व्याख्येया । अनुपपन्नत्वान्मानान्तरविरुद्धत्वाच्चेत्यतो मानान्तराविरोधं दर्शयितुं तत्रान्तरानुपपत्तीश्च परिहरन् मतान्तरमुपन्यस्यति – **अत्रेति** ॥ यद्वा टीकासु च यदस्पष्टं तच्च स्पष्टीकरिष्यत इति प्रतिज्ञामवंध्यां कर्तुमाह – **अत्रेति** ॥ सिद्धान्तिनामितिशेषः ।

## ಸಾರ

ಜ್ಯೋತಿರಧಿಕರಣದ ವಿಷಯದಲ್ಲಿ ಮೂವರು ಜ್ಞಾನಿಗಳು ವಿಭಿನ್ನಾಭಿಪ್ರಾಯಗಳನ್ನೊಳಗೊಂಡಿದ್ದಾರೆ.

ತ್ರಿವಿಕ್ರಮಪಂಡಿತರು -- ಈ ಸೂತ್ರವು ಪ್ರತ್ಯೇಕ ಅಧಿಕರಣವಲ್ಲ. ಮುಂದಿನ ಮೂರು ಸೂತ್ರಗಳು ಸೇರಿ

ಒಟ್ಟು ನಾಲ್ಕು ಸೂತ್ರಗಳು ಒಂದೇ ಅಧಿಕರಣ. 'ಜ್ಯೋತಿರ್ಹೃದಯ ಆಹಿತಂ ಯತ್' ಎಂಬ ಋಗ್ವೇದದ ಅಗ್ನಿಸೂಕ್ತವು ವಿಷಯವಾಕ್ಯ.

ಪದ್ಮನಾಭತೀರ್ಥರು -- ನಾಲ್ಕುಸೂತ್ರಗಳು ಒಂದೇ ಅಧಿಕರಣವಾಗಿವೆ. ಆದರೆ 'ಅಥ ಯದತಃ ಪರೋ ದಿವೋ ಜ್ಯೋತಿಃ' ಎಂಬ ಛಾಂದೋಗ್ಯವು ವಿಷಯವಾಕ್ಯ. ಅಗ್ನಿಸೂಕ್ತದ ಮಂತ್ರವು ವಿಷಯವಾಕ್ಯವಲ್ಲ.

ಟೀಕಾರಾಯರು – ಮೊದಲನೆಯ ಸೂಕ್ತವು ಜ್ಯೋತಿರಧಿಕರಣ. ಅನಂತರದ ಮೂರು ಸೂತ್ರಗಳು ಗಾಯತ್ರ್ಯಧಿಕರಣ. ಹೀಗೆ ಎರಡೂ ಕೂಡ ಪ್ರತ್ಯೇಕ ಅಧಿಕರಣಗಳಾಗಿವೆ. ಜ್ಯೋತಿರಧಿಕರಣದಲ್ಲಿ ಅಗ್ನಿಸೂಕ್ತದ ಮಂತ್ರವು ವಿಷಯವಾಕ್ಯ. ಗಾಯತ್ರ್ಯಧಿಕರಣದಲ್ಲಿ ಛಾಂದೋಗ್ಯದ ಮಂತ್ರವು ವಿಷಯವಾಕ್ಯ.

— — — — — —

## ತತ್ವಪ್ರದೀಪಕಾರರ ಅಭಿಪ್ರಾಯ ತಪ್ಪಲ್ಲ

**तात्पर्यचन्द्रिका –**

**न चात्राऽऽद्यपक्षे अग्निसूक्ते गायत्रीरूपछन्दोऽभिधानभूतादिपादव्यपदेशोपदेशभेदानामभावेन ''छन्दोऽभिधानात्'' इत्यादेरयोग इति वाच्यम्,**

**''ज्योतिर्हृदय आहितं यत्'' इति अग्निसूक्तस्थस्यैव ज्योतिषः छान्दोग्येऽपि ज्योतिश्श्रुत्या, ''योऽयमन्तर्हृदये'' इति हृदयनिहितत्वधर्मेण च शाखान्तराधिकरणन्यायेन प्रत्यभिज्ञायमानत्वेनैकत्वात् । अन्यथा अनेकाधिकरणपक्षेऽपि छान्दोग्योक्तस्य ज्योतिषो ''गायत्री वा इदꣳसर्वम्'' इति श्रवणात् छन्दस्त्वेऽप्यग्निसूक्तस्थस्य च्छन्दस्त्वानापत्त्या पूर्वाधिकरणसिद्धान्ताक्षेपेण उत्तराधिकरणपूर्वपक्षो न स्यात् ।**

**तथाच ''छन्दोऽभिधानात्'' इत्यस्यायमर्थः – अग्निसूक्तस्थं ज्योतिर्न विष्णुः, अस्यैव ज्योतिषः छान्दोग्ये गायत्रीत्वाभिधानात् इति । एवं भूतादिपादव्यपदेशादावपि द्रष्टव्यम् ।**

**नच पूर्वपक्षे अग्निसूक्तस्याग्निपरत्वात्, छान्दोग्यस्य च छन्दः परत्वात् प्रत्यभिज्ञाऽयोग इति शङ्क्यम्, अस्मिन्मते ''तेजो वै ब्रह्मवर्चसं गायत्री'' इति श्रुतौ अग्निशब्दानतिभिन्नार्थतेजश्शब्दगायत्रीशब्दयोः सामानाधिकरण्यदर्शनेनाग्नौ गायत्रीशब्दस्य, गायत्र्यां वा अग्निशब्दस्य सम्भवेन अग्निसूक्तवत् छान्दोग्यस्याग्निपरतायाः,**

**छान्दोग्यवदग्निसूक्तस्याऽपि गायत्रीपरताया वा सम्भवेन द्वयोरप्येकार्थत्वात् । न चाग्निसूक्तस्थेन कर्णादिविदूरत्वेन ''तदेतदृष्टं च श्रुतं च'' इति छान्दोग्यस्थ-दृष्टत्वादिकं विरुद्धमिति शङ्क्यम्, आकारभेदेनाविरोधात् ।**

**एकाधिकरणत्वादेव हि ''छन्दोभिधानात्'' इति सूत्रे समन्वेतव्यशब्दान्तर-मनुक्त्वा ''विकारशब्दान्नेति चेत्'' इत्यादाविव पूर्वसूत्रोक्तसमन्वयबाधकमात्र-मुद्धृतम् । भाष्येऽपि छन्दस्सूत्रव्याख्यानावसरे ''अग्निगायत्र्यादि'' इति अग्निपदं प्रयुक्तम् । तस्मादाद्यं मतं युक्तम्।**

ಅನುವಾದ - ಪ್ರಶ್ನೆ - ಮೊದಲನೆಯ ಮತದಲ್ಲಿ ಅಗ್ನಿಸೂಕ್ತವನ್ನು ವಿಷಯವಾಕ್ಯವೆಂದು ಹೇಳಿದಿರಿ. ಆದರೆ ಆ ವಿಷಯವಾಕ್ಯದಲ್ಲಿ ಗಾಯತ್ರೀರೂಪಛಂದೋವಾಚಕವಾದ ಶಬ್ದವಾಗಲೀ ಭೂತಾದಿ ಪಾದವ್ಯಪದೇಶವಾಗಲಿ ಉಪದೇಶಭೇದವಾಗಲೀ ಕೇಳಿಸುತ್ತಿಲ್ಲ. ಆದ್ದರಿಂದ ಛಂದೋಭಿ-ಧಾನಾತ್ ಇತ್ಯಾದಿಯಾಗಿ ಮುಂದಿನ ಸೂತ್ರಗಳಲ್ಲಿ ಹೇಳಿದ್ದು ತಪ್ಪಾಗುತ್ತದಲ್ಲವೇ.

ಉತ್ತರ - ಜ್ಯೋತಿರ್ಹೃದಯ ಆಹಿತಂ ಯತ್ ಎಂಬಲ್ಲಿರುವ ಅಗ್ನಿಸೂಕ್ತದಿಂದ ಜ್ಯೋತಿಶ್ಶಬ್ದವೇ ಛಾಂದೋಗ್ಯದಲ್ಲಿಯೂ ಶ್ರುತವಾಗಿದೆ.ಮತ್ತು ಯೋಽಯಂ ಅಂತರ್ಹೃದಯಃ ಎಂಬ ಹೃದಯನಿಹಿತತ್ವ ಧರ್ಮವೂ ಸಮಾನವಾಗಿ ಶ್ರುತವಾಗಿದೆ. ಆದ್ದರಿಂದ ಶಾಖಾಂತರ ಅಧಿಕರಣನ್ಯಾಯದಂತೆ ಪ್ರತ್ಯಭಿಜ್ಞಾ ಬರುವುದರಿಂದ ಒಂದೇ ವಿಷಯವಾಕ್ಯವೆಂದು ಹೇಳಬಹುದು. ಇಲ್ಲದಿದ್ದರೆ ಅನೇಕ ಅಧಿ ಕರಣವೆಂದು ಹೇಳುವ ಟೀಕಾಕಾರರ ಪಕ್ಷದಲ್ಲಿಯೂ ದೋಷ ತಪ್ಪಿದ್ದಲ್ಲ. ಏಕೆಂದರೆ ಛಾಂದೋಗ್ಯದಲ್ಲಿ ಹೇಳಲ್ಪಟ್ಟ ಜ್ಯೋತಿಯನ್ನು 'ಗಾಯತ್ರೀ ವಾ ಇದಂ ಸರ್ವಮ್' ಎಂದು ಛಂದಸ್ಸೆಂದು ಅಗ್ನಿಸೂಕ್ತವು ಹೇಳುತ್ತಿದೆ. ಎರಡೂ ಸೂಕ್ತಗಳು ಬೇರೆ ವಿಷಯವನ್ನು ಪ್ರತಿಪಾದಿಸುವುದಾದರೆ ಜ್ಯೋತಿಸ್ಸನ್ನು ಛಂದಸ್ಸೆಂದು ಹೇಳಲಾಗದ ಕಾರಣ ಜ್ಯೋತಿರಧಿಕರಣದ ಸಿದ್ಧಾಂತವನ್ನು ಆಕ್ಷೇಪಿಸಿ ಗಾಯತ್ರ್ಯಧಿಕರಣದ ಪೂರ್ವಪಕ್ಷವನ್ನೇ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಛಂದೋಭಿಧಾನಾತ್ ಎಂಬ ಸೂತ್ರಕ್ಕೆ ಹೀಗೆ ಅರ್ಥ. ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ವಿಷ್ಣುವಲ್ಲ. ಏಕೆಂದರೆ ಇದೇ ಜ್ಯೋತಿಸ್ಸನ್ನು ಛಾಂದೋಗ್ಯದಲ್ಲಿ ಗಾಯತ್ರಿ ಎಂದು ಹೇಳಿರುವುದರಿಂದ. ಇದರಂತೆ ಭೂತಾದಿಪಾದವ್ಯಪದೇಶಾದಿಗಳನ್ನು ಅಗ್ನಿಸೂಕ್ತದಲ್ಲಿ ಹೇಳಲಾಗಿದೆ ಎಂದು ತಿಳಿಯಬೇಕು.

ಪ್ರಶ್ನೆ - ಪೂರ್ವಪಕ್ಷ ಮಾಡುವಾಗ ಅಗ್ನಿಸೂಕ್ತದಲ್ಲಿರುವ ಜ್ಯೋತಿಃಶಬ್ದವು ಅಗ್ನಿಪರವಾಗಿರುತ್ತದೆ ಛಾಂದೋಗ್ಯದಲ್ಲಿರುವ ಜ್ಯೋತಿಃಶಬ್ದವು ಛಂದಸ್ಸನ್ನು ಹೇಳುತ್ತದೆ ಹೀಗಿರುವಾಗ ಎರಡೂ ಒಂದೇ ಎಂಬ ಪ್ರತ್ಯಭಿಜ್ಞೆಯು ಹೇಗೆ ಬರುತ್ತದೆ?

ಉತ್ತರ - ಇವರ ಮತದಲ್ಲಿ ಛಾಂದೋಗ್ಯ ಹಾಗೂ ಅಗ್ನಿಸೂಕ್ತಕ್ಕೆ ಒಂದೇ ಅರ್ಥ. ಏಕೆಂದರೆ 'ತೇಜೋ ವೈ ಬ್ರಹ್ಮವರ್ಚಸಂ ಗಾಯತ್ರೀ' ಎಂಬ ಮತ್ತೊಂದು ಶ್ರುತಿಯು ಅಗ್ನಿಶಬ್ದದ ಅರ್ಥವನ್ನೇ ಹೇಳುವ ತೇಜಸ್ ಎಂಬ ಶಬ್ದಕ್ಕೆ ಮತ್ತು ಗಾಯತ್ರೀಶಬ್ದಕ್ಕೆ ಸಾಮಾನಾಧಿಕರಣ್ಯವನ್ನು (ಒಂದೇ ವಿಭಕ್ತಿಯನ್ನು) ಹೇಳಿದೆ. ಇದರಿಂದ ಅಗ್ನಿಯಲ್ಲಿ ಗಾಯತ್ರೀಶಬ್ದವನ್ನು ಅಥವಾ ಗಾಯತ್ರಿಯಲ್ಲಿ ಅಗ್ನಿಶಬ್ದವನ್ನು ಪ್ರಯೋಗಿಸಬಹುದೆಂದು ತಿಳಿಯುತ್ತದೆ. ಈಗ ಅಗ್ನಿಸೂಕ್ತವು ಹೇಗೆ ಅಗ್ನಿಯನ್ನು ಹೇಳು-ತ್ತದೋ ಅದರಂತೆ ಛಾಂದೋಗ್ಯವೂ ಅಗ್ನಿಯನ್ನು ಪ್ರತಿಪಾದಿಸಬಹುದು. ಅಥವಾ ಛಾಂದೋಗ್ಯವು ಹೇಗೆ ಗಾಯತ್ರಿಯನ್ನು ಪ್ರತಿಪಾದಿಸುತ್ತದೋ ಅದರಂತೆ ಅಗ್ನಿಸೂಕ್ತವೂ ಗಾಯತ್ರಿಯನ್ನು ಪ್ರತಿಪಾದಿಸ-ಬಹುದು. ಹೀಗೆ ಎರಡೂ ಸೂಕ್ತಗಳು ಒಂದೇ ಅರ್ಥವನ್ನು ಪ್ರತಿಪಾದಿಸುತ್ತಿವೆಯೆಂದು ನಿರ್ಧಾರ-ವಾದ ಮೇಲೆ ಪ್ರಶ್ನೆಗೆ ಅವಕಾಶವಿಲ್ಲ.

ಪ್ರಶ್ನೆ - ಎರಡೂ ಸೂಕ್ತಗಳು ಒಂದೇ ಅರ್ಥವನ್ನು ಪ್ರತಿಪಾದಿಸಲು ಸಾಧ್ಯವಿಲ್ಲ. ಅಗ್ನಿಸೂಕ್ತದಲ್ಲಿ ಕರ್ಣಾದಿವಿದೂರತ್ವಧರ್ಮವನ್ನು ಜ್ಯೋತಿಯಲ್ಲಿ ಹೇಳಲಾಗಿದೆ. ಇದಕ್ಕೆ ವಿರುದ್ಧವಾದ ದೃಷ್ಟತ್ವ ಧರ್ಮವನ್ನು 'ತದೇತದ್ದೃಷ್ಟಂ ಚ ಶ್ರುತಂ ಚ' ಎಂಬ ಛಾಂದೋಗ್ಯವು ಹೇಳುತ್ತಿದೆ. ಎರಡೂ ಒಂದೇ ಆದರೆ ಈ ವಿರುದ್ಧಧರ್ಮಗಳು ತಪ್ಪಾಗುತ್ತದಲ್ಲವೇ?

ಉತ್ತರ - ಅನಂತಮಹಿಮೋಪೇತನಾದ ವಿಷ್ಣುವಿನಲ್ಲಿ ಇಂತಹ ವಿರುದ್ಧಧರ್ಮಗಳನ್ನು ಸುಲಭ-ವಾಗಿ ಹೇಳಬಹುದು. ಸಂಪೂರ್ಣವಾಗಿ ತಿಳಿಯಲಾರದವನಾದ್ದರಿಂದ ಕರ್ಣಾದಿವಿದೂರನೆಂದೂ; ಏಕದೇಶದಿಂದ ತಿಳಿಯುತ್ತಾನಾದ್ದರಿಂದ ದರ್ಶನವಿಷಯನೆಂದು ಆಕಾರಭೇದದಿಂದ ವಿರೋಧವನ್ನು ಪರಿಹರಿಸಬಹುದು.

ನಾಲ್ಕೂ ಸೂತ್ರಗಳು ಒಂದೇ ಅಧಿಕರಣವಾಗಿವೆ. ಆದ್ದರಿಂದಲೇ 'ಛಂದೋಭಿಧಾನಾತ್' ಎಂಬ ಮುಂದಿನ ಸೂತ್ರದಲ್ಲಿ ಸೂತ್ರಕಾರರು ಮತ್ತೊಂದು ಶಬ್ದವನ್ನು ಸಮನ್ವಯ ಮಾಡದೇ ಹಿಂದಿನ ಸೂತ್ರದಲ್ಲಿ ಸಮನ್ವಯ ಮಾಡಿದ ಬಾಧಕವನ್ನಷ್ಟೇ ಪರಿಹರಿಸುತ್ತಿದ್ದಾರೆ. ಯಾವರೀತಿಯಾಗಿ 'ವಿಕಾರಶಬ್ದಾನ್ನೇತಿ ಚೇನ್ನ' ಎಂಬ ಸೂತ್ರವು ಆನಂದಮಯಶಬ್ದದ ಸಮನ್ವಯದಲ್ಲಿ ಬಾಧಕವನ್ನಷ್ಟೇ ಪರಿಹರಿಸುತ್ತಿರುವುದರಿಂದ ಪ್ರತ್ಯೇಕ ಅಧಿಕರಣವಲ್ಲವೋ ಅದರಂತೆ 'ಛಂದೋಭಿಧಾನಾತ್' ಇತ್ಯಾದಿ ಮೂರು ಸೂತ್ರಗಳು ಪ್ರತ್ಯೇಕ ಅಧಿಕರಣಗಳಾಗಬೇಕಿಲ್ಲ. ಭಾಷ್ಯದಲ್ಲಿಯೂ ಕೂಡ ಛಂದಃಸೂತ್ರ-ವನ್ನು ವ್ಯಾಖ್ಯಾನಿಸುವಾಗ 'ಅಗ್ನಿಗಾಯತ್ರ್ಯಾದಿ' ಎಂದು ಅಗ್ನಿಶಬ್ದವನ್ನು ಪ್ರಯೋಗಿಸಿದ್ದಾರೆ. ಆದ್ದರಿಂದ ತತ್ವಪ್ರದೀಪಕಾರರ ಮತವು ಅತ್ಯಂತ ಸಮಂಜಸವಾಗಿದೆ.

### ಕಠಿಣಪದಾರ್ಥ

ಜ್ಯೋತಿಃಶ್ರುತ್ಯಾ = 'ಅಥ ಯದತಃ ಪರೋದಿವೋ ಜ್ಯೋತಿರ್ದೀಪ್ಯತೇ' ಎಂಬ ಶ್ರುತಿಯಿಂದ; ಏಕತ್ವಾತ್ = ಅಗ್ನಿಸೂಕ್ತ ಹಾಗೂ ಛಾಂದೋಗ್ಯದಲ್ಲಿರುವ ಜ್ಯೋತಿಯು

ಒಂದೇ ಆಗಿರುವುದರಿಂದ; ಪೂರ್ವಾಧಿಕರಣ = ಜ್ಯೋತಿರಧಿಕರಣದ; ಉತ್ತರಾ-
ಧಿಕರಣ = ಗಾಯತ್ರ್ಯಧಿಕರಣದ; ಪ್ರತ್ಯಭಿಜ್ಞಾಯೋಗಃ = ಒಂದೇ ಎಂಬ ಪ್ರತ್ಯಭಿಜ್ಞೆಯು
ಬರುವುದಿಲ್ಲ; ಅಸ್ಮಿನ್ ಮತೇ = ತತ್ವಪ್ರದೀಪಕಾರರ ಮತದಲ್ಲಿ; ಆಕಾರಭೇದೇನ =
ಸೂಕ್ಷ್ಮಸ್ಥೂಲ ಆಕಾರಭೇದದಿಂದ.

**प्रकाशः** – एवं मतभेदमुपन्यस्य तत्वप्रदीपपक्षे "वि मे कर्णा पतयतः" इत्यग्निसूक्तगतस्यैव सर्वत्र विषयवाक्यत्वेऽनुपपत्तिमाशङ्क्य समाधत्ते – **न चेति ॥ अभावेनेति ॥** "गायत्री वा इद ँ सर्वं भूतं यदिदं किञ्च" इत्यादि छान्दोग्यवाक्य एव सत्त्वेन तस्य छन्दःप्रभृतिसूत्रेष्वविषयत्वे तेषामयोग इत्यर्थः । 'ज्योतिश्श्रुत्या' **"अथ यदतः परो दिवो ज्योतिर्दीप्यते"** इति ज्योतिश्श्रुत्या ।

**॥शाखान्तरेति॥** अधिकरणशरीरं प्रागुक्तम् शास्त्रयोनिसूत्रे । **"एकं वा संयोगरूपचोदनाख्याविशेषात्"** इति सिद्धान्तसूत्रोपन्यस्तेन फलसंयोगादिसाधारणधर्मकृतप्रत्यभिज्ञारूपेण न्यायेन यथा शाखाभेदेऽपि अग्निहोत्रज्योतिष्टोमादिकर्माभेदः, तथा वेदभेदेऽपि शब्दैक्याद्धर्मैक्याज्ज्योतिरभेद इत्यर्थः । अग्निसूक्तगतस्य छान्दोग्यगतस्य च ज्योतिष एकत्वमवश्यमभ्युपेयम्, अन्यथा टीकाकृत् पक्षेऽप्ययुक्तिरित्याह – **अन्यथेति ॥** उक्तदिशैकत्वानभ्युपगतौ ॥ **पूर्वेति ॥** ज्योतिरधिकरणेत्यर्थः । अस्त्वेकत्वं ज्योतिषः, किं तत इत्यतः प्रागुक्तानुपपत्तिनिरासप्रकारमाह – **तथाचेति ॥** नन्वेवं पूर्वपक्षे अग्निसूक्तस्थं ज्योतिर्न विष्णुः, अन्यत्रनिरूढज्योतिःश्रुतेरिति स्वप्रकरणगतज्योतिश्श्रुतिरूपपूर्वपक्षयुक्त्यभिधानसम्भवेन प्रकरणान्तरगतज्योतिषैक्यं प्रसाध्य, तत्रत्यच्छन्दस्त्वादित्युक्त्यभिधानमसङ्गतम् ।

नच ज्योतिश्श्रुतेरधिदैवशब्दत्वे अधिभूतशब्दत्वे वा पूर्वन्यायेन विष्णुपरतया सावकाशत्वेन न निरवकाशविष्णुलिङ्गात् प्राबल्यमिति न सैव पूर्वपक्षप्रापिकेति वाच्यम्, भाष्याद्युक्तदिशा सूक्तरूपनिरवकाशप्रकरणानुगृहीततया प्राबल्यादिति चेन्न, वक्ष्यमाणरीत्या प्रकरणान्तरगतज्योतिषोऽपि विष्णुत्वं निर्णेतुमेतत्प्रकरणगतप्रापकापरित्यागेन प्रकरणान्तरगततत्तत्प्रापकाभिधानमुखेनैवज्ञातीयकसर्वगतज्योतिषो विष्णुत्वाक्षेपाभिप्रायेणान्यगतप्रापकाभिधानात् ।

न चैवं छान्दोग्यवाक्यमेव सर्वत्रोदाहृत्य तत्रत्यज्योतिषो विष्णुत्वनिर्णये कृते तदैक्यादग्निसूक्तगतज्योतिषोऽपि तन्निर्णयः सेत्स्यतीति वाच्यम्, अस्मिन्पक्षेऽपि

सिद्धान्ते छान्दोग्यस्थं ज्योतिर्विष्णुः, अस्यैव ज्योतिषोऽग्निसूक्ते चरणाभिधानात् इति वक्राश्रयणस्य तुल्यत्वात् ।

नन्वस्मिन्पक्षे केवलं सिद्धान्ते चरणरूपैकयुक्त्यभिधानाय प्रकरणान्तरानुसरणं तदर्थं सूत्रं चैकं, तत्वप्रदीपपक्षे च पूर्वोत्तरपक्षयोरनेकयुक्त्यभिधानायान्यप्रकरणानुसरणं तदर्थं सूत्राणि त्रीणिति गौरवमिति चेन्न, प्रकरणान्तरानुसरणे समाने युक्त्यादिगतैकानेकत्वादेरप्रयोजकत्वात् । प्रधानसूत्रे प्रकरणान्तरानुसरणापेक्षया गुणसूत्रेष्वेव तदनुसरणस्य न्याय्यत्वाच्च । चरणेन ज्योतिषो विष्णुत्वे पूर्वमभिहितेऽन्यप्रकरणगतप्रापकान्तरावष्टम्भेन पूर्वोक्ताक्षेपरूपशङ्काया अनन्तरमेवोदयाच्चेति तात्पर्यात् । उक्तं च तत्वप्रदीपे – "**अग्निसूक्तमुदाहृत्य मन्त्रगोचरं विचारमाचरता परमवैदिकेनाचार्येण निखिलोऽपि वेदसमन्वयो विचारितो भवतीति महानयं लाभः**" इति ॥ **एवमिति** ॥ अग्निसूक्तस्थं ज्योतिर्विष्णुरेव, अस्यैव ज्योतिषः छान्दोग्ये भूतादिपादव्यपदेशात् । उपदेशभेदेप्यविरोधादिति द्रष्टव्यमित्यर्थः ।

ननु भवेदेवमनुपपत्तिपरिहारः, यद्युभयगतज्योतिषोरेकत्वं स्यात् । न चैवम्, वाक्यद्वयस्यापि भिन्नार्थपरत्वात् । अन्यथा '**वागेवास्य ज्योतिः**' '**अथैष ज्योतिः**' इत्यादावपि ज्योतिश्श्रुत्यैकत्वं स्यादित्याशङ्क्याह – **नचेति** ॥ नन्वेवमप्यग्निसूक्तस्थस्य "**वि मे कर्णा पतयन्तो वि चक्षुः**" इति कर्णचक्षुराद्यगोचरत्वमुच्यते । तत्र च "**तदेतदृष्टं च श्रुतं च**" इति च्छान्दोग्ये तृतीये दृष्टत्वादिकमुच्यते ततो नैकार्थ्यमित्याशङ्क्याह – **नचेति** ॥

**आकारेति** ॥ शुद्धरूपेणादृष्टत्वादि, विशिष्टरूपेण दृष्टत्वादिकमित्यर्थः । यद्वा – कार्त्स्न्येनादृष्टत्वादि, एकदेशेन दृष्टत्वादीत्यर्थः । यद्वा सूक्ष्मस्थूलाकारभेदेनेत्यर्थः । ननु कुत एवं कर्णादिविदूरत्वदृष्टत्वादेराकारभेदेनाविरोधं व्युत्पाद्य, अग्निपर्यायतेजश्शब्दस्य गायत्र्यां श्रवणेन अग्निसूक्तस्थच्छान्दोग्यस्थवाक्ययोरैकार्थ्यं चापाद्य ज्योतिश्श्रुत्या गुहानिहितत्वधर्मेण चानेकत्र श्रुतज्योतिष एकत्वव्युत्पादनेनैकाधिकरण्यसमर्थनक्लेशः, भिन्नविषयतयाऽधिकरणद्वयमेवास्त्वित्यत, ऐकाधिकरण्ये सूत्रे भाष्ये च ज्ञापकमाह – **एकाधिकरणत्वादेवेति** ॥ **अनुक्त्वेति** ॥ अन्यथा "आकाश-

**स्तल्लिङ्गात्'' ''अत एव प्राणः इत्यादाविव गायत्र्यादिसमन्वेतन्यशब्दोपादानं स्यादिति भावः – अग्नीति ॥** अन्यथा गायत्रीपदमेव प्रयुञ्जीतेति भावः ।

ವಿವರಣೆ - ಹೀಗೆ ಮೂರುವಿಧವಾದ ಮತಗಳನ್ನು ಉಪನ್ಯಾಸ ಮಾಡಿ ಮೊದಲು ತತ್ವಪ್ರದೀಪಕಾರರ ಪಕ್ಷವನ್ನು ವಿಮರ್ಶಿಸುತ್ತಿದ್ದಾರೆ. ಇವರ ಪ್ರಕಾರ 'ವಿ ಮೇ ಕರ್ಣಾ ಪತಯತಃ' ಎಂಬ ಅಗ್ನಿಸೂಕ್ತವೇ ಎಲ್ಲಾ ಸೂತ್ರಗಳಿಗೂ ವಿಷಯವಾಕ್ಯವಾಗಿದೆ. ಈ ಸೂಕ್ತವು ಪ್ರತಿಯೊಂದು ಸೂತ್ರದ ವಿಷಯವಾಕ್ಯವಾದಲ್ಲಿ ಬರಬಹುದಾದ ಅನುಪಪತ್ತಿಯನ್ನು ಆಶಂಕಿಸಿ ಸಮಾಧಾನವನ್ನು ನೀಡುವುದಕ್ಕಾಗಿ 'ನಚ' ಇತ್ಯಾದಿ ಗ್ರಂಥವು ಹೊರಟಿದೆ. ಒಂದು ವೇಳೆ ಅಗ್ನಿಸೂಕ್ತವು ವಿಷಯವಾಕ್ಯವಾದರೆ ಚರಣಾಭಿಧಾನಹೇತುವಷ್ಟೇ ಉಪಪನ್ನವಾಗುತ್ತದೆ. ಮುಂದಿನ ಮೂರು ಸೂತ್ರಗಳಲ್ಲಿ ಹೇಳಿರುವ ಛಂದೋಭಿಧಾನಾತ್, ಭೂತಾದಿಪಾದವ್ಯಪದೇಶ, ಉಪದೇಶಭೇದಾದಿಗಳು ತಪ್ಪಾಗುತ್ತವೆ. ಏಕೆಂದರೆ ಈ ಮೂರು ಹೇತುಗಳೂ 'ಗಾಯತ್ರೀ ವಾ ಇದಂ ಸರ್ವಂ ಭೂತಂ ಯದಿದಂ ಕಿಂಚ' ಇತ್ಯಾದಿ ಛಾಂದೋಗ್ಯವಾಕ್ಯದಲ್ಲಷ್ಟೇ ಕೇಳಿಸುತ್ತಿವೆ. ವಿಷಯವಾಕ್ಯವೆನಿಸಿದ ಅಗ್ನಿಸೂಕ್ತದಲ್ಲಿ ಕೇಳಿಸುತ್ತಿಲ್ಲ. ಪ್ರಕೃತ ಛಾಂದೋಗ್ಯವಾಕ್ಯವು ಮುಂದಿನ ಮೂರು ಸೂತ್ರಗಳ ವಿಷಯವಾಕ್ಯವಾಗದಿದ್ದರೆ ಸೂತ್ರಗಳಲ್ಲಿ ಹೇಳಿದ ಹೇತುವು ಹೇಗೆ ಕೂಡುತ್ತದೆ? ಎಂದು ತತ್ವಪ್ರದೀಪಕಾರರ ಪಕ್ಷದಲ್ಲಿ ಪ್ರಶ್ನೆ ಬರುತ್ತದೆ.

ಈ ಪ್ರಶ್ನೆಗೆ ಹೀಗೆ ಉತ್ತರ -- ಅಗ್ನಿಸೂಕ್ತದಲ್ಲಿ ಯಾವ ಜ್ಯೋತಿಯು ಹೇಳಲ್ಪಟ್ಟಿದೆಯೋ ಅದೇ ಜ್ಯೋತಿಯು ಛಾಂದೋಗ್ಯದಲ್ಲಿಯೂ ಕೇಳಿಸುತ್ತಿದೆ. ಮತ್ತು ಹೃದಯನಿಹಿತತ್ವವೆಂಬ ಧರ್ಮವು ಎರಡು ಕಡೆಯೂ ಸಮಾನವಾಗಿದೆ. ಇದರಿಂದ ಶಾಖಾಂತರಾಧಿಕರಣನ್ಯಾಯದಂತೆ ಅಗ್ನಿಸೂಕ್ತ ಹಾಗೂ ಛಾಂದೋಗ್ಯವಾಕ್ಯಗಳಲ್ಲಿ ಹೇಳಲ್ಪಟ್ಟವನು ಒಬ್ಬನೇ ಎಂದು ನಿರ್ಣಯಿಸಬಹುದು.

ಶಾಖಾಂತರಾಧಿಕರಣನ್ಯಾಯವನ್ನು ಹಿಂದೆ ಶಾಸ್ತ್ರಯೋನಿಸೂತ್ರದಲ್ಲಿ ವಿವರಿಸಿದ್ದಾಗಿದೆ. 'ಏಕಂ ವಾ ಸಂಯೋಗರೂಪಚೋದನಾಖ್ಯಾವಿಶೇಷಾತ್' ಎಂಬುದು ಶಾಖಾಂತರಾಧಿಕರಣದ ಸಿದ್ಧಾಂತ. ಬೇರೆ ಬೇರೆ ಶಾಖೆಗಳಲ್ಲಿ ಅಗ್ನಿಹೋತ್ರ ಅಥವಾ ಜ್ಯೋತಿಷ್ಟೋಮವೆಂಬ ಕರ್ಮವನ್ನು ವಿಧಿಸಿರುವುದು ಕೆಲವೆಡೆ ಕಾಣುತ್ತದೆ. ಈ ಅಗ್ನಿಹೋತ್ರಾದಿಕರ್ಮಗಳು ಬೇರೆ ಬೇರೆ ಶಾಖೆಗಳಲ್ಲಿ ಹೇಳಿದ್ದು ಒಂದೆಯೋ ಅಥವಾ ಬೇರೆ ಬೇರೆಯೋ? ಎಂಬ ಪ್ರಶ್ನೆ ಬಂದರೆ ಅವುಗಳ ಫಲವನ್ನು ನೋಡಿ ನಿರ್ಣಯಿಸಬೇಕು. ಎರಡೂ ಶಾಖೆಗಳಲ್ಲಿ ಹೇಳಲ್ಪಟ್ಟ ಅಗ್ನಿಹೋತ್ರಾದಿಕರ್ಮಕ್ಕೆ ಸ್ವರ್ಗ ಮೊದಲಾದ ಒಂದೇ ಫಲವು ಹೇಳಲ್ಪಟ್ಟಿದ್ದರಿಂದ ಒಂದೇ ಕರ್ಮವೆನ್ನಬೇಕು. ಹೀಗೆ ಒಂದೇ ಕರ್ಮವೆಂದು ನಿರ್ಣಯಿಸಲು ಫಲಸಂಯೋಗವೇ ಮೊದಲಾದ ಸಾಧಾರಣಧರ್ಮಗಳ ಪ್ರತ್ಯಭಿಜ್ಞೆಯು ಕಾರಣವಾಗಿದೆ. ಅದರಂತೆ ಪ್ರಕೃತದಲ್ಲಿ ಋಗ್ವೇದ ಸಾಮವೇದವೆಂಬ ಬೇರೆ ಬೇರೆ ವೇದಗಳಲ್ಲಿ ಜ್ಯೋತಿಯು ಹೇಳಲ್ಪಟ್ಟಿದ್ದರೂ ಜ್ಯೋತಿಃಶಬ್ದದ ಐಕ್ಯದಿಂದ ಮತ್ತು ಹೃದಯನಿಹಿತತ್ವವೆಂಬ ಧರ್ಮದ ಐಕ್ಯದಿಂದ ಒಬ್ಬನೇ ಜ್ಯೋತಿಯು ಪ್ರತಿಪಾದ್ಯನೆಂದು ಪ್ರತ್ಯಭಿಜ್ಞೆಯಿಂದ ನಿರ್ಣಯಿಸಬಹುದು. ಆದಕಾರಣ ಅಗ್ನಿಸೂಕ್ತದಲ್ಲಿ ಮತ್ತು ಛಾಂದೋಗ್ಯಸೂಕ್ತದಲ್ಲಿ ಹೇಳಲ್ಪಟ್ಟ ಜ್ಯೋತಿಯು ಒಬ್ಬನೇ ಆಗಿದ್ದಾನೆಂದು ಅವಶ್ಯ ಒಪ್ಪಬೇಕು. ಹೀಗೆ ಒಪ್ಪದಿದ್ದರೆ ಟೀಕಾಕಾರರ

ಪಕ್ಷದಲ್ಲಿಯೂ ಅರುಚಿ ತಪ್ಪಿದ್ದಲ್ಲ ಎಂದು ''ಅನ್ಯಥಾ'' ಇತ್ಯಾದಿ ಗ್ರಂಥವು ವಿವರಿಸಿದೆ. ಎರಡೂ ಪ್ರಕರಣಗಳಲ್ಲಿ ಕೇಳಿಸುತ್ತಿರುವ ಜ್ಯೋತಿಯು ಒಬ್ಬನೇ ಆಗಲಿ; ಇದರಿಂದೇನಾಯಿತು? ಎಂಬ ಪ್ರಶ್ನೆಗೆ ತತ್ವಪ್ರದೀಪಕಾರರ ಪಕ್ಷದಲ್ಲಿ ಬಂದಿರುವ ಅನುಪಪತ್ತಿಯು ಪರಿಹಾರವಾಯಿತೆಂದು 'ತಥಾ ಚ' ಇತ್ಯಾದಿ ಗ್ರಂಥವು ಉತ್ತರಿಸಿದೆ. ಅಗ್ನಿಸೂಕ್ತದಲ್ಲಿ ಛಂದೋಭಿಧಾನಾದಿಗಳು ಇಲ್ಲದ ಮಾತ್ರದಿಂದ ಮುಂದಿನ ಸೂತ್ರಗಳು ಅನುಪಪನ್ನವಾಗುವುದಿಲ್ಲ. 'ಛಂದೋಭಿಧಾನಾತ್' ಎಂಬುದಕ್ಕೆ ಹೀಗರ್ಥ -- 'ಜ್ಯೋತಿಗೆ ಛಾಂದೋಗ್ಯದಲ್ಲಿ ಗಾಯತ್ರೀಛಂದಸ್ತ್ವವನ್ನು ಹೇಳಿದ್ದರಿಂದ ಅಗ್ನಿಸೂಕ್ತದಲ್ಲಿ ಹೇಳಲ್ಪಟ್ಟ ಜ್ಯೋತಿಯು ವಿಷ್ಣುವಲ್ಲ' ಎಂದು.

ಶಂಕೆ - ತತ್ವಪ್ರದೀಪಕಾರರ ಪಕ್ಷದಲ್ಲಿ 'ಜ್ಯೋತಿರ್ಹೃದಯ ಆಹಿತಂ ಯತ್' ಎಂಬ ಋಕ್ಸಂಹಿತಾವಾಕ್ಯವು ವಿಷಯವಾಕ್ಯ. ಋಕ್ಸಂಹಿತಾ ಹಾಗೂ ಛಾಂದೋಗ್ಯದಲ್ಲಿ ಬಂದಿರುವ ಜ್ಯೋತಿಯು ಒಂದೇ ಆಗಿದೆ. ಆದ್ದರಿಂದ ಛಾಂದೋಗ್ಯದಲ್ಲಿ ಕೇಳಿಸುತ್ತಿರುವ ಜ್ಯೋತಿಯು ಗಾಯತ್ರಿಯಾದಲ್ಲಿ ಋಕ್ಸಂಹಿತಾದಲ್ಲಿ ಬಂದಿರುವ ಜ್ಯೋತಿಯು ಗಾಯತ್ರಿಯೇ ಆಗಬೇಕೆಂದು ಇಲ್ಲಿಯ ತನಕ ಹೇಳಿದ್ದಾಯಿತು. ಆದರೆ ಛಾಂದೋಗ್ಯವಾಕ್ಯವನ್ನು ಅವಲಂಬಿಸದೆ ಸುಲಭವಾಗಿ ಪೂರ್ವಪಕ್ಷ ಮಾಡಬಹುದು. ಅಗ್ನಿಸೂಕ್ತದಲ್ಲಿ ಕೇಳಿಸುತ್ತಿರುವ ಜ್ಯೋತಿಯು ವಿಷ್ಣುವಾಗಲಾರ. ಅಗ್ನಿ ಮೊದಲಾದವರಲ್ಲಿ ರೂಢವಾದ ಜ್ಯೋತಿಃಶ್ರುತಿಯೇ ಇದಕ್ಕೆ ಆಧಾರ. ಅಗ್ನಿಪ್ರಕರಣದಲ್ಲಿರುವ ಜ್ಯೋತಿಃಶ್ರುತಿಯು ಅಗ್ನಿಯನ್ನು ಹೇಳಬೇಕೇ ಹೊರತು ವಿಷ್ಣುವನ್ನಲ್ಲ ಎಂದೇ ಪೂರ್ವಪಕ್ಷ ಮಾಡಲು ಬರುವಾಗ ಬೇರೆ ಪ್ರಕರಣದಲ್ಲಿರುವ ಛಾಂದೋಗ್ಯದ ಜ್ಯೋತಿಯಿಂದ ಐಕ್ಯವನ್ನು ಹೇಳಿ, ಛಾಂದೋಗ್ಯದ ಜ್ಯೋತಿಯು ಛಂದಸ್ಸಾದ್ದರಿಂದ ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ಛಂದಸ್ಸೇ ಆಗಬೇಕೆಂಬುದು ವಕ್ರಮಾರ್ಗವಲ್ಲವೇ?

ಸಮಾಧಾನ - ಕೇವಲ ಜ್ಯೋತಿಃಶ್ರುತಿಯ ಆಧಾರದಿಂದ ಅಗ್ನಿ ಎಂದು ಪೂರ್ವಪಕ್ಷ ಮಾಡುವುದು ಸುಲಭವಲ್ಲ. ಏಕೆಂದರೆ, ಜ್ಯೋತಿಃಶಬ್ದವು ಅಧಿದೈವಶಬ್ದವೋ ಅಥವಾ ಅಧಿಭೂತಶಬ್ದವೋ? ಅಧಿದೈವ ಶಬ್ದವಾದರೆ ಅಂತಃಸ್ಥಾಧಿಕರಣ ನ್ಯಾಯದಂತೆ ವಿಷ್ಣುಪರವಾಗುತ್ತದೆ. ಅಧಿಭೂತಶಬ್ದವಾದರೆ ಆಕಾಶಾಧಿ-ಕರಣನ್ಯಾಯದಂತೆ ವಿಷ್ಣುಪರವಾಗುತ್ತದೆ. ಹೀಗೆ ನಿರವಕಾಶವಾದ ವಿಷ್ಣುಲಿಂಗದಿಂದ ವಿಷ್ಣುವನ್ನು ಜ್ಯೋತಿಯೆಂದು ಹೇಳಲು ಬರುವಾಗ ಪೂರ್ವಪಕ್ಷಪ್ರಾಪಕಜ್ಯೋತಿಃಶ್ರುತಿಯು ದುರ್ಬಲವಾಗುತ್ತದೆ.

ಶಂಕೆ - ಭಾಷ್ಯ, ತತ್ವಪ್ರಕಾಶಿಕಾ ಹಾಗೂ ಚಂದ್ರಿಕೆಗಳಲ್ಲಿ ಹೇಳುವಂತೆ ಅಗ್ನಿಸೂಕ್ತವೆಂಬ ಪ್ರಕರಣವು ನಿರವಕಾಶವಾಗಿದೆ. ಇದರ ಅನುಗ್ರಹದಿಂದ ಜ್ಯೋತಿಃಶ್ರುತಿಯು ಅಗ್ನಿಯನ್ನು ಪ್ರತಿಪಾದಿಸಬಹುದೆಂದು ಪೂರ್ವಪಕ್ಷ ಮಾಡಬಹುದು. ನಿರವಕಾಶಪ್ರಕರಣದ ಫಲದಿಂದ ಪೂರ್ವಪಕ್ಷಯುಕ್ತಿಯು ಪ್ರಬಲವಾಗಿದೆ-ಯಲ್ಲವೇ?

ಸಮಾಧಾನ - ಇದು ತಪ್ಪು. ವಸ್ತುತಃ ಅಗ್ನಿಸೂಕ್ತದಿಂದಷ್ಟೇ ಪೂರ್ವಪಕ್ಷವನ್ನು ಮಾಡಬಹುದು. ಆದರೆ ಸೂತ್ರಗಳು ವಿಶ್ವತೋಮುಖಗಳಾದ್ದರಿಂದ ಅನೇಕಶ್ರುತಿಗಳ ಸಮನ್ವಯವು ಉದ್ದೇಶವಾಗಿರುತ್ತದೆ. ಬೇರೆ ಬೇರೆ ಪ್ರಕರಣದಲ್ಲಿರುವ ಜ್ಯೋತಿಃಶಬ್ದದಿಂದಲೂ ವಿಷ್ಣುವೇ ಪ್ರತಿಪಾದ್ಯನೆಂದು ಪ್ರಕೃತ ತೋರಿಸಬೇಕಾಗಿದೆ. ಆದ್ದರಿಂದ ಈ ಅಗ್ನಿಸೂಕ್ತಪ್ರಕರಣದಲ್ಲಿರುವ ಪೂರ್ವಪಕ್ಷಪ್ರಾಪಕಯುಕ್ತಿಯನ್ನು

ವಿವಕ್ಷಿಸದೆ ಛಾಂದೋಗ್ಯಪ್ರಕರಣದಲ್ಲಿರುವ ಪೂರ್ವಪಕ್ಷಯುಕ್ತಿಯನ್ನು ಉಪಯೋಗಿಸಿಕೊಳ್ಳಲಾಗಿದೆ. ಇದರಿಂದ ಇದೇ ರೀತಿಯಲ್ಲಿರುವ ಸಕಲಶ್ರುತಿಗಳಲ್ಲಿ ಹೇಳಲ್ಪಟ್ಟ ಜ್ಯೋತಿಯು ವಿಷ್ಣುವಲ್ಲವೆಂದು ಆಕ್ಷೇಪ ಮಾಡಿಕೊಳ್ಳಬೇಕು. ಇದಕ್ಕೋಸ್ಕರ ಛಾಂದೋಗ್ಯದಲ್ಲಿರುವ ಪೂರ್ವಪಕ್ಷಯುಕ್ತಿಯನ್ನು ಸೂತ್ರಕಾರರು ಬಳಸಿದ್ದಾರೆ.

ಶಂಕೆ - ಹಾಗಾದರೆ ಛಾಂದೋಗ್ಯವಾಕ್ಯವನ್ನೇ ಪ್ರತಿಯೊಂದು ಸೂತ್ರಗಳಲ್ಲಿ ಉದಾಹರಿಸಿ ಅಲ್ಲಿರುವ ಜ್ಯೋತಿಃಶಬ್ದದಿಂದ ವಿಷ್ಣು ಪ್ರತಿಪಾದ್ಯನಾಗಿದ್ದಾನೆಂದು ನಿರ್ಣಯಿಸಿದರೆ ಸಾಕು. ಆ ವಿಷ್ಣುವೇ ಅಗ್ನಿಸೂಕ್ತದಲ್ಲಿ ಪ್ರತಿಪಾದ್ಯನಾದ್ದರಿಂದ ಅಗ್ನಿಸೂಕ್ತದಲ್ಲಿರುವ ಜ್ಯೋತಿಃಶಬ್ದದಿಂದಲೂ ವಿಷ್ಣುವೇ ಪ್ರತಿಪಾದ್ಯನೆಂದು ಸುಲಭವಾಗಿ ತಿಳಿಯುತ್ತದೆ. ಆದ್ದರಿಂದ ತತ್ವಪ್ರದೀಪಕಾರರು ಅಗ್ನಿಸೂಕ್ತವನ್ನು ವಿಷಯವಾಕ್ಯವೆಂದು ಹೇಳಿ ಛಾಂದೋಗ್ಯದ ಪೂರ್ವಪಕ್ಷಯುಕ್ತಿಯನ್ನು ಆಧರಿಸುವುದು ಹೇಗೆ ಸರಿ?

ಸಮಾಧಾನ - ಈ ಆಕ್ಷೇಪದಲ್ಲಿಯೂ ಅರ್ಥವಿಲ್ಲ. ಏಕೆಂದರೆ ಛಾಂದೋಗ್ಯದಲ್ಲಿರುವ ಜ್ಯೋತಿಯು ವಿಷ್ಣುವೆನ್ನಲು ಅಗ್ನಿಸೂಕ್ತದಲ್ಲಿರುವ ಚರಣಾಭಿಧಾನವೆಂಬ (ಇಂದ್ರಿಯಗಳಿಗೆ ಗೋಚರನಾಗದಿರುವಿಕೆ ಎಂಬ)ಸಿದ್ಧಾಂತಯುಕ್ತಿಯನ್ನು ಅವಲಂಬಿಸಲೇ ಬೇಕು. ಇಲ್ಲದಿದ್ದರೆ ಮುಂದಿನ ಮೂರು ಸೂಕ್ತಗಳು ಸಮಂಜಸವಾದರೂ ಮೊದಲನೆಯ ಚರಣಾಭಿಧಾನಸೂತ್ರವು ಅನುಪಪನ್ನವಾಗುತ್ತದೆ. ಆದ್ದರಿಂದ ಛಾಂದೋಗ್ಯವನ್ನು ವಿಷಯವಾಕ್ಯವೆಂದು ಹೇಳಿದರೂ ಅಗ್ನಿಸೂಕ್ತದಲ್ಲಿರುವ ಸಿದ್ಧಾಂತಯುಕ್ತಿಯನ್ನು ಅವಲಂಬಿಸಬೇಕೆಂಬ ವಕ್ರಮಾರ್ಗವನ್ನು ನೀವು ಅನುಸರಿಸಬೇಕು.

ಶಂಕೆ - ಅಗ್ನಿಸೂಕ್ತವನ್ನು ವಿಷಯವಾಕ್ಯವೆಂದು ಹೇಳಿದಾಗ (ಸನ್ನ್ಯಾಯರತ್ನಾವಲೀಕಾರರಂತೆ) ಸಿದ್ಧಾಂತಯುಕ್ತಿಗಾಗಿ ಚರಣಾಭಿಧಾನವೆಂಬ ಒಂದೇ ಯುಕ್ತಿಯನ್ನು ಆಶ್ರಯಿಸಬೇಕು. ಅದಕ್ಕೋಸ್ಕರ ಬೇರೆ ಪ್ರಕರಣವನ್ನು ಅನುಸರಿಸಬೇಕು. ಅದಕ್ಕಾಗಿ ಮೊದಲನೆಯ ಸೂತ್ರವನ್ನಷ್ಟೇ ಕಷ್ಟದಿಂದ ಕೂಡಿಸಬೇಕು. ಆದರೆ ತತ್ವಪ್ರದೀಪಕಾರರ ಪಕ್ಷದಲ್ಲಿ ಅನೇಕ ಪೂರ್ವಪಕ್ಷಯುಕ್ತಿಗಳು ಹಾಗೂ ಅನೇಕ ಸಿದ್ಧಾಂತ-ಯುಕ್ತಿಗಳನ್ನು ಕೂಡಿಸುವುದಕ್ಕಾಗಿ ಬೇರೆ ಪ್ರಕರಣವನ್ನು ಆಶ್ರಯಿಸಬೇಕು. ಅದಕ್ಕೋಸ್ಕರ ಮೂರು ಸೂತ್ರಗಳನ್ನು ಕಷ್ಟದಿಂದ ಹೊಂದಿಸಬೇಕು. ಆದ್ದರಿಂದ ಛಾಂದೋಗ್ಯವಾಕ್ಯವನ್ನು ವಿಷಯವಾಕ್ಯವೆನ್ನುವುದೇ ಸೂಕ್ತವಲ್ಲವೇ?

ಸಮಾಧಾನ - ಪ್ರಕರಣಾಂತರವನ್ನು ಅನುಸರಿಸಬೇಕೆಂಬುದು ಇಬ್ಬರ ಪಕ್ಷದಲ್ಲಿಯೂ ಸಮಾನ. ಹೀಗಿರುವಾಗ ಎಷ್ಟು ಯುಕ್ತಿಗಳನ್ನು ಆಶ್ರಯಿಸಿದ್ದೇವೆಂಬುದು ಗೌಣವಾಗುತ್ತದೆ. ಅಷ್ಟೇ ಅಲ್ಲದೆ ಪ್ರಥಮಸೂತ್ರವು ಪ್ರಧಾನಸೂತ್ರವಾಗಿದೆ. ಉಳಿದ ಮೂರು ಸೂತ್ರಗಳು ಗುಣಸೂತ್ರಗಳಾಗಿವೆ. ಪ್ರಧಾನಸೂತ್ರದಲ್ಲಿ ಯಾವ ಯುಕ್ತಿಯು ಕೇಳಿಸುತ್ತಿದೆಯೋ ಆ ಯುಕ್ತಿಯನ್ನು ಹೇಳುವ ಶ್ರುತಿಯನ್ನೇ ವಿಷಯವಾಕ್ಯವೆನ್ನುವುದು ಅತ್ಯಂತ ಸಮಂಜಸ. ಗುಣಸೂತ್ರದಲ್ಲಿ ಕೇಳಿಸುವ ಯುಕ್ತಿಯನ್ನು ಹೇಳುವ ವಿಷಯವಾಕ್ಯವನ್ನು ಅನುಸರಿಸಬೇಕಾಗಿಲ್ಲ. ಪ್ರಧಾನಸೂತ್ರದಲ್ಲಿ ಪ್ರಕರಣಾಂತರವನ್ನು ಅನುಸರಿಸು-ವುದಕ್ಕಿಂತ ಗುಣಸೂತ್ರಗಳಲ್ಲಿ ಪ್ರಕರಣಾಂತರವನ್ನು ಅನುಸರಿಸುವುದು ನ್ಯಾಯವೇ ಆಗಿದೆ. ಮತ್ತೊಂದು ಪ್ರಬಲ ಕಾರಣ ಚರಣಾಭಿಧಾನವೆಂಬ ಹೇತುವಿನ ಬಲದಿಂದ ವಿಷ್ಣುವು ಜ್ಯೋತಿಯೆಂದು ಮೊದಲನೆಯ

ಸೂತ್ರದಲ್ಲಿ ಹೇಳಿದ್ದಾರೆ. ಇದರಮೇಲೆ ಬರುವ ಪ್ರಶ್ನೆಗೆ ಮುಂದಿನ ಸೂತ್ರಗಳು ಉತ್ತರಿಸುತ್ತಿವೆ. ಬೇರೆ ಪ್ರಕರಣದಲ್ಲಿ ಜ್ಯೋತಿಗೆ ಛಂದಸ್ತ್ವವನ್ನು ಹೇಳಿದ್ದಾರಲ್ಲ? ಇತ್ಯಾದಿ ಪ್ರಶ್ನೆಗಳಿಗೆ ಅಗ್ನಿಸೂಕ್ತದಲ್ಲಿ ಹೇಳಲ್ಪಟ್ಟ ಜ್ಯೋತಿಯೇ ಬೇರೆ ಶ್ರುತಿಗಳಲ್ಲಿ ಹೇಳಲ್ಪಟ್ಟ ಜ್ಯೋತಿಯಾಗಿದ್ದಾನೆಂದು ಸಮರ್ಥಿಸಲು ಮುಂದಿನ ಸೂಕ್ತಗಳು ಸಾರ್ಥಕಗಳಾಗಿವೆ. ಇದನ್ನೇ ತತ್ವಪ್ರದೀಪದಲ್ಲಿ ''ಅಗ್ನಿಸೂಕ್ತಮುದಾಹೃತ್ಯ ಮಂತ್ರಗೋಚರಂ ವಿಚಾರಮಾಚರತಾ ಪರಮವೈದಿಕೇನಾಚಾರ್ಯೇಣ ನಿಖಿಲೋಽಪಿ ವೇದಸಮನ್ವಯೋ ವಿಚಾರಿತೋ ಭವತೀತಿ ಭೂಯಾನಯಂ ಲಾಭಃ' (ಅಗ್ನಿಸೂಕ್ತವನ್ನು ಉದಾಹರಿಸಿ ಮಂತ್ರಾರ್ಥವನ್ನು ವಿಚಾರ ಮಾಡುವ ಪರಮವೈದಿಕರಾದ ಆಚಾರ್ಯರಿಂದ ಸಕಲವೇದಸಮನ್ವಯವನ್ನು ವಿಚಾರ ಮಾಡಲಾಗಿದೆ ಎಂದು ಬಹಳ ಲಾಭವಿದೆ) ಎಂದು ಹೇಳಿದ್ದಾರೆ.

ಅಗ್ನಿಸೂಕ್ತವೇ ವಿಷಯವಾಕ್ಯವಾಗಿದೆ. 'ಛಂದೋಭಿಧಾನಾತ್' ಎಂಬ ಮುಂದಿನ ಸೂತ್ರದ ಪೂರ್ವ-ಪಕ್ಷದ ಭಾಗಕ್ಕೆ ಅರ್ಥವನ್ನು ಇಲ್ಲಿಯ ತನಕ ವಿವರಿಸಿದರು. ಇದರಂತೆ 'ಭೂತಾದಿಪಾದವ್ಯಪದೇಶಾಚ್ಚ' ಎಂಬ ಸೂತ್ರಕ್ಕೆ ಅರ್ಥವನ್ನು ತಿಳಿಯಬೇಕು. ಅಂದರೆ ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ವಿಷ್ಣುವೇ ಆಗಿದ್ದಾನೆ. ಏಕೆಂದರೆ ಛಾಂದೋಗ್ಯದಲ್ಲಿ ಇದೇ ಜ್ಯೋತಿಗೆ ಭೂತಾದಿಪಾದವ್ಯಪದೇಶವನ್ನು ಹೇಳಿದ್ದರಿಂದ ಎಂದು. 'ಉಪದೇಶಭೇದೇಪಿ ಅವಿರೋಧಾತ್' ಎಂಬ ಮುಂದಿನ ಸೂತ್ರದಲ್ಲಿ ಹೇಳಲ್ಪಟ್ಟ ಹೇತುವೂ ಛಾಂದೋಗ್ಯಶ್ರುತಿಯಲ್ಲಿ ಕೇಳಿಸುತ್ತಿರುವುದರಿಂದ ಅಗ್ನಿಸೂಕ್ತದಲ್ಲಿ ಹೇಳಲ್ಪಟ್ಟ ಜ್ಯೋತಿಯು ವಿಷ್ಣುವೆಂದು ನಿರ್ಣಯಿಸಬೇಕು.

ಶಂಕೆ - ತತ್ವಪ್ರದೀಪಕಾರರ ಪಕ್ಷದಲ್ಲಿ ಅನುಪಪತ್ತಿಯನ್ನು ಪರಿಹರಿಸಬಹುದಿತ್ತು. ಒಂದು ವೇಳೆ ಅಗ್ನಿಸೂಕ್ತ ಹಾಗೂ ಛಾಂದೋಗ್ಯದಲ್ಲಿ ಹೇಳಲ್ಪಟ್ಟ ಜ್ಯೋತಿಯು ಒಂದೇ ಆಗಿದ್ದಲ್ಲಿ. ಆದರೆ ಹಾಗಿಲ್ಲ. ಎರಡೂ ವಾಕ್ಯಗಳು ಬೇರೆ ಬೇರೆ ಅರ್ಥವನ್ನೇ ಹೇಳುತ್ತಿವೆ. ಹೀಗೆ ಒಪ್ಪದಿದ್ದರೆ 'ವಾಗೇವಾಸ್ಯ ಜ್ಯೋತಿಃ ಅಥೈಷ ಜ್ಯೋತಿಃ' ಎಂಬಲ್ಲಿಯೂ ಜ್ಯೋತಿಃಶ್ರುತಿಯಿರುವುದರಿಂದ ಅವುಗಳಿಗೂ ಐಕ್ಯವನ್ನು ಅಂಗೀಕರಿಸಬೇಕಾದೀತು.

ಸಮಾಧಾನ - ಈ ಶಂಕೆಗೆ 'ನಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ತೇಜೋ ವೈ ಬ್ರಹ್ಮವರ್ಚಸಂ ಗಾಯತ್ರೀ' ಎಂಬ ಮತ್ತೊಂದು ಶ್ರುತಿಯ ಆಧಾರದಿಂದ ಅಗ್ನಿಶಬ್ದದ ಅರ್ಥವನ್ನೇ ಹೇಳುವ ಜ್ಯೋತಿಃಶಬ್ದವು ಹಾಗೂ ಗಾಯತ್ರೀಶಬ್ದವು ಒಂದೇ ಅರ್ಥವನ್ನು ಹೇಳುತ್ತಿದೆಯೆಂದು ನಿಶ್ಚಯವಾಗುತ್ತದೆ. ಹಾಗಾಗಿ ಅಗ್ನಿಸೂಕ್ತ ಹಾಗೂ ಛಾಂದೋಗ್ಯಸೂಕ್ತಗಳು ಬೇರೆ ಬೇರೆ ಅರ್ಥಗಳನ್ನು ಪ್ರತಿಪಾದಿಸುತ್ತಿಲ್ಲ.

ಶಂಕೆ - ಆದರೂ ಸಹ ಅಗ್ನಿಸೂಕ್ತವು ಛಾಂದೋಗ್ಯದ ಅರ್ಥವನ್ನು ಪ್ರತಿಪಾದಿಸುವುದು ಕಷ್ಟ. ಏಕೆಂದರೆ ಅಗ್ನಿಸೂಕ್ತದಲ್ಲಿ 'ವಿ ಮೇ ಕರ್ಣಾ ಪತಯತೋ ವಿಚಕ್ಷುಃ' ಎಂದು ಕಣ್ಣು ಕಿವಿ ಮೊದಲಾದ ಇಂದ್ರಿಯಗಳಿಗೆ ಜ್ಯೋತಿಯು ಅಗೋಚರವಾಗಿದೆಯೆಂದು ಹೇಳಲಾಗಿದೆ. ಆದರೆ ಛಾಂದೋಗ್ಯದಲ್ಲಿ 'ತದೇತದ್ದೃಷ್ಟಂ ಚ ಶ್ರುತಂ ಚ' ಎಂದು ಜ್ಯೋತಿಯು ಕಣ್ಣು ಮೊದಲಾದ ಇಂದ್ರಿಯಗಳಿಗೆ ಗೋಚರವಾಗುತ್ತದೆಂದು ಹೇಳಲಾಗಿದೆ. ಒಂದೇ ವಸ್ತುವು ವಿರುದ್ಧಧರ್ಮಗಳಿಗೆ ಆಶ್ರಯವಾಗಲು ಹೇಗೆ ಸಾಧ್ಯ ?

ಸಮಾಧಾನ - ಎರಡು ಶ್ರುತಿಗಳಲ್ಲಿರುವ ಜ್ಯೋತಿಃಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. (ಅಂತಹ ವಿಷ್ಣುವು ಅನಂತಮಹಿಮೋಪೇತನಾದ್ದರಿಂದ ವಿರುದ್ಧಧರ್ಮಗಳಿಗೆ ಆಶ್ರಯನಾಗಬಹುದು). ಶುದ್ಧರೂಪದಿಂದ ಭಗವಂತನು ಇಂದ್ರಿಯಗಳಿಗೆ ಗೋಚರನಾಗಲಾರ. ಆದರೆ ವಿಶಿಷ್ಟರೂಪದಿಂದ ಇಂದ್ರಿಯಗಳಿಗೆ ಗೋಚರನಾಗಬಹುದು. ಅಥವಾ ಸಂಪೂರ್ಣವಾಗಿ ಭಗವಂತನು ಇಂದ್ರಿಯಗಳಿಗೆ ಗೋಚರನಾಗಲಾರನೆಂದು ಅಗ್ನಿಸೂಕ್ತವು ಹೇಳುತ್ತಿದೆ. ಏಕದೇಶದಿಂದ ಭಗವಂತನನ್ನು ತಿಳಿಯಬಹುದೆಂದು ಛಾಂದೋಗ್ಯವು ಹೇಳುತ್ತಿದೆ. ಅಥವಾ, ಭಗವಂತನು ಸೂಕ್ಷ್ಮಸ್ವರೂಪದಿಂದ ತಿಳಿಯಲಾರನೆಂದು ಅಗ್ನಿಸೂಕ್ತ ಹೇಳಿದರೆ, ಸ್ಥೂಲಸ್ವರೂಪದಿಂದ ತಿಳಿಯುತ್ತಾನೆಂದು ಛಾಂದೋಗ್ಯವು ಹೇಳುತ್ತಿದೆ. ಹೀಗೆ ಅನೇಕ ಬಗೆಯಲ್ಲಿ ವಿರೋಧವನ್ನು ಪರಿಹರಿಸಬಹುದು.

ಶಂಕೆ - ನಾಲ್ಕೂ ಸೂತ್ರಗಳು ಒಂದೇ ಅಧಿಕರಣವೆಂದಾಗ ಬಹಳ ಕ್ಲೇಶವಿದೆ. ಕರ್ಣಾದಿವಿದೂರತ್ವ ದೃಷ್ಟತ್ವ ಮೊದಲಾದ ವಿರುದ್ಧಧರ್ಮಗಳನ್ನು ಆಕಾರಭೇದದಿಂದ ಹೊಂದಿಸಬೇಕು. ಮತ್ತು ತೇಜಃಶಬ್ದವು ಅಗ್ನಿಶಬ್ದದ ಪರ್ಯಾಯವಾಗಿದೆ. ಆ ತೇಜಸ್ ಶಬ್ದವೇ ಗಾಯತ್ರಿಯಲ್ಲಿ ಕೇಳಿಸುತ್ತಿರುವುದರಿಂದ ಅಗ್ನಿಸೂಕ್ತ ಹಾಗೂ ಛಾಂದೋಗ್ಯಸೂಕ್ತಗಳು ಒಂದೇ ಅರ್ಥವನ್ನು ಪ್ರತಿಪಾದಿಸುತ್ತಿವೆ ಎಂದು ಹೇಳಬೇಕು. ಜ್ಯೋತಿಃಶ್ರುತಿ ಹಾಗೂ ಗುಹಾನಿಹಿತತ್ವಧರ್ಮಗಳು ಸಮಾನವಾದ್ದರಿಂದ ಅನೇಕ ಕಡೆಯಿರುವ ಜ್ಯೋತಿಯು ಒಂದೇ ವಸ್ತುವಾಗಿದೆಯೆಂದು ಸಾಧಿಸಬೇಕು. ಇಷ್ಟೆಲ್ಲಾ ಕ್ಲೇಶಗಳಿಂದ ಒಂದೇ ಅಧಿ ಕರಣವೆಂಬ ಆಗ್ರಹವೇಕೆ? ಜ್ಯೋತಿಃಸೂತ್ರವೇ ಬೇರೆ ಅಧಿಕರಣ, ಛಂದಃಸೂತ್ರಾದಿಗಳು ಬೇರೆ ಅಧಿ ಕರಣವೆಂದು ಸುಲಭವಾಗಿ ಹೇಳಬಹುದು. ಹೀಗೆ ಹೇಳಿದಾಗ ಯಾವ ಕ್ಲೇಶವೂ ಇರುವುದಿಲ್ಲವಲ್ಲವೇ?

ಸಮಾಧಾನ - ಈ ಶಂಕೆಗೆ 'ಏಕಾಧಿಕರಣತ್ವಾದೇವ' ಎಂಬ ಮಾತಿನಿಂದ ಉತ್ತರಿಸಿದ್ದಾರೆ. ಬೇರೆ ಅಧಿಕರಣವೆಂದು ಒಪ್ಪಬಹುದಿತ್ತು. ಆದರೆ ಸೂತ್ರಕಾರರು ಜ್ಯೋತಿಃಸೂತ್ರದಲ್ಲಿ ಮಾಡಿದ ಶಬ್ದಸಮನ್ವಯದ ಸಮರ್ಥನೆಯನ್ನೇ ಮುಂದಿನ ಸೂತ್ರಗಳಲ್ಲಿ ಮಾಡಿದ್ದಾರೆ. ಮತ್ತು ಭಾಷ್ಯಕಾರರೂ ಕೂಡ ನಾಲ್ಕೂ ಸೂತ್ರಗಳು ಒಂದೇ ಶಬ್ದದ ಸಮನ್ವಯವನ್ನು ಮಾಡಿವೆಯೆಂದು ಹೇಳಿದ್ದಾರೆ. ಹೀಗೆ ಸೂತ್ರಕಾರರಿಗೆ ಹಾಗೂ ಭಾಷ್ಯಕಾರರಿಗೆ ಒಂದೇ ಅಧಿಕರಣವೆಂಬ ಅಭಿಪ್ರಾಯವಿರುವುದರಿಂದ ಅನಿವಾರ್ಯವಾಗಿ ಬೇರೆ ಅಧಿಕರಣವಲ್ಲವೆಂದು ಒಪ್ಪಬೇಕು. ಬೇರೆ ಶಬ್ದದ ಸಮನ್ವಯವನ್ನು ಛಂದಃಸೂತ್ರಾದಿಗಳಲ್ಲಿ ಸಮನ್ವಯ ಮಾಡುವುದಾದರೆ 'ಆಕಾಶಸ್ತಲ್ಲಿಂಗಾತ್' 'ಅತ ಏವ ಪ್ರಾಣಃ' ಇತ್ಯಾದಿ ಸೂತ್ರಗಳಲ್ಲಿ ಮಾಡಿದಂತೆ ಗಾಯತ್ರ್ಯಾದಿ ಶಬ್ದಗಳನ್ನು ಸೂತ್ರದಲ್ಲಿ ಉಲ್ಲೇಖಿಸಬೇಕಿತ್ತು. ಆದರೆ ಹಾಗೆ ಉಲ್ಲೇಖಿಸದ ಕಾರಣ ಜ್ಯೋತಿಯೆಂಬ ಒಂದೇ ಶಬ್ದದ ಸಮನ್ವಯವನ್ನು ನಾಲ್ಕೂ ಸೂತ್ರಗಳು ಮಾಡುತ್ತಿವೆ. ಇಷ್ಟು ತತ್ವಪ್ರದೀಪಕಾರರ ಪಕ್ಷ.

**गुरुराजीयम्** – नन्वत्राद्यं मतमनुपपन्नम् । तथाहि । तद्विषयत्वेनाभिमते हृदय आहितमिति वाक्ये छन्दोभिधानभूतादिपादव्यपदेशोपदेशभेदानामभावात् । किञ्च पूर्वत्राग्निसूक्तमग्निपरमित्येव पूर्वपक्षात् छन्दस्सूत्रे छान्दोग्यवाक्यं छन्दः-परमित्येव पूर्वपक्षात् पूर्वपक्षयुक्तिभेदस्य विद्यमानत्वेनाधिकरणभेदस्यैव

वक्तव्यत्वेन चतुस्सूत्र्या एकाधिकरणत्वासम्भवात् । किञ्चाग्निसूक्तोक्तकर्णादि-विदूरत्वविरुद्धस्य दृष्टत्वादे- श्छान्दोग्ये प्रतिपादितत्वात्तस्यैकार्थप्रतिपादकत्वानुप-पत्तेरित्याशङ्क्य निराकरोति – **न चेत्यादिना तस्मादाद्यं मतं युक्तमित्यन्तेन – आकारभेदेनेति** ॥ कात्स्न्र्येन दृष्टत्वाद्यभावाददृष्टत्वादिकं किञ्चिद्दर्शनादेर्दृष्टत्वादि-कमित्यर्थः ।

## ಸಾರ

ನಾಲ್ಕು ಸೂತ್ರಗಳು ಸೇರಿ ಜ್ಯೋತಿರಧಿಕರಣವೆನಿಸಿವೆ. ಈ ಅಧಿಕರಣಕ್ಕೆ ಋಗ್ವೇದದ 'ಜ್ಯೋತಿರ್ಹೃದಯ ಆಹಿತಂ ಯತ್' ಎಂಬ ಅಗ್ನಿಸೂಕ್ತವು ವಿಷಯವಾಕ್ಯ. ಇಲ್ಲಿ ಹೇಳಲ್ಪಟ್ಟ ಜ್ಯೋತಿಯೇ ಛಾಂದೋಗ್ಯದಲ್ಲಿಯೂ ಹೇಳಲ್ಪಟ್ಟಿದೆ. ಎರಡೂ ಕಡೆ ಜ್ಯೋತಿಃಶ್ರುತಿ ಹಾಗೂ ಹೃದಯನಿಹಿತತ್ವಧರ್ಮಗಳು ಸಮಾನವಾದ್ದರಿಂದ ಒಂದೇ ಎಂಬ ಪ್ರತ್ಯಭಿಜ್ಞೆ ಬರುತ್ತದೆ. ಸೂತ್ರಕಾರರು ಅಗ್ನಿಸೂಕ್ತದಲ್ಲಿರುವ ಚರಣಾಭಿಧಾನ ಹೇತುವನ್ನು ಮೊದಲು ಹೇಳಿ ಅಗ್ನಿಸೂಕ್ತವೇ ವಿಷಯವಾಕ್ಯವೆಂದು ಸೂಚಿಸಿದ್ದಾರೆ. ಇದರ ಮೇಲೆ ಬರುವ ಆಕ್ಷೇಪಗಳ ಪರಿಹಾರಕ್ಕಾಗಿ ಮುಂದಿನ ಸೂತ್ರಗಳು ಹೊರಟಿವೆ ಹೊರತು ಮತ್ತೊಂದು ಶಬ್ದದ ಸಮನ್ವಯಕ್ಕಾಗಿ ಅಲ್ಲ. ಛಾಂದೋಗ್ಯದಲ್ಲಿ ಜ್ಯೋತಿಯನ್ನು ಗಾಯತ್ರೀಛಂದಸ್ಸೆಂದು ಕರೆದಿರುವುದರಿಂದ ಅಗ್ನಿಸೂಕ್ತದಲ್ಲಿ ಹೇಳಲ್ಪಟ್ಟ ಜ್ಯೋತಿಯು ವಿಷ್ಣುವಲ್ಲವೆಂಬ ಆಕ್ಷೇಪ ಪರಿಹಾರಕ್ಕಾಗಿ ಛಂದೋಭಿಧಾನಸೂತ್ರದ ಅನಿವಾರ್ಯತೆ ಇದೆ. ವಿಷ್ಣುವೇ ಜ್ಯೋತಿಯಾಗಿದ್ದಾನೆಂಬುದನ್ನು ದೃಢಪಡಿಸಲು ಭೂತಾದಿಪಾದವ್ಯಪದೇಶ ಮತ್ತು ಉಪದೇಶಭೇದಾದಿ ಹೇತುಗಳು ಹೊರಟಿವೆ.

ಅಗ್ನಿಸೂಕ್ತದಲ್ಲಿ ಹಾಗೂ ಛಾಂದೋಗ್ಯದಲ್ಲಿ ಹೇಳಲ್ಪಟ್ಟ ತೇಜಸ್ಸು ಹಾಗೂ ಗಾಯತ್ರಿಯು ಒಂದೇ ಹೊರತು ಬೇರೆಯಲ್ಲ. ಈ ವಿಷಯದಲ್ಲಿ 'ತೇಜೋ ವೈ ಬ್ರಹ್ಮವರ್ಚಸಂ ಗಾಯತ್ರೀ' ಎಂಬ ಶ್ರುತಿಯು ಆಧಾರ. ಅಗ್ನಿಸೂಕ್ತದಲ್ಲಿ ಹೇಳಿದ ಕರ್ಣಾದಿವಿದೂರತ್ವಕ್ಕೆ ವಿರುದ್ಧವಾಗಿ ದೃಷ್ಟತ್ವಧರ್ಮವನ್ನು ಛಾಂದೋಗ್ಯವು ಹೇಳಿರಬಹುದು. ಆದರೆ ಭಗವಂತನು ಸಂಪೂರ್ಣ ತಿಳಿಯಲಾರದ ಕಾರಣ ಕರ್ಣಾದಿವಿದೂರನೆಂಬುದು ಅಗ್ನಿಸೂಕ್ತದ ಅಭಿಪ್ರಾಯ. ಏಕದೇಶದಿಂದ ಎಲ್ಲರಿಗೂ ತಿಳಿಯುತ್ತಾನೆಂಬುದು ಛಾಂದೋಗ್ಯದ ಅಭಿಪ್ರಾಯ.

## ಸನ್ನ್ಯಾಯರತ್ನಾವಲೀಕಾರರ ಅಭಿಪ್ರಾಯವೂ ಸರಿ

### तात्पर्यचन्द्रिका

द्वितीयेऽपि च्छान्दोग्ये चरणाभिधानाभावेऽपि उक्तरीत्या वाक्यद्वयोक्तस्य ज्योतिष एकत्वात् 'चरणाभिधानात्' इत्येतत् न व्यधिकरणम् । तथाच 'चरणा-भिधानात्' इत्यस्यायमर्थः – छान्दोग्यस्थं ज्योतिर्विष्णुः, अस्यैव ज्योतिषोऽग्निसूक्ते

**विचरणाभिधानात् इति । यद्यपि च्छन्दोग्योक्तस्य ब्रह्मत्वे "यद्वै तद्ब्रह्म" इत्यादि-श्रुतिलिङ्गानि स्ववाक्यस्थानि सन्ति, तथाऽपि तत्तत्सूक्तस्थनिरवकाशविष्णुलिङ्गैः सावकाशश्रुतिसूक्तबाधेन भिक्षुकपादप्रसरणन्यायेन सर्ववेदानां विष्णौ समन्वयं दर्शयितुं सूत्रकारेण अग्निसूक्तस्थं लिङ्गमुक्तम् । तस्मात् द्वितीयमपि निरवद्यम् ।**

ಅನುವಾದ - ಪದ್ಮನಾಭತೀರ್ಥರ ಅಭಿಪ್ರಾಯದಲ್ಲಿ ತಪ್ಪಿಲ್ಲ. ಛಾಂದೋಗ್ಯದಲ್ಲಿ ಚರಣಾ-ಭಿಧಾನವು ಇಲ್ಲದಿರಬಹುದು. ಆದರೆ ಹೃದಯನಿಹಿತತ್ವಾದಿ ಸಮಾನಧರ್ಮವಿರುವುದರಿಂದ ಛಾಂದೋಗ್ಯ ಹಾಗೂ ಅಗ್ನಿಸೂಕ್ತಗಳಲ್ಲಿ ಹೇಳಲ್ಪಟ್ಟ ಜ್ಯೋತಿಯು ಒಬ್ಬನೇ ಆಗಿದ್ದಾನೆಂಬ ಪ್ರತ್ಯಭಿಜ್ಞೆ ಬರುತ್ತದೆ. ಹಾಗಾಗಿ ಪ್ರಥಮಸೂತ್ರದಲ್ಲಿ ಹೇಳಿದ ಚರಣಾಭಿಧಾನಹೇತುವು ಜ್ಯೋತಿಯಲ್ಲಿಲ್ಲವೆಂದು ವ್ಯಧಿಕರಣವಾಗದು. ಪ್ರಥಮಸೂತ್ರಕ್ಕೆ ಹೀಗರ್ಥ -- ಛಾಂದೋಗ್ಯದಲ್ಲಿರುವ ಜ್ಯೋತಿಯು ವಿಷ್ಣುವೇ ಆಗಿದ್ದಾನೆ. ಈ ಜ್ಯೋತಿಗೆ ಅಗ್ನಿಸೂಕ್ತದಲ್ಲಿ ವಿಚರಣಾಭಿಧಾನವನ್ನು ಹೇಳಿದ್ದರಿಂದ.

ವಸ್ತುತಃ ಛಾಂದೋಗ್ಯದಲ್ಲಿ ಹೇಳಲ್ಪಟ್ಟ ಜ್ಯೋತಿಯು ವಿಷ್ಣುವೆಂದು ಸಮರ್ಥಿಸಲು ಅಗ್ನಿಸೂಕ್ತದ ಆಧಾರವು ಅನಾವಶ್ಯಕ. ಏಕೆಂದರೆ 'ಯದ್ ವೈ ಏತದ್ಬ್ರಹ್ಮ' ಎಂಬ ಶ್ರುತಿಯಲ್ಲಿ ಬ್ರಹ್ಮನ ಅಸಾಧಾರಣವಾದ ಲಿಂಗಗಳು ಛಾಂದೋಗ್ಯದಲ್ಲಿಯೇ ಕೇಳಿಸುತ್ತದೆ. ಆದರೂ ಸೂತ್ರಕಾರರು ಅಗ್ನಿಸೂಕ್ತದಲ್ಲಿ ಹೇಳಿದ ಬ್ರಹ್ಮನ ಲಿಂಗವನ್ನು ಆಶ್ರಯಿಸಲು ಮುಖ್ಯಕಾರಣವಿದೆ. ಆಯಾ ಸೂಕ್ತ-ಗಳಲ್ಲಿರುವ ನಿರವಕಾಶವಿಷ್ಣುಲಿಂಗಗಳಿಂದ ಅಗ್ನಿ ಮೊದಲಾದವರಲ್ಲಿ ಸಾವಕಾಶವಾದ ಶ್ರುತಿಗಳು ಬಾಧಿತವಾಗುತ್ತವೆ. ಪ್ರಧಾನವಾಗಿ ವಿಷ್ಣುವನ್ನೇ ಪ್ರತಿಪಾದಿಸುತ್ತವೆ. ಹೀಗೆ ಭಿಕ್ಷುಕಪಾದಪ್ರಸಾರಣ-ನ್ಯಾಯದಿಂದ ಸಕಲವೇದಗಳಿಗೆ ವಿಷ್ಣುವಿನಲ್ಲಿ ಸಮನ್ವಯವನ್ನು ತೋರಿಸಬೇಕು. ಅದಕ್ಕಾಗಿ ಸೂತ್ರಕಾರರು ಅಗ್ನಿಸೂಕ್ತದಲ್ಲಿರುವ ಲಿಂಗವನ್ನು ಹೇಳಿದ್ದಾರೆ. ಹೀಗೆ ಸನ್ನ್ಯಾಯರತ್ನಾವಲೀಕಾರರ ಅಭಿಪ್ರಾಯವೂ ಅತ್ಯಂತ ನಿರ್ದುಷ್ಟವಾಗಿದೆ.

### ಕಠಿಣಪದಾರ್ಥ

ಉಕ್ತರೀತ್ಯಾ = 'ಜ್ಯೋತಿಃಶ್ರುತಿ ಹಾಗೂ ಹೃದಯನಿಹಿತತ್ವಧರ್ಮಗಳಿಂದ ಶಾಖಾಂತರ ಅಧಿಕರಣನ್ಯಾಯದಂತೆ ಜ್ಯೋತಿಯು ಒಬ್ಬನೇ ಆಗಿದ್ದಾನೆಂಬ ಪ್ರತ್ಯಭಿಜ್ಞೆ ಬರುತ್ತದೆ' ಎಂದು ಹಿಂದೆ ಹೇಳಿದಂತೆ; ಸ್ವವಾಕ್ಯಸ್ಥಾನಿ = ಛಾಂದೋಗ್ಯದಲ್ಲಿ ಇರುವ; ಭಿಕ್ಷುಕಪಾದಪ್ರಸಾರಣನ್ಯಾಯೇನ = 'ಭಿಕ್ಷುಕನಾದ ವಾಮನನು ಬಲಿಯಿಂದ ಮೂರು ಹೆಜ್ಜೆಗಳನ್ನು ಸ್ವೀಕರಿಸುತ್ತೇನೆಂಬ ನೆಪದಿಂದ ಮೂರು ಲೋಕಗಳನ್ನೇ ವ್ಯಾಪಿಸಿದ' ಈ ನ್ಯಾಯದಂತೆ.

**प्रकाशः –** नन्वेवमपि सन्न्यायरत्नावलीकृन्मते छान्दोग्यवाक्यस्यैव ज्योतिरादि-सूत्रचतुष्टये विषयत्वात् तत्र छन्दोभिधानादिसम्भवेऽपि चरणशब्दितकर्णादि-

विदूरत्वादेरभावेन चरणाभिधानादित्ययुक्तमित्यत आह – **द्वितीयेऽपीति** ॥ 'पक्षे' इति वर्तते । नन्वयुक्तमेतत्, छान्दोग्यगतज्योतिषो विष्णुत्वे तत्रत्यानां **''ततो ज्यायांश्च पुरुषः'' ''यद्वै तद्ब्रह्म'' ''य एतामेव ब्रह्मोपनिषदं वेद''** इति श्रुतीनां **''एतामेव नातिशीयन्ते''** इति सर्वोत्तमत्वगानत्राणकर्तृत्वभूतादिपादत्वादिलिङ्गानां च त्यागेनान्यगतलिङ्गोदाहरणे प्रयोजनाभावादित्याशङ्क्याह – **यद्यपीति** ॥ एवं मतद्वये एकैकं वाक्यमुदाहरणमुपेत्य सूत्राणां सामञ्जस्यमुक्तम् ॥

ವಿವರಣೆ - ತತ್ವಪ್ರದೀಪಕಾರರ ಪಕ್ಷವು ಸಮಂಜಸವೆಂದು ಈ ಹಿಂದೆ ಸಮರ್ಥಿಸಿದಿರಿ. ಹಾಗಾದರೆ ಸನ್ನ್ಯಾಯರತ್ನಾವಲೀಕಾರರ ಅಭಿಪ್ರಾಯವು ತಪ್ಪಾಯಿತು. ಇವರ ಪ್ರಕಾರ ಛಾಂದೋಗ್ಯವಾಕ್ಯವೇ ಜ್ಯೋತಿರಾದಿ ನಾಲ್ಕು ಸೂತ್ರಗಳಿಗೆ ವಿಷಯವಾಗಿದೆ. ಛಾಂದೋಗ್ಯದಲ್ಲಿ ಛಂದೋಭಿಧಾನ, ಭೂತಾದಿಪಾದವ್ಯಪದೇಶ, ಉಪದೇಶಭೇದಗಳೆಂಬ ಹೇತುಗಳನ್ನು ಹೇಳಿರಬಹುದು. ಆದರೆ ವಿಚರಣಾಭಿಧಾನಹೇತುವಿನಿಂದ ತಿಳಿಯುವ ಕರ್ಣಾದಿವಿದೂರತ್ವ ಹೇತುವು ಹೇಳಿಲ್ಲ. ಆದ್ದರಿಂದ ಪ್ರಥಮಸೂತ್ರದಲ್ಲಿ ಸೂತ್ರಕಾರರು ಪ್ರಯೋಗಿಸಿದ ವಿಚರಣಾಭಿಧಾನಹೇತುವನ್ನು ಸನ್ನ್ಯಾಯರತ್ನಾವಲೀ-ಕಾರರ ಪಕ್ಷದಲ್ಲಿ ಹೇಗೆ ಕೂಡಿಸುವುದು? ಎಂಬ ಪ್ರಶ್ನೆಗೆ ''ದ್ವಿತೀಯೇಽಪಿ'' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ.

ಛಾಂದೋಗ್ಯದಲ್ಲಿರುವ ಜ್ಯೋತಿಯು ವಿಷ್ಣುವೆನ್ನಲು ಅಗ್ನಿಸೂಕ್ತವನ್ನು ಆಧರಿಸಬೇಕಿಲ್ಲ. ಛಾಂದೋಗ್ಯದಲ್ಲಿಯೇ ಅನೇಕ ಹೇತುಗಳಿವೆ. 'ತತೋ ಜ್ಯಾಯಾಂಶ್ಚ ಪುರುಷಃ ಯದ್ವೈ ಏತದ್ ಬ್ರಹ್ಮ ಯ ಏತಾಮೇವ ಬ್ರಹ್ಮೋಪನಿಷದಂ ವೇದ' 'ಏತಾಮೇವ ನಾತಿಶೀಯಂತೇ' ಇತ್ಯಾದಿ ಶ್ರುತಿಗಳು ಸರ್ವೋತ್ತಮತ್ವ, ಗಾನತ್ರಾಣಕರ್ತೃತ್ವ, ಭೂತಾದಿಪಾದತ್ವ ಮೊದಲಾದ ಅಸಾಧಾರಣಧರ್ಮಗಳನ್ನು ವಿಷ್ಣುವಿನಲ್ಲಿ ಹೇಳುತ್ತಿವೆ. ಈ ಎಲ್ಲ ಹೇತುಗಳನ್ನು ಬಿಟ್ಟು ಅಗ್ನಿಸೂಕ್ತದಲ್ಲಿರುವ ಲಿಂಗವನ್ನು ಉದಾ-ಹರಿಸಲು ಕಾರಣವಿಲ್ಲ ಎಂಬ ಶಂಕೆಗೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ.

ತತ್ವಪ್ರದೀಪಕಾರರ ಪಕ್ಷದಲ್ಲಿ ಮತ್ತು ಸನ್ನ್ಯಾಯರತ್ನಾವಲೀಕಾರರ ಪಕ್ಷದಲ್ಲಿ ನಾಲ್ಕು ಸೂತ್ರಗಳು ಒಂದೇ ಅಧಿಕರಣವೆಂಬ ವಿಚಾರದಲ್ಲಿ ವಿಪ್ರತಿಪತ್ತಿ ಇಲ್ಲ. ಆದರೆ ತತ್ವಪ್ರದೀಪಕಾರರು ಹೇಳುವಂತೆ ಅಗ್ನಿಸೂಕ್ತವು ವಿಷಯವಾದರೂ ತಪ್ಪಿಲ್ಲ; ಸನ್ನ್ಯಾಯರತ್ನಾವಲೀಕಾರರು ಹೇಳುವಂತೆ ಛಾಂದೋಗ್ಯವಾಕ್ಯ ವಿಷಯವಾದರೂ ತಪ್ಪಿಲ್ಲ. ಎರಡೂ ಪಕ್ಷದಲ್ಲಿ ಯಾವುದೇ ಸೂತ್ರಗಳಿಗೆ ಅಪಾರ್ಥವಿಲ್ಲ. ಆದ್ದರಿಂದ ಇಬ್ಬರ ಅಭಿಪ್ರಾಯದಲ್ಲಿಯೂ ದೋಷವಿಲ್ಲ.

गुरुराजीयम् – ननु द्वितीयं मतमयुक्तम् । तत्र विषयवाक्यतयाऽभिमते 'अथ यदतः परो दिवः' इत्यत्र प्रथमसूत्रोक्तस्य कर्णादिविदूरत्वस्याश्रवणात् । किञ्च तत्तत्प्रकरणस्थानामेव यद्वै तद्ब्रह्मेत्यादिश्रुतिलिङ्गादीनां सत्वेन तेनैव

तत्रोक्तस्य ब्रह्मत्वसाधनस्योपपत्त्या सूत्रकारीयं सूक्तान्तरस्थकर्णादिविदूरत्वरूप-लिङ्गग्रहणमनुपपन्नमित्यत आह **द्वितीयेऽपीत्यादिना** ॥ **उक्तरीत्येति** ॥ ज्योतिर्हृदय आहितं यदित्यग्निसूक्तस्थस्यैव ज्योतिषः छान्दोग्ये ज्योतिश्श्रुत्या योऽयमन्तर्हृदय इति हृदयनिहितत्वधर्मेण च शाखान्तराधिकरणन्यायेन प्रत्यभिज्ञाय मानत्वेनैकत्वादित्युक्तरीत्येत्यर्थः ॥ **स्ववाक्यस्थानीति** ॥ तथाच स्ववाक्यस्थलिङ्गादिपरिग्रहे लाघवमिति भावः ॥ **भिक्षुकपादेति** ॥ भिक्षुकस्य वामनस्य बलिदत्तत्रिपादस्थग्रहणमिषेण सर्वां त्रिलोकीं ग्रहीतुमभिवृद्धीकृत-प्रसारणवदित्यर्थः ।

## ಸಾರ

ತತ್ವಪ್ರದೀಪಕಾರರಂತೆ ಸನ್ನ್ಯಾಯರತ್ನಾವಲೀಕಾರರೂ ಕೂಡ ನಾಲ್ಕೂ ಸೂತ್ರಗಳನ್ನು ಜ್ಯೋತಿರಧಿಕರಣ-ವೆನ್ನುತ್ತಾರೆ. ಆದರೆ ಅಗ್ನಿಸೂಕ್ತವು ವಿಷಯವಲ್ಲ. 'ಅಥ ಯದತಃ ಪರೋ ದಿವೋ ಜ್ಯೋತಿಃ' ಎಂಬ ಛಾಂದೋಗ್ಯವೇ ವಿಷಯವಾಕ್ಯ. ಪ್ರಥಮಸೂತ್ರದಲ್ಲಿ ಹೇಳಿದ ವಿಚರಣಾಭಿಧಾನಹೇತುವು ಈ ವಿಷಯವಾಕ್ಯದಲ್ಲಿ ಇಲ್ಲದಿರಬಹುದು. ಆದರೆ ಛಾಂದೋಗ್ಯದಲ್ಲಿ ಪ್ರತಿಪಾದ್ಯನಾದ ಜ್ಯೋತಿಯೇ ಅಗ್ನಿಸೂಕ್ತದಲ್ಲಿ ಪ್ರತಿಪಾದ್ಯ-ನಾಗಿದ್ದಾನೆ. ಹಾಗಾಗಿ ವಿಚರಣಾಭಿಧಾನಹೇತುವಿನಿಂದ ಛಾಂದೋಗ್ಯದ ಜ್ಯೋತಿಯು ವಿಷ್ಣುವೆಂದು ಪ್ರಥಮ-ಸೂತ್ರವು ಪ್ರತಿಪಾದಿಸುತ್ತಿದೆ.

ವಾಸ್ತವಿಕವಾಗಿ ನಿರವಕಾಶವಾದ ಅನೇಕ ವಿಷ್ಣುಲಿಂಗಗಳು ಛಾಂದೋಗ್ಯದಲ್ಲಿಯೇ ಇದೆ. ಅವುಗಳಿಂದಲೇ ಜ್ಯೋತಿಯನ್ನು ವಿಷ್ಣುವೆಂದು ಸಾಧಿಸಬಹುದು. ಅಗ್ನಿಸೂಕ್ತವು ಬೇಕಾಗಿಲ್ಲ. ಆದರೆ ಬೇರೆ ಬೇರೆ ಜ್ಯೋತಿಃಶ್ರುತಿಯಲ್ಲಿರುವ ನಿರವಕಾಶಲಿಂಗಗಳಿಂದ ವಿಷ್ಣುವೇ ಪ್ರತಿಪಾದ್ಯನೆಂದು ಸಾಧಿಸಿದಾಗ ಅನೇಕ ಶ್ರುತಿಗಳ ಸಮನ್ವಯವು ವಿಷ್ಣುವಿನಲ್ಲಿ ಸಿದ್ಧವಾಗುತ್ತದೆ. ವಾಮನನು ಬಲಿಯ ಮೂಲಕ ಮೂರು ಹೆಜ್ಜೆಗಳನ್ನಷ್ಟೇ ಬೇಡಿ, ಅನಂತರ ತ್ರಿವಿಕ್ರಮನಾಗಿ ಸಮಸ್ತ ಜಗತ್ತನ್ನೇ ವ್ಯಾಪಿಸಿದನು. ಇದರಂತೆ ಬೇರೆ ಬೇರೆ ವೇದಗಳಲ್ಲಿರುವ ವಿಷ್ಣುಲಿಂಗಗಳನ್ನು ಉಲ್ಲೇಖಿಸಿದಾಗ ಕ್ರಮವಾಗಿ ತ್ರಿವಿಕ್ರಮನಂತೆ ಸಮಸ್ತ ವೇದದ ಸಮನ್ವಯವು ಸಿದ್ಧವಾಗುತ್ತದೆ. ಹೀಗೆ ಪದ್ಮನಾಭತೀರ್ಥರು ಚಮತ್ಕಾರಮಯವಾಗಿ ಸೂತ್ರಗಳಿಗೆ ವ್ಯಾಖ್ಯಾನಿಸಿದ್ದಾರೆ.

### ಇಬ್ಬರ ಮತದಲ್ಲಿ ಎರಡೂ ವಿಷಯವಾಕ್ಯಗಳಾಗಬಹುದು.

## तात्पर्यचन्द्रिका

**यद्वा – मतद्वयेऽपि वाक्यद्वयमप्युदाहरणम् । यथा ह्यग्निसूक्तस्थवाक्ये प्रकरणानुगृहीतश्रुत्या पूर्वःपक्षः, तथा छान्दोग्येऽपि ''गायत्री वा इदं सर्वं'' इत्युपक्रमात्, ''सैषा चतुष्पदा षड्विधा गायत्री'' इति चोपसंहारात् तस्य**

गायत्रीप्रकरणत्वेन, तदनुगृहीतज्योतिःश्रुत्या पूर्वपक्ष इति पूर्वपक्षयुक्तिसाधारण्यात्, तथाऽग्निसूक्ते निरतिशयवैभवलक्षणचरणेन सिद्धान्तवत्, छान्दोग्येऽपि ''एतामेव नातिशीयन्ते'' इति निरतिशयवैभवरूपेण चरणेन सिद्धान्त इति सिद्धान्तयुक्तिसाधारण्याच्चैकाधिकरणता ।

यथाऽऽघाराग्निहोत्राद्यधिकरणेषु 'आघारमाघारयति' 'अग्निहोत्रं जुहोति' इत्याद्युदाहरणभेदेऽपि द्रव्यदेवतालक्षणयागरूपाभावान्नानयोर्यागविधित्वमिति पूर्वपक्षयुक्तिसाधारण्यात्, मन्त्रवर्णादिना देवतादिलाभान्न रूपाभाव इति सिद्धान्तयुक्तिसाधारण्याच्च एकाधिकरणता, तद्वत् । छन्दःसूत्रे तु छन्दश्शब्दोऽग्नेरप्युपलक्षकः । अत एव ''अग्निगायत्र्यादि'' इति भाष्ये अग्निपदप्रयोगः । ''उपदेशभेदात्'' इति पूर्वपक्षयुक्तिः, 'भूतादिपाद' इति सिद्धान्तयुक्तिश्च च्छान्दोग्यवाक्यमात्रासाधारणी । एवञ्च यथा अर्थवादनये भट्टमत एको विचारः अर्थवादमन्त्रादिसाधारणः, अन्यस्तु अर्थवादमात्रासाधारण इति द्विपर्वा विचारः, तथात्राप्युक्तरीत्या द्विपर्वा विचारः । अत एवास्य तत्वप्रदीपे अन्तर्भेदाधिकरणत्वमुक्तमिति दिक् ।

ಅನುವಾದ - ಅಥವಾ ತತ್ವಪ್ರದೀಪಕಾರರು ಹಾಗು ಸನ್ನ್ಯಾಯರತ್ನಾವಲೀಕಾರರು ಇಬ್ಬರಿಗೂ ಎರಡೂ ವಾಕ್ಯಗಳು ವಿಷಯವಾಗುತ್ತವೆನ್ನಬಹುದು. ಅದು ಹೀಗೆ -- ಅಗ್ನಿಸೂಕ್ತದಲ್ಲಿರುವ ವಾಕ್ಯದಲ್ಲಿ ಪ್ರಕರಣಬಲದಿಂದ ಅನುಗೃಹೀತವಾದ ಶ್ರುತಿಯಿಂದ ಪೂರ್ವಪಕ್ಷ ಮಾಡಬಹುದು. ಆದರಂತೆ ಛಾಂದೋಗ್ಯದಲ್ಲಿಯೂ ಪ್ರಕರಣಬಲದಿಂದ ಅನುಗೃಹೀತವಾದ ಜ್ಯೋತಿಃಶ್ರುತಿಯಿಂದಲೇ ಪೂರ್ವಪಕ್ಷ ಮಾಡಬಹುದು. 'ಗಾಯತ್ರೀ ವಾ ಇದಂ ಸರ್ವಮ್' ಎಂದು ಪ್ರಾರಂಭವಾಗಿ 'ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ' ಎಂದು ಮುಕ್ತಾಯವಾಗುವುದರಿಂದ ಛಾಂದೋಗ್ಯವು ಗಾಯತ್ರೀಪ್ರಕರಣವೆಂದು ತಿಳಿಯುತ್ತದೆ. ಹೀಗೆ ಎರಡೂ ವಿಷಯವಾಕ್ಯಗಳಲ್ಲಿ ಪ್ರಕರಣಾನುಗೃಹೀತಪೂರ್ವಪಕ್ಷಯುಕ್ತಿಯು ಸಾಧಾರಣವಾಗಿದೆ.

ಸಿದ್ಧಾಂತಯುಕ್ತಿಯೂ ಸಮಾನವಾಗಿದೆ. ಅಗ್ನಿಸೂಕ್ತದಲ್ಲಿ ಚರಣಶಬ್ದದಿಂದ ನಿರತಿಶಯವೈಭವತ್ವವೆಂಬ ಸಿದ್ಧಾಂತಯುಕ್ತಿಯು ತಿಳಿಯುತ್ತದೆ. ಛಾಂದೋಗ್ಯದಲ್ಲಿಯೂ ಕೂಡ ಚರಣಶಬ್ದದಿಂದ 'ಏತಾಮೇವ ನಾತಿಶೀಯಂತೇ' ಎಂಬ ವಾಕ್ಯವು ನಿರತಿಶಯವೈಭವತ್ವವೆಂಬ ಸಿದ್ಧಾಂತಯುಕ್ತಿಯು ತಿಳಿಯುತ್ತದೆ. ಹೀಗೆ ಎರಡೂ ವಿಷಯವಾಕ್ಯಗಳಲ್ಲಿ ಪೂರ್ವಪಕ್ಷ ಹಾಗೂ ಸಿದ್ಧಾಂತಯುಕ್ತಿಗಳು ಸಾಧಾರಣವಾದ್ದರಿಂದ ಒಂದೇ ಅಧಿಕರಣದಲ್ಲಿ ಎರಡು ವಾಕ್ಯಗಳನ್ನು ವಿಚಾರ ಮಾಡಲಾಗಿದೆ. ಇದು ತಪ್ಪಲ್ಲವೆನ್ನಲು ಪೂರ್ವಮೀಮಾಂಸೆಯ ಸಮ್ಮತಿ ಇದೆ -

ಆಘಾರಾಗ್ನಿಹೋತ್ರವೆಂಬ ಒಂದೇ ಅಧಿಕರಣದಲ್ಲಿ 'ಆಘಾರಮಾಘಾರಯತಿ' 'ಅಗ್ನಿಹೋತ್ರಂ ಜುಹೋತಿ' ಎಂಬ ಅನೇಕ ಉದಾಹರಣವಾಕ್ಯಗಳನ್ನು ವಿಚಾರ ಮಾಡಿದ್ದಾರೆ. ಏಕೆಂದರೆ, ದ್ರವ್ಯ ಹಾಗೂ ದೇವತೆಗಳಿದ್ದರೆ ಮಾತ್ರ ಆ ವಾಕ್ಯವು ಯಾಗ ವಿಧಾಯಕವಾಗುತ್ತದೆ. 'ಆಘಾರಮಾ-ಘಾರಯತಿ' ಎಂಬ ವಾಕ್ಯದಲ್ಲಾಗಲೀ, 'ಅಗ್ನಿಹೋತ್ರಂ ಜುಹೋತಿ' ಎಂಬ ವಾಕ್ಯದಲ್ಲಾಗಲೀ ದ್ರವ್ಯದೇವತೆಗಳು ಹೇಳಲ್ಪಟ್ಟಿಲ್ಲ. ಆದ್ದರಿಂದ ಈ ವಾಕ್ಯಗಳು ಯಾಗವಿಧಾಯಕಗಳಲ್ಲವೆಂಬ ಪೂರ್ವ-ಪಕ್ಷಯುಕ್ತಿಯು ಎರಡೂ ವಿಷಯವಾಕ್ಯಗಳಲ್ಲಿ ಸಮಾನವಾಗಿದೆ. ಮತ್ತು ಸಿದ್ಧಾಂತಯುಕ್ತಿಯೂ ಸಮಾನವಾಗಿದೆ. ಮಂತ್ರವರ್ಣವೇ ದೇವತೆ, ಘೃತವೇ ದ್ರವ್ಯವೆಂಬ ಯಾಗದ ಸ್ವರೂಪವು ಈ ವಾಕ್ಯಗಳಲ್ಲಿಯೂ ತಿಳಿಯುತ್ತದೆ. ಹೀಗೆ ಪೂರ್ವಪಕ್ಷಯುಕ್ತಿ ಸಿದ್ಧಾಂತಯುಕ್ತಿಗಳು ಸಾಧಾರಣವಾದ್ದ-ರಿಂದ ಒಂದೇ ಅಧಿಕರಣವೆಂದು ನಿರ್ಣಯಿಸಿದ್ದಾರೆ. ಆದರಂತೆ ಪ್ರಕೃತದಲ್ಲಿಯೂ ತಿಳಿಯಬೇಕು.

ಛಂದಃಸೂತ್ರದಲ್ಲಿರುವ ಛಂದಸ್‌ಶಬ್ದವು ಗಾಯತ್ರೀಯ ಜೊತೆಗೆ ಅಗ್ನಿಯನ್ನೂ ಉಪಲಕ್ಷಣಯಾ ತಿಳಿಸುತ್ತಿದೆ. ಆದ್ದರಿಂದಲೇ ಭಾಷ್ಯದಲ್ಲಿ 'ಅಗ್ನಿಗಾಯತ್ರ್ಯಾದಿ' ಎಂದು ಅಗ್ನಿಪದವನ್ನು ಆಚಾರ್ಯರು ಪ್ರಯೋಗಿಸಿದ್ದಾರೆ. ಉಪದೇಶಭೇದಾದಿಪೂರ್ವಪಕ್ಷಯುಕ್ತಿಯು, ಭೂತಾದಿಪಾದವೆಂಬ ಸಿದ್ಧಾಂತ-ಯುಕ್ತಿಯು ಛಾಂದೋಗ್ಯದಲ್ಲಷ್ಟೇ ಅಸಾಧಾರಣವಾಗಿದೆಯೆಂಬ ವ್ಯತ್ಯಾಸವನ್ನು ಗಮನಿಸಬೇಕು.

ಪೂರ್ವಮೀಮಾಂಸೆಯ ಅರ್ಥವಾದಾಧಿಕರಣದಲ್ಲಿ ಅರ್ಥವಾದ, ಮಂತ್ರ, ನಾಮಧೇಯ ಮೊದಲಾದವುಗಳಲ್ಲಿ ಸಾಧಾರಣವಾದ ವಿಚಾರವನ್ನು ಮೊದಲು ಮಾಡಿ, ಅನಂತರ ಅರ್ಥವಾದ ವಾಕ್ಯದಲ್ಲಷ್ಟೇ ಅಸಾಧಾರಣವಾದ ವಿಚಾರವನ್ನು ಮಾಡಿದ್ದಾರೆ. ಅದರಂತೆ ಜ್ಯೋತಿರಧಿಕರಣ-ದಲ್ಲಿಯೂ ದ್ವಿಪರ್ವವಿಚಾರವನ್ನು ತಿಳಿಯಬೇಕು. ಆದ್ದರಿಂದಲೇ ತತ್ವಪ್ರದೀಪದಲ್ಲಿ ಇದನ್ನು ಅಂತರ್ಭೇದಾಧಿಕರಣವೆಂದಿದ್ದಾರೆ. ಇಷ್ಟು ಕೇವಲ ದಿಕ್ಪ್ರದರ್ಶನ.

### ಕಠಿಣಪದಾರ್ಥ

ಮತದ್ವಯೇಽಪಿ = ತತ್ವಪ್ರದೀಪಕಾರರ ಮತ ಹಾಗೂ ಸನ್ನ್ಯಾಯರತ್ನಾವಲೀಕಾರರ ಮತಗಳಲ್ಲಿ; ವಾಕ್ಯದ್ವಯಮಪಿ = ಅಗ್ನಿಸೂಕ್ತ ಹಾಗೂ ಛಾಂದೋಗ್ಯ ವಾಕ್ಯಗಳೆರಡೂ; ಪ್ರಕರಣಾನುಗೃಹೀತಶ್ರುತ್ಯಾ = ಪ್ರಕರಣಪ್ರಮಾಣದಿಂದ ಬೆಂಬಲ ಹೊಂದಿದ ಶ್ರುತಿಪ್ರಮಾಣದಿಂದ; ಛಾಂದೋಗ್ಯೇಽಪಿ = ಈ ಪದಕ್ಕೆ ತದನುಗೃಹೀತಶ್ರುತ್ಯಾ ಎಂಬಲ್ಲಿ ಅನ್ವಯ; ಚರಣೇನ = ಕರ್ಣಾದಿ ಇಂದ್ರಿಯಗಳಿಂದ ಗೋಚರನಾಗಲಾರನೆಂಬ ವಿಚರಣಹೇತುವಿನಿಂದ; ರೂಪಾಭಾವಃ = ಯಾಗಸ್ವರೂಪವು ಸಿದ್ಧವಾಗುವುದಿಲ್ಲ; ಅತ ಏವ = ಸಾಧಾರಣ ಅಸಾಧಾರಣವೆಂಬ ಎರಡು ರೀತಿಯಲ್ಲಿ ವಿಚಾರ ಮಾಡಿದ್ದರಿಂದಲೇ; ದ್ವಿಪರ್ವಾವಿಚಾರಃ = ಎರಡು ಹಂತದ ವಿಚಾರ;

**प्रकाशः** – अधुना, मतद्वयेऽपि वाक्यद्वयमप्युदाहरणं, पूर्वोत्तरपक्षन्याय-साम्याच्चैकाधिकरणता । नहि विषयभेदमात्रेणाधिकरणभेदः । अतो – यद्वा न

वैयधिकरण्यमित्याह – **यद्वेति** । **छान्दोग्येपीति** ॥ 'तदनुगृहीतश्रुत्या' इत्यन्वयः । तत्र गायत्रीप्रकरणत्वं साधयति – **गायत्री वा इदमित्यादिना** ॥ **चरणेनेति** ॥ 'वि' कर्णादीन्द्रियापरिच्छेद्यत्वरूपविचरणेनेत्यर्थः ॥ **साधारण्यादिति** ॥ 'भूतादि' इति युक्त्यन्तरं तु च्छान्दोग्यमात्रासाधारणमिति वक्ष्यत इति भावः ।

वाक्यभेदेऽपि न्यायसाम्यादैकाधिकरण्ये दृष्टान्तमाह – **यथेति** ॥ अधिकरणशरीरं प्रागुक्तम् समन्वयसूत्रे । द्रव्यदेवते हि यागस्य रूपमुच्यते । तदलाभे सति विधानयोग्यस्वरूपविशेषानवगत्या नानयोर्यागविधित्वमिति **"दध्ना जुहोति"** **"सन्ततमाघारयति"** इत्यादि वाक्यप्राप्तहोमाघारसमुदायानुवादत्वरूपपूर्वपक्षयुक्तिसाधारण्यात्, **"अग्निर्ज्योतिर्ज्योतिरग्निस्स्वाहेति सायं जुहोति"** **"इन्द्रं ऊर्ध्वोध्वर आघारमाघारयति"** इति वचनविनियुक्तमन्त्रवर्णात्, **"दध्ना जुहोति"** **"चतुर्गृहीतं वा एतदभूत्"** इत्यादिना च देवताद्रव्यलाभरूपस्वतन्त्रहोमाघारविधिरिति सिद्धान्तयुक्तिसाधारण्याच्चेत्यर्थः । आदिशब्देन चित्राज्याधिकरणयववराहाधिकरणादेर्ग्रहणम् ।

ननु वाक्यद्वयेऽपि ज्योतिष एव विषयत्वेन ज्योतिस्सूत्रे ज्योतिर्मात्रग्रहणेऽपि च्छन्दस्सूत्रे च्छन्दोमात्रग्रहणं न युक्तम् । न ह्युभयत्र च्छन्द इत्येव पूर्वः पक्षः, किन्तु सूक्ते अग्निरिति, छान्दोग्ये छन्द इतीत्यत आह – **छन्दस्सूत्र इति** ॥ गायत्रीरूपछन्दसि उपदेशभेदादिरूपानुपपत्त्यन्तरं उद्भाव्य समाधातुं तस्य मुखतः कीर्तनमिति भावः । उपलक्षकत्वे ज्ञापकं – **अत एवेति** ॥ नन्वाद्यसूत्रद्वयस्य कथञ्चिद्वाक्यद्वयसाधारण्यसम्भवेऽप्युत्तरसूत्रद्वयस्य न तत्सम्भवति, सूक्ते भूतादिपादव्यपदेशादेरभावादित्यत आह – **उपदेशेति** ॥ यथाऽऽनन्दमयाधिकरणे **"तद्धेतुव्यपदेशात्"** इत्यानन्दमयमात्रासाधारणं तद्वदिति भावः ।

मीमांसकसम्मत्या चोक्तमर्थं निष्कृष्याह – **एवञ्चेति** ॥ अर्थवादाधिकरणं प्रागुक्तं आद्याधिकरणे । तत्र **"आम्नायस्य क्रियार्थत्वादानर्थक्यमतदर्थानाम्"** इति सूत्रेणाक्रियार्थानामर्थवादमन्त्रनामधेयानां आनर्थक्यादप्रामाण्यमिति पूर्वःपक्षः, **"विधिना त्वेकवाक्यत्वात् स्तुत्यर्थत्वेन विधीनां स्युः"** इति सिद्धान्तसूत्रस्थेन तुशब्देन, **"तुल्यं च साम्प्रदायिकम्"** इति सूत्रेण वा कृत्स्नस्वाध्याय-

पुरुषार्थपर्यवसाय्यध्ययनविधिमहिम्नाऽर्थवादादीनां सप्रयोजनत्वावसायेन प्रामाण्यमिति सिद्धान्त इति साधारण एको विचारः,

पुनरर्थवादानां द्वाराभावादप्रामाण्यमिति पूर्वःपक्षः, सिद्धान्तसूत्रे स्तुतिग्रहणात् द्वारसम्भवात् प्रामाण्यमित्यसाधारणो अन्यो विचार इति यथा द्विपर्वा विचारः, तथेहाऽपि वाक्यद्वयगतज्योतिश्शब्दार्थो विष्णुरन्यो वेति संशये अग्निच्छन्दस्त्वाभिधानादप्रसिद्धज्योतिर्गायत्रीपदप्रयोगे प्रयोजनाभावान्न विष्णुः किं त्वन्य इति प्राप्ते, उभयत्र चरणशब्दितापरिच्छिन्नवैभवत्वस्याभिधानात् तथोपासनार्थमप्रसिद्धपदप्रयोगस्यापि सम्भवाद् विष्णुरिति सिद्धान्त इत्येको विचारः,

पुनः छान्दोग्यस्थज्योतिर्न ब्रह्म उपदेशभेदादिति प्राप्ते, भूतादिपादव्यपदेशादिना सिद्धान्त इत्यन्यो विचार इति द्विपर्वा विचार इत्यर्थः । 'अत एव' साधारणासाधारणद्विरूपविचारत्वादेवेत्यर्थः । ननु –

**नित्यत्वादेव शब्दानां तत्स्वभावः कथं ततः ।**

इत्यनुव्याख्यानोक्तायाः पूर्वपक्षयुक्तेः "तादृशत्वाच्च तच्छक्तेः" इत्युक्तसिद्धान्तयुक्तेश्चाग्निसूक्तस्थज्योतिष्ययोगात् कथमिदमुदाहरणमिति चेन्न, तयोः भूतादिपादव्यपदेशादिवत् गायत्रीवाक्यमात्रासाधारण्येनोपपत्तेः । अत एव द्विपर्वा विचार इत्युक्तम् ।

नन्वथापि ज्योतिस्सूत्रे इदमग्निसूक्तमेव न विष्णुसूक्तमित्यध्यापकप्रसिद्धेरज्ञानमूलत्वादिरूपो न्यायो व्युत्पाद्यः, उत्तरत्रिसूत्र्यामनादिनित्यस्यापीशाधीनत्वादिव्युत्पादको न्याय इति न्यायस्य व्यवस्थितत्वात् विषयस्यापि व्यवस्थाऽधिकरणभेदश्च वाच्य इति चेन्न, अन्तरागर्भिणीन्यायेनोपपत्तेः । अत एवान्तर्भेदाधिकरणत्वमुक्तमित्युक्तम् । एवमन्यदप्यूह्यमिति भावेनोक्तं – दिगिति ॥

ವಿವರಣೆ - ಇಲ್ಲಿಯ ತನಕ ತತ್ವಪ್ರದೀಪಕಾರರಿಗೆ ಅಗ್ನಿಸೂಕ್ತವು ವಿಷಯವಾಕ್ಯ; ಸನ್ಯಾಯರತ್ನಾವಲೀಕಾರರಿಗೆ ಛಾಂದೋಗ್ಯಶ್ರುತಿವಾಕ್ಯವು ವಿಷಯವಾಕ್ಯ. ಇಬ್ಬರ ಅಭಿಪ್ರಾಯದಲ್ಲಿಯೂ ದೋಷವಿಲ್ಲವೆಂಬುದನ್ನು ಸಮರ್ಥಿಸಿದ್ದಾಯಿತು. ಪ್ರಕೃತ ಎರಡೂ ವಾಕ್ಯಗಳು ಇಬ್ಬರ ಪ್ರಕಾರವೂ ವಿಷಯವಾಕ್ಯವಾದರೆ ತಪ್ಪಿಲ್ಲವೆಂಬುದನ್ನು ಸಮರ್ಥಿಸುತ್ತಿದ್ದಾರೆ. ವಿಷಯವಾಕ್ಯಭೇದದಿಂದ ಅಧಿಕರಣಗಳು ಭಿನ್ನವಾಗಬೇಕಲ್ಲವೇ? ಎಂಬ ಶಂಕೆಗೆ ಅವಕಾಶವಿಲ್ಲ. ಪೂರ್ವಪಕ್ಷನ್ಯಾಯ ಹಾಗೂ ಸಿದ್ಧಾಂತನ್ಯಾಯಗಳು

ಯಾವ ಯಾವ ವಾಕ್ಯಗಳಲ್ಲಿ ಸಾಧಾರಣವಾಗಿರುತ್ತವೆಯೋ ಆ ಎಲ್ಲಾ ವಾಕ್ಯಗಳೂ ಒಂದೇ ಅಧಿಕರಣದಲ್ಲಿ ವಿಷಯಗಳಾಗುತ್ತವೆಂಬ ಸೂಕ್ಷ್ಮವನ್ನು ಗಮನಿಸಬೇಕು. ಪೂರ್ವಪಕ್ಷನ್ಯಾಯ ಅಥವಾ ಸಿದ್ಧಾಂತನ್ಯಾಯದಲ್ಲಿ ವೈಷಮ್ಯವಿದ್ದರೆ ಮಾತ್ರ ಅಧಿಕರಣಗಳು ಭಿನ್ನವಾಗುತ್ತವೆ. ಅಗ್ನಿಸೂಕ್ತ ಹಾಗೂ ಛಾಂದೋಗ್ಯವಾಕ್ಯದಲ್ಲಿ ಪೂರ್ವಪಕ್ಷನ್ಯಾಯ ಹಾಗೂ ಸಿದ್ಧಾಂತನ್ಯಾಯಗಳು ಸಮಾನವಾಗಿವೆ. ಇವೆರಡನ್ನೂ ಒಂದೇ ಜ್ಯೋತಿ-ರಧಿಕರಣದಲ್ಲಿ ಸಮನ್ವಯ ಮಾಡಲಾಗಿದೆ. ಹೀಗೆ ಹೇಳಿದಾಗ ಸೂತ್ರದ ಮೇಲೆ ವೈಯ್ಯಧಿ-ಕರಣ್ಯದೋಷವನ್ನು ಆಕ್ಷೇಪಿಸಲಾಗದು. ಈ ವಿಚಾರವನ್ನು 'ಯದ್ವಾ' ಇತ್ಯಾದಿಗ್ರಂಥವು ಸಮರ್ಥಿಸುತ್ತಿದೆ.

ನ್ಯಾಯಗಳು ಸಮಾನವಾದಾಗ ಒಂದೇ ಅಧಿಕರಣವಾಗುತ್ತದೆನ್ನಲು ಪೂರ್ವಮೀಮಾಂಸೆಯ ದೃಷ್ಟಾಂತವಿದೆ.

### ಆಘಾರಾಗ್ನಿಹೋತ್ರಾಧಿಕರಣಮ್ [1](೨/೨/೫)

ಸಮನ್ವಯಾಧಿಕರಣದಲ್ಲಿ ವಿವರಿಸಿದ ಆಘಾರಾಗ್ನಿಹೋತ್ರಾಧಿಕರಣದ ಶರೀರವನ್ನು ಇಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು. ದ್ರವ್ಯಹಾಗೂ ದೇವತೆಗಳಿದ್ದರಷ್ಟೇ ಯಾಗವೆನಿಸುತ್ತದೆ. ಯಾವ ವಾಕ್ಯದಲ್ಲಿ ದ್ರವ್ಯವನ್ನಾಗಲೀ ದೇವತೆಯನ್ನಾಗಲೀ ಹೇಳಿರುವುದಿಲ್ಲವೋ ಅದು ಯಾಗವಿಧಿಯೆನಿಸದು. ಪ್ರಕೃತ 'ಆಘಾರಮಾಘಾರಯತಿ' ಎಂಬ ವಾಕ್ಯವು ಮತ್ತು 'ಅಗ್ನಿಹೋತ್ರಂ ಜುಹೋತಿ' ಎಂಬ ವಾಕ್ಯವು ದ್ರವ್ಯ, ದೇವತೆಗಳನ್ನು ಹೇಳುತ್ತಿಲ್ಲ. ಹೊರತಾಗಿ 'ದಧ್ನಾ ಜುಹೋತಿ' ಎಂಬ ವಾಕ್ಯದಿಂದ ಪ್ರಾಪ್ತವಾದ ಹೋಮವನ್ನು 'ಅಗ್ನಿಹೋತ್ರಂ ಜುಹೋತಿ' ಎಂಬ ವಾಕ್ಯವು ಅನುವಾದ ಮಾಡುತ್ತಿದೆ. 'ಸಂತತಂ

---

भाट्टसङ्ग्रहः –

**आघाराग्निहोत्रमरूपत्वात् ॥ १३ ॥**

**(संज्ञोपवन्धत्वात् ॥ १४ ॥ अप्रकृतत्वाच ॥ १५ ॥ चोदना वा शब्दार्थस्य प्रयोगभूतत्वात्, तत्सन्निधेर्गुणार्थे पुनःश्रुतिः ॥ १६ ॥)**

पूर्ववैषम्येणेह शङ्कनात् प्रत्युदाहरणलक्षणा **सङ्गतिः** । 'आघारमाघारयति' 'अग्निहोत्रं जुहोति' इति वाक्यद्वयं 'ऊर्ध्वमाघारयति' 'ऋजुमाघारयति' 'दध्ना जुहोति' 'पयसा जुहोति' इत्यादिविहितकर्मसमुदायानुवादकमुतापूर्वकर्मविधायकमिति **सन्देहः** । युक्तं पूर्वत्रोपक्रमोपसंहारावगतैकवाक्यतानुरोधेन विष्णवादिवाक्यानामविधायकत्वेनानुवाद्य-कर्माभावात् अन्तरालवाक्ये अनुवादकत्वाभाव इति । इह तूर्ध्वादिदध्यादिवाक्यविहित-कर्मसमुदायानुवादकत्वं सम्भवतीत्यनुवादकं वाक्यद्वयम् । न चोर्ध्वमित्यादिवाक्यं आघाराग्निहोत्रवाक्यविहितकर्मानुवादेनोर्ध्वत्वादिदध्यादिगुणमात्रविधिपरमिति वाच्यम् । **आघारवाक्यमग्निहोत्रवाक्यं** च **अरूपत्वान्न** विधायकम् । किन्त्वनुवादकमिति । **सिद्धान्तस्तु** दध्यादिवाक्ये गुणविशिष्टकर्मविधाने विशिष्टविधिगौरवेणाग्निहोत्रादिवाक्य-विहितकर्मानुवादेन दध्यादि गुणमात्रविधाने लाघवम् । नच रूपाभावादग्निहोत्रादिवाक्यं

ಆಘಾರಯತಿ' ಎಂಬ ವಾಕ್ಯದಿಂದ ಪ್ರಾಪ್ತವಾದ ಆಘಾರಸಮುದಾಯವನ್ನು 'ಆಘಾರಮಾಘಾರಯತಿ' ಎಂಬ ವಾಕ್ಯವು ಅನುವಾದ ಮಾಡುತ್ತಿದೆ. ಹೀಗೆ ಅನುವಾದತ್ವವೆಂಬ ಪೂರ್ವಪಕ್ಷ ಯುಕ್ತಿಯು ಎರಡೂ ವಾಕ್ಯಗಳಲ್ಲಿ ಸಾಧಾರಣವಾಗಿದೆ. 'ಅಗ್ನಿರ್ಜ್ಯೋತಿರಗ್ನಿಃಸ್ವಾಹೇತಿ ಸಾಯಂ ಜುಹೋತಿ ಇಂದ್ರಮ್ ಊರ್ಧ್ವೋಽಧ್ವರಮಾಘಾರಯತಿ' 'ಆಘಾರಮಾಘಾರಯತಿ' ಎಂಬ ವಾಕ್ಯವು ಮತ್ತು 'ಅಗ್ನಿಹೋತ್ರಂ ಜುಹೋತಿ' ಎಂಬ ವಾಕ್ಯವು ಹೋಮವೆಂಬ ಕರ್ಮವನ್ನು ವಿಧಿಸುತ್ತಿಲ್ಲ. ವಾಕ್ಯವು ಕರ್ಮವನ್ನು ವಿಧಾನ ಮಾಡಬೇಕೆಂದರೆ ದ್ರವ್ಯ, ದೇವತಾವಾಚಕವಾದ ಪದಗಳಿರಬೇಕು. ಪ್ರಕೃತ ಈ ಎರಡೂ ವಾಕ್ಯಗಳಲ್ಲಿ ದ್ರವ್ಯ ಮತ್ತು ದೇವತೆಗಳನ್ನು ಹೇಳುವ ಪದಗಳಿಲ್ಲದ ಕಾರಣ ಅನುವಾದವೆನ್ನಬೇಕೇ ಹೊರತು ವಿಧಿ ಎನ್ನಲಾಗದು. ಆದ್ದರಿಂದ 'ದಧ್ನಾ ಜುಹೋತಿ' ಎಂಬ ವಾಕ್ಯದಲ್ಲಿ ದಧಿರೂಪಗುಣವಿಶಿಷ್ಟವಾದ ಕರ್ಮವು ವಿಹಿತವಾಗಿದೆ. ಅದನ್ನು 'ಅಗ್ನಿಹೋತ್ರಂ ಜುಹೋತಿ' ಎಂಬ ವಾಕ್ಯವು ಅನುವಾದ ಮಾಡುತ್ತಿದೆ. 'ಸಂತತಮಾಘಾರಯತಿ' ಎಂಬ ವಾಕ್ಯವು ಆಘಾರಸಮುದಾಯವಿಶಿಷ್ಟವಾದ ಕರ್ಮವನ್ನು ವಿಧಿಸುತ್ತಿದೆ. ಅದನ್ನು 'ಆಘಾರಮಾಘಾರಯತಿ' ಎಂಬ ವಾಕ್ಯವು ಅನುವಾದ ಮಾಡುತ್ತಿದೆ. ಹೀಗೆ ಎರಡೂ ವಿಷಯವಾಕ್ಯಗಳಲ್ಲಿ ಅನುವಾದತ್ವವೆಂಬ ಪೂರ್ವಪಕ್ಷಯುಕ್ತಿಯು ಸಾಧಾರಣವಾಗಿದೆ.

ಅಷ್ಟೇ ಅಲ್ಲ; ಸಿದ್ಧಾಂತಯುಕ್ತಿಯೂ ಸಾಧಾರಣವಾಗಿದೆ. ಅದು ಹೀಗೆ -- 'ಅಗ್ನಿಹೋತ್ರಂ ಜುಹೋತಿ' ಎಂಬ ವಾಕ್ಯದಿಂದ ದ್ರವ್ಯದೇವತೆಗಳ ಜ್ಞಾನವು ಬಾರದಿದ್ದರೂ ಬೇರೆ ವಾಕ್ಯದಿಂದ ಬರ-ಬಹುದು. 'ದಧ್ನಾ ಜುಹೋತಿ' ಎಂಬ ಮುಂದಿನ ವಾಕ್ಯದಿಂದ ದಧಿ ಎಂಬ ದ್ರವ್ಯದ ಜ್ಞಾನ ಬರುತ್ತದೆ. 'ಅಗ್ನಿರ್ಜ್ಯೋತಿರಗ್ನಿಸ್ವಾಹಾ' ಇತ್ಯಾದಿ ವಾಕ್ಯದಿಂದ ದೇವತೆಯ ಜ್ಞಾನ ಬರುತ್ತದೆ. ಹಾಗಾಗಿ 'ಅಗ್ನಿಹೋತ್ರಂ ಜುಹೋತಿ' ಎಂಬ ವಾಕ್ಯವು ಕರ್ಮವಿಧಾಯಕವಾಗುತ್ತದೆ ಹೊರತು ಅನುವಾದಕವಲ್ಲ. ಅದರಂತೆ 'ಆಘಾರಮಾಘಾರಯತಿ' ಎಂಬ ವಾಕ್ಯವೂ ಕರ್ಮವಿಧಾಯಕವಾಗುತ್ತದೆ. ಈ ವಾಕ್ಯಗಳಿಂದ ವಿಹಿತವಾದ ಕರ್ಮವನ್ನು ಅನುವಾದ ಮಾಡಿ 'ದಧ್ನಾ ಜುಹೋತಿ' 'ಚತುರ್ಗೃಹೀತಂ ವಾ ಏತದಭೂಃ' ಇತ್ಯಾದಿ ವಾಕ್ಯಗಳು ಗುಣವನ್ನಷ್ಟೇ ವಿಧಿಸುತ್ತವೆ. ಹೀಗೆ ದ್ರವ್ಯ ಮತ್ತು ದೇವತೆಗಳ ಸ್ವರೂಪವು ನಿಷ್ಪನ್ನವಾಗುವಿಕೆ ಎಂಬ ಸಿದ್ಧಾಂತಯುಕ್ತಿಯು 'ಆಘಾರಮಾಘಾರಯತಿ' ಎಂಬ ವಾಕ್ಯದಲ್ಲಿ ಮತ್ತು 'ಅಗ್ನಿಹೋತ್ರಂ ಜುಹೋತಿ' ಎಂಬ ವಾಕ್ಯದಲ್ಲಿ ಸಾಧಾರಣವಾಗಿದೆ.

ಆದ್ದರಿಂದ 'ಶ್ರುತಿಯಲ್ಲಿರುವ ಯಾವ ಯಾವ ವಾಕ್ಯಗಳಲ್ಲಿ ಪೂರ್ವಪಕ್ಷ ಹಾಗೂ ಸಿದ್ಧಾಂತ-ನ್ಯಾಯಗಳು ಸಮಾನವಾಗಿದ್ದರೆ ಅವೆಲ್ಲಾ ವಾಕ್ಯಗಳು ಒಂದೇ ಅಧಿಕರಣಕ್ಕೆ ವಿಷಯಗಳಾಗಬಹುದು' ಎಂದು ಈ ಪೂರ್ವಮೀಮಾಂಸೆಯ ದೃಷ್ಟಾಂತದಿಂದ ತಿಳಿಯುತ್ತದೆ. ಇದರಂತೆ ಪ್ರಕೃತ ಜ್ಯೋತಿ-

---

न कर्मविधायकमिति वाच्यम् । दध्यादिवाक्यैर्द्रव्यस्य तत्प्रख्याधिकरणोक्तदिशा मान्त्रवर्णिकदेवतायाश्च सम्भवान्नानुवादकमग्निहोत्रादिवाक्यम् । वाक्यविहितदशकर्मणां देवतैक्यात् दध्यादिद्रव्याणां सहप्रदानं **पूर्वपक्षे । सिद्धान्ते** तु विकल्पेनैकैकद्रव्यस्य प्रदानमित्यादि ज्ञेयम् ।

इति पञ्चमामाघारपूर्वताधिकरणम् (सूत्राणि १३-१६)

ಪರಿಪೂರ್ಣಚಂದ್ರಿಕಾ

ರಧಿಕರಣದಲ್ಲಿ ಪೂರ್ವಪಕ್ಷನ್ಯಾಯ ಹಾಗೂ ಸಿದ್ಧಾಂತನ್ಯಾಯಗಳು ಸಮಾನವಾದ್ದರಿಂದ ಅಗ್ನಿಸೂಕ್ತ ಮತ್ತು ಛಾಂದೋಗ್ಯಸೂಕ್ತಗಳು ವಿಷಯಗಳಾಗುತ್ತವೆ.

ಗ್ರಂಥದಲ್ಲಿರುವ ಆದಿಶಬ್ದದಿಂದ ಚಿತ್ರಾಜ್ಯಾಧಿಕರಣ ಹಾಗೂ ಯವವರಾಹಾಧಿಕರಣಗಳನ್ನು ಉದಾಹರಣೆಗಾಗಿ ಸ್ಮರಿಸಿಕೊಳ್ಳಬೇಕು.

ಎರಡು ವಿಷಯವಾಕ್ಯಗಳಲ್ಲಿರುವ ಜ್ಯೋತಿಶಬ್ದದ ವಿಚಾರವನ್ನು ಈ ಅಧಿಕರಣದಲ್ಲಿ ಮಾಡುತ್ತಿರು-ವುದರಿಂದ ಪ್ರಥಮಸೂತ್ರದಲ್ಲಿ ಜ್ಯೋತಿಃಶಬ್ದದ ಗ್ರಹಣವು ಯುಕ್ತವಾಗಿದೆ. ಆದರೆ ಎರಡನೆಯ ಛಂದಃಸೂತ್ರದಲ್ಲಿ ಜ್ಯೋತಿಶಬ್ದವನ್ನು ಹೇಳದೇ ಛಂದಸ್‌ಶಬ್ದವನ್ನು ಗ್ರಹಣ ಮಾಡಿದ್ದು ತಪ್ಪಲ್ಲವೇ? ಎರಡೂ ವಿಷಯವಾಕ್ಯಗಳಲ್ಲಿ ಛಂದಸ್ ಎಂಬ ಪೂರ್ವಪಕ್ಷವಿದ್ದರೆ ಇದು ಯುಕ್ತವಾಗುತ್ತಿತ್ತು. ಆದರೆ ಅಗ್ನಿಸೂಕ್ತದಲ್ಲಿ ಅಗ್ನಿ ಎಂದೂ, ಛಾಂದೋಗ್ಯದಲ್ಲಿ ಛಂದಸ್ ಎಂದೂ ಪೂರ್ವಪಕ್ಷ ಮಾಡುತ್ತಿರು-ವುದರಿಂದ ಸೂತ್ರದಲ್ಲಿ ಮಾಡಿದ ಪದಪ್ರಯೋಗವು ಅನುಚಿತವೆನಿಸುತ್ತದೆ ಎಂಬ ಪ್ರಶ್ನೆಗೆ 'ಛಂದಃಸೂತ್ರ ಇತಿ' ಎಂಬ ವಾಕ್ಯವು ಉತ್ತರಿಸುತ್ತಿದೆ. ಛಂದಸ್‌ಶಬ್ದದ ಪ್ರಯೋಗವು ಅಗ್ನಿಶಬ್ದವನ್ನು ಉಪಲಕ್ಷಣಯಾ ತಿಳಿಸುತ್ತಿದೆ. ಅಗ್ನಿಶಬ್ದವನ್ನು ಪ್ರಯೋಗಿಸದೇ ಛಂದಸ್‌ಶಬ್ದವನ್ನು ಪ್ರಯೋಗಿಸಲು ಕಾರಣವೇನೆಂದರೆ, ಉಪದೇಶಭೇದವೇ ಮೊದಲಾದ ಅನುಪಪತ್ತಿಗಳು ಗಾಯತ್ರೀರೂಪಛಂದಸ್ಸಿನಲ್ಲೇ ಕೇಳಿಸುತ್ತಿವೆ ಹೊರತು ಅಗ್ನಿಯಲ್ಲಿ ಕೇಳಿಸುತ್ತಿಲ್ಲ. ಆದ್ದರಿಂದ ಛಂದಸ್ ಶಬ್ದವನ್ನೇ ಪ್ರಯೋಗಿಸಿದ್ದಾರೆ. ಈ ಶಬ್ದವು ಉಪಲಕ್ಷಕವಾಗಿದೆ ಎನ್ನಲು ಭಾಷ್ಯಸಮ್ಮತಿಯನ್ನು 'ಅತ ಏವ' ಎಂಬ ಗ್ರಂಥದಿಂದ ಹೇಳಿದ್ದಾರೆ.

ಮೊದಲೆರಡು ಸೂತ್ರಗಳು ಕಥಂಚಿತ್ ವಾಕ್ಯದ್ವಯಸಾಧಾರಣವಾಗಬಹುದು. ಆದರೆ ಅನಂತರದ ಎರಡು ಸೂತ್ರಗಳಿಗೆ ಛಾಂದೋಗ್ಯವಷ್ಟೇ ವಿಷಯವಾಗುತ್ತದೆ. ಅಗ್ನಿಸೂಕ್ತವು ವಿಷಯವಾಗುವುದಿಲ್ಲ. ಏಕೆಂದರೆ ಅಗ್ನಿಸೂಕ್ತದಲ್ಲಿ ಭೂತಾದಿಪಾದವ್ಯಪದೇಶಾದಿಗಳನ್ನು ಹೇಳಿಲ್ಲ. ಈ ಪ್ರಶ್ನೆಗೆ 'ಉಪದೇಶಭೇದಾದಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಆನಂದಮಯಾಧಿಕರಣದಲ್ಲಿ 'ತದ್ಧೇತು ವ್ಯಪದೇಶ' ಎಂಬ ಸೂತ್ರವು ಕೇವಲ ಆನಂದಮಯನಿಗಷ್ಟೇ ಸಂಬಂಧಪಟ್ಟಿದೆಯೋ? ಅದರಂತೆ ಉಪದೇಶಭೇದಾದಿ ಪೂರ್ವಪಕ್ಷ-ಯುಕ್ತಿ ಭೂತಾದಿಪಾದವೆಂಬ ಸಿದ್ಧಾಂತಯುಕ್ತಿಯು ಛಾಂದೋಗ್ಯವಾಕ್ಯದಲ್ಲಷ್ಟೇ ಸಂಬಂಧಪಟ್ಟಿದೆ ಎಂದು ತಿಳಿಯಬೇಕು.

ಮೇಲೆ ಹೇಳಿದ ವಿಷಯದಲ್ಲಿ ಪೂರ್ವಮೀಮಾಂಸೆಯ ಸಮ್ಮತಿಯನ್ನು 'ಏವಂ ಚ' ಇತ್ಯಾದಿ ಗ್ರಂಥವು ಉಪಪಾದಿಸುತ್ತಿದೆ.

## ಅರ್ಥವಾದಾಧಿಕರಣಮ್

### 'ಆಮ್ನಾಯಸ್ಯ ಕ್ರಿಯಾರ್ಥತ್ವಾದಾನರ್ಥಕ್ಯಮತದರ್ಥಾನಾಮ್'

ಜಿಜ್ಞಾಸಾಧಿಕರಣದಲ್ಲಿ ಈ ಅಧಿಕರಣಶರೀರವನ್ನು ನಿರೂಪಿಸಲಾಗಿದೆ. ಕಾರ್ಯಬೋಧಕವಲ್ಲದ ಅರ್ಥವಾದ, ಮಂತ್ರ, ನಾಮಧೇಯ ಮೊದಲಾದ ಮಂತ್ರಗಳಿಗೆ ಅರ್ಥವಿಲ್ಲದಿರುವುದರಿಂದ ಅಪ್ರಾಮಾಣ್ಯವನ್ನು ಹೇಳಬೇಕೆಂದು ಪೂರ್ವಪಕ್ಷ. 'ವಿಧಿನಾ ತ್ವೇಕವಾಕ್ಯತ್ವಾತ್ ಸ್ತುತ್ಯರ್ಥತ್ವೇನ ವಿಧೀನಾಂ

ಸ್ಯಃ' ಎಂಬ ಸೂತ್ರವು ಅಥವಾ 'ತುಲ್ಯಂ ಚ ಸಾಂಪ್ರದಾಯಿಕಮ್' ಎಂಬ ಸೂತ್ರವು ಈ ಪೂರ್ವಪಕ್ಷವನ್ನು ನಿರಾಕರಿಸಿ ಸಿದ್ಧಾಂತ ಮಾಡಿದೆ. 'ಸ್ವಾಧ್ಯಾಯೋ ಅಧ್ಯೇತವ್ಯಃ' ಎಂಬ ವಿಧಿಯಿಂದ ಸಂಪೂರ್ಣ ಸ್ವಾಧ್ಯಾಯದ ಅಧ್ಯಯನವು ವಿಹಿತವಾಗಿದೆ. ಈ ಅಧ್ಯಯನಕ್ಕೆ ಪುರುಷಾರ್ಥವೆಂಬ ಪ್ರಯೋಜನವಿದೆ. ಅದೇ ಸ್ವಾಧ್ಯಾಯದಲ್ಲಿ ಅರ್ಥವಾದವೇ ಮೊದಲಾದ ಮಂತ್ರಗಳು ಇವೆ. ಅಂದರೆ ಅರ್ಥವಾದಾದಿ ಮಂತ್ರಗಳ ಅಧ್ಯಯನದಿಂದಲೂ ಪುರುಷಾರ್ಥವು ದೊರೆಯುತ್ತದೆಂದು ಹೇಳಿದಂತಾಯಿತು. ಹೀಗೆ ಪ್ರಯೋಜನದಿಂದ ಕೂಡಿರುವ ಅರ್ಥವಾದಾದಿ ಮಂತ್ರಗಳಿಗೆ ಪ್ರಾಮಾಣ್ಯವು ಸಿದ್ಧಿಸುತ್ತದೆಂದು ಸಿದ್ಧಾಂತ.

ಹೀಗೆ ಅರ್ಥವಾದಾಧಿಕರಣದಲ್ಲಿ ಅರ್ಥವಾದ, ಮಂತ್ರ, ನಾಮಧೇಯ ಮೊದಲಾದ ಎಲ್ಲಾ ಮಂತ್ರಗಳಲ್ಲಿ ಸಾಧಾರಣವಾಗಿ ಅಪ್ರಾಮಾಣ್ಯವನ್ನು ಶಂಕಿಸಿ ಪ್ರಾಮಾಣ್ಯವನ್ನು ಸ್ಥಾಪಿಸಿದ್ದಾರೆ. ಮುಂದೆ ಅಸಾಧಾರಣವಾಗಿ ಕೇವಲ ಅರ್ಥವಾದವನ್ನಷ್ಟೇ ಉಲ್ಲೇಖಿಸಿ ದ್ವಾರವಿಲ್ಲದ ಕಾರಣ ಅಪ್ರಾಮಾಣ್ಯವನ್ನು ಶಂಕಿಸಿ, ಅಪ್ರಾಮಾಣ್ಯದ ಪೂರ್ವಪಕ್ಷ ಮಾಡಿದ್ದಾರೆ. ಸಿದ್ಧಾಂತಸೂತ್ರದಲ್ಲಿ ಅರ್ಥವಾದ ಮಂತ್ರಗಳು ಸ್ತೋತ್ರಪರವಾದ್ದರಿಂದ ವಿಧಿಯನ್ನು ಆಚರಿಸಲೇಬೇಕೆಂಬುದರಲ್ಲಿ ಪರ್ಯವಸಾನವಾಗುತ್ತವೆಂಬ ದ್ವಾರವನ್ನು ಹೇಳಿದ್ದಾರೆ. ಇದರಿಂದ ಕೇವಲ ಅರ್ಥವಾದ ಮಂತ್ರಗಳಲ್ಲಿ ಅಸಾಧಾರಣವಾಗಿ ಪ್ರಾಮಾಣ್ಯ-ವನ್ನು ಸಮರ್ಥಿಸಿದಂತಾಯಿತು. ಹೀಗೆ ಪೂರ್ವಮೀಮಾಂಸೆಯ ಒಂದೇ ಅರ್ಥವಾದಾಧಿಕರಣವು ಎರಡು ಹಂತದಲ್ಲಿ ಅರ್ಥವಾದ ಮಂತ್ರಗಳನ್ನು ವಿಚಾರ ಮಾಡಿದೆ. ಇದನ್ನು ದ್ವಿಪರ್ವಾವಿಚಾರ ಎನ್ನುತ್ತಾರೆ.

ಇದರಂತೆ ಪ್ರಕೃತದಲ್ಲಿ ಜ್ಯೋತಿರಧಿಕರಣವನ್ನು ತಿಳಿಯಬೇಕು. ಅಗ್ನಿಸೂಕ್ತ ಹಾಗೂ ಛಾಂದೋಗ್ಯದಲ್ಲಿ ಸಾಧಾರಣವಾದ ಜ್ಯೋತಿಃಶಬ್ದವು ವಿಷ್ಣುವನ್ನು ಹೇಳುತ್ತದೋ? ಅಥವಾ ಬೇರೆಯವರನ್ನು ಹೇಳುತ್ತದೋ? ಎಂಬ ಸಂಶಯ ಬಂದಾಗ ಅಗ್ನಿಶಬ್ದ ಹಾಗೂ ಛಂದಸ್‌ಶಬ್ದಗಳ ಪ್ರಯೋಗದಿಂದ ಮತ್ತು ಜ್ಯೋತಿಃಶಬ್ದ ಹಾಗೂ ಗಾಯತ್ರೀಶಬ್ದಗಳು ಪ್ರಸಿದ್ಧವಾದ ಅಗ್ನಿ ಹಾಗೂ ಗಾಯತ್ರೀ ಛಂದಸ್ಸುಗಳನ್ನು ಹೇಳುವುದರಿಂದ ವಿಷ್ಣುವನ್ನು ಹೇಳಲಾರವೆಂದು ಪೂರ್ವಪಕ್ಷ. ಎರಡೂ ಕಡೆ ಚರಣಶಬ್ದದ ಪ್ರಯೋಗದಿಂದ ಅಪರಿಚ್ಛಿನ್ನವೈಭವತ್ವವೆಂಬ ಧರ್ಮವು ತಿಳಿಯುತ್ತದೆ. ಇದು ವಿಷ್ಣುವಿನಲ್ಲಿ ಬರುತ್ತದೆ ಹೊರತು ಅಗ್ನಿ ಮೊದಲಾದವರಲ್ಲಿ ಬರುವುದಿಲ್ಲ. ವಿಷ್ಣುವಿನಲ್ಲಿ ಅಪ್ರಸಿದ್ಧವಾದ ಜ್ಯೋತಿ, ಗಾಯತ್ರೀ ಮೊದಲಾದ ಶಬ್ದಗಳನ್ನೇಕೆ ಪ್ರಯೋಗಿಸಬೇಕು? ಎಂಬ ಶಂಕೆಗೂ ಈಗ ಅವಕಾಶವಿಲ್ಲ.

ಭಗವಂತನನ್ನು ಜ್ಯೋತಿಗಾಯತ್ರೀರೂಪದಲ್ಲಿ ಉಪಾಸನೆ ಮಾಡಬೇಕೆಂದು ತಿಳಿಸಲು ಜ್ಯೋತಿ, ಗಾಯತ್ರೀ ಪದಗಳನ್ನೇ ಪ್ರಯೋಗಿಸಿದ್ದಾರೆ. ಹೀಗೆ ಎರಡೂ ವಾಕ್ಯಗಳಲ್ಲಿ ಸಾಧಾರಣವಾಗಿ ಪೂರ್ವಪಕ್ಷ ಹಾಗೂ ಸಿದ್ಧಾಂತಗಳನ್ನು ಮೊದಲೆರಡು ಸೂತ್ರಗಳು ಮಾಡಿವೆ. ಪುನಃ ಪ್ರಶ್ನೆ ಬರುತ್ತದೆ. ಛಾಂದೋಗ್ಯದಲ್ಲಿರುವ ಜ್ಯೋತಿಯು ಬ್ರಹ್ಮನಾಗಲಾರ. ದಿವಃಪರತ್ವ ಹಾಗೂ ದ್ಯುಸ್ಥತ್ವಗಳ ವಿರೋಧ ಬರುವುದರಿಂದ ಎಂಬ ಪೂರ್ವಪಕ್ಷಕ್ಕೆ ಭೂತಾದಿಪಾದವ್ಯಪದೇಶಾದಿಸೂತ್ರವು ವಿರೋಧವನ್ನು ಪರಿಹರಿಸಿರುವ ಮೂಲಕ ಸಿದ್ಧಾಂತ ಮಾಡಿದೆ. ಹೀಗೆ ಮೊದಲು ಎರಡೂ ವಾಕ್ಯಗಳಲ್ಲಿ ಮೊದಲೆರಡು ಸೂತ್ರಗಳು ಸಾಧಾರಣವಾಗಿ ವಿಚಾರ ಮಾಡಿ, ಅನಂತರದ ಎರಡು ಸೂತ್ರಗಳು ಅಸಾಧಾರಣವಾಗಿ

ಛಾಂದೋಗ್ಯವಾಕ್ಯವನ್ನಷ್ಟೇ ವಿಚಾರ ಮಾಡಿವೆ. ಅರ್ಥವಾದಾಧಿಕರಣದಂತೆ ಇದೂ ಕೂಡ ದ್ವಿಪರ್ವಾ-ವಿಚಾರ (ಎರಡು ಹಂತದ ವಿಚಾರ) ಎನಿಸುತ್ತದೆ.

ಅನುವ್ಯಾಖ್ಯಾನದಲ್ಲಿ 'ನಿತ್ಯತ್ವಾದೇವ ಶಬ್ದಾನಾಂ ತತ್ಸ್ವಭಾವಃ ಕಥಂ ತತಃ?' (ಶಬ್ದಗಳು ನಿತ್ಯವಾದ್ದರಿಂದ ಅವುಗಳ ಸ್ವಭಾವವು ಹೇಗೆ ಭಗವದಧೀನವಾಗುತ್ತವೆ?) ಎಂಬ ಪೂರ್ವಪಕ್ಷಯುಕ್ತಿ-ಯನ್ನು ಹೇಳಿದ್ದಾರೆ. 'ತಾದೃಶತ್ವಾಚ್ಚ ತಚ್ಛಕ್ತೇಃ' (ಭಗವಂತನ ಶಕ್ತಿಯಿಂದ ಅನಾದಿನಿತ್ಯಪದಾರ್ಥಗಳು ಅಧೀನವಾಗುತ್ತವೆ) ಎಂಬ ಸಿದ್ಧಾಂತ ಯುಕ್ತಿಯನ್ನು ಹೇಳಿದ್ದಾರೆ. ಅಗ್ನಿಸೂಕ್ತದಲ್ಲಿರುವ ಜ್ಯೋತಿಃಶಬ್ದದಲ್ಲಿ ಈ ಎರಡೂ ಯುಕ್ತಿಗಳನ್ನು ತೋರಿಸಲು ಸಾಧ್ಯವಿಲ್ಲ. ಹೀಗಿರುವಾಗ ಅಗ್ನಿಸೂಕ್ತವು ಹೇಗೆ ವಿಷಯವಾಕ್ಯ-ವಾಗುತ್ತದೆ.

ಶಂಕೆ - ಈ ಎರಡು ಯುಕ್ತಿಗಳನ್ನು ಜ್ಯೋತಿಃಶಬ್ದದಲ್ಲಿ ಹೇಳಲು ಸಾಧ್ಯವಿಲ್ಲದಿದ್ದರೂ ಗಾಯತ್ರೀ ಶಬ್ದದಲ್ಲಿ ಹೇಳಬಹುದು. ಛಾಂದೋಗ್ಯವಾಕ್ಯದಲ್ಲಷ್ಟೇ ಅಸಾಧಾರಣವಾದ ಪೂರ್ವಪಕ್ಷ ಸಿದ್ಧಾಂತ ಯುಕ್ತಿಗಳನ್ನು ಆಚಾರ್ಯರು ಹೇಳಿದ್ದಾರೆ. ಗ್ರಂಥಕಾರರು ದ್ವಿಪರ್ವಾವಿಚಾರವನ್ನು ಸಮರ್ಥಿಸಿದ್ದರಿಂದ ಈ ಅನುವ್ಯಾಖ್ಯಾನವನ್ನು ವ್ಯಾಖ್ಯಾನಿಸಿದಂತಾಯಿತು.

ಶಂಕೆ - ಹಾಗಾದರೆ ಒಂದೇ ಅಧಿಕರಣವೆನ್ನುವುದು ತಪ್ಪು. ಜ್ಯೋತಿಃಸೂತ್ರದಲ್ಲಿ ಅಗ್ನಿಸೂಕ್ತವು ವಿಷಯವಾಕ್ಯವಾಗಿದೆ. ವಿಷ್ಣುಸೂಕ್ತವಲ್ಲವೆಂಬ ಅಧ್ಯಾಪಕಪ್ರಸಿದ್ಧಿಯು ಅಜ್ಞಾನಮೂಲವಾಗಿದೆಯೆಂದು ಹೇಳಬೇಕು. ಮುಂದಿನ ಮೂರು ಸೂತ್ರಗಳಲ್ಲಿ ಅನಾದಿನಿತ್ಯವಾದ ಪದಾರ್ಥವೂ ಕೂಡ ಈಶಾ-ಧೀನವಾಗಿದೆ ಎಂಬ ನ್ಯಾಯವನ್ನು ಸ್ಥಾಪಿಸಬೇಕೆಂದು ಹೇಳಿದಂತಾಯಿತು. ಹಾಗಾದರೆ ಮೊದಲನೆಯ ಸೂತ್ರದ ವಿಷಯವಾಕ್ಯವೇ ಬೇರೆ; ಮುಂದಿನ ಸೂತ್ರಗಳ ವಿಷಯವಾಕ್ಯವೇ ಬೇರೆ ಎಂದು ಒಪ್ಪಿ-ಕೊಂಡಂತಾಯಿತು. ವಿಷಯವಾಕ್ಯಭೇದವನ್ನು ಒಪ್ಪಿಕೊಳ್ಳುವುದರ ಜೊತೆಗೆ ಅಜ್ಞಾನಮೂಲತ್ವ ಹಾಗೂ ಈಶಾಧೀನತ್ವವೆಂಬ ನ್ಯಾಯಗಳಲ್ಲಿಯೂ ಭೇದವನ್ನು ಒಪ್ಪಿದಂತಾಯಿತು. ವಿಷಯಭೇದ ಹಾಗೂ ನ್ಯಾಯಭೇದಗಳಿರುವುದರಿಂದ ಅಧಿಕರಣಭೇದವನ್ನು ಅನಿವಾರ್ಯವಾಗಿ ಒಪ್ಪಬೇಕಲ್ಲವೇ?

ಸಮಾಧಾನ - ಸೂಕ್ಷ್ಮಾಂಶದಲ್ಲಷ್ಟೇ ನ್ಯಾಯಭೇದವಿದೆ. ಆದ್ದರಿಂದಲೇ ಇದನ್ನು ಅಂತರ್ಭೇದಾಧಿ-ಕರಣವೆಂದು ತತ್ವಪ್ರದೀಪಕಾರರು ಹೇಳಿದ್ದಾರೆ. ಗರ್ಭದಲ್ಲಿ ಮಗುವನ್ನು ಹೊತ್ತ ಗರ್ಭಿಣಿಸ್ತ್ರೀಯಂತೆ ಈ ಜ್ಯೋತಿರಧಿಕರಣವು ನ್ಯಾಯಭೇದವೆಂಬ ಗರ್ಭವನ್ನು ಧರಿಸಿ ಒಂದೇ ಪ್ರಧಾನನ್ಯಾಯವನ್ನು ಹೇಳುತ್ತಿದೆ. ಈ ತರಹದ ಇನ್ನೂ ಕೆಲವು ಅಧಿಕರಣಗಳಲ್ಲಿ ಸೂಕ್ಷ್ಮವ್ಯತ್ಯಾಸವನ್ನು ಶಿಷ್ಯರೇ ಊಹಿಸಿಕೊಳ್ಳಬೇಕು. ಇಷ್ಟು ವಿಚಾರ ಕೇವಲ ದಿಕ್ಪ್ರದರ್ಶನ.

**गुरुराजीयम् –** ननु ज्योतिस्सूत्रे हृदय आहितमिति विषयवाक्यं छन्दस्सूत्रे तु अथ यदतः पर इत्यादिविषयवाक्यमित्याद्यमतद्वयमयुक्तम् । यत्रहि यन्निर्णीयते तत्र तदेव विषयवाक्यमित्युच्यते । ननु विषयवाक्यं नाम किञ्चिज्जात्या भिन्नमस्ति । तथाच ज्योतिस्सूत्रे हृदय आहितमित्यस्येवाथ यदतः पर इत्यादेरपि

निर्णेतव्यत्वेन विषयवाक्यत्वात् तत्र हृदय आहितमित्येतदेव विषयवाक्यमित्यनुपपन्नम् । एवं छन्दस्सूत्रे अथ यदतः पर इत्यादेरिव हृदय आहितमित्यादेरपि निर्णेतव्यत्वेन विषयवाक्यत्वात् अथ यदत इत्येतदेव विषयवाक्यमित्यनुपपन्नमित्यस्वरसात्पक्षान्तरमाह – **यद्वेति** ॥ ननु तेजो वै ब्रह्मवर्चसं गायत्रीति श्रुतेर्लक्षणया गौण्या वा वृत्त्या प्रवृत्तेः कथं तद्बलाद् गायत्रीज्योतिषोरभेदः स्यात् । तथा सति ब्रह्मवर्चसशब्दसामानाधिकरण्याद् ब्रह्मवर्चसाभेदोपि गायत्र्या अङ्गीकार्यः स्यात् । किञ्च प्रमेयभेदे शब्दैक्यमात्रेण कथमधिकरणैक्यमित्यतो वाह – **यद्वेति** ॥

नन्वेवं मतद्वयेपि वाक्यद्वयस्य विषयवाक्यत्वे विषयवाक्यभेदेनाधिकरणभेदः स्यादित्यतो न विषयवाक्यभेदमात्रमधिकरणभेदप्रयोजकम् । किन्तु पूर्वपक्षसिद्धान्तयुक्तिभेद एव प्रयोजकः । पूर्वतन्त्र एतत्तन्त्रेच तथैव दर्शनादित्यभिप्रायेणाह – **यथाहीत्यादिना** ॥ ननु छन्दस्सूत्रेऽग्निशब्दाभावात्कथमग्निसूक्तस्य विषयवाक्यत्वमित्यत आह – **छन्दस्सूत्र इति** ॥ **अत एवेति** ॥ छन्दस्सूत्रस्याग्न्युपलक्षकत्वादेवेत्यर्थः । ननु पूर्वपक्षसिद्धान्तयुक्तिसाधारण्यमयुक्तम् । उपदेशभेदादिरूपायाः पूर्वपक्षयुक्तेर्भूतादिपादेति सिद्धान्तयुक्तेः छान्दोग्यवाक्यमात्रसाधारण्यादित्यतः तस्य तन्मात्रसाधारण्यं न दोषः । न चेदं कुत्रापि न दृष्टम् । अस्यामेव मीमांसायामानन्दमयाधिकरणेऽन्नमयादिपञ्चानां ब्रह्मत्वसाधकब्रह्मशब्दाभ्यासादेरिवानन्दमयमात्रस्य ब्रह्मत्वसाधकीभूततद्धेतुव्यपदेशाभिधानादिति स्पष्टत्वादनुपदर्श्य पूर्वमीमांसायामपि दृष्टान्तमस्तीत्याह – **उपदेशभेदादीति** ॥ अर्थवादमन्त्रादीत्यादिपदेन नामधेयसङ्ग्रहः – **अन्यस्त्विति** ॥ अर्थवादानां प्राशस्त्यलक्षणया विधिवाक्यैकवाक्यत्वेन प्रामाण्यमित्यादिरित्यर्थः॥ **द्विपर्वाविचार इति** ॥ विध्यतिरिक्तवेदस्याक्रियार्थत्वादप्रामाण्ये प्राप्ते विध्येकवाक्यत्वेन प्रामाण्यमिति साधारणः । अर्थवादानामभूतार्थत्वेन क्रियार्थत्वं स्तावकत्वेन प्राशस्त्यलक्षणयैकवाक्यत्वमित्यर्थवादमात्रासाधारण इति द्विप्रकारको विचारो यथा तथा ज्योतिर्गायत्र्योर्विष्ण्वन्यत्वेन प्रकारेण साधारणः गायत्रीत्वेन ज्योतिष्ट्वेन चासाधारण इति द्विप्रकारकोऽत्रापि विचार इत्यर्थः।

## ಸಾರ

ತತ್ವಪ್ರದೀಪಕಾರರ ಮತ್ತು ಸನ್ನ್ಯಾಯರತ್ನಾವಲೀಕಾರರ ಪ್ರಕಾರ ಅಗ್ನಿಸೂಕ್ತ ಹಾಗೂ ಛಾಂದೋಗ್ಯ-ವಾಕ್ಯಗಳೆರಡೂ ವಿಷಯವಾಕ್ಯಗಳಾಗಬಹುದು. ವಿಷಯವಾಕ್ಯಗಳು ಬೇರೆ ಬೇರೆಯಾದ ಮಾತ್ರದಿಂದ ಅಧಿಕರಣಗಳಲ್ಲಿ ಭೇದವು ಬರಬೇಕಾಗಿಲ್ಲ. ನ್ಯಾಯಭೇದವಿದ್ದರಷ್ಟೇ ಅಧಿಕರಣಭೇದವನ್ನು ಒಪ್ಪಬೇಕು. ಪ್ರಕೃತ ಎರಡೂ ವಿಷಯವಾಕ್ಯಗಳಲ್ಲಿ ಪ್ರಕರಣದ ಬೆಂಬಲ ಪಡೆದ ಶ್ರುತಿಯೆಂಬ ಪೂರ್ವಪಕ್ಷ ನ್ಯಾಯವು ನಿರತಿಶಯವೈಭವತ್ವವೆಂಬ ಸಿದ್ಧಾಂತನ್ಯಾಯವು ಸಮಾನವಾಗಿದೆ. ಪೂರ್ವಮೀಮಾಂಸೆಯ ಆಘಾರಾಗ್ನಿ-ಹೋತ್ರಾದಿಕರಣದಲ್ಲಿ ಅನೇಕವಾಕ್ಯಗಳು ವಿಷಯವಾಕ್ಯಗಳಾಗಿವೆ. ಆದರೆ ದ್ರವ್ಯದೇವತಾರೂಪವಾದ ಯಾಗಸ್ವರೂಪದ ಇಲ್ಲದಿರುವಿಕೆಯೆಂಬ ಪೂರ್ವಪಕ್ಷನ್ಯಾಯವು ಮಂತ್ರವರ್ಣಾದಿರೂಪವಾದ ಯಾಗಸ್ವರೂಪದ ನಿಷ್ಪತ್ತಿಯಾಗುವಿಕೆಯೆಂಬ ಸಿದ್ಧಾಂತನ್ಯಾಯವು ಆ ವಿಷಯವಾಕ್ಯಗಳಲ್ಲಿ ಸಮಾನವಾಗಿವೆ. ಆದ್ದರಿಂದ ಒಂದೇ ಅಧಿಕರಣದಲ್ಲಿ ಅವುಗಳನ್ನು ವಿಚಾರ ಮಾಡಿದ್ದಾರೆ. ಹೀಗೆ ಮೀಮಾಂಸಕರಂತೆ ನಾವೂ ಹೇಳಬಹುದು.

ಗಮನಿಸಬೇಕಾದ ಮತ್ತೊಂದು ಸೂಕ್ಷ್ಮವಿಚಾರ -- ಮೊದಲೆರಡು ಸೂತ್ರಗಳಿಗೆ ಮಾತ್ರ ಎರಡೂ ವಿಷಯವಾಕ್ಯಗಳಾಗುತ್ತವೆ. ಅನಂತರದ ಎರಡು ಸೂತ್ರಗಳಿಗೆ ಛಾಂದೋಗ್ಯವಾಕ್ಯವಷ್ಟೇ ವಿಷಯ-ವಾಕ್ಯವಾಗುತ್ತದೆ. ಎರಡು ಹಂತದಲ್ಲಿ ವಿಚಾರಮಾಡುವ ಈ ಪದ್ಧತಿಯನ್ನು ಪೂರ್ವಮೀಮಾಂಸೆಯ ಅರ್ಥವಾದಾಧಿಕರಣದಲ್ಲಿ ನೋಡಬಹುದು. ಇಷ್ಟೆಲ್ಲಾ ಅಭಿಪ್ರಾಯದಿಂದ ತತ್ವಪ್ರದೀಪಕಾರರು ಗರ್ಭಿಣಿಸ್ತ್ರೀಯಂತೆ ಈ ಅಧಿಕರಣವನ್ನು ಅಂತರ್ಭೇದಾಧಿಕರಣವೆಂದಿದ್ದಾರೆ.

---

## ಟೀಕಾರಾಯರ ಪಕ್ಷವೂ ಸಮಂಜಸ

### तात्पर्यचन्द्रिका

तृतीयेऽपि ''कम्पनात्'' ''शब्दादेव प्रमितः'' इत्यादाविव अधिकरणा-न्तरत्वेऽपि समन्वेतव्यशब्दान्तरस्य साक्षादनुक्तिर्न विरुद्धा । सूचनं तु प्रकृतेऽपि ''छन्दोऽभिधानात्'' इत्यनेन कृतम् । भाष्येऽग्निपदं तु अन्यत्रप्रसिद्धस्य गायत्री-पदस्य विष्णौ प्रयोगे प्रयोजनमत्र वदता सूत्रकृता पूर्वत्रोत्तरत्र च अग्न्यादिपदस्य विष्णौ प्रयोगे प्रयोजनं सूचितमिति दर्शयितुम्। अन्यथा मतान्तरेऽपि ''अग्निगायत्र्यादि'' इत्यादि पदं व्यर्थं स्यात् ।

अनुव्याख्यानन्यायविवरणयोः ''ज्योतिः'' इत्यत्राधिकाशङ्काऽनुक्तिस्तु ''अग्नि-सूक्तस्थत्वात्'' इति भाष्य एवोक्तत्वात्, न तु तस्यैकाधिकरणत्वात् ।

''अधिभूताध्यात्माधिदैवगतानामपि शब्दानाम्'' इति न्यायविवरणे ज्योतिरधिकरणस्य पृथगुपाध्यनुक्तिरपि तस्याकाशाधिकरणवदधिभूतगतशब्दविषयत्वं वाऽन्तरधिकरणवदधिदैवगतशब्दविषयत्वं वेत्यभिप्रेत्य, न त्वेकाधिकरणत्वमभिप्रेत्य । सूक्तविषयत्वमेव हि ततोऽस्य विशेषः । इदञ्च मतत्रयं सूत्रयोजनामात्रे भिन्नं, प्रमेये त्वविरुद्धम् । एवमन्यत्राप्यविरोध ऊह्यः ॥

ಅನುವಾದ - ಮೂರನೆಯ ಟೀಕಾರಾಯರ ಪಕ್ಷದಲ್ಲಿಯೂ ತಪ್ಪಿಲ್ಲ. 'ಛಂದೋಭಿಧಾನಾತ್' ಇತ್ಯಾದಿ ಸೂತ್ರದಲ್ಲಿ ಸಮನ್ವಯ ಮಾಡಬೇಕಾದ ಶಬ್ದವನ್ನು ಹೇಳದ ಕಾರಣ ಒಂದೇ ಅಧಿಕರಣವೆಂಬ ಹಿಂದಿನ ಆಕ್ಷೇಪಕ್ಕೆ ಅವಕಾಶವಿಲ್ಲ. ಪ್ರತಿಯೊಂದು ಅಧಿಕರಣದಲ್ಲಿಯೂ ಸಮನ್ವೇತವ್ಯ-ಶಬ್ದವನ್ನು ಉಲ್ಲೇಖ ಮಾಡಿಯೇ ಇರುತ್ತಾರೆಂಬ ನಿಯಮವಿಲ್ಲ. ಉದಾಹರಣೆ - 'ಕಂಪನಾತ್' ಸೂತ್ರದಲ್ಲಿ ಉಲ್ಲೇಖ ಮಾಡದ ವಜ್ರಶಬ್ದವನ್ನು ಸಮನ್ವಯ ಮಾಡಿದ್ದಾರೆ. 'ಶಬ್ದಾದೇವ ಪ್ರಮಿತಃ' ಎಂಬ ಸೂತ್ರದಲ್ಲಿಯೂ ಉಲ್ಲೇಖ ಮಾಡದ ಈಶಾನಶಬ್ದವನ್ನು ಸಮನ್ವಯ ಮಾಡಿದ್ದಾರೆ. ಆದರಂತೆ ಗಾಯತ್ರೀಶಬ್ದವನ್ನು ಉಲ್ಲೇಖ ಮಾಡದಿದ್ದರೂ ಛಂದಸ್‌ಸೂತ್ರವು ಅದರ ಸಮನ್ವಯವನ್ನು ಮಾಡಬಹುದು.

ಪ್ರಶ್ನೆ - 'ಕಂಪನಾತ್' ಇತ್ಯಾದಿ ಸೂತ್ರಗಳಲ್ಲಿ ನೇರವಾಗಿ ವಜ್ರಶಬ್ದವನ್ನು ಹೇಳದಿದ್ದರೂ ಕಂಪನಶಬ್ದದಿಂದ ವಜ್ರಶಬ್ದಾರ್ಥವನ್ನು ಸೂಚಿಸಿದ್ದಾರಲ್ಲ?

ಉತ್ತರ - ಅಂತಹ ಸೂಚನೆ ಪ್ರಕೃತ ಸೂತ್ರದಲ್ಲಿಯೂ ಇದೆ. ಗಾಯತ್ರೀಶಬ್ದವನ್ನು ಛಂದಸ್ ಶಬ್ದವು ಸ್ಪಷ್ಟವಾಗಿ ಸೂಚಿಸುತ್ತಿರುವುದರಿಂದ ಸಮನ್ವಯ ಮಾಡಬಹುದು.

ಪ್ರಶ್ನೆ - ಜ್ಯೋತಿರಧಿಕರಣವೇ ಬೇರೆ ಗಾಯತ್ರ್ಯಧಿಕರಣವೇ ಬೇರೆ ಎಂಬುದು ಟೀಕಾರಾಯರ ಮತ. ಹಾಗಾದರೆ ಭಾಷ್ಯದಲ್ಲಿ 'ಅಗ್ನಿಗಾಯತ್ರ್ಯಾದಿ' ಇತ್ಯಾದಿ ಪದಪ್ರಯೋಗವನ್ನು ಗಾಯತ್ರ್ಯಧಿಕರಣದಲ್ಲಿ ಮಾಡಿದ್ದು ತಪ್ಪಾಗುತ್ತದೆ. ಅಗ್ನಿಶಬ್ದವನ್ನು ಹಿಂದಿನ ಅಧಿಕರಣದಲ್ಲಿ ಸಮನ್ವಯ ಮಾಡಿದ ಮೇಲೆ ಪುನಃ ಅದರ ಉಲ್ಲೇಖವು ಅನಾವಶ್ಯಕವಲ್ಲವೇ?

ಉತ್ತರ - ಭಾಷ್ಯಕಾರರು ಮಾಡಿದ ಅಗ್ನಿಪದದ ಪ್ರಯೋಗಕ್ಕೆ ಬಹಳ ಅರ್ಥವಿದೆ. ಅದು ಹೀಗೆ -- ಗಾಯತ್ರೀಪದವು ಅನ್ಯತ್ರಪ್ರಸಿದ್ಧವಾಗಿದೆ. ಇದನ್ನು ವಿಷ್ಣುವಿನಲ್ಲಿ ಪ್ರಯೋಗ ಮಾಡುವ ಉದ್ದೇಶವೇನೆಂದರೆ ಗಾಯತ್ರೀರೂಪದಿಂದ ಭಗವಂತನನ್ನು ಉಪಾಸನೆ ಮಾಡಬೇಕೆಂಬುದು. ಅಷ್ಟೇ ಅಲ್ಲದೆ ಹಿಂದಿನ ಮುಂದಿನ ಅಧಿಕರಣಗಳಲ್ಲಿ ಸಮರ್ಥಿಸಿರುವ ಅನ್ಯತ್ರಪ್ರಸಿದ್ಧವಾದ ಅಗ್ನಿ, ಪ್ರಾಣ ಮೊದಲಾದ ರೂಪಗಳಿಂದಲೂ ಭಗವಂತನನ್ನು ಉಪಾಸನೆ ಮಾಡಬೇಕು ಎಂಬ ಪ್ರಯೋಜನವನ್ನು ಸೂತ್ರಕಾರರು 'ಚೇತೋರ್ಪಣನಿಗದಾತ್ ತಥಾ ಹಿ ದರ್ಶನಮ್' ಎಂಬ ಈ ಸೂತ್ರದಿಂದ

ಹೇಳುತ್ತಿದ್ದಾರೆ. ಸೂತ್ರಕಾರರ ಈ ಅಭಿಪ್ರಾಯವನ್ನು ಭಾಷ್ಯಕಾರರು 'ಅಗ್ನಿ'ಶಬ್ದದ ಉಲ್ಲೇಖದಿಂದ ಸೂಚಿಸಿದ್ದಾರೆ.

ಹೀಗೆ ಒಪ್ಪದಿದ್ದರೆ ತತ್ವಪ್ರದೀಪಕಾರಾದಿಗಳ ಮತದವರಿಗೂ ಭಾಷ್ಯವನ್ನು ವ್ಯಾಖ್ಯಾನಿಸುವುದು ಕಷ್ಟ. ಏಕೆಂದರೆ 'ಅಗ್ನಿಗಾಯತ್ರ್ಯಾದಿ' ಎಂಬಲ್ಲಿ ಆದಿಪದವನ್ನು ಆಚಾರ್ಯರು ಹೇಳಿದ್ದಾರೆ. ಅಗ್ನಿ, ಗಾಯತ್ರೀ ಶಬ್ದಗಳನ್ನಷ್ಟೇ ಜ್ಯೋತಿರಧಿಕರಣದಲ್ಲಿ ಸಮನ್ವಯ ಮಾಡುವುದಾದರೆ ಆದಿಶಬ್ದವನ್ನೇಕೆ ಹೇಳಬೇಕು? ಆದಿಪದದ ಸಾರ್ಥಕ್ಯಕ್ಕಾಗಿ ಹಿಂದಿನ ಮುಂದಿನ ಎಲ್ಲಾ ಅಧಿಕರಣಗಳಲ್ಲಿ ಸಮನ್ವಯ ಮಾಡುವ ಅನ್ಯತ್ರಪ್ರಸಿದ್ಧಶಬ್ದಗಳ ಮೂಲಕವಾಗಿ ಭಗವಂತನನ್ನು ಉಪಾಸನೆ ಮಾಡಬೇಕೆಂದು ತಿಳಿಸುವುದಕ್ಕಾಗಿ ಹೇಳಿದ್ದಾರೆಂದು ಹೇಳಬೇಕು.

ಪ್ರಶ್ನೆ - ಜ್ಯೋತಿರಧಿಕರಣವು ಪ್ರತ್ಯೇಕವಾದರೆ ಅನುವ್ಯಾಖ್ಯಾನ ಮತ್ತು ನ್ಯಾಯವಿವರಣಗಳಲ್ಲಿ ಅಭ್ಯಧಿಕಾಶಂಕೆಯನ್ನು ತೋರಿಸಬೇಕಿತ್ತಲ್ಲವೇ?

ಉತ್ತರ - 'ಅಗ್ನಿಸೂಕ್ತಸ್ಥತ್ವಾತ್' ಇತ್ಯಾದಿ ಭಾಷ್ಯದಲ್ಲಿ ಸ್ಪಷ್ಟವಾಗಿ ಅಭ್ಯಧಿಕಾಶಂಕೆಯನ್ನು ಜ್ಯೋತಿ-ರಧಿಕರಣಕ್ಕೆ ಹೇಳಿದ್ದಾರೆ. ಈ ಕಾರಣದಿಂದ ಪುನಃ ಅನುವ್ಯಾಖ್ಯಾನಾದಿಗಳಲ್ಲಿ ಹೇಳಿಲ್ಲವೇ ಹೊರತು, ಜ್ಯೋತಿರಧಿಕರಣ ಗಾಯತ್ರ್ಯಧಿಕರಣಗಳು ಒಂದೇ ಎಂಬಭಿಪ್ರಾಯದಿಂದಲ್ಲ.

ಪ್ರಶ್ನೆ - ನ್ಯಾಯವಿವರಣದಲ್ಲಿ ಪ್ರತಿಯೊಂದು ಅಧಿಕರಣ ಉಪಾಧಿಗಳನ್ನು ನಿಖರವಾಗಿ ನಿರೂಪಿಸಿದ್ದಾರೆ. ಆದರೆ 'ಅಧಿಭೂತಾಧ್ಯಾತ್ಮಾಧಿದೈವಗತಾನಾಮಪಿ ಶಬ್ದಾನಾಮ್' ಎಂಬ ನ್ಯಾಯ-ವಿವರಣದ ಮಾತನ್ನು ಗಮನಿಸಿದಾಗ ಜ್ಯೋತಿರಧಿಕರಣಕ್ಕೆ ಪ್ರತ್ಯೇಕ ಉಪಾಧಿ ಹೇಳಿದ್ದು ಕಾಣಿಸು-ತ್ತಿಲ್ಲ. ಹಾಗಾಗಿ ಎರಡೂ ಒಂದೇ ಅಧಿಕರಣವೆಂದನ್ನಬೇಕಲ್ಲವೇ?

ಉತ್ತರ - ಉಪಾಧಿ ಹೇಳದಿರಲು ಪ್ರತ್ಯೇಕ ಅಧಿಕರಣವಲ್ಲವೆನ್ನುವುದು ಕಾರಣವಲ್ಲ. ಹೊರತಾಗಿ ಹೇಗೆ ಆಕಾಶಾಧಿಕರಣದಲ್ಲಿ ಅಧಿಭೂತಗತಶಬ್ದವಿಷಯತ್ವವು ಉಪಾಧಿಯಾಗಿದೆಯೋ ಅಂತರಧಿ-ಕರಣದಲ್ಲಿ ಅಧಿದೈವಗತಶಬ್ದವಿಷಯತ್ವವು ಉಪಾಧಿಯಾಗಿದೆಯೋ ಅದರಂತೆ ಈ ಅಧಿಕರಣ-ದಲ್ಲಿಯೂ ಆ ಉಪಾಧಿಗಳೇ ವಿಷಯವಾಗಬಹುದು. ಹಾಗಾದಲ್ಲಿ ಆಕಾಶಾಧಿಕರಣದಿಂದ ಅಥವಾ ಅಂತರಧಿಕರಣದಿಂದ ಪ್ರತ್ಯೇಕತೆ ಬರುವುದಿಲ್ಲವೆಂದು ಶಂಕಿಸಬಾರದು. ಸೂಕ್ತವಿಷಯತ್ವವೇ ಈ ಅಧಿಕರಣದ ಉಪಾಧಿಯಲ್ಲಿರುವ ವಿಶೇಷ.

ಹೀಗೆ ಅಧಿಕರಣಭೇದವಿಚಾರದಲ್ಲಿ ಮೂರು ಮತಗಳಿವೆ. ಸೂತ್ರಗಳನ್ನು ಯಾವ ಅಧಿಕರಣದಲ್ಲಿ ಯೋಜಿಸಬೇಕೆಂಬುದಷ್ಟೇ ವಿವಾದವಿಚಾರ. ಪ್ರಮೇಯವಿಚಾರದಲ್ಲಿ ಯಾರೊಬ್ಬರಿಗೂ ವಿವಾದವಿಲ್ಲ. ಇದರಂತೆ 'ಕಾರಣತ್ವೇನ ಚ ಆಕಾಶಾದಿಷು' ಇತ್ಯಾದಿ ಅಧಿಕರಣಗಳಲ್ಲಿಯೂ ಅವಿರೋಧವಿಲ್ಲ-ವೆಂಬುದನ್ನು ಊಹಿಸಬೇಕು.

ಕಠಿಣಪದಾರ್ಥ -

ತೃತೀಯೇಽಪಿ = ಟೀಕಾರಾಯರ ಪಕ್ಷದಲ್ಲಿಯೂ ಎಂದು ಅನ್ವಯ; ಪ್ರಯೋಜನಂ = ಆಯಾ ಪದಗಳ ಪ್ರವೃತ್ತಿನಿಮಿತ್ತವಾದ ಗುಣಗಳಿಂದ ಉಪಾಸನೆ ಮಾಡಬೇಕೆಂಬ ಪ್ರಯೋಜನವನ್ನು; ಅತ್ರ = ಈ ಜ್ಯೋತಿರಧಿಕರಣದಲ್ಲಿ; ಅಗ್ನ್ಯಾದಿಪದಸ್ಯ = ಅಗ್ನಿ, ಆಕಾಶ, ಪ್ರಾಣ, ಭೂಮ, ಅಕ್ಷರ ಮೊದಲಾದ ಪದಗಳ; ಮತಾಂತರೇ = ತತ್ವಪ್ರದೀಪಕಾರರ ಮತದಲ್ಲಿ ಹಾಗೂ ಸನ್ನ್ಯಾಯರತ್ನಾವಲೀಕಾರರ ಮತದಲ್ಲಿ; ಅನ್ಯತ್ರಾಪಿ = 'ಕಾರಣತ್ವೇನ ಚ ಆಕಾಶಾದಿಷು' ಇತ್ಯಾದಿ ಅಧಿಕರಣಗಳಲ್ಲಿಯೂ.

**प्रकाशः** – एवं मतद्वयं समर्थ्य टीकाकारमतं चोपपन्नमित्याह **तृतीयेऽपीति** ॥ 'पक्षे' इति सम्बध्यते । यदुक्तं समन्वेतव्यशब्दानुक्तेश्छन्दःप्रभृतिसूत्रत्रयं न भिन्नाधिकरणमिति, तत्र किं साक्षादनुक्तिरभिप्रेता, अर्थसूचनमपि वेति । आद्यः कल्पो व्यभिचारीत्याह – **कम्पनादिति** ॥ तत्र "महद्भयं वज्रमुद्यतम्" इति वज्रशब्दः समन्वीयते । "शब्दात्" इत्यत्रेशानशब्दः । "पत्यादिशब्देभ्यः" इत्यत्र ब्राह्मणशब्दः । नच तत्र ते उपात्ताः । तथाऽप्यधिकरणान्तरत्वं तत्र सम्मतमित्यर्थः ।

द्वितीये त्वाह – **सूचनं त्विति** ॥ छन्दःशब्देन गायत्रीशब्दसूचनादिति भावः । ननु तत्सूत्रभाष्ये गायत्रीपदप्रयोगमात्रे कर्तव्ये "अग्निगायत्र्यादिशब्दार्थरूपोऽसाविति चेतोऽर्पणार्थं हि निगद्यते" इत्यग्निपदोपादानमयुक्तमित्यत आह – **अग्निपदं त्विति** ॥ **प्रयोजनमिति** ॥ तत्तत्पदप्रवृत्तिनिमित्तगुणवत्तयोपासनारूपप्रयोजनमित्यर्थः । **'अत्र'** अधिकरणे ॥ **अग्न्यादीति** ॥ अग्न्याकाशप्राणभूमाक्षरादिपदस्येत्यर्थः । **'मतान्तरे'** प्रागुपन्यस्तमतद्वयेऽपीत्यर्थः।

नन्वधिकरणान्तरत्वे पूर्वत्राकाशप्राणाधिकरणयोरिवोत्तरत्र च्छन्दोऽधिकरण इव च ज्योतिरधिकरणेऽभ्यधिकाशङ्कोक्तिः स्यादित्यत आह – **अनुव्याख्यानेति** ॥ **उक्तत्वादिति** ॥ विवरिष्यते चैतदिति भावः ।

नन्वधिकरणोपाध्युक्तिपर्यालोचनया च ज्योतिरादिचतुस्सूत्र्या ऐकाधिकरण्यं प्रतीयते । अन्यथा 'सूक्तगताः' इत्यप्युच्येतेत्यत आह – **अधिभूतेति** ॥ ननु तर्हि तेनैव गतत्वात्किमर्थमेतदित्यत आह – **सूक्तेति** ॥ ननु तर्हि परस्परविरुद्धत्वात् मतत्रयस्यापि प्रामाण्याद्वस्तुनि विकल्पस्स्यादित्यत आह – **इदञ्चेति** ॥ **एवमिति** ॥ **"कारणत्वेन चाकाशादिषु"** इत्यादावित्यर्थः । तथाच तत्र वक्ष्यामः ।

ವಿವರಣೆ - ತತ್ವಪ್ರದೀಪಕಾರರ ಹಾಗೂ ಸನ್ನ್ಯಾಯರತ್ನಾವಲೀಕಾರರ ಮತವನ್ನು ಇಲ್ಲಿಯ ತನಕ ಸಮರ್ಥಿಸಿದ್ದಾಯಿತು. ಈಗ ಟೀಕಾರಾಯರ ಮತವನ್ನೂ ಕೂಡ 'ತೃತೀಯೇऽಪಿ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

ಟೀಕಾರಾಯರ ಮತದ ಮೇಲೆ ಹಿಂದೆ ಹೀಗೆ ಆಕ್ಷೇಪಿಸಲಾಗಿತ್ತು -- 'ಛಂದೋಭಿಧಾನಾತ್' ಇತ್ಯಾದಿ ಮೂರು ಸೂತ್ರಗಳಲ್ಲಿ ಸಮನ್ವಯ ಮಾಡಬೇಕಾದ ಶಬ್ದಗಳನ್ನೇ ಹೇಳಿಲ್ಲ. ಹಾಗಾಗಿ ಗಾಯತ್ರ್ಯಧಿಕರಣವು ಪ್ರತ್ಯೇಕವಲ್ಲ' ಎಂದು. ಈ ಆಕ್ಷೇಪದ ಅಭಿಪ್ರಾಯನೇನು? ಸಮನ್ವಯ ಮಾಡಬೇಕಾದ ಶಬ್ದವನ್ನು ನೇರವಾಗಿ ಉಲ್ಲೇಖಿಸಿಲ್ಲವೆಂದೋ? ಅಥವಾ ಸೂಚನೆಯನ್ನೂ ಮಾಡಿಲ್ಲವೆಂದೋ?

ಪ್ರಥಮಪಕ್ಷದಲ್ಲಿ ವ್ಯಭಿಚಾರದೋಷವನ್ನು 'ಕಂಪನಾತ್' ಎಂಬ ವಾಕ್ಯದಿಂದ ಹೇಳಿದ್ದಾರೆ. ಕಂಪನಾತ್ ಎಂಬ ಸೂತ್ರದಲ್ಲಿ 'ಮಹದ್ಭಯಂ ವಜ್ರಮುದ್ಯತಮ್' ಎಂಬ ಶ್ರುತಿಯಲ್ಲಿರುವ ವಜ್ರಶಬ್ದವನ್ನು ಸಮನ್ವಯ ಮಾಡಿದ್ದಾರೆ. 'ಶಬ್ದಾದೇವ ಪ್ರಮಿತಃ' ಎಂಬ ಸೂತ್ರದಲ್ಲಿ ಈಶಾನಶಬ್ದವನ್ನು ಸಮನ್ವಯ ಮಾಡಿದ್ದಾರೆ. 'ಪತ್ಯಾದಿಶಬ್ದೇಭ್ಯಃ' ಎಂಬ ಸೂತ್ರದಲ್ಲಿ ಬ್ರಾಹ್ಮಣಶಬ್ದವನ್ನು ಸಮನ್ವಯ ಮಾಡಿದ್ದಾರೆ. ಸಮನ್ವಯ ಮಾಡುತ್ತಿರುವ ಶಬ್ದಗಳ ಉಲ್ಲೇಖವು ಈ ಯಾವ ಸೂತ್ರಗಳಲ್ಲಿಯೂ ಕಾಣಿಸುತ್ತಿಲ್ಲ. ಆದರೂ ಕೂಡ ಇವುಗಳನ್ನೆಲ್ಲಾ ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಿದ್ದಾರೆ. ಇದರಂತೆ ಪ್ರಕೃತದಲ್ಲಿಯೂ ಗಾಯತ್ರೀ-ಶಬ್ದವನ್ನು ಪ್ರತ್ಯೇಕವಾಗಿ ಉಲ್ಲೇಖಿಸಬೇಕಿಲ್ಲ; ಬೇರೆ ಅಧಿಕರಣವಾಗಬಹುದು. ಸೂಚನೆಯನ್ನೂ ಮಾಡಿಲ್ಲವೆಂಬ ಎರಡನೆಯ ಪಕ್ಷಕ್ಕೆ 'ಸೂಚನಂ ತು' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಛಂದಸ್ ಶಬ್ದದಿಂದ ಗಾಯತ್ರೀಶಬ್ದವನ್ನು ಸೂಚಿಸಿದ್ದಾರೆಂದು ಅಭಿಪ್ರಾಯ.

ಗಾಯತ್ರ್ಯಧಿಕರಣವು ಪ್ರತ್ಯೇಕವಾದಲ್ಲಿ ಅಲ್ಲಿರುವ ಸೂತ್ರಭಾಷ್ಯವು ಗಾಯತ್ರೀಪದವನ್ನಷ್ಟೇ ಪ್ರಯೋಗಿಸಬೇಕು. ಆದರೆ 'ಅಗ್ನಿಗಾಯತ್ರ್ಯಾದಿಶಬ್ದಾರ್ಥರೂಪೋऽಸಾವಿತಿ ಚೇತೋರ್ಪಣಾರ್ಥಂ ಹಿ ನಿಗದ್ಯತೇ' ಎಂದು ಅಗ್ನಿಪದವನ್ನು ಪ್ರಯೋಗಿಸಿದೆ. ಅಗ್ನಿಪದವು ಹಿಂದಿನ ಅಧಿಕರಣದಿಂದಲೇ ಸಮನ್ವಯ ಹೊಂದಿರುವಾಗ ಪುನಃ ಅದನ್ನು ಉಲ್ಲೇಖಿಸುವ ಆಗತ್ಯವೇನಿತ್ತು? ಈ ಆಕ್ಷೇಪವನ್ನು 'ಅಗ್ನಿಪದಂ ತು' ಎಂಬ ಗ್ರಂಥವು ಉತ್ತರಿಸಿದೆ.

ಗಾಯತ್ರ್ಯಧಿಕರಣಕ್ಕಿಂತ ಜ್ಯೋತಿರಧಿಕರಣವು ಪ್ರತ್ಯೇಕವಾದಲ್ಲಿ ಆಕಾಶಾಧಿಕರಣ ಪ್ರಾಣಾಧಿಕರಣ-ಗಳಂತೆ ಅಭ್ಯಧಿಕಾಶಂಕೆಯನ್ನು ತೋರಿಸಬೇಕು. ಮುಂದಿನ ಗಾಯತ್ರ್ಯಧಿಕರಣದಲ್ಲಿಯೂ ಅಭ್ಯಧಿಕಾಶಂಕೆ-ಯನ್ನು ತೋರಿಸಿದ್ದಾರೆ. ಹೀಗಿರುವಾಗ ಜ್ಯೋತಿರಧಿಕರಣದಲ್ಲಿ ಮಾತ್ರ ಅಭ್ಯಧಿಕಾಶಂಕೆಯನ್ನು ತೋರಿಸದಿರಲು ಏನು ಕಾರಣ? ಎಂಬ ಶಂಕೆಗೆ 'ಅನುವ್ಯಾಖ್ಯಾನೇ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ. ಅಭ್ಯಧಿಕಾಶಂಕೆಯನ್ನು ಭಾಷ್ಯದಲ್ಲಿ ತೋರಿಸಿದ್ದರಿಂದ ಅನುವ್ಯಾಖ್ಯಾನದಲ್ಲಿ ಪುನಃ ತೋರಿಸಿಲ್ಲ. ಭಾಷ್ಯದಲ್ಲಿ ತೋರಿಸಿರುವ ಅಭ್ಯಧಿಕಾಶಂಕೆಯ ಕ್ರಮವನ್ನು ಮುಂದೆ ವಿವರಿಸುತ್ತೇವೆ.

ಅಧಿಕರಣಗಳ ಉಪಾಧಿಯನ್ನು ಪರ್ಯಾಲೋಚನೆ ಮಾಡಿದಾಗ ಜ್ಯೋತಿ ಮೊದಲಾದ ನಾಲ್ಕೂ ಸೂತ್ರಗಳು ಒಂದೇ ಅಧಿಕರಣವೆಂದು ತೋರುತ್ತದೆ. ಇಲ್ಲದಿದ್ದರೆ ಅಧಿಕರಣಗಳ ಉಪಾಧಿಯನ್ನು

ಉಲ್ಲೇಖಿಸುವಾಗ ನ್ಯಾಯವಿವರಣದಲ್ಲಿ ಸೂಕ್ತಗತಾಃ ಎಂದು ಹೇಳಬೇಕಿತ್ತಲ್ಲವೇ? ಎಂಬ ಪ್ರಶ್ನೆಗೆ 'ಅಧಿಭೂತ' ಎಂಬ ವಾಕ್ಯವು ಉತ್ತರಿಸುತ್ತಿದೆ.

ಆಕಾಶಾಧಿಕರಣಗಳ ಉಪಾಧಿಯನ್ನು ಈ ಜ್ಯೋತಿರಧಿಕರಣದಲ್ಲಿ ಇಟ್ಟುಕೊಳ್ಳುವುದಾದರೆ ಇದರ ಸಮನ್ವಯವು ಆಕಾಶಾದ್ಯಧಿಕರಣಗಳಿಂದಲೇ ಸಿದ್ಧವಾಗುತ್ತದೆ. ಪುನಃ ಈ ಅಧಿಕರಣವನ್ನು ಪ್ರತ್ಯೇಕವಾಗಿ ರಚಿಸಬೇಕಾಗಿಲ್ಲ ಎಂಬ ಪ್ರಶ್ನೆಗೆ 'ಸೂಕ್ತವಿಷಯತ್ವಮೇವ' ಎಂಬ ಗ್ರಂಥವು ವಿವರಿಸಿದೆ.

ಮೇಲೆ ಹೇಳಿದ ಮೂರು ಮತಗಳು ಪರಸ್ಪರ ವಿರುದ್ಧವಾಗಿವೆ. ಗ್ರಂಥಕಾರರು ಸಮರ್ಥಿಸಿದಂತೆ ಪ್ರಮಾಣವೂ ಆಗಿವೆ. ಹಾಗಾದರೆ ಪ್ರತಿಪಾದ್ಯವಾದ ವಸ್ತುವಿನಲ್ಲಿ ವಿಕಲ್ಪವುಂಟಾಗಬೇಕಲ್ಲವೇ? ಎಂಬ ಪ್ರಶ್ನೆಗೆ 'ಇದಂ ಚ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ.

**गुरुराजीयम्** – ननु तृतीयं मतमनुपपन्नम् । ज्योतिस्सूत्रं यदि पृथगधिकरणं स्यात्तदा छन्दस्सूत्रे समन्वेतव्यशब्दो वक्तव्यस्स्यात् । तथाच तदनुक्तिदोषः । एवं छन्दस्सूत्रभाष्ये अग्निगायत्र्यादीत्यत्रत्याग्निपदमनुपपन्नम् । ज्योतिःसूत्रे आकाशादिसूत्रादाविवानुव्याख्यानन्यायविवरणयोरधिकाशङ्का वक्तव्या । तथाच तदनुक्तिर्दोषः । तथा ज्योतिरधिकरणे पृथगुपाध्यनुक्तिश्चायुक्ता । तद्बलाच्चतुस्सूत्र्या एकाधिकरणत्वमेवावगम्यत इति तद्विरुद्धं टीकाकारमतमनुपपन्नमेवेत्यतस्तत्रानुपपत्तीः परिहरति – **तृतीय इति ॥ अन्यथा मतान्तरेपीति ॥** एतद्भाष्योपात्तशब्दस्यात्र समन्वेतव्यत्वनियम इत्यर्थः । तत्रादिपदेनापि समन्वेतव्यशब्दसमकक्षतया साक्षादसमन्वेतव्यवाक्पृथिव्यादिशब्दोपादानस्यास्वारस्येन मुख्यतः समन्वेतव्यपूर्वोत्तराधिकरणस्थशब्दानामेव ग्रहणस्यावश्यकत्वादित्यर्थः ।

ननु यथाऽऽकाशाधिकरणवदधिभूतगतशब्दविषयत्वं वाऽन्तराधिकरणवदधिदैवगतशब्दविषयत्वं वा यद्यस्याभ्युपगम्यते तर्हि तदधिकरणद्वयशेषत्वापत्त्याऽधिकरणान्तरत्वमनुपपन्नमित्यत आह – **सूक्तेति** ॥ ननु यदि मतत्रयमपि प्रामाणिकं स्यात्तर्हि वस्तुनो द्वैरूप्यं स्यात् । तथाच कथं मतत्रयमपि प्रामाणिकमित्युच्यत इत्यत आह – **इदञ्चेति** ॥

* * * * *

ಪರಿಪೂರ್ಣಚಂದ್ರಿಕಾ

## ಸಾರ

'ಜ್ಯೋತಿಶ್ಚರಣಾಭಿಧಾನಾತ್' ಎಂಬ ಒಂದೇ ಸೂತ್ರ ಪ್ರತ್ಯೇಕ ಅಧಿಕರಣವೆಂದು ಟೀಕಾರಾಯರ ಪಕ್ಷ. ಹಾಗಾದರೆ ಮುಂದಿನ ಗಾಯತ್ರ್ಯಧಿಕರಣದಲ್ಲಿ, ಸಮನ್ವಯ ಮಾಡಬೇಕಾದ ಶಬ್ದವನ್ನು ಉಲ್ಲೇಖಿಸಿಲ್ಲವಲ್ಲ? ಎಂಬ ಗೊಂದಲಕ್ಕೆ ಅವಕಾಶವಿಲ್ಲ. ಸಮನ್ವಯ ಮಾಡಬೇಕಾದ ಶಬ್ದವನ್ನು ಪ್ರತಿಯೊಂದು ಅಧಿಕರಣಗಳಲ್ಲಿ ಸೂತ್ರಕಾರರು ಉಲ್ಲೇಖಿಸುತ್ತಾರೆಂಬ ನಿಯಮವಿಲ್ಲ. ಕಂಪನಾಧಿಕರಣದಲ್ಲಿ ಸಮನ್ವಯ ಮಾಡುವ ವಜ್ರಶಬ್ದವನ್ನು ಉಲ್ಲೇಖಿಸಿದ್ದು ಕಾಣುತ್ತಿಲ್ಲ. ಆದರೆ ವಜ್ರಶಬ್ದದ ಅರ್ಥವನ್ನು ಕಂಪನಶಬ್ದದಿಂದ ಸೂಚಿಸಿದ್ದಾರೆ. ಅದರಂತೆ ಇಲ್ಲಿಯೂ 'ಛಂದೋಭಿಧಾನಾತ್' ಎಂಬುದರಿಂದ ಗಾಯತ್ರೀಶಬ್ದದ ಸಮನ್ವಯವನ್ನು ಸೂಚಿಸಿದ್ದಾರೆ.

ಇಲ್ಲಿ ಬರುವ ಮತ್ತೊಂದು ಪ್ರಶ್ನೆ – 'ಛಂದೋಭಿಧಾನಾತ್' ಇತ್ಯಾದಿ ಮೂರು ಸೂತ್ರಗಳು ಗಾಯತ್ರೀ-ಶಬ್ದದ ಸಮನ್ವಯಕ್ಕೋಸ್ಕರ ಹೊರಟಿದ್ದೇ ಆದರೆ ಭಾಷ್ಯಕಾರರು ಅಗ್ನಿಗಾಯತ್ರ್ಯಾದಿ ಎಂದು ಅಗ್ನಿಶಬ್ದದ ಸಮನ್ವಯವನ್ನು ಹೇಳಿದ್ದು ತಪ್ಪಾಗುತ್ತದಲ್ಲವೇ? ಎಂದು.

ಭಾಷ್ಯಕಾರರ ಮಾತಿನಲ್ಲಿರುವ ಸೂಕ್ಷ್ಮವನ್ನು ಗಮನಿಸಬೇಕು. ಅಗ್ನಿಶಬ್ದದ ಸಮನ್ವಯಕ್ಕೋಸ್ಕರ ಅಗ್ನಿಶಬ್ದ-ವನ್ನು ಉಲ್ಲೇಖಿಸಿಲ್ಲ ಹೊರತಾಗಿ ಅನ್ಯತ್ರಪ್ರಸಿದ್ಧವಾದ ಗಾಯತ್ರೀಶಬ್ದವನ್ನು ಸಮನ್ವಯ ಮಾಡಿದ್ದರಿಂದ ವಿಷ್ಣುವನ್ನು ಗಾಯತ್ರೀರೂಪದಿಂದ ಉಪಾಸನೆ ಮಾಡಬೇಕು. ಇದರಂತೆ ಹಿಂದಿನ ಮುಂದಿನ ಅಧಿಕರಣಗಳಲ್ಲಿ ಮಾಡಿರುವ ಆಯಾಯ ಶಬ್ದಗಳ ಸಮನ್ವಯದ ಉದ್ದೇಶ ಉಪಾಸನೆಗೋಸ್ಕರ. ಇದನ್ನು ತಿಳಿಸುವುದಕ್ಕಾಗಿ ಹಿಂದಿನ ಅಧಿಕರಣದ ಅಗ್ನಿಶಬ್ದವನ್ನು ಉಪಲಕ್ಷಕವಾಗಿ ಉಲ್ಲೇಖಿಸಿದ್ದಾರೆ. ತತ್ತ್ವಪ್ರದೀಪಕಾರರು ಹಾಗೂ ಸನ್ನ್ಯಾಯರತ್ನಾ-ವಲೀಕಾರರೂ ಕೂಡ ಅಗ್ನಿಗಾಯತ್ರ್ಯಾದಿ ಎಂಬಲ್ಲಿರುವ ಆದಿ ಪದದ ಸಾರ್ಥಕ್ಯವನ್ನು ಹೀಗೆಯೇ ಹೇಳ-ಬೇಕಾಗುತ್ತದೆ.

ವಸ್ತುತಃ ಅನುವ್ಯಾಖ್ಯಾನ ನ್ಯಾಯವಿವರಣಗಳಲ್ಲಿ ಜ್ಯೋತಿರಧಿಕರಣಕ್ಕೆ ಪ್ರತ್ಯೇಕವಾದ ಅಧಿಕಾಶಂಕೆಯನ್ನು ತೋರಿಸಿಲ್ಲ. 'ಅಗ್ನಿಸೂಕ್ತಸ್ಥತ್ವಾತ್' ಎಂಬ ಭಾಷ್ಯದಲ್ಲಿಯೇ ಅಧಿಕಾಶಂಕೆಯನ್ನು ತೋರಿಸಿದ್ದರಿಂದ ಪುನಃ ಹೇಳಬೇಕಾಗಿಲ್ಲವೆಂದಷ್ಟೇ ಅಭಿಪ್ರಾಯ ಹೊರತು ಪ್ರತ್ಯೇಕ ಅಧಿಕರಣವೆಂದಲ್ಲ. ಪ್ರತಿಯೊಂದು ಅಧಿಕರಣಗಳ ಉಪಾಧಿಯನ್ನು ಹೇಳುವ ನ್ಯಾಯವಿವರಣೆಯ ಅಭಿಪ್ರಾಯವೂ ಇದೇ ಆಗಿದೆ. -- ಆಕಾಶಾಧಿಕರಣದಂತೆ ಅಧಿ ಭೂತಶಬ್ದವಿಷಯತ್ವ ಅಥವಾ ಅಂತರಧಿಕರಣದಂತೆ ಅಧಿದೈವಗತಶಬ್ದವಿಷಯತ್ವವು ಉಪಾಧಿಯಾಗುತ್ತದೆಂದು ಅಭಿಪ್ರಾಯ. ಸೂಕ್ತವಿಷಯತ್ವವೆಂಬುದು ಅಧಿಕರಣವೈಲಕ್ಷಣ್ಯಕ್ಕೆ ಕಾರಣವಾಗಿದೆ. ಈ ಮೂರು ಮತಗಳೂ ಸೂತ್ರದ ಯೋಜನೆಯಲ್ಲಷ್ಟೇ ಚರ್ಚಿಸಿವೆ. ಪ್ರಮೇಯವಿಚಾರದಲ್ಲಿ ಚರ್ಚಿಸಿಲ್ಲ. ಮೂವರೂ ಮಹಾಜ್ಞಾನಿ-ಗಳಾದ್ದರಿಂದ ಯಾವ ಪಕ್ಷವನ್ನೂ ಕಡೆಗಾಣಿಸಬಾರದು.

### ಸಂಗತಿ

## तात्पर्यचन्द्रिका

**तत्र ज्योतिरधिकरणे सूक्तस्था ज्योतिरादिशब्दा उदाहरणम् । प्राणाधि-करणन्यायागोचरत्वप्रदर्शनेन पूर्वपक्षोत्थानादनन्तरसङ्गतिः ।**

ಅನುವಾದ - ಅಗ್ನಿಸೂಕ್ತದಲ್ಲಿರುವ ಜ್ಯೋತಿರಾದಿಶಬ್ದಗಳು ಜ್ಯೋತಿರಧಿಕರಣದ ವಿಷಯವಾಗಿವೆ. ಪ್ರಾಣಾಧಿಕರಣನ್ಯಾಯವನ್ನು ಆಕ್ಷೇಪಿಸಿ ಜ್ಯೋತಿರಧಿಕರಣದ ಪೂರ್ವಪಕ್ಷವು ಹೊರಟಿದ್ದರಿಂದ ಅನಂತರಸಂಗತಿಯನ್ನು (ಪ್ರತ್ಯುದಾಹರಣಸಂಗತಿಯನ್ನು) ತಿಳಿಯಬೇಕು.

**प्रकाशः** – एवं टीकारीत्या अधिकरणभेदे समर्थिते सति । अन्यत्रानुक्तेः । कस्तर्ह्यस्य विषयोपाधिः, ज्योतिश्शब्दस्य देवतावाचित्वे जडवाचित्वे वाऽन्तराद्य-धिकरणन्यायेन गतत्वादित्यत आह – **तत्रेति** ॥ सूक्तगतत्वं विषयतावच्छेदकम् । ज्योतिश्शब्दस्य च वायुवाचिप्राणशब्दसमन्वयेन तज्जन्याग्निवाचित्वेन बुद्धौ सन्निधानादितरोपलक्षकत्वेनोपादानमिति भावः ।

नन्वस्य टीकारीत्या शास्त्राध्यायसङ्गतत्वेऽपि नात्र पादे सङ्गतिः । तथा हि – ज्योतिश्शब्दस्य भूतपरत्वे आकाशाधिकरणन्यायेन, देवतापरत्वेऽन्तरधिकरणन्यायेन, विष्णौ प्रयोगात् **"आकाशोऽर्थान्तरत्वादि"** इत्यादावाकाशशब्दस्येव पूर्वोक्त्यन्यत्र-प्रसिद्धिभ्यामुभयत्रप्रसिद्धतापत्त्या नात्र समन्वयो युक्तः ।

नच पादान्त्यप्राणाधिकरणे प्राणशब्दस्य पूर्वं समन्वयेऽपि लोकप्रसिद्ध्याऽ-न्यत्रप्रसिद्धत्ववदिहापि स्यादिति वाच्यम्, तत्र पूर्वपक्षे पूर्वोक्तसमन्वयस्याक्षेपेण तथात्वसम्भवेऽपीह पूर्वोक्ताक्षेपाभावेन तदसम्भवात् ।

नच पूर्वं ज्योतिश्शब्दपर्यायाग्निशब्दस्यैव समन्वयो न ज्योतिश्शब्दस्येति वाच्यम्, 'अत्ता' इत्यधिकरणटीकायामदितिश्रुतेः सावकाशत्वात्त्वयोगात् । सवित्रा-दिशब्दसमन्वयमात्रेण तत्पर्यायस्याऽऽदित्यशब्दस्य "सर्वत्र" इत्यधिकरणे साव-काशताया वक्ष्यमाणत्वाच्च । अत एवाग्रे वक्ष्यति 'सावकाशाग्निश्रुत्या सावकाश-विष्णुलिङ्गबाधात्' इतीति चेत्सत्यम्, लोकतोऽन्यत्रप्रसिद्धप्रकरणेन ज्योतिर्नाम्नोप्य-न्यत्रप्रसिद्धत्वात् । उक्तं हि –

**श्रुत्यादितो लोकतो वाऽपीतरेषु प्रसिद्धता ॥**

इति । न चैवं निरवकाशप्रकरणवशेन अन्यत्रैवप्रसिद्धता स्यात्,

**बलवत् श्रुतिलिङ्गाद्यैरन्येष्वेव प्रसिद्धता ।**

इत्युक्तेरिति वाच्यम्, नाम्नो विष्णावपि सावकाशत्वात् । प्रागुक्तदिशा तत्र विवक्षितबलवत्त्वस्येहाभावाच्च । 'लोकतः' इति टीका तु प्राक् साक्षादसमन्वितत्वात् समन्वितत्वेऽप्यापाततो लोकप्रसिद्ध्या वा, प्रकरणस्य लोकतः प्रसिद्ध्या परम्परया वा, पूर्वत्रेवात्रान्यप्रसिद्धिबाधकनिरवकाशलिङ्गाभावादिति वा नेया । न चैवं, येन श्रुतेरन्यत्रप्रसिद्धता तदेव प्रागसमन्वितं प्रकरणं "ईक्षतिकर्म" इत्यत्र स्थानमिवेह समन्वीयताम् । पादसङ्गतिस्तु "अन्तः" इत्यादेरिव फलतस्सेत्स्यतीति वाच्यम्, प्राक् नाम्नः समन्वितत्वेन तस्यैवेह बुद्धिस्थत्वात् । नच प्रागपि नामद्वारा तत्तन्नामयुक्तं प्रकरणमर्थात्समन्वितमिति वाच्यम्, नाम्न एव साक्षात् समन्वितत्वेनेहापि धीस्थत्वात् । साक्षादर्थनिष्ठनामद्वारेणैव प्रकरणसमन्वयस्योचितत्वाच्च। स्थानस्यापि सन्नामद्वारेणैव समन्वेष्यमाणत्वाच्च ।

यद्वा – न पूर्वोक्त्यन्यत्रप्रसिद्धिभ्यामुभयत्रप्रसिद्धता, किन्तु श्रुतिलिङ्गादितौल्येन वा प्रवृत्तिनिमित्तसाम्येन वा सा । न चात्र तथा, येनासङ्गतिः । "आकाशोऽर्थान्तरत्वादि" इत्यत्राकाशशब्दस्य उभयत्रप्रसिद्धत्वं तु पादान्त्यप्राणाधिकरणेऽन्यथैव वक्ष्यत इति । ननु भाष्यरीत्या सङ्गत्याश्रयणे आनन्दमयाधिकरणानन्तर्यप्राप्तेरत्र निवेशो न युक्त इत्यतः पूर्वसङ्गतिमाह – **प्राणेति** ॥ एतच्चाग्रे स्पष्टमिति भावः ॥ **सङ्गतिरिति** ॥ प्रत्युदाहरणरूपेत्यर्थः । उक्तञ्च –

**पूर्वन्यायात्ययो यत्र प्रत्युदाहरणा तु सा ।**

इति । "यो वेद निहितं गुहायामित्युक्तम्" इति भाष्यं तु, यद्यग्निसूक्तगतं ज्योतिर्विष्णोरन्यत् तर्हि तन्निष्ठगुहानिहितत्वयुक्तानन्दमयोऽप्यन्यः प्रसज्येतेति पूर्वपक्षे आनन्दमयाधिकरणाक्षेपात्, सिद्धान्ते च तत्समाधानात्सफलोऽयं विचार इति प्रयोजनमात्रपरमिति भावः । एतच्चान्तरधिकरणप्रयोजनसमर्थनरीत्या समर्थनीयम् ।

नन्वेवं यदि ज्योतिर्विष्णोरन्यत्, तर्हि तस्यैव गुहानिहितत्वात् प्रागुक्तान्तस्स्थत्वमपि तस्यै-वेत्यन्तरधिकरणमप्याक्षेप्तुं शक्यते । एवञ्च पूर्वोक्ताक्षेपेणोभयत्रप्रसिद्धत्वशङ्काऽपि नोदेष्यति ॥ नच गुहानिहितत्वमन्यदन्तस्स्थत्वं चान्यदिति वाच्यम्, तस्यापि 'निहितं गुहासु' इति गुहानिहितत्वरूपत्वादिति तत्रैवोक्तत्वात् ।

**ज्योतिषो गुहानिहितत्वात् तस्य च ''यो वेद निहितम्'' इति मन्त्रवर्णे श्रवणात् मान्त्रवर्णिकस्यैवानन्दमयत्वात्साऽपि ज्योतिरित्याक्षेपादस्याक्षेपस्य ऋजुत्वादिति चेन्न,**

**पूर्वत्र तदधिकरणस्यैवाक्षेपेणेहापि तथात्वस्यैवौचित्यात्, व्यवहिताक्षेपस्याविशेषात् अन्तर्नयाक्षेपस्याप्यानन्दमयनयाक्षेपपर्यन्तत्वस्यावश्यकत्वाच्च । अन्यथा जिज्ञासाक्षेपपर्यवसानायोगात् । साक्षादेव तदाक्षेपसम्भवे तद्वारा तदाक्षेपस्य वक्तव्यत्वाच्च । न चैवं मनश्चक्षुराद्यगोचरत्वरूपादृश्यत्वश्रवणात् तद्युक्तानन्दमयोऽपि ज्योतिरित्यस्य ऋजुत्वात् तथैवाक्षिप्यतामिति वाच्यम्, अनेकसमभिव्याहारलभ्यादृश्यत्वमुखाक्षेपापेक्षया एकवाक्यलभ्यसन्निहितगुहास्थत्वमुखेनाक्षेपस्यैव ऋजुत्वादिति ॥**

ವಿವರಣೆ - ಇಲ್ಲಿಯ ತನಕ ಟೀಕೆಯ ಪ್ರಕಾರ ಜ್ಯೋತಿರಧಿಕರಣವನ್ನು ಪ್ರತ್ಯೇಕವೆಂದು ಸಮರ್ಥಿಸಿದ್ದಾಯಿತು. ಪ್ರಕೃತ ಹಿಂದಿನ ಅಧಿಕರಣದಿಂದ ಜ್ಯೋತಿರಧಿಕರಣವು ಗತಾರ್ಥವಾಗಿಲ್ಲವೆಂದು ಸಮರ್ಥಿಸುತ್ತಿದ್ದಾರೆ.

ಜ್ಯೋತಿರಧಿಕರಣವನ್ನು ಪ್ರತ್ಯೇಕವೆಂದು ಯಾರೂ ಹೇಳಿಲ್ಲ. ಪ್ರತ್ಯೇಕವಾದಲ್ಲಿ ಅಧಿಕರಣದ ವಿಷಯೋಪಾಧಿಯನ್ನು ಹೇಳಬೇಕು. ದೇವತಾವಾಚಿತ್ವವನ್ನು ಜಡವಾಚಿತ್ವವನ್ನು ವಿಷಯೋಪಾಧಿಯೆಂದು ಹೇಳಿದರೆ ಅಂತರಧಿಕರಣ ಮತ್ತು ಆಕಾಶಾಧಿಕರಣಗಳಿಂದ ಗತಾರ್ಥವಾಗುತ್ತದಲ್ಲವೇ? ಎಂಬ ಶಂಕೆಗೆ ಗ್ರಂಥಕಾರರು 'ತತ್ರ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಸೂಕ್ತಗತತ್ವವೇ ಈ ಅಧಿಕರಣದ ಉಪಾಧಿ.

ಇಂದ್ರಸೂಕ್ತ, ಅಗ್ನಿಸೂಕ್ತಗಳೆಂದು ಪ್ರಸಿದ್ಧವಾದ ಸೂಕ್ತಗಳಲ್ಲಿರುವ ಇಂದ್ರ, ಚಂದ್ರ, ಅಗ್ನಿ ಮೊದಲಾದ ದೇವತಾವಾಚಕವಾದ ಶಬ್ದಗಳನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಹಾಗಾದರೆ ಜ್ಯೋತಿಃಶಬ್ದವನ್ನೇ ಏಕೆ ಸಮರ್ಥಿಸಬೇಕು? ಎಂದು ಪ್ರಶ್ನಿಸಬಾರದು. ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ ಈ ಕ್ರಮದಲ್ಲಿ ಜಗತ್ತಿನ ಸೃಷ್ಟಿಯಾಗುತ್ತದೆ. ಇದನ್ನು ಅನುಸರಿಸಿ ಆಕಾಶಾಧಿಕರಣದಲ್ಲಿ ಆಕಾಶಶಬ್ದವನ್ನು ಸಮನ್ವಯ ಮಾಡಿ ಪ್ರಾಣಾಧಿಕರಣದಲ್ಲಿ ವಾಯುಶಬ್ದವನ್ನು ಸಮನ್ವಯ ಮಾಡಿದ ಮೇಲೆ ಅನಂತರ ಮುಂದೆ ಅಗ್ನಿವಾಚಕಶಬ್ದಗಳೇ ಬುದ್ಧಿಯಲ್ಲಿ ಉಪಸ್ಥಿತವಾಗುತ್ತವೆ. ಆದ್ದರಿಂದ ಬೇರೆ ಶಬ್ದಗಳನ್ನು ಸಮನ್ವಯ ಮಾಡದೇ ಅಗ್ನಿವಾಚಕವಾದ ಜ್ಯೋತಿಃಶಬ್ದವನ್ನೇ ಸಮನ್ವಯ ಮಾಡಿದ್ದಾರೆ. ಇದರಿಂದ ಬೇರೆ ಶಬ್ದಗಳನ್ನು ಉಪಲಕ್ಷಣವಾಗಿ ಸ್ವೀಕರಿಸಬೇಕು.

ಆಕ್ಷೇಪ - ಜ್ಯೋತಿರಧಿಕರಣದಲ್ಲಿ ಅಗ್ನಿವಾಚಕಶಬ್ದವನ್ನು ಬ್ರಹ್ಮಪರವೆಂದು ಹೇಳುತ್ತಿರುವುದರಿಂದ ಶಾಸ್ತ್ರಸಂಗತಿಯನ್ನು, ಸಮನ್ವಯ ಮಾಡುತ್ತಿರುವುದರಿಂದ ಅಧ್ಯಾಯಸಂಗತಿಯನ್ನು ಟೀಕೆಯ ಪ್ರಕಾರ

ಹೇಳಬಹುದು. ಆದರೆ ಪಾದಸಂಗತಿಯನ್ನು ಹೇಳಲಾಗದು. ಅದು ಹೀಗೆ -- 'ಜ್ಯೋತಿಃಶಬ್ದವು ಅಗ್ನಿಯೆಂಬ ಭೂತಪದಾರ್ಥವನ್ನು ಹೇಳುತ್ತದೋ? ಅಥವಾ ಅಗ್ನಿದೇವತೆಯನ್ನು ಹೇಳುತ್ತದೋ? ಭೂತಪರವಾದಲ್ಲಿ ಆಕಾಶಾಧಿಕರಣನ್ಯಾಯದಂತೆ ವಿಷ್ಣುವಿನಲ್ಲಿ ಸಮನ್ವಯವಾಗಿದೆ. ದೇವತಾಪರವಾದರೆ ಅಂತರಧಿಕರಣನ್ಯಾಯದಿಂದ ವಿಷ್ಣುವಿನಲ್ಲಿ ಸಮನ್ವಯವಾಗಿದೆ. ಅಂತೂ ಯಾವುದೇ ಅರ್ಥವನ್ನಿಟ್ಟು-ಕೊಂಡರೂ ಜ್ಯೋತಿಃಶಬ್ದವು ವಿಷ್ಣುಪರವೆಂಬುದು ಮೊದಲೇ ನಿಶ್ಚಯವಾಗಿದೆ. ಇದರ ಜೊತೆಗೆ ಲೋಕಪ್ರಸಿದ್ಧಿಯಿಂದ ಅನ್ಯಪರವೂ ಆಗಿದೆ. ಆದ್ದರಿಂದ ಜ್ಯೋತಿಶಬ್ದವು ಉಭಯತ್ರಪ್ರಸಿದ್ಧಿಯಾಯಿತು ಹೊರತು ಅನ್ಯತ್ರಪ್ರಸಿದ್ಧವಾಗಲಿಲ್ಲ.

ಉದಾಹರಣೆ - 'ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್' ಎಂಬ ಸೂತ್ರದಲ್ಲಿ ಆಕಾಶಶಬ್ದವನ್ನು ಉಭಯತ್ರಪ್ರಸಿದ್ಧಿಯೆಂದು ಪರಿಗಣಿಸಿದ್ದಾರೆ. ಏಕೆಂದರೆ ಪ್ರಥಮಪಾದದ ಆಕಾಶಾಧಿಕರಣದಲ್ಲಿ ಆಕಾಶಶಬ್ದವು ವಿಷ್ಣುಪರವೆಂದು ಮೊದಲೇ ನಿಶ್ಚಿತವಾಗಿದೆ. ಇದರ ಜೊತೆಗೆ ಅನ್ಯತ್ರಪ್ರಸಿದ್ಧಿಯೂ ಇದೆ. ಆದ್ದರಿಂದ ಉಭಯತ್ರಪ್ರಸಿದ್ಧವಾಗಿದೆಯೆಂದು ಮೂರನೆಯ ಪಾದದಲ್ಲಿ ಈ ಸೂತ್ರವನ್ನು ಉಲ್ಲೇಖಿಸಿದ್ದಾರೆ. ಆದರಂತೆ ಈ ಜ್ಯೋತಿರಧಿಕರಣವನ್ನೂ ಕೂಡ ಮೂರನೆಯ ಪಾದದಲ್ಲಿಯೇ ಹೇಳಬೇಕಲ್ಲವೇ?

ಪಾದಾಂತ್ಯಪ್ರಾಣಾಧಿಕರಣದಲ್ಲಿ ಪ್ರಾಣಶಬ್ದವನ್ನು ಸಮನ್ವಯ ಮಾಡುತ್ತಾರೆ. ವಸ್ತುತಃ ಮೊದಲೇ ಪ್ರಾಣಶಬ್ದವು ಪ್ರಾಣಾಧಿಕರಣ ನ್ಯಾಯದಂತೆ ವಿಷ್ಣುವಿನಲ್ಲಿ ಸಮನ್ವಯ ಹೊಂದಿದೆ. ಲೋಕಪ್ರಸಿದ್ಧಿಯೂ ಇರುವುದರಿಂದ ಪಾದಾಂತ್ಯಪ್ರಾಣಾಧಿಕರಣದಲ್ಲಿ ಸಮನ್ವಯ ಮಾಡುವ ಪ್ರಾಣಶಬ್ದವು ಉಭಯತ್ರಪ್ರಸಿದ್ಧವಾಯಿತು. ಹಾಗಾದಲ್ಲಿ ಪಾದಾಂತ್ಯಪ್ರಾಣಾಧಿಕರಣವನ್ನು ಮೂರನೆಯ ಪಾದದಲ್ಲಿಯೇ ಸೇರಿಸಬೇಕಾದೀತು. ಆದರೂ ಸಹ ಪ್ರಥಮಪಾದದಲ್ಲಿ ನಿವೇಶಿಸಿದಂತೆ ಜ್ಯೋತಿರಧಿಕರಣವನ್ನು ಇಲ್ಲಿಯೇ ಹೇಳಬಹುದು ಎಂದು ಪ್ರಶ್ನಿಸಬಾರದು.

ಪಾದಾಂತ್ಯಪ್ರಾಣಾಧಿಕರಣಕ್ಕೂ ಜ್ಯೋತಿರಧಿಕರಣಕ್ಕೂ ವ್ಯತ್ಯಾಸವಿದೆ. ಪ್ರಾಣಾಧಿಕರಣದಲ್ಲಿ ಮಾಡಿದ ಪ್ರಾಣಶಬ್ದದ ಸಮನ್ವಯವನ್ನು ಆಕ್ಷೇಪಮಾಡಿ ಪಾದಾಂತ್ಯಪ್ರಾಣಾಧಿಕರಣವು ಹೊರಟಿದೆ. ಆದರೆ ಜ್ಯೋತಿರಧಿಕರಣವು ಹಿಂದಿನ ಅಂತರಾದ್ಯಧಿಕರಣಗಳಲ್ಲಿ ಮಾಡಿದ ಸಮನ್ವಯವನ್ನು ಆಕ್ಷೇಪಿಸಿ ಹೊರಟಿಲ್ಲ. ಆದ್ದರಿಂದ ಅಂತಿಮಪ್ರಾಣಾಧಿಕರಣದ ದೃಷ್ಟಾಂತದಂತೆ ಜ್ಯೋತಿರಧಿಕರಣವು ಪ್ರಥಮ-ಪಾದದಲ್ಲಿ ಸೇರಲು ಅರ್ಹವಲ್ಲ.

ಹಿಂದಿನ ಅಂತರಾದ್ಯಧಿಕರಣಗಳಲ್ಲಿ ಜ್ಯೋತಿಃಶಬ್ದದ ಪರ್ಯಾಯವಾದ ಅಗ್ನಿಶಬ್ದವನ್ನಷ್ಟೇ ಸಮನ್ವಯ ಮಾಡಲಾಗಿದೆ ಹೊರತು ಸಾಕ್ಷಾತ್ತಾಗಿ ಜ್ಯೋತಿಃಶಬ್ದವನ್ನು ಸಮನ್ವಯ ಮಾಡಿಲ್ಲ. ಆದ್ದರಿಂದ ಹಿಂದಿನ ಅಧಿಕರಣಗಳಿಂದ ಇದು ಗತಾರ್ಥವಾಗುವುದಿಲ್ಲವೆಂದು ಪ್ರಶ್ನೆಗೂ ಅವಕಾಶವಿಲ್ಲ.

ಹಾಗಾದರೆ ಅತ್ತೃತ್ವಾಧಿಕರಣದ ಟೀಕೆಯಲ್ಲಿ ಅದಿತಿಶ್ರುತಿಯನ್ನು ಸಾವಕಾಶವೆಂದಿದ್ದು ತಪ್ಪಾದೀತು. ಅಂತರಧಿಕರಣದ ನ್ಯಾಯದಿಂದ ಅದಿತಿಶಬ್ದವು ವಿಷ್ಣುವಿನಲ್ಲಿ ಸಮನ್ವಯವಾಗಿದೆ ಎಂದು ಮೊದಲೇ ಸಿದ್ಧವಾಗಿದೆ ಎಂಬ ವಿವಕ್ಷೆಯಿದ್ದರೆ ಮಾತ್ರ ಅದಿತಿಶ್ರುತಿಯನ್ನು ಸಾವಕಾಶವೆನ್ನಲು ಸಾಧ್ಯ. ಮತ್ತು

ಅಗ್ನಿಶಬ್ದದ ಸಮನ್ವಯದಿಂದ ಅದರ ಪರ್ಯಾಯಶಬ್ದವೆನಿಸಿದ ಜ್ಯೋತಿಃಶಬ್ದದ ಸಮನ್ವಯವು ಸಿದ್ಧವಾಗುತ್ತದೆ. ಆದ್ದರಿಂದಲೇ ಸರ್ವಗತತ್ವಾಧಿಕರಣದಲ್ಲಿ ಆದಿತ್ಯಶಬ್ದವನ್ನು ಸಾವಕಾಶವೆಂದಿದ್ದಾರೆ. ಹಿಂದಿನ ಅಂತರಧಿಕರಣದಿಂದ ಸವಿತ್ರಾದಿಶಬ್ದಗಳ ಸಮನ್ವಯವು ವಿಷ್ಣುವಿನಲ್ಲಿ ಸಿದ್ಧವಾಗಿದೆ. ಅದರ ಪರ್ಯಾಯ-ಶಬ್ದವಾದ ಆದಿತ್ಯಶಬ್ದದ ಸಮನ್ವಯವೂ ಸಹ ವಿಷ್ಣುವಿನಲ್ಲಿ ಸಿದ್ಧವಾಗಿದೆ ಎಂಬ ಅಭಿಪ್ರಾಯದಿಂದಷ್ಟೇ ಆದಿತ್ಯಶಬ್ದವನ್ನು ಸಾವಕಾಶವೆಂದು ಮುಂದೆ ಹೇಳುತ್ತಾರೆ. ಆದ್ದರಿಂದಲೇ ಗ್ರಂಥಕಾರರು 'ಸಾವಕಾಶಾಗ್ನಿಶ್ರುತ್ಯಾ ಸಾವಕಾಶವಿಷ್ಣುಲಿಂಗಬಾಧಾತ್' (ಸಾವಕಾಶವಾದ ಅಗ್ನಿಶ್ರುತಿಯಿಂದ ಸಾವಕಾಶವಾದ ವಿಷ್ಣುವಿನ ಲಿಂಗವು ಬಾಧಿತವಾಗುವುದರಿಂದ) ಎಂದು ಹೇಳಿದ್ದಾರೆ. ಅಂತರಧಿಕರಣ ನ್ಯಾಯದಿಂದ ಜ್ಯೋತಿಃಶಬ್ದದ ಪರ್ಯಾಯವೆನಿಸಿದ ಅಗ್ನಿಶಬ್ದವು ವಿಷ್ಣುವಿನಲ್ಲಿ ಸಮನ್ವಯವಾಗಿದ್ದರೆ ಮಾತ್ರ ಸಾವಕಾಶಅಗ್ನಿಶ್ರುತ್ಯಾ ಎಂಬ ಪದವು ಅರ್ಥವತ್ತಾಗುತ್ತದೆ.

ಹಾಗಾಗಿ ಜ್ಯೋತಿಃಶಬ್ದವು ವಿಷ್ಣುಪರವೆಂದು ಮೊದಲೇ ಸಿದ್ಧವಾಗಿದೆ. ಅನ್ಯತ್ರಪ್ರಸಿದ್ಧಿಯೂ ಇದೆ. ಹೀಗಿರುವಾಗ ಉಭಯತ್ರಪ್ರಸಿದ್ಧವೆನಿಸುತ್ತದೇ ಹೊರತು ಅನ್ಯತ್ರಪ್ರಸಿದ್ಧವೆನ್ನಿಸುವುದಿಲ್ಲ. ಆದ್ದರಿಂದ ಈ ಅಧಿಕರಣವನ್ನು ಮೂರನೆಯ ಪಾದದಲ್ಲಿ ಹೇಳಬೇಕಲ್ಲವೇ?

ಸಮಾಧಾನ - ಹೌದು. ಆದರೆ ಪಾದಸಂಗತಿಯು ಇಲ್ಲವೆನ್ನಬಾರದು. ಜ್ಯೋತಿರಧಿಕರಣದಲ್ಲಿ ಅನ್ಯತ್ರಪ್ರಸಿದ್ಧವಾದ ಪ್ರಕರಣದ ಬಲದಿಂದ ಜ್ಯೋತಿಃಶಬ್ದವು ಅನ್ಯತ್ರಪ್ರಸಿದ್ಧವೆಂದು ಶಂಕಿಸಲಾಗಿದೆ. ಈ ಸೂಕ್ಷ್ಮವನ್ನು ಸ್ಪಷ್ಟವಾಗಿ ಗಮನಿಸಬೇಕು. ಹಿಂದಿನ ಅಂತರಧಿಕರಣದಲ್ಲಿ ಕೇವಲ ಜ್ಯೋತಿಃಶಬ್ದದ ಸಮನ್ವಯವಷ್ಟೇ ವಿಷ್ಣುವಿನಲ್ಲಿ ಸಿದ್ಧವಾಗಿದೆ. ಆದರೆ ಜ್ಯೋತಿಃಶಬ್ದವಿರುವ ಸಂಪೂರ್ಣಪ್ರಕರಣವು ಅಧ್ಯಾಪಕರ ಪ್ರಸಿದ್ಧಿಯಂತೆ ಅಗ್ನಿಯಲ್ಲಿ ಪ್ರಸಿದ್ಧವಾಗಿದೆ. ಅನ್ಯತ್ರಪ್ರಸಿದ್ಧಿಯ ಲಕ್ಷಣವನ್ನು ಹೀಗೆ ಹೇಳಿದ್ದಾರೆ. 'ಶ್ರುತ್ಯಾದಿತೋ ಲೋಕತೋ ವಾಪೀತರೇಷು ಪ್ರಸಿದ್ಧತಾ'ಎಂದು. ಶ್ರುತಿಯಿಂದ, ಪ್ರಕರಣದಿಂದ ಅಥವಾ ಸ್ಥಾನ ಮೊದಲಾದ ಯಾವುದೇ ಪ್ರಮಾಣಗಳಿಂದ ಲೋಕತಃ ಇತರರಲ್ಲಿ ಪ್ರಸಿದ್ಧವಾಗಿದ್ದರೆ ಅದನ್ನು ಅನ್ಯತ್ರಪ್ರಸಿದ್ಧವೆನ್ನಬಹುದು. ಪ್ರಕೃತ ಜ್ಯೋತಿರಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ ಶಬ್ದವು ಪ್ರಕರಣಬಲದಿಂದ ಅನ್ಯತ್ರಪ್ರಸಿದ್ಧವೆನಿಸಿದೆ. ಆದ್ದರಿಂದ ಪಾದಸಂಗತಿಯನ್ನು ನೇರವಾಗಿ ಹೇಳಬಹುದು.

ಶಂಕೆ - ಜ್ಯೋತಿಶಬ್ದವಿರುವ ಸಂಪೂರ್ಣ ಪ್ರಕರಣವು ನಿರವಕಾಶವಾಗಿ ಅಗ್ನಿಯನ್ನೇ ಪ್ರತಿಪಾದಿಸುತ್ತಿದೆ ಹೊರತು ವಿಷ್ಣುವನ್ನಲ್ಲವೆಂದು ಹೇಳಿದಿರಿ. ಹಾಗಾದರೆ ಅನ್ಯತ್ರೈವಪ್ರಸಿದ್ಧವಾಯಿತು ಹೊರತು ಅನ್ಯತ್ರಪ್ರಸಿದ್ಧವೆನ್ನಿಸಲಿಲ್ಲ. ಅನ್ಯತ್ರೈವಪ್ರಸಿದ್ಧಿಲಕ್ಷಣವನ್ನು ಬಲವತ್‌ಶ್ರುತಿಲಿಂಗಾದ್ಯೈಃ ಅನ್ಯೇಷ್ವೇವ ಪ್ರಸಿದ್ಧತಾ (ಬಲಿಷ್ಠವಾದ ಶ್ರುತಿಲಿಂಗಗಳಿಂದ ಬೇರೆ ಕಡೆಯಷ್ಟೇ ಪ್ರಸಿದ್ಧವಾಗಿರಬೇಕೆಂದು ಹೇಳಲಾಗಿದೆ) ಸಾವಕಾಶವಾದ ಶ್ರುತಿಲಿಂಗಾದಿಗಳಿಂದ ಬೇರೆ ಕಡೆ ಪ್ರಸಿದ್ಧವಾಗಿದ್ದರೆ ಅನ್ಯತ್ರಪ್ರಸಿದ್ಧವೆನ್ನಿಸುತ್ತದೆ. ನಿರವಕಾಶಶ್ರುತಿಲಿಂಗಾದಿಪ್ರಮಾಣಗಳಿಂದ ಬೇರೆಡೆ ಪ್ರಸಿದ್ಧವಾಗಿದ್ದರೆ ಅನ್ಯತ್ರೈವಪ್ರಸಿದ್ಧವೆನಿಸುತ್ತದೆ. ಪ್ರಕೃತ ಜ್ಯೋತಿಪ್ರಕರಣವು ಅಗ್ನಿಯಲ್ಲಿ ನಿರವಕಾಶವಾಗಿರುವುದರಿಂದ ಅನ್ಯತ್ರೈವಪ್ರಸಿದ್ಧಶಬ್ದಗಳನ್ನು ಸಮನ್ವಯ ಮಾಡುವ ನಾಲ್ಕನೆಯ ಪಾದದಲ್ಲಿ ಸೇರಬೇಕಲ್ಲವೇ?

ಸಮಾಧಾನ - ಇದು ತಪ್ಪು. ಜ್ಯೋತಿಪ್ರಕರಣವು ಅಗ್ನಿಯಲ್ಲಿ ನಿರವಕಾಶವಾಗಿದ್ದರೂ ಜ್ಯೋತಿಯೆಂಬ ನಾಮವು ವಿಷ್ಣುವಿನಲ್ಲಿ ಸಾವಕಾಶವಾಗಿದೆ. ಅನ್ಯತ್ರೈವಪ್ರಸಿದ್ಧವೆನಿಸಬೇಕಾದರೆ ನಾಮವೂ ಕೂಡ ಸಾವಕಾಶವಾಗಿರಬಾರದು. ದುಃಖೀ, ಬದ್ಧಃ ಇತ್ಯಾದಿ ನಾಮಗಳು ಹೇಗೆ ವಿಷ್ಣುವಿನಲ್ಲಿ ಸಾವಕಾಶ-ವಾಗಿಲ್ಲವೋ ಅದರಂತೆ. ಹಿಂದೆ ಆನಂದಮಯಾಧಿಕರಣದ ಪ್ರಾರಂಭದಲ್ಲಿ ಹೇಳಿದ ಅನ್ಯತ್ರೈವಪ್ರಸಿದ್ಧಿಯ ಲಕ್ಷಣವನ್ನು ಜ್ಯೋತಿಶಬ್ದದ ಸಮನ್ವಯದಲ್ಲಿ ಮಾಡಲಾಗದು.

ಶಂಕೆ - ಜ್ಯೋತಿಪ್ರಕರಣವು ಅನ್ಯತ್ರಪ್ರಸಿದ್ಧಿಯೆಂದು ಹೇಳುತ್ತಿದ್ದೀರಿ. ಆದರೆ ಟೀಕೆಯಲ್ಲಿ 'ಲೋಕತಃ ಅನ್ಯತ್ರಪ್ರಸಿದ್ಧಾನಾಂ ಜ್ಯೋತಿರಾದಿಶಬ್ದಾನಾಂ' ಎಂದು ಜ್ಯೋತಿಶಬ್ದವನ್ನಷ್ಟೇ ಅನ್ಯತ್ರಪ್ರಸಿದ್ಧವೆಂದಿದ್ದಾರೆ. ಈ ಟೀಕೆಯ ವಿರೋಧವನ್ನು ಹೇಗೆ ಪರಿಹರಿಸುತ್ತೀರಿ?

ಸಮಾಧಾನ - ಹಿಂದಿನ ಅಂತರಧಿಕರಣದಲ್ಲಿ ಜ್ಯೋತಿಶಬ್ದದ ಪರ್ಯಾಯವೆನಿಸಿದ ಅಗ್ನಿಶಬ್ದವನ್ನಷ್ಟೇ ಸಮನ್ವಯ ಮಾಡಿದ್ದಾರೆ. ನೇರವಾಗಿ ಜ್ಯೋತಿಶಬ್ದವನ್ನು ಸಮನ್ವಯ ಮಾಡಿಲ್ಲ. ಆದ್ದರಿಂದ ಲೋಕತಃ ಅನ್ಯತ್ರಪ್ರಸಿದ್ಧವೆಂಬ ಟೀಕೆಯ ಮಾತು ತಪ್ಪಾಗುವುದಿಲ್ಲ. ಅಥವಾ ಜ್ಯೋತಿಶಬ್ದವನ್ನೇ ನೇರವಾಗಿ ಸಮನ್ವಯ ಮಾಡಿದ್ದರೂ ಆಪಾತತಃ ಅಗ್ನಿ ಮೊದಲಾದವರಲ್ಲಿ ಲೋಕಪ್ರಸಿದ್ಧಿಯ ವಿವಕ್ಷೆಯಿಂದ ಟೀಕೆಯ ಮಾತು ತಪ್ಪಲ್ಲ. ಅಥವಾ ಜ್ಯೋತಿಶಬ್ದವಿರುವ ಸಂಪೂರ್ಣ ಪ್ರಕರಣವು ಲೋಕತಃ ಅನ್ಯತ್ರಪ್ರಸಿದ್ಧ-ವಾದ್ದರಿಂದ ಅದರಲ್ಲಿ ಸೇರಿರುವ ಜ್ಯೋತಿಃಶಬ್ದವೂ ಸಹ ಅನ್ಯತ್ರಪ್ರಸಿದ್ಧವೇ ಆಗುತ್ತದೆ. ಹೀಗೆ ಪರಂಪರಯಾ ಅನ್ಯತ್ರಪ್ರಸಿದ್ಧಿಯ ವಿವಕ್ಷೆಯು ಟೀಕೆಯ ಮಾತಿನಲ್ಲಿ ಅಡಗಿದೆಯೆಂದು ತಿಳಿಯಬಹುದು. ಅಥವಾ ಹಿಂದಿನ ಪ್ರಾಣಾದ್ಯಧಿಕರಣಗಳಲ್ಲಿ ಅನ್ಯತ್ರಪ್ರಸಿದ್ಧಿಗೆ ಬಾಧಕವಾದ ನಿರವಕಾಶವಿಷ್ಣುಲಿಂಗವನ್ನು ಹೇಳಿದಂತೆ ಇಲ್ಲಿ ಅಂತಹ ನಿರವಕಾಶಲಿಂಗಗಳಿರುವುದಿಲ್ಲ. ಆದ್ದರಿಂದಲೂ ಅನ್ಯತ್ರಪ್ರಸಿದ್ಧವೆಂದು ಹೇಳಿರ-ಬಹುದು.

ಶಂಕೆ - ಹಿಂದಿನ ಅಂತರಧಿಕರಣದಲ್ಲಿ ಕೇವಲ ಜ್ಯೋತಿಶಬ್ದವನ್ನಷ್ಟೇ ಸಮನ್ವಯ ಮಾಡಲಾಗಿದೆ. ಈ ಅಧಿಕರಣದಲ್ಲಿ ಸಂಪೂರ್ಣಜ್ಯೋತಿಪ್ರಕರಣವನ್ನು ಸಮನ್ವಯ ಮಾಡುತ್ತಿದ್ದೇವೆಂದು ಹೇಳಿರಿ. ಪ್ರಕರಣವನ್ನು ಸಮನ್ವಯ ಮಾಡುವುದೇನೂ ತಪ್ಪಲ್ಲ. ಮೂರನೆಯ ಪಾದದಲ್ಲಿರುವ 'ಈಕ್ಷತಿ ಕರ್ಮವ್ಯಪದೇಶಾತ್ ಸಃ' ಎಂಬ ಅಧಿಕರಣದಲ್ಲಿ ಸ್ಥಾನವನ್ನು (ಪ್ರಕರಣಗಳ ಸಮೂಹಸ್ಥಾನ) ಸಮನ್ವಯ ಮಾಡಿದ್ದಾರೆ. ಅದರಂತೆ ಇಲ್ಲಿ ಪ್ರಕರಣವನ್ನು ಸಮನ್ವಯ ಮಾಡಿದರೆ ಏನು ತಪ್ಪು? ನಾಮಾತ್ಮಕಶಬ್ದಗಳ ಸಮನ್ವಯ ಮಾಡುವ ಪಾದದಲ್ಲಿ ಸಂಗತಿಯು ದೊರೆಯಲಾರದೆಂದು ಪ್ರಶ್ನಿಸಬಾರದು. ಅಂತರಧಿ-ಕರಣದಲ್ಲಿ ಲಿಂಗಾತ್ಮಕಶಬ್ದ ಸಮನ್ವಯವನ್ನು ಮಾಡಿದರೂ ಫಲತಃ ಪಾದಸಂಗತಿಯನ್ನು ಹೇಳಿದಂತೆ ಇದಕ್ಕೂ ಕೂಡ ಫಲತಃ ಪಾದಸಂಗತಿಯನ್ನು ಹೇಳಬಹುದಲ್ಲವೇ?

ಸಮಾಧಾನ - ಹಿಂದಿನ ಅಧಿಕರಣಗಳಲ್ಲಿ ನಾಮಾತ್ಮಕಶಬ್ದಗಳ ಸಮನ್ವಯ ಮಾಡಿದ್ದರಿಂದ ಬುದ್ಧಿಯಲ್ಲಿ ನಾಮಾತ್ಮಕಶಬ್ದಗಳ ಸಮನ್ವಯವೇ ಉಪಸ್ಥಿತವಾಗುತ್ತದೆ. ಅದಕ್ಕೆ ವಿರುದ್ಧವಾಗಿ ಬುದ್ಧಿಯಲ್ಲಿ ಸನ್ನಿಹಿತವಾಗದ ಪ್ರಕರಣದ ಸಮನ್ವಯವು ಅನುಚಿತವಾಗುತ್ತದೆ. ನಾಮಾತ್ಮಕಶಬ್ದಗಳ ಸಮನ್ವಯದಿಂದ ಆಯಾಯ ಪ್ರಕರಣಗಳೂ ಸಹ ವಿಷ್ಣುವಿನಲ್ಲಿ ಸಮನ್ವಯವಾಗುತ್ತವೆಂದು ಹಿಂದಿನ ಅಧಿಕರಣಗಳಲ್ಲಿ

ಸಿದ್ಧವಾಗಿದೆ. ಆದ್ದರಿಂದ ಪ್ರಕರಣದ ಸಮನ್ವಯವು ಅನುಚಿತವಲ್ಲವೆಂದು ಪ್ರಶ್ನಿಸಬಾರದು. ಇದು ನಾಮಪಾದವಾದ್ದರಿಂದ ನೇರವಾಗಿ ನಾಮಾತ್ಮಕಶಬ್ದಗಳ ಸಮನ್ವಯವನ್ನೇ ಪ್ರತಿಯೊಂದು ಅಧಿಕರಣಗಳಲ್ಲಿ ಮಾಡಲಾಗಿದೆ ಹೊರತು ಪ್ರಕರಣದ ಸಮನ್ವಯವನ್ನು ನೇರವಾಗಿ ಮಾಡುತ್ತಿಲ್ಲ. ಅದಕ್ಕನುಸಾರಿಯಾಗಿ ಈ ಅಧಿಕರಣದಲ್ಲಿಯೂ ನೇರವಾದ ನಾಮಾತ್ಮಕಶಬ್ದದ ಸಮನ್ವಯವೇ ಬುದ್ಧಿಸ್ಥವಾಗುತ್ತದೆ. ಮತ್ತು ನಾಮಾತ್ಮಕಶಬ್ದಗಳ ಸಮನ್ವಯ ಮೂಲಕವಾಗಿ ಪ್ರಕರಣದ ಸಮನ್ವಯವನ್ನು ಹೇಳುವುದೇ ಸ್ವರಸ ಹೊರತು ಪ್ರಕರಣ ಸಮನ್ವಯ ಮೂಲಕವಾಗಿ ನಾಮಾತ್ಮಕಶಬ್ದಗಳ ಸಮನ್ವಯವನ್ನು ಹೇಳುವುದು ಅನುಚಿತ. 'ಈಕ್ಷತಿ ಕರ್ಮ' ಇತ್ಯಾದಿ ಸೂತ್ರದಲ್ಲಿ ಸ್ಥಾನಸಮನ್ವಯವನ್ನು ಮಾಡಿರಬಹುದು. ಆದರೆ 'ತದೇವ ಸೋಮ್ಯ' ಎಂಬಲ್ಲಿರುವ ತತ್ ಎಂಬ ನಾಮಾತ್ಮಕಶಬ್ದದ ಸಮನ್ವಯಮೂಲಕವಾಗಿಯೇ ನಾಮಸಮನ್ವಯವನ್ನು ಮಾಡಿದ್ದಾರೆ ಎಂಬ ಸೂಕ್ಷ್ಮವನ್ನು ಗಮನಿಸಬೇಕು.

ವಿಚಾರ ಮಾಡಿದರೆ ಆಕ್ಷೇಪದ ತಳವೇ ಸರಿಯಿಲ್ಲ. ಪೂರ್ವೋಕ್ತಿ ಮತ್ತು ಅನ್ಯತ್ರಪ್ರಸಿದ್ಧಿಗಳಿಂದ ಶಬ್ದಗಳು ಉಭಯತ್ರಪ್ರಸಿದ್ಧವೆನಿಸುತ್ತದೆಂದು ಇಷ್ಟೆಲ್ಲಾ ಆಕ್ಷೇಪವನ್ನು ಮಾಡಲಾಗಿದೆ. ಆದರೆ ಯಾವ ಎರಡು ಶಬ್ದಗಳಲ್ಲಿ ಶ್ರುತಿಲಿಂಗ ಮೊದಲಾದ ಪ್ರಮಾಣಗಳು ಸಮಾನವಾಗಿರುತ್ತವೋ ಅಥವಾ ಪ್ರವೃತ್ತಿನಿಮಿತ್ತವು ಸಮಾನವಾಗಿರುತ್ತದೋ ಅಂತಹ ಶಬ್ದಗಳು ಉಭಯತ್ರಪ್ರಸಿದ್ಧವೆನಿಸುತ್ತದೆ. ಪ್ರಕೃತ ಜ್ಯೋತಿಶಬ್ದದಲ್ಲಿ ಶ್ರುತಿಲಿಂಗಾದಿಗಳ ಸಾಮ್ಯವನ್ನಾಗಲೀ ಪ್ರವೃತ್ತಿನಿಮಿತ್ತದ ಸಾಮ್ಯವನ್ನಾಗಲೀ ಹೇಳಲಾಗದ ಕಾರಣ ಉಭಯತ್ರಪ್ರಸಿದ್ಧವಾಗುತ್ತದೆಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಹಾಗಾಗಿದ್ದಲ್ಲಿ ಅಸಂಗತಿಯು ಬರುತ್ತಿತ್ತು.

'ಆಕಾಶೋಽರ್ಥಾಂತರತ್ವಾದಿವ್ಯಪದೇಶಃ' ಇತ್ಯಾದಿ ಮೂರನೆಯ ಪಾದದ ಅಧಿಕರಣದಲ್ಲಿ ಆಕಾಶ-ಶಬ್ದವು ಉಭಯತ್ರಪ್ರಸಿದ್ಧವಾಗಲು ಪೂರ್ವೋಕ್ತಿ ಹಾಗೂ ಅನ್ಯತ್ರಪ್ರಸಿದ್ಧಿಗಳು ಕಾರಣವಾಗಿಲ್ಲ. ಪ್ರವೃತ್ತಿ-ನಿಮಿತ್ತಸಾಮ್ಯವೂ ಕಾರಣವಾಗಿಲ್ಲ. ಹೊರತಾಗಿ ವೈ ನಾಮ ಎಂಬ ಶ್ರುತಿಯಲ್ಲಿರುವ ನಿಪಾತದಿಂದ ತೋರುವ ಲೋಕಪ್ರಸಿದ್ಧಿಯೇ ಕಾರಣವಾಗಿದೆಯೆಂದು ಪಾದಾಂತ್ಯಪ್ರಾಣಾಧಿಕರಣದಲ್ಲಿ ಸಮರ್ಥಿಸು-ತ್ತೇವೆ.

ಭಾಷ್ಯದ ಪ್ರಕಾರ ಜ್ಯೋತಿರಧಿಕರಣಕ್ಕೆ ಆನಂದಮಯಾಧಿಕರಣದಿಂದ ಸಂಗತಿಯು ತಿಳಿಯುತ್ತದೆ. ಹೀಗಿರುವಾಗ ಆನಂದಮಯಾಧಿಕರಣದ ಅನಂತರವಷ್ಟೇ ಜ್ಯೋತಿರಧಿಕರಣವನ್ನು ಉಲ್ಲೇಖಿಸುವುದು ಉಚಿತ. ಪ್ರಾಣಾಧಿಕರಣದ ಅನಂತರ ಉಲ್ಲೇಖಿಸಿದ್ದು ತಪ್ಪಲ್ಲವೇ? ಎಂಬ ಪ್ರಶ್ನೆಗೆ ಪ್ರಾಣಾಧಿಕರಣದಿಂದ ಸಂಗತಿಯನ್ನು 'ಪ್ರಾಣಾಧಿಕರಣೇ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. ಈ ವಿಷಯವು ಮುಂದೆ ಮತ್ತಷ್ಟು ಸ್ಪಷ್ಟವಾಗುತ್ತದೆ. ಪ್ರಾಣಾಧಿಕರಣದಿಂದ ಜ್ಯೋತಿರಧಿಕರಣಕ್ಕೆ ಪ್ರತ್ಯುದಾಹರಣರೂಪಸಂಗತಿಯನ್ನು ತಿಳಿಯಬೇಕು. 'ಪೂರ್ವನ್ಯಾಯಾತ್ಯತೋ ಯತ್ರ ಪ್ರತ್ಯುದಾಹರಣಾ ತು ಸಾ' (ಹಿಂದಿನ ಅಧಿಕರಣದ ನ್ಯಾಯವನ್ನು ಆಕ್ಷೇಪಿಸಿ ಮುಂದಿನ ಅಧಿಕರಣದಲ್ಲಿ ಸಮರ್ಥಿಸಿದಾಗ ಪ್ರತ್ಯುದಾಹರಣ ಎನಿಸುತ್ತದೆ). ಭಾಷ್ಯದಲ್ಲಿ ಆನಂದಮಯಾಧಿಕರಣದಿಂದ ಸಂಗತಿಯನ್ನು ತೋರಿಸಿಲ್ಲ. 'ಯೋ ವೇದನಿಹಿತಂ ಗುಹಾಯಾಮ್ ಇತ್ಯುಕ್ತಮ್' ಎಂಬ ಭಾಷ್ಯದಲ್ಲಿಈ ಅಧಿಕರಣದ ಪ್ರಯೋಜನವನ್ನು ಆನಂದಮಯಾಧಿ

ಕರಣದಲ್ಲಿ ಪರ್ಯವಸಾನ ಮಾಡಿದ್ದಾರೆ. ಒಂದುವೇಳೆ ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ವಿಷ್ಣುವಿನಿಂದ ಭಿನ್ನವಾದರೆ ಜ್ಯೋತಿಯಲ್ಲಿ ಶ್ರುತವಾದ ಗುಹಾನಿಹಿತತ್ವವೂ ಕೂಡ ವಿಷ್ಣುವಿನ ಧರ್ಮವಾಗದು. ಗುಹಾನಿಹಿತತ್ವಧರ್ಮದಿಂದ ಯುಕ್ತನಾದ ಆನಂದಮಯನೂ ವಿಷ್ಣುವಾಗಲಾರನೆಂದು ಆನಂದಮಯಾಧಿ-ಕರಣವನ್ನು ಆಕ್ಷೇಪಿಸಿ ಪೂರ್ವಪಕ್ಷ. ಇದನ್ನು ನಿರಾಕರಿಸುವ ಮೂಲಕ ಸಿದ್ಧಾಂತವನ್ನು ಸ್ಥಾಪನೆ ಮಾಡಿದ್ದರಿಂದ ಜ್ಯೋತಿರಧಿಕರಣದಲ್ಲಿ ಮಾಡಿದ ವಿಚಾರವು ಸಾರ್ಥಕವಾಗಿದೆ. ಅಂತರಧಿಕರಣದಲ್ಲಿ ಸಮರ್ಥಿಸಿದಂತೆ ಹೀಗೆ ಪ್ರಯೋಜನವನ್ನು ತಿಳಿದುಕೊಳ್ಳಬೇಕು.

ಆಕ್ಷೇಪ - ಆನಂದಮಯಾಧಿಕರಣವನ್ನು ಆಕ್ಷೇಪಿಸಿ ಪ್ರಯೋಜನವನ್ನು ಹೇಳುವುದಕ್ಕಿಂತ ಅಂತರಧಿಕರಣದ ನ್ಯಾಯವನ್ನು ಆಕ್ಷೇಪಿಸಿ ಪ್ರಯೋಜನ ಹೇಳುವುದು ಹೆಚ್ಚು ಸ್ವರಸ. ಒಂದು ವೇಳೆ ಜ್ಯೋತಿಯು ವಿಷ್ಣುವಿಗಿಂತ ಭಿನ್ನವಾದರೆ ಗುಹಾನಿಹಿತವೂ ಕೂಡ ಅದೇ ಆಗುತ್ತದೆ. ಅಂತಸ್ಥತ್ವವೂ ಅದರಲ್ಲಿಯೇ ಬರಬೇಕು. ಹೀಗೆ ಅಂತರಧಿಕರಣವನ್ನು ಆಕ್ಷೇಪಿಸುವುದು ಸುಲಭ. ಈ ಪಕ್ಷದಲ್ಲಿ ಜ್ಯೋತಿಶಬ್ದವು ಉಭಯತ್ರಪ್ರಸಿದ್ಧ ಎಂಬ ಶಂಕೆಯೇ ಹುಟ್ಟಲು ಸಾಧ್ಯವಿಲ್ಲ. ಯಾವರೀತಿಯಾಗಿ ಪ್ರಾಣಾಧಿ -ಕರಣದಲ್ಲಿ ಹೇಳಿದ ಪ್ರಮೇಯವನ್ನು ಆಕ್ಷೇಪಿಸಿ ಅಂತಿಮಪ್ರಾಣಾಧಿಕರಣವು ಹೊರಟಿದ್ದರಿಂದ ಉಭಯತ್ರಪ್ರಸಿದ್ಧವೆನಿಸದೋ ಅದರಂತೆ ಇದೂ ಕೂಡ ಅಂತರಧಿಕರಣದ ನ್ಯಾಯವನ್ನು ಆಕ್ಷೇಪಿಸಿದ್ದರಿಂದ ಉಭಯತ್ರಪ್ರಸಿದ್ಧವೆನಿಸದು.

ಗುಹಾನಿಹಿತವೇ ಬೇರೆ ಅಂತಸ್ಥವೇ ಬೇರೆ ಎಂದು ಶಂಕಿಸಬಾರದು. ಅಂತಸ್ಥನಲ್ಲಿಯೂ ನಿಹಿತಂ ಗುಹಾಸು ಎಂದು ಗುಹಾನಿಹಿತತ್ವಧರ್ಮವನ್ನು ಅಂತಸ್ಥತ್ವಾಧಿಕರಣದಲ್ಲಿ ಸಮರ್ಥಿಸಲಾಗಿದೆ. ಮತ್ತು ಜ್ಯೋತಿಯು ಗುಹಾನಿಹಿತವಾಗಿದೆ. ಅದನ್ನು 'ಯೋ ವೇದ ನಿಹಿತಂ' ಎಂಬ ಮಂತ್ರವರ್ಣವು ಪ್ರತಿಪಾದಿಸುತ್ತಿದೆ. ಈ ಮಂತ್ರವರ್ಣದಲ್ಲಿ ಪ್ರತಿಪಾದ್ಯವಾದ ವಸ್ತುವೇ ಆನಂದಮಯ ಎನಿಸಿದೆ. ಹಾಗಾಗಿ ಅಂತಹ ಆನಂದಮಯನೇ ಜ್ಯೋತಿಯೆನಿಸಿದ್ದಾನೆ. ಹೀಗೆ ಆಕ್ಷೇಪಮಾಡುವುದು ವಕ್ರಮಾರ್ಗ. ಈ ಮಾರ್ಗಕ್ಕಿಂತ ಗುಹಾನಿಹಿತತ್ವಧರ್ಮದಿಂದ ಕೂಡಿದ ಆನಂದಮಯನನ್ನು ಆಕ್ಷೇಪಿಸುವುದು ಋಜು-ಮಾರ್ಗವಲ್ಲವೇ?

ಸಮಾಧಾನ - ಹಿಂದಿನ ಮೂರು ಅಧಿಕರಣಗಳಲ್ಲಿ ಆನಂದಮಯಾಧಿಕರಣವನ್ನು ಆಕ್ಷೇಪಿಸಿದ್ದರಿಂದ ಈ ಅಧಿಕರಣದಲ್ಲಿಯೂ ಆನಂದಮಯಾಧಿಕರಣದ ಆಕ್ಷೇಪವೇ ಬುದ್ಧಿಸ್ಥವಾಗುತ್ತದೆ. ಅದಕ್ಕನುಸಾರಿಯಾಗಿ ಆನಂದಮಯಾಧಿಕರಣವನ್ನು ಆಕ್ಷೇಪಿಸಿದಾಗ ಬುದ್ಧಿಯಲ್ಲಿ ಕ್ಲೇಶವಿಲ್ಲ. ಮತ್ತು ಆನಂದಮಯಾಧಿ ಕರಣವನ್ನು ಆಕ್ಷೇಪಿಸಿದಾಗ ವ್ಯವಹಿತವಾಗುತ್ತದೆಂಬ ದೋಷವನ್ನು ಹೇಳಬೇಕು. ಈ ದೋಷವು ಅಂತರಧಿ ಕರಣದ ಆಕ್ಷೇಪದಲ್ಲಿಯೂ ಸಮಾನ. ಅಷ್ಟೇ ಅಲ್ಲದೆ ಅಂತರಧಿಕರಣದ ನ್ಯಾಯವನ್ನು ಆಕ್ಷೇಪಿಸಿದಾಗ ಮುಂದೆ ಆನಂದಮಯಾಧಿಕರಣನ್ಯಾಯವನ್ನು ಆಕ್ಷೇಪಿಸಲೇಬೇಕಾಗುತ್ತದೆ. ಇಲ್ಲದಿದ್ದರೆ ಬ್ರಹ್ಮಜಿಜ್ಞಾಸೆಯ ಆಕ್ಷೇಪದಲ್ಲಿ ಪರ್ಯವಸಾನವೇ ಆಗುವುದಿಲ್ಲ. ಆದ್ದರಿಂದ ನೇರವಾಗಿ ಆನಂದಮಯಾಧಿಕರಣವನ್ನೇ ಆಕ್ಷೇಪಿಸಲು ಬರುವಾಗ ಅಂತರಧಿಕರಣದ ಮೂಲಕ ಆನಂದಮಯಾಧಿಕರಣವನ್ನು ಆಕ್ಷೇಪಿಸುವುದು ಅನಾವಶ್ಯಕ.

ಶಂಕೆ - 'ವಿ ಮೇ ಕರ್ಣಾ ಪತಯತಃ' ಎಂಬ ವಿಷಯವಾಕ್ಯದಿಂದ ಅದೃಶ್ಯತ್ವಧರ್ಮವು ಕೇಳಿಸುತ್ತಿದೆ. ಈ ಧರ್ಮವು ಜ್ಯೋತಿಯಲ್ಲಿ ಕೇಳಿಸುತ್ತಿರುವಂತೆ ಆನಂದಮಯನಲ್ಲೂ ಕೇಳಿಸುತ್ತಿದೆ. ಆದ್ದರಿಂದ ಆನಂದಮಯನು ಜ್ಯೋತಿಯಾಗುತ್ತಾನೆಂಬ ಆಕ್ಷೇಪವು ಋಜುವಾಗಿದೆ. ಇದನ್ನು ಬಿಟ್ಟು ವಕ್ರವೆನಿಸಿದ ಗುಹಾನಿಹಿತತ್ವವನ್ನು ಆಶ್ರಯಿಸುವುದು ಅನಾವಶ್ಯಕವಲ್ಲವೇ?

ಸಮಾಧಾನ - ಅದೃಶ್ಯತ್ವಧರ್ಮದ ಮೂಲಕವಾಗಿ ಆಕ್ಷೇಪ ಮಾಡುವುದೇನೂ ತಪ್ಪಲ್ಲ. ಆದರೆ ಅದೃಶ್ಯತ್ವಧರ್ಮವನ್ನು 'ವಿ ಮೇ ಕರ್ಣಾ ಪತಯತಃ' ಇತ್ಯಾದಿ ಅನೇಕ ಪದಗಳ ಸಮಭಿವ್ಯಾಹಾರ-ದಿಂದಷ್ಟೇ ತಿಳಿಯಲು ಸಾಧ್ಯ. ಗುಹಾನಿಹಿತತ್ವಧರ್ಮವನ್ನಾದರೂ ಒಂದೇ ವಾಕ್ಯದಿಂದ ತಿಳಿಯಬಹುದು. ಇದು ಸುಲಭ. ಅಷ್ಟೇ ಅಲ್ಲದೆ ಜ್ಯೋತಿಶಬ್ದದ ಪಕ್ಕದಲ್ಲಿಯೇ ಗುಹಾನಿಹಿತತ್ವವು ಕೇಳಿಸುತ್ತಿರುವುದರಿಂದ ಗುಹಾನಿಹಿತತ್ವದ ಮೂಲಕ ಆಕ್ಷೇಪ ಮಾಡುವುದು ಉತ್ತಮಮಾರ್ಗವಾಗಿದೆ.

**गुरुराजीयम् – अनन्तरसङ्गतिरिति** । आतिदेशिकीत्यर्थः ।

### ಸಂಶಯ

## तात्पर्यचन्द्रिका

**अत्र ज्योतिः किमग्निः किं वा विष्णुः इति चिन्ता । तदर्थं किं ज्योतिश्श्रुति-प्रसिद्ध्यनुसारेण कर्णादिविदूरत्वलिङ्गं बाध्यमुत विपरीतमिति । तदर्थं किं श्रुत्यनुग्राहकं सूक्तं निरवकाशमुत सावकाशमिति ।**

ಅನುವಾದ - ಈ ಅಧಿಕರಣದಲ್ಲಿ ಜ್ಯೋತಿಯು ಅಗ್ನಿಯೋ ಅಥವಾ ವಿಷ್ಣುವೋ? ಎಂದು ಸಂಶಯ. ಇದಕ್ಕಾಗಿ ಜ್ಯೋತಿಶ್ರುತಿಪ್ರಸಿದ್ಧಿಯಂತೆ ಕರ್ಣಾದಿವಿದೂರತ್ವವು ಬಾಧಿತವಾಗುತ್ತದೋ ಅಥವಾ ಲಿಂಗದಿಂದಲೇ ಶ್ರುತಿಯು ಬಾಧಿತವಾಗುತ್ತದೋ? ಇದರ ಪರಿಹಾರಕ್ಕಾಗಿ ಶ್ರುತ್ಯನು-ಗ್ರಾಹಕವಾದ ಸೂಕ್ತವು ನಿರವಕಾಶವೋ ಅಥವಾ ಸಾವಕಾಶವೋ? ಎಂಬ ಸಂಶಯವು ಪರಿಹಾರ-ವಾಗಬೇಕು.

**प्रकाशः – अत्रेति** ॥

**वि मे कर्णा पतयतो वि चक्षुर्वी ३ दं ज्योतिर्हृदय आहितं यत् ।**
**वि मे मनश्चरति दूर आधीः किं स्विद्वक्ष्यामि किमु नू मनिष्ये ॥**

इत्यग्निसूक्तादिगतज्योतिरादिशब्दो विषय इत्यर्थः ॥ **अग्निरिति** ॥ कोट्यन्तर-प्राप्त्यभावस्य वक्ष्यमाणत्वादिति भावः ॥ **विपरीतमिति** ॥ लिङ्गात् श्रुतिर्बाध्या इत्यर्थः । यदि सूक्तं निरवकाशं, तदा तदनुगृहीतया बलीयस्या कृत्या लिङ्गस्य

बाधादग्निरिति पूर्वपक्षे फलम्, यदि सावकाशं तदा दुर्बलया श्रुत्या निरवकाशलिङ्गबाधायोगात् विष्णुरिति सिद्धान्ते फलमिति स्पष्टत्वात् फलफलिभावो नोक्तः ।

द्वावत्र पूर्वपक्षौ । एकस्तावदभ्यधिकाशङ्कां विनैव ज्योतिश्श्रुतिविष्णुलिङ्गयोः पूर्वोत्तरपक्षप्रापकयोस्सावकाशत्वमुपेत्य जात्या बलवत्त्या श्रुत्यैव लिङ्गबाधः, सूक्तस्थत्वं त्वभ्युच्चययुक्तित्वेनोच्यत इति । अन्यस्तु विष्णुलिङ्गस्य निरवकाशत्वमुपेत्य श्रुतिमात्रेण पूर्वपक्षोदयायोगादभ्यधिकाशङ्केति ।

आद्यस्तु टीकानुसारी । अन्त्यस्तु सुधानुसारी । तत्रेयं चिन्तापरम्परा द्वितीयपूर्वपक्षानुरोधेन । आद्यपूर्वपक्षे तु 'उत विपरीतं' इति द्वितीयचिन्ताऽनन्तरं तदर्थं श्रुत्यनुग्राहकमित्यत्र तदर्थं लिङ्गं सावकाशमुत निरवकामिति चिन्ता द्रष्टव्या । यदि सावकाशं तदा श्रुत्या लिङ्गबाधादग्निरिति पूर्वपक्षे फलम्, यदि निरवकाशं तेन सावकाशश्रुतिबाधाद्विष्णुरिति सिद्धान्ते फलं ध्येयम् । अत्र ज्योतिरग्निर्विष्णुर्वा, तदर्थं श्रुत्या लिङ्गं बाध्यं उत लिङ्गात् श्रुतिः, तदर्थं श्रुतिबाधेन मुख्यार्थहानिरुत नेति, तदर्थं ज्योतिश्श्रुतिप्रवृत्तिनिमित्तं विष्णौ न युक्तमुत युक्तमिति, तदर्थं तमोविरोधित्वं प्रवृत्तिनिमित्तमुत प्रकाशत्वादिरूपमिति प्रमेयाश्रिताधिकाशङ्कोपयुक्ता चिन्तापरम्परा स्पष्टैवेति, प्रमाणाश्रिताशङ्कोपयुक्तैव सा प्रदर्शितेति ध्येयम् ।

ವಿವರಣೆ - 'ವಿ ಮೇ ಕರ್ಣಾ ಪತಯತೋ ವಿವಕ್ಷುರ್ವೀ೭ದಂ ಜ್ಯೋತಿರ್ಹೃದಯ ಆಹಿತಂ ಯತ್ । ವಿ ಮೇ ಮನಶ್ಚರತಿ ದೂರ ಆಧೀಃ ಕಿಂ ಸ್ವಿದ್ವಕ್ಷ್ಯಾಮಿ ಕಿಮು ನೂ ಮನಿಷ್ಯೇ' (ನನ್ನ ಹೃದಯದಲ್ಲಿ ಅಡಗಿರುವ ಜ್ಯೋತಿಗೆ ವಿರುದ್ಧವಾಗಿ ನನ್ನ ಕಿವಿ ಮೊದಲಾದ ಇಂದ್ರಿಯಗಳು ಓಡುತ್ತಿವೆ. ಮನಸ್ಸೂ ಕೂಡ ದೂರ ಓಡುತ್ತಿದೆ. ಆದ್ದರಿಂದ ಜ್ಞಾನಿಯಾಗಿದ್ದರೂ ನಾನು ಆದರ ಬಗ್ಗೆ ಏನೆಂದು ಹೇಳಲಿ, ಏನೆಂದು ಮನನ ಮಾಡಲಿ). ಈ ಅಗ್ನಿಸೂಕ್ತದಲ್ಲಿರುವ ಜ್ಯೋತಿ ಮೊದಲಾದ ಶಬ್ದಗಳು ಈ ಅಧಿಕರಣದ ವಿಷಯ.

ಪೂರ್ವಪಕ್ಷದ ಫಲ - ಮೊದಲನೆಯ ಸಂಶಯ ಕೋಟಿಯಲ್ಲಿ ಅಗ್ನಿಯೋ ಅಥವಾ ವಿಷ್ಣುವೋ ? ಎಂದಷ್ಟೇ ಹೇಳಿದ್ದಾರೆ. ವಸ್ತುತಃ ಅಗ್ನಿ ಎಂಬ ಭೂತ ಮತ್ತು ಗ್ರಹನಕ್ಷತ್ರಾದಿಗಳು ಜ್ಯೋತಿಃಶಬ್ದದಿಂದ ಪ್ರತಿಪಾದ್ಯಗಳಾದ್ದರಿಂದ ಇವುಗಳನ್ನು ಸಂಶಯಕೋಟಿಯಲ್ಲಿ ಸೇರಿಸಬಹುದಿತ್ತು. ಆದರೆ ಸಂಶಯಕೋಟಿಯಲ್ಲಿ ಅಗ್ನಿದೇವತೆಯನ್ನು ಬಿಟ್ಟು ಉಳಿದವುಗಳು ಯಾವುದೂ ಸೇರುವುದಿಲ್ಲವೆಂದು ಮುಂದೆ

ಗ್ರಂಥಕಾರರೇ ಉಪಪಾದಿಸುತ್ತಾರೆ. ಒಂದು ವೇಳೆ ಸೂಕ್ತವು ನಿರವಕಾಶವಾದರೆ ನಿರವಕಾಶಸೂಕ್ತದ ಬೆಂಬಲವಿರುವ ಶ್ರುತಿಯು ಬಲಿಷ್ಠವಾಗುತ್ತದೆ. ಇಂತಹ ಶ್ರುತಿಯಿಂದ ಲಿಂಗವು ಬಾಧಿತವಾದಾಗ ಅಗ್ನಿಯು ಜ್ಯೋತಿಯೆನಿಸುತ್ತಾನೆ ಎಂದು

ಸಿದ್ಧಾಂತದ ಫಲ - ಒಂದು ವೇಳೆ ಅಗ್ನಿಸೂಕ್ತವು ಸಾವಕಾಶವಾದರೆ ಅದರ ಬೆಂಬಲವಿಲ್ಲದ ಕಾರಣ ಶ್ರುತಿಯು ದುರ್ಬಲವಾಗುತ್ತದೆ. ಇಂತಹ ಶ್ರುತಿಯಿಂದ ನಿರವಕಾಶಲಿಂಗಕ್ಕೆ ಬಾಧವನ್ನು ಹೇಳಲಾಗದು. ಆವಾಗ ವಿಷ್ಣುವೇ ಜ್ಯೋತಿಯೆನಿಸುತ್ತಾನೆ' ಎಂದು.

ಹೀಗೆ ಫಲ-ಫಲಿಭಾವಗಳು ಸ್ಪಷ್ಟವಾದ್ದರಿಂದ ಗ್ರಂಥಕಾರರು ಉಲ್ಲೇಖಿಸಿಲ್ಲ.

ಈ ಅಧಿಕರಣದಲ್ಲಿ ಎರಡು ಬಗೆಯ ಪೂರ್ವಪಕ್ಷಗಳಿವೆ. (೧) ಅಭ್ಯಧಿಕಾಶಂಕೆಯನ್ನು ಮಾಡದೆಯೂ ಪೂರ್ವಪಕ್ಷವನ್ನು ರಚಿಸಬಹುದು. ಪೂರ್ವಪಕ್ಷಸ್ಥಾಪಕವಾದ ಜ್ಯೋತಿಶ್ರುತಿಯೂ ಸಾವಕಾಶವಾಗಿದೆ ಸಿದ್ಧಾಂತಸ್ಥಾಪಕವಾದ ವಿಷ್ಣುಲಿಂಗವೂ ಸಾವಕಾಶವಾಗಿದೆ. ಸಾವಕಾಶವಾದ ಇವೆರಡರಲ್ಲಿ ಯಾವುದು ಪ್ರಬಲ? ಎಂಬ ಪ್ರಶ್ನೆ ಬಂದರೆ ಶ್ರುತಿಯು ಸ್ವಭಾವತಃ ಬಲಿಷ್ಠವಾಗಿದೆ. ಇಂತಹ ಶ್ರುತಿಯಿಂದ ಲಿಂಗವು ಬಾಧಿತವಾಗುತ್ತದೆ ಎಂದು ಉತ್ತರಿಸಬೇಕು. ಈ ಪಕ್ಷದಲ್ಲಿ ಅಗ್ನಿಸೂಕ್ತವೆಂಬ ಪ್ರಕರಣವು ಅಧಿಕಯುಕ್ತಿಯಾಗಿ ಲಿಂಗವನ್ನು ಉಪೋದ್ಬಲಿಸುತ್ತದೆ. ಇದು ಟೀಕಾನುಸಾರಿ ಪೂರ್ವಪಕ್ಷ.

(೨) ವಿಷ್ಣುಲಿಂಗವನ್ನು ನಿರವಕಾಶವೆಂದು ಒಪ್ಪಿದಾಗ ಕೇವಲ ಶ್ರುತಿಯಿಂದ ಪೂರ್ವಪಕ್ಷ ಮಾಡಲಾಗದು. ಈ ಪಕ್ಷದಲ್ಲಿ ಅಭ್ಯಧಿಕಾಶಂಕೆಯನ್ನು ಅವಶ್ಯವಾಗಿ ಒಪ್ಪಿ ಪೂರ್ವಪಕ್ಷವನ್ನು ರಚಿಸಬೇಕಾಗುತ್ತದೆ. ಇದು ಸುಧೆಗೆ ಅನುಸಾರಿಯಾದ ಪೂರ್ವಪಕ್ಷ.

ಪ್ರಕೃತ ಗ್ರಂಥಕಾರರು ತೋರಿಸಿರುವ ಸಂಶಯಪರಂಪರೆಯು ಎರಡನೆಯ ಸುಧಾನುಸಾರಿ ಪೂರ್ವಪಕ್ಷವನ್ನು ಅನುಸರಿಸಿ ಹೊರಟಿದೆ. ಟೀಕಾನುಸಾರಿಯಾದ ಪೂರ್ವಪಕ್ಷಕ್ಕೆ ಅನುಸಾರಿಯಾದ ಸಂಶಯಪರಂಪರೆಯನ್ನು ಹೀಗೆ ತಿಳಿಯಬೇಕು. (೧) ಜ್ಯೋತಿಯು ಅಗ್ನಿಯೋ ಅಥವಾ ವಿಷ್ಣುವೋ? (೨)ಜ್ಯೋತಿಶ್ರುತಿಯಿಂದ ಲಿಂಗವು ಬಾಧಿತವೋ? ಲಿಂಗದಿಂದ ಶ್ರುತಿಯು ಬಾಧಿತವೋ? (೩)ಲಿಂಗವು ಸಾವಕಾಶವೋ ಅಥವಾ ನಿರವಕಾಶವೋ? ಒಂದುವೇಳೆ ಲಿಂಗವು ಸಾವಕಾಶವಾದರೆ ಶ್ರುತಿಯಿಂದ ಲಿಂಗವು ಬಾಧಿತವಾಗುತ್ತದೆ. ಜ್ಯೋತಿಃಶಬ್ದದಿಂದ ಅಗ್ನಿಯು ಪ್ರತಿಪಾದ್ಯನಾಗುತ್ತಾನೆಂಬುದು ಪೂರ್ವಪಕ್ಷದ ಫಲ. ಒಂದು ವೇಳೆ ಲಿಂಗವು ನಿರವಕಾಶವಾದರೆ ಸಾವಕಾಶವಾದ ಶ್ರುತಿಯು ಲಿಂಗದಿಂದ ಬಾಧಿತವಾಗುತ್ತದೆ. ಆವಾಗ ವಿಷ್ಣುವು ಜ್ಯೋತಿಯೆನಿಸುತ್ತಾನೆಂಬುದು ಸಿದ್ಧಾಂತದ ಫಲ. ಗ್ರಂಥಕಾರರು ತೋರಿಸಿದ ಸಂಶಯಪರಂಪರೆಯು ಪ್ರಮಾಣಾಶ್ರಿತಾಶಂಕೆಗೆ ಉಪಯುಕ್ತವಾಗಿದೆ.

ಪ್ರಮೇಯಾಶ್ರಿತ ಅಭ್ಯಧಿಕಾಶಂಕೆಗೆ ಉಪಯುಕ್ತವಾದ ಸಂಶಯಪರಂಪರೆಯು ಸ್ಪಷ್ಟವಾದ್ದರಿಂದ ಸ್ವತಃ ಊಹಿಸಿಕೊಳ್ಳಬೇಕು. ಅದು ಹೀಗೆ -- (೧) ಶ್ರುತಿಯಲ್ಲಿರುವ ಜ್ಯೋತಿಶಬ್ದದಿಂದ ಅಗ್ನಿಯು ಪ್ರತಿಪಾದ್ಯನೋ ವಿಷ್ಣುವೋ? (೨) ಶ್ರುತಿಯಿಂದ ಲಿಂಗವು ಬಾಧ್ಯವೋ? ಲಿಂಗದಿಂದ ಶ್ರುತಿಯು ಬಾಧ್ಯವೋ? (೩) ಶ್ರುತಿಯು ಬಾಧ್ಯವಾದಾಗ ಮುಖ್ಯಾರ್ಥವನ್ನು ಬಿಡಬೇಕೋ ಅಥವಾ ಇಲ್ಲವೋ?

(೪) ಜ್ಯೋತಿಶ್ರುತಿಯ ಪ್ರವೃತ್ತಿನಿಮಿತ್ತವು ವಿಷ್ಣುವಿನಲ್ಲಿ ಕೂಡುವುದಿಲ್ಲವೋ ಅಥವಾ ಕೂಡುತ್ತದೋ? (೫) ತಮೋವಿರೋಧಿತ್ವವು ಪ್ರವೃತ್ತಿನಿಮಿತ್ತವಾಗುತ್ತದೋ ಅಥವಾ ಪ್ರಕಾಶತ್ವಾದಿರೂಪವು ಪ್ರವೃತ್ತಿನಿಮಿತ್ತ-ವಾಗುತ್ತದೋ?' ಎಂದು ತಿಳಿಯಬೇಕು.

## ಸುಧೆಯಲ್ಲಿ ಹಾಗೂ ಟೀಕೆಯಲ್ಲಿ ವಿಭಿನ್ನ ಪೂರ್ವಪಕ್ಷಗಳು

### तात्पर्यचन्द्रिका

**पूर्वपक्षस्तु – युक्तः पूर्वत्र वायुसूक्तस्थस्य प्राणश्रुतिमात्रस्य निरवकाश-विष्णुलिङ्गै बाधः । अत्र तु ज्योतिश्श्रुतेः न बाधः, प्रकरणरूपेण सूक्तेन अनु-गृहीतत्वात् । यद्यपि ज्योतिश्शब्दः तमोविरोधिमात्रे प्रसिद्धः, तथाऽपि हृदया-हितत्वलिङ्गात्, 'त्वामग्ने तमसि' इत्यग्निशब्दसन्निधानाच्च अग्निपरः, न त्वग्निसूक्तस्थ-त्वात् ज्योतिश्शब्दोऽग्निपरः, तथात्वे सूक्तस्य अग्निश्रुतिसम्पादकत्वेन श्रुत्यनु-ग्राहकत्वायोगात् । एतेन – ज्योतिश्शब्दाग्निशब्दौ देवतापरौ चेत् अन्तरधिकरण-न्यायेन ब्रह्मपरौ, भूतपरौ चेत् आकाशाधिकरणन्यायेन ब्रह्मपरौ, सावकाशाग्निश्रुते-र्निरवकाशविष्णुलिङ्गैर्बाधात् ।**

**न चाग्निश्रुतिः प्रकरणानुगृहीतेति वाच्यम्, तत्तत्सूक्तस्थाग्न्यादिश्रुतीनां विष्णौ सावकाशत्वे सूक्तानामपि तथात्वात् । सर्वसूक्तानां वैष्णवत्वेऽपि इदमग्निसूक्तं इदं त्वन्यदिति व्यवस्था तु ''अभिव्यक्तेरित्याश्मरथ्यः'' इति वक्ष्यमाणन्यायेन युक्ता । एवञ्च सावकाशसूक्तस्य निरवकाशविष्णुलिङ्गैः सुतरां बाधेन पूर्वपक्षानुदय इति परास्तम् । सावकाशाग्निश्रुत्या सावकाशविष्णुलिङ्गबाधात् ।**

ಅನುವಾದ - ಪೂರ್ವಪಕ್ಷ - ಹಿಂದಿನ ಅಧಿಕರಣದಲ್ಲಿ ವಾಯುಸೂಕ್ತದ ಆಧಾರವಿಲ್ಲದ ಕೇವಲ ಪ್ರಾಣಶ್ರುತಿಗೆ ನಿರವಕಾಶವಿಷ್ಣುಲಿಂಗಗಳಿಂದ ಬಾಧವು ಹೇಳಲ್ಪಟ್ಟಿತ್ತು. ಈ ಅಧಿಕರಣದಲ್ಲಿ ಅದರಂತೆ ಜ್ಯೋತಿಶ್ರುತಿಗೆ ಬಾಧವನ್ನು ಹೇಳಲಾಗದು. ಅಗ್ನಿಪ್ರಕರಣವೆಂಬ ಸೂಕ್ತದಿಂದ ಶ್ರುತಿಯು ಉಪೋದ್ಬಲಿತವಾಗಿದೆ.

ವಸ್ತುತಃ ಜ್ಯೋತಿಶಬ್ದವನ್ನು ಅಗ್ನಿಯಲ್ಲಷ್ಟೇ ಅಲ್ಲದೆ ಬೇರೆಡೆಯೂ ಪ್ರಯೋಗಿಸಬಹುದು. ಜ್ಯೋತಿಶಬ್ದವು 'ತಮೋವಿರೋಧಿ' ಎಂಬ ಅರ್ಥದಲ್ಲಷ್ಟೇ ಪ್ರಸಿದ್ಧವಾಗಿದೆ. ಆದ್ದರಿಂದ ಕೇವಲ ಅಗ್ನಿದೇವತೆಯೆಂಬ ಪೂರ್ವಪಕ್ಷವು ತಪ್ಪಲ್ಲವೇ? ಎಂಬ ಪ್ರಶ್ನೆಯು ಸಹಜ. ಆದರೆ ಶ್ರುತಿಯಲ್ಲಿ

'ಹೃದಯಆಹಿತತ್ವ' ಎಂಬ ಧರ್ಮವು ಜ್ಯೋತಿಯಲ್ಲಿ ಕೇಳಿಸುತ್ತಿದೆ. ಇದನ್ನು ತಮೋವಿರೋಧಿಯಾದ ಆದಿತ್ಯಾದಿಗಳಲ್ಲಿ ಹೇಳಲು ಸಾಧ್ಯವಿಲ್ಲ. ಅಷ್ಟೇ ಅಲ್ಲದೆ 'ತ್ವಾಮಗ್ನೇ ತಮಸಿ' ಎಂಬ ಅಗ್ನಿಶಬ್ದದ ಸನ್ನಿಧಾನವೂ ಜ್ಯೋತಿಶ್ರುತಿಗೆ ಇರುತ್ತದೆ. ಹೊರತು ಜ್ಯೋತಿಶಬ್ದವು ಅಗ್ನಿಪ್ರಕರಣದಲ್ಲಿರುವುದರಿಂದ ಅಗ್ನಿಪರವೆಂದು ಹೇಳಬಾರದು. ಹಾಗಾದರೆ ಪ್ರಕರಣವು ಅಗ್ನಿಶ್ರುತಿಸಂಪಾದಕವಾಗುತ್ತದೆ ಹೊರತು ಶ್ರುತಿಗೆ ಅನುಗ್ರಾಹಕವಾಗುವುದಿಲ್ಲ.

ಹೀಗೆ ಹೇಳಿದ್ದರಿಂದ ಮತ್ತೊಂದು ಪ್ರಶ್ನೆಯು ನಿರಾಕೃತವಾಯಿತು. ಪ್ರಶ್ನೆಯು ಹೀಗಿದೆ -- ''ಜ್ಯೋತಿಶಬ್ದ ಹಾಗೂ ಅಗ್ನಿಶಬ್ದಗಳು ದೇವತಾವಾಚಕಗಳೋ ಅಥವಾ ಭೂತವಾಚಕಗಳೋ? ದೇವತಾವಾಚಕವಾದರೆ ಅಂತರಧಿಕರಣನ್ಯಾಯದಿಂದ ಸಕಲದೇವತಾವಾಚಕಪದಗಳು ವಿಷ್ಣುಪರವೆಂದು ನಿರ್ಣಯವಾಗಿದೆ. ಭೂತವಾಚಕಗಳಾದರೆ ಆಕಾಶಾಧಿಕರಣನ್ಯಾಯದಿಂದ ವಿಷ್ಣುಪರವೆಂದು ನಿರ್ಣಯವಾಗಿದೆ. ಏಕೆಂದರೆ ಅಗ್ನಿಶ್ರುತಿಯು ಸಾವಕಾಶವಾದ್ದರಿಂದ ನಿರವಕಾಶವಿಷ್ಣುಲಿಂಗಗಳು ಅದನ್ನು ಬಾಧಿಸುತ್ತವೆ. ಅಗ್ನಿಶ್ರುತಿಯು ಪ್ರಕರಣದ ಅನುಗ್ರಹವನ್ನು ಹೊಂದಿದ್ದರಿಂದ ಬಲಿಷ್ಠವೆಂದು ಆಕ್ಷೇಪಿಸಬಾರದು. ಆಯಾ ಸೂಕ್ತಗಳಲ್ಲಿರುವ ಅಗ್ನ್ಯಾದಿಶ್ರುತಿಗಳು ವಿಷ್ಣುವಿನಲ್ಲಿ ಸಾವಕಾಶವಾದಾಗ ಆಯಾ ಸೂಕ್ತಗಳು ಕೂಡ ಸಾವಕಾಶವೇ ಆಗುತ್ತವೆ. ಹಾಗಾದರೆ ಎಲ್ಲಾ ಸೂಕ್ತಗಳನ್ನೂ ವಿಷ್ಣುಸೂಕ್ತಗಳೆಂದಂತಾಯಿತು, ಆವಾಗ ಇದು ಅಗ್ನಿಸೂಕ್ತ, ಇದು ವಿಷ್ಣುಸೂಕ್ತ ಎಂಬ ವ್ಯವಸ್ಥೆ ಹೇಗೆ? ಎಂಬ ಪ್ರಶ್ನೆಗೂ ಅವಕಾಶವಿಲ್ಲ. 'ಅಭಿವ್ಯಕ್ತೇರಿತ್ಯಾಶ್ಮರಥ್ಯಃ' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಿಂದ ಈ ವ್ಯವಸ್ಥೆಯನ್ನು ಕೂಡಿಸಬಹುದು. ಆದ್ದರಿಂದ ಸಾವಕಾಶವಾದ ಸೂಕ್ತಕ್ಕೆ ನಿರವಕಾಶವಿಷ್ಣುಲಿಂಗಗಳಿಂದ ಬಾಧವನ್ನು ನಿಶ್ಚಯವಾಗಿ ಹೇಳಬಹುದು. ಆದ್ದರಿಂದ ಜ್ಯೋತಿರಧಿಕರಣದ ಪೂರ್ವಪಕ್ಷವೇ ಹುಟ್ಟಲು ಸಾಧ್ಯವಿಲ್ಲ'' ಎಂದು.

ಈ ಪ್ರಶ್ನೆಯು ತಪ್ಪು. ಏಕೆಂದರೆ ಯಾವರೀತಿಯಾಗಿ ಅಗ್ನಿಶ್ರುತಿಯು ಸಾವಕಾಶವಾಗಿದೆಯೋ ಅದರಂತೆ ವಿಷ್ಣುಲಿಂಗಗಳೂ ಸಾವಕಾಶವಾಗಿವೆ. ಎರಡೂ ಸಾವಕಾಶಗಳಾದಾಗ ಸಾವಕಾಶ ಅಗ್ನಿಶ್ರುತಿಯೇ ಪ್ರಬಲವಾಗುತ್ತದೆ. ಸಾವಕಾಶ ಅಗ್ನಿಶ್ರುತಿಯಿಂದ ಸಾವಕಾಶವಿಷ್ಣುಲಿಂಗಕ್ಕೆ ಬಾಧವನ್ನು ಹೇಳಬೇಕು. ಆದ್ದರಿಂದ ಜ್ಯೋತಿರಾದಿಶಬ್ದಗಳಿಂದ ಅಗ್ನಿದೇವತೆಯೇ ಪ್ರತಿಪಾದ್ಯನಾಗುತ್ತಾನೆಂಬ ಪೂರ್ವಪಕ್ಷವನ್ನು ಮಾಡಬಹುದು.

### ಕಠಿಣಪದಾರ್ಥ

ಅವಾಯುಸೂಕ್ತಸ್ಥಸ್ಯ = ವಾಯುಪ್ರಕರಣದಲ್ಲಿ ಇಲ್ಲದ; ತಥಾತ್ವೇ = ಅಗ್ನಿಪ್ರಕರಣದಲ್ಲಿರುವುದರಿಂದ ಜ್ಯೋತಿಃಶಬ್ದವು ಅಗ್ನಿಪರವಾದಲ್ಲಿ; ಏತೇನ = ಸೂಕ್ತಕ್ಕೆ ಶ್ರುತಿಯ ಅನುಗ್ರಹವನ್ನು ಹೇಳಿದ್ದರಿಂದ ಮತ್ತು ನಿರವಕಾಶಲಿಂಗವು ಇಲ್ಲದ್ದರಿಂದ; ಪ್ರಕರಣಾನುಗೃಹೀತ = ಅಗ್ನಿಸೂಕ್ತವೆಂಬ ಪ್ರಕರಣದ ಅನುಗ್ರಹ ಹೊಂದಿದ.

**प्रकाशः** – पूर्वन्यायाविषयत्वप्रदर्शनपूर्वं द्विविधं पूर्वपक्षं सङ्ग्रहेण निर्दिशति – **युक्त इति** ॥ अत्रैवं योजना – इदं ज्योतिरग्निरेव, न विष्णुः, अग्नौ निरूढज्योतिश्श्रुतेः । नच पूर्ववन्निरवकाशलिङ्गेन ज्योतिश्श्रुतिबाध इति, युक्तः पूर्वत्र वायुसूक्तस्थस्येत्यादि ॥ **प्रकरणेति** ॥ उपलक्षणमेतत्, पूर्ववन्निरवकाशलिङ्गाभावादित्यपि ध्येयम् । "सूक्तेनानुगृहीतत्वात्" इति युक्तिः आद्ये पूर्वपक्षेऽभ्युच्चयत्वेन, द्वितीये तु पूर्वपक्षोत्थानार्थमुक्तेति ध्येयम् । ननु पक्षद्वयेऽपि न सूक्तस्य श्रुत्यनुग्राहकत्वं, यावता श्रुतेः सवित्रादिपरत्वत्याजनेनाग्न्यादिपरत्वसम्पादन एवोपक्षयादित्याशङ्क्यानुग्राहकत्वं साधयति – **यद्यपीति** ॥ **हृदयेति** ॥ तच्च जाठरजातवेदसि प्रसिद्धमिति भावः ॥ **त्वामग्न इति** ॥

"**विश्वेदेवा अनमस्यन्भियाना त्वामग्ने तमसि तस्थिवासम्**" इति श्रवणेन तत्सन्निधानात् । छागपशुन्यायेन विशेषश्रुत्या सामान्यश्रुतेरर्थोपपत्तेरिति भावः । एवं सूक्तस्य श्रुत्यनुग्राहकत्वं समर्थ्य इदानीं पूर्वेण गतार्थतया पूर्वपक्षानुदयशङ्काप्रकारमनूद्य सुधोक्तदिशाऽधिकाशङ्कयोत्थानं वक्ष्यन् लिङ्गस्य निरवकाशत्वाभावात् अधिकाशङ्कां विनैव पूर्वपक्षोदय इति भावेन टीकाभिमतं पक्षं तावद् विशदयति – **एतेनेत्यादिना** ॥ सूक्तस्य श्रुत्यनुग्राहकत्वकथनेन निरवकाशलिङ्गाभावेन चेत्यर्थः ॥ **अन्तरिति** ॥ निरवकाशलिङ्गेन सावकाशदेवतावाचिश्रुतीनां प्रवृत्तिनिमित्तस्यश्वर्यादेर्भगवद्गतत्वोक्त्या विष्णुवाचित्वसाधनरूपन्यायेनेत्यर्थः ॥ **आकाशेति** ॥ अचेतनगतस्यापि प्रवृत्तिनिमित्तस्य भगवदधीनत्वादिसमर्थनन्यायेन इत्यर्थः । तमेव न्यायमाह – **सावकाशेति** ॥ ज्योतिःपदप्रवृत्तिनिमित्तस्य भगवद्गतत्वेन तदधीनत्वेन चेति भावः ।

श्रुतेरुज्जीवकमाशङ्क्य तदपि सावकाशमित्याह – **नचेति** ॥ सूक्तरूपप्रकरणेत्यर्थः । ननु सूक्तानां वैष्णवत्वे इदमग्निसूक्तमिदं विष्णुसूक्तमिति व्यवस्थानुपपत्तेर्निरवकाशतेत्यत आह – **सर्वेति** ॥ **वक्ष्यमाणेति** ॥ वैश्वानराधिकरणे अग्न्यादिशब्दानां विष्णौ मुख्यत्वे तत्तत्सूक्तानां तत्तद्विधानां च वैदिकसिद्धव्यवस्थानुपपत्तेरन्यवाचित्वमेवेति प्राप्ते, अग्न्यादिसूक्तादिभिर्विष्णूपासनायाऽग्न्यादावेव विष्णोरभिव्यक्तत्वाद्वा, अग्न्यादिसूक्ताद्युपासनयाऽग्न्यादावेव विष्णोरनुस्मरणीयत्वाद्वा,

**तदुपासकानामग्न्यादिस्थविष्णुप्राप्तिरूपाद् वा, निमित्तात् सूक्तादिव्यवस्थोपपत्तेः अग्न्यादिशब्दानां विष्णौ मुख्यत्वं, सूक्तादीनां तत्परत्वे व्यवस्था च युज्यत इति सिद्धान्त इति वक्ष्यमाणन्यायेनेत्यर्थः ॥ सुतरामिति ॥ यदि जात्या प्रबलायाः श्रुतेर्बाधस्तदा स्वभावतोऽपि दुर्बलस्य प्रकरणस्य किमु वाच्यं बाध इतीत्यर्थः ।**

ವಿವರಣೆ - ಹಿಂದಿನ ಪ್ರಾಣಾಧಿಕರಣದ ನ್ಯಾಯವನ್ನು ಈ ಅಧಿಕರಣದಲ್ಲಿ ಇಟ್ಟುಕೊಳ್ಳಲಾಗದೆಂದು ತೋರಿಸುವುದಕ್ಕಾಗಿ ಎರಡುಬಗೆಯ ಪೂರ್ವಪಕ್ಷವನ್ನು 'ಯುಕ್ತಃ' ಇತ್ಯಾದಿ ಗ್ರಂಥದಿಂದ ಸಂಗ್ರಹಿಸುತ್ತಿದ್ದಾರೆ. ಈ ವಾಕ್ಯವನ್ನು ಹೀಗೆ ಯೋಜಿಸಿ ಅರ್ಥೈಸಿಕೊಳ್ಳಬೇಕು -- ಶ್ರುತಿಯಲ್ಲಿ ಕೇಳಿಸು-ತ್ತಿರುವ ಜ್ಯೋತಿಯು ಅಗ್ನಿಯೇ ಹೊರತು ವಿಷ್ಣುವಲ್ಲ. ಅಗ್ನಿಯಲ್ಲಿ ಜ್ಯೋತಿಶ್ರುತಿಯು ರೂಢವಾಗಿರು-ವುದರಿಂದ. ಹಿಂದಿನ ಪ್ರಾಣಾಧಿಕರಣದಂತೆ ನಿರವಕಾಶಲಿಂಗದಿಂದ ಜ್ಯೋತಿಶ್ರುತಿಯು ಬಾಧಿತವಾಗ-ಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಹಿಂದಿನ ಅಧಿಕರಣದಲ್ಲಿ ಪ್ರಕರಣದ ಬೆಂಬಲವಿಲ್ಲದ ಕಾರಣ ಪ್ರಾಣಶ್ರುತಿಯು ಲಿಂಗದಿಂದ ಬಾಧಿತವಾಗಿತ್ತು. ಆದರೆ ಈ ಅಧಿಕರಣದಲ್ಲಿ ಅಗ್ನಿಪ್ರಕರಣದ ಬೆಂಬಲ-ವಿರುವುದರಿಂದ ಜ್ಯೋತಿಶ್ರುತಿಗೆ ಲಿಂಗದಿಂದ ಬಾಧವನ್ನು ಹೇಳಲಾಗದು.-- ಎಂದು.

ಗ್ರಂಥದಲ್ಲಿ ಜ್ಯೋತಿಶ್ರುತಿಯು ಬಾಧಿತವಾಗುವುದಿಲ್ಲವೆನ್ನಲು ಪ್ರಕರಣವನ್ನು ಹೇತುವನ್ನಾಗಿ ಹೇಳಿದ್ದಾರೆ. ನಿರವಕಾಶಲಿಂಗವಿಲ್ಲವೆಂಬುದನ್ನು ಕೂಡ ಉಪಲಕ್ಷಣಯಾ ಇಟ್ಟುಕೊಳ್ಳಬೇಕು. ಗ್ರಂಥದಲ್ಲಿ ಹೇಳಿದ 'ಸೂಕ್ತೇನ ಅನುಗೃಹೀತತ್ವಾತ್' ಎಂಬ ಯುಕ್ತಿಯು ಪ್ರಥಮಪೂರ್ವಪಕ್ಷದಲ್ಲಿ ಅಧಿಕಯುಕ್ತಿ ಎನಿಸಿದೆ. ಎರಡನೆಯ ಪೂರ್ವಪಕ್ಷದಲ್ಲಿ ಪೂರ್ವಪಕ್ಷದ ಸ್ಥಾಪನೆಗೋಸ್ಕರ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು.

ಎರಡೂ ಪಕ್ಷಗಳಲ್ಲಿ ಸೂಕ್ತವು ಶ್ರುತಿಗೆ ಅನುಗ್ರಾಹಕವಾಗುವುದಿಲ್ಲ. ಏಕೆಂದರೆ 'ಶ್ರುತಿಯು ಆದಿತ್ಯಾದಿಗಳನ್ನು ಪ್ರತಿಪಾದಿಸುವುದಿಲ್ಲ ಹೊರತಾಗಿ ಅಗ್ನ್ಯಾದಿದೇವತೆಗಳನ್ನು ಪ್ರತಿಪಾದಿಸುತ್ತದೆ' ಎಂಬುದನ್ನಷ್ಟೇ ಸೂಕ್ತವು ತಿಳಿಸುವುದರಲ್ಲಿ ತಾತ್ಪರ್ಯವನ್ನು ಹೊಂದಿದೆ. ಹೀಗಿರುವಾಗ ಶ್ರುತಿಗೆ ಸೂಕ್ತವು ಹೇಗೆ ಅನುಗ್ರಾಹಕವಾಗುತ್ತದೆ ಎಂಬ ಪ್ರಶ್ನೆ ಬಂದರೆ ಅದನ್ನು ನಿರಾಕರಿಸುವುದಕ್ಕಾಗಿ 'ಯದ್ಯಪಿ' ಇತ್ಯಾದಿ ಗ್ರಂಥವು ಹೊರಟಿದೆ. ಹೃದಯ ಆಹಿತತ್ವಧರ್ಮವನ್ನು ಆದಿತ್ಯಾದಿಗಳಲ್ಲಿ ಹೇಳಲು ಹೇಗೆ ಸಾಧ್ಯವಿಲ್ಲವೋ ಅದರಂತೆ ಅಗ್ನಿಯಲ್ಲಿಯೂ ಹೇಳಲಾಗದೆಂಬ ಶಂಕೆಯು ಬರುತ್ತದೆ. ಆದರೆ ಜಠರಾಗ್ನಿಗೆ ಹೃದಯ-ಸನ್ನಿಧಾನವಿರುವುದರಿಂದ ಹೃದಯಾಹಿತತ್ವಧರ್ಮವನ್ನು ಹೇಳಬಹುದು.

''ವಿಶ್ವೇದೇವಾ ಅನಮಸ್ಯನ್‌ಭಿಯಾನಾಸ್ತ್ವಾಮಗ್ನೇ ತಮಸಿ ತಸ್ಥಿವಾಂಸಮ್' ಎಂದು ಅಗ್ನಿಶಬ್ದದ ಸನ್ನಿಧಾನವು ಜ್ಯೋತಿಯಲ್ಲಿ ಕೇಳಿಸುತ್ತಿದೆ. ಇದನ್ನು ಗ್ರಂಥಕಾರರು 'ತ್ವಾಮಗ್ನೇ' ಎಂಬುದರಿಂದ ಹೇಳಿದ್ದಾರೆ. ಪೂರ್ವಮೀಮಾಂಸೆಯ ಸಾಮಾನ್ಯಪಶುವಿಧಾಯಕಪ್ರಕರಣದಲ್ಲಿ ವಿಶೇಷಶ್ರುತಿಯನ್ನು ಅನುಸರಿಸಿ ಛಾಗಪಶುವನ್ನು ವಿವಕ್ಷಿಸಲಾಗುತ್ತದೆ. ಅದರಂತೆ ಇಲ್ಲಿಯೂ ಸಹ ಸಾಮಾನ್ಯಶ್ರುತಿಯೆನಿಸಿದ ಜ್ಯೋತಿಃ-ಶ್ರುತಿಯನ್ನು ಅಗ್ನಿಶ್ರುತಿಯೆಂಬ ವಿಶೇಷಶ್ರುತಿಯಿಂದ ಅರ್ಥೈಸಿಕೊಳ್ಳಬೇಕು.

ಇಲ್ಲಿಯ ತನಕ ಅಗ್ನಿಸೂಕ್ತವು ಶ್ರುತಿಗೆ ಅನುಗ್ರಾಹಕವಾಗುತ್ತದೆಂಬುದನ್ನು ಸಮರ್ಥಿಸಿದ್ದಾಯಿತು. ಈಗ ಹಿಂದಿನ ಅಧಿಕರಣದಿಂದ ಈ ಅಧಿಕರಣವು ಗತಾರ್ಥವಾಗುತ್ತದೆ; ಆದ್ದರಿಂದ ಪೂರ್ವಪಕ್ಷವೇ ಹುಟ್ಟಲಾರದೆಂಬ ಶಂಕೆಯನ್ನು ಪರಿಹರಿಸುವುದಕ್ಕಾಗಿ ಸುಧೆಯಲ್ಲಿ ಹೇಳಿದ ಅಧಿಕಾಶಂಕೆಯನ್ನು ಮುಂದೆ ತೋರಿಸುವವರಿದ್ದಾರೆ. ಅದಕ್ಕಿಂತ ಮೊದಲು ಲಿಂಗವು ನಿರವಕಾಶವಾಗದ ಕಾರಣ ಅಧಿಕಾಶಂಕೆಯನ್ನು ಮಾಡದೆ ಪೂರ್ವಪಕ್ಷ ಮಾಡಬಹುದೆಂಬ ಟೀಕೆಯ ಅಭಿಪ್ರಾಯವನ್ನು 'ಏತೇನ' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ.

ಅಂತರಧಿಕರಣನ್ಯಾಯೇನ – ನಿರವಕಾಶಲಿಂಗದಿಂದ ದೇವತಾವಾಚಕವಾದ ಸಾವಕಾಶಶ್ರುತಿಗಳು ಬಾಧಿತವಾಗುತ್ತವೆ. ಆದ್ದರಿಂದ ಆಯಾ ಶ್ರುತಿಗಳ ಪ್ರವೃತ್ತಿನಿಮಿತ್ತವೆನಿಸಿದ ಐಶ್ವರ್ಯಾದಿಧರ್ಮಗಳು ಭಗವಂತನಲ್ಲಷ್ಟೇ ಬರುತ್ತವೆ ಹೊರತು ಇಂದ್ರಾದಿಗಳಲ್ಲಿ ಬರುವುದಿಲ್ಲ. ಆದ್ದರಿಂದ ದೇವತಾವಾಚಕವಾದ ಶಬ್ದಗಳೆಲ್ಲವೂ ವಿಷ್ಣುವನ್ನೇ ಪ್ರತಿಪಾದಿಸುತ್ತವೆ. ಇದು ಅಂತರಧಿಕರಣದ ನ್ಯಾಯ.

ಆಕಾಶಾಧಿಕರಣನ್ಯಾಯೇನ – ಅಚೇತನಪದಾರ್ಥಗಳನ್ನು ಪ್ರತಿಪಾದಿಸುವ ಆಕಾಶಾದಿ ಶಬ್ದಗಳ ಪ್ರವೃತ್ತಿನಿಮಿತ್ತವು ಭಗವಂತನ ಅಧೀನವಾಗಿವೆ. ಇದು ಆಕಾಶಾಧಿಕರಣದ ನ್ಯಾಯ.

ಈ ನ್ಯಾಯವನ್ನೇ 'ಸಾವಕಾಶ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಜ್ಯೋತಿಃ = ಜ್ಯೋತಿ ಎಂಬ ಪದದ ಪ್ರವೃತ್ತಿನಿಮಿತ್ತವು ಭಗವದ್ಗತವಾಗಿದೆ ಮತ್ತು ಭಗವಂತನ ಅಧೀನವಾಗಿದೆ. ಆದ್ದರಿಂದ ಜ್ಯೋತಿಶಬ್ದದಿಂದ ಭಗವಂತನೇ ಪ್ರತಿಪಾದ್ಯನಾಗಿದ್ದಾನೆ. ಶ್ರುತಿಯು ಪ್ರಕರಣದಿಂದ ಉಪೋದ್ಬಲಿತ-ವಾಗಿದೆಯೆಂದು ಶಂಕಿಸಿ, ಪ್ರಕರಣವೂ ಕೂಡ ಸಾವಕಾಶವಾಗಿದೆಯೆಂದು 'ನಚ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

ಎಲ್ಲಾ ಸೂಕ್ತಗಳೂ ವಿಷ್ಣುಪರವಾದರೆ 'ಇದು ಅಗ್ನಿಸೂಕ್ತ' 'ಇದು ವಿಷ್ಣುಸೂಕ್ತ' ಎಂಬ ವ್ಯವಸ್ಥೆಯೇ ಕೂಡಲಾರದು; ಆದ್ದರಿಂದ ಸೂಕ್ತಪ್ರಮಾಣವನ್ನು ನಿರವಕಾಶ ಎಂದು ಹೇಳಬೇಕಲ್ಲವೇ? ಎಂಬ ಪ್ರಶ್ನೆಗೆ 'ಸರ್ವಸೂಕ್ತಾನಾಂ' ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

ಪ್ರತಿಯೊಂದು ಸೂಕ್ತಗಳೂ ವಿಷ್ಣುವನ್ನೇ ಪ್ರತಿಪಾದಿಸುತ್ತವೆ. ಆದರೂ ಸಹ ಇದು ಅಗ್ನಿಸೂಕ್ತ, ಇದು ವಿಷ್ಣುಸೂಕ್ತ ಎಂಬ ವ್ಯವಸ್ಥೆಗೆ ಅಡ್ಡಿಯಿಲ್ಲ. ಈ ವಿಚಾರವನ್ನು ವೈಶ್ವಾನರಾಧಿಕರಣದಲ್ಲಿ ಸಮರ್ಥಿಸಿದ್ದಾರೆ. ಅದು ಹೀಗೆ -- ಅಗ್ನ್ಯಾದಿಶಬ್ದಗಳು ವಿಷ್ಣುವಿನಲ್ಲಿ ಮುಖ್ಯವಾದರೆ ಆಯಾ ಸೂಕ್ತಗಳಿಗೆ ಹಾಗೂ ಆಯಾ ವಿದ್ಯೆಗಳಿಗೆ ಅಗ್ನ್ಯಾದಿಸೂಕ್ತವೆಂಬ ವೈದಿಕವ್ಯವಸ್ಥೆಯೇ ತಪ್ಪಾದೀತು. ಅದಕ್ಕೋಸ್ಕರ ಅಗ್ನ್ಯಾದಿಪರತ್ವವನ್ನು ಅಗ್ನ್ಯಾದಿಶಬ್ದಗಳಿಗೆ ಹೇಳಬೇಕೆಂದು ಪೂರ್ವಪಕ್ಷ.

ಈ ಪೂರ್ವಪಕ್ಷವನ್ನು ಮೂರು ಬಗೆಯಲ್ಲಿ ಪರಿಹರಿಸಿದ್ದಾರೆ. (೧) 'ಓಂ॥ಅಭಿವ್ಯಕ್ತೇರಿತ್ಯಾಶ್ಮರಥ್ಯಃ॥ ಓಂ' ಅಗ್ನಿಮೊದಲಾದ ಸೂಕ್ತಗಳಿಂದ ವಿಷ್ಣುವನ್ನು ಉಪಾಸನೆ ಮಾಡಬೇಕು. ಇದರಿಂದ ಅವುಗಳಲ್ಲಿ ವಿಷ್ಣುವು ಅಭಿವ್ಯಕ್ತನಾಗುತ್ತಾನೆ. ಈ ವಿಚಾರವನ್ನು ತಿಳಿಸುವುದಕ್ಕಾಗಿ ಅಗ್ನ್ಯಾದಿಸೂಕ್ತವೆಂಬ ನಿಯಮವು ಇರುತ್ತದೆ ಎಂದು ಆಶ್ಮರಥ್ಯಾಚಾರ್ಯರ ಅಭಿಪ್ರಾಯ.

(೨) 'ಓಂ॥ಅನುಸ್ಮೃತೇರ್ಬಾದರಿಃ॥ಓಂ' ಅಗ್ನಿಮೊದಲಾದ ಸೂಕ್ತಗಳಿಂದ ಬ್ರಹ್ಮನನ್ನು ಉಪಾಸನೆ ಮಾಡಬೇಕು. ಆ ಸೂಕ್ತಗಳಲ್ಲಿ ಹೇಳಿದ ವಿಶೇಷಣಗಳನ್ನು ಬ್ರಹ್ಮನಲ್ಲಿ ಅನುಸಂಧಾನ ಮಾಡಿದಾಗ ಅಗ್ನಿ ಮುಂತಾದ ಪ್ರತೀಕಗಳಲ್ಲಿ ಬ್ರಹ್ಮನು ಪ್ರಕಟನಾಗುತ್ತಾನೆ. ಆದ್ದರಿಂದ ಅಗ್ನ್ಯಾದಿಸೂಕ್ತವ್ಯವಸ್ಥೆಯು ಉಪಪನ್ನವಾಗುತ್ತದೆ ಎನ್ನುತ್ತಾರೆ ಬಾದರಿ ಆಚಾರ್ಯರು.

(೩) 'ಓಂ॥ಸಂಪತ್ತೇರಿತಿ ಜೈಮಿನಿಸ್ತಥಾ ಹಿ ದರ್ಶಯತಿ॥ಓಂ' ಅಗ್ನಿಸೂಕ್ತದಿಂದ ಭಗವಂತನನ್ನು ಉಪಾಸನೆ ಮಾಡಿದಾಗ ಅಗ್ನಿ ಮೊದಲಾದ ರೂಪಗಳಿಂದ ಭಗವಂತನು ದೊರೆಯುತ್ತಾನೆ. ಈ ವಿಚಾರವನ್ನು ತಿಳಿಸುವುದಕ್ಕಾಗಿ ಸೂಕ್ತವ್ಯವಸ್ಥೆಯು ಸಾರ್ಥಕವೆಂದು ಜೈಮಿನಿಗಳ ಅಭಿಪ್ರಾಯ. ಹೀಗೆ ಮೂರುಬಗೆಯಲ್ಲಿ ಸೂಕ್ತಾದಿವ್ಯವಸ್ಥೆಯನ್ನು ಹೊಂದಿಸಬಹುದು. ಆದ್ದರಿಂದ ಅಗ್ನಿ ಮೊದಲಾದ ಶಬ್ದಗಳಿಂದ ವಿಷ್ಣುವೇ ಮುಖ್ಯವಾಗಿ ಪ್ರತಿಪಾದ್ಯನಾಗುತ್ತಾನೆ ಎಂಬ ಸಿದ್ಧಾಂತವನ್ನು ವೈಶ್ವಾನರಾಧಿಕರಣದಲ್ಲಿಯೇ ವಿವರಿಸುತ್ತೇವೆ.

ಸುತರಾಂ ಬಾಧೇನ -- ಸ್ವಭಾವತಃ ಪ್ರಬಲವಾದ ಶ್ರುತಿಯೇ ಯಾವಾಗ ಬಾಧಿತವಾಗುತ್ತದೋ, ಆವಾಗ ಸ್ವಭಾವತಃ ದುರ್ಬಲವಾದ ಪ್ರಕರಣವು ಬಾಧಿತವಾಗುತ್ತದೆಂದು ಪ್ರತ್ಯೇಕ ಹೇಳಬೇಕೇನು? ಎಂದು ಇದರ ಅರ್ಥ.

**ಗುರುರಾಜೀಯम् – नत्वग्निसूक्तस्थत्वादिति** ॥ सूक्तं प्रकरणमित्यर्थः । प्रथमोपस्थितशब्दलिङ्गाभ्यामेवाग्निपरत्वे सम्भवति जघन्यप्रकरणप्रतीक्षणायोगादिति भावः । श्रुत्यनुग्राहकत्वायोगात् ॥ तथाच न निरवकाशलिङ्गबाधकत्वं तस्येति शेषः । यावता श्रुतित एव लिङ्गं दुर्बलमित्यादिटीकामवतारयति – **एतेन इत्यादिना ॥ विष्णुलिङ्गैर्बाधादिति** ॥ हृद्याहितत्वं विश्वेदेवा अनमस्यन् भियाना इति सर्वदेवोपास्यत्वमित्यादिलिङ्गसाहित्येन सिद्धान्तलिङ्गानां बाहुल्यं ज्ञेयम् ॥ **सुतरां बाधेनेति** ॥ बाध्यदौर्बल्यातिशयस्य बाध उपचारोऽयमिति हृदयम् ।

## ಸಾರ

ಎರಡು ಪೂರ್ವಪಕ್ಷಗಳನ್ನು ಸಂಕ್ಷೇಪವಾಗಿ ಹೀಗೆ ಹೇಳಬಹುದು. (೧) ಹಿಂದಿನ ಪ್ರಾಣಾಧಿಕರಣದಲ್ಲಿ ಶ್ರೀಪತಿತ್ವಾದಿಲಿಂಗಗಳು ವಿಷ್ಣುವಿನಲ್ಲಿ ನಿರವಕಾಶಗಳಾಗಿವೆ. ಪ್ರಾಣಶ್ರುತಿಯು ಸಾವಕಾಶವಾದ್ದರಿಂದ ಬಾಧಿತವಾಗುತ್ತದೆಂದು ಸಮರ್ಥಿಸಲಾಯಿತು. ಅದರಂತೆ ಈ ಅಧಿಕರಣದಲ್ಲಿ ಶ್ರುತಿಗೆ ಬಾಧವನ್ನು ಹೇಳಲಾಗದು. ಏಕೆಂದರೆ ಅಗ್ನಿಶ್ರುತಿಗೆ ಅಗ್ನಿಪ್ರಕರಣದ ಬೆಂಬಲವಿದೆ. ಇದು ಸುಧೆಯ ಪೂರ್ವಪಕ್ಷ.

(೨) ಜ್ಯೋತಿಃಶ್ರುತಿ ಹಾಗೂ ವಿಷ್ಣುಲಿಂಗಗಳು ಎರಡೂ ಸಾವಕಾಶವಾಗಿವೆ. ಇವೆರಡರಲ್ಲಿ ಸ್ವಭಾವತಃ ಸಾವಕಾಶಶ್ರುತಿಯೇ ಪ್ರಬಲವೆನಿಸುತ್ತದೆ. ಇಂತಹ ಶ್ರುತಿಯಿಂದ ವಿಷ್ಣುಲಿಂಗವು ಬಾಧಿತವಾಗುತ್ತದೆ. ಇದು ಟೀಕೆಯ ಪೂರ್ವಪಕ್ಷ.

ಸಹಜವಾಗಿ ಇಲ್ಲೊಂದು ಪ್ರಶ್ನೆ ಬರುತ್ತದೆ. ''ಜ್ಯೋತಿಶಬ್ದವು ದೇವತಾಪರವಾದರೆ ಅಂತರಧಿಕರಣ-ನ್ಯಾಯದಿಂದ ವಿಷ್ಣುಪರವೆಂದು ಸಿದ್ಧವಾಗುತ್ತದೆ. ಭೂತಪರವಾದರೆ ಆಕಾಶಾಧಿಕರಣನ್ಯಾಯದಿಂದ ವಿಷ್ಣುಪರವಾಗುತ್ತದೆ. ಹೀಗೆ ಸಾವಕಾಶವಾದ ಜ್ಯೋತಿಶ್ರುತಿಯು ನಿರವಕಾಶವಿಷ್ಣುಲಿಂಗದಿಂದ ಬಾಧಿತ-ವಾಗುತ್ತದಲ್ಲವೇ? ಹೀಗಿರುವಾಗ ಜ್ಯೋತಿರಧಿಕರಣದ ಪೂರ್ವಪಕ್ಷವನ್ನು ಹೇಗೆ ಮಾಡುತ್ತೀರಿ? ಇನ್ನು ಪ್ರಕರಣದ ಬೆಂಬಲವನ್ನು ಜ್ಯೋತಿಶ್ರುತಿಗೆ ಹೇಳಬೇಕು. ಆದರೆ ಶ್ರುತಿಯಂತೆ ಪ್ರಕರಣವೂ ಕೂಡ ಸಾವಕಾಶವಾದಾಗ ಶ್ರುತಿಯನ್ನು ಹೇಗೆ ತಾನೇ ಉಜ್ಜೀವನ ಮಾಡುತ್ತದೆ?'' ಎಂದು. ಈ ಪ್ರಶ್ನೆಗೆ ಇಷ್ಟೇ ಉತ್ತರ -- ಶ್ರುತಿ ಹಾಗೂ ಲಿಂಗಗಳು ಎರಡೂ ಸಾವಕಾಶವಾದಾಗ ಶ್ರುತಿಯೇ ಪ್ರಬಲವಾಗುತ್ತದೆ. ಆದ್ದರಿಂದ ಜ್ಯೋತಿರಧಿಕರಣದ ಪೂರ್ವಪಕ್ಷ ಹೊರಡಲು ಏನೂ ತೊಂದರೆ ಇಲ್ಲ.

---

## ಶ್ರುತಿಲಿಂಗಗಳ ಬಲಾಬಲ ವ್ಯವಸ್ಥೆ

### तात्पर्यचन्द्रिका

नन्वेवं सावकाशलिङ्गस्य सावकाशश्रुत्यैव बाधसम्भवात् भाष्ये सूक्तोक्ति-र्व्यर्था । नच ''ज्योतिः'' इति सामान्यश्रुतेरग्निरूपविशेषपर्यवसानार्थं तदुक्तिः, टीकायां ''श्रुतिप्रकरणयोः'' इति द्विवचनस्य, भाष्ये 'अग्निसूक्तस्थत्वाच्च' इति चशब्दस्य चायोगात् । सामान्यश्रुतेः ''त्वामग्ने'' इति विशेषोपस्थापके शब्दे सति प्रकरणाप्रतीक्षणाच्चेति चेन्न, लिङ्गस्यातिशयेन बाधाय सूक्तोक्तेः । अत एवोक्तं टीकायां ''यावता श्रुतित एव लिङ्गं दुर्बलम्'' इति ।

निरवकाशं तु विष्णुलिङ्गं नास्ति, गुहानिहितत्वस्य जाठराग्नावपि सम्भवात् । निरतिशयवैभवरूपकर्णादिदूरत्वस्य 'चाग्निश्रुत्यादिबलात्' अग्नावप्युपपत्तेः ।

सुधायां तु – ज्योतिरधिकरणे 'अधिकाशङ्का ''अग्निसूक्तस्थत्वात्'' इति भाष्य एव दर्शिता'' इत्युक्तम् तत्र च श्रुतिमात्रेण पूर्वपक्षानुदयात् तदुदयार्थ-मधिकाशङ्कोक्तिरिति नाभिप्रायः, उक्तरीत्या सूक्ताभावेऽपि पूर्वपक्षोदयसम्भवात्, किन्तु पूर्वपक्षदार्ढ्यार्थं तदुक्तिरित्यभिप्रायः ।

यद्वा – सुधायां प्राणाद्यधिकरणेषु अधिकाशङ्काप्रदर्शकस्य अनुव्याख्यानस्य ''नन्वेतदपि पूर्वन्यायेन परिहृतं, न सूत्रारम्भं प्रयोजयतीत्यतोऽभ्यधिकाशङ्कं

**'दर्शयति' इत्यवतारितत्वात्, इहापि पूर्वपक्षोदयार्थमेव भाष्येऽधिकाशङ्कोक्तिरिति सुधाभिप्रायः ।**

ಅನುವಾದ - ಪ್ರಶ್ನೆ - ಲಿಂಗ ಹಾಗೂ ಶ್ರುತಿ ಎರಡೂ ಸಾವಕಾಶಗಳಾದಾಗ ಶ್ರುತಿಯೇ ಬಲಿಷ್ಠವಾಗುತ್ತದೆ. ಲಿಂಗವು ದುರ್ಬಲವಾಗಿ ಬಾಧಿತವಾಗುತ್ತದೆ. ಇಷ್ಟೇ ಹೇಳಲು ಬರುವಾಗ ಭಾಷ್ಯದಲ್ಲಿ ಪ್ರಕರಣವನ್ನು ಉಲ್ಲೇಖಿಸಿದ್ದು ಅನಾವಶ್ಯಕ. ಶ್ರುತಿಯಲ್ಲಿರುವ ಜ್ಯೋತಿಶಬ್ದವು ಅಗ್ನಿಯನ್ನೇ ಪ್ರತಿಪಾದಿಸುತ್ತದೆಂದು ತಿಳಿಯುವುದಿಲ್ಲ. ಸಾಮಾನ್ಯವಾಗಿ ಜ್ಯೋತಿಯೆಂದಷ್ಟೇ ತಿಳಿಯುತ್ತದೆ. ಅಗ್ನಿಯೆಂಬ ವಿಶೇಷಾರ್ಥದಲ್ಲಿ ಪರ್ಯವಸಾನವಾಗುವುದಕ್ಕಾಗಿ ಪ್ರಕರಣವು ಅನಿವಾರ್ಯವೆಂದು ಹೇಳಬಾರದು.

ಏಕೆಂದರೆ ಟೀಕೆಯಲ್ಲಿ 'ಶ್ರುತಿಪ್ರಕರಣಯೋಃ' ಎಂದು ಶ್ರುತಿ ಮತ್ತು ಪ್ರಕರಣಗಳನ್ನು ದ್ವಿವಚನಪ್ರಯೋಗದಿಂದ ಸಮಾನಕಕ್ಷೆಯಲ್ಲಿ ಉಲ್ಲೇಖಿಸಿದ್ದಾರೆ. ಭಾಷ್ಯದಲ್ಲಿಯೂ ಸಹ 'ಅಗ್ನಿಸೂಕ್ತಸ್ಥತ್ವಾಚ್ಚ' ಎಂದು 'ಚ'ಶಬ್ದದಿಂದ ಪ್ರಕರಣಪ್ರಮಾಣವನ್ನು ಸಮಾನಕಕ್ಷೆಯಲ್ಲಿಯೇ ಸೂಚಿಸಿದ್ದಾರೆ. ಒಂದು ವೇಳೆ ಶ್ರುತಿಗೆ ಪ್ರಕರಣವು ಅನುಗ್ರಾಹಕವಾದಲ್ಲಿ ಟೀಕೆಯಲ್ಲಿರುವ ದ್ವಿವಚನಪ್ರಯೋಗವಾಗಲೀ ಭಾಷ್ಯದಲ್ಲಿರುವ ಚಶಬ್ದಪ್ರಯೋಗವಾಗಲೀ ಅಯುಕ್ತವಾಗುತ್ತದೆ. ಸಾಮಾನ್ಯಶ್ರುತಿಗೆ 'ತ್ವಾಮಗ್ನೇ' ಎಂಬ ವಿಶೇಷಶ್ರುತಿಯ ಸನ್ನಿಧಾನದಿಂದಲೇ ಅಗ್ನಿಪರವೆಂದು ತಿಳಿಯಬಹುದು. ಇದಕ್ಕೋಸ್ಕರ ಪ್ರಕರಣದ ನಿರೀಕ್ಷೆಯಿರುವುದಿಲ್ಲ.

ಉತ್ತರ - ವಸ್ತುತಃ ಸಾವಕಾಶಶ್ರುತಿಯಿಂದ ಸಾವಕಾಶಲಿಂಗವು ಬಾಧಿತವಾಗುತ್ತದೆಂಬುದರಲ್ಲಿ ಸಂದೇಹವಿಲ್ಲ. ಆದರೆ ಲಿಂಗವು ಸುತರಾಂ ಬಾಧಿತವಾಗುತ್ತದೆಂದು ತಿಳಿಸಲು ಪ್ರಕರಣದ ಬೆಂಬಲವನ್ನು ಆಶ್ರಯಿಸಿದ್ದಾರೆ. ಆದ್ದರಿಂದಲೇ ಟೀಕೆಯಲ್ಲಿ 'ಯಾವತಾ ಶ್ರುತಿತ ಏವ ಲಿಂಗಂ ದುರ್ಬಲಮ್' (ಲಿಂಗವು ಶ್ರುತಿಯಿಂದ ಬಾಧಿತವೇ ಆಗಿರುವಾಗ) ಇತ್ಯಾದಿ ಮಾತುಗಳು ಹೊರಟಿವೆ.

ಇನ್ನು ಲಿಂಗವು ನಿರವಕಾಶವಾಗಿದ್ದಲ್ಲಿ ವಿಷ್ಣುಪರತ್ವವನ್ನು ನಿಶ್ಚಯಿಸಬಹುದಿತ್ತು. ಆದರೆ ನಿರವಕಾಶವಾದ ವಿಷ್ಣುಲಿಂಗಗಳೇ ಕೇಳಿಸುತ್ತಿಲ್ಲ. ಗುಹಾನಿಹಿತತ್ವ ಲಿಂಗವಾದರೂ ಜಾಠರಾಗ್ನಿಯಲ್ಲಿ ಸಾವಕಾಶವಾಗಿದೆ. ನಿರತಿಶಯವೈಭವವೆಂಬ ಕರ್ಣಾದಿವಿದೂರತ್ವಲಿಂಗವಾದರೂ ಅಗ್ನಿಶ್ರುತಿಯ ಬಲದಿಂದ ಅಗ್ನಿಯಲ್ಲಿಯೂ ಸಾವಕಾಶವಾಗಿದೆ. ಹೀಗೆ ವಿಷ್ಣುಲಿಂಗಗಳೆಲ್ಲವೂ ಸಾವಕಾಶವಾಗಿರುವಾಗ ಜ್ಯೋತಿಶಬ್ದವು ವಿಷ್ಣುವನ್ನು ಪ್ರತಿಪಾದಿಸಲು ಸಾಧ್ಯವಿಲ್ಲ.

ಸುಧೆಯ ಜ್ಯೋತಿರಧಿಕರಣದಲ್ಲಿ 'ಅಧಿಕಾಶಂಕಾ ಅಗ್ನಿಸೂಕ್ತಸ್ಥತ್ವಾದಿತಿ ಭಾಷ್ಯ ಏವ ದರ್ಶಿತಾ' (ಅಗ್ನಿಸೂಕ್ತದಲ್ಲಿರುವಿಕೆ ಎಂಬ ಅಧಿಕಾಶಂಕೆಯು ಭಾಷ್ಯದಲ್ಲಿಯೇ ತೋರಿಸಲಾಗಿದೆ) ಎಂಬ ವಾಕ್ಯವು ಕೇಳಿಸುತ್ತಿದೆ. ಈ ವಾಕ್ಯವು 'ಕೇವಲ ಶ್ರುತಿಯಿಂದ ಪೂರ್ವಪಕ್ಷವು ಹುಟ್ಟುವುದಿಲ್ಲ. ಅದಕ್ಕೋಸ್ಕರ

ಅಧಿಕಾಶಂಕೆಯು ಹೊರಟಿದೆ' ಎಂಬ ಅಭಿಪ್ರಾಯದಿಂದ ಹೊರಟಿಲ್ಲ. ಹೊರತಾಗಿ ಹಿಂದೆ ಹೇಳಿದ ಪ್ರಕಾರ ಪ್ರಕರಣದ ಬೆಂಬಲವಿಲ್ಲದಿದ್ದರೂ ಕೇವಲ ಶ್ರುತಿಯಿಂದ ಪೂರ್ವಪಕ್ಷವು ಹುಟ್ಟುತ್ತದೆ. ಪೂರ್ವಪಕ್ಷದ ದಾರ್ಢ್ಯಕ್ಕಾಗಿ ಅಧಿಕಾಶಂಕೆಯನ್ನು ಮಾಡಿದ್ದಾರೆ.

ಅಥವಾ ಸುಧೆಯಲ್ಲಿ ಹಿಂದಿನ ಪ್ರಾಣಾಧಿಕರಣಗಳಲ್ಲಿ ಅಧಿಕಾಶಂಕೆಯನ್ನು ತೋರಿಸುವ ಅನುವ್ಯಾಖ್ಯಾನಕ್ಕೆ 'ನನ್ವೇತದಪಿ ಪೂರ್ವನ್ಯಾಯೇನ ಪರಿಹೃತಮ್ । ನ ಸೂತ್ರಾರಂಭಂ ಪ್ರಯೋಜಯತೀತ್ಯತೋಽಭ್ಯಧಿಕಾಶಂಕಾಂ ದರ್ಶಯತಿ' (ಹಿಂದಿನ ಅಧಿಕರಣದ ನ್ಯಾಯದಿಂದಲೇ ಈ ಪೂರ್ವಪಕ್ಷವು ಪರಿಹಾರವಾಯಿತು. ಆದ್ದರಿಂದ ಈ ಸೂತ್ರವು ಅನಾರಂಭಣೀಯ ಎಂಬ ಪ್ರಶ್ನೆಗೆ ಅಭ್ಯಧಿಕಾಶಂಕೆಯನ್ನು ತೋರಿಸುತ್ತಿದ್ದಾರೆ.) ಎಂದು ಅವತಾರಿಕೆಯನ್ನು ನೀಡಲಾಗಿದೆ. ಅದರಂತೆ ಇಲ್ಲಿಯೂ ಕೂಡ ಹಿಂದಿನ ಅಧಿಕರಣದ ನ್ಯಾಯದಿಂದ ಗತಾರ್ಥತ್ವವನ್ನು ಪರಿಹರಿಸಲು ಭಾಷ್ಯದಲ್ಲಿ ಅಭ್ಯಧಿಕಾಶಂಕೆಯನ್ನು ತೋರಿಸಿದ್ದಾರೆ ಎಂದು ಸುಧೆಯ ಅಭಿಪ್ರಾಯ.

### ಕಠಿಣಪದಾರ್ಥ

ನನ್ವೇವಂ = ಶ್ರುತಿಹಾಗೂ ಲಿಂಗ ಎರಡೂ ಸಾವಕಾಶವಾದರೆ; ಅತ ಏವ = ಶ್ರುತಿಯಂತೆ ಪ್ರಕರಣವೂ ಸ್ವತಂತ್ರಪ್ರಮಾಣವಾದ್ದರಿಂದಲೇ; ಉಕ್ತರೀತ್ಯಾ = ಸಾವಕಾಶಶ್ರುತಿಯಿಂದ ಸಾವಕಾಶಲಿಂಗವು ಬಾಧಿತವಾಗುತ್ತದೆಂದು ಹಿಂದೆ ಹೇಳಿದಂತೆ.

**प्रकाशः – नन्वेवमिति ॥** श्रुतिलिङ्गयोः सावकाशत्वे सतीत्यर्थः ॥ **नचेति ॥** प्रकरणस्य विशेषोपस्थापकत्वादिति भावः ॥ **द्विवचनस्येति ॥** अन्यथा सावकाशलिङ्गमात्रात् सावकाशश्रुतेर्बलवत्त्वादित्येव ब्रूयात् । प्रकरणस्याग्निश्रुतिसम्पादकत्वेनोपयोगात्तत्समतया निर्देशो न स्यादित्यर्थः । ननु तमोविरोधिमात्रे प्रसिद्धज्योतिश्शब्दस्याग्न्युपस्थापकत्वं कथमित्यत आह – सामान्येति ॥ **अत एवेति ॥** श्रुतिवत् सूक्तस्यापि स्वतन्त्रत्वादेव, टीकायां **''नहि लिङ्गं श्रुतिप्रकरणबाधने शक्तं, यावता श्रुतित एव दुर्बलम्''** इत्युक्तम् । अतो ज्ञायते सूक्तरूपं प्रकरणमतिशयार्थमुक्तमिति । ननु लिङ्गस्य निरवकाशत्वे कथं श्रुतित एव बाध इत्यत आह **–निरवकाशं त्विति ॥ निरतिशयेति ॥** सर्वथा कर्णादिविदूरत्वस्य काप्यसम्भवादिति भावः । अस्मिन्पक्षे सुधाविरोधमाशङ्क्य साऽपि टीकानुसारेण नेयेति भावेन तत्तात्पर्यं वक्तुमाह – **सुधायामिति ॥ उक्तेति ॥** सावकाशश्रुत्या सावकाशलिङ्गबाध इत्युक्तरीत्येत्यर्थः । सुधावाक्यस्य यथा श्रुतार्थमनुसृत्याभ्यधिकाशङ्कया पक्षान्तरमाह – **यद्वेति ॥**

ವಿವರಣೆ - 'ಲಿಂಗ ಹಾಗೂ ಶ್ರುತಿ ಎರಡೂ ಸಾವಕಾಶವಾದಾಗ ಶ್ರುತಿಯೇ ಪ್ರಬಲವಾಗುತ್ತದೆ. ಆ ಸಂದರ್ಭದಲ್ಲಿ ಪ್ರಕರಣದ ಅನಿವಾರ್ಯತೆ ಇರುವುದಿಲ್ಲ. ಆದರೆ ಸಾಮಾನ್ಯಶ್ರುತಿಯನ್ನು ವಿಶೇಷಾರ್ಥ-ದಲ್ಲಿ ಪರ್ಯವಸಾನ ಮಾಡುವುದಕ್ಕಾಗಿ ಪ್ರಕರಣದ ಬೆಂಬಲವು ಅನಿವಾರ್ಯವೆಂದು ತೋರುತ್ತದೆ. ಇದನ್ನು ನಿರಾಕರಿಸಲು 'ನಚ ಜ್ಯೋತಿಃ' ಎಂಬ ವಾಕ್ಯವು ಹೊರಟಿದೆ. ಒಂದು ವೇಳೆ ಪ್ರಕರಣವು ಅಗ್ನಿಶ್ರುತಿಸಂಪಾದಕವಾದಲ್ಲಿ ಅಗ್ನಿಶ್ರುತಿಯ ಸಂಪಾದನೆಗೋಸ್ಕರ ಸಾರ್ಥಕವೆಂದು ಹೇಳುವುದಾದರೆ ಶ್ರುತಿಯ ಸಮಾನಕಕ್ಷೆಯಲ್ಲಿ ಪ್ರಕರಣವನ್ನು ಟೀಕೆಯಲ್ಲಿ ಉಲ್ಲೇಖಿಸಿದ್ದು ತಪ್ಪಾದೀತು. ''ಸಾವಕಾಶಲಿಂಗ-ಮಾತ್ರದಿಂದ ಸಾವಕಾಶಶ್ರುತಿಯು ಬಲಿಷ್ಠವಾಗಿದೆ'' ಎಂದಷ್ಟೇ ಟೀಕೆಯಲ್ಲಿ ಹೇಳಿದ್ದರೆ ಸಾಕಾಗಿತ್ತು.

ಜ್ಯೋತಿಶಬ್ದವು ತಮೋವಿರೋಧಿ ಎಂಬರ್ಥದಲ್ಲಷ್ಟೇ ಪ್ರಸಿದ್ಧವಾಗಿದೆ. ಹೀಗಿರುವಾಗ ಕೇವಲ ಅಗ್ನಿಯನ್ನು ಹೇಗೆ ತಿಳಿಸುತ್ತದೆ? ಎಂಬ ಪ್ರಶ್ನೆಗೆ 'ಸಾಮಾನ್ಯಶ್ರುತೇಃ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ.

ಟೀಕೆಯಲ್ಲಿ 'ನ ಹಿ ಲಿಂಗಂ ಶ್ರುತಿಪ್ರಕರಣಬಾಧನೇ ಶಕ್ತಮ್, ಯಾವತಾ ಶ್ರುತಿತ ಏವ ದುರ್ಬಲಂ' (ಲಿಂಗವು ಯಾವಾಗ ಶ್ರುತಿಯಿಂದಲೇ ದುರ್ಬಲವಾಗಿದೆಯೋ ಆವಾಗ ಶ್ರುತಿ ಹಾಗೂ ಪ್ರಕರಣಗಳನ್ನು ಬಾಧಿಸಲು ಹೇಗೆ ಸಮರ್ಥವಾಗುತ್ತದೆ) ಎಂದು ಹೇಳಿದ್ದಾರೆ. ಇದರಿಂದ ಸೂಕ್ತರೂಪವಾದ ಪ್ರಕರಣವು ಲಿಂಗವನ್ನು ಅತಿಶಯವಾಗಿ ಬಾಧಿಸುತ್ತದೆಂದು ತಿಳಿಯುತ್ತದೆ. ಲಿಂಗವು ನಿರವಕಾಶವಾದರೆ ಶ್ರುತಿಯಿಂದ ಬಾಧಿತವಾಗಲು ಸಾಧ್ಯವಿಲ್ಲವಲ್ಲವೇ? ಎಂಬ ಪ್ರಶ್ನೆಗೆ 'ನಿರವಕಾಶಂ ತು' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ. ನಿರತಿಶಯವೈಭವವೆಂಬ ಕರ್ಣಾದಿವಿದೂರತ್ವವನ್ನು ಯಥಾಯೋಗ್ಯವಾಗಿ ಅಗ್ನ್ಯಾದಿ-ಗಳಲ್ಲಿಯೂ ಉಪಪಾದಿಸಬಹುದು. ಸರ್ವಥಾ ಕರ್ಣಾದಿವಿದೂರತ್ವವನ್ನಂತೂ ವಿಷ್ಣುವಿನಲ್ಲಿಯೂ ಹೇಳಲು ಸಾಧ್ಯವಿಲ್ಲ. ಈ ಪಕ್ಷದಲ್ಲಿ ಸುಧಾವಿರೋಧವನ್ನು ಆಶಂಕಿಸಿ ಟೀಕೆಗೆ ಅನುಸಾರಿಯಾಗಿ ಸುಧಾ-ವಾಕ್ಯವನ್ನು ಅರ್ಥೈಸಬೇಕೆಂದು 'ಸುಧಾಯಾಮ್' ಇತ್ಯಾದಿವಾಕ್ಯದಿಂದ ಉಪಪಾದಿಸುತ್ತಿದ್ದಾರೆ. ಸುಧಾವಾಕ್ಯಕ್ಕೆ ಯಥಾಶ್ರುತವಾದ ಅರ್ಥವನ್ನು ವಿವಕ್ಷಿಸಿ ಅಭ್ಯಧಿಕಾಶಂಕೆಯಿಂದ ಪೂರ್ವಪಕ್ಷ ಮಾಡಬಹುದೆಂದು ಮತ್ತೊಂದು ಬಗೆಯಲ್ಲಿ 'ಯದ್ವಾ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನಿಸಿದ್ದಾರೆ.

**गुरुराजीयम् –** ननु यदि सावकाशश्रुत्यापि लिङ्गस्य बाधात्पूर्वपक्षस्तर्हि सुधाविरोधः स्यात् । सुधायां ज्योतिरधिकरणे ''अभ्यधिकाशङ्का अग्निसूक्तत्वादिति भाष्ये एव प्रदर्शिते''त्युक्तत्वेन केवलश्रुतिमात्रस्य लिङ्गबाधकत्वाभावस्याभिप्रेतत्वादित्यत आह ॥ **सुधायां त्विति** ॥ **उक्तरीत्येति** ॥ सावकाशाग्निश्रुत्या सावकाशविष्णुलिङ्गबाधादि-त्युक्तरीत्येत्यर्थः । नन्वेवमभ्यधिकाशङ्काप्रायपाठत्यागः । पूर्वाधिकरणेषु श्रुतिमात्रेण लिङ्गस्य बाधासम्भवेन तदर्थमभ्यधिकाशङ्काया उक्तत्वादत्र दार्ढ्यार्थं तदुक्तिरित्यङ्गीकारादित्यरुचेराह ॥ **यद्वेति** ॥

## ಸಾರ

ಲಿಂಗ ಹಾಗೂ ಶ್ರುತಿ ಎರಡೂ ಸಾವಕಾಶಗಳಾದಾಗ ಶ್ರುತಿಯು ಸ್ವಭಾವತಃ ಬಲಿಷ್ಠ; ಲಿಂಗವು ಸ್ವಭಾವತಃ ದುರ್ಬಲ ಎನಿಸುತ್ತದೆ. ಇಷ್ಟೇ ಹೇಳಿದರೆ ಸಾಕು. ಶ್ರುತಿಗೆ ಪ್ರಕರಣದ ಬೆಂಬಲ ಹೇಳುವುದು ಅನಾವಶ್ಯಕ. ಜ್ಯೋತಿಶಬ್ದವು ಅಗ್ನಿಯನ್ನು ಪ್ರತಿಪಾದಿಸುತ್ತದೆಂಬ ವಿಚಾರವು ಹೃದಯಾಹಿತತ್ವಲಿಂಗದಿಂದಾಗಲೀ, ಅಥವಾ ಅಗ್ನಿ-ಶಬ್ದದ ಸನ್ನಿಧಾನದಿಂದಾಗಲೀ ತಿಳಿಯುತ್ತದೆ. ಪ್ರಕರಣವು ಬೇಕಾಗಿಲ್ಲ. ಆದರೆ ಭಾಷ್ಯದಲ್ಲಿ ಪ್ರಕರಣವನ್ನು ಪ್ರತ್ಯೇಕ-ವಾಗಿ ಉಲ್ಲೇಖಿಸಿದ್ದಾರೆ. ಭಾಷ್ಯದ ಆಂತರ್ಯವನ್ನು ಹೀಗೆ ತಿಳಿಯಬೇಕು -- 'ಶ್ರುತಿಯು ಸ್ವಾಭಾವಿಕವಾಗಿಯೇ ಲಿಂಗವನ್ನು ಬಾಧಿಸುತ್ತದೆ. ಇದರ ಜೊತೆಗೆ ಪ್ರಕರಣದ ಬೆಂಬಲವಿದ್ದಾಗ ನಿಶ್ಚಯವಾಗಿ ಬಾಧಿಸುತ್ತದೆ' ಎಂದು.

ಇನ್ನು ವಿಷ್ಣುವಿನಲ್ಲಿರುವ ಲಿಂಗಗಳು ನಿರವಕಾಶಗಳಾಗಿದ್ದರೂ ಶ್ರುತಿಯಿಂದ ಬಾಧವು ಬರುತ್ತಿರಲಿಲ್ಲ. ಆದರೆ ಗುಹಾನಿಹಿತತ್ವಲಿಂಗವು ಜಾಠರಾಗ್ನಿಯಲ್ಲಿ ಸಾವಕಾಶವಾಗಿದೆ. ನಿರತಿಶಯವೈಭವತ್ವವನ್ನೂ ಸಹ ಅಗ್ನಿ-ಶ್ರುತಿಯು ಅಗ್ನಿಯಲ್ಲಿ ಸಾವಕಾಶ ಮಾಡಿದೆ. ಹೀಗೆ ಎಲ್ಲಾ ವಿಷ್ಣುಲಿಂಗಗಳೂ ಸಾವಕಾಶಗಳೇ ಆಗಿವೆ.

'ಅಧಿಕಾಶಂಕಾ ಅಗ್ನಿಸೂಕ್ತಸ್ಥತ್ವಾತ್ ಭಾಷ್ಯ ಏವ ದರ್ಶಿತಾ' ಎಂಬ ಸುಧಾವಾಕ್ಯಕ್ಕೆ ಕೇವಲ ಶ್ರುತಿಯಿಂದ ಪೂರ್ವಪಕ್ಷ ಹುಟ್ಟದ ಕಾರಣ ಅಧಿಕಾಶಂಕೆಯು ಹೊರಟಿದೆ ಎಂದರ್ಥವಲ್ಲ. ಕೇವಲ ಶ್ರುತಿಯಿಂದಲೇ ಪೂರ್ವ-ಪಕ್ಷ ಹುಟ್ಟುತ್ತದೆ; ಆದರ ದಾರ್ಢ್ಯಕ್ಕಾಗಿ ಅಧಿಕಾಶಂಕೆಯ ಪ್ರವೃತ್ತಿಯನ್ನು ತಿಳಿಯಬೇಕು. ಅಥವಾ ಹಿಂದಿನ ಅಧಿ-ಕರಣಗಳಲ್ಲಿ ಅಧಿಕಾಶಂಕೆಯನ್ನು ತೋರಿಸಿದ್ದಾರೆ. ಅದರಂತೆ ಇಲ್ಲಿಯೂ ಪೂರ್ವನ್ಯಾಯದಿಂದ ಗತಾರ್ಥತ್ವವನ್ನು ಪರಿಹರಿಸಲು ಅಧಿಕಾಶಂಕೆಯನ್ನು ತೋರಿಸಿದ್ದಾರೆಂದು ಸುಧೆಯ ಅಭಿಪ್ರಾಯವಾಗಿದೆ.

---

## ಲಿಂಗ ಮತ್ತು ಶ್ರುತಿಗಳೆರಡೂ ಸಾವಕಾಶಗಳು
## (ಸುಧೆಯ ಪೂರ್ವಪಕ್ಷ)

### तात्पर्यचन्द्रिका

**एवञ्च तत्रेत्थं पूर्वः पक्षः – यद्यपि पूर्वाधिकरणन्यायेन निरवकाशब्रह्मलिङ्गैः सावकाशाग्निश्रुतिबाधः, यद्यपि च सर्वसूक्तानां वैष्णवत्वेऽपि ''अभिव्यक्तेः'' इत्यादिन्यायेन इदमग्निसूक्तं इदं वायुसूक्तमिति व्यवस्था सम्भवति । तथाऽपि इदमग्निसूक्तं, न तु विष्णुसूक्तमिति अध्यापकप्रसिद्धेरयोगात् सूक्तं निरवकाशम् । एवञ्च निरवकाशप्रकरणानुगृहीतश्रुत्या निरवकाशमपि कर्णादिविदूरत्वलिङ्गं बहुवैभवाभिप्रायेण कथञ्चिदग्नावपि नेयम् । निरवकाशत्वमात्रप्रयुक्तस्य लिङ्गगतस्य प्राबल्यस्य श्रुतिगतान्निरवकाशसूक्तसाहित्यश्रुतित्वोभयप्रयुक्तप्राबल्यात् दुर्बलत्वात्**

**लिङ्गे बहुत्वप्रयुक्ते प्राबल्ये सत्यपि तस्य श्रुतित्वरूप-स्वभावप्रयुक्तप्राबल्यात् दुर्बलत्वात् । अन्तरधिकरणस्थेन्द्राग्न्यादिश्रुतिस्तु न सूक्तानुगृहीतेति । एवञ्चात्र टीकायां पूर्वपक्षहेताः सूक्तस्य सिद्धान्तहेतोर्लिङ्गस्य च सावकाशत्वमिति पूर्वः पक्षः, सुधायां तु उभयोर्निरवकाशत्वमिति भेदः ।**

ಅನುವಾದ - ಆದ್ದರಿಂದ ಸುಧೆಯ ಪ್ರಕಾರ ಪೂರ್ವಪಕ್ಷ ಹೀಗಿದೆ -- ವಸ್ತುತಃ ಹಿಂದಿನ ಅಧಿಕರಣದ ನ್ಯಾಯದಂತೆ ನಿರವಕಾಶಬ್ರಹ್ಮಲಿಂಗಗಳಿಂದ ಸಾವಕಾಶ ಅಗ್ನಿಶ್ರುತಿಯು ಬಾಧಿತವಾಗುತ್ತದೆ. ವಸ್ತುತಃ ಸಕಲಸೂಕ್ತಗಳು ವಿಷ್ಣುಪರ ಎನಿಸಿದರೂ 'ಅಭಿವ್ಯಕ್ತೇರಿತ್ಯಾಶ್ಮರಥ್ಯಃ' ಎಂಬ ಅಧಿಕರಣದಲ್ಲಿ ಹೇಳುವ ನ್ಯಾಯದಂತೆ ಇದು ಅಗ್ನಿಸೂಕ್ತ, ಇದು ವಾಯುಸೂಕ್ತ ಎಂಬ ವ್ಯವಸ್ಥೆಯನ್ನು ಹೇಳಬಹುದು. ಆದರೆ ಇದು ಅಗ್ನಿಸೂಕ್ತ ಹೊರತು ವಿಷ್ಣುಸೂಕ್ತವಲ್ಲವೆಂಬ ಅಧ್ಯಾಪಕ-ಪ್ರಸಿದ್ಧಿಯನ್ನು ಕೂಡಿಸಲು ಸಾಧ್ಯವಿಲ್ಲ. ಈ ಅಧ್ಯಾಪಕಪ್ರಸಿದ್ಧಿಯ ಆಧಾರದಿಂದ ಪ್ರಕರಣವನ್ನು ನಿರವಕಾಶವೆನ್ನಲೇ ಬೇಕು. ಆದ್ದರಿಂದ ನಿರವಕಾಶಪ್ರಕರಣದ ಅನುಗ್ರಹವಿರುವುದರಿಂದ ಶ್ರುತಿಯು ಬಲಿಷ್ಠವಾಗುತ್ತದೆ. ಕರ್ಣಾದಿ ವಿದೂರತ್ವಲಿಂಗಗಳು ನಿರವಕಾಶಗಳಾಗಿದ್ದರೂ ಶ್ರುತಿಯಿಂದ ಬಾಧಿತವಾಗುತ್ತವೆ. ಆದ್ದರಿಂದ ಅಗ್ನಿಯಲ್ಲಿರುವ ವೈಭವವನ್ನು ವಿವಕ್ಷಿಸಿ ಕರ್ಣಾದಿವಿದೂರತ್ವಲಿಂಗವನ್ನು ಹೇಗಾದರೂ ಅಗ್ನಿಯಲ್ಲಿ ಯೋಜಿಸಬೇಕು. ಲಿಂಗದಲ್ಲಿರುವ ಪ್ರಾಬಲ್ಯವು ಕೇವಲ ನಿರವಕಾಶತ್ವ-ಪ್ರಯುಕ್ತವಾಗಿದೆ. ಆದರೆ ಶ್ರುತಿಯಲ್ಲಿರುವ ಪ್ರಾಬಲ್ಯವು ನಿರವಕಾಶಪ್ರಕರಣದ ಬೆಂಬಲ ಹೊಂದಿದೆ. ಮತ್ತು ಶ್ರುತಿತ್ವಪ್ರಯುಕ್ತವಾಗಿಯೂ ಬಲಿಷ್ಠವಾಗಿದೆ. ಹೀಗೆ ಎರಡು ಮುಖಗಳಿಂದ ಬಲಿಷ್ಠವಾದ ಶ್ರುತಿಗಿಂತ ಒಂದು ಮುಖದಿಂದಷ್ಟೇ ಬಲಿಷ್ಠವಾದ ಲಿಂಗವು ದುರ್ಬಲವಾಗುತ್ತದೆ.

ಅನೇಕ ಲಿಂಗಗಳನ್ನು ವಿವಕ್ಷಿಸಿದಾಗ ಬಹುತ್ವಪ್ರಯುಕ್ತವಾಗಿ ಲಿಂಗದಲ್ಲಿ ಪ್ರಾಬಲ್ಯ ಬರುತ್ತ-ದಲ್ಲವೇ? ಎಂದು ಪ್ರಶ್ನಿಸಬಹುದು. ಆದರೆ ಶ್ರುತಿತ್ವಪ್ರಯುಕ್ತವಾಗಿ ಸ್ವಭಾವತಃ ಬಲಿಷ್ಠವಾದ ಶ್ರುತಿ-ಗಿಂತ ಬಹುತ್ವಪ್ರಯುಕ್ತವಾದ ಲಿಂಗವು ದುರ್ಬಲವೆನಿಸುತ್ತದೆ. ಈ ಶಂಕೆಯು ಹಿಂದಿನ ಅಂತರಧಿ-ಕರಣದಿಂದ ಪರಿಹಾರವಾಗುವುದಿಲ್ಲ. ಏಕೆಂದರೆ, ಅಂತರಧಿಕರಣದಲ್ಲಿ ಉಲ್ಲೇಖಿಸಿದ ಅಗ್ನ್ಯಾದಿ-ಶ್ರುತಿಗಳಿಗೆ ಪ್ರಕರಣದ ಅನುಗ್ರಹವಿಲ್ಲ.

ಇದನ್ನು ಗಮನಿಸಬೇಕು. ಟೀಕೆಯ ಪ್ರಕಾರ ಪೂರ್ವಪಕ್ಷಹೇತುವೆನಿಸಿದ ಸೂಕ್ತ(ಪ್ರಕರಣ) ಸಿದ್ಧಾಂತಹೇತುವೆನಿಸಿದ ಲಿಂಗ ಎರಡೂ ಸಾವಕಾಶಗಳೆಂದು ಅಂಗೀಕರಿಸಿ ಪೂರ್ವಪಕ್ಷ ಮಾಡ-ಲಾಗಿದೆ. ಸುಧೆಯಲ್ಲಿ ಎರಡನ್ನೂ ನಿರವಕಾಶಗಳೆಂದು ಅಂಗೀಕರಿಸಿ ಪೂರ್ವಪಕ್ಷ ಮಾಡಲಾಗಿದೆ. ಇಷ್ಟು ಮಾತ್ರ ವ್ಯತ್ಯಾಸ.

ಕಠಿಣಪದಾರ್ಥ

ತತ್ರ = ಸುಧೆಯಲ್ಲಿ; ಕಥಂಚಿತ್ = ತನಗಿಂತ ನೀಚದೇವತೆಗಳಿಗಿಂತ ಬಹುವೈಭವವನ್ನು ಅಗ್ನಿಯಲ್ಲಿ ಉಪಪಾದಿಸಬಹುದು; ನಿರವಕಾಶಸೂಕ್ತಸಾಹಿತ್ಯ... = ನಿರವಕಾಶವೆಂಬುದು ಸೂಕ್ತದಲ್ಲಷ್ಟೇ ವಿಶೇಷಣವಾಗುತ್ತದೆ.

**प्रकाशः** – ननूक्तरीत्या पूर्वेणगतत्वात् कथमधिकाशङ्कावकाश इत्यत आह – **एवञ्चेति** ॥ **तथाऽपीति** ॥ एतेन वैश्वानराधिकरणेन गतार्थताऽपि निरस्ता । एतच्छङ्कानिरासस्य तत्राकृतत्वादिति ॥ **कथञ्चिदिति** ॥ स्वावरापेक्षया बहुवैभवसत्त्वादिति भावः । 'निरवकाश' इति सूक्तमात्रविशेषणम् । ननु गुहानिहितत्वकर्णादिविदूरत्वविश्वदेवनियामकत्वादिलिङ्गानां बहुत्वादुभयप्रयुक्तप्राबल्याद् बलवत्त्वं लिङ्गस्येत्यत आह – **लिङ्ग इति** ॥

**द्विविधं बलवत्त्वं च बहुत्वाच्च स्वभावतः ।**
**तयोः स्वभावो बलवानुपजीव्यादिकश्च सः ॥**

इत्युक्तेरिति भावः । इयं च शङ्का न पूर्वाधिकरणेऽस्तीत्याह – **अन्तरिति** ॥ टीकाद्वयपूर्वपक्षाशयं निष्कृष्य दर्शयति – **एवञ्चेति** ॥

ವಿವರಣೆ - ಹಿಂದಿನ ಅಧಿಕರಣದ ನ್ಯಾಯದಂತೆ ಈ ಅಧಿಕರಣದ ಪೂರ್ವಪಕ್ಷವು ಪರಿಹಾರವಾಗುವಾಗ ಪುನಃ ಅಧಿಕಾಶಂಕೆಗೆ ಆಸ್ಪದವಿಲ್ಲವೆಂಬ ಶಂಕೆಗೆ 'ಏವಂಚ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. 'ತಥಾಪಿ' ಇತ್ಯಾದಿ ವಾಕ್ಯದಿಂದ ವೈಶ್ವಾನರಾಧಿಕರಣದಿಂದ ಬರುವ ಗತಾರ್ಥತ್ವವನ್ನು ಪರಿಹರಿಸಿದ್ದಾರೆ. ಈ ಅಧಿಕರಣದಲ್ಲಿ ಮಾಡುತ್ತಿರುವ ಶಂಕೆಯನ್ನು ವೈಶ್ವಾನರಾಧಿಕರಣದಲ್ಲಿ ಪರಿಹರಿಸಿಲ್ಲ.

ಗುಹಾನಿಹಿತತ್ವ, ಕರ್ಣಾದಿವಿದೂರತ್ವ, ವಿಶ್ವೇದೇವನಿಯಾಮಕತ್ವ ಮೊದಲಾದ ಅನೇಕಲಿಂಗಗಳಿರುವುದರಿಂದ ಬಹುತ್ವಪ್ರಯುಕ್ತವಾದ ಪ್ರಾಬಲ್ಯವನ್ನು ಲಿಂಗಕ್ಕೆ ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ 'ಲಿಂಗೇ ಬಹುತ್ವಪ್ರಯುಕ್ತೇ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

ದ್ವಿವಿಧಂ ಬಲವತ್ತ್ವಂ ಚ ಬಹುತ್ವಾಚ್ಚ ಸ್ವಭಾವತಃ ।
ತಯೋಃ ಸ್ವಭಾವೋ ಬಲವಾನುಪಜೀವ್ಯಾದಿಕಶ್ಚ ಸಃ ॥ (ವಿ.ತತ್ತ್ವನಿರ್ಣಯ ೧ನೇ ಪರಿಚ್ಛೇದ)

(ಎರಡು ಬಗೆಯಲ್ಲಿ ಬಲಿಷ್ಠತೆಯನ್ನು ನಿರೂಪಿಸಬಹುದು -- ಬಹುತ್ವಪ್ರಯುಕ್ತವಾಗಿ ಮತ್ತು ಸ್ವಭಾವಪ್ರಯುಕ್ತವಾಗಿ. ಇವೆರಡರಲ್ಲಿ ಸ್ವಭಾವಪ್ರಯುಕ್ತವಾದದ್ದೇ ಶ್ರೇಷ್ಠವಾಗಿದೆ.)

ಆಚಾರ್ಯರ ಈ ಮಾತನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ಇಲ್ಲಿ ಮಾಡುತ್ತಿರುವ ಶಂಕೆಯು ಹಿಂದಿನ ಅಧಿಕರಣದಿಂದ ಪರಿಹಾರವಾಗಿಲ್ಲವೆಂದು 'ಅಂತರಾಧಿಕರಣಸ್ಥ' ಎಂಬ ವಾಕ್ಯದಿಂದ ಹೇಳಿದ್ದಾರೆ. ಎರಡು ಟೀಕೆಗಳ ಪೂರ್ವಪಕ್ಷದ ಅಭಿಪ್ರಾಯವನ್ನು ನಿಖರವಾಗಿ 'ಏವಂ ಚ' ಎಂಬ ಗ್ರಂಥದಿಂದ ತೋರಿಸಿದ್ದಾರೆ.

**गुरुराजीयम्** – ननु तर्हि कर्णादिविदूरत्वलिङ्गस्य का गतिरित्यत आह – **एवञ्चेति** ॥ ननु तर्ह्यन्तरधिकरणस्थेन्द्रादिश्रुतेरपि सूत्रानुगृहीतत्वेन प्रबलत्वान्न विष्णुपरतेत्यत आह – **अन्तरधिकरणेति** ।

## ಸಾರ

ಒಟ್ಟು ಎರಡು ಪೂರ್ವಪಕ್ಷ. ಲಿಂಗ ಹಾಗೂ ಶ್ರುತಿಗಳೆರಡೂ ಸಾವಕಾಶಗಳೇ ಆಗಿವೆ. ಆದರೆ ಶ್ರುತಿಯು ಸ್ವಭಾವತಃ ಬಲಿಷ್ಠವಾಗಿದ್ದರಿಂದ ಪ್ರಬಲವೆನಿಸಿದ ಲಿಂಗವನ್ನು ಬಾಧಿಸುತ್ತದೆ. ಇದು ಸುಧೆಯ ಪೂರ್ವಪಕ್ಷ.

ಲಿಂಗ ಹಾಗೂ ಶ್ರುತಿ ಎರಡೂ ನಿರವಕಾಶಗಳಾಗಿವೆ. ಶ್ರುತಿಗೆ ನಿರವಕಾಶಪ್ರಕರಣದ ಅನುಗ್ರಹವಿದೆ. ಮತ್ತು ಸ್ವಭಾವತಃ ಪ್ರಾಬಲ್ಯವಿದೆ. ಇಂತಹ ಶ್ರುತಿಯಿಂದ ನಿರವಕಾಶಲಿಂಗವೇ ಬಾಧಿತವಾಗುತ್ತದೆ ಎಂದು ಟೀಕೆಯ ಪೂರ್ವಪಕ್ಷ.

ಟೀಕೆಯ ಪೂರ್ವಪಕ್ಷವನ್ನು ಹಿಂದೆ ಉಪಪಾದಿಸಿದ್ದಾಯಿತು. ಇಲ್ಲಿ ಸುಧೆಯ ಪೂರ್ವಪಕ್ಷವನ್ನು ವಿವರಿಸುತ್ತಿದ್ದಾರೆ. -- ಹಿಂದಿನ ಅಧಿಕರಣದ ನ್ಯಾಯದಂತೆ ಸಾವಕಾಶಶ್ರುತಿಗೆ ಬಾಧವನ್ನು ಹೇಳಬಹುದು. ಆದರೆ ಶ್ರುತಿಯು ಯಾವ ಪ್ರಕರಣವನ್ನು ಅವಲಂಬಿಸಿದೆಯೋ ಆ ಪ್ರಕರಣವು ನಿರವಕಾಶವಾಗಿದೆ. ಇದು ಅಗ್ನಿಸೂಕ್ತ ಹೊರತು ವಿಷ್ಣುಸೂಕ್ತವಲ್ಲ ಎಂಬ ಅಧ್ಯಾಪಕಪ್ರಸಿದ್ಧಿಯೇ ನಿರವಕಾಶತ್ವಸಂಪಾದಕವಾಗಿದೆ. ಹೀಗೆ ನಿರವಕಾಶ-ಪ್ರಕರಣದ ಅನುಗ್ರಹವಿರುವುದರಿಂದ ಶ್ರುತಿಯು ಬಲಿಷ್ಠವಾಗುತ್ತದೆ. ಅಷ್ಟೇ ಅಲ್ಲದೆ ಶ್ರುತಿತ್ವಪ್ರಯುಕ್ತವಾಗಿಯೂ ಬಲಿಷ್ಠವಾಗಿದೆ. ಹೀಗೆ ಎರಡು ಮುಖಗಳಿಂದ ಶ್ರುತಿಯು ಅತ್ಯಂತ ಪ್ರಬಲವೆನಿಸಿದೆ. ಆದರೆ ಲಿಂಗವು ಕೇವಲ ನಿರವಕಾಶಪ್ರಯುಕ್ತವಾಗಿ ಪ್ರಬಲವಾಗಿದೆ. ಈ ಲಿಂಗವು ನಿರವಕಾಶಪ್ರಕರಣದ ಅನುಗ್ರಹವಿರುವ ಶ್ರುತಿಯಿಂದ ಬಾಧಿತವಾಗುವುದರಲ್ಲಿ ಸಂದೇಹವಿಲ್ಲ. ಇನ್ನು ದುರ್ಬಲವಾದ ಅನೇಕ ಲಿಂಗಗಳ ಬೆಂಬಲವನ್ನು ಮುಂದಿ-ಡಬಹುದು. ಆದರೆ ಬಲಿಷ್ಠವಾದ ಶ್ರುತಿಯು ಆ ಎಲ್ಲ ಲಿಂಗಗಳನ್ನು ಶಕ್ತಿ ಇಲ್ಲದಂತೆ ಮಾಡುತ್ತದೆ. ನಿರವಕಾಶ-ಪ್ರಕರಣದ ಅನುಗ್ರಹವಿರುವ ಶ್ರುತಿಯಿಂದ ಲಿಂಗವು ಬಾಧಿತವಾಗುತ್ತದೆಂಬ ಈ ಪೂರ್ವಪಕ್ಷವನ್ನು ಹಿಂದಿನ ಮುಂದಿನ ಯಾವುದೇ ಅಧಿಕರಣಗಳಿಂದಲೂ ಪರಿಹರಿಸಲು ಸಾಧ್ಯವಿಲ್ಲದ ಕಾರಣ ಈ ಅಧಿಕರಣದ ಪ್ರವೃತ್ತಿಯು ಅನಿವಾರ್ಯವಾಗಿದೆ.

---

### ಟೀಕೆಯ ಪೂರ್ವಪಕ್ಷ ಸುಧೆಗೆ ಅನುಸಾರಿಯಾಗಿದೆ

## तात्पर्यचन्द्रिका

**यद्वा – सुधानुसारेण अत्रापि "सावकाशश्रुतिप्रकरणयोः" इति टीकायां सावकाशत्वं श्रुतेरेव विशेषणं, न तु प्रकरणस्य । टीकायां लिङ्गस्य सावकाशत्वोक्तिश्च कर्णादिविदूरत्वस्य निरवकाशत्वेऽपि गुहानिहितत्वस्य**

**सावकाशत्वमभिप्रेत्य वा, स्वतो निरवकाशस्यापि सूक्तानुगृहीत श्रुतिविरोधात् कल्प्यावकाशमभिप्रेत्य वा द्रष्टव्या । लिङ्गस्य श्रुतित एव बाधोक्तिरपि सावकाशलिङ्गाभिप्रायेति । एते च शङ्के प्रमाणाश्रिते ।**

**प्रमेयाश्रिता तु – तमोविरोधित्वस्य ज्योतिश्शब्दप्रवृत्तिनिमित्तस्य सर्वगतत्वेन तमसा सह स्थिते ब्रह्मण्ययोग इति । तत्र यद्यपि ''वैश्वानरो जायमानः'' इति अग्निसूक्ते वैश्वानरश्रुतिः जायमानत्वलिङ्गं चास्ति, तथाऽपि विष्णौ श्रुतेः सावकाशतायाः, वैश्वानराधिकरणे लिङ्गस्य सावकाशतायाश्च द्युभ्वाद्यधिकरणे कण्ठोक्तत्वात् न ताभ्यां पूर्वपक्षितं भाष्यटीकयोः ।**

ಅನುವಾದ - ಅಥವಾ ಟೀಕೆಯ ಪೂರ್ವಪಕ್ಷವು ಸುಧೆಗೆ ಅನುಸಾರಿಯೇ ಆಗಿದೆ. 'ಸಾವಕಾಶ-ಶ್ರುತಿಪ್ರಕರಣಯೋಃ' ಎಂಬ ಟೀಕೆಯಲ್ಲಿ ಸಾವಕಾಶತ್ವವು ಶ್ರುತಿಯಲ್ಲಷ್ಟೇ ವಿಶೇಷಣವಾಗಿದೆ. ಪ್ರಕರಣದಲ್ಲಲ್ಲ. ಅಂದರೆ ಶ್ರುತಿಯು ಸಾವಕಾಶವಾಗಬಹುದು. ಪ್ರಕರಣವು ಸಾವಕಾಶವಾಗಬೇಕಿಲ್ಲ. ಹಾಗಾದರೆ ಟೀಕೆಯಲ್ಲಿ ಲಿಂಗಕ್ಕೆ ಸಾವಕಾಶತ್ವ ಹೇಳಿದ್ದು ತಪ್ಪಲ್ಲವೇ? ಎಂದು ಪ್ರಶ್ನಿಸಬಾರದು. ಟೀಕೆಯಲ್ಲಿರುವ 'ಲಿಂಗವು ಸಾವಕಾಶ' ಎಂಬ ಮಾತಿಗೆ ಕರ್ಣಾದಿವಿದೂರತ್ವವು ಸಾವಕಾಶ ಎಂದರ್ಥವಲ್ಲ. ಗುಹಾನಿಹಿತತ್ವವು ಸಾವಕಾಶ ಎಂದರ್ಥ. ಅಥವಾ ಕರ್ಣಾದಿವಿದೂರತ್ವಲಿಂಗವು ಸ್ವತಃ ನಿರವಕಾಶವಾಗಿರಬಹುದು. ಆದರೆ ನಿರವಕಾಶಪ್ರಕರಣದ ಅನುಗ್ರಹವಿರುವ ಪ್ರಯುಕ್ತ ನಿರತಿಶಯವೈಭವವನ್ನು ಅಗ್ನಿಯಲ್ಲಿ ಸಾವಕಾಶ ಮಾಡಬಹುದು ಎಂದು ತಿಳಿಯಬೇಕು. ಲಿಂಗಕ್ಕೆ ಶ್ರುತಿಯಿಂದ ಹೇಳಿದ ಬಾಧವೆಂದರೆ ಸಾವಕಾಶಲಿಂಗವಷ್ಟೇ ಬಾಧಿತವಾಗುತ್ತದೆಂಬ ಅಭಿಪ್ರಾಯದಿಂದ. ಇಲ್ಲಿಯ ತನಕ ಮಾಡಿದ ಎರಡು ಪೂರ್ವಪಕ್ಷಗಳು ಪ್ರಮಾಣಾಶ್ರಿತವಾದವುಗಳು.

ಪ್ರಮೇಯಾಶ್ರಿತಪೂರ್ವಪಕ್ಷ ಹೀಗಿದೆ -- ತಮೋವಿರೋಧಿತ್ವವು ಜ್ಯೋತಿಶಬ್ದದ ಪ್ರವೃತ್ತಿನಿಮಿತ್ತ. ಸರ್ವಗತನಾದ ಬ್ರಹ್ಮನು ತಮಸ್ಸಿನ ಜೊತೆಗೂ ವಾಸ ಮಾಡುವಾಗ ತಮೋವಿರೋಧಿತ್ವವನ್ನು ಬ್ರಹ್ಮನಲ್ಲಿ ಹೊಂದಿಸಲಾಗದು. ಆದ್ದರಿಂದ ಜ್ಯೋತಿಶಬ್ದವು ಬ್ರಹ್ಮನನ್ನು ಪ್ರತಿಪಾದಿಸಲು ಸಾಧ್ಯವಿಲ್ಲ ಎಂದು.

ವಸ್ತುತಃ ಈ ಪ್ರಮೇಯಾಶ್ರಿತಪೂರ್ವಪಕ್ಷದಲ್ಲಿ ವೈಶ್ವಾನರೋ ಜಾಯಮಾನಃ' ಎಂಬ ಅಗ್ನಿ-ಸೂಕ್ತದಲ್ಲಿರುವ ವೈಶ್ವಾನರಶ್ರುತಿಯನ್ನು ಮತ್ತು ಜಾಯಮಾನತ್ವಲಿಂಗವನ್ನು ಆಧರಿಸಬಹುದು. ಆದರೆ ವೈಶ್ವನರಾಧಿಕರಣದಲ್ಲಿ ಹೇಳುವಂತೆ ಶ್ರುತಿಯು ವಿಷ್ಣುವಿನಲ್ಲಿ ಸಾವಕಾಶವಾಗುತ್ತದೆ. ದ್ಯುಭ್ವಾದ್ಯಧಿ-ಕರಣದಲ್ಲಿ ಜಾಯಮಾನತ್ವಲಿಂಗವೂ ಸಹ ಸಾವಕಾಶವೆಂದು ಕಂಠತಃ ಹೇಳಿದ್ದಾರೆ. ಹಾಗಾಗಿ

ವೈಶ್ವಾನರಶ್ರುತಿಯನ್ನಾಗಲೀ ಜಾಯಮಾನತ್ವಲಿಂಗವನ್ನಾಗಲೀ ಆಧರಿಸಿ ಭಾಷ್ಯ ಹಾಗೂ ಟೀಕೆಗಳಲ್ಲಿ ಪೂರ್ವಪಕ್ಷವನ್ನು ಮಾಡಿಲ್ಲ.

**प्रकाशः** – एवं पूर्वपक्षद्वयं प्रस्थानद्वयाभिमतमित्युपपाद्याधुना टीकाग्रन्थोऽपि लिङ्गप्रकरणयोः निरवकाशत्वमुपेत्याधिकाशङ्कयोत्थपूर्वपक्षपरो नेयः, तथा चैक एवोभयत्र पूर्वपक्ष इति भावेनाह – **यद्वेति** ॥ **श्रुतेरेवेति** ॥ तथा चोक्तदिशा सूक्तरूपप्रकरणं निरवकाशमित्यभिप्रेतमिति भावः ॥ **लिङ्गस्येति** ॥ अत एव **"जाठरजातवेदसि लिङ्गस्यापि सावकाशत्वात्"** इत्युक्तमिति भावः । कर्णादि-विदूरत्वादिसाधारण्येनाह – **स्वत इति** ॥ **एते चेति** ॥ **श्रुतिसूक्तयोः लिङ्गस्य साव-काशत्वमुपेत्योक्ता निरवकाशत्वमुपेत्योक्ता चेति शङ्काद्वयमित्यर्थः** ॥ **प्रमेयेति** ॥ इयं च पूर्वोत्तरनयानुव्याख्यानेन तुल्यन्यायतया सूचिता । भाष्यादावचातुर्य-माशङ्क्याह – **तत्रेति** ॥

ವಿವರಣೆ – ಇಲ್ಲಿಯ ತನಕ ಸುಧಾ ಹಾಗೂ ಟೀಕೆಗೆ ಅಭಿಮತವಾದ ಎರಡು ವಿಧ ಪೂರ್ವ-ಪಕ್ಷಗಳನ್ನು ಉಪಪಾದಿಸಿದರು. ಟೀಕೆಗೆ ಅನುಸಾರಿಯಾಗಿಯೇ ಸುಧೆಯ ಪೂರ್ವಪಕ್ಷವನ್ನು ಅರ್ಥೈಸಬೇಕೆಂದು ಮೊದಲು ವ್ಯಾಖ್ಯಾನಿಸಿ ಅನಂತರ ಟೀಕೆಯ ಪೂರ್ವಪಕ್ಷವೇ ಬೇರೆ, ಸುಧೆಯ ಪೂರ್ವಪಕ್ಷವೇ ಬೇರೆ; ಯಾವ ಪೂರ್ವಪಕ್ಷವನ್ನು ಆಶ್ರಯಿಸಿದರೂ ಈ ಅಧಿಕರಣವು ಸಾರ್ಥಕ-ವಾಗುತ್ತದೆಂದು ವ್ಯಾಖ್ಯಾನಿಸಿದರು.

ಪ್ರಕೃತ ಸುಧೆಗೆ ಅನುಸಾರಿಯಾಗಿ ಟೀಕೆಯ ಪೂರ್ವಪಕ್ಷವನ್ನು ಭಾವಿಸಬಹುದೆಂದು ವ್ಯಾಖ್ಯಾನಿ-ಸುತ್ತಿದ್ದಾರೆ. ಆದ್ದರಿಂದ ಈ ಅಧಿಕರಣದಲ್ಲಿ ಒಂದೇ ಪೂರ್ವಪಕ್ಷವನ್ನು ಎರಡು ಗ್ರಂಥಗಳಲ್ಲಿ ಹೇಳಿದ್ದಾರೆಂದು 'ಯದ್ವಾ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ. 'ಶ್ರುತೇರೇವ ವಿಶೇಷಣಂ' ಎಂದು ಹೇಳಿದ್ದರಿಂದ ಸೂಕ್ತರೂಪಪ್ರಕರಣಕ್ಕೆ ನಿರವಕಾಶತ್ವವನ್ನು ಒಪ್ಪಿದಂತಾಯಿತು. 'ಲಿಂಗಸ್ಯ ಸಾವಕಾಶತ್ವೋಕ್ತಿಶ್ಚ' ಎಂಬ ಮಾತಿನಿಂದ ಜಾಠರಾಗ್ನಿಯಲ್ಲಿ ಲಿಂಗವನ್ನು ಸಾವಕಾಶ ಮಾಡಿದಂತಾಯಿತು.

ಪ್ರಕರಣದ ಅನುಗ್ರಹವಿರುವ ಶ್ರುತಿ ಹಾಗೂ ಲಿಂಗ ಇವೆರಡನ್ನೂ ಸಾವಕಾಶವೆಂದು ಅಂಗೀಕರಿಸಿ ಮಾಡಿದ ಪೂರ್ವಪಕ್ಷ; ಹಾಗೂ ಎರಡನ್ನೂ ನಿರವಕಾಶವೆಂದು ಅಂಗೀಕರಿಸಿ ಮಾಡಿದ ಪೂರ್ವಪಕ್ಷ; ಈ ಎರಡು ಪೂರ್ವಪಕ್ಷಗಳೂ ಪ್ರಮಾಣಾಶ್ರಿತವಾಗಿವೆ ಎಂದು 'ಏತೇ ಚ' ಎಂಬ ವಾಕ್ಯದಿಂದ ಹೇಳಿದ್ದಾರೆ.

ಪ್ರಮೇಯಾಶ್ರಿತ ಪೂರ್ವಪಕ್ಷವು ಹಿಂದಿನ ಮುಂದಿನ ಅಧಿಕರಣಗಳ ಅನುವ್ಯಾಖ್ಯಾನದ ಸಮಾನನ್ಯಾಯದಿಂದ ಸೂಚಿತವಾಗಿದೆ. ಭಾಷ್ಯದಲ್ಲಿ ಅಚಾತುರ್ಯವನ್ನು ಶಂಕಿಸಿ 'ತತ್ರ' ಎಂಬ ಗ್ರಂಥದಿಂದ ತೋರಿಸಿದ್ದಾರೆ.

**गुरुराजीयम्** – ननु कर्णादिविदूरत्वरूपलिङ्गस्य सावकाशत्वस्य पूर्वपक्षिणाप्यनङ्गीकारात् सावकाशश्रुत्या निरवकाशलिङ्गबाध इति टीकोक्तः

पूर्वपक्षोऽनुपपन्न एवेत्यरुचेराह – ननु सामान्यतः प्रयुक्तस्य लिङ्गशब्दस्य गुहानिहितत्वरूपलिङ्गविशेषपरत्वे लिङ्गपदस्यास्वारस्यं भवतीत्यतः पक्षान्तरमाह – **स्वतो निरवकाशस्यापीति** ॥ नन्वेवमपि यावता श्रुतित एव लिङ्गं दुर्बलमिति टीकाविरोध इत्यत आह – **लिङ्गस्येति** ॥

## ಸಾರ

ಸುಧೆಗೆ ಅನುಸಾರಿಯಾಗಿಯೇ ಟೀಕೆಯ ಪೂರ್ವಪಕ್ಷವನ್ನು ಹೊಂದಿಸಬಹುದು. ಸುಧೆಗೆ ವಿರುದ್ಧವಾಗಿ ಟೀಕೆಯಲ್ಲಿ ಲಿಂಗ ಸಾವಕಾಶ ಎಂಬ ಮಾತು ಕಾಣಿಸುತ್ತದೆ. ಆದರೆ ಕರ್ಣಾದಿವಿದೂರತ್ವಲಿಂಗವು ಸಾವಕಾಶವೆಂದು ಇದರ ಅರ್ಥವಲ್ಲ. ಗುಹಾನಿಹಿತತ್ವವು ಸಾವಕಾಶ ಎಂದರ್ಥ. ಅಥವಾ ಕರ್ಣಾದಿವಿದೂರತ್ವಲಿಂಗವು ಸ್ವತಃ ನಿರವಕಾಶವಾಗಿದ್ದರೂ ನಿರವಕಾಶಪ್ರಕರಣದ ಅನುಗ್ರಹವಿರುವ ಶ್ರುತಿಯ ಬಲದಿಂದ ಕರ್ಣಾದಿವಿದೂರತ್ವವನ್ನು ಅಗ್ನಿಯಲ್ಲಿ ಸಾವಕಾಶ ಮಾಡಬಹುದು. ಹೀಗೆ ಟೀಕೆಯನ್ನು ಅರ್ಥೈಸಿದಾಗ ಸುಧೆಯ ಅಭಿಪ್ರಾಯವನ್ನೇ ಸ್ಪಷ್ಟ-ಪಡಿಸಿದಂತಾಗುತ್ತದೆ.

ಹೀಗೆ ಪ್ರಮಾಣಾಶ್ರಿತಪೂರ್ವಪಕ್ಷವನ್ನು ಎರಡು ಬಗೆಯಲ್ಲಿ ತಿಳಿಯಬೇಕು.

ಪ್ರಮೇಯಾಶ್ರಿತಪೂರ್ವಪಕ್ಷ. ತಮೋವಿರೋಧಿತ್ವವು ಜ್ಯೋತಿಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ತಮಸ್ಸಿನ ಜೊತೆಯಲ್ಲಿ ವಾಸಮಾಡುವ ಬ್ರಹ್ಮನಲ್ಲಿ ಈ ಪ್ರವೃತ್ತಿನಿಮಿತ್ತವನ್ನು ಕೂಡಿಸಲು ಸಾಧ್ಯವಿಲ್ಲ. ಆದ್ದರಿಂದ ಜ್ಯೋತಿಶಬ್ದದಿಂದ ಅಗ್ನಿಯೇ ಪ್ರತಿಪಾದ್ಯನಾಗುತ್ತಾನೆ; ವಿಷ್ಣುವಲ್ಲ.

---

## ಕರ್ಣಾದಿವಿದೂರತ್ವಲಿಂಗವು ವಿಷ್ಣುವಿನಲ್ಲಿ ಮಾತ್ರ
## (ಸಿದ್ಧಾಂತ)

### तात्पर्यचन्द्रिका

सिद्धान्तस्तु ॥

**कर्णादीनां विदूरत्वं विष्णोरन्यत्र नैव हि ।**
**अग्नेस्तु श्रुतिसूक्तादि सावकाशं परात्मनि ॥**

**कर्णादिविदूरत्वं हि 'इयत्' इति परिच्छेदानर्हवैभवत्वम्, न तु सर्वथा कर्णादि-विदूरत्वं, काप्यसम्भवात् । तच्च ''परो मात्रया'' इत्यादिभाष्योक्तश्रुतिभिर्निर-वकाशम् । न हि ''अग्निर्वै देवानामवमः'' इत्यवमतया, ''भीषाऽस्मादग्निस्तपति''**

**इति सभयतया, 'परि ह्येनं म्रियन्ते विद्युद्वृष्टिश्चन्द्रमा आदित्योऽग्निः'' इति मरणादिमत्तया च श्रुतस्य अग्नेरपरिच्छेद्यं वैभवम् । अग्निश्रुत्यादि तु ''अग्निनाऽग्निस्समिध्यते'' ''तद्देवा ज्योतिषां ज्योतिः'' ''नारायणपरो ज्योतिः'' ''विष्णुरेव ज्योतिः'' ''अहमग्निरहं हुतं'' ''ज्योतिषामपि तज्ज्योतिः'' इत्यादि श्रुतिस्मृतिभिः विष्णौ सावकाशम् । इदं न विष्णुसूक्तमित्यध्यापकप्रसिद्धिस्तु ''धान्यमसि'' इति मन्त्रस्य मांसहविष्कयागे निविष्टस्य 'मांसमसि' इत्यूहे कर्तव्ये ''मृगोऽसि'' इत्यूहवत् प्रसिद्धविष्ण्वादिशब्दाभावादज्ञानमूला । तदुक्तं न्यायविवरणे ''सन्दिग्धश्रुतिलिङ्गाभ्यामप्यसन्दिग्धयोः केवलयोरेव बलवत्त्वात्'' इति । अत्र च सन्दिग्धत्वं नाम सावकाशत्वम् ।**

ಅನುವಾದ - ಈ ಅಧಿಕರಣದ ಸಿದ್ಧಾಂತ ಹೀಗಿದೆ.

ಕರ್ಣಾದೀನಾಂ ವಿದೂರತ್ವಂ ವಿಷ್ಣೋರನ್ಯತ್ರ ನೈವ ಹಿ ।
ಅಗ್ನೇಸ್ತು ಶ್ರುತಿಸೂಕ್ತಾದಿ ಸಾವಕಾಶಂ ಪರಾತ್ಮನಿ ॥

ಕರ್ಣಾದಿವಿದೂರತ್ವಲಿಂಗವು ವಿಷ್ಣುವನ್ನು ಬಿಟ್ಟು ಬೇರೆಲ್ಲಿಯೂ ಬರುವುದಿಲ್ಲ. ಅಗ್ನಿವಿಷಯಕವಾದ ಶ್ರುತಿ ಸೂಕ್ತಾದಿಗಳು ಪರಮಾತ್ಮನಲ್ಲಿ ಸಾವಕಾಶವಾಗಿವೆ.

ಇಷ್ಟೇ ಎಂಬ ಪರಿಚ್ಛೇದವಿಲ್ಲದ ವೈಭವವನ್ನು ಕರ್ಣಾದಿವಿದೂರತ್ವಶಬ್ದ ಹೇಳುತ್ತದೆ; ಹೊರತು ಕಿವಿ ಮೊದಲಾದ ಯಾವುದೇ ಇಂದ್ರಿಯಗಳಿಂದ ಸರ್ವಥಾ ತಿಳಿಯಲಾರನೆಂದು ಅದರ ಅರ್ಥವಲ್ಲ. ಹಾಗಾದಲ್ಲಿ ಯಾವ ವಸ್ತುವೂ ಕರ್ಣಾದಿವಿದೂರವಾಗದಿರಬೇಕಾದೀತು. ಇಂತಹ ಕರ್ಣಾದಿ-ವಿದೂರತ್ವವು 'ಪರೋ ಮಾತ್ರಯಾ' ಎಂಬ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯಂತೆ ವಿಷ್ಣುವಿನಲ್ಲಿ ನಿರವಕಾಶವಾಗಿದೆ. ಯಾವುದೇ ಕಾರಣದಿಂದಲೂ ಅಗ್ನಿಯಲ್ಲಿ ಇದನ್ನು ಉಪಪಾದಿಸಲಾಗದು. ಏಕೆಂದರೆ 'ಅಗ್ನಿರ್ವೈ ದೇವಾನಾಮವಮಃ' ಎಂಬ ಶ್ರುತಿಯಿಂದ ಅಗ್ನಿಯು ಸ್ವೋತ್ತಮದೇವತೆಗಳಿಗಿಂತ ನೀಚನಾಗಿದ್ದಾನೆ; 'ಭೀಷಾಸ್ಮಾದಗ್ನಿಸ್ತಪತಿ' ಎಂಬ ಶ್ರುತಿಯಂತೆ ಭೀತನಾಗಿದ್ದಾನೆ; 'ಪರಿಹ್ಯೇನಂ ಮ್ರಿಯಂತೇ ವಿದ್ಯುದ್ವೃಷ್ಟಿಶ್ಚಂದ್ರಮಾ ಆದಿತ್ಯೋಗ್ನಿಃ' ಎಂಬ ಶ್ರುತಿಯಂತೆ ಮರಣಶೀಲನಾಗಿದ್ದಾನೆ. ಹೀಗೆ ಅನೇಕ ದೋಷಗಳಿಂದ ದುಷ್ಟನಾದ ಅಗ್ನಿಯಲ್ಲಿ ಅಪರಿಮಿತವೈಭವವನ್ನು ಹೇಳಲು ಹೇಗೆ ಸಾಧ್ಯ ?

ಆದರೆ ಅಗ್ನಿಶ್ರುತಿಯಾದರೂ ವಿಷ್ಣುವಿನಲ್ಲಿ ಸಾವಕಾಶವಾಗಿದೆ. 'ಅಗ್ನಿನಾಗ್ನಿಃ ಸಮಿಧ್ಯತೇ' 'ತದ್ದೇವಾ ಜ್ಯೋತಿಷಾಂ ಜ್ಯೋತಿಃ' 'ನಾರಾಯಣಪರೋ ಜ್ಯೋತಿಃ' ವಿಷ್ಣುರೇವ ಜ್ಯೋತಿಃ

ಅಹಮಗ್ನಿರಹಂ ಹುತಮ್ । ಜ್ಯೋತಿಷಾಮಪಿ ತಜ್ಜ್ಯೋತಿಃ' ಇತ್ಯಾದಿ ಶ್ರುತಿಸ್ಮೃತಿಗಳು ವಿಷ್ಣುವನ್ನು ಅಗ್ನಿಯೆನ್ನುತ್ತಿವೆ. ಹಾಗಾದರೆ 'ಇದಂ ನ ವಿಷ್ಣುಸೂಕ್ತಮ್ ಕಿಂತು ಅಗ್ನಿಸೂಕ್ತಮೇವ' (ಇದು ವಿಷ್ಣುಸೂಕ್ತವಲ್ಲ; ಅಗ್ನಿಸೂಕ್ತವೇ ಆಗಿದೆ) ಎಂಬ ಅಧ್ಯಾಪಕಪ್ರಸಿದ್ಧಿಯನ್ನು ಹೇಗೆ ಹೊಂದಿಸುವುದು? ಎಂಬ ಶಂಕೆಗೂ ಅವಕಾಶವಿಲ್ಲ. ಈ ಪ್ರಸಿದ್ಧಿಯು ಕೇವಲ ಅಜ್ಞಾನಮೂಲಕವಾಗಿದೆ. ಅಜ್ಞಾನ-ಮೂಲಕವಾದ ಪ್ರಸಿದ್ಧಿಯನ್ನು ಕಡೆಗಾಣಿಸಬೇಕೆನ್ನಲು ಪೂರ್ವಮೀಮಾಂಸೆಯೇ ದೃಷ್ಟಾಂತವಾಗಿದೆ. 'ಧಾನ್ಯಮಸಿ' ಎಂಬ ಮಂತ್ರವನ್ನು ಮಾಂಸಹವಿಷ್ಕಯಾಗದಲ್ಲಿ ಉಪಯೋಗಿಸಬೇಕು. ಆದರೆ ಧಾನ್ಯಕ್ಕೆ ಮಾಂಸಯಾಗದಲ್ಲಿ ಕೃತ್ಯವಿಲ್ಲದ ಕಾರಣ ಧಾನ್ಯಶಬ್ದವನ್ನು ತೆಗೆದು ಮಾಂಸಶಬ್ದವನ್ನು ಊಹಿಸಿ 'ಮಾಂಸಮಸಿ ಧಿನುಹಿ ದೇವಾನ್' ಎಂದು ಊಹಿಸಬೇಕು. ಒಂದು ವೇಳೆ 'ಮೃಗೋಸಿ' ಎಂದು ಊಹಿಸಿದರೆ ಅದು ಅಜ್ಞಾನಮೂಲಕವಾಗಿದೆಯೆಂದು ಪೂರ್ವಮೀಮಾಂಸೆಯಲ್ಲಿ ಉಪಪಾದಿಸಿದ್ದಾರೆ.

ಈ ವಿಷಯದಲ್ಲಿ ನ್ಯಾಯವಿವರಣದ ಮಾತು ಹೀಗಿದೆ - 'ಸಂದಿಗ್ಧಶ್ರುತಿಲಿಂಗಾಭ್ಯಾಮಪ್ಯ-ಸಂದಿಗ್ಧಯೋಃ ಕೇವಲಯೋರೇವ ಬಲವತ್ವಾತ್' (ಸಾವಕಾಶಶ್ರುತಿಲಿಂಗಗಳಿಗಿಂತ ನಿರವಕಾಶವಾದ ಕೇವಲ ಶ್ರುತಿಯಾಗಲೀ ಲಿಂಗವಾಗಲೀ ಬಲಿಷ್ಠವಾಗಿದೆ) ಎಂದು. ಇಲ್ಲಿರುವ ಸಂದಿಗ್ಧಶಬ್ದಕ್ಕೆ ಸಾವಕಾಶ ಎಂದರ್ಥ.

### ಕಠಿಣಪದಾರ್ಥ

ಪರಿಚ್ಛೇದಾನರ್ಹವೈಭವತ್ವಮ್ = ಪರಿಮಿತಿ ಇಲ್ಲವೆಂಬ ವೈಭವ ಗುಣವು; ಪರೋಮಾತ್ರಯಾ = ೧.ಇಂದ್ರಿಯಗಳಿಗಿಂತ ಉತ್ತಮನು; ೨.ಪರಿಮಿತಿ ಇಲ್ಲದವನು.; ಅವಮಃ = ನೀಚನು; ಅಸ್ಮಾತ್ ಭೀಷಾ = ವಿಷ್ಣುವಿನ ಭಯದಿಂದ; ಅಗ್ನಿನಾ = ಅಗ್ನಿನಾಮಕ ಪರಮಾತ್ಮನಿಂದ; ಸಮಿಧ್ಯತೇ = ಪ್ರಜ್ವಲಿಸುತ್ತಾನೆ; ಸಂದಿಗ್ಧಶ್ರುತಿಲಿಂಗಾಭ್ಯಾಮ್ = ನಿರವಕಾಶಶ್ರುತಿಲಿಂಗಗಳಿಗಿಂತ; ಕೇವಲಯೋಃ = ಪರಸ್ಪರ ನಿರಪೇಕ್ಷವಾದ ಶ್ರುತಿಲಿಂಗ-ಗಳಿಗಿಂತ.

**प्रकाशः – सिद्धान्तटीकां विवृण्वन् प्रमाणाश्रितशङ्काद्वयनिरासकन्यायौ तावत् सङ्गृह्णाह – कर्णादीनामिति ॥** आद्यार्धेन आद्यपक्षनिरासको न्याय उक्तः, उत्तरार्धेन द्वितीयपक्षनिरासक इति ध्येयम् । श्रुतेस्सावकाशत्वाविवादेऽपि दृष्टान्तत्वेन वा प्रमेयाश्रितशङ्कापक्षे निरवकाशत्वाभिमानाद्वा श्रुत्युक्तिः ।

तथा हि – अग्निसूक्तगतं ज्योतिर्विष्णुरेव, न त्वग्निः, चरणशब्दोक्त-कर्णादि-विदूरत्वरूपलिङ्गात् । नच श्रुतिलिङ्गाभ्यां लिङ्गस्य बाधः, तस्य निरवकाशत्वा-दित्याद्यः । द्वितीयस्तु ज्योतिर्विष्णुरेव, निरवकाशलिङ्गात् । नच निरवकाश-सूक्तानुगृहीतया श्रुत्या बाधः, तयोर्भगवति सावकाशत्वादिति ।

ननु कर्णादिविदूरत्वं श्रोत्रमनःप्रभृत्यविषयत्वम् । तच्च ब्रह्मणि न युक्तं, तस्य मनोवृत्तिविषयत्वादित्यतो विष्णौ लिङ्गस्य घटनां तावदाह – **कर्णादीति** ॥ **"अन्यत्र नैवे"** इत्युक्तनिरवकाशतामुपपादयन् पूर्वार्धं विशदयति – **तच्चेति** ॥ हिशब्दोक्तश्रुतीराह – **पर इति** ॥ मीयन्ते अनेन विषया इति मात्रा इन्द्रियगणः, ततः परोऽसीत्यर्थः । यद्वा मात्रायाः मितेः परः, अपरिमितोऽसीत्यर्थः । **"अग्निर्वै देवानामवमो विष्णुः परमः"** इति बह्वृचब्राह्मणे स्वोत्तमदेवावमतया **"श्रुतस्य"** इत्यन्वयः । यद्यपि **"भीषाऽस्मादग्निश्चेन्द्रश्च"** इत्येव तैत्तिरीयाणां पाठः, तथाऽपि **"भयादस्याग्निस्तपति"** इति श्रुत्यन्तरबलात् 'तपति' इत्यध्याहृत्योक्तम् । यद्वा **"भीषाऽस्मान्"** इति श्रुतिप्रतीकग्रहणम् । **"अग्निस्तपति"** इत्यन्या श्रुतिः । **'अस्माद्भीषा'** अस्य भयेनेत्यर्थः ॥ **परीति** ॥ **"तमेताः परिम्रियन्ते"** इति बह्वृच-ब्राह्मणं, **"म्रियन्ते पञ्चदेवताः"** इति ऋग्भाष्योक्तेः, 'परिह्वेनं' इत्यर्थानुवादः ।

नन्वेवं श्रुत्यादेरपि निरवकाशत्वे तौल्यमेव स्यादित्यत उत्तरार्धं विशदयति – **अग्नीति** ॥ "विष्णौ सावकाशं" इत्यन्वयः ।

**अग्निनाऽग्निस्समिध्यते कविर्गृहपतिर्युवा ।**
**हव्यवाड् जुह्वास्यः ॥**

इत्यत्राग्निसमिन्धकस्य भगवतोऽग्निशब्दवाच्यत्वोक्तेरिति भावः । यद्यप्यत्र 'अग्निना' गार्हपत्येनाहवनीयोऽग्निः समिध्यत इत्यर्थः सम्भवति । उक्तञ्च ऋग्भाष्ये – **अथवाऽऽहवनीयोऽग्निर्मथितेन समिध्यते ।**

इति, तथाऽपि –

**यस्यास्ये हूयते सोऽग्निः परेशेन समिध्यते ।**

इत्युक्तत्वादस्यैव च मुख्यत्वादेतदुदाहृतमिति ध्येयम् । **तद्देवा इति** वाजसनेये –

**यस्मादर्वाक् संवत्सरोऽहोभिः परिवर्तते ।**
**तद्देवा ज्योतिषां ज्योतिरायुर्होपासतेऽमृतम् ॥**

इति श्रुतस्य ज्योतिषां ज्योतिष्ट्वप्रदज्योतिषो ब्रह्मत्वं, अमृतत्वादिलिङ्गात् ''ज्योतिषैकेषां'' इति वक्ष्यमाणदिशा च सिद्धमिति भावः ।

**नारायणपरो ज्योतिरात्मा नारायणः परः ।**

इति नारायणोपनिषदि नारायण एव परं ज्योतिरिति परशब्दपर्यायपरश्शब्देनोत्तमज्योतिरित्युक्तेरिति भावः । **'विष्णुरेव ज्योतिर्विष्णुरेव ब्रह्म विष्णुरेवाऽऽत्मा विष्णुरेव बलं विष्णुरेव यशो विष्णुरेवाऽऽनन्दः'** इति चतुर्वेदशिखायां स्पष्टमेव ज्योतिष्ट्वं विष्णोः । स्मृतिमप्याह – **अहमिति ॥**

**अहं क्रतुरहं यज्ञः स्वधाऽहमहमौषधम् ।**
**मन्त्रोऽहमहमेवाज्यमहमग्निरहं हुतम् ॥**

इति गीतायां कृष्णेन स्वस्याग्निस्वरूपसत्तानियामकत्वोक्त्या स्वात्मनोऽग्निशब्दवाच्यत्वोक्तेः । न चात्राभेद उच्यते, विशिष्टाभेदस्य बाधात्, शुद्धे लक्षणापत्तेः, क्रत्वादिजडाभेदायोगाच्चेति भावः । तथा तत्रैव –

**ज्योतिषामपि तज्ज्योतिस्तमसः परमुच्यते ।**

इत्यत्र **''अनादिमत्परं ब्रह्म''** इति पूर्वप्रकृतब्रह्मण एव, तच्छब्देन परामृश्य ज्योतिषामपि प्रकाशनशक्तिप्रदत्वेन ज्योतिष्ट्वोक्तेः । आदिपदेन **''तच्छुभ्रं ज्योतिषां ज्योतिः''** इत्यादि गृह्यते । सूक्तस्य निरवकाशत्वं प्रागुक्तम नूद्य सदृष्टान्तं निरस्यति – **इदमिति ॥**

नवमे आद्यपादे **''गुणशब्दस्तथेति चेत्''** इति त्रयोदशोऽधिकरणे द्वितीयवर्णके चिन्तितं शाक्यानामयनाख्ये षड्विंशत्संवत्सरे सत्रे श्रुतं **''संस्थिते संस्थितेऽहनि गृहपतिर्मृगयां याति, स तत्र यान् मृगान् हन्ति, तेषां तरसमयाः पुरोडाशा भवन्ति''** इति । तेषु मांसमयेषु प्रकृतौ दृषदि पेषणाय तण्डुलानां विहितः **''धान्यमसि धिनुहि देवान्''** इति मन्त्रश्चोदकेन प्राप्तः । स किमूहितव्य उत नेति संशये,

धान्यशब्दस्य सतुषद्रव्यवाचितया प्रकृतौ तण्डुलप्रकाशनासामर्थ्येनासमवेतार्थत्वात् सौरयागे **''देवस्य त्वा''** इति मन्त्रगतसवित्रादिशब्दवन्नोहनीय इति प्राप्ते,

प्रकृतिविकारमूलया लक्षणया धान्यशब्दस्य तण्डुलप्रकाशकतया प्रकृतौ समवेतार्थत्वात् "**मांसमसि धिनुहि देवान्**" इत्यूहितव्य इति सिद्धान्त इति ॥

अत्र यथा प्रकृतौ लक्षणाया आर्थिकत्वेनाविवक्षितत्वात्स्वाधीने प्रयोगे लक्षणाश्रयणायोगान्न मांसलक्षकतया '**मृगोऽसि**' इत्यूहो न्याय्यः, याज्ञिकानां तु तादृशोहाभ्युपगमो यथाऽज्ञानमूलः, तथाऽध्यापकप्रसिद्धिरपि विष्ण्वादिशब्दाभाव-निमित्ताज्ञानमूलेत्यर्थः ।

**केवलयोरिति** ॥ अन्योन्यनिरपेक्षयोः श्रुतिलिङ्गयोरित्यर्थः। कथमिदमुक्तार्थ-संवादीत्यत आह – **अत्र चेति** ॥ असन्दिग्धत्वं च निरवकाशत्वमित्युक्तप्रायम् । उक्तञ्च तट्टीकायां – "**सावकाशेभ्योऽनेकेभ्योऽपि निरवकाशस्यैकस्यैव प्राबल्यात्**" इति । नन्वत्र सावकाशयोः श्रुतिलिङ्गयोरेव निरवकाशेन लिङ्गादिना बाधः प्रतीयते, न तु तादृशयोः श्रुतिप्रकरणयोः, न्यायविवरणटीकायां चास्य वाक्यस्याकाशप्राण-छन्दोऽधिकरणपरतया व्याख्यातत्वात् । तत्र च प्रकरणोपष्टम्भेन पूर्वपक्षाकरणात् कथमुक्तसंवादीति चेन्न, तुल्यन्यायतया वा, श्रुतिप्रकरणोपलक्षणत्वाशयेन वा, कैमुत्यन्यायसिद्धतया वाऽस्योदाहरणादिति ।

ವಿವರಣೆ - ಇಲ್ಲಿಯ ತನಕ ಎರಡು ಬಗೆಯ ಪ್ರಮಾಣಾಶ್ರಿತಪೂರ್ವಪಕ್ಷಗಳನ್ನು ಮತ್ತು ಪ್ರಮೇಯಾಶ್ರಿತ ಪೂರ್ವಪಕ್ಷವನ್ನು ತೋರಿಸಿದ್ದಾಯಿತು.

ಪ್ರಕೃತ ಸಿದ್ಧಾಂತವನ್ನು ಪ್ರಾರಂಭಿಸುತ್ತಿದ್ದಾರೆ. ಮೊದಲು ಸಿದ್ಧಾಂತಟೀಕೆಯನ್ನು ವ್ಯಾಖ್ಯಾನಿಸುವುದಕ್ಕಾಗಿ ಎರಡು ಪ್ರಮಾಣಾಶ್ರಿತಶಂಕೆಗಳನ್ನು ನಿರಾಸಮಾಡುವ ಎರಡು ನ್ಯಾಯಗಳನ್ನು ಶ್ಲೋಕದಲ್ಲಿ ಸಂಗ್ರಹಿಸುತ್ತಿದ್ದಾರೆ. ಶ್ಲೋಕದ ಮೊದಲ ಅರ್ಧದಿಂದ ಕರ್ಣಾದಿವಿದೂರತ್ವಲಿಂಗವು ನಿರವಕಾಶವಾಗಿದೆ ಎಂಬ ನ್ಯಾಯವನ್ನು ಹೇಳಿದ್ದಾರೆ. ಇದರಿಂದ ಮೊದಲ ಪೂರ್ವಪಕ್ಷವು ನಿರಾಕೃತವಾಗುತ್ತದೆ. ಮುಂದಿನ ಅರ್ಧಶ್ಲೋಕದಿಂದ ಅಗ್ನಿಶ್ರುತಿ ಹಾಗೂ ಅಗ್ನಿಪ್ರಕರಣಗಳು ಸಾವಕಾಶವಾಗಿವೆ ಎಂಬ ನ್ಯಾಯವನ್ನು ಹೇಳಿದ್ದಾರೆ. ಇದರಿಂದ ಎರಡನೆಯ ಪೂರ್ವಪಕ್ಷವು ನಿರಾಸವಾಗಿದೆ.

ಗ್ರಂಥಕಾರರು ಶ್ರುತಿ ಹಾಗೂ ಸೂಕ್ತಗಳನ್ನು ಶ್ಲೋಕದಲ್ಲಿ ಸಾವಕಾಶವೆಂದಿದ್ದಾರೆ. ವಸ್ತುತಃ ಸೂಕ್ತವೊಂದಷ್ಟೇ ಸಾವಕಾಶವೆನ್ನಬೇಕು. ಶ್ರುತಿ ಸಾವಕಾಶವೆಂಬ ವಿಷಯದಲ್ಲಿ ಪೂರ್ವಪಕ್ಷಿಗೆ ವಿವಾದವಿಲ್ಲ. ಆದರೂ ಸಹ ಶ್ರುತಿಯು ಹೇಗೆ ಸಾವಕಾಶವೋ ಆದರಂತೆ ಸೂಕ್ತವೂ ಸಹ ಎಂಬ ದೃಷ್ಟಾಂತಕ್ಕಾಗಿ ಶ್ರುತಿಯನ್ನು ಉಲ್ಲೇಖಿಸಿದ್ದಾರೆ. ಅಥವಾ ಪ್ರಮೇಯಾಶ್ರಿತಪೂರ್ವಪಕ್ಷದಲ್ಲಿ ತಮೋ ವಿರೋಧಿತ್ವವು ವಿಷ್ಣುವಿನಲ್ಲಿ ಬರುವುದೇ ಇಲ್ಲವೆಂದು ಶಂಕಿಸಿದ್ದರಿಂದ ಜ್ಯೋತಿಶ್ರುತಿಯು ನಿರವಕಾಶವೆಂದೇ ಪೂರ್ವಪಕ್ಷಿಯು ಅಭಿಮಾನ ಪಡುತ್ತಾನೆ. ಅದರ ನಿರಾಸಕ್ಕಾಗಿಯೂ ಶ್ರುತಿಶಬ್ದವನ್ನು ಉಲ್ಲೇಖಿಸಿದ್ದಾರೆ.

ಶ್ಲೋಕದ ವಿವರ ಹೀಗಿದೆ - ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ವಿಷ್ಣುವೇ ಆಗಿದ್ದಾನೆ; ಹೊರತು ಅಗ್ನಿಯಲ್ಲ. ಚರಣಶಬ್ದದಿಂದ ಕೇಳಿಸುವ ಕರ್ಣಾದಿವಿದೂರತ್ವಲಿಂಗವೇ ಇದನ್ನು ಸಾಧಿಸುತ್ತದೆ. ಶ್ರುತಿ ಹಾಗೂ ಸೂಕ್ತಗಳಿಂದ ಕರ್ಣಾದಿವಿದೂರತ್ವಲಿಂಗಕ್ಕೆ ಬಾಧವನ್ನು ಹೇಳಲಾಗದು. ಶ್ರುತಿಯು ಸೂಕ್ತಗಳಿಗಿಂತಲೂ ನಿರವಕಾಶವಾದ್ದರಿಂದ ಕರ್ಣಾದಿವಿದೂರತ್ವಲಿಂಗವು ಬಲಿಷ್ಠವಾಗಿದೆ. ಎರಡನೆಯ ಪೂರ್ವಪಕ್ಷದ ನಿರಾಕರಣೆ ಹೀಗಿದೆ -- ಜ್ಯೋತಿಯು ವಿಷ್ಣುವೇ ಆಗಿದ್ದಾನೆ. ಕರ್ಣಾದಿವಿದೂರತ್ವವೆಂಬ ನಿರವಕಾಶಲಿಂಗವು ಇದನ್ನು ಸಾಧಿಸುವುದರಿಂದ. ನಿರವಕಾಶಪ್ರಕರಣದ ಅನುಗ್ರಹವಿರುವ ಶ್ರುತಿಯಿಂದ ನಿರವಕಾಶಲಿಂಗಕ್ಕೆ ಬಾಧವನ್ನು ಹೇಳಲಾಗದು. ಏಕೆಂದರೆ ಶ್ರುತಿ, ಸೂಕ್ತಗಳು ಭಗವಂತನಲ್ಲಿ ಸಾವಕಾಶಗಳಾಗಿವೆ.

ಕರ್ಣಾದಿವಿದೂರತ್ವಶಬ್ದಕ್ಕೆ ಶ್ರೋತ್ರಮನಸ್ಸು ಮೊದಲಾದ ಇಂದ್ರಿಯಗಳಿಗೆ ವಿಷಯವಾಗದಿರುವಿಕೆ ಎಂದರ್ಥ. ಇದು ಬ್ರಹ್ಮನಲ್ಲಿ ಕೂಡುವುದಿಲ್ಲ. ಬ್ರಹ್ಮನು ಮನಸ್ಸಿಗೆ ವಿಷಯನಾದ್ದರಿಂದ. ಆದ್ದರಿಂದ ವಿಷ್ಣುವಿನಲ್ಲಿ ಕರ್ಣಾದಿವಿದೂರತ್ವಲಿಂಗವನ್ನು ಹೇಗೆ ಕೂಡಿಸುತ್ತೀರಿ? ಎಂಬ ಪ್ರಶ್ನೆಗೆ 'ಕರ್ಣಾದಿವಿದೂರತ್ವಂ' ಎಂಬ ಗ್ರಂಥದಿಂದ ವಿವರಿಸುತ್ತಿದ್ದಾರೆ. ಈ ಲಿಂಗವು ವಿಷ್ಣುವನ್ನು ಬಿಟ್ಟು ಬೇರೆ ಯಾರಲ್ಲಿಯೂ ಬರಲಾರದೆಂದು ಪ್ರತಿಪಾದಿಸಲು ಶ್ಲೋಕದ ಪೂರ್ವಾರ್ಧವನ್ನು 'ತಚ್ಚ' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ. ಶ್ಲೋಕದಲ್ಲಿರುವ ಈ ಶಬ್ದದಿಂದ ಸೂಚಿಸಿದ ಶ್ರುತಿಗಳನ್ನು 'ಪರೋ ಮಾತ್ರಯಾ' ಇತ್ಯಾದಿ ಗ್ರಂಥದಿಂದ ತೋರಿಸಿದ್ದಾರೆ. 'ಮೀಯಂತೇ ಅನೇನ ವಿಷಯಾಃ ಇತಿ ಮಾತ್ರಾಃ' (ಯಾವ ಇಂದ್ರಿಯದಿಂದ ವಿಷಯಗಳು ತಿಳಿಯಲ್ಪಡುತ್ತವೋ) ಅಂತಹ ಇಂದ್ರಿಯಗಣಗಳನ್ನು ಮೀರಿದವನು ಎಂದು 'ಪರೋ ಮಾತ್ರಯಾ' ಎಂಬ ಶ್ರುತಿಗೆ ಅರ್ಥ. ಅಂದರೆ ಇಂದ್ರಿಯ ಸಮೂಹಗಳಿಗೆ ವಿಷ್ಣು ಗೋಚರನಾಗಲಾರ ಎಂದು ತಿಳಿಯುತ್ತದೆ. ಅಥವಾ 'ಮಾತ್ರಾ' ಶಬ್ದಕ್ಕೆ 'ಪರಿಮಿತಿ' ಎಂದರ್ಥ. 'ಪರೋ ಮಾತ್ರಯಾ' ಎಂಬುದರಿಂದ ಅಪರಿಮಿತನಾಗಿದ್ದಿ ಎಂಬರ್ಥವು ತಿಳಿಯುತ್ತದೆ.

'ಅಗ್ನಿರ್ವೈ ದೇವಾನಾಮವಮೋ ವಿಷ್ಣುಃ ಪರಮಃ' ಎಂಬ ಬಹ್ವೃಚಬ್ರಾಹ್ಮಣದಲ್ಲಿ ಸ್ವೋತ್ತಮ-ದೇವತೆಗಳಿಗಿಂತ ಅಗ್ನಿಯು ಅಧಮನೆಂದು ಹೇಳಲಾಗಿದೆ. ಗ್ರಂಥಕಾರರು 'ಭೀಷಾಸ್ಮಾದಗ್ನಿಸ್ತಪತಿ' ಎಂಬ ಶ್ರುತಿಯನ್ನು ಉಲ್ಲೇಖಿಸಿದ್ದಾರೆ. ವಸ್ತುತಃ ತೈತ್ತಿರೀಯದಲ್ಲಿ 'ಭೀಷಾಸ್ಮಾದಗ್ನಿಶ್ಚೇಂದ್ರಶ್ಚ' ಎಂಬ ಪಾಠವಿದೆ. ಆದರೆ ಗ್ರಂಥಕಾರರು ಇಲ್ಲಿ 'ತಪತಿ' ಎಂಬ ಶಬ್ದದಿಂದ 'ಭಯಾದಸ್ಯಾಗ್ನಿಸ್ತಪತಿ' ಎಂಬ ಬೇರೆ ಶ್ರುತಿಯಲ್ಲಿರುವ ತಪತಿ ಶಬ್ದವನ್ನು ತೈತ್ತಿರೀಯದಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಸೂಚಿಸಿದ್ದಾರೆ.

ಅಥವಾ 'ಭೀಷಾಸ್ಮಾತ್' ಎಂಬುದೇ ಬೇರೆ ಶ್ರುತಿ; 'ಅಗ್ನಿಸ್ತಪತಿ' ಎಂಬುದೇ ಬೇರೆ ಶ್ರುತಿಯೆಂದು ತಿಳಿಯಬೇಕು. ಅಗ್ನಿಯು ವಿಷ್ಣುವಿನಿಂದ ಹೆದರುತ್ತಾನೆಂದು ಇದರ ಅರ್ಥ. 'ತಮೇತಾಃ ಪರಿಮ್ರಿಯಂತೇ' ಎಂಬುದು ಬಹ್ವೃಚಬ್ರಾಹ್ಮಣ. 'ಮ್ರಿಯಂತೇ ಪಂಚದೇವತಾಃ' ಎಂಬ ಋಗ್ಭಾಷ್ಯದ ಮಾತಿನಂತೆ ಗ್ರಂಥಕಾರರು ಹೇಳಿದ 'ಪರಿಹ್ಯೇನಂ ಮ್ರಿಯಂತೇ' ಎಂಬುದು ಬಹ್ವೃಚಬ್ರಾಹ್ಮಣದ ಅರ್ಥಾನುವಾದವಷ್ಟೇ ಆಗಿದೆ; ಹೊರತು ಶ್ರುತಿಯು ಹಾಗಿಲ್ಲ.

ಕರ್ಣಾದಿವಿದೂರತ್ವಲಿಂಗದಂತೆ ಅಗ್ನಿಶ್ರುತಿ ಮೊದಲಾದವೂ ಕೂಡ ನಿರವಕಾಶಗಳಾಗಿವೆ. ಎರಡೂ ನಿರವಕಾಶಗಳಾಗಿ ಸಮಬಲವಾದಾಗ ಲಿಂಗದಿಂದ ಶ್ರುತಿಗೆ ಬಾಧವನ್ನು ಹೇಳಲು ಹೇಗೆ ಸಾಧ್ಯ ? ಎಂಬ

ಪ್ರಶ್ನೆಗೆ ಶ್ಲೋಕದ ಉತ್ತರಾರ್ಧವನ್ನು ವ್ಯಾಖ್ಯಾನಿಸುವ ಮೂಲಕ ಉತ್ತರಿಸುತ್ತಿದ್ದಾರೆ 'ಅಗ್ನಿಶ್ರುತ್ಯಾದಿ' ಇತ್ಯಾದಿ ವಾಕ್ಯದಿಂದ. ಅಗ್ನಿಶ್ರುತ್ಯಾದಿ ತು ಎಂಬ ಪದಕ್ಕೆ ವಿಷ್ಣೌ ಸಾವಕಾಶಮ್ ಎಂಬಲ್ಲಿ ಅನ್ವಯ.

ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ ।
ಹವ್ಯವಾಡ್ ಜುಹ್ವಾಸ್ಯಃ'

ಎಂಬ ಶ್ರುತಿಯಲ್ಲಿ ಅಗ್ನಿಗೆ ತನ್ನಿಂದಲೇ ವೃದ್ಧಿಯನ್ನು ಹೇಳಿದಂತೆ ಕಾಣುತ್ತದೆ. ಆದರೆ ತನ್ನಿಂದಲೇ ತನಗೆ ವೃದ್ಧಿಯು ಹೇಗೆ ಸಾಧ್ಯ ? ಆದ್ದರಿಂದ 'ಅಗ್ನಿನಾ' ಎಂಬ ಪದಕ್ಕೆ ಅಗ್ನಿಯೆಂಬ ಪರಮಾತ್ಮನಿಂದ ಎಂದು ಅರ್ಥೈಸಬೇಕು. ವಸ್ತುತಃ ಋಗ್ಭಾಷ್ಯದಲ್ಲಿ 'ಅಥವಾ ಆಹವನೀಯೋಗ್ನಿರ್ಮಥಿತೇನ ಸಮಿಧ್ಯತೇ' ಎಂದು ಅಗ್ನಿನಾ ಎಂಬ ಪದಕ್ಕೆ ಗಾರ್ಹಪತ್ಯಾಗ್ನಿಯಿಂದ ಆಹವನೀಯಾಗ್ನಿಯು ಅಭಿವೃದ್ಧವಾಗುತ್ತದೆಂದು ಹೇಳಿದ್ದಾರೆ. ಆದರೆ ಅದೇ ಋಗ್ಭಾಷ್ಯದಲ್ಲಿ 'ಯಸ್ಯಾಽಸ್ಯೇ ಹೂಯತೇ ಸೋಗ್ನಿಃ ಪರೇಶೇನ ಸಮಿಧ್ಯತೇ' ಎಂದು ಭಗವಂತನಿಂದ ಅಗ್ನಿಯ ಅಭಿವೃದ್ಧಿಯನ್ನು ಕೂಡ ಹೇಳಿದ್ದಾರೆ. ಈ ಎರಡೂ ಅರ್ಥಗಳಲ್ಲಿ 'ಯಸ್ಯಾಽಸ್ಯೇ' ಎಂಬ ಅರ್ಥವೇ ಮುಖ್ಯವಾದ್ದರಿಂದ ಅಗ್ನಿಶಬ್ದದಿಂದ ಪರಮಾತ್ಮನು ವಾಚ್ಯನೆನ್ನಲು ಗ್ರಂಥಕಾರರು 'ಅಗ್ನಿನಾಗ್ನಿಃ ಸಮಿಧ್ಯತೇ' ಎಂಬುದನ್ನು ಉದಾಹರಿಸಿದ್ದಾರೆ.

'ಯಸ್ಮಾದರ್ವಾಕ್ ಸಂವತ್ಸರೋಽಹೋಭಿಃ ಪರಿವರ್ತತೇ ತದ್ದೇವಾ ಜ್ಯೋತಿಷಾಂ ಜ್ಯೋತಿರಾಯು-ರ್ಹೋಪಾಸತೇಽಮೃತಮ್' (ಯಾವನ ವಶದಲ್ಲಿ ಈ ಸಂವತ್ಸರವು ಅಹೋರಾತ್ರಿಗಳಿಂದ ಪರಿವರ್ತನೆಯಾಗುತ್ತಿದೆಯೋ ಅಂತಹ ಜ್ಯೋತಿಗಳಿಗೂ ಜ್ಯೋತಿಯಾದ ಬ್ರಹ್ಮನನ್ನು ದೇವತೆಗಳು ಅಮೃತ ಎಂದು ಉಪಾಸಿಸುತ್ತಾರೆ) ಈ ವಾಜಸನೇಯಶ್ರುತಿಯಲ್ಲಿ ದೇವೋಪಾಸ್ಯತ್ವ ಹಾಗೂ ಅಮೃತತ್ವ ಮೊದಲಾದ ಲಿಂಗಗಳನ್ನು ಹೇಳಿದ್ದರಿಂದ ಬ್ರಹ್ಮನೇ ಜ್ಯೋತಿಶಬ್ದದಿಂದ ಪ್ರತಿಪಾದ್ಯನೆಂದು ತಿಳಿಯುತ್ತದೆ. ಮತ್ತು ನಾಲ್ಕನೆಯ ಪಾದದ 'ನ ಸಂಖ್ಯೋಪಸಂಗ್ರಹಾತ್' 'ಜ್ಯೋತಿಷೈಕೇಷಾಮ್' ಇತ್ಯಾದಿ ಸೂತ್ರಗಳಲ್ಲಿ ಜ್ಯೋತಿಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನೆಂದು ಸ್ಪಷ್ಟವಾಗಿ ನಿರ್ಣಯಿಸಲಾಗಿದೆ.

'ನಾರಾಯಣಪರೋ ಜ್ಯೋತಿರಾತ್ಮಾ ನಾರಾಯಣಃ ಪರಃ' ಎಂದು ನಾರಾಯಣೋಪನಿಷತ್ತಿನಲ್ಲಿ ನಾರಾಯಣನೇ ಪರಂಜ್ಯೋತಿ (ಉತ್ತಮಜ್ಯೋತಿ) ಎಂದು ತಿಳಿಯುತ್ತದೆ. ಈ ಶ್ರುತಿಯಲ್ಲಿ ವಸ್ತುತಃ ಜ್ಯೋತಿಶಬ್ದ ನಪುಂಸಕಲಿಂಗವಾದ್ದರಿಂದ ಪರಂಜ್ಯೋತಿಃ ಎಂದು ಹೇಳಬೇಕು. ಆದರೆ 'ಪೃ ಪಾಲನಪೂರಣಯೋಃ' ಎಂಬ ಧಾತುವಿನ ಮೇಲೆ ಅಸುನ್ ಪ್ರತ್ಯಯ ಬಂದಾಗ 'ಪರಸ್' ಎಂದು ಸಕಾರಾಂತಪ್ರಾತಿಪದಿಕವಾಗುತ್ತದೆ. ಆದ್ದರಿಂದ ಪರಃ ಎಂಬುದೂ ಸಹ ನಪುಂಸಕಲಿಂಗವೇ ಹೊರತು ಪುಲ್ಲಿಂಗಶಬ್ದವಲ್ಲ.

'ವಿಷ್ಣುರೇವ ಜ್ಯೋತಿರ್ವಿಷ್ಣುರೇವ ಬ್ರಹ್ಮ ವಿಷ್ಣುರೇವಾತ್ಮಾ ವಿಷ್ಣುರೇವ ಬಲಂ ವಿಷ್ಣುರೇವ ಯಶೋ ವಿಷ್ಣುರೇವಾನಂದಃ' ಹೀಗೆ ಚತುರ್ವೇದಶಿಖೆಯಲ್ಲಿ ಅವಧಾರಣಪೂರ್ವಕವಾಗಿ ವಿಷ್ಣುವೇ ಜ್ಯೋತಿ-ಯೆಂದು ಸ್ಪಷ್ಟವಾಗಿ ತಿಳಿಯುತ್ತಿದೆ. ವಿಷ್ಣುವು ಜ್ಯೋತಿಯೆನ್ನಲು ಕೇವಲ ಶ್ರುತಿಗಳಷ್ಟೇ ಅಲ್ಲ ಸ್ಮೃತಿಯೂ ಪ್ರಮಾಣವಾಗಿದೆ.

ಅಹಂ ಕ್ರತುರಹಂ ಯಜ್ಞಃ ಸ್ವಧಾಽಹಮಹಮೌಷಧಮ್ ।
ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥

ಹೀಗೆ ಗೀತೆಯಲ್ಲಿ ಕೃಷ್ಣನು ಅಗ್ನಿಯ ಸ್ವರೂಪಕ್ಕೂ ಮತ್ತು ಅಗ್ನಿಯ ಇರುವಿಕೆಗೂ ತನ್ನನ್ನು ನಿಯಾಮಕನೆಂದು ಹೇಳಿದ್ದಾನೆ. ಆದ್ದರಿಂದಲೇ ತನ್ನನ್ನು ಅಗ್ನಿಶಬ್ದವಾಚ್ಯನೆಂದೂ ಸಹ ತಿಳಿಸಿದ್ದಾನೆ. ಗೀತೆಯ ಈ ಶ್ಲೋಕಕ್ಕೆ ಅಗ್ನಿನಿಯಾಮಕತ್ವ ಎಂಬ ಅರ್ಥವನ್ನು ಹೇಳಬೇಕು ಹೊರತು; ಅಗ್ನಿಗೂ ಹಾಗೂ ಪರಮಾತ್ಮನಿಗೂ ಅಭೇದವನ್ನು ಹೇಳಬಾರದು. ಅಭೇದವನ್ನು ಹೇಳುವುದಾದರೆ ವಿಶಿಷ್ಟನಾದ ಅಗ್ನಿಗೂ ವಿಶಿಷ್ಟನಾದ ಕೃಷ್ಣನಿಗೂ ಅಭೇದವನ್ನು ಹೇಳಿದಂತಾಯಿತು. ಈ ಅಭೇದವನ್ನು ಅದ್ವೈತಿಗಳೇ ಒಪ್ಪಲಾರರು.

ಇನ್ನು ಇಬ್ಬರಲ್ಲಿರುವ ಚಿನ್ಮಾತ್ರಕ್ಕಷ್ಟೇ ಅಭೇದವನ್ನು ಹೇಳಬೇಕು. ಹಾಗಾದಲ್ಲಿ ಲಕ್ಷಣಾ ಮಾಡಬೇಕಾಗುತ್ತದೆ. ಒಂದು ವೇಳೆ ಅಗ್ನಿಶಬ್ದಕ್ಕೆ ಲಕ್ಷಣಾ ಮಾಡಿದರೂ ಸಹ ಕ್ರತು ಮೊದಲಾದ ಜಡಪದಾರ್ಥಗಳಿಗೆ ಲಕ್ಷಣಾ ಮಾಡಿಯೂ ಕೂಡ ಅಭೇದವನ್ನು ಹೇಳಲು ಸಾಧ್ಯವಿಲ್ಲ. ಇದರಂತೆ ಗೀತೆಯಲ್ಲಿಯೇ 'ಜ್ಯೋತಿಷಾಮಪಿ ತಜ್ಜ್ಯೋತಿಃ ತಮಸಃ ಪರಮುಚ್ಯತೇ' ಎಂಬ ಮತ್ತೊಂದು ಮಾತು ಕೇಳಿಸುತ್ತಿದೆ. ಇಲ್ಲಿರುವ ತತ್‌ಶಬ್ದದಿಂದ 'ಅನಾದಿಮತ್ಪರಂ ಬ್ರಹ್ಮ' ಎಂಬ ಪೂರ್ವಪ್ರಕೃತನಾದ ಬ್ರಹ್ಮನನ್ನು ಪರಾಮರ್ಶ ಮಾಡಬೇಕು. ಆವಾಗ ಸಕಲಜ್ಯೋತಿಗಳಿಗೂ ಪ್ರಕಾಶನಶಕ್ತಿಯನ್ನು ನೀಡುವವನಾದ್ದರಿಂದ ವಿಷ್ಣುವು ಜ್ಯೋತಿಯೆನಿಸುತ್ತಾನೆ. ಗ್ರಂಥದಲ್ಲಿರುವ ಆದಿಪದದಿಂದ 'ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಃ' ಇತ್ಯಾದಿ ಶ್ರುತಿಸ್ಮೃತಿಗಳನ್ನು ವಿವಕ್ಷಿಸಬೇಕು.

ಪೂರ್ವಪಕ್ಷ ಮಾಡುವ ಸಂದರ್ಭದಲ್ಲಿ ಅಗ್ನಿಪ್ರಕರಣವನ್ನು ನಿರವಕಾಶವೆಂದಿದ್ದರು. ಅದನ್ನು ಅನುವಾದ ಮಾಡಿ ದೃಷ್ಟಾಂತದ ಮೂಲಕ 'ಇದಂ' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ.

## ಧಾನ್ಯಶಬ್ದಸ್ಯೋಹಾಧಿಕರಣಮ್
### ಸೂತ್ರ : ಗುಣಶಬ್ದಸ್ತಥೇತಿ ಚೇತ್[೯೨] (೯/೧/೧೩)

೨೧೬ ವರ್ಷಗಳ ಕಾಲ ಶಾಕ್ಯಾನಾಮಯನ ಎಂಬ ಸತ್ರವನ್ನು ಆಚರಿಸಬೇಕು. ಆ ಸಂದರ್ಭದಲ್ಲಿ 'ಸಂಸ್ಥಿತೇ ಸಂಸ್ಥಿತೇಽಹನಿ ಗೃಹಪತಿರ್ಮೃಗಯಾಂ ಯಾತಿ । ಸ ತತ್ರ ಯಾನ್ ಮೃಗಾನ್ ಹಂತಿ ತೇಷಾಂ ತರಸಮಯಾಃ ಪುರೋಡಾಶಾಃ' ಎಂಬ ವಿಧಿಯು ಕೇಳಿಸುತ್ತಿದೆ. ಪ್ರತಿಯೊಂದು ದಿವಸದ ಯಾಗಗಳು ಮುಗಿದ ಮೇಲೆ ಯಜಮಾನನು ಬೇಟೆಗಾಗಿ ಹೋಗಬೇಕು. ಅಲ್ಲಿ ಯಾವ ಮೃಗವನ್ನು ಕೊಲ್ಲುತ್ತಾನೋ ಆ ಮೃಗದ ಮಾಂಸವೇ ಮರುದಿವಸದ ಯಾಗಕ್ಕೆ ಪುರೋಡಾಶ ಎಂದು ಈ ಶ್ರುತಿಯ ಅರ್ಥ. ಈ

भाट्टसङ्ग्रहः –

**गुणशब्दस्तथेति चेत् ॥ ३७ ॥ (न समवयात् ॥ ३८ ॥)**

**वर्णकान्तरन्तु,** दर्शपूर्णमासयोः ''धान्यमसि धिनुहि देवान्'' इति दृषदि तण्डुलाधिवपनार्थमन्त्रे, तण्डुलेषु विनियुज्यमानो धान्यशब्दः किं समवेतप्रकाशनार्थः, उतासमवेतार्थक इति **सन्देहे,** धान्यशब्दस्य सतुषद्व्यवाचितया वितुषीभूततण्डुलप्रकाशने

[೯೨] ಜ್ಯೋತಿರಧಿಕರಣ (೧।೧।೧೦)

ಯಾಗದ ಪ್ರಕೃತಿಯಾಗದಲ್ಲಿ ಕಲ್ಲಿನ ಮೇಲೆ ತಂಡುಲಗಳನ್ನು ಹಾಕಿ, 'ಧಾನ್ಯಮಸಿ ಧಿನುಹಿ ದೇವಾನ್' ಎಂಬ ಮಂತ್ರದಿಂದ ಕುಟ್ಟಬೇಕು. ಈ ಮಂತ್ರವು ವಿಕೃತಿಯಾಗದಲ್ಲಿಯೂ ಚೋದಕಪ್ರಮಾಣ(ಪ್ರಕೃತಿವತ್ ವಿಕೃತಿಃ ಕರ್ತವ್ಯಾ)ದಿಂದ ಪ್ರಾಪ್ತವಾಗಿದೆ. ಈ ಸಂದರ್ಭದಲ್ಲಿ ಬರುವ ಸಂಶಯ ಹೀಗಿದೆ. ಧಾನ್ಯಶಬ್ದವನ್ನು ತೆಗೆದು ಮಾಂಸಶಬ್ದವನ್ನು ಊಹಿಸಬೇಕೋ ಬೇಡವೋ? ಎಂದು.

ಪೂರ್ವಪಕ್ಷ - ಧಾನ್ಯಶಬ್ದವು ಭತ್ತವನ್ನು ಹೇಳುತ್ತದೆ ಹೊರತು ಅಕ್ಕಿಯನ್ನು ಹೇಳುವುದಿಲ್ಲ. ಆದ್ದರಿಂದ ಪ್ರಕೃತಿಯಾಗದಲ್ಲಿ ಉಪಯೋಗಿಸುವ ಧಾನ್ಯಮಸಿ ಎಂಬ ವಾಕ್ಯಕ್ಕೆ (ತಂಡುಲ = ಅಕ್ಕಿ) ತಂಡುಲಪ್ರಕಾಶನಸಾಮರ್ಥ್ಯವು ಇರುವುದಿಲ್ಲ. ಯಾಗದಲ್ಲಿ ಉಪಯೋಗಿಸಲ್ಪಡುವಂತಹದ್ದು ಅಕ್ಕಿ ಹೊರತು ಧಾನ್ಯವಲ್ಲ. ಆದರೆ ಮಂತ್ರವು ಭತ್ತವನ್ನು ಹೇಳುತ್ತಿದೆ. ಆದ್ದರಿಂದ ಪ್ರಕೃತಿಯಾಗದಲ್ಲಿ ಧಾನ್ಯಶಬ್ದಕ್ಕೆ ಕೃತ್ಯವಿಲ್ಲ. ಪ್ರಕೃತಿಯಾಗದಲ್ಲಿಯೇ ಕೃತ್ಯವಿಲ್ಲದಿರುವಾಗ ವಿಕೃತಿಯಾಗದಲ್ಲಿ ಧಾನ್ಯಶಬ್ದದ ಬದಲು ಮಾಂಸಶಬ್ದವನ್ನು ಊಹಿಸುವ ಅವಶ್ಯಕತೆ ಇಲ್ಲ. ಪ್ರಕೃತಿಯಾಗದಲ್ಲಿ ಧಾನ್ಯಶಬ್ದವು ಹೇಗೆ ಸಂಬಂಧಪಟ್ಟ ಅರ್ಥವಿಲ್ಲದ ಪದವಾಗಿದೆಯೋ, ಅದರಂತೆ ವಿಕೃತಿಯಾಗದಲ್ಲಿರುವ ಧಾನ್ಯಶಬ್ದವೂ ಸಹ ಸಂಬಂಧಪಡದ ಅರ್ಥವುಳ್ಳದ್ದಾದರೆ ಏನು ತಪ್ಪು? ಸೌರಯಾಗದಲ್ಲಿ 'ದೇವಸ್ಯ ತ್ವಾ ಸವಿತುಃ' ಎಂಬಲ್ಲಿರುವ ಸವಿತ್ರಾದಿಶಬ್ದವನ್ನು ಸಂಬಂಧಪಡದ ಕಾರಣ ಹೇಗೆ ಊಹಿಸುವುದಿಲ್ಲವೋ ಅದರಂತೆ ಇಲ್ಲಿಯೂ ಸಹ ಮಾಂಸಶಬ್ದವನ್ನು ಊಹಿಸಬೇಕಿಲ್ಲ.

---

शक्त्यभावात्सवित्रादिशब्दवदसमवेतार्थः सन्नदृष्टार्थोऽयं मन्त्र इति **प्राप्ते सिद्धान्तः**, मन्त्राधिकरणोक्तदिशा मन्त्रपदानां दृष्टार्थत्वादिह च धान्यपदस्य तण्डुलप्रकृतिभूत-सतुषद्रव्यवाचिनोऽपि लक्षणया तद्विकृतिभूततण्डुलप्रकाशकत्वसम्भवात् ''शालयो भुज्यन्ते'' इति लोकेऽपि लाक्षणिकप्रयोगदर्शनात्समवेतार्थ एवायं धान्यशब्दो नादृष्टार्थ इति । तथा च **सूत्रम्, गुणशब्दस्तथेति चेन्न समवायादिति । गुणशब्दो** धान्यशब्दः **तथा** सवित्रादिशब्दवददृष्टार्थ **इति चेन्नेत्येवमर्थो** ध्येयः । **फलं तु,** षट्त्रिंशदाब्दिके शाक्यानामयनाख्ये सत्रे –

''संस्थिते संस्थितेऽहनि गृहपतिर्मृगयां याति । तत्र यान् हन्ति तेषां तरसमयाः सवनीयाः पुरोडाशाः'' इति श्रुते मृगायाप्रयुक्तगृहपतिहतमृगमांसमये सवनीये हविषि दृषदि हविरधिवपनार्थतया चोदकप्राप्तोऽयं मन्त्रः **पूर्वपक्षे** यथाश्रुत एव पठितव्योऽदृष्टार्थत्वात् । **सिद्धान्ते तु,** प्रकृतौ दृष्टार्थत्वाद्विकृतावपि दृष्टार्थत्वाय ''मांसमसि'' इत्यूहितव्य इति । नच प्रकृतियागे धान्यपदेन लक्षणया तण्डुलप्रकाशनं दृष्टमितीह विकृतावपि मांसमये हविषि तत्प्रकृतिभूतमृगवाचिपदप्रक्षेपेण ''मृगोसि'' इत्येवं लक्षणया मांसहविःप्रकाशनं कार्यमिति वाच्यम् । प्रकृतियागे धान्यपदे लक्षणा-श्रयणस्याऽर्थिकत्वेन तत्रातात्पर्यादर्थिकस्य चोदकेन विकृताप्रापणात् ।

इति त्रयोदशं तण्डुलावापमन्त्रे धान्यशब्दस्योहाधिकरणम् (सूत्रे ३६-३)

ಪರಿಪೂರ್ಣಚಂದ್ರಿಕಾ

ಸಿದ್ಧಾಂತ - ಪ್ರಕೃತಿಯಾಗದಲ್ಲಿ ಧಾನ್ಯಶಬ್ದಕ್ಕೆ ಭಕ್ತವೆಂಬ ಅರ್ಥವನ್ನು ವಿವಕ್ಷಿಸಿದಲ್ಲಿ ಅಸಂಗತಾರ್ಥವಾಗುತ್ತದೆ. ಆದರೆ ಅಕ್ಕಿ ಎಂಬರ್ಥದಲ್ಲಿ ಲಕ್ಷಣಾ ಮಾಡುವುದರಿಂದ ಧಾನ್ಯಶಬ್ದಕ್ಕೆ ತಂಡುಲಪ್ರಕಾಶನ ಸಾಮರ್ಥ್ಯವು ಇದ್ದೇ ಇರುತ್ತದೆ. ಆದ್ದರಿಂದ ಪ್ರಕೃತಿಯಾಗದಲ್ಲಿ ಉಪಯೋಗಿಸುವ ಧಾನ್ಯಶಬ್ದವು ಸಂಬಂಧವಿಲ್ಲದ ಅರ್ಥವನ್ನು ಹೇಳುತ್ತಿಲ್ಲ. ಯಜ್ಞಕ್ಕೆ ಉಪಯೋಗವಾಗುವ ಅಕ್ಕಿ ಎಂಬ ಅರ್ಥವನ್ನೇ ಹೇಳುತ್ತಿದೆ. ಹೀಗಿರುವಾಗ ವಿಕೃತಿಯಾಗದಲ್ಲಿಯೂ ಸಂಬಂಧಪಡುವ ಅರ್ಥವುಳ್ಳ ಪದವನ್ನೇ ಹೇಳಬೇಕು. ಅದಕ್ಕಾಗಿ ಧಾನ್ಯಪದವನ್ನು ತೆಗೆದು 'ಮಾಂಸಮ಼ ಧಿನುಹಿ ದೇವಾನ್' ಎಂದು ಮಾಂಸಪದವನ್ನು ಊಹಿಸಬೇಕು.

ಕೆಲವು ಯಾಜ್ಞಿಕರು ಹೀಗನ್ನುತ್ತಾರೆ. ಪ್ರಕೃತಿಯಾಗದಲ್ಲಿ ಉಪಯೋಗಿಸುವ ಧಾನ್ಯಶಬ್ದವು ಲಕ್ಷಣಾರ್ಥವುಳ್ಳದ್ದಾಗಿದೆ. ಆದಕ್ಕನುಸಾರಿಯಾಗಿ ವಿಕೃತಿಯಾಗದಲ್ಲಿ ಉಪಯೋಗಿಸುವ ಪದವು ಕೂಡ ಲಕ್ಷಣಾರ್ಥಕವೇ ಆಗಬೇಕು. ಅಂದರೆ 'ಮೃಗೋಸಿ' ಎಂದು ಊಹಿಸಬೇಕು. ಧಾನ್ಯಶಬ್ದಕ್ಕೆ ಅಕ್ಕಿಯಲ್ಲಿ ಲಕ್ಷಣಾ ಮಾಡಿದಂತೆ ಮೃಗಶಬ್ದಕ್ಕೆ ಮಾಂಸದಲ್ಲಿ ಲಕ್ಷಣಾ ಮಾಡಬೇಕು' ಎಂದು. ಇವರ ವಾದ ಸರಿಯಲ್ಲ. ಅಪೌರುಷೇಯ ವೇದದಲ್ಲಿ ಆರ್ಥಿಕಾರ್ಥವನ್ನು ವಿವಕ್ಷಿಸುವುದು ಅನಿವಾರ್ಯ. ಆದರೆ ಸ್ವಾಧೀನವಾದ ಊಹಪ್ರಯೋಗದಲ್ಲಿ ಕಾರಣವಿಲ್ಲದೇ ಲಕ್ಷಣಾವನ್ನು ಆಶ್ರಯಿಸುವುದು ತಪ್ಪಾಗುತ್ತದೆ. ಯಾವ ಯಾಜ್ಞಿಕರು ಹೀಗೆ ಊಹೆಯನ್ನು ಅಂಗೀಕರಿಸುತ್ತಾರೋ ಅದು ಕೇವಲ ಅವರ ಅಜ್ಞಾನಮೂಲಕವಾದದ್ದು. ಇದರಂತೆ ಪ್ರಕೃತದಲ್ಲಿ ಇದು ಅಗ್ನಿಸೂಕ್ತ ಹೊರತು ವಿಷ್ಣುಸೂಕ್ತವಲ್ಲ ಎಂಬ ಅಧ್ಯಾಪಕಪ್ರಸಿದ್ಧಿಯೂ ಕೂಡ ಕೇವಲ ಅಜ್ಞಾನಮೂಲಕವಾದದ್ದೇ ಹೊರತು ಯಥಾರ್ಥವಲ್ಲ.

ನ್ಯಾಯವಿವರಣದ ಮಾತು ಗ್ರಂಥಕಾರರು ನಿರೂಪಿಸಿದ ಪ್ರಮೇಯಕ್ಕೆ ಸಂವಾದಿಯಾಗಿದೆಯೆಂದು 'ಅತ್ರ ಚ' ಇತ್ಯಾದಿ ಗ್ರಂಥದಿಂದ ನಿರೂಪಿಸಿದ್ದಾರೆ. ನ್ಯಾಯವಿವರಣದ ಟೀಕೆಯಲ್ಲಿ 'ಸಾವಕಾಶೇಭ್ಯೋಽನೇಕೇಭ್ಯೋಪಿ ನಿರವಕಾಶಸ್ಯೈಕಸ್ಯೈವ ಪ್ರಾಬಲ್ಯಾತ್' (ಅನೇಕ ಸಾವಕಾಶಶ್ರುತಿ ಲಿಂಗಗಳಿಗಿಂತ ಒಂದು ನಿರವಕಾಶವೇ ಪ್ರಬಲ) ಎಂದು ಹೇಳಿದ್ದಾರೆ.

ಪ್ರಶ್ನೆ - ನ್ಯಾಯವಿವರಣದ ಈ ಮಾತು ಪ್ರಕೃತ ಅಸಂಗತವಾಗಿದೆ. ಸಾವಕಾಶವಾದ ಶ್ರುತಿಲಿಂಗಗಳು ನಿರವಕಾಶಲಿಂಗದಿಂದ ಬಾಧಿತವಾಗುತ್ತದೆಂದು ನ್ಯಾಯವಿವರಣದ ಅಭಿಪ್ರಾಯ. ಆದರೆ ಸಾವಕಾಶಶ್ರುತಿಪ್ರಕರಣಗಳು ನಿರವಕಾಶಲಿಂಗದಿಂದ ಬಾಧಿತವಾಗುತ್ತದೆಂಬುದು ಈ ಅಧಿಕರಣದ ಸಿದ್ಧಾಂತನ್ಯಾಯ. ಹೀಗೆ ವಿರುದ್ಧವಾದ ನ್ಯಾಯವಿವರಣದ ಮಾತನ್ನು ಇಲ್ಲಿ ಉಲ್ಲೇಖಿಸುವುದು ಅನುಚಿತ. ಅಷ್ಟೇ ಅಲ್ಲದೆ ನ್ಯಾಯವಿವರಣದ ಟೀಕೆಯು ಈ ಮಾತನ್ನು ಆಕಾಶ, ಪ್ರಾಣ, ಗಾಯತ್ರ್ಯಧಿಕರಣದ ಪರವಾಗಿ ವ್ಯಾಖ್ಯಾನಿಸಿದ್ದಾರೆ. ನೀವು ಜ್ಯೋತಿರಧಿಕರಣದಲ್ಲಿ ಉಲ್ಲೇಖಿಸುತ್ತಿರುವುದು ತಪ್ಪಾಗುತ್ತದಲ್ಲವೆ?

ಉತ್ತರ - ನಿರವಕಾಶಲಿಂಗವು ಸಾವಕಾಶಶ್ರುತಿಲಿಂಗಗಳನ್ನು ಬಾಧಿಸಿದಂತೆ ಸಾವಕಾಶಪ್ರಕರಣವೂ ಸಹ ಶ್ರುತಿಗಳನ್ನು ಬಾಧಿಸುತ್ತದೆಂದು ಸಮಾನನ್ಯಾಯದಿಂದ ತಿಳಿಯಬಹುದು. ಅಥವಾ ನ್ಯಾಯವಿವರಣದ ಮಾತು ಶ್ರುತಿಪ್ರಕರಣಗಳನ್ನು ಉಪಲಕ್ಷಣಯಾ ಸೂಚಿಸಿದೆಂದು ತಿಳಿಯಬಹುದು. ಅಥವಾ ಸಾವಕಾಶಶ್ರುತಿಲಿಂಗಗಳಿಗಿಂತಲೂ ಸಾವಕಾಶಶ್ರುತಿಪ್ರಕರಣಗಳು ದುರ್ಬಲವಾಗಿವೆ. ಸಾವಕಾಶಶ್ರುತಿಲಿಂಗಗಳನ್ನೇ

ನಿರವಕಾಶಲಿಂಗವು ಬಾಧಿಸಿದಾಗ ಸಾವಕಾಶಶ್ರುತಿಪ್ರಕರಣಗಳನ್ನು ಬಾಧಿಸಿಯೇ ತೀರುತ್ತದೆಂದು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ. ಹೀಗೆ ಮೂರು ದೃಷ್ಟಿಯಿಂದ ಗ್ರಂಥಕಾರರು ನ್ಯಾಯವಿವರಣದ ಮಾತನ್ನು ಸಂವಾದಿಯಾಗಿ ಉಲ್ಲೇಖಿಸಿದ್ದಾರೆ.

**गुरुराजीयम्** – 'निरतिशयवैभवरूपकर्णादिविदूरत्वस्याग्निश्रुत्यादिबलादग्नावप्युपपत्तेः' इति परोक्तं लिङ्गानां सावकाशत्वमग्निश्रुत्यादेः सावकाशत्वं प्रदर्शयन् परिहरति – **कर्णादीनामिति ॥ अग्निर्वै देवानामवम इतीति ॥** यद्यप्यत्र परैर्न तारतम्यपरतयाव्याख्यातन्तथापिप्रतीयमानस्यबाधकाभावे परित्यागस्यातिप्रसंजकत्वाद्यथाश्रुति ग्राह्यमेव । अग्नौ सर्वे देवा विलीयन्त इति श्रुत्यन्तरानुसारेणाग्निनीचानां सर्वेषामपि देवानामग्न्यधीन सत्ताकत्वेनाग्निपदेनैवोपादानसम्भवेन देवानामवम इति निर्धारणोपपत्तेरिति भावः ॥ **तपतीति ॥** वातः पवते सूर्य उदेतीत्यादौ तत्तद्योग्यक्रियाया इव भीषास्मादग्निरित्यत्र योग्यक्रियाया अनुक्तया भयादस्याग्निस्तपतीत्यादि श्रुत्यन्तरानुसारेण योग्यश्रौतपदाध्याहारः कृत इति भावः । अग्निश्रुत्यादि त्वित्यत्रादिपदेन वैश्वानरं रथ्यमध्वराणां यज्ञस्य केतुं जनयन्त देवाः । आसन्ना पात्रं जनयन्त देवा इत्यादिलिङ्गानि ग्राह्याणि ॥ **अग्निनाग्निरिति ॥** एतत्पादस्य द्य्वग्निदेवताकत्वात्तृतीयान्तनिर्दिष्टोऽन्यः प्रथमान्तनिर्दिष्टो विष्णुः । प्रकरणस्य निरवकाशत्वात् तदनुगृहीत श्रुत्या लिङ्गबाधोऽस्त्वित्यतः प्रकरणमपि विष्णुपरत्वेन सावकाशमित्याह – **इदमिति ॥ अज्ञानमूलेति ॥**

## ಸಾರ

ಈ ಅಧಿಕರಣದ ಸಿದ್ಧಾಂತ : ಕರ್ಣಾದಿವಿದೂರತ್ವಲಿಂಗವು ವಿಷ್ಣುವಿನಲ್ಲಿ ನಿರವಕಾಶವಾಗಿದೆಯೆಂದು 'ಪರೋ ಮಾತ್ರಯಾ' ಇತ್ಯಾದಿ ಶ್ರುತಿಗಳು ಸಾಧಿಸುತ್ತಿವೆ. ಅಪರಿಮಿತಗುಣಗಳಿದ್ದು ಯಾವುದೇ ದೋಷವಿಲ್ಲದ ವ್ಯಕ್ತಿಯಲ್ಲಷ್ಟೇ ಕರ್ಣಾದಿ ವಿದೂರತ್ವವನ್ನು ಹೇಳಲು ಸಾಧ್ಯ. ಭಯ ಮರಣ ಮೊದಲಾದ ದೋಷಗಳಿಂದ ಕೂಡಿದ ಅಧಮನಾದ ಅಗ್ನಿದೇವತೆಯಲ್ಲಿ ಕರ್ಣಾದಿವಿದೂರತ್ವವನ್ನು ಹೇಳಲು ಹೇಗೆ ತಾನೆ ಸಾಧ್ಯ? ಹೀಗೆ ಯಾವುದೇ ಕಾರಣದಿಂದಲೂ ವಿಷ್ಣುವನ್ನು ಬಿಟ್ಟು ಅಗ್ನಿದೇವತೆಯಲ್ಲಿ ಕರ್ಣಾದಿವಿದೂರತ್ವವನ್ನು ಹೇಳಲಾಗದು. ಆದ್ದರಿಂದ ಕರ್ಣಾದಿವಿದೂರತ್ವ- ಲಿಂಗವು ಅಗ್ನಿಯಲ್ಲಿ ಸಾವಕಾಶವಾಗಿದೆಯೆಂಬ ಪೂರ್ವಪಕ್ಷವು ನಿರಾಕೃತವಾಯಿತು.

ಇನ್ನು ಅಗ್ನಿಪ್ರಕರಣ ಹಾಗೂ ಶ್ರುತಿಗಳು ನಿರವಕಾಶವೆಂಬ ಪೂರ್ವಪಕ್ಷವು ಸರಿಯಲ್ಲ. ಹತ್ತಾರು ಶ್ರುತಿಸ್ಮೃತಿಗಳು ವಿಷ್ಣುವನ್ನೇ 'ಅಗ್ನಿ, ಜ್ಯೋತಿ' ಎಂದು ಸಾರಿ ಹೇಳುತ್ತಿರುವಾಗ ಈ ಶಬ್ದಗಳು ಅಗ್ನಿದೇವತೆಯಲ್ಲಿ

ನಿರವಕಾಶಗಳಾಗುವುದಿಲ್ಲ. 'ಇದು ಅಗ್ನಿಸೂಕ್ತವೇ ಹೊರತು ವಿಷ್ಣುಸೂಕ್ತವಲ್ಲ' ಎಂದು ಕೆಲವು ಅಧ್ಯಾಪಕರು ಹೇಳಿದರೆ ಅದು ಕೇವಲ ಅವರ ಅಜ್ಞಾನ ಹೊರತು ಯಥಾರ್ಥಸಂಗತಿಯಲ್ಲ.

\- - - - - -

## ನಿರವಕಾಶಬ್ರಹ್ಮಲಿಂಗದ ಸಾಮರ್ಥ್ಯ

**तात्पर्यचन्द्रिका**

**एवं सूक्तान्तरेष्वपि द्रष्टव्यम् । तथाहि – ऐन्द्रे ''न त्वावां इन्द्र कश्चन न जातो न जनिष्यते'' इति, तथा ''ईशानमस्य जगतः स्वर्दृशमीशानमिन्द्र तस्थुषः'' इति, तथा ''समुद्रे'' अन्तश्शयत'' इति, तथा बार्हस्पत्ये ''विश्वेषामिज्जनिता ब्रह्मणामसि'' इति, तथा सौरे ''सूर्य आत्मा जगतस्तस्थुषश्च'' इति, तथा वारुणे ''यो विश्वस्य जगतो देव ईश'' इति, तथा विश्वकर्मसूक्ते ''विश्वतश्चक्षुः'' ''यो नः पिता जनिता'' इत्यादीनि ब्रह्मलिङ्गानि सन्ति । किञ्च सौरे ''येना पावक चक्षसा भुरण्यन्तं जनाँ अनु । त्वं वरुण पश्यसि'' इति सूर्यस्य पावकवरुणादिशब्दैः सम्बोधनम्, तथा वारुणे – ''अथा वयमादित्य'' इति वरुणस्य आदित्यादिशब्दैः सम्बोधनम्, तथा आग्नेये – ''त्वमग्न इन्द्रो वृषभः सतामसि त्वं विष्णुरुरुगायो नमस्यः'' इत्यग्निं सम्बोध्य तत्रेन्द्रविष्ण्वादिशब्दप्रयोगः तत्तत्सूक्तानां सर्वशब्दवाच्यब्रह्मपरत्वे युक्तः, नान्यथा । यदि च इन्द्रादावेव ब्रह्मलिङ्गोक्तिः स्तुत्यर्था, तर्ह्याकाशप्राणादावपि ब्रह्मलिङ्गोक्तिस्तदर्था स्यादिति दिक् ।**

ಅನುವಾದ - ನಿರವಕಾಶಬ್ರಹ್ಮಲಿಂಗದ ಬಲದಿಂದ ಅಗ್ನಿಸೂಕ್ತವು ಹೇಗೆ ವಿಷ್ಣುಪರವಾಗುತ್ತದೋ, ಅದರಂತೆ ಬೇರೆ ಸೂಕ್ತಗಳಲ್ಲಿಯೂ ತಿಳಿಯಬೇಕು. ಅದು ಹೀಗೆ --

ಐಂದ್ರಸೂಕ್ತ - 'ನತ್ವಾವಾಂ ಇಂದ್ರ ಕಶ್ಚನ ನ ಜಾತೋ ನ ಜನಿಷ್ಯತೇ' (ಎಲೈ ಇಂದ್ರನೇ! ನಿನಗೆ ಸರಿಸಮಾನನಾದವನು ಹಿಂದೆ ಬಂದಿಲ್ಲ; ಈಗ ಇಲ್ಲ, ಮುಂದೆಯೂ ಬರುವುದಿಲ್ಲ). ಅದರಂತೆ 'ಈಶಾನಮಸ್ಯ ಜಗತಃ ಸ್ವರ್ದೃಶಮೀಶಾನಮಿಂದ್ರ ತಸ್ಥುಷಃ' (ಸ್ವತಂತ್ರಜ್ಞಾನವುಳ್ಳ ಚರಾಚರಜಗತ್ತಿಗೆ ಒಡೆಯನಾದ ಎಲೈ ಇಂದ್ರನೇ); ಮತ್ತು 'ಸಮುದ್ರೇ ಅಂತಃಶಯತೇ' (ಸಮುದ್ರದ ಮಧ್ಯದಲ್ಲಿ ಮಲಗಿದ್ದಾನೆ) ಈ ಐಂದ್ರಸೂಕ್ತಗಳಲ್ಲಿ ನಿರವಕಾಶಬ್ರಹ್ಮಲಿಂಗಗಳು ಕೇಳಿಸುತ್ತಿವೆ.

ಬೃಹಸ್ಪತಿಸೂಕ್ತ - 'ವಿಶ್ವೇಷಾಮಿಜ್ಜನಿತಾ ಬ್ರಹ್ಮಣಾಮಸಿ' (ಅನೇಕ ಚತುರ್ಮುಖಬ್ರಹ್ಮರನ್ನು ನೀನು ಹುಟ್ಟಿಸುತ್ತಿ);

ಸೂರ್ಯಸೂಕ್ತ - 'ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ' (ಚರಾಚರಜಗತ್ತಿಗೆ ನೀನು ಸ್ವಾಮಿಯಾಗಿದ್ದಿ);

ವರುಣಸೂಕ್ತ - 'ಯೋ ವಿಶ್ವಸ್ಯ ಜಗತೋ ದೇವ ಈಶಃ' (ಸಮಸ್ತ ಜಗತ್ತಿಗೆ ಯಾರು ಒಡೆಯನಾಗಿದ್ದಾನೋ);

ವಿಶ್ವಕರ್ಮಸೂಕ್ತ - 'ವಿಶ್ವತಶ್ಚಕ್ಷುಃ ಯೋ ನಃ ಪಿತಾ ಜನಿತಾ' (ಎಲ್ಲವನ್ನು ತಿಳಿದವನು, ಎಲ್ಲರಿಗೂ ಜನಕನು) - ಈ ಎಲ್ಲ ಸೂಕ್ತಗಳಲ್ಲಿಯೂ ಅನೇಕ ನಿರವಕಾಶಬ್ರಹ್ಮಲಿಂಗಗಳು ಕೇಳಿಸುತ್ತಿವೆ.

ಅಷ್ಟೇ ಅಲ್ಲದೆ ಸೂರ್ಯಸೂಕ್ತದಲ್ಲಿ 'ಯೇನಾ ಪಾವಕ ಚಕ್ಷಸಾ ಭುರಣ್ಯಂ ತಂ ಜನಾಂ ಅನು । ತ್ವಂ ವರುಣ ಪಶ್ಯಸಿ' ಎಂದು ಪಾವಕ ವರುಣ ಮೊದಲಾದ ಬೇರೆ ಶಬ್ದಗಳಿಂದ ಸೂರ್ಯನನ್ನು ಸಂಬೋಧಿಸಲಾಗಿದೆ. ಇದರಂತೆ ವರುಣಸೂಕ್ತದಲ್ಲಿ 'ಅಥಾ ವಯಮಾದಿತ್ಯೇ' ಎಂದು ವರುಣನನ್ನು ಆದಿತ್ಯಶಬ್ದದಿಂದ ಸಂಬೋಧಿಸಲಾಗಿದೆ.

ಅಗ್ನಿಸೂಕ್ತದಲ್ಲಿ 'ತ್ವಮಗ್ನ ಇಂದ್ರೋ ವೃಷಭಂ ಸತಾಮಸಿ ತ್ವಂ ವಿಷ್ಣುರುರುಗಾಯೋ ನಮಸ್ಯ' ಎಂದು, ಇಂದ್ರ ವಿಷ್ಣು ಮೊದಲಾದ ಶಬ್ದಗಳನ್ನು ಅಗ್ನಿಯಲ್ಲಿ ಪ್ರಯೋಗಿಸಲಾಗಿದೆ.

ಒಂದು ವೇಳೆ ಆಯಾ ಸೂಕ್ತಗಳು ಆಯಾ ದೇವತೆಗಳನ್ನಷ್ಟೇ ಪ್ರತಿಪಾದಿಸುವುದಾದರೆ ಇತರ ದೇವತಾವಾಚಕಗಳಾದ ಪದಗಳ ಸಂಬೋಧನೆಯು ತಪ್ಪಾಗುತ್ತದೆ. ಈ ಎಲ್ಲ ಸೂಕ್ತಗಳೂ ಬ್ರಹ್ಮಪರವೆಂದು ಹೇಳಿದಾಗ ಸರ್ವಶಬ್ದವಾಚ್ಯನಾದ ಬ್ರಹ್ಮನಲ್ಲಿ ಸಂಬೋಧನೆ ಎಂದು ಕೂಡಿಸಲು ಸಾಧ್ಯ. ಇನ್ನು ಇಂದ್ರಾದಿಗಳಲ್ಲಿ ಹೇಳಿದ ಬ್ರಹ್ಮಲಿಂಗಗಳನ್ನು ಸ್ತೋತ್ರಕ್ಕೋಸ್ಕರವೆಂದು ಹೇಳಬೇಕು. ಹಾಗಾದಲ್ಲಿ ಆಕಾಶಪ್ರಾಣಾದಿಗಳಲ್ಲಿ ಹೇಳಿದ ಪರೋವರೀಯಸ್ತ್ವಾದಿ ಲಿಂಗಗಳನ್ನೂ ಸಹ ಜಡವಾದ ಆಕಾಶಾದಿಗಳಲ್ಲಿ ಹೇಳಬೇಕಾದೀತು. ಇಷ್ಟು ವಿಚಾರ ಕೇವಲ ದಿಕ್ಪ್ರದರ್ಶನ.

**प्रकाशः** – सूत्रे अग्निसूक्तस्थस्योपलक्षणत्वेनोपादानात् सर्वत्रायं न्यायोऽनुसन्धेय इति वदंस्तत्प्रकारं क्वचित्क्वचिद्दर्शयति – **एवमिति** ॥ ऐन्द्रे सूक्त इत्यर्थः । आद्याष्टकगते ऐन्द्रे **''नत्वावाँ इन्द्र कश्चन न जातो न जनिष्यतेऽति विश्वं ववक्षिथ''** इत्यत्र हे इन्द्र 'कश्चन कोऽपि 'त्वावान् त्वत्सदृशः नास्ति नासीन्न जनिष्यते विश्वमति ववक्षिथ त्वमेव भर्ताऽसीत असदृशत्वविश्वभर्तृत्वादिकं श्रुतम् । तथा पञ्चमाष्टकगते ऐन्द्रे **''अभित्वा शूर नो नुमोऽदुग्धा इव धेनवः । ईशानमस्य''** इत्यत्र जङ्गमस्य च स्थावरस्य च अस्य विश्वस्येशानं त्वा त्वां वेदवाच इव पुनः पुनः स्तुम इति जगन्नियामकत्वं, **''न त्वावाँ अन्यो दिव्यो न पार्थिवो न जातो न जनिष्यते''** इति हे मघवन् द्युस्थो वा पृथिवीस्थो वा जातो जनिष्यमाणो

वाऽन्यस्त्वत्सदृशो नेत्यसदृशत्वं च श्रुतम् । तथा "समुन्द्रे अन्तः शयते उद्रा वज्रो अभीवृतः ।" इति षष्ठाष्टकगतैन्द्रे अष्टमाष्टकस्थे च "समुद्रे अन्तः कवयो विचक्षते" इति समुद्रशायित्वं श्रुतम् । एतानि च ब्रह्मलिङ्गतया प्रसिद्धानीति भावः ॥ **तथेति** ॥

**देवाश्चित्ते असुर्य प्रचेतसो बृहस्पते यज्ञियं भागमानशुः ।**
**उस्रा इव सूर्यो ज्योतिषामहो विश्वेषामिज्जनिता ब्रह्मणामसि ॥**

इत्यत्र हे बृहस्पते प्रकृष्टज्ञानिनो देवा अपि ते प्रसादात् यज्ञभागं प्राप्नुवन्ति । त्वं च भूतभविष्यद्वर्तमानचतुर्मुखब्रह्मणां जनयिताऽसीति ब्रह्म-जनकत्वादिकं श्रुतम् । तच्च विष्णोरन्यत्र न युक्तमिति भावः ।

॥ **सौर इति** ॥ आद्याष्टकाष्टमाध्यायगते सौरे –

**चित्रं देवानामुदगादनीकं चक्षुर्मित्रस्य वरुणस्याग्नेः ।**
**आप्रा द्यावापृथिवी अन्तरिक्षं सूर्य आत्मा ।**

इत्यत्र स्थावरजङ्गमात्मकविश्वस्वामित्वं श्रुतम् । तच्च नान्यलिङ्गम् । न चात्रात्मशब्दः स्वरूपपरः, षष्ठ्या औपचारिकत्वप्रसङ्गादिति भावः ॥ **य इति** ॥ पञ्चमाष्टके –

**यो वर्धन ओषधीनां यो अपां यो विश्वस्य जगतो देव ईशे ।**

इति विश्वेश्वरत्वं श्रुतम् । तच्च "एष सर्वेश्वरः" इत्यादिना ब्रह्मणि प्रसिद्धम् । "विश्वतश्चक्षुरुत विश्वतो मुखः" इत्यादिकं च –

**सर्वतः पाणिपादं तत्सर्वतोऽक्षिशिरोमुखम् ।**

इत्यादिना विष्णौ प्रसिद्धम् । जगज्जनकत्वं च "यतो वा इमानि भूतानि" इत्यादिना प्रसिद्धम् ॥ **सन्तीति** ॥ तथा च निरवकाशब्रह्मलिङ्गैः सावकाश-श्रुतिप्रकरणयोः बाध इति भावः । सूत्रे निरवकाशलिङ्गोक्तिरुपलक्षणं, अन्यत्रान्यवाचिपदप्रयोगानुपपत्त्या च विष्णुपरता ग्राह्येत्याह – **किञ्चेति** ॥ **सौर इति** ॥ चतुर्थाध्यायगतसौर इत्यर्थः ॥ **अथावयमिति** ॥ आद्याष्टकगते वारुणसूक्ते

ಸೂರ್ಯಸೂಕ್ತ - 'ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ' (ಚರಾಚರಜಗತ್ತಿಗೆ ನೀನು ಸ್ವಾಮಿಯಾಗಿದ್ದಿ);

ವರುಣಸೂಕ್ತ - 'ಯೋ ವಿಶ್ವಸ್ಯ ಜಗತೋ ದೇವ ಈಶಃ' (ಸಮಸ್ತ ಜಗತ್ತಿಗೆ ಯಾರು ಒಡೆಯನಾಗಿದ್ದಾನೋ);

ವಿಶ್ವಕರ್ಮಸೂಕ್ತ - 'ವಿಶ್ವತಶ್ಚಕ್ಷುಃ ಯೋ ನಃ ಪಿತಾ ಜನಿತಾ' (ಎಲ್ಲವನ್ನು ತಿಳಿದವನು, ಎಲ್ಲರಿಗೂ ಜನಕನು) - ಈ ಎಲ್ಲ ಸೂಕ್ತಗಳಲ್ಲಿಯೂ ಅನೇಕ ನಿರವಕಾಶಬ್ರಹ್ಮಲಿಂಗಗಳು ಕೇಳಿಸುತ್ತಿವೆ.

ಅಷ್ಟೇ ಅಲ್ಲದೆ ಸೂರ್ಯಸೂಕ್ತದಲ್ಲಿ 'ಯೇನಾ ಪಾವಕ ಚಕ್ಷಸಾ ಭುರಣ್ಯಂ ತಂ ಜನಾಂ ಅನು । ತ್ವಂ ವರುಣ ಪಶ್ಯಸಿ' ಎಂದು ಪಾವಕ ವರುಣ ಮೊದಲಾದ ಬೇರೆ ಶಬ್ದಗಳಿಂದ ಸೂರ್ಯನನ್ನು ಸಂಬೋಧಿಸಲಾಗಿದೆ. ಇದರಂತೆ ವರುಣಸೂಕ್ತದಲ್ಲಿ 'ಅಥಾ ವಯಮಾದಿತ್ಯೇ' ಎಂದು ವರುಣನನ್ನು ಆದಿತ್ಯಶಬ್ದದಿಂದ ಸಂಬೋಧಿಸಲಾಗಿದೆ.

ಅಗ್ನಿಸೂಕ್ತದಲ್ಲಿ 'ತ್ವಮಗ್ನ ಇಂದ್ರೋ ವೃಷಭಂ ಸತಾಮಸಿ ತ್ವಂ ವಿಷ್ಣುರುರುಗಾಯೋ ನಮಸ್ಯ' ಎಂದು, ಇಂದ್ರ ವಿಷ್ಣು ಮೊದಲಾದ ಶಬ್ದಗಳನ್ನು ಅಗ್ನಿಯಲ್ಲಿ ಪ್ರಯೋಗಿಸಲಾಗಿದೆ.

ಒಂದು ವೇಳೆ ಆಯಾ ಸೂಕ್ತಗಳು ಆಯಾ ದೇವತೆಗಳನ್ನಷ್ಟೇ ಪ್ರತಿಪಾದಿಸುವುದಾದರೆ ಇತರ ದೇವತಾವಾಚಕಗಳಾದ ಪದಗಳ ಸಂಬೋಧನೆಯು ತಪ್ಪಾಗುತ್ತದೆ. ಈ ಎಲ್ಲ ಸೂಕ್ತಗಳೂ ಬ್ರಹ್ಮಪರವೆಂದು ಹೇಳಿದಾಗ ಸರ್ವಶಬ್ದವಾಚ್ಯನಾದ ಬ್ರಹ್ಮನಲ್ಲಿ ಸಂಬೋಧನೆ ಎಂದು ಕೂಡಿಸಲು ಸಾಧ್ಯ. ಇನ್ನು ಇಂದ್ರಾದಿಗಳಲ್ಲಿ ಹೇಳಿದ ಬ್ರಹ್ಮಲಿಂಗಗಳನ್ನು ಸ್ತೋತ್ರಕ್ಕೋಸ್ಕರವೆಂದು ಹೇಳಬೇಕು. ಹಾಗಾದಲ್ಲಿ ಆಕಾಶಪ್ರಾಣಾದಿಗಳಲ್ಲಿ ಹೇಳಿದ ಪರೋವರೀಯಸ್ತ್ವಾದಿ ಲಿಂಗಗಳನ್ನೂ ಸಹ ಜಡವಾದ ಆಕಾಶಾದಿಗಳಲ್ಲಿ ಹೇಳಬೇಕಾದೀತು. ಇಷ್ಟು ವಿಚಾರ ಕೇವಲ ದಿಕ್ಪ್ರದರ್ಶನ.

**प्रकाशः** – सूत्रे अग्निसूक्तस्थस्योपलक्षणत्वेनोपादानात् सर्वत्रायं न्यायोऽनुसन्धेय इति वदंस्तत्प्रकारं कचित्कचिद्दर्शयति – एवमिति ॥ ऐन्द्रे सूक्त इत्यर्थः । आद्याष्टकगते ऐन्द्रे **"नत्वावाँ इन्द्र कश्चन न जातो न जनिष्यतेऽति विश्वं ववक्षिथ"** इत्यत्र हे इन्द्र 'कश्चन कोऽपि 'त्वावान् त्वत्सदृशः नास्ति नासीन्न जनिष्यते विश्वमति ववक्षिथ त्वमेव भर्ताऽसीत असदृशत्वविश्वभर्तृत्वादिकं श्रुतम् । तथा पञ्चमाष्टकगते ऐन्द्रे **"अभित्वा शूर नो नुमोऽदुग्धा इव धेनवः । ईशानमस्य"** इत्यत्र जङ्गमस्य च स्थावरस्य च अस्य विश्वस्येशानं त्वा त्वां वेदवाच इव पुनः पुनः स्तुम इति जगन्नियामकत्वं, **"न त्वावाँ अन्यो दिव्यो न पार्थिवो न जातो न जनिष्यते"** इति हे मघवन् द्युस्थो वा पृथिवीस्थो वा जातो जनिष्यमाणो

वाऽन्यस्त्वत्सदृशो नेत्यसदृशत्वं च श्रुतम् । तथा "समुन्द्रे अन्तः शयते उद्रा वज्रो अभीवृतः ।" इति षष्ठाष्टकगतैन्द्रे अष्टमाष्टकस्थे च "समुद्रे अन्तः कवयो विचक्षते" इति समुद्रशायित्वं श्रुतम् । एतानि च ब्रह्मलिङ्गतया प्रसिद्धानीति भावः ॥ तथेति ॥

**देवाश्चित्ते असुर्य प्रचेतसो बृहस्पते यज्ञियं भागमानशुः ।**
**उस्रा इव सूर्यो ज्योतिषामहो विश्वेषामिज्जनिता ब्रह्मणामसि ॥**

इत्यत्र हे बृहस्पते प्रकृष्टज्ञानिनो देवा अपि ते प्रसादात् यज्ञभागं प्राप्नुवन्ति । त्वं च भूतभविष्यद्वर्तमानचतुर्मुखब्रह्मणां जनयिताऽसीति ब्रह्मजनकत्वादिकं श्रुतम् । तच्च विष्णोरन्यत्र न युक्तमिति भावः ।

॥ **सौर इति** ॥ आद्याष्टकाष्टमाध्यायगते सौरे –

**चित्रं देवानामुदगादनीकं चक्षुर्मित्रस्य वरुणस्याग्नेः ।**
**आप्रा द्यावापृथिवी अन्तरिक्षं सूर्य आत्मा ।**

इत्यत्र स्थावरजङ्गमात्मकविश्वस्वामित्वं श्रुतम् । तच्च नान्यलिङ्गम् । न चात्रात्मशब्दः स्वरूपपरः, षष्ठ्या औपचारिकत्वप्रसङ्गादिति भावः ॥ **य इति** ॥ पञ्चमाष्टके –

**यो वर्धन ओषधीनां यो अपां यो विश्वस्य जगतो देव ईशे ।**

इति विश्वेश्वरत्वं श्रुतम् । तच्च "एष सर्वेश्वरः" इत्यादिना ब्रह्मणि प्रसिद्धम् । "**विश्वतश्चक्षुरुत विश्वतो मुखः**" इत्यादिकं च –

**सर्वतः पाणिपादं तत्सर्वतोऽक्षिशिरोमुखम् ।**

इत्यादिना विष्णौ प्रसिद्धम् । जगज्जनकत्वं च "**यतो वा इमानि भूतानि**" इत्यादिना प्रसिद्धम् ॥ **सन्तीति** ॥ तथा च निरवकाशब्रह्मलिङ्गैः सावकाशश्रुतिप्रकरणयोः बाध इति भावः । सूत्रे निरवकाशलिङ्गोक्तिरुपलक्षणं, अन्यत्रान्यवाचिपदप्रयोगानुपपत्त्या च विष्णुपरता ग्राह्येत्याह – **किञ्चेति** ॥ **सौर इति** ॥ चतुर्थाध्यायगतसौर इत्यर्थः ॥ **अथावयमिति** ॥ आद्याष्टकगते वारुणसूक्ते

**"आदित्य व्रते तवानागसो अदितये स्याम"** इत्यादित्यशब्दसम्बोधनमित्यर्थः ॥ **नान्यथेति** ॥ तथात्वे नानादेवताप्रापकश्रुतिसद्भावेनैकवाक्यताभङ्ग – इति भावः ।

सूक्तगतब्रह्मलिङ्गानामन्यथासिद्धिमाशङ्क्य निरस्यति – **यदि चेति** ॥ **'लिङ्ग'** इत्युपलक्षणं पावकादिशब्दोक्तिरपि ध्येया । तथा चाकाशाद्यधिकरणानारम्भः स्यादिति भावः । एतेनोपासनार्थं तदुक्तिरिति परास्तम् । **असदुपासनाया निषिद्धत्वाच्चेति** । नन्विन्द्रादीनामन्योन्यं ब्रह्मणा चाभेदात् तत्र ब्रह्मलिङ्गोक्तिः पावकादिशब्दोक्तिश्च युक्ता । अत एव **"त्वमग्न इन्द्रो वृषभः"** इत्यादि च युज्यत इति चेन्न, विशिष्टाभेदस्य बाधितत्वात् । विशेष्यमात्रैक्ये लक्षणापत्तेश्च । आकाशादावपि तथात्वापत्तेश्च । **'यमिन्द्रमाहुः'** इत्यादिविरोधाच्च, तत्र भेदोक्तेरन्तरधिकरणे दर्शितत्वात् । **"पृथक्"** इत्यत्राभेदस्य निरसिष्यमाणत्वाच्च ।

नच वाच्यं लिङ्गानां स्वावरनियामकत्वादिना सङ्कोच इति, बाधकाभावात् । नच पावकादिशब्दानां योगेन सूर्यादौ वृत्तिरविरुद्धेति वाच्यं, रूढेर्बलवत्त्वात्, नियामकाभावेन वैपरीत्यस्यापि सम्भवात् । तदेतदभिप्रेत्योक्तं – **दिगिति** । यद्वा – सूक्तान्तरेष्वप्येवं निरवकाशब्रह्मलिङ्गादीनि द्रष्टव्यानीति भावेनोक्तं – **दिगिति** ।

ವಿವರಣೆ - ಸೂತ್ರದಲ್ಲಿ ನಿರವಕಾಶಬ್ರಹ್ಮಲಿಂಗದಿಂದ ಅಗ್ನಿಸೂಕ್ತವು ವಿಷ್ಣುಪರವೆಂದು ಹೇಳಬೇಕೆಂದಿದ್ದಾರೆ. ಇದು ಕೇವಲ ಉಪಲಕ್ಷಣ. ಬೇರೆ ದೇವತೆಗಳ ಸೂಕ್ತಗಳಲ್ಲಿಯೂ ಈ ನ್ಯಾಯವನ್ನು ಅನುಸಂಧಾನ ಮಾಡಬೇಕೆಂದು ಕೆಲವು ಸೂಕ್ತಗಳನ್ನು ಪ್ರಕೃತ ಉದಾಹರಿಸುತ್ತಿದ್ದಾರೆ.

'ನತ್ವಾವಾಂ ಇಂದ್ರ ಕಶ್ಚನ ನ ಜಾತೋ ನ ಜನಿಷ್ಯತೇಽತಿ ವಿಶ್ವಂ ವವಕ್ಷಿಥ' (ಋಗ್ವೇದಪ್ರಥಮಾಷ್ಟಕ) ಹೇ ಇಂದ್ರ - ಎಲೈ ಇಂದ್ರನೇ ಕಶ್ಚನ = ಯಾರೂ ಸಹ, ತ್ವಾವಾಂ = ನಿನಗೆ ಸದೃಶನಾದವನು ನ ಜಾತಃ = ಹುಟ್ಟಿಲ್ಲ, ನ ಜನಿಷ್ಯತೇ = ಮುಂದೆ ಹುಟ್ಟುವುದೂ ಇಲ್ಲ. ವಿಶ್ವಮತಿ ವವಕ್ಷಿಥ = ಸಮಗ್ರವಿಶ್ವಕ್ಕೆ ನೀನೇ ಒಡೆಯನಾಗಿದ್ದಿ. ಈ ವಾಕ್ಯದಿಂದ ಅಸದೃಶತ್ವ ಮತ್ತು ವಿಶ್ವಭರ್ತೃತ್ವವೆಂಬ ಎರಡು ನಿರವಕಾಶ ಲಿಂಗಗಳು ಶ್ರುತವಾಗಿವೆ.

'ಅಭಿ ತ್ವಾ ಶೂರ ನೋ ನುಮೋಽದುಗ್ಧಾ ಇವ ಧೇನವಃ । ಈಶಾನಮಸ್ಯ ಜಗತಃ ಸ್ವರ್ದೃಶಮೀಶಾನಮಿಂದ್ರ ತಸ್ಥುಷಃ' (ಋಗ್ವೇದ ಐದನೇ ಅಷ್ಟಕ) ಸ್ವರ್ದೃಶಂ = ಸ್ವತಂತ್ರಜ್ಞಾನವುಳ್ಳ, ಜಗತಃ ಈಶಾನಂ = ಜಂಗಮಜಗತ್ತಿಗೆ ಸ್ವಾಮಿಯಾದ, ತಸ್ಥುಷಃ ಈಶಾನಂ = ಸ್ಥಾವರ ಪ್ರಪಂಚಕ್ಕೆ ಸ್ವಾಮಿಯಾದ, ತ್ವಾ = ನಿನ್ನನ್ನು, ಅದುಗ್ಧಾಃ ಧೇನವಃ ಇವ = ವೇದಮಾತೆಯಂತೆ, ಅಭಿ = ಮತ್ತೆ ಮತ್ತೆ, ನಃ = ನಾವು, ಸ್ತುಮಃ = ಸ್ತೋತ್ರಮಾಡುತ್ತೇವೆ. ಈ ಶ್ರುತಿಯಿಂದ ಜಗನ್ನಿಯಾಮಕತ್ವವೆಂಬ ನಿರವಕಾಶ ಗುಣವು ಬ್ರಹ್ಮನಲ್ಲಿ ತಿಳಿಯುತ್ತದೆ.

'ನ ತ್ವಾ ವಾಂ ಅನ್ಯೋ ದಿವ್ಯೋ ನ ಪಾರ್ಥಿವೋ ನ ಜಾತೋ ನ ಜನಿಷ್ಯತೇ' ಹೇ ಮಘವನ್ = ಎಲೈ ಇಂದ್ರನೇ! ದಿವ್ಯಃ = ದ್ಯುಲೋಕದಲ್ಲಿ, ಪಾರ್ಥಿವಃ = ಪೃಥಿವಿಯಲ್ಲಿ, ಅನ್ಯಃ = ನಿನಗಿಂತ ಬೇರೆಯಾದ, ತ್ವಾವಾಂ = ನಿನಗೆ ಸದೃಶನಾದವನು, ನ ಜಾತಃ = ಹುಟ್ಟಿಲ್ಲ, ನ ಜನಿಷ್ಯತೇ = ಮುಂದೆ ಹುಟ್ಟುವುದೂ ಇಲ್ಲ.

ಮತ್ತು 'ಸಮುದ್ರೇಽಂತಃಶಯತ ಉಂದಾ ವಜ್ರೋ ಅಭೀವೃತಃ' (ಆರನೇ ಅಷ್ಟಕ); 'ಸಮುದ್ರೇಽಂತಃ ಕವಯೋ ವಿಚಕ್ಷತೇ' (೮ನೇ ಅಷ್ಟಕ) ಈ ಶ್ರುತಿಗಳಲ್ಲಿ ಸಮುದ್ರಶಾಯಿತ್ವವೆಂಬ ನಿರವಕಾಶಲಿಂಗವು ಶ್ರುತವಾಗಿದೆ. ಇವೆಲ್ಲವೂ ಬ್ರಹ್ಮಲಿಂಗವೆಂಬುದು ಪ್ರಸಿದ್ಧ.

ಬೃಹಸ್ಪತಿ ಸೂಕ್ತದಲ್ಲಿಯೂ ನಿರವಕಾಶಬ್ರಹ್ಮಲಿಂಗಗಳು ಕೇಳಿಸುತ್ತಿವೆ. 'ದೇವಾಶ್ಚಿತ್ತೇ ಅಸುರ್ಯ-ಪ್ರಚೇತಸೋ ಬೃಹಸ್ಪತೇ ಯಜ್ಞಿಯಂ ಭಾಗಮಾನಶುಃ । ಉಸ್ರಾ ಇವ ಸೂರ್ಯೋ ಜ್ಯೋತಿಷಾ ಮಹೋವಿಶ್ವೇಷಾಮಿಜ್ಜನಿತಾ ಬ್ರಹ್ಮಣಾಮಸಿ' ಪ್ರಚೇತಸಃ ದೇವಾಶ್ಚಿತ್ = ಪ್ರಕೃಷ್ಟಜ್ಞಾನವುಳ್ಳ ದೇವತೆ-ಗಳೂ ಕೂಡ, ತೇ = ನಿನ್ನ ಪ್ರಸಾದದಿಂದ, ಯಜ್ಞಿಯಂ ಭಾಗಂ ಆನಶುಃ = ಯಜ್ಞಭಾಗವನ್ನು ಹೊಂದಿದ್ದಾರೆ. ನೀನಾದರೋ ವಿಶ್ವೇಷಾಮ್ ಬ್ರಹ್ಮಣಾಂ ಜನಿತಾಮಸಿ = ಹಿಂದಿನ ಈಗಿನ ಮುಂದಿನ ಎಲ್ಲಾ ಚತುರ್ಮುಖಬ್ರಹ್ಮರಿಗೆ ಜನಕನಾಗಿದ್ದಿ. ಈ ಶ್ರುತಿಯಲ್ಲಿ ತಿಳಿಯುತ್ತಿರುವ ಚತುರ್ಮುಖಬ್ರಹ್ಮ-ಜನಕತ್ವವು ಬೇರೆ ದೇವತೆಗಳಲ್ಲಿ ಕೂಡುವುದಿಲ್ಲ.

ಸೂರ್ಯಸೂಕ್ತದಲ್ಲಿಯೂ ನಿರವಕಾಶಬ್ರಹ್ಮಲಿಂಗವು ಕೇಳಿಸುತ್ತಿದೆ. 'ಚಿತ್ರಂ ದೇವಾನಾಮುದ-ಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ । ಆಪ್ರಾ ದ್ಯಾವಾ ಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಃ' ದೇವಾನಾಮನೀಕಂ = ಸೂರ್ಯಮಂಡಲವು ಎಲ್ಲ ದೇವತೆಗಳಿಗೆ ವಾಸಸ್ಥಾನ. ಇಂತಹ ಸೂರ್ಯಮಂಡಲವು, ಉದಗಾತ್ = ಉದಯವಾಗಿದೆ. ಮಿತ್ರಸ್ಯ = ಮಿತ್ರನ, ವರುಣಸ್ಯ = ವರುಣನ, ಅಗ್ನೇಃ = ಅಗ್ನಿಯ, ಚಕ್ಷುಃ = ಕಣ್ಣಿಗೆ ನಿಯಾಮಕ, ದ್ಯಾವಾಪೃಥಿವೀ = ದ್ಯುಲೋಕ ಪೃಥಿವಿಲೋಕಗಳನ್ನು, ಅಂತರಿಕ್ಷಂ = ಅಂತರಿಕ್ಷವನ್ನು, ಆಪ್ರಾಃ = ಚೆನ್ನಾಗಿ ವ್ಯಾಪಿಸಿದ್ದಿ. ಸೂರ್ಯ = ಎಲೈ ಸೂರ್ಯನೇ, ಜಗತಃ ತಸ್ಥುಷಃ = ಸ್ಥಾವರಜಂಗಮವೆಂಬ ವಿಶ್ವಕ್ಕೆ, ಆತ್ಮಾ = ಸ್ವಾಮಿಯಾಗಿದ್ದಿ. ಈ ಶ್ರುತಿಯಲ್ಲಿ ಕೇಳಿಸುತ್ತಿರುವ ಸ್ಥಾವರಜಂಗಮಾತ್ಮಕವಿಶ್ವಸ್ವಾಮಿತ್ವಲಿಂಗವು ಇತರ ದೇವತೆಗಳಲ್ಲಿ ಬರಲು ಸಾಧ್ಯವಿಲ್ಲ. ಇಲ್ಲಿರುವ ಆತ್ಮಶಬ್ದಕ್ಕೆ ಸ್ವರೂಪವೆಂದಷ್ಟೇ ಅರ್ಥೈಸಿದರೆ ಜಗತಃ ಎಂಬಲ್ಲಿರುವ ಷಷ್ಠಿಪ್ರಯೋಗವು ಗೌಣವಾಗುತ್ತದೆ.

ವಿಶ್ವಕರ್ಮಸೂಕ್ತದಲ್ಲಿಯೂ ನಿರವಕಾಶಬ್ರಹ್ಮಲಿಂಗವಿದೆ. 'ಯೋ ವರ್ಧನ ಓಷಧೀನಾಂ ಯೋ ಅಪಾಂ ಯೋ ವಿಶ್ವಸ್ಯ ಜಗತೋ ದೇವ ಈಶೇ' ಈ ಶ್ರುತಿಯಿಂದ ವಿಶ್ವೇಶ್ವರತ್ವಲಿಂಗವು ತಿಳಿಯುತ್ತಿದೆ. ಈ ಲಿಂಗವು 'ಏಷ ಸರ್ವೇಶ್ವರಃ' ಇತ್ಯಾದಿ ಪ್ರಮಾಣದ ಆಧಾರದಂತೆ ಬ್ರಹ್ಮನಲ್ಲಷ್ಟೇ ಪ್ರಸಿದ್ಧವಾಗಿದೆ. 'ವಿಶ್ವತಶ್ಚಕ್ಷುರುತ ವಿಶ್ವತೋ ಮುಖಮ್' ಎಂಬಲ್ಲಿ ಹೇಳಿದ ಲಿಂಗವು 'ಸರ್ವತಃ ಪಾಣಿಪಾದಂ ತತ್ ಸರ್ವತೋಕ್ಷಿಶಿರೋಮುಖಮ್' ಎಂಬ ವಚನದಂತೆ ವಿಷ್ಣುವಿನಲ್ಲಷ್ಟೇ ಪ್ರಸಿದ್ಧವಾಗಿದೆ. ಜಗಜ್ಜನಕತ್ವವೆಂಬ ಲಿಂಗವು 'ಯತೋ ವಾ ಇಮಾನಿ ಭೂತಾನಿ' ಎಂಬ ಶ್ರುತಿಯಂತೆ ಬ್ರಹ್ಮನಲ್ಲಿ ಪ್ರಸಿದ್ಧವಾಗಿದೆ ಎಂದು

ತಿಳಿಯಬೇಕು. ಈ ನಿರವಕಾಶಬ್ರಹ್ಮಲಿಂಗಗಳಿಂದ ಸಾವಕಾಶಶ್ರುತಿಪ್ರಕರಣಗಳು ಬಾಧಿತವಾಗುತ್ತವೆಂದು ಗ್ರಂಥಕಾರರು 'ಸಂತಿ' ಎಂಬ ಪದದಿಂದ ಹೇಳಿದ್ದಾರೆ.

ಸೂತ್ರದಲ್ಲಿ ಹೇಳಿದ ನಿರವಕಾಶಲಿಂಗವು ಉಪಲಕ್ಷಣವಾಗಿದೆ. ಬೇರೆ ಶ್ರುತಿಗಳಲ್ಲಿ ಕೇಳಿಸುತ್ತಿರುವ ಬೇರೆ ದೇವತೆಗಳ ಸಂಬೋಧನೆಯು ವಿಷ್ಣುಪರತ್ವವನ್ನು ಹೇಳಿದಾಗ ಮಾತ್ರ ಉಪಪನ್ನವಾಗಲು ಸಾಧ್ಯವೆಂದು 'ಕಿಂಚ' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ. ಸೂರ್ಯಸೂಕ್ತವು ಚತುರ್ಥಾಧ್ಯಾಯದಲ್ಲಿ ಪ್ರಸಕ್ತವಾಗಿದೆ. ಮೊದಲನೆಯ ಅಷ್ಟಕದಲ್ಲಿರುವ ವರುಣಸೂಕ್ತದಲ್ಲಿ 'ಆದಿತ್ಯ ವ್ರತೇ ತವಾನಾಗಸೋ-ದಿತಯೇ ಸ್ಯಾಮ' ಎಂದು ಆದಿತ್ಯಶಬ್ದದಿಂದ ಸಂಬೋಧಿಸಲಾಗಿದೆ. ಈ ಸಂಬೋಧನೆಗಳನ್ನು ವಿಷ್ಣು-ಪರತ್ವವನ್ನು ಒಪ್ಪದೇ ಹೊಂದಿಸಲು ಸಾಧ್ಯವಿಲ್ಲ. ಹಾಗಾದಲ್ಲಿ ಒಂದೇ ಸೂಕ್ತವು ಅನೇಕ ದೇವತೆಗಳನ್ನು ಪ್ರತಿಪಾದಿಸಿದಂತಾಗಿ ಏಕವಾಕ್ಯತ್ವಕ್ಕೆ ಭಂಗ ಬರುತ್ತದೆ.

ಆಯಾ ಸೂಕ್ತದಲ್ಲಿರುವ ಬ್ರಹ್ಮಲಿಂಗಗಳಿಗೆ ಅನ್ಯಥಾಸಿದ್ಧಿಯನ್ನು ಶಂಕಿಸಿ 'ಯದಿ ಚ' ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ. ಗ್ರಂಥದಲ್ಲಿರುವ ಲಿಂಗಶಬ್ದವು ಕೇವಲ ಉಪಲಕ್ಷಣ. ಪಾವಕಾದಿ ಶ್ರುತಿ-ಗಳನ್ನೂ ವಿವಕ್ಷಿಸಬೇಕು. ಒಂದು ವೇಳೆ ಪರೋವರೀಯಸ್ತ್ವಾದಿ ಲಿಂಗಗಳನ್ನು ಆಕಾಶಾದಿಗಳಲ್ಲಿ ಹೇಳಿದರೆ ಆಕಾಶಾಧಿಕರಣದ ಆರಂಭವೇ ವ್ಯರ್ಥವಾಗುತ್ತದೆ. ಹೀಗೆ ಹೇಳಿದ್ದರಿಂದ ಜಡವಾದ ಆಕಾಶಾದಿಗಳಲ್ಲಿ ಪರೋವರೀಯಸ್ತ್ವಾದಿಗಳನ್ನು ಉಪಾಸನೆಗೋಸ್ಕರ ಹೇಳಿದ್ದಾರೆ ಎಂಬ ಆಕ್ಷೇಪವು ಪರಿಹಾರವಾಯಿತು. ಉಪಾಸನೆಗೋಸ್ಕರ ಆ ಲಿಂಗಗಳನ್ನು ಹೇಳುವುದಾದರೆ ಆಕಾಶಾಧಿಕರಣ ಏಕೆ ಬೇಕು? ಮತ್ತು ಅಸದುಪಾಸನೆಯು ನಿಷಿದ್ಧವಾಗಿದೆ.

ಪ್ರಶ್ನೆ - ಇಂದ್ರವರುಣ ಮೊದಲಾದ ದೇವತೆಗಳು ಪರಸ್ಪರವಾಗಿ ಬ್ರಹ್ಮನಿಂದ ಅಭಿನ್ನರಾಗಿದ್ದಾರೆ. ಆದ್ದರಿಂದ ಬ್ರಹ್ಮನ ಲಿಂಗವನ್ನು ಮತ್ತು ಪಾವಕಾದಿಶಬ್ದಗಳನ್ನು ಇಂದ್ರಾದಿಸೂಕ್ತಗಳಲ್ಲಿ ಹೇಳಿದ್ದು ತಪ್ಪಲ್ಲ. ಆದ್ದರಿಂದಲೇ 'ತ್ವಮಗ್ನೇ ಇಂದ್ರೋ ವೃಷಭ' ಇತ್ಯಾದಿಪ್ರಯೋಗಗಳು ಉಪಪನ್ನವಾಗುತ್ತವೆ.

ಉತ್ತರ - ವಿಶಿಷ್ಟಪದಾರ್ಥಗಳಿಗೆ ಅಭೇದವನ್ನು ಅದ್ವೈತಿಗಳೇ ಒಪ್ಪಿಲ್ಲ. ಕೇವಲ ಚಿನ್ಮಾತ್ರಗಳಿಗೆ ಅಭೇದವನ್ನು ಹೇಳಿದರೆ ಲಕ್ಷಣಾಪ್ರಸಂಗ ಬರುತ್ತದೆ. ಮತ್ತು ಆಕಾಶಾದಿಗಳಲ್ಲಿಯೂ ಹಾಗೆ ಅಭೇದವನ್ನು ಒಪ್ಪಬೇಕಾಗುತ್ತದೆ. 'ಯಮಿಂದ್ರಮಾಹುಃ' ಇತ್ಯಾದಿ ವಚನಗಳ ವಿರೋಧವೂ ತಪ್ಪಿದ್ದಲ್ಲ. 'ಯಮಿಂದ್ರಮಾಹುಃ' ಎಂಬ ಶ್ರುತಿಯು ಭೇದಪರವಾಗಿದೆಯೆಂದು ಅಂತರಧಿಕರಣದಲ್ಲಿ ಸಮರ್ಥಿಸಿ-ದ್ದೇವೆ. ಮುಂದೆ ಪೃಥಗುಪದೇಶಾಧಿಕರಣದಲ್ಲಿ ಅಭೇದವನ್ನು ಸಹ ನಿರಾಕರಿಸುತ್ತೇವೆ.

ಅಗ್ನಿಶ್ರುತಿಗಳಲ್ಲಿರುವ ಬ್ರಹ್ಮಲಿಂಗಗಳನ್ನು ತನಗಿಂತ ನೀಚದೇವತೆಗಳಿಗೆ ನಿಯಾಮಕರಾದ್ದರಿಂದ ಆಯಾಯ ದೇವತೆಗಳಲ್ಲಿ ಸಂಕೋಚ ಮಾಡಬಹುದಲ್ಲವೇ? ಎಂದು ಶಂಕಿಸಬಾರದು. ಯಾವುದೇ ಬಾಧಕವಿಲ್ಲದೆ ಸಂಕೋಚಮಾಡಲು ಕಾರಣವಿಲ್ಲ. ಪಾವಕಾದಿಶಬ್ದಗಳಿಗೆ ಯೋಗವೃತ್ತಿಯಿಂದ ಸೂರ್ಯಾ-ದಿಗಳಲ್ಲಿ ಪ್ರಯೋಗವನ್ನು ಮಾಡಬಹುದಲ್ಲವೇ? ಎಂದೂ ಸಹ ಪ್ರಶ್ನಿಸಬಾರದು. ಯೋಗಕ್ಕಿಂತ ರೂಢಿಯು ಪ್ರಬಲವಾದ್ದರಿಂದ ಪಾವಕಾದಿಶಬ್ದಗಳು ವಿಷ್ಣುವನ್ನೇ ಹೇಳುತ್ತವೆ. ವಿನಿಗಮಕವಿಲ್ಲದ ಕಾರಣ ಯೋಗವೇ ಪ್ರಬಲವೆನ್ನಲಾಗದು. ಇಷ್ಟೆಲ್ಲಾ ಅಭಿಪ್ರಾಯದಿಂದ ಗ್ರಂಥಕಾರರು 'ದಿಕ್'ಪದವನ್ನು

ಪ್ರಯೋಗಿಸಿದ್ದಾರೆ. ಅಥವಾ ನಿರವಕಾಶಬ್ರಹ್ಮಲಿಂಗಗಳಿರುವ ಕೆಲವು ಸೂಕ್ತವನ್ನಷ್ಟೇ ಇಲ್ಲಿ ಉಲ್ಲೇಖಿಸಿದ್ದಾರೆ. ಇದರಂತೆ ಇನ್ನೂ ಸಾವಿರಾರು ಸೂಕ್ತಗಳನ್ನು ಸ್ವತಃ ಊಹಿಸಿಕೊಳ್ಳಬೇಕೆಂದು ದಿಕ್ ಪದವನ್ನು ಪ್ರಯೋಗಿಸಿದ್ದಾರೆ.

**गुरुराजीयम्** – प्रकृतौ सतुषशालिवाचिधान्यशब्दस्य वितुषव्रीहिषु लाक्षणिकत्वादार्थिकलक्षणा रचनातिदेश इति ज्ञानाभावमूला यथा मृगोसीति मन्त्रोहविषयिणी पूर्वपक्षिप्रसिद्धिः तथाग्न्यादिसूक्तेषु विष्णुसूक्तत्वाज्ञानमूलोक्त-प्रसिद्धिरित्यर्थः ॥ **न्यायविवरण इति** ॥ अत्तृत्वाधिकरणस्थमिदं समानन्यायत्वा-दत्रापि सिंहावलोकनन्यायेन परावृत्तमिति भावः ॥ **ईशानमिति** ॥ लिङ्गापेक्षया वाक्यस्य जघन्यत्वात् नत्वावाँ अन्यो दिव्यो न पार्थिवो न जातो न जनिष्यत इति वाक्यानुपादानम् ॥ **न युक्तमिति** ॥ नपुंसकमनपुंसकेनै कवच्चास्यान्य-तरस्याम् इत्येकशेष एकवद्भावश्चेति ज्ञेयम् । युक्त इत्यपि क्वचित्पाठः ॥ **यदि चेति** ॥ आकाशप्राणाद्यधिकरणवैषम्येण पूर्वपक्षयतेष्टापत्तेर्वक्तुमशक्यत्वादित्यर्थः ।

## ಸಾರ

ಅಗ್ನಿಸೂಕ್ತವಾಗಿದ್ದರೂ ಸಹ ಕರ್ಣಾದಿವಿದೂರತ್ವ ಮೊದಲಾದ ನಿರವಕಾಶಲಿಂಗಬಲದಿಂದ ವಿಷ್ಣುಪರವೇ ಆಗುತ್ತದೆ. ಈ ನ್ಯಾಯವು ಅಗ್ನಿಸೂಕ್ತದಲ್ಲಷ್ಟೇ ಅಲ್ಲ. ಇಂದ್ರ ಬೃಹಸ್ಪತಿ ಸೂರ್ಯ ವರುಣ ವಿಶ್ವಕರ್ಮ ಮೊದಲಾದವರ ಸೂಕ್ತಗಳಲ್ಲಿಯೂ ಅನ್ವಯಿಸುತ್ತದೆ. ಮತ್ತು ಸೌರಸೂಕ್ತದಲ್ಲಿ ಪಾವಕವರುಣ ಮೊದಲಾದ ಬೇರೆ ಬೇರೆ ದೇವತೆಗಳನ್ನು ಸಂಬೋಧನೆ ಮಾಡುವ ಶಬ್ದಗಳಿವೆ. ವರುಣಸೂಕ್ತದಲ್ಲಿ ಆದಿತ್ಯ ಎಂದಿದೆ. ಅಗ್ನಿಸೂಕ್ತದಲ್ಲಿ ಇಂದ್ರ ಎಂದಿದೆ. ಹೀಗೆ ಆಯಾಯ ದೇವತೆಗಳನ್ನು ಹೇಳುವ ಸೂಕ್ತಗಳಲ್ಲಿ ಬೇರೆ ದೇವತೆಗಳನ್ನು ಸಂಬೋಧಿಸುವ ಪದಗಳು ಬಹಳಷ್ಟು ಕಾಣಿಸುತ್ತವೆ. ಆದ್ದರಿಂದ ನಿರವಕಾಶಬ್ರಹ್ಮಲಿಂಗಗಳಿರುವ ಸೂಕ್ತಗಳೆಲ್ಲವೂ ವಿಷ್ಣುವನ್ನಷ್ಟೇ ಪ್ರತಿಪಾದಿಸುತ್ತವೆ ಎಂದು ಒಪ್ಪಿದಾಗ ಮಾತ್ರ ಈ ಅನುಪಪತ್ತಿಯು ಪರಿಹಾರವಾಗಲು ಸಾಧ್ಯ.

ಈ ಸೂಕ್ತಗಳಲ್ಲಿರುವ ಬ್ರಹ್ಮಲಿಂಗಗಳು ಕೇವಲ ಸ್ತೋತ್ರಪರವೆಂದು ಕೆಲವರ ಅಭಿಪ್ರಾಯ. ಹಾಗಾದಲ್ಲಿ ಆಕಾಶಪ್ರಾಣಾದಿಗಳಲ್ಲಿ ಹೇಳಿದ ಪರೋವರೀಯಸ್ತ್ವಾದಿ ಲಿಂಗಗಳೂ ಸಹ ಸ್ತೋತ್ರಪರವೆಂದಾಗಿ ಬ್ರಹ್ಮಲಿಂಗಗಳೇ ಆಗದಿರಬೇಕಾದೀತು? ಆವಾಗ ಆಕಾಶಾದ್ಯಧಿಕರಣಗಳು ಹೊರಟಿದ್ದೇ ವ್ಯರ್ಥವಾಗಬೇಕಾದೀತು.

## ವಿಭಿನ್ನ ಸಿದ್ಧಾಂತಗಳಿಂದ ಪುನರುಕ್ತಿ ಪರಿಹಾರ

### तात्पर्यचन्द्रिका

**न चैवमत्रत्यसिद्धान्तेनैव अन्तरधिकरणादिपूर्वपक्षाणां कैमुत्यन्यायहतत्वात् तत्रत्यसिद्धान्तन्यायव्युत्पादनं व्यर्थम्, स्वतो बलवतोऽपि सावकाशस्य स्वतो**

**दुर्बलेनापि निरवकाशेन बाध इत्यन्तरधिकरणन्यायेन विनाऽत्रत्यसिद्धान्तस्यैवासिद्धेः । अत्र आकाशाद्यधिकरणेषु च अधिकाशङ्कानिरासकन्याय एव हि व्युत्पाद्यः, न त्वन्तरधिकरणन्यायः । ''ज्योतिर्दर्शनात्'' इत्यत्र त्वग्निसूक्तस्थस्यापि ज्योतिषो म्रियमाणत्वादिलिङ्गैर्जीवत्वे शङ्किते, लिङ्गानि ब्रह्मपरोपक्रमोपसंहारमध्यस्थत्वादन्तर्भावितण्यन्तानीति वक्ष्यत इति न तेनाप्यस्य पुनरुक्तिः ।**

ಅನುವಾದ - ಈ ಅಧಿಕರಣದ ಸಿದ್ಧಾಂತನ್ಯಾಯದಿಂದಲೇ ಅಂತರಧಿಕರಣ ಮೊದಲಾದವುಗಳ ಪೂರ್ವಪಕ್ಷಗಳು ಕೈಮುತ್ಯನ್ಯಾಯದಿಂದ ಪರಿಹಾರವಾಗುತ್ತವೆ. ಪುನಃ ಅಂತರಾದ್ಯಧಿಕರಣಗಳಲ್ಲಿ ಸಿದ್ಧಾಂತನ್ಯಾಯವನ್ನು ವ್ಯುತ್ಪಾದನೆ ಮಾಡುವುದು ಅನಾವಶ್ಯಕವಲ್ಲವೇ? ಎಂದು ಪ್ರಶ್ನಿಸಬಾರದು. ಸಾವಕಾಶವಾದ 'ಶ್ರುತಿಲಿಂಗಗಳು ಸ್ವಭಾವತಃ ಪ್ರಬಲವಾಗಿದ್ದರೂ ಸ್ವಭಾವತಃ ದುರ್ಬಲವಾಗಿದ್ದರೂ ನಿರವಕಾಶಶ್ರುತಿಲಿಂಗಗಳಿಂದ ಬಾಧಿತವಾಗುತ್ತವೆ' ಎಂದು ಅಂತರಧಿಕರಣದ ಸಿದ್ಧಾಂತನ್ಯಾಯ. ಈ ನ್ಯಾಯವನ್ನು ಆಶ್ರಯಿಸಿ ಜ್ಯೋತಿರಧಿಕರಣದ ಸಿದ್ಧಾಂತವು ಹೊರಟಿದೆ. ಒಂದು ವೇಳೆ ಅಂತರಧಿಕರಣದ ನ್ಯಾಯವೇ ಬೇಡವೆಂದು ಶಂಕಿಸುವುದಾದರೆ ಈ ಅಧಿಕರಣದ ಸಿದ್ಧಾಂತವು ಸ್ಥಾಪನೆಯಾಗುವುದಿಲ್ಲ. ಮತ್ತು ಈ ಅಧಿಕರಣದಲ್ಲಿ ಆಕಾಶಾದ್ಯಧಿಕರಣಗಳಲ್ಲಿ ಹೇಳಿದ ಸಿದ್ಧಾಂತನ್ಯಾಯದ ಮೇಲೆ ಅಭ್ಯಧಿಕಾಶಂಕೆಯನ್ನು ಮಾಡಿ ನಿರಾಸಮಾಡಲಾಗಿದೆ. ಹಾಗಾಗಿ ಅಭ್ಯಧಿಕಾಶಂಕೆಯನ್ನು ನಿರಾಕರಿಸುವ ನ್ಯಾಯವನ್ನು ಇಲ್ಲಿ ಹೇಳಬೇಕೇ ಹೊರತು ಅಂತರಾದ್ಯಧಿಕರಣಗಳ ನ್ಯಾಯವನ್ನು ಹೇಳುವುದು ಅಪ್ರಸ್ತುತ.

ಈ ಜ್ಯೋತಿರಧಿಕರಣಕ್ಕೆ ಮೂರನೆಯ ಪಾದದಲ್ಲಿ ಬರುವ ಜ್ಯೋತಿರುಪಕ್ರಮಾಧಿಕರಣದಿಂದ ಪುನರುಕ್ತಿ ಬರುತ್ತದೆ. ಏಕೆಂದರೆ ಆ ಅಧಿಕರಣದಲ್ಲಿಯೂ ಸಹ ಜ್ಯೋತಿಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದಾರಲ್ಲವೆ? ಎಂದು ಶಂಕಿಸಬಾರದು. ಮೂರನೆಯ ಪಾದದಲ್ಲಿ 'ಜ್ಯೋತಿರ್ದರ್ಶನಾತ್' ಎಂದು ಜ್ಯೋತಿರುಪಕ್ರಮಾಧಿಕರಣವು ಪ್ರಸಕ್ತವಾಗುತ್ತದೆ. ಆ ಅಧಿಕರಣದಲ್ಲಿ ಅಗ್ನಿಸೂಕ್ತದಲ್ಲಿರುವ ಜ್ಯೋತಿಶಬ್ದವು ಮರಣಶೀಲತ್ವ ಮೊದಲಾದ ಲಿಂಗಗಳಿಂದ ಜೀವಪ್ರತಿಪಾದಕವಾಗಿದೆಯೆಂದು ಶಂಕಿಸಿದ್ದಾರೆ. ಬ್ರಹ್ಮನನ್ನು ಪ್ರತಿಪಾದಿಸುವ ಉಪಕ್ರಮ ಹಾಗೂ ಉಪಸಂಹಾರಗಳ ಮಧ್ಯದಲ್ಲಿ ಮರಣಶೀಲತ್ವ ಮೊದಲಾದ ಜೀವಲಿಂಗಗಳು ಕೇಳಿಸುತ್ತಿರುವುದರಿಂದ ಪರಮಾತ್ಮನು ಜೀವನಿಗೆ ಮರಣಾದಿಗಳನ್ನು ನೀಡುತ್ತಾನೆ (ಅಂತರ್ಭಾವಿತ ಣಿಚ್) ಎಂಬರ್ಥವನ್ನು ವಿವಕ್ಷಿಸಿ ಮ್ರಿಯಮಾಣತ್ವಾದಿಲಿಂಗಗಳನ್ನು ಪರಮಾತ್ಮನಲ್ಲಿಯೇ ಹೇಳಬೇಕು ಎಂಬ ಸಿದ್ಧಾಂತವನ್ನು ಸ್ಥಾಪಿಸಿದ್ದಾರೆ. ಹೀಗೆ ಜ್ಯೋತಿರಧಿಕರಣದ ಶರೀರಕ್ಕೂ ಜ್ಯೋತಿರುಪಕ್ರಮಾಧಿಕರಣದ ಶರೀರಕ್ಕೂ ವೈಲಕ್ಷಣ್ಯ-ವಿರುವುದರಿಂದ ಪುನರುಕ್ತಿಗೆ ಅವಕಾಶವಿಲ್ಲ.

**ಕಠಿಣಪದಾರ್ಥ**

ಅತ್ರತ್ಯಸಿದ್ಧಾಂತೇನ - ಪ್ರಕರಣದ ಅನುಗ್ರಹವಿರುವ ಶ್ರುತಿಯು ನಿರವಕಾಶಲಿಂಗದಿಂದ ಬಾಧಿತವಾಗುತ್ತದೆಂಬ ಸಿದ್ಧಾಂತದಿಂದ; ತತ್ರತ್ಯಸಿದ್ಧಾಂತನ್ಯಾಯ - ಕೇವಲ ಸಾವಕಾಶಶ್ರುತಿಯು ನಿರವಕಾಶಲಿಂಗದಿಂದ ಬಾಧಿತವಾಗುತ್ತದೆಂಬ ಅಂತರಧಿಕರಣದ ಸಿದ್ಧಾಂತನ್ಯಾಯ. ಅತ್ರತ್ಯಸಿದ್ಧಾಂತಸ್ಯೈವ = ಜ್ಯೋತಿರಧಿಕರಣದ ಸಿದ್ಧಾಂತವೇ; ತೇನಾಪಿ = ಜ್ಯೋತಿರುಪಕ್ರಮಾಧಿಕರಣದಿಂದಲೂ;

**प्रकाशः** – ननु यद्यत्र सूक्तानुगृहीताया अपि श्रुतेर्निरवकाशलिङ्गेन बाधः तदा तदननुगृहीताया इन्द्राकाशादिश्रुतेः सुतरां बाधेन पूर्वन्यायवैयर्थ्यमित्याशङ्क्या-न्तरधिकरणोपजीवनेनास्य प्रवृत्तेः न दोष इत्याह – **नचेति** ॥ **स्वत इति** ॥ जात्येत्यर्थः ।

ननु यदि तेनैव न्यायेनात्रत्यसिद्धान्तः, तर्हि व्युत्पाद्यन्यायभेदाभावान्नैतदारम्भः सम्भवतीत्यत आह – **अत्रेति** ॥ यद्वा स न्यायोऽत्रैवोच्यतामत आह – **अत्रेति** ॥ न्यायद्वयस्यैकत्र व्युत्पादनायोगात्, अन्यथा अधिकरणभेदो न स्यादिति भावः । ननु तर्हि स एवात्र व्युत्पाद्यतामिति चेन्न, एतदभ्यधिकाशङ्कायाः निरासकन्यायस्य क्वचित्कर्तव्यत्वात् ।

नन्वेवमपि ''ज्योतिर्दर्शनात्'' इत्यनेन पुनरुक्तिः, तत्राग्निसूक्तगतस्यापि ज्योतिषो विष्णुत्वमाक्षिप्य समाधानादित्यत आह – **ज्योतिरिति** ॥ **अग्नि-सूक्तस्थस्येति** ॥

ननु तत्र वाजसनेयगतं ज्योतिरुदाह्रियते, नत्वग्निसूक्तगतमिति चेदित्थमाशयः – अग्निसूक्तस्थं ज्योतिर्न विष्णुरस्यैव वाजसनेये म्रियमाणत्वादिश्रवणादिति । तत्र **''योऽयं विज्ञानमयः प्राणेषु हृद्यन्तर्ज्योतिः''** इति ज्योतिः किं जीव उत विष्णुरिति संशये, **''स समानः सन्नुभौ लोकावनुसञ्चरति स वा अयं पुरुषो जायमानः शरीरमभिसम्पद्यमानः पाप्मभिः संसृज्यते स उत्क्रामन् म्रियमाणः''** इत्यादिजीवलिङ्गाज्जीव इति प्रागुक्ताग्निसूक्तस्थमपि ज्योतिर्जीव एवेति प्राप्ते, ज्योतिश्शब्दस्य **''हृद्यन्तर्ज्योतिः''** इत्यात्मप्रश्नोत्तरोपक्रमे **''सुप्त इत्यत्रायं पुरुषः स्वयं ज्योतिः''** इत्युपसंहारे च श्रुतत्वात् आत्मप्रश्नोत्तरोपक्रमोपसंहाराभ्यां च विष्णुपरत्वेन निर्णीतवाक्यमध्यस्थतया जीवलिङ्गानां मारकत्वाद्यर्थकतया

कथञ्चिन्नेयत्वात् इदं ज्योतिर्विष्णुरेवेत्यग्निसूक्तस्थमपि तथेति सिद्धान्त उच्यते, न निरवकाशलिङ्गेन सावकाशबाधन्यायव्युत्पादनं सूक्तगतत्वाधिकाशङ्कानिरासक-न्यायव्युत्पादनं वा क्रियते, येन पुनरुक्तिस्स्यादित्यर्थः ।

ವಿವರಣೆ - ಶಂಕೆ - ಪ್ರಕರಣದ ಅನುಗ್ರಹವಿರುವ ಶ್ರುತಿಯೂ ಸಹ ನಿರವಕಾಶಲಿಂಗದಿಂದ ಬಾಧಿತವಾಗುತ್ತದೆಂಬುದು ಈ ಅಧಿಕರಣದ ಸಿದ್ಧಾಂತನ್ಯಾಯ. ಹಾಗಾದರೆ ಪ್ರಕರಣದ ಅನುಗ್ರಹವಿಲ್ಲದ ಇಂದ್ರ, ಆಕಾಶಾದಿಶ್ರುತಿಗಳು ನಿರವಕಾಶಲಿಂಗಗಳಿಂದ ಸುತರಾಂ ಬಾಧಿತವಾಗುತ್ತವೆಂದು ಕೈಮುತ್ಯ-ನ್ಯಾಯದಿಂದ ಸಿದ್ಧವಾಗುತ್ತದೆ. ಹೀಗಿರುವಾಗ ನಿರವಕಾಶಲಿಂಗಗಳಿಂದ ಕೇವಲ ಶ್ರುತಿಗಳು ಬಾಧಿತ-ವಾಗುತ್ತವೆಂಬ ಹಿಂದಿನ ಅಂತರಾದ್ಯಧಿಕರಣನ್ಯಾಯಗಳೆಲ್ಲ ವ್ಯರ್ಥವಲ್ಲವೆ?

ಸಮಾಧಾನ - ಇದು ತಪ್ಪು. ಅಂತರಧಿಕರಣದ ನ್ಯಾಯವನ್ನೇ ಉಪಜೀವಿಸಿ ಈ ಅಧಿಕರಣವು ಹೊರಟಿರುವಾಗ ಅಂತರಧಿಕರಣನ್ಯಾಯವನ್ನೇ ನಿಷೇಧಿಸಲು ಸಾಧ್ಯವಿಲ್ಲ.

ಶಂಕೆ - ಅಂತರಧಿಕರಣದ ನ್ಯಾಯವನ್ನು ಅವಲಂಬಿಸಿ ಈ ಅಧಿಕರಣದ ಸಿದ್ಧಾಂತವು ಹೊರಟರೆ ಒಂದೇ ನ್ಯಾಯವನ್ನೇ ಹೇಳಿದಂತಾಯಿತು. ಆವಾಗ ಅಂತರಧಿಕರಣವು ಸಾರ್ಥಕವಾದರೂ ಜ್ಯೋತಿರಧಿ-ಕರಣವು ವ್ಯರ್ಥವಾಗುತ್ತದಲ್ಲವೇ?

ಸಮಾಧಾನ - ಈ ಪ್ರಶ್ನೆಗೆ ಗ್ರಂಥಕಾರರು 'ಅತ್ರ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ. ಆಕಾಶಾದ್ಯಧಿಕರಣಗಳ ಸಿದ್ಧಾಂತನ್ಯಾಯದ ಮೇಲೆ ಬರುವ ಅಧಿಕಾಶಂಕೆಯನ್ನು ಈ ಅಧಿಕರಣದ ನ್ಯಾಯವು ಪರಿಹರಿಸುತ್ತದೆ ಹೊರತು ಅಂತರಧಿಕರಣದ ನ್ಯಾಯವು ಇದನ್ನು ಪರಿಹರಿಸುವುದಿಲ್ಲ. ಆದ್ದರಿಂದ ಈ ಅಧಿಕರಣವು ವ್ಯರ್ಥವಲ್ಲ. ಅಥವಾ ಅಂತರಧಿಕರಣದ ನ್ಯಾಯವನ್ನು ಇಲ್ಲಿಯೂ ಹೇಳ-ಬಹುದಲ್ಲವೇ? ಎಂಬ ಪ್ರಶ್ನೆಗೂ 'ಅತ್ರ' ಇತ್ಯಾದಿವಾಕ್ಯದಿಂದಲೇ ಉತ್ತರಿಸಿದ್ದಾರೆ. ಒಂದು ಅಧಿಕರಣದಲ್ಲಿ ಎರಡು ನ್ಯಾಯಗಳನ್ನು ಹೇಳಲು ಸಾಧ್ಯವಿಲ್ಲ. ಹಾಗಾದರೆ ಅಧಿಕರಣಭೇದವೇ ವ್ಯರ್ಥವಾಗುತ್ತದೆಂದು ಅಭಿಪ್ರಾಯ.

ಶಂಕೆ - ಹಾಗಾದರೆ ಎರಡು ನ್ಯಾಯಗಳನ್ನು ಈ ಅಧಿಕರಣದಲ್ಲಿ ಹೇಳುವುದು ಬೇಡ. ಅಂತರಧಿ ಕರಣದ ನ್ಯಾಯವನ್ನಷ್ಟೇ ಈ ಅಧಿಕರಣದಲ್ಲಿ ನಿರೂಪಿಸಿದರೆ ಸಾಕಲ್ಲವೇ?

ಸಮಾಧಾನ - ಈಗಾಗಲೇ ಹೇಳಿದಂತೆ ಆಕಾಶಾಧಿಕರಣಗಳ ಅಭ್ಯಧಿಕಾಶಂಕೆಯನ್ನು ನಿರಾಕರಿಸಲು ಈ ಅಧಿಕರಣದ ನ್ಯಾಯವನ್ನು ಎಲ್ಲಾದರೂ ಹೇಳಲೇಬೇಕು. ಮುಂದೆಲ್ಲೋ ಹೇಳುವುದಕ್ಕಿಂತ ಪ್ರಸಕ್ತಿ ಬಂದಾಗ ಹೇಳುವುದು ಸೂಕ್ತವೆಂದು ಈ ಅಧಿಕರಣ ಹೊರಟಿದೆ. ಆದ್ದರಿಂದ ಅಂತರಧಿಕರಣದ ನ್ಯಾಯವೂ ವ್ಯರ್ಥವಲ್ಲ. ಜ್ಯೋತಿರಧಿಕರಣದ ನ್ಯಾಯವೂ ವ್ಯರ್ಥವಲ್ಲ.

ಶಂಕೆ - 'ಜ್ಯೋತಿರ್ದರ್ಶನಾತ್' ಎಂಬ ಮೂರನೆಯ ಪಾದದಲ್ಲಿ ಬರುವ ಜ್ಯೋತಿರುಪ-ಕ್ರಮಾಧಿಕರಣದಿಂದ ಪುನರುಕ್ತಿ ಬರುತ್ತದೆ.

ಸಮಾಧಾನ - ಆ ಅಧಿಕರಣದಲ್ಲಿ ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ಜೀವನೆಂದು ಆಕ್ಷೇಪಿಸಿ ಸಮಾಧಾನವನ್ನು ಹೇಳಿದ್ದಾರೆ. ಈ ಪ್ರಶ್ನೆಗೆ ಗ್ರಂಥಕಾರರು 'ಜ್ಯೋತಿರ್ದರ್ಶನಾತ್' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಈ ಅಧಿಕರಣದ ಶರೀರಕ್ಕಿಂತ ವಿಭಿನ್ನವಾದ ಅಧಿಕರಣಶರೀರವು 'ಜ್ಯೋತಿ-ರ್ದರ್ಶನಾತ್' ಎಂಬಲ್ಲಿ ಕಾಣಿಸುತ್ತಿರುವುದರಿಂದ ಪುನರುಕ್ತಿಗೆ ಅವಕಾಶವಿಲ್ಲ.

ಶಂಕೆ - ಜ್ಯೋತಿರುಪಕ್ರಮಾಧಿಕರಣದಲ್ಲಿ ಬೃಹದಾರಣ್ಯಕ(ವಾಜಸನೇಯ)ದಲ್ಲಿರುವ ಜ್ಯೋತಿಶ್ರುತಿ-ಯನ್ನು ಉದಾಹರಿಸಿದ್ದಾರೆ ಹೊರತು ಅಗ್ನಿಸೂಕ್ತದಲ್ಲಿರುವ ಜ್ಯೋತಿಶ್ರುತಿಯನ್ನು ಉದಾಹರಿಸಿಲ್ಲ. ಹೀಗಿರುವಾಗ ಗ್ರಂಥಕಾರರು 'ಅಗ್ನಿಸೂಕ್ತಸ್ಥಸ್ಯಾಪಿ' ಎಂಬ ಮಾತನ್ನು ಹೇಗೆ ಹೇಳಿದರು?

ಸಮಾಧಾನ - ಜ್ಯೋತಿರುಪಕ್ರಮಾಧಿಕರಣದ ಅಭಿಪ್ರಾಯ ಹೀಗಿದೆ - ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ವಿಷ್ಣುವಲ್ಲ. ಇದೇ ಜ್ಯೋತಿಗೆ ಬೃಹದಾರಣ್ಯಕದಲ್ಲಿ ಮ್ರಿಯಮಾಣತ್ವಲಿಂಗವನ್ನು ಹೇಳಿದ್ದ-ರಿಂದ. ಜ್ಯೋತಿರುಪಕ್ರಮಾಧಿಕರಣದ ಅಧಿಕರಣಶರೀರ ಹೀಗಿದೆ -

'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿ' ಈ ಶ್ರುತಿಯಲ್ಲಿರುವ ಜ್ಯೋತಿಯು ಜೀವನೋ ಅಥವಾ ವಿಷ್ಣುವೋ? ಎಂದು ಸಂಶಯ. 'ಸ ಸಮಾನಃ ಸನ್ನುಭೌ ಲೋಕಾವನುಸಂಚರಂತಿ ಸ ವಾ ಅಯಂ ಪುರುಷೋ ಜಾಯಮಾನಃ ಶರೀರಮಭಿಸಂಪದ್ಯಮಾನಃ ಪಾಪ್ಮಭಿಃ ಸಂಸೃಜ್ಯತೇ ಸ ಉತ್ಕ್ರಾಮನ್ ಮ್ರಿಯಮಾಣಃ' ಈ ಶ್ರುತಿಯಲ್ಲಿ ಹುಟ್ಟುವಿಕೆ, ಪಾಪಸಂಪಾದನೆ ಮಾಡುವಿಕೆ, ಸಂಚಾರ ಮಾಡುವಿಕೆ, ಸಾಯುವಿಕೆ ಮೊದಲಾದ ಅನೇಕ ಜೀವಲಿಂಗಗಳು ಕೇಳಿಸುತ್ತಿವೆ. ಆದ್ದರಿಂದ ಜೀವನೇ ಮೊದಲು ಹೇಳಿದ ಅಗ್ನಿಸೂಕ್ತದಿಂದಲೂ ಪ್ರತಿಪಾದ್ಯನಾಗುತ್ತಾನೆ. ವಿಷ್ಣುವಲ್ಲವೆಂದು ಪೂರ್ವಪಕ್ಷ.

ಬೃಹದಾರಣ್ಯಕವನ್ನು ಸರಿಯಾಗಿ ಗಮನಿಸಿದಾಗ ಜ್ಯೋತಿಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನೆಂದು ನಿರ್ಣಯವಾಗುತ್ತದೆ. ಏಕೆಂದರೆ ಜನಕರಾಜರ ಪ್ರಶ್ನೆಗೆ ಯಾಜ್ಞವಲ್ಕ್ಯರು ಉತ್ತರಿಸುವಾಗ 'ಹೃದ್ಯಂತಃ-ಜ್ಯೋತಿಃ' ಎಂಬ ಆತ್ಮವಿಷಯಕಪ್ರಶ್ನೋತ್ತರದ ಉಪಕ್ರಮದಲ್ಲಿ ಮತ್ತು 'ಅತ್ರಾಯಂ ಪುರುಷಃ ಸ್ವಯಂ ಜ್ಯೋತಿಃ' ಎಂಬ ಉಪಸಂಹಾರದಲ್ಲಿಯೂ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. ಆತ್ಮಕುರಿತಾದ ಪ್ರಶ್ನೆಗೆ ಉಪಕ್ರಮ ಉಪಸಂಹಾರಗಳಲ್ಲಿ ವಿಷ್ಣುವೇ ಪ್ರತಿಪಾದ್ಯನೆಂದು ಅನಿವಾರ್ಯವಾಗಿ ಒಪ್ಪಬೇಕು. ಹೀಗೆ ನಿರ್ಣಯವಾದ ಉಪಕ್ರಮ ಉಪಸಂಹಾರಗಳ ಮಧ್ಯದಲ್ಲಿ ಮ್ರಿಯಮಾಣತ್ವ ಮೊದಲಾದ ಜೀವ-ಲಿಂಗಗಳು ಕೇಳಿಸಿದರೂ ಸಹ ಅವುಗಳನ್ನು ಕಥಂಚಿತ್ ವಿಷ್ಣುವಿನಲ್ಲಿಯೇ ಸಮನ್ವಯ ಮಾಡಬೇಕು. ವಸ್ತುತಃ ವಿಷ್ಣುವು ಮರಣಶೀಲನೂ ಅಲ್ಲ. ಜನನಶೀಲನೂ ಅಲ್ಲ. ಆದರೆ ಸಕಲ ಜೀವರಿಗೆ ಮರಣಜನನಾದಿಗಳನ್ನು ನೀಡುವುದರಿಂದ ಅವನಲ್ಲಿ ಮ್ರಿಯಮಾಣತ್ವ, ಜಾಯಮಾನತ್ವ ಮೊದಲಾದ ಲಿಂಗಗಳು ಬರುತ್ತವೆ. ಆದ್ದರಿಂದ ಬೃಹದಾರಣ್ಯಕದಲ್ಲಿರುವ ಜ್ಯೋತಿಯು ಯಾವಾಗ ವಿಷ್ಣುವೆಂದು ನಿರ್ಣಯವಾಗುತ್ತದೋ ಆದರಿಂದಲೇ ಅಗ್ನಿಸೂಕ್ತದಲ್ಲಿರುವ ಜ್ಯೋತಿಯೂ ಸಹ ವಿಷ್ಣುವೇ ಎಂದು ನಿರ್ಣಯವಾಗುತ್ತದೆ. ಹೀಗೆ ಜ್ಯೋತಿರುಪಕ್ರಮಾಧಿಕರಣದ ಸಿದ್ಧಾಂತವನ್ನು ಮಾಡಿದ್ದಾರೆ. ಹೊರತು ನಿರವಕಾಶಲಿಂಗದಿಂದ ಸಾವಕಾಶವು ಬಾಧಿತವಾಗುತ್ತದೆಂದು ಸಮರ್ಥನೆ ಮಾಡಿಲ್ಲ. ಅಥವಾ ಪ್ರಕರಣದ ಅನುಗ್ರಹವಿರುವುದರಿಂದ ಶ್ರುತಿಯು ಬಲಿಷ್ಠವಲ್ಲವೇ ಎಂಬ ಅಧಿಕಾಶಂಕೆಯ ಪರಿಹಾರನ್ಯಾಯವನ್ನು ಅಲ್ಲಿ ಹೇಳಿಲ್ಲ. ಒಂದು ವೇಳೆ ಈ ನ್ಯಾಯವನ್ನು ಹೇಳಿದ್ದಲ್ಲಿ ಪುನರುಕ್ತಿಯು ಬರುತ್ತಿತ್ತು.

## ಜ್ಯೋತಿರಧಿಕರಣ (೧।೧।೧೦)

**गुरुराजीयम्** – तर्ह्यन्तरधिकरणादिना त्विदं गतार्थं स्यात् । तत्सिद्धान्तव्यपदेशस्यैवात्र सिद्धान्तव्यवस्थापकत्वादित्यत आह – **अत्रेति ॥**

## ಸಾರ

ನಿರವಕಾಶಲಿಂಗದಿಂದ ಪ್ರಕರಣಾನುಗ್ರಹವಿರುವ ಶ್ರುತಿಯು ಸಹ ಬಾಧಿತವಾಗುತ್ತದೆಂಬುದು ಈ ಅಧಿಕರಣದ ಸಿದ್ಧಾಂತನ್ಯಾಯ. ಈ ನ್ಯಾಯದಿಂದಲೇ ಅಂತರಧಿಕರಣದ ಪೂರ್ವಪಕ್ಷವೂ ಸಹ ನಿರಾಕೃತ-ವಾಗುತ್ತದೆ. ಪುನಃ ಅಂತರಧಿಕರಣದ ಸಿದ್ಧಾಂತನ್ಯಾಯವು ಅನಾವಶ್ಯಕವಲ್ಲವೇ? ಎಂಬ ಪ್ರಶ್ನೆಗೆ ಹೀಗೆ ಉತ್ತರ -- ಅಂತರಧಿಕರಣದ ನ್ಯಾಯವನ್ನು ಅವಲಂಬಿಸಿಯೇ ಈ ಅಧಿಕರಣವು ಹೊರಟಿದೆ. ಈ ಅಧಿಕರಣವು ಪುನಃ ತನಗೆ ಆಶ್ರಯವಾದ ಅಂತರಧಿಕರಣವನ್ನೇ ಅಲ್ಲಗಳೆಯಲು ಸಾಧ್ಯವಿಲ್ಲ.

ಮೂರನೆಯ ಪಾದದ ಜ್ಯೋತಿರುಪಕ್ರಮಾಧಿಕರಣದಿಂದ ಈ ಅಧಿಕರಣದಿಂದ ಪುನರುಕ್ತಿ ಬರುತ್ತದೆಂದು ಮತ್ತೊಂದು ಪ್ರಶ್ನೆ. ಆದರೆ ಬೃಹದಾರಣ್ಯಕದಲ್ಲಿ ಬರುವ ಉಪಕ್ರಮ ಉಪಸಂಹಾರಗಳು ವಿಷ್ಣುಪರವಾದ್ದರಿಂದ ಜೀವಲಿಂಗವೆನಿಸಿದ ಮ್ರಿಯಮಾಣತ್ವಾದಿಗಳು ಕಥಂಚಿತ್ ವಿಷ್ಣುವಿನಲ್ಲಿ ಯೋಜನೆ ಮಾಡಬೇಕೆಂಬುದು ಜ್ಯೋತಿರುಪಕ್ರಮಾಧಿಕರಣದ ಸಿದ್ಧಾಂತನ್ಯಾಯ. ನಿರವಕಾಶಲಿಂಗದಿಂದ ಸಾವಕಾಶವು ಬಾಧಿತವಾಗುತ್ತದೆಂಬುದು ಈ ಅಧಿಕರಣದ ಸಿದ್ಧಾಂತನ್ಯಾಯ. ಹೀಗೆ ಎರಡೂ ಅಧಿಕರಣದ ಸಿದ್ಧಾಂತನ್ಯಾಯಗಳು ವಿಭಿನ್ನವಾಗಿರುವಾಗ ಪುನರುಕ್ತಿಗೆ ಅವಕಾಶವಿಲ್ಲ.

---

## ಸೂತ್ರಪದದ ಸ್ವಾರಸ್ಯ

### तात्पर्यचन्द्रिका

**ज्योतिश्शब्दप्रवृत्तिनिमित्तं च प्रकाशत्वं चित्प्रकाशरूपे ब्रह्मण्यप्यस्ति । यद्यप्यत्र वाक्यशेषे ''विश्वे देवा अनमस्यन् भियानाः'' इति सर्वदेवो-पास्यत्वादिकमपि निरवकाशं विष्णुलिङ्गमस्ति । तथाऽपि कर्णादिविदूरत्ववत् विषयवाक्य एव अश्रुतत्वादपरिच्छेद्यवैभवान्तर्भूतत्वाच्च न सूत्रकारादिभिः पृथ-गुक्तम् ।**

**यद्यप्यत्र ज्योतिः प्रति कर्णादीनां विरुद्धचरणरूपं कर्णादिविदूरत्वं वक्तुञ्च ''विचारणाभिधानात्'' इति सूत्रयितव्यम्, तथाप्युपसर्गस्य द्योतकत्वमात्रं धातोरेव तु विचरणाभिधायकत्वमिति प्रदर्शनार्थं, सूत्रस्य श्रुत्यनुगमप्रदर्शनार्थं च 'चरणाभिधानात्' इत्युक्तम् । 'विचरणाभिधानात्' इत्युक्तौ हि श्रुतौ 'वि' इत्यनेन**

**'चरति' इत्यस्य 'मे मनः' इति पदद्वयव्यवहितत्वात् श्रुत्यनुगमो न ज्ञायेत । तस्माद् 'विष्णुरेवेदं ज्योतिः' इति ॥ टीकाक्षरार्थस्तु स्पष्टः ॥**

**॥ इति श्रीब्रह्मण्यतीर्थपूज्यश्रीपादशिष्यव्यासतीर्थविरचिता तात्पर्यचन्द्रिकायाम् ज्योतिरधिकरणं सम्पूर्णम् ॥**

ಅನುವಾದ - ಜ್ಯೋತಿಶಬ್ದದ ಪ್ರವೃತ್ತಿನಿಮಿತ್ತ ಪ್ರಕಾಶತ್ವ. ಇದು ಚಿತ್‌ಪ್ರಕಾಶರೂಪನಾದ ಬ್ರಹ್ಮನಲ್ಲಿ ಸಹಜವಾಗಿ ಬರುತ್ತದೆ.

ವಸ್ತುತಃ ಸೂತ್ರಕಾರರು ಕರ್ಣಾದಿವಿದೂರತ್ವಲಿಂಗವನ್ನೇ ಹೇಳಬೇಕಾಗಿರಲಿಲ್ಲ. ಏಕೆಂದರೆ ವಿಷಯವಾಕ್ಯದ ಕೊನೆಯಲ್ಲಿ 'ವಿಶ್ವೇದೇವಾ ಅನಮಸ್ಯನ್ ಭಿಯಾನಾಃ' ಎಂದು ಸರ್ವದೇವೋ-ಪಾಸ್ಯತ್ವವೇ ಮೊದಲಾದ ಅನೇಕ ನಿರವಕಾಶವಿಷ್ಣುಲಿಂಗಗಳು ಕೇಳಿಸುತ್ತಿವೆ. ಆದರೂ ಕರ್ಣಾದಿ-ವಿದೂರತ್ವವನ್ನೇ ಉಲ್ಲೇಖಿಸಲು ಪ್ರಧಾನಕಾರಣವಿದೆ. ವಿಷಯವಾಕ್ಯದಲ್ಲಿಯೇ ಕರ್ಣಾದಿ-ವಿದೂರತ್ವವು ಕೇಳಿಸುತ್ತಿರುವಂತೆ ಸರ್ವದೇವೋಪಾಸ್ಯತ್ವಾದಿಗಳು ಕೇಳಿಸುತ್ತಿಲ್ಲ. ಮತ್ತು ಅಪರಿಮಿತವೈಭವ ಎಂಬ ಗುಣವು ಕರ್ಣಾದಿವಿದೂರತ್ವಲಿಂಗದಿಂದ ಸಿದ್ಧವಾಗುತ್ತದೆ. ಇದರಲ್ಲಿಯೇ ಸರ್ವದೇವೋಪಾಸ್ಯತ್ವವೇ ಮೊದಲಾದ ಎಲ್ಲ ಧರ್ಮಗಳೂ ಅಂತರ್ಭೂತವಾದ್ದರಿಂದ ಸೂತ್ರ-ಕಾರರು ಬೇರೆ ನಿರವಕಾಶಲಿಂಗಗಳನ್ನು ಪ್ರತ್ಯೇಕವಾಗಿ ಹೇಳಿಲ್ಲ.

ಸೂತ್ರಕಾರರು 'ವಿಚರಣಾಭಿಧಾನಾತ್' ಎಂದು ಹೇಳಬೇಕಿತ್ತಲ್ಲವೇ? ಏಕೆಂದರೆ ಜ್ಯೋತಿ ಎನಿಸಿದ ಪರಮಾತ್ಮನಿಂದ ಕಿವಿ ಮೊದಲಾದ ಇಂದ್ರಿಯಗಳು ವಿರುದ್ಧವಾಗಿ ಹೊರಟಿವೆ. ಈ ಅರ್ಥವು ತಿಳಿಯಬೇಕೆಂದರೆ ವಿಚರಣಾಭಿಧಾನಾತ್ ಎಂಬ ಹೇತುವನ್ನೇ ಹೇಳಬೇಕು ಹೊರತು, ಇದಕ್ಕೆ ವಿರುದ್ಧಾರ್ಥವನ್ನು ಹೇಳುವ 'ಚರಣಾಭಿಧಾನಾತ್' ಎಂದು ಹೇಳಬಾರದಲ್ಲವೇ? ಈ ಪ್ರಶ್ನೆಗೂ ಅವಕಾಶವಿಲ್ಲ. 'ವಿ' ಎಂಬ ಉಪಸರ್ಗವು ವಿರುದ್ಧಗಮನ ಎಂಬ ಅರ್ಥಕ್ಕೆ ಕೇವಲ ದ್ಯೋತಕ ಹೊರತು ವಾಚಕವಲ್ಲ. ಧಾತುವೇ ವಿರುದ್ಧಗಮನವನ್ನು ಹೇಳುತ್ತದೆ. ಉಪಸರ್ಗವು ಕೇವಲ ಅದನ್ನು ದ್ಯೋತನ ಮಾಡುತ್ತದೆ. ಇದನ್ನು ತಿಳಿಸಲು ಸೂತ್ರಕಾರರು 'ವಿ' ಉಪಸರ್ಗವನ್ನು ಪ್ರಯೋಗಿಸಿಲ್ಲ. ಅಥವಾ ಶ್ರುತಿಯ ಅನುಗಮವನ್ನು ಸೂತ್ರಕ್ಕೆ ಪ್ರದರ್ಶಿಸುವುದಕ್ಕಾಗಿ ಸೂತ್ರಕಾರರು ಚರಣಾಭಿಧಾನಾತ್ ಎಂದಿದ್ದಾರೆ. ಒಂದು ವೇಳೆ ವಿಚರಣಾಭಿಧಾನಾತ್ ಎಂದು ಹೇಳಿದರೆ ಶ್ರುತಿಯಲ್ಲಿ 'ವಿ' ಎಂಬ ಉಪಸರ್ಗಕ್ಕೂ 'ಚರತಿ' ಎಂಬ ಧಾತುವಿಗೂ ಮಧ್ಯದಲ್ಲಿ 'ಮೇ ಮನಃ' ಎಂಬ ಎರಡು ಪದಗಳು ವ್ಯವಹಿತವಾದ್ದರಿಂದ ಶ್ರುತ್ಯನುಗಮವು ತಿಳಿಯುತ್ತಿರಲಿಲ್ಲ. ಆದ್ದರಿಂದ ಸೂತ್ರಕಾರರು ಚರಣಾಭಿಧಾನಾತ್ ಎಂದು ಹೇಳಿದ್ದು ತಪ್ಪಲ್ಲ. ಹೀಗೆ ಈ ಅಧಿಕರಣದಲ್ಲಿ ಸ್ಥಾಪಿಸಿದ ಸಿದ್ಧಾಂತನ್ಯಾಯದಿಂದ ಜ್ಯೋತಿಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ.

ಜ್ಯೋತಿರಧಿಕರಣ (೧।೧।೧೦)

ಈ ಅಧಿಕರಣದ ಟೀಕೆಯಲ್ಲಿರುವ ಕಠಿಣಪದಾರ್ಥಗಳು ಸ್ಪಷ್ಟವಾಗಿರುವುದರಿಂದ ಪ್ರತ್ಯೇಕವಾಗಿ ಹೇಳಿಲ್ಲ.

ಶ್ರೀಮದ್ ವ್ಯಾಸತೀರ್ಥಗುರುಗಳಿಂದ ವಿರಚಿತವಾದ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಜ್ಯೋತಿರಧಿಕರಣವು ಸಂಪೂರ್ಣವಾಯಿತು.

* * * *

**प्रकाशः** – एवं प्रमाणाश्रिताशङ्कां निरवकाशलिङ्गरूपप्रमाणोपदर्शनेन निरस्येदानीं प्रमेयाश्रिताशङ्कां **"स्वयं ज्योतिष्ट्वाद्भगवतः"** इति पञ्चमगीता-भाष्योक्तदिशा शब्दप्रवृत्तिहेतुनिरूपणेन निरस्यति – **ज्योतिरिति** ॥ **प्रकाशत्व-मिति** ॥ तमोविरोधित्वस्य गुरुत्वादिति भावः । ननु यद्यत्रेदं विषयवाक्यं स्यात् तर्हि स्पष्टलिङ्गत्यागेन कर्णादिविदूरत्वप्रत्यायनाय चरणोक्तिरयुक्तेत्याशङ्क्याह – **यद्यपीति** ॥ विचरणेनापरिच्छेद्यवैभवस्यैवाभिप्रेतत्वेनोक्तत्वात् तेनैव सङ्गृहीत-त्वाच्चेत्याह – **अपरिच्छेद्येति** ॥ नन्वेवमपि 'विचरणाभिधानात्' इति वाच्यं, प्रतिपत्तिलाघवादित्याशङ्कामनूद्य निरस्यति – **यद्यपीति** ॥ ननु तर्कताण्डवे उपसर्गाणां द्योतकत्वं पूर्वपक्षीकृत्य वाचकत्वस्य समर्थनात् कथं द्योतकत्वोक्तिः । नच तत्पररीत्येति वाच्यं,

**समिति ह्युपसर्गेण परमुख्यार्थतोच्यते ।** इति,
**उपसङ्क्रमणं चैव द्वितीयोद्देशितं प्रति ।**
**अतिक्रमं वदन्तं तमुपशब्दो निवारयेत् ॥**

इति च भगवत्पादोक्तेरुदाहृतत्वात् । युक्तियुक्ततयोपपादनेनाभिप्रेतत्वावगमाच्च इति चेत्सत्यं, अभ्युपेत्यवादेन वा पररीत्या वेयमुक्तिः । अत एव पक्षान्तरमुक्त्वा तमुपपादयति – **सूत्रस्येति** ॥ अधिकरणार्थमुपसंहरति – **तस्मात्** । निरवकाश-लिङ्गस्य प्रवृत्तिनिमित्तस्य च भगवति सत्वात् विष्णुरेवेदं ज्योतिरिति ॥

**इति श्रीमद्राघवेन्द्रतीर्थविरचितचन्द्रिकाप्रकाश ज्योतिरधिकरणं सम्पूर्णम् ॥**

ವಿವರಣೆ - ಇಲ್ಲಿಯ ತನಕ ಪ್ರಮಾಣಾಶ್ರಿತಶಂಕೆಯನ್ನು ನಿರವಕಾಶಲಿಂಗವೆಂಬ ಪ್ರಮಾಣವನ್ನು ತೋರಿಸುವ ಮೂಲಕ ನಿರಾಕರಿಸಿದ್ದಾಯಿತು. ಈಗ ಪ್ರಮೇಯಾಶ್ರಿತ ಶಂಕೆಯನ್ನು ನಿರಾಕರಿಸುತ್ತಿದ್ದಾರೆ.

ಐದನೆಯ ಅಧ್ಯಾಯದ ಗೀತಾಭಾಷ್ಯದಲ್ಲಿ 'ಸ್ವಯಂ ಜ್ಯೋತಿಷ್ಟ್ವಾದ್ ಭಗವತಃ' (ಭಗವಂತನು ಸ್ವಯಂ ಜ್ಯೋತಿರೂಪನಾಗಿದ್ದಾನೆ) ಇತ್ಯಾದಿಯಾಗಿ ಹೇಳಿದಂತೆ ಜ್ಯೋತಿಶಬ್ದದ ಪ್ರವೃತ್ತಿನಿಮಿತ್ತವು ಯಾವುದೆಂದು ನಿರೂಪಿಸಿ ಪ್ರಮೇಯಾಶ್ರಿತಶಂಕೆಯನ್ನು 'ಜ್ಯೋತಿರಿತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ. ಪ್ರಕಾಶತ್ವವೇ ಜ್ಯೋತಿಶಬ್ದದ ಪ್ರವೃತ್ತಿನಿಮಿತ್ತ. ಇದನ್ನು ಬಿಟ್ಟು ತಮೋವಿರೋಧಿತ್ವವನ್ನು ಪ್ರವೃತ್ತಿ ನಿಮಿತ್ತವೆಂದರೆ ಗೌರವ ಬರುತ್ತದೆ.

'ವಿ ಮೇ ಕರ್ಣಾ ಪತಯತಃ' ಎಂಬುದೇ ಈ ಅಧಿಕರಣದ ವಿಷಯವಾಕ್ಯವಾದರೆ ಸ್ಪಷ್ಟ ಬ್ರಹ್ಮಲಿಂಗ-ಗಳನ್ನು ಬಿಟ್ಟು ಕಠಿಣವಾದ ಕರ್ಣಾದಿವಿದೂರತ್ವಲಿಂಗವನ್ನು ತಿಳಿಸುವ ಚರಣಶಬ್ದವನ್ನು ಸೂತ್ರಕಾರರು ಹೇಳಿದ್ದು ತಪ್ಪಲ್ಲವೇ? ಎಂಬ ಪ್ರಶ್ನೆಗೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಕರ್ಣಾದಿ-ವಿದೂರತ್ವಲಿಂಗದಿಂದ ಅಪರಿಚ್ಛಿನ್ನವೈಭವವು ತಿಳಿಯುವುದರಿಂದ ವಿಷಯವಾಕ್ಯದಲ್ಲಿರುವ ಉಳಿದೆಲ್ಲ ಲಿಂಗಗಳನ್ನು ಸಂಗ್ರಹಿಸಿದಂತಾಯಿತು. ಇದನ್ನು 'ಅಪರಿಚ್ಛೇದ್ಯ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ.

ವಸ್ತುತಃ ಸೂತ್ರಕಾರರು ವಿಚರಣಾಭಿಧಾನಾತ್ ಎಂದೇ ಹೇಳಬೇಕಲ್ಲವೇ? ಹೀಗೆ ಹೇಳಿದಾಗ ಸುಲಭವಾಗಿ ಅರ್ಥವಾಗುತ್ತದೆ ಎಂಬ ಶಂಕೆಗೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ.

ಪ್ರಶ್ನೆ - ಗ್ರಂಥಕಾರರು ಉಪಸರ್ಗವು ದ್ಯೋತಕವೆಂದು ಇಲ್ಲಿ ಹೇಳಿದ್ದಾರೆ. ಆದರೆ ತರ್ಕತಾಂಡವದಲ್ಲಿ ಉಪಸರ್ಗಗಳು ದ್ಯೋತಕವೆಂದು ಪೂರ್ವಪಕ್ಷ ಮಾಡಿ ವಾಚಕಗಳೆಂದು ಸಿದ್ಧಾಂತ ಮಾಡಿದ್ದಾರೆ. ಹೀಗಿರುವಾಗ ತರ್ಕತಾಂಡವಕ್ಕೆ ವಿರುದ್ಧವಾಗಿ ಇಲ್ಲಿ ಹೇಳಿದ ಮಾತು ತಪ್ಪಲ್ಲವೇ? ಇನ್ನು ತರ್ಕತಾಂಡವದ ಮಾತನ್ನು ಪರವಾದಿಗಳಂತೆ ಹೇಳಿದ್ದೆಂದು ಹೇಳಬೇಕು. ಆದರೆ ಅಲ್ಲಿ ಕೇವಲ ವಾಚಕವೆಂದಷ್ಟೇ ಹೇಳದೆ ಆಚಾರ್ಯರ ಮಾತುಗಳನ್ನು ಪ್ರಮಾಣವನ್ನಾಗಿ ನೀಡಿದ್ದಾರೆ. - 'ಸಮಿತಿ ಹ್ಯುಪಸರ್ಗೇಣ ಪರ-ಮುಖ್ಯಾರ್ಥತೋಚ್ಯತೇ' (ಸಂ ಎಂಬ ಉಪಸರ್ಗವು ಪರಮಮುಖ್ಯವೃತ್ತಿಯನ್ನು ಹೇಳುತ್ತದೆ) ಇಲ್ಲಿ 'ಉಚ್ಯತೇ' ಎಂಬ ಪದದಿಂದ ಉಪಸರ್ಗಕ್ಕೆ ವಾಚಕತ್ವವನ್ನು ಒಪ್ಪಿದ್ದಾರೆ. ಮತ್ತು ಆನಂದಮಯಾಧಿ-ಕರಣದಲ್ಲಿ

> ಉಪಸಂಕ್ರಮಣಂ ಚೈವ ದ್ವಿತೀಯೋದ್ದೇಶಿತಂ ಪ್ರತಿ ।
> ಅತಿಕ್ರಮಂ ವದಂತಂ ತಮುಪಶಬ್ದೋ ನಿವಾರಯೇತ್ ॥

ಉಪನಿಷತ್ತಿನಲ್ಲಿ ಬರುವ ಉಪಸಂಕ್ರಾಮತಿ ಇತ್ಯಾದಿ ಶಬ್ದಗಳು ಉಪಸಂಕ್ರಮಣವನ್ನೇ ಹೇಳುತ್ತಿವೆ. ಇತರರು ಅತಿಕ್ರಮಣ ಅರ್ಥವನ್ನು ಹೇಳಿದರೆ ಉಪ ಎಂಬ ಉಪಸರ್ಗವೇ ಅವರ ವಾದವನ್ನು ನಾಶ ಮಾಡುತ್ತದೆ. ಇಲ್ಲಿ ಉಪ ಎಂಬ ಉಪಸರ್ಗಕ್ಕೆ ವಾಚಕತ್ವವನ್ನು ಒಪ್ಪಿದ್ದಾರೆ. ಹೀಗೆ ತರ್ಕತಾಂಡವದಲ್ಲಿ ಆಚಾರ್ಯರ ಮಾತುಗಳನ್ನಷ್ಟೇ ಪ್ರಮಾಣವನ್ನಾಗಿ ನೀಡದೆ ಯುಕ್ತಿಯುಕ್ತವಾಗಿ ಉಪಸರ್ಗಗಳು ವಾಚಕಗಳಾಗಿವೆ ಎಂದು ಸಮರ್ಥಿಸಿದ್ದಾರೆ.

ಉತ್ತರ - ಹೌದು ತರ್ಕತಾಂಡವದಲ್ಲಿ ಹೇಳಿದಂತೆ ಉಪಸರ್ಗಗಳೆಲ್ಲವೂ ವಾಚಕಗಳೇ ಆಗಿವೆ ಹೊರತು ದ್ಯೋತಕಗಳಲ್ಲ. ಇಲ್ಲಿ ಗ್ರಂಥಕಾರರು ಪರರೀತ್ಯಾ ಹೇಳಿದ್ದಾರೆಂದು ತಿಳಿಯಬೇಕು. ಹೀಗೆ ಈ

ಪಕ್ಷವು ಅಸ್ವರಸವಾದ್ದರಿಂದಲೇ ಮತ್ತೊಂದು ಪಕ್ಷವನ್ನು ಗ್ರಂಥಕಾರರು 'ಸೂತ್ರಸ್ಯ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. ಒಂದು ವೇಳೆ ಉಪಸರ್ಗಗಳು ದ್ಯೋತಕವೇ ಆಗಿದ್ದಲ್ಲಿ ಈ ಮತ್ತೊಂದು ಪಕ್ಷವನ್ನು ಹೇಳುವ ಅವಶ್ಯಕತೆ ಇರಲಿಲ್ಲ.

ಜ್ಯೋತಿರಧಿಕರಣದ ಉಪಸಂಹಾರವನ್ನು 'ತಸ್ಮಾತ್' ಇತ್ಯಾದಿ ಗ್ರಂಥದಿಂದ ಮಾಡುತ್ತಿದ್ದಾರೆ. ಆದ್ದರಿಂದ ನಿರವಕಾಶಲಿಂಗದ ಪ್ರವೃತ್ತಿನಿಮಿತ್ತವು ಭಗವಂತನಲ್ಲಿ ಸಿದ್ಧವಾದ್ದರಿಂದ ವಿಷ್ಣುವೇ ಜ್ಯೋತಿಯೆನಿಸಿದ್ದಾನೆ.

ಶ್ರೀರಾಘವೇಂದ್ರತೀರ್ಥರಿಂದ ರಚಿತವಾದ ಚಂದ್ರಿಕಾ ಪ್ರಕಾಶ ಟಿಪ್ಪಣಿಯ ಕನ್ನಡಾನುವಾದದಲ್ಲಿ
ಜ್ಯೋತಿರಧಿಕರಣವು ಸಮಾಪ್ತವಾಯಿತು.

**गुरुराजीयम्** – प्रमेयाश्रितां शङ्कां परिहरति – **ज्योतिश्शब्देति** ॥ तमोविरोधित्वापेक्षया प्रकाशत्वस्य लघुत्वात्तदुपपादकतायाः आवश्यकत्वाच्चैतज्ज्योतिःपदप्रवृत्तिनिमित्तं वाच्यमिति भावः ।

तमसा सहास्थितत्वं प्रकाशस्याप्ययुक्तमित्यत उक्तं **चित्प्रकाशेति** ॥ तस्य च बाह्यतमःस्थितत्वं युक्तमेव । अन्यथा त्वामग्ने तमसि तस्थिवांसमित्युक्तत्वादग्नावपि प्रकाशत्वं न स्यात् । हृदय आहितमित्युक्तत्वादन्तर्बहिश्च स्यादिति भावः ।

ननु कर्णादिविदूरत्वं न यथाश्रुतं लिङ्गम् । तस्य कर्णाद्यगोचरत्वरूपत्वेनासम्भवित्वात् । तदुपलक्षितमियदिति परिच्छेदानर्हवैभवत्वमेव लिङ्गं वाच्यम् । तच्चानुपपन्नम् । वाक्यशेषोक्तस्य सर्वदेवोपास्यत्वस्यैव यथाश्रुतस्य लिङ्गत्वसम्भवात् । तत्सम्भवे चोपलक्षितानुसरणस्यानौचित्यादित्याशङ्कते – **यद्यपीति** ॥ **यद्यप्यत्रे- त्यादि** ॥ अत्र श्रुतौ पतयत इत्यादावुक्तत्वात्पतनाभिधानादिति वक्तव्येपि कर्णाद्यपेक्षया मनसो बहुव्याप्तेरभिमानिनश्चोत्तमत्वात्तन्मुख्यत्वद्योतनाय तत्सहपठितचरणस्यैव निर्देशः । एवं च श्रुतौ मनोगम्यत्वाभावः कर्णादिगोचरत्वाभावे हेतुत्वेनोच्यते ।

यद्वा मनोदूरत्वोक्त्या कैमुत्यन्यायेन लब्धमेव कर्णादिविदूरत्वं स्पष्टमुच्यते । अत एव किंस्विद्वक्ष्यामीत्यनुक्तवाक्कार्याक्षेपः । कर्णादिग्रहणस्योप-

लक्षणत्वादित्युक्तं भवति ॥ **उपसर्गस्येति** ॥ यद्यप्युपसर्गा अपि वाचका एवेति सिद्धान्तः तथापि परमतानुवादोऽयमित्यदोषः ॥

**इति श्रीकेशवभट्टारकेण विरचितायां भावदीपिकायां**
**ज्योतिरधिकरणं सम्मपूर्णम् ॥**

## ಸಾರ

ಪ್ರಕಾಶತ್ವವು ಜ್ಯೋತಿಶಬ್ದದ ಪ್ರವೃತ್ತಿನಿಮಿತ್ತವಾದ್ದರಿಂದ ಪ್ರಮೇಯಾಶ್ರಿತ ಪೂರ್ವಪಕ್ಷಕ್ಕೆ ಅವಕಾಶವಿಲ್ಲ.

ಸೂತ್ರಕಾರರು ಕರ್ಣಾದಿವಿದೂರತ್ವಲಿಂಗವನ್ನೇ ಉಲ್ಲೇಖಿಸಲು ಕಾರಣವೇನೆಂದರೆ ವಿಷಯವಾಕ್ಯದಲ್ಲಿ ಸ್ಪಷ್ಟವಾಗಿ ಕೇಳಿಸುತ್ತಿದೆ ಎಂದು. ಮತ್ತು ಉಳಿದೆಲ್ಲ ಲಿಂಗಗಳು ಅಪರಿಮಿತವೈಭವದಲ್ಲಿಯೇ ಸೇರಿಹೋಗಿವೆ ಎಂದು. ವಸ್ತುತಃ ಸೂತ್ರಕಾರರು ವಿಚರಣಾಭಿಧಾನಾತ್ ಎಂದೇ ಹೇಳಬೇಕು. ಆದರೆ ಶ್ರುತಿಯಲ್ಲಿ ಈ ಶಬ್ದವು ದೂರದಲ್ಲಿದ್ದು ಚರಣಾಭಿಧಾನ 'ಶಬ್ದವು' ಎಂದಷ್ಟೇ ಕೇಳಿಸುತ್ತಿದೆ. ಅದರ ಅನುಗಮಕ್ಕಾಗಿ 'ಚರಣಾಭಿಧಾನಾತ್' ಎಂದಿದ್ದಾರೆ. ಜ್ಯೋತಿಶಬ್ದದ ಪ್ರವೃತ್ತಿನಿಮಿತ್ತವು ಮುಖ್ಯವಾಗಿ ಭಗವಂತನಲ್ಲಿಯೇ ಬರುವುದರಿಂದ ಭಗವಂತನೇ ಜ್ಯೋತಿಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ.

* * *

ಇಲ್ಲಿಗೆ ಚಂದ್ರಿಕಾಸಾರದಲ್ಲಿ ಜ್ಯೋತಿರಧಿಕರಣವು ಸಮಾಪ್ತವಾಯಿತು

॥ ಶ್ರೀಮಧ್ವೇಶಾರ್ಪಣಮಸ್ತು ॥

# ೦೧೦-ಜ್ಯೋತಿರಧಿಕರಣ

ಭಾಗ -೩

ನ್ಯಾಯವಿವರಣ, ನ್ಯಾಯವಿವರಣಟೀಕಾ,
ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿಃ,
ಸೂತ್ರಾರ್ಥರತ್ನಾವಳಿಃ

श्रीमदानन्दतीर्थभगवत्पादाचार्यविरचितम्

# अणुभाष्यम्

## ज्योतिधिकरणम्

**अणुभाष्यम् –**

**प्रणेता ज्योतिरित्याद्यैः प्रसिद्धैरन्यवस्तुषु ।**

**उच्यते विष्णुरेवैकः सर्वैः सर्वगुणत्वतः ॥**

ಎಲ್ಲರ ಅಂತರ್ಯಾಮಿಯು. ಅವಕಾಶಪ್ರದನಾದ್ದರಿಂದ ಆಕಾಶನೂ ಸಕಲಕ್ಕೂ ಪ್ರೇರಕನೂ, ಜ್ಯೋತಿಯೂ ಆಗಿದ್ದಾನಾದ್ದರಿಂದ ಈ ಶಬ್ದಗಳಿಂದೆಲ್ಲಾ ಪ್ರತಿಪಾದ್ಯನಾಗಿದ್ದಾನೆ. ಬೇರೆ ವಸ್ತುಗಳಲ್ಲಿ ಪ್ರಸಿದ್ಧವಾದ ಎಲ್ಲಾ ಶಬ್ದಗಳಿಂದ ವಿಷ್ಣು ಒಬ್ಬನೇ ಪ್ರಸಿದ್ಧನಾಗಿದ್ದಾನೆ. ಏಕೆಂದರೆ ಎಲ್ಲಾ ಶಬ್ದಗಳು ಹೇಳುವ ಗುಣಗಳು ಅವನಲ್ಲಿ ಮಾತ್ರ ಇರುವುದರಿಂದ.

* * * *

श्री राघवेन्द्रतीर्थविरचिता

# तत्वमञ्जरी

## ज्योतिधिकरणम्

नन्वथापि पूर्णानन्दो विष्णुरिति न युक्तम् । 'यो वेद निहितं गुहायां' इत्यानन्दमयधर्मस्य गुहानिहितत्वस्य 'ज्योतिर्हृदय आहितं यत्' इति श्रुतौ ज्योतिष्युक्तेः । ज्योतिःशब्दस्य त्वामग्न इत्यग्निसाहचर्येणाग्निसूक्तस्थत्वेन चाग्निपरत्वात् । नहि द्वयोः स्वातन्त्र्येण सर्वप्रेरकत्वादिना हृदयगुहास्थत्वं युक्तमित्यत आह – ॐ ज्योतिश्चरणाभिधानादिति ॥

ಆನಂದಮಯಾಧಿಕರಣದಲ್ಲಿ ವಿಷ್ಣುವೇ ಪೂರ್ಣಾನಂದನೆಂದು ಹೇಳಿದ್ದಾರೆ. ಇದು ಸರಿಯಲ್ಲ. ಏಕೆಂದರೆ 'ಯೋ ವೇದ ನಿಹಿತಂ ಗುಹಾಯಾಮ್' ಎಂಬ ಶ್ರುತಿಯಲ್ಲಿ ಆನಂದಮಯನ ಧರ್ಮವೆನಿಸಿದ

ಗುಹಾನಿಹಿತತ್ವವನ್ನು ಜ್ಯೋತಿರ್ಹೃದಯ ಆಹಿತಂ ಯತ್' ಎಂಬಲ್ಲಿ ಜ್ಯೋತಿಗೂ ಸಹ ಹೇಳಿದ್ದಾರೆ. ಆದರೆ ಜ್ಯೋತಿಃಶಬ್ದವು ವಿಷ್ಣುವನ್ನು ಪ್ರತಿಪಾದಿಸುವುದಿಲ್ಲ. ಹೊರತಾಗಿ 'ತ್ವಾಮಗ್ನೇ' ಇತ್ಯಾದಿ ಅಗ್ನಿಶ್ರುತಿಯ ಸಾಹಚರ್ಯದಿಂದ ಅಗ್ನಿಯನ್ನೇ ಪ್ರತಿಪಾದಿಸುತ್ತದೆ. ಅಗ್ನಿಸೂಕ್ತವೆಂಬ ಪ್ರಕರಣವೇ ಈ ವಿಷಯದಲ್ಲಿ ಪ್ರಮಾಣವಾಗಿದೆ. ಅಗ್ನಿ ಮತ್ತು ವಿಷ್ಣು ಇಬ್ಬರೂ ಸಹ ಗುಹಾನಿಹಿತರಾಗಿದ್ದು ಸ್ವತಂತ್ರವಾಗಿ ಸರ್ವಪ್ರಾಣಪ್ರೇರಕರಾಗಿದ್ದಾರೆಂದು ಕಲ್ಪಿಸಬಾರದೆಂದು ತಿಳಿಸಲು 'ಜ್ಯೋತಿಶ್ಚರಣಾಭಿಧಾನಾತ್' ಎಂಬ ಸೂತ್ರವು ಹೊರಟಿದೆ.

तदर्थो – **ज्योतिरित्याद्यैः प्रसिद्धैरन्यवस्तुषु ॥ उच्यते विष्णुरेवैकः सर्वैः सर्वगुणत्वतः ॥** ज्योतिरित्याद्यैः सर्वसूक्तगतैरन्यवस्तुषु प्रसिद्धैः सर्वशब्दैरेको विष्णुरेवोच्यते । नत्वग्न्यादिः । कुतः **सर्वगुणत्वतः** । कर्णचक्षुर्मनोविदूरत्वोक्त्यभिप्रेतापरिच्छिन्नवैभवरूपसर्वगुणत्वादित्यर्थः । केन निमित्तेनेत्यतोऽपि – **सर्वगुणत्वतः** । 'स्वयं ज्योतिष्ट्वाद्भगवत' इति पञ्चमगीताभाष्योक्तदिशा प्रकाशरूपत्वादिरूपज्योतिरादितच्छब्दप्रवृत्तिनिमित्तसर्वगुणत्वादन्यगतं प्रति स्वातन्त्र्याच्च इत्यर्थः ॥१०॥

ಈ ಸೂತ್ರದ ಅರ್ಥವನ್ನೇ ಶ್ರೀಮದಾನಂದತೀರ್ಥರು - ಎಂದು ಹೇಳಿದ್ದಾರೆ. ಸಕಲಸೂಕ್ತಗಳಲ್ಲಿರುವ ಜ್ಯೋತಿಮೊದಲಾದ ಶಬ್ದಗಳಿಂದ ವಿಷ್ಣುವೇ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆ. ಹೊರತು ಅಗ್ನ್ಯಾದಿಗಳಲ್ಲ. ಏಕೆಂದರೆ ವಿಷ್ಣುವು ಸಕಲಗುಣಪೂರ್ಣನಾಗಿದ್ದಾನೆ. ಈ ಶ್ರುತಿಯಲ್ಲಿ ಕೇಳಿಸುತ್ತಿರುವ ಕರ್ಣ, ಚಕ್ಷುಸ್ಸು, ಮನಸ್ಸು ಮೊದಲಾದ ಇಂದ್ರಿಯಗಳಿಂದ ವಿದೂರತ್ವವನ್ನು ಜ್ಯೋತಿಗೆ ಹೇಳಲಾಗಿದೆ. ಇದರಿಂದ ಅಪರಿಚ್ಛಿನ್ನ ವೈಭವವು ಸೂಚಿತವಾಗಿದೆ. ಇಂತಹ ಗುಣಗಳೆಲ್ಲವೂ ವಿಷ್ಣುವಿನಲ್ಲೇ ಹೊಂದುತ್ತವೆ. ಯಾವಕಾರಣಕ್ಕಾಗಿ ಇವುಗಳನ್ನು ವಿಷ್ಣುವಿನಲ್ಲಿ ಸಾಧಿಸುತ್ತೀರಿ? ಎಂಬ ಪ್ರಶ್ನೆಗೂ ಸಹ ''ಸರ್ವಗುಣತ್ವತಃ'' ಎಂದೇ ಉತ್ತರ. ಐದನೆಯ ಅಧ್ಯಾಯದ ಗೀತಾಭಾಷ್ಯದಲ್ಲಿ 'ಸ್ವಯಂ ಜ್ಯೋತಿಷ್ಟ್ವಾದ್ ಭಗವತಃ' ಎಂಬುದಾಗಿ ವಿಷ್ಣುವಿಗೆ ಪ್ರಕಾಶರೂಪತ್ವವನ್ನು ಹೇಳಿದ್ದಾರೆ. ಈ ಪ್ರಕಾಶರೂಪತ್ವವೇ ಜ್ಯೋತಿಃಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ಅಷ್ಟೇ ಅಲ್ಲದೆ ಅಗ್ನ್ಯಾದಿಗಳಲ್ಲಿರುವ ಪ್ರಕಾಶತ್ವಾದಿಗಳಿಗೂ ವಿಷ್ಣುವೇ ಸ್ವತಂತ್ರನಾಗಿದ್ದಾನೆ. ಈ ಎಲ್ಲ ಕಾರಣಗಳಿಂದ ಜ್ಯೋತಿಃಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನೆಂದು ನಿರ್ಣಯವಾಯಿತು.

॥ಇಲ್ಲಿಗೆ ಶ್ರೀರಾಘವೇಂದ್ರಯತಿಗಳಿಂದ ವಿರಚಿತವಾದ ತತ್ವಮಂಜರಿಯಲ್ಲಿ

ಜ್ಯೋತಿರಧಿಕರಣದ ಕನ್ನಡಾನುವಾದವು ಮುಗಿಯಿತು ॥

॥श्रीः ॥

श्रीराघवेन्द्रतीर्थविरचिता

# तन्त्रदीपिका

## ज्योतिरधिकरणम्

॥ ॐ ज्योतिश्चरणाभिधानात् ॐ ॥ १-१-२४

अत्र नये सूक्तगताशेषनामसमन्वय उच्यते । प्रकाशवाचित्वेन प्राधान्याद्वा पूर्वाक्षेपकहृदयाहितत्वयुक्ततया वाऽन्योपलक्षणत्वेन ज्योतिष उक्तिः । ''ज्योतिर्हृदय आहितम्'' इति सूक्तोक्तं ज्योतिः तत्तु ब्रह्मैव । न त्वग्निसूक्तगत्वादिनाऽग्निः । ''वि मे कर्णा पतयतः'' इत्यादिना कर्णादीनां विचरणाभिधानात् । कर्णादिसर्वेन्द्रियविदूरत्वादित्यर्थः । अपरिच्छिन्नवैभवादिति यावत् । विचरणेति वाच्ये चरणेत्युक्तिरुपसर्गस्य द्योतकत्वमात्राद्वा वि मे मनश्चरतीति श्रुत्यनुगमार्था वेति ॥ १० ॥

ಈ ಅಧಿಕರಣದಲ್ಲಿ ಸೂಕ್ತಗಳಲ್ಲಿರುವ ಎಲ್ಲ ನಾಮಾತ್ಮಕಶಬ್ದಗಳ ಸಮನ್ವಯವನ್ನು ಹೇಳುತ್ತಿದ್ದಾರೆ. ಜ್ಯೋತಿಃಶಬ್ದವು ಪ್ರಕಾಶವಾಚಿಯಾದ್ದರಿಂದ ಪ್ರಧಾನವಾಗಿದೆ. ಅಥವಾ ಪೂರ್ವಪಕ್ಷಯುಕ್ತಿಯೆನಿಸಿದ ಹೃದಯಾಹಿತತ್ವ ಎಂಬ ಲಿಂಗದಿಂದ ಕೂಡಿರುವುದರಿಂದಲೂ ಪ್ರಧಾನವಾಗಿದೆ. ಆದ್ದರಿಂದ ಸೂತ್ರದಲ್ಲಿ ಪ್ರಧಾನವಾಗಿ ಜ್ಯೋತಿಃಶಬ್ದವನ್ನು ಸ್ವೀಕರಿಸಿ ಉಳಿದ ಶಬ್ದಗಳನ್ನು ಉಪಲಕ್ಷಣಯಾ ಹೇಳುತ್ತಿದ್ದಾರೆ.

ಸೂತ್ರಾರ್ಥ ಹೀಗಿದೆ — 'ಜ್ಯೋತಿಃ = 'ಜ್ಯೋತಿರ್ಹೃದಯ ಆಹಿತಂ' ಎಂಬ ಸೂಕ್ತದಲ್ಲಿರುವ ಜ್ಯೋತಿಸ್ಸು, ತತ್ತು = ಬ್ರಹ್ಮನೇ ಆಗಿದ್ದಾನೆ. ಹೊರತು ಅಗ್ನಿಸೂಕ್ತವೆಂಬ ಪ್ರಕರಣದಿಂದ ಪ್ರಾಪ್ತವಾಗಿದೆಯೆಂದು ಅಗ್ನಿಯು ಜ್ಯೋತಿಃಶಬ್ದವಾಚ್ಯವಲ್ಲ. ಏಕೆಂದರೆ ಚರಣಾಭಿಧಾನಾತ್ = 'ವಿ ಮೇ ಕರ್ಣಾ ಪತಯತಃ' ಇತ್ಯಾದಿಯಾಗಿ ಕರ್ಣಾದಿ ಇಂದ್ರಿಯಗಳಿಗೆ ವಿದೂರನಾಗಿರುವಿಕೆಯನ್ನು ಹೇಳಿರುವುದರಿಂದ. ಅಂದರೆ ಕರ್ಣಾದಿಸಕಲೇಂದ್ರಿಯಗಳಿಗೆ ವಿದೂರನಾಗಿರುವಿಕೆ ಎಂಬ ಲಿಂಗದಿಂದ ಎಂದರ್ಥ. 'ಅಪರಿಚ್ಛಿನ್ನವೈಭವದಿಂದ' ಎಂದು ಇದರ ತಾತ್ಪರ್ಯ. ವಸ್ತುತಃ ಸೂತ್ರದಲ್ಲಿ ಶ್ರುತ್ಯನುಗುಣವಾಗಿ ವಿಚರಣ ಎಂದೇ ಹೇಳಬೇಕಿತ್ತು. ಆದರೆ ಚರಣ ಎಂದು ಏಕೆ ಹೇಳಿದ್ದೆಂದರೆ ಉಪಸರ್ಗಗಳು ಅರ್ಥಕ್ಕೆ ಕೇವಲ ದ್ಯೋತಕವಾಗಿರುತ್ತವೆ ಹೊರತು ವಾಚಕವಾಗಿರುವುದಿಲ್ಲ ಎಂಬ ಪ್ರಮೇಯವನ್ನು ತಿಳಿಸುವುದಕ್ಕಾಗಿ. ಅಥವಾ 'ಮೇ ಮನಶ್ಚರತಿ' ಎಂಬ ಶ್ರುತಿಯ ಆನುಗುಣ್ಯಕ್ಕೋಸ್ಕರ 'ವಿ' ಉಪಸರ್ಗವನ್ನು ಹೇಳಿರುವುದಿಲ್ಲ.

श्रीराघवेन्द्रयतिकृता

# न्यायमुक्तावलिः

## ज्योतिरधिकरणम्

॥ ॐ ज्योतिश्चरणाभिधानात् ॐ ॥ १० ॥

पूर्ववैषम्येण पूर्वपक्षोत्थानात्प्रत्युदाहरणरूपा वा श्रौतक्रमाद्वा सङ्गतिः ।

**वि मे कर्णा पतयतो वि चक्षुर्वीदं ज्योतिर्हृदय आहितं यत् । वि मे मनश्चरति दूर आधीः किंस्विद्वक्ष्यामीत्यग्निसूक्ते (ऋ. ६-९-६) श्रुतं ज्योतिः किमग्निः उत विष्णुरिति सन्देहः ।**

अग्निरिति पूर्वः पक्षः । ज्योतिःश्रुतेरग्नौ रूढत्वात् तस्य तमोविरोधिमात्र-वाचित्वेऽपि हृदयगुहानिहितत्वलिङ्गेन त्वामग्ने ग्रे इति तमसीत्यग्निशब्दसान्निध्याच्च अन्यत्रास्यायोगात् । नच पूर्ववदनवकाशलिङ्गेन श्रुतिबाधात् नास्योत्थितिरिति वाच्यम् । वैषम्यात् । प्राणश्रुतेर्वायुसूक्ताननुग्रहात् अस्यास्तु प्रकरणरूपेणाग्निसूक्तेन अनुगृहीतत्वात् । नच श्रुतेर्भूतपरत्वे आकाशनयन्यायेन देवतापरत्वे च अन्तर्नयन्यायेन विष्णौ सावकाशत्वात् तस्यास्तथात्वे तद्युक्तसूक्तस्यापि तथात्वात् निरवकाशलिङ्गेन तयोर्बाध इति वाच्यम् । गुहास्थत्वादिलिङ्गस्यापि सावकाशतया ताभ्यां तद्बाधात् । सूक्तस्य वैष्णवत्वे इदमग्निसूक्तं इदं वायुसूक्तमित्यादिव्यवस्थाया ''अभिव्यक्तेः'' (ब्र.सू. १-२-२९) इत्यादिन्यायसिद्धत्वेऽपि इदमग्निसूक्तं न विष्णुसूक्तमिति लोकप्रसिद्ध्ययोगेन सूक्तस्य निरवकाशत्वाच्चेति ॥

ಹಿಂದಿನ ಅಧಿಕರಣದಿಂದ ವಿಲಕ್ಷಣವಾದ ಪೂರ್ವಪಕ್ಷವನ್ನು ಈ ಅಧಿಕರಣದಲ್ಲಿ ಮಾಡಲಾಗಿದೆ. ಆದ್ದರಿಂದ ಪ್ರತ್ಯುದಾಹರಣೆ ಎಂಬ ಸಂಗತಿಯನ್ನು ಅಥವಾ ಶ್ರುತಿಕ್ರಮಕ್ಕೆ ಅನುಸಾರಿಯಾದ ಸಂಗತಿಯನ್ನು ಈ ಅಧಿಕರಣಕ್ಕೆ ತಿಳಿಯಬೇಕು.

'ವಿಮೇ ಕರ್ಣಾ ಪತಯತೋ ಚಕ್ಷುರ್ವೀದಂ ಜ್ಯೋತಿರ್ಹೃದಯ ಆಹಿತಂ ಯತ್ । ವಿಮೇ ಮನಶ್ಚರತಿ ದೂರ ಆಧೀಃ ಕಿಂಸ್ವಿದ್ ವಕ್ಷ್ಯಾಮಿ' ಎಂಬ ಅಗ್ನಿಸೂಕ್ತವು ಈ ಅಧಿಕರಣದ ವಿಷಯವಾಕ್ಯವಾಗಿದೆ. ಈ ವಾಕ್ಯದಲ್ಲಿ ಕೇಳಿಸುತ್ತಿರುವ ಜ್ಯೋತಿಯು ಅಗ್ನಿಪರವೋ ಅಥವಾ ವಿಷ್ಣುಪರವೋ ಎಂದು ಸಂದೇಹ.

ಅಗ್ನಿ ಎಂದು ಪೂರ್ವಪಕ್ಷ. ಏಕೆಂದರೆ ಲೋಕದಲ್ಲಿ ಅಗ್ನಿಯಲ್ಲಿಯೇ ಜ್ಯೋತಿಃಶಬ್ದವನ್ನು ಪ್ರಯೋಗಿಸುತ್ತಾರೆ. ತಮೋವಿರೋಧಿ ಎಂಬರ್ಥದಲ್ಲೇ ಜ್ಯೋತಿಃಶಬ್ದವು ಪ್ರಸಿದ್ಧವಾಗಿದೆ. ಮತ್ತು ಹೃದಯ-ಗುಹಾನಿಹಿತತ್ವ ಎಂಬ ಲಿಂಗದಿಂದ 'ತ್ವಾಮಗ್ನೇ ತಮಸಿ' ಎಂಬ ಅಗ್ನಿಶ್ರುತಿಯ ಸಾನ್ನಿಧ್ಯದಿಂದ ಅಗ್ನಿಯನ್ನು ಬಿಟ್ಟು ಬೇರೆಡೆ ಜ್ಯೋತಿಃಶಬ್ದವನ್ನು ಪ್ರಯೋಗಿಸಲು ಸಾಧ್ಯವಿಲ್ಲ. ಹಿಂದಿನ ಅಧಿಕರಣದಲ್ಲಿ ಹೇಳಿದಂತೆ ನಿರವಕಾಶಲಿಂಗದ ಬಲದಿಂದ ಜ್ಯೋತಿಃಶ್ರುತಿಯು ಬಾಧಿತವಾಗುವುದರಿಂದ ಅಗ್ನಿಯನ್ನು ಜ್ಯೋತಿಯೆಂದು ಹೇಳಲು ಸಾಧ್ಯವಿಲ್ಲವಲ್ಲವೇ? ಎಂದು ಶಂಕಿಸಬಾರದು. ಹಿಂದಿನ ಅಧಿಕರಣಕ್ಕೂ ಈ ಅಧಿಕರಣಕ್ಕೂ ವ್ಯತ್ಯಾಸವಿದೆ. ಹಿಂದಿನ ಅಧಿಕರಣದಲ್ಲಿ ಪ್ರಾಣಶ್ರುತಿಗೆ ವಾಯುಪ್ರಕರಣದ ಅನುಗ್ರಹವು ಇರಲಿಲ್ಲ. ಆದರೆ ಜ್ಯೋತಿಃಶ್ರುತಿಗೆ ಅಗ್ನಿಪ್ರಕರಣದ ಅನುಗ್ರಹವಿದೆ.

ಜ್ಯೋತಿಶ್ರುತಿಯು ಅಗ್ನಿಪರವೆಂದು ಹೇಳಿದಾಗ ಭೂತಪದಾರ್ಥವಾದ ಅಗ್ನಿಯನ್ನು ಪ್ರತಿ-ಪಾದಿಸಬೇಕೋ ಅಥವಾ ಅಗ್ನಿದೇವತೆಯನ್ನು ಪ್ರತಿಪಾದಿಸಬೇಕೋ? ಭೌತಿಕಾಗ್ನಿಯನ್ನು ಪ್ರತಿಪಾದಿಸಿದರೆ ಆಕಾಶಾಧಿಕರಣದ ನ್ಯಾಯದಂತೆ ವಿಷ್ಣುವಿನಲ್ಲಿ ಸಾವಕಾಶವಾಗುತ್ತದೆ. ಅಗ್ನಿದೇವತಾಪರವಾದರೆ ಅಂತರಧಿ-ಕರಣದ ನ್ಯಾಯದಂತೆ ವಿಷ್ಣುವಿನಲ್ಲಿ ಸಾವಕಾಶವಾಗುತ್ತದೆ. ಹೀಗೆ ಜ್ಯೋತಿಃಶಬ್ದವು ವಿಷ್ಣುವಿನಲ್ಲಿ ಸಾವಕಾಶವಾಗುವುದರಿಂದ ಇದರಿಂದ ಕೂಡಿರುವ ಅಗ್ನಿಪ್ರಕರಣವೂ ಸಹ ಸಾವಕಾಶವೇ ಆಗುತ್ತದೆ. ಆದ್ದರಿಂದ ನಿರವಕಾಶವಿಷ್ಣುವಿನ ಲಿಂಗದಿಂದ ಜ್ಯೋತಿಃಶ್ರುತಿಯನ್ನು ಹಾಗೂ ಅಗ್ನಿಪ್ರಕರಣವನ್ನು ಬಾಧಿಸಬಹುದಲ್ಲವೇ?

ಈ ಶಂಕೆಯೂ ಸಹ ತಪ್ಪು. ವಿಷ್ಣುವಿನ ಲಿಂಗವೆನಿಸಿದ ಗುಹಾಸ್ಥತ್ವವೇ ಮೊದಲಾದವೂ ಸಹ ಅಗ್ನಿಮೊದಲಾದವರಲ್ಲಿ ಸಾವಕಾಶವಾಗಿದೆ. ಆದ್ದರಿಂದ ಅಗ್ನಿಶ್ರುತಿ ಹಾಗೂ ಅಗ್ನಿಪ್ರಕರಣಗಳಿಂದಲೇ ವಿಷ್ಣುವಿನ ಲಿಂಗಗಳು ಬಾಧಿತವಾಗುತ್ತವೆ. ಮತ್ತು ಒಂದು ವೇಳೆ ಅಗ್ನಿಪ್ರಕರಣವು ವಿಷ್ಣುಪರವಾದರೆ ಇದು ಅಗ್ನಿ ಸೂಕ್ತ, ಇದು ವಾಯುಸೂಕ್ತ ಇತ್ಯಾದಿ ವ್ಯವಸ್ಥೆಯೇ ತಪ್ಪಾದೀತು. ಏಕೆಂದರೆ ಎಲ್ಲಾ ಸೂಕ್ತಗಳೂ ವಿಷ್ಣುಪರವಾದರೆ ಪ್ರತಿಯೊಂದು ಸೂಕ್ತಗಳನ್ನು ವಿಷ್ಣುಸೂಕ್ತವೆಂದೇ ಕರೆಯಬೇಕಲ್ಲವೆ? ಇನ್ನು 'ಅಭಿವ್ಯಕ್ತೇಃ' ಎಂಬ ಸೂತ್ರದಿಂದ ಈ ಶಂಕೆಗೆ ಅಗ್ನಿಪರತ್ವವನ್ನು ಹೇಳಬಹುದೆಂದು ನೀವು ಉತ್ತರಿಸಬಹುದು. ಆದರೆ ಇದು ಅಗ್ನಿಸೂಕ್ತ ಹೊರತು ವಿಷ್ಣುಸೂಕ್ತವಲ್ಲ ಎಂಬ ಲೋಕಪ್ರಸಿದ್ಧಿಗೆ ನಿಮ್ಮಲ್ಲಿ ಏನು ಉತ್ತರ? ಈ ಕಾರಣದಿಂದ ಅಗ್ನಿಸೂಕ್ತವು ಕೇವಲ ಅಗ್ನಿಯನ್ನೇ ಪ್ರತಿಪಾದಿಸುತ್ತದೆ ಹೊರತು, ವಿಷ್ಣುವನ್ನು ಪ್ರತಿಪಾದಿಸು-ವುದಿಲ್ಲವೆಂಬುದಾಗಿ ನಿರವಕಾಶವಾಗಿದೆ. ಆದ್ದರಿಂದ ಜ್ಯೋತಿಃಶಬ್ದದಿಂದ ಅಗ್ನಿಯೇ ಪ್ರತಿಪಾದ್ಯನೆಂದು ಪೂರ್ವಪಕ್ಷ.

सिद्धान्तस्तु ॥ वि मे कर्णा पतयत इत्यादिनोक्तापरिच्छिन्नवैभवत्वरूपस्य कर्णादिविदूरत्वलिङ्गस्य परोमात्रयेतिश्रुत्या विष्ण्वेकनिष्ठत्वेनान्यत्रानवकाशत्वात् प्रकाशत्वरूपज्योतिःपदप्रवृत्तिनिमित्तस्य विष्णौ सत्त्वात् । अन्यगतस्य तद-धीनत्वात् तद्देवा ज्योतिषां ज्योतिः (बृ. ६-४-१६) इत्यादौ प्रयोगाच्च । तस्य च ज्योतिःपदस्य ज्योतिषैकेषामिति (ब्र.सू. १-४-१४) वक्ष्यमाणदिशा वैष्णवत्वात् ।

विष्णुसूक्तं नेति प्रसिद्धेरज्ञानमूलत्वेन तयोः सावकाशयोः निरवाकाशलिङ्गेन बाधात् । योगरूढिभ्यां ज्योतिःपदवाच्यो विष्णुरेव सूक्तं च तत्परमिति ।

फलन्तु हृदय आहितत्वमुखेन यो वेद निहितं गुहायाम् इत्युक्तानन्दमयाक्षेपस्तत्समाधिश्चेति ॥ १० ॥

'ವಿ ಮೇ ಕರ್ಣಾ ಪತಯತಃ' ಇತ್ಯಾದಿ ಶ್ರುತಿಯಿಂದ ಅಪರಿಚ್ಛಿನ್ನವೈಭವತ್ವವೆಂಬ ಕರ್ಣಾದಿ-ವಿದೂರತ್ವಲಿಂಗವು ಕೇಳಿಸುತ್ತಿದೆ. ಈ ಲಿಂಗವು 'ಪರೋ ಮಾತ್ರಯಾ' ಎಂಬ ಶ್ರುತಿ ಹೇಳುವಂತೆ ಕೇವಲ ವಿಷ್ಣುವಿನಲ್ಲಿ ಇರುತ್ತದೆ. ಹೊರತು ಬೇರೆಯವರಲ್ಲಿ ಇರಲು ಸಾಧ್ಯವಿಲ್ಲ. ಆದ್ದರಿಂದ ಪ್ರಕಾಶತ್ವವೆಂಬ ಜ್ಯೋತಿಃಶಬ್ದದ ಪ್ರವೃತ್ತಿನಿಮಿತ್ತವು ವಿಷ್ಣುವಿನಲ್ಲಿಯೇ ಇರುತ್ತದೆ. ಅಗ್ನಿ ಮೊದಲಾದವರಲ್ಲಿ ಇದೇ ಪ್ರಕಾಶತ್ವವು ಭಗವದಧೀನವಾಗಿದೆ ಎಂಬುದಾಗಿ 'ತದ್ದೇವಾ ಜ್ಯೋತಿಷಾಂ ಜ್ಯೋತಿಃ' ಇತ್ಯಾದಿಯಾಗಿ ಬೃಹದಾರಣ್ಯಕದಲ್ಲಿ ಹೇಳಲ್ಪಟ್ಟಿದೆ. ಇಂತಹ ಜ್ಯೋತಿಃಶಬ್ದವು 'ಜ್ಯೋತಿಷ್ಯೈಕೇಷಾಮ್' ಎಂಬ ಸೂತ್ರದ ಪ್ರಕಾರ ವಿಷ್ಣುಪರವೆಂದು ಸಿದ್ಧವಾಗಿದೆ.

ಇದು ಅಗ್ನಿಸೂಕ್ತವೇ ಆಗಿದೆ; ವಿಷ್ಣುಸೂಕ್ತವಲ್ಲವೆಂಬ ಲೋಕಪ್ರಸಿದ್ಧಿಯು ಅಜ್ಞಾನಮೂಲಕವಾದ್ದರಿಂದ ದುರ್ಬಲವಾಗಿದೆ. ಆದ್ದರಿಂದ ಸಾವಕಾಶವಾದ ಪ್ರಕರಣ ಹಾಗೂ ಶ್ರುತಿಗಳನ್ನು ನಿರವಕಾಶಲಿಂಗದಿಂದ ಬಾಧಿಸಬಹುದು. ಯೋಗ ಹಾಗೂ ರೂಢಿಗಳಿಂದ ಜ್ಯೋತಿಃಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನಾದ್ದರಿಂದ ಅಗ್ನಿಪ್ರಕರಣದಿಂದಲೂ ಅವನೇ ಪ್ರತಿಪಾದ್ಯನಾಗಿದ್ದಾನೆ.

ಹೃದಯ ಆಹಿತತ್ವವೆಂಬ ಧರ್ಮದ ಮೂಲಕ 'ಯೋ ವೇದ ನಿಹಿತಂ ಗುಹಾಯಾಮ್' ಎಂಬುದಾಗಿ ಹೇಳಲ್ಪಟ್ಟ ಆನಂದಮಯನ ಆಕ್ಷೇಪವೇ ಪೂರ್ವಪಕ್ಷದ ಫಲ; ಅದರ ಪರಿಹಾರವೇ ಸಿದ್ಧಾಂತದ ಫಲ ಎಂದು ತಿಳಿಯಬೇಕು.

* * * * *

ಜ್ಯೋತಿರಧಿಕರಣ - (೧।೧।೧೦)

# सूत्रार्थरत्नावळिः

(अत्र तत्तत्सूक्तगताशेषशब्दोपलक्षकस्य लोकतोऽन्यत्रप्रसिद्धस्य ज्योतिर्नाम्नो ब्रह्मणि समन्वयः क्रियते)

ॐ॥ ज्योतिश्चरणाभिधानात् ॥ॐ

नन्वग्निरेवेदं ज्योतिः । तस्य सूक्तस्याग्निसूक्तत्वात् (ऋ ६/९/६) । न च लिङ्गात् प्रकरणस्य दुर्बलत्वेन गुहानिहितत्वलिङ्गात्(तै.उ.२/१) प्रकरणबाधः । ज्योतिःश्रुतेरग्नौनिरूढत्वात् । विष्णौ तदभावात् । नच लिङ्गस्य निरवकाशत्वेन श्रुतिप्रकरणबाधकत्वमिति वाच्यम् । लिङ्गस्यापि जाठरजातवेदसि सावकाशत्वात् । लिङ्गस्य निरवकाशत्वेऽपि तस्यैकविधमेव प्राबल्यम् । श्रुतिप्रकरणयोस्त्वनेकप्रयुक्तप्राबल्यात् । श्रुतेश्च स्वाभावत्वप्रयुक्तप्राबल्यमपि श्रुतिप्रकरणाभ्यामेव लिङ्गस्य बाधो युक्तः । अतो ज्योतिषोऽग्नित्वमिति प्राप्ते, सूत्रमाह –

ॐ॥ ज्योतिश्चरणाभिधानात् ॥ॐ अस्यार्थः – ज्योतिः ज्योतिःशब्दवाच्यं ब्रह्मैव न त्वन्यत् । कुतः? चरणाभिधानात् कर्णादीनां विचरणाभिधानात् । ज्योतिषः साकल्येन कर्णादिविदूरत्वश्रवणादित्यर्थः (ऋ ७/९८/१) ।

एवंच कर्णादिविदूरत्वाख्यविष्णुलिङ्गात् । बहुत्वस्वभावबलवत्त्वरूपोभयविधप्राबल्यादपि निरवकाशत्वप्राबल्यस्य बलवत्वेन लिङ्गेन श्रुतिप्रकरणबाधोपपत्तेः । महायोगविद्वद्रूढिसद्भावेन श्रुतेर्विष्णावेव मुख्यत्वात् । अतो विष्णुरेवेदं ज्योतिस्तस्यैव गुहानिहितत्वं चेति सिद्धम् ॥

॥ इति सूत्रार्थरत्नावळ्यां ज्योतिरधिकरणं सम्पूर्णम् ॥

॥ इति परिपूर्णचन्द्रिकायां ज्योतिरधिकरणम् सम्पूर्णम् ॥

॥ श्रीमध्वेशार्पणमस्तु ॥

- - - - - -

# ೦೧೧-ಗಾಯತ್ರ್ಯಧಿಕರಣ

ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ಭಾಷ್ಯದೀಪಿಕಾ, ಸತ್ತರ್ಕದೀಪಾವಳೀ, ತತ್ವಪ್ರಕಾಶಿಕಾ, ಭಾವದೀಪ, ವಾಕ್ಯಾರ್ಥಮಂಜರೀ

**॥श्रीहनुमद्भीममध्वान्तर्गतरामकृष्णवेदव्यासात्मकलक्ष्मीहयग्रीवाय नमः ॥**

॥ ಶ್ರೀಗುರುಭ್ಯೋ ನಮಃ ॥

ದೇವದೇವೋತ್ತಮ ದೇವತಾಸಾರ್ವಭೌಮ

ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ

ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

# ಬ್ರಹ್ಮಮೀಮಾಂಸಾಶಾಸ್ತ್ರ

## ॥ ११. अथ छन्दोभिधानाधिकरणम् ॥

## (गायत्र्यधिकरणम्)

**सू - ॐ ॥ छन्दोऽभिधानान्नेति चेन्न तथा चेतोऽर्पणनिगदात् तथा हि दर्शनम् ॥ॐ॥ २५ ॥**

ಛಾಂದೋಗ್ಯದಲ್ಲಿರುವ ಗಾಯತ್ರೀಶಬ್ದದಿಂದ ಇಪ್ಪತ್ತನಾಲ್ಕು ಅಕ್ಷರವೆಂಬ ಛಂದಸ್ಸೇ ಪ್ರತಿಪಾದ್ಯವಾಗುತ್ತದೆ ಹೊರತು ವಿಷ್ಣುವಲ್ಲ. ಹೀಗೆ ಹೇಳಬಾರದು. ಏಕೆಂದರೆ, ಮನಸ್ಸಿನಲ್ಲಿ ಭಗವಂತನನ್ನು ಗಾಯತ್ರೀ ಎಂದು ಉಪಾಸನೆ ಮಾಡುವುದಕ್ಕಾಗಿ ಶ್ರುತಿಯಲ್ಲಿ 'ಗಾಯತಿ ತ್ರಾಯತಿ ಚ' ಎಂದು ಗಾನತ್ರಾಣಕರ್ತೃತ್ವವನ್ನು ವಿಷ್ಣುವಿಗೆ ಹೇಳಲಾಗಿದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – छन्दोभिधानात् ननु छन्दोगश्रुतिस्थगायत्रीपदेन चतुर्विंशत्यक्षरात्मकछन्दतः प्रतिपादनात् गायत्रीशब्दवाच्यो विष्णुर्नेति चेन्न ।

कुतः? तथाहि दर्शनं हि - यस्मात्, तथा - गानत्राणकर्तृत्वनिमित्तेन दर्शनम् विष्णोः, गायत्रीशब्दवाच्यत्वप्रतिपादिका 'गायति त्रायति च' इति श्रुतिरस्ति । तस्मात् व्यर्थं गायत्रीपदेन विष्णोरभिधानमित्यत उक्तम् – तथेत्यादि ।

तथा चेतोर्पणनिगदात् विष्णोः तथा गायत्र्यादिशब्दप्रवृत्तिनिमित्तवत्वेन चेतसि = अर्पणाय उपासनाय निगदात् = श्रुतौ प्रतिपादनादित्यर्थः । तथा च न वैय्यर्थ्यमिति भावः ।

ಛಂದೋಭಿಧಾನಾತ್ = ಛಾಂದೋಗ್ಯಶ್ರುತಿಯಲ್ಲಿ ಗಾಯತ್ರೀಪದದಿಂದ ಇಪ್ಪತ್ತನಾಲ್ಕು ಅಕ್ಷರರೂಪವಾದ ಛಂದಸ್ಸು ಪ್ರತಿಪಾದಿತವಾಗಿದೆ. ಆದ್ದರಿಂದ ಗಾಯತ್ರೀಶಬ್ದದಿಂದ ವಿಷ್ಣುವು ಪ್ರತಿಪಾದ್ಯನಾಗಲಾರ.

ಪರಿಪೂರ್ಣಚಂದ್ರಿಕಾ

ಇದು ತಪ್ಪು. ಏಕೆಂದರೆ, ತಥಾ ಹಿ ದರ್ಶನಂ ಹಿ =ಯಾವ ಕಾರಣದಿಂದ ಗಾನತ್ರಾಣಕರ್ತೃತ್ವವೆಂಬ ನಿಮಿತ್ತದಿಂದ ವಿಷ್ಣುವಿನಲ್ಲಿ ಗಾಯತ್ರಿಶಬ್ದವಾಚ್ಯತ್ವವನ್ನು ಸಮರ್ಥಿಸುವ 'ಗಾಯತಿ ತ್ರಾಯತಿ ಚ' ಎಂಬ ಶ್ರುತಿಯು ಇರುತ್ತದೆ.

ಆದ್ದರಿಂದ ಗಾಯತ್ರೀಶಬ್ದದಿಂದ ವಿಷ್ಣುವನ್ನೇಕೆ ಪ್ರತಿಪಾದಿಸಬೇಕು ಎಂದರೆ, ತಥಾ ಚೇತೋರ್ಪಣನಿಗದಾತ್ = ವಿಷ್ಣುವಿನಲ್ಲಿ ಗಾನತ್ರಾಣಕರ್ತೃತ್ವವೆಂಬ ಧರ್ಮವಿದೆಯೆಂದು ಮನಸ್ಸಿನಲ್ಲಿ ಉಪಾಸನೆ ಮಾಡುವುದಕ್ಕಾಗಿ ಶ್ರುತಿಯು ವಿಷ್ಣುವನ್ನು ಗಾಯತ್ರಿ ಎನ್ನುತ್ತಿದೆ. ಆದ್ದರಿಂದ ಗಾಯತ್ರೀಪದಸಮನ್ವಯವು ವ್ಯರ್ಥವಲ್ಲ.

- - - - - -

**श्रीमदानन्दतीर्थभगवत्पादाचार्यविरचित-**

# ब्रह्मसूत्रभाष्यम्

# ११.छन्दोभिधानाधिकरणम्

**(गायत्र्यधिकरणम्)**

## ಜ್ಯೋತಿಯೇ ಗಾಯತ್ರಿಯೆಂದು ಆಕ್ಷೇಪ

**भाष्यम् – 'अथ यदतः परो दिवो ज्योतिर्दीप्यते' (छां. ३-१३-७.) इत्युक्तस्य ज्योतिषः 'गायत्री वा इद९ सर्वम्' (छां. ३-१२. १.) इति गायत्र्या समारम्भः कृतः ॥ तस्मान्न विष्णुः –**

ಪ್ರಸಿದ್ಧವಾದ ಸ್ವರ್ಗಲೋಕಕ್ಕಿಂತ ಎತ್ತರದಲ್ಲಿ ಜ್ಯೋತಿಯು ಹೊಳೆಯುತ್ತಿದೆ. ಈ ಮಂತ್ರದಿಂದ ಪ್ರತಿಪಾದ್ಯವಾದ ಜ್ಯೋತಿಯು ಛಾಂದೋಗ್ಯೋಪನಿಷತ್ತಿನ ಉಪಕ್ರಮದಲ್ಲಿ ಗಾಯತ್ರಿಯ ಜೊತೆಗೆ ಪ್ರತಿಪಾದಿಸಲ್ಪಟ್ಟಿದೆ. ಆದ್ದರಿಂದ ಗಾಯತ್ರೀಪದವು ಜ್ಯೋತಿಯನ್ನೇ ಪ್ರತಿಪಾದಿಸುತ್ತದೆ ಹೊರತು, ವಿಷ್ಣುವಲ್ಲ.

भाष्यदीपिका – सू - ॐ ॥ छन्दोऽभिधानान्नेति चेन्न तथा चेतोऽर्पणनिगदात् तथा हि दर्शनम् ॥ ॐ ॥ २५ ॥ अत्राधिकरणे अधिवेदगतगायत्र्याद्यशेषशब्दसमन्वयः क्रियते । सङ्गत्यादिजिज्ञासाजननाय सूत्रमेवाऽदौ पठति – छन्द इति ॥ अत्र छन्द इत्यावर्तते । तच्च व्यस्तं समस्तं च । तथा च 'छन्दोऽभिधानात्' 'गायत्री वा इदम्' इति वाक्यस्थगायत्रीशब्देन चतुर्विंशत्यक्षरमन्त्रविशेषात्मकछन्दसः प्रतिपादनात्, तच्छब्दस्य तत्र रूढत्वात्, गायत्रीशब्दवाच्यो न विष्णुः, किन्तु छन्द एव । यतो गायत्री न

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಅಧಿವೇದಗತವಾದ ಗಾಯತ್ರೀ ಮೊದಲಾದ ಎಲ್ಲ ಶಬ್ದಗಳ ಸಮನ್ವಯವನ್ನು ಮಾಡಲು ಹೊರಟಿದ್ದಾರೆ. ಮೊದಲು ಸಂಗತಿ ಪೂರ್ವಪಕ್ಷ ಮೊದಲಾದವುಗಳನ್ನು ಸೂಚಿಸುವವರಾಗಿ ಸೂತ್ರದಲ್ಲಿರುವ ಪೂರ್ವಪಕ್ಷಾಂಶವನ್ನು ವ್ಯಾಖ್ಯಾನಿಸುತ್ತಿದ್ದಾರೆ.

ಅಥ = ಅನಂತರ, ಯದತಃ = ಯಾವ ಪ್ರಸಿದ್ಧವಾದ, ದಿವಃ = ಸ್ವರ್ಗಲೋಕಕ್ಕಿಂತಲೂ, ಪರಃ = ಮೇಲಿರುವ, ಜ್ಯೋತಿಃ = ಜ್ಯೋತಿಯು, ದೀಪ್ಯತೇ = ಪ್ರಕಾಶಿಸುತ್ತಿದೆ, ಇತಿ = ಹೀಗೆ, ಉಕ್ತಸ್ಯ = ಪ್ರತಿಪಾದ್ಯವಾದ, ಜ್ಯೋತಿಷಃ = ಜ್ಯೋತಿಗೆ, 'ಗಾಯತ್ರೀ ವಾ ಇದಂ ಸರ್ವಮ್' = ಗಾಯತ್ರೀ ವಾ ಇದಂ ಸರ್ವಮ್ ಎಂಬ ಛಾಂದೋಗ್ಯೋಪನಿಷತ್ತಿನಲ್ಲಿ, ಗಾಯತ್ರ್ಯಾ = ಗಾಯತ್ರಿಯೊಂದಿಗೆ, ಸಮಾರಂಭಃ = ಉಪಕ್ರಮವು, ಕೃತಃ = ಮಾಡಲ್ಪಟ್ಟಿದೆ. ತಸ್ಮಾತ್ = ಆ ಕಾರಣದಿಂದ, ನ ವಿಷ್ಣುಃ = ಗಾಯತ್ರೀಪದದಿಂದ ವಿಷ್ಣುವು ಪ್ರತಿಪಾದ್ಯನಾಗಲಾರ.

---

विष्णुः, अपि तु छन्दः, अतो ज्योतिरपि न विष्णुः किन्तु छन्दः । कुतः ? 'छन्दोऽभिधानात्' छन्दसा गायत्र्या तदैक्याभिप्रायेण ज्योतिषोऽभिधानाद् उपक्रमादिति चेत् – न, विष्णुरेव ज्योतिः । कुतः? 'निगदात्' गायत्रीपदेन विष्णोरेवाभिधानात् । गायत्र्यादिपदैर्विष्णोरेवाभिधानं च न तदभेदविधानार्थं, किन्तु तथोपासनार्थमेवेत्याह – तथेति ॥ 'तथा' गायत्र्यादिशब्दार्थगुणस्वरूपत्वेन 'चेतसो' मनसः 'अर्पणाय' ब्रह्मण्याधानायोपासनार्थमेव विष्णोर्निगदादित्यर्थः । उपासनेत्यनुक्त्वाचेतोर्पणेत्युक्तिरुपासनास्वरूपकथनार्था । अनेन प्रसिद्धगायत्र्यादिपदेन विष्णोरभिधानं व्यर्थमिति शङ्का परिहृता ।

ननु भवेद् गायत्रीशब्दवाच्यत्वेन विष्णोर्ज्योतिश्शब्दवाच्यत्वसाधनम्, यदि गायत्रीशब्दवाच्यत्वं विष्णोः प्रमितं स्यात् । तदेव कुत इत्यत आह – तथा हीति ॥ 'हि' यस्मात् 'तथा' गानत्राणकर्तृत्वनिमित्तेन विष्णोर्गायत्रीशब्दवाच्यत्वसाधकं 'दर्शनं' दृश्यते ज्ञायतेऽर्थो ययेति व्युपत्त्या 'गायति च त्रायति च' (शाखान्तरम्) इत्यादिरूपा श्रुतिरस्ति तस्मादिति सूत्रार्थः ।

श्रुत्यादिसङ्गतिविषयवाक्यविषयसंशयपूर्वपक्षतत्फलानि सूचयन् सूत्रे पूर्वपक्षांशं व्याचष्टे – अथेति ॥ उक्तस्येत्यावर्त्यते । तथा च 'हृदय आहितं यत्' इति गुहानिहितत्वेन यदुक्तं तस्यैव 'ज्योतिषः' पुनः 'अथ यदतः परो दिवो ज्योतिर्दीप्यते विश्वतः पृष्ठेषु सर्वतः पृष्ठेषु अनुत्तमेषूत्तमेषु लोकेषु । इदं वाव तद्यदिदमस्मिन्नन्तःपुरुषे ज्योतिः' इति छान्दोग्येऽप्युक्तस्य 'गायत्र्या' इत्थम्भूतलक्षणे तृतीया । गायत्रीत्वेन तद्रूपतया 'समारम्भः' पाठः कृतः । कुतोऽयं विज्ञायते यतो 'गायत्री वा इदं सर्वं वाग् वै गायत्री वाग्वा इदं सर्वम्' इति वाक्ये 'गायत्र्या' गायत्रीशब्देन तदैक्यतात्पर्येण

**तत्वप्रकाशिका –**

**अत्र सूत्रमेवादौ पठति – छन्दोऽभिधानादिति ॥ लोकतोऽन्यत्रप्रसिद्धगायत्रीनाम्नोऽत्र हरौ समन्वयसमर्थनादस्ति शास्त्रादिसङ्गतिः ।**

---

'समारम्भः' उपक्रमः कृतः, अत इति योजना । ततः किमित्यत आह – तस्मादिति ॥ इदं चाऽवर्तते । ज्योतिर्गायत्रीति च शेषः । छन्द इति चानुषज्यते । तथा च यस्माद् गायत्र्या समारम्भः कृतः, स च यस्मादनुपसञ्जातविरोधित्वेन बलवान्, तस्मादिदं ज्योतिर्गायत्र्येव भवेत् । सा च गायत्री वर्णसमावेशलक्षणमन्त्रात्मकछन्द एव भवेत्, न विष्णुः । कुतः? तस्माद् गायत्रीशब्दस्य छन्दस्येव रूढत्वाद्वाक्त्वाभिधानाचेति योजना ॥

अनेन 'गायत्री वा इदं सर्वम्' इति पूर्ववाक्यस्थगायत्रीशब्दस्य विष्ण्वन्यपरत्वे तत एवोत्तरवाक्यस्थज्योतिषो विष्ण्वन्यत्वापत्त्या तत एव अग्निसूक्तगतज्योतिषोऽपि तदन्यत्वमेव भवेत् । अत एवाऽनन्दमयत्वमप्यन्यस्यैव भवेन्न विष्णोरिति पूर्वोक्ताक्षेपेण एतदधिकरणोत्थानात् पूर्वेणास्याऽक्षेपिकी सङ्गतिः ॥

एवं गायत्री विषयः । किं छन्दोविशेषः उत विष्णुरिति सन्देहः । तथा गायत्री छन्दोविशेष एव भवेत्; तच्छब्दस्य तत्र रूढत्वादिति सयुक्तिकः पूर्वपक्षः । तथा तस्माद् ज्योतिरपि छन्द एवेति तस्यैव गुहानिहितत्वमानन्दमयत्वं चेति पूर्वपक्षफलं च सूचितं भवति । अत्र पूर्वपक्षे गायत्र्यादिशब्दाः मन्त्रपराः, सर्वमपि वाक्यं तन्माहात्म्यपरतया योजनीयम् ॥

सिद्धान्ते तु 'अथ' इत्यादेरयमर्थः – भगवन्माहात्म्यान्तरारम्भेऽथशब्दः 'यत्' श्वेतद्वीपानन्तासनवैकुण्ठगतं नारायणवासुदेववैकुण्ठाख्यं रूपत्रयं तत् 'अतः' एतस्माद् विवक्षितांद् बुद्धिस्थात् 'दिवः परः' परं तदपेक्षयोच्चस्थानस्थितमित्यर्थः । 'ज्योतिः' तेजोमयं एवम्भूतं तत् 'विश्वतः पृष्ठेषु'

**'पृथिव्यां ब्रह्मणो मेरौ वैजयन्तेऽन्तरिक्षगम् ।**
**तृतीयं सत्यलोके च सदनं त्रिविधं मतम् ॥'**

इति वचनादन्तरिक्षगवैजयन्तमेरुसत्यलोकगतेभ्यो ब्रह्मसदनेभ्यः क्रमेणोच्चेषु 'सर्वतः पृष्ठेषु' अन्तरिक्षपृथिवीस्वरात्मकलोकेभ्यः क्रमेणोच्चेषु 'अनुत्तमेषु' न विद्यते उत्तमो लोको येभ्यस्तेषु प्रत्यवरेष्विति वा । 'उत्तमेषु' स्वयमेवोत्तमेषु 'लोकेषु' श्वेतद्वीपानन्तासनवैकुण्ठेषु 'दीप्यते' प्रकाशते 'तत्' दीप्यमानं तेजः 'इदं वाव' इदं खलु । इदं च किम्? 'यदिदमस्मिन् पुरुषे' हृदये 'अन्तर्ज्योतिः' तच्छब्दितं ब्रह्मास्ति तत्तेनैकीभूतमित्यर्थः । यो गायत्रीनामा गायत्रीसंस्थः स्त्रीरूपो हयशीर्षाख्यो भगवान्

**श्रुत्यादिसङ्गतिविषयवाक्यविषयसंशयपूर्वपक्षतत्फलानि सूचयन् सूत्रं व्याचष्टे – अथेति ॥ हृदयनिहितं ज्योतिर्विष्णुरित्यभिहितं तच्च ज्योतिश्छन्दोगश्रुतौ श्रूयते । 'अथ यदतःपरो दिवो ज्योतिर्दीप्यते विश्वतः पृष्ठेषु सर्वतः पृष्ठेष्वनुत्तमेषूतमेषु लोकेष्विदं वाव तद्यदिदमस्मिन्पुरुषे ज्योतिः' इति । एतच्च गायत्रीत्वेन पठ्यते । 'गायत्री वा इदं सर्वं भूतं यदिदं किञ्च वाग्वै गायत्री वाग्वा इदं सर्वम्' इत्युपक्रमात् । इयं च गायत्री यदा विष्णोरन्यास्यात् तदा इदं ज्योतिश्च सा स्यादिति गायत्रीनिर्णयोऽत्रावश्यापेक्षितः ।**

**सा गायत्री विषयः । किं विष्णुरुत च्छन्दोविशेषः? इति सन्देहः । ज्योतिःश्रुतिर्लोकप्रसिद्धिश्च सन्देहबीजम् ।**

ಈ ಅಧಿಕರಣದಲ್ಲಿ ಭಾಷ್ಯಕಾರರು ಸೂತ್ರವನ್ನೇ ಮೊದಲು ಹೇಳುತ್ತಿದ್ದಾರೆ. "ಛಂದೋಭಿಧಾನಾತ್" ಇತ್ಯಾದಿಯಾಗಿ. ಲೋಕದಲ್ಲಿ ಅನ್ಯತ್ರಪ್ರಸಿದ್ಧವಾದ(ಛಂದಸ್ಸಿನಲ್ಲಿ) 'ಗಾಯತ್ರೀ ಎಂಬ ನಾಮಾತ್ಮಕಶಬ್ದವನ್ನು ಶ್ರೀಹರಿಯಲ್ಲಿ ಸಮನ್ವಯ ಮಾಡುವುದರಿಂದ ಈ ಅಧಿಕರಣಕ್ಕೆ ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಪಾದಸಂಗತಿಗಳು ಇರುತ್ತವೆ.

ಇನ್ನು ಶ್ರುತಿಸಂಗತಿ, ಅಧಿಕರಣಸಂಗತಿ, ವಿಷಯವಾಕ್ಯ, ವಿಷಯ, ಸಂಶಯ, ಪೂರ್ವಪಕ್ಷ, ಪೂರ್ವಪಕ್ಷದ ಫಲ ಇವುಗಳನ್ನು ಭಾಷ್ಯಕಾರರು ಸೂಚನೆ ಮಾಡುತ್ತಾ ಸೂತ್ರವನ್ನು "ಅಥ" ಇತ್ಯಾದಿಗ್ರಂಥದಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ಹೃದಯದಲ್ಲಿ ನೆಲೆಸಿರುವ ಜ್ಯೋತಿಯು ವಿಷ್ಣುವೇ ಆಗಿದ್ದಾನೆಂದು ಹಿಂದಿನ ಅಧಿಕರಣದಲ್ಲಿ ಸಮರ್ಥಿಸಿದ್ದಾಯಿತು. ಆದರೆ ಆ ಜ್ಯೋತಿಯೇ ಛಾಂದೋಗ್ಯಶ್ರುತಿಯಲ್ಲಿ ಹೀಗೆ ಪ್ರತಿಪಾದ್ಯನಾಗಿದ್ದಾನೆ.

"ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷ್ವನುತ್ತಮೇಷೂತ್ತಮೇಷು ಲೋಕೇಷ್ವಿದಂ ವಾವ ತದ್ಯದಿದಮಸ್ಮಿನ್ ಪುರುಷೇ ಜ್ಯೋತಿಃ"

---

तदिदं प्रथमं रूपमित्याशयेन तस्य द्वितीयं रूपं वक्तुं गायत्रीत्यादिवाक्यं प्रवृत्तम् । 'यदिदं किञ्च भूतं' पूर्णं मत्स्याद्यवताररूपं यच्च 'सर्वं' सर्वान्तःस्थितं रूपं तत्सर्वं 'गायत्री' गायत्रीनामा भगवानेव । वै प्रसिद्धम् । तस्यैव तृतीयं रूपमाह – वागिति ॥ गायत्रीनामा भगवान् 'वाग् वै' वाङ्नामको विष्णुरेव । कुतोऽस्य विष्णुत्वमित्यतस्तल्लक्षणयोगादित्याह – वाग् वा इति ॥ 'इदं सर्वं भूतं' प्राणिजातं 'वाग् वै' वाङ्नामक- भगवदधीनमेव । अतः सर्वस्वामित्वाद् वाचो विष्णुत्वमिति ॥

(ದ್ಯುಲೋಕಕ್ಕಿಂತ ಮೇಲೆ ಶ್ವೇತದ್ವೀಪ ಅನಂತಾಸನ ವೈಕುಂಠಗಳೆಂಬ ಮೂರು ಪರಮಾತ್ಮನ ಸ್ಥಾನಗಳಿರುತ್ತವೆ. ಆ ಸ್ಥಾನಗಳಲ್ಲಿರುವ ಜ್ಯೋತಿಯು ತೇಜೋಮಯವಾಗಿದೆ. ಮತ್ತು ಮೇರು-ಪರ್ವತ, ವೈಜಯಂತ, ಸತ್ಯಲೋಕವೆಂಬ ಬ್ರಹ್ಮನ ಸ್ಥಾನಗಳಿಗಿಂತ ಕ್ರಮವಾಗಿ ಎತ್ತರದಲ್ಲಿವೆ. ಭೂರ್ಲೋಕ ಭುವರ್ಲೋಕ ಸ್ವರ್ಗಲೋಕ ಮೊದಲಾದವುಗಳಿಗಿಂತಲೂ ಎತ್ತರದಲ್ಲಿವೆ. ಈ ಮೂರು ಸ್ಥಾನಗಳಿಗಿಂತ ಉತ್ತಮವಾದ ಲೋಕ ಮತ್ತೊಂದಿರುವುದಿಲ್ಲ. ಇಂತಹ ಅನಂತಾಸನಾದಿ ಮೂರು ಸ್ಥಾನಗಳಲ್ಲಿ ಯಾವುದು ಜಾಜ್ವಲ್ಯಮಾನವಾಗಿದೆಯೋ ಆ ವಸ್ತುವೇ ಸರ್ವಲೋಕಗಳಲ್ಲಿ ಪ್ರಕಾಶಿಸುವ ತೇಜೋಮಯವಾಗಿದೆ. ಮತ್ತು ಪುರುಷರ ಹೃದಯಾಕಾಶದಲ್ಲಿಯೂ ಪ್ರಕಾಶಿಸುವ ಜ್ಯೋತಿಯೆನಿಸಿದೆ)

ಹೀಗೆ ಛಾಂದೋಗ್ಯೋಪನಿಷತ್ತಿನಲ್ಲಿ ಜ್ಯೋತಿಯು ಗಾಯತ್ರೀಯೆಂದು ಪಠಿತವಾಗಿದೆ. ಏಕೆಂದರೆ 'ಗಾಯತ್ರೀ ವಾ ಇದಂ ಸರ್ವಂ ಭೂತಂ ಯದಿದಂ ಕಿಂಚ ವಾಗ್ ವೈ ಗಾಯತ್ರೀ ವಾಗ್ ವಾ ಇದಂ ಸರ್ವಮ್' ಎಂಬುದಾಗಿ ಈ ಪ್ರಕರಣದ ಪ್ರಾರಂಭದಲ್ಲಿ ಗಾಯತ್ರೀಯು ಪ್ರಸಕ್ತವಾಗಿದೆ. ಈ ಗಾಯತ್ರೀಯು ಒಂದು ವೇಳೆ ವಿಷ್ಣುವಿಗಿಂತ ಭಿನ್ನವಾದಲ್ಲಿ ಆವಾಗ ಈ ಜ್ಯೋತಿಯೂ ಸಹ ಗಾಯತ್ರಿಯೇ ಆಗಬೇಕು. ಆದ್ದರಿಂದ ಮೊದಲು ಗಾಯತ್ರೀಶಬ್ದಪ್ರತಿಪಾದ್ಯವಾದ ವಸ್ತು ಯಾವುದು? ಎಂಬುದನ್ನು ಅವಶ್ಯವಾಗಿ ನಿರ್ಣಯಿಸಬೇಕು.

ಈ ಅಧಿಕರಣದಲ್ಲಿ ಗಾಯತ್ರೀಯೆ ವಿಷಯವಾಗಿದೆ. ಗಾಯತ್ರೀಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೋ? ಅಥವಾ ಛಂದೋವಿಶೇಷವೋ ಎಂದು ಸಂದೇಹ. ಛಾಂದೋಗ್ಯದಲ್ಲಿರುವ ಜ್ಯೋತಿಃ-ಶಬ್ದವು ಹಾಗೂ ಲೋಕಪ್ರಸಿದ್ಧಿಯೂ ಸಂದೇಹಕ್ಕೆ ಕಾರಣವಾಗಿದೆ.

**(तत्व-) तत्र गायत्री छन्दोविशेष एवेति पूर्वः पक्षः । गायत्रीशब्दस्य तत्रैव रूढत्वात् । वाग्वै गायत्रीति बाक्त्वविधानाच्च । न च ज्योतिःश्रुत्या गायत्र्यादि-श्रुतिबाधः । श्रुतेः श्रुतिबाधकत्वायोगात् । न च सावकाशत्वादिना बाध्यबाधक-भावः । गायात्र्यां 'तेजो वै ब्रह्मवर्चसं गायत्री' इति ज्योतिःशब्दानतिभिन्नार्थ-तेजःशब्दश्रवणेन ज्योतिःश्रुतेरेव सावकाशत्वात् ।**

**न च गायत्रीश्रुतिर्विष्णाववकाशवतीरूढेरभावात् । योगस्य चामुख्यवृत्तित्वात् । न च गायत्री भगवदधीनत्वेन तस्मिन्नेव तच्छतेर्मुख्यत्वमिति वाच्यम् । गायत्र्या वेदविशेषत्वेन नित्यत्वात् । नित्यस्य च पराधीनताऽयोगात् । तस्मात् गायत्री न विष्णुरपि तु छन्दोविशेष एव ततश्चेदं ज्योतिरानन्दमयश्च नासाविति भावः ।**

ಪೂರ್ವಪಕ್ಷ -- ಗಾಯತ್ರೀಯು ಛಂದೋವಿಶೇಷವೆಂದೇ ಪೂರ್ವಪಕ್ಷ. ಏಕೆಂದರೆ, ಛಂದೋವಿಶೇಷದಲ್ಲೇ ಗಾಯತ್ರೀಶಬ್ದವು ರೂಢವಾಗಿದೆ. ಮತ್ತು 'ವಾಗ್ ವೈ ಗಾಯತ್ರೀ' ಎಂಬುದಾಗಿ ಗಾಯತ್ರೀಯು ಶಬ್ದರೂಪವಾಗಿದೆ ಎಂದು ಶ್ರುತಿಯೇ ಹೇಳಿದೆ. ಇನ್ನು ಜ್ಯೋತಿಃಶ್ರುತಿಯಿಂದ ಗಾಯತ್ರೀಶ್ರುತಿಗೆ ಬಾಧವನ್ನು ಹೇಳಬೇಕು. ಆದರೆ ಒಂದು ಶ್ರುತಿಯು ಮತ್ತೊಂದು ಶ್ರುತಿಗೆ ಬಾಧಕವಾಗಿದ್ದು ಎಲ್ಲಿಯೂ ಕಂಡಿಲ್ಲ. ಪರಸ್ಪರ ಎರಡು ಶ್ರುತಿಗಳಲ್ಲಿ ಒಂದು ಶ್ರುತಿಯು ಸಾವಕಾಶವಾಗಿದ್ದಲ್ಲಿ ಮತ್ತೊಂದು ನಿರವಕಾಶಶ್ರುತಿಯಿಂದ ಬಾಧವನ್ನು ಹೇಳಬಹುದು. ಆದರೆ ಪ್ರಕೃತ ಗಾಯತ್ರೀಶ್ರುತಿಗೆ ಸಾವಕಾಶತ್ವವನ್ನೇ ಹೇಳಲಾಗದು. ಹೊರತಾಗಿ ಜ್ಯೋತಿಃಶ್ರುತಿಯೇ ಸಾವಕಾಶವಾಗಿದೆ. ಏಕೆಂದರೆ 'ತೇಜೋ ವೈ ಬ್ರಹ್ಮವರ್ಚಸಂ ಗಾಯತ್ರೀ' ಎಂಬುದಾಗಿ ಗಾಯತ್ರ್ಯರ್ಥದಲ್ಲಿ ತೇಜಸ್‌ಶಬ್ದವು ಪಠಿತವಾಗಿದೆ. ಈ ಶ್ರುತಿಯಲ್ಲಿ ತೇಜಃಶಬ್ದವು ಕೇಳಿಸುತ್ತಿದ್ದರೂ, ಜ್ಯೋತಿಃಶಬ್ದದ ಅರ್ಥದಲ್ಲಿಯೇ ಪಠಿತವಾದ್ದರಿಂದ ತೇಜಸ್ಸು ಜ್ಯೋತಿಯೆನಿಸಿದೆ.

ಇದರಂತೆ ಗಾಯತ್ರೀಶಬ್ದವು ವಿಷ್ಣುವಿನಲ್ಲಿ ಸಾವಕಾಶವೆಂದು ಹೇಳಲಾಗದು. ಏಕೆಂದರೆ ವಿಷ್ಣುವಿನಲ್ಲಿ ಗಾಯತ್ರೀಶಬ್ದಕ್ಕೆ ರೂಢಿಯು ಇರುವುದಿಲ್ಲ. ಯೋಗವಿದ್ದರೂ ಸಹ ಅಮುಖ್ಯವೃತ್ತಿಯಾಗುತ್ತದೆ.

ಇನ್ನು ಗಾಯತ್ರೀಯೆಂಬ ಛಂದೋವಿಶೇಷವು ಭಗವಂತನ ಅಧೀನವಾದ್ದರಿಂದ ಭಗವಂತನಲ್ಲಿಯೇ ಗಾಯತ್ರೀಶಬ್ದದ ಮುಖ್ಯಾರ್ಥವು ಕೂಡುತ್ತದೆ ಎಂದೂ ಸಹ ಹೇಳಲಾಗದು. ಏಕೆಂದರೆ ಗಾಯತ್ರೀ ಎಂಬುದು ವೇದವಿಶೇಷವಾದ್ದರಿಂದ ನಿತ್ಯವಾಗಿದೆ. ಯಾವುದೇ ನಿತ್ಯಪದಾರ್ಥಗಳಿಗೆ ಅಸ್ವಾತಂತ್ರ್ಯವಿರುವುದಿಲ್ಲ.

ಈ ಎಲ್ಲ ಕಾರಣಗಳಿಂದ ಗಾಯತ್ರೀ ಎಂದರೆ ಛಂದೋವಿಶೇಷವೇ ಆಗುತ್ತದೆ ಹೊರತು; ವಿಷ್ಣುವಲ್ಲ. ಆದ್ದರಿಂದ ಜ್ಯೋತಿಯಾಗಲೀ, ಆನಂದಮಯನಾಗಲೀ ವಿಷ್ಣುವಾಗಲು ಸಾಧ್ಯವಿಲ್ಲ. ಎಂದು ಅಭಿಪ್ರಾಯ.

भावदीपः – ॐ छन्दोभिधानात् नेति चेन्न तथा चेतोऽर्पणनिगदात् तथा हि दर्शनम् ॐ ॥ **अन्यत्रेति** ॥ 'वर्णसमावेशरूपमन्त्रे' इत्यर्थः । अध्याहारेण भाष्यस्योक्तार्थसूचकत्वं व्यनक्ति – **हृदयेति** ॥ **छन्दोगेति** ॥ तृतीयेऽध्याये ज्योतिरिति श्रूयत इत्यन्वयः । सौत्रपदानाम् अर्थोऽग्रे व्यक्तः इति **'गायत्र्या समारम्भः कृतः तस्मात्'** इत्यन्तभाष्यस्यार्थ **इत्युपक्रमादिति** ॥

'विष्णुः' इत्यस्य तात्पर्यमाह – **इयं चेति** ॥ **इदमिति** ॥ पुरुषे ज्योतिरित्युक्तं पूर्वोक्तज्योतिश्चेत्यर्थः । एतेन भाष्येऽस्मिन्नर्थे ज्योतिश्चेति शेष इति भावः । इति

पूर्वाक्षेपसङ्गतिसद्भावाद् गायत्रीनिर्णयोऽवश्यापेक्षित इत्यर्थः* । एतेन सङ्गतिफलं सूचयन् इति विवृतम् । वाग् इत्याद्यंशोक्तिरुत्तरार्था ।

ಓಂ ಛಂದೋಭಿಧಾನಾತ್ ॥ ಟೀಕೆಯಲ್ಲಿ "ಅನ್ಯತ್ರಪ್ರಸಿದ್ಧ" ಎಂದು ಹೇಳಿದ್ದಾರೆ. ಅಂದರೆ ಗಾಯತ್ರೀ ಎಂಬ ನಾಮವು ವರ್ಣಸಮಾವೇಶರೂಪವಾದ ಮಂತ್ರದಲ್ಲಿ ಪ್ರಸಿದ್ಧವಾಗಿದೆ ಎಂದರ್ಥ. ಅಧ್ಯಾಹಾರ ಮಾಡುವ ಮೂಲಕವಾಗಿ ಭಾಷ್ಯಕ್ಕೆ ಟೀಕೆಯಲ್ಲಿದೆ ಹೇಳಿದ ಅರ್ಥವು ಸೂಕ್ತವೆಂದು ವ್ಯಾಖ್ಯಾನಿಸುತ್ತಿದ್ದಾರೆ "ಹೃದಯ" ಇತ್ಯಾದಿ ವಾಕ್ಯದಿಂದ. "ಛಂದೋಗ" ಛಂದೋಗಶ್ರುತಿಯೆಂದರೆ ಛಾಂದೋಗ್ಯದ ಮೂರನೆಯ ಅಧ್ಯಾಯದಲ್ಲಿ 'ಜ್ಯೋತಿಯು' ಎಂಬುದಾಗಿ ಕೇಳಿಸುತ್ತಿದೆ ಎಂದನ್ವಯ. ಸೂತ್ರದಲ್ಲಿರುವ ಪದಗಳ ಅರ್ಥವು ಮುಂದೆ ಸ್ಪಷ್ಟವಾಗುತ್ತದೆ. ಆದ್ದರಿಂದ 'ಗಾಯತ್ರ್ಯಾ ಸಮಾರಂಭಃ ಕೃತಃ' ಎಂಬುದರಿಂದ ಪ್ರಾರಂಭಿಸಿ 'ತಸ್ಮಾತ್' ಎಂಬಲ್ಲಿಯ ತನಕ ಇರುವ ಭಾಷ್ಯದ ಅರ್ಥವನ್ನು "ಇತ್ಯುಪಕ್ರಮಾತ್" ಇತ್ಯಾದಿಯಾಗಿ ವ್ಯಾಖ್ಯಾನಿಸಿದ್ದಾರೆ. 'ವಿಷ್ಣುಃ' ಎಂಬುದರ ತಾತ್ಪರ್ಯವನ್ನು "ಇಯಂ ಚ" ಇತ್ಯಾದಿ ಟೀಕೆಯಲ್ಲಿ ಹೇಳಿದ್ದಾರೆ. "ಇದಂ ಜ್ಯೋತಿಶ್ಚ" ಎಂಬ ಟೀಕೆಯ ಮಾತಿಗೆ 'ಪುರುಷೇ ಜ್ಯೋತಿಃ' ಎಂಬುದಾಗಿ ಹೇಳಿದ್ದನ್ನು ಮತ್ತು ಹಿಂದೆ ಹೇಳಿದ ಜ್ಯೋತಿಯನ್ನೂ ಸಹ ವಿವಕ್ಷಿಸಬೇಕು. ಹೀಗೆ ಹೇಳಿದ್ದರಿಂದ ಭಾಷ್ಯದಲ್ಲಿ 'ಜ್ಯೋತಿಶ್ಚ' ಎಂಬುದನ್ನು ಈ ಅರ್ಥದಲ್ಲಿ ಶೇಷಪೂರ್ಣಮಾಡಿಕೊಳ್ಳಬೇಕೆಂದು ತಿಳಿಯುತ್ತದೆ. ಹೀಗೆ ಹಿಂದಿನ ಅಧಿಕರಣದ ಸಿದ್ಧಾಂತದ ಮೇಲೆ ಆಕ್ಷೇಪವು ಬರುವುದರಿಂದ ಗಾಯತ್ರೀಶಬ್ದದ ಅರ್ಥನಿರ್ಣಯವನ್ನು ಅವಶ್ಯವಾಗಿ ಮಾಡಬೇಕು. ಇದರಿಂದ ಈ ಅಧಿಕರಣಕ್ಕೆ ಸಂಗತಿ ಹಾಗೂ ಫಲಗಳನ್ನು ಸೂಚಿಸಿದ್ದಾರೆಂದು ವಿವರಿಸಿದಂತಾಯಿತು. "ವಾಗ್" ಇತ್ಯಾದಿ ಅಂಶವನ್ನು ಉತ್ತರ ನೀಡುವುದಕ್ಕಾಗಿ ಉಲ್ಲೇಖಿಸಿದ್ದಾರೆ.

(भा)'छन्दोभिधानात् नेति चेत्' इति सौत्रशङ्काभागविवरणपरतयाऽपि भाष्यं व्यनक्ति – **तत्र गायत्रीति** ॥ **न विष्णुरिति** ॥ भाष्ये 'गायत्री'ति पदस्येति शेषमुपेत्यांन्वयमुखेनार्थकल्पनं कृत्वा, 'तस्मात्' इति हेत्वंशं व्याचष्टे – **रूढत्वादिति** ॥ पूर्वपक्षदार्ढ्याय 'कथं प्रसिद्धबहुलशब्दानामन्यथार्थता'

* अत्र गायत्री किं छन्दः, उत विष्णुरिति चिन्ता । तदर्थं गायत्रीश्रुतिर्गानत्राणकर्तृत्वादि विष्णुप्रापकबाधिका उत तद्बाध्या इति । तदर्थं सा श्रुतिस्तदुपोद्बलकत्वेनाभिमतम् 'अमृतं दिवि' इति 'परो दिवः' इत्युपदेशभेदविरोधादिकं च किं निरवकाशमुत सावकाशमिति । तदर्थं गायत्र्यादिशब्दप्रवृत्तिकारणं द्युस्थितत्वद्युपरत्वादिकं च हरेर्न सम्भवत्युत सम्भवतीति । तदर्थं हरेरनादिपदार्थतत्स्वभावनियामकत्वं द्युस्थितत्वद्युपरत्वोपदेशाविरोधापादकादिकं नास्त्युतास्तीति । तदर्थं तत्र तत्कल्पकत्वेनाभिमतस्य भूतादिपादत्वलिङ्गादेः विष्ण्वेकनिष्ठत्वरूपनिरवकाशत्वे च प्रमाणं नास्त्युतास्तीति ।
**– भावबोधः ।**

इत्यनुभाष्योक्तिलब्धमपि हेतुं तस्मादित्यत्यस्यार्थत्वेनोपेत्याह – **वाग्वा इति** ॥ ज्योतिःश्रुतेर्विष्णुपरत्वस्य पूर्वमुक्तत्वेन तद्विरोधान्नात्र पूर्वपक्षोदय इत्याशङ्कां निराह – **न च ज्योतिःश्रुत्येति** ॥ 'तस्मात्' इत्यस्यार्थान्तरमप्याह – **ज्योतिःश्रुतेरेव सावकाशत्वादिति** ॥ गायत्रीश्रुतेर्निरवकाशत्वात्इत्यप्यर्थमुपेत्य निरवकाशत्वमुपपादयति – **न च गायत्रीश्रुतिरिति** ॥ **योगस्येति** ॥ गानत्राणकर्तृत्वरूपस्येत्यर्थः ।.

ಛಂದೋಭಿಧಾನಾತ್ ನೇತಿ ಚೇತ್ ಎಂಬ ಸೂತ್ರದಲ್ಲಿರುವ ಶಂಕಾಭಾಗದ ವಿವರಣಪರವಾಗಿ ಭಾಷ್ಯವನ್ನು "ತತ್ರ ಗಾಯತ್ರಿ" ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ. "ನ ವಿಷ್ಣುಃ" ಎಂಬ ಸಾಧ್ಯಕ್ಕೆ ರೂಢತ್ವಾತ್ ಎಂಬುದು ಹೇತುವಾಗಿದೆ. ಭಾಷ್ಯದಲ್ಲಿ 'ಗಾಯತ್ರೀ' ಎಂಬ ಪದವನ್ನು ಶೇಷಪೂರಣೆ ಮಾಡಿಕೊಂಡು ಅನ್ವಯಿಸಿ ಅರ್ಥವನ್ನು ಹೇಳಬೇಕು. ತಸ್ಮಾತ್ ಎಂಬುದರಿಂದ ದೊರೆಯುವ ಹೇತ್ವಂಶವನ್ನು "ರೂಢತ್ವಾತ್" ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ. 'ಕಥಂ ಬಹುಲಶಬ್ದಾನಾ-ಮನ್ಯಥಾರ್ಥತಾ' 'ಬಹುಲವಾದ ಶಬ್ದಗಳಿಗೆ ಅನ್ಯಥಾ ಅರ್ಥವನ್ನು ಹೇಗೆ ಮಾಡುತ್ತೀರಿ?' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಪೂರ್ವಪಕ್ಷವನ್ನು ಸ್ಪಷ್ಟಪಡಿಸಿದ್ದಾರೆ. ಆದರೂ ಸಹ ಮತ್ತಷ್ಟು ಪೂರ್ವಪಕ್ಷವನ್ನು ಬಲಪಡಿಸುವುದಕ್ಕಾಗಿ ಹೇತುವನ್ನು "ವಾಗ್ವಾ" ಇತ್ಯಾದಿ ಟೀಕೆಯಿಂದ ಹೇಳುತ್ತಿದ್ದಾರೆ.

ಜ್ಯೋತಿಃಶ್ರುತಿಯು ವಿಷ್ಣುಪರವಾಗಿದೆಯೆಂದು ಹಿಂದಿನ ಅಧಿಕರಣದಲ್ಲಿ ಹೇಳಿದ್ದರಿಂದ ಈ ಅಧಿಕರಣದಲ್ಲಿ ಪೂರ್ವಪಕ್ಷವೇ ಹುಟ್ಟುವುದಿಲ್ಲವಲ್ಲವೇ? ಎಂಬ ಶಂಕೆಯನ್ನು "ನ ಚ ಜ್ಯೋತಿಃಶ್ರುತ್ಯಾ" ಇತ್ಯಾದಿವಾಕ್ಯದಿಂದ ನಿರಾಕರಿಸುತ್ತಿದ್ದಾರೆ. 'ತಸ್ಮಾನ್ನ ವಿಷ್ಣುಃ' ಎಂಬ ಭಾಷ್ಯದ ಮಾತಿಗೆ ಮತ್ತೊಂದು ಬಗೆಯ ವ್ಯಾಖ್ಯಾನವನ್ನು "ಜ್ಯೋತಿಃಶ್ರುತೇರೇವ ಸಾವಕಾಶತ್ವಾತ್" ಎಂಬುದಾಗಿ ಮಾಡುತ್ತಿದ್ದಾರೆ. 'ಗಾಯತ್ರೀ ಶ್ರುತಿಗೆ ನಿರವಕಾಶತ್ವವಿರುವುದರಿಂದ' ಎಂದು ಇದರ ಅರ್ಥ. ಹೀಗೆ ಅಂಗೀಕರಿಸಿ ಗಾಯತ್ರೀಶ್ರುತಿಗೆ ನಿರವಕಾಶತ್ವವನ್ನು "ನಚ ಗಾಯತ್ರೀ" ಇತ್ಯಾದಿ ಟೀಕೆಯಿಂದ ಉಪಪಾದಿಸುತ್ತಿದ್ದಾರೆ. "ಯೋಗಸ್ಯ" ಎಂಬ ಪದಕ್ಕೆ ಗಾನತ್ರಾಣಕರ್ತೃತ್ವರೂಪವಾದ ಯೋಗಕ್ಕೆ ಎಂದರ್ಥ.

(भा) प्रमाणाश्रितचोद्यमुक्त्वा प्रमेयाश्रितमपि तत् **'नित्यत्वादेव शब्दानां तत्स्वभावः कथं ततः'*** इत्यनुभाष्योक्तं शङ्कापूर्वमाह – **न च गायत्र्या इति** ॥ **'स्वातन्त्र्यं तत्र मुख्यं स्यात्'** इत्युक्तेराह – **मुख्यत्वमिति** ॥ गायत्रीपदप्रवृत्तिनिमित्तस्य गायत्रीस्वभावत्वात् तस्या ईशाधीनत्वेन प्रवृत्तिनिमित्तस्यापि तथात्वमिति प्रवृत्तिनिमित्तस्येशाधीनत्वादौ युक्तिसूचनाय गायत्र्या इत्येवोक्तम् । 'तस्मात्' इत्यस्यार्थान्तरं 'गायत्र्या नित्यत्वात्' इति । **नित्यस्य चेति** ॥ 'अनादेः' इत्यपि ध्येयम् । जन्यभूताकाशस्वभावस्य विवरत्वादेः पदप्रवृत्तिनिमित्तस्य धर्मिणा सह जन्यत्वेनेशाधीनत्वेऽपि अनादिनित्ये तदभावादिति भावः । एतेन

'अधिवेदगतानामपि शब्दानां नित्यत्वे विद्यमानेऽपि' इति न्यायविवरणांशो व्याख्यातः ।

इदं चोपलक्षणम् । 'गायति त्रायति च' इति वाक्यशेषोक्तं यदर्थाभिधानरूपगानकर्तृत्वं यच्चाध्येतॄणां पापाद् रक्षकत्वरूपत्राणकर्तृत्वं तस्यापि गायत्रीस्वभावत्वेनेश्वरगतत्वाभावाच्च - इत्यपि ध्येयम् । एवं च गायत्रीवागादिनिरूढनिरवकाशश्रुतिबलादन्यदपि विष्णुलिङ्गं गायत्र्यामेव योज्यमिति भावेनोक्तार्थं सर्वं भाष्यारूढं कुर्वन्, 'तस्मान्न विष्णुः' इति भाष्यमनूद्य फलितार्थं चाह **तस्मादिति** ॥ रूढत्वाद् वाक्त्वविधानात् ज्योतिःश्रुतेः गायत्र्यां सावकाशत्वात् गायत्रीश्रुतेः विष्णावनवकाशात् गायत्रीप्रवृत्तिनिमित्तस्येशानधीनत्वात् ईशगतत्वाभावाच्च इत्युक्तसर्वहेतुपरामर्शः । बुद्धिस्थाशेषार्थपरामर्शित्वात् तच्छब्दस्य प्रागुक्ताशेषार्थस्य भाष्यकर्तृबुद्धिस्थत्वादिति भावः ।

'विष्णुर्न चेन्नैरर्थ्यक्यं गायत्रीशब्दस्य स्यात्' इत्यतः छन्दोविशेष एव इति फलितोक्तिः ।

**इदं ज्योतिरिति** ॥ हृदयाहितत्वयुक्तम् । एतच्छान्दोग्यस्थं पूर्वोक्तमग्निसूक्तस्थं चेत्यर्थः ।

एतेन तस्मादुक्तहेतुसमुदायान्न विष्णुर्गायत्री तस्माद् गायत्र्यैक्याज्ज्योतिरादिशब्दवाच्यश्च न विष्णुरिति गायत्रीज्योतिःपदाध्याहारेण चावृत्त्या च भाष्यार्थो दर्शितः । **नासाविति** ॥ अपि तु छन्दोविशेष एवेत्यनुषङ्गः । तस्यानन्दमयत्वं चाभिमानिद्वारेति भावः । एतेन पूर्वपक्षफलानि सूचयन्नित्यंशो विवृतः ।

ಪ್ರಮಾಣಾಶ್ರಿತವಾದ ಪೂರ್ವಪಕ್ಷವನ್ನು ತೋರಿಸಿದ್ದಾಯಿತು. ಈಗ ಪ್ರಮೇಯಾಶ್ರಿತವಾದ ಪೂರ್ವಪಕ್ಷವನ್ನು ತೋರಿಸುವವರಾಗಿ 'ನಿತ್ಯತ್ವಾದೇವ ಶಬ್ದಾನಾಂ ತತ್ಸ್ವಭಾವಃ ಕಥಂ ತತಃ' ಎಂಬ ಅನುವ್ಯಾಖ್ಯಾನವನ್ನು ಮನಸ್ಸಿನಲ್ಲಿಟ್ಟುಕೊಂಡು "ನಚ ಗಾಯತ್ರ್ಯಾ" ಇತ್ಯಾದಿ ವಾಕ್ಯದಿಂದ ಶಂಕಿಸುತ್ತಿದ್ದಾರೆ. 'ಸ್ವಾತಂತ್ರ್ಯಂ ತತ್ರ ಮುಖ್ಯಂ ಸ್ಯಾತ್' ಎಂಬ ಪ್ರಮಾಣದಂತೆ ಶ್ರುತಿಯು ವಿಷ್ಣುವಿನಲ್ಲಿ ಮುಖ್ಯವಾಗಿದೆಯೆಂದು "ಮುಖ್ಯತ್ವಂ" ಎಂಬ ಪದವು ಹೇಳುತ್ತಿದೆ. ಗಾಯತ್ರೀ ಪದದ ಪ್ರವೃತ್ತಿನಿಮಿತ್ತವು ಗಾಯತ್ರಿಯಲ್ಲಿ ಸ್ವಾಭಾವಿಕವಾಗಿದೆ. ಆದರೆ ಅದು ಈಶಾಧೀನವಾಗಿರುವುದರಿಂದ ಭಗವಂತನೇ ಮುಖ್ಯವಾಗಿ ಗಾಯತ್ರೀ ಎನಿಸುತ್ತಾನೆ ಎಂಬ ಯುಕ್ತಿಯನ್ನು ಸೂಚಿಸುವುದಕ್ಕಾಗಿ 'ಗಾಯತ್ರ್ಯಾಃ' ಎಂದಷ್ಟೇ ಹೇಳಿದ್ದಾರೆ.

'ತಸ್ಮಾನ್ನ ವಿಷ್ಣುಃ' ಎಂಬ ಭಾಷ್ಯಕ್ಕೆ ಮತ್ತೊಂದು ಬಗೆಯ ಅರ್ಥವನ್ನು ''ಗಾಯತ್ರ್ಯಾಃ ನಿತ್ಯತ್ವಾತ್'' ಎಂಬುದರಿಂದ ಹೇಳಿದ್ದಾರೆ. ''ನಿತ್ಯಸ್ಯ ಚ'' ಎಂದರೆ ನಿತ್ಯಸ್ಯ ಎಂಬುದರ ಜೊತೆಗೆ ಅನಾದಿಯಾದ್ದರಿಂದ ಎಂಬುದನ್ನೂ ಸಹ ವಿವಕ್ಷಿಸಬೇಕು. ಹುಟ್ಟುವ ಸ್ವಭಾವವುಳ್ಳ ಆಕಾಶದ ಸ್ವಭಾವವು ವಿವರತ್ವವಾಗಿದೆ. ಇದೇ ಆಕಾಶಶಬ್ದದ ಪ್ರವೃತ್ತಿನಿಮಿತ್ತವೂ ಆಗಿದೆ. ಧರ್ಮಿಯಾದ ಆಕಾಶವು ಹುಟ್ಟಿದಾಗ ವಿವರತ್ವವೂ ಸಹ ಹುಟ್ಟುತ್ತದೆ. ಆದ್ದರಿಂದ ಇದನ್ನು ಈಶಾಧೀನವೆಂದು ಹೇಳಬಹುದು. ಅಂದರೆ ಅನಾದಿನಿತ್ಯವಾದ ವೇದ-ವಿಶೇಷವೆನಿಸಿದ ಗಾಯತ್ರಿಗೆ ಹುಟ್ಟುವ ಸ್ವಭಾವವೇ ಇಲ್ಲದ ಕಾರಣ ಇದರ ಪ್ರವೃತ್ತಿನಿಮಿತ್ತವನ್ನು ಈಶಾಧೀನವೆಂದು ಹೇಳಲಾಗದು. ಹೀಗೆ ಹೇಳಿದ್ದರಿಂದ 'ಅಧಿವೇದಗತಾನಾಮಪಿ ಶಬ್ದಾನಾಂ ನಿತ್ಯತ್ವೇ ವಿದ್ಯಮಾನೇಽಪಿ' ಎಂಬ ನ್ಯಾಯವಿವರಣದ ಮಾತನ್ನು ವ್ಯಾಖ್ಯಾನಿಸಿದಂತಾಯಿತು. ಉಪಲಕ್ಷಣಯಾ ಇದನ್ನು ತಿಳಿಯಬೇಕು. 'ಗಾಯತಿ ತ್ರಾಯತಿ ಚ' ಎಂಬ ವಾಕ್ಯಶೇಷವು ಹೇಳುವಂತೆ ಅರ್ಥವನ್ನು ಪ್ರತಿಪಾದಿಸುವಿಕೆಯೆಂಬ ಗಾನಕರ್ತೃತ್ವ, ಹಾಗೂ ಅಧ್ಯಯನ ಮಾಡುವವರ ಪಾಪಾದ್ರಕ್ಷಕತ್ವವೆಂಬ ತ್ರಾಣಕರ್ತೃತ್ವ ಇವುಗಳೂ ಸಹ ಗಾಯತ್ರೀಶಬ್ದದ ಪ್ರವೃತ್ತಿನಿಮಿತ್ತಗಳಾಗಿವೆ. ಇವುಗಳು ಗಾಯತ್ರೀಸ್ವಭಾವವಾದ್ದರಿಂದ ಭಗವಂತನಲ್ಲಿ ಬರಲು ಸಾಧ್ಯವಿಲ್ಲವೆಂದು ತಿಳಿಯಬೇಕು.

ಗಾಯತ್ರೀ ವಾಕ್ ಮೊದಲಾದ ಶಬ್ದಗಳು ಗಾಯತ್ರೀಛಂದಸ್ಸಿನಲ್ಲಿ ನಿರೂಢವಾಗಿವೆ. ಆದ್ದರಿಂದ ನಿರವಕಾಶಶ್ರುತಿಯು ಪ್ರಮಾಣವಾಗಿದೆ ಎಂದು ಹೇಳಿದಂತಾಗುತ್ತದೆ. ಇದರ ಬಲದಿಂದ ವಿಷ್ಣುವು ಗಾಯತ್ರೀಶಬ್ದವೆನ್ನಲು ಯಾವ ಲಿಂಗಗಳಿವೆಯೋ ಅವುಗಳನ್ನು ಕಥಂಚಿತ್ ಗಾಯತ್ರಿಯಲ್ಲಿಯೇ ಸಮನ್ವಯ ಮಾಡಬೇಕಾಗುತ್ತದೆ. ಈ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು ತಾವು ಹೇಳಿದ ಅರ್ಥವನ್ನೆಲ್ಲಾ ಭಾಷ್ಯದಲ್ಲಿ ಸಮನ್ವಯ ಮಾಡುತ್ತಿದ್ದಾರೆ. 'ತಸ್ಮಾನ್ನ ವಿಷ್ಣುಃ' ಎಂಬ ಭಾಷ್ಯವನ್ನು ಅನುವಾದ ಮಾಡುತ್ತಾ ಇದರ ಫಲಿತಾರ್ಥವನ್ನು ''ತಸ್ಮಾತ್'' ಇತ್ಯಾದಿ ವಾಕ್ಯದಿಂದ ನಿರೂಪಿಸುತ್ತಿದ್ದಾರೆ. ಟೀಕೆಯಲ್ಲಿರುವ ತಸ್ಮಾತ್ ಎಂಬ ಪದದ ಅರ್ಥ ಹೀಗಿದೆ. ಗಾಯತ್ರೀಶಬ್ದವು ಛಂದೋವಿಶೇಷದಲ್ಲಿ ರೂಢವಾದ್ದರಿಂದ, ವಾಕ್ತ್ವವನ್ನು ವಿಧಾನ ಮಾಡಿದ್ದರಿಂದ, ಜ್ಯೋತಿಃಶ್ರುತಿಯು ಗಾಯತ್ರಿಯಲ್ಲಿ ಸಾವಕಾಶ-ವಾದ್ದರಿಂದ, ಗಾಯತ್ರೀಶ್ರುತಿಗೆ ವಿಷ್ಣುವಿನಲ್ಲಿ ಅವಕಾಶವಿಲ್ಲದ್ದರಿಂದ, ಗಾಯತ್ರೀಪದಪ್ರವೃತ್ತಿನಿಮಿತ್ತವು ಈಶಾಧೀನವಾಗುವುದಿಲ್ಲ ಮತ್ತು ಈಶಗತವೂ ಆಗುವುದಿಲ್ಲ. ಇತ್ಯಾದಿಯಾಗಿ ಪೂರ್ವಪಕ್ಷದಲ್ಲಿ ಹೇಳಲ್ಪಟ್ಟ ಎಲ್ಲ ಹೇತುಗಳನ್ನು 'ತಸ್ಮಾತ್' ಎಂಬ ಪದದಿಂದ ವಿವಕ್ಷಿಸಬೇಕು. ಏಕೆಂದರೆ ತತ್ಶಬ್ದವು ಬುದ್ಧಿಯಲ್ಲಿರುವ ಎಲ್ಲಾ ಅರ್ಥವನ್ನು ಪರಾಮರ್ಶಿಸುತ್ತದೆ. ಈ ಅರ್ಥಗಳೆಲ್ಲವೂ ಭಾಷ್ಯಕಾರರ ಬುದ್ಧಿಯಲ್ಲಿರುವುದರಿಂದ ತಸ್ಮಾತ್ ಎಂಬ ಪದದಿಂದ ಇಷ್ಟು ಅರ್ಥಗಳನ್ನು ಪರಾಮರ್ಶಿಸಬಹುದೆಂದು ಅಭಿಪ್ರಾಯ.

ಒಂದು ವೇಳೆ ವಿಷ್ಣುವು ಗಾಯತ್ರೀಶಬ್ದದಿಂದ ಪ್ರತಿಪಾದ್ಯನಾಗದಿದ್ದರೆ ಆವಾಗ ಗಾಯತ್ರೀಪದವು ನಿರರ್ಥಕವಾಗುತ್ತದಲ್ಲವೇ? ಎಂಬ ಸಂಶಯಕ್ಕೆ ಅವಕಾಶವಿಲ್ಲ. ಛಂದೋವಿಶೇಷವನ್ನು ಗಾಯತ್ರೀಶಬ್ದವು ಪ್ರತಿಪಾದಿಸುವುದರಿಂದ ಸಾರ್ಥಕವಾಗಿದೆಯೆಂಬುದು ಫಲಿತಾರ್ಥ.

''ಇದಂ ಜ್ಯೋತಿಃ'' ಎಂಬಲ್ಲಿ ಹೇಳಲ್ಪಟ್ಟ ಜ್ಯೋತಿಯು ಹೃದಯದಲ್ಲಿರುವಿಕೆಯೆಂಬ ಧರ್ಮವನ್ನು ಒಳಗೊಂಡಿದೆ. ಈ ಜ್ಯೋತಿಯು ಛಾಂದೋಗ್ಯದಲ್ಲಿರುವ ಪೂರ್ವೋಕ್ತವಾದ ಅಗ್ನಿಸೂಕ್ತದಲ್ಲಿರುವುದೆಂದು ತಿಳಿಯಬೇಕು. ಹೀಗೆ ಹೇಳಿದ್ದರಿಂದ ತಸ್ಮಾತ್ ನ ವಿಷ್ಣುಃ ಗಾಯತ್ರೀ = ಹಿಂದೆ ಹೇಳಿದ ಅನೇಕ

ಹೇತುಗಳಿಂದ ವಿಷ್ಣುವು ಗಾಯತ್ರೀಶಬ್ದಪ್ರತಿಪಾದ್ಯನಾಗುವುದಿಲ್ಲ ಎಂದು ಗಾಯತ್ರೀಪದವನ್ನು ಭಾಷ್ಯದಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕು. ಮತ್ತು ತಸ್ಮಾತ್ = ಜ್ಯೋತಿಯು ಗಾಯತ್ರಿಯಿಂದ ಅಭಿನ್ನವಾದ್ದರಿಂದ ವಿಷ್ಣುವು, ನ ಜ್ಯೋತಿಃ = ಜ್ಯೋತಿಶಬ್ದದಿಂದಲೂ ವಿಷ್ಣುವು ಪ್ರತಿಪಾದ್ಯನಾಗುವುದಿಲ್ಲ ಎಂಬುದಾಗಿ ಜ್ಯೋತಿಃಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಮತ್ತು 'ತಸ್ಮಾತ್ ನ ವಿಷ್ಣುಃ' ಎಂಬ ಪದಗಳನ್ನು ಆವೃತ್ತಿಮಾಡಿಕೊಳ್ಳಬೇಕೆಂದು ಭಾಷ್ಯಾರ್ಥವನ್ನು ತೋರಿಸಿದಂತಾಯಿತು. ''ನಾಸೌ'' ಎಂದು ಹೇಳಿದ್ದರಿಂದ 'ಅಪಿ ತು ಛಂದೋವಿಶೇಷ ಏವ' ಎಂಬುದನ್ನು ಅನುಷಂಗ ಮಾಡಬೇಕು. ಛಂದೋವಿಶೇಷವು ಜಡವಾದ್ದರಿಂದ ಆನಂದಮಯತ್ವವನ್ನು ವಸ್ತುತಃ ಹೇಳಲಾಗದು. ಆದರೂ ಸಹ ಅಭಿಮಾನಿದೇವತೆಯಲ್ಲಿ ಹೇಳಬಹುದು. ಇದರಿಂದ 'ಪೂರ್ವಪಕ್ಷಫಲಾನಿ ಸೂಚಯನ್' ಎಂಬ ಹಿಂದಿನ ಮಾತಿಗೆ ಛಂದೋ-ವಿಶೇಷವೇ ಆನಂದಮಯನೆಂಬುದು ಪೂರ್ವಪಕ್ಷದ ಫಲವಾಗಿದೆ ಎಂದು ವ್ಯಾಖ್ಯಾನಿಸಿದಂತಾಯಿತು.

## ಉಪಾಸನೆಗಾಗಿ ಅನೇಕಶಬ್ದಗಳ ಸಮನ್ವಯ

**भाष्यम् – इति चेत् - न, तथा चेतोऽर्पणार्थं हि निगद्यते । अग्निगायत्र्यादि-शब्दार्थरूपोऽसाविति चेतोऽर्पणार्थं हि निगद्यते ।**

ಹೀಗೆ ಹೇಳುವುದು ತಪ್ಪು. ವಿಷ್ಣುವನ್ನು ಮನಸ್ಸಿನಲ್ಲಿ ಹೇಗೆ ಉಪಾಸನೆ ಮಾಡಬೇಕೆಂಬುದನ್ನು ತಿಳಿಸುವುದಕ್ಕಾಗಿ ಉಪನಿಷತ್ತು ಹಾಗೆ ಹೇಳಿದೆ. ಅಂತಹ ವಿಷ್ಣುವು ಅಗ್ನಿ ಗಾಯತ್ರೀ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯವಾದ ಗುಣಗಳುಳ್ಳವನು ಎಂದು ಉಪಾಸನೆ ಮಾಡುವುದಕ್ಕಾಗಿ ಉಪನಿಷತ್ತು ಅನೇಕಶಬ್ದಗಳಿಂದ ವಿಷ್ಣುವನ್ನು ಹೇಳುತ್ತಿದೆ.

---

भाष्यदीपिका – सिद्धान्तसूत्रांशमनुकरोति – नेति ॥ निगद्यत इत्यत्रापि सम्बध्यते । तथा च ज्योतिःशब्दवाच्यो विष्णुर्नेति न, किन्तु ज्योतिःशब्देन विष्णुरेव निगद्यत इत्यर्थः । कुत इत्यतो निगदादिति हेतुं योजयति – हि निगद्यत इति ॥ गायत्रीशब्देनेति शेषः । तथा च 'हि' यस्माद् गायत्रीशब्देनापि विष्णुरेव 'निगद्यते' अधीयते तस्मादित्यर्थः ॥ विष्णोर्गायत्र्यादिशब्दैरभिधानं च न तदभेदविधानार्थं, किन्तु तथोपासनार्थमेवेत्याह – तथेति ॥ चेतोऽर्पणेत्युक्तिप्रयोजनं पूर्ववत् । भाष्यत्वज्ञापनाय तथेत्यादिस्वपदानि तथाशब्दार्थकथनेन विवृणोति - अग्नीति ॥ अत्र ज्योतिश्शब्दोपलक्षकाग्निपदं ज्योति-स्सूत्रस्य भिन्नाधिकरणत्वपक्षेऽन्यत्र प्रसिद्धस्य गायत्रीपदस्य विष्णौ प्रयोगे प्रयोजनमत्र वदता सूत्रकृता पूर्वत्रोत्तरत्र चाग्न्यादिपदस्य विष्णौ प्रयोगे प्रयोजनं सूचितमिति दर्शयितुम् । न च गायत्र्यादिपदाभ्यामेव गायत्रीपदसमन्वयफलस्य पूर्वत्रोत्तरत्र चोक्तसमन्वयफलस्य च सूचनसम्भवादग्निपदं व्यर्थमिति वाच्यम् । फलीभूतसमन्वय-विषयत्वेनास्याप्यवश्योपादेयत्वात् । समानप्रकरणस्थ-वागादिग्राहकत्वेनाऽदिशब्दस्य-

ಪ್ರತಿಪದಾರ್ಥ– ಸಿದ್ಧಾಂತ ಹೀಗಿದೆ— ತಥಾ = ಗಾಯತ್ರೀ ಮೊದಲಾದ ಶಬ್ದಗಳಿಂದ, ಚೇತಃ = ಮನಸ್ಸಿಗೆ, ಅರ್ಪಣಾರ್ಥಂ ಹಿ = ಉಪಾಸನೆಮಾಡಲು ಅನುಕೂಲವಾಗಲು, ನಿಗದ್ಯತೇ = ಹಾಗೆ ಹೇಳಲ್ಪಟ್ಟಿದೆ. ಅಸೌ = ಈ ವಿಷ್ಣುವು, ಅಗ್ನಿಗಾಯತ್ರ್ಯಾದಿ = ಅಗ್ನಿಗಾಯತ್ರೀಮೊದಲಾದ, ಶಬ್ದಾರ್ಥರೂಪಃ= ಶಬ್ದಪ್ರತಿಪಾದ್ಯವಾದ ಗುಣಗಳುಳ್ಳವನು, ಇತಿ = ಈ ಪ್ರಕಾರವಾಗಿ, ಚೇತಃ = ಮನಸ್ಸಿನಲ್ಲಿ, ಅರ್ಪಣಾರ್ಥಂ ಹಿ = ಉಪಾಸನೆ ಮಾಡುವ ಸಲುವಾಗಿ, ನಿಗದ್ಯತೇ = ಹೇಳಲ್ಪಟ್ಟಿದೆ.

**तत्वप्रकाशिका – सिद्धान्तयत् सूत्रांशमनुकरोति – नेति ॥ स्वपदानि वर्णयति – अग्नीति ॥ अत्र गायत्रीशब्देन विष्णुरेव निगद्यते । तस्माज्ज्योतिःशब्देनापि स एव निगद्यते । ततश्च स एवाऽऽनन्दमयः । न च गायत्र्यादिशब्दैरुच्यते तदभेदविधानार्थं किन्तु गायत्र्यादिशब्दार्थगुणस्वरुपत्वेनोपासनार्थमेवेतिभावः । आदिपदेन वाचो ग्रहणम् । अधिकरणान्तरेप्येतन्न्यायस्यानुसन्धेयत्वं च हिशब्देन सूचयति (सन्धेयत्वं च सूचयति) ।**

ಈ ಪೂರ್ವಪಕ್ಷವನ್ನು ನಿರಾಕರಿಸುವ ಸಿದ್ಧಾಂತದ ರಚನೆಗಾಗಿ ಸೂತ್ರದ ಏಕದೇಶವನ್ನು ಅಳವಡಿಸಿಕೊಂಡು ಭಾಷ್ಯಕಾರರು "ನ" ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ. ತಾವು ಹೇಳಿದ ಪದಗಳನ್ನೇ "ಅಗ್ನಿ" ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ. ಛಾಂದೋಗ್ಯಶ್ರುತಿಯಲ್ಲಿರುವ

---

अप्यावश्यकत्वात् । अवश्यापेक्षिताभ्यामुभाभ्यामप्यानन्दमयाद्यधिकरणेषूत्तरत्र चोक्तप्रयोजनस्यापि सूचनसम्भवादुभयमप्यावश्यकम् । ज्योतिरित्यादिचतुःसूत्र्या एकाधिकरणत्वपक्षे तु साक्षात् समन्वेतव्यशब्दत्वेनैव शब्दद्वयोपादानं, न तु फलत्वेनाग्निशब्दस्याधिकरणान्तरेऽप्येतन्न्यायसूचनं त्वादिशब्देनैव, न तूभाभ्याम् । भिन्नजातीयानेकशब्दग्रहणार्थं शब्दद्वयोत्तरादिपदम् । अत एव तत्त्वप्रदीपे आदिशब्दस्योभयत्रान्वयं प्रथमादिशब्देन तेजःशब्दानां द्वितीयेन छन्दश्शब्दानां च ग्रहणमभिप्रेत्य 'अग्न्यादितेजःशब्दानां गायत्र्यादिछन्दश्शब्दानां च' इत्युक्तम् ॥

केचित्तु भाष्यगतहिशब्दः 'ज्ञानार्थमथ ध्यानार्थम्' इति प्रमाणप्रसिद्धिद्योतकः, अधिकरणान्तरेऽप्यस्य न्यायस्यानुसन्धेयत्वज्ञापकश्चेत्याहुः । चेतोऽर्पणार्थमिति सावधारणम् । तथा च 'असौ' भगवानग्निगायत्र्यादिशब्दैरग्निगायत्र्यादि-शब्दार्थगुणस्वरूप इति । तत्र 'चेतोऽर्पणार्थं' बुद्ध्यवतारणार्थम् उपासनार्थमेव निगद्यते, न तदभेदविधानार्थमित्यर्थः । इतीत्यन्तेन तथाशब्दार्थ उक्तः । अनेनाप्रसिद्धगायत्र्यादिपदेन विष्णोरभिधानस्य वैयर्थ्यशङ्का परिहृता ॥

ಗಾಯತ್ರೀಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಜ್ಯೋತಿಃಶಬ್ದದಿಂದಲೂ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ. ಆದ್ದರಿಂದ ಅವನೇ ಆನಂದಮಯನೂ ಆಗುತ್ತಾನೆ.

ಗಾಯತ್ರೀಮೊದಲಾದ ಶಬ್ದಗಳ ಅರ್ಥ ವಿಷ್ಣುವೇ ಆಗಿದ್ದಾನೆಂಬುದರ ತಾತ್ಪರ್ಯವೇನೆಂದರೆ, ಛಂದೋವಿಶೇಷಾದಿಗಳಿಗೂ ವಿಷ್ಣುವಿಗೂ ಅಭೇದವನ್ನು ತಿಳಿಯಬೇಕೆಂದಲ್ಲ. ಹೊರತಾಗಿ ಗಾಯತ್ರೀಶಬ್ದದಿಂದ ಯಾವ ಗುಣಸ್ವರೂಪವು ತಿಳಿಯುತ್ತದೋ ಅಂತಹ ಗುಣಗಳಿಂದ ವಿಷ್ಣುವು ಪೂರ್ಣನಾಗಿದ್ದಾನೆಂದು ಉಪಾಸನೆ ಮಾಡುವುದಕ್ಕಾಗಿ ಹೇಳುತ್ತಿದ್ದಾರೆಂದು ತಿಳಿಯಬೇಕು.

'ಅಗ್ನಿಗಾಯತ್ರ್ಯಾದಿ' ಎಂಬಲ್ಲಿರುವ ಆದಿಪದದಿಂದ 'ವಾಗ್ವೈ ಗಾಯತ್ರೀ' ಎಂಬುದನ್ನು ಸ್ವೀಕರಿಸಬೇಕು. ಬೇರೆ ಅಧಿಕರಣಗಳಲ್ಲಿಯೂ ಆಯಾಶಬ್ದಗಳನ್ನು ಏಕೆ ಸಮನ್ವಯಮಾಡುತ್ತಾರೆಂದರೆ ಆಯಾ ಶಬ್ದ ಪ್ರತಿಪಾದ್ಯವಾದ ಅರ್ಥವು ಭಗವಂತನ ಗುಣಸ್ವರೂಪವಾಗಿದೆಯೆಂದು ಉಪಾಸನೆ ಮಾಡುವುದಕ್ಕಾಗಿ ತಿಳಿಯಬೇಕು. ಹೀಗೆ ಇಲ್ಲಿಯ ಹೇಳಿರುವ ನ್ಯಾಯವನ್ನು ಎಲ್ಲಾ ಅಧಿಕರಣಗಳ-ಲ್ಲಿಯೂ ಅನುಸಂಧಾನ ಮಾಡಿಕೊಳ್ಳಬೇಕೆಂದು ಶ್ರೀಮದಾಚಾರ್ಯರು "ಹಿ"ಶಬ್ದದಿಂದ ಸೂಚಿಸು-ತ್ತಿದ್ದಾರೆ.

**(त) भवेज्ज्योतिषोऽपि विष्णुत्वं यदि गायत्रीयं विष्णुः स्यात् तदेव कुतः? इत्यत आह – तथा हीति ॥ दर्शनं श्रुतिः ॥ एतद्गायत्र्या *गानत्राणकर्तृत्व-लिङ्गश्रवणात्तस्य च छन्दस्यसम्भवाद्विष्णुरेव गायत्री ततो ज्योतिरपि स एवेति भावः । आदिपदेन 'या वै सा गायत्रीयं वाव सायेयं पृथिवी' इत्यादेः सङ्ग्रहः ।**

ಒಂದು ವೇಳೆ ಗಾಯತ್ರೀಶಬ್ದದಿಂದ ವಿಷ್ಣುವು ಪ್ರತಿಪಾದ್ಯನಾದರೆ ಆವಾಗ ಜ್ಯೋತಿಃಶಬ್ದದ ಅರ್ಥವು ವಿಷ್ಣುವೇ ಆಗುತ್ತಾನೆ. ಆದರೆ ಗಾಯತ್ರೀಶಬ್ದಪ್ರತಿಪಾದ್ಯನಾದವನು ವಿಷ್ಣುವೆಂದು ಹೇಗೆ ನಿರ್ಣಯಿಸುತ್ತೀರಿ? ಎಂಬ ಪ್ರಶ್ನೆಗೆ "ತಥಾ ಹಿ" ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಇಲ್ಲಿರುವ 'ದರ್ಶನ'ಶಬ್ದಕ್ಕೆ 'ಶ್ರುತಿ' ಎಂದರ್ಥ. ಇಲ್ಲಿರುವ ಗಾಯತ್ರೀಶಬ್ದದಿಂದ ಗಾನತ್ರಾಣಕರ್ತೃತ್ವವೆಂಬ ಧರ್ಮವು ಕೇಳಿಸುತ್ತಿರುವುದರಿಂದ ಈ ಧರ್ಮವು ಛಂದೋವಿಶೇಷದಲ್ಲಿ ಕೂಡುವುದಿಲ್ಲ. ಆದ್ದರಿಂದ ವಿಷ್ಣುವೇ ಗಾಯತ್ರೀಶಬ್ದಪ್ರತಿಪಾದ್ಯನಾಗಬೇಕು. ಆ ಕಾರಣದಿಂದಲೇ ಜ್ಯೋತಿಯೂ ವಿಷ್ಣುವೇ ಆಗುತ್ತಾನೆಂದು ತಿಳಿಯಬೇಕು. ಆದಿ ಪದದಿಂದ 'ಯಾ ವೈ ಸಾ ಗಾಯತ್ರೀಯಂ ವಾವ ಸಾಯೇಯಂ ಪೃಥಿವೀ' ಇತ್ಯಾದಿ ಶ್ರುತಿಯನ್ನು ಸಂಗ್ರಹಿಸಬೇಕು.

---* गायति स्वभक्तान् प्रति सामगानं करोति त्रायति मुक्तिं दत्वा तान् रक्षयतीति श्रुत्यर्थमभिप्रेत्योक्तं गानत्राणकर्तृत्वलिङ्गश्रवणादिति ॥ – गुर्वर्थदीपिका

४) अग्रे व्याख्यानकरणादिदं किम्? इत्यत आह – **अनुकरोतीति** ॥ 'किञ्चिद् विवरणेने'ति योज्यम् । यथान्यासस्य हि पुनरुच्चारणमनुकरणम् । ***स्वपदानीति** ॥

**सूत्रार्थो वर्ण्यते यत्र पदैः सूत्रानुकारिभिः ।**
**स्वपदानि च वर्ण्यन्ते भाष्यं भाष्यविदो विदुः ॥**

इत्युक्तेः । भाष्यत्वादिति भावः । नेति नञो न विष्णुरित्यनुवृत्तेनान्वये सति फलितार्थमाह – **विष्णुरेवेति** ॥ भाष्ये 'हि यस्मादित्यर्थे' इत्युपेत्याह **तस्मादिति** ॥ **ज्योतिःशब्देनेति** ॥ अत्रत्येन पूर्वतनेन चेत्यर्थः । अयं च न विष्णुर्ज्योतिरिति चेन्नेति पूर्वभाष्येण ज्योतिःशब्दाध्याहारयुतेनान्वये सति सिद्धोऽर्थः । चेतोऽर्पणार्थ-मित्येतद् व्यावर्त्यमाह – **न चेति** ॥ **सौत्रतथाशब्दार्थो गायत्र्यादीति** ॥

ಮುಂದೆ ಸೂತ್ರವನ್ನು ವ್ಯಾಖ್ಯಾನಿಸುವುದರಿಂದ ಈಗೇನು ಹೇಳುತ್ತಿದ್ದಾರೆ? ಎಂಬ ಸಂಶಯಕ್ಕೆ ಉತ್ತರಿಸಲು ''ಅನುಕರೋತಿ'' ಎಂಬುದಾಗಿ ಹೇಳಿದ್ದಾರೆ. ಅಂದರೆ ಸೂತ್ರವನ್ನು ಸ್ವಲ್ಪಮಾತ್ರ ವಿವರಿಸುತ್ತಾ ಎಂಬುದನ್ನು ಇಟ್ಟುಕೊಂಡು ಸೂತ್ರಾಂಶವನ್ನು ಪಠಿಸುತ್ತಿದ್ದಾರೆ ಎಂದರ್ಥ. ಏಕೆಂದರೆ 'ಯಥಾ ನ್ಯಾಸಸ್ಯ ಹಿ ಪುನರುಚ್ಚಾರಣಂ ಅನುಕರಣಮ್' ಇದ್ದದ್ದನ್ನು ಇದ್ದಹಾಗೆಯೇ ಉಚ್ಚರಿಸಿದರೆ ಅನುಕರಣ ಎನಿಸುತ್ತದೆ.

ತಾವು ಹೇಳಿದ ಪದಗಳನ್ನೇ ಶ್ರೀಮದಾಚಾರ್ಯರು ವ್ಯಾಖ್ಯಾನಿಸುತ್ತಿದ್ದಾರೆಂದು ಸ್ವಪದಾನಿ ಎಂಬ ಟೀಕೆಯಲ್ಲಿ ಹೇಳಿದ್ದಾರೆ. ಏಕೆಂದರೆ,

ಸೂತ್ರಾರ್ಥೋ ವರ್ಣ್ಯತೇ ಯತ್ರ ಪದೈಃ ಸೂತ್ರಾನುಕಾರಿಭಿಃ।
ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುಃ॥

''ಎಲ್ಲಿ ಸೂತ್ರಗಳ ಅರ್ಥವು ವರ್ಣಿಸಲ್ಪಟ್ಟಿದೆಯೋ, ಸೂತ್ರಗಳಲ್ಲಿರುವ ಪದಗಳನ್ನೇ ತಮ್ಮ ಮಾತುಗಳಲ್ಲಿ ಸೇರಿಸಿಕೊಂಡಿದ್ದಾರೋ, ಹಾಗೂ ತಮ್ಮ ಮಾತುಗಳನ್ನು ತಾವೇ ಎಲ್ಲಿ ವಿವರಿಸುತ್ತಾರೋ ಅದನ್ನೇ ಭಾಷ್ಯವೆಂದು ಭಾಷ್ಯಲಕ್ಷಣ ತಿಳಿದವರು ಹೇಳುತ್ತಾರೆ.'' ಎಂಬ ಮಾತನ್ನು ಸ್ಮರಿಸಿಕೊಳ್ಳಬೇಕು.

ಪ್ರಕೃತ ಶ್ರೀಮದಾಚಾರ್ಯರ ಮಾತುಗಳು ಭಾಷ್ಯದ ಮಾತಾದ್ದರಿಂದ ಟೀಕೆಯಲ್ಲಿ ''ಸ್ವಪದಾನಿ ವರ್ಣಯತಿ'' ಎಂದು ಹೇಳಿದ್ದಾರೆ. 'ನ ವಿಷ್ಣುಃ ಇತಿ ಚೇನ್ನ' ಎಂಬುದಾಗಿ ಎರಡು ಬಾರಿ 'ನಞ್'ಗಳನ್ನು ಅನುವೃತ್ತಿಮಾಡಿದಾಗ ದೊರೆಯುವ ಫಲಿತಾರ್ಥವನ್ನು ''ವಿಷ್ಣುರೇವ'' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಭಾಷ್ಯದಲ್ಲಿರುವ 'ಹಿ' ಎಂಬ ಪದಕ್ಕೆ 'ಯಸ್ಮಾತ್' ಯಾವ ಕಾರಣದಿಂದ ಎಂಬರ್ಥವನ್ನು ಅಂಗೀಕರಿಸಿ ''ತಸ್ಮಾತ್'' ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ. ''ಜ್ಯೋತಿಃಶಬ್ದೇನ'' ಎಂದರೆ ಇಲ್ಲಿ ಹೇಳಲ್ಪಟ್ಟ ಹಾಗೂ ಹಿಂದೆ ಹೇಳಲ್ಪಟ್ಟ ಜ್ಯೋತಿಃಶಬ್ದದಿಂದ ಎಂದರ್ಥ. ಈ ಅರ್ಥವು 'ನ ವಿಷ್ಣುಃ ಜ್ಯೋತಿರಿತಿ ಚೇನ್ನ' ಎಂಬ ಹಿಂದಿನ ಭಾಷ್ಯದಿಂದ ಜ್ಯೋತಿಃಶಬ್ದವನ್ನು ಅಧ್ಯಾಹಾರ ಮಾಡಿಕೊಂಡು ಅನ್ವಯ ಹೇಳಿದಾಗ ತಿಳಿಯುತ್ತದೆ.

'ಚೇತೋಽರ್ಪಣಾರ್ಥಂ' ಎಂಬುದರಿಂದ ನಿರಾಕೃತವಾಗುವ ಶಂಕೆಯನ್ನು "ನಚ" ಎಂಬ ಟೀಕೆಯಿಂದ ವಿವರಿಸುತ್ತಿದ್ದಾರೆ. ಸೂತ್ರದಲ್ಲಿರುವ 'ತಥಾ' ಎಂಬ ಶಬ್ದದ ಅರ್ಥವನ್ನೇ "ಗಾಯತ್ರ್ಯಾದಿ" ಎಂದು ಹೇಳಿದ್ದಾರೆ.

(भा)*वाचोग्रहणमिति ॥ 'वाग् वाव(वै) गायत्री' इति गायत्र्या वाक्त्वोक्तिर्वाक्शब्दार्थगुणस्वरूपत्वेनोपासनार्थमेव नाभेदविधानार्थेति गायत्र्या विष्णुत्वे सापि न बाधिकेति भावेन भाष्ये 'आदि'पदमिति भावः । सूचयतीति ॥ आदिपदमिति विपरिणम्यानुषज्यत इति चन्द्रिकोक्तिः । हिशब्देन सूचयतीति तु पाठो न बहुकोशेषु दृश्यत इत्याहुः । पूर्वोत्तराधिकरणविषयवाक्येषु विष्णौ प्रसिद्धविष्णुनारायणादिपदप्रयोगमकृत्वा इन्द्राकाशाग्निज्योतिःप्राणादित्याक्षरादिशब्दप्रयोगस्तु तत्तच्छब्दार्थगुणस्वरूपत्वेन विष्णोरुपासनार्थमैश्वर्यादिगुणान् विष्णौ वक्तुमित्यनुसन्धेयत्वं सूचयति भाष्यस्थमादिपदम् - इत्यर्थः ।

अत एव भाष्ये पूर्वनये 'त्वामग्ने तमसि' इति श्रुताग्निपदोपादानेन तत्किञ्चिद् विवृतम् । सूत्रे भाष्ये च हिर्हेतावित्युपेत्योक्तम् ॥ श्रवणादिति ॥ तस्य चेति ॥

**तन्निःसृतत्वाद् वेदानां गायकस्त्राति चाखिलम् ।**
**अतो गायत्रिनामासौ वासुदेवः परः पुमान् ॥**

इति स्मृत्या अखिलवेदोच्चारयितृत्वाखिलपालयितृत्वरूपस्य छन्दस्य सम्भवादित्यर्थः । 'इति चेन्न' इति पूर्वेण भाष्येणान्वयमुपेत्यार्थमाह – विष्णुरेवेति ॥

या वै सेति ॥ 'या वै सा गायत्री इयं वाव सा येयं पृथिवी अस्यां हीदं सर्वं प्रतिष्ठितं एतामेव नातिशीयन्ते' इति वाक्ये गायत्र्याः पृथिवीशब्दितवस्त्वभेदमुक्त्वा तस्य वस्तुनः सर्वाधारत्वं सर्वोत्तमत्वं चोच्यते । तच्च 'गायत्र्या विष्णत्व एव युक्तं नान्यथा' इत्यर्थः । एतेन पृथिव्यादिशब्दार्थोऽपि लिङ्गबलाद् विष्णुरूपमेवेति

---

* 'नित्यत्वादेव शब्दस्य तत्स्वभावः कथं हरेः' इत्यनुव्याख्यानोक्ताभ्यधिकशङ्कामाह गायत्र्या वेदविशेषत्वेन नित्यत्वादिति । अनेन आकाशाधिकरणोदाहृतन्यायविवरणे 'बुद्ध्याविवेकेन नित्यत्वे विद्यमानः' इत्ययंभागो व्याख्यातो भवति । न्यायविवरणाक्षरयोजना तु – अधिभूताध्यात्माधिदैवगतशब्दानां ...... इति विशेषविचारः भावबोधे द्रष्टव्यम् ।(ब्रह्मसूत्रभाष्यम् - कृ.त.पाण्डुरङ्गि - प.(४३२))

**सूचितम् । एवं च पूर्वपक्ष एव पृथिव्यादितादात्म्यं बाधकम् । न सिद्धान्त इति भावः । अत एव स्मृतौ 'सर्वलोकाभिधो ह्यसौ' इत्यंशोक्तिः ।**

ಟೀಕೆಯಲ್ಲಿ ''ವಾಚೋಗ್ರಹಣಮ್'' ಎಂದಿದ್ದಾರೆ. ಶ್ರುತಿಯಲ್ಲಿ 'ವಾಗ್ ವೈ ಗಾಯತ್ರೀ' ಎಂಬುದಾಗಿ ಗಾಯತ್ರಿಯಲ್ಲಿ ವಾಕ್ತ್ವವನ್ನು ಹೇಳಿದ್ದು ವಾಕ್‌ಶಬ್ದದಿಂದ ತಿಳಿಯುವ ಗುಣಗಳನ್ನು ಉಪಾಸನೆ ಮಾಡುವುದಕ್ಕಾಗಿ ಮಾತ್ರ ಹೊರತು ವಾಕ್‌ನಿಂದ ಅಭೇದವನ್ನು ಹೇಳುವುದಕ್ಕಾಗಿ ಅಲ್ಲ. ಆದ್ದರಿಂದ ಗಾಯತ್ರೀಯನ್ನು ವಿಷ್ಣುವೆಂದು ಹೇಳಿದರೆ ವಾಕ್ತ್ವವಿಧಾನದ ವಿರೋಧಕ್ಕೂ ಅವಕಾಶವಿಲ್ಲ ಎಂಬ ಅಭಿಪ್ರಾಯದಿಂದ ಅಗ್ನಿಗಾಯತ್ರ್ಯಾದಿ ಎಂಬ ಭಾಷ್ಯದಲ್ಲಿ ಆದಿಪದವನ್ನು ಪ್ರಯೋಗಿಸಿದ್ದಾರೆಂದು ತಿಳಿಯಬೇಕು. ಟೀಕೆಯಲ್ಲಿ ''ಸೂಚಯತಿ'' ಎಂದಿದ್ದಾರೆ. ಹಿಂದೆ ಪ್ರಸಕ್ತವಾದ ಆದಿಪದೇನ ಎಂಬುದನ್ನು ಆದಿಪದಮ್ ಎಂಬುದಾಗಿ ವಿಪರಿಣಾಮಮಾಡಿಕೊಂಡು 'ಆದಿಪದಮ್ ಸೂಚಯತಿ' ಎಂಬುದಾಗಿ ಚಂದ್ರಿಕೆಯಲ್ಲಿ ವ್ಯಾಖ್ಯಾನಿಸಿದ್ದನ್ನು ಇಲ್ಲಿ ಗಮನಿಸಬೇಕು. ಕೆಲವು ಪುಸ್ತಕಗಳಲ್ಲಿ 'ಹಿಶಬ್ದೇನ ಸೂಚಯತಿ' ಎಂಬ ಪಾಠವಿದೆ. ಆದರೆ ಅನೇಕ ಕಡೆ ಈ ಪಾಠವು ಕಾಣಿಸುವುದಿಲ್ಲವೆಂದು ಕೆಲವರು ಹೇಳುತ್ತಾರೆ.

ಹಿಂದಿನ ಮುಂದಿನ ಅಧಿಕರಣಗಳ ವಿಷಯವಾಕ್ಯಗಳಲ್ಲಿ ವಿಷ್ಣುವಿನಲ್ಲೇ ಪ್ರಸಿದ್ಧವಾದ 'ವಿಷ್ಣು, ನಾರಾಯಣ' ಮೊದಲಾದ ಪದಪ್ರಯೋಗಗಳನ್ನು ಉಲ್ಲೇಖಿಸಿರುವುದಿಲ್ಲ ಹೊರತಾಗಿ ವಿಷ್ಣುವಿನಲ್ಲಿ ಪ್ರಸಿದ್ಧವಾಗದ ಇಂದ್ರ ಆಕಾಶ, ಅಗ್ನಿ, ಜ್ಯೋತಿ, ಪ್ರಾಣ, ಆದಿತ್ಯ, ಅಕ್ಷರ ಮೊದಲಾದ ಶಬ್ದಗಳನ್ನಷ್ಟೇ ಪ್ರಯೋಗಿಸಿದ್ದಾರೆ. ಕಾರಣವೇನೆಂದರೆ ಇಂದ್ರಾದಿಶಬ್ದಗಳಿಂದ ತಿಳಿಯುವ ಗುಣಗಳನ್ನು ಭಗವಂತನಲ್ಲಿ ಉಪಾಸನೆಮಾಡಬೇಕು ಮತ್ತು ಆಯಾ ಗುಣಗಳನ್ನು (ಐಶ್ವರ್ಯಾದಿ ಗುಣಗಳನ್ನು) ವಿಷ್ಣುವಿನಲ್ಲಿ ಸಮರ್ಥಿಸಬೇಕು ಎಂಬುದನ್ನು ತಿಳಿಸುವುದಕ್ಕಾಗಿ ಇಂದ್ರಾದಿಶಬ್ದಗಳನ್ನೇ ಸಮನ್ವಯ ಮಾಡುತ್ತಿದ್ದಾರೆ. ಈ ವಿಚಾರವನ್ನು ಭಾಷ್ಯದಲ್ಲಿರುವ ಆದಿಪದವು ಸೂಚಿಸುತ್ತಿದೆ. ಆದ್ದರಿಂದಲೇ ಹಿಂದಿನ ಅಧಿಕರಣದಲ್ಲಿ 'ತ್ವಾಮಗ್ನೇ ತಮಸಿ' ಎಂಬ ಶ್ರುತಿಯಲ್ಲಿರುವ ಅಗ್ನಿಪದವನ್ನು ಸ್ವೀಕರಿಸಿ ಸ್ವಲ್ಪ ವಿವರಿಸಿದ್ದಾರೆ. ಸೂತ್ರ ಹಾಗೂ ಭಾಷ್ಯಗಳಲ್ಲಿ ಹಿಶಬ್ದವು ಹೇತ್ವರ್ಥದಲ್ಲಿ ಹೇಳಿದ್ದಾರೆ ಎಂದು ಒಪ್ಪಿಕೊಂಡು ಹೇಳಿದ್ದು.

ಟೀಕೆಯಲ್ಲಿ ಶ್ರವಣಾತ್ ಎಂದು ಹೇಳಿದ್ದಾರೆ. ಮುಂದೆ ''ತಸ್ಯ ಚ'' ಎಂಬುದಾಗಿ ಗಾನತ್ರಾಣ-ಕರ್ತೃತ್ವವನ್ನು ಪರಾಮರ್ಶಿಸಿದ್ದಾರೆ. ಇದರ ಅಭಿಪ್ರಾಯ ಹೀಗಿದೆ.

ತನ್ನಿಸೃತತ್ವಾದ್ ವೇದಾನಾಂ ಗಾಯಕಸ್ತ್ರಾತಿ ಚಾಖಿಲಮ್ ।
ಅತೋ ಗಾಯತ್ರಿನಾಮಾಸೌ ವಾಸುದೇವಃ ಪರಃ ಪುಮಾನ್ ॥

''ಎಲ್ಲ ವೇದಗಳೂ ಮುಖಕಮಲದಿಂದ ಹೊರ ಹೊಮ್ಮಿದ್ದರಿಂದ ಸಕಲ ವೇದಗಳ ಗಾಯಕನಾಗಿದ್ದಾನೆ. ಮತ್ತು ಎಲ್ಲವನ್ನೂ ರಕ್ಷಿಸುವವನಾಗಿದ್ದಾನೆ. ಆದ್ದರಿಂದಲೇ ಗಾಯತ್ರೀ ಎನಿಸಿದ ವಾಸುದೇವನು ಸರ್ವೋತ್ತಮನಾಗಿದ್ದಾನೆ'' ಎಂಬ ಸ್ಮೃತಿಯಿಂದ ತಿಳಿಯುವ 'ಅಖಿಲವೇದೋಚ್ಚಾರ-ಯಿತೃತ್ವ ಮತ್ತು ಅಖಿಲಪಾಲಯಿತೃತ್ವ' ಎಂಬ ಧರ್ಮಗಳು ಛಂದೋವಿಶೇಷದಲ್ಲಿ ಬರಲಾರವು ಎಂದಭಿಪ್ರಾಯ. 'ಇತಿ ಚೇನ್ನ' ಎಂಬುದಕ್ಕೆ ಹಿಂದಿನ ಭಾಷ್ಯದಿಂದ ಅನ್ವಯವನ್ನು ಅಂಗೀಕರಿಸಿ ಅರ್ಥವನ್ನು ''ವಿಷ್ಣುರೇವ'' ಇತಿ ಎಂಬುದಾಗಿ ಹೇಳಿದ್ದಾರೆ.

''ಯಾ ವೈ ಸಾ'' ಇತ್ಯಾದಿ ಟೀಕೆಯ ಅಭಿಪ್ರಾಯ ಹೀಗಿದೆ. 'ಯಾ ವೈ ಸಾ ಗಾಯತ್ರೀ ಇಯಂ ವಾವ ಸಾ ಯೇಯಂ ಪೃಥಿವೀ ಅಸ್ಯಾಂ ಹೀದಂ ಸರ್ವಂ ಪ್ರತಿಷ್ಠಿತಂ ಏತಾಮೇವ ನಾತಿಶೀಯಂತೇ' ಎಂಬ ವಾಕ್ಯದಲ್ಲಿ ಪೃಥಿವೀಶಬ್ದವಾಚ್ಯವಾದ ವಸ್ತುವಿನಿಂದ ಗಾಯತ್ರಿಗೆ ಅಭೇದವು ಹೇಳಲ್ಪಟ್ಟಿದೆ. ಮತ್ತು ಅಂತಹ ಗಾಯತ್ರಿಯು ಸರ್ವಕ್ಕೂ ಆಧಾರವಾಗಿದೆ ಮತ್ತು ಸರ್ವೋತ್ತಮವಾಗಿದೆ ಎಂದು ಹೇಳಲಾಗಿದೆ. ಈ ಸರ್ವಾಧಾರತ್ವ ಮತ್ತು ಸರ್ವೋತ್ತಮತ್ವಗಳು ಗಾಯತ್ರಿಯು ವಿಷ್ಣುವಾದರೆ ಮಾತ್ರ ಯುಕ್ತವಾಗುತ್ತದೆ. ಛಂದೋವಿಶೇಷವು ಗಾಯತ್ರಿಯಾದರೆ ಅನುಪಪನ್ನವಾಗುತ್ತದೆ. ಹೀಗೆ ಹೇಳಿದ್ದರಿಂದ ಸರ್ವೋತ್ತಮತ್ವಾದಿ ಲಿಂಗಗಳ ಬಲದಿಂದ ಪೃಥಿವ್ಯಾದಿಶಬ್ದಗಳಿಂದಲೂ ವಿಷ್ಣುವೇ ಪ್ರತಿಪಾದ್ಯನೆಂದು ಸೂಚಿಸಿದಂತಾಯಿತು. ಆದ್ದರಿಂದ ಪೃಥಿವ್ಯಾದಿವಸ್ತುಗಳ ತಾದಾತ್ಮ್ಯವು ಪೂರ್ವಪಕ್ಷದಲ್ಲಷ್ಟೇ ಬಾಧಕ ಹೊರತು ಸಿದ್ಧಾಂತ-ದಲ್ಲಲ್ಲವೆಂದು ತಿಳಿಯಬೇಕು. ಆದ್ದರಿಂದಲೇ ಸ್ಮೃತಿಯಲ್ಲಿ 'ಸರ್ವಲೋಕಾಭಿಧೋ ಹ್ಯಸೌ' ಎಂಬ ಅಂಶವನ್ನು ಉಲ್ಲೇಖಿಸಿದ್ದಾರೆ.

## ಗಾನತ್ರಾಣಕರ್ತನಾದ ವಿಷ್ಣುವೇ ಗಾಯತ್ರೀ

**भाष्यम् – तथा हि दर्शनं 'गायति त्रायति च' (छां. ३-१२-१.) इत्यादि ।**

**'सर्वच्छन्दोऽभिधो ह्येषः सर्वदेवाभिधो ह्यसौ ।**
**सर्वलोकाभिधो ह्येषस्तेषां तदुपचारतः ॥' इति वामने ॥**

ಗಾಯತ್ರೀಶಬ್ದಪ್ರತಿಪಾದ್ಯವಾದ ಅರ್ಥ ವಿಷ್ಣುವೇ ಎಂದು 'ಗಾಯತಿ ತ್ರಾಯತಿ ಚ' ಎಂಬ ಛಾಂದೋಗ್ಯವಾಕ್ಯವು ನಿರೂಪಿಸುತ್ತಿದೆ.

'ಎಲ್ಲ ಛಂದಸ್‌ಶಬ್ದಗಳಿಂದ ಪ್ರತಿಪಾದ್ಯನಾದವನು ವಿಷ್ಣುವೇ, ಎಲ್ಲ ದೇವತಾಶಬ್ದಗಳಿಂದ ಪ್ರತಿಪಾದ್ಯನಾದವನು ವಿಷ್ಣುವೇ, ಎಲ್ಲಾ ಲೋಕವಾಕ್ಯಗಳ ಶಬ್ದಗಳಿಂದ ಪ್ರತಿಪಾದ್ಯ-ನಾದವನು ವಿಷ್ಣುವೇ ಆಗಿದ್ದಾನೆ; ಅಮುಖ್ಯವಾಗಿ ಬೇರೆಡೆ (ಛಂದೋದೇವಲೋಕಾನಾಂ) ಪ್ರಸಿದ್ಧವಾಗಿವೆ' ಎಂದು ವಾಮನಪುರಾಣದಲ್ಲಿ ಹೇಳಲ್ಪಟ್ಟಿದೆ.

---

**भाष्यदीपिका** – ननु भवेद् गायत्र्यादिशब्दवाच्यत्वेन विष्णोर्ज्योतिश्शब्दवाच्यतासाधनं यदीयं गायत्री विष्णुः स्यात्तदेव कुत इत्यतो गानत्राणकर्तृत्वलिङ्गादित्याशयेन तस्या-सिद्धिपरिहाराय प्रवृत्तं तथाहीति सूत्रशेषम् अनुकृत्य दर्शनपदोक्तां श्रुतिं दर्शयति - तथेति ॥ 'हि' यस्मात् 'इत्यादि दर्शनं' श्रुतिरस्तीत्यन्वयः । यद्यपि 'गायति त्रायते च' इति पाठः छन्दोगानाम्, तथाऽपि शाखान्तरमेवेद-मित्यदोषः । आदिपदेन 'या वै सा गायत्री इयं वाव सा येयं पृथिव्यस्यां हीदं सर्वं भूतं प्रतिष्ठितमेतामेव नातिशीयते' (छां.३.१२.२) इत्यादिकं गृह्यते । श्रुत्यर्थस्तु – यतो गायत्रीवाच्यो भगवान् वेदान् 'गायति' मुखान्निस्सारयति प्रथमो वक्तेति यावत् । यस्माच्च 'त्रायते' अखिलमिति

ಪ್ರತಿಪದಾರ್ಥ - ಗಾಯತ್ರೀಶಬ್ದವಾಚ್ಯತ್ವವನ್ನು ವಿಷ್ಣುವಿನಲ್ಲಿ ಹೇಳುವ ಮೂಲಕ ಜ್ಯೋತಿಃಶಬ್ದವಾಚ್ಯತ್ವವನ್ನು ಇಲ್ಲಿ ಪ್ರತಿಪಾದಿಸಲಾಗಿದೆ. ಒಂದು ವೇಳೆ ವಿಷ್ಣುವು ಗಾಯತ್ರೀಶಬ್ದಪ್ರತಿಪಾದ್ಯನಾಗುವುದಾದರೆ ಮಾತ್ರ ಇದು ಕೂಡುತ್ತದೆ. ಆದ್ದರಿಂದ ಮೊದಲು ಗಾಯತ್ರೀಶಬ್ದಪ್ರತಿಪಾದ್ಯತ್ವವನ್ನು ಪ್ರಸ್ತುತ ಸಮರ್ಥಿಸುತ್ತಿದ್ದಾರೆ.

ತಥಾ ಹಿ = ಅದು ಹೀಗೆ, ಗಾಯತಿ = ವೇದಗಳಿಂದ ಗಾನಮಾಡಿಸಿಕೊಳ್ಳುತ್ತಾನೆ, ತ್ರಾಯತಿ ಚ = ರಕ್ಷಣೆಯನ್ನೂ ಮಾಡುತ್ತಾನೆ, ಇತ್ಯಾದಿ = ಹೀಗೆ, ದರ್ಶನಂ = ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿದ್ದು ಕಾಣಿಸುತ್ತದೆ.

ಮತ್ತು, ಸರ್ವ= ಎಲ್ಲ, ಛಂದೋಭಿಧಃ = ಛಂದೋವಾಚಕಶಬ್ದಗಳಿಂದ ಪ್ರತಿಪಾದ್ಯನಾದವನು, ಏಷಃ ಹಿ = ವಿಷ್ಣುವೇ, ಸರ್ವದೇವಾಭಿಧಃ = ಎಲ್ಲಾ ದೇವತಾವಾಚಕಪದಗಳಿಂದ ಪ್ರತಿಪಾದ್ಯನಾದವನು, ಅಸೌ ಹಿ = ಈ ವಿಷ್ಣುವೇ, ಸರ್ವಲೋಕಾಭಿಧಃ = ಸಕಲಲೋಕವಾಚಕಶಬ್ದಗಳಿಂದ ಪ್ರತಿಪಾದ್ಯನಾದವನು, ಏಷಃ ಹಿ = ವಿಷ್ಣುವೇ ಆಗಿದ್ದಾನೆ, ತೇಷಾಂ = ಛಂದಸ್ಸು, ದೇವತೆ, ಲೋಕಗಳಲ್ಲಿ, ತತ್ = ಆಯಾ ಶಬ್ದಗಳ ಪ್ರತಿಪಾದ್ಯತ್ವವು,

---

शेषः । अतो गायत्रीशब्देनोच्यते । 'या' प्रसिद्धा गायत्री तन्नामा विष्णुः 'सा इयं वै' इयं खलु । किमियम्? 'येयं पृथिवी' तन्नामा भगवान् । कथं पृथिवी विष्णुरित्यतः तल्लक्षणयोगादित्याह – अस्यां हीदमिति ॥ 'अस्यां' पृथिव्यां 'भूतं' प्राणिजातमाश्रितमिति । सुधायां तु पूर्वपक्षानुगुणतया गायत्री 'गायति' अर्थं प्रतिपादयति, अध्येतॄन् 'त्रायते' पालयति पापाद् रक्षतीत्यर्थ उक्तः ॥

ननु गायत्र्यादिशब्दस्यान्यत्र रूढत्वात् कथं लिङ्गमात्रेण विष्णुत्वनिश्चय इत्यतो गायत्र्यादिश्रुतेः सावकाशत्वादिति भावेन गायत्र्यग्निपृथिव्यादिशब्दाः न केवलं श्रुत्युक्तयोगेन विष्णौ सावकाशाः, अपि तु पौराणिकरूढ्या गायत्र्याः भगवदधीनत्वादपीत्याशयेन तत्र स्मृतिमाह – सर्वेति ॥ 'एषः' विष्णुः 'सर्वछन्दोऽभिधः' सर्वछन्दसाम् अभिधेवाभिधा यस्येति बहुव्रीहिः । छन्दोवाचक-गायत्र्यादिसर्वशब्दवाच्यः । 'एवमसौ' विष्णुः सर्वदेवतावाचकाग्न्यादिशब्दवाच्यः। तथा 'एषः' विष्णुः सर्वलोकवाचकपृथिव्यादिशब्दवाच्य इत्यर्थः । कुत इत्यतः छन्दआदीनां भगवदधीनत्वादिति प्रत्येकं हेतुत्रयसूचनाय हिशब्दत्रयं, वेदप्रसिद्धिज्ञापनाय वा । छन्दसां लोकानां च प्रत्यक्षत्वाद् देवानां च परोक्षत्वादेषोऽसाविति विचित्रोक्तिः । कथं तर्ह्यन्यत्र व्यवहार इत्यत आह – तेषामिति ॥ छन्दोदेवलोकानामित्यर्थः । 'तत्' तच्छब्दबोध्यत्वम् 'उपचारतः' विष्णुसमीपे चरणात् तदधीनत्वादमुख्यत एवेत्यर्थः ॥

वामन इत्यस्य 'हि' यतो वामने इति 'दर्शनं' प्रतिपादनमस्त्यतः श्रुतेर्मुख्यवृत्त्या विष्णावेव सावकाशत्वात् लिङ्गस्यामुख्यतोऽप्यन्यत्रानवकाशत्वात् तेन तद्बाधोपपत्तेर्भवत्येव गानत्राणकर्तृत्वलिङ्गमात्रेणायं निर्णय इत्युपस्कारेणान्वयः ॥

ಉಪಚಾರತಃ = ಅಮುಖ್ಯವಾಗಿ ಇರುತ್ತದೆ, ಇತಿ = ಹೀಗೆ, ವಾಮನೇ = ವಾಮನಪುರಾಣದಲ್ಲಿ ಹೇಳಲಾಗಿದೆ.

**तत्वप्रकाशिका – ननु गायत्री श्रुतेरन्यत्र निरूढत्वात्कथं लिङ्गमात्रेण विष्णुत्वनिश्चय इत्यत आह – सर्वेति ॥ गायत्रीश्रुतेः पौराणिकरूढ्या श्रुत्युक्त-योगेन गायत्र्या भगवदधीनत्वेन च विष्णावेव मुख्यवृत्त्या सावकाशत्वात् लिङ्गस्यामुख्यवृत्त्याप्यन्यत्रानवकाशात् सावकाशश्रुतेः निरवकाशलिङ्गेन बाधो-पपत्तेर्युक्तो लिङ्गमात्रेणायं निर्णय इति भावः ।**

ಗಾಯತ್ರೀಶ್ರುತಿಯು ಛಂದೋವಿಶೇಷದಲ್ಲಿ ರೂಢವಾಗಿರುವುದರಿಂದ ಕೇವಲ ಗಾನತ್ರಾಣ-ಕರ್ತೃತ್ವವೆಂಬ ಲಿಂಗದಿಂದ ವಿಷ್ಣುವೆಂದು ಹೇಗೆ ನಿರ್ಣಯಿಸುತ್ತೀರಿ? ಎಂಬ ಪ್ರಶ್ನೆಗೆ ಭಾಷ್ಯಕಾರರು ''ಸರ್ವಛಂದೋಽಭಿದಃ'' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಗಾಯತ್ರೀಶಬ್ದಕ್ಕೆ ಪೌರಾಣಿಕ-ರೂಢಿಯಿರುವುದರಿಂದ ಮತ್ತು ಶ್ರುತಿಯಲ್ಲಿ ಹೇಳಿದ ಅವಯವಾರ್ಥವಿರುವುದರಿಂದಲೂ ಮತ್ತು ಗಾಯತ್ರೀ(ಛಂದೋವಿಶೇಷವು) ಭಗವದಧೀನವಾಗಿರುವುದರಿಂದಲೂ ವಿಷ್ಣುವೇ ಮುಖ್ಯವೃತ್ತಿ-ಯಿಂದ ಗಾಯತ್ರೀ ಎನಿಸಿದ್ದಾನೆ. ಹೀಗೆ ಗಾಯತ್ರೀಶ್ರುತಿಯು ಸಾವಕಾಶವಾಗಿದೆ. ಆದರೆ ಗಾನತ್ರಾಣ-ಕರ್ತೃತ್ವವೆಂಬ ಲಿಂಗವು ಅಮುಖ್ಯವೃತ್ತಿಯಿಂದಲೂ ಸಹ ಬೇರೆಡೆ ಬರಲು ಸಾಧ್ಯವಿಲ್ಲ. ಆದ್ದರಿಂದ ಸಾವಕಾಶಶ್ರುತಿಗೆ ನಿರವಕಾಶಲಿಂಗದಿಂದ ಬಾಧವನ್ನು ಹೇಳಬಹುದು. ಹೀಗಿರುವಾಗ ಕೇವಲ ಲಿಂಗದ ಬಲದಿಂದ ಸಿದ್ಧಾಂತವನ್ನು ನಿರ್ಣಯಿಸುವುದು ತಪ್ಪೇನಿಲ್ಲವೆಂದು ಅಭಿಪ್ರಾಯ.

**(तत्वप्रकाशिका) न च नित्यस्य पराधीनत्वायोगः**

**'स्वभावजीवकर्माणि द्रव्यं कालः श्रुतिः क्रिय। ।**

**यत्प्रसादादिमे सन्ति न सन्ति यदुपेक्षया'**

**इति नित्यानामपि भगवदधीनत्वस्य श्रौतत्वात् । अत्र देवलोकपदाभ्यां अग्निपृथिव्यादिशब्दानां च भगवत्परत्वमुच्यते ॥ २५ ॥**

ಗಾಯತ್ರೀಶ್ರುತಿಯು ನಿತ್ಯವಾದ್ದರಿಂದ ಪರಾಧೀನವಲ್ಲವೆಂಬ ಶಂಕೆಯು ತಪ್ಪು. ಏಕೆಂದರೆ, ನಿತ್ಯ-ಪದಾರ್ಥಗಳೂ ಸಹ ಭಗವದಧೀನವೇ ಆಗಿವೆ ಎನ್ನಲು ಆಧಾರವಿದೆ.

ಸ್ವಭಾವಜೀವಕರ್ಮಾಣಿ ದ್ರವ್ಯಂ ಕಾಲಃ ಶ್ರುತಿಃ ಕ್ರಿಯಾ ।

ಯತ್ ಪ್ರಸಾದಾದಿಮೇ ಸಂತಿ ನ ಸಂತಿ ಯದುಪೇಕ್ಷಯಾ ॥

ಸ್ವಭಾವ, ಜೀವ, ಕರ್ಮ, ದ್ರವ್ಯ, ಕಾಲ, ಶ್ರುತಿ, ಕ್ರಿಯಾ ಇವೆಲ್ಲವೂ ಯಾರ ಪ್ರಸಾದದಿಂದಷ್ಟೇ ಇವೆಯೋ ಯಾರ ಪ್ರಸಾದವಿಲ್ಲದಿದ್ದರೆ ಇರಲಾರವೋ ಎಂಬ ಪ್ರಮಾಣದಂತೆ ನಿತ್ಯವಾದ ವಸ್ತುಗಳೂ

ಸಹ ಭಗವದಧೀನವೆಂದು ಶ್ರುತವಾಗಿದೆ. 'ಸರ್ವಛಂದೋಽಭಿಧೋ ಹ್ಯೇಷಃ' ಎಂಬ ಶ್ರುತಿಯಲ್ಲಿ ದೇವ ಮತ್ತು ಲೋಕಪದಗಳಿಂದ ಅಗ್ನಿಪೃಥಿವ್ಯಾದಿಶಬ್ದಗಳಿಗೂ ಭಗವತ್ಪರತ್ವವನ್ನು ತಿಳಿಯಬೇಕು.

**भावदीपः –** स्मृत्युक्तिमात्रेण कथमुक्तशङ्कानिरासः? इत्यतः **'तद्धरेरेव'** इत्यनुव्याख्यानस्य 'तद् गायत्रीपदं हरेरेव वाचकं तत् गायत्रीपदप्रवृत्तिनिमित्तं हरेरेव तत् अन्यगतं च प्रवृत्तिनिमित्तं हरेरेवाधीनम्' इति सुधोक्तदिशाऽर्थत्रयमुपेत्य तत्रोक्तं व्यञ्जयन् स्मृत्युदाहर्तुर्भावमाह – **गायत्री श्रुतेरिति ॥ श्रुत्युक्तेति ॥** 'गायति त्रायति च' इति श्रुत्युक्तेत्यर्थः । गायत्रीपदप्रवृत्तिनिमित्तस्य गायत्रीस्वभावत्वात् तस्या ईशाधीनत्वे तस्यापि तत्सिद्ध्यतीति गायत्र्या इत्येवोक्तम् । 'अधिवेदगतानामपि शब्दानां भगवद्विषयत्वमेवानन्यथासिद्धलिङ्गैः' इति न्यायविवरणांशाभिप्रायमाह – **लिङ्गस्येति ॥ बाधेति ॥** **'सन्दिग्धश्रुतिलिङ्गाभ्यां युक्ताभ्यामप्यसन्दिग्धयोः केवलयोरेव बलवत्वात्' इत्यन्यत्रोक्तेरिति भावः ।

** ननु सैद्धान्तिकश्रुतिलिङ्गानामनन्यथासिद्धत्वेऽपि पूर्वपक्षश्रुतिलिङ्गयोराकाशप्राणश्छन्दोविशेषेषु प्रसिद्धत्वात् कथं बाध्यबाधकभावः? इत्यत उक्तं न्यायविवरणे – 'सन्दिग्धश्रुतिलिङ्गाभ्यां युक्ताभ्यामप्यसन्दिग्धयोः केवलयोरेव बलवत्वात्' इति सन्दिग्धपदं सावकाशपरम् । तच्चोक्ताभ्यामित्यनेनोक्तलोकप्रसिद्धेरसाधकत्वे हेतुप्रदर्शनार्थमुक्तम् । 'श्रुतिलिङ्गाभ्याम्' इति जात्यपेक्षया द्विवचनम् । आकाशप्राणगायत्रीश्रुतिभ्य अचेतनत्वजीवनान्वयव्यतिरेकनित्यत्वादियुक्तिभ्यश्चेत्यर्थः । मुख्याकाशप्राणगायत्रीश्रुतयस्तावत् परमेश्वरेऽपि वाचकत्वशक्तियुक्तित्वेनात्र किं पराः? इति सन्दिह्यते । अचेतनत्वजीवनान्वयव्यतिरेकनित्यत्वानि च लिङ्गान्यनुव्याख्यानोक्तरीत्या न मुख्यानि । न्यायविघातयालमिति सन्दिग्धान्युच्यन्ते ।

केवलश्रुतिलिङ्गयोः । इदमपि जात्यपेक्षया । आकाशप्राणाधिकरणयोः सिद्धान्तसाधकश्रुत्यभावेन केवलस्य लिङ्गस्येत्यस्यैव तत्रोपयोगः । समग्रस्य तु गायत्र्यधिकरण इति विवेकः । परोवरीयस्त्वश्रीलक्ष्मीपतित्वगानत्राणकर्तृत्वपुरुषसूक्तोक्तत्वादिलिङ्गजातं पुरुषब्रह्मादिश्रुतिजातश्च भगवदेकनिष्ठत्वादसन्दिग्धमित्युच्यते । असन्दिग्धपदं निरवकाशपरम् । तच्च 'केवलयोः' इत्युक्तलोकप्रसिद्धशून्ययोरेव बलवत्त्वे हेतुत्वेनोक्तम् । तथा च लोकतः प्रसिद्धाभ्यामपि श्रुतिलिङ्गाभ्यां तथा प्रसिद्धिरहितयोरेव बलवत्त्वम् । यतोऽनयोर्विष्णुमात्रपरत्वेन प्रमितत्वादसन्दिग्धत्वलक्षणं निरवकाशत्वम् । पूर्वपक्षसम्बन्धिनोस्तु भूताकाशप्राणच्छन्दोविशेषणां विशेषमात्रनिष्ठत्वे प्रमाणाभावाद् विष्णुनिष्ठत्वस्य निराकर्तुमशक्यत्वाच्च सन्दिग्धत्वलक्षणं सावकाशत्वमित्यर्थः । अत्र केवलयो-

अत्र यद्यपि 'बाहुल्यात् श्रुतिलिङ्गयोः' इत्यनुभाष्यसुधयोरुक्तदिशा 'अतो ज्यायांश्च पूरुषः' 'यद्वै तद् ब्रह्म' 'एतामेव ब्रह्मोपनिषदं वेद' इति पुरुषब्रह्मश्रुतयः प्रागुक्तलिङ्गानि चेति लिङ्गबाहुल्यमस्ति निर्णायकं तथाप्यनन्यथासिद्धलिङ्गै-र्भगवद्विषयत्वमेवेत्युक्तिस्वारस्यानुरोधेन लिङ्गस्य निरवकाशतयैव निर्णयः कृतः । न तु श्रुतिलिङ्गबाहुल्येन असन्दिग्धयोः केवलयोरेव बलवत्वादित्युक्तेः । 'तावानस्य महिमा ततो ज्यायांश्च पूरुषः' इत्यादिशब्दसहितलिङ्गैश्चेति न्यायविवरणोक्ति-रभ्युच्चयत्वेनेति भावः ।

ಸ್ಮೃತಿಯನ್ನು ಉಲ್ಲೇಖಿಸಿದ ಮಾತ್ರದಿಂದ ಹಿಂದಿನ ಎಲ್ಲ ವಿಧದ ಶಂಕೆಗಳು ಹೇಗೆ ಪರಿಹಾರವಾಗುತ್ತವೆ? ಎಂಬ ಪ್ರಶ್ನೆಗೆ 'ತದ್ಧರೇರೇವ' ಎಂಬ ಅನುವ್ಯಾಖ್ಯಾನಕ್ಕೆ ಸುಧೆಯಲ್ಲಿ ಹೀಗೆ ವ್ಯಾಖ್ಯಾನಿಸಿದ್ದಾರೆ --ತತ್ = ಗಾಯತ್ರೀಪದವು ಹರೇರೇವ = ಹರಿಯನ್ನೇ ಪ್ರತಿಪಾದಿಸುತ್ತದೆ. ಅಥವಾ ತತ್ = ಗಾಯತ್ರೀಪದಪ್ರವೃತ್ತಿನಿಮಿತ್ತವು ಹರೇರೇವ = ಹರಿಯಲ್ಲಿಯೇ ಇರುತ್ತದೆ. ಅಥವಾ ತತ್ = ಅನ್ಯಗತವಾದ ಪ್ರವೃತ್ತಿನಿಮಿತ್ತವು ಹರೇರೇವ = ಶ್ರೀಹರಿಯ ಆಧೀನವೇ ಆಗಿದೆ ಎಂಬುದಾಗಿ ಮೂರು ಬಗೆಯಲ್ಲಿ ವ್ಯಾಖ್ಯಾನಿಸಿದ್ದಾರೆ. ಈ ಮೂರು ಅರ್ಥಗಳನ್ನು ಅಭಿವ್ಯಕ್ತಿಗೊಳಿಸುತ್ತಾ ಸ್ಮೃತಿಯನ್ನು ಉದಾಹರಿಸುವ ಅಭಿಪ್ರಾಯವನ್ನು ''ಗಾಯತ್ರೀಶ್ರುತೇಃ'' ಎಂಬ ಮಾತಿನಿಂದ ವ್ಯಾಖ್ಯಾನಿಸುತ್ತಿದ್ದಾರೆ. ''ಶ್ರುತ್ಯುಕ್ತ್ಯಾ'' ಎಂಬ ಪದಕ್ಕೆ ಗಾಯತಿ ತ್ರಾಯತಿ ಎಂಬ ಶ್ರುತಿಯ ಮಾತಿನಿಂದ ಎಂದರ್ಥ. ಗಾಯತ್ರೀಪದ ಪ್ರವೃತ್ತಿನಿಮಿತ್ತವು ಗಾಯತ್ರೀಸ್ವಭಾವವಾದ್ದರಿಂದ ಅದು ಈಶಾಧೀನವಾದರೆ ಗಾಯತ್ರೀಪದವು ಈಶನಲ್ಲಿ ಸಿದ್ಧವಾಗುತ್ತದೆ. ಆದ್ದರಿಂದ ''ಗಾಯತ್ರ್ಯಾಃ'' ಎಂದಷ್ಟೇ ಹೇಳಿದ್ದಾರೆ.

ಅಧಿವೇದಗತವಾದ ಸಕಲವಿಧಶಬ್ದಗಳನ್ನು ಭಗವದ್ವಿಷಯಕವೆಂದು ನಿರವಕಾಶಲಿಂಗಗಳಿಂದ ಸಾಧಿಸಬೇಕೆಂದು ನ್ಯಾಯವಿವರಣದಲ್ಲಿ ಹೇಳಲಾಗಿದೆ. ನ್ಯಾಯವಿವರಣದ ಆ ಮಾತನ್ನೇ ''ಲಿಂಗಸ್ಯ'' ಎಂಬ ಟೀಕೆಯಲ್ಲಿ ವ್ಯಾಖ್ಯಾನಿಸಿದ್ದಾರೆ. ಟೀಕೆಯಲ್ಲಿ ''ಬಾಧೋಪಪತ್ತೇಃ'' ಎಂದಿದ್ದಾರೆ. ಅಂದರೆ ಸಂದಿಗ್ಧವಾದ ಶ್ರುತಿಲಿಂಗಗಳಿಗಿಂತ ಅಸಂದಿಗ್ಧವಾದ ಶ್ರುತಿ ಅಥವಾ ಲಿಂಗವೇ ಪ್ರಬಲವಾಗುತ್ತದೆಂಬ ನ್ಯಾಯವಿವರಣದ ಟೀಕಾಮಾತನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು.

ವಸ್ತುತಃ 'ಬಾಹುಲ್ಯಾತ್ ಶ್ರುತಿಲಿಂಗಯೋಃ' ಎಂಬ ಅನುವ್ಯಾಖ್ಯಾನ ಹಾಗೂ ಸುಧೆಯ ಮಾತಿನಂತೆ 'ಅತೋ ಜ್ಯಾಯಾಂಶ್ಚ ಪುರುಷಃ' 'ಯದ್ ವೈ ತದ್ ಬ್ರಹ್ಮ' 'ಏತಾಮೇವ ಬ್ರಹ್ಮೋಪನಿಷದಂ ವೇದ' ಇತ್ಯಾದಿಯಾಗಿ ಅನೇಕವಾದ ಪುರುಷ ಹಾಗೂ ಬ್ರಹ್ಮಶ್ರುತಿಗಳು ಮತ್ತು ಹಿಂದೆ ಹೇಳಲ್ಪಟ್ಟ ಲಿಂಗಗಳು ಬಹಳವಾಗಿ ಕೇಳಿಸುತ್ತಿರುವುದರಿಂದ ಲಿಂಗಬಾಹುಲ್ಯ ಹಾಗೂ ಶ್ರುತಿಬಾಹುಲ್ಯಗಳು ನಿರ್ಣಾಯಕವಾಗಿ

---

रित्यङ्गीकारवादः । भाष्यपौराणिकरूढेरप्युक्तत्वादिति ज्ञेयम् ॥

– (भूतादिपादव्यपदेशात्- सूत्रटिप्पण्यां भावबोधकाराः).

ಇರುತ್ತವೆ. ನಿರವಕಾಶತ್ವವನ್ನು ಪ್ರತ್ಯೇಕವಾಗಿ ಶ್ರುತಿಲಿಂಗಗಳಲ್ಲಿ ಹೇಳಬೇಕಾಗಿಲ್ಲ. ಆದರೂ ಸಹ ('ಅನನ್ಯಥಾಸಿದ್ಧಲಿಂಗೈರ್ಭಗವದ್ವಿಷಯತ್ವಮೇವ') ಬಾಹುಲ್ಯದ ಜೊತೆಗೆ ನಿರವಕಾಶತ್ವವನ್ನೂ ಹೇಳಿದಾಗ ಶ್ರುತಿ ಹಾಗೂ ಲಿಂಗಗಳು ಭಗವದ್ವಿಷಯಕವೇ ಆಗಿವೆ ಎಂದು ನಿರ್ಣಯವಾಗುತ್ತದೆ. ಈ ಸ್ವಾರಸ್ಯವನ್ನು ವಿವಕ್ಷಿಸಿ ಲಿಂಗಕ್ಕೆ ನಿರವಕಾಶತ್ವವನ್ನು ಹೇಳುವ ಮೂಲಕವೇ ನಿರ್ಣಯವನ್ನು ಮಾಡುತ್ತಿದ್ದಾರೆ.

'ತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪುರುಷಃ' ಎಂಬುದಾಗಿ ನ್ಯಾಯವಿವರಣದಲ್ಲಿ ಶ್ರುತಿಸಹಿತವಾದ ಲಿಂಗವನ್ನು ಪ್ರಮಾಣವನ್ನಾಗಿ ಹೇಳಿದ್ದು ಅಭ್ಯುಚ್ಚಯಯುಕ್ತಿ (ಹೆಚ್ಚುಗಾರಿಕೆಯ ಯುಕ್ತಿ) ಎಂದು ತಿಳಿಯಬೇಕು.

(भा) अत्रानुभाष्ये **'तादृशत्वाच्च तच्छक्तेः'** इति युक्तेरेवोक्तत्वात् समयपादीयानुभाष्योक्तां श्रुतिं स्वयमाह – **स्वभावेति** ॥ उक्तं च गीताभाष्ये – अनादौ च तत्सिद्धं **'द्रव्यं कर्म च'** इत्यादाविति द्वितीये । कर्माणि धर्माधर्मव्यक्तयः क्रियापरिस्पन्दः श्रुतिर्वेदः, अस्मिन्नर्थे **'तादृशत्वाच्च तच्छक्तेः'** इत्यनुभाष्यसुधयोरुक्ता युक्तिरपि । चन्द्रिकायाम् –

**अनादीनां गुणादीनां यथा गुण्यादितन्त्रता ।**
**तथानादिश्रुतेरस्तु क्षेमायेश्वरतन्त्रता ॥**

इत्यादिना विवृता । अत्र वेदस्यानादिनित्यत्वं नाम पुराणादेरिवानियतानुपूर्वीकत्वाभावादिरूपं ध्येयम् । **'आम्नायोऽनन्यथापाठात्'** इति स्मृतेः । **'सर्वज्ञत्वादीश्वरस्य तद्बुद्धौ सर्वदा प्रतीयमानत्वात्'** इति तत्वनिर्णयोक्तरीत्या विष्णुबुद्धिगतत्वमपेक्ष्य **'नित्या वेदाः'** इत्यादितत्वसङ्ख्यानटीकायां **'नित्यत्वं नाम कूटस्थतया आद्यन्तशून्यत्वम्'** इत्युक्तावपि **'नित्या वेदाः समस्ताश्च शाश्वता विष्णुबुद्धिगाः'** इत्येतत् तत्वनिर्णयटीकायां **'न हि वयं वेदस्य कूटस्थनित्यतां ब्रूमः'** इति क्रमस्य कृतकत्वेऽपीति चोक्त्या नित्यविभूनां वर्णानाम् उच्चारणाधीनक्रमविशेषविशिष्टानामेव वेदत्वेन वर्णादिवन्मुख्यतोऽनादिनित्यत्वाभावात् ।

भाष्ये स्मृतिशेषोक्तेः फलमाह – **अत्र देवलोकेति** ॥ पूर्वनयवाक्यस्थाग्नीत्यर्थः । पृथिव्यादीत्यादिपदेन ज्योतिःशब्दो वान्तर्नयोक्तेन्द्रादिशब्दो वा ग्राह्यः ॥२५॥

ಈ ಪ್ರಕರಣದ ಅನುವ್ಯಾಖ್ಯಾನದಲ್ಲಿ 'ತಾದೃಶತ್ವಾಚ್ಚ ತಚ್ಛಕ್ತೇಃ' ಎಂಬುದಾಗಿ ಯುಕ್ತಿಯನ್ನಷ್ಟೇ ಹೇಳಿದ್ದಾರೆ. ಆದರೆ ಸಮಯಪಾದದಲ್ಲಿ ಈ ವಿಷಯವು ಪ್ರಸಕ್ತವಾದಾಗ ಶ್ರುತಿಯನ್ನು ಹೇಳಿದ್ದಾರೆ. ಅದನ್ನೇ ಇಲ್ಲಿ "ಸ್ವಭಾವಜೀವಕರ್ಮಾಣಿ' ಎಂದು ಟೀಕೆಯಲ್ಲಿ ಉಲ್ಲೇಖಿಸುತ್ತಿದ್ದಾರೆ. ಮತ್ತು

ಗೀತಾಭಾಷ್ಯದಲ್ಲಿಯೂ 'ಅನಾದೌ ಚ ತತ್ಸಿದ್ಧಂ ದ್ರವ್ಯಂ ಕರ್ಮ ಚ' ಇತ್ಯಾದಿಯಾಗಿ ಎರಡನೆ ಅಧ್ಯಾಯದಲ್ಲಿ ಹೇಳಿದ್ದಾರೆ. ಈ ಶ್ಲೋಕದಲ್ಲಿರುವ ಕರ್ಮಾಣಿ ಎಂಬ ಪದಕ್ಕೆ ಧರ್ಮ ಹಾಗೂ ಅಧರ್ಮಗಳು ಎಂದರ್ಥ. ಕ್ರಿಯಾ ಎಂಬ ಪದಕ್ಕೆ ಚಲನೆ ಎಂದರ್ಥ. ಶ್ರುತಿಃ ಎಂದರೆ ವೇದವೆಂದರ್ಥ. ಈ ಅರ್ಥದಲ್ಲಿ 'ತಾದೃಶತ್ವಾಚ್ಚ ತಚ್ಛಕ್ತೇಃ' ಎಂಬ ಅನುಭಾಷ್ಯ ಹಾಗೂ ಸುಧೆಗಳಲ್ಲಿ ಹೇಳಿದ ಯುಕ್ತಿಗಳನ್ನೂ ಸಹ ಸೇರಿಸಿಕೊಳ್ಳಬೇಕು. ಇದನ್ನು ಚಂದ್ರಿಕೆಯಲ್ಲಿ

> ಅನಾದೀನಾಂ ಗುಣಾದೀನಾಂ ಯಥಾ ಗುಣ್ಯಾದಿತಂತ್ರತಾ ।
> ತಥಾನಾದಿಶ್ರುತೇರಸ್ತು ಕ್ಷೇಮಾಯೇಶ್ವರತಂತ್ರತಾ ॥

''ಅನಾದಿಯಾದ ಗುಣಗಳು ಗುಣಿಯ ಅಧೀನವಾಗಿರುವುದು ಕಂಡಿದೆ. ಅದರಂತೆ ಶ್ರುತಿಯು ಅನಾದಿಯಾದರೂ ಸಹ ತನ್ನ ಕ್ಷೇಮಕ್ಕೋಸ್ಕರ ಈಶ್ವರಾಧೀನವಾಗಿದೆ'' ಇತ್ಯಾದಿಯಾಗಿ ವಿವರಿಸಿದ್ದಾರೆ. ವೇದವು ಅನಾದಿನಿತ್ಯವೆಂದರೆ ಪುರಾಣಾದಿಗಳಲ್ಲಿರುವ ಅನಿಯತವಾದ ಆನುಪೂರ್ವಿಯುಳ್ಳದ್ದಲ್ಲ ಎಂದರ್ಥ. 'ಆಮ್ನಾಯೋಽನನ್ಯಥಾಪಾಠಾತ್' ಎಂಬ ಶ್ರುತಿಯೇ ಈ ಅರ್ಥಕ್ಕೆ ಆಧಾರವಾಗಿದೆ.

ಪ್ರಶ್ನೆ -- 'ಸರ್ವಜ್ಞತ್ವಾದ್ ಈಶ್ವರಸ್ಯ ತದ್‌ಬುದ್ಧೌ ಸರ್ವದಾ ಪ್ರತೀಯಮಾನತ್ವಾತ್' (ಈಶ್ವರನು ಸರ್ವಜ್ಞನಾದ್ದರಿಂದ ಅವನ ಬುದ್ಧಿಯಲ್ಲಿ ವೇದಗಳು ನಿರಂತರವಾಗಿ ಗೋಚರಿಸುತ್ತಿವೆ) ಎಂಬ ತತ್ತ್ವನಿರ್ಣಯದ ಮಾತಿನಂತೆ ವಿಷ್ಣುಬುದ್ಧಿಗತತ್ವವನ್ನು ವಿವಕ್ಷಿಸಿ 'ನಿತ್ಯಾ ವೇದಾಃ ಸಮಸ್ತಾಶ್ಚ' ಎಂಬ ತತ್ತ್ವಸಂಖ್ಯಾನದ ಟೀಕೆಯಲ್ಲಿ ನಿತ್ಯತ್ವಪದಕ್ಕೆ 'ನಿತ್ಯತ್ವಂ ನಾಮ ಕೂಟಸ್ಥತಯಾ ಆದ್ಯಂತಶೂನ್ಯತ್ವಂ' ಎಂದು ಹೇಳಿದ್ದಾರೆ ಹೊರತು ಇಲ್ಲಿ ಹೇಳುತ್ತಿರುವಂತೆ 'ಅನಿಯತಆನುಪೂರ್ವೀಕತ್ವಾಭಾವಾತ್' ಎಂಬರ್ಥವನ್ನು ಹೇಳಿರುವುದಿಲ್ಲವೇ?

ಉತ್ತರ - ಹೌದು. ಆದರೆ 'ನಿತ್ಯಾವೇದಾ ಸಮಸ್ತಾಶ್ಚ ಶಾಶ್ವತಾ ವಿಷ್ಣುಬುದ್ಧಿಗಾಃ' ಎಂಬ ತತ್ತ್ವನಿರ್ಣಯವನ್ನು ವ್ಯಾಖ್ಯಾನ ಮಾಡುವಾಗ ಟೀಕೆಯಲ್ಲಿ 'ನ ಹಿ ವಯಂ ವೇದಸ್ಯ ಕೂಟಸ್ಥನಿತ್ಯತಾಂ ಬ್ರೂಮಃ' , 'ಕ್ರಮಸ್ಯ ಕೃತಕತ್ವೇಪಿ' ಇತ್ಯಾದಿಯಾಗಿ ಹೇಳಿದ್ದಾರೆ. ವರ್ಣಗಳೆಲ್ಲವೂ ನಿತ್ಯವಾದ ವಿಭುಪದಾರ್ಥಗಳು. ಉಚ್ಚಾರಣೆಯಿಂದಷ್ಟೇ ಇವುಗಳಲ್ಲಿ ಕ್ರಮವು ಉಂಟಾಗಲು ಸಾಧ್ಯ. ಉಚ್ಚಾರಣಾಧೀನವಾದ ಕ್ರಮವಿಶೇಷವಿಶಿಷ್ಟವಾದದ್ದೇ ವೇದ ಎನಿಸುತ್ತದೆ. ಉಚ್ಚಾರಣೆಯು ಕೃತಕವಾದ್ದರಿಂದ ಉಚ್ಚಾರಣಾಧೀನಕ್ರಮವಿಶೇಷವಿಶಿಷ್ಟವಾದ ವೇದವನ್ನೂ ಸಹ ಕೃತಕವೆಂದೇ ಹೇಳಬೇಕಾಗುತ್ತದೆ. ಆದ್ದರಿಂದ ನಿತ್ಯವಿಭುಪದಾರ್ಥಗಳೆನಿಸಿದ ವರ್ಣಗಳಲ್ಲಿ ಯಾವ ರೀತಿಯಾದ ಅನಾದಿನಿತ್ಯತ್ವವಿದೆಯೋ ಅದೇ ರೀತಿಯಾದ ಅನಾದಿನಿತ್ಯತ್ವವನ್ನು ವೇದಕ್ಕೆ ಹೇಳಲು ಸಾಧ್ಯವೇ ಇಲ್ಲ. ಆದರೂ ಸಹ ಎಲ್ಲೆಡೆ ವೇದವನ್ನು ಅನಾದಿನಿತ್ಯವೆನ್ನುತ್ತಾರೆ. ಅದರರ್ಥ ಅನಿಯತಆನುಪೂರ್ವೀಕತ್ವಾಭಾವ ಎಂದೇ ಹೇಳಬೇಕು. ಅಂದರೆ ಯಾವುದೇ ಕಾಲದಲ್ಲಿಯೂ ಭಗವಂತನು ವೇದಗಳಲ್ಲಿರುವ ಆನುಪೂರ್ವಿಯನ್ನು ವ್ಯತ್ಯಾಸಮಾಡಲಾರ. ಈ ಅಭಿಪ್ರಾಯದಿಂದಲೇ ವೇದವನ್ನು ಅಪೌರುಷೇಯವೆನ್ನುತ್ತಾರೆ.

ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಶೇಷದ ಫಲವನ್ನು ''ಅತ್ರ ದೇವಲೋಕಪದಾಭ್ಯಾಂ'' ಎಂಬುದಾಗಿ ತೋರಿಸುತ್ತಿದ್ದಾರೆ. ಹಿಂದಿನ ಅಧಿಕರಣದ ವಿಷಯವಾಕ್ಯದಲ್ಲಿರುವ ಅಗ್ನಿಯನ್ನು ವಿವಕ್ಷಿಸಬೇಕು.

'ಪೃಥಿವ್ಯಾದಿ' ಎಂಬಲ್ಲಿರುವ ಆದಿಪದದಿಂದ ಜ್ಯೋತಿಶಬ್ದವನ್ನು ವಿವಕ್ಷಿಸಬಹುದು ಅಥವಾ ಅಂತರಧಿಕರಣದಲ್ಲಿ ಸಮನ್ವಯಗೊಳಿಸಿದ ಇಂದ್ರಾದಿಶಬ್ದವನ್ನು ವಿವಕ್ಷಿಸಬಹುದು.

वाक्यार्थमञ्जरी – ॐ छन्दोऽभिधानान्नेति चेन्न तथा चेतोऽर्पणनिगदात्तथाहि दर्शनम् ॐ ॥ 'गायत्री वा' इत्युक्तगायत्री छन्दोविशेष एव स्यात् । गायत्रीपदेन छन्दसोऽभिधानात् तस्मान्न तद् ब्रह्मेति चेन्न । किन्तु ब्रह्मैव गायत्री । कुतः? हि यस्मात् तथा दर्शनं गानत्राणकर्तृत्वलिङ्गबोधका 'गायति त्रायति च' इति श्रुतिरस्ति तस्मादित्यर्थः । विष्ण्वादिप्रसिद्धपदानि विहायाप्रसिद्धगायत्रपदेन तन्निर्देशे किं निमित्तमित्यत उक्तम् – **तथेति** ॥ तथा गानादिकर्तृत्वगुणविशिष्टतया चेतसि अन्तःकरणे अर्पणार्थं ध्यानार्थम् उपासनार्थमिति यावत् । निगदात् 'गायत्री वा इदं सर्वम्' इति कथनादित्यर्थः ॥ **अथेति** ॥ अथ द्वारपोपास्तिकथनानन्तरं पुनर्भगवन्माहात्म्यमुच्यते । यच्छ्वेतद्वीपानन्तासनवैकुण्ठगतमूर्तित्रयम्, तत् । अतः बुद्धिस्थतया विवक्षिताया दिवः परः । ज्योतिः तेजोमयं विश्वतः मेरुवैजयन्तसत्यलोकाख्यब्रह्मसदनेभ्यः पृष्ठेषु क्रमेणोच्चेषु सर्वतः भूर्भुवःस्वरात्मकसर्वलोकेभ्यः पृष्ठेषु अनुत्तमेषु न विद्यत उत्तमो लोको येभ्यस्तेषु स्वयमेवोत्तमेषु अनन्तासनश्वेतद्वीपवैकुण्ठेषु दीप्यते प्रकाशते तत्सर्वलोकेषु दीप्यमानं तेजः इदं वाव इदं खलु इदं किं यदिदमस्मिन्नन्तः पुरुषे पुरुषहृदये ज्योतिरस्ति, तदित्यर्थः ॥ **गायत्री वेति** ॥ अत्र भगवतः षड्विधरूपेषु गायत्रीनामकं स्त्रीरूपं हयशीर्षकं प्रथमरूपापेक्षया द्वितीयं रूपमुच्यते । यदिदं किञ्च भूवहौ बहुपूर्णतायामित्युक्तेः भूतं पूर्णं मत्स्यादि सर्वं सर्वान्तःस्थितं च तदिदं सर्वं गायत्रीनामा भगवानेव । एवञ्च भूतशब्दाभिधेयं मत्स्यादिसर्वान्तःस्थितं द्वितीयं रूपमित्युक्तं भवति । अस्यैव तृतीयं रूपमाह – **वागिति** ॥ गायत्रीनामा भगवान् वाग्वै वाक्संस्थो वचनाद् वाङ्नामा स्त्रीरूपो हयशीर्षाख्य एव । नतु तद्भिन्न इत्यर्थः । वाङ्नामकस्य भगवद्रूपत्वं कुत इत्यतस्तल्लक्षणयोगादित्यत आह – **वाग्वेति** ॥ इदं सर्वं प्राणिजातं वाग्वै वाङ्नामकभगवदधीनमेव । वाचा हि प्रवर्तने निवर्तते च लोकः । सर्वलोकप्रवर्तकत्वं च भगवल्लक्षणं च प्रसिद्धमेवेति ॥ **छन्दोविशेष एवेति** ॥ गायत्रीछन्दोपेतमन्त्रविशेष इत्यर्थः ॥ **वाग्विधानाच्चेति** ॥ न शब्दात्मकस्य

तत्सम्भवतीति भावः । तेजः कान्तिः । ब्रह्मवर्चसम् अध्ययनलब्धकान्तिविशेषः । तदुभयसाधनं गायत्रीत्यर्थः ॥ **योगस्येति** ॥ गायति वेदान् त्रायति चाध्यापकान् पापेभ्य इति निर्वचनादिति भाव ॥ **नित्यस्येति** ॥ अनादिनित्यस्येत्यर्थः । अन्यथोत्पत्तावीश्वराधीनत्वपरिहारात् । अत एव न्यायविवरणटीकायां वेदस्य नित्यत्वेनानादित्वादित्युक्तम् । वेदस्य नित्यत्वादनादित्वाच्चेति सुधाग्रन्थाच्च । यद्यपि कृतकक्रमविशिष्टस्य वर्णात्मकस्य वेदस्य नानादित्वम् । तथापीश्वरबुद्धिघटितस्य तथात्वेन वा कृत्वा चिन्तया वा तदुक्तिरित्यदोषः । स्वपदानि स्वोक्तपदानि । 'सूत्रार्थो वर्ण्यते यत्र पदैः सूत्रानुकत्रारिभिः । स्वपदानि च वर्ण्यन्ते भाष्यं भाष्यविदो विदुः ॥' इत्युक्तेरिति भावः ॥ **गायत्र्यादीति** ॥ गायत्र्यादिशब्दार्थो गानत्राणकर्तृत्वादिः स एव गुणस्तत्स्वरूपत्वेनेत्यर्थः। आदिपदेन **वाचो ग्रहणमिति** ॥ 'वाग् वै गायत्री' इति श्रुतौ वाकक्शब्दार्थं गुणवत्तया उपासनार्थं विष्णुर्वागित्युक्तम् । तथाच वाक्त्वविधानं न विष्णुत्वपक्षे बाधकमिति भावः ॥ **एतन्न्यायस्येति** ॥ तत्तच्छब्दसमन्वयकथनं तदर्थगुणस्वरूपत्वेनोपासनार्थमिति न्यायस्येत्यर्थः ॥ **या वै सेति** ॥ चतुर्थरूपमनेनोच्यते । या वै गायत्री तत्संस्थं तन्नामा भगवान् सा इयं वाव इयं खलु । इयं केत्यपेक्षायामाह – **योऽयमिति** ॥ पृथुत्वात् पृथिवीनामा पृथिवीसंस्थो भगवानित्यर्थः । तथाचात्र 'या वै सा' इत्यादिना गायत्र्याः पृथिव्यभेदमुक्त्वा 'अस्यां हीदं सर्वं प्रतिष्ठितम्' इति पृथिव्याः सर्वाधारत्वमुक्तम् । तच्च विष्णोरेव गायत्रीपृथिव्यादिशब्दार्थत्वं वक्तुं नान्यथेति भावः ॥ **श्रुत्युक्तेति** ॥ गायतीति श्रुत्युक्तेत्यर्थः । कर्माणि पुण्यपापानि । क्रिया चेष्टा । स्मृतिविशेषोदाहरणप्रयोजनमाह – **अत्रेति** ॥

* * * * *

ಶ್ರೀವೇದವ್ಯಾಸಪ್ರಣೀತ ಬ್ರಹ್ಮಮೀಮಾಂಸಾಶಾಸ್ತ್ರ

**(५)ॐ ॥ भूतादिपादव्यपदेशोपपत्तेश्चैवम् ॥ॐ॥२६॥**

'ಪಾದೋऽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ' ಎಂಬಲ್ಲಿ ಸಕಲ ಭೂತಗಳು ಹಾಗೂ ಅಮೃತಪದಪ್ರತಿಪಾದ್ಯವಾದ ಮೂರು ರೂಪಗಳು ಗಾಯತ್ರಿಯ ಅಂಶವೆಂದು ಹೇಳಲ್ಪಟ್ಟಿದೆ. ಇದು ವಿಷ್ಣುವಿನಲ್ಲೇ ಸಮನ್ವಯವಾಗುವುದರಿಂದ ಗಾಯತ್ರಿಯು ವಿಷ್ಣುವೇ ಆಗಿದ್ದಾನೆ.

**सूत्रदीपिका** – एवम् इत्यस्यावृत्तिः । एवं गायत्रीशब्दवाच्यं ब्रह्म इत्येवमेव युक्तम् । कुतः? एवं **भूतादिपादव्यपदेशोपपत्तेः** । 'पादोऽस्य सर्वा भूतानि त्रिपादस्यामृतं दिवि' इत्येवंरूपभूतामृतांशवत्त्वोक्तेश्च, तस्य च विष्णावेवोपपत्तेः, अन्यत्र अनुपपत्तेश्च इत्यर्थः ।

ಏವಂ ಎಂಬ ಪದವನ್ನು ಎರಡು ಬಾರಿ ಇಟ್ಟುಕೊಳ್ಳಬೇಕು. ಏವಂ = ಗಾಯತ್ರೀಶಬ್ದವಾಚ್ಯನಾದವನು ಬ್ರಹ್ಮನೇ ಆಗಿದ್ದಾನೆಂಬುದು ಯುಕ್ತವೇ ಆಗಿದೆ. ಏಕೆಂದರೆ 'ಏವಂ' = ಸಕಲಭೂತಗಳು ಹಾಗೂ ಅಮೃತಪದಪ್ರತಿಪಾದ್ಯವಾದ ಮೂರು ರೂಪಗಳು ಗಾಯತ್ರಿಯ ಅಂಶವೆಂದು 'ಪಾದೋऽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ' ಎಂಬಲ್ಲಿ ಹೇಳಲ್ಪಟ್ಟಿದೆ. ಇದು ವಿಷ್ಣುವಿನಲ್ಲೇ ಸಮನ್ವಯವಾಗುವುದರಿಂದ ಬೇರೆ ಛಂದಸ್ಸು ಮೊದಲಾದವುಗಳು ಗಾಯತ್ರ್ಯಾದಿಶಬ್ದಗಳಿಂದ ಪ್ರತಿಪಾದ್ಯಗಳಾಗುವುದಿಲ್ಲ.

## ವಿಷ್ಣುವಿನ ಮಹಾಮಹಿಮೆ

**भाष्यम् – 'तावानस्य महिमा ततो ज्यायांश्च पूरुषः ।**
**पादोऽस्य सर्वा भूतानि त्रिपादस्यामृतं दिवि'**
**(छां.३-१२-६) इति ।**

ಪುರುಷರೂಪಿಯಾದ ವಿಷ್ಣುವಿನ ಮಹಿಮೆಯು ಅಷ್ಟೇ ಅಲ್ಲ, ಹಿಂದೆ ಹೇಳಿದ ಮಹಿಮೆಗಿಂತಲೂ ಅತ್ಯಧಿಕವಾಗಿದೆ. ಚತುರ್ಮುಖಬ್ರಹ್ಮರೇ ಮೊದಲಾದ ಜಗತ್ತಿನಲ್ಲಿರುವ ಎಲ್ಲಾ ಜೀವರಾಶಿಗಳು ಪುರುಷನ ಒಂದು ಭಾಗವಾಗಿದೆ. ಇನ್ನು ಮೂರು ಭಾಗಗಳು ದ್ಯುಲೋಕದಲ್ಲಿವೆ.

ಪ್ರತಿಪದಾರ್ಥ - ಮತ್ತೊಂದು ಹೇತುವಿನಿಂದ ಗಾಯತ್ರೀಶಬ್ದಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆಂದು ಸಮರ್ಥಿಸುವುದಕ್ಕಾಗಿ ಸೂತ್ರವನ್ನು ಉಪನ್ಯಾಸಮಾಡಿ ಶ್ರುತಿಯನ್ನು ಉದಾಹರಿಸುತ್ತಿದ್ದಾರೆ.

ಅಸ್ಯ = ವಿಷ್ಣುವಿನ, ಮಹಿಮಾ = ಮಹಿಮೆಯು, ತಾವಾನ್ = ಇಷ್ಟೇ ಅಲ್ಲ. ತತಃ = ಇದಕ್ಕಿಂತಲೂ, ಪುರುಷಃ = ಪುರುಷಶಬ್ದವಾಚ್ಯನು, ಜ್ಯಾಯಾನ್ = ಹೆಚ್ಚು

ಮಹಿಮೆಯುಳ್ಳವನು. ಅಸ್ಯ = ಈ ಪುರುಷನ, ಪಾದಃ = ನಾಲ್ಕನೆಯ ಒಂದು ಭಾಗವು, ಸರ್ವಾ ಭೂತಾನಿ = ಚತುರ್ಮುಖಬ್ರಹ್ಮದೇವರೇ ಮೊದಲಾದ ಸಮಸ್ತಜೀವರಾಶಿಗಳು; ಅಸ್ಯ = ಈ ಪುರುಷನ, ಅಮೃತಂ = ನಾಶರಹಿತವಾದ, ತ್ರಿಪಾತ್ = ಉಳಿದಮೂರು ಭಾಗಗಳು, ದಿವಿ = ಶ್ವೇತದ್ವೀಪ, ಅನಂತಾಸನ ವೈಕುಂಠಗಳೆಂಬ ಮೂರು ದ್ಯುಲೋಕಗಳಲ್ಲಿವೆ. ಇತಿ ಹೀಗೆ ಛಾಂದೋಗ್ಯೋಪನಿಷತ್ತು ವರ್ಣಿಸಿದೆ.

**तत्वप्रकाशिका –**

**हेत्वन्तरेणापि गायत्र्या विष्णुत्वं (साधयत्सू)समर्थयत्सूत्रमुपन्यस्य तद्गृहीत-श्रुतिमेवोदाहरति – भूतादीति ॥ 'सैषा चतुष्पदा षड्विधा गायत्री' इति गायत्र्याः प्रागुक्तषड्विधत्वमनूद्य चतुष्पदत्वं व्यपदिश्य तत्रैव पुरुषसूक्तमन्त्रः संवादायो-**

---

भाष्यदीपिका –

ॐ ॥ भूतादिपादव्यपदेशोपपत्तेश्चैवम् ॥ ॐ ॥२६॥

हेत्वन्तरेणापि गायत्र्याः विष्णुत्वं साधयत् सूत्रमुपन्यस्य तद्गृहीतां श्रुतिमुदाहरति – भूतादीति । इतिशब्दस्य भूतादीत्यनेनान्वयः ॥ सूत्रे भूतं विश्वमादिः प्रथमोद्दिष्टं येषु ते भूतादयः, ते पादाः यस्य गायत्रीपदार्थस्य स भूतादिपादः, तस्य व्यपदेशः तत्प्रतिपादकं वाक्यं तस्योपपत्तेः युक्तत्वादिति विग्रहः । पादशब्दो भावप्रधानः । अत एव भूतादिपादत्वस्येत्युक्तं टीकायाम् । एवमित्यस्य चोभयत्रान्वयः । तथा च 'पादोऽस्य सर्वा भूतानि । त्रिपादस्यामृतं दिवि' इत्येवं गायत्र्याः भूतादिशब्दगृहीतामृताख्यांश-चतुष्टवत्त्वोपदेशात् तस्य च विष्णावेवोपपत्तेरन्यत्रानुपपत्तेरेव गायत्रीशब्दवाच्यो विष्णुरेव भवेदित्यर्थः । चशब्दस्य व्यपदेशपदेनान्वये गायत्र्या विष्णुत्वे साध्ये पूर्वसूत्रे दर्शनपदोक्तहेतोः एतत्सूत्रोक्तहेतुद्वयस्य च समुच्चये सः । यथाश्रुतान्वये तु भूतादिपादत्वस्य विष्णुलिङ्गत्वं न केवलं विष्णोरेवोपपत्तेः सिद्धम्, किन्तु पुरुषसूक्तोक्तत्वाच्चेति हेतुसमुच्चये स इति ज्ञेयम् ॥

छान्दोग्ये हि 'सैषा चतुष्पदा षड्विधा गायत्री' (छा.३-१२-५) इति वाक्येन येषा षड्विधा गायत्री सा चतुष्पदेत्येवं गायत्रीनामकस्य भगवतः प्रागुक्तगायत्रीभूत-वाक्पृथिवीशरीरहृदयलक्षणषड्विधत्वमनूद्य अंशचतुष्टयवत्त्वरूपं चतुष्पादत्वं विधाय स्वोक्तार्थ एव पुरुषसूक्तमन्त्रः समाख्यारूपत्वेनोदाहृतो ब्राह्मणेन 'तदेतदृचाऽ-भ्यनूक्तम्' (छां. ३-१२-५) इति 'तदेतत्' भगवतश्चतुष्पादत्वं 'ऋचा' ऋङ्मन्त्रेण 'अभि' निश्शङ्कं स्पष्टम् 'अनु' आनुकूल्येनोक्तमित्यर्थः ॥

किमुक्तमित्यतस्तन्मन्त्रं पठति – तावानिति ॥ यद्यपि ऋचि 'एतावान्' इति 'विश्वा'

**दाह्वियते; तदेतद् ऋचाभ्यनूक्तं – तावानस्य' इति । अस्य (*)पुरुषस्य तावन् पूर्वोक्तो महिमा न केवलमेतावान् किन्तु पुरुषः ततः पूर्वोक्तादपि महिम्नो ज्यायान् ।**

**कथं सर्वाणि भूतान्यस्यैकः पादः । अस्यामृतं स्वरूपभूतं पादत्रयं दिवि तिष्ठतीत्येवं गायत्र्या भूतादिपादव्यपदेशाच्च सा विष्णुर्भवेत् । भूतादिपादव्यपदेशस्य विष्णावेवोपपत्तेरन्यत्रानुपपत्तेश्चेति भावः ।**

इति च पाठः । तथाऽपि शाखान्तरपाठोऽयमित्यदोषः । 'अस्य' पुरुषस्य 'पुरुष एवेदं सर्वम्' (तै.आ. ३-१२.) इत्यृचा यः सर्वेशानत्वादिरूपः तावान् महिमोक्तः, न केवलमेतावान्, किन्तु, पुरुषः 'ततः' पूर्वोक्तादपि महिम्नो 'ज्यायान्' अधिकमाहात्म्योपेत इत्यर्थः । ज्यायस्त्वमेव दर्शयति – पादोऽस्येत्यादिना ॥ 'सर्वा भूतानि' सर्वं विश्वम् 'अस्य' विष्णोरेकः 'पादः' पादवत् पादो भिन्नांशः ॥
यद्यपि तत्त्वप्रदीपे – विश्वभूतविधिर्भाति । तथाऽपि टीकायां सर्वाणि भूतान्यस्यैकः पाद इति पादविधानदर्शनात्; चन्द्रिकायां 'पश्वेकत्ववत् विधेयगतत्वात् पादैकत्वं विवक्षितम्' इत्युक्तत्वाच्च, तत्त्वप्रदीपोऽप्येवमेव व्याख्येयः । अस्य 'अमृतं' नाशरहितम् अत एव स्वरूपभूतं 'त्रिपात्' त्रयाणां पादानाम् अंशानां समुदायो नारायणवासुदेववैकुण्ठसञ्ज्ञं त्रिषु रूढ्या द्योतमानत्वाच्च द्युशब्दवाच्येषु श्वेतद्वीपानन्तासनवैकुण्ठेषु तिष्ठतीति ऋचोक्तमित्यर्थः ॥
यद्यपि भूतशब्दो 'भिन्नपादः सर्वजीवाः' इति छान्दोग्यभाष्ये जीवपरतया व्याख्यातः । तथाऽपि 'सुवर्णम्' इति श्रुत्यनुसारेणात्र विश्वार्थतया व्याख्यातव्यः ॥

(*) 'पुरुष एवेदम्' इत्यृचा यद्विष्णोः सर्वेशानत्वमुक्तं तद्धि तावत् तावानिति परामृश्यते । न च तावानेव केवलमस्य महिमा, किन्तु ततोऽपि ज्यायानयं पुरुषः । अस्य ह्येकः पादः सर्वाणि भूतानि, त्रयोऽनन्तासनवैकुण्ठक्षीराब्धिषु दिवि स्थितेषु द्योतमानेषु । त्रयाणां पादानां समुदायस्त्रिपात् । स्वरूपांशत्वात्तदमृतमित्युक्तम्, भिन्नांशविवक्षया भूतपादोक्तिः ।
**त्रिभिः स्वरूपपादैश्च भिन्नेनैकेन चैव हि ।**
**गायत्रीनामको विष्णुश्चतुष्पात् सम्प्रकीर्तितः ।**
**भिन्नपादः सर्वजीवास्तस्याः सादृश्यमात्रतः ।**
**स्वरूपपादा विष्णोस्तु त्रयो हि दिवि संस्थिताः ॥ इति सत्तत्वे – तत्वप्रदीपिका**

ಗಾಯತ್ರೀಶಬ್ದಪ್ರತಿಪಾದ್ಯನು ವಿಷ್ಣುವೇ ಆಗಿದ್ದಾನೆಂಬುದನ್ನು ಮತ್ತೊಂದು ಕಾರಣದಿಂದ ಸಮರ್ಥಿಸುವುದಕ್ಕಾಗಿ ಸೂತ್ರವನ್ನು ಪಠಿಸುತ್ತಿದ್ದಾರೆ. ಮತ್ತು ಆ ಸೂತ್ರದಿಂದ ತಿಳಿಯಲ್ಪಡುವ ಶ್ರುತಿಯನ್ನೇ ''ಭೂತಾದಿ'' ಇತ್ಯಾದಿ ವಾಕ್ಯದಿಂದ ಉದಾಹರಿಸುತ್ತಿದ್ದಾರೆ.

'ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ' (ಗಾಯತ್ರಿಯು ನಾಲ್ಕುಪಾದಗಳಿಂದ ಕೂಡಿದೆ; ಮತ್ತು ಆರುವಿಧವಾಗಿದೆ) ಹೀಗೆ ಗಾಯತ್ರಿಯಲ್ಲಿ ಹಿಂದೆ ಹೇಳಿದ ಷಡ್ವಿಧತ್ವವನ್ನು ಅನುವಾದ ಮಾಡಿ, ಚತುಷ್ಪದತ್ವವನ್ನು ಹೇಳುತ್ತಿದ್ದಾರೆ. ಈ ವಿಷಯದಲ್ಲಿ ಪುರುಷಸೂಕ್ತಮಂತ್ರವನ್ನು ಸಂವಾದಿಪ್ರಮಾಣವನ್ನಾಗಿ ಉದಾಹರಿಸುತ್ತಿದ್ದಾರೆ. 'ತದೇತದ್ ಋಚಾಭ್ಯನೂಕ್ತಂ ತಾವಾನಸ್ಯ' ಎಂಬುದಾಗಿ. ಇದರ ಅರ್ಥ ಹೀಗಿದೆ — ಅಸ್ಯ = ಈ ಪುರುಷನಿಗೆ, ತಾವಾನ್ = ಹಿಂದೆ ಹೇಳಿದ ಮಹಿಮೆಯಷ್ಟೇ ಇರುವುದಲ್ಲ, ಹೊರತಾಗಿ ಪುರುಷನು, ತತಃ = ಹಿಂದೆ ಹೇಳಿದ ಮಹಿಮೆಗಿಂತಲೂ ಜ್ಯಾಯಾನ್ = ಶ್ರೇಷ್ಠನಾಗಿದ್ದಾನೆ.

ವಿಷ್ಣುವಿಗೆ ಸಕಲಭೂತಗಳು ಒಂದು ಅಂಶ ಹೇಗಾಗುತ್ತವೆ? ಎಂದರೆ ಅವನ ಅಮೃತಸ್ವರೂಪವಾದ ಮೂರು ಪಾದಗಳು ದ್ಯುಲೋಕದಲ್ಲಿರುತ್ತವೆ. ಹೀಗೆ ಗಾಯತ್ರಿಗೆ ಭೂತಾದಿಪಾದವ್ಯಪದೇಶವನ್ನು ಹೇಳಿರುವುದರಿಂದ ಗಾಯತ್ರೀಶಬ್ದವಾಚ್ಯನು ವಿಷ್ಣುವೇ ಆಗಬೇಕು. ಏಕೆಂದರೆ, ಸರ್ವಭೂತಗಳು ಒಂದಂಶವೆಂದರೆ ಅದು ವಿಷ್ಣುವಿನಲ್ಲೇ ಕೂಡುತ್ತದೆ. ಗಾಯತ್ರೀಛಂದಸ್ಸಿನಲ್ಲಿ ಕೂಡುವುದಿಲ್ಲವೆಂದು ತಿಳಿಯಬೇಕು.

भावदीपः –

ॐ भूतादिपादव्यपदेशोपपत्तेश्चैवम् ॐ ॥ **समर्थयदिति** ॥ 'अर्थ याच्ञायाम्' इति चौरादिकस्यात्मनेपदित्वेन समर्थयमानं सूत्रमिति वक्तव्येऽपि 'चक्षिङ् व्यक्तायां वाचि' इत्यस्यानुदात्तत्वेन आत्मनेपदसिद्धौ ङित्वोक्तेरनुदात्तेत्त्वनिबन्धनं कार्यमनित्यमिति ज्ञापनार्थं 'प्रार्थयन्ति शयनोत्थितं प्रिया' इति रघुवंशादौ प्रयोगश्चेत्यादेः धातुवृत्तावेवोक्त्या समर्थयदिति साधु । एवमग्रेऽपि । 'साधयत्' इति क्वचित्पाठः । तदा तु न क्लेशः ।

भाष्योक्तमन्त्रस्य गायत्रीविषयत्वसूचनाय सङ्गतिमाह – **सैषेति** ॥ **षड्विधत्वमिति** ॥ 'गायत्री वा इति इदं सर्वं भूतम्' इति, 'वाग् वै गायत्री' इति 'येयं पृथिवी' इति, 'यदिदमस्मिन् शरीरम्' इति, 'यदिदमस्मिन् हृदयम्' इति गायत्रीभूतवाक्पृथिवीशरीरहृदयभेदेन गायत्रीशब्दितस्य वस्तुतः स्वात्मना सहोक्तषाड्विध्यमनूद्येत्यर्थः । अनेन श्रुतौ – 'सैषा षड्विधा गायत्री वक्ष्यमाणदिशा

चतुष्पदा' इति योजना न तु परमत इव भूतपृथिवीशरीरहृदयरूपचतुष्पदा इत्यनुवादः - इति सूचितम् ।

'इति' शब्दान्तभाष्यस्यार्थोक्तिपूर्वं सौत्रैवंशब्दार्थविवरणपरत्वं तस्य स्फोरयन् सूत्रेणान्वयमाह – **अस्येत्यादिना** ॥ इत्यन्तभाष्यस्यानुवादपूर्वं तद्व्याख्येयं सौत्रैवंपदमनुवदति – **इत्येवमिति** ॥ एतेन सौत्रैवंशब्दो यथान्यासतया गायत्री विष्णुर्भवेदिति प्रतिज्ञापकः सन्नपि, व्यपदेशे प्रकारार्पकतयाप्येवंभूतादीति हेतुनाप्यन्वेतीति दर्शितम् ।

तथा चायमर्थः – एवं **'तावानस्य महिमा'** इति मन्त्रोक्तप्रकारेण भूतादि-पादव्यपदेशादेवं गायत्री विष्णुर्भवेदिति । यथा **'त्रयाणामेव चैवमुपन्यासः प्रश्नश्च'** इत्यत्रैवंशब्दस्त्रयाणां मध्ये प्रधानस्योपन्यासो न इति वक्तुम् उपन्यासप्रकारोक्त्यर्थः, तथाऽत्रापि पराभिप्रेतभूतपृथिव्यादिपादोपदेशव्यावृत्त्यर्थः - इति ।

**व्यपदेशाच्चेति** ॥ न केवलं गानत्राणकर्तृत्वश्रवणादिति चार्थः । 'उपपत्तेः' इत्येतद्भूतादिपादत्वरूपलिङ्गस्य निरवकाशत्वोपपादकमिति व्याकरिष्यन् **व्यपदेशाच्च** इति विच्छिद्य व्याचख्यौ । 'उपपत्तेः' इत्युक्तिलब्धमाह – **अन्यत्रानुपपत्तेश्चेति** ॥

ಪ್ರಶ್ನೆ -- ಟೀಕೆಯಲ್ಲಿ "ಸಮರ್ಥಯತ್" ಎಂಬ ಪ್ರಯೋಗವು ಕಾಣಿಸುತ್ತಿದೆ. ಇದು ಹೇಗೆ ಸರಿ? ಏಕೆಂದರೆ 'ಅರ್ಥ ಯಾಂಚಾಯಾಮ್' ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ಚುರಾದಿಗಣದಲ್ಲಿ ಸೇರಿರುವುದರಿಂದ ಆತ್ಮನೇಪದಿಯಾಗಬೇಕು. ಆವಾಗ ಸಮರ್ಥಯಮಾನಂ ಎಂದೇ ಆಗುತ್ತದೆ ಹೊರತು ಸಮರ್ಥಯತ್ ಎಂದಾಗುವುದಿಲ್ಲವಲ್ಲವೇ?

ಉತ್ತರ -- ಹೌದು, ಆದರೆ ಇಲ್ಲಿ ಕೇಳಿಸುತ್ತಿರುವ ಸಮರ್ಥಯತ್ ಎಂಬ ಪದವು ಚಕ್ಷಿಙ್ ವ್ಯಕ್ತಾಯಾಂ ವಾಚಿ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಇದು ಅನುದಾತ್ತವಾದ್ದರಿಂದ ಆತ್ಮನೇಪದವೆಂದು ಸಿದ್ಧವಾಗುತ್ತದೆ. ಆದ್ದರಿಂದ 'ಙಿತ್ತ್ವವನ್ನು ಹೇಳಲು ಅನುದಾತ್ತತ್ವವೇ ಕಾರಣವೆಂದು ತಿಳಿಯಬೇಕು. ಆದ್ದರಿಂದ 'ಪ್ರಾರ್ಥಯಂತಿ ಶಯನೋತ್ಥಿತಂ ಪ್ರಿಯಾಃ' ಇತ್ಯಾದಿಯಾಗಿ ರಘುವಂಶದಲ್ಲಿ ಪ್ರಾರ್ಥಯಂತಿ ಇತ್ಯಾದಿಯಾದ ಪ್ರಯೋಗಗಳನ್ನು ಮಾಡಲಾಗಿದೆ ಎಂಬುದಾಗಿ ಧಾತುವೃತ್ತಿಯಲ್ಲೇ ಹೇಳಿದ್ದಾರೆ. ಆದ್ದರಿಂದ ಇಲ್ಲಿ ಸಮರ್ಥಯತ್ ಎಂಬ ಪಾಠವು ಸಾಧುವೇ ಆಗಿದೆ. ಇದರಂತೆ ಮುಂದೆಯೂ ಸಹ ತಿಳಿಯಬೇಕು.

ಕೆಲವು ಪುಸ್ತಕಗಳಲ್ಲಿ ಸಾಧಯತ್ ಎಂಬ ಪಾಠವು ಕಾಣಿಸುತ್ತಿದೆ. ಈ ಪಕ್ಷದಲ್ಲಂತೂ ಯಾವುದೇ ಕ್ಲೇಶವಿಲ್ಲ.

(೨) ಭಾಷ್ಯದಲ್ಲಿ ಉದಾಹರಿಸಿದ ಮಂತ್ರವು ಗಾಯತ್ರೀವಿಷಯಕವಾಗಿದೆ ಎಂಬುದನ್ನು ಸೂಚಿಸುವುದಕ್ಕಾಗಿ 'ಸೈಷಾ'' ಇತ್ಯಾದಿ ಟೀಕಾ ಮಾತಿನಿಂದ ಸಂಗತಿಯನ್ನು ತೋರಿಸುತ್ತಿದ್ದಾರೆ. ಟೀಕೆಯಲ್ಲಿ ಹೇಳಲ್ಪಟ್ಟ ಷಡ್‌ವಿಧತ್ವವನ್ನು ಹೀಗೆ ತಿಳಿಯಬೇಕು. 'ಗಾಯತ್ರೀ ವಾ' ಎಂದು ಗಾಯತ್ರಿಯನ್ನು, 'ಇದಂ ಸರ್ವಂ ಭೂತಮ್' ಎಂದು ಭೂತವನ್ನು, 'ವಾಗ್ವೈ ಗಾಯತ್ರೀ' ಎಂಬುದಾಗಿ ವಾಕ್ ಎಂದು, 'ಯೇಯಂ ಪೃಥಿವೀ' ಎಂಬುದಾಗಿ ಪೃಥಿವಿ ಎಂದು, ಯದಿದಮ್ ಅಸ್ಮಿನ್ ಶರೀರಂ' ಎಂಬುದಾಗಿ ಶರೀರ ಎಂದು, 'ಯದಿದಂ ಅಸ್ಮಿನ್ ಹೃದಯಂ' ಎಂಬುದಾಗಿ ಹೃದಯ ಎಂದು ಗಾಯತ್ರೀಶಬ್ದಪ್ರತಿಪಾದ್ಯವಾದ ವಸ್ತುವಿನ ಜೊತೆಗೆ ಷಾಡ್‌ವಿಧ್ಯವು ಅನುವಾದ ಮಾಡಲಾಗಿದೆ. ಹೀಗೆ ಹೇಳಿದ್ದರಿಂದ ಶ್ರುತಿಯಲ್ಲಿ 'ಸೈಷಾ ಷಡ್ವಿಧಾ ಗಾಯತ್ರೀ' ಎಂದು ಮುಂದೆ ಹೇಳುವ ಪ್ರಕಾರ ಚತುಷ್ಪದಾ ಎಂಬುದನ್ನು ಯೋಜನೆ ಮಾಡಿಕೊಳ್ಳಬೇಕು ಹೊರತು ಪರಮತದಂತೆ ಭೂತ, ಪೃಥಿವಿ, ಶರೀರ, ಹೃದಯ ಎಂಬ ಚತುಷ್ಪದತ್ವವು ಚತುಷ್ಪದದ ಅನುವಾದ ಎಂದು ತಿಳಿಯಬಾರದು. ಈ ವಿಷಯವನ್ನು ಇಲ್ಲಿ ಸೂಚಿಸಿದ್ದಾರೆ.

'ತ್ರಿಪಾದಸ್ಯಾಮೃತಂ ದಿವೀತಿ' ಎಂಬಲ್ಲಿಯವರೆಗಿನ ಭಾಷ್ಯವು ಸೂತ್ರದಲ್ಲಿರುವ 'ಏವಂ' ಎಂಬ ಪದದ ವ್ಯಾಖ್ಯಾನರೂಪವಾಗಿದೆ ಎಂಬುದನ್ನು ಸ್ಪಷ್ಟಪಡಿಸುತ್ತಾ ಸೂತ್ರದಿಂದ ಅನ್ವಯವನ್ನು ತೋರಿಸುತ್ತಿದ್ದಾರೆ ''ಅಸ್ಯ'' ಇತ್ಯಾದಿ ವಾಕ್ಯದಿಂದ. 'ಇತಿ' ಎಂಬಲ್ಲಿಯ ತನಕದ ಭಾಷ್ಯವನ್ನು ಅನುವಾದ ಮಾಡುವ ಮೂಲಕವಾಗಿ ಅದರ ವ್ಯಾಖ್ಯೇಯವಾದ ಸೂತ್ರದ 'ಏವಮ್' ಪದವನ್ನು ''ಇತ್ಯೇವಮ್'' ಎಂಬುದಾಗಿ ಅನುವಾದ ಮಾಡುತ್ತಿದ್ದಾರೆ.

ಹೀಗೆ ಹೇಳಿದ್ದರಿಂದ ಸೂತ್ರದಲ್ಲಿರುವ ಏವಂ ಎಂಬ ಪದವನ್ನು ಹಾಗೆಯೇ ಇಟ್ಟುಕೊಂಡು ಗಾಯತ್ರಿಯು ವಿಷ್ಣುವೇ ಆಗಿದ್ದಾನೆ ಎಂಬರ್ಥವನ್ನು ಹೇಳಬೇಕು. ಇದರಿಂದ ಪ್ರತಿಜ್ಞೆಯನ್ನು ಹೇಳಿದಂತಾಯಿತು. ಇದೇ ಮಾತಿನಿಂದ ಪ್ರಕಾರಾರ್ಥದಲ್ಲಿಯೂ ಏವಂ ಪದವನ್ನು ಅನ್ವಯಿಸಿ 'ಏವಂ ಭೂತಾದಿ' ಇತ್ಯಾದಿಯಾಗಿ ಹೇತುವಿನ ಜೊತೆಗೂ ಸಹ ಅನ್ವಯವನ್ನು ಹೇಳಬೇಕು. ಇದರಿಂದ ಒಟ್ಟು ತಿಳಿಯುವ ಅರ್ಥ ಹೀಗಿದೆ. ಏವಂ = 'ತಾವಾನಸ್ಯ ಮಹಿಮಾ' ಎಂಬ ಮಂತ್ರದಲ್ಲಿ ಹೇಳುವ ಪ್ರಕಾರ ಭೂತಾದಿಪಾದವ್ಯಪದೇಶವಿರುವುದರಿಂದ ಏವಂ = ಗಾಯತ್ರಿಯು ವಿಷ್ಣುವಾಗಿದ್ದಾನೆ – ಎಂದು.

ಈ ರೀತಿಯಾಗಿ ಏವಂಶಬ್ದಕ್ಕೆ ಮಂತ್ರೋಕ್ತಪ್ರಕಾರದಿಂದ ಎಂದು ಅರ್ಥೈಸುವುದು ತಪ್ಪಲ್ಲ. ಏಕೆಂದರೆ 'ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ' ಎಂಬ ಸೂತ್ರದಲ್ಲಿಯೂ ಏವಂ ಶಬ್ದಕ್ಕೆ ಈ ಪ್ರಕಾರವಾಗಿ ಅರ್ಥೈಸುವುದು ಕಂಡಿದೆ. ಪಿತೃಸೋಮ್ಯ, ಅಗ್ನಿ, ಬ್ರಹ್ಮ ಈ ಮೂವರ ಬಗ್ಗೆ ನಚಿಕೇತನ ಪ್ರಶ್ನೆ ಯಮನ ಉತ್ತರವು ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಸೂತ್ರದಲ್ಲಿರುವ ಏವಂ ಶಬ್ದವು ಪ್ರಧಾನವು (ಪ್ರಕೃತಿಯು) ಮುಮುಕ್ಷುವಿನಿಂದ ತಿಳಿಯಬೇಕಾಗಿಲ್ಲ ಎಂದು ಹೇಳುತ್ತಿದೆ. ಅಂದರೆ ಶ್ರುತಿಯಲ್ಲಿ ಹೇಳಿದ ಪ್ರಕಾರದಲ್ಲಿ ಸಕಲಶಬ್ದಗಳು ಪರಮಾತ್ಮನನ್ನೇ ಪ್ರತಿಪಾದಿಸುತ್ತವೆಯೆಂದು ಮುಮುಕ್ಷುವಾದವನು ತಿಳಿಯಬೇಕೆಂದು ಹೇಳಲಾಗಿದೆ. ಆದ್ದರಿಂದ ಸೂತ್ರದಲ್ಲಿರುವ ಏವಂ ಶಬ್ದವು ಶ್ರುತ್ಯುಕ್ತಪ್ರಕಾರದಲ್ಲಿ ಎಂಬರ್ಥವನ್ನು ಹೇಳುವುದರ ಮೂಲಕ ಪ್ರಧಾನದ ಉಪನ್ಯಾಸವನ್ನು ನಿರಾಕರಿಸುತ್ತಿದೆ. ಅದರಂತೆ ಪ್ರಕೃತದಲ್ಲಿಯೂ ಏವಂಶಬ್ದವು ಗಾಯತ್ರಿಯು ವಿಷ್ಣುವಾಗಿದ್ದಾನೆಂಬ ಅರ್ಥವನ್ನು ಇಟ್ಟುಕೊಂಡರೆ ಮಾತ್ರ ಭೂತಾದಿ-

ॐ ॥ भूतादिपादव्यपदेशोपपत्तेश्चैवम् ॥ॐ॥२६॥

**'गायत्रीशब्दो विष्णुपरः' इत्येतत् प्रतिपादयत् सूत्रमुपन्यस्य व्याचष्टे – भूतानीत्यादिना ॥ न हि चतुर्विंशत्यक्षरा गायत्री एवंविधपादवती । न च विष्णोरपि सर्वभूतानि न पाद इति वाच्यम् । 'यज्ञदत्तचतुर्थांशोऽयं बलपरिमाणे देवदत्तः' इतिवत् विष्णोरत्यन्तभिन्नेष्वेव सर्वभूतेषु चतुर्थांशपरिमिताभिप्रायेण पादशब्दोपपत्तेः । अत्यल्पत्वोपलक्षणं पादशब्दः ।**

'ಗಾಯತ್ರೀಶಬ್ದೋ ವಿಷ್ಣುಪರಃ' ಗಾಯತ್ರೀಶಬ್ದವು ವಿಷ್ಣುಪರವಾಗಿದೆ ಎಂಬುದನ್ನು ಸ್ವತಃ ಪ್ರತಿಪಾದಿಸುತ್ತಾ ಸೂತ್ರವನ್ನು ಅನುವಾದ ಮಾಡಿ ವ್ಯಾಖ್ಯಾನಿಸುತ್ತಿದ್ದಾರೆ ''ಭೂತಾನಿ'' ಇತ್ಯಾದಿನಾ. ಇಪ್ಪತ್ತನಾಲ್ಕು ಅಕ್ಷರಗಳಿಂದ ಕೂಡಿದ ಗಾಯತ್ರೀಛಂದಸ್ಸು ಇಂತಹ ಪಾದವನ್ನು ಹೊಂದಲು ಸಾಧ್ಯವಿಲ್ಲ. ವಿಷ್ಣುವಿಗೂ ಸಹ ಸಕಲಭೂತಗಳು ಪಾದವಾಗಲು ಸಾಧ್ಯವಿಲ್ಲವಲ್ಲವೇ? ಎಂದು ಶಂಕಿಸಬಾರದು. 'ಯಜ್ಞದತ್ತನ ಬಲದ ನಾಲ್ಕನೆಯ ಒಂದಂಶದ ಬಲವು ದೇವದತ್ತನಿಗೆ ಇದೆ' ಎಂಬಂತೆ ಅತ್ಯಂತ ಭಿನ್ನವಾದ ಪದಾರ್ಥದಲ್ಲಿಯೂ ಸಹ ಪಾದಶಬ್ದವನ್ನು ಪ್ರಯೋಗಿಸಬಹುದು. ಸಕಲಭೂತಗಳು ವಿಷ್ಣುವಿಗಿಂತ ಅತ್ಯಂತಭಿನ್ನವಾಗಿವೆ. ವಿಷ್ಣುವಿನ ನಾಲ್ಕನೆ ಒಂದಂಶದಷ್ಟು ಪರಿಮಿತಿಯನ್ನು ಹೊಂದಿವೆ ಎಂಬಭಿಪ್ರಾಯದಿಂದ ಹೀಗೆ ಪಾದಶಬ್ದವನ್ನು ಶ್ರುತಿಯು ಪ್ರಯೋಗಿಸಿದೆ. ಚತುರ್ಥಾಂಶವೆಂದರೆ ಅತ್ಯಂತ ಅಲ್ಪವಾದದ್ದೆಂದು ಉಪಲಕ್ಷಣಯಾ ತಿಳಿಯಬೇಕಾದ ವಿಚಾರ.

**तथाहि श्रुत्यन्तरम् 'अमृतस्य पूर्णां तासु कलां विचक्षते । पादषड्ढोतुर्न किलाविवित्से' इति षड्ढोतुरिन्द्रियैः सारादनकर्तुः विष्णोरिदं सुवर्णाकाशरूपं मुक्तामुक्तजीवसहितं सुवर्णं ब्रह्माण्डं कलां विचक्षते कवयः यतोऽसौ सुवर्णकोशः पादं न विवित्स इति, पादसाम्यं न लभते इत्यर्थः ।**

ಈ ವಿಚಾರದಲ್ಲಿ ಮತ್ತೊಂದು ಶ್ರುತಿಯು ಪ್ರಮಾಣವಾಗಿದೆ. 'ಅಮೃತಸ್ಯ ಪೂರ್ಣಾಂ ತಾಸು ಕಲಾಂ ವಿಚಕ್ಷತೇ । ಪಾದಷಡ್ಢೋತುರ್ನ ಕಿಲಾವಿವಿತ್ಸೇ' ಷಡ್ಢೋತುಃ = ಷಟ್ ಪಂಚಬಾಹ್ಯೇಂದ್ರಿಯ -ಗಳು ಮತ್ತು ಮನಸ್ಸೆಂಬ ಒಳಗಿನ ಇಂದ್ರಿಯ. ಈ ಆರು ಇಂದ್ರಿಯಗಳಿಗೆ ಹೋತುಃ = ಪದಾರ್ಥ-ಗಳನ್ನು ಒದಗಿಸುವ ಇಂದ್ರಿಯಗಳಿಂದ ಸಾರಭಾಗವನ್ನಷ್ಟೇ ತಿನ್ನುವ ವಿಷ್ಣುವಿಗೆ ಸುವರ್ಣಾಕಾಶ-ರೂಪವಾದ ಮುಕ್ತಾಮುಕ್ತಜೀವರಿಂದ ಕೂಡಿದ ಬಂಗಾರಮಯವಾದ ಬ್ರಹ್ಮಾಂಡವನ್ನು ಸ್ವಲ್ಪಮಾತ್ರ ಜ್ಞಾನಿಗಳು ತಿಳಿಯುತ್ತಾರೆ. ಆದ್ದರಿಂದ ಸುವರ್ಣಕೋಶವೆನಿಸಿದ ಬ್ರಹ್ಮಾಂಡವು ಪರಮಾತ್ಮನ ಪಾದ-ಸಾಮ್ಯವನ್ನೂ ಸಹ ಹೊಂದಲಾರದು.

**नच 'पादोऽस्य' इति मन्त्रोऽन्यपरः शङ्कनीयः पुरुषसूक्तगतत्वात् । 'यज्ञेन यज्ञमयजन्त' इति वाक्यशेषात् पुरुषसूक्ते विष्णुरेवाभिधीयत इति ज्ञायते । देवाः यज्ञं विष्णुमयजन्तेत्यर्थः । 'यज्ञो वै विष्णुः' इति श्रुतेः । 'यज्ञो यज्ञपतिर्यज्वा' इति स्मृतेश्च ।**

'ಪಾದೋಽಸ್ಯ' ಎಂಬ ಮಂತ್ರವು ವಿಷ್ಣುವನ್ನು ಪ್ರತಿಪಾದಿಸದೆ ಅನ್ಯರನ್ನು ಪ್ರತಿಪಾದಿಸುತ್ತದೆ ಎಂದು ಶಂಕಿಸಬಾರದು. ಪುರುಷಸೂಕ್ತವು ಕೇವಲ ವಿಷ್ಣುಪರವಾದ್ದರಿಂದ ಅದರಲ್ಲಿರುವ ಪಾದೋಸ್ಯ ಎಂಬ ಮಂತ್ರವೂ ಸಹ ವಿಷ್ಣುಪರವೇ ಆಗುತ್ತದೆ. 'ಯಜ್ಞೇನ ಯಜ್ಞಮಯಜಂತ' ಎಂಬ ವಾಕ್ಯಶೇಷದ ಬಲದಿಂದ ಪುರುಷಸೂಕ್ತದಲ್ಲಿ ವಿಷ್ಣುವೇ ಪ್ರತಿಪಾದ್ಯನೆಂದು ತಿಳಿಯುತ್ತದೆ. ದೇವತೆಗಳು ಯಜ್ಞನಾಮಕನಾದ ವಿಷ್ಣುವನ್ನು ಆರಾಧಿಸಿದರು ಎಂದಿದರ ಅರ್ಥ. ಏಕೆಂದರೆ 'ಯಜ್ಞೋ ವೈ ವಿಷ್ಣುಃ' ಎಂಬುದಾಗಿ ವಿಷ್ಣುವಿಗೆ ಯಜ್ಞನೆಂಬ ಹೆಸರಿದೆ.

'ಯಜ್ಞೋ ಯಜ್ಞಪತಿರ್ಯಜ್ವಾ' ಎಂಬುದಾಗಿ ವಿಷ್ಣುಸಹಸ್ರನಾಮವೂ ಸಹ ವಿಷ್ಣುವನ್ನು ಯಜ್ಞ ಎಂದಿದೆ.

**नच वाच्यम् 'अथ यदतः परः' इत्युक्तत्वात् स्वर्गादिलोकात् परतो वैकुण्ठे दीप्यमाना ज्योतिःशब्दार्थाद् विष्णोरन्यदेव 'पादोऽस्य सर्वा भूतानि त्रिपादस्यामृतं दिवि' इत्यत्र स्वर्गस्थत्वेनोच्यत इति ।**

**दिवीतिशब्दस्य द्योतमानत्वयोगेन वैकुण्ठपरत्वात् ।**

**अत एव क्वचित् सप्तलोकापेक्षया 'दिवः परः' इति; त्रिलोकापेक्षया 'दिवि' इत्युपदेशो युज्यते ।**

'ಅಥ ಯದತಃ ಪರಃ' ಎಂದು ಹೇಳಿದ್ದರಿಂದ ಸ್ವರ್ಗಲೋಕಕ್ಕಿಂತ ಮೇಲಿರುವ ವೈಕುಂಠದಲ್ಲಿ ಬೆಳಗುತ್ತಿರುವ ಜ್ಯೋತಿಯು ವಿಷ್ಣುವಿಗಿಂತ ಭಿನ್ನವೇ ಆಗಬೇಕು. ಏಕೆಂದರೆ, 'ಪಾದೋಸ್ಯ ಸರ್ವಾ

ಭೂತಾನಿ ಎಂಬಲ್ಲಿ ಸ್ವರ್ಗದಲ್ಲಿ ಭಗವಂತನಿದ್ದಾನೆಂದು ಹೇಳಲಾಗಿದೆ. 'ದಿವಿ' ಎಂಬ ಶಬ್ದವು 'ದ್ಯೋತಮಾನ'ವೆಂಬ ಅರ್ಥವನ್ನು ತಿಳಿಸುವುದರಿಂದ ವೈಕುಂಠಪರವಾಗಿದೆ.

ಆದ್ದರಿಂದಲೇ ಕೆಲವೆಡೆ ಸಪ್ತಲೋಕಾಪೇಕ್ಷೆಯಿಂದ 'ದಿವಃ ಪರಃ' ಎಂದಿದೆ. ಮೂರು ಲೋಕಗಳ ಅಭಿಪ್ರಾಯದಿಂದ ದಿವಿ ಎಂದು ಪ್ರಯೋಗಿಸಿದೆ.

ॐ ॥ उपदेशभेदान्नेति चेन्न उभयस्मिन्नप्यविरोधात् ॐ ॥

इदमेव प्रतिपादयत् सूत्रमुपन्यस्य व्याचष्टे – उपदेशेत्यादिना ॥

अतोऽत्र ज्योतिःशब्दार्थो विष्णुरिति सिद्धम् ।

॥इति श्रीपद्मनाभतीर्थविरचिता सत्तर्कदीपावळ्यां गायत्र्यधिकरणम् ॥

'ದಿವಃ ಪರತ್ವ' ಹಾಗೂ 'ದಿವಿಸ್ಥಿತತ್ವ'ವನ್ನು ಪ್ರತಿಪಾದನೆ ಮಾಡುವುದಕ್ಕಾಗಿ ಸೂತ್ರವನ್ನು ಅನುವಾದ ಮಾಡಿ ವ್ಯಾಖ್ಯಾನಿಸುತ್ತಿದ್ದಾರೆ. ''ಉಪದೇಶ'' ಇತ್ಯಾದಿಯಾಗಿ.

ಈ ಸೂತ್ರದ ಬಲದಿಂದ ವಿಷ್ಣುವೇ ಜ್ಯೋತಿಃಶಬ್ದಾರ್ಥನೆಂದು ನಿರ್ಣಯವಾಗುತ್ತದೆ.

॥ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ರಚಿತವಾದ ಸತ್ತರ್ಕದೀಪಾವಳಿಯ ಕನ್ನಡಾನುವಾದದಲ್ಲಿ
ಗಾಯತ್ರ್ಯಧಿಕರಣವು ಮುಗಿಯಿತು ॥

# ೦೧೧-ಗಾಯತ್ರ್ಯಧಿಕರಣ

ಭಾಗ -೨

ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ,
ಭಾಟ್ಟಸಂಗ್ರಹ, ಶಂಕರಭಾಷ್ಯ, ಭಾಮತೀ,
ಶ್ರೀಭಾಷ್ಯ, ಶ್ರುತಪ್ರಕಾಶ ಇವುಗಳ ಆಯ್ದ ಭಾಗಗಳು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

॥ ಶ್ರೀಮಧ್ವರಾಜೋ ವಿಜಯತೇತರಾಮ್ ॥

॥ ಶ್ರೀಗುರುಭ್ಯೋ ನಮಃ ॥

# ಗಾಯತ್ರ್ಯಧಿಕರಣದ ಸಾರ

ಗಾಯತ್ರೀ, ಉಷ್ಣಿಕ್ ಬೃಹತೀ ಮೊದಲಾದ ಛಂದೋವಾಚಕಪದಗಳನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡಲಾಗಿದೆ. ಸುಧೆಯ ಪ್ರಕಾರ 'ಅಥ ಯದತಃ' ಎಂಬ ಶ್ರುತಿಯು ವಿಷಯವಾಕ್ಯ. 'ಗಾಯತ್ರೀ ವಾ' ಎಂಬ ವಾಕ್ಯವು ಟೀಕೆಯಪ್ರಕಾರ ವಿಷಯವಾಕ್ಯ. ಆದ್ದರಿಂದ ಜ್ಯೋತಿರಧಿಕರಣದಲ್ಲಿ ಅಗ್ನಿಸೂಕ್ತದಲ್ಲಿರುವ ಜ್ಯೋತಿಯನ್ನು ಅಗ್ನಿಯಲ್ಲಿ ಪ್ರತಿಪಾದಿಸಿ ಈ ಅಧಿಕರಣದಲ್ಲಿ ಛಾಂದೋಗ್ಯದಲ್ಲಿರುವ ಜ್ಯೋತಿಯನ್ನು ಅಗ್ನಿಯಲ್ಲವೆಂದು ಸುಧೆಯು ನಿರಾಸ ಮಾಡುತ್ತಿದೆ. ಆದರೆ ಟೀಕೆಯು ಹಿಂದಿನ ಅಧಿಕರಣದಲ್ಲಿ ಅಗ್ನಿಸೂಕ್ತದ ಜ್ಯೋತಿಯನ್ನು ಅಗ್ನಿಯಲ್ಲವೆಂದು ನಿರಾಸ ಮಾಡಿ ಈ ಛಾಂದೋಗ್ಯದ ಗಾಯತ್ರಿಯನ್ನು ಛಂದಸ್ಸಲ್ಲವೆಂದು ನಿರಾಸ ಮಾಡುತ್ತಿದೆ.

ಸುಧೆಯ ಪ್ರಕಾರ ಎರಡು ಪೂರ್ವಪಕ್ಷ. (೧)ಛಾಂದೋಗ್ಯದಲ್ಲಿರುವ ಜ್ಯೋತಿಯು ಗಾಯತ್ರಿ-ಯಾದ್ದರಿಂದ ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ಕೂಡ ಗಾಯತ್ರಿಯೇ ಆಗಬೇಕು. (೨) ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ನಿರವಕಾಶ ಲಿಂಗಬಲದಿಂದ ವಿಷ್ಣುವಾಗಲಿ. ಆದರೆ ನಿರವಕಾಶಲಿಂಗಗಳು ಕೇಳಿಸದ ಕಾರಣ ಛಾಂದೋಗ್ಯದಲ್ಲಿರುವ ಜ್ಯೋತಿಯು ವಿಷ್ಣುವಲ್ಲ.

ಇಲ್ಲಿ ಮೊದಲ ಪೂರ್ವಪಕ್ಷ ಹಿಂದಿನ ಜ್ಯೋತಿರಧಿಕರಣವನ್ನು ಆಕ್ಷೇಪಿಸುತ್ತಿದೆ. ಆದರೆ ಎರಡನೆಯ ಪೂರ್ವಪಕ್ಷ ಜನ್ಮಾಧಿಕರಣವನ್ನು ಅಥವಾ ಆನಂದಮಯಾಧಿಕರಣವನ್ನು ಆಕ್ಷೇಪಿಸುತ್ತಿದೆ.

ಟೀಕೆಯ ಪ್ರಕಾರ ಮೂರು ಪೂರ್ವಪಕ್ಷ. (೧) ಗಾಯತ್ರೀಛಂದಸ್ಸನ್ನು ಹೇಳುವ ಉಪಕ್ರಮದ ಬಲದಿಂದ ಛಾಂದೋಗ್ಯದ ಜ್ಯೋತಿಯು ಛಂದಸ್ಸೇ ಆಗಿದೆ. (೨) ಅಗ್ನಿಸೂಕ್ತದಲ್ಲಿರುವ ಅಗ್ನಿಯು ವಿಷ್ಣುವಾಗಲಿ, ಆದರೆ ಛಾಂದೋಗ್ಯದ ಛಂದಸ್ಸು ವಿಷ್ಣುವಲ್ಲ. (೩) ನಿರ್ಣೀತಜ್ಯೋತಿಶ್ರುತಿಯ ಆಧಾರದಿಂದ ಛಾಂದೋಗ್ಯದ ಜ್ಯೋತಿಯು ವಿಷ್ಣುವಾಗಬಹುದು. ಆದರೆ ಅಂತಹ ಶ್ರುತಿಯಿಲ್ಲದ ಕಾರಣ ಗಾಯತ್ರಿಯು ವಿಷ್ಣುವಲ್ಲ.

ಇಲ್ಲಿ ಒಟ್ಟು ಐದು ಪೂರ್ವಪಕ್ಷಗಳು. ಇವುಗಳಲ್ಲಿ ಒಂದನ್ನು ಮಾತ್ರ ಟೀಕೆಯಲ್ಲಿ ಹೇಳಿದ್ದಾರೆ. ಉಳಿ-ದೆಲ್ಲವನ್ನೂ ಸುಧೆಯಲ್ಲಿ ಹೇಳಿದ್ದಾರೆ.

ಒಟ್ಟು ಪ್ರಮಾಣಾಶ್ರಿತಪೂರ್ವಪಕ್ಷಗಳು ನಾಲ್ಕು.

೧. ವಿಷ್ಣುವಿನಲ್ಲಷ್ಟೇ ಪ್ರಸಿದ್ಧವಾದ ಅನೇಕ ಶಬ್ದಗಳಿರುವಾಗ ಅನ್ಯತ್ರಪ್ರಸಿದ್ಧವಾದ ಗಾಯತ್ರೀ ಮೊದಲಾದ ಶಬ್ದಗಳನ್ನು ವಿಷ್ಣುವಿನಲ್ಲಿ ಪ್ರಯೋಗಿಸಲು ಪ್ರಯೋಜನವಿಲ್ಲ.

೨. ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ವಿಷ್ಣುವೆನ್ನಲು ಬಾಧಕವಿಲ್ಲ. ಪ್ರಕೃತ ಗಾಯತ್ರಿಯನ್ನು ವಿಷ್ಣು ಎನ್ನಲು ದಿವಃಪರತ್ವ ದಿವಃಸ್ಥಿತತ್ವ ಎಂಬ ಉಪದೇಶಭೇದದ ವಿರೋಧವಿದೆ.

೩. ಅಗ್ನಿಸೂಕ್ತದಲ್ಲಿರುವ ಜ್ಯೋತಿ ವಿಷ್ಣುವೆನ್ನಲು ಕರ್ಣಾದಿವಿದೂರತ್ವ ಲಿಂಗವಿದೆ. ಅದಕ್ಕೆ ವಿರುದ್ಧವಾದ ದೃಷ್ಟಶ್ರುತತ್ವಾದಿಗಳು ಗಾಯತ್ರಿಯಲ್ಲಿ ಕೇಳಿಸುತ್ತಿರುವುದರಿಂದ ಗಾಯತ್ರಿಯು ವಿಷ್ಣುವಲ್ಲ.

೪. ಒಂದು ಜ್ಯೋತಿಶ್ರುತಿಗೆ ಬಾಧ ಹೇಳುವುದು ಕಷ್ಟವಲ್ಲ. ಗಾಯತ್ರೀ,ವಾಕ್, ಪೃಥಿವೀ ಮೊದಲಾದ ಅನೇಕ ಶ್ರುತಿಗಳಿಗೆ ಬಾಧ ಹೇಳುವುದು ಬಹಳ ಕಷ್ಟ.

ಪ್ರಮೇಯಾಶ್ರಿತಪೂರ್ವಪಕ್ಷ - ಹಿಂದಿನ ಅಧಿಕರಣಗಳಲ್ಲಿ ಸಮನ್ವಯ ಮಾಡಿದ ಆಕಾಶ, ಜ್ಯೋತಿ ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತಗಳು ಜನ್ಯವಾಗಿವೆ. ಅವುಗಳ ಹುಟ್ಟಿಗೆ ಭಗವಂತನು ಸ್ವಾಮಿಯೆಂದು ಒಪ್ಪುವುದು ಅನಿವಾರ್ಯ. ಆದರೆ ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ ಗಾಯತ್ರೀಶಬ್ದದ ಪ್ರವೃತ್ತಿ-ನಿಮಿತ್ತವು ಅನಾದಿ ಸ್ವಭಾವವೆನಿಸಿದೆ. ಅನಾದಿಧರ್ಮಕ್ಕೆ ಮತ್ತೊಬ್ಬರ ಅಪೇಕ್ಷೆ ಇಲ್ಲ. ಆದ್ದರಿಂದ ಸ್ವಾಮಿತ್ವವೆಂಬ ಪ್ರವೃತ್ತಿನಿಮಿತ್ತದಿಂದ ಭಗವಂತನು ಆಕಾಶಾದಿಶಬ್ದಗಳಿಂದ ಪ್ರತಿಪಾದ್ಯನಾಗಬಹುದೇ ಹೊರತು; ಗಾಯತ್ರೀ-ಶಬ್ದದಿಂದ ಪ್ರತಿಪಾದ್ಯನಾಗಲಾರ.

ಕ್ರಮವಿಶಿಷ್ಟವಾದ ವರ್ಣಗಳೇ ವೇದ. ಕ್ರಮವು ಕೃತಕವಾದ್ದರಿಂದ ವೇದವೂ ಕೃತಕ. ತತ್ವನಿರ್ಣಯ ಟೀಕೆ-ಯಲ್ಲಿ 'ನ ಹಿ ವಯಂ ವೇದಸ್ಯ ಕೂಟಸ್ಥನಿತ್ಯತಾಂ ಬ್ರೂಮಃ' ಎಂಬುದಾಗಿ ಇದನ್ನು ಸ್ಪಷ್ಟಪಡಿಸಿದ್ದಾರೆ.

ಇದು ತಪ್ಪು. ಕ್ರಮ ಅನಿತ್ಯವಾದಲ್ಲಿ ವೇದವು ಕೃತಕವಾಗಬಹುದು. ಆದರೆ ತತ್ವಸಂಖ್ಯಾನಟೀಕೆಯಲ್ಲಿ ಕ್ರಮಕ್ಕೆ ನಿತ್ಯತ್ವವನ್ನು ಹೇಳಿದ್ದಾರೆ. ಈಶ್ವರಬುದ್ಧಿ ಉಪಾಧಿಯಿಂದ ಕೂಡಿದ ಕ್ರಮವು ಕೃತಕವಲ್ಲ. ಹಾಗಾದರೆ ತತ್ವನಿರ್ಣಯ ಟೀಕೆಯಲ್ಲಿ ಕೂಟಸ್ಥನಿತ್ಯತ್ವವನ್ನು ಏಕೆ ನಿಷೇಧಿಸಿದ್ದಾರೆ ? ಎಂದರೆ ನಮ್ಮ ಬುದ್ಧ್ಯುಪಾಧಿ ಘಟಿತವಾದ ಕ್ರಮವು ಉಚ್ಚಾರಣಾಧೀನವಾದ್ದರಿಂದ ಜನ್ಯವಾಗಿದೆ. ವರ್ಣಗಳಿಗೆ ದೈಶಿಕ ಅಥವಾ ಕಾಲಿಕಕ್ರಮ-ವನ್ನಂತೂ ಹೇಳಲು ಸಾಧ್ಯವಿಲ್ಲ. ಬೌದ್ಧಿಕವಾಗಿ ಹೇಳಬೇಕು. ನಮ್ಮ ಬುದ್ಧಿಯಲ್ಲಿರುವ ಕ್ರಮವು ಅನಿತ್ಯವೆಂದು ತತ್ವನಿರ್ಣಯಟೀಕೆಯ ಅಭಿಪ್ರಾಯ. ಈಶ್ವರಬುದ್ಧಿಯಲ್ಲಿರುವ ಕ್ರಮವು ನಿತ್ಯವೆಂದು ತತ್ವಸಂಖ್ಯಾನಟೀಕೆಯ ಅಭಿಪ್ರಾಯ.

ಇಲ್ಲಿ ಸಹಜವಾಗಿ ಬರುವ ಪ್ರಶ್ನೆ ಹೀಗಿದೆ - ಈಶ್ವರಬುದ್ಧಿಯಲ್ಲಿ ವೇದವು ಏಕಪ್ರಕಾರವಾಗಿರುವುದ-ರಿಂದಷ್ಟೇ ಅಪೌರುಷೇಯವೆಂದಾದರೆ ಪುರಾಣಾದಿಗಳೂ ಅಪೌರುಷೇಯವಾಗಬೇಕಲ್ಲವೆ? ಸರ್ವಜ್ಞನಾದ ಈಶ್ವರನ ಬುದ್ಧಿಯಲ್ಲಿ ಎಲ್ಲ ಪುರಾಣಗಳು ಎಲ್ಲಾ ಕಾಲದಲ್ಲಿಯೂ ಏಕಪ್ರಕಾರವೇ ಆಗಿರುತ್ತದಲ್ಲವೇ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ಪ್ರತಿಯೊಂದು ಕಲ್ಪಗಳಲ್ಲಿಯೂ ಭಾಗವತಾದಿಪುರಾಣಗಳ ಆನುಪೂರ್ವಿಯನ್ನು ವ್ಯತ್ಯಾಸಮಾಡಿ ಭಗವಂತನು ಉಪದೇಶಿಸುತ್ತಾನೆ. ಆದರೆ ವೇದದ ಆನುಪೂರ್ವಿಯನ್ನು ಯಾವಕಲ್ಪದಲ್ಲಿಯೂ ವ್ಯತ್ಯಾಸ ಮಾಡುವುದಿಲ್ಲ. ಮತ್ತು ಈ ಕಲ್ಪದಲ್ಲಿ ಉಪದೇಶ ಮಾಡಿದ ಪುರಾಣವನ್ನು ವರ್ತಮಾನಕಾಲವಿಶಿಷ್ಟವಾಗಿ ಭಗವಂತನು ತಿಳಿದಿದ್ದಾನೆ. ಹಿಂದಿನ ಕಲ್ಪಗಳ ಪುರಾಣಾದಿಗಳನ್ನು ಅಧೀತಕಾಲವಿಶಿಷ್ಟವಾಗಿ ತಿಳಿದಿದ್ದಾನೆ. ಈ ಕಾರಣದಿಂದಷ್ಟೇ ಪುರಾಣಗಳು ಪೌರುಷೇಯ ಎನಿಸುತ್ತವೆ. ಆದರೆ ವೇದವನ್ನು ಪ್ರತಿಕಲ್ಪಗಳಲ್ಲಿಯೂ ವರ್ತ-ಮಾನಕಾಲವಿಷಯಕವಾಗಿಯೇ ತಿಳಿಯುತ್ತಾನಾದ್ದರಿಂದ ವೇದವು ಅಪೌರುಷೇಯವೆನಿಸುತ್ತದೆ.

ಐದು ಪೂರ್ವಪಕ್ಷಗಳ ಮಧ್ಯದಲ್ಲಿ ಮೊದಲನೆಯ ಶಂಕೆಯು 'ಚೇತೋರ್ಪಣನಿಗದಾತ್' ಎಂಬ ಸೂತ್ರದಲ್ಲಿ ಪ್ರಯೋಜನವನ್ನು ಹೇಳುವ ಮೂಲಕ ಪರಿಹರಿಸಲಾಗಿದೆ. ಎರಡು ಹಾಗೂ ಮೂರನೆಯ ಪೂರ್ವಪಕ್ಷಗಳನ್ನು 'ಉಭಯಸ್ಮಿನ್ ಅಪ್ಯವಿರೋಧಾತ್' ಎಂಬ ಸೂತ್ರದಿಂದ ಪರಿಹರಿಸಿದ್ದಾರೆ.

ನಾಲ್ಕನೆಯ ಪೂರ್ವಪಕ್ಷವನ್ನು 'ಬಾಹುಲ್ಯಾತ್ ಶ್ರುತಿಲಿಂಗಯೋಃ' ಎಂಬ ಅನುವ್ಯಾಖ್ಯಾನದಲ್ಲಿ ಮತ್ತು 'ಜ್ಯಾಯಾಂಶ್ಚ ಪುರುಷ ಇತ್ಯಾದಿಶಬ್ದಸಹಿತಲಿಂಗೈಶ್ಚ' ಎಂಬ ನ್ಯಾಯವಿವರಣದಲ್ಲಿ ಪರಿಹರಿಸಿದ್ದಾರೆ.

ಗಾಯತ್ರ್ಯಧಿಕರಣ-(೧।೧।೧೧)

ಐದನೆಯ ಪ್ರಮೇಯಾಶ್ರಿತಶಂಕೆಯು 'ತಾದೃಶತ್ವಾತ್ ತು ತಚ್ಛಕ್ತೇಃ' ಎಂಬ ಅನುವ್ಯಾಖ್ಯಾನದಲ್ಲಿ ಪರಿಹರಿಸಲ್ಪಟ್ಟಿದೆ.

ಅನಾದಿಯಾದ ಮಾತ್ರದಿಂದ ಮತ್ತೊಂದರ ಅಧೀನವಾಗಬಾರದೆಂದೇನಿಲ್ಲ. ವೈಶೇಷಿಕರು ಅನಾದಿ ಗಗನ ಪರಿಮಾಣವನ್ನು ಗಗನಾಧೀನ ಎಂದಿದ್ದಾರೆ. ಅನಾದಿ ಅಜ್ಞಾನಸಂಬಂಧವನ್ನು ಅದ್ವೈತಿಗಳು ಅಜ್ಞಾನಾಧೀನ ಎನ್ನುತ್ತಾರೆ. ಪ್ರಾಭಾಕರರೂ ಸಹ ಅನಾದಿ ದುಃಖಪ್ರಾಗಭಾವವನ್ನು ಜ್ಞಾನಾಧೀನ ಎಂದಿದ್ದಾರೆ. ಅದರಂತೆ ಅನಾದಿಯಾದ ಗಾಯತ್ರೀರೂಪವೇದವು ಭಗವದಧೀನವೆಂದು ನಾವು ಹೇಳಿದರೆ ಏನು ತಪ್ಪು? ಇಷ್ಟು ಮಾತ್ರ ವ್ಯತ್ಯಾಸ. ಸಾದಿಪದಾರ್ಥವು ಉತ್ಪತ್ತಿ ಹಾಗೂ ಸ್ಥಿತಿವಿಷಯದಲ್ಲಿ ಭಗವದಧೀನವಾಗಿರುತ್ತದೆ. ಅನಾದಿಪದಾರ್ಥವು ಸ್ಥಿತಿವಿಷಯದಲ್ಲಷ್ಟೇ ಭಗವದಧೀನವಾಗಿರುತ್ತದೆ.

ಭಗವಂತನು ಕರ್ತುಂ ಅಕರ್ತುಂ ಅನ್ಯಥಾಕರ್ತುಂ ಸಮರ್ಥನಾಗಿದ್ದಾನೆ. ಅವನು ಇಚ್ಛೆ ಪಟ್ಟರೆ ಏನನ್ನು ಬೇಕಾದರೂ ಮಾಡಬಲ್ಲ. ಅವ್ಯಾಕೃತಾಕಾಶವಿಲ್ಲದ ಜಗತ್ತನ್ನೇ ಸೃಷ್ಟಿ ಮಾಡಬಲ್ಲ. ಪ್ರಕೃತಿ ಮೊದಲಾದವುಗಳನ್ನು ಉಪಯೋಗಿಸದೆಯೂ ಜಗತ್ತನ್ನು ಸೃಷ್ಟಿಸಬಲ್ಲ. ಆದರೆ ತಾನೇ ಮಾಡಿಕೊಂಡ ನಿಯಮವನ್ನು ದಾಟಿ ಇಂತಹ ಸಂಕಲ್ಪಗಳನ್ನು ಮಾಡಲಾರ. ಆದ್ದರಿಂದ ಅನಾದಿಪದಾರ್ಥಗಳೆಲ್ಲವೂ ಸಂಪೂರ್ಣವಾಗಿ ಭಗವದಧೀನಗಳೇ ಆಗಿವೆ. ಭಗವಂತನ ಇಚ್ಛೆಯು ಅನಾದಿಯಾದ್ದರಿಂದ ವಿರೋಧಕ್ಕೆ ಅವಕಾಶವಿಲ್ಲ.

ಇಲ್ಲಿಯ ತನಕ ನಮ್ಮ ಪ್ರಕಾರ ಸೂತ್ರಗಳನ್ನು ವ್ಯಾಖ್ಯಾನಿಸಿದಂತಾಯಿತು. ಈಗ ಅದ್ವೈತಿಗಳ ಮತ್ತು ರಾಮಾನುಜರ ಸೂತ್ರವ್ಯಾಖ್ಯಾನವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ. ಕ್ರಮವಾಗಿ ಒಂದೊಂದೇ ಸೂತ್ರಾರ್ಥವನ್ನು ನಿರಾಕರಿಸಲು ಮೊದಲು ಜ್ಯೋತಿಸೂತ್ರಾರ್ಥವನ್ನು ಅನುವಾದ ಮಾಡಿದ್ದಾರೆ. ನಾಲ್ಕೂ ಸೂತ್ರಗಳು ಒಂದೇ ಅಧಿಕರಣ. ಜ್ಯೋತಿಸೂತ್ರದಲ್ಲಿರುವ ಚರಣಾಭಿಧಾನಶಬ್ದಕ್ಕೆ ಪಾದಾಭಿಧಾನ ಎಂದರ್ಥ. 'ಪಾದೋಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ' ಎಂಬ ಛಾಂದೋಗ್ಯವು ಇದನ್ನು ವಿವರಿಸಿದೆ. ಇಷ್ಟು ಇವರ ಅಭಿಪ್ರಾಯ.

ಇವರ ಸೂತ್ರವ್ಯಾಖ್ಯಾನ ಸರಿಯಿಲ್ಲ. ಹಾಗಾದಲ್ಲಿ ಪಾದಶಬ್ದವನ್ನೇ ಜ್ಯೋತಿಸೂತ್ರದಲ್ಲಿ ಹೇಳಬೇಕಿತ್ತು. ಇದರಿಂದ ಸೂತ್ರವು ಲಘುವಾಗುತ್ತದೆ ಮತ್ತು ಶ್ರುತಿಯ ಅನುಗಮವನ್ನೂ ಹೊಂದುತ್ತದೆ. ನಮ್ಮ ವಿಷಯವಾಕ್ಯವನ್ನು ವಿವಕ್ಷಿಸಿದಾಗ 'ಹೃದಯ ಆಹಿತಂ ಯತ್' ಎಂದು ಗುಹಾನಿಹಿತತ್ವವು ಕೇಳಿಸುತ್ತಿದೆ. ಇದರಿಂದ ಆನಂದಮಯಾಧಿಕರಣವನ್ನು ಆಕ್ಷೇಪಿಸಿದಂತಾಗಿ ಸಂಗತಿಯನ್ನು ಸುಲಭವಾಗಿ ಹೇಳಬಹುದು. ಮತ್ತು 'ಪಾದೋಸ್ಯ ವಿಶ್ವಾ ಭೂತಾನಿ' ಎಂಬ ಹಿಂದಿನ ವಾಕ್ಯದಲ್ಲಿ ಹೇಳಿದ ಪಾದಾಭಿಧಾನವನ್ನೇ ಜ್ಯೋತಿರ್ವಾಕ್ಯ ಹೇಳುತ್ತಿದೆ. ಭೂತಾದಿಸೂತ್ರವು ಇದನ್ನೇ ಹೇಳುತ್ತಿರುವಾಗ ಜ್ಯೋತಿಸೂತ್ರವು ಪುನರುಕ್ತವಾಗುತ್ತದೆ. 'ತ್ರಿಪಾದಸ್ಯಾಮೃತಂ ದಿವಿ' ಎಂಬಲ್ಲಿ ಸರ್ವಭೂತಗಳು ಒಂದು ಪಾದ. ಅಮೃತವಾದವು ಉಳಿದ ಮೂರು ಪಾದಗಳೆಂದು ಜ್ಯೋತಿಸೂತ್ರದ ವಿಷಯವಾಕ್ಯದಲ್ಲಿ ಕೇಳಿಸುತ್ತಿದೆ. ಆದರೆ ಭೂತಾದಿಸೂತ್ರದ ವಿಷಯವಾಕ್ಯವೆನಿಸಿದ ಬ್ರಾಹ್ಮಣದಲ್ಲಿ ಭೂತ, ಪೃಥಿವೀ ಶರೀರ, ಹೃದಯಗಳನ್ನು ಪಾದಗಳೆನ್ನಲಾಗಿದೆ. ಆದ್ದರಿಂದ ಪುನರುಕ್ತಿಗೆ ಅವಕಾಶವಿಲ್ಲ ಎನ್ನಬಾರದು. ಏಕೆಂದರೆ ಚರಣಾಭಿಧಾನಶಬ್ದಕ್ಕೆಸರ್ವಭೂತ ಮತ್ತು ಅಮೃತಗಳ ಪಾದವೆಂಬ ಅರ್ಥವನ್ನು ಚರಣಾಭಿಧಾನಶಬ್ದ ಹೇಳಿದ ಮೇಲೆ ಭೂತ ಪೃಥಿವೀ ಮೊದಲಾದ ಅರ್ಥವನ್ನು ಚರಣಾಭಿಧಾನ ಶಬ್ದಕ್ಕೆ ಹೇಳಿದರೆ ಏನು ತೊಂದರೆ? ಅಷ್ಟೆ ಅಲ್ಲದೆ ಚರಣಾಭಿಧಾನಶಬ್ದದಿಂದಲೇ ಸರ್ವಾತ್ಮಕತ್ವವು ತಿಳಿಯುವಾಗ ಪುನಃ ತದೇಕದೇಶವಾದ ಭೂತಪೃಥಿವ್ಯಾದಿಗಳಿಗೆ ತದಾತ್ಮಕತ್ವ ಹೇಳುವುದರಲ್ಲಿ ಅರ್ಥವಿಲ್ಲ.

ಪರಿಪೂರ್ಣಚಂದ್ರಿಕಾ

ಅದ್ವೈತಿಗಳಿಗೆ ಚತುಷ್ಪದಾ ಎಂಬ ಶ್ರುತಿಯನ್ನು ವ್ಯಾಖ್ಯಾನಿಸಲು ಸಾಧ್ಯವಿಲ್ಲ. ಭೂತಾದಿ ನಾಲ್ಕು ಪದಾರ್ಥಗಳು ಬ್ರಹ್ಮನ ಪಾದಗಳಾಗಿವೆ ಎಂದು ವ್ಯಾಖ್ಯಾನಿಸಬೇಕು. ಆದರೆ ಶ್ರುತಿಯಲ್ಲಿ ಈ ಹಿಂದೆ ಆರು ಪದಾರ್ಥಗಳು ಪ್ರಸಕ್ತವಾಗಿರುವಾಗ ವಾಕ್, ಪ್ರಾಣಗಳನ್ನು ಬಿಟ್ಟು ನಾಲ್ಕನ್ನು ಮಾತ್ರ ಬ್ರಹ್ಮನ ಪಾದಗಳೆನ್ನುವುದು ತಪ್ಪಲ್ಲವೇ? ಇನ್ನು ಆರಲ್ಲಿ ವಾಕ್, ಪ್ರಾಣಗಳನ್ನು ಬಿಟ್ಟು ನಾಲ್ಕನ್ನು ಮಾತ್ರ ಶ್ರುತಿಯು ಚತುಷ್ಪದಾ ಎಂದಿದೆ ಎನ್ನಬಹುದು. ಆದರೆ ಈ ಪಕ್ಷದಲ್ಲಿ ವಾಕ್ ಪ್ರಾಣಗಳಿಗೆ ಬ್ರಹ್ಮಾತ್ಮಕತ್ವವನ್ನು ಹೇಳಿದಂತಾಗುವುದಿಲ್ಲ. ಆದ್ದರಿಂದ ಶ್ರುತಿಯು ಭಗವಂತನ ಆರುರೂಪಗಳನ್ನು ಅನುವಾದ ಮಾಡಿ ಬೇರೆ ನಾಲ್ಕು ರೂಪಗಳನ್ನು 'ಚತುಷ್ಪದಾ' ಎಂಬ ಪದದಿಂದ ವರ್ಣಿಸಿದೆ ಎಂದು ಹೇಳಬೇಕು.

ನಮ್ಮ ಮತದಲ್ಲಿ 'ಸೈಷಾ ಚತುಷ್ಪದಾ ಷಡ್ವಿಧಾ' ಎಂಬ ಶ್ರುತಿ ಭಗವಂತನ ರೂಪಗಳನ್ನು ಹೇಳುತ್ತಿದೆ. ಸಕಲಜೀವರಾಶಿ ಭಗವಂತನ ಭಿನ್ನಾಂಶವೆಂದು 'ಪಾದೋಽಸ್ಯ ಸರ್ವಾ ಭೂತಾನಿ' ಎಂಬ ವಾಕ್ಯ ಹೇಳುತ್ತಿದೆ. ತ್ರಿಪಾದಸ್ಯಾಮೃತಂ ದಿವಿ' ಎಂಬ ವಾಕ್ಯ ನಾರಾಯಣ ವಾಸುದೇವ ವೈಕುಂಠ ಎಂಬ ಮೂರು ಸ್ವರೂಪಾಂಶಗಳನ್ನು ಹೇಳುತ್ತಿದೆ. ಮೊದಲನೆಯ ರೂಪ ಜಗತ್ತಿನಲ್ಲಿ ಉಳಿದ ಮೂರು ರೂಪಗಳು ಶ್ವೇತದ್ವೀಪ, ಅನಂತಾಸನ, ವೈಕುಂಠಗಳಲ್ಲಿ ಇರುತ್ತವೆ. ಒಟ್ಟು ಈ ನಾಲ್ಕು ರೂಪಗಳನ್ನು ಚತುಷ್ಪದಾ ಎಂಬ ಪದವು ಬಣ್ಣಿಸಿದೆ.

೧. ಗಾಯತ್ರಿಯಲ್ಲಿರುವ ಸ್ತ್ರೀರೂಪ; ೨. ಮತ್ಸ್ಯಾದಿರೂಪ; ೩. ವಾಕ್‌ನಲ್ಲಿರುವ ಹಯಗ್ರೀವ ಸ್ತ್ರೀರೂಪ; ೪. ಪೃಥಿವಿಯಲ್ಲಿರುವ ಸ್ತ್ರೀರೂಪ; ೫. ಜೀವರಲ್ಲಿರುವ ಶರೀರರೂಪ; ೬. ಹೃದಯದಲ್ಲಿರುವ ಹೃದಯರೂಪ. ಭಗವಂತನ ಈ ಆರುರೂಪಗಳನ್ನು ಷಡ್ವಿಧಾ ಎಂಬ ಪದವು ವರ್ಣಿಸಿದೆ.

ಜ್ಯೋತಿಸೂತ್ರಕ್ಕೆ ಮತ್ತು ಮೂರನೆಯ ಭೂತಾದಿಸೂತ್ರಕ್ಕೆ ಪರರು ಮಾಡಿದ ವ್ಯಾಖ್ಯಾನವನ್ನು ಇಲ್ಲಿಯ ತನಕ ವಿಮರ್ಶಿಸಿದ್ದಾಯಿತು. ಗಾಯತ್ರಿ ಎಂಬ ಅಧಿಷ್ಠಾನದಲ್ಲಿ ಬ್ರಹ್ಮನನ್ನು ಉಪಾಸನೆ ಮಾಡಬೇಕೆಂದು ತಿಳಿಸಲು ಎರಡನೆಯ ಸೂತ್ರವು ಹೊರಟಿದೆ ಎಂಬ ಅವರ ವ್ಯಾಖ್ಯಾನವನ್ನು ಪ್ರತ್ಯೇಕವಾಗಿ ನಿರಾಕರಿಸಬೇಕಿಲ್ಲ. ಅನೇಕ ಸ್ಥಳಗಳಲ್ಲಿ ಬ್ರಹ್ಮನು ಆರೋಪಾಧಿಷ್ಠಾನನಾಗುವುದಿಲ್ಲ ಎಂಬ ನಿರಾಕರಣೆಯಿಂದಲೇ ಪರರ ದ್ವಿತೀಯಸೂತ್ರದ ವ್ಯಾಖ್ಯಾನವು ನಿರಾಕೃತವಾಗಿದೆ. ಪ್ರಕೃತ ನಾಲ್ಕನೆಯ 'ಉಭಯಸ್ಮಿನ್ನಪ್ಯವಿರೋಧಾತ್' ಎಂಬ ಪರರ ಸೂತ್ರವ್ಯಾಖ್ಯಾನವನ್ನು ವಿಮರ್ಶಿಸಲಾಗಿದೆ.

ಜ್ಯೋತಿಯಲ್ಲಿ ಕೇಳಿಸುತ್ತಿರುವ ದಿವಃಪರತ್ವ ಮತ್ತು ದಿವಿಸ್ಥಿತತ್ವವನ್ನು ಪ್ರಮಾಣದ ಆಧಾರದಿಂದ ನಾವು ಭಗವಂತನಲ್ಲಿ ಸಮರ್ಥಿಸುತ್ತೇವೆ. ಆದರೆ ಅದ್ವೈತಿಗಳು ಉದಾಹರಣೆಯ ಮೂಲಕ ಪರಿಹರಿಸಲು ಪ್ರಯತ್ನಿಸಿದ್ದಾರೆ -- ಪಕ್ಷಿಯು ಮರದ ತುದಿಯಲ್ಲಿ ಕುಳಿತಿರುವಾಗ 'ಮರದ ತುದಿಯಲ್ಲಿ ಪಕ್ಷಿ' ಎಂಬ ಪ್ರಯೋಗವಿದ್ದಂತೆ; 'ಮರದ ತುದಿಯ ಆಚೆ ಪಕ್ಷಿ' ಎಂಬ ಪ್ರಯೋಗವನ್ನೂ ಲೋಕದಲ್ಲಿ ಕಾಣುತ್ತೇವೆ. ಇದರಂತೆ ಜ್ಯೋತಿಯು ದ್ಯುಲೋಕದಲ್ಲಿ ಇದ್ದಾಗ ದಿವಿಸ್ಥಿತನೆಂಬ ಪ್ರಯೋಗವಿದೆ. ಆದರೂ ದಿವಃಪರಃ ಎಂದು ಪ್ರಯೋಗಿಸಬಹುದು. ಮತ್ತು ಪಕ್ಷಿಯು ಮರದ ತುದಿಯ ಆಚೆ ಹಾರುತ್ತಿರುವಾಗ 'ಮರದ ತುದಿಯ ಆಚೆ ಪಕ್ಷಿ' ಎಂಬ ಪ್ರಯೋಗವಿದ್ದಂತೆ 'ಮರದ ತುದಿಯಲ್ಲಿ ಪಕ್ಷಿ' ಎಂಬ ಪ್ರಯೋಗವು ಕಾಣಿಸುತ್ತದೆ. ಇದರಂತೆ ಬ್ರಹ್ಮನು ದಿವಃಪರನಾಗಿದ್ದರೂ ದಿವಿಸ್ಥಿತನೆಂದು ಪ್ರಯೋಗಿಸಬಹುದು.

ಇದು ಅದ್ವೈತಿಗಳ ವಾದ. ಅಂತೂ ಬ್ರಹ್ಮನು ದ್ಯುಲೋಕದ ಒಳಗಿದ್ದಾನೋ, ಹೊರಗಿದ್ದಾನೋ ಎಂಬುದನ್ನು ಇವರು ಸ್ಪಷ್ಟ ಪಡಿಸಲೇ ಇಲ್ಲ. ಮತ್ತು ದ್ಯುಲೋಕದ ಸಂಬಂಧವಿರುವಾಗ ಅಥವಾ ಇಲ್ಲದಿರುವಾಗ

ಎರಡು ವಿಧಪ್ರಯೋಗಗಳನ್ನು ಮುಖ್ಯವೆಂದು ಅದ್ವೈತಿಗಳಿಗೆ ಸಮರ್ಥಿಸಲಾಗದು. ಉದಾಹರಣೆ ನೀಡಿದಂತೆ ಒಂದು ಪ್ರಯೋಗವನ್ನಷ್ಟೇ ಮುಖ್ಯವೆಂದು ಹೇಳಿ ಮತ್ತೊಂದು ಪ್ರಯೋಗವನ್ನು ಅಮುಖ್ಯವೆನ್ನಬೇಕು. ಆದರೆ ಶ್ರುತಿಗೆ ಅಮುಖ್ಯಾರ್ಥ ಮಾಡುವುದು ಸರಿಯಲ್ಲ.

ಭಾಮತಿಯ ಸಮರ್ಥನೆ -- ಪಕ್ಷಿ ಮರದ ಮೇಲೆ ಕುಳಿತಾಗ ಮರಕ್ಕೆ ಪಕ್ಷಿಯ ಕಾಲುಗಳಷ್ಟೇ ಸಂಬಂಧವಾಗಿರುತ್ತವೆ. ಹೊಟ್ಟೆ, ಕತ್ತು ಮೊದಲಾದ ಭಾಗಗಳು ಸಂಬಂಧ ಹೊಂದಿರುವುದಿಲ್ಲ. ಸಂಬಂಧ ಹೊಂದಿರುವ ಕಾಲನ್ನು ವಿವಕ್ಷಿಸಿ 'ಮರದಲ್ಲಿ ಪಕ್ಷಿ' ಎಂಬ ಪ್ರಯೋಗವು ಸಾಧುವಾಗಿದೆ; ಸಂಬಂಧ ಹೊಂದಿರದ ಹೊಟ್ಟೆ ಕತ್ತು ಮೊದಲಾದವುಗಳನ್ನು ವಿವಕ್ಷಿಸಿ 'ಮರದ ತುದಿಯ ಆಚೆ ಪಕ್ಷಿ' ಎಂಬ ಪ್ರಯೋಗವು ಸಾಧುವಾಗುತ್ತದೆ. ಇದರಂತೆ ದ್ಯುಲೋಕದಲ್ಲಿ ಸಂಬಂಧ ಹೊಂದಿರುವ ಬ್ರಹ್ಮನ ಅವಯವವನ್ನು ವಿವಕ್ಷಿಸಿ ದಿವಿಸ್ಥಿತನೆಂಬ ಪ್ರಯೋಗವು ಸಾಧುವಾಗಿದೆ. ಸಂಬಂಧಪಡದ ಅವಯವವನ್ನು ವಿವಕ್ಷಿಸಿ ದಿವಃಪರತ್ವವೆಂಬ ಪ್ರಯೋಗವು ಸಾಧುವಾಗಿದೆ.

ಭಾಮತಿಯ ಈ ವಿಚಾರ ಅತ್ಯಂತ ಬಾಲಿಶ. ಸ್ವತಃ ತಾವೇ ಬ್ರಹ್ಮನನ್ನು ನಿರವಯವನೆಂದು ಒಪ್ಪಿ ಈಗ ಅವಯವವನ್ನು ಹೇಳುವುದು ಅನುಚಿತ. ಮತ್ತು ವಸ್ತುಸ್ಥಿತಿಯನ್ನು ಅರ್ಥಮಾಡಿಕೊಳ್ಳದೇ ಸ್ವಕಪೋಲಕಲ್ಪಿತವಾದ ಇಂತಹ ವ್ಯಾಖ್ಯಾನವು ಅತ್ಯಂತ ಕ್ಲಿಷ್ಟಕರ. ಅಷ್ಟೇ ಅಲ್ಲದೆ ಶ್ರುತಿಗೆ ಮುಖ್ಯಾರ್ಥವನ್ನು ಹೇಳಲು ಬರುವಾಗ ಲಕ್ಷಣಾ ಮಾಡುವುದು ಅನಾವಶ್ಯಕ. ದಿವಃಪರತ್ವ ಮತ್ತು ದಿವಿಸ್ಥಿತತ್ವವನ್ನು ಸಮರ್ಥಿಸುವ ಸ್ಮೃತಿವಿರೋಧವು ಇವರಿಗೆ ತಪ್ಪಿದ್ದಲ್ಲ.

ರಾಮಾನುಜರು ಅದ್ವೈತಿಗಳಂತೆ ಶ್ರುತಿಗೆ ಲಕ್ಷಣಾ ಮಾಡುವುದಿಲ್ಲ. ದಿವಿ ಮತ್ತು ದಿವಃ ಎಂಬಲ್ಲಿರುವ ಸಪ್ತಮೀ ಹಾಗೂ ಪಂಚಮೀ ವಿಭಕ್ತಿಗಳು ಮುಖ್ಯಾರ್ಥವನ್ನೇ ಪ್ರತಿಪಾದಿಸುತ್ತವೆ. ಆದರೆ ಸಪ್ತಮೀ ವಿಭಕ್ತಿಯು ಸಾವಕಾಶವಾಗಿದೆ; ಪಂಚಮಿಯು ನಿರವಕಾಶವಾಗಿದೆ. ನಿರವಕಾಶಾನುಸಾರಿಯಾಗಿ ಸಾವಕಾಶವನ್ನು ವ್ಯಾಖ್ಯಾನಿಸಬೇಕು. ಆದ್ದರಿಂದ ದಿವಃಪರಃ ಎಂಬುದೇ ವಸ್ತುಸ್ಥಿತಿ. ದಿವಿ ಎಂಬುದಕ್ಕೆ ದಿವಃ ಉಪರಿ ಎಂದರ್ಥ. ಹೀಗೆ ಹೇಳುವ ರಾಮಾನುಜರಿಗೆ ಅದ್ವೈತಿಗಳಿಗೆ ಬರುವಷ್ಟು ದೊಡ್ಡ ದೋಷ ಬಾರದಿದ್ದರೂ, ದೋಷವು ತಪ್ಪಿದ್ದಲ್ಲ. ಎರಡು ವ್ಯುತ್ಪತ್ತಿಗಳಲ್ಲಿ ಒಂದಕ್ಕೆ ಅಮುಖ್ಯಾರ್ಥವನ್ನು ಇವರು ಹೇಳಲೇ ಬೇಕಾಗುತ್ತದೆ. ನಾವಾದರೆ ದ್ಯುಶಬ್ದಕ್ಕೆ ಅನೇಕಾರ್ಥವನ್ನು ಹೇಳಿದ್ದೇವೆ.

ಆದರೆ ರಾಮಾನುಜರು ಒಂದೇ ಅರ್ಥವನ್ನು ಹೇಳುತ್ತಾರೆ. 'ದೇವದತ್ತನಿಗೆ ಮನೆಯು ಆಧಾರವಾಗಬೇಕಾದರೆ ಮನೆಯ ಒಳಗೋ, ಹೊರಗಿನ ಜಗಲಿಯಲ್ಲೋ, ಅಥವಾ ಮಹಡಿಯ ಮೇಲೋ ಅಥವಾ ಕೆಳಗೋ ಎಲ್ಲಾದರೂ ಒಂದು ಮನೆಯ ಭಾಗದಲ್ಲಿ ದೇವದತ್ತನು ಇರಲೇಬೇಕು. ಮನೆಯಿಂದ ದೇವದತ್ತನು ತುಂಬಾ ದೂರ ಹೋದಾಗ ದೇವದತ್ತನಿಗೆ ಮನೆಯು ಆಧಾರವಾಗುವುದಿಲ್ಲ; ಹೊರತು ಅವಧಿ ಯಾಗುತ್ತದೆ. ಆವಾಗ ಆಧಾರಾರ್ಥದಲ್ಲಿ ಸಪ್ತಮೀಯನ್ನು ಪ್ರಯೋಗಿಸಲಾಗದು.

ಪ್ರಕೃತ ಜ್ಯೋತಿಯೆಂಬ ಬ್ರಹ್ಮನು ದ್ಯುಲೋಕದ ಯಾವ ಭಾಗದಲ್ಲಿಯೂ ಇಲ್ಲದೆ ಮೇಲಿನ ಲೋಕದಲ್ಲಿದ್ದರೆ ದಿವಿಸ್ಥಿತಃ ಎಂಬ ಸಪ್ತಮ್ಯಂತಪ್ರಯೋಗವನ್ನು ಮುಖ್ಯವಾಗಿ ಮಾಡಲು ಸಾಧ್ಯವಿಲ್ಲ. ಇದರಂತೆ ಪಂಚಮಿಯು ಕೇವಲ ಅವಧಿತ್ವವನ್ನೇ ಹೇಳುತ್ತದೆ. ಹೀಗಿರುವಾಗ ಪಕ್ಷಿಯು ವೃಕ್ಷದಲ್ಲಿ ಕುಳಿತಾಗ 'ವೃಕ್ಷಾತ್ ಪರತ್ರ ಶ್ಯೇನಃ' ಎಂಬ ಪ್ರಯೋಗವನ್ನು ಅಮುಖ್ಯಾರ್ಥವೆಂದು ಹೇಳಲೇಬೇಕಾಗುತ್ತದೆ.

'ಉಪದೇಶಭೇದಾತ್' ಎಂಬ ಸೂತ್ರಕ್ಕೆ ಸಿದ್ಧಾಂತದ ಪ್ರಕಾರ ವ್ಯಾಖ್ಯಾನ. ಛಾಂದೋಗ್ಯೋಪನಿಷತ್ತಿನ ಗಾಯತ್ರೀಪ್ರಕರಣದಲ್ಲಿ 'ತ್ರಿಪಾದಸ್ಯಾಮೃತಂ ದಿವಿ' ಎಂದು ಗಾಯತ್ರಿಯು ದ್ಯುಲೋಕದಲ್ಲಿದೆ ಎನ್ನಲಾಗಿದೆ. ಮುಂದಿನ ಜ್ಯೋತಿಪ್ರಕರಣದಲ್ಲಿ 'ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ' ಎಂದು ದ್ಯುಲೋಕಕ್ಕಿಂತ ಮೇಲೆ ಜ್ಯೋತಿಯು ಇದೆ ಎನ್ನಲಾಗಿದೆ. ದಿವಿ ಎಂಬಲ್ಲಿ ಸಪ್ತಮೀ ವಿಭಕ್ತಿ ಇರುವುದರಿಂದ ದ್ಯುಲೋಕದಲ್ಲಿ ಎಂದರ್ಥ. ದಿವಃ ಎಂಬಲ್ಲಿ ಪಂಚಮೀ ವಿಭಕ್ತಿ ಇರುವುದರಿಂದ ದ್ಯುಲೋಕಕ್ಕಿಂತ ಮೇಲ್ಭಾಗದಲ್ಲಿ ಎಂದರ್ಥ. ಜ್ಯೋತಿ ಹಾಗೂ ಗಾಯತ್ರೀ ಎರಡೂ ಒಂದೇ ಆದಲ್ಲಿ ಒಂದೇ ವಸ್ತು ದ್ಯುಲೋಕದಲ್ಲಿ ಹಾಗೂ ಅದಕ್ಕಿಂತ ಮೇಲಿನ ಲೋಕದಲ್ಲಿ ಇರಲು ಹೇಗೆ ತಾನೆ ಸಾಧ್ಯ? ಈ ಕಾರಣದಿಂದ ದ್ಯುಲೋಕದಲ್ಲಿರುವ ಗಾಯತ್ರಿಯೇ ಬೇರೆ ಅದರ ಮೇಲಿನ ಲೋಕದಲ್ಲಿರುವ ಜ್ಯೋತಿಯೇ ಬೇರೆ ಎನ್ನಬೇಕು. ಈ ಪೂರ್ವಪಕ್ಷವನ್ನು 'ಉಪದೇಶ-ಭೇದಾತ್' ಎಂಬ ಪದದಿಂದ ತೋರಿಸಿದ್ದಾರೆ.

'ಉಭಯಸ್ಮಿನ್ನಪ್ಯವಿರೋಧಾತ್' ಎಂಬ ಸೂತ್ರಭಾಗದಿಂದ ತಿಳಿಯುವ ಸಿದ್ಧಾಂತ. ಎರಡು ಬಗೆಯಲ್ಲಿ ಸಮಸ್ತಲೋಕಗಳನ್ನು ವಿಭಾಗಿಸಬಹುದು. ೧. ತ್ರಿಲೋಕ; ೨. ಸಪ್ತಲೋಕ ಎಂದು. 'ಭೂಃ ಭುವಃ ಸ್ವಃ' ಎಂದು ಮೂರು ವಿಭಾಗ ಮಾಡಿದಾಗ ಸಮಸ್ತ ಹದಿನಾಲ್ಕುಲೋಕಗಳು ಈ ಮೂರರಲ್ಲೇ ಸೇರುತ್ತವೆ. ಈ ಪಕ್ಷದಲ್ಲಿ ನಾವು ವಾಸಿಸುತ್ತಿರುವ ಲೋಕವು ಭೂಲೋಕ. ಇದಕ್ಕಿಂತ ಒಂದು ಲಕ್ಷಯೋಜನ ಮೇಲೆ ಅಂತರಿಕ್ಷಲೋಕ. ಅದರ ಮೇಲಿರುವುದೆಲ್ಲಾ ದ್ಯುಲೋಕ. ಶ್ವೇತದ್ವೀಪ ಅನಂತಾಸನ ಹಾಗೂ ವೈಕುಂಠಲೋಕಗಳು ಒಂದು ಲಕ್ಷಯೋಜನಕ್ಕಿಂತ ಮೇಲಿರುವುದರಿಂದ ಅವೆಲ್ಲವೂ ದ್ಯುಲೋಕವೆನಿಸಿವೆ. ಆ ಲೋಕಗಳಲ್ಲಿರುವ ಭಗವಂತನ ರೂಪಗಳು ದ್ಯುಲೋಕದಲ್ಲಿವೆ ಎನಿಸುತ್ತವೆ. ಹೀಗೆ ತ್ರಿಲೋಕವಿವಕ್ಷೆಯಿಂದ ದಿವಿಸ್ಥಿತತ್ವವನ್ನು ಹೊಂದಿಸಬೇಕು.

ಸಪ್ತಲೋಕವಿವಕ್ಷೆಯಿಂದ ದಿವಃಪರತ್ವವನ್ನು ಹೊಂದಿಸಬೇಕು. ಭೂಃ, ಭುವಃ, ಸ್ವಃ, ಮಹಃ, ಜನಃ, ತಪಃ, ಸತ್ಯಮ್‌ಎಂದು ಲೋಕಗಳನ್ನು ಏಳು ವಿಭಾಗ ಮಾಡಬಹುದು. ಮೇರು ಪರ್ವತವು ಪೃಥಿವೀಲೋಕದ ದ್ಯುಲೋಕ. ಅದರ ಮೇಲ್ಭಾಗದಲ್ಲಿ ಅನಂತಾಸನ. ಅಂತರಿಕ್ಷಲೋಕದಲ್ಲಿ ಸೂರ್ಯಮಂಡಲವು ದ್ಯುಲೋಕ. ಅದರ ಮೇಲ್ಭಾಗದಲ್ಲಿ ಶ್ವೇತದ್ವೀಪ. ಸ್ವರ್ಗಲೋಕದಲ್ಲಿ ಇಂದ್ರನ ಅರಮನೆ ದ್ಯುಲೋಕ. ಅದರ ಮೇಲ್ಭಾಗದಲ್ಲಿ ವೈಕುಂಠಲೋಕ. ಹೀಗೆ ಅನಂತಾಸನಾದಿಗಳಿಗೆ ದಿವಃಪರತ್ವವನ್ನು ಕ್ರಮವಾಗಿ ಹೊಂದಿಸಬೇಕು. ಹೀಗೆ ಹೇಳಿದಾಗ ದಿವಿಸ್ಥಿತತ್ವ ಹಾಗೂ ದಿವಃಪರತ್ವಗಳಿಗೆ ವಿರೋಧ ಬರುವುದಿಲ್ಲ.

ವಸ್ತುತಃ ಸಪ್ತಲೋಕದ ಅಪೇಕ್ಷೆ ಇಲ್ಲ. ತ್ರಿಲೋಕಗಳೆಂಬ ವಿಭಾಗದಿಂದಲೂ ದಿವಃಪರತ್ವವನ್ನು ಹೊಂದಿಸಬಹುದು. ಆದರೆ ಸಪ್ತಲೋಕವನ್ನು ವಿವಕ್ಷಿಸಿದ್ದಕ್ಕೆ ಹೆಚ್ಚಿನ ಪ್ರಯೋಜನವಿದೆ. ವೈಕುಂಠಲೋಕವು ಮೇರು, ಸೂರ್ಯಮಂಡಲ, ಇಂದ್ರಸದನಗಳೆಂಬ ಪ್ರಸಿದ್ಧವಾದ ಮೂರು ದ್ಯುಲೋಕಗಳಿಗಿಂತ ಎತ್ತರದಲ್ಲಿದೆ ಎಂದಷ್ಟೇ ಅಲ್ಲದೆ ಸ್ವರ್ಗಲೋಕಕ್ಕಿಂತಲೂ ಎತ್ತರದಲ್ಲಿದೆ ಎಂದು ಸಿದ್ಧವಾಗಬೇಕಾಗಿದೆ. ಇದಕ್ಕೋಸ್ಕರ ಸಪ್ತಲೋಕದ ವಿಭಾಗವು ಸಾರ್ಥಕ.

ದ್ಯುಶಬ್ದಕ್ಕೆ ಅನೇಕಾರ್ಥ ಹೇಳುವುದು ಸರಿಯೇ? ಎಂಬುದು ಮುಂದಿನ ವಿಚಾರ. ಒಂದೇ ಪ್ರಕರಣ-ದಲ್ಲಿದ್ದರೂ ಅನೇಕಾರ್ಥಹೇಳುವುದು ತಪ್ಪಲ್ಲ. ಚೈತ್ರನು ಗ್ರಾಮದ ಹತ್ತಿರದ ಉದ್ಯಾನದಲ್ಲಿದ್ದಾಗ 'ಗ್ರಾಮ-ದಲ್ಲಿದ್ದಾನೆ' ಎಂಬ ಪ್ರಯೋಗವಿದೆ. ಮತ್ತು 'ಗ್ರಾಮದ ಹೊರಗಿದ್ದಾನೆ' ಎಂಬ ಪ್ರಯೋಗವೂ ಇದೆ. ಗ್ರಾಮದಲ್ಲಿದ್ದಾನೆ ಎಂದು ಹೇಳಿದಾಗ ಗ್ರಾಮಶಬ್ದಕ್ಕೆ ಉದ್ಯಾನವನ ಎಂದರ್ಥ. ಅದೇ ಗ್ರಾಮಶಬ್ದಕ್ಕೆ ಗ್ರಾಮದ ಹೊರಗಿದ್ದಾನೆಂಬ ಪ್ರಯೋಗದಲ್ಲಿ ಜನರ ವಾಸಸ್ಥಳ ಎಂದರ್ಥ. ಹೀಗೆ ಒಂದೇ ಗ್ರಾಮಶಬ್ದಕ್ಕೆ

ಅನೇಕಾರ್ಥವಿರುವುದು ಲೋಕದಲ್ಲಿ ಕಂಡಿದೆ. ಅದರಂತೆ ಇಲ್ಲಿಯೂ ದ್ಯುಶಬ್ದಕ್ಕೆ ಅನೇಕಾರ್ಥ ಹೇಳಿದರೆ ಏನು ತಪ್ಪು?

'ಸರ್ವತಃ ಪೃಷ್ಠೇಷು' ಎಂಬ ಶ್ರುತಿಯು ಅನಂತಾಸನಾದಿಗಳು ಪೃಥಿವ್ಯಾದಿಗಳಿಗಿಂತ ಮೇಲಿವೆ ಎನ್ನುತ್ತಿದೆ. ಅದೇ ಶ್ರುತಿ ಮುಂದೆ ವಿಶ್ವತಃಪೃಷ್ಠೇಷು ಎಂದು ಬ್ರಹ್ಮದೇವರ ಮೂರು ಅರಮನೆಗಳಿಗಿಂತ ಅನಂತಾಸನಾದಿಗಳು ಮೇಲಿವೆ ಎನ್ನುತ್ತಿವೆ. ಅಥವಾ ದ್ಯುಶಬ್ದಕ್ಕೆ ಯೌಗಿಕಾರ್ಥ ಹಾಗೂ ರೂಢ್ಯರ್ಥಗಳನ್ನು ವಿವಕ್ಷಿಸಿ ಅನೇಕಾರ್ಥತ್ವ-ದೋಷವನ್ನು ಪರಿಹರಿಸಬಹುದು. ಶ್ವೇತದ್ವೀಪಾದಿಗಳು ಚಿತ್ಪ್ರಕೃತಿಯ ಸ್ವರೂಪವಾದ್ದರಿಂದ ಕಂಗೊಳಿಸುತ್ತಿವೆ. ಆದ್ದರಿಂದಲೇ ದ್ಯು ಎನಿಸಿವೆ. ಈ ಯೌಗಿಕಾರ್ಥವನ್ನು ದಿವಿ ಎಂಬಲ್ಲಿರುವ ದ್ಯುಶಬ್ದವು ಹೇಳಿದೆ. 'ದಿವಃ' ಎಂಬಲ್ಲಿ -ರುವ ದ್ಯುಶಬ್ದವು ಸ್ವರ್ಗಾದಿಗಳಲ್ಲಿ ಮೇಲೆ ಹೇಳಿದ ಪ್ರಕಾರ ರೂಢವಾಗಿದೆ. ಆದ್ದರಿಂದ ಸಪ್ತಲೋಕವಿವಕ್ಷೆಯಲ್ಲಿ ದ್ಯುಶಬ್ದಕ್ಕೆ ಅನೇಕಾರ್ಥವನ್ನು ಹೇಳಿದಂತಾಗುವುದಿಲ್ಲ.

ತ್ರಿಪಾತ್‌ಶಬ್ದಕ್ಕೆ ಅದ್ವೈತಿಗಳ ವ್ಯಾಖ್ಯಾನ. ''ಜೀವನು ಜಾಗ್ರದವಸ್ಥೆಯಲ್ಲಿ ಶರೀರದ ಬಾಹ್ಯಾಕಾಶದಲ್ಲಿ-ರುತ್ತಾನೆ. ಸ್ವಪ್ನದಲ್ಲಿ ಶರೀರದ ಮಧ್ಯಾಕಾಶದಲ್ಲಿರುತ್ತಾನೆ. ಸುಷುಪ್ತಿಯಲ್ಲಿ ಹೃದಯಾಕಾಶದಲ್ಲಿರುತ್ತಾನೆ. ಈ ಮೂರು ಅವಸ್ಥೆಗಳಿಂದ ಕೂಡಿದ ಜೀವನು ತ್ರಿಪಾತ್ ಎನಿಸುತ್ತಾನೆ. ಜೀವನಿರುವ ಆಕಾಶಾದಿಗಳು ದ್ಯು ಎನಿಸುತ್ತವೆ -- ಎಂದು.

ಇದು ಸರಿಯಲ್ಲ. ಮಾಂಡೂಕ್ಯಶ್ರುತಿಯಂತೆ ಜೀವನು ಜಾಗ್ರದಾದ್ಯವಸ್ಥೆಗಳಲ್ಲಿ ಬಲಗಣ್ಣು ಮೊದಲಾದೆಡೆ ಇರುತ್ತಾನೆ. ಹೊರತು ಬಾಹ್ಯಾಕಾಶಗಳಲ್ಲಿ ಇರುತ್ತಾನೆ ಎನ್ನಲು ಯಾವುದೇ ಪ್ರಮಾಣಗಳಿಲ್ಲ. ಮತ್ತು ದಿವಿಸ್ಥಿತತ್ವ ಮತ್ತು ದಿವಃಪರತ್ವಪ್ರತಿಪಾದಕ ಶ್ರುತಿಗಳು ಒಬ್ಬನನ್ನೇ ಹೇಳುತ್ತವೆಂದು ಅದ್ವೈತಿಗಳು ಒಪ್ಪಿದ್ದಾರೆ. ಆದ್ದರಿಂದ 'ತ್ರಿಪಾದಸ್ಯ' ಎಂಬ ಶ್ರುತಿಯು ಜೀವನನ್ನು ಪ್ರತಿಪಾದಿಸಿದರೆ 'ಅಥ ಯದತಃ' ಎಂಬ ಶ್ರುತಿಯಿಂದಲೂ ಜೀವನೇ ಪ್ರತಿಪಾದ್ಯನಾದರೆ ಜೀವನೇ ಜ್ಯೋತಿಯಾಗಬೇಕಾಗುತ್ತದೆ. ಬ್ರಹ್ಮನು ಜ್ಯೋತಿಯೆಂಬ ಸಿದ್ಧಾಂತಕ್ಕೆ ಧಕ್ಕೆ ಬರುತ್ತದೆ.

ಅದ್ವೈತಿಗಳು 'ವಿಶ್ವತಃ ಪೃಷ್ಠೇಷು' ಎಂಬ ಶ್ರುತಿಯಲ್ಲಿರುವ ವಿಶ್ವಶಬ್ದದ ಅರ್ಥವನ್ನು ಮೊಟಕು-ಗೊಳಿಸಿದ್ದಾರೆ. ಆದ್ದರಿಂದ 'ವಿಶ್ವತಃ' ಅಥವಾ 'ಸರ್ವತಃ' ಎಂಬ ಎರಡು ಪದಗಳಲ್ಲಿ ಒಂದನ್ನು ವ್ಯರ್ಥವೆಂದು ತಾವೇ ಒಪ್ಪಿಕೊಂಡಂತಾಗಿದೆ. ಈ ವೈಯ್ಯರ್ಥ್ಯದೋಷವು ರಾಮಾನುಜರಿಗೂ ತಪ್ಪಿದ್ದಲ್ಲ. ರಾಮಾನುಜರು ವಿಶ್ವಶಬ್ದಕ್ಕೆ ಕಾರ್ಯವೆಂದು ಸರ್ವಶಬ್ದಕ್ಕೆ ಕಾರಣವೆಂದು ಅರ್ಥೈಸುತ್ತಾರೆ.

ಇವರ ವಾದದಲ್ಲಿಯೂ ಹುರುಳಿಲ್ಲ. ಏಕೆಂದರೆ 'ಸ ಇದಂ ಸರ್ವಮಸೃಜತ' ಎಂಬಲ್ಲಿ ಸರ್ವಶಬ್ದವನ್ನು ಕಾರ್ಯವೆಂಬರ್ಥದಲ್ಲಿ ಪ್ರಯೋಗಿಸಲಾಗಿದೆ. 'ಪರಿಶೇಷಾತ್' ವಿಶ್ವಶಬ್ದವು ಕಾರಣಪರವಾಗುತ್ತದೆ; ಇದಕ್ಕೆ ವಿರುದ್ಧವಾಗಿ ರಾಮಾನುಜರಿಗೆ ಅರ್ಥೈಸಲಾಗದು. ಮತ್ತು ವಿಶ್ವಶಬ್ದಕ್ಕೆ ಕಾರ್ಯವೆಂಬರ್ಥವನ್ನು ಹೇಳಿದರೆ ವಿಶ್ವತಃ ಪರಮಾನ್ನಿತ್ಯಂ ಎಂಬಲ್ಲಿಯೂ ಕೇವಲ ಕಾರ್ಯವೆಂದೇ ವ್ಯಾಖ್ಯಾನಿಸಬೇಕಾದೀತು. ಹೀಗೆ ವಿಚಾರಮಾಡಿದಾಗ ಶ್ರುತಿಸೂತ್ರಗಳಿಗೆ ಪರರು ಮಾಡಿದ ವ್ಯಾಖ್ಯಾನವು ಅತ್ಯಂತ ಹೇಯವೆಂದು ತಿಳಿಯುತ್ತದೆ. ಬುಭುತ್ಸುಗಳು ನಿರ್ದುಷ್ಟವಾದ ಆಚಾರ್ಯರ ಭಾಷ್ಯದಿಂದಲೇ ಶ್ರುತಿಸೂತ್ರಗಳ ಅರ್ಥವನ್ನು ತಿಳಿದುಕೊಳ್ಳಬೇಕು.

* * * * *

ಪರಿಪೂರ್ಣಚಂದ್ರಿಕಾ

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ गायत्र्यधिकरणम्
(छन्दोऽभिधानाधिकरणम्)

ವಿಷಯವಾಕ್ಯದ ಜಿಜ್ಞಾಸೆ

**ॐ छन्दोऽभिधानान्नेति चेन्न तथा चेतोऽर्पणनिगदात्तथा हि दर्शनम् ॐ ॥**
अत्राधिवेदगता गायत्र्यादिशब्दा उदाहरणम् । अत्र विषयवाक्यं ''अथ यदतः परो दिवो ज्योतिः'' इति च्छान्दोग्यस्थं ज्योतिर्वाक्यमित्येकं मतम् । मतान्तरं तु ''गायत्री वा इदं ँ सर्वं'' इति तत्स्थं गायत्रीवाक्यमिति ।

अत्राद्यमतं – ''अथ यदतः परो दिव इति वाक्योक्ते ज्योतिषि सन्देहः किं ब्रह्म उतान्यत्'' इति सुधोक्तम् । द्वितीयं त्वत्र टीकायां सुधायां चोक्तम् ।

अत्राद्ये मते ज्योतिरधिकरणे अग्निसूक्तस्थस्य ज्योतिषोऽग्नित्वनिरासः, अत्र तु छान्दोग्यस्थस्य ज्योतिषः छन्दस्त्वनिरासः । द्वितीये तु ज्योतिरधिकरणे अग्निसूक्तस्थस्य ज्योतिषोऽग्नित्वनिरासः, अत्र तु च्छान्दोग्यस्थायाः गायत्र्याः छन्दस्त्वनिरास इति भेदः ।

**आद्ये, भाष्ये गायत्रीवाक्योपादानं गायत्रीशब्दरूपपूर्वपक्षबीजप्रदर्शनार्थम् । द्वितीये, भाष्ये ज्योतिर्वाक्योपादानं पूर्वपक्षे ज्योतिरधिकरणाक्षेपप्रदर्शनार्थम् ।**

ಅನುವಾದ - ಈ ಅಧಿಕರಣದಲ್ಲಿ ಅಧಿವೇದಗತವಾದ ಗಾಯತ್ರೀ ಮೊದಲಾದ ಛಂದೋವಾಚಕಶಬ್ದಗಳು ಉದಾಹರಣೆಯಾಗಿವೆ. 'ಅಥ ಯದತಃ ಪರೋ ದಿವೋ ಜ್ಯೋತಿಃ' ಎಂಬ ಛಾಂದೋಗ್ಯದಲ್ಲಿರುವ ಜ್ಯೋತಿಯು ವಿಷಯವಾಕ್ಯವೆಂದು ಒಂದು ಮತ. 'ಗಾಯತ್ರೀ ವಾ ಇದಂ ಸರ್ವಮ್' ಎಂಬಲ್ಲಿರುವ ಗಾಯತ್ರೀವಾಕ್ಯವೆಂದು ಮತ್ತೊಂದು ಮತ.

ಮೊದಲ ಮತದಲ್ಲಿ 'ಅಥ ಯದತಃ ಪರೋ ದಿವಃ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಜ್ಯೋತಿಯು ಸಂದೇಹಕ್ಕೆ ವಿಷಯವಾಗಿದೆ. ಬ್ರಹ್ಮನೋ ಅಥವಾ ಬೇರೆಯೋ ಎಂದು? ಇದು ಸುಧೆಯ ಪಕ್ಷ. ಎರಡನೆಯ ಪಕ್ಷವು ಟೀಕೆಗೆ ಮತ್ತು ಸುಧೆಗೆ ಸಮ್ಮತವಾಗಿದೆ.

ಮೊದಲ ಮತದಲ್ಲಿ ಜ್ಯೋತಿರಧಿಕರಣದಲ್ಲಿ ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ಅಗ್ನಿಯೆಂದು ನಿರಾಕರಿಸಿದ್ದಾಯಿತು. ಈ ಅಧಿಕರಣದಲ್ಲಿ ಛಾಂದೋಗ್ಯದಲ್ಲಿರುವ ಜ್ಯೋತಿಯನ್ನು ಛಂದಸ್ಸೆಂದು ನಿರಾಕರಿಸುತ್ತಿದ್ದಾರೆ. ಎರಡನೆಯ ಮತದಲ್ಲಿ ಜ್ಯೋತಿರಧಿಕರಣದಲ್ಲಿ ಅಗ್ನಿಸೂಕ್ತದ ಜ್ಯೋತಿಯನ್ನು ಅಗ್ನಿಯೆಂದು ನಿರಾಸಮಾಡಿ ಈ ಅಧಿಕರಣದಲ್ಲಿ ಛಾಂದೋಗ್ಯದಲ್ಲಿರುವ ಗಾಯತ್ರಿಯನ್ನು ಛಂದಸ್ಸೆಂದು ನಿರಾಕರಿಸುತ್ತಿದ್ದಾರೆ. ಎರಡು ಮತಗಳಲ್ಲಿರುವ ಈ ವೈಲಕ್ಷಣ್ಯವನ್ನು ಗಮನಿಸಬೇಕು.

ಮೊದಲ ಮತದ ಪ್ರಕಾರ ಭಾಷ್ಯದಲ್ಲಿ ಗಾಯತ್ರೀವಾಕ್ಯವನ್ನು ಉದಾಹರಿಸಿದ್ದು ವ್ಯರ್ಥವಲ್ಲ. 'ಗಾಯತ್ರೀ ವಾ' ಎಂಬ ಉಪಕ್ರಮದ ಬಲದಿಂದ ಜ್ಯೋತಿಯು ಗಾಯತ್ರಿಯನ್ನೇ ಪ್ರತಿಪಾದಿಸುತ್ತದೆಂಬ ಪೂರ್ವಪಕ್ಷಬೀಜವನ್ನು ತೋರಿಸುವುದಕ್ಕಾಗಿ ಗಾಯತ್ರೀವಾಕ್ಯದ ಉಲ್ಲೇಖವು ಸಾರ್ಥಕವಾಗಿದೆ. ಎರಡನೆಯ ಮತದ ಪ್ರಕಾರ ಭಾಷ್ಯದಲ್ಲಿ ಜ್ಯೋತಿವಾಕ್ಯವನ್ನು ಉದಾಹರಿಸಿದ್ದು ತಪ್ಪಲ್ಲ. ಈ ಅಧಿಕರಣದ ಪೂರ್ವಪಕ್ಷದಲ್ಲಿ ಜ್ಯೋತಿರಧಿಕರಣದ ಆಕ್ಷೇಪವನ್ನು ತೋರಿಸುವುದಕ್ಕಾಗಿ ಅದು ಸಾರ್ಥಕವಾಗಿದೆ.

### ಕಠಿಣಪದಾರ್ಥ

ಅತ್ರ = ಜ್ಯೋತಿರಧಿಕರಣದಲ್ಲಿ; ಅಧಿವೇದಗತಾಃ = ವೇದಕ್ಕೆ ಸಂಬಂಧಪಟ್ಟ ಗಾಯತ್ರ್ಯಾದಿ ಶಬ್ದಾಃ = ಗಾಯತ್ರೀ, ಉಷ್ಣಿಕ್, ಬೃಹತೀ ಮೊದಲಾದ ಶಬ್ದಗಳು, ಆದ್ಯೇ ಮತೇ = ಜ್ಯೋತಿರ್ವಾಕ್ಯಮತದಲ್ಲಿ; ದ್ವಿತೀಯೇ ತು = ಗಾಯತ್ರೀವಾಕ್ಯಪಕ್ಷದಲ್ಲಿ; ಆದ್ಯೇ = ಸುಧಾಕಾರರ ಪಕ್ಷದಲ್ಲಿ; ಪೂರ್ವಪಕ್ಷಬೀಜಪ್ರದರ್ಶನಾರ್ಥಂ = ಗಾಯತ್ರೀ ವಾ ಎಂಬ ಉಪಕ್ರಮದಿಂದ ಪ್ರಾರಂಭವಾಗಿದೆಯೆಂಬ ಪೂರ್ವಪಕ್ಷದ ಕಾರಣವನ್ನು ತೋರಿಸುವುದಕ್ಕಾಗಿ; ದ್ವಿತೀಯೇ = ಟೀಕಾಕಾರರ ಪಕ್ಷದಲ್ಲಿ;

**प्रकाशः – ॐ छन्दोभिधानान्नेति चेन्न तथा चेतोऽर्पणनिगदात्तथाहि दर्शनम् ॐ ॥** टीकायामनुक्तेः **''अधिवेदगतानां''** इति न्यायविवरणं हृदि कृत्वा एतदधिकरणोपाधिमाह **– अत्रेति ॥** 'गायत्र्युष्णिक् बृहती' इत्यादिशब्दा इत्यर्थः । नन्वेवं सूत्रे गायत्रीशब्दमात्रासाधारणभूतादिपादव्यपदेशाद्युक्त्यनुपपत्तेः स एवोदाहरणमिति ज्ञायत इति चेन्न, वेदमातुस्त्रैवर्णिकद्वितीयजन्मजनन्या गायत्र्याः प्राधान्येन तन्नाम्न एवेतरोपलक्षणतया सूचनात् । अत एव 'सर्वसाधारण्याय छन्दः' इत्यसूत्रयत् । अन्यथा 'गायत्र्यभिधानात्' इत्येव ब्रूयात् । यद्यप्यत्र वक्ष्यमाणदिशा आकाशादिशब्दा अप्युदाहरणम् । तथाऽपि तेषामधिकरणान्तरविषयाणां सतामाकारान्तरेणात्र विषयत्वं, गायत्र्यादिशब्दानां तु सर्वाकारेणापीति विशेषादेवमुक्तमिति ध्येयम् । अत्र पूर्वसङ्गतिं वक्तुं प्रस्थानद्वयं सङ्कलय्य टीकाकृदुक्तान्पक्षान्

भाष्यानुगुणोपपत्तीः प्रदर्शयन्विवेचयति – **अत्रेति** ॥ 'तत्स्थं' छान्दोग्यस्थम् । 'अत्र' इत्यस्य विवरणं – **टीकायामिति** । **"गायत्री वा इदꣳसर्वं भूतं यदिदं किञ्च"** इत्युदाहृतत्वादिति भावः ॥ **सुधायामिति** ॥ "छन्दोगाः पठन्ति **गायत्री वा इदं सर्वं भूतं**" इत्यादि । तत्र संशयः "किं गायत्री ब्रह्म किं वा वर्णसमावेशलक्षणो मन्त्रः" इत्यादिनेत्यर्थः । नन्विदं वा तद्वा, फलविशेषाभावाद्व्यर्थो विकल्प इत्यत आह – **अत्रेति** ॥ 'आद्ये' ज्योतिर्वाक्यपक्षे इत्यर्थः ॥ **द्वितीय इति** ॥ गायत्रीवाक्यपक्षे । अत्रोक्तपक्षद्वये – **"अथ यदतः परो दिवो ज्योतिर्दीप्यते** इत्युक्तस्य ज्योतिषो **'गायत्री वा इदं ꣳ सर्वम्'** इति गायत्र्या समारम्भः कृतः" इति भाष्यमनुगुणयति – **आद्य इति** ॥ स्पष्टयिष्यते चैतदग्र इति भावः ।

ವಿವರಣೆ - ಅಧಿವೇದಗತಶಬ್ದಗಳ ಸಮನ್ವಯವನ್ನು ಗಾಯತ್ರ್ಯಧಿಕರಣದಲ್ಲಿ ಮಾಡುತ್ತಿದ್ದಾರೆ. ಇದನ್ನು ಟೀಕೆಯಲ್ಲಿ ಹೇಳದಿದ್ದರೂ ನ್ಯಾಯವಿವರಣದಲ್ಲಿ ಹೇಳಿದ್ದರಿಂದ ಗ್ರಂಥಕಾರರು ಈ ಅಧಿಕರಣದ ಉಪಾಧಿಯನ್ನು 'ಅಧಿವೇದಗತಾನಾಮ್' ಎಂದು ಹೇಳಿದ್ದಾರೆ. ಅಂದರೆ ಈ ಅಧಿಕರಣದಲ್ಲಿ ಗಾಯತ್ರೀ, ಉಷ್ಣಿಕ್, ಬೃಹತೀ ಮೊದಲಾದ ಅನೇಕ ಛಂದೋವಾಚಕಶಬ್ದಗಳನ್ನು ಸಮನ್ವಯ ಮಾಡುತ್ತಿದ್ದಾರೆಂದು ಅಭಿಪ್ರಾಯ.

ಶಂಕೆ - ಗಾಯತ್ರೀಶಬ್ದದ ಜೊತೆಗೆ ಉಷ್ಣಿಕ್ ಮೊದಲಾದ ಶಬ್ದಗಳ ಸಮನ್ವಯವನ್ನು ಮಾಡುತ್ತಿರುವುದು ಸರಿಯಲ್ಲ. ಸೂತ್ರದಲ್ಲಿ ಗಾಯತ್ರೀಶಬ್ದದಲ್ಲಷ್ಟೇ ಅಸಾಧಾರಣವಾದ ಭೂತಾದಿಪಾದ-ವ್ಯಪದೇಶವನ್ನು ಹೇಳಿದ್ದಾರೆ. ಇದನ್ನು ಉಷ್ಣಿಕಾದಿಗಳಲ್ಲಿ ಹೇಳಲಾಗದು. ಆದ್ದರಿಂದ ಗಾಯತ್ರೀಶಬ್ದವಷ್ಟೇ ಉದಾಹರಣೆಯಾಗುತ್ತದೆ. ಉಷ್ಣಿಕಾದಿಶಬ್ದಗಳಲ್ಲ.

ಸಮಾಧಾನ - ಇದು ತಪ್ಪು. ವೇದಮಾತೆಯಾದ ಗಾಯತ್ರಿಯು ಮೂರು ವರ್ಣದವರಿಗೆ ಎರಡನೆಯ ಜನ್ಮವನ್ನು ನೀಡುವ ತಾಯಿಯಾಗಿದ್ದಾಳೆ. ಹೀಗೆ ಅನೇಕ ಛಂದಸ್ಸುಗಳ ಮಧ್ಯದಲ್ಲಿ ಗಾಯತ್ರಿ-ಯು ಪ್ರಧಾನವಾದ್ದರಿಂದ ತತ್ಸಾಧಕವಾದ ಲಿಂಗವನ್ನಷ್ಟೇ ಸೂತ್ರಕಾರರು ಉಪಲಕ್ಷಣಯಾ ಹೇಳಿದ್ದಾರೆ. ಎಲ್ಲಾ ಛಂದೋವಾಚಕಶಬ್ದಗಳನ್ನು ಸಮನ್ವಯ ಮಾಡಬೇಕೆಂಬ ಉದ್ದೇಶವಿರುವುದರಿಂದಲೇ ಸೂತ್ರ-ಕಾರರು ಸರ್ವಸಾಧಾರಣವಾದ 'ಛಂದಃ' ಎಂಬ ಪದವನ್ನು ಉಲ್ಲೇಖಿಸಿದ್ದಾರೆ. ಇಲ್ಲದಿದ್ದರೆ 'ಗಾಯತ್ರ್ಯಭಿ-ಧಾನಾತ್' ಎಂದೇ ಹೇಳಬಹುದಿತ್ತಲ್ಲವೇ.

ಈ ಅಧಿಕರಣದಲ್ಲಿ ನಿತ್ಯಪದಾರ್ಥಗಳ ಸ್ವಭಾವವನ್ನು ಹೇಳುವ ಶಬ್ದಗಳನ್ನು ಸಮನ್ವಯ ಮಾಡುತ್ತಿದ್ದಾರೆ. ಇದರ ಪ್ರಕಾರ ಆಕಾಶಾದಿಶಬ್ದಗಳ ಸಮನ್ವಯವೂ ಸಹ ಈ ಅಧಿಕರಣದಿಂದ ಸಿದ್ಧವಾಗುತ್ತದೆ. ಇಷ್ಟು ಮಾತ್ರದಿಂದ ಆಕಾಶಾದ್ಯಧಿಕರಣಗಳಿಗೆ ವೈಯ್ಯರ್ಥ್ಯವನ್ನು ಹೇಳಬಾರದು. ಬೇರೆ ಬೇರೆ ಪ್ರಕಾರದಿಂದ ಆಕಾಶಾದಿಶಬ್ದಗಳು ಬೇರೆ ಅಧಿಕರಣದಿಂದಲೂ ಸಮನ್ವಯವಾಗುತ್ತವೆ. ಆದರೆ

ಗಾಯತ್ರೀ ಮೊದಲಾದ ಛಂದೋವಾಚಕಶಬ್ದಗಳು ಸಕಲಪ್ರಕಾರಗಳಿಂದ ಈ ಅಧಿಕರಣದಲ್ಲಷ್ಟೇ ಸಮನ್ವಯವಾಗುತ್ತವೆ. ಆದ್ದರಿಂದ ಆಕಾಶಾದಿಶಬ್ದಗಳನ್ನು ಉದಾಹರಿಸದೇ ಗಾಯತ್ರ್ಯಾದಿ ಶಬ್ದಗಳನ್ನಷ್ಟೇ ಉದಾಹರಿಸಿದ್ದಾರೆ.

ಈ ಅಧಿಕರಣಕ್ಕೆ ಹಿಂದಿನ ಅಧಿಕರಣದಿಂದ ಸಂಗತಿಯನ್ನು ಹೇಳಲು ಸುಧಾ ಹಾಗೂ ಟೀಕೆಗಳನ್ನು ಸಂಗ್ರಹಿಸಿ ಟೀಕಾಕಾರರೇ ಹೇಳಿದ ಪಕ್ಷಗಳನ್ನು ಭಾಷ್ಯಕ್ಕೆ ಅನುಗುಣವಾದ ಯುಕ್ತಿಯನ್ನು ಹೇಳುವ ಮೂಲಕ ವಿವೇಚನೆಯನ್ನು 'ಅತ್ರ' ಇತ್ಯಾದಿ ಗ್ರಂಥದಿಂದ ನಡೆಸಿದ್ದಾರೆ. ಅತ್ರ ಎಂಬುದರ ವಿವರಣೆಯನ್ನೇ 'ಟೀಕಾಯಾಂ' ಎಂಬ ಗ್ರಂಥದಿಂದ ಮಾಡುತ್ತಿದ್ದಾರೆ. ಟೀಕೆಯಲ್ಲಿ ಕೇವಲ 'ಗಾಯತ್ರೀ ವಾ ಇದಂ ಸರ್ವಂ ಭೂತಂ ಯದಿದಂ ಕಿಂಚ' ಎಂಬ ಒಂದೇ ವಾಕ್ಯವನ್ನು ಉದಾಹರಿಸಿದ್ದಾರೆ. ಆದರೆ ಸುಧೆಯಲ್ಲಿ 'ಛಂದೋಗಾಃ ಪಠಂತಿ ಗಾಯತ್ರೀ ವಾ ಇದಂ ಸರ್ವಂ' ಮತ್ತು 'ಅಥ ಯದತಃ' ಎಂಬ ಎರಡು ವಿಷಯವಾಕ್ಯಗಳನ್ನು ಉದಾಹರಿಸಿದ್ದಾರೆ. ಇಲ್ಲಿ ಬರುವ ಸಂಶಯ ಹೀಗಿದೆ -- ಗಾಯತ್ರೀಶಬ್ದದಿಂದ ಬ್ರಹ್ಮನು ಪ್ರತಿಪಾದ್ಯನಾಗುತ್ತಾನೋ ಅಥವಾ 'ತತ್ಸವಿತುರ್ವರೇಣ್ಯಂ' ಇತ್ಯಾದಿ ವರ್ಣಸಮಾವೇಶ-ರೂಪವಾದ ಮಂತ್ರವು ಪ್ರತಿಪಾದ್ಯವಾಗುತ್ತದೋ? ಎಂದು ಸುಧೆಯ ಅರ್ಥ.

ಈ ಅಧಿಕರಣಕ್ಕೆ ಎರಡು ವಿಷಯವಾಕ್ಯಗಳನ್ನು ಹೇಳುತ್ತಿದ್ದೀರಿ. ಈ ವಾಕ್ಯವನ್ನೋ ಅಥವಾ ಆ ವಾಕ್ಯವನ್ನೋ ಹೇಳಲು ವಿಶೇಷಪ್ರಯೋಜನವಿಲ್ಲ. ಎರಡರಲ್ಲಿ ಯಾವುದೊಂದನ್ನೂ ಹೇಳಬಹುದೆಂಬ ವಿಕಲ್ಪವು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ 'ಅತ್ರ ಆದ್ಯೇ ಮತೇ' ಎಂಬುದರಿಂದ ಉತ್ತರಿಸುತ್ತಿದ್ದಾರೆ. 'ಆದ್ಯೇ ಮತೇ' ಎಂದರೆ ಜ್ಯೋತಿರ್ವಾಕ್ಯಪಕ್ಷದಲ್ಲಿ ಎಂದರ್ಥ. ದ್ವಿತೀಯ ಮತೇ ಎಂದರೆ ಗಾಯತ್ರೀ-ವಾಕ್ಯಪಕ್ಷದಲ್ಲಿ ಎಂದರ್ಥ.

ಎರಡೂ ಪಕ್ಷಗಳು 'ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತ ಇತ್ಯುಕ್ತಸ್ಯ ಜ್ಯೋತಿಷೋ ಗಾಯತ್ರೀ ವಾ ಇದಂ ಸರ್ವಮಿತಿ ಗಾಯತ್ರ್ಯಾ ಸಮಾರಂಭಃ ಕೃತಃ' ಎಂಬ ಭಾಷ್ಯಕ್ಕೆ ಅನುಗುಣವಾಗಿದೆ ಎಂದು 'ಆದ್ಯೇ' ಎಂಬ ಗ್ರಂಥದಿಂದ ತೋರಿಸುತ್ತಿದ್ದಾರೆ. ಈ ವಿಚಾರವನ್ನು ಮುಂದೆ ಸ್ಪಷ್ಟ ಪಡಿಸುತ್ತೇವೆ.

**गुरुराजीयम्** – ॐ छन्दोभिधानान्नेति चेन्न तथा चेतोर्पणनिगदात्तथाहि दर्शनं ॐ ॥ सङ्गतिकथनसौकर्याय मतभेदमाह – **अत्रेति** ॥ मतद्वयेऽपि फलभेदमाह – **अत्राद्य इति** ॥ नन्वाद्ये मते भाष्ये गायत्रीपदोपादानमनर्थकमित्यत आह – **आद्य इति** ॥ द्वितीये मते ज्योतिर्वाक्योपादानस्य प्रयोजनमाह – **द्वितीय इति** ॥

## ಸಾರ

ಗಾಯತ್ರೀ, ಉಷ್ಣಿಕ್ ಬೃಹತೀ ಮೊದಲಾದ ಛಂದೋವಾಚಕಪದಗಳನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡಲಾಗಿದೆ. ಸುಧೆಯ ಪ್ರಕಾರ 'ಅಥ ಯದತಃ' ಎಂಬ ಶ್ರುತಿಯು ವಿಷಯವಾಕ್ಯ. 'ಗಾಯತ್ರೀ ವಾ' ಎಂಬ

ವಾಕ್ಯವು ಟೀಕೆಯಪ್ರಕಾರ ವಿಷಯವಾಕ್ಯ. ಆದ್ದರಿಂದ ಜ್ಯೋತಿರಧಿಕರಣದಲ್ಲಿ ಅಗ್ನಿಸೂಕ್ತದಲ್ಲಿರುವ ಜ್ಯೋತಿಯನ್ನು ಅಗ್ನಿಯಲ್ಲಿ ಪ್ರತಿಪಾದಿಸಿ ಈ ಅಧಿಕರಣದಲ್ಲಿ ಛಾಂದೋಗ್ಯದಲ್ಲಿರುವ ಜ್ಯೋತಿಯನ್ನು ಅಗ್ನಿಯಲ್ಲವೆಂದು ಸುಧೆಯು ನಿರಾಸ ಮಾಡುತ್ತಿದೆ. ಆದರೆ ಟೀಕೆಯು ಹಿಂದಿನ ಅಧಿಕರಣದಲ್ಲಿ ಅಗ್ನಿಸೂಕ್ತದ ಜ್ಯೋತಿಯನ್ನು ಅಗ್ನಿಯಲ್ಲವೆಂದು ನಿರಾಸ ಮಾಡಿ ಈ ಛಾಂದೋಗ್ಯದ ಗಾಯತ್ರಿಯನ್ನು ಛಂದಸ್ಸಲ್ಲವೆಂದು ನಿರಾಸ ಮಾಡುತ್ತಿದೆ.

---

## ನ್ಯಾಯಸುಧೆ ಹಾಗೂ ಟೀಕೆಗಳಲ್ಲಿರುವ ಐದು ಪೂರ್ವಪಕ್ಷಗಳು

### तात्पर्यचन्द्रिका

आद्येऽपि, च्छान्दोग्यस्थज्योतिषः ''गायत्री वै'' इत्युपक्रमेण गायत्रीत्वादग्निसूक्तस्थमपि गायत्रीत्येकः पूर्वः पक्षः । अपरस्तु अस्त्वग्निसूक्तस्थं ज्योतिः कर्णादिविदूरत्वाद्विष्णुः, छान्दोग्यस्थं तु ''तदेतद्दृष्टं च श्रुतञ्च'' इति तद्विरुद्धदृष्टश्रुतत्वादिश्रवणात् न विष्णुरिति ।

न चैवं सति पूर्वपक्षे पूर्वसिद्धान्तानाक्षेपादफलेयं चिन्ता, ज्योतिषो गायत्रीत्वे ''इयं वा व सा येयं पृथिवी'' इति गायत्र्यभिन्नत्वेनोक्तायां पृथिव्यां ''अस्यां हीदं सर्वं प्रतिष्ठितं'' इत्युक्तस्यस्थितिहेतुत्वादेरपि तद्धर्मत्वापत्त्या जन्मादिसूत्राक्षेपात् । ''योऽयमन्तर्हृदये'' इति छान्दोग्यस्थे ज्योतिषि आनन्दमयधर्मभूतहृदयनिहितत्वश्रवणेन ज्योतिरधिकरणमनाक्षिप्यैव आनन्दमयाधिकरणाक्षेपाच्च ।

द्वितीयेऽपि, गायत्र्याः छन्दस्त्वे तामुपक्रम्य छान्दोग्ये उक्तस्य ज्योतिषोऽपि च्छन्दस्त्वादग्निसूक्तस्थमपि छन्द इत्येकः पूर्वः पक्षः । अन्यस्तु- उक्तरीत्याऽग्निसूक्तस्थस्य विष्णुत्वेऽपि च्छान्दोग्यस्थं छन्द एवेति ।

अपरस्तु – च्छान्दोग्यस्थस्यापि ज्योतिषो ज्योतिरधिकरणे विष्णौ निर्णीतज्योतिश्श्रुत्या विष्णुत्वेऽपि गायत्री न विष्णुः, तत्र तत् श्रुतेरभावादिति ।

अत्रापि प्रथमद्वितीयोराद्योऽत्र टीकायामुक्तः । आद्येऽपि प्रथमद्वितीयौ (द्वितीये प्रथमोऽत्र टीकायामुक्तः । प्रथमे द्वितीयः ।) द्वितीये द्वितीयतृतीयौ च सुधायाम् ।

अ(त)त्र मतद्वयेऽपि आद्ये पूर्वपक्षे पूर्वसिद्धान्ताक्षेपादाक्षेपिकी

**अवान्तरसङ्गतिः स्फुटा । आद्ये द्वितीये, द्वितीयस्य द्वितीयतृतीययोस्तु पूर्वपक्षयोः पूर्वाधिकरणवैषम्यप्रदर्शनाय तदुपजीवित्वादवान्तरसङ्गतिः ।**

ಅನುವಾದ - ಸುಧೆಯ ಪ್ರಕಾರ ಎರಡು ಪೂರ್ವಪಕ್ಷಗಳು - ಛಾಂದೋಗ್ಯದಲ್ಲಿರುವ ಜ್ಯೋತಿಯು ಗಾಯತ್ರೀ ವಾ' ಎಂಬ ಉಪಕ್ರಮದಿಂದ ಕೂಡಿದ್ದರಿಂದ ಗಾಯತ್ರಿ ಎನಿಸಿದೆ. ಆದ್ದರಿಂದ ಅಗ್ನಿಸೂಕ್ತದಲ್ಲಿರುವ ಜ್ಯೋತಿಯೂ ಸಹ ಗಾಯತ್ರಿಯೇ ಆಗಬೇಕು, ಇದು ಪ್ರಥಮಪೂರ್ವಪಕ್ಷ.

ಎರಡನೆಯ ಪೂರ್ವಪಕ್ಷ ಹೀಗಿದೆ - ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ಕರ್ಣಾದಿವಿದೂರತ್ವ ಲಿಂಗವಿರುವುದರಿಂದ ವಿಷ್ಣುವೆನಿಸಲಿ; ಆದರೆ ಛಾಂದೋಗ್ಯದಲ್ಲಿ ಕರ್ಣಾದಿವಿದೂರತ್ವಕ್ಕೆ ವಿರುದ್ಧವಾಗಿ 'ತದೇತದ್ದೃಷ್ಟಂ ಚ ಶ್ರುತಂ ಚ' ಎಂದು ಇಂದ್ರಿಯವಿಷಯತ್ವವು ಶ್ರುತವಾದ್ದರಿಂದ ಛಾಂದೋಗ್ಯದ ಜ್ಯೋತಿಯು ವಿಷ್ಣುವಲ್ಲ ಎಂದು. ಎರಡನೆಯ ಈ ಪೂರ್ವಪಕ್ಷವು ಹಿಂದಿನ ಅಧಿಕರಣದ ಸಿದ್ಧಾಂತ-ವನ್ನು ಆಕ್ಷೇಪಿಸದ ಕಾರಣ ವ್ಯರ್ಥವೆಂದು ಹೇಳಬಾರದು. ಹಿಂದಿನ ಅಧಿಕರಣದ ಸಿದ್ಧಾಂತವನ್ನೇ ಆಕ್ಷೇಪಿಸಬೇಕೆಂದೇನಿಲ್ಲ. ಜನ್ಮಾದಿ ಸೂತ್ರದ ಸಿದ್ಧಾಂತವನ್ನು ನೇರವಾಗಿ ಆಕ್ಷೇಪಿಸುತ್ತಿದೆ. ಅದು ಹೀಗೆ - ಜ್ಯೋತಿಯೇ ಗಾಯತ್ರಿಯಾದರೆ 'ಇಯಂ ವಾವ ಸಾ ಯೇಯಂ ಪೃಥಿವೀ' ಎಂಬ ಶ್ರುತಿಯು ಗಾಯತ್ರಿಯನ್ನು ಪೃಥಿವೀ ಸ್ವರೂಪವೆನ್ನುತ್ತಿದೆ. ಈ ಪೃಥಿವಿಗೆ ಮತ್ತೊಂದು ಶ್ರುತಿಯು 'ಅಸ್ಯಾಂ ಹೀದಂ ಸರ್ವಂ ಪ್ರತಿಷ್ಠಿತಮ್' ಎಂದು ಸ್ಥಿತಿಹೇತುತ್ವವನ್ನು ಹೇಳುತ್ತಿದೆ. ಆದ್ದರಿಂದ ಸ್ಥಿತಿಹೇತುತ್ವವು ಗಾಯತ್ರಿಯ ಧರ್ಮವೆಂದಂತಾಯಿತು. ಇದರಿಂದ ಬ್ರಹ್ಮನಲ್ಲಿ ಹೇಳಿದ ಜನ್ಮಾಧಿಕರಣದ ಸ್ಥಿತಿ-ಹೇತುತ್ವವನ್ನು ಆಕ್ಷೇಪಿಸಿದಂತಾಯಿತು. ಅಥವಾ 'ಯೋऽಯಮಂತರ್ಹೃದಯೇ' ಎಂದು ಛಾಂದೋಗ್ಯದ ಜ್ಯೋತಿಗೆ ಆನಂದಮಯನ ಧರ್ಮವಾದ ಹೃದಯನಿಹಿತತ್ವವು ಹೇಳಲ್ಪಟ್ಟಿದೆ. ಆದ್ದರಿಂದ ಜ್ಯೋತಿರಧಿಕರಣವನ್ನು ಆಕ್ಷೇಪ ಮಾಡದೆ ನೇರವಾಗಿ ಆನಂದಮಯಾಧಿಕರಣವನ್ನು ಆಕ್ಷೇಪಿಸಿದಂತಾಯಿತು.

ಎರಡನೆಯ ಪಕ್ಷದಲ್ಲಿ ಮೂರು ಪೂರ್ವಪಕ್ಷಗಳು - ಗಾಯತ್ರಿಯು ಛಂದಸ್ಸಾದರೆ ಗಾಯತ್ರಿಯ ಉಪಕ್ರಮದಿಂದ ಛಾಂದೋಗ್ಯದಲ್ಲಿ ಹೇಳಲ್ಪಟ್ಟ ಜ್ಯೋತಿಗೆ ಛಂದಸ್ತ್ವವನ್ನು ಹೇಳಿದಂತಾಯಿತು. ಆದ್ದರಿಂದ ಅಗ್ನಿಸೂಕ್ತದಲ್ಲಿರುವ ಜ್ಯೋತಿಯೂ ಸಹ ಛಂದಸ್ಸೇ ಆಗುತ್ತದೆಂಬುದು ಮೊದಲ ಪೂರ್ವಪಕ್ಷ. ಮತ್ತೊಂದು ಹಿಂದೆ ಹೇಳಿದಂತೆ ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ವಿಷ್ಣುವಾದರೂ ಛಾಂದೋಗ್ಯದಲ್ಲಿರುವ ಜ್ಯೋತಿಯು ಛಂದಸ್ಸೇ ಆಗುತ್ತದೆಂಬುದು. ಮೂರನೆಯ ಪೂರ್ವಪಕ್ಷ - ಛಾಂದೋಗ್ಯದಲ್ಲಿರುವ ಜ್ಯೋತಿಯು ನಿರ್ಣೀತ ಜ್ಯೋತಿಶ್ರುತಿಯ ಆಧಾರದಿಂದ ಜ್ಯೋತಿ-ರಧಿಕರಣದಲ್ಲಿ ಹೇಳಿದಂತೆ ವಿಷ್ಣುವೆನಿಸಲಿ. ಆದರೆ ಅಂತಹ ಶ್ರುತಿಯ ಬೆಂಬಲವಿಲ್ಲದ ಗಾಯತ್ರಿಯು ವಿಷ್ಣುವಾಗಲಾರದು ಎಂದು.

ಒಟ್ಟು ಐದು ಪೂರ್ವಪಕ್ಷವನ್ನು ಇಲ್ಲಿ ಹೇಳಿದ್ದಾರೆ. ಇವುಗಳ ಮಧ್ಯ ಎರಡನೆಯ ಪಕ್ಷದ ಮೊದಲ ಪೂರ್ವಪಕ್ಷವು ಟೀಕೆಯಲ್ಲಿ ಉಕ್ತವಾಗಿದೆ. ಪ್ರಥಮಪಕ್ಷದ ಎರಡು ಪೂರ್ವಪಕ್ಷಗಳು; ಎರಡನೆಯ ಪಕ್ಷದ ಎರಡು ಹಾಗೂ ಮೂರನೆಯ ಪೂರ್ವಪಕ್ಷಗಳು ಸುಧೆಯಲ್ಲಿ ಉಕ್ತವಾಗಿವೆ. ಎರಡೂ ಮತಗಳಲ್ಲಿಯೂ ಮೊದಲ ಪೂರ್ವಪಕ್ಷದಲ್ಲಿ ಹಿಂದಿನ ಅಧಿಕರಣದ ಸಿದ್ಧಾಂತವನ್ನು ಆಕ್ಷೇಪಿಸಿದ್ದರಿಂದ ಆಕ್ಷೇಪಿಕೀ ಎಂಬ ಅವಾಂತರಸಂಗತಿಯು ಶ್ರುತವಾಗಿದೆ. ಪ್ರಥಮಪಕ್ಷದ ಎರಡನೆಯ ಪೂರ್ವಪಕ್ಷ ಹಾಗೂ ದ್ವಿತೀಯಪಕ್ಷಗ ಎರಡು ಮೂರನೆಯ ಪೂರ್ವಪಕ್ಷಗಳು ಹಿಂದಿನ ಅಧಿಕರಣದಿಂದ ವೈಷಮ್ಯವನ್ನು ತೋರಿಸಲು ಹಿಂದಿನ ಅಧಿಕರಣವನ್ನು ಉಪಜೀವಿಸಿವೆ. ಈ ಕಾರಣದಿಂದ ಅವಾಂತರ ಸಂಗತಿಯನ್ನು ತಿಳಿಯಬೇಕು.

### ಕಠಿಣಪದಾರ್ಥ

ಅಗ್ನಿಸೂಕ್ತಸ್ಥಮಪಿ = ಅಗ್ನಿಸೂಕ್ತದಲ್ಲಿರುವ ಜ್ಯೋತಿಯೂ ಕೂಡ, ಇಯಂ = ಗಾಯತ್ರಿಯು, ಅಸ್ಯಾಂ = ಪೃಥಿವಿಯಲ್ಲಿ, ತದ್ಧರ್ಮತ್ವಾದಸ್ಯ = ಗಾಯತ್ರಿಯ ಧರ್ಮವಾಗುವುದೆಂದು; ತತ್‌ಶ್ರುತೇಃ = ವಿಷ್ಣುವಿನಲ್ಲಿ ನಿರ್ಣಯವಾದ ಶ್ರುತಿಯು; ಅತ್ರಾಪಿ = ಐದು ಪೂರ್ವಪಕ್ಷಗಳ ಮಧ್ಯದಲ್ಲಿ; ಉಪಜೀವಿತ್ವಾದವಾಂತರಸಂಗತಿಃ = ಉಪಜೀವ್ಯ ಉಪಜೀವಕಭಾವ ಎಂಬ ಸಂಗತಿಯು;

**प्रकाशः** – एवं वैकल्पिकोदाहरणमुक्त्वा, इदानीं ज्योतिर्वाक्योदाहरणपक्षे सुधाऽभिमतपूर्वपक्षद्वयमाह – **आद्येपीति** ॥ उदाहरणभेदसमुच्चयार्थोऽपिशब्दः ।

॥ **अग्निसूक्तस्थमपीति** ॥ ज्योतिश्श्रुत्या हृदयस्थत्वलिङ्गेन ज्योतिर्द्वयस्यैक्यप्रत्यभिज्ञानात् दृष्टत्वादिविरुद्धधर्मस्याऽऽकारभेदादिनोपपत्तेरिति भावः ।

द्वितीयपूर्वपक्षेऽनुपपत्तिं प्रकाश्य समाधत्ते – **न चैवमिति** ॥ अग्निसूक्तस्थज्योतिषो विष्णुत्वमुपेत्य पूर्वपक्षकरणे सतीत्यर्थः ॥ **तद्धर्मत्वेति** ॥ गायत्रीधर्मत्वापत्त्येत्यर्थः । पूर्वाधिकरणाक्षेपस्यापि व्यवहितजिज्ञासासूत्राक्षेपपर्यन्तत्वादिति भावः । ननु पूर्वोत्तराधिकरणानाम् आनन्दमयाक्षेपपूर्वं जिज्ञासासूत्राक्षेपकत्वेन प्रवृत्तत्वात्कथमस्य ततो विलक्षणस्य तन्मध्ये निवेश इत्यतः पक्षान्तरमाह – **योऽयमिति** ॥ यद्यपि **'यो वेद निहितं गुहायां'** इति मन्त्रवर्ण एवायं धर्मः श्रुतः, न त्वानन्दमये, तथाऽपि मन्त्रवर्णोक्तस्यैव आनन्दमयशब्देनोच्यमानत्वादिति भावः ।

ज्योतिर्वाक्यपक्षे पूर्वपक्षद्वयमुक्त्वा, गायत्रीवाक्यपक्षे पूर्वपक्षत्रयमाह – **द्वितीयेऽपीति** ॥ **उक्तरीत्येति** ॥ कर्णादिविदूरत्वात् तस्य विष्णुत्वेऽपि ''दृष्टञ्च श्रुतं

च'' इति तद्विरुद्धदृष्टत्वादिश्रवणात् छान्दोग्यस्थं न विष्णुरित्युक्तदिशेत्यर्थः । अस्मिन्पक्षे वक्ष्यमाणपक्षे च सप्रयोजनत्वं पूर्ववदनुसन्धेयम् ॥ **तत् श्रुतेरिति** ॥ ज्योतिः श्रुतिश्चोपदेशभेदेन भिन्नप्रकरणत्वान्न गायत्र्यां श्रुतेति भावः ।

उक्त पञ्चपक्षान् संवादयति – **अत्रापीति** ॥ पञ्चपक्षमध्येऽपीत्यर्थः । **आद्येऽपि प्रथमद्वितीयाविति** । यद्यपि **''अथ वा अत्रापि अथ यदतः परो दिवः'' इति वाक्योक्तज्योतिषि सन्देहः । किं ब्रह्मोतान्यदिति, उपक्रमे गायत्रीशब्दश्रवणात् अन्यदिति प्राप्तम्''** इत्येव सुधावाक्यं, न तु द्वेधा तत्र पूर्वपक्षोपपादनमस्ति, तथाऽपि पूर्वाक्षेपेण पूर्ववैषम्येण च योजयितुं शक्यत्वादेवमुक्तम् । तथाच तद्वाक्यं द्वेधा योजनीयमित्युक्तं भवति ॥ **द्वितीय इति** ॥ एतौ च सुधायां कण्ठोक्ताविति ध्येयम् ।

एवं पक्षान्विविच्येदानीं सङ्गतिमाह – **अत्रेति** ॥ ज्योतिर्वाक्यपक्षे गायत्री-वाक्यपक्षे चेत्यर्थः । **तदुपजीत्वादिति** । उपजीव्योपजीवकभाव इत्युक्तं भवति ।

ವಿವರಣೆ - 'ಅಥ ಯದತಃ' ಎಂಬುದು ಈ ಅಧಿಕರಣದ ವಿಷಯವಾಕ್ಯವಾಗಬಹುದು. ಅಥವಾ 'ಗಾಯತ್ರೀ ವಾ ಇದಂ ಸರ್ವಂ' ಎಂಬುದು ವಿಷಯವಾಕ್ಯವಾಗಬಹುದೆಂದು ವಿಕಲ್ಪವನ್ನು ಇದುವರೆಗೂ ಹೇಳಿದರು. ಪ್ರಕೃತ 'ಅಥ ಯದತಃ' ಎಂಬ ಜ್ಯೋತಿರ್ವಾಕ್ಯವು ವಿಷಯವಾಕ್ಯವೆಂದು ವಿವಕ್ಷಿಸಿ ಸುಧೆಗೆ ಅಭಿಮತವಾದ ಎರಡು ಪೂರ್ವಪಕ್ಷಗಳನ್ನು 'ಆದ್ಯೇಪಿ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ. ವಿಷಯವಾಕ್ಯಗಳಲ್ಲಿರುವ ವೈಲಕ್ಷಣ್ಯವನ್ನು ತಿಳಿಸುವುದಕ್ಕಾಗಿಯೇ 'ಆದ್ಯೇಪಿ' ಎಂಬಲ್ಲಿ ಗ್ರಂಥಕಾರರು ಅಪಿಶಬ್ದವನ್ನು ಉಲ್ಲೇಖಿಸಿದ್ದಾರೆ.

ಜ್ಯೋತಿಶ್ರುತಿಯಿಂದ ಹಾಗೂ ಹೃದಯಸ್ಥತ್ವಲಿಂಗದಿಂದ ಎರಡೂ ಜ್ಯೋತಿಗಳು ಒಂದೇ ಎಂಬ ಪ್ರತ್ಯಭಿಜ್ಞಾನ ಬರುತ್ತದೆ. ಛಾಂದೋಗ್ಯದಲ್ಲಿ ಕರ್ಣಾದಿವಿದೂರತ್ವಕ್ಕಿಂತ ವಿರುದ್ಧವಾದ ದೃಷ್ಟತ್ವಾದಿಗಳನ್ನು ಹೇಳಿದ್ದಾರಲ್ಲ? ಎಂಬ ಶಂಕೆಗೆ ಅವಕಾಶವಿಲ್ಲ. ಒಂದೇ ಜ್ಯೋತಿಯು ಸಾಮಾನ್ಯಾಕಾರದಿಂದ ದೃಷ್ಟವೂ, ವಿಶೇಷಾಕಾರದಿಂದ ಕರ್ಣಾದಿವಿದೂರವೂ ಆಗಬಹುದೆಂದು ಅಗ್ನಿಸೂಕ್ತಸ್ಥಮಪಿ ಎಂಬ ಗ್ರಂಥದಿಂದ ತಿಳಿಸಿದ್ದಾರೆ.

ಎರಡನೆಯ ಪೂರ್ವಪಕ್ಷದಲ್ಲಿರುವ ಅನುಪಪತ್ತಿಯನ್ನು ತೋರಿಸಿ 'ನಚೈವಂ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ. ಅಗ್ನಿಸೂಕ್ತದಲ್ಲಿರುವ ಜ್ಯೋತಿಗೆ ವಿಷ್ಣುತ್ವವನ್ನು ಅಂಗೀಕರಿಸಿ ಪೂರ್ವಪಕ್ಷ ಮಾಡಿದರೆ ಬರುವ ಸಮಸ್ಯೆಯನ್ನು ಈ ವಾಕ್ಯದಿಂದ ಪರಿಹರಿಸಿದ್ದಾರೆ.

ಹಿಂದಿನ ಅಧಿಕರಣದ ಸಿದ್ಧಾಂತವನ್ನೇ ಆಕ್ಷೇಪಿಸಬೇಕೆಂದೇನಿಲ್ಲ. ಹಾಗೆ ಆಕ್ಷೇಪ ಮಾಡಿದರೂ ಸಹ ದೂರದಲ್ಲಿರುವ ಜಿಜ್ಞಾಸಾಸೂತ್ರದ ನ್ಯಾಯದ ತನಕ ಆಕ್ಷೇಪವನ್ನು ಮಾಡಲೇ ಬೇಕು. ಆದ್ದರಿಂದ

ನೇರವಾಗಿ ಆನಂದಮಯಾಧಿಕರಣ ನ್ಯಾಯವನ್ನು ಜನ್ಮಾದಿಸೂತ್ರದ ನ್ಯಾಯವನ್ನು ಆಕ್ಷೇಪಿಸುವುದು ತಪ್ಪಾಗುವುದಿಲ್ಲ.

ಹಿಂದಿನ ಅಧಿಕರಣಗಳಲ್ಲಿ ಆನಂದಮಯನನ್ನು ಆಕ್ಷೇಪಿಸುವ ಮೂಲಕವಾಗಿ ಜಿಜ್ಞಾಸಾಸೂತ್ರವನ್ನು ಆಕ್ಷೇಪಿಸಲಾಗಿದೆ. ಆದರೆ ಈ ಅಧಿಕರಣದಲ್ಲಿ ನೇರವಾಗಿ ಜನ್ಮಾಧಿಕರಣವನ್ನೇ ಆಕ್ಷೇಪಿಸುತ್ತಿದ್ದೀರಿ. ಹೀಗಿರು -ವಾಗ ಹಿಂದಿನ ಮುಂದಿನ ಅಧಿಕರಣಗಳ ಮಧ್ಯದಲ್ಲಿ ಈ ಅಧಿಕರಣದ ಪ್ರವೇಶವು ಅನುಚಿತವಲ್ಲವೇ? ಎಂಬ ಪ್ರಶ್ನೆಯನ್ನು ಪರಿಹರಿಸಲು 'ಯೋಽಯಂ' ಎಂಬ ಮತ್ತೊಂದು ಪಕ್ಷವನ್ನು ಆಶ್ರಯಿಸಿದ್ದಾರೆ.

ವಸ್ತುತಃ 'ಯೋ ವೇದ ನಿಹಿತಂ ಗುಹಾಯಾಮ್' ಎಂದು ಮಂತ್ರವರ್ಣದಲ್ಲಿಯೇ ಹೃದಯ-ನಿಹಿತತ್ವವು ಶ್ರುತವಾಗಿದೆ; ಹೊರತು ಆನಂದಮಯನಲ್ಲಿ ಅಲ್ಲ. ಆದರೂ ಸಹ ಮಂತ್ರವರ್ಣದಿಂದ ಪ್ರತಿಪಾದ್ಯನಾದವನೇ ಆನಂದಮಯಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಆನಂದಮಯನಿಗೂ ಹೃದಯನಿಹಿತತ್ವವು ಹೇಳಿದಂತಾಗುತ್ತದೆ.

ಜ್ಯೋತಿಶ್ರುತಿಯು ವಿಷಯವಾಕ್ಯವೆಂಬ ಪಕ್ಷದಲ್ಲಿ ಎರಡು ಪೂರ್ವಪಕ್ಷಗಳನ್ನು ತೋರಿಸಿ, ಗಾಯತ್ರೀ-ಶ್ರುತಿಯು ವಿಷಯವಾಕ್ಯವೆಂಬ ಎರಡನೆಯ ಪಕ್ಷದಲ್ಲಿ ಮೂರು ಪೂರ್ವಪಕ್ಷಗಳನ್ನು 'ದ್ವಿತೀಯೇಽಪಿ' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ. 'ಉಕ್ತರೀತ್ಯಾ' ಎಂಬ ಗ್ರಂಥದ ಅಭಿಪ್ರಾಯ ಹೀಗಿದೆ. -- 'ಅಗ್ನಿಸೂಕ್ತದಲ್ಲಿರುವ ಜ್ಯೋತಿಗೆ ಕರ್ಣಾದಿವಿದೂರತ್ವಲಿಂಗಗಳು ಕೇಳಿಸುತ್ತಿರುವುದರಿಂದ ವಿಷ್ಣುವಾಗಲಿ. ಆದರೆ ಛಾಂದೋಗ್ಯದಲ್ಲಿರುವ ಜ್ಯೋತಿಗೆ 'ದೃಷ್ಟಂ ಚ ಶ್ರುತಂ ಚ' ಎಂದು ಕರ್ಣಾದಿವಿದೂರತ್ವಕ್ಕೆ ವಿರುದ್ಧವಾದ ಲಿಂಗಗಳು ಕೇಳಿಸುತ್ತಿವೆ. ಆದ್ದರಿಂದ ಛಾಂದೋಗ್ಯದ ಜ್ಯೋತಿಯು ವಿಷ್ಣುವಾಗಲಾರದು ಎಂದು ಹಿಂದೆ ಹೇಳಿದ್ದರು. ಅದರಂತೆ ಇಲ್ಲಿ ತಿಳಿಯಬೇಕು. ಈ ಪಕ್ಷದಲ್ಲಿ ಮತ್ತು ಮುಂದೆ ಹೇಳುವ ಪಕ್ಷದಲ್ಲಿ ಸಾಫಲ್ಯವನ್ನು ಹಿಂದೆ ಹೇಳಿದಂತೆ ತಿಳಿಯಬೇಕು. ಅಂದರೆ ಜನ್ಮಾಧಿಕರಣದ ನ್ಯಾಯವನ್ನು ಆಕ್ಷೇಪಿಸುತ್ತಿರುವುದರಿಂದ ಸಾರ್ಥಕವಾಗಿದೆ ಎಂದು.

ಜ್ಯೋತಿಶ್ರುತಿಯೇ ಬೇರೆ ಪ್ರಕರಣದಲ್ಲಿದೆ. ಗಾಯತ್ರೀಶ್ರುತಿಯೇ ಬೇರೆ ಪ್ರಕರಣದಲ್ಲಿದೆ. ದಿವಃಪರತ್ವವನ್ನು ಜ್ಯೋತಿಃಪ್ರಕರಣದಲ್ಲಿ ಹೇಳಲಾಗಿದೆ. ಇದಕ್ಕೆ ವಿರುದ್ಧವಾಗಿ ದಿವಿಸ್ಥಿತತ್ವವನ್ನು ಗಾಯತ್ರೀ ಪ್ರಕರಣದಲ್ಲಿ ಹೇಳಲಾಗಿದೆ. ಹೀಗೆ ಉಪದೇಶಭೇದವಿರುವುದರಿಂದ ಛಾಂದೋಗ್ಯದಲ್ಲಿರುವ ಜ್ಯೋತಿಯು ವಿಷ್ಣುವಾದರೂ ಗಾಯತ್ರೀಶಬ್ದವು ವಿಷ್ಣುವನ್ನು ಪ್ರತಿಪಾದಿಸಲಾರದು ಎಂದು 'ತತ್ ಶ್ರುತೇಃ' ಎಂಬ ಮಾತಿನ ಅಭಿಪ್ರಾಯ.

ಒಟ್ಟು ಐದು ಪೂರ್ವಪಕ್ಷಗಳನ್ನು ಹೇಳಿದಂತಾಯಿತು. ಇವುಗಳಿಗೆಲ್ಲಾ ಸಂವಾದವನ್ನು 'ಅತ್ರಾಪಿ' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ. ವಸ್ತುತಃ 'ಅಥವಾ ಅತ್ರಾಪಿ ಅಥ ಯದತಃ ಪರೋ ದಿವಃ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಜ್ಯೋತಿಯಲ್ಲಿ ಸಂದೇಹ ಬರುತ್ತದೆ. ಬ್ರಹ್ಮನೋ ಅಥವಾ ಬೇರೆಯೋ? ಎಂದು. ಉಪಕ್ರಮದಲ್ಲಿ ಗಾಯತ್ರೀಶಬ್ದವು ಶ್ರುತವಾದ್ದರಿಂದ ಬೇರೆ ಎಂದು ಪೂರ್ವಪಕ್ಷ. ಸುಧೆಯಲ್ಲಿ ಇಷ್ಟು ಮಾತ್ರ ಕಾಣಿಸುತ್ತದೆ; ಹೊರತು ಪೂರ್ವಾಧಿಕರಣವನ್ನು ಆಕ್ಷೇಪಿಸಿ ಅಥವಾ ಒಪ್ಪಿಕೊಂಡು ಪೂರ್ವಪಕ್ಷ ಮಾಡಬೇಕೆಂದೇನೂ ತೋರುವುದಿಲ್ಲ. ಆದರೂ ಹಿಂದಿನ ಅಧಿಕರಣದ ಆಕ್ಷೇಪವನ್ನು ಮತ್ತು

ವೈಷಮ್ಯವನ್ನು ತೋರಿಸಲು ಬರುತ್ತದೆಂದು ಹೀಗೆ ಗ್ರಂಥಕಾರರು ಹೇಳಿದ್ದಾರೆ. ಆದ್ದರಿಂದ ಎರಡು ಬಗೆಯಲ್ಲಿ ಸುಧೆಯ ವಾಕ್ಯವನ್ನು ಯೋಜಿಸಬೇಕೆಂದು ಹೇಳಿದಂತಾಯಿತು. ಎರಡನೆಯ ಪಕ್ಷದ ಎರಡು ಹಾಗೂ ಮೂರನೆಯ ಪೂರ್ವಪಕ್ಷಗಳು ಸುಧೆಯಲ್ಲಿ ಕಂಠತಃ ಹೇಳಲ್ಪಟ್ಟಿವೆ.

ಇಲ್ಲಿಯ ತನಕ ಎಲ್ಲಾ ಪೂರ್ವಪಕ್ಷಗಳನ್ನು ವಿವೇಚನೆ ಮಾಡಿದ್ದಾಯಿತು. ಈಗ ಈ ಅಧಿಕರಣಕ್ಕಿರುವ ಸಂಗತಿಯನ್ನು 'ಅತ್ರ' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ. ಹಿಂದಿನ ಅಧಿಕರಣದ ವೈಷಮ್ಯವನ್ನು ತೋರಿಸುವಾಗ ಈ ಅಧಿಕರಣವು ಅದನ್ನು ಉಪಜೀವಿಸಿದಂತಾಯಿತು. ಆದ್ದರಿಂದ ಉಪಜೀವ್ಯ-ಉಪಜೀವಕಭಾವವೆಂಬ ಅವಾಂತರಸಂಗತಿಯು ತಿಳಿಯುತ್ತದೆ.

**गुरुराजीयम्** – अत्राद्यमतानुसारेण पूर्वपक्षमाह – **आद्येपीति** ॥ **द्वितीय इति** ॥ गायत्रीवाक्यं विषयवाक्यमिति मत इत्यर्थः । अन्यस्त्वित्यादिपक्षद्वये ज्योतिर्वाक्योपादानं तु पूर्वाधिकरणवैषम्यं प्रदर्शयितुमिति ज्ञातव्यम् ॥ **अत्रापि इति** ॥ अथ यदतः परो दिवो ज्योतिरिति छान्दोग्यस्थं विषयवाक्यमिति प्रथम-पक्षस्य य आद्यः छान्दोग्यस्थज्योतिषो गायत्री वेत्युपक्रमेण गायत्रीत्वादग्नि-सूक्तस्थमपि गायत्रीति पूर्वःपक्षः । इयं च गायत्री यदि विष्णोरनन्या स्यात्तदेदं ज्योतिश्च सा स्यादिति गायत्रीनिर्णयोऽवश्यापेक्षित इति सङ्गतिटीकायामुक्तः गायत्रीवा इदं सर्वमिति विषयवाक्यमिति द्वितीयमतस्य योऽयमाद्यः गायत्र्याः छन्दस्त्वात्तामुपक्रम्य छान्दोग्य उक्तस्य ज्योतिषोपि छन्दस्त्वादग्निसूक्तस्थमपि छन्द इति पूर्वः पक्षः तस्माद्गायत्री न विष्णुः अपि तु छन्दोविशेष एव तथाचेदं ज्योतिरानन्दमयश्च नासाविति पूर्वपक्षोपसंहारटीकायामुक्त इति भावः ॥ **प्रथमे द्वितीय इति** ॥ अथ यदत इत्येतद्विषयवाक्यमिति मते अस्त्वग्निसूक्तस्थं ज्योतिः कर्णादिविदूरत्वाद्विष्णुरित्यादिनोक्तो यो द्वितीयः पक्षः स इत्यर्थः ॥ **द्वितीय इति** ॥ गायत्री वेत्येतद्विषयवाक्यमिति द्वितीय इत्यर्थः । द्वितीयतृतीयौ कर्णादिविदूरत्वादिरूपविष्णुलिङ्गसद्भावादग्निसूक्तस्थज्योतिषोऽग्नित्वेपि छान्दोग्ये कर्णादिविदूरत्वादिरूपलिङ्गाश्रवणाच्छान्दोग्यस्थं छन्द एवेति द्वितीयः, छान्दोग्यस्थस्यापि ज्योतिषो ज्योतिरधिकरणे विष्णौ निर्णीतज्योतिश्श्रुत्या विष्णौ निर्णीतत्वेपि गायत्री न विष्णुस्तत्र तत् श्रुतेरभावादिति तृतीयश्चेत्यर्थः । यदर्थं मतभेद उपपादितस्तदिदानीमाह – **तत्र मतद्वयेपीत्यादिना** ॥

## ಸಾರ

ಸುಧೆಯ ಪ್ರಕಾರ ಎರಡು ಪೂರ್ವಪಕ್ಷ. (೧)ಛಾಂದೋಗ್ಯದಲ್ಲಿರುವ ಜ್ಯೋತಿಯು ಗಾಯತ್ರಿ-ಯಾದ್ದರಿಂದ ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ಕೂಡ ಗಾಯತ್ರಿಯೇ ಆಗಬೇಕು. (೨) ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ನಿರವಕಾಶ ಲಿಂಗಬಲದಿಂದ ವಿಷ್ಣುವಾಗಲಿ. ಆದರೆ ನಿರವಕಾಶಲಿಂಗಗಳು ಕೇಳಿಸದ ಕಾರಣ ಛಾಂದೋಗ್ಯದಲ್ಲಿರುವ ಜ್ಯೋತಿಯು ವಿಷ್ಣುವಲ್ಲ.

ಇಲ್ಲಿ ಮೊದಲ ಪೂರ್ವಪಕ್ಷ ಹಿಂದಿನ ಜ್ಯೋತಿರಧಿಕರಣವನ್ನು ಆಕ್ಷೇಪಿಸುತ್ತಿದೆ. ಆದರೆ ಎರಡನೆಯ ಪೂರ್ವಪಕ್ಷ ಜನ್ಮಾಧಿಕರಣವನ್ನು ಅಥವಾ ಆನಂದಮಯಾಧಿಕರಣವನ್ನು ಆಕ್ಷೇಪಿಸುತ್ತಿದೆ.

ಟೀಕೆಯ ಪ್ರಕಾರ ಮೂರು ಪೂರ್ವಪಕ್ಷ. (೧) ಗಾಯತ್ರೀಛಂದಸ್ಸನ್ನು ಹೇಳುವ ಉಪಕ್ರಮದ ಬಲದಿಂದ ಛಾಂದೋಗ್ಯದ ಜ್ಯೋತಿಯು ಛಂದಸ್ಸೇ ಆಗಿದೆ. (೨) ಅಗ್ನಿಸೂಕ್ತದಲ್ಲಿರುವ ಅಗ್ನಿಯು ವಿಷ್ಣುವಾಗಲಿ, ಆದರೆ ಛಾಂದೋಗ್ಯದ ಛಂದಸ್ಸು ವಿಷ್ಣುವಲ್ಲ. (೩)ನಿರ್ಣೀತಜ್ಯೋತಿಶ್ರುತಿಯ ಆಧಾರದಿಂದ ಛಾಂದೋಗ್ಯದ ಜ್ಯೋತಿಯು ವಿಷ್ಣುವಾಗಬಹುದು. ಆದರೆ ಅಂತಹ ಶ್ರುತಿಯಿಲ್ಲದ ಕಾರಣ ಗಾಯತ್ರಿಯು ವಿಷ್ಣುವಲ್ಲ.

ಇಲ್ಲಿ ಒಟ್ಟು ಐದು ಪೂರ್ವಪಕ್ಷಗಳು. ಇವುಗಳಲ್ಲಿ ಒಂದನ್ನು ಮಾತ್ರ ಟೀಕೆಯಲ್ಲಿ ಹೇಳಿದ್ದಾರೆ. ಉಳಿದೆಲ್ಲವನ್ನೂ ಸುಧೆಯಲ್ಲಿ ಹೇಳಿದ್ದಾರೆ.

---

## ಸಂಶಯ ಪರಂಪರೆ

### तात्पर्यचन्द्रिका

**अत्र गायत्री किं छन्दः किं वा विष्णुरिति चिन्ता । तदर्थं किं गायत्री श्रुति-प्रसिद्ध्यनुसारेण भूतपादत्वादिविष्णुलिङ्गं बाध्यम् किं वा विपरीतमिति । तदर्थं प्रसिद्धिबाधे किं श्रुतेर्मुख्यत्वभङ्ग उत नेति । तदर्थं गायत्रीशब्दप्रवृत्तिनिमित्तं ब्रह्मणि नास्ति उतास्ति इति । तदर्थं किमनादिस्वभाव ईशानधीन उत तदधीन इति । तथा ब्रह्मपक्षे 'दिवि' 'दिवः' इति उपदेशभेदः किं न युक्त उत युक्त इति ।**

ಅನುವಾದ - ಈ ಅಧಿಕರಣದ ಸಂಶಯಪರಂಪರೆ ಹೀಗಿದೆ -

೧. ಗಾಯತ್ರೀಯು ಛಂದಸ್ಸೋ ಅಥವಾ ವಿಷ್ಣುವೋ?

೨. ಅದಕ್ಕಾಗಿ ಗಾಯತ್ರೀಶ್ರುತಿಪ್ರಸಿದ್ಧಿಯಂತೆ ಭೂತಪಾದತ್ವಾದಿ ವಿಷ್ಣುಲಿಂಗಗಳು ಬಾಧ್ಯ-ವಾಗುತ್ತವೋ ಅಥವಾ ವಿಷ್ಣುಲಿಂಗದಿಂದ ಗಾಯತ್ರೀಶ್ರುತಿಯು ಬಾಧ್ಯವಾಗುತ್ತದೋ?

೩. ಅದಕ್ಕಾಗಿ ಪ್ರಸಿದ್ಧಿಗೆ ಬಾಧ ಹೇಳಿದರೆ ಶ್ರುತಿಯ ಮುಖ್ಯಾರ್ಥಕ್ಕೆ ಭಂಗ ಬರುತ್ತದೋ ಇಲ್ಲವೋ?

೪. ಅದಕ್ಕಾಗಿ ಗಾಯತ್ರೀಶಬ್ದದ ಪ್ರವೃತ್ತಿನಿಮಿತ್ತವು ಬ್ರಹ್ಮನಲ್ಲಿ ಬರುವುದಿಲ್ಲವೋ ಅಥವಾ ಬರುತ್ತದೋ?

೫. ಅದಕ್ಕಾಗಿ ಅನಾದಿಸ್ವಭಾವವು ವಿಷ್ಣುವಿನ ಅಧೀನವಲ್ಲವೋ ಅಥವಾ ಅಧೀನವೋ? ಎಂದು.

೬. ಇದರಂತೆ ಬ್ರಹ್ಮಪಕ್ಷದಲ್ಲಿ ದಿವಿ ಮತ್ತು ದಿವಃ ಎಂಬ ಉಪದೇಶಭೇದವು ಯುಕ್ತವಲ್ಲವೋ ಅಥವಾ ಯುಕ್ತವೋ? ಎಂದು ಮತ್ತೊಂದು ಸಂದೇಹ.

### ಕಠಿಣಪದಾರ್ಥ

ಅತ್ರ = ಛಾಂದೋಗ್ಯದ ವಿಷಯವಾಕ್ಯದಲ್ಲಿ; ಛಂದಃ = ತತ್ಸವಿತುರ್ವರೇಣ್ಯಂ ಎಂಬ ವರ್ಣಸಮಾವೇಶವಾದ ಮಂತ್ರವು; ಕಿಂ ವಾ ವಿಪರೀತಂ = ಲಿಂಗದಿಂದ ಶ್ರುತಿಯು ಬಾಧಿತವಾಗುತ್ತದೋ,

**प्रकाशः** – विषयसंशयटीका व्यनक्ति – अत्रेति ॥ छान्दोग्ये तृतीयेऽध्याये ''गायत्री वा इदꣳसर्वं भूतं यदिदं किञ्च । वाग्वै गायत्री । वाग्वा इदꣳसर्वं भूतं गायति च त्रायति च । या वै सा गायत्री । इयं वा व सा येयं पृथिवी । अस्यां हि इदं सर्वं भूतं प्रतिष्ठितं, एतामेव नातिशीयन्ते । या वै सा पृथिवी । इयं वाव सा यदिदमस्मिन् पुरुषे शरीरम् । अस्मिन् ही मे प्राणाः प्रतिष्ठिताः । एतदेव नातिशीयन्ते । यद्वैतत् पुरुषे शरीरं, इदं वाव तत् । यदिदमस्मिन्नन्तः पुरुषे हृदयं, अस्मिन् ही इमे प्राणाः प्रतिष्ठिताः । एतदेव नातिशीयन्ते । सैषा चतुष्पदा षड्विधा गायत्री । तदेतदृचाऽभ्यनूक्तं –

**तावानस्य महिमा ततो ज्यायांश्च पूरुषः ।**
**पादोऽस्य सर्वा भूतानि त्रिपादस्यामृतं दिवि ।**

इति । यद्वैतद्ब्रह्म इतिदं वाव तद् । योऽयं बहिर्धा पुरुषादाकाशः यो वै स बहिर्धा पुरुषादाकाशः अयं वव सः योऽयमन्तः पुरुषः । आकाशः । यौ वै सोऽन्तः पुरुष आकाशः अयं वाव सः । योऽयमन्तर्हृदय आकाशः यो वै सोऽन्तहृदय आकाशः तदेतत् पूर्णमप्रवृर्ति । पूर्णामप्रवृत्तिनीं श्रियं लभते य एवं वेद'' इत्याद्यत्त्वाऽऽम्नायते, ''अथ यदतः परो दिवो ज्योतिर्दीप्यते सर्वतः विश्वतः पृष्ठेषु सर्वशः पृष्ठेषु अनुत्तमषु

उत्तमेषु लोकेषु । इदं वाव तद् । यदिदमस्मिन्नन्तः पुरुषे ज्योतिः तस्यैषा दृष्टिः । यत्रैतदस्मिन् शरीरे संस्पर्शेनोष्णिमानं विजानाति । तस्यैषा श्रुतिः । यत्र एतत् कर्णावपिगृह्य निनदमिव न दधथुरिव अग्नेरिव प्रज्वलत उपशृणोति । तदेतत् दृष्टं च श्रुतं चेत्युपासीत । चक्षुष्यः श्रुतो भवति य एवं वेद य एवं वेद'' इति । तत्रत्या गायत्री विषय इत्यर्थः । छन्द इति ॥ वर्णसमावेशलक्षणो मन्त्र इत्यर्थः ॥ भूतेति ॥ गानत्राणकर्तृत्वस्य प्रवृत्तिनिमित्तानतिरेकात् 'भूतपादत्वादि' इत्युक्तम् । किं वेति ॥ लिङ्गात् श्रुतिर्बाध्येत्यर्थः । अर्थप्रतिपादकत्वरूपगानकर्तृत्वस्य गायत्रीशब्दप्रवृत्तिनिमित्तस्य ब्रह्मण्ययुक्ततया वा, तद्गतत्वे सत्यप्यनादिस्वभावनियामकत्वरूपमहागुणलाभाय वा, अणुभाष्यदिशा तत्प्रति स्वातन्त्र्यमेव वक्तव्यमित्यभिप्रेत्य 'अनधीन उत तदधीनः' इत्युक्तम् । यद्यनधीनस्तदा प्रवृत्तिनिमित्तं ब्रह्मणि नेति प्रसिद्धिबाधे मुख्यत्वभङ्गात् गायत्री छन्द एवेति पूर्वपक्षे फलं, सिद्धान्ते तु विपरीतमिति स्पष्टत्वात्फलफलिभावो नोक्तः । एवमनुव्याख्यानोक्तप्रमेयाश्रिताभ्यधिकाशङ्कोपयुक्तचिन्तापरम्परामत्त्वा, सूत्रसूचितप्रमाणाश्रितशङ्कोपयुक्तामाह – तथेति ॥ गायत्री किं छन्द उत ब्रह्मेति चिन्ता । तदर्थं ब्रह्मपक्षे गायत्रीज्योतिषोरेकप्रकरणस्थत्वेनैक्यात् 'दिवि' 'दिवः' इत्युपदेशभेदः किं न युक्त उत युक्त इति । तदर्थं सप्तमीपञ्चम्यौ विरुद्धे उत विवक्षाभेदेन अविरुद्धे इति द्रष्टव्यमित्यर्थः । उपलक्षणमेतत्, ब्रह्मपक्षे प्रसिद्धपदत्यागेनाप्रसिद्धगायत्रीपदप्रयोगे प्रयोजनं नास्त्युतास्तीत्यपि ध्येयम् ।

ವಿವರಣೆ - ಈ ಅಧಿಕರಣದ ವಿಷಯ ಹಾಗೂ ಸಂಶಯಗಳನ್ನು ಹೇಳುವ ಟೀಕೆಯನ್ನು ಅತ್ರ ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನಿಸುತ್ತಿದ್ದಾರೆ.

ಛಾಂದೋಗ್ಯದ ತೃತೀಯಾಧ್ಯಾಯದಲ್ಲಿ ಬರುವ ವಿಷಯವಾಕ್ಯ ಹೀಗಿದೆ --

> ಗಾಯತ್ರೀ ವಾ ಇದಂ ಸರ್ವಂ ಭೂತಂ ಯದಿದಂ ಕಿಂಚ, ವಾಗ್ವೈ ಗಾಯತ್ರೀ, ವಾಗ್ವಾ ಇದಂ ಸರ್ವಂ ಭೂತಂ ಗಾಯತಿ ಚ ತ್ರಾಯತಿ ಚ ॥ ೧ ॥

ಗಾಯತ್ರಿಯಲ್ಲಿರುವ, ಗಾಯತ್ರೀನಾಮಕವಾದ, ಪ್ರಸಿದ್ಧವಾದ ಹಯಶೀರ್ಷ ಎಂಬ ಸ್ತ್ರೀರೂಪವು ಗಾಯತ್ರೀನಾಮಕ ಭಗವಂತನ ಮೊದಲನೆಯರೂಪ. ಪರಿಪೂರ್ಣವಾದ ಮತ್ಸ್ಯಾದಿರೂಪ ಮತ್ತು ಸರ್ವಾಂತರ್ಯಾಮಿರೂಪವೆಲ್ಲವೂ ಗಾಯತ್ರೀನಾಮಕ ಭಗವಂತನ ಎರಡನೇ ರೂಪವೇ ಆಗಿದೆ. ಗಾಯತ್ರೀನಾಮಕನಾದ ಭಗವಂತನೇ ಮಾತುಗಳಲ್ಲಿರುವ ವಾಕ್‌ನಾಮಕ ಸ್ತ್ರೀರೂಪ. ಇದು ಹಯಶೀರ್ಷ

ಎಂಬ ರೂಪಕ್ಕಿಂತ ಬೇರೆಯಲ್ಲ. ವಾಕ್‌ನಾಮಕನು ಭಗವಂತನೇ. ಏಕೆಂದರೆ ಎಲ್ಲ ಜಗತ್ತೂ ಮಾತಿನಿಂದಲೇ ಪ್ರವೃತ್ತಿ ಮಾಡುತ್ತದೆ. ಹೀಗೆ ಸರ್ವಪ್ರವರ್ತಕತ್ವ ಭಗವಂತನದೇ ಲಕ್ಷಣ. ಗಾಯತ್ರಿ-ಯಲ್ಲಿರುವ ಭಗವಂತನ ಹಯಶಿರ್ಷರೂಪವೇ ವೇದಗಳನ್ನು ಪ್ರಥಮತಃ ಉಪದೇಶಮಾಡಿ, ಎಲ್ಲರನ್ನೂ ರಕ್ಷಣೆ ಮಾಡುವಂತಹದಾದ್ದರಿಂದ ಆ ರೂಪಕ್ಕೆ ಗಾಯತ್ರೀ ಎಂದು ಹೆಸರು ಯುಕ್ತವೆ.

ಯಾ ವೈ ಸಾ ಗಾಯತ್ರೀ ಇಯಂ ವಾವ ಸಾ ಯೇಯಂ ಪೃಥಿವೀ, ಅಸ್ಯಾಂ ಹಿ ಇದಂ ಸರ್ವಂ
ಭೂತಂ ಪ್ರತಿಷ್ಠಿತಮ್, ಏತಾಮೇವ ನಾತಿಶೀಯಂತೇ ॥ ೨ ॥

ಪೃಥಿವಿಯಲ್ಲಿರುವ ಪೃಥಿವೀನಾಮಕನಾದ, ಹಳದಿ ಬಣ್ಣದ ಸ್ತ್ರೀರೂಪಿಯಾದ ಭಗವಂತನೂ ಗಾಯತ್ರೀನಾಮಕ ಭಗವಂತನೇ ಆಗಿದ್ದಾನೆ. ಏಕೆಂದರೆ, ಪೃಥಿವೀ ಸಂಸ್ಥನಾದ ಸ್ತ್ರೀರೂಪಿಯಾದ ಭಗವಂತನಲ್ಲಿಯೇ ಎಲ್ಲ ಜಗತ್ತೂ ಆಶ್ರಯ ಪಡೆದಿದೆ. ಮತ್ತು ಅವನನ್ನು ಯಾರೂ ಮೀರುವುದಿಲ್ಲ.

ಯಾ ವೈ ಸಾ ಪೃಥಿವೀ ಇಯಂ ವಾವ ಸಾ ಯದಿದಮಸ್ಮಿನ್ ಪುರುಷೇ ಶರೀರಮ್, ಅಸ್ಮಿನ್ ಹೀ
ಮೇ ಪ್ರಾಣಾಃ ಪ್ರತಿಷ್ಠಿತಾಃ, ಏತದೇವ ನಾತಿಶೀಯಂತೇ ॥ ೩ ॥

ಜೀವರೊಳಗಿದ್ದು ಶರೀರನಾಮಕನಾದ ವಿಷ್ಣುವೂ ಪ್ರಸಿದ್ಧನಾದ ಪೃಥಿವೀನಾಮಕ ವಿಷ್ಣುವೇ ಆಗಿದ್ದಾನೆ. ಏಕೆಂದರೆ ಜೀವರೊಳಗಿರುವ ಶರೀರನಾಮಕನಾದ ವಿಷ್ಣುವಿನಲ್ಲೇ ಪ್ರಾಣಾದಿ ವಾಯುಗಳೂ ಹಾಗೂ ಇಂದ್ರಿಯಗಳೂ ಆಶ್ರಿತವಾಗಿವೆ. ಮತ್ತು ಈ ರೂಪವನ್ನು ಯಾರೂ ಮೀರುವುದಿಲ್ಲ.

ಯದ್ವೈತತ್ ಪುರುಷೇ ಶರೀರಂ ಇದಂ ವಾವ ತತ್ ಯದಿದಮಸ್ಮಿನ್ನಂತಃ ಪುರುಷೇ
ಹೃದಯಮ್, ಅಸ್ಮಿನ್ ಹಿ ಇಮೇ ಪ್ರಾಣಾಃ ಪ್ರತಿಷ್ಠಿತಾ, ಏತದೇವ ನಾತಿಶೀಯಂತೇ ॥ ೪ ॥

ಜೀವನು ಹೃದಯದಲ್ಲಿದ್ದು ಹೃದಯನಾಮಕನಾಗಿರುವವನೂ ಜೀವರಲ್ಲಿ ಶರೀರನಾಮಕನಾಗಿರುವ ಭಗವಂತನೇ. ಏಕೆಂದರೆ ಪ್ರಾಣಾದಿಗಳೂ ಮತ್ತು ಸಕಲೇಂದ್ರಿಯಗಳೂ ಹೃದಯಲ್ಲಿರುವ ಈ ರೂಪನ್ನೇ ಆಶ್ರಯಿಸಿವೆ. ಮತ್ತು ಇದನ್ನು ಯಾರೂ ಮೀರಲಾರರು.

ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ

ಹೀಗೆ ಆರುವಿಧವಾದ ರೂಪಉಳ್ಳ ಗಾಯತ್ರೀನಾಮಕ ಪರಮಾತ್ಮನು ನಾಲ್ಕುಪಾದ ಉಳ್ಳವನೂ ಆಗಿದ್ದಾನೆ.

ತದೇತದೃಚಾಭ್ಯನೂಕ್ತಮ್ ॥ ೫ ॥ ತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ ।
ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ಇತಿ ॥ ೬ ॥

ಗಾಯತ್ರೀನಾಮಕ ಭಗವಂತನು ನಾಲ್ಕುಪಾದಗಳುಳ್ಳವನೆಂದು ಈ ಋಚೆಯಲ್ಲಿ ಹೇಳಿದೆ - ಹಿಂದೆ ಹೇಳಿದ ಸಹಸ್ರಶೀರ್ಷತ್ವಾದಿಗಳೆಲ್ಲವೂ ಈ ಭಗವಂತನ ಮಹಿಮೆ. ಅವನ ಮಹಿಮೆ ಅಷ್ಟೇ ಅಲ್ಲ. ಅದ-ಕ್ಕಿಂತಲೂ ಅಧಿಕ ಮಹಿಮೆ ಉಳ್ಳವನು ಭಗವಂತ. ಎಲ್ಲ ಜೀವರೂ ಭಗವಂತನ ಭಿನ್ನವಾದ ಒಂದು ಅಂಶ ಮಾತ್ರ. ಸ್ವರೂಪಭೂತವಾದ ಮೂರು ಅಂಶಗಳು ನಾರಾಯಣ ವಾಸುದೇವ ವೈಕುಂಠನಾಮಕ-ವಾದವುಗಳು ದ್ಯುಲೋಕದಲ್ಲಿ ಅಂದರೆ, ಶ್ವೇತದ್ವೀಪ ಅನಂತಾಸನ ವೈಕುಂಠಲೋಕಗಳಲ್ಲಿವೆ.

ಯದ್ವೈ ತದ್ಬ್ರಹ್ಮ ಇತೀದಂ ವಾವ ತದ್ ಯೋऽಯಂ ಬಹಿರ್ಧಾ ಪುರುಷಾದಾಕಾಶಃ ಯೋ ವೈ ಸ ಬಹಿರ್ಧಾ ಪುರುಷಾದಾಕಾಶಃ ॥ ೭ ॥
ಅಯಂ ವಾವ ಸ ಯೋऽಯಮಂತಃ ಪುರುಷ ಆಕಾಶೋ ಯೋ ವೈ ಸೋऽಂತಃ ಪುರುಷ ಆಕಾಶಃ ॥ ೮ ॥
ಅಯಂ ವಾವ ಸ ಯೋऽಯಮಂತರ್ಹೃದಯ ಆಕಾಶಃ ಯೋ ವೈ ಸೋऽಂತರ್ಹೃದಯ ಆಕಾಶಃ ತದೇತತ್ ಪೂರ್ಣಮಪ್ರವರ್ತಿ ಪೂರ್ಣಾಮಪ್ರವರ್ತಿನೀಂ ಶ್ರಿಯಂ ಲಭೇತ ಯ ಏವಂ ವೇದ ॥೯॥೧೨ ॥

ದೇಹದ ಹೊರಗೂ ಒಳಗೂ ವ್ಯಾಪ್ತವಾದ ಬ್ರಹ್ಮನಾಮಕ ರೂಪವು ಗಾಯತ್ರೀನಾಮಕ ಭಗವಂತನ ಮೊದಲನೆಯ ಪಾದ. ಈ ಸರ್ವತ್ರವ್ಯಾಪ್ತವಾದ ರೂಪವೇ ಜೀವಸ್ವರೂಪದ ಹೊರಗೆ ಜಡಹೃದಯದಲ್ಲಿ ಪ್ರಕಾಶಮಾನವಾದ್ದರಿಂದ ಆಕಾಶನಾಮಕವಾಗಿದೆ. ಇದು ಎರಡನೆಯ ಪಾದ.

ಜೀವಸ್ವರೂಪದ ಹೊರಗೆ ಜಡಹೃದಯದಲ್ಲಿ ಪ್ರಕಾಶಮಾನವಾಗಿರುವ ಈ ರೂಪವೇ ಜೀವರೊಳಗೆ ವ್ಯಾಪಿಸಿಕೊಂಡಿರುವ ಪ್ರಕಾಶಮಾನವಾದ ರೂಪವಾಗಿದೆ. ಇದು ಮೂರನೆಯ ಪಾದ.

ಜೀವರೊಳಗೆ ವ್ಯಾಪ್ತವಾದ, ಆಕಾಶನಾಮಕವಾದ ಈ ರೂಪವೇ ಜೀವಸ್ವರೂಪಹೃದಯದಲ್ಲಿರುವ ಪ್ರಕಾಶಮಾನವಾದ ರೂಪವಾಗಿದೆ. ಇದು ನಾಲ್ಕನೆಯ ಪಾದ.

ಜೀವಸ್ವರೂಪಹೃದಯದಲ್ಲಿರುವ ಆಕಾಶನಾಮಕವಾದ ಈ ರೂಪವು ದೇಶ, ಕಾಲ, ಗುಣಗಳಿಂದ ಪೂರ್ಣ ಮತ್ತು ಇನ್ನೊಬ್ಬರಿಗೆ ಅಧೀನವಾಗಿ ಪ್ರವೃತ್ತಿ ಉಳ್ಳದ್ದಲ್ಲ. ಯಾರು ಈ ವಿದ್ಯೆಯನ್ನು ತಿಳಿಯು-ತ್ತಾನೋ ಅವನು, ಅಂದರೆ ಮುಖ್ಯವಾಗಿ ಚತುರ್ಮುಖಬ್ರಹ್ಮನು, ವಿಷ್ಣುವ್ಯತಿರಿಕ್ತರಿಗೆ ಅಧೀನವಲ್ಲದ, ತನ್ನ ಯೋಗ್ಯತಾನುಸಾರ ಪೂರ್ಣವಾದ ಸಂಪತ್ತನ್ನು ಸಂಸಾರದಲ್ಲಿಯೂ, ಮುಕ್ತಿಯಲ್ಲಿಯೂ ಹೊಂದುತ್ತಾನೆ. ಇತರರು ತಮ್ಮ ಯೋಗ್ಯತಾನುಸಾರವಾಗಿ ಸಂಪತ್ತನ್ನು ಹೊಂದುತ್ತಾರೆ.

ಮತ್ತು

'ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷು ಅನುತ್ತಮೇಷು ಉತ್ತಮೇಷು ಲೋಕೇಷು ಇದಂ ವಾವ ತದ್ ಯದಿದಮಸ್ಮಿನ್ನಂತಃ ಪುರುಷೇ ಜ್ಯೋತಿಃ ತಸ್ಯೈಷಾ ದೃಷ್ಟಿಃ ॥ ೭ ॥ ಯತ್ರೈತದಸ್ಮಿನ್ ಶರೀರೇ ಸಂಸ್ಪರ್ಶೇನೋಷ್ಣಿಮಾನಂ ವಿಜಾನಾತಿ ತಸ್ಯೈಷಾ ಶ್ರುತಿಃ। ಯತ್ರ ಏತತ್ ಕರ್ಣಾವಪಿಗೃಹ್ಯ ನಿನದಮಿವ ನದಥುರಿವ ಅಗ್ನೇರಿವ ಪ್ರಜ್ವಲತ ಉಪಶ್ರುಣೋತಿ ತದೇತದ್ದೃಷ್ಟಂ ಚ ಶ್ರುತಂ ಚೇತ್ಯುಪಾಸೀತ ಚಕ್ಷುಷ್ಯಃ ಶ್ರುತೋ ಭವತಿ ಯ ಏವಂ ವೇದ ಯ ಏವಂ ವೇದ ॥ ೮ ॥ ೧೩ ॥''

---

ಉಪನಿಷತ್ತಿನ ಈ ಅರ್ಥ ಸಿದ್ಧಾಂತಕ್ಕೆ ಅನುಗುಣವಾಗಿದೆ. ಸಂಶಯದ ಸಂದರ್ಭದಲ್ಲಾಗಲೀ, ಪೂರ್ವಪಕ್ಷದ ಸಂದರ್ಭದಲ್ಲಾಗಲೀ ಈ ಅರ್ಥವನ್ನು ತಿಳಿಯಬಾರದು. ಓದುಗರ ಅನುಕೂಲಕ್ಕಾಗಷ್ಟೇ ಈ ಅರ್ಥವನ್ನು ಇಲ್ಲಿ ನೀಡಲಾಗಿದೆ.

ಎಂಬ ರೂಪಕ್ಕಿಂತ ಬೇರೆಯಲ್ಲ. ವಾಕ್‌ನಾಮಕನು ಭಗವಂತನೇ. ಏಕೆಂದರೆ ಎಲ್ಲ ಜಗತ್ತೂ ಮಾತಿನಿಂದಲೇ ಪ್ರವೃತ್ತಿ ಮಾಡುತ್ತದೆ. ಹೀಗೆ ಸರ್ವಪ್ರವರ್ತಕತ್ವ ಭಗವಂತನದೇ ಲಕ್ಷಣ. ಗಾಯತ್ರಿ-ಯಲ್ಲಿರುವ ಭಗವಂತನ ಹಯಶೀರ್ಷರೂಪವೇ ವೇದಗಳನ್ನು ಪ್ರಥಮತಃ ಉಪದೇಶಮಾಡಿ, ಎಲ್ಲರನ್ನೂ ರಕ್ಷಣೆ ಮಾಡುವಂತಹದಾದ್ದರಿಂದ ಆ ರೂಪಕ್ಕೆ ಗಾಯತ್ರೀ ಎಂದು ಹೆಸರು ಯುಕ್ತವೆ.

ಯಾ ವೈ ಸಾ ಗಾಯತ್ರೀ ಇಯಂ ವಾವ ಸಾ ಯೇಯಂ ಪೃಥಿವೀ, ಅಸ್ಯಾಂ ಹಿ ಇದಂ ಸರ್ವಂ
ಭೂತಂ ಪ್ರತಿಷ್ಠಿತಮ್, ಏತಾಮೇವ ನಾತಿಶೀಯಂತೇ ॥ ೨ ॥

ಪೃಥಿವಿಯಲ್ಲಿರುವ ಪೃಥಿವೀನಾಮಕನಾದ, ಹಳದಿ ಬಣ್ಣದ ಸ್ತ್ರೀರೂಪಿಯಾದ ಭಗವಂತನೂ ಗಾಯತ್ರೀನಾಮಕ ಭಗವಂತನೇ ಆಗಿದ್ದಾನೆ. ಏಕೆಂದರೆ, ಪೃಥಿವೀ ಸಂಸ್ಥನಾದ ಸ್ತ್ರೀರೂಪಿಯಾದ ಭಗವಂತನಲ್ಲಿಯೇ ಎಲ್ಲ ಜಗತ್ತೂ ಆಶ್ರಯ ಪಡೆದಿದೆ. ಮತ್ತು ಅವನನ್ನು ಯಾರೂ ಮೀರುವುದಿಲ್ಲ.

ಯಾ ವೈ ಸಾ ಪೃಥಿವೀ ಇಯಂ ವಾವ ಸಾ ಯದಿದಮಸ್ಮಿನ್ ಪುರುಷೇ ಶರೀರಮ್, ಅಸ್ಮಿನ್ ಹೀ
ಮೇ ಪ್ರಾಣಾಃ ಪ್ರತಿಷ್ಠಿತಾಃ, ಏತದೇವ ನಾತಿಶೀಯಂತೇ ॥ ೩ ॥

ಜೀವರೊಳಗಿದ್ದು ಶರೀರನಾಮಕನಾದ ವಿಷ್ಣುವೂ ಪ್ರಸಿದ್ಧನಾದ ಪೃಥಿವೀನಾಮಕ ವಿಷ್ಣುವೇ ಆಗಿದ್ದಾನೆ. ಏಕೆಂದರೆ ಜೀವರೊಳಗಿರುವ ಶರೀರನಾಮಕನಾದ ವಿಷ್ಣುವಿನಲ್ಲೇ ಪ್ರಾಣಾದಿ ವಾಯುಗಳೂ ಹಾಗೂ ಇಂದ್ರಿಯಗಳೂ ಆಶ್ರಿತವಾಗಿವೆ. ಮತ್ತು ಈ ರೂಪವನ್ನು ಯಾರೂ ಮೀರುವುದಿಲ್ಲ.

ಯದ್ವೈತತ್ ಪುರುಷೇ ಶರೀರಂ ಇದಂ ವಾವ ತತ್ ಯದಿದಮಸ್ಮಿನ್ನಂತಃ ಪುರುಷೇ
ಹೃದಯಮ್, ಅಸ್ಮಿನ್ ಹಿ ಇಮೇ ಪ್ರಾಣಾಃ ಪ್ರತಿಷ್ಠಿತಾ, ಏತದೇವ ನಾತಿಶೀಯಂತೇ ॥ ೪ ॥

ಜೀವನು ಹೃದಯದಲ್ಲಿದ್ದು ಹೃದಯನಾಮಕನಾಗಿರುವವನೂ ಜೀವರಲ್ಲಿ ಶರೀರನಾಮಕನಾಗಿರುವ ಭಗವಂತನೇ. ಏಕೆಂದರೆ ಪ್ರಾಣಾದಿಗಳೂ ಮತ್ತು ಸಕಲೇಂದ್ರಿಯಗಳೂ ಹೃದಯಲ್ಲಿರುವ ಈ ರೂಪನ್ನೇ ಆಶ್ರಯಿಸಿವೆ. ಮತ್ತು ಇದನ್ನು ಯಾರೂ ಮೀರಲಾರರು.

ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ

ಹೀಗೆ ಆರುವಿಧವಾದ ರೂಪಉಳ್ಳ ಗಾಯತ್ರೀನಾಮಕ ಪರಮಾತ್ಮನು ನಾಲ್ಕುಪಾದ ಉಳ್ಳವನೂ ಆಗಿದ್ದಾನೆ.

ತದೇತದೃಚಾಭ್ಯನೂಕ್ತಮ್ ॥ ೫ ॥ ತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ ।
ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ಇತಿ ॥ ೬ ॥

ಗಾಯತ್ರೀನಾಮಕ ಭಗವಂತನು ನಾಲ್ಕುಪಾದಗಳುಳ್ಳವನೆಂದು ಈ ಋಚೆಯಲ್ಲಿ ಹೇಳಿದೆ - ಹಿಂದೆ ಹೇಳಿದ ಸಹಸ್ರಶೀರ್ಷತ್ವಾದಿಗಳೆಲ್ಲವೂ ಈ ಭಗವಂತನ ಮಹಿಮೆ. ಅವನ ಮಹಿಮೆ ಅಷ್ಟೇ ಅಲ್ಲ. ಅದ-ಕ್ಕಿಂತಲೂ ಅಧಿಕ ಮಹಿಮೆ ಉಳ್ಳವನು ಭಗವಂತ. ಎಲ್ಲ ಜೀವರೂ ಭಗವಂತನ ಭಿನ್ನವಾದ ಒಂದು ಅಂಶ ಮಾತ್ರ. ಸ್ವರೂಪಭೂತವಾದ ಮೂರು ಅಂಶಗಳು ನಾರಾಯಣ ವಾಸುದೇವ ವೈಕುಂಠನಾಮಕ-ವಾದವುಗಳು ದ್ಯುಲೋಕದಲ್ಲಿ ಅಂದರೆ, ಶ್ವೇತದ್ವೀಪ ಅನಂತಾಸನ ವೈಕುಂಠಲೋಕಗಳಲ್ಲಿವೆ.

ಯದ್ವೈ ತದ್ಬ್ರಹ್ಮ ಇತೀದಂ ವಾವ ತದ್ ಯೋಽಯಂ ಬಹಿರ್ಧಾ ಪುರುಷಾದಾಕಾಶಃ ಯೋ ವೈ ಸ ಬಹಿರ್ಧಾ ಪುರುಷಾದಾಕಾಶಃ ॥ ೭ ॥
ಅಯಂ ವಾವ ಸ ಯೋಽಯಮಂತಃ ಪುರುಷ ಆಕಾಶೋ ಯೋ ವೈ ಸೋಽಂತಃ ಪುರುಷ ಆಕಾಶಃ ॥ ೮ ॥
ಅಯಂ ವಾವ ಸ ಯೋಽಯಮಂತರ್ಹೃದಯ ಆಕಾಶಃ ಯೋ ವೈ ಸೋಽಂತರ್ಹೃದಯ ಆಕಾಶಃ ತದೇತತ್ ಪೂರ್ಣಮಪ್ರವರ್ತಿ ಪೂರ್ಣಾಮಪ್ರವರ್ತಿನೀಂ ಶ್ರಿಯಂ ಲಭೇತ ಯ ಏವಂ ವೇದ ॥೯॥೧೨ ॥

ದೇಹದ ಹೊರಗೂ ಒಳಗೊ ವ್ಯಾಪ್ತವಾದ ಬ್ರಹ್ಮನಾಮಕ ರೂಪವು ಗಾಯತ್ರೀನಾಮಕ ಭಗವಂತನ ಮೊದಲನೆಯ ಪಾದ. ಈ ಸರ್ವತ್ರವ್ಯಾಪ್ತವಾದ ರೂಪವೇ ಜೀವಸ್ವರೂಪದ ಹೊರಗೆ ಜಡಹೃದಯದಲ್ಲಿ ಪ್ರಕಾಶಮಾನವಾದ್ದರಿಂದ ಆಕಾಶನಾಮಕವಾಗಿದೆ. ಇದು ಎರಡನೆಯ ಪಾದ.

ಜೀವಸ್ವರೂಪದ ಹೊರಗೆ ಜಡಹೃದಯದಲ್ಲಿ ಪ್ರಕಾಶಮಾನವಾಗಿರುವ ಈ ರೂಪವೇ ಜೀವರೊಳಗೆ ವ್ಯಾಪಿಸಿಕೊಂಡಿರುವ ಪ್ರಕಾಶಮಾನವಾದ ರೂಪವಾಗಿದೆ. ಇದು ಮೂರನೆಯ ಪಾದ.

ಜೀವರೊಳಗೆ ವ್ಯಾಪ್ತವಾದ, ಆಕಾಶನಾಮಕವಾದ ಈ ರೂಪವೇ ಜೀವಸ್ವರೂಪಹೃದಯದಲ್ಲಿರುವ ಪ್ರಕಾಶಮಾನವಾದ ರೂಪವಾಗಿದೆ. ಇದು ನಾಲ್ಕನೆಯ ಪಾದ.

ಜೀವಸ್ವರೂಪಹೃದಯದಲ್ಲಿರುವ ಆಕಾಶನಾಮಕವಾದ ಈ ರೂಪವು ದೇಶ, ಕಾಲ, ಗುಣಗಳಿಂದ ಪೂರ್ಣ ಮತ್ತು ಇನ್ನೊಬ್ಬರಿಗೆ ಅಧೀನವಾಗಿ ಪ್ರವೃತ್ತಿ ಉಳ್ಳದ್ದಲ್ಲ. ಯಾರು ಈ ವಿದ್ಯೆಯನ್ನು ತಿಳಿಯು-ತ್ತಾನೋ ಅವನು, ಅಂದರೆ ಮುಖ್ಯವಾಗಿ ಚತುರ್ಮುಖಬ್ರಹ್ಮನು, ವಿಷ್ಣುವ್ಯತಿರಿಕ್ತರಿಗೆ ಅಧೀನವಲ್ಲದ, ತನ್ನ ಯೋಗ್ಯತಾನುಸಾರ ಪೂರ್ಣವಾದ ಸಂಪತ್ತನ್ನು ಸಂಸಾರದಲ್ಲಿಯೂ, ಮುಕ್ತಿಯಲ್ಲಿಯೂ ಹೊಂದುತ್ತಾನೆ. ಇತರರು ತಮ್ಮ ಯೋಗ್ಯತಾನುಸಾರವಾಗಿ ಸಂಪತ್ತನ್ನು ಹೊಂದುತ್ತಾರೆ.

ಮತ್ತು

'ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷು ಅನುತ್ತಮೇಷು ಉತ್ತಮೇಷು ಲೋಕೇಷು ಇದಂ ವಾವ ತದ್ ಯದಿದಮಸ್ಮಿನ್ನಂತಃ ಪುರುಷೇ ಜ್ಯೋತಿಃ ತಸ್ಯೈಷಾ ದೃಷ್ಟಿಃ ॥ ೭ ॥ ಯತ್ರೈತದಸ್ಮಿನ್ ಶರೀರೇ ಸಂಸ್ಪರ್ಶೇನೋಷ್ಣಿಮಾನಂ ವಿಜಾನಾತಿ ತಸ್ಯೈಷಾ ಶ್ರುತಿಃ । ಯತ್ರ ಏತತ್ ಕರ್ಣಾವಪಿಗೃಹ್ಯ ನಿನದಮಿವ ನದಥುರಿವ ಅಗ್ನೇರಿವ ಪ್ರಜ್ವಲತ ಉಪಶ್ರುಣೋತಿ ತದೇತದ್‌ದೃಷ್ಟಂ ಚ ಶ್ರುತಂ ಚೇತ್ಯುಪಾಸೀತ ಚಕ್ಷುಷ್ಯಃ ಶ್ರುತೋ ಭವತಿ ಯ ಏವಂ ವೇದ ಯ ಏವಂ ವೇದ ॥ ೮ ॥ ೧೩ ॥''

---

ಉಪನಿಷತ್ತಿನ ಈ ಅರ್ಥ ಸಿದ್ಧಾಂತಕ್ಕೆ ಅನುಗುಣವಾಗಿದೆ. ಸಂಶಯದ ಸಂದರ್ಭದಲ್ಲಾಗಲೀ, ಪೂರ್ವಪಕ್ಷದ ಸಂದರ್ಭದಲ್ಲಾಗಲೀ ಈ ಅರ್ಥವನ್ನು ತಿಳಿಯಬಾರದು. ಓದುಗರ ಅನುಕೂಲಕ್ಕಾಗಷ್ಟೇ ಈ ಅರ್ಥವನ್ನು ಇಲ್ಲಿ ನೀಡಲಾಗಿದೆ.

ನಾರಾಯಣ, ವಾಸುದೇವ, ವೈಕುಂಠ ಎಂಬ ರೂಪತ್ರಯಉಳ್ಳ ಭಗವಂತನು ದ್ಯುಲೋಕಗಳಗಿಂತ ಮೇಲೆ ಶ್ವೇತದ್ವೀಪ, ಅನಂತಾಸನ, ವೈಕುಂಠಗಳಲ್ಲಿ ಜ್ಯೋತಿರ್ಮಯನಾಗಿ ವಿರಾಜಮಾನನಾಗಿದ್ದಾನೆ. ಎಲ್ಲ ಬ್ರಹ್ಮಲೋಕಗಳಿಗಿಂತಲೂ, ಎತ್ತರದಲ್ಲಿ ಸರ್ವಲೋಕಗಳಿಗಿಂತಲೂ ಎತ್ತರದಲ್ಲಿರುವ ಉತ್ತಮವಾದ ಲೋಕಗಳಲ್ಲಿಯೂ ಕೆಳಗಿನ ಲೋಕಗಳಲ್ಲಿಯೂ ಇರುವವನು, ಜೀವರ ಹೃದಯದಲ್ಲಿ ಜ್ಯೋತಿರ್ಮಯ-ನಾಗಿರುವ ಪರಮಾತ್ಮನೇ ಆಗಿದ್ದಾನೆ. ಹೃದಯದಲ್ಲಿ ಜ್ಯೋತಿರೂಪ ಭಗವಂತನಿದ್ದಾನೆಂಬುದಕ್ಕೆ ಈ ಮುಂದೆ ಹೇಳುವ ಅನುಭವವೇ ಪ್ರಮಾಣ -

ದೇಹದಲ್ಲಿ ಮುಟ್ಟಿದಾಗ ಉಷ್ಣಸ್ಪರ್ಶದ ಅನುಭವ ಉಂಟಾಗುತ್ತದೆ. ಇದೇ ಹೃದಯಾಂತರ್ಗತ ಭಗವಂತನ ವಿಷಯದಲ್ಲಿ ಪ್ರಮಾಣ, ಹೃದಯದಲ್ಲಿರುವ ಭಗವಂತನ ವಿಷಯದಲ್ಲಿ ಶರೀರದೊಳಗಿರುವ ಪ್ರಾಣದೇವರಿಂದ ಮಾಡಲ್ಪಡುವ ಸ್ತುತಿರೂಪವಾದ ಶಬ್ದವೂ ಪ್ರಮಾಣವಾಗಿದೆ. ಜೀವರು ತಮ್ಮೆರಡೂ ಕಿವಿಗಳನ್ನು ಮುಚ್ಚಿಕೊಂಡಾಗ ಸಮುದ್ರಘೋಷದಂತೆ, ಮೇಘನಾದದಂತೆ, ಪ್ರಜ್ವಲಿಸುವ ಅಗ್ನಿಯ ಘೋಷದಂತೆ ಧ್ವನಿಯನ್ನು ಕೇಳುತ್ತಾರೆ. ಇದೇ ಪ್ರಾಣದೇವರು ಮಾಡುವ ಸ್ತೋತ್ರ ರೂಪವಾದ ಶಬ್ದ. ಆ ಭಗವಂತನನ್ನು ಈ ರೀತಿಯಾಗಿ ಪ್ರತ್ಯಕ್ಷಾನುಭವ ಮತ್ತು ಶಬ್ದಶ್ರವಣರೂಪ ಪ್ರಮಾಣಸಿದ್ಧ ಎಂದೂ ಉಪಾಸನೆ ಮಾಡಬೇಕು. ಯಾರು ಹೀಗೆ ತಿಳಿದು ಉಪಾಸನೆ ಮಾಡುತ್ತಾರೋ ಅವರು, ಮುಕ್ತಿಯಲ್ಲಿ ದಿವ್ಯ ಚಕ್ಷುಸ್ಸುಳ್ಳವರೂ ಕೀರ್ತಿವಂತರೂ ಆಗುತ್ತಾರೆ.

ಇಲ್ಲಿ ಕೇಳಿಸುತ್ತಿರುವ ಗಾಯತ್ರಿಯೇ ಈ ಅಧಿಕರಣದ ವಿಷಯ. ಗ್ರಂಥಕಾರರು ವಿಕಲ್ಪ ಮಾಡುವಾಗ 'ಭೂತಪಾದತ್ವಾದಿ ವಿಷ್ಣುಲಿಂಗಮ್' ಎಂದು ಹೇಳಿದ್ದಾರೆ. ವಸ್ತುತಃ ಗಾಯತ್ರೀಶಬ್ದದ ಪ್ರವೃತ್ತಿನಿಮಿತ್ತ ಗಾನತ್ರಾಣಕರ್ತೃತ್ವ. ಇದನ್ನೇ ಹೇಳಬೇಕಿತ್ತಲ್ಲವೇ? ಎಂಬ ಪ್ರಶ್ನೆ ಸಹಜ. ಆದರೆ ಭೂತಪಾದತ್ವವು ಗಾನತ್ರಾಣಕರ್ತೃತ್ವದಲ್ಲೇ ಪರ್ಯವಸಾನವಾಗುವುದರಿಂದ ಹೀಗೆ ಹೇಳಿದ್ದು ತಪ್ಪಲ್ಲ.

ಶಂಕೆ - 'ಅನಾದಿಸ್ವಭಾವಃ ಈಶಾನಧೀನಃ ಉತಾಧೀನಃ?' ಎಂದು ಗ್ರಂಥಕಾರರು ಸ್ವಾತಂತ್ರ್ಯಧರ್ಮ-ವನ್ನು ವಿಕಲ್ಪಿಸಿದ್ದಾರೆ. ಇದರಂತೆ ತದ್ಗತತ್ವವನ್ನೂ ವಿಕಲ್ಪಿಸಬೇಕಿತ್ತು. ಭಗವಂತನಲ್ಲಿರುವ ಶಬ್ದಗಳಿಗೆ ಸ್ವಾತಂತ್ರ್ಯದಂತೆ ತದ್ಗತತ್ವವೂ ಪ್ರವೃತ್ತಿನಿಮಿತ್ತವಾಗುತ್ತದೆ. ಆದ್ದರಿಂದ ತದ್ಗತತ್ವವನ್ನು ಹೇಳದಿರುವುದು ತಪ್ಪಲ್ಲವೇ?

ಸಮಾಧಾನ - ಇಲ್ಲಿ ತದ್ಗತತ್ವವನ್ನು ವಿವಕ್ಷಿಸದಿರಲು ಎರಡು ಕಾರಣಗಳಿವೆ. ಗಾಯತ್ರೀಶಬ್ದಕ್ಕೆ ತ್ರಾಣಕರ್ತೃತ್ವವು ಪ್ರವೃತ್ತಿನಿಮಿತ್ತವಾದಂತೆ ಗಾನಕರ್ತೃತ್ವವೂ ಪ್ರವೃತ್ತಿನಿಮಿತ್ತವಾಗಿದೆ. ಭಗವಂತನು ಸಕಲ ರಕ್ಷಕನಾದ್ದರಿಂದ ತ್ರಾಣಕರ್ತೃತ್ವವನ್ನು ಸುಲಭವಾಗಿ ಹೇಳಬಹುದು. ಆದರೆ ಗಾನಕರ್ತೃತ್ವವನ್ನು ಹೇಳಲು ಸಾಧ್ಯವಿಲ್ಲ. ಗಾನಕರ್ತೃತ್ವವೆಂದರೆ ಅರ್ಥಪ್ರತಿಪಾದಕತ್ವ ಎಂದರ್ಥ. ಅರ್ಥಪ್ರತಿಪಾದನೆ ಮಾಡುವಿಕೆಯು ಶಬ್ದಧರ್ಮವೇ ಹೊರತು ವ್ಯಕ್ತಿಯ ಧರ್ಮವಾಗುವುದಿಲ್ಲ. ಒಂದು ವೇಳೆ ತದ್ಗತತ್ವವನ್ನು ವಿವಕ್ಷಿಸಿದಲ್ಲಿ ಈ ಅರ್ಥಪ್ರತಿಪಾದಕತ್ವವೆಂಬ ಗಾನಕರ್ತೃತ್ವವು ಬ್ರಹ್ಮನಲ್ಲಿ ಅಯುಕ್ತವಾಗುತ್ತಿತ್ತು. ಈ ಕಾರಣಕ್ಕಾಗಿ ಗ್ರಂಥಕಾರರು ಸ್ವಾತಂತ್ರ್ಯವನ್ನಷ್ಟೇ ಉಲ್ಲೇಖಿಸಿದ್ದಾರೆ. ಭಗವಂತನಲ್ಲಿ ಅರ್ಥಪ್ರತಿಪಾದಕತ್ವವಿಲ್ಲದಿದ್ದರೂ ಅರ್ಥಪ್ರತಿಪಾದಕಶಬ್ದಗಳಿಗೆ ಸ್ವಾಮಿಯಾದ್ದರಿಂದ ಸ್ವಾಮಿತ್ವವನ್ನು ಹೇಳಬಹುದು. ಅಥವಾ ಅರ್ಥ-

ಪ್ರತಿಪಾದಕತ್ವವು ಸಕಲಶಬ್ದಾಂತರ್ಗತನಾದ ಭಗವಂತನಲ್ಲಿಯೂ ಇದೆ ಎಂದು ಇಟ್ಟುಕೊಳ್ಳೋಣ. ಆದರೂ ಸ್ವಾಮಿತ್ವವನ್ನಷ್ಟೇ ಉಲ್ಲೇಖಿಸಲು ಮತ್ತೊಂದು ಕಾರಣವಿದೆ. ಗಾಯತ್ರೀಶಬ್ದದ ಪ್ರವೃತ್ತಿನಿಮಿತ್ತವು ಅನಾದಿಸ್ವಭಾವವಾಗಿದೆ. ಇಂತಹ ಅನಾದಿಸ್ವಭಾವಪ್ರವೃತ್ತಿನಿಮಿತ್ತಗಳಿಗೂ ಭಗವಂತನು ಸ್ವಾಮಿಯಾಗಿ-ದ್ದಾನೆಂಬ ಮಹಾಗುಣವನ್ನು ಪ್ರತಿಪಾದಿಸಬೇಕಾಗಿದೆ. ಆದಕ್ಕೋಸ್ಕರ ಅನುಭಾಷ್ಯದಲ್ಲಿ ಹೇಳಿದಂತೆ ಸ್ವಾತಂತ್ರ್ಯವನ್ನಷ್ಟೇ ಗ್ರಂಥಕಾರರು ವಿಕಲ್ಪಿಸಿ ತದ್ಗತತ್ವವನ್ನು ವಿಕಲ್ಪಿಸಿಲ್ಲ.

ಪೂರ್ವಪಕ್ಷದ ಫಲಫಲಿಭಾವ - ಒಂದು ವೇಳೆ ಅನಾದಿಸ್ವಭಾವವು ಭಗವಂತನ ಅಧೀನವಾಗದಿದ್ದರೆ ಆವಾಗ ಗಾಯತ್ರೀಶಬ್ದದ ಪ್ರವೃತ್ತಿನಿಮಿತ್ತವು ಬ್ರಹ್ಮನಲ್ಲಿ ಬರುವುದಿಲ್ಲ. ಆವಾಗ ಪ್ರಸಿದ್ಧಿಗೆ ಬಾಧ ಬರುವುದರಿಂದ ಶ್ರುತಿಯ ಮುಖ್ಯಾರ್ಥವನ್ನು ಬಿಟ್ಟು ಛಂದಸ್ಸು ಗಾಯತ್ರೀಶಬ್ದಪ್ರತಿಪಾದ್ಯವೆಂದು ನಿರ್ಣಯವಾಗುತ್ತದೆ.

ಸಿದ್ಧಾಂತದ ಫಲಫಲಿಭಾವ - ಒಂದು ವೇಳೆ ಅನಾದಿಸ್ವಭಾವವು ಭಗವಂತನ ಅಧೀನವಾದರೆ ಗಾಯತ್ರೀಶಬ್ದದ ಪ್ರವೃತ್ತಿನಿಮಿತ್ತವು ಬ್ರಹ್ಮನಲ್ಲಿ ಉಪಪನ್ನವಾಗುತ್ತದೆ. ಆವಾಗ ಪ್ರಸಿದ್ಧಿಗೆ ಬಾಧವುಬಾರದ ಕಾರಣ ಶ್ರುತಿಯ ಮುಖ್ಯಾರ್ಥಕ್ಕೆ ಭಂಗ ಬರುವುದಿಲ್ಲ. ಭೂತಪಾದತ್ವಾದಿವಿಷ್ಣುಲಿಂಗಗಳಿಂದ ಗಾಯತ್ರೀ-ಶ್ರುತಿಯು ಬಾಧ್ಯವಾಗುತ್ತದೆ. ಗಾಯತ್ರೀಶಬ್ದದಿಂದ ವಿಷ್ಣುವೇ ವಾಚ್ಯನೆಂದು ನಿರ್ಣಯವಾಗುತ್ತದೆ.

ಇಲ್ಲಿಯ ತನಕ ಅನುವ್ಯಾಖ್ಯಾನದಲ್ಲಿ ಹೇಳಿದ ಪ್ರಮೇಯಾಶ್ರಿತವಾದ ಅಭ್ಯಧಿಕಾಶಂಕೆಗೆ ಉಪಯುಕ್ತ-ವಾಗುವಂತೆ ಸಂಶಯಪರಂಪರೆಯನ್ನು ಹೇಳಿದ್ದಾಯಿತು. ಪ್ರಕೃತ ಸೂತ್ರದಿಂದ ಸೂಚಿತವಾದ ಪ್ರಮಾಣಾಶ್ರಿತವಾದ ಅಭ್ಯಧಿಕಾಶಂಕೆಗೆ ಉಪಯುಕ್ತವಾದ ಸಂಶಯಕೋಟಿಯನ್ನು 'ತಥಾ' ಎಂಬ ಗ್ರಂಥದಿಂದ ತೋರಿಸುತ್ತಿದ್ದಾರೆ.

ಅದು ಹೀಗೆ -- (೧) ಗಾಯತ್ರೀಶಬ್ದವು ಛಂದಸ್ಸನ್ನು ಹೇಳುತ್ತದೋ ಅಥವಾ ಬ್ರಹ್ಮನನ್ನೋ ? (೨) ಆದಕ್ಕಾಗಿ ಬ್ರಹ್ಮಪಕ್ಷದಲ್ಲಿ ಗಾಯತ್ರೀ ಹಾಗೂ ಜ್ಯೋತಿಶಬ್ದಗಳು ಒಂದೇ ಪ್ರಕರಣದಲ್ಲಿರುವುದರಿಂದ ಒಬ್ಬನನ್ನೇ ಪ್ರತಿಪಾದಿಸುತ್ತವೆ. ಆವಾಗ ದಿವಿಸ್ಥಿತತ್ವ ಮತ್ತು ದಿವಃಪರತ್ವ (ದ್ಯುಲೋಕದಲ್ಲಿ ಇರುವಿಕೆ; ದ್ಯುಲೋಕವನ್ನು ದಾಟಿ ಇರುವಿಕೆ) ಎಂಬ ಉಪದೇಶಭೇದವು ತಪ್ಪಾಗುತ್ತದೋ ಇಲ್ಲವೋ? (೩) ಆದಕ್ಕಾಗಿ ದಿವಿ ಮತ್ತು ದಿವಃ ಎಂಬ ಸಪ್ತಮೀ ಪಂಚಮೀ ವಿಭಕ್ತಿಗಳು ವಿರುದ್ಧವಾಗಿವೆಯೋ ಅಥವಾ ವಿವಕ್ಷಾಭೇದದಿಂದ ವಿರೋಧವನ್ನು ಪರಿಹರಿಸಬಹುದೋ? ಎಂದು ಸಂಶಯಪರಂಪರೆಯನ್ನು ತಿಳಿಯ-ಬೇಕು. ಉಪಲಕ್ಷಣಯಾ ತಿಳಿಯಬೇಕಾದ ಮತ್ತೊಂದು ಸಂಶಯ. ಬ್ರಹ್ಮಪಕ್ಷದಲ್ಲಿ ಪ್ರಸಿದ್ಧಪದವನ್ನು ಬಿಟ್ಟು ಅಪ್ರಸಿದ್ಧವಾದ ಗಾಯತ್ರೀಪದವನ್ನು ಪ್ರಯೋಗಿಸಲು ಪ್ರಯೋಜನವಿದೆಯೋ ಇಲ್ಲವೋ ಎಂದು. ಇಲ್ಲಿಗೆ ಸಂಶಯವಿಚಾರವು ಮುಗಿಯಿತು.

**ಗುರುರಾಜೀಯಮ್ – तदर्थं किमनादिस्वभाव इति ॥ इयं चिन्तापूर्वचिन्तार्था ॥ तथा ब्रह्मपक्ष इति ॥ अत्र ब्रह्मपक्ष इत्युक्त्या इयं चिन्ता प्रथमचिन्तार्थेत्युक्ता भवति ॥**

## ನಾಲ್ಕು ವಿಧ ಪ್ರಮಾಣಾಶ್ರಿತ ಪೂರ್ವಪಕ್ಷಗಳು

### तात्पर्यचन्द्रिका

यद्यपि पूर्वत्र निरवकाशलिङ्गैः सावकाशज्योतिश्श्रुतिबाधः उक्तः, अत्र ''यद्वैतत् ब्रह्म'' इत्यादिश्रुत्यनुगृहीतैः भूतपादत्वादिनिरवकाशलिङ्गैः सुतरां सावकाशऽ गायत्र्यादि श्रुतिबाध इति पूर्वपक्षानुदयः । तथाऽप्यधिकाशङ्कया तदुदयः ।

शङ्का तु – 'विष्णौ प्रसिद्धेषु शब्देषु सत्स्वन्यत्रप्रसिद्धगायत्र्यादिशब्दप्रयोगे प्रयोजनं न' इत्येका । इयञ्च 'चेतोऽर्पणनिगदात्' इति सूत्रे सिद्धान्ते प्रयोजनोक्त्या सूचिता । आकाशादिशब्दसाधारणी चेयम् । गायत्रीशब्दे अनुपपत्त्यन्तरसद्भावात् स उदाहृतः । अत एव ''अग्निगायत्र्यादि'' इति भाष्ये आदिपदप्रयोगो युक्तः, ''अधिकरणान्तरेऽप्येतन्न्यायस्यानुसन्धेयत्वं च सूचयति'' इति टीका चोपपन्ना । असाधारणी त्वन्यायुक्त अग्निसूक्तस्थज्योतिषो विष्णुत्वं, उपदेशभेदाभावात्, इह तु 'दिवः' इति पञ्चम्युपदेशस्थस्य ज्योतिश्श्रुत्या विष्णुत्वेऽपि 'दिवि' ति तद्विरुद्धसप्तम्युपदेशस्थगायत्र्या न विष्णुत्वमिति ।

अपरा तु – अग्निसूक्तस्थज्योतिर्निष्ठकर्णादिविदूरत्वविरुद्धदृष्टश्रुतत्वाद्युपदेशात् नेदं ज्योतिर्विष्णुः, ततश्च गायत्र्यपि न विष्णुरिति । इदञ्च शङ्काद्वयं ''उपदेश-भेदात्'' इति सूत्रे कण्ठोक्तम् । अपरा तु – एकस्या वह्निश्रुतेरन्यत्रप्रसिद्धिबाधेऽपि गायत्रीवाक्पृथिव्याद्यनेकशब्दानामन्यत्रप्रसिद्धिबाधो न युक्तः, अन्तरधिकरणे इन्द्रादिबहुश्रुतीनामन्यत्रप्रसिद्धिबाधस्तु अन्यत्रप्रसिद्धान्तस्स्थत्वमुखेन युक्तः, न चेह तथामुखमस्तीति । इयञ्च – 'कथं प्रसिद्धबहुलशब्दानामन्यथार्थता' इत्यनुव्याख्याने उक्ता । एताश्च प्रमाणाश्रिताः ।

ಅನುವಾದ - ವಸ್ತುತಃ ಹಿಂದಿನ ಅಧಿಕರಣದಲ್ಲಿ ನಿರವಕಾಶಲಿಂಗಗಳಿಂದ ಸಾವಕಾಶಜ್ಯೋತಿ-ಶ್ರುತಿಗೆ ಬಾಧವನ್ನು ಹೇಳಿದ್ದಾಗಿದೆ. ಈ ಅಧಿಕರಣದಲ್ಲಿ 'ಯದ್ವೈತದ್ಬ್ರಹ್ಮ' ಇತ್ಯಾದಿ ಶ್ರುತಿಯ ಅನು-ಗ್ರಹವನ್ನು ಹೊಂದಿರುವ ಭೂತಪಾದತ್ವಾದಿ ನಿರವಕಾಶಲಿಂಗಗಳಿಂದ ಸಾವಕಾಶ ಗಾಯತ್ರೀಶ್ರುತಿಗೆ ಬಾಧವನ್ನು ಹೇಳಲಾಗಿದೆ. ಈ ಬಾಧವು ಹಿಂದಿನ ಅಧಿಕರಣದ ನ್ಯಾಯದಿಂದಲೇ ಸುತರಾಂ ಸಿದ್ಧವಾಗುವಾಗ ಪುನಃ ಈ ಅಧಿಕರಣದ ಪೂರ್ವಪಕ್ಷವೇ ಹುಟ್ಟುವುದಿಲ್ಲ. ಆದರೂ ಸಹ ಅಧಿಕಾ-ಶಂಕೆಯಿರುವುದರಿಂದ ಪೂರ್ವಪಕ್ಷವು ಹುಟ್ಟುತ್ತದೆ.

ಅಧಿಕಾಶಂಕೆ ಹೀಗಿದೆ - ವಿಷ್ಣುವಿನಲ್ಲಿ ಪ್ರಸಿದ್ಧವಾದ ಶಬ್ದಗಳಿರುವಾಗ ಅನ್ಯತ್ರಪ್ರಸಿದ್ಧವಾದ ಗಾಯತ್ರ್ಯಾದಿ ಶಬ್ದಗಳನ್ನು ವಿಷ್ಣುವಿನಲ್ಲಿ ಪ್ರಯೋಗಿಸಲು ಪ್ರಯೋಜನವಿಲ್ಲ. ಇದು ಮೊದಲನೆಯ ಅಧಿಕಾಶಂಕೆ. ಇದನ್ನು 'ಚೇತೋರ್ಪಣನಿಗದಾತ್' ಎಂಬ ಸೂತ್ರದ ಸಿದ್ಧಾಂತದಲ್ಲಿ ಪ್ರಯೋಜನವನ್ನು ಹೇಳುವ ಮಾತಿನಿಂದ ಸೂಚಿಸಿದ್ದಾರೆ. ವಸ್ತುತಃ ಈ ಶಂಕೆಯು ಆಕಾಶಾದಿಶಬ್ದಸಾಧಾರಣವಾಗಿದೆ. ಆದರೆ ಗಾಯತ್ರೀಶಬ್ದದಲ್ಲಿ ಹೆಚ್ಚಿನ ಅನುಪಪತ್ತಿ ಕಾಣುವುದರಿಂದ ಗಾಯತ್ರೀಶಬ್ದವನ್ನು ಉದಾ-ಹರಿಸಿದ್ದಾರೆ. ಆದ್ದರಿಂದಲೇ ಭಾಷ್ಯದಲ್ಲಿ ಅಗ್ನಿಗಾಯತ್ರ್ಯಾದಿ ಎಂದು ಆದಿಶಬ್ದವನ್ನು ಪ್ರಯೋಗಿಸಿದ್ದು ಸಮಂಜಸವಾಗಿದೆ. ಮತ್ತು 'ಅಧಿಕರಣಾಂತರೇಷ್ವೇತನ್ನ್ಯಾಯಸ್ಯಾನುಸಂಧೇಯತ್ವಂ ಚ ಸೂಚಯತಿ' (ಬೇರೆ ಅಧಿಕರಣಗಳಲ್ಲಿಯೂ ಈ ನ್ಯಾಯವನ್ನು ಅನುಸಂಧಾನ ಮಾಡಬೇಕೆಂದು ಸೂಚಿಸಿದ್ದಾರೆ) ಎಂಬ ಟೀಕೆಯು ಸಮಂಜಸವಾಗುತ್ತದೆ. ಗಾಯತ್ರೀಶಬ್ದದಲ್ಲಷ್ಟೇ ಅಸಾಧಾರಣವಾದ ಅಧಿಕಾಶಂಕೆ ಮತ್ತೊಂದಿದೆ. ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ವಿಷ್ಣುವಾಗಬಹುದು. ಉಪದೇಶಭೇದವು ಕೇಳಿಸದ ಕಾರಣ. ಆದರೆ ಛಾಂದೋಗ್ಯದಲ್ಲಿ 'ದಿವಃ' ಎಂಬ ಪಂಚಮ್ಯುಪದೇಶದ ಜ್ಯೋತಿ-ಶ್ರುತಿಯಿಂದ ವಿಷ್ಣುವು ಪ್ರತಿಪಾದ್ಯನಾಗಬಹುದು; ಇದಕ್ಕೆ ವಿರುದ್ಧವಾದ 'ದಿವಿ' ಎಂಬ ಸಪ್ತಮ್ಯು-ಪದೇಶದ ಗಾಯತ್ರಿಶ್ರುತಿಯಿಂದ ವಿಷ್ಣುವು ಪ್ರತಿಪಾದ್ಯನಾಗುವುದಿಲ್ಲ.

ಮೂರನೆಯ ಅಧಿಕಾಶಂಕೆಯು ಹೀಗೆ - ಅಗ್ನಿಸೂಕ್ತದಲ್ಲಿರುವ ಜ್ಯೋತಿಗೆ ಕರ್ಣಾದಿವಿದೂರತ್ವ ಲಿಂಗಗಳು ಕೇಳಿಸುತ್ತಿವೆ. ಅದಕ್ಕೆ ವಿರುದ್ಧವಾಗಿ ದೃಷ್ಟಶ್ರುತತ್ವಾದ್ಯುಪದೇಶಗಳು ಛಾಂದೋಗ್ಯದಲ್ಲಿ ಕೇಳಿಸುತ್ತಿರುವುದರಿಂದ ಛಾಂದೋಗ್ಯದ ಜ್ಯೋತಿಯು ವಿಷ್ಣುವಲ್ಲ. ಆದ್ದರಿಂದಲೇ ಗಾಯತ್ರಿಯೂ ವಿಷ್ಣುವಲ್ಲ. ಈ ಎರಡು ಶಂಕೆಗಳನ್ನು ಸೂತ್ರಕಾರರು 'ಉಪದೇಶಭೇದಾತ್' ಎಂದು ಕಂಠತಃ ಹೇಳಿದ್ದಾರೆ.

ನಾಲ್ಕನೆಯ ಅಧಿಕಾಶಂಕೆ - ಅಗ್ನಿಶ್ರುತಿಯು ಒಂದೇ ಆಗಿರುವುದರಿಂದ ಅನ್ಯತ್ರಪ್ರಸಿದ್ಧಿಗೆ ಬಾಧವು ಬರಬಹುದು. ಆದರೆ ಗಾಯತ್ರೀ, ವಾಕ್, ಪೃಥಿವೀ ಮೊದಲಾದ ಅನೇಕಶ್ರುತಿಗಳ ಅನ್ಯತ್ರಪ್ರಸಿದ್ಧಿಗೆ ಬಾಧ ಹೇಳುವುದು ಸುಲಭವಲ್ಲ. ಅಂತರಧಿಕರಣನ್ಯಾಯದಿಂದ ಇದು ಗತಾರ್ಥವಲ್ಲ. ಅಂತರ-ಧಿಕರಣದಲ್ಲಿ ಇಂದ್ರ ಮೊದಲಾದ ಅನೇಕಶ್ರುತಿಗಳ ಅನ್ಯತ್ರಪ್ರಸಿದ್ಧಿಗೆ ಬಾಧವನ್ನು ಹೇಳಲಾಗಿತ್ತು. ಆದರೆ ಅಂತಃಸ್ಥನಲ್ಲಿ ಬ್ರಹ್ಮಾಂಡವೀರ್ಯತ್ವಾದಿಗಳು ಕೇಳಿಸಿದ್ದರಿಂದ ಅಂತಃಸ್ಥನು ವಿಷ್ಣುವಾಗುತ್ತಾನೆ. ಇದರ ಬಲದಿಂದ ಇಂದ್ರಾದಿಶ್ರುತಿಗಳು ವಿಷ್ಣುಪರವಾಗುತ್ತದೆಂದು ಅಂತಃಸ್ಥತ್ವಮುಖದಿಂದ ಅನ್ಯತ್ರಪ್ರಸಿದ್ಧಿಗೆ ಬಾಧವನ್ನು ಹೇಳಿದ್ದರು. ಅಂತಹ ಮುಖವನ್ನು ಈ ಅಧಿಕರಣದಲ್ಲಿ ಹೇಳಲಾಗದು. ಈ ಅಧಿಕಾಶಂಕೆಯನ್ನು ಅನುವ್ಯಾಖ್ಯಾನದಲ್ಲಿ 'ಕಥಂ ಪ್ರಸಿದ್ಧಬಹುಲಶಬ್ದಾನಾಮನ್ಯಥಾರ್ಥತಾ' (ಗಾಯತ್ರೀ, ವಾಕ್, ಪೃಥಿವೀ ಮೊದಲಾದ ಅನೇಕಶಬ್ದಗಳಿಗೆ ಬೇರೆ ಅರ್ಥವನ್ನು ಹೇಗೆ ಹೇಳು-ತ್ತೀರಿ?) ಎಂಬ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟಿದೆ. ಇಲ್ಲಿ ಹೇಳಲ್ಪಟ್ಟ ನಾಲ್ಕೂ ಪೂರ್ವಪಕ್ಷಗಳು ಪ್ರಮಾಣಾಶ್ರಿತವಾದವುಗಳು.

ಗಾಯತ್ರ್ಯಧಿಕರಣ-(೧।೧।೧೧)

ಕಠಿಣಪದಾರ್ಥ

ಪೂರ್ವತ್ರ = ಹಿಂದಿನ ಅಧಿಕರಣದಲ್ಲಿ; ತದುದಯಃ = ಪೂರ್ವಪಕ್ಷದ ಉದಯವು; ಅನುಪಪತ್ತ್ಯಂತರಸದ್ಭಾವಾತ್ = ಉಪದೇಶಭೇದಾದಿರೂಪವಾದ ಹೆಚ್ಚಿನ ಅನುಪಪತ್ತಿ ಇರುವುದರಿಂದ; ಸಃ = ಗಾಯತ್ರೀಶ್ರುತಿಯು; ಅಸಾಧಾರಣೀ = ಗಾಯತ್ರೀಶ್ರುತಿಯಲ್ಲಷ್ಟೇ ಇರುವ; ಅನ್ಯತ್ರಪ್ರಸಿದ್ಧಿಬಾಧಃ = ವಿಷ್ಣುವನ್ನು ಬಿಟ್ಟು ಬೇರೆಡೆ ಇರುವ ಪ್ರಸಿದ್ಧಿಯ ಬಾಧವು, ಏತಾಃ = ಈ ನಾಲ್ಕು ಪೂರ್ವಪಕ್ಷಗಳು.

**प्रकाशः** – अत्रैवं पूर्वपक्षक्रमः इयं गायत्री छन्द एव, न विष्णुः, गायत्रीशब्दस्य तत्रैव रूढत्वादिति टीकायां दर्शितः । अत्र पूर्वपक्षाप्रापकमाशङ्क्याह – **यद्यपीति** ॥ **'यद्वैतद्ब्रह्म' 'एतामेव ब्रह्मोपनिषदं'** इति ब्रह्मश्रुत्यनुगृहीतैरित्यर्थः ॥ **अनुपपत्त्यन्तरेति** ॥ उपदेशभेदादिरूपेत्यर्थः । आनन्दमयशब्दवदिति भावः । गायत्रीज्योतिषोर्भिन्नप्रकरणस्थत्वमुपेत्यैकां शङ्कामुक्त्वा, एकप्रकरणस्थत्वमाश्रित्य पक्षान्तरमाह – **अपरा त्विति** ॥ **ततश्चेति** ॥ **तेजो वै ब्रह्मवर्चसं गायत्री** इति ज्योतिश्शब्दपर्यायस्य तेजश्शब्दस्य तत्र दर्शनात् गायत्र्येव ज्योतिरपीति भावः ॥ **कण्ठोक्तमिति** ॥ उपदेशभेदशब्दस्य यथा 'दिवि' 'दिवः' इति भेदव्यपदेशोऽर्थः, तथादृष्टश्रुतत्वादिभेदव्यपदेशोऽप्यर्थ इति वक्ष्यमाणत्वादिति भावः ॥ **अनेकेति** ॥ **''गायत्री वा इदं सर्वं वाग्वै गायत्री इयं वाव सा येयं पृथिवी''** इत्याद्यनेकशब्दानामित्यर्थः ।

ननु ''इदं सर्वं'' इत्युक्तसर्वात्मकत्वस्य गायत्र्यामनुपपत्तेर्बहुबाधोऽपि न्याय्य इति चेद्ब्रह्मपक्षेऽपि तस्यास्तुल्यत्वादिति । नच वाच्यं अत्रैव श्रुतिबाहुल्येन पूर्वपक्षेण सिद्धान्ते सत्युत्तराधिकरणपूर्वपक्षानुत्थितिरिति, एतच्छङ्कायास्तत्रैव निरसिष्यमाणत्वात् इति भावः । नन्वेवमप्यन्तरधिकरणे समुद्रशायित्वलिङ्गेनेन्द्रबृहस्पत्यादिबहुश्रुतिबाधस्योक्तत्वात् कथमेतत्पक्षोत्थितिरित्यत आह – **अन्तरिति** ॥

ವಿವರಣೆ - ಈ ಅಧಿಕರಣದ ಪೂರ್ವಪಕ್ಷ. ಶ್ರುತಿಯಲ್ಲಿರುವ ಗಾಯತ್ರಿಯು ಛಂದಸ್ಸು ಹೊರತು ವಿಷ್ಣುವಲ್ಲ. ಲೋಕದಲ್ಲಿ ಎಲ್ಲರೂ ಛಂದಸ್ಸಿನಲ್ಲೇ ಗಾಯತ್ರೀಶಬ್ದವನ್ನು ಪ್ರಯೋಗಿಸುತ್ತಾರೆ. ಹೀಗೆ ಟೀಕೆಯಲ್ಲಿ ಹೇಳಿದ್ದಾರೆ. ಪ್ರಕೃತ ಗ್ರಂಥಕಾರರು 'ಯದ್ಯಪಿ' ಇತ್ಯಾದಿ ಗ್ರಂಥದಿಂದ ಪೂರ್ವಪಕ್ಷ ಕಾರಣವನ್ನು ಆಶಂಕಿಸುತ್ತಿದ್ದಾರೆ. 'ಯದ್ವೈತದ್ಬ್ರಹ್ಮ ಏತಾಮೇವ ಬ್ರಹ್ಮೋಪನಿಷದಮ್' ಎಂಬ ಬ್ರಹ್ಮಶ್ರುತಿಯಿಂದ ಅನುಗ್ರಹ ಹೊಂದಿದ ಭೂತಪಾದತ್ವಾದಿ ನಿರವಕಾಶವಿಷ್ಣುಲಿಂಗಗಳಿಂದ ಸಾವಕಾಶ ಗಾಯತ್ರೀಶ್ರುತಿಯು ಸುತರಾಂ ಬಾಧಿತವಾಗುತ್ತದೆಂದು ಅಭಿಪ್ರಾಯ.

ಪರಿಪೂರ್ಣಚಂದ್ರಿಕಾ

ಈ ಅಧಿಕರಣಕ್ಕೆ ಆಕಾಶಾದಿಶ್ರುತಿಗಳೂ ವಿಷಯವಾಗಿವೆ. ಆದರೆ ಗಾಯತ್ರೀಶ್ರುತಿಯನ್ನೇ ವಿಶೇಷವಾಗಿ ಉಲ್ಲೇಖಿಸಲು ಕಾರಣವೇನೆಂದರೆ ದಿವಿಸ್ಥಿತತ್ವ ಮತ್ತು ದಿವಃಪರತ್ವವೆಂಬ ಉಪದೇಶಭೇದದ ಹೆಚ್ಚಿನ ಶಂಕೆ ಇರುವುದರಿಂದ. ಯಾವರೀತಿಯಾಗಿ ಆನಂದಮಯಾಧಿಕರಣದಲ್ಲಿ 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಎಂದಿರು-ವುದರಿಂದ ಅನ್ನಮಯಾದಿಗಳನ್ನು ಬಿಟ್ಟು ಆನಂದಮಯಶಬ್ದವನ್ನೇ ಉಲ್ಲೇಖಿಸಿದ್ದಾರೋ ಅದರಂತೆ ಇಲ್ಲಿಯೂ ತಿಳಿಯಬೇಕು.

ಗಾಯತ್ರೀ ಹಾಗೂ ಜ್ಯೋತಿಶಬ್ದಗಳು ಬೇರೆ ಬೇರೆ ಪ್ರಕರಣಗಳಲ್ಲಿವೆಯೆಂದು ಅಂಗೀಕರಿಸಿ ಒಂದು ಪೂರ್ವಪಕ್ಷವನ್ನು ತೋರಿಸಿದರು. ಎರಡೂ ಸಹ ಒಂದೇ ಪ್ರಕರಣದಲ್ಲಿವೆಯೆಂದು ಅಂಗೀಕರಿಸಿ ಮತ್ತೊಂದು ಪೂರ್ವಪಕ್ಷವನ್ನು 'ಅಪರಾ ತು' ಎಂಬ ಗ್ರಂಥದಿಂದ ತೋರಿಸುತ್ತಿದ್ದಾರೆ. 'ತತಶ್ಚ' ಎಂಬ ಗ್ರಂಥದ ಅಭಿಪ್ರಾಯ ಹೀಗಿದೆ. 'ತೇಜೋ ವೈ ಬ್ರಹ್ಮವರ್ಚಸಂ ಗಾಯತ್ರೀ' ಎಂಬಲ್ಲಿ ಜ್ಯೋತಿಶಬ್ದವು ಇಲ್ಲದಿದ್ದರೂ ಜ್ಯೋತಿಶಬ್ದಕ್ಕೆ ಪರ್ಯಾಯ ಪದವೆನಿಸಿದ ತೇಜಸ್‌ಶಬ್ದವಿದೆ. ಆದ್ದರಿಂದ ಗಾಯತ್ರಿಯನ್ನು ಜ್ಯೋತಿಯೆಂದು ಹೇಳಬಹುದು.

ಮೊದಲಿನ ಈ ಎರಡು ಪೂರ್ವಪಕ್ಷಗಳನ್ನು ಸೂತ್ರಕಾರರು 'ಉಪದೇಶಭೇದಾತ್' ಎಂದು ಕಂಠತಃ ಹೇಳಿದ್ದಾರೆ. ಉಪದೇಶಭೇದಶಬ್ದಕ್ಕೆ 'ದಿವಿ ಮತ್ತು ದಿವಃ' ಎಂಬ ಭೇದವ್ಯಪದೇಶವು ಅರ್ಥ. ಇದರಂತೆ ದೃಷ್ಟಶ್ರುತತ್ವವೆಂಬ ಭೇದವ್ಯಪದೇಶಾರ್ಥವನ್ನು ಮುಂದೆ ಹೇಳುತ್ತಾರೆ. ಇದರಿಂದ ಎರಡು ಪೂರ್ವಪಕ್ಷಗಳನ್ನು ಕಂಠತಃ ಹೇಳಿದಂತಾಯಿತು. ಗ್ರಂಥದಲ್ಲಿ 'ಅನೇಕಶಬ್ದಾನಾಂ' ಎಂದು ಹೇಳಿದ್ದಾರೆ. ಅದಕ್ಕೆ ಹೀಗರ್ಥ -- 'ಗಾಯತ್ರೀ ವಾ ಇದಂ ಸರ್ವಂ ವಾಗ್ವೈ ಗಾಯತ್ರೀ ಇಯಂ ವಾವ ಸಾ ಯೇಯಂ ಪೃಥಿವೀ' ಎಂದು ಗಾಯತ್ರೀ, ವಾಕ್, ಪೃಥಿವೀ ಮೊದಲಾದ ಅನೇಕಶಬ್ದಗಳನ್ನು ಹೇಳಿದ್ದಾರೆ.

ಇನ್ನು ಹಿಂದಿನ ಅಧಿಕರಣದಲ್ಲಿ ಕೇವಲ ಒಂದು ಶ್ರುತಿಗೆ ಬಾಧವನ್ನು ಹೇಳಿದ್ದು ತಪ್ಪಲ್ಲ. ಆದರೆ ಗಾಯತ್ರೀ ವಾಕ್ ಮೊದಲಾದ ಅನೇಕಶ್ರುತಿಗಳಿಗೆ ಇಲ್ಲಿ ಬಾಧವನ್ನು ಹೇಳುತ್ತಿರುವುದು ತಪ್ಪು. ಗಾಯತ್ರೀ ಶ್ರುತಿಯಲ್ಲಿ 'ಇದಂ ಸರ್ವಂ' ಎಂದು ಗಾಯತ್ರಿಗೆ ಸರ್ವಾತ್ಮಕತ್ವವು ಯುಕ್ತವಾಗಿದೆ. ಛಂದೋರೂಪ-ಗಾಯತ್ರಿಗೆ ಸರ್ವಾತ್ಮಕತ್ವವು ಅಸಂಗತವಲ್ಲವೇ? ಅದಕ್ಕೋಸ್ಕರ ಬಹುಬಾಧವನ್ನು ಹೇಳುವುದು ಸಂಗತ-ವಾಗಿದೆಯೆಂದು ಉತ್ತರಿಸಬೇಕು. ಆದರೆ ಬ್ರಹ್ಮಪಕ್ಷದಲ್ಲಿಯೂ ಸಹ ಸರ್ವಾತ್ಮಕತ್ವವನ್ನು ಹೇಳಲು ಹೇಗೆ ಸಾಧ್ಯವೆಂಬ ಪ್ರಶ್ನೆ ಸಾಧಾರಣವಾಗಿದೆ. ಆದ್ದರಿಂದ ಬಹುಬಾಧ ಹೇಳುವುದು ಅನ್ಯಾಯವೆಂದು 'ಪ್ರಸಿದ್ಧಿಬಾಧೋ ನ ಯುಕ್ತಃ' ಎಂಬ ಗ್ರಂಥದಿಂದ ಹೇಳಿದ್ದಾರೆ.

ಶಂಕೆ - ಈ ಅಧಿಕರಣದಲ್ಲಿ ಅನೇಕ ಶ್ರುತಿಗಳ ಆಧಾರದಿಂದ ಪೂರ್ವಪಕ್ಷ ಮಾಡಿ ಸಿದ್ಧಾಂತ ಮಾಡಲಾಗಿದೆ. ಹಾಗಾದರೆ ಮುಂದಿನ ಪಾದಾಂತ್ಯಪ್ರಾಣಾಧಿಕರಣದ ಪೂರ್ವಪಕ್ಷವೇ ಹುಟ್ಟಲು ಸಾಧ್ಯ-ವಿಲ್ಲ. ಏಕೆಂದರೆ ಇಲ್ಲಿ ಹೇಳುತ್ತಿರುವ ಪೂರ್ವಪಕ್ಷ ಆ ಅಧಿಕರಣದ ಪೂರ್ವಪಕ್ಷವಾಗಿದೆ.

ಸಮಾಧಾನ - ಪಾದಾಂತ್ಯಪ್ರಾಣಾಧಿಕರಣದಲ್ಲಿ ಪೂರ್ವಪಕ್ಷ ಹುಟ್ಟುತ್ತದೋ ಇಲ್ಲವೋ? ಎಂಬ ವಿಚಾರವು ಪ್ರಕೃತ ಅನುಪಯುಕ್ತ. ಅಲ್ಲಿ ಪೂರ್ವಪಕ್ಷ ಹುಟ್ಟುವುದಿಲ್ಲವೆಂಬ ಶಂಕೆಯನ್ನು ಅಲ್ಲಿಯೇ ನಿರಾಕರಿಸುತ್ತೇವೆ.

ಗಾಯತ್ರ್ಯಧಿಕರಣ-(೧।೧।೧೧)

ಹಾಗಿದ್ದರೂ ಕೂಡ ಅಂತರಧಿಕರಣದಲ್ಲಿಯೇ ಸಮುದ್ರಶಾಯಿತ್ವವೆಂಬ ನಿರವಕಾಶಲಿಂಗದಿಂದ ಇಂದ್ರ ಬೃಹಸ್ಪತಿ ಮೊದಲಾದ ಅನೇಕ ಶ್ರುತಿಗಳಿಗೆ ಬಾಧವನ್ನು ಹೇಳಿದ್ದಾಗಿದೆ. ಪುನಃ ಈ ಅಧಿಕರಣದಲ್ಲಿ ಅದನ್ನೇ ಸಮರ್ಥಿಸಿದರೆ ಗತಾರ್ಥತ್ವಬರುತ್ತದೆಂಬ ಶಂಕೆಗೆ 'ಅಂತರಧಿಕರಣೇ' ಎಂಬಿತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ.

**गुरुराजीयम् – आकाशादीति ॥** न चैवमभ्यधिकाशङ्कात्वानुपपत्तिः । पूर्वमनुद्धृतत्वमात्रेण तदुपपत्तेः ॥ **अत एवेति ॥** चेतोर्पणनिगदादित्येतन्निवर्त्याशङ्कया आकाशादिशब्दसाधारणत्वादेवेत्यर्थः । गायत्रीवाक्पृथिव्यादीत्यत्रादिपदेन शरीरहृदययोर्ग्रहणम् । अन्तःस्थत्वमुखेन युक्त इति ॥ यद्यप्यत्राज्यैः स्तुवत इत्यादाविवान्यत्रप्रसिद्धमुखं नावश्यकं तथाऽपि तत्र सिद्धान्तहेतुविशेषसद्भावान्मुखानपेक्षायामपि प्रकृते तदभावात्पुनः शङ्कोत्थानमिति द्रष्टव्यम् ।

## ಸಾರ

ಒಟ್ಟು ಪ್ರಮಾಣಾಶ್ರಿತಪೂರ್ವಪಕ್ಷಗಳು ನಾಲ್ಕು.

೧. ವಿಷ್ಣುವಿನಲ್ಲಷ್ಟೇ ಪ್ರಸಿದ್ಧವಾದ ಅನೇಕ ಶಬ್ದಗಳಿರುವಾಗ ಅನ್ಯತ್ರಪ್ರಸಿದ್ಧವಾದ ಗಾಯತ್ರೀ ಮೊದಲಾದ ಶಬ್ದಗಳನ್ನು ವಿಷ್ಣುವಿನಲ್ಲಿ ಪ್ರಯೋಗಿಸಲು ಪ್ರಯೋಜನವಿಲ್ಲ.

೨. ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ವಿಷ್ಣುವೆನ್ನಲು ಬಾಧಕವಿಲ್ಲ. ಪ್ರಕೃತ ಗಾಯತ್ರಿಯನ್ನು ವಿಷ್ಣು ಎನ್ನಲು ದಿವಃಪರತ್ವ ದಿವಃಸ್ಥಿತತ್ವ ಎಂಬ ಉಪದೇಶಭೇದದ ವಿರೋಧವಿದೆ.

೩. ಅಗ್ನಿಸೂಕ್ತದಲ್ಲಿರುವ ಜ್ಯೋತಿ ವಿಷ್ಣುವೆನ್ನಲು ಕರ್ಣಾದಿವಿದೂರತ್ವ ಲಿಂಗವಿದೆ. ಅದಕ್ಕೆ ವಿರುದ್ಧವಾದ ದೃಷ್ಟಶ್ರುತತ್ವಾದಿಗಳು ಗಾಯತ್ರಿಯಲ್ಲಿ ಕೇಳಿಸುತ್ತಿರುವುದರಿಂದ ಗಾಯತ್ರಿಯು ವಿಷ್ಣುವಲ್ಲ.

೪. ಒಂದು ಜ್ಯೋತಿಶ್ರುತಿಗೆ ಬಾಧ ಹೇಳುವುದು ಕಷ್ಟವಲ್ಲ. ಗಾಯತ್ರೀ,ವಾಕ್, ಪೃಥಿವೀ ಮೊದಲಾದ ಅನೇಕ ಶ್ರುತಿಗಳಿಗೆ ಬಾಧ ಹೇಳುವುದು ಬಹಳ ಕಷ್ಟ.

### ಪ್ರಮೇಯಾಶ್ರಿತ ಪೂರ್ವಪಕ್ಷ

### तात्पर्यचन्द्रिका

**प्रमेयाश्रिता तु – युक्तमाकाशाद्यधिकरणोक्तं जन्यभूताकाशस्वभावस्य विवरत्वादे, ज्योतिश्शब्दप्रवृत्तिनिमित्तस्य चेशाधीनत्वम्, धर्मिणा सह जन्यत्वात्, गायत्रीरूपवेदस्य तु अनादित्वात् तत्स्वभावस्य गानत्राणकर्तृत्वादिरूपप्रवृत्तिनिमित्तस्य नेशाधीनत्वमिति ।**

ಅನುವಾದ - ಪ್ರಮೇಯಾಶ್ರಿತ ಪೂರ್ವಪಕ್ಷ ಹೀಗಿದೆ - ಹಿಂದಿನ ಆಕಾಶಾದ್ಯಧಿಕರಣಗಳಲ್ಲಿ ಹೇಳಲಪಟ್ಟ ಜನ್ಯವಾದ ಭೂತಕಾಶದ ಸ್ವಭಾವವೆನಿಸಿದ ವಿವರತ್ವಾದಿಗಳು ಭಗವಂತನ ಅಧೀನಗಳಾಗಬಹುದು. ಇದರಂತೆ ಜ್ಯೋತಿಶಬ್ದದ ಪ್ರವೃತ್ತಿನಿಮಿತ್ತವೂ ಸಹ ಭಗವಂತನ ಅಧೀನವಾಗಬಹುದು. ಧರ್ಮಿಯು ಹುಟ್ಟಿದಾಗ ಅದರ ಸ್ವಭಾವಧರ್ಮವೂ ಸಹ ಹುಟ್ಟುತ್ತದೆ. ಅದಕ್ಕಾಗಿ ಭಗವಂತನ ಅಪೇಕ್ಷೆ ಇದೆ. ಆದರೆ ಗಾಯತ್ರೀರೂಪವಾದ ವೇದವು ಅನಾದಿಯಾದ್ದರಿಂದ ಅದರ ಸ್ವಭಾವವು ಭಗವದಧೀನವಾಗುವುದಿಲ್ಲ. ಗಾಯತ್ರೀಶಬ್ದದ ಪ್ರವೃತ್ತಿನಿಮಿತ್ತ ಗಾನತ್ರಾಣಕರ್ತೃತ್ವ. ಇದು ನಿತ್ಯವಾದ್ದರಿಂದ ಭಗವಂತನನ್ನು ಅಪೇಕ್ಷಿಸುವುದಿಲ್ಲ. ಆದ್ದರಿಂದ ಗಾಯತ್ರೀಶಬ್ದವು ಸ್ವಾಮಿತ್ವವೆಂಬ ಪ್ರವೃತ್ತಿನಿಮಿತ್ತದಿಂದ ಭಗವಂತನನ್ನು ಪ್ರತಿಪಾದಿಸುವುದಿಲ್ಲ; ಹೊರತು ಗಾಯತ್ರೀಛಂದಸ್ಸನ್ನೇ ಪ್ರತಿಪಾದಿಸುತ್ತದೆ.

### ಕಠಿಣಪದಾರ್ಥ

ಜ್ಯೋತಿಶಬ್ದಪ್ರವೃತ್ತಿನಿಮಿತ್ತಸ್ಯ = ಪ್ರಕಾಶತ್ವಕ್ಕೆ; ಗಾನಕರ್ತೃತ್ವಮ್ = ಅರ್ಥಪ್ರತಿಪಾದಕತ್ವ;
ತ್ರಾಣಕರ್ತೃತ್ವ = ಅಧ್ಯಯನ ಮಾಡುವವರಿಗೆ ಪಾಪದಿಂದ ರಕ್ಷಿಸುವಿಕೆ.

**प्रकाशः** – **''कथं प्रसिद्ध''** इत्युत्तरार्धोक्तामाशङ्कां स्फुटीकृत्य, **''नित्यत्वादेव शब्दस्य''** इति पूर्वार्धोक्तां शङ्कां विशदयति – **प्रमेयेति** ॥ **जन्येति** ॥ भूतप्रकरणादिना तत्र भूताकाशस्यैव पूर्वपक्षितत्वात्तस्य च **''आत्मन आकाशः सम्भूतः''** इति जन्यत्वावगमादिति भावः ॥ **ज्योतिश्शब्देति** ॥ प्रकाशत्वत्वादेरित्यर्थः । धर्मिणो जन्यत्वे तद्धर्मस्यापि तथात्वादिति भावः। गानकर्तृत्वमर्थप्रतिपादकत्वम् । त्राणकर्तृत्वं चाध्येतॄणां पापेभ्यो रक्षकत्वम् । तच्च तत्स्वभावः । स्वभावश्च अनादित्वान्न जन्यते, अतो न तदधीनमित्यर्थः । ईशगतत्वं त्वशक्यशङ्कमिति भावः । तस्माच्छब्दप्रवृत्तिनिमित्ताभावात्प्रसिद्धिबाधे मुख्यत्वहानेर्गायत्री न विष्णुः, किन्तु च्छन्द एव इति पूर्वपक्षशेषः ।

ಅನುವಾದ - ಅನುವ್ಯಾಖ್ಯಾನದ 'ಕಥಂ ಪ್ರಸಿದ್ಧಬಹುಲಶಬ್ದಾನಾಂ ಅನ್ಯಥಾರ್ಥತಾ' ಎಂಬ ಉತ್ತರಾರ್ಧದಲ್ಲಿ ಹೇಳಿದ ಪೂರ್ವಪಕ್ಷವನ್ನು ಇಲ್ಲಿಯ ತನಕ ವಿವರಿಸಿ ಈಗ 'ನಿತ್ಯತ್ವಾದೇವ ಶಬ್ದಸ್ಯ' ಎಂಬ ಪೂರ್ವಾರ್ಧದಲ್ಲಿ ಹೇಳಿದ ಶಂಕೆಯನ್ನು 'ಪ್ರಮೇಯಾಶ್ರಿತಾ ತು' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ. ಆಕಾಶಾಧಿಕರಣದಲ್ಲಿ ಪ್ರಸಕ್ತವಾದ ಆಕಾಶವು ಭೂತಾಕಾಶವೆಂದೇ ಪೂರ್ವಪಕ್ಷ ಮಾಡಿದ್ದಾರೆ. ಅಂತಹ ಭೂತಾಕಾಶವು 'ಆತ್ಮನಃ ಆಕಾಶಃ ಸಂಭೂತಃ' ಎಂಬ ಶ್ರುತಿಯಿಂದ ಜನ್ಯವೆಂದು ತಿಳಿಯುತ್ತದೆ. ಜನ್ಯವಾದ ಆಕಾಶದಲ್ಲಿರುವ ವಿವರತ್ವವೂ ಸಹ ಜನ್ಯವೇ ಆಗುತ್ತದೆಂದು ಅಭಿಪ್ರಾಯ. ಧರ್ಮಿಯು ಜನ್ಯವಾದರೆ ಧರ್ಮವು ಜನ್ಯವಾಗಬೇಕೆಂದು ನಿಯಮ. ಗಾನತ್ರಾಣಕರ್ತೃತ್ವವು ಅನಾದಿಸ್ವಭಾವವಾದ್ದರಿಂದ ಜನ್ಯವಲ್ಲ.

ಜನ್ಯವಲ್ಲದ ಕಾರಣ ಭಗವದಧೀನವೂ ಅಲ್ಲ. ಆದ್ದರಿಂದ ಸ್ವಾತಂತ್ರ್ಯಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿ ಗಾಯತ್ರೀಶಬ್ದಸಮನ್ವಯವನ್ನು ಭಗವಂತನಲ್ಲಿ ಮಾಡಲಾಗದು. ತದ್ಗತತ್ವವೆಂಬ ಪ್ರವೃತ್ತಿನಿಮಿತ್ತವಂತೂ ಭಗವಂತನಲ್ಲಿ ಶಂಕಿಸಲು ಸಾಧ್ಯವೇ ಇಲ್ಲ. ಆದ್ದರಿಂದ ಶಬ್ದಪ್ರವೃತ್ತಿನಿಮಿತ್ತವೇ ಭಗವಂತನಲ್ಲಿ ಬಾರದ ಕಾರಣ ಛಂದಸ್ಸಿನಲ್ಲಿರುವ ಪ್ರಸಿದ್ಧಿಗೆ ಬಾಧವನ್ನು ಹೇಳಿದರೆ ಶ್ರುತಿಯ ಮುಖ್ಯಾರ್ಥಕ್ಕೆ ಭಂಗ ಬರುತ್ತದೆ. ಆದ್ದರಿಂದ ಗಾಯತ್ರಿಯು ವಿಷ್ಣುವಲ್ಲ. ಹೊರತು ಛಂದಸ್ಸೇ ಆಗಿದೆ.

## ಸಾರ

ಪ್ರಮೇಯಾಶ್ರಿತಪೂರ್ವಪಕ್ಷ - ಹಿಂದಿನ ಅಧಿಕರಣಗಳಲ್ಲಿ ಸಮನ್ವಯ ಮಾಡಿದ ಆಕಾಶ, ಜ್ಯೋತಿ ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತಗಳು ಜನ್ಯವಾಗಿವೆ. ಅವುಗಳ ಹುಟ್ಟಿಗೆ ಭಗವಂತನು ಸ್ವಾಮಿಯೆಂದು ಒಪ್ಪುವುದು ಅನಿವಾರ್ಯ. ಆದರೆ ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ ಗಾಯತ್ರೀಶಬ್ದದ ಪ್ರವೃತ್ತಿನಿಮಿತ್ತವು ಅನಾದಿ ಸ್ವಭಾವವೆನಿಸಿದೆ. ಅನಾದಿಧರ್ಮಕ್ಕೆ ಮತ್ತೊಬ್ಬರ ಅಪೇಕ್ಷೆ ಇಲ್ಲ. ಆದ್ದರಿಂದ ಸ್ವಾಮಿತ್ವವೆಂಬ ಪ್ರವೃತ್ತಿನಿಮಿತ್ತದಿಂದ ಭಗವಂತನು ಆಕಾಶಾದಿಶಬ್ದಗಳಿಂದ ಪ್ರತಿಪಾದ್ಯನಾಗಬಹುದೇ ಹೊರತು; ಗಾಯತ್ರೀಶಬ್ದದಿಂದ ಪ್ರತಿಪಾದ್ಯನಾಗಲಾರ.

---

## ವೇದಾಪೌರುಷೇಯತ್ವವಿಚಾರ

### तात्पर्यचन्द्रिका

**ननु कृतकक्रमविशिष्टवर्णात्मकस्य वेदस्य नानादित्वम् । उक्तं हि विष्णुतत्वनिर्णयटीकायां ''न हि वयं वेदस्य कूटस्थनित्यतां ब्रूमः'' इति, ''क्रमस्य कृतकत्वेऽपि'' इति चेति चेत् मैवम्, तत्त्वसङ्ख्यानटीकायां ''नित्यत्वं नाम कूटस्थतया आद्यन्तशून्यत्वम् । तच्च वेदानाम् ''नित्या वेदाः समस्ताश्च'' इत्यादिप्रमाणसिद्धम्'' इत्युक्तत्वात् । युक्तश्चैतत्, क्रमस्य सदेश्वरबुद्धिस्थत्वात् । अत एवोक्तं विष्णुतत्वनिर्णये ''सर्वज्ञत्वेनेश्वरस्य तद्बुद्धौ सर्वदा प्रतीयमानत्वात्'' इति । तट्टीकायां कौटस्थ्यनिषेधस्तु अस्मदादीन् प्रति प्रमापकत्वोपयुक्तस्य अस्मदादिबुद्धिस्थस्य क्रमस्योच्चारणाद्यधीनत्वेन कृतकत्वात् । कृत्वाचिन्तया वा अनादित्वोक्तिः, क्रमस्यानन्याधीनत्वात् । इयञ्च –**

**नित्यत्वादेव शब्दानां तत्स्वभावः कथं हरेः ।**

**इत्यनुव्याख्याने दर्शिता ।**

ಅನುವಾದ - ಪ್ರಶ್ನೆ - ವೇದವು ಅನಾದಿಯಲ್ಲ. ಕ್ರಮವಿಶಿಷ್ಟವಾದ ವರ್ಣಗಳೇ ವೇದ. ಕ್ರಮವು ಕೃತಕವಾದ್ದರಿಂದ ವೇದವು ಕೃತಕವೇ ಆಗಬೇಕು. ಇದನ್ನೇ ವಿಷ್ಣುತತ್ತ್ವನಿರ್ಣಯಟೀಕೆಯಲ್ಲಿ 'ನ ಹಿ ವಯಂ ವೇದಸ್ಯ ಕೂಟಸ್ಥನಿತ್ಯತಾಂ ಬ್ರೂಮಃ' (ನಾವು ವೇದಕ್ಕೆ ಕೂಟಸ್ಥನಿತ್ಯತ್ವವನ್ನು ಹೇಳು-ವುದಿಲ್ಲ) ಎಂದು ಮತ್ತು 'ಕ್ರಮಸ್ಯ ಕೃತಕತ್ವೇಪಿ' (ಕ್ರಮವು ಕೃತಕವಾದರೂ) ಎಂದು ಹೇಳಿದ್ದಾರೆ. ಹೀಗಿರುವಾಗ ಗಾಯತ್ರೀರೂಪವಾದ ವೇದವು ಅನಾದಿಯಾದ್ದರಿಂದ ಈಶಾಧೀನವಲ್ಲವೆಂಬ ಪೂರ್ವ-ಪಕ್ಷವನ್ನು ಹೇಗೆ ಮಾಡುತ್ತೀರಿ?

ಉತ್ತರ - ಕ್ರಮವು ನಿತ್ಯವಾದ್ದರಿಂದ ವೇದವು ನಿತ್ಯವೇ ಆಗಿದೆ. ತತ್ವಸಂಖ್ಯಾನಟೀಕೆಯಲ್ಲಿ 'ನಿತ್ಯತ್ವಂ ನಾಮ ಕೂಟಸ್ಥತಯಾ ಆದ್ಯಂತಶೂನ್ಯತ್ವಮ್ । ತಚ್ಚ ವೇದಾನಾಂ 'ನಿತ್ಯಾ ವೇದಾಃ ಸಮಸ್ತಾಶ್ಚ' ಇತ್ಯಾದಿಪ್ರಮಾಣಸಿದ್ಧಮ್' (ನಿತ್ಯಶಬ್ದಕ್ಕೆ ಕೂಟಸ್ಥವಾಗಿ ಆದ್ಯಂತವಿಲ್ಲದಿರುವಿಕೆ ಎಂದರ್ಥ. 'ನಿತ್ಯಾ ವೇದಾಃ ಸಮಸ್ತಾಶ್ಚ' ಎಂಬ ಪ್ರಮಾಣದಂತೆ ಇಂತಹ ನಿತ್ಯತ್ವವು ವೇದಗಳಲ್ಲಿ ಸಿದ್ಧವಾಗಿದೆ) ಎಂದು ಹೇಳಿದ್ದಾರೆ. ಇದು ಯುಕ್ತವೇ ಆಗಿದೆ. ಏಕೆಂದರೆ ಈಶ್ವರಬುದ್ಧಿಯಲ್ಲಿ ಕ್ರಮವು ನಿರಂತರವಾಗಿ ಇರುತ್ತದೆ. ಆದ್ದರಿಂದಲೇ ವಿಷ್ಣುತತ್ವನಿರ್ಣಯದಲ್ಲಿ ಶ್ರೀಮದಾಚಾರ್ಯರು 'ಸರ್ವ-ಜ್ಞತ್ವಾದೀಶ್ವರಸ್ಯ ತದ್ಬುದ್ಧೌ ಸರ್ವದಾ ಪ್ರತೀಯಮಾನತ್ವಾತ್' (ಸರ್ವಜ್ಞನಾದ ಈಶ್ವರನ ಬುದ್ಧಿಯಲ್ಲಿ ವೇದಗಳು ನಿರಂತರ ಪ್ರತೀಯಮಾನವಾಗಿರುತ್ತವೆ) ಎಂದು ಹೇಳಿದ್ದಾರೆ. ಮತ್ತು ಆ ವಾಕ್ಯದ ಟೀಕೆಯಲ್ಲಿ 'ಕೌಟಸ್ಥನಿಷೇಧಸ್ತು ಅಸ್ಮದಾದೀನ್ ಪ್ರತಿ ಪ್ರಮಾಪಕತ್ವೋಪಯುಕ್ತಸ್ಯಾಸ್ಮದಾದಿಬುದ್ಧಿಸ್ಥಸ್ಯ ಕ್ರಮಸ್ಯೋಚ್ಚಾರಣಾದ್ಯಧೀನತ್ವೇನ ಕೃತಕತ್ವಾತ್ । ಕೂಟಸ್ಥನಿತ್ಯತ್ವವನ್ನು ನಿಷೇಧಿಸಿದ ಕಾರಣ-ವೇನೆಂದರೆ ನಮ್ಮನ್ನು ಕುರಿತು ಯಥಾರ್ಥಜ್ಞಾನವನ್ನು ಹುಟ್ಟಿಸಲು ವೇದವನ್ನು ಉಚ್ಚಾರ ಮಾಡಬೇಕು. ಉಚ್ಚಾರ ಮಾಡಬೇಕಾದರೆ ನಮ್ಮ ಬುದ್ಧಿಯಲ್ಲಿ ವೇದವು ಕ್ರಮವಾಗಿ ಗೋಚರಿಸ-ಬೇಕು. ಆದ್ದರಿಂದ ನಮ್ಮ ಬುದ್ಧಿಯಲ್ಲಿರುವ ಕ್ರಮವು ಉಚ್ಚಾರಣೆಯ ಅಧೀನವಾಗಿ ಕೃತಕವಾಗುತ್ತದೆ. ಅಥವಾ ಪ್ರಕೃತ ಗಾಯತ್ರೀರೂಪವೇದಕ್ಕೆ ಅನಾದಿತ್ವವನ್ನು ಪೂರ್ವಪಕ್ಷಿಯ ಅಭಿಪ್ರಾಯವನ್ನು ಅಂಗೀಕರಿಸಿ ಹೇಳಲಾಗಿದೆ. ಏಕೆಂದರೆ ಕ್ರಮವು ಯಾರ ಅಧೀನವೂ ಅಲ್ಲ. ಈ ಪ್ರಮೇಯಾಶ್ರಿತ-ಪೂರ್ವಪಕ್ಷವನ್ನು 'ನಿತ್ಯತ್ವಾದೇವ ಶಬ್ದಾನಾಂ ತತ್ಸ್ವಭಾವಃ ಕಥಂ ಹರೇಃ' (ಶಬ್ದಗಳು ನಿತ್ಯವಾದ್ದರಿಂದ ಅನಾದಿಸ್ವಭಾವ ಹೇಗೆ ಭಗವದಧೀನವಾಗುತ್ತವೆ?' ಎಂಬ ಅನುವ್ಯಾಖ್ಯಾನದಲ್ಲಿ ತೋರಿಸಿದ್ದಾರೆ.

### ಕಠಿಣಪದಾರ್ಥ

ಕ್ರಮಸ್ಯ = ಆ[illegible]ಪೂರ್ವೀರೂಪ ಕ್ರಮಕ್ಕೆ, ಏತತ್ = ಅನಾದಿತ್ವವು, ತದ್ಬುದ್ಧೌ = ಈಶ್ವರನ ಮನಸ್ಸಿನಲ್ಲಿ; ತಟ್ಟೀಕಾಯಾಮ್ = ಹಿಂದೆ ಹೇಳಿದ ವಿಷ್ಣುತತ್ತ್ವನಿರ್ಣಯಟೀಕೆಯಲ್ಲಿ; ಕೃತ್ವಾಚಿಂತಯಾ = ಪೂರ್ವಪಕ್ಷಕಾರರ ಅಭಿಪ್ರಾಯವನ್ನು ಅಂಗೀಕರಿಸಿ. ಅನಾದಿತ್ವೋಕ್ತಿಃ = ಬುದ್ಧಿಘಟಿತವಾಗದ ಆತ್ಮಾದಿ ಸಾಧಾರಣವಾದ ಅನಾದಿತ್ವವಚನವು. ನಿತ್ಯತ್ವಾದೇವ = ಅನಾದಿಯಾದ್ದರಿಂದಲೇ,

### ಗಾಯತ್ರ್ಯಧಿಕರಣ-(೧।೧।೧೧)

**प्रकाशः** – ननु यदुक्तं वेदस्यानादित्वात्तत्स्वभावो नेशाधीन इति, तदयुक्तम्,

**नित्या वेदाः समस्ताश्च शाश्वता विष्णुबुद्धिगाः ।**

इति प्रमाणव्याख्याऽवसरे तत्वनिर्णयटीकायां – **''वर्णास्तावन्नित्यत्वात् सर्वगतत्वाच्च स्वतः क्रमशून्याः । नच क्रमेण विना पदवाक्यभावः, नापि तदन्तरेण प्रामाण्यम् । अतः क्रमः पौरुषेय एवास्थेयः । तत्कथं वेदस्यापौरुषेयत्वम्''** इत्याशङ्क्य **''न हि वयं वेदस्य कूटस्थनित्यतां ब्रूमः । किन्तु शब्दतोऽर्थतश्च सर्वदैकप्रकारतामेव । ततश्च क्रमस्य कृतकत्वेऽपि पुरुषाभिप्रायप्रवेशेऽपि स्वतन्त्रस्य वक्तुरभावात् अपौरुषेयत्वमुपपद्यते''** इत्यनेन सादित्वोक्तेः । अङ्गीकृतं चेद्भाट्टैरपि –

**यत्नतः प्रतिषेध्या नः पुरुषाणां स्वतन्त्रता ।**

इत्युक्तेरित्याशङ्क्य वाक्यान्तरानुसारेणास्याभिप्रायं व्यञ्जयन् अनादित्वमुपपादयति – **नन्विति** ॥ **कृतकक्रमेति** ॥ नित्यत्वात्सर्वगतत्वाच्च वर्णानां स्वतः क्रमाभावादिति भावः ॥ **तत्वसङ्ख्यानेति** ॥

**नित्या वेदाः पुराणाद्याः कालः प्रकृतिरेव च ।**
**नित्यानित्यम् ।**

इत्यस्य व्याख्याऽवसरे । ननु व्यामिश्रोक्तौ सत्यामपि कथमनादित्वनिर्णय इत्यत आह – **युक्तमिति** ॥ 'एतत्' अनादित्वम् । स्वतः क्रमशून्यानां वर्णानां क्रमस्य बुद्धिघटितत्वेऽपि ईश्वरबुद्धेरनादिनित्यत्वेन तद्घटितत्वादनादित्वोपपत्तेरिति भावः ।

'तद्बुद्धौ' तन्मनसि । 'तट्टीकायां' प्रागुक्ततत्त्वनिर्णयटीकायामित्यर्थः । प्रलयेऽविच्छेदायावश्यवक्तव्यानादिनित्यभगवद्बुद्धिघटितक्रमवत्तामपेक्ष्य क्वचित् कूटस्थनित्यत्वमुक्तम् । तादृशस्येतरप्रमाजनकत्वाभावात्तदतर्थमुच्चराणघटितस्यैव तस्य वक्तव्यत्वात् उच्चारणस्य चानादिनित्यत्वाभावात् कूटस्थता नेति क्वचिदुक्तमित्यर्थः । उक्तञ्च सुधायां वियत्पादे – **''नियत- विशिष्टानुपूर्वीविशिष्टत्वेनार्थावबोधशक्त्याविर्भावो जनि''** इति ॥ आदिपदेनेश्वरोऽपि गृह्यते, तदुच्चारणघटितस्यापि तथात्वात् । अत एव 'बुद्धिस्थत्वात्' इति, 'तद्बुद्धौ' इत्येवोक्तम् । उक्तञ्च

तर्कताण्डवे "आधुनिकाध्यापकेन स्वबुद्धिस्थपूर्वपूर्वदिवसीयक्रमानुसारेण उत्तरोत्तर-दिवसेष्विव ईश्वरेणापि स्वबुद्धिस्थप्रवाहानादिपूर्वपूर्वकल्पीयक्रमानुसारेणैव उत्तरोत्तर-कल्पेष्वपि वेदस्य उच्चारितत्वेन" इत्यादि । यदि च

ज्ञानं नित्यं क्रिया नित्या बलं शक्तिः परात्मनः ।

इत्यनुव्याख्यानानुरोधात् भगवत्क्रियाणां अनादिनित्यता, तदा तद्घटितस्यापि कौटस्थ्यं ध्येयम् । ननु यदीश्वरबुद्धिघटिततया क्रमस्यानादित्वं, तर्ह्यागतमीश्वरा-धीनस्वभावत्वं वेदस्य । न हि यो यद्बुद्ध्यधीनः स न तदधीन इति सम्भवति, वर्णानामन्यथा क्रमेणाप्यनुसन्धातुं शक्यत्वादित्यत आह – कृत्वाचिन्तयेति ॥ बुद्धिघटितत्वं विना वेदस्यानादित्वाभाऽवेप्यनादित्वं सिद्धवत्कृत्येशाधीनत्वमाशङ्क्य, तादृशस्यापीशाधीनत्वोक्तौ वेदे फलाभावेऽपि तादृशजीवात्मा-देरीशाधीनत्वं सिध्यति फलमिति न वैयर्थ्यमिति भावः । 'अनादित्वोक्तिः' बुद्ध्यघटितात्मादि-साधारणानादित्वोक्तिः । एतेनानुव्याख्याने 'नित्यत्वात्' इत्यनेनानादित्वं विव-क्षितमित्युक्तं भवति ॥

ವಿವರಣೆ - ಶಂಕೆ - ವೇದವು ಅನಾದಿಯಾದ್ದರಿಂದ ಅನಾದಿಸ್ವಭಾವವು ಭಗವದಧೀನವಲ್ಲವೆಂಬ ಪ್ರಮೇಯಾಶ್ರಿತ ಪೂರ್ವಪಕ್ಷವು ತಪ್ಪು. ಏಕೆಂದರೆ ವಿಷ್ಣುತತ್ವನಿರ್ಣಯ ಟೀಕೆಯಲ್ಲಿ ವೇದವನ್ನು ಅನಾದಿಯಲ್ಲವೆಂದಿದ್ದಾರೆ. 'ನಿತ್ಯಾ ವೇದಾ ಸಮಸ್ತಾಶ್ಚ ಶಾಶ್ವತಾಃ ವಿಷ್ಣುಬುದ್ಧಿಗಾಃ' ಎಂಬ ಪ್ರಮಾಣವನ್ನು ವ್ಯಾಖ್ಯಾನ ಮಾಡುವಾಗ ಟೀಕೆಯ ಮಾತು ಹೀಗಿದೆ -- 'ವರ್ಣಾಸ್ತಾವನ್ನಿತ್ಯತ್ವಾತ್ ಸರ್ವಗತತ್ವಾಚ್ಚ ಸ್ವತಃ ಕ್ರಮಶೂನ್ಯಾಃ । ನ ಚ ಕ್ರಮೇಣ ವಿನಾ ಪದವಾಕ್ಯಭಾವಃ । ನಾಪಿ ತದಂತರೇಣ ಪ್ರಾಮಾಣ್ಯಮ್ । ಅತಃ ಕ್ರಮಃ ಪೌರುಷೇಯ ಏವಾಸ್ಥೇಯಃ । ತತ್ ಕಥಂ ವೇದಸ್ಯಾಪೌರುಷೇಯತ್ವಮ್?' ( ಅಕಾರಾದಿ ವರ್ಣಗಳು ನಿತ್ಯವಾಗಿವೆ ಮತ್ತು ಎಲ್ಲೆಡೆ ವ್ಯಾಪ್ತವಾಗಿವೆ. ವ್ಯಾಪ್ತವಾದ ಅಕಾರಾದಿವರ್ಣಗಳಿಗೆ ಆನು-ಪೂರ್ವೀರೂಪವಾದ ಕ್ರಮವನ್ನು ಹೇಳಲು ಸಾಧ್ಯವಿಲ್ಲ. ಕ್ರಮವಿಲ್ಲದೆ ಪದವಾಗಲೀ ವಾಕ್ಯವಾಗಲೀ ರಚನೆಯಾಗುವುದಿಲ್ಲ. ಪದವಾಕ್ಯಗಳಿಲ್ಲದೆ ಪ್ರಾಮಾಣ್ಯವು ಕೂಡುವುದಿಲ್ಲ. ಹಾಗಾಗಿ ಕ್ರಮವು ಪೌರುಷೇಯವಾಯಿತು. ಹೀಗಿರುವಾಗ 'ಅಗ್ನಿಮೀಳೇ ಪುರೋಹಿತಂ' ಇತ್ಯಾದಿಕ್ರಮರೂಪವಾದ ವೇದಕ್ಕೆ ಅಪೌರುಷೇಯತ್ವವನ್ನು ಹೇಗೆ ಹೇಳುತ್ತೀರಿ?) ಎಂದು. ಹೀಗೆ ಶಂಕಿಸಿ ಟೀಕೆಯಲ್ಲಿಯೇ ಉತ್ತರಿಸಿದ್ದಾರೆ. 'ನ ಹಿ ವೇದಸ್ಯ ಕೂಟಸ್ಥನಿತ್ಯತಾಂ ಬ್ರೂಮಃ । ಕಿಂತು ಶಬ್ದತೋಽರ್ಥತಶ್ಚ ಸರ್ವದೈಕಪ್ರಕಾರತಾಮೇವ । ತತಶ್ಚ ಕ್ರಮಸ್ಯ ಕೃತಕತ್ವೇಽಪಿ ಪುರುಷಾಭಿಪ್ರಾಯಪ್ರವೇಶೇಽಪಿ ಸ್ವತಂತ್ರವಕ್ತುರಭಾವಾದಪೌರುಷೇಯತ್ವ-ಮುಪಪದ್ಯತೇ' (ನಾವು ವೇದಗಳಿಗೆ ಆಕಾಶಾದಿಗಳಂತೆ ಕೂಟಸ್ಥನಿತ್ಯತ್ವವನ್ನು ಹೇಳುವುದಿಲ್ಲ. ಹೊರತು ಶಬ್ದದಿಂದ ಮತ್ತು ಅರ್ಥದಿಂದ ಎಲ್ಲಾ ಕಾಲದಲ್ಲಿಯೂ ಒಂದೇ ರೀತಿಯಾಗಿರುತ್ತವೆಂದು ಹೇಳುತ್ತೇವೆ.

ಆದ್ದರಿಂದ ಕ್ರಮವು ಕೃತಕವಾದರೂ ಅಪೌರುಷೇಯತ್ವಕ್ಕೆ ಭಂಗವಿಲ್ಲ. ವಸ್ತುತಃ ಉಚ್ಚಾರಣಾದಿಗಳು ಮಾಡಬೇಕಾದರೆ ಪುರುಷನ ಅಧೀನವಾಗಿವೆ. ಆದರೆ ಸ್ವತಂತ್ರವಾಗಿ ರಚನೆ ಮಾಡಿ ವೇದವನ್ನು ಉಚ್ಚಾರಮಾಡದ ಕಾರಣದಿಂದಷ್ಟೇ ಅಪೌರುಷೇಯವೆನಿಸಿದೆ.) ಎಂದು. ಈ ಟೀಕಾವಾಕ್ಯದಿಂದ ವೇದಕ್ಕೆ ಅಪೌರುಷೇಯತ್ವವನ್ನು ಸಮರ್ಥಿಸಿದ್ದಾರೆ ಹೊರತು ಕ್ರಮಕ್ಕೆ ಕೃತಕತ್ವವನ್ನು ಹೇಳಿದ್ದರಿಂದ ಅನಾದಿತ್ವವನ್ನು ಸಮರ್ಥಿಸಿಲ್ಲ; ಹೊರತಾಗಿ ಸಾದಿತ್ವವನ್ನೇ ಹೇಳಿದ್ದಾರೆ. ವೇದಕ್ಕೆ ಪರಮಪ್ರಾಮಾಣ್ಯವನ್ನು ಒಪ್ಪುವ ಭಾಟ್ಟರಿಗೂ ಇದು ಸಮ್ಮತವಾಗಿದೆ. 'ಯತ್ನತಃ ಪ್ರತಿಷೇಧ್ಯಾ ನಃ ಪುರುಷಾಣಾಂ ಸ್ವತಂತ್ರತಾ' (ಪುರುಷರು ಸ್ವತಂತ್ರವಾಗಿ ವೇದವನ್ನು ರಚಿಸಿ ಉಚ್ಚಾರಣೆ ಮಾಡುವುದಿಲ್ಲ. ಆದ್ದರಿಂದ ಅಪೌರುಷೇಯವೆನಿಸಿದೆ) ಎಂದು. ಹೀಗಿರುವಾಗ ಗಾಯತ್ರೀರೂಪವೇದಕ್ಕೆ ಗ್ರಂಥಕಾರರು ಅನಾದಿತ್ವವನ್ನು ಹೇಗೆ ಹೇಳಿದರು?

ಸಮಾಧಾನ - ತತ್ವನಿರ್ಣಯಟೀಕೆಯ ಅಭಿಪ್ರಾಯವನ್ನು ತಿಳಿಯಬೇಕೆಂದರೆ ತತ್ವಸಂಖ್ಯಾನ-ಟೀಕೆಯನ್ನು ನೋಡಬೇಕು. ತತ್ವಸಂಖ್ಯಾನಟೀಕೆಯಲ್ಲಿ ಅನಾದಿತ್ವವನ್ನು ಹೇಳಿದ್ದರಿಂದ ತತ್ವನಿರ್ಣಯ ಟೀಕೆಯಲ್ಲಿಯೂ ಅದನ್ನೇ ಹೇಳಿದ್ದಾರೆ. 'ನಿತ್ಯಾ ವೇದಾಃ ಪುರಾಣಾದ್ಯಾಃ ಕಾಲಪ್ರಕೃತಿರೇವ ಚ । ನಿತ್ಯಾನಿತ್ಯಮ್...' ಎಂಬ ಆಚಾರ್ಯರ ಮಾತನ್ನು ವ್ಯಾಖ್ಯಾನಿಸುವಾಗ ತತ್ವಸಂಖ್ಯಾನಟೀಕೆಯಲ್ಲಿ ಅನಾದಿತ್ವವನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಎರಡೂ ಟೀಕೆಗಳಿಗೆ ಮೇಲ್ನೋಟದಿಂದ ವಿರೋಧ ಕಾಣಿಸುತ್ತಿರುವುದರಿಂದ ತತ್ವಸಂಖ್ಯಾನಟೀಕೆಯ ಅಭಿಪ್ರಾಯವೇ ಸರಿಯೆಂದು ಹೇಗೆ ನಿರ್ಣಯಿಸುವುದು? ಎಂಬ ಪ್ರಶ್ನೆಗೆ 'ಯುಕ್ತಮ್' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ. ವರ್ಣಗಳಿಗೆ ಸ್ವಾಭಾವಿಕವಾಗಿ ಕ್ರಮವಿಲ್ಲ. ಬುದ್ಧಿಯೆಂಬ ಉಪಾಧಿಯಿಂದಷ್ಟೇ ಆನುಪೂರ್ವೀರೂಪವಾದ ಕ್ರಮವನ್ನು ಹೇಳಬೇಕು. ನಮ್ಮ ಬುದ್ಧಿಯಲ್ಲಿರುವ ಕ್ರಮವು ಕ್ಷಣಿಕವಾದರೂ ಸರ್ವಜ್ಞನಾದ ಈಶ್ವರನ ಬುದ್ಧಿಯಲ್ಲಿರುವ ಕ್ರಮವು ಅನಾದಿನಿತ್ಯವಾಗಿದೆ. ಆದ್ದರಿಂದ ಈಶ್ವರಬುದ್ಧಿಘಟಿತವಾದ್ದರಿಂದ ಕ್ರಮಕ್ಕೆ ಅನಾದಿತ್ವವನ್ನು ಹೇಳುವುದು ಕಷ್ಟವಲ್ಲ.

ಪ್ರಲಯಕಾಲದಲ್ಲಿ ವೇದೋಪದೇಶದ ಪರಂಪರೆಗೆ ವಿಚ್ಛೇದವನ್ನಂತೂ ಹೇಳಲೇಬೇಕು. ಪುರುಷರ ವೇದೋಚ್ಚಾರಣೆಯು ಅನಾದಿನಿತ್ಯವಲ್ಲ. ಈ ಎರಡು ಕಾರಣದಿಂದಷ್ಟೇ ವೇದಕ್ಕೆ ಕೂಟಸ್ಥನಿತ್ಯತ್ವವು ಇಲ್ಲವೆಂದು ತತ್ವನಿರ್ಣಯಟೀಕೆಯಲ್ಲಿ ಹೇಳಿದ್ದಾರೆ. ಸುಧೆಯ ವಿಯದಧಿಕರಣದಲ್ಲಿ ಇದನ್ನು ಸಮ್ಮತಿಸಿದ್ದಾರೆ. 'ನಿಯತವಿಶಿಷ್ಟಾನುಪೂರ್ವೀವಿಶಿಷ್ಟತ್ವೇನಾರ್ಥಾವಬೋಧಶಕ್ತ್ಯಾಽಽವಿರ್ಭಾವೋ ಜನಿಃ' ('ಅಗ್ನಿಮೀಳೇ ಪುರೋಹಿತಂ' ಎಂಬುದಾಗಿ ನಿಯಮೇನ ವಿಶಿಷ್ಟವಾದ ಅನುಪೂರ್ವಿಯಿಂದ ಕೂಡಿದ್ದರಿಂದ ಅರ್ಥಜ್ಞಾನವನ್ನು ವೇದವು ಹುಟ್ಟಿಸುತ್ತದೆ. ಈ ರೂಪದಿಂದ ವೇದಕ್ಕೆ ಉತ್ಪತ್ತಿ ಇದೆ).

ಗ್ರಂಥದಲ್ಲಿ 'ಅಸ್ಮದಾದಿ ಬುದ್ಧಿಸ್ಥಸ್ಯ' ಎಂಬಲ್ಲಿರುವ ಆದಿಪದದಿಂದ ಈಶ್ವರನನ್ನೂ ಇಟ್ಟುಕೊಳ್ಳಬೇಕು. ನಾವು ಮಾಡುವ ಉಚ್ಚಾರಣೆ ಮಾತ್ರ ಅನಿತ್ಯವಲ್ಲ ಈಶ್ವರನ ಉಚ್ಚಾರಣೆಯೂ ಅನಿತ್ಯವಾಗಿದೆ. ಆದ್ದರಿಂದಲೇ ಹಿಂದೆ ಗ್ರಂಥದಲ್ಲಿ ಉಚ್ಚಾರಣಶಬ್ದವನ್ನು ಸೇರಿಸದೆ ಕೇವಲ 'ಬುದ್ಧಿಸ್ಥತ್ವಾತ್' ಮತ್ತು 'ತದ್ಬುದ್ಧೌ' ಎಂದಷ್ಟೇ ಹೇಳಿದ್ದಾರೆ. ಅಂದರೆ ಭಗವಂತನ ಬುದ್ಧಿಯಲ್ಲಿರುವ ಕ್ರಮರೂಪವಾದ ವೇದಗಳು ನಿತ್ಯವೇ ಆಗಿವೆ. ಆದರೆ ಅದೇ ವೇದವನ್ನು ಉಚ್ಚರಿಸಿದಾಗ ಉಚ್ಚಾರಣಘಟಿತವಾದ ವೇದವು

ಅನಿತ್ಯವಾಗುತ್ತದೆ. ಆದ್ದರಿಂದ ಇಲ್ಲಿ ಅತ್ಯಂತ ಸ್ಪಷ್ಟವಾಗಿ ಹೀಗೆ ತಿಳಿಯಬೇಕು. ''ಕ್ರಮವು ಎರಡು ವಿಧ - ಒಂದು ಈಶ್ವರಬುದ್ಧಿಘಟಿತ; ಮತ್ತೊಂದು ಉಚ್ಚಾರಣಾಘಟಿತ. ಈಶ್ವರಬುದ್ಧಿಘಟಿತವಾದ ಕ್ರಮವು ಅನಾದಿ; ಉಚ್ಚಾರಣೆಘಟಿತವಾದ ಕ್ರಮವು ಸಾದಿ.'' ಎಂದು.

ಇದನ್ನು ತರ್ಕತಾಂಡವದಲ್ಲಿ ಹೀಗೆ ಹೇಳಿದ್ದಾರೆ - ಆಧುನಿಕಾಧ್ಯಾಪಕೇನ ಸ್ವಬುದ್ಧಿಸ್ಥಪೂರ್ವಪೂರ್ವ-ದಿವಸೀಯಕ್ರಮಾನುಸಾರೇಣೈವೋತ್ತರೋತ್ತರದಿವಸೇಷ್ವಿವ ಈಶ್ವರೇಣಾಪಿ ಸ್ವಬುದ್ಧಿಸ್ಥಪ್ರವಾಹಾನಾದಿಪೂರ್ವ ಪೂರ್ವಕಲ್ಪೀಯಕ್ರಮಾನುಸಾರೇಣೈವೋತ್ತರೋತ್ತರಕಲ್ಪೇಷ್ವಪಿ ವೇದಸ್ಯೋಚ್ಚಾರಿತತ್ವೇನ' (ಆಧುನಿಕ ಅಧ್ಯಾಪಕರು ವೇದವನ್ನು ಹಿಂದಿನ ಹಿಂದಿನ ದಿವಸಗಳಲ್ಲಿ ಯಾವ ಆನುಪೂರ್ವಿಕ್ರಮದಿಂದ ಉಚ್ಚಾರ ಮಾಡಿರುತ್ತಾರೋ ಮುಂದಿನ ದಿವಸಗಳಲ್ಲಿಯೂ ಅದೇ ಆನುಪೂರ್ವಿಕ್ರಮದಿಂದಲೇ ಉಚ್ಚಾರ ಮಾಡುತ್ತಾರೆ. ಇದರಂತೆ ಭಗವಂತನೂ ಸಹ ತನ್ನ ಬುದ್ಧಿಯಲ್ಲಿರುವ ವೇದವನ್ನು ಪ್ರವಾಹತಃ ಅನಾದಿ-ಯಾದ ಹಿಂದಿನ ಹಿಂದಿನ ಕಲ್ಪಗಳಲ್ಲಿ ಯಾವ ಆನುಪೂರ್ವಿಕ್ರಮದಿಂದ ಉಚ್ಚರಿಸುತ್ತಾನೋ ಮುಂದಿನ ಮುಂದಿನ ಕಲ್ಪಗಳಲ್ಲಿಯೂ ಅದೇ ಆನುಪೂರ್ವಿಕ್ರಮದಿಂದ ಉಚ್ಚಾರ ಮಾಡುತ್ತಾನೆ. ಆದ್ದರಿಂದ ವೇದವು ಅಪೌರುಷೇಯ) ಎಂದು.

ಈಗಾಗಲೇ ಹೇಳಿದಂತೆ ಭಗವಂತನ ಉಚ್ಚಾರಣಾಘಟಿತವಾದ ಕ್ರಮವೂ ಅನಿತ್ಯವಾಗಿದೆ. ಒಂದು ವೇಳೆ 'ಜ್ಞಾನಂ ನಿತ್ಯಂ ಕ್ರಿಯಾ ನಿತ್ಯಾ ಬಲಂ ಶಕ್ತಿಃ ಪರಾತ್ಮನಃ' ಎಂಬ ಅನುವ್ಯಾಖ್ಯಾನದಂತೆ ಭಗವಂತನ ಪ್ರತಿಯೊಂದು ಕ್ರಿಯೆಗಳಿಗೆ ಅನಾದಿನಿತ್ಯತ್ವವನ್ನು ಹೇಳಿದರೆ ಉಚ್ಚಾರಣೆ ಎಂಬ ಕ್ರಿಯೆಗೂ ಅನಾದಿನಿತ್ಯತ್ವವನ್ನು ಹೇಳಿದಂತಾಯಿತು. ಆವಾಗ ಭಗವದುಚ್ಚಾರಣಾಘಟಿತವಾದ ಕ್ರಮಕ್ಕೆ ಅನಿತ್ಯತ್ವವನ್ನು ಹೇಳಲು ಸಾಧ್ಯವಿಲ್ಲ; ಹೊರತು ಕೂಟಸ್ಥನಿತ್ಯತ್ವವನ್ನೇ ಹೇಳಬೇಕು.

ಒಂದು ವೇಳೆ ಈಶ್ವರಬುದ್ಧಿಘಟಿತವಾದ ಕ್ರಮಕ್ಕೆ ಅನಾದಿತ್ವವನ್ನು ಹೇಳಿದರೆ ಅನಾದಿವೇದಕ್ಕೆ ಈಶ್ವರಾಧೀನಸ್ವಭಾವತ್ವವನ್ನು ಹೇಳಿದಂತಾಯಿತು. ಯಾವುದು ಯಾರ ಬುದ್ಧಿಯ ಅಧೀನವೋ, ಅದು ಅವನ ಅಧೀನವಲ್ಲ ಎಂದು ಹೇಳಲಾಗದು. ಆದ್ದರಿಂದ ಅನಾದಿಸ್ವಭಾವವು ಭಗವದಧೀನವಲ್ಲವೆಂಬ ಪೂರ್ವಪಕ್ಷವು ತಪ್ಪಲ್ಲವೇ? ಎಂಬ ಪ್ರಶ್ನೆಗೆ ಗ್ರಂಥಕಾರರು 'ಕೃತ್ವಾಚಿಂತಯಾ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ. ವಸ್ತುತಃ ವೇದವು ಭಗವದಧೀನವೇ ಆಗಿದೆ. ಆದರೆ ಪೂರ್ವಪಕ್ಷಿಯ ಪ್ರಕಾರ ಇಲ್ಲಿ ಪ್ರಮೇಯಾಶ್ರಿತಪೂರ್ವಪಕ್ಷವನ್ನು ಮಾಡಿದ್ದಾರೆಂದು ತಿಳಿಯಬೇಕು. ಬುದ್ಧಿಘಟಿತತ್ವವಿಲ್ಲದೆ ವೇದಕ್ಕೆ ಅನಾದಿತ್ವವನ್ನು ಹೇಳಲು ಸಾಧ್ಯವಿಲ್ಲ. ಆದರೂ ಕೂಡ ವೇದವು ಅನಾದಿಯಾಗಿದೆಯೆಂದು ಅಂಗೀಕರಿಸಿ, ಈಶಾಧೀನವಲ್ಲವೆಂದು ಶಂಕಿಸಿದ್ದಾರೆ. ವಸ್ತುತಃ ವೇದವು ಅನಾದಿಯೆಂದು ಸಿದ್ಧವಾಗುವ ಸಮಯದಲ್ಲಿಯೇ ಈಶಾಧೀನವೆಂದೇ ಸಿದ್ಧವಾಗುತ್ತದೆ. ಇಂತಹ ವೇದವು ಈಶಾಧೀನವಲ್ಲವೆಂದು ಪೂರ್ವಪಕ್ಷ ಮಾಡುವುದರಲ್ಲಿ ಅರ್ಥವೇ ಇಲ್ಲ. ಆದರೆ ವೇದದಂತೆ ಕೂಟಸ್ಥನಿತ್ಯವಾದ ಜೀವರೇ ಮೊದಲಾದ ಪದಾರ್ಥಗಳು ಅನಾದಿಯಾದ್ದರಿಂದ ಭಗವದಧೀನವಾಗುವುದು ಬೇಡ ಎಂದು ಶಂಕಿಸಬಹುದು. ಈ ಅಭಿಪ್ರಾಯವನ್ನು ವಿವಕ್ಷಿಸಿದಾಗ ಅನಾದಿಸ್ವಭಾವವು ಭಗವದಧೀನವಲ್ಲವೆಂದು ಹೇಳಿದ್ದು ಅರ್ಥಪೂರ್ಣ-ವಾಗುತ್ತದೆ. ಈ ಸೂಕ್ಷ್ಮವನ್ನು ಗಮನಿಸಬೇಕು.

ಗಾಯತ್ರ್ಯಧಿಕರಣ-(೧।೧।೧೧)

**गुरुराजीयम्** – तत्वसङ्ख्यानतत्वनिर्णयटीकयोर्विरोधं परिहर्तुं शङ्कते – **नन्विति** ॥ अत्र क्रमो नाम क्रमिकबुद्धिगोचरत्वम् । ईश्वरबुद्धेः सर्वविषय-समूहालम्बनत्वेपि वेदस्य प्रमापकत्वसिद्धयेऽभिव्यक्तिविशेषेण क्रमस्याप्या-वश्यकत्वम् । वर्णमात्रे प्रयोगप्रत्यययोरभावात् । क्रमस्य च सर्वगतनित्यवर्णे स्वतो देशतः कालतश्चायोगादिति भावः । अत एवोक्तं तत्वनिर्णये वर्णादयस्तत्क्रमात्मको वेदश्च नित्य एवेति सिद्धमिति – **मैवमिति** ॥ नच तत्वसङ्ख्याने वेदशब्देन वर्णमात्रग्रहणम् । उदाहृतप्रमाणविरोधात् । पौराणवर्णानामप्यविशिष्टत्वेन पृथङ्नित्यानित्यकोटौ निवेशायोगाच्च । पुराणपदेन तद्वाक्यात्मकग्रन्थस्यैवोक्तौ ऋगादिपदवाच्यग्रन्थस्यैव प्राधान्येन तदादित्वेन ग्रहणस्यैवौचित्याच्च । वाचा विरूपनित्यया । नित्यया अनित्यया स्तौमीत्यादि-विशेषवाक्यविरोधाच्च । नित्या वर्णाः समस्तशः तथावेदाः समस्ताश्च तथाऽव्याकृतमम्बरमिति तत्वसङ्ख्यानटीकानियामकवायुपुराणादिप्रमाणविरोधाच्च इति ज्ञेयम् । टीकावाक्यत्वाविशेषाद्विरोधशङ्कायां विष्णुतत्वनिर्णयटीकानुरोधेन तत्वसङ्ख्यानटीकैव कुतो न व्याख्येयेत्यतः प्रमाणमुक्त्वा युक्तोऽयुक्तश्च यद्यर्थ इत्यनुव्याख्यानोक्तं च न्यायमाह – **युक्तं चैतदिति** ॥

न चेश्वरबुद्धिस्थत्वाविशेषात्पुराणानामप्यपौरुषेयत्वापत्तिः । कल्पभेदेन क्रमव्यत्यासमात्रेणापौरुषेयत्वाभावस्य पुराणानि तदर्थानीत्यादौ समर्थिततत्वात् । तर्ह्याप्तवाक्यस्याप्रामाण्यमेव प्राप्तमित्यत आह – **तट्टीकायामिति** ॥ ननु सर्गे सर्गेऽमुनैवैत इति पुराणवाक्योक्तप्रत्यभिज्ञापरामर्शकस्य प्रत्यभिज्ञाविरोधस्यो-क्तत्वादित्याचार्यवाक्यस्य व्याख्यानावसरे नच सादृश्यादेव त एवेत्युक्तम् । तथासत्यपौरुषेयत्वसिद्धेर्दुर्निवारत्वादित्युत्तरटीकायां कथमीश्वरीयक्रमस्यैव कृतक-त्वाभ्युपगम इत्यत आह – **कृत्वाचिन्तया वेति** ॥ अनादिभूतस्यापीश्वर-बुद्धिविषयीभूतवेदक्रमस्योत्पत्त्यङ्गीकारेऽपि पुराणादिव्यावृत्तमपौरुषेयत्वमक्षत-मित्यभ्युपगमवादेनेत्यर्थः । अत एवोक्तं उपलक्षणं चैतत् । जन्मादिवाक्य-गतिकथनविरोधाच्चेत्यपि द्रष्टव्यमिति । तर्हि कृत्वाचिन्तापक्षेऽत्र पूर्वपक्षेऽ-नादित्वोक्त्ययोगात् आकाशाधिकरणादभ्यधिकाशङ्कोत्थानायोगादेतदधिकरण-वैयर्थ्यमित्यत आह – **अनादित्वोक्तिरिति** ॥ कृतकस्यापि पूर्वतनक्रमव्यत्यासेन

क्रमान्तरस्य केनाप्यकरणात्तदनधीनत्वम् । तावतापि पूर्वपक्षोदयसम्भवादिति भावः । एवञ्च तत्वसङ्ख्यानटीकाया निरवकाशत्वेन तदनुसारेण तत्वनिर्णय-टीकाया व्याख्येयत्वान्न तत्वनिर्णयटीकानुसारेण वेदस्य कृतकत्वसिद्धिः । तथाच वेदस्यानादित्वात्तत्स्वभावस्य गानत्राणकर्तृत्वादिरूपस्य प्रवृत्तिनिमित्तस्य नेशाधीनत्वमित्युपपादितम् । इदानीं तु मास्तु तस्यानादित्वम् । न चैवमनादि-स्वभावत्वोक्तयनुत्पत्तिरिति वाच्यम् । अनादित्वाभावेप्यनादित्वाभ्युपगमेन कृत्वाचिन्तयानादित्वोक्तिसम्भवात् । नच कृत्वाचिन्तयानादित्वोक्तेः प्रयोजना-भावेन कृत्वाचिन्ताया एवानुपपत्तिरिति वाच्यम् । अनादिस्वभावनियामकत्व-रूपमहागुणसिद्ध्यर्थ्यमनादिस्वभावनिमित्तकशब्दान्तरसमन्वये न्यायः फलिष्यतीति प्रदर्शनार्थत्वेन तस्यावश्यकत्वात् । यथाकाशाधिकरणेऽवकाशप्रदत्वस्या- चेतन-स्वभावत्वाभावेपि सिद्धान्ते तस्येशतन्त्रत्वसमर्थनं स्वभावनियामकत्वरूप-महागुणसिद्ध्यर्थं स्वभावनिमित्तकशब्दान्तरसमन्वये फलिष्यतीति कृत्वाचिन्तया तथेदमपीति मनसि निधाय वा पक्षान्तरमाह – **कृत्वाचिन्तया वेति** ॥ कृत्वाचिन्तया वाऽनादित्वोक्तिरित्येकं वाक्यम् । अनादित्वाभावे तथा व्यपदेशे नियामकमाह – **अनन्याधीनत्वादिति** ॥ स्वतन्त्रपुरुषापूर्वकत्वादित्यर्थः ।

## ಸಾರ

ಕ್ರಮವಿಶಿಷ್ಟವಾದ ವರ್ಣಗಳೇ ವೇದ. ಕ್ರಮವು ಕೃತಕವಾದ್ದರಿಂದ ವೇದವೂ ಕೃತಕ. ತತ್ವನಿರ್ಣಯ ಟೀಕೆಯಲ್ಲಿ 'ನ ಹಿ ವಯಂ ವೇದಸ್ಯ ಕೂಟಸ್ಥನಿತ್ಯತಾಂ ಬ್ರೂಮಃ' ಎಂಬುದಾಗಿ ಇದನ್ನು ಸ್ಪಷ್ಟಪಡಿಸಿದ್ದಾರೆ.

ಇದು ತಪ್ಪು. ಕ್ರಮ ಅನಿತ್ಯವಾದಲ್ಲಿ ವೇದವು ಕೃತಕವಾಗಬಹುದು. ಆದರೆ ತತ್ವಸಂಖ್ಯಾನಟೀಕೆಯಲ್ಲಿ ಕ್ರಮಕ್ಕೆ ನಿತ್ಯತ್ವವನ್ನು ಹೇಳಿದ್ದಾರೆ. ಈಶ್ವರಬುದ್ಧಿ ಉಪಾಧಿಯಿಂದ ಕೂಡಿದ ಕ್ರಮವು ಕೃತಕವಲ್ಲ. ಹಾಗಾದರೆ ತತ್ವನಿರ್ಣಯ ಟೀಕೆಯಲ್ಲಿ ಕೂಟಸ್ಥನಿತ್ಯತ್ವವನ್ನು ಏಕೆ ನಿಷೇಧಿಸಿದ್ದಾರೆ ? ಎಂದರೆ ನಮ್ಮ ಬುದ್ಧ್ಯುಪಾಧಿಘಟಿತ-ವಾದ ಕ್ರಮವು ಉಚ್ಚಾರಣಾಧೀನವಾದ್ದರಿಂದ ಜನ್ಯವಾಗಿದೆ. ವರ್ಣಗಳಿಗೆ ದೈಶಿಕ ಅಥವಾ ಕಾಲಿಕಕ್ರಮವನ್ನಂತೂ ಹೇಳಲು ಸಾಧ್ಯವಿಲ್ಲ. ಬೌದ್ಧಿಕವಾಗಿ ಹೇಳಬೇಕು. ನಮ್ಮ ಬುದ್ಧಿಯಲ್ಲಿರುವ ಕ್ರಮವು ಅನಿತ್ಯವೆಂದು ತತ್ವನಿರ್ಣಯಟೀಕೆಯ ಅಭಿಪ್ರಾಯ. ಈಶ್ವರಬುದ್ಧಿಯಲ್ಲಿರುವ ಕ್ರಮವು ನಿತ್ಯವೆಂದು ತತ್ವಸಂಖ್ಯಾನಟೀಕೆಯ ಅಭಿಪ್ರಾಯ. ಇಲ್ಲಿ ಸಹಜವಾಗಿ ಬರುವ ಪ್ರಶ್ನೆ ಹೀಗಿದೆ - ಈಶ್ವರಬುದ್ಧಿಯಲ್ಲಿ ವೇದವು ಏಕಪ್ರಕಾರವಾಗಿರು-ವುದರಿಂದಷ್ಟೇ ಅಪೌರುಷೇಯವೆಂದಾದರೆ ಪುರಾಣಾದಿಗಳೂ ಅಪೌರುಷೇಯವಾಗಬೇಕಲ್ಲವೆ? ಸರ್ವಜ್ಞನಾದ ಈಶ್ವರನ ಬುದ್ಧಿಯಲ್ಲಿ ಎಲ್ಲ ಪುರಾಣಗಳು ಎಲ್ಲಾ ಕಾಲದಲ್ಲಿಯೂ ಏಕಪ್ರಕಾರವೇ ಆಗಿರುತ್ತದಲ್ಲವೇ? ಎಂಬ

ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ಪ್ರತಿಯೊಂದು ಕಲ್ಪಗಳಲ್ಲಿಯೂ ಭಾಗವತಾದಿಪುರಾಣಗಳ ಆನುಪೂರ್ವಿಯನ್ನು ವ್ಯತ್ಯಾಸಮಾಡಿ ಭಗವಂತನು ಉಪದೇಶಿಸುತ್ತಾನೆ. ಆದರೆ ವೇದದ ಆನುಪೂರ್ವಿಯನ್ನು ಯಾವಕಲ್ಪದಲ್ಲಿಯೂ ವ್ಯತ್ಯಾಸ ಮಾಡುವುದಿಲ್ಲ. ಮತ್ತು ಈ ಕಲ್ಪದಲ್ಲಿ ಉಪದೇಶ ಮಾಡಿದ ಪುರಾಣವನ್ನು ವರ್ತಮಾನಕಾಲವಿಶಿಷ್ಟವಾಗಿ ಭಗವಂತನು ತಿಳಿದಿದ್ದಾನೆ. ಹಿಂದಿನ ಕಲ್ಪಗಳ ಪುರಾಣಾದಿಗಳನ್ನು ಅಧೀತಕಾಲವಿಶಿಷ್ಟವಾಗಿ ತಿಳಿದಿದ್ದಾನೆ. ಈ ಕಾರಣದಿಂದಷ್ಟೇ ಪುರಾಣಗಳು ಪೌರುಷೇಯ ಎನಿಸುತ್ತವೆ. ಆದರೆ ವೇದವನ್ನು ಪ್ರತಿಕಲ್ಪಗಳಲ್ಲಿಯೂ ವರ್ತಮಾನಕಾಲವಿಷಯಕವಾಗಿಯೇ ತಿಳಿಯುತ್ತಾನಾದ್ದರಿಂದ ವೇದವು ಅಪೌರುಷೇಯವೆನಿಸುತ್ತದೆ.

## ಐದು ಪೂರ್ವಪಕ್ಷಗಳ ನಿರಾಕರಣೆ

### तात्पर्यचन्द्रिका

तत्राद्या शङ्का "चेतोऽर्पणनिगदात्" इति सूत्रे प्रयोजनोक्त्या परिहृता । द्वितीयतृतीये तु "उभयस्मिन्नप्यविरोधात्" इत्यनेन परिहृते । तथा तस्य यथा विवक्षाभेदेन सप्तमीपञ्चम्यौ न विरुद्धे इत्यर्थः, तथा आकारभेदेन कर्णादिविदूरत्व-दृष्टत्वादिके न विरुद्धे इत्यप्यर्थोपपत्तेः । चतुर्थी तु – "बाहुल्यात् श्रुतिलिङ्गयोः" इत्यनुव्याख्याने; " 'ज्यायाꣳश्च पुरुषः" इत्यादिशब्दसहितलिङ्गैश्च' इत्यादि न्याय-विवरणे च परिहृता ।

अयं भावः – "अतो ज्यायाꣳश्च पुरुषः" यद्वै तद्ब्रह्म" "एत मेव ब्रह्मोपनिषदम्" इत्यादिश्रुतीनां गानत्राणकर्तृत्वं भूतादिपादत्वं, "एतामेव नातिशीयन्ते" इति सर्वोत्तमत्वमित्यादिलिङ्गानां च बाहुल्यादनेकेषामपि शब्दानां प्रसिद्धार्थत्यागः । पुरुषशब्दो हि "स वा अयं पुरुषः सर्वासु पूर्षु पुरि शयो नैनेन किञ्चनानावृतं" इत्यत्र सर्वान्तर्यामित्वं पुरुषत्वमित्युक्तेः, तथा "पुरुषो ह वै नारायणः" "सहस्रशीर्षा पुरुषः सहस्राक्षः सहस्रपात्" इति "एष ह्येवाचिन्त्यः, परः परमो हरिः पुरुषः परः परमात्मा अजो ब्रह्म नारायणः प्रभुः" इत्यादि श्रुतेः,

यथा हि पौरुषे सूक्ते विष्णुरेवाभिधीयते ।

इत्यादिस्मृतेश्च पुरुषोत्तमे मुख्य इति । पञ्चमी तु – "तादृशत्वात्तु तच्छक्तेः" इत्यनुव्याख्याने परिहृता ।

ಅನುವಾದ - ಐದು ಪೂರ್ವಪಕ್ಷಗಳ ಮಧ್ಯದಲ್ಲಿ ಮೊದಲನೆಯ ಶಂಕೆಯು 'ಚೇತೋರ್ಪಣ-ನಿಗದಾತ್' ಎಂಬ ಸೂತ್ರದಲ್ಲಿ ಪ್ರಯೋಜನವನ್ನು ಹೇಳುವ ಮೂಲಕ ಪರಿಹರಿಸಲಾಗಿದೆ. ಎರಡು ಹಾಗೂ ಮೂರನೆಯ ಪೂರ್ವಪಕ್ಷಗಳನ್ನು 'ಉಭಯಸ್ಮಿನ್ ಅಪ್ಯವಿರೋಧಾತ್' ಎಂಬ ಸೂತ್ರದಿಂದ ಪರಿಹರಿಸಿದ್ದಾರೆ. ಈ ಸೂತ್ರಕ್ಕೆ ಯಾವರೀತಿಯಾಗಿ ವಿವಕ್ಷಾಭೇದದಿಂದ ದಿವಿ ಮತ್ತು ದಿವಃ ಎಂಬ ಸಪ್ತಮೀ ಪಂಚಮೀ ವಿಭಕ್ತಿಗಳು ವಿರುದ್ಧವಾಗುವುದಿಲ್ಲವೆಂಬ ಅರ್ಥವನ್ನು ಹೇಳುತ್ತೇವೋ ಅದರಂತೆ ಕರ್ಣಾದಿವಿದೂರತ್ವವು ಮತ್ತು ದೃಷ್ಟತ್ವಶ್ರುತತ್ವಾದಿಗಳು ಆಕಾರಭೇದದಿಂದ ವಿರುದ್ಧವಾಗುವು-ದಿಲ್ಲವೆಂಬ ಅರ್ಥವನ್ನು ಸೂತ್ರಕ್ಕೆ ಹೇಳಬೇಕು. ನಾಲ್ಕನೆಯ ಪೂರ್ವಪಕ್ಷವನ್ನು 'ಬಾಹುಲ್ಯಾತ್ ಶ್ರುತಿಲಿಂಗಯೋಃ' ಎಂಬ ಅನುವ್ಯಾಖ್ಯಾನದಲ್ಲಿ ಮತ್ತು 'ಜ್ಯಾಯಾಂಶ್ಚ ಪುರುಷ ಇತ್ಯಾದಿಶಬ್ದಸಹಿತ-ಲಿಂಗೈಶ್ಚ' ಎಂಬ ನ್ಯಾಯವಿವರಣದಲ್ಲಿ ಪರಿಹರಿಸಿದ್ದಾರೆ.

ಒಟ್ಟು ಅಭಿಪ್ರಾಯ ಹೀಗಿದೆ - 'ಅತೋ ಜ್ಯಾಯಾಂಶ್ಚ ಪುರುಷಃ, ಯದ್ವೈತದ್ಬ್ರಹ್ಮ, ಏತಾಮೇವ ಬ್ರಹ್ಮೋಪನಿಷದಮ್' ಇತ್ಯಾದಿ ಅನೇಕ ಶ್ರುತಿಗಳು ಭಗವಂತನಲ್ಲಿ ಪ್ರಸಿದ್ಧವಾಗಿವೆ. ಮತ್ತು ಗಾನತ್ರಾಣ- ಕರ್ತೃತ್ವ, ಭೂತಾದಿಪಾದತ್ವ, 'ಏತಾಮೇವ ನಾತಿಶೀಯಂತೇ' ಎಂಬ ಸರ್ವೋತ್ತಮತ್ವ ಮೊದಲಾದ ಲಿಂಗಗಳು ವಿಷ್ಣುವಿನಲ್ಲಿ ಬಹಳವಾಗಿ ಪ್ರಸಿದ್ಧವಾಗಿವೆ. ಹೀಗೆ ಅನೇಕಶ್ರುತಿಗಳು ಮತ್ತು ಅನೇಕ ಲಿಂಗಗಳು ಭಗವಂತನಲ್ಲಿ ಪ್ರಸಿದ್ಧವಾಗಿವೆ. ಇವುಗಳ ಪ್ರಸಿದ್ಧಾರ್ಥವನ್ನು ಬಿಡಬೇಕಾಗುತ್ತದೆ. ಪುರುಷಶಬ್ದವಾದರೋ ಭಗವಂತನನ್ನೇ ಪ್ರತಿಪಾದಿಸುತ್ತಿದೆ. 'ಸ ವಾ ಅಯಂ ಪುರುಷಃ ಸರ್ವಾಸು ಪೂರ್ಷು ನೈನೇನ ಕಿಂಚನಾನಾವೃತಮ್' ಎಂಬಲ್ಲಿ ಪುರುಷನನ್ನು ಸರ್ವಾಂತರ್ಯಾಮಿ ಎನ್ನಲಾಗಿದೆ. ಮತ್ತು 'ಪುರುಷೋ ಹ ವೈ ನಾರಾಯಣಃ, ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್, ಇತ್ಯೇಷ ಹ್ಯೇವಾಚಿಂತ್ಯಃ ಪರಃ ಪರಮೋ ಹರಿಃ ಪುರುಷಃ ಪರಃ ಪರಮಾತ್ಮಾಜೋ ಬ್ರಹ್ಮ ನಾರಾಯಣಃ ಪ್ರಭುಃ' ಎಂಬ ಶ್ರುತಿಗಳಲ್ಲಿ ನಾರಾಯಣನನ್ನೇ ಸ್ಪಷ್ಟವಾಗಿ ಪುರುಷ ಎನ್ನಲಾಗಿದೆ. 'ಯಥಾ ಹಿ ಪೌರುಷೇ ಸೂಕ್ತೇ ವಿಷ್ಣುರೇವಾಭಿಧೀಯತೇ' ಎಂಬ ಶ್ರುತಿಯಲ್ಲಿ ಪುರುಷೋತ್ತಮನಲ್ಲೇ ಮುಖ್ಯವೆಂದು ತಿಳಿಯುತ್ತದೆ.

ಐದನೆಯ ಪ್ರಮೇಯಾಶ್ರಿತಶಂಕೆಯು 'ತಾದೃಶತ್ವಾತ್ ತು ತಚ್ಛಕ್ತೇಃ' ಎಂಬ ಅನುವ್ಯಾಖ್ಯಾನದಲ್ಲಿ ಪರಿಹರಿಸಲ್ಪಟ್ಟಿದೆ.

### ಕಠಿಣಪದಾರ್ಥ

ವಿವಕ್ಷಾಭೇದೇನ = ಮೂರುಲೋಕ ಮತ್ತು ಏಳುಲೋಕಗಳ ವಿವಕ್ಷೆಯಿಂದ, ಆಕಾರಭೇದೇನ = ದೇಶಕಾಲಗುಣಾದಿಗಳಿಂದ ಅಪರಿಚ್ಛಿನ್ನನಾಗಿದ್ದಾನೆಂಬ ಆಕಾರಭೇದದಿಂದ; ಅನುವ್ಯಾಖ್ಯಾನೇ = ಗಾಯತ್ರೀ, ವಾಕ್ ಮೊದಲಾದ ಅನೇಕಶ್ರುತಿಗಳ ಬಲದಿಂದ ಅನುವ್ಯಾಖ್ಯಾನದಲ್ಲಿ ಹೇಳಿದ.

## ಗಾಯತ್ರ್ಯಧಿಕರಣ-(೧।೧।೧೧)

**प्रकाशः** – किं तदुक्तशङ्कानिरासकमित्यतस्तद्दर्शयन् सिद्धान्तयति – **तत्रेति** ॥ वेदोपदेष्टृत्वपातृत्वरूपगानत्राणकर्तृत्वादिरूपगायत्र्यादिशब्दार्थगुणस्वरूपत्वेन चेतोऽर्पणार्थमेव तादृशशब्दैर्निगद्यमानत्वादित्युपासनारूपप्रयोजनोक्त्येत्यर्थः द्वितीयशङ्कापरिहारस्य भाष्यादिदिशोपलम्भेऽपि तृतीयाया अस्मिन् सूत्रेऽदर्शनात् स्वयमेवाह – **तस्येति** ॥ त्रिसप्तलोकविवक्षाभेदेनेत्यर्थः । स्पष्टयिष्यते चैतदग्र इति भावः ॥ **आकारेति** ॥ देशकालगुणाद्यपरिच्छिन्नत्वेनाकारेण कर्णादिविदूरत्वम्, अकात्स्न्र्येन दृष्टत्वादिकम् ।

यद्वा केवलरूपेण कर्णादिविदूरत्वम् किञ्चिदधिष्ठानाधिष्ठितत्वादिरूपेण दृष्टत्वादिकमित्यर्थः । उक्तश्च सुधायां – "**नच ज्योतिषो ब्रह्मत्वे दृष्टत्वाद्यनुपपत्तिः, यतस्तदधिष्ठानद्वारा कर्णादिविदूरस्यैव हरेरुपपद्यते**" इति ॥ **चतुर्थीति** ॥ गायत्रीवागादिबहुश्रुतिबलेनानुव्याख्यानोक्तेत्यर्थः।

> **कथं प्रसिद्धबहुलशब्दानामन्यथार्थता ।**
> **इति चेत्तद्धरेरेव बाहुल्यात् श्रुतिलिङ्गयोः**
> **तादृशत्वाच्च तच्छक्तेः............ ।**

इत्यनुव्याख्याने, "**तावानस्य महिमा ततो ज्यायांश्च**" इत्यादि न्यायविवरणे चेत्यर्थः । ननु पूर्वोत्तरपक्षयोः श्रुतिबाहुल्यसाम्ये कथं निर्णय इत्यतः, श्रुतिसाम्येऽपि लिङ्गानामधिक्यान्निर्णयः स्यादिति भावेन श्रुतिलिङ्गबाहुल्यं दर्शयन्नाह – **अयं भाव इति** ॥ **गानेति** ॥ "**गायति च त्रायति च**" इत्युक्तमित्यर्थः । "**सैषा चतुष्पदा षड्विधा गायत्री**" इति गायत्र्याः प्रागुक्तषड्विधत्वमनूद्य, चतुष्पदत्वं व्यपदिश्य, तत्रैव पुरुषसूक्तमन्त्रः संवादायोदाहृतः ।

> **तावानस्य महिमा ततो ज्यायांश्च पुरुषः ।**
> **पादोऽस्य सर्वा भूतानि त्रिपादस्यामृतं दिवि ॥**

इति । अत्रोक्तभूतादिपादत्वमित्यर्थः । 'एतां' गायत्रीम् । ब्रह्मशब्दस्य जन्मादिसूत्रादौ, लिङ्गानां च भाष्यादौ विष्णौ मुख्यत्वस्य साधितत्वात् पुरुषशब्दस्य तत्साधयति – **पुरुषशब्दो हीति** ॥ पुरुषोत्तमे मुख्यः इत्यन्वयः । एतेन भाष्यटीकयोर्लिङ्गस्य निरवकाशत्वेन सिद्धान्तकरणमुपलक्षणमिति सूचितम् ।

ಪರಿಪೂರ್ಣಚಂದ್ರಿಕಾ

**''स वा अयं'' इति श्रुतिः अष्टमे गीताभाष्यटीकायां व्याख्याता । पञ्चमी त्विति ॥ 'नित्यत्वादेव' इत्यनुव्याख्यानोक्ता ।**

ವಿವರಣೆ - ಇಲ್ಲಿಯ ತನಕ ನಾಲ್ಕು ಬಗೆಯ ಪ್ರಮಾಣಾಶ್ರಿತಪೂರ್ವಪಕ್ಷಗಳನ್ನು ಒಂದು ಬಗೆಯ ಪ್ರಮೇಯಾಶ್ರಿತ ಪೂರ್ವಪಕ್ಷವನ್ನು ಸಮರ್ಥಿಸಿದರು. ಪ್ರಕೃತ ಆ ಪೂರ್ವಪಕ್ಷಗಳ ವ್ಯಾಖ್ಯೇಯಗಳನ್ನು ತೋರಿಸುತ್ತಾ ಸಿದ್ಧಾಂತ ಮಾಡುತ್ತಿದ್ದಾರೆ. ವಿಷ್ಣುವಿನಲ್ಲಷ್ಟೇ ಪ್ರಸಿದ್ಧವಾದ ಅನೇಕ ಶಬ್ದಗಳಿರುವಾಗ ಅನ್ಯತ್ರಪ್ರಸಿದ್ಧವಾದ ಗಾಯತ್ರೀ ಮೊದಲಾದ ಶಬ್ದಗಳನ್ನು ವಿಷ್ಣುವಿನಲ್ಲಿ ಏಕೆ ಹೇಳಬೇಕು? ಎಂಬುದು ಮೊದಲನೆಯ ಪೂರ್ವಪಕ್ಷ. ಅನೇಕ ಮುಖಗಳಿಂದ ಭಗವಂತನನ್ನು ಉಪಾಸನೆ ಮಾಡಬೇಕು. ಭಗವಂತನು ವೇದೋಪದೇಷ್ಟುವಾದ್ದರಿಂದ ಗಾನಕರ್ತೃ ಎನಿಸಿದ್ದಾನೆ. ಸಕಲನಿಯಾಮಕನಾದ್ದರಿಂದ ತ್ರಾಣಕರ್ತೃ ಎನಿಸಿದ್ದಾನೆ. ಹೀಗೆ ಗಾಯತ್ರೀಶಬ್ದದಿಂದ ತಿಳಿಯುವ ಗುಣಗಳನ್ನು ಭಗವಂತನಲ್ಲಿ ಉಪಾಸನೆ ಗೈಯ್ಯಬೇಕು. ಇದಕ್ಕಾಗಿ ಗಾಯತ್ರೀಶಬ್ದದ ಸಮನ್ವಯವನ್ನು ಅವಶ್ಯ ಮಾಡಬೇಕೆಂದು ತಿಳಿಸಲು ಈ ಅಧಿಕರಣದಲ್ಲಿ ಗಾಯತ್ರೀ ಮೊದಲಾದ ಶಬ್ದಗಳನ್ನು ಸಮನ್ವಯ ಮಾಡಲಾಗಿದೆ. ಈ ಶಬ್ದಗಳ ಸಮನ್ವಯವು ಉಪಾಸನೆಗೋಸ್ಕರ ಸಾರ್ಥಕವೆಂದು ಸೂತ್ರಕಾರರು 'ಚೇತೋರ್ಪಣನಿಗದಾತ್' ಎಂಬ ಸೂತ್ರದಿಂದ ಹೇಳಿದ್ದಾರೆ. ಇದರಿಂದ ಮೊದಲನೆಯ ಪೂರ್ವಪಕ್ಷವು ಪರಿಹಾರವಾಯಿತು.

ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ವಿಷ್ಣುವೆನ್ನಲು ಬಾಧಕವಿಲ್ಲ. ಆದರೆ ದಿವಃಪರತ್ವ ದಿವಃಸ್ಥಿತತ್ವ ಎಂಬ ಉಪದೇಶಭೇದದ ಬಾಧಕವಿರುವುದರಿಂದ ಗಾಯತ್ರಿಯು ವಿಷ್ಣುವಲ್ಲವೆಂಬುದು ಎರಡನೆಯ ಪೂರ್ವಪಕ್ಷ. ಇದನ್ನು ಸೂತ್ರಕಾರರು 'ಉಭಯಸ್ಮಿನ್ನಪ್ಯವಿರೋಧಾತ್' ಎಂಬ ಸೂತ್ರದಿಂದ ಪರಿಹರಿಸಿದ್ದಾರೆ. ಮೂರುಲೋಕಗಳ ವಿವಕ್ಷೆಯಿಂದ ಭಗವಂತನಲ್ಲಿ ದಿವಃಪರತ್ವವು ಸಪ್ತಲೋಕಗಳ ವಿವಕ್ಷೆಯಿಂದ ದಿವಿಃಸ್ಥಿತತ್ವವು ಭಗವಂತನಲ್ಲಿ ಬರುತ್ತದೆ. ಈ ವಿಚಾರವನ್ನು ಮುಂದೆ ಸ್ಪಷ್ಟಪಡಿಸುತ್ತಾರೆ. ಹೀಗೆ ಉಪದೇಶಭೇದದ ವಿರೋಧವಿಲ್ಲದ ಕಾರಣ ಭಗವಂತನು ಗಾಯತ್ರಿ ಎನಿಸುತ್ತಾನೆ. ಆದ್ದರಿಂದ ಎರಡನೆಯ ಪೂರ್ವಪಕ್ಷವು ಇದರಿಂದ ನಿರಾಕೃತವಾಯಿತು.

ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ವಿಷ್ಣುವೆನ್ನಲು ಕರ್ಣಾದಿವಿದೂರತ್ವವೆಂಬ ಲಿಂಗವಿದೆ. ಅದಕ್ಕೆ ವಿರುದ್ಧವಾದ ದೃಷ್ಟಶ್ರುತತ್ವಾದಿಲಿಂಗಗಳು ಗಾಯತ್ರಿಯಲ್ಲಿ ಕೇಳಿಸುತ್ತಿರುವುದರಿಂದ ಗಾಯತ್ರಿಯು ವಿಷ್ಣುವಲ್ಲ ಎಂಬುದು ಮೂರನೆಯ ಪೂರ್ವಪಕ್ಷ. ಈ ಪೂರ್ವಪಕ್ಷವೂ ಸಹ 'ಉಭಯಸ್ಮಿನ್ನಪ್ಯ-ವಿರೋಧಾತ್' ಎಂಬ ಸೂತ್ರದಿಂದಲೇ ಪರಿಹಾರವಾಗಿದೆ. ಆದರೆ ಸ್ಪಷ್ಟವಾಗಿ ತಿಳಿಯದ ಕಾರಣ ಗ್ರಂಥಕಾರರೇ 'ತಸ್ಯ' ಎಂಬ ವಾಕ್ಯದಿಂದ ವಿವರಿಸಿದ್ದಾರೆ. ದೇಶಕಾಲಗುಣಾದಿಗಳಿಂದ ಭಗವಂತನು ಅಪರಿಚ್ಛಿನ್ನನಾಗಿ ಕರ್ಣಾದಿವಿದೂರನೆನಿಸಿದ್ದಾನೆ. ಏಕದೇಶದಿಂದ ತಿಳಿಯುತ್ತಾನಾದ್ದರಿಂದ ದೃಷ್ಟನೂ ಶ್ರುತನೂ ಆಗಿದ್ದಾನೆ. ಅಥವಾ ಮೂಲರೂಪದಿಂದ ಕರ್ಣಾದಿವಿದೂರನಾಗಿದ್ದಾನೆ. ವಾಯುದೇವರೇ ಮೊದಲಾದ ಅಧಿಷ್ಠಾನಗಳಲ್ಲಿ ಅಧಿಷ್ಠಿತನಾಗಿ ದೃಷ್ಟನಾಗಿದ್ದಾನೆ. ಇದನ್ನೇ ಸುಧೆಯಲ್ಲಿ 'ನ ಚ ಜ್ಯೋತಿಷೋ ಬ್ರಹ್ಮತ್ವೇ ದೃಷ್ಟತ್ವಾದ್ಯನುಪಪತ್ತಿಃ । ಯತಸ್ತದಧಿಷ್ಠಾನದ್ವಾರಾ ಕರ್ಣಾದಿವಿದೂರಸ್ಯೈವ ಹರೇರುಪಪದ್ಯತೇ'

(ಜ್ಯೋತಿಯು ಬ್ರಹ್ಮನಾದರೆ ದೃಷ್ಟತ್ವಾದಿಗಳ ಅನುಪಪತ್ತಿ ಬರುತ್ತದೆ ಎನ್ನಬಾರದು. ಕರ್ಣಾದಿವಿದೂರ-ನಾಗಿದ್ದರೂ ಅಧಿಷ್ಠಾನದ ಮೂಲಕ ಶ್ರೀಹರಿಯು ದೃಷ್ಟನಾಗಿದ್ದಾನೆ.) ಹೀಗೆ ಉಪದೇಶಭೇದಸೂತ್ರ-ದಿಂದಲೇ ಮೂರನೆಯ ಪೂರ್ವಪಕ್ಷನಿರಾಸವನ್ನು ತಿಳಿಯಬೇಕು.

ನಾಲ್ಕನೆಯ ಪೂರ್ವಪಕ್ಷವು ಅನುವ್ಯಾಖ್ಯಾನ ನ್ಯಾಯವಿವರಣಗಳಲ್ಲಿ ಪರಿಹರಿಸಲ್ಪಟ್ಟಿದೆ. ಅದು ಹೀಗೆ

ಕಥಂ ಪ್ರಸಿದ್ಧಬಹುಲಶಬ್ದಾನಾಮನ್ಯಥಾರ್ಥತಾ ।
ಇತಿ ಚೇತ್ ತದ್ಧರೇರೇವ ಬಾಹುಲ್ಯಾತ್ ಶ್ರುತಿಲಿಂಗಯೋಃ ॥
ತಾದೃಶತ್ವಾಚ್ಚ ತಚ್ಛಕ್ತೇಃ ..............

(ಗಾಯತ್ರ್ಯಾದಿಗಳಲ್ಲಿ ಪ್ರಸಿದ್ಧವಾದ ಅನೇಕಶಬ್ದಗಳಿಗೆ ಅನ್ಯಾರ್ಥವನ್ನು/ಹರಿಪರತ್ವವನ್ನು ಹೇಗೆ ಕಲ್ಪಿಸುವುದು ಎಂದರೆ ಬಹಳವಾದ ಶ್ರುತಿಲಿಂಗಗಳ ಬಲದಿಂದ ಹರಿಪರತ್ವವನ್ನು ಹೇಳಬಹುದು) ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಮತ್ತು ನ್ಯಾಯವಿವರಣದಲ್ಲಿ 'ತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ' ಇತ್ಯಾದಿಯಾಗಿ ಹೇಳಿದ್ದಾರೆ. ಅಂದರೆ ಪೂರ್ವಪಕ್ಷಪ್ರಾಪಕವಾಗಿ ಅನೇಕ ಶ್ರುತಿಗಳಿರುವಂತೆ ಸಿದ್ಧಾಂತಸ್ಥಾಪಕವಾಗಿಯೂ ಅನೇಕಶ್ರುತಿಗಳಿವೆ ಎಂದು ಅಭಿಪ್ರಾಯ.

ಪೂರ್ವಪಕ್ಷ ಹಾಗೂ ಸಿದ್ಧಾಂತಗಳಲ್ಲಿ ಬಹುಶ್ರುತಿಗಳು ಸಮಾನವಾಗಿವೆ. ಹಾಗಾದರೆ ಇದರಿಂದ ನಿರ್ಣಯ ಹೇಗೆ ಆಗುತ್ತದೆ? ಎಂಬ ಪ್ರಶ್ನೆಗೆ ಎರಡೂ ಪಕ್ಷಗಳಲ್ಲಿ ಶ್ರುತಿಯು ಸಮಾನವಾಗಿದ್ದರೂ ಸಿದ್ಧಾಂತದಲ್ಲಿ ಅಧಿಕ ಲಿಂಗಗಳಿರುವುದರಿಂದ ನಿರ್ಣಯಿಸಬಹುದೆಂಬ ಅಭಿಪ್ರಾಯದಿಂದ 'ಅಯಂ ಭಾವಃ' ಎಂಬ ಗ್ರಂಥವು ಹೊರಟಿದೆ. ಅಂದರೆ ಶ್ರುತಿಲಿಂಗಗಳು ಬಹಳವಾಗಿವೆ ಎಂದಷ್ಟೇ ಅನುವ್ಯಾಖ್ಯಾನದಲ್ಲಿ ಕಾಣಿಸುತ್ತಿದೆ. ಇದಕ್ಕೆ ಸಿದ್ಧಾಂತದಲ್ಲಿ ಪೂರ್ವಪಕ್ಷಕ್ಕಿಂತ ಅಧಿಕವಾದ ಲಿಂಗಗಳಿವೆ ಎಂದರ್ಥ. ವಿಷ್ಣುಲಿಂಗಗಳು ಹೀಗಿವೆ - ಗಾನಕರ್ತೃತ್ವ, ತ್ರಾಣಕರ್ತೃತ್ವ, ಭೂತಾದಿಪಾದತ್ವ ಮತ್ತು ಸರ್ವೋತ್ತಮತ್ವ ಮೊದಲಾದವುಗಳು. 'ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ' ಎಂದು ಮೊದಲು ಷಡ್ವಿಧತ್ವವನ್ನು ಗಾಯತ್ರಿಗೆ ಅನುವಾದ ಮಾಡಿ ಅನಂತರ ಚತುಷ್ಪದತ್ವವನ್ನು ಶ್ರುತಿಯು ಹೇಳಿದೆ. ಆ ಚತುಷ್ಪದವೇ ಪುರುಷವೆಂದು ತಿಳಿಸಲು ಪುರುಷಸೂಕ್ತಮಂತ್ರದ ಸಂವಾದಿಯನ್ನು 'ತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪುರುಷಃ । ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ' ಎಂಬ ಶ್ರುತಿಯು ಹೇಳಿದೆ. ಇದರಿಂದ ಭೂತಾದಿಪಾದತ್ವಲಿಂಗವನ್ನು ಹೇಳಿದಂತಾಯಿತು. ಅಂದರೆ ಬ್ರಹ್ಮಾದಿಸಕಲಭೂತಗಳು ಭಗವಂತನ ಒಂದು ಅಂಶ. ಉಳಿದ ಮೂರು ಅಂಶಗಳು ಅನಂತಾಸನ ಶ್ವೇತದ್ವೀಪ ವೈಕುಂಠಗಳಲ್ಲಿವೆ. ಹೀಗೆ ಭೂತಾದಿಪಾದತ್ವಲಿಂಗವನ್ನು ಸಮರ್ಥಿಸಲು ಪುರುಷಸೂಕ್ತಾದಿಗಳನ್ನು ಉಲ್ಲೇಖಿಸಿದ್ದಾರೆ. ಈ ಶ್ರುತಿಗಳಲ್ಲಿರುವ ಬ್ರಹ್ಮಶಬ್ದವು ಜನ್ಮಾದಿಸೂತ್ರಗಳಲ್ಲಿ ಹೇಳಿದ ಲಿಂಗ ಬಲದಿಂದ ವಿಷ್ಣುವಿನಲ್ಲಿ ಮುಖ್ಯವೆಂದು ತಿಳಿಯುತ್ತದೆ. ಆದರೆ ಪುರುಷಶಬ್ದವು ವಿಷ್ಣುವಿನಲ್ಲಿ ಮುಖ್ಯವೆಂದು ಸಮರ್ಥಿಸಲು 'ಪುರುಷಶಬ್ದೋ ಹಿ' ಎಂಬ ಗ್ರಂಥವು ಹೊರಟಿದೆ. ಅಂದರೆ ಗ್ರಂಥಕಾರರು ಪುರುಷಶಬ್ದಕ್ಕೆ ಮಾತ್ರ ವಿಷ್ಣುಪರತ್ವವನ್ನು ಸಮರ್ಥಿಸುತ್ತಿದ್ದಾರೆ. ಹೀಗೆ ಹೇಳಿದ್ದರಿಂದ ಭಾಷ್ಯಹಾಗೂ ಟೀಕೆಗಳಲ್ಲಿ ಹೇಳಿದ ಸಿದ್ಧಾಂತಸ್ಥಾಪಕವಾದ ನಿರವಕಾಶಲಿಂಗವು ಉಪಲಕ್ಷಣವೆಂದು ಸೂಚಿಸಿದಂತಾಯಿತು. 'ಸ ವಾ ಅಯಮ್' ಎಂಬ ಶ್ರುತಿಯನ್ನು ಎಂಟನೆಯ ಅಧ್ಯಾಯದ ಗೀತಾಭಾಷ್ಯದ ಟೀಕೆಯಲ್ಲಿ ವ್ಯಾಖ್ಯಾನಿಸಿದ್ದಾರೆ.

**गुरुराजीयम् – तत्राद्येति ॥** विष्णौ प्रसिद्धनारायणादिशब्दपरित्यागेनान्यत्रप्रसिद्धगायत्र्यादिशब्दप्रयोगे प्रयोजनं वाच्यमित्याद्याशङ्केत्यर्थः ॥ **द्वितीयतृतीये इति ॥** युक्तमग्निसूक्तस्थज्योतिषो विष्णुत्वम् । उपदेशभेदाभावात् । इह तु दिव इति पञ्चम्युपदेशस्थस्य ज्योतिःश्रुत्या विष्णुत्वेपि दिवीति तद्विरुद्धसप्तम्युपदेशस्थगायत्र्या न विष्णुत्वमिति द्वितीया । अग्निसूक्तस्थज्योतिर्निष्ठकर्णादिविदूरत्वविरुद्धदृष्टत्वाद्युपदेशान्नेदं ज्योतिर्विष्णुस्ततश्च गायत्र्यपि न विष्णुरिति तृतीया शङ्केति द्वितीयतृतीये इत्यर्थः ।

ननूभयस्मिन्नप्यविरोधादित्यनेन द्वितीयशङ्कानिराससम्भवेपि कथं तृतीयशङ्कानिरासः । त्रिसप्तलोकापेक्षयोभयस्मिन्नविरोधेन तन्निरासासम्भवादित्यत आह **– तस्येति ॥ चतुर्थी त्विति ॥** एकस्या वह्निश्रुतेरन्यत्रप्रसिद्धिबाधेपीत्यादिनोक्तेत्यर्थः । ज्यायांश्च पुरुष इत्यादिशब्दसन्निहितलिङ्गैश्चेत्यत्रादिशब्दसङ्ग्राह्यं वदन्नेव सूत्रे भूतादीति साक्षाल्लिङ्गस्योक्तत्वेन न्यायविवरणेऽनुक्तमपि लिङ्गबाहुल्यं दर्शयन्नेव पुरुषश्रुतेर्निरवकाशत्वं दर्शयति **– अयं भाव इति ॥ पञ्चमी त्विति ॥**

## ಸಾರ

ಐದು ಪೂರ್ವಪಕ್ಷಗಳ ಮಧ್ಯದಲ್ಲಿ ಮೊದಲನೆಯ ಶಂಕೆಯು 'ಚೇತೋರ್ಪಣನಿಗದಾತ್' ಎಂಬ ಸೂತ್ರದಲ್ಲಿ ಪ್ರಯೋಜನವನ್ನು ಹೇಳುವ ಮೂಲಕ ಪರಿಹರಿಸಲಾಗಿದೆ.

ಎರಡು ಹಾಗೂ ಮೂರನೆಯ ಪೂರ್ವಪಕ್ಷಗಳನ್ನು 'ಉಭಯಸ್ಮಿನ್ ಅಪ್ಯವಿರೋಧಾತ್' ಎಂಬ ಸೂತ್ರದಿಂದ ಪರಿಹರಿಸಿದ್ದಾರೆ.

ನಾಲ್ಕನೆಯ ಪೂರ್ವಪಕ್ಷವನ್ನು 'ಬಾಹುಲ್ಯಾತ್ ಶ್ರುತಿಲಿಂಗಯೋಃ' ಎಂಬ ಅನುವ್ಯಾಖ್ಯಾನದಲ್ಲಿ ಮತ್ತು 'ಜ್ಯಾಯಾಂಶ್ಚ ಪುರುಷ ಇತ್ಯಾದಿಶಬ್ದಸಹಿತಲಿಂಗೈಶ್ಚ' ಎಂಬ ನ್ಯಾಯವಿವರಣದಲ್ಲಿ ಪರಿಹರಿಸಿದ್ದಾರೆ.

ಐದನೆಯ ಪ್ರಮೇಯಾಶ್ರಿತಶಂಕೆಯು 'ತಾದೃಶತ್ವಾತ್ ತು ತಚ್ಛಕ್ತೇಃ' ಎಂಬ ಅನುವ್ಯಾಖ್ಯಾನದಲ್ಲಿ ಪರಿಹರಿಸಲ್ಪಟ್ಟಿದೆ.

## ಅನಾದಿಯೂ ಭಗವದಧೀನ

**तात्पर्यचन्द्रिका**

**अयं भावः –**

**अनादीनां गुणादीनां यथागुण्यादितन्त्रता ।**
**तथाऽनादिश्रुतेरस्तु क्षेमायेश्वरतन्त्रता ॥**

**यथा वैशेषिकादिमते गगनादिपरिमाणादीनां अनादिनित्यानामपि स्वाश्रय-गगनाद्यधीनता, यथा वाऽद्वैतिमते अनादेरात्माज्ञानसम्बन्धस्य जीवब्रह्मविभागादेश्च सम्बन्ध्यज्ञानाद्यधीनता, यथा वा प्राभाकरमते दुःखप्रागभावस्य मोक्षस्य ज्ञानाधीनता, यथा वा मतान्तरे दुरितप्रागभावस्य निषिद्धाकरणाधीनता, तथा गायत्र्यास्तत्पदप्रवृत्तिनिमित्तस्य चोत्पत्त्यभावेऽपि स्थितौ विष्णवधीनता ।**

**किञ्च – सादेरपि उत्पत्तावन्यापेक्षायामपि तदनन्तरं स्थितावनादितो न विशेषः । तत्र च सादिर्न केवलमुत्पत्तावीशतन्त्रः किन्तु स्थितावपीति "प्रकृतै-तावत्त्वं हि प्रतिषेधति ततो ब्रवीति च भूयः" इत्यत्र वक्ष्यमाणत्वा-दनादेरुत्पत्त्यभावेन तत्रान्यानपेक्षायामपि स्थितावीशापेक्षा किं न स्यात् । दृश्यते हि योगे अन्यापेक्षस्य पराधीनत्ववत् क्षेमेऽपि तदपेक्षस्य तदधीनता ।**

ಅನುವಾದ - ಇದನ್ನು ತಿಳಿಯಬೇಕು -

ಅನಾದೀನಾಂ ಗುಣಾದೀನಾಂ ಯಥಾಗುಣ್ಯಾದಿತಂತ್ರತಾ ।
ತಥಾऽನಾದಿಶ್ರುತೇರಸ್ತು ಕ್ಷೇಮಾಯೇಶ್ವರತಂತ್ರತಾ ॥

ಅನಾದಿಯಾದ ಗುಣಗಳು ಹೇಗೆ ಗುಣಿಗಳ ಅಧೀನವಾಗಿವೆಯೋ ಅದರಂತೆ ಅನಾದಿಶ್ರುತಿಯು ಸಹ ತನ್ನ ಕ್ಷೇಮಕ್ಕಾಗಿ ಭಗವದಧೀನವಾಗಲಿ.

ಯಾವರೀತಿಯಾಗಿ ವೈಶೇಷಿಕಮತದಲ್ಲಿ ಗಗನಪರಿಮಾಣಾದಿಗಳು ಅನಾದಿನಿತ್ಯವಾಗಿದ್ದರೂ ತನಗೆ ಆಶ್ರಯವಾದ ಗಗನಾದಿಗಳ ಅಧೀನವಾಗಿದೆಯೋ, ಅಥವಾ ಅದ್ವೈತಿಗಳ ಮತದಲ್ಲಿ ಆತ್ಮ ಅಜ್ಞಾನಸಂಬಂಧವು ಅನಾದಿಯಾಗಿದ್ದರೂ ಸಂಬಂಧಿಯಾದ ಆತ್ಮನ ಅಧೀನವಾಗಿದೆಯೋ ಮತ್ತು ಜೀವಬ್ರಹ್ಮವಿಭಾಗವು ಅನಾದಿಯಾಗಿದ್ದರೂ ಅಜ್ಞಾನದ ಅಧೀನವಾಗಿದೆಯೋ, ಅಥವಾ ಪ್ರಾಭಾಕರ ಮತದಲ್ಲಿ ಅನಾದಿ ದುಃಖಪ್ರಾಗಭಾವವೆಂಬ ಮೋಕ್ಷವು ಜ್ಞಾನದ ಅಧೀನವಾಗಿದೆಯೋ, ಅಥವಾ

ಅವರಲ್ಲೇ ಕೆಲವರು ಹೇಳುವ ಅನಾದಿಯಾದ ದುರಿತಪ್ರಾಗಭಾವವು ಅನಿಷಿದ್ಧಾಚರಣೆಯ ಅಧೀನವೋ ಅದರಂತೆ ಗಾಯತ್ರಿಯು ಮತ್ತು ಅದರ ಪ್ರವೃತ್ತಿನಿಮಿತ್ತವು ಅನಾದಿಯಾಗಿದ್ದರೂ ಸ್ಥಿತಿಯಲ್ಲಿ ಭಗವಂತನ ಅಧೀನವಾಗಬಹುದು.

ಮತ್ತು ಸಾದಿಪದಾರ್ಥಕ್ಕೆ ಉತ್ಪತ್ತಿಯಾಗಲು ಮತ್ತೊಂದರ ಅಪೇಕ್ಷೆ ಇದೆ. ಉತ್ಪತ್ತಿಯಾದ ಮೇಲೆ ಅನಾದಿ ಪದಾರ್ಥದಂತೆ ಅದರ ಸ್ಥಿತಿಗೆ ಮತ್ತೊಂದರ ಅಧೀನವಾಗಿರುವಿಕೆಯು ಇದ್ದೇ ಇರುತ್ತದೆ. ಈ ವಿಷಯದಲ್ಲಿ ಅಧೀನವಾಗಿರುವಿಕೆಯೆಂಬುದು ಸಾದಿಪದಾರ್ಥಕ್ಕೂ ಅನಾದಿಪದಾರ್ಥಕ್ಕೂ ಸಮಾನ. ಸಾದಿಪದಾರ್ಥವು ಕೇವಲ ಉತ್ಪತ್ತಿಯಲ್ಲಷ್ಟೇ ಭಗವದಧೀನವಲ್ಲ ಸ್ಥಿತಿಯಲ್ಲಿಯೂ ಭಗವದಧೀನವಾಗಿದೆ ಎಂಬುದನ್ನು 'ಪ್ರಕೃತೈತಾವತ್ವಂ ಹಿ ಪ್ರತಿಷೇಧತಿ' ಎಂಬ ಸೂತ್ರದಲ್ಲಿ ಮುಂದೆ ಸಮರ್ಥಿಸುತ್ತಾರೆ. ಅನಾದಿಪದಾರ್ಥಕ್ಕೆ ಉತ್ಪತ್ತಿಯಿಲ್ಲದ ಕಾರಣ ಉತ್ಪತ್ತಿವಿಷಯದಲ್ಲಿ ಭಗವಂತನ ಅಪೇಕ್ಷೆ ಇಲ್ಲ. ಆದರೆ ಸ್ಥಿತಿವಿಷಯದಲ್ಲೇಕೆ ಭಗವದಧೀನವಾಗಬಾರದು? ಲೋಕದಲ್ಲಿ ಇದು ಕಂಡಿದೆ. ಅಪ್ರಾಪ್ತಪ್ರಾಪ್ತಿಗೆ (ಹುಟ್ಟುವಿಕೆಗೆ) ಅನ್ಯಾಪೇಕ್ಷೆ ಇರುವುದರಿಂದ ಪರಾಧೀನತ್ವವಿದ್ದಂತೆ ಪ್ರಾಪ್ತಪ್ರಾಪ್ತಿಗೂ(ಸ್ಥಿತಿಗೆ) ಅನ್ಯಾಪೇಕ್ಷೆ ಇರುವುದರಿಂದ ತದಧೀನತ್ವ ಬಂದೇ ಬರುತ್ತದೆ.

**ಪ್ರಕಾಶ: –** नन्वनादेरन्याधीनत्वं काप्यनुपलम्भादसम्भावितमित्यतः,

**सत्ताप्रधानपुरुषशक्तीनां च प्रतीतयः ।**
**प्रवृत्तयश्च ताः सर्वा नित्यं नित्यात्मना यतः ।**
**तथा नित्यतया नित्यं नित्यशक्त्या स्वयेश्वरः ।**
**नियामयति नित्यश्च ।**

इति साङ्ख्याधिकरणानुव्याख्यां हृदि कृत्वाऽऽह – **अयं भाव इति** ॥ 'गुणादीनां' परिमाणजात्यादिधर्माणाम् । दृष्टान्तविवरणपूर्वं दार्ष्टान्तिकं विशदयति – **यथेति** ॥ अधीनत्वे हेतुः – **स्वाश्रयेति** । आश्रिते आश्रयाधीनत्वस्य लोक उपलम्भात् । **अनादेरिति** ॥

**जीवो ब्रह्म विशुद्धा चिद्भेदस्तस्यास्तयोर्द्वयोः ।**
**अविद्या तच्चितोर्योगः षडस्माकमनादयः ॥**

इत्युक्तेरिति भावः ॥ **अज्ञानाद्यधीनतेति** ॥ अन्यथा तन्निवृत्तावपि तन्निवृत्तिर्न स्यादिति भावः ॥ **ज्ञानेति** ॥ ज्ञानेन दुःखप्रागभावस्योत्तरसमयसम्बन्धरूपपरिपालनं क्रियत इति तैरुच्यमानत्वादिति भावः । एवं दुरितप्रागभावेऽपि ध्येयम् ।

ननूत्पाद्यत्वातिरेकेण तदधीनत्वस्यान्यस्याभावात् कथमनादेरन्याधीनता । न च अनाश्यत्वमेव तदिति वाच्यम्, अनादेर्नाशाभावस्य स्वत एव सिद्ध्याऽन्यानपेक्षणात् । न हि मतान्तरसिद्धदृष्टान्तमात्रेणानुपपन्नोऽप्यर्थस्सिध्यति, अपि तु सम्भावितमेवेत्यत आह – **किञ्चेति** ॥ **प्रकृतैतावत्त्वमिति** ॥ तृतीयेऽध्याये द्वितीयपादे **''प्रकृतैतावत्त्वं हि प्रतिषेधति ततो ब्रवीति च भूयः''** इत्यत्र जगत्पालनं विष्णोर्युक्तमयुक्तं वेति सन्देहे, विष्णोस्सृष्टिसंहारकर्तृत्वात्सत्यां च सृष्टौ यावत्संहारं अवस्थितेः स्वत एव सिद्धेः, संहर्तुस्संहारातिरिक्तव्यापारस्यैव रक्षारूपस्यायोगान्न पालनं युक्तमिति प्राप्ते, **''नैतावत् परो अन्यदस्त्युक्षा स द्यावा पृथिवी बिभर्ति''** इति श्रुतौ नैतावत् इति प्रकृतस्य सृष्ट्यादिकर्तृत्वस्य तावन्मात्रत्वं निषिध्य ततोऽधिकस्य पालनस्यापीश्वरे वर्णनात् सृष्टिसंहारकर्तुरपि पालकत्वव्यापारो युक्त इति सिद्धान्त इति वक्ष्यमाणत्वात् जन्यवस्तुनि स्थितौ यथा भगवन्नियतता तथाऽत्रापीत्यर्थः । ननु नैतावताऽन्याधीनतेत्यत आह – **दृश्यते हीति** ॥ भृत्यादौ राजाद्यधीनतायाः प्रसिद्धत्वादिति भावः ।

ವಿವರಣೆ - ಅನಾದಿಪದಾರ್ಥವು ಅನ್ಯಾಧೀನವಾಗಿರುವುದು ಎಲ್ಲಿಯೂ ಕಂಡಿಲ್ಲದ ಕಾರಣ ಅಸಂಭಾವಿತವಾಗಿದೆ ಎಂಬ ಪ್ರಶ್ನೆಗೆ ಸಾಂಖ್ಯಾಧಿಕರಣ ಅನುವ್ಯಾಖ್ಯಾನದಿಂದ ಉತ್ತರಿಸುತ್ತಿದ್ದಾರೆ.

ಸತ್ತಾಪ್ರಧಾನಪುರುಷಶಕ್ತೀನಾಂ ಚ ಪ್ರತೀತಯಃ।
ಪ್ರವೃತ್ತಯಶ್ಚ ತಾಃ ಸರ್ವಾ ನಿತ್ಯಂ ನಿತ್ಯಾತ್ಮನಾ ಯತಃ।
ತಥಾಽನಿತ್ಯತಯಾಽನಿತ್ಯಂ ನಿತ್ಯಶಕ್ತ್ಯಾ ಸ್ವಯೇಶ್ವರಃ॥
ನಿಯಾಮಯತಿ ನಿತ್ಯಂ ಚ ...................

ಪ್ರಕೃತಿ, ಪುರುಷ ಇವರಲ್ಲಿರುವ ಶಕ್ತಿ ಮತ್ತು ಸ್ವರೂಪ ಹಾಗೂ ಪ್ರಮಾವಿಷಯತ್ವ ಆಯಾ ಪ್ರವೃತ್ತಿಗಳು ಇವುಗಳೆಲ್ಲವೂ ಭಗವಂತನ ಅಧೀನವಾಗಿವೆ. ಯಾವ ರೀತಿಯಾಗಿ ಅನಿತ್ಯಪದಾರ್ಥಗಳು ನಿಯಮ್ಯವಾಗಿವೆಯೋ; ಆದರಂತೆ ನಿತ್ಯಪದಾರ್ಥಗಳೂ ನಿಯಮ್ಯವಾಗಿವೆ. ಆದ್ದರಿಂದ ಭಗವಂತನೇ ಸ್ವತಂತ್ರ. 'ನ ಋತೇ ತ್ವತ್ಕ್ರಿಯತೇ ಎಂಬ ಶ್ರುತಿಯ ಪ್ರಮಾಣದಿಂದ ನಿತ್ಯಶಕ್ತಿಯುಳ್ಳ ಭಗವಂತನು ಎಲ್ಲವನ್ನೂ ನಿಯಮನ ಮಾಡುತ್ತಾನೆ.

ದೃಷ್ಟಾಂತವನ್ನು ವಿವರಿಸುವ ಮೂಲಕ ದಾರ್ಷ್ಟಾಂತಿಕವನ್ನು 'ಯಥಾ' ಎಂಬ ಗ್ರಂಥದಿಂದ ವಿವರಿಸುತ್ತಿದ್ದಾರೆ. ಗಗನದ ಅಧೀನವಾಗಿದೆ ಎನ್ನಲು ಕಾರಣವನ್ನು 'ಸ್ವಾಶ್ರಯ' ಎಂಬ ಪದವು ಸೂಚಿಸುತ್ತಿದೆ. ಆಶ್ರಿತವಾದ ಪದಾರ್ಥವು ಆಶ್ರಯದ ಅಧೀನವೆಂಬುದು ಶ್ಲೋಕದಲ್ಲಿ ಕಂಡಿರುವ ನಿಯಮ. ಅದ್ವೈತಿಗಳು ಅಜ್ಞಾನಸಂಬಂಧವನ್ನು ಅನಾದಿ ಎಂದಿದ್ದಾರೆ.

ಜೀವೋ ಬ್ರಹ್ಮ ವಿಶುದ್ಧಾ ಚಿದ್ಭೇದಸ್ತಸ್ಯಾಸ್ತಯೋರ್ದ್ವಯೋಃ।
ಅವಿದ್ಯಾ ತಚ್ಚಿತೋರ್ಯೋಗಃ ಷಡಸ್ಮಾಕಮನಾದಯಃ॥

(೧) ಜೀವ (೨) ಬ್ರಹ್ಮ (೩) ಶುದ್ಧಚೈತನ್ಯ (೪) ಶುದ್ಧಚೈತನ್ಯ ಹಾಗೂ ಜೀವಬ್ರಹ್ಮರಿಗೆ ಇರುವ ಭೇದ (೫) ಅಜ್ಞಾನ (೬) ಅಜ್ಞಾನ ಚೈತನ್ಯಗಳ ಸಂಬಂಧ ಹೀಗೆ ಒಟ್ಟು ಆರು ಅನಾದಿಪದಾರ್ಥಗಳು.

ಒಂದು ವೇಳೆ ಅಜ್ಞಾನವು ಸಂಬಂಧಿಯ ಅಧೀನವಾಗದಿದ್ದರೆ ಅಜ್ಞಾನನಿವೃತ್ತಿಯಾದರೂ ಅವುಗಳ ಭೇದವು ನಿವೃತ್ತಿಯಾಗದಿರಬೇಕಾದೀತು.

ಪ್ರಾಭಾಕರರು ದುಃಖಪ್ರಾಗಭಾವವನ್ನೇ ಮೋಕ್ಷ ಎನ್ನುತ್ತಾರೆ. ಅಂದರೆ ತತ್ವಜ್ಞಾನವು ದೃಢವಾದಾಗ ಹಿಂದಿನ ದುಃಖಗಳೆಲ್ಲವೂ ಪರಿಹಾರವಾಗುತ್ತದೆ. ಮುಂದೆ ದುಃಖಗಳು ಬಾರದ ಕಾರಣ ದುಃಖ-ಪ್ರಾಗಭಾವವಷ್ಟೇ ಉಳಿಯುತ್ತದೆ. ಜ್ಞಾನವು ದುಃಖಪ್ರಾಗಭಾವವನ್ನು ಚಾಲನೆ ಮಾಡುತ್ತದೆ ಎಂದು. (ಮೀಮಾಂಸಕರು ಕರ್ಮದಿಂದ ಮೋಕ್ಷವೆನ್ನುತ್ತಾರೆ. ಇಲ್ಲಿ ಹೇಳಿದ ಜ್ಞಾನದಿಂದ ಮೋಕ್ಷವೆಂಬ ಮಾತನ್ನು ಹೇಗೆಂದು ವಿಚಾರ ಮಾಡಬೇಕು.) ಇದರಂತೆ ದುರಿತಪ್ರಾಗಭಾವದಲ್ಲಿಯೂ ತಿಳಿಯಬೇಕು.

ತದಧೀನತ್ವಶಬ್ದಕ್ಕೆ ಉತ್ಪಾದ್ಯ ಎಂದರ್ಥ. ಹೀಗಿರುವಾಗ ಅನಾದಿಪದಾರ್ಥಕ್ಕೆ ಅನ್ಯಾಧೀನತ್ವವನ್ನು ಹೇಳಲು ಹೇಗೆ ಸಾಧ್ಯ? ನಾಶವಾಗುವುದಿಲ್ಲವೆಂಬ ಕಾರಣದಿಂದ ಅನ್ಯಾಧೀನ ಎನ್ನಬಾರದು. ಅನಾದಿಪದಾರ್ಥಕ್ಕೆ ನಾಶಾಭಾವವು ಸ್ವತಃಸಿದ್ಧವಾಗಿದೆ. ಕೇವಲ ಬೇರೆ ಬೇರೆ ಮತದವರ ದೃಷ್ಟಾಂತಗಳನ್ನು ನೀಡಿದ ಮಾತ್ರದಿಂದ ಅನುಪಪನ್ನವಾದ ಅರ್ಥವು ಸಿದ್ಧವಾಗುವುದಿಲ್ಲ. ಹೊರತು ಸಂಭಾವಿತವಾದ ಅರ್ಥವಷ್ಟೇ ಪ್ರಮಾಣದಿಂದ ಸಿದ್ಧವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಕಿಂಚ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ. ಅನಾದಿಪದಾರ್ಥವು ಸ್ಥಿತಿವಿಷಯದಲ್ಲಿ ಭಗವದಧೀನವಾಗುತ್ತದೆಂದು ಸೂತ್ರಕಾರರು ಸಮರ್ಥಿಸಿದ್ದಾರೆ. ಅದು ಹೀಗೆ -

'ಪ್ರಕೃತೈತಾವತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ' (೩/೨/೨೨)

ಜಗತ್ಪಾಲನವು ವಿಷ್ಣುವಿಗೆ ಯುಕ್ತವಾಗುತ್ತದೋ ಇಲ್ಲವೋ? ಎಂದು ಸಂದೇಹ. ವಿಷ್ಣುವೇ ಸೃಷ್ಟಿ ಹಾಗೂ ಸಂಹಾರಕರ್ತನಾಗಿದ್ದಾನೆ. ಪದಾರ್ಥಗಳನ್ನು ಸೃಷ್ಟಿಮಾಡಿ ಎಲ್ಲಿಯ ತನಕ ಅವನು ಸಂಹಾರ ಮಾಡುವುದಿಲ್ಲವೋ ಅಲ್ಲಿಯ ತನಕ ಆ ಪದಾರ್ಥಗಳು ಸ್ವತಃ (ಭಗವದಧೀನವಾಗದೆ) ಇರುತ್ತವೆ. ಹೀಗಿರುವಾಗ ಸಂಹಾರಕ್ಕಿಂತ ಅತಿರಿಕ್ತವ್ಯಾಪಾರವೆನಿಸಿದ ರಕ್ಷಣೆಯನ್ನು ಒಪ್ಪುವ ಅವಶ್ಯಕತೆ ಇಲ್ಲ. ಆದ್ದರಿಂದ ಸೃಷ್ಟಿಸಂಹಾರಗಳು ಭಗವಂತನ ಅಧೀನಗಳಾದಂತೆ ಸ್ಥಿತಿಯು ಭಗವದಧೀನವಾಗುವುದಿಲ್ಲವೆಂದು ಪೂರ್ವಪಕ್ಷ.

ಸಿದ್ಧಾಂತ - ''ಈಶ್ವರನು ಜಗತ್ತಿನ ಸೃಷ್ಟಿಸಂಹಾರಗಳನ್ನು ಮಾಡಿದಂತೆ ಪಾಲನೆಯನ್ನೂ ಮಾಡುತ್ತಾನೆ. 'ನೈತಾವದೇನಾಪರೋ ಅನ್ಯದಸ್ತ್ಯುಕ್ಷಾ ಸ ದ್ಯಾವಾಪೃಥಿವೀ ಬಿಭರ್ತಿ' ಭಗವಂತನು ಜಗತ್ತಿನ ಸೃಷ್ಟಿ ಸಂಹಾರಗಳನ್ನು ಮಾತ್ರ ಮಾಡುವುದಿಲ್ಲ. ಭಕ್ತರ ಅಭೀಷ್ಟಗಳನ್ನು ನೆರವೇರಿಸುತ್ತ ಜಗತ್ತಿನ ಪಾಲನೆಯನ್ನೂ ಮಾಡುತ್ತಾನೆ ಎಂದು ಈ ಶ್ರುತಿಯು ಕೇವಲ ಸೃಷ್ಟಿಸಂಹಾರಕರ್ತೃತ್ವವನ್ನು ನಿಷೇಧಿಸಿದೆ. ಆದ್ದರಿಂದ

**इत्यनेन तु ''सैषा चतुष्पदा'' इति ब्राह्मणवाक्यस्थं भूतपृथिवीशरीरहृदयानां पादत्वमुच्यते ।**

**ब्राह्मणवाक्ये हि ''इदं सर्वं भूतं'' इति भूतं, ''येयं पृथिवि'' इति पृथिवीं, ''यदिदमस्मिन् पुरुषे शरीरम्'' इति शरीरं, ''यदिदमस्मिन्नन्तः पुरुषे हृदयम्'' इति हृदयं चोक्त्वा, ''सैषा चतुष्पदा षड्विधा गायत्री'' इति भूतादीनां चतुर्णां पादत्वं व्यपदिश्यते । ततो न पौनरुक्त्यमिति चेत्, न, 'चरणाभिधानात्'' इत्यनेन ''पादोऽस्य सर्वा भूतानि त्रिपादस्य'' इति मन्त्रस्थपादाभिधानद्वयस्येव ततोऽधिकार्थस्य ब्राह्मणस्थपादाभिधानस्यापि वक्तुं शक्यत्वेन भूतादिसूत्रवैयर्थ्यात् । अपि च त्वत्पक्षे हि ब्रह्मणस्तत्तत्पादत्वं तत्तदात्मकत्वम् । तथाच सर्वात्मकत्वं 'चरणाभिधानात्' इत्यनेनैवोक्तमिति किं तदेकदेशभूताद्यात्मकत्व-प्रतिपादकेन भूतादिसूत्रेण ।**

ಅನುವಾದ - ಅದ್ವೈತಿಗಳು ಮತ್ತು ರಾಮಾನುಜರು ಜ್ಯೋತಿಸೂತ್ರವನ್ನು ಸೇರಿಸಿ ನಾಲ್ಕೂ ಸೂತ್ರಗಳನ್ನು ಒಂದೇ ಅಧಿಕರಣ ಎನ್ನುತ್ತಾರೆ. 'ಚರಣಾಭಿಧಾನಾತ್' ಎಂಬ ಶಬ್ದಕ್ಕೆ 'ಪಾದಾಭಿ-ಧಾನಾತ್' ಎಂದರ್ಥ. 'ಅಥ ಯದತಃ' ಎಂಬ ಛಾಂದೋಗ್ಯದಲ್ಲಿಯೇ ಪಾದಾಭಿಧಾನವಿದೆ. 'ತದೇತದೃಚಾಽಭ್ಯುಕ್ತಮ್ । ಪಾದೋಽಸ್ಯ ಸರ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ' ಎಂಬ ಛಾಂದೋಗ್ಯದಲ್ಲಿ ಪಾದಾಭಿಧಾನವು ಸ್ಪಷ್ಟವಾಗಿ ಕೇಳಿಸುತ್ತಿದೆ. ಇವರ ಈ ಅಭಿಪ್ರಾಯ ಸರಿಯಲ್ಲ. ಹಾಗಾದರೆ ಶ್ರುತಿಯ ಅನುಗಮಕ್ಕೋಸ್ಕರ 'ಜ್ಯೋತಿಃ ಪಾದಾಭಿಧಾನಾತ್' ಎಂದೇ ಸೂತ್ರ-ವಿರಬೇಕಿತ್ತು. ಈ ದೋಷವನ್ನು ಸುಧೆಯಲ್ಲಿ ಹೇಳಿದ್ದಾರೆ. ಮತ್ತು ನಮ್ಮ ಮತದಂತೆ ಗುಹಾ-ನಿಹಿತತ್ವಧರ್ಮವುಳ್ಳ 'ಹೃದಯ ಆಹಿತಂ ಯತ್' ಎಂಬುದನ್ನು ಜ್ಯೋತಿಸೂತ್ರದ ವಿಷಯವಾಕ್ಯ-ವೆಂದು ಹೇಳಿದಾಗ, ಆನಂದಮಯಾಧಿಕರಣವನ್ನು ಆಕ್ಷೇಪಿಸಿದಂತಾಗುತ್ತದೆ. ಇದರಿಂದ ಪೂರ್ವ-ಸಂಗತಿಯು ಸುಲಭವಾಗುತ್ತದೆ. ಇದನ್ನು ಬಿಟ್ಟು 'ಅಥ ಯದತಃ' ಎಂಬ ಛಾಂದೋಗ್ಯವನ್ನು ಉದಾಹರಿಸುವುದು ತಪ್ಪು. ಮತ್ತು

ಪೌನರುಕ್ತ್ಯಂ ಪರಮತೇ ಜ್ಯೋತಿರ್ಭೂತಾದಿಸೂತ್ರಯೋಃ ।
ಪಾದೋಪದೇಶಾದನ್ಯಾ ಹಿ ನೈವಾಸ್ತಿ ಚರಣಾಭಿಧಾ ॥

ಜ್ಯೋತಿಸೂತ್ರಕ್ಕೂ ಭೂತಾದಿಸೂತ್ರಕ್ಕೂ ಪರಮತದಲ್ಲಿ ಪುನರುಕ್ತಿ ಇದೆ. ಚರಣಾಭಿಧಾನಕ್ಕಿಂತ ಬೇರೆಯಾದ ಪಾದೋಪದೇಶವು ಇಲ್ಲವಾದ್ದರಿಂದ

ಅದು ಹೀಗೆ - 'ಪಾದೋಸ್ಯ ಸರ್ವಾ ಭೂತಾನಿ' ಎಂಬ ಹಿಂದಿನ ವಾಕ್ಯದಲ್ಲಿ ಪಾದಾಭಿಧಾನವು ಪ್ರಸಕ್ತವಾಗಿದೆ. ಜ್ಯೋತಿರ್ವಾಕ್ಯದಲ್ಲಿಯೂ ಇದನ್ನೇ ಹೇಳಿದ್ದಾರೆ ಹೊರತು ಬೇರೆಯಲ್ಲ. ಆದ್ದರಿಂದ ಭೂತಾದಿಸೂತ್ರದಿಂದಲೇ ಪಾದಾಭಿಧಾನವು ಸಿದ್ಧವಾಗುವಾಗ ಪುನಃ 'ಜ್ಯೋತಿಃಶ್ಚರಣಾಭಿಧಾನಾತ್' ಎಂಬ ಸೂತ್ರದಲ್ಲಿ ಚರಣಾಭಿಧಾನಶಬ್ದದಿಂದ ಅದನ್ನೇ (ಪಾದಾಭಿಧಾನವನ್ನೇ) ಹೇಳಿದರೆ ಪುನರುಕ್ತ-ವಾಗುತ್ತದೆ.

ಆಕ್ಷೇಪ - 'ಚರಣಾಭಿಧಾನಾತ್' ಎಂಬ ಸೂತ್ರದಿಂದ 'ಪಾದೋಸ್ಯ ಸರ್ವಾಭೂತಾನಿ' ಎಂಬ ಮಂತ್ರವಾಕ್ಯದಲ್ಲಿರುವ ಸರ್ವಭೂತಗಳ ಏಕಪಾದವು ಅಮೃತದ ತ್ರಿಪಾದವು ಹೇಳಲ್ಪಟ್ಟಿದೆ. 'ಭೂತಾದಿಪಾದ' ಇತ್ಯಾದಿ ಸೂತ್ರದಲ್ಲಿ 'ಸೈಷಾ ಚತುಷ್ಪದಾ' ಎಂಬ ಬ್ರಾಹ್ಮಣವಾಕ್ಯದಲ್ಲಿರುವ, ಭೂತ, ಪೃಥಿವೀ, ಶರೀರ, ಹೃದಯಗಳೆಂಬ ಪಾದವು ಹೇಳಲ್ಪಟ್ಟಿದೆ. ಅದು ಹೀಗೆ -- ಬ್ರಾಹ್ಮಣ-ವಾಕ್ಯದಲ್ಲಿ 'ಇದಂ ಸರ್ವಂ ಭೂತಂ' ಎಂದು ಭೂತವನ್ನು 'ಇಯಂ ಪೃಥಿವೀ' ಎಂಬಲ್ಲಿ ಪೃಥಿವಿ-ಯನ್ನು, 'ಯದಿದಂ ಪುರುಷೇ ಅಸ್ಮಿನ್ ಶರೀರಂ' ಎಂಬಲ್ಲಿ ಶರೀರವನ್ನು, 'ಯದಿದಂ ಅಸ್ಮಿನ್ನಂತಃಪುರುಷೇ ಹೃದಯಮ್' ಎಂಬಲ್ಲಿ ಹೃದಯವನ್ನು ಹೇಳಿ 'ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ' ಎಂದು ಇವುಗಳಿಗೆಲ್ಲಾ ಪಾದಸ್ವರೂಪವನ್ನು ವ್ಯಪದೇಶಿಸಲಾಗಿದೆ. ಆದ್ದರಿಂದ ಜ್ಯೋತಿ-ಸೂತ್ರದಲ್ಲಿ ಹೇಳಿದ ಚರಣಾಭಿಧಾನವೇ ಬೇರೆ ಭೂತಾದಿಸೂತ್ರದಲ್ಲಿ ಹೇಳಿದ ಪಾದಾಭಿಧಾನವೇ ಬೇರೆ. ಹೀಗಿರುವಾಗ ಪುನರುಕ್ತಿಯನ್ನು ಹೇಗೆ ಹೇಳುತ್ತೀರಿ?

ಸಮಾಧಾನ - ಇದು ತಪ್ಪು. 'ಚರಣಾಭಿಧಾನಾತ್' ಎಂಬ ಸೂತ್ರದಿಂದ 'ಪಾದೋಸ್ಯ ಸರ್ವಾ ಭೂತಾನಿ ತ್ರಿಪಾದಸ್ಯ' ಎಂಬ ಮಂತ್ರದಲ್ಲಿ ಎರಡುವಿಧ ಪಾದಗಳು ಹೇಳಲ್ಪಟ್ಟಿವೆ. ಇದನ್ನು ಸೂತ್ರ ಹೇಗೆ ಹೇಳುತ್ತಿದೆಯೋ ಅದರಂತೆ ಬ್ರಾಹ್ಮಣವಾಕ್ಯದಲ್ಲಿ ಹೇಳಲ್ಪಟ್ಟಿರುವ ಭೂತ, ಪೃಥಿವೀ ಮೊದಲಾದ ನಾಲ್ಕುವಿಧ ಪಾದಗಳನ್ನು ಇದೇ ಸೂತ್ರವೇ ಹೇಳಲು ಸಮರ್ಥವಾಗಿದೆ. ಬ್ರಾಹ್ಮಣ-ವಾಕ್ಯದಲ್ಲಿರುವ ಪಾದಾಭಿಧಾನಕ್ಕೋಸ್ಕರ ಪುನಃ ಭೂತಾದಿಸೂತ್ರದ ಅವಶ್ಯಕತೆ ಇಲ್ಲ. ಆದ್ದರಿಂದ ಭೂತಾದಿಸೂತ್ರಕ್ಕೆ ಪುನರುಕ್ತಿ ಬಾರದಿದ್ದರೂ ವೈಯ್ಯರ್ಥ್ಯ ಬರುತ್ತದೆ. ಅಷ್ಟೇ ಅಲ್ಲದೆ ನಿಮ್ಮ ಪಕ್ಷದಲ್ಲಿ ಭೂತಾದಿಗಳು ಪರಮಾತ್ಮನ ಪಾದಗಳಾಗಿವೆ ಎಂದರೆ ಭೂತಾದಿ ಸ್ವರೂಪನಾಗಿದ್ದಾನೆ ಎಂದರ್ಥ. ಆದ್ದರಿಂದ ಸರ್ವಾತ್ಮಕತ್ವವು ಬ್ರಹ್ಮನಿಗೆ ಚರಣಾಭಿಧಾನಶಬ್ದದಿಂದಲೇ ಸಿದ್ಧವಾಗಿದೆ. ಪುನಃ ಭೂತಾದಿ-ಸೂತ್ರವು ವ್ಯರ್ಥ. ಏಕೆಂದರೆ, ಭೂತಾದಿಸೂತ್ರದಲ್ಲಿ ಸರ್ವಪದಾರ್ಥಗಳಲ್ಲಿ ಏಕದೇಶವಾದ ಭೂತ-ಪೃಥಿವೀಶರೀರಹೃದಯಾತ್ಮಕತ್ವವಷ್ಟೇ ಹೇಳಲ್ಪಟ್ಟಿದೆ. ಸರ್ವಾತ್ಮಕತ್ವವು ಹೇಳಲ್ಪಟ್ಟಿಲ್ಲ.

### ಕಠಿಣಪದಾರ್ಥ

ಉಭಾಭ್ಯಾಂ = ಅದ್ವೈತಿಗಳು ಮತ್ತು ರಾಮಾನುಜರಿಂದ, ಲಾಘವಾರ್ಥಂ = ಚರಣಶಬ್ದಕ್ಕಿಂತ ಪಾದಶಬ್ದವು ಲಘುವಾದ್ದರಿಂದ; ಹಿ = ಯಾವಕಾರಣದಿಂದ; ತಸ್ಯ ಚ =

'ಪಾದೋಸ್ಯ' ಎಂಬ ವಾಕ್ಯದಲ್ಲಿ ಹೇಳಿದ್ದಕ್ಕೆ; ಬ್ರಾಹ್ಮಣವಾಕ್ಯಸ್ಥಂ = ಉಪನಿಷ-ದ್ವಾಕ್ಯದಲ್ಲಿರುವ;

**प्रकाशः – उभाभ्यामिति ॥ अद्वैतिरामानुजाभ्यामित्यर्थः** । तत्र सूत्रार्थविषय-वाक्ययोर्दूषणेनैवाधिकरणशरीरं दूषितं मन्वानः, प्रथमसूत्रार्थं निरसितुमनुवदति – **चरणेति** ॥ ननु न पादाभिधानं ''वि मे कर्णा' इति वाक्येऽस्तीत्यतो नेदमुदा-हरणमिति भावेनाह – **पादेति** ॥ 'चतुष्पदा' इति भूतादिसूत्रोक्तपादाभिधानभ्रान्तिं निरसितुं तद्विवृणोति – **तत्रेति ॥ लाघवार्थमिति** ॥ 'चरण' इत्युक्त्यपेक्षया 'पाद' इत्यस्य लघुत्वात् । श्रुतौ पादशब्दस्यैव श्रुतत्वादित्यर्थः । उदाहरणं चायुक्तमित्याह – **किञ्चास्मद्रीत्येति** ॥

ननु तत्रापि **''योऽयमन्तर्हृदये''** इति गुहानिहितत्वं श्रुतमिति चेन्न, ज्योतिः सन्निधानेऽश्रवणादिति वा, द्वयोर्गुहानिहितत्वयुक्तत्वेऽपि सूक्तस्थस्य चरणयुक्तत्वेन सूत्रानुगुण्यादिति वा तात्पर्यात् ॥ **किञ्चेति** ॥ हिशब्दो यस्मादित्यर्थे । श्लोकं विवृणोति – **पादोऽस्येति ॥ अन्यस्येति** ॥ अन्यस्य सत्त्वे हि तत्परत्वेन 'चरण' इत्यस्य न पौनरुक्त्यं नच तदस्तीत्यर्थः ॥ **तस्य चेति** ॥ ''पादोस्य'' इत्यनेनोक्त-स्येत्यर्थः । उक्तदोषपरिहारमाशङ्कते – **अथेति ॥ ब्राह्मणेति** ॥ उपनिषद्वाक्ये एवमुक्तौ ''चरणाभिधानात्'' इत्यस्य भूतसूत्रेण पौनरुक्त्याभावेऽप्यनेन तद्वैयर्थ्यं दुर्निरासमित्याह – **चरणाभिधानादित्यनेनेति** ॥ पररीत्या च भूतादिसूत्रवैयर्थ्यं द्रढयति – **अपि च त्वत्पक्ष इति** ॥ पादशब्दस्य स्वरूपार्थत्वोपगमादिति भावः ॥ **किं तदिति** ॥ **''पादोऽस्य सर्वा भूतानि''** इत्यसङ्कुचितसर्वपदेन कृत्स्नतादात्म्य-लाभेन भूतपृथिवीशरीरहृदयरूपतदेकदेशचतुष्टयतादात्म्यपरस्य भूतादिसूत्रस्य वैयर्थ्यमेवेत्यर्थः ।

ವಿವರಣೆ - ಅದ್ವೈತಿಗಳ ಹಾಗೂ ರಾಮಾನುಜರ ಸೂತ್ರಾರ್ಥ ಹಾಗೂ ವಿಷಯವಾಕ್ಯಗಳನ್ನು ದೂಷಣೆ ಮಾಡುವುದರಿಂದಲೇ ಅಧಿಕರಣಶರೀರವನ್ನು ದೂಷಿಸಿದಂತಾಗುತ್ತದೆ. ಆದ್ದರಿಂದ ಪ್ರಥಮ-ಸೂತ್ರಾರ್ಥವನ್ನು ನಿರಾಕರಿಸಲು 'ಚರಣ' ಇತ್ಯಾದಿ ಗ್ರಂಥದಿಂದ ಅವರ ಅಭಿಪ್ರಾಯವನ್ನು ಅನುವಾದ ಮಾಡುತ್ತಿದ್ದಾರೆ. 'ವಿ ಮೇ ಕರ್ಣಾ ಪತಯತಃ' ಎಂಬ ಶ್ರುತಿಯು ನಮ್ಮ ಮತದ ವಿಷಯವಾಕ್ಯ. ಇದರಲ್ಲಿ ಪಾದಾಭಿಧಾನವು ಕೇಳಿಸುತ್ತಿಲ್ಲ. ಆದ್ದರಿಂದ ಇದು ವಿಷಯವಾಕ್ಯವಲ್ಲವೆಂಬ ಅಭಿಪ್ರಾಯದಿಂದ ಪರರು 'ಅಥ ಯದತಃ' ಎಂಬುದನ್ನು ಉದಾಹರಿಸಿದ್ದಾರೆ. ಈ ವಿಷಯವನ್ನು ಗ್ರಂಥದಲ್ಲಿ 'ಪಾದಾಭಿಧಾನಂ ಚ' ಇತ್ಯಾದಿಯಾಗಿ ಹೇಳಿದ್ದಾರೆ.

'ಚತುಷ್ಪದಾ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಪಾದಾಭಿಧಾನವು ಭೂತಾದಿಸೂತ್ರವು ಹೇಳುತ್ತಿದೆ ಎಂಬ ಭ್ರಾಂತಿಯನ್ನು ನಿರಾಕರಿಸಲು 'ತತ್ರ' ಇತ್ಯಾದಿ ಗ್ರಂಥವು ಹೊರಟಿದೆ. ಜ್ಯೋತಿಸೂತ್ರದಲ್ಲಿ ಪಾದಾಭಿಧಾನವು ವಿವಕ್ಷಿತವಾದರೆ ಚರಣಶಬ್ದ ಹೇಳುವುದು ಅನಾವಶ್ಯಕ. ಚರಣಶಬ್ದವನ್ನು ತೆಗೆದು ಪಾದಶಬ್ದವನ್ನು ಉಲ್ಲೇಖಿಸಿದಾಗ ಸೂತ್ರವು ಲಘುವಾಗುತ್ತದೆ; ಚರಣಶಬ್ದ ಹೇಳಿದ್ದು ಗುರುಭೂತವಾಗಿದೆ ಮತ್ತು ಶ್ರುತಿಯಲ್ಲಿ ಪಾದಶಬ್ದವೇ ಕೇಳಿಸುತ್ತಿರುವುದರಿಂದ ಅದರ ಅನುಗಮಕ್ಕಾಗಿ ಸೂತ್ರದಲ್ಲಿಯೂ ಪಾದಶಬ್ದವನ್ನೇ ಹೇಳಬೇಕು. ಪರರು ಉದಾಹರಿಸಿದ ವಿಷಯವಾಕ್ಯವು ಸರಿಯಲ್ಲವೆಂದು 'ಕಿಂಚ ಅಸ್ಮದ್ ರೀತ್ಯಾ' ಇತ್ಯಾದಿ ಗ್ರಂಥವು ಹೊರಟಿದೆ. ನಾವು ಹೇಳುವ ವಿಷಯವಾಕ್ಯದಲ್ಲಿ ಗುಹಾನಿಹಿತತ್ವವು ಕೇಳಿಸುತ್ತಿರುವುದರಿಂದ ಆನಂದಮಯಾಧಿಕರಣವನ್ನು ಆಕ್ಷೇಪಿಸಬಹುದು. ಪರರ ವಿಷಯವಾಕ್ಯದಲ್ಲಿಯೂ 'ಯೋಽಯಂ ಅಂತರ್ಹೃದಯೇ' ಎಂದು ಗುಹಾನಿಹಿತತ್ವವು ಕೇಳಿಸುತ್ತಿದೆಯಲ್ಲ? ಎಂದು ಪ್ರಶ್ನಿಸ-ಬಹುದು ಆದರೆ, ಆ ಗುಹಾನಿಹಿತತ್ವವು ಜ್ಯೋತಿಃಶಬ್ದದ ಸನ್ನಿಧಾನದಲ್ಲಿ ಕೇಳಿಸುತ್ತಿಲ್ಲ. ಅಥವಾ ಛಾಂದೋಗ್ಯದಲ್ಲಿರುವ ಜ್ಯೋತಿ ಮತ್ತು ಋಙ್ಮಂತ್ರದಲ್ಲಿರುವ ಜ್ಯೋತಿ ಎರಡಲ್ಲಿಯೂ ಗುಹಾನಿಹಿತತ್ವವು ಕೇಳಿಸುತ್ತಿರುವುದರಿಂದ ಆನಂದಮಯಾಧಿಕರಣವನ್ನು ಆಕ್ಷೇಪಿಸಬಹುದು. ಆದರೆ ಹಿಂದೆ ಹೇಳಿದಂತೆ ಚರಣಾಭಿಧಾನವು ಸೂಕ್ತದ ಜ್ಯೋತಿಗಷ್ಟೇ ಬರುತ್ತದೆ. ಛಾಂದೋಗ್ಯದ ಜ್ಯೋತಿಗೆ ಪಾದಾಭಿಧಾನವು ಬರಬಹುದೇ ಹೊರತು ಚರಣಾಭಿಧಾನವು ಬರುವುದಿಲ್ಲ. ಹೀಗೆ ಸೂತ್ರಾನುಗುಣ್ಯವಿಲ್ಲದ ಕಾರಣ ಸೂಕ್ತವನ್ನೇ ತೆಗೆದುಕೊಳ್ಳಬೇಕು.

ಶ್ಲೋಕದಲ್ಲಿ ಹೇಳಿರುವ ಪುನರುಕ್ತಿಯನ್ನು ಸ್ವತಃ ಗ್ರಂಥಕಾರರೇ 'ಪಾದೋಸ್ಯ' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ. ಪಾದಾಭಿಧಾನಕ್ಕಿಂತ ಬೇರೆಯಾದ ಚರಣಾಭಿಧಾನವು ಇದ್ದಿದ್ದರೆ ಪುನರುಕ್ತಿಯು ಬರುತ್ತಿರಲಿಲ್ಲ. ಆದರೆ ಹಾಗಿಲ್ಲವೆಂದು 'ಅನ್ಯಸ್ಯ' ಎಂಬ ಗ್ರಂಥದಿಂದ ಹೇಳಿದ್ದಾರೆ. ಪುರುಷಸೂಕ್ತ-ದಲ್ಲಿರುವ 'ಪಾದೋಸ್ಯ ವಿಶ್ವಾ' ಎಂಬ ಮಂತ್ರದಿಂದ ಪಾದಾಭಿಧಾನವನ್ನು ತೆಗೆದುಕೊಳ್ಳಬೇಕು. ಅದನ್ನು ಭೂತಾದಿಸೂತ್ರದಲ್ಲಿ ಹೇಳಿದ್ದಾರೆ. ಪುನಃ ಚರಣಾಭಿಧಾನವನ್ನು ಹೇಳುವುದು ವ್ಯರ್ಥ. ಇನ್ನು ಜ್ಯೋತಿಸೂತ್ರವು ಮಂತ್ರದಲ್ಲಿರುವ ಪಾದಾಭಿಧಾನವನ್ನು ಹೇಳಿದೆ. ಛಾಂದೋಗ್ಯದಲ್ಲಿರುವ ಪಾದಾಭಿ-ಧಾನವನ್ನು ಭೂತಾದಿಸೂತ್ರವು ಹೇಳಿದೆ. ಆದ್ದರಿಂದ ಪುನರುಕ್ತಿ ಬರುವುದಿಲ್ಲವೆಂದು ಪರರು ಸಮಾಧಾನ ಹೇಳಬಹುದು. ಆದರೆ ಭೂತಾದಿಸೂತ್ರಕ್ಕೆ ವೈಯ್ಯರ್ಥ್ಯ ಬರುತ್ತದೆಂದು 'ಚರಣಾಭಿಧಾನಾತ್' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ. ಚರಣಾಭಿಧಾನಶಬ್ದದಿಂದ ಶಬ್ದಶಕ್ತಿಯ ಮೂಲಕ ಭೂತಾದಿ-ಪಾದತ್ವವನ್ನೇ ತೆಗೆದುಕೊಳ್ಳಬೇಕು, ಆವಾಗ ಭೂತಾದಿಸೂತ್ರವು ವ್ಯರ್ಥವಾಗುತ್ತದೆಂದು ಇದುವರೆಗೂ ಹೇಳಿದರು. ಈಗ ಅವರ ಮತದ ಪ್ರಕಾರವೇ ಚರಣಾಭಿಧಾನಶಬ್ದಕ್ಕೆ ಭೂತಾದಿಪಾದತ್ವವನ್ನು ಹೇಳಲಾಗ-ದೆಂದು 'ಅಪಿ ಚ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ. 'ಪಾದ'ಶಬ್ದಕ್ಕೆ ಸ್ವರೂಪಾರ್ಥವನ್ನು ಅದ್ವೈತಿಗಳು ಅಂಗೀಕರಿಸಿದ್ದಾರೆ. ಆವಾಗ 'ಪಾದೋಸ್ಯ ಸರ್ವಾ ಭೂತಾನಿ' ಎಂಬಲ್ಲಿರುವ ಅಸಂಕುಚಿತ ಸರ್ವಪದಕ್ಕೆ ಸಕಲತಾದಾತ್ಮ್ಯವನ್ನು ಹೇಳಿದಂತಾಯಿತು. ಪುನಃ ಭೂತಾದಿಸೂತ್ರವು ಭೂತ, ಪೃಥಿವಿ, ಶರೀರ, ಹೃದಯವೆಂಬ ತದೇಕದೇಶಕ್ಕೆ ತದಾತ್ಮಕತ್ವವನ್ನು ಹೇಳುವುದು ವ್ಯರ್ಥ.

ಗಾಯತ್ರ್ಯಧಿಕರಣ-(೧।೧।೧೧)

**गुरुराजीयम् – तत्र लाघवार्थमिति ॥** चरणशब्दस्य भक्षणगमनाचारपादाद्यनेकार्थोपस्थापकत्वेन पादशब्दवज्खडित्यवयवस्वरूपान्यतरार्थोपस्थापकत्वाभावेन प्रतीतिगौरवपरिहारार्थमित्यर्थः । न तु शब्दतो लाघवार्थम् । पर्यायेषु लाघवगौरवचिन्ता न क्रियत इति न्यायात् । नन्वथ यदत इति वाक्योदाहरणेपि अस्मिन्नपि वाक्येऽन्तः पुरुषे ज्योतिरिति हृदयनिहितत्वगुहानिहितत्वस्योक्तत्वेनानन्दमयाधिकरणाक्षेपः सम्भवति । अत्र तस्य ज्योतिषोऽब्रह्मत्वेन तन्निष्ठस्य गुहानिहितत्वस्यान्यनिष्ठत्वापत्त्याऽऽनन्दमयोक्तस्य गुहानिहितत्वस्याप्यन्यनिष्ठत्वस्यादित्यानन्दमयोप्यन्य एव स्यादिति । तथाचानुपपन्नमेतदित्यरुचेराह – **किञ्चेति ॥**

## ಸಾರ

ಇಲ್ಲಿಯ ತನಕ ನಮ್ಮ ಪ್ರಕಾರ ಸೂತ್ರಗಳನ್ನು ವ್ಯಾಖ್ಯಾನಿಸಿದಂತಾಯಿತು. ಈಗ ಅದ್ವೈತಿಗಳ ಮತ್ತು ರಾಮಾನುಜರ ಸೂತ್ರವ್ಯಾಖ್ಯಾನವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ. ಕ್ರಮವಾಗಿ ಒಂದೊಂದೇ ಸೂತ್ರಾರ್ಥವನ್ನು ನಿರಾಕರಿಸಲು ಮೊದಲು ಜ್ಯೋತಿಸೂತ್ರಾರ್ಥವನ್ನು ಅನುವಾದ ಮಾಡಿದ್ದಾರೆ. ನಾಲ್ಕೂ ಸೂತ್ರಗಳು ಒಂದೇ ಅಧಿಕರಣ. ಜ್ಯೋತಿಸೂತ್ರದಲ್ಲಿರುವ ಚರಣಾಭಿಧಾನಶಬ್ದಕ್ಕೆ ಪಾದಾಭಿಧಾನ ಎಂದರ್ಥ. 'ಪಾದೋಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ' ಎಂಬ ಛಾಂದೋಗ್ಯವು ಇದನ್ನು ವಿವರಿಸಿದೆ. ಇಷ್ಟು ಇವರ ಅಭಿಪ್ರಾಯ.

ಇವರ ಸೂತ್ರವ್ಯಾಖ್ಯಾನ ಸರಿಯಿಲ್ಲ. ಹಾಗಾದಲ್ಲಿ ಪಾದಶಬ್ದವನ್ನೇ ಜ್ಯೋತಿಸೂತ್ರದಲ್ಲಿ ಹೇಳಬೇಕಿತ್ತು. ಇದರಿಂದ ಸೂತ್ರವು ಲಘುವಾಗುತ್ತದೆ ಮತ್ತು ಶ್ರುತಿಯ ಅನುಗಮವನ್ನೂ ಹೊಂದುತ್ತದೆ. ನಮ್ಮ ವಿಷಯವಾಕ್ಯವನ್ನು ವಿವಕ್ಷಿಸಿದಾಗ 'ಹೃದಯ ಆಹಿತಂ ಯತ್' ಎಂದು ಗುಹಾನಿಹಿತತ್ವವು ಕೇಳಿಸುತ್ತಿದೆ. ಇದರಿಂದ ಆನಂದಮಯಾಧಿಕರಣವನ್ನು ಆಕ್ಷೇಪಿಸಿದಂತಾಗಿ ಸಂಗತಿಯನ್ನು ಸುಲಭವಾಗಿ ಹೇಳಬಹುದು. ಮತ್ತು 'ಪಾದೋಸ್ಯ ವಿಶ್ವಾ ಭೂತಾನಿ' ಎಂಬ ಹಿಂದಿನ ವಾಕ್ಯದಲ್ಲಿ ಹೇಳಿದ ಪಾದಾಭಿಧಾನವನ್ನೇ ಜ್ಯೋತಿರ್ವಾಕ್ಯ ಹೇಳುತ್ತಿದೆ. ಭೂತಾದಿಸೂತ್ರವು ಇದನ್ನೇ ಹೇಳುತ್ತಿರುವಾಗ ಜ್ಯೋತಿಸೂತ್ರವು ಪುನರುಕ್ತವಾಗುತ್ತದೆ. 'ತ್ರಿಪಾದಸ್ಯಾಮೃತಂ ದಿವಿ' ಎಂಬಲ್ಲಿ ಸರ್ವಭೂತಗಳು ಒಂದು ಪಾದ. ಅಮೃತವಾದವು ಉಳಿದ ಮೂರು ಪಾದಗಳೆಂದು ಜ್ಯೋತಿಸೂತ್ರದ ವಿಷಯವಾಕ್ಯದಲ್ಲಿ ಕೇಳಿಸುತ್ತಿದೆ. ಆದರೆ ಭೂತಾದಿಸೂತ್ರದ ವಿಷಯವಾಕ್ಯವೆನಿಸಿದ ಬ್ರಾಹ್ಮಣದಲ್ಲಿ ಭೂತ, ಪೃಥಿವೀ ಶರೀರ, ಹೃದಯಗಳನ್ನು ಪಾದಗಳೆನ್ನಲಾಗಿದೆ. ಆದ್ದರಿಂದ ಪುನರುಕ್ತಿಗೆ ಅವಕಾಶವಿಲ್ಲ ಎನ್ನಬಾರದು. ಏಕೆಂದರೆ ಚರಣಾಭಿಧಾನಶಬ್ದಕ್ಕೆಸರ್ವಭೂತ ಮತ್ತು ಅಮೃತಗಳ ಪಾದವೆಂಬ ಅರ್ಥವನ್ನು ಚರಣಾಭಿಧಾನಶಬ್ದ ಹೇಳಿದ ಮೇಲೆ ಭೂತ ಪೃಥಿವೀ ಮೊದಲಾದ ಅರ್ಥವನ್ನು ಚರಣಾಭಿಧಾನ ಶಬ್ದಕ್ಕೆ ಹೇಳಿದರೆ ಏನು ತೊಂದರೆ? ಅಷ್ಟೇ ಅಲ್ಲದೆ ಚರಣಾಭಿಧಾನಶಬ್ದದಿಂದಲೇ ಸರ್ವಾತ್ಮಕತ್ವವು ತಿಳಿಯುವಾಗ ಪುನಃ ತದೇಕದೇಶವಾದ ಭೂತಪೃಥಿವ್ಯಾದಿಗಳಿಗೆ ತದಾತ್ಮಕತ್ವ ಹೇಳುವುದರಲ್ಲಿ ಅರ್ಥವಿಲ್ಲ.

## तात्पर्यचन्द्रिका

किञ्च 'चतुष्पदा' इत्यत्र चतुश्शब्दो न भूतादिपरः, पूर्ववाक्ये भूतादिवत् ''वाग्वै गायत्री वाग्वा इदं सर्वम्'' इति वाचः, ''अस्मिन् हीमे प्राणाः प्रतिष्ठिताः'' इति प्राणानां चोक्त्या भूतादीनां षट्त्वेन चतुष्ट्वायोगात् । अत एव श्रुतौ 'षड्विधा' इत्युक्तम् ।

नच वाच्यं भूतादीनां वाक्प्राणरहितानां चतुर्णां पादत्वं, तत्सहितानां तु षण्णां विधात्वमिति, पादशब्देन तदात्मकत्वविवक्षायां वाक्प्राणयोरपि तदात्मकत्वात् विधाषट्कान्तर्गतस्य भूतादिचतुष्टयस्य पृथक्कृत्य पादत्वोक्तेर्निष्फलत्वात् । उपासनार्थं ब्रह्मणि भूतादीनां चरणत्वारोपश्चेत्, गायत्र्याख्यछन्दस्येव स स्यादिति गायत्री ब्रह्मेति सिद्धान्तासिद्धिः ।

तस्मात् ''सैषा'' इत्यत्र न पूर्ववाक्यस्थानां भूतादीनां पादत्वमुच्यते, किन्तु षाड्विध्यमनूद्य चतुष्पदत्वं विधाय तद्विवरणाय ''पादोऽस्य'' इत्यादि ऋगुदाहृता । अन्यथा मन्त्रब्राह्मणयोः भिन्नार्थत्वात् ब्राह्मणोक्ते ''तदेतदृचाऽभ्युक्तम्'' इति मन्त्रसम्मतिर्न स्यात् । ''त्रिपादस्यामृतं दिवि पादोऽस्य'' इति पादशब्दनिर्दिष्टे चतुष्टये सति तदनिर्दिष्टस्य भूतपृथिव्यादेः पादचतुष्टयत्वायोगाच्च । 'दिवि' 'दिवः' इति च विरुद्धविभक्तिसहितद्युप्रातिपदिकार्थसम्बद्धस्यैक्यं, तद्रहितचतुस्सङ्ख्यासम्बद्धानां तु मन्त्रब्राह्मणस्थपादानां भेद इत्यस्यात्यन्तायुक्तत्वाच्च ।

ಅನುವಾದ - ಮತ್ತು 'ಸೈಷಾ ಚತುಷ್ಪದಾ' ಎಂಬ ಶ್ರುತಿಯಲ್ಲಿರುವ ಚತುಃಶಬ್ದಕ್ಕೆ ಭೂತಾದಿಗಳೆಂದು ಅರ್ಥವೇ ಅಲ್ಲ. ಹಿಂದಿನ ವಾಕ್ಯದಲ್ಲಿ ಭೂತಾದಿಗಳು ಪ್ರಸಕ್ತವಾದಂತೆ ''ವಾಗ್ವೈ ಗಾಯತ್ರೀ, ವಾಗ್ವಾ ಇದಂ ಸರ್ವಮ್' ಎಂದು ವಾಕ್ ಪ್ರಸಕ್ತವಾಗಿದೆ. 'ಅಸ್ಮಿನ್ ಹೀಮೇ ಪ್ರಾಣಾ ಪ್ರತಿಷ್ಠಿತಾಃ' ಎಂದು ಪ್ರಾಣಗಳು ಪ್ರಸಕ್ತವಾಗಿವೆ. ಆದ್ದರಿಂದ ಭೂತ, ಪೃಥಿವಿ, ಶರೀರ, ಹೃದಯಗಳ ಜೊತೆಗೆ ವಾಕ್ ಮತ್ತು ಪ್ರಾಣಗಳನ್ನು ಸೇರಿಸಿದಾಗ ಆರು ಪಾದಗಳಾಗುತ್ತವೆ ಹೊರತು ನಾಲ್ಕು ಪಾದಗಳಾಗುವುದಿಲ್ಲ. ಆದ್ದರಿಂದಲೇ ಶ್ರುತಿಯಲ್ಲಿ 'ಷಡ್ವಿಧಾ' ಎಂದು ಹೇಳಲಾಗಿದೆ.

ವಾಕ್ ಮತ್ತು ಪ್ರಾಣಗಳನ್ನು ಬಿಟ್ಟಾಗ ನಾಲ್ಕು ಪಾದಗಳಾಗುತ್ತವೆ. ಈ ವಿವಕ್ಷೆಯಿಂದ ಶ್ರುತಿಯು ಚತುಷ್ಪದತ್ವವನ್ನು ಹೇಳಿ; ವಾಕ್ ಪ್ರಾಣಗಳನ್ನು ಸೇರಿಸಿದಾಗ ಉಂಟಾಗುವ ಆರು ಪಾದಗಳನ್ನು ಷಡ್ವಿಧಾ ಎಂಬುದರಿಂದ ಹೇಳಿದೆ ಎಂದು ಶಂಕಿಸಬಾರದು. ಏಕೆಂದರೆ, ಪಾದಶಬ್ದದಿಂದ ತದಾತ್ಮಕತ್ವವನ್ನು ನೀವು ವಿವಕ್ಷಿಸುತ್ತಿದ್ದೀರಿ. ಆವಾಗ ವಾಕ್ ಮತ್ತು ಪ್ರಾಣಗಳಿಗೂ ತದಾತ್ಮಕತ್ವವನ್ನು ಹೇಳಲೇ ಬೇಕು. ಆರು ಪದಾರ್ಥಗಳು ಬ್ರಹ್ಮಾತ್ಮಕವಾಗಿರುವಾಗ ನಾಲ್ಕು ಪದಾರ್ಥಗಳನ್ನಷ್ಟೇ ಪ್ರತ್ಯೇಕ ಮಾಡಿ ಬ್ರಹ್ಮಾತ್ಮಕತ್ವವನ್ನು ಹೇಳುವುದು ವ್ಯರ್ಥ. ಉಪಾಸನೆಗೋಸ್ಕರ ಬ್ರಹ್ಮನಲ್ಲಿ ಭೂತಾದಿಗಳನ್ನು ಚರಣ ಎಂದು ಆರೋಪಿಸಲಾಗಿದೆ ಎನ್ನಬಾರದು. ಹಾಗಾದಲ್ಲಿ ಗಾಯತ್ರೀ ಎಂಬ ಛಂದಸ್ಸಿನಲ್ಲಿಯೇ ಇಂತಹ ಚತುಷ್ಪದತ್ವವನ್ನು ಆರೋಪಿಸಲು ಬರುತ್ತದೆ. ಆವಾಗ ಗಾಯತ್ರಿಯು ಬ್ರಹ್ಮ ಎಂಬ ಸಿದ್ಧಾಂತವು ನಿರ್ಣಯವಾಗುವುದಿಲ್ಲ. ಆದ್ದರಿಂದ 'ಸೈಷಾ ಚತುಷ್ಪದಾ' ಎಂಬ ಶ್ರುತಿಯಲ್ಲಿ ಪೂರ್ವ-ವಾಕ್ಯದಲ್ಲಿ ಪ್ರಸಕ್ತವಾದ ಭೂತಾದಿಗಳಿಗೆ ಪಾದತ್ವವನ್ನು ಹೇಳುತ್ತಿಲ್ಲ. ಹೊರತು ಭಗವಂತನ ಆರು ರೂಪಗಳನ್ನು ಅನುವಾದ ಮಾಡಿ ಬೇರೆ ನಾಲ್ಕು ರೂಪಗಳನ್ನು ವಿಧಾನ ಮಾಡಲಾಗಿದೆ. ಇದರ ವಿವರಣೆಗಾಗಿ 'ಪಾದೋಸ್ಯ ಸರ್ವಾ ಭೂತಾನಿ' ಎಂಬ ಪುರುಷಸೂಕ್ತವು ಹೊರಟಿದೆ. ಹೀಗೆ ಒಪ್ಪದಿದ್ದರೆ ಮಂತ್ರವಾಕ್ಯದ ಅರ್ಥವೇ ಬೇರೆ ಬ್ರಾಹ್ಮಣವಾಕ್ಯದ ಅರ್ಥವೇ ಬೇರೆ ಎಂದಾಗಿ ಬ್ರಾಹ್ಮಣವಾಕ್ಯದಲ್ಲಿ 'ತದೇತದೃಚಾಭ್ಯುಕ್ತಮ್' (ಇದನ್ನೇ ಋಙ್ಮಂತ್ರ ಹೇಳಿದೆ) ಎಂದು ಮಂತ್ರವನ್ನು ಸಂವಾದಿಸಿದ್ದು ತಪ್ಪಾಗುತ್ತದೆ.

ಮತ್ತು 'ತ್ರಿಪಾದಸ್ಯಾಮೃತಂ ದಿವಿ ಪಾದೋಸ್ಯ' ಎಂಬಲ್ಲಿರುವ ಪಾದಶಬ್ದದಿಂದ ನಾಲ್ಕು ಪಾದ-ಗಳು ನಿರ್ದೇಶಿಸಲ್ಪಟ್ಟಿವೆ ಎಂದು ಹೇಳಲು ಬರುವಾಗ ಪಾದಶಬ್ದದಿಂದ ನಿರ್ದೇಶಿಲಸ್ಪಡದ ಭೂತ-ಪೃಥಿವಿಶರೀರಹೃದಯಗಳಿಗೆ ಪಾದಚತುಷ್ಟಯತ್ವನ್ನು ಹೇಳುವುದು ತಪ್ಪು. ಮತ್ತು 'ತ್ರಿಪಾದಸ್ಯಾಮೃತಂ ದಿವಿ' ಮತ್ತು 'ಪರೋ ದಿವಃ' ಎಂಬಲ್ಲಿ ವಿರುದ್ಧವಿಭಕ್ತಿಗಳೆನಿಸಿದ ಸಪ್ತಮೀ ಮತ್ತು ಪಂಚಮೀಗಳು ಇಲ್ಲಿ ಕೇಳಿಸುತ್ತಿವೆ. ವಿರುದ್ಧವಿಭಕ್ತಿಸಹಿತವಾದದ್ದು ದ್ಯುಶಬ್ದದ ಪ್ರಾತಿಪದಿಕಾರ್ಥ(ದ್ಯುಲೋಕ). ಇದರ ಸಂಬಂಧವು ಜ್ಯೋತಿ ಹಾಗೂ ಗಾಯತ್ರಿಗಳಲ್ಲಿ ಕೇಳಿಸುತ್ತಿದೆ. ಆದ್ದರಿಂದ ಗಾಯತ್ರೀ ಮತ್ತು ಜ್ಯೋತಿಗಳಿಗೆ ಐಕ್ಯವನ್ನು ಹೇಳಲು ಸಾಧ್ಯವಿಲ್ಲ. ಆದರೆ ನೀವು ಐಕ್ಯವನ್ನು ಹೇಳುತ್ತಿದ್ದೀರಿ. ಮತ್ತು ವಿರುದ್ಧವಿಭಕ್ತಿ ಇಲ್ಲದೆ ಸಮಾನವಾದ ಚತುಃಸಂಖ್ಯಾದಿಂದ ಕೂಡಿರುವ ಮಂತ್ರಬ್ರಾಹ್ಮಣಗಳ ಪಾದಗಳಿಗೆ ಅಭೇದವನ್ನು ಹೇಳಬಹುದು. ಆದರೆ ನೀವು ಭೇದವನ್ನು ಹೇಳುತ್ತಿದ್ದೀರಿ. ಹೀಗೆ ವಿರುದ್ಧವಾದ ನಿಲುವುಳ್ಳ ಪರರ ವಾದವು ಅತ್ಯಂತ ಅಯುಕ್ತವಾಗಿದೆ.

### ಕಠಿಣಪದಾರ್ಥ

ಅತಏವ - ನಾಲ್ಕು ಪಾದಗಳು ಅಯುಕ್ತವಾದ್ದರಿಂದಲೇ; ತತ್ಸಹಿತಾನಾಂ = ವಾಕ್, ಪ್ರಾಣಗಳಿಂದ ಸಹಿತವಾದ, ಷಣ್ಣಾಂ ವಿಧತ್ವಂ = ಆರುಪ್ರಕಾರಗಳು, ತಸ್ಮಾತ್ =

ಅನುವಾದವು ಕೂಡದ ಕಾರಣ, ಅನ್ಯಥಾ = ಭೂತಪೃಥಿವ್ಯಾದಿಗಳಿಗೂ ಚತುಷ್ಪದತ್ವವನ್ನು ಹೇಳಿದರೆ, ತದನಿರ್ದಿಷ್ಟಸ್ಯ = ಪಾದಶಬ್ದದಿಂದ ನಿರ್ದೇಶಮಾಡಲ್ಪಡದ, ದ್ಯುಪ್ರಾತಿಪದಿಕಾರ್ಥ = ದ್ಯುಲೋಕ, ತದ್ರಹಿತ = ವಿರುದ್ಧವಿಭಕ್ತಿಗಳಿಂದ ರಹಿತವಾದ.

**प्रकाशः** – अभ्युपेत्य मन्त्रब्राह्मणयोः पादाभिधानभेदं दूषणद्वयं अभ्यधायि । वस्तुतस्तु तस्य भेद एव नास्ति, तथात्वे संवादित्वेन मन्त्रोदाहरणायोगात् । तथाच सुस्थं पौनरुक्त्यमित्याशयेन **''सैषा षड्विधा चतुष्पदा''** इति ब्राह्मणगतस्य **''पादोऽस्य''** इति मन्त्रगतस्य च पादाभिधानस्य ऐक्यं वक्तुं पीठमारचयति – **किञ्चेत्यादिना तस्मादित्यन्तेन ।**

**भूतादीति ॥** भूतपृथिवीशरीरहृदयपरः । कुत इत्यतो वाक्प्राणयोरपि प्रकृतत्वादित्याह – **पूर्वेति ॥ षट्त्वेनेति ॥** वाग्भूतपृथिवीशरीरप्राणहृदयानां क्रमेण प्रकृतत्वादित्यर्थः । ननु न निष्फलत्वं, ब्रह्मणि भूतपृथिवीशरीरहृदयरूपचतुष्टयात्मकत्वोपासनाय तदुक्तेरित्यत आह – **उपासनार्थमिति ॥** 'सः' आरोपः । असदुपासनाया अविशिष्टत्वादिति भावः । कथं तर्हि 'चतुष्पदा' इत्यस्य सङ्गतिरित्यत आह – **तस्मादिति ॥** अनुवादायोगादित्यर्थः । एतेन ''प्रागुक्तषड्विधत्वमनूद्य चतुष्पदत्वं व्यपदिश्य'' इत्यादिटीका विवृता ॥ **अन्यथेति ॥** भूतपृथिव्यादेरेव चतुष्पदत्वोक्तावित्यर्थः । न युक्तं च भूतादेः पादचतुष्टयत्वकथनमित्याह – **त्रिपादस्येति ॥ तदिति ॥** पादशब्दनिर्दिष्टस्येत्यर्थः ॥ **दिवीति ॥** द्युस्थस्य दिवः परस्य च द्युप्रातिपदिकार्थसम्बन्धितयैकत्वेन प्रत्यभिज्ञायमानत्वस्योपदेशसूत्रे सिद्धान्तितत्वादिति भावः ।

ವಿವರಣೆ - ಇಲ್ಲಿಯ ತನಕ 'ತ್ರಿಪಾದಸ್ಯಾಮೃತಂ ದಿವಿ' ಎಂಬ ಮಂತ್ರವಾಕ್ಯದಲ್ಲಿ ಕೇಳಿಸುತ್ತಿರುವ ಪಾದಾಭಿಧಾನವೇ ಬೇರೆ; 'ಸೈಷಾ ಚತುಷ್ಪದಾ' ಎಂಬ ಬ್ರಾಹ್ಮಣವಾಕ್ಯದಲ್ಲಿ ಕೇಳಿಸುತ್ತಿರುವ ಪಾದಾಭಿಧಾನವೇ ಬೇರೆ ಎಂಬುದನ್ನು ಅಂಗೀಕರಿಸಿ ಪರರಿಗೆ ಪುನರುಕ್ತಿ ಮತ್ತು ವೈಯ್ಯರ್ಥ್ಯವೆಂಬ ಎರಡು ದೋಷಗಳನ್ನು ಗ್ರಂಥಕಾರರು ಹೇಳಿದರು. ಪ್ರಕೃತ ಮಂತ್ರಬ್ರಾಹ್ಮಣಗಳಲ್ಲಿರುವ ಪಾದಾಭಿಧಾನಕ್ಕೆ ಭೇದವೇ ಇರುವುದಿಲ್ಲ. ಹಾಗೇನಾದರೂ ಭೇದವಿದ್ದರೆ ಸಂವಾದಿಯಾಗಿ ಮಂತ್ರವನ್ನು ಉದಾಹರಿಸಿದ್ದೇ ತಪ್ಪಾಗುತ್ತದೆ. ಆದ್ದರಿಂದ ಪುನರುಕ್ತಿಯು ತಪ್ಪಿದ್ದಲ್ಲ. ಈ ಅಭಿಪ್ರಾಯದಿಂದ 'ಸೈಷಾ ಚತುಷ್ಪದಾ ಷಡ್ವಿಧಾ' ಎಂಬ ಬ್ರಾಹ್ಮಣದಲ್ಲಿರುವ ಮತ್ತು 'ಪಾದೋಸ್ಯ' ಎಂಬ ಮಂತ್ರದಲ್ಲಿರುವ ಪಾದಾಭಿಧಾನಕ್ಕೆ ಐಕ್ಯವನ್ನು ಹೇಳಲು 'ಕಿಂಚ' ಇತ್ಯಾದಿ ಗ್ರಂಥದಿಂದ 'ತಸ್ಮಾತ್' ಎಂಬ ಗ್ರಂಥದವರೆಗೆ ಪೀಠಿಕೆಯನ್ನು ರಚಿಸುತ್ತಿದ್ದಾರೆ.

ಶ್ರುತಿಯಲ್ಲಿ ಭೂತ, ಪೃಥಿವೀ, ಶರೀರ, ಹೃದಯ, ವಾಕ್, ಪ್ರಾಣಗಳೆಂದು ಆರು ಪದಾರ್ಥಗಳು ಪ್ರಕೃತವಾಗಿರುವಾಗ ವಾಕ್ ಪ್ರಾಣಗಳನ್ನು ಬಿಟ್ಟು ಉಳಿದ ನಾಲ್ಕಕ್ಕೆ ತದಾತ್ಮಕತ್ವ ಹೇಳುವುದು ವ್ಯರ್ಥವೆಂದು

'ಭೂತಾದಿಚತುಷ್ಟಯಸ್ಯ' ಎಂಬ ಗ್ರಂಥದಲ್ಲಿ ಹೇಳಿದ್ದಾರೆ. ಆರು ಪದಾರ್ಥಗಳಲ್ಲಿ ನಾಲ್ಕನ್ನಷ್ಟೇ ವಿವಕ್ಷಿಸಿದ್ದು ವ್ಯರ್ಥವಲ್ಲ; ಏಕೆಂದರೆ ಬ್ರಹ್ಮನನ್ನು ಭೂತ, ಪೃಥಿವೀ, ಶರೀರ, ಹೃದಯವೆಂದು ನಾಲ್ಕು ರೂಪದಿಂದ ಉಪಾಸನೆ ಮಾಡುವುದಕ್ಕಾಗಿ ಹಾಗೆ ಪ್ರತ್ಯೇಕ ಮಾಡಲಾಗಿದೆ ಎಂಬ ಪ್ರಶ್ನೆಗೆ 'ಉಪಾಸನಾರ್ಥಂ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಅಸದುಪಾಸನೆಯು ನಿಷ್ಫಲ ಮತ್ತು ಅನಾದರಣೀಯವೆಂದು ಬೇರೆಡೆ ಸಮರ್ಥಿಸಿದ್ದೇವೆ. ಹಿಂದಿನ ಆಕಾಶಾದ್ಯಧಿಕರಣಗಳಲ್ಲಿ ಅದ್ವೈತಿಗಳಿಗೆ ಹೇಳಿದ ಅಸದುಪಾಸನೆಯೆಂಬ ದೋಷವು ಈ ಅಧಿಕರಣದಲ್ಲಿಯೂ ಬರುತ್ತದೆಂದು ತಿಳಿಯಬೇಕು. ಹಾಗಾದರೆ ಚತುಷ್ಪದಾ ಎಂಬ ಪದವು ಹೇಗೆ ಸಂಗತವಾಗುತ್ತದೆ? ಎಂಬುದಕ್ಕೆ 'ತಸ್ಮಾತ್' ಎಂಬುದರಿಂದ ಉತ್ತರಿಸಿದ್ದಾರೆ.

ನಮ್ಮ ಸಿದ್ಧಾಂತದಲ್ಲಿ 'ತ್ರಿಪಾದಸ್ಯಾಮೃತಂ ದಿವಿ' ಎಂಬ ಮಂತ್ರವಾಕ್ಯದಲ್ಲಿ ಸರ್ವಭೂತಗಳು ಭಗವಂತನ ಭಿನ್ನಾಂಶ. ಶ್ವೇತದ್ವೀಪ, ಅನಂತಾಸನ, ವೈಕುಂಠಗಳಲ್ಲಿರುವ ಮೂರು ರೂಪಗಳು ಸ್ವರೂಪಾಂಶ. ಒಟ್ಟು ಭಗವಂತನ ನಾಲ್ಕು ರೂಪಗಳನ್ನು ಈ ಮಂತ್ರವಾಕ್ಯವು ಹೇಳಿದೆ. ಆದರೆ ಬ್ರಾಹ್ಮಣವಾಕ್ಯವು ಈ ರೂಪವನ್ನು ಹೇಳದೆ ಬೇರೆಯೇ ಆದ ವಾಕ್, ಭೂತ, ಪೃಥಿವೀ, ಶರೀರ, ಪ್ರಾಣ, ಹೃದಯ ಎಂಬ ಆರು ರೂಪಗಳನ್ನು ವರ್ಣಿಸಿದೆ. 'ಸೈಷಾ ಚತುಷ್ಪದಾ' ಎಂಬ ಮಂತ್ರವು ಹಿಂದೆ ಹೇಳಿದ ಆರು ರೂಪಗಳನ್ನು ಅನುವಾದ ಮಾಡಿ ಮಂತ್ರವಾಕ್ಯದಲ್ಲಿ ಹೇಳಲ್ಪಟ್ಟ ನಾಲ್ಕು ರೂಪಗಳನ್ನೂ ಉಲ್ಲೇಖಿಸಿದೆ. ಶ್ರುತಿಗೆ ಹೀಗೆಯೇ ಅರ್ಥ ಹೇಳಬೇಕು ಹೊರತು ಪರರು ಹೇಳುವ ಅರ್ಥವು ಅತ್ಯಂತ ಗೊಂದಲಮಯವಾಗಿದೆ. ಇದರಿಂದ 'ಪ್ರಾಗುಕ್ತಷಡ್ವಿಧತ್ವಮನೂದ್ಯ ಚತುಷ್ಪದತ್ವಂ ವ್ಯಪದಿಶ್ಯ' ಎಂಬ ಟೀಕೆಯನ್ನು ಅನುವಾದಿಸಿದಂತಾಯಿತು. ಮತ್ತು ಪರರಿಗೆ ಭೂತಾದಿಗಳನ್ನು ಪಾದಚತುಷ್ಟಯವೆಂದೇ ಹೇಳಲಾಗದೆಂದು 'ತ್ರಿಪಾದಸ್ಯ' ಎಂಬ ಗ್ರಂಥದಿಂದ ಸಮರ್ಥಿಸಿದ್ದಾರೆ.

ದ್ಯುಶಬ್ದದ ಪ್ರಾತಿಪದಿಕಾರ್ಥ ದ್ಯುಲೋಕ. ಸೈಷಾ ಚತುಷ್ಪದಾ ಎಂಬಲ್ಲಿ ಕೇಳಿಸಿದ ಗಾಯತ್ರಿಯಲ್ಲಿ ಈ ದ್ಯುಲೋಕದ ಸಂಬಂಧವು ಕೇಳಿಸುತ್ತಿದೆ. ಅಷ್ಟೇ ಅಲ್ಲದೆ 'ತ್ರಿಪಾದಸ್ಯಾಮೃತಂ ದಿವಿ' ಎಂಬಲ್ಲಿ ಕೇಳಿಸುತ್ತಿರುವ ಜ್ಯೋತಿಯಲ್ಲಿಯೂ ದ್ಯುಲೋಕದ ಸಂಬಂಧವು ಕೇಳಿಸುತ್ತಿದೆ. ಆದರೆ 'ಅಥ ಯದತಃ' ಎಂಬಲ್ಲಿ ದಿವಃ ಎಂದು ಪಂಚಮೀ ವಿಭಕ್ತಿ ಇದೆ. 'ತ್ರಿಪಾದಸ್ಯಾಮೃತಂ ದಿವಿ' ಎಂಬಲ್ಲಿ ಸಪ್ತಮೀ ವಿಭಕ್ತಿ ಇದೆ. ಹೀಗೆ ದ್ಯುಶಬ್ದದ ಪ್ರಾತಿಪದಿಕಾರ್ಥವು ವಿರುದ್ಧವಿಭಕ್ತಿಗಳಿಂದ ಕೂಡಿದೆ. ವಿರುದ್ಧವಿಭಕ್ತಿಗಳಿಂದ ಕೂಡಿದ್ದರಿಂದ ದ್ಯುಶಬ್ದದ ಪ್ರಾತಿಪದಿಕಾರ್ಥದ ಸಂಬಂಧವನ್ನು ಹೊಂದಿದ ಗಾಯತ್ರೀ ಮತ್ತು ಜ್ಯೋತಿಗಳಿಗೆ ಅಭೇದವನ್ನು ಹೇಳಲು ಸಾಧ್ಯವಿಲ್ಲ. ಆದರೆ ಅದ್ವೈತಿಗಳು ಅಭೇದವನ್ನು ಇಲ್ಲಿ ಹೇಗೆ ಹೇಳಿದ್ದಾರೆಂಬುದೇ ಪ್ರಶ್ನೆ. ಅಷ್ಟೇ ಅಲ್ಲದೆ ಎಲ್ಲಿ ವಿರುದ್ಧವಿಭಕ್ತಿಗಳಿಲ್ಲದೆ ಸಮಾನವಾಗಿ ಚತುಃಸಂಖ್ಯಾ ಕೇಳಿಸುತ್ತಿದೆಯೋ ಅಂತಹ ಸ್ಥಳದಲ್ಲಿ ಐಕ್ಯವನ್ನು ಹೇಳಬಹುದು. ಆದರೆ ಅದ್ವೈತಿಗಳು ಮಂತ್ರವಾಕ್ಯದಲ್ಲಿ ಹೇಳಿದ ಪಾದವೇ ಬೇರೆ ಬ್ರಾಹ್ಮಣವಾಕ್ಯದಲ್ಲಿ ಹೇಳಿದ ಪಾದವೇ ಬೇರೆ ಎಂದು ಅಲ್ಲಿ ಭೇದವನ್ನು ಹೇಳಿದ್ದಾರೆ. ಅದ್ವೈತಿಗಳ ಈ ನಿಲುವು ಮತ್ತಷ್ಟು ಗೊಂದಲಕ್ಕೆ ಕಾರಣವಾಗಿದೆ.

**गुरुराजीयम्** – अत्र हि पादशब्देन तदात्मकत्वं विवक्ष्यते किं वोपासनार्थं चरणत्वारोपो वा । नाद्य इत्याह – **पादशब्देनेति** ॥ द्वितीयं निराकरोति – **उपासनार्थमिति** ॥ **अन्यथेति** ॥ षाड्विध्यमनूद्य चतुष्पात्त्वविधान इत्यर्थः ।

## ಸಾರ

ಅದ್ವೈತಿಗಳಿಗೆ ಚತುಷ್ಪದಾ ಎಂಬ ಶ್ರುತಿಯನ್ನು ವ್ಯಾಖ್ಯಾನಿಸಲು ಸಾಧ್ಯವಿಲ್ಲ. ಭೂತಾದಿ ನಾಲ್ಕು ಪದಾರ್ಥಗಳು ಬ್ರಹ್ಮನ ಪಾದಗಳಾಗಿವೆ ಎಂದು ವ್ಯಾಖ್ಯಾನಿಸಬೇಕು. ಆದರೆ ಶ್ರುತಿಯಲ್ಲಿ ಈ ಹಿಂದೆ ಆರು ಪದಾರ್ಥಗಳು ಪ್ರಸಕ್ತವಾಗಿರುವಾಗ ವಾಕ್, ಪ್ರಾಣಗಳನ್ನು ಬಿಟ್ಟು ನಾಲ್ಕನ್ನು ಮಾತ್ರ ಬ್ರಹ್ಮನ ಪಾದಗಳೆನ್ನುವುದು ತಪ್ಪಲ್ಲವೇ? ಇನ್ನು ಆರಲ್ಲಿ ವಾಕ್, ಪ್ರಾಣಗಳನ್ನು ಬಿಟ್ಟು ನಾಲ್ಕನ್ನು ಮಾತ್ರ ಶ್ರುತಿಯು ಚತುಷ್ಪದಾ ಎಂದಿದೆ ಎನ್ನಬಹುದು. ಆದರೆ ಈ ಪಕ್ಷದಲ್ಲಿ ವಾಕ್ ಪ್ರಾಣಗಳಿಗೆ ಬ್ರಹ್ಮಾತ್ಮಕತ್ವವನ್ನು ಹೇಳಿದಂತಾಗುವುದಿಲ್ಲ. ಆದ್ದರಿಂದ ಶ್ರುತಿಯು ಭಗವಂತನ ಆರುರೂಪಗಳನ್ನು ಅನುವಾದ ಮಾಡಿ ಬೇರೆ ನಾಲ್ಕು ರೂಪಗಳನ್ನು 'ಚತುಷ್ಪದಾ' ಎಂಬ ಪದದಿಂದ ವರ್ಣಿಸಿದೆ ಎಂದು ಹೇಳಬೇಕು.

---

## ಸ್ವಮತದಲ್ಲಿ ಶ್ರುತ್ಯರ್ಥ

### तात्पर्यचन्द्रिका

**अस्माकं मते षाड्विध्यं तु ''गायत्र्यां संस्थितो विष्णुः'' इत्यादि छान्दोग्यभाष्यात् ज्ञेयम् । तस्मान्मान्त्रवर्णिकादन्यस्य पादाभिधानस्य अभावात्तस्य च 'चरणाभिधानात्' इत्यनेनैवोक्तत्वात् परमते भूतादिसूत्रवैयर्थ्यम् । अस्माकं पक्षे 'भूतादि' इत्यत्रादिशब्दस्तु ''अमृतं दिवि'' इत्युक्तामृताख्यस्वरूपपरः ।**

ಅನುವಾದ - ನಮ್ಮ ಮತದಲ್ಲಿ ಶ್ರುತಿಯಲ್ಲಿರುವ 'ಷಡ್ವಿಧಾ' ಎಂಬ ಪದವು ಭಗವಂತನ ಆರುವಿಧರೂಪಗಳನ್ನು ಹೇಳುತ್ತಿದೆ. ಈ ಶ್ರುತಿಯನ್ನು ಆಚಾರ್ಯರು 'ಗಾಯತ್ರ್ಯಾಂ ಸಂಸ್ಥಿತೋ ವಿಷ್ಣುಃ' ಎಂದು ಛಾಂದೋಗ್ಯಭಾಷ್ಯದಲ್ಲಿ ವ್ಯಾಖ್ಯಾನಿಸಿದ್ದಾರೆ. ಅದನ್ನು ಇಲ್ಲಿ ತಿಳಿಯಬೇಕು. ಮಂತ್ರವರ್ಣದಲ್ಲಿ ಪ್ರತಿಪಾದಿಸಿದ ಪಾದಾಭಿಧಾನಕ್ಕಿಂತ ಬೇರೆಯಾದ ಚರಣಾಭಿಧಾನವು ಇರುವುದಿಲ್ಲ. ಎಂದು ಇದುವರೆಗೂ ಹೇಳಿದಂತೆ ಪರಮತದಲ್ಲಿ ಭೂತಾದಿಸೂತ್ರವು ವ್ಯರ್ಥವಾಗಿದೆ. ನಮ್ಮ ಪಕ್ಷದಲ್ಲಿ ಭೂತಾದಿ ಎಂಬ ಸೂತ್ರದಲ್ಲಿರುವ ಆದಿಶಬ್ದವು 'ಅಮೃತಂ ದಿವಿ' ಎಂಬಲ್ಲಿ ಹೇಳಿದ ಭಗವಂತನ ಅಮೃತರೂಪಗಳನ್ನು ಹೇಳುತ್ತಿದೆ.

**प्रकाशः** – ननु भवन्मतेऽपि भूतानां पादत्वेन निर्देशात् कथं षाड्विध्यं, यदि विधान्तर्गतानामपि भूतानां पृथक्कृत्य पादत्वमुच्यते सममेतन्ममापीत्यत आह – **अस्माकमिति** ॥

**गायत्र्यां संस्थितो विष्णुः स्त्रीरूपः सूर्यसप्रभः ।**
**द्वितीयश्चैव मत्स्यादिर्भूतनामाऽवतारगः ॥**
**तृतीयो वाचि संस्थः स स्त्रीरूपो हयशीर्षकः ।**
**चतुर्थः पृथिवीसंस्थः स्त्रीरूपः पीतवर्णकः ॥**
**जीवस्यान्तर्गतो व्याप्यः शरीरमितिनामकः ।**
**पञ्चमस्तद्धृदिस्थस्तु षष्ठो हृदयनामकः ॥**
**गायत्रीनामको विष्णुरेवं षड्विध उच्यते ।**

इत्यादिभाष्यात् **'पादोऽस्य सर्वा भूतानि'** इति भूतशब्दितजीवानां चतुष्पादान्तर्भावेऽपि **''भूतं यदिदं किञ्च''** इति षड्विधान्तर्भूतं मत्स्याद्यवताररूपमेवेति ज्ञेयमित्यर्थः । **''किञ्च चतुष्पदा''** इत्यादिनोक्तमुपसंहरति – **तस्मादिति** ॥

ननु परमते 'भूतादि' इत्यादिपदेन पृथिवीशरीरहृदयानां ग्रहणेन तस्य सार्थक्यं, भवन्मते तु 'भूतपादव्यपदेशात्' इत्येतावता ''पादोऽस्य'' इत्युक्तभूतपादत्वग्रहसम्भवादादिपदं व्यर्थमित्यत आह – **अस्माकमिति** ॥

स्यादेवं, यदि भूतपादत्वमेवात्र विवक्षितं स्यात्, न चैवम्, किन्तु भूतशब्दितविश्वपादत्वमिवामृतशब्दितनारायणवासुदेववैकुण्ठाख्यस्वरूपत्रयपादत्वमपि विवक्षित्वा 'चतुष्पदा' इत्युक्तचतुष्पदत्वस्य वक्तव्यत्वात्, 'भूतं' विश्वमादिर्यस्य रूपत्रयस्य तद्भूतादि, भूतं स्वरूपत्रयं चेति यावत्, तत्पाद इति व्यपदेशोपपत्तेरित्यर्थसम्भवान्न वैयर्थ्यमित्यर्थः ।

ವಿವರಣೆ - ಇಲ್ಲಿಯ ತನಕ ಅದ್ವೈತಮತದ ಪ್ರಕಾರ ಷಡ್ವಿಧತ್ವವು ಅನುಪಪನ್ನವಾಗುತ್ತದೆಂದು ಸಮರ್ಥಿಸಿದ್ದಾಯಿತು. ಪ್ರಕೃತ ನಮ್ಮಮತದಲ್ಲಿಯೂ ಸಹ ಭೂತಗಳನ್ನು ಪಾದಗಳೆಂದು ನಿರ್ದೇಶಿಸಿದ್ದರಿಂದ ಷಡ್ವಿಧತ್ವವು ಹೇಗೆ ಕೂಡುತ್ತದೆ? ಒಂದು ವೇಳೆ ಪಾದಸ್ವರೂಪದಲ್ಲಿ ಸೇರಿದ ಸಮಸ್ತಭೂತಗಳನ್ನು ಆರು ಬಗೆಯಲ್ಲಿ ವಿಭಾಗಿಸಿ ಪಾದತ್ವವನ್ನು ಹೇಳುವುದಾದರೆ ಅದ್ವೈತಿಗಳು ಹಾಗೆಯೇ ಉತ್ತರಿಸಬಹುದಲ್ಲವೇ? ಎಂಬ ಪ್ರಶ್ನೆಗೆ 'ಅಸ್ಮಾಕಂ ಮತೇ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

ಗಾಯತ್ರ್ಯಾಂ ಸಂಸ್ಥಿತೋ ವಿಷ್ಣುಃ ಸ್ತ್ರೀರೂಪಃ ಸೂರ್ಯಸಪ್ರಭಃ ।
ದ್ವಿತೀಯಶ್ಚೈವ ಮತ್ಸ್ಯಾದಿರ್ಭೂತನಾಮಾಽವತಾರಗಃ ॥
ತೃತೀಯೋ ವಾಚಿ ಸಂಸ್ಥಃ ಸ ಸ್ತ್ರೀರೂಪೋ ಹಯಶೀರ್ಷಕಃ ।

ಚತುರ್ಥಃ ಪೃಥಿವೀಸಂಸ್ಥಃ ಸ್ತ್ರೀರೂಪಃ ಪೀತವರ್ಣಕಃ ॥
ಜೀವಸ್ಯಾಂತರ್ಗತೋ ವ್ಯಾಪ್ಯಃ ಶರೀರಮಿತಿ ನಾಮಕಃ ।
ಪಂಚಮಸ್ತದ್ಧೃದಿಸ್ಥಸ್ತು ಷಷ್ಠೋ ಹೃದಯನಾಮಕಃ ।
ಗಾಯತ್ರೀನಾಮಕೋ ವಿಷ್ಣುರೇವಂ ಷಡ್ವಿಧ ಉಚ್ಯತೇ ॥

(ಗಾಯತ್ರೀಪ್ರತಿಪಾದ್ಯನಾದ್ದರಿಂದ ಗಾಯತ್ರಿ ಎನಿಸಿದ ವಿಷ್ಣುವು ಸ್ತ್ರೀರೂಪಿಯಾಗಿದ್ದಾನೆ. ಸೂರ್ಯನಂತೆ ಪ್ರಕಾಶಿಸುತ್ತಾನೆ. ಇದು ಅವನ ಮೊದಲನೆಯ ರೂಪ. ಭೂತನಾಮಕನಾದ ಮತ್ಸ್ಯಾದಿ ಅವತಾರರೂಪವು ಭಗವಂತನ ಎರಡನೆಯ ರೂಪ. ಮಾತುಗಳಲ್ಲಿರುವ ಹಯಗ್ರೀವ ಎಂಬ ಸ್ತ್ರೀರೂಪವು ಮೂರನೆಯ ರೂಪ. ಪೃಥ್ವಿಯಲ್ಲಿರುವ ಪೀತವರ್ಣದ ಸ್ತ್ರೀರೂಪವು ನಾಲ್ಕನೆಯದ್ದು. ಜೀವರೊಳಗೆ ವ್ಯಾಪ್ತವಾಗಿ ಶರೀರ ಎನಿಸುವ ರೂಪ ಐದನೆಯದ್ದು. ಜೀವರ ಹೃದಯದಲ್ಲಿ ಹೃದಯ ಎಂಬ ರೂಪವು ಆರನೆಯದು. ಹೀಗೆ ಗಾಯತ್ರೀನಾಮಕನಾದ ವಿಷ್ಣು ಆರು ರೂಪಗಳನ್ನು ಹೊಂದಿದ್ದಾನೆ.)

ಹೀಗೆ ಆಚಾರ್ಯರು ಭಾಷ್ಯದಲ್ಲಿ ಹೇಳಿದಂತೆ 'ಷಡ್ವಿಧಾ ಗಾಯತ್ರೀ' ಎಂಬ ಶ್ರುತಿಗೆ ಭಗವಂತನ ಆರುವಿಧರೂಪಗಳೆಂಬ ಅರ್ಥವನ್ನು ತಿಳಿಯಬೇಕು. ಆದ್ದರಿಂದ 'ಪಾದೋಸ್ಯ ಸರ್ವಾ ಭೂತಾನಿ' ಎಂಬಲ್ಲಿ ಭೂತಶಬ್ದದಿಂದ ಜೀವರು ಚತುಷ್ಪಾದದಲ್ಲಿ ಅಂತರ್ಭಾವ ಹೊಂದುತ್ತಾರೆ. ಆದರೂ 'ಭೂತಂ ಯದಿದಂ ಕಿಂಚ' ಎಂಬಲ್ಲಿ ಹೇಳಿದ ಷಡ್ವಿಧರೂಪಗಳೆಂದರೆ ಮತ್ಸ್ಯಾದಿ ಅವತಾರಗಳೇ ಆಗಿವೆ ಎಂದು ಭಾಷ್ಯದ ಈ ಮಾತಿನಿಂದ ತಿಳಿಯುತ್ತದೆ. 'ಕಿಂಚ ಚತುಷ್ಪದಾ' ಇತ್ಯಾದಿ ಗ್ರಂಥದಿಂದ ಪ್ರಾರಂಭಿಸಿದ ವಿಚಾರವನ್ನು 'ತಸ್ಮಾತ್' ಎಂಬುದರಿಂದ ಉಪಸಂಹಾರ ಮಾಡುತ್ತಿದ್ದಾರೆ.

ಪರಮತದಲ್ಲಿ 'ಭೂತಾದಿ' ಎಂಬ ಸೂತ್ರದಲ್ಲಿರುವ ಆದಿಪದದಿಂದ ಪೃಥಿವಿ, ಶರೀರ, ಹೃದಯಗಳನ್ನು ವಿವಕ್ಷಿಸಿದ್ದಾರೆ. ಆದ್ದರಿಂದ ಅವರ ಮತದಲ್ಲಿ ಆದಿಪದವು ಸಾರ್ಥಕವಾಗುತ್ತದೆ. ಆದರೆ ನಿಮ್ಮ ಮತದಲ್ಲಿ ಆದಿಪಧವನ್ನು ಹೇಳದೇ 'ಭೂತಪಾದವ್ಯಪದೇಶಾತ್' ಎಂದಷ್ಟೇ ಹೇಳಿದರೂ 'ಪಾದೋಸ್ಯ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಭೂತಪಾದತ್ವವನ್ನು ಸ್ವೀಕರಿಸಲು ಬರುತ್ತದೆ. ಹೀಗಿರುವಾಗ ನಿಮ್ಮ ಮತದಲ್ಲಿ ಆದಿಪದವು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ ''ಅಸ್ಮಾಕಂ ಪಕ್ಷೇ'' ಎಂಬುದರಿಂದ ಉತ್ತರಿಸುತ್ತಿದ್ದಾರೆ.

ಒಂದುವೇಳೆ ಭೂತಪಾದತ್ವವಷ್ಟೇ ವಿವಕ್ಷಿತವಾಗಿದ್ದಲ್ಲಿ ಆದಿಪದವು ವ್ಯರ್ಥವಾಗುತ್ತಿತ್ತು. ಆದರೆ ಹಾಗಿಲ್ಲ. ಭೂತಶಬ್ದದಿಂದ ವಿಶ್ವಪಾದತ್ವವು ಹೇಗೆ ವಿವಕ್ಷಿತವಾಗಿದೆಯೋ, ಆದರಂತೆ ಅಮೃತಶಬ್ದದಿಂದ ನಾರಾಯಣ, ವಾಸುದೇವ, ವೈಕುಂಠ ಎಂಬ ಸ್ವರೂಪಾಂಶವೆನಿಸಿದ ಪಾದಗಳು ವಿವಕ್ಷಿತವಾಗಿವೆ. ಈ ನಾಲ್ಕನ್ನೂ ಪಾದಗಳಿಂದ ವಿವಕ್ಷಿಸಿದಾಗ ಮಾತ್ರ ಚತುಷ್ಪದತ್ವವನ್ನು ಅರ್ಥಮಾಡಿಕೊಳ್ಳಬಹುದು. ಆದ್ದರಿಂದ ಇಲ್ಲಿ ಭೂತಾದಿಪಾದಶಬ್ದಕ್ಕೆ ಅತದ್ಗುಣಸಂವಿಜ್ಞಾನಬಹುವ್ರೀಹಿಯನ್ನು ಮಾಡಬೇಕು. 'ಭೂತಂ ಆದಿಃ ಯಸ್ಯ ತತ್' (ವಿಶ್ವವೇ ಆದಿಯಾಗಿ ಉಳ್ಳದ್ದು) ಎಂದರೆ ಭಗವಂತನ ರೂಪತ್ರಯಗಳು ಎಂದರ್ಥ. ಇಂತಹ ನಾಲ್ಕುವಿಧ ಪಾದಗಳನ್ನು ವ್ಯಪದೇಶ ಮಾಡಿದ್ದರಿಂದ ಎಂದು ಭೂತಾದಿಪಾದವ್ಯಪದೇಶಸೂತ್ರದ ಅರ್ಥ. ಆದ್ದರಿಂದ ಆದಿಪದವು ಸಾರ್ಥಕವಾಗಿದೆ.

ಗಾಯತ್ರ್ಯಧಿಕರಣ-(೧।೧।೧೧)

**गुरुराजीयम्** – भवन्मतेपि षाड्विध्यानुपपत्तिरित्यत आह – **अस्माकमिति ॥**

## ಸಾರ

ನಮ್ಮ ಮತದಲ್ಲಿ 'ಸೈಷಾ ಚತುಷ್ಪದಾ ಷಡ್ವಿಧಾ' ಎಂಬ ಶ್ರುತಿ ಭಗವಂತನ ರೂಪಗಳನ್ನು ಹೇಳುತ್ತಿದೆ. ಸಕಲಜೀವರಾಶಿ ಭಗವಂತನ ಭಿನ್ನಾಂಶವೆಂದು 'ಪಾದೋಸ್ಯ ಸರ್ವಾ ಭೂತಾನಿ' ಎಂಬ ವಾಕ್ಯ ಹೇಳುತ್ತಿದೆ. ತ್ರಿಪಾದಸ್ಯಾಮೃತಂ ದಿವಿ' ಎಂಬ ವಾಕ್ಯ ನಾರಾಯಣ ವಾಸುದೇವ ವೈಕುಂಠ ಎಂಬ ಮೂರು ಸ್ವರೂಪಾಂಶಗಳನ್ನು ಹೇಳುತ್ತಿದೆ. ಮೊದಲನೆಯ ರೂಪ ಜಗತ್ತಿನಲ್ಲಿ ಉಳಿದ ಮೂರು ರೂಪಗಳು ಶ್ವೇತದ್ವೀಪ, ಅನಂತಾಸನ, ವೈಕುಂಠಗಳಲ್ಲಿ ಇರುತ್ತವೆ. ಒಟ್ಟು ಈ ನಾಲ್ಕು ರೂಪಗಳನ್ನು ಚತುಷ್ಪದಾ ಎಂಬ ಪದವು ಬಣ್ಣಿಸಿದೆ.

೧. ಗಾಯತ್ರಿಯಲ್ಲಿರುವ ಸ್ತ್ರೀರೂಪ; ೨. ಮತ್ಸ್ಯಾದಿರೂಪ; ೩. ವಾಕ್‌ನಲ್ಲಿರುವ ಹಯಗ್ರೀವಸ್ತ್ರೀರೂಪ; ೪. ಪೃಥಿವಿಯಲ್ಲಿರುವ ಸ್ತ್ರೀರೂಪ; ೫. ಜೀವರಲ್ಲಿರುವ ಶರೀರರೂಪ; ೬. ಹೃದಯದಲ್ಲಿರುವ ಹೃದಯರೂಪ. ಭಗವಂತನ ಈ ಆರುರೂಪಗಳನ್ನು ಷಡ್ವಿಧಾ ಎಂಬ ಪದವು ವರ್ಣಿಸಿದೆ.

---

## 'ಪಾದೋಽಸ್ಯ' ಶ್ರುತ್ಯರ್ಥ

### तात्पर्यचन्द्रिका

**नचात्र पादमुद्दिश्य विश्वभूतविधिः, येन पादैकत्वमुद्देश्यविशेषणत्वात् ''ग्रहं सम्मार्ष्टि'' इत्यत्र ग्रहगतैकत्ववदविवक्षितमिति चतुष्पदत्वं न सिद्ध्येत्, किन्तु विश्वभूतोद्देशेन पादविधिः, पादानामेव जिज्ञासितत्वात् । अत एव टीकायां ''सर्वाणि भूतान्यस्यैकः पादः'' इति पादविधानं दर्शितम् । तथाच ''पशुना यजेत'' इत्यत्र पश्वेकत्ववद्विधेयगतत्वात् पादैकत्वं विवक्षितम् ।**

ಶಂಕೆ - 'ಪಾದೋಸ್ಯ ಸರ್ವಾ ಭೂತಾನಿ' ಎಂಬಲ್ಲಿ ಪಾದವನ್ನು ಉದ್ದೇಶಿಸಿ ವಿಶ್ವಭೂತವನ್ನು (ಸಮಸ್ತಜೀವಪ್ರಪಂಚ) ವಿಧಿಸಲಾಗಿದೆ. ಆವಾಗ ವಿಶ್ವಭೂತಗಳನ್ನು ಪರಮಾತ್ಮನ ಏಕಪಾದವೆಂದು ಹೇಳಲಾಗದು.

ಉತ್ತರ - 'ಗ್ರಹಂ ಸಮ್ಮಾರ್ಷ್ಟಿ' ಎಂಬಲ್ಲಿ ಸಮ್ಮಾರ್ಜನವು ವಿಧೇಯ; ಗ್ರಹವು ಉದ್ದೇಶ್ಯವಾಗಿದೆ. ಗ್ರಹ ಎಂಬಲ್ಲಿರುವ ಏಕವಚನವು ಉದ್ದೇಶ್ಯಗತವಿಶೇಷಣವಾದ್ದರಿಂದ ಇದು ವಿವಕ್ಷಿತವಲ್ಲ. ಅದರಂತೆ ಪ್ರಕೃತದಲ್ಲಿ ಪಾದವನ್ನು ಉದ್ದೇಶಿಸಿ ಭೂತವನ್ನು ವಿಧಾನ ಮಾಡುವುದಾದರೆ ಪಾದಃ ಎಂಬಲ್ಲಿರುವ

ಉದ್ದೇಶ್ಯವಿಶೇಷಣವಾದ ಏಕವಚನವು ವಿವಕ್ಷಿತವಾಗದಿರಬೇಕಾದೀತು. ಆವಾಗ ವಿಶ್ವಭೂತಗಳು ಅನೇಕವಿರುವುದರಿಂದ ಪಾದಗಳು ಅನೇಕವೆಂದಾಗಿ ಒಂದು ಪಾದ ಎಂದು ಹೇಳಿದ್ದೇ ತಪ್ಪಾಗುತ್ತದೆ. ಆದ್ದರಿಂದ ಪಾದವನ್ನು ಉದ್ದೇಶವೆನ್ನದೆ ವಿಧೇಯವೆಂದು ಹೇಳಬೇಕು. ಆವಾಗ ಪಾದದಲ್ಲಿ ವಿಶೇಷಣವಾದ ಏಕವಚನವು ವಿಧೇಯಗತ ವಿಶೇಷಣವಾಗುತ್ತದೆ. ಉದ್ದೇಶ್ಯಗತವಿಶೇಷಣವು ವಿವಕ್ಷಿತವಾಗದಿದ್ದರೂ ವಿಧೇಯಗತವಿಶೇಷಣವು ವಿವಕ್ಷಿತವಾಗಹುದು. ಆವಾಗ ಎಲ್ಲಾ ಭೂತಗಳನ್ನು ಸೇರಿಸಿ ಒಂದು ಪಾದವೆಂದು ಹೇಳುವುದು ತಪ್ಪಾಗುವುದಿಲ್ಲ. ಆದ್ದರಿಂದಲೇ ಟೀಕೆಯಲ್ಲಿ 'ಸರ್ವಾಣಿ ಭೂತಾನಿ ಅಸ್ಯ ಏಕಃ ಪಾದಃ' ಎಂದು ಪಾದವನ್ನೇ ವಿಧೇಯವೆಂದಿದ್ದಾರೆ. 'ಪಶುನಾ ಯಜೇತ' ಎಂಬಲ್ಲಿ ಏಕವಚನವು ವಿಧೇಯಗತವಾಗಿದೆ. ಆದ್ದರಿಂದ ಏಕತ್ವವು ಪಶುವಿನ ಧರ್ಮವೆಂದಾಗಿ ಅದು ಹೇಗೆ ವಿವಕ್ಷಿತವಾಗುತ್ತದೋ ಅದರಂತೆ ಇಲ್ಲಿಯೂ ಪಾದೈಕತ್ವವು ವಿವಕ್ಷಿತವಾಗುತ್ತದೆ.

**प्रकाशः** – ननु मन्त्रे भूतानां बहुत्वेन पादबहुत्वापत्त्या भूतानामेकपादत्वं रूपत्रयस्य त्रिपादत्वमित्यस्यासिद्धिरित्यत आह – **नचात्रेति** ॥

**ग्रहं सम्मार्ष्टीत्यत्रेति** ॥ तृतीयेऽध्याये **''एकत्वयुक्तमेकस्य श्रुतिसंयोगात्''** इत्याद्यपादीयसप्तमाधिकरणे **''ग्रहं सम्मार्ष्टि''** इत्युदाहृत्य किमेकस्य सम्मार्गः किं वा सर्वेषामिति सन्देहे, उपादेयगताया इवोद्देश्यगताया अपि सङ्ख्यायाः श्रुतिबलेन विवक्षितत्वादेकस्यैवेति पूर्वपक्षयित्वा, किमेकत्वस्योद्देश्यत्वेन विवक्षोत विधेयत्वेन, आद्ये 'ग्रहं सम्मार्ष्टि' एकश्च सम्मार्ष्टि'' इति प्रत्युद्देश्यं वाक्यपरिसमाप्तेर्वाक्यभेदात्, द्वितीयेऽपि सम्मार्गस्यापि विधेयत्वात्, ग्रहं सम्मृज्यात् स च एकः' इति वाक्यभेदात् । सम्मार्गक्रियाकर्मत्वस्यैकत्वस्य च प्रत्ययार्थतया युगपत्सम्बन्धेनोद्देश्यविशेषणत्वात्, शेषिविभक्तिनिर्दिष्टत्वेन विधेयसम्मार्गविशेषणत्वाभावेनैकत्वस्य विवक्षाऽयोगात् । ''ग्रहैर्यजेत'' इत्युक्तानां सर्वेषां सम्मार्ग इति सिद्धान्तितम् ।

तत्र यथा ग्रहैकत्वमविवक्षितं, न तथा प्रकृत इत्यर्थः ॥ **पादानामिति** ॥ **''सैषा चतुष्पदा''** इत्युक्त्या के चत्वारः पादा इति जिज्ञासोत्पादात्, तन्निवृत्तये मन्त्रोदाहरणात्, **''ब्रह्मविदाप्नोति परं''** इत्यत्र किं तद्ब्रह्म कीदृशं च तद्वेदनं, का च तत्प्राप्तिरिति जिज्ञासानिवृत्त्यर्थं **''तदेषाभ्युक्ता''** इति मन्त्रोदाहरणवदिति भावः ॥

**पशुनेति** ॥ चतुर्थे **''तत्रैकत्वमयज्ञाङ्गमर्थस्य गुणभूतत्वात्''** इत्याद्यपादीयपञ्चमाधिकरणे **''पशुना यजेत''** इत्युदाहृत्य किमेकत्वमयज्ञाङ्गमविवक्षितं, किं वा

यज्ञाङ्गं विवक्षितमिति सन्दिह्य, समानपदश्रुत्या पश्वङ्गत्वावगमाद्वाक्यलभ्य-पदान्तरोपात्तयागाङ्गत्वायोगात्, अयज्ञाङ्गमेकत्वमविवक्षितमिति पूर्वपक्षयित्वा, एकप्रत्ययोपात्तेन प्रातिपदिकार्थादपि सन्निहितेन प्रधानभूतेन कारकेणावरुद्धमेकत्वं प्रातिपदिकार्थं पशुमनादृत्य क्रियाङ्गमवगम्यमानं वाक्यसमर्पितेन क्रियाविशेषेण सम्बद्धं पश्चादरुणैकहायनीन्यायेन पशुना विशेषणत्वेनार्थात्सम्बध्यते । तादर्थ्यं तु यज्ञं प्रत्येवेति विवक्षितमेकत्वमिति सिद्धान्तितम् ।

ವಿವರಣೆ - ಭೂತಗಳು ಅನಂತವಾಗಿರುವಾಗ ಪಾದಗಳು ಅನಂತವಾಗಬೇಕಲ್ಲವೇ? ಹೀಗಿರುವಾಗ ಭೂತವು ಏಕಪಾದವೆಂದು ಹೇಗೆ ಹೇಳಿದಿರಿ? ಮತ್ತು ಭಗವಂತನ ಮೂರು ರೂಪಗಳು ಭಗವಂತನ ಸ್ವರೂಪವಾಗಿರುವಾಗ ಪಾದಗಳೆಂದು ಹೇಗೆ ಹೇಳಿದಿರಿ? ಎಂಬ ಪ್ರಶ್ನೆಗೆ 'ನ ಚಾತ್ರ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ.

### 'ಗ್ರಹಸಮ್ಮಾರ್ಜನಾಧಿಕರಣಮ್'

### ಏಕತ್ವಯುಕ್ತಮೇಕಸ್ಯ ಶ್ರುತಿಸಂಯೋಗಾತ್ (೩/೧/೭)

ಜ್ಯೋತಿಷ್ಟೋಮಪ್ರಕರಣದಲ್ಲಿ ದಶಾಪವಿತ್ರೇಣ ಗ್ರಹಂ ಸಮ್ಮಾರ್ಷ್ಟಿ ಎಂಬ ವಾಕ್ಯವು ಕೇಳಿಸುತ್ತಿದೆ. ಒಂದು ಗ್ರಹವನ್ನು ಸಮ್ಮಾರ್ಜನ ಮಾಡಬೇಕೋ ಅಥವಾ ಎಲ್ಲಾ ಗ್ರಹಗಳನ್ನು ಸಮ್ಮಾರ್ಜನೆ ಮಾಡಬೇಕೋ? ಅಂದರೆ ಗ್ರಹಂ ಎಂಬಲ್ಲಿರುವ ಏಕ ವಚನಕ್ಕೆ ಏಕತ್ವವು ವಿವಕ್ಷಿತವೋ ಅಲ್ಲವೋ ಎಂದು ಸಂದೇಹ ಎಂದು ಸಂಶಯ.

ಪೂರ್ವಪಕ್ಷ - ಒಂದೇ ಗ್ರಹವನ್ನು ಸಮ್ಮಾರ್ಜನೆ ಮಾಡಬೇಕು. ವಿಧೇಯದಲ್ಲಿರುವ ಶಂಕೆಯು ವಿವಕ್ಷಿತವಾದಂತೆ ಉದ್ದೇಶ್ಯದಲ್ಲಿರುವ ಶಂಕೆಯೂ ಸಹ ವಿವಕ್ಷಿತವಾಗಬಹುದು. ಪ್ರಕೃತ ಗ್ರಹ ಎಂಬ ಉದ್ದೇಶ್ಯದಲ್ಲಿ ಏಕತ್ವಸಂಖ್ಯೆಯು ವಿವಕ್ಷಿತವಾದ್ದರಿಂದ ಒಂದೇ ಗ್ರಹವನ್ನು ಸಮ್ಮಾರ್ಜನೆ ಮಾಡಬೇಕು.

---

भाट्टसङ्ग्रहः –

**अथ सप्तमं ग्रहसम्मार्जनाधिकरणम् (सूत्राणि १३-१५)**

**एकत्वयुक्तमेकस्य श्रुतिसंयोगात् ॥ १३ ॥**

**(सर्वेषां वा लक्षणत्वादविशिष्टं हि लक्षणम् ॥ १४ ॥**

**चोदिते तु परार्थत्वाद्यथाश्रुति प्रतीयेत ॥ १५ ॥)**

अत्र पूर्वसिद्धान्तन्यायेन शङ्कनादापवादिकी **सङ्गतिः** । ज्योतिष्टोमे श्रूयते 'दशापवित्रेण ग्रहं सम्मार्ष्टि' इति । **दशापवित्रं** नाम कम्बळखण्डमित्येके । वासःखण्डमित्यपरे । तत्र ग्रहमित्यत्रैकवचनोक्तमेकत्वं विवक्षितं न वेति **सन्देहः** । पूर्वत्राऽरुण्यगुणेन परिच्छिन्नस्य द्रव्यस्य क्रयसाधनत्वमिव इहाप्येकत्वसङ्ख्यारूपगुणेन परिच्छिन्नस्य ग्रहस्य सम्मार्ग–कर्मत्वमवगम्यमानं न हातुं शक्यम् । **'तत्रैकत्वमयज्ञाङ्गमर्थस्य गुणभूतत्वात्'**

ಸಿದ್ಧಾಂತ - ಇದು ತಪ್ಪು. ಎಲ್ಲಾ ಗ್ರಹಗಳನ್ನು ಸಮ್ಮಾರ್ಜನೆ ಮಾಡಬೇಕೇ ಹೊರತು ಒಂದೇ ಗ್ರಹವನ್ನಲ್ಲ. ಏಕೆಂದರೆ ಏಕತ್ವಸಂಖ್ಯೆಯನ್ನು ಉದ್ದೇಶವೆಂದು ವಿವಕ್ಷಿಸುತ್ತೀರೋ ಅಥವಾ ವಿಧೇಯ-ವೆಂದೋ? ಉದ್ದೇಶವೆಂಬ ಪಕ್ಷದಲ್ಲಿ 'ಗ್ರಹಂ ಸಮ್ಮಾರ್ಷ್ಟಿ' 'ಏಕಂ ಚ ಸಮ್ಮಾರ್ಷ್ಟಿ' ಎಂದಂತಾಗುತ್ತದೆ. ಅಂದರೆ ಗ್ರಹಂ ಸಮ್ಮಾರ್ಷ್ಟಿ ಎಂಬುದೇ ಬೇರೆಯ ವಾಕ್ಯ. 'ಏಕಂ ಸಮ್ಮಾರ್ಷ್ಟಿ' ಎಂಬುದೇ ಬೇರೆ ವಾಕ್ಯ. ಉದ್ದೇಶ್ಯಗಳು ಅನೇಕವಾದಾಗ ವಾಕ್ಯಗಳು ಅನೇಕವಾಗುತ್ತವೆ. (ರಾಮಃ ಗುಣಪೂರ್ಣಃ ಕೃಷ್ಣಶ್ಚ ಎಂಬ ವಾಕ್ಯದಲ್ಲಿ ರಾಮ ಹಾಗೂ ಕೃಷ್ಣರೆಂಬ ಎರಡು ಉದ್ದೇಶ್ಯಗಳಿರುವುದರಿಂದ ರಾಮಃ ಗುಣಪೂರ್ಣಃ ಎಂಬುದೇ ಬೇರೆ ವಾಕ್ಯ, ಕೃಷ್ಣಶ್ಚ ಗುಣಪೂರ್ಣಃ ಎಂಬುದೇ ಬೇರೆವಾಕ್ಯ.)

ಇನ್ನು ಏಕತ್ವಸಂಖ್ಯೆಯು ವಿಧೇಯವೆಂಬ ಎರಡನೆಯ ಪಕ್ಷವನ್ನು ಹೇಳಬೇಕು. ಆವಾಗ ಗ್ರಹವನ್ನು ಉದ್ದೇಶಿಸಿ ಸಮ್ಮಾರ್ಜನವನ್ನು ವಿಧಾನ ಮಾಡಿದಂತಾಗುತ್ತದೆ. ಆ ಸಮ್ಮಾರ್ಜನವನ್ನು ಒಂದು ಗ್ರಹದಲ್ಲಷ್ಟೇ ಮಾಡಬೇಕೆಂದು ಏಕತ್ವವನ್ನು ವಿಧಿಸಿದರೆ ವಿಧೇಯಭೇದದಿಂದ ವಾಕ್ಯಭೇದದೋಷವು ಬಂದೇ ಬರುತ್ತದೆ. 'ಗ್ರಹಂ ಸಮ್ಮೃಜ್ಯಾತ್, ಸ ಚ ಏಕಃ' ಎಂದಂತಾಗುತ್ತದೆ. ಮತ್ತು 'ಗ್ರಹಂ' ಎಂಬುದು ದ್ವಿತೀಯಾವಿಭಕ್ತಿ ಏಕವಚನ. ಇಲ್ಲಿರುವ ಅಮ್ ಪ್ರತ್ಯಯಕ್ಕೆ ಎರಡು ಅರ್ಥ. (೧) ಕರ್ಮತ್ವ (೨) ಏಕತ್ವ ಎಂದು. ಈ ಕರ್ಮತ್ವ ಹಾಗೂ ಏಕತ್ವಗಳು ಒಂದೇ ಪ್ರತ್ಯಯದ ಅರ್ಥಗಳಾದ್ದರಿಂದ ಎರಡೂ ಸಹ ಉದ್ದೇಶವಾದ ಗ್ರಹದಲ್ಲಿ ಯುಗಪತ್ ಅನ್ವಯ ಹೊಂದುತ್ತವೆ. ಹೀಗಿರುವಾಗ ಏಕತ್ವವನ್ನು ಮಾತ್ರ ಉದ್ದೇಶ್ಯದಲ್ಲಿ ಅನ್ವಯವನ್ನು ಮಾಡದೆ ವಿಧೇಯದಲ್ಲಿ ಅನ್ವಯ ಮಾಡಲು ಸಾಧ್ಯವಿಲ್ಲ.

ಮತ್ತು ಮೀಮಾಂಸಕರು ಒಪ್ಪಿರುವಂತೆ ಗ್ರಹಂ ಎಂಬಲ್ಲಿರುವ ದ್ವಿತೀಯಾವಿಭಕ್ತಿಯೇ ಶೇಷಿತ್ವಕ್ಕೆ ಗಮಕವಾಗಿದೆ. ಆವಾಗ ಗ್ರಹವೇ ಶೇಷಿಯಾಗಿ ಸಮ್ಮಾರ್ಜನವು ಶೇಷವಾಗುತ್ತದೆ. ಶೇಷಿತ್ವಗಮಕವಾದ ದ್ವಿತೀಯಾವಿಭಕ್ತಿಯಿಂದ ನಿರ್ದಿಷ್ಟವಾದ ಏಕತ್ವಕ್ಕೆ ವಿಶೇಷಣತ್ವವು ಕೂಡುವುದಿಲ್ಲ. ಹೀಗೆ ಏಕತ್ವವು

---

(४-१-११) इति चतुर्थाऽध्यपादे पञ्चमनये वक्ष्यमाणदिशा 'पशुना यजेत' इत्यत्र उपादेयागतपश्वेकत्वस्येवोद्देश्यगतग्रहैकत्वस्यापि विवक्षितत्वादेकस्यैव सम्मार्गशब्दितं शोधनं, नसर्वग्रहाणामिति **प्राप्तम्** । तदुक्तं **सूत्रे, एकत्वयुक्त**मेकत्वसमभिव्याहृतं कर्म **एकस्यैव स्यात्** । कुतः? **श्रुतिसंयोगात्** द्वितीयाश्रुत्या एकेनैव संयोगादिति । ग्रहस्य सम्मार्गं प्रति गुणत्वे हि प्रतिगुणं प्रधानाऽवृत्तेः प्रयोजनाभावान्न सर्वत्र सम्मार्गः स्यात् । न चैवम् । द्वितीयाश्रुत्या ग्रहस्य सम्मार्गं प्रति प्राधान्यावगमेन 'प्रतिप्रधानं गुणस्याऽवृत्तिः' इति न्यायेन 'यावन्तो ग्रहाः सोमे तावत्सु सम्मार्गः' इति निश्चये सति, ग्रहे इयत्तापरिच्छेदकस्यानाकाङ्क्षितत्वात्तत्परिच्छेदकैकत्वसङ्ख्या न विवक्षिता । विवक्षापक्षे च 'ग्रहं सम्मृज्यात्, स चैकः' इति वाक्यभेदाऽपत्तेः । पशोस्तु यागं प्रति गुणत्वादस्ति तत्र 'कियता पशुना' इति परिच्छेदकाऽकाङ्क्षेति वैषम्यादेकत्वस्य तत्र विवक्षायामपि नात्र तथेति 'सर्वग्रहेषु सम्मार्गः' इति **सिद्धान्तः । फलन्तु** एकत्रानेकत्र सम्मार्गः **पूर्वोत्तरपक्षयोः** इति व्यक्तम् ।

ಉದ್ದೇಶವಾದರೂ ವಾಕ್ಯಭೇದದೋಷ ಬರುತ್ತದೆ. ವಿಧೇಯವಾದರೂ ವಾಕ್ಯಭೇದದೋಷ ಬರುತ್ತದೆ. ಆದ್ದರಿಂದ ಏಕತ್ವವನ್ನು ವಿವಕ್ಷಿಸುವುದೇ ತಪ್ಪು. ಆವಾಗ ಯಾಗದಲ್ಲಿ ಎಲ್ಲಾ ಗ್ರಹಗಳಿಗೂ ಸಮ್ಮಾರ್ಜನ ಮಾಡಬೇಕೆಂದು ನಿರ್ಣಯವಾಗುತ್ತದೆ.

ಆದರಂತೆ ಪ್ರಕೃತ 'ಪಾದೋಽಸ್ಯ ಸರ್ವಾ ಭೂತಾನಿ' ಎಂಬಲ್ಲಿ ಪಾದವು ಉದ್ದೇಶ್ಯವಾದರೆ ಉದ್ದೇಶ್ಯ-ವಿಶೇಷಣವಾದ ಏಕತ್ವವು ಅವಿವಕ್ಷಿತವಾಗುತ್ತದೆ. ಹೊರತಾಗಿ 'ವಿಶ್ವಾ ಭೂತಾನಿ' ಎಂಬಲ್ಲಿರುವ ಬಹು-ವಚನವು ವಿವಕ್ಷಿತವಾಗಿ ಬಹುಪಾದತ್ವವು ಭೂತಗಳಿಗೆ ಬರುತ್ತದೆ. ಏಕಪಾದತ್ವವು ಬರುವುದಿಲ್ಲವೆಂದು ಆಕ್ಷೇಪ.

ಈ ಆಕ್ಷೇಪವು ಪರಿಹಾರವಾಗಬೇಕೆಂದರೆ ಪಾದವನ್ನು ಉದ್ದೇಶವೆನ್ನಬಾರದು. ಹೊರತಾಗಿ ವಿಶ್ವಭೂತವನ್ನು ಉದ್ದೇಶಿಸಿ ಪಾದವನ್ನು ವಿಧಿಸಬೇಕು. ಆವಾಗ ಪೂರ್ವಮೀಮಾಂಸೆಯ ದೃಷ್ಟಾಂತದಂತೆ ಏಕಪಾದತ್ವವನ್ನು ಹೇಳಲಾಗದೆಂದು ಆಕ್ಷೇಪಿಸಲು ಸಾಧ್ಯವಿಲ್ಲ. ಪಾದವನ್ನೇಕೆ ವಿಧಾನ ಮಾಡಬೇಕು? ಎಂಬ ಪ್ರಶ್ನೆ ಸಹಜ. ಆದರೆ ಸೈಷಾ ಚತುಷ್ಪದಾ ಎಂಬ ಶ್ರುತಿಯನ್ನು ನೋಡಿದಾಗ ಪಾದವಿಷಯಕ-ಜಿಜ್ಞಾಸೆಯು ಹುಟ್ಟುತ್ತದೆ.

ಉದಾಹರಣೆ -- 'ಬ್ರಹ್ಮವಿದಾಪ್ನೋತಿ ಪರಮ್' (ಬ್ರಹ್ಮನನ್ನು ತಿಳಿದವನು ಮೋಕ್ಷವನ್ನು ಹೊಂದು-ತ್ತಾನೆ) ಎಂಬ ವಾಕ್ಯವನ್ನು ಕೇಳಿದಾಗ 'ಕಿಂ ತದ್‌ಬ್ರಹ್ಮ?' (ಆ ಬ್ರಹ್ಮನು ಯಾರು?) 'ಕೀದೃಶಂ ಚ ತದ್ವೇದನಮ್' ಅವನನ್ನು ತಿಳಿಯುವ ಬಗೆ ಹೇಗೆ? 'ಕಾ ಚ ತತ್ಪ್ರಾಪ್ತಿಃ?'(ಮೋಕ್ಷ ಎಂದರೆ ಏನು?) ಇತ್ಯಾದಿ ಹಲವು ಜಿಜ್ಞಾಸೆಗಳು ಹುಟ್ಟುತ್ತವೆ. ಇದರ ಪರಿಹಾರಕ್ಕಾಗಿ 'ತದೇಷಾಭ್ಯುಕ್ತಾ' ಇತ್ಯಾದಿ ಮುಂದಿನ ಶ್ರುತಿಗಳು ಹೊರಟವೆ. ಇದರಂತೆ ಪ್ರಕೃತ 'ಸೈಷಾ ಚತುಷ್ಪದಾ' ಭಗವಂತನು ನಾಲ್ಕುರೂಪಗಳುಳ್ಳವನು ಎಂಬ ವಾಕ್ಯವನ್ನು ನೋಡಿದಾಗ ಪಾದವಿಷಯಕ ಜಿಜ್ಞಾಸೆಯೇ ಹುಟ್ಟುತ್ತದೆ ಹೊರತು ವಿಶ್ವಭೂತಗಳ ಜಿಜ್ಞಾಸೆಯು ಹುಟ್ಟುವುದಿಲ್ಲ. ಆದ್ದರಿಂದ ವಿಶ್ವಭೂತವು ಉದ್ದೇಶ್ಯ, ಪಾದವು ವಿಧೇಯವೆಂದು ಹೇಳಬೇಕು.

### ಪಶ್ವೇಕತ್ವಾದೇರ್ವಿವಕ್ಷಾಧಿಕರಣಮ್

ತತ್ರೈಕತ್ವಮಯಜ್ಞಾಂಗಮರ್ಥಸ್ಯ ಗುಣಭೂತತ್ವಾತ್ (೪/೧/೫)

'ಪಶುನಾ ಯಜೇತ' ಎಂಬ ಶ್ರುತಿಯಲ್ಲಿ ಪಶುನಾ ಎಂಬ ಪದವು ತೃತೀಯಾವಿಭಕ್ತಿ ಏಕವಚನ. ತೃತೀಯಾವಿಭಕ್ತಿಯಿಂದ ಪಶು ಯಜ್ಞಕ್ಕೆ ಶೇಷವೆಂದು ತಿಳಿಯುತ್ತದೆ.

भाट्टसङ्ग्रहः –

**तत्रैकत्वमयज्ञाङ्गमर्थस्य गुणभूतत्वात् ॥ ११ ॥**

**(एकश्रुतित्वाच ॥ १२ ॥ प्रतीयत इति चेत् ॥ १३ ॥ नाशब्दं तत्प्रमाणत्वात्पूर्ववत् ॥१४॥ शब्दवत्तूपलभ्यते, तदागमे हि तद्दृश्यते, तस्य ज्ञानं हि यथाऽन्येषाम् ॥ १५ ॥ तद्वच लिङ्गदर्शनम् ॥ १६ ॥)**

ಆದರೆ ಏಕವಚನದಿಂದ ತಿಳಿಯುವ ಏಕತ್ವವು ಯಜ್ಞಕ್ಕೆ ಅಂಗವೆಂದು ವಿವಕ್ಷಿತವೋ ಅಲ್ಲವೋ? ಎಂದು ಸಂದೇಹ.

ಪೂರ್ವಪಕ್ಷ - 'ಪಶುನಾ' ಎಂಬ ಒಂದೇ ಪದದಿಂದ ಪಶು ಹಾಗೂ ಏಕತ್ವಗಳೆರಡೂ ಹೇಳಲ್ಪಟ್ಟಿವೆ. ಆವಾಗ ಸಮಾನಪದಶ್ರುತಿಯ ಬಲದಿಂದ ಏಕತ್ವವು ಪಶುವಿಗೆ ಅಂಗವಾಗುತ್ತದೆ ಹೊರತು ಯಜ್ಞಕ್ಕೆ ಅಂಗವಾಗುವುದಿಲ್ಲ. ಯಜ್ಞವು ಬೇರೆ ಪದದಿಂದ ಪ್ರತಿಪಾದ್ಯವಾದ್ದರಿಂದ ಅದರಲ್ಲಿ ಅನ್ವಯವನ್ನು ಹೊಂದುವುದಿಲ್ಲ. ಅಂದರೆ, ಯಜ್ಞದಲ್ಲಿ ಒಂದೇ ಪಶುವನ್ನು ಹೋಮಿಸಬೇಕೆಂದು ಅರ್ಥವಲ್ಲ. ಅನೇಕ ಪಶುಗಳನ್ನು ಹೋಮಿಸಬಹುದು. ವಸ್ತುತಃ ಪದಗಳ ಸಮಭಿವ್ಯಾಹಾರರೂಪವಾದ ವಾಕ್ಯದ ಬಲದಿಂದ ಪಶುವಿನಲ್ಲಿರುವ ಏಕತ್ವವು ಯಜ್ಞಕ್ಕೆ ಅಂಗವೆಂದು ತಿಳಿಯಬಹುದು. ಆದರೆ ಏಕವಾಕ್ಯಶ್ರುತಿಗಿಂತ ಏಕಪದಶ್ರುತಿಯು ಅಂತರಂಗವಾಗಿದೆ (ಬಲಿಷ್ಠವಾಗಿದೆ.). ಏಕಪದಶ್ರುತಿಯಂತೆ ಏಕತ್ವವು ಪಶುವಿನಲ್ಲೇ ಅನ್ವಿತವಾಗುತ್ತದೆ. ಆದ್ದರಿಂದ ಪಶುನಾ ಎಂಬಲ್ಲಿರುವ ಏಕತ್ವವು ಯಜ್ಞಾಂಗವೆಂದು ವಿವಕ್ಷಿತವಲ್ಲ.

ಸಿದ್ಧಾಂತ - ಏಕವಾಕ್ಯಶ್ರುತಿಗಿಂತ ಏಕಪದಶ್ರುತಿಯು ಬಲಿಷ್ಠವಾಗಿರಬಹುದು. ಆದರೆ ಏಕಪದ-ಶ್ರುತಿಗಿಂತಲೂ ಏಕಪ್ರತ್ಯಯಶ್ರುತಿಯು ಮತ್ತಷ್ಟು ಬಲಿಷ್ಠವಾಗಿದೆ. ಪಶುನಾ ಎಂಬಲ್ಲಿರುವ ಟಾಪ್‌ಪ್ರತ್ಯಯಕ್ಕೆ

पूर्वन्यायेन **शङ्कनात्सङ्गतिः** । 'अग्नीषोमीयं पशुमालभेत' इति, तथा 'अनड्वाहौ युनक्ति' इति, तथा अश्वमेधे ''वसन्ताय कपिञ्जलानालभेत'' इत्यादौ विभक्त्यभिहितैकत्वद्वित्वादिसङ्ख्या विवक्षितोत नेति **सन्देहे**, नेति **प्राप्तम्** । कुतः? यज्ञाङ्गत्वे हि विवक्षिता भवेत् । न ह्येषा सङ्ख्या यज्ञाङ्गम् । पशुमित्येकपदश्रुत्या 'पशुरेकः' इति पश्वङ्गत्वावगमात् । आलभेतेति पदान्तरोपात्तालम्भनशब्दित-यज्ञाङ्गत्वं पदान्तरसमभिव्याहाररूपवाक्यादवसेयम् । वाक्यञ्च श्रुतितो दुर्बलम् । अत उत्पत्ति-शिष्टगुणविरोधात् स्फ्यादीनामिवैकपदश्रुत्यवगतपश्वङ्गत्वविरोधेन क्रत्वनङ्गत्वात्, एकत्वादिसङ्ख्याया अविवक्षितत्वेऽपि क्रतोरवैगुण्यान्न विवक्षिता । तदाह **सूत्रे, तत्र** 'पशुना यजेत' इत्यादौ **एकत्वादिसङ्ख्या न यज्ञाङ्गम् । अर्थस्य** पशो**र्गुणभूतत्वात्** सङ्ख्याया इति । **सिद्धान्तस्तु,** पशुनेत्यत्र **नाशब्दरूपतृतीयाविभक्तिश्रुत्या** करण-कारकमेकत्वसङ्ख्या चोच्येते । तत्रैकत्वं प्रातिपदिकसमभि व्याहाररूपपदश्रुतितो बलवद्विभक्तिश्रुत्यवगतसन्निहितकारकेणावरुद्धं सत् कारकेण सह शीघ्रमालम्भनरूपक्रियया पदान्तरोपात्तयाऽप्यङ्गतयाऽन्वेतीत्येकत्वमपि यज्ञाङ्गं सत् अमूर्ततया न साक्षात्क्रिया-निष्पादकमित्यारुण्यादिवत्पशुरूपद्रव्यपरिच्छेदद्वारा तन्निष्पादकं स्यादिति यज्ञाङ्गतया विवक्षितैव सङ्ख्या । अन्यथा क्रतुवैगुण्यापत्तेः । एवं अनड्वाहावित्यादावपि द्वित्व-बहुत्वयोर्विवक्षा ध्येया । **फलन्तु,** पशुनेत्यत्रैकत्वस्याविवक्षायामप्येकस्यैव लाघवात् प्रयोगसिद्ध्या तत्र फलभेदाभावेऽपि द्वित्वादिश्रवणस्थले द्वयोर्बहूनां वाऽनुष्ठानसिद्धिरिति ज्ञेयम् ।

ಏಕತ್ವ, ಕರಣಕಾರಕತ್ವ ಎಂದು ಎರಡರ್ಥ. ಇವೆರಡರಲ್ಲಿ ಏಕತ್ವವು ಪ್ರಾತಿಪದಿಕಾರ್ಥವಾದ ಪಶುವಿನ ಜೊತೆ ಅನ್ವಯ ಹೊಂದುವ ಮೊದಲೇ ಕರಣತ್ವದ ಜೊತೆಗೆ ಅನ್ವಿತವಾಗಿದೆ. ಏಕೆಂದರೆ, ಕರಣತ್ವವು ಪ್ರತ್ಯಯದ ಅರ್ಥವೇ ಆಗಿರುವುದರಿಂದ. ಆದ್ದರಿಂದ ಏಕತ್ವವು ಪಶುವಿನಲ್ಲಿ ಅನ್ವಿತವಾಗುವುದಿಲ್ಲವೆನ್ನಲು ಮೂರು ಕಾರಣವಿದೆ.

(೧) ಒಂದೇ ಪ್ರತ್ಯಯದಿಂದ ತಿಳಿಯುವ ಕರಣತ್ವದಲ್ಲಿಯೇ ಅನ್ವಯ ಹೊಂದುತ್ತದೆ.

(೨) ಪ್ರಾತಿಪದಿಕಾರ್ಥಕ್ಕಿಂತ ಕರಣತ್ವವು ಹತ್ತಿರವಿದೆ.

(೩) ಪ್ರಾತಿಪದಿಕಕ್ಕಿಂತ ಪ್ರಧಾನವಾದ ಕಾರಕದಲ್ಲಿ ಸಂಬಂಧವನ್ನು ಹೊಂದಿದೆ.

ಈ ಮೂರು ಕಾರಣಗಳಿಂದ ಪ್ರಾತಿಪದಿಕಾರ್ಥವೆನಿಸಿದ ಪಶುವನ್ನು ತಿರಸ್ಕರಿಸಿ ಕರಣತ್ವದಲ್ಲಿಯೇ ಏಕತ್ವವು ಅನ್ವಯ ಹೊಂದುತ್ತದೆ. ಕರಣ ಎಂದರೆ ಕ್ರಿಯಾ ಇರಲೇ ಬೇಕು. ಆ ಕ್ರಿಯೆಯು ಯಾವುದೆಂದು ತಿಳಿಸಲು 'ಯಜೇತ' ಎಂಬ ಮುಂದಿನ ಪದವಿದೆ. ಆದ್ದರಿಂದ ಏಕತ್ವವು ಕರಣತ್ವದ ಜೊತೆಗೆ ಅನ್ವಯ ಹೊಂದಿ ಕ್ರಿಯಾಂಗವಾಗುತ್ತದೆ.

ಉದಾಹರಣೆ -- 'ಅರುಣಯಾ ಏಕಹಾಯನ್ಯಾ ಪಿಂಗಾಕ್ಷ್ಯಾ ಗವಾ ಸೋಮಂ ಕ್ರೀಣಾತಿ' ಎಂಬ ವಾಕ್ಯದಲ್ಲಿ ಮೊದಲು 'ಗವಾ ಕ್ರೀಣಾತಿ' ಎಂದು ಸೋಮಕ್ರೀಣಕ್ಕೆ ಹಸು ಅಂಗವೆಂದು ತಿಳಿಯುತ್ತದೆ. ಅನಂತರ ಏಕಹಾಯನತ್ವಾದಿಗಳು ಕ್ರಮವಾಗಿ ಗೋವಿನಲ್ಲಿ ಅನ್ವಯ ಹೊಂದುತ್ತವೆ. ಅದರಂತೆ ಪ್ರಕೃತ 'ಪಶುನಾ ಯಜೇತ' ಎಂಬಲ್ಲಿ ಏಕತ್ವವು ಮೊದಲು ಕರಣದ ಜೊತೆಗೆ ಅನ್ವಯ ಹೊಂದಿ ಕ್ರಿಯಾಂಗವೆನಿಸುತ್ತದೆ. ಅನಂತರ ಯಾಗಕ್ರಿಯಾದಲ್ಲಿ ಅನ್ವಿತವಾಗುತ್ತದೆ. ಅನಂತರ ಪಶುವಿನ ಜೊತೆ ಅನ್ವಯ ಹೊಂದುತ್ತದೆ. ಆದ್ದರಿಂದ ಪಶುನಾ ಎಂಬಲ್ಲಿರುವ ಏಕತ್ವವು ಯಜ್ಞಾಂಗವೆಂದು ವಿವಕ್ಷಿತವಾಗಿದೆ. ಪಶುವಿಗೆ ಅಂಗವಾಗಿದ್ದರೆ ಅನೇಕಪಶುಗಳನ್ನು ಹೋಮಿಸಬಹುದಿತ್ತು. ಯಜ್ಞಕ್ಕೆ ಅಂಗವಾಗಿರುವುದರಿಂದ ಒಂದೇ ಪಶುವನ್ನು ಹೋಮಿಸಬೇಕು ಇಷ್ಟು ಸಿದ್ಧಾಂತ.

ಇಲ್ಲಿ ಹೇಗೆ ಪಶು ವಿಧೇಯವಾದ್ದರಿಂದ ವಿಧೇಯಗತಏಕತ್ವವು ವಿವಕ್ಷಿತವಾಗಿದೆಯೋ ಅದರಂತೆ ಪ್ರಕೃತ ಪಾದವು ವಿಧೇಯವಾದ್ದರಿಂದ ಇಲ್ಲಿರುವ ಏಕತ್ವವು ವಿವಕ್ಷಿತವಾಗುತ್ತದೆ. ಆದ್ದರಿಂದ ಉದ್ದೇಶದಲ್ಲಿರುವ ಏಕತ್ವವು ಗ್ರಹಸಮ್ಮಾರ್ಜನಾಧಿಕರಣದಂತೆ ವಿವಕ್ಷಿತವಾಗುವುದಿಲ್ಲ. ಆದರೆ ವಿಧೇಯದಲ್ಲಿರುವ ಏಕತ್ವವು ಪಶ್ವೇಕತ್ವಾದೇರ್ವಿವಕ್ಷಾಧಿಕರಣದಂತೆ ವಿವಕ್ಷಿತವಾಗಬಹುದು.

**गुरुराजीयम्** – उद्देश्यविशेषणत्वादिति ॥ ननु नोद्देश्यविशेषणत्वमविवक्षायां निमित्तं अग्नीनादधीतेत्यादौ बहुत्वस्योद्देश्यविशेषणत्वेपि विवक्षादर्शनादिति चेन्न । निर्ज्ञातविशेषणत्वादित्यत्र तात्पर्यात् । तदर्थस्तु निर्ज्ञातस्य विशेषणत्वमिति । तथाच बहुत्वेन निश्चितस्य ग्रहस्य विशेषणमेकत्वं न विवक्षितमिति भावः ॥ **पादानामेव जिज्ञासितत्वादिति॥** विशेषणजिज्ञासाया एव

तद्विवक्षाहेतुत्वात्तस्याश्च तन्निश्चयतद्विपरीतनिश्चयान्यतरेण निरासे विशेषणविवक्षा नास्तीत्याशयः ।

## ಸಾರ

'ಪಾದೋಸ್ಯ' ಎಂಬ ಮಂತ್ರವಾಕ್ಯದಲ್ಲಿ ಎಲ್ಲ ಪಾದಗಳನ್ನು ಏಕಪಾದ ಎನ್ನಲಾಗಿದೆ. ಇಲ್ಲಿ ಭೂತಗಳು ಅನಂತವಾಗಿರುವುದರಿಂದ ಪಾದಗಳು ಅನಂತವಾಗಬೇಕಲ್ಲವೇ? ಎಂಬ ಪ್ರಶ್ನೆ ಸಹಜ. ಆದರೆ ಪಾದವನ್ನು ಉದ್ದೇಶಿಸಿ ವಿಶ್ವಭೂತವನ್ನು ವಿಧಾನ ಮಾಡುತ್ತಿಲ್ಲ. ಹಾಗೆ ಮಾಡಿದ್ದಲ್ಲಿ ಉದ್ದೇಶವಿಶೇಷಣವಾದ ಏಕತ್ವಕ್ಕೆ ಉದ್ದೇಶದಲ್ಲಿ ಅನ್ವಯ ಒಪ್ಪದ ಕಾರಣ ಅನೇಕ ಪಾದಗಳಾಗುತ್ತವೆಂದು ಆಕ್ಷೇಪಿಸಬಹುದಿತ್ತು. ಹೊರತಾಗಿ ವಿಶ್ವಭೂತಗಳನ್ನು ಉದ್ದೇಶಿಸಿ ಪಾದವನ್ನು ವಿಧಿಸಲಾಗಿದೆ. ವಿಧೇಯವಿಶೇಷಣವಾದ ಏಕತ್ವಕ್ಕೆ ವಿಧೇಯದಲ್ಲಿ ಅನ್ವಯವನ್ನು ಎಲ್ಲರೂ ಒಪ್ಪಿದ್ದಾರೆ. ಆದ್ದರಿಂದ ಎಲ್ಲ ಭೂತಗಳು ಸೇರಿ ಒಂದೇ ಪಾದ ಎನಿಸುತ್ತವೆ.

---

## ಪೂರ್ವಮೀಮಾಂಸೆಯ ದೃಷ್ಟಾಂತ

### तात्पर्यचन्द्रिका

**यथा च ''पौर्णमास्यां पौर्णमास्या यजेत'' इत्यादौ सप्तम्यन्तः पौर्णमास्यादिशब्दः काले मुख्यः, तृतीयान्तस्तु तत्सम्बन्धिनि कर्मण्यमुख्यः, तथा ''त्रिपात्'' इत्यत्र पादशब्दः स्वरूपांशे मुख्यः, ''पादोऽस्य'' इत्यत्र भिन्नांशे त्वमुख्य इति न कश्चिद्दोषः ।**

ಅನುವಾದ - 'ತ್ರಿಪಾದಸ್ಯಾಮೃತಂ ದಿವಿ' ಎಂಬಲ್ಲಿ ಸ್ವರೂಪಾಂಶವು ಹೇಳಲ್ಪಟ್ಟಿದೆ. ಪಾದೋಸ್ಯ ಎಂಬಲ್ಲಿ ಪಾದಶಬ್ದವು ಭಿನ್ನಾಂಶವನ್ನು ಹೇಳುತ್ತಿದೆ. ಭಿನ್ನಾಂಶವಾಚಕವಾದ ಈ ಪಾದಶಬ್ದವು ಅಮುಖ್ಯವಾಗಿದೆ. ಸ್ವರೂಪಾಂಶದಲ್ಲಿ ಹೇಳಲ್ಪಟ್ಟ ಪಾದಶಬ್ದವು ಮುಖ್ಯವಾಗಿದೆ. ಉದಾಹರಣೆ : - 'ಪೌರ್ಣಮಾಸ್ಯಾಂ ಪೌರ್ಣಮಾಸ್ಯಾ ಯಜೇತ' ಎಂಬಲ್ಲಿ ಸಪ್ತಮೀ ವಿಭಕ್ತ್ಯಂತವಾದ ಪೌರ್ಣ-ಮಾಸ್ಯಾಂ ಎಂಬ ಶಬ್ದವು ಹುಣ್ಣಿಮೆ ಎಂಬ ಕಾಲದಲ್ಲಿ ಮುಖ್ಯವಾಗಿದೆ. 'ಪೌರ್ಣಮಾಸ್ಯಾ' ಎಂಬ ತೃತೀಯಾಂತಶಬ್ದವು ಹುಣ್ಣಿಮೆ ಎಂಬ ಕಾಲಕ್ಕೆ ಸಂಬಂಧಿಸಿದ ಕರ್ಮದಲ್ಲಿ ಅಮುಖ್ಯವಾಗಿದೆ. ಅದರಂತೆ 'ತ್ರಿಪಾತ್' ಎಂಬಲ್ಲಿರುವ ಪಾದಶಬ್ದವು ಸ್ವರೂಪಾಂಶದಲ್ಲಿ ಮುಖ್ಯವಾಗಿದೆ. 'ಪಾದೋಽಸ್ಯ' ಎಂಬಲ್ಲಿರುವ ಪಾದಶಬ್ದವು ಭಿನ್ನಾಂಶದಲ್ಲಿ ಅಮುಖ್ಯವಾಗಿದೆ ಎಂದು ಹೇಳಿದಾಗ ಯಾವುದೇ ದೋಷವಿಲ್ಲ.

**प्रकाशः** – अत्र यथापशोर्विधेयत्वेन तद्गतमेकत्वं विवक्षितं, तथा पादैकत्वमपीत्यर्थः ।

नन्वथापि भूतभिन्ने विष्णौ भूतशब्दितविश्वात्मकत्वायोगेन भूतपादत्वायोगः । नच वाच्यं 'चैत्रस्य चतुर्भागबलो मैत्रः' इति वत् भिन्नमेव विश्वं तत्पादपरिमित-सामर्थ्याशयेन पादतयोच्यते, न तु मुख्यस्वरूपाभिप्रायेणेति । सूत्रे सकृत् श्रुतस्य श्रुतौ चैकत्र श्रुतस्य पादशब्दस्य भूतेष्वमुख्यता, अमृताख्यस्वस्वरूपत्रये च मुख्यतेत्यस्यादृष्टचरत्वादित्यत आह – **यथाचेति** ॥

एकादशे **''इष्टिराजसूयचातुर्मास्येष्वैककर्म्यादङ्गानां तन्त्रभावः स्यात्''** इति द्वितीयपादीय-द्वितीयाधिकरणे दर्शपूर्णमासयोर्विभज्य पर्वद्वये प्रयुज्यमानयोः किमङ्गानि तन्त्रमुत आवर्तेरन्निति सन्दिह्य एकफलत्वात् षण्णामपि यागानां एकोपक्रमावसानत्वावगमात् सकृदनुष्ठितान्यङ्गानि सर्वेषामुपकुर्वन्तीति पूर्वपक्ष-यित्वा, षण्णामेकफलत्वेन प्रयोगैक्यावगमेऽपि, वाचनिककालभेदेन प्रयोगभेदो भवति । **''पौर्णमास्यां पौर्णमास्या यजेत'' ''अमावास्यायाममावास्यया यजेत''** इति वचनाभ्यां हि पौर्णमास्यमावास्याकरणकः फलार्थो व्यापारः प्रत्ययवाच्यः । तदङ्गत्वेन पौर्णमास्यमावास्याकालौ विधीयेते । तेनाङ्गानामपि तत्र तत्करण-फलक्रियान्तर्गतानां तत्कालता विहिता भवति । अतः प्रतिक्रममङ्गान्यावर्तेरन्निति सिद्धान्तितम् ।

अत्रत्यन्यायेन यथा सप्तम्यन्तः पौर्णमास्यादिशब्दः काले मुख्यः, तृतीयान्तस्तु तत्सम्बन्धिनि गौणः, तथा प्रकृतेऽपीत्यर्थः । एवं ''प्रथमयोः'' इत्यत्र प्रथमा-शब्देन प्रथमाद्वितीययोरिव सूत्रे पादशब्देन मुख्यामुख्ययोर्ग्रह इति ज्ञेयम् ॥ एवमाद्यतृतीयसूत्रार्थौ मतद्वयाभिमतौ दूषितौ ।

यत्तु ''चेतोऽर्पणनिगदात्'' इति द्वितीयस्य परकीयं व्याख्यानं – गायत्र्यधिष्ठाने ब्रह्मणि छन्दोद्वारा चित्तसमाधानाय ''गायत्री वा इदं सर्वं'' इति ब्राह्मणवाक्येन सर्वात्मकत्वं निगद्यत इति, तत्तु तत्र तत्र ब्रह्मण आरोपा-धिष्ठानत्वादिनिरासन्यायेन निरस्तम् ।

ಪರಿಪೂರ್ಣಚಂದ್ರಿಕಾ

ವಿವರಣೆ - ಶಂಕೆ - ವಿಷ್ಣುವು ಸಕಲಭೂತಗಳಿಗಿಂತ ಭಿನ್ನನಾಗಿದ್ದಾನೆ. ಆದ್ದರಿಂದ ಪಾದೋಸ್ಯ ಎಂಬ ಶ್ರುತಿಯು ಸಕಲಭೂತಸ್ವರೂಪವೆಂಬ ಭೂತಪಾದತ್ವವನ್ನು ವಿಷ್ಣುವಿನಲ್ಲಿ ಹೇಗೆ ತಾನೆ ಹೇಳುತ್ತದೆ? ನೀವು ಹೀಗೆ ಇಲ್ಲಿ ಉತ್ತರಿಸಬಹುದು - 'ಚೈತ್ರಸ್ಯ ಚತುರ್ಭಾಗಬಲಃ ಮೈತ್ರಃ' (ಚೈತ್ರನ ನಾಲ್ಕನೆಯ ಒಂದಂಶದಷ್ಟೇ ಶಕ್ತಿಯು ಮೈತ್ರನಿಗಿದೆ) ಎಂಬ ಪ್ರಯೋಗದಲ್ಲಿ ಮೈತ್ರನು ಚೈತ್ರನಿಗಿಂತ ಭಿನ್ನನೇ ಆಗಿದ್ದಾನೆ. ಆದರೂ ಚೈತ್ರನ ಒಂದಂಶನಾಗಿದ್ದಾನೆ ಎಂಬ ಪ್ರಯೋಗಿಸುವುದು ಕಂಡಿದೆ. ಅದರಂತೆ ಸಕಲಭೂತಗಳು ವಿಷ್ಣುವಿಗಿಂತ ಭಿನ್ನವಾಗಿದ್ದರೂ ಭಗವಂತನ ಸಾಮರ್ಥ್ಯದ ಮುಂದೆ ಏಕದೇಶವಾದ್ದರಿಂದ ಪಾದಶಬ್ದವನ್ನು ಪ್ರಯೋಗಿಸಬಹುದು. ಹೊರತು ಸಕಲಭೂತಗಳು ಭಗವದಾತ್ಮಕ ಎಂಬ ಅಭಿಪ್ರಾಯದಿಂದಲ್ಲ. ಎಂದು. ಇದು ಸರಿಯಲ್ಲ. ಸೂತ್ರದಲ್ಲಿ ಹಾಗೂ ಶ್ರುತಿಯಲ್ಲಿ ಪಾದಶಬ್ದವು ಒಮ್ಮೆ ಮಾತ್ರ ಕೇಳಿಸುತ್ತಿದೆ. ಒಂದೇ ಬಾರಿ ಕೇಳಿಸುತ್ತಿರುವ ಪಾದಶಬ್ದಕ್ಕೆ ಸಕಲಭೂತಗಳಲ್ಲಿ ಅಮುಖ್ಯಪ್ರಯೋಗವೆಂದು, ಅಮೃತ-ಮಯರೂಪಗಳಲ್ಲಿ ಮುಖ್ಯಪ್ರಯೋಗವೆಂದು ಹೇಳಲು ಸಾಧ್ಯವಿಲ್ಲ. ಒಂದು ಬಾರಿ ಶ್ರುತವಾದ ಶಬ್ದಕ್ಕೆ ಒಂದರ್ಥದಲ್ಲಿ ಮುಖ್ಯಪ್ರಯೋಗವೆಂದು ಮತ್ತೊಂದರ್ಥದಲ್ಲಿ ಅಮುಖ್ಯಪ್ರಯೋಗವೆಂದು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲ. ಹೀಗಿರುವಾಗ ಭಗವಂತನ ನಾಲ್ಕುವಿಧರೂಪಪರವಾಗಿ ಮಂತ್ರವನ್ನು ಹೇಗೆ ವ್ಯಾಖ್ಯಾನಿಸುತ್ತೀರಿ?

ಸಮಾಧಾನ - ನೀವು ಹೇಳಿದಂತೆ ನಿಯಮವಿಲ್ಲ. ಪೂರ್ವಮೀಮಾಂಸೆಯಲ್ಲಿ 'ಪೌರ್ಣಮಾಸ್ಯಾ' ಎಂಬ ಒಂದೇ ಶಬ್ದಕ್ಕೆ ಕಾಲ ಎಂಬರ್ಥದಲ್ಲಿ ಮುಖ್ಯಪ್ರಯೋಗವು ಕರ್ಮ ಎಂಬರ್ಥದಲ್ಲಿ ಅಮುಖ್ಯಪ್ರಯೋಗವು ಕಂಡಿದೆ.

## ಪೂರ್ವಮೀಮಾಂಸಾಧಿಕರಣ

## ದರ್ಶಪೂರ್ಣಮಾಸೇಷ್ಟಿಪ್ರಭೃತಿಷು ಸಂಘಭೇದೇನ ಅಂಗಾನಾಂ ಭೇದೇನ ಅನುಷ್ಠಾನಾಧಿಕರಣಮ್ --

ಇಷ್ಟಿರಾಜಸೂಯಚಾತುರ್ಮಾಸ್ಯೇಷ್ವೈಕಕರ್ಮ್ಯಾದಂಗಾನಾಂ ತಂತ್ರಭಾವಃ ಸ್ಯಾತ್ ।
(೧೧/೨/೨)

ಹುಣ್ಣಿಮೆ ಹಾಗೂ ಅಮಾವಾಸ್ಯೆಗಳಲ್ಲಿ ಮೂರು ಮೂರು ಯಾಗಗಳನ್ನು ಅನುಷ್ಠಾನ ಮಾಡಬೇಕು. ಒಟ್ಟು ಆರು ಯಾಗಗಳನ್ನು ಎರಡು ಪರ್ವಗಳಲ್ಲಿ ಸಂಪೂರ್ಣಗೊಳಿಸಿದಾಗ ದರ್ಶಪೂರ್ಣಮಾಸಯಾಗವು ಪರಿಪೂರ್ಣವಾಗುತ್ತದೆ. ಈ ದರ್ಶಪೂರ್ಣಮಾಸ ಯಾಗದಲ್ಲಿ ಪ್ರಯಾಜ್ಯಾದಿ ಅನೇಕ ಅಂಗಯಾಗಗಳನ್ನು ವಿಧಿಸಿದ್ದಾರೆ. ಈ ಅಂಗಯಾಗಗಳನ್ನು ಒಂದು ಪರ್ವದಲ್ಲಿ ಆಚರಿಸಿದರೆ ಸಾಕೋ ಅಥವಾ ಎರಡೂ ಪರ್ವಗಳಲ್ಲಿ ಪ್ರತ್ಯೇಕವಾಗಿ ಆಚರಿಸಬೇಕೋ? ಎಂದು ಸಂದೇಹ.

ಪೂರ್ವಪಕ್ಷ - ಆರೂ ಯಾಗಗಳನ್ನು ಒಂದೇ ಫಲಕ್ಕಾಗಿ ವಿಧಾನ ಮಾಡಲಾಗಿದೆ. ಆದ್ದರಿಂದ ಆರೂ ಯಾಗಗಳ ಉಪಕ್ರಮ ಹಾಗೂ ಉಪಸಂಹಾರಗಳು ಒಂದೇ ಹೊರತು ಬೇರೆಯಲ್ಲ. ಆದ್ದರಿಂದ ಪ್ರಾತಃಸವನದಲ್ಲಿ ಆರಂಭಿಸಿದ ಕರ್ಮವು ತೃತೀಯಸವನದಲ್ಲಿ ಪರ್ಯವಸಾನವಾಗುವಂತೆ ಪೌರ್ಣ-

ಮಾಸಿಯಲ್ಲಿ ಆರಂಭಿಸಿದ ಸಕಲಕರ್ಮಗಳು ಅಮಾವಾಸ್ಯಾ ಯಾಗದಲ್ಲಿ ಸಮಾಪ್ತವಾಗುತ್ತವೆ. ಪೌರ್ಣಮಾಸ್ಯಯಾಗದ ನಿಷ್ಪತ್ತಿಗಾಗಿ ಆಚರಿಸಲ್ಪಟ್ಟ ಸಕಲ ಪ್ರಯಾಜಾದಿ ಅಂಗಗಳು ಅಮಾವಾಸ್ಯಾ ಯಾಗದ ನಿಷ್ಪತ್ತಿಗೂ ಕಾರಣವಾಗುತ್ತದೆ. ಆದ್ದರಿಂದ ಪ್ರಯಾಜಾದಿ ಅಂಗಗಳನ್ನು ಒಮ್ಮೆ ಅನುಷ್ಠಾನ ಮಾಡಿದರೆ ಸಾಕು ಎರಡು ಬಾರಿ ಅನುಷ್ಠಾನ ಮಾಡಬೇಕಿಲ್ಲ.

---

भाट्टसङ्ग्रहः –

**अथ द्वितीयं दर्शपूर्णमासेष्टिप्रभृतिषु सङ्घभेदेनाङ्गानां भेदेनानुष्ठानाधिकरणम्**

**इष्टिराजसूयचातुर्मास्येष्वैककर्म्यादङ्गानां तन्त्रभावः स्यात् ॥ ११ ॥**
**कालभेदान्नेति चेत् ॥ १२ ॥ नैकदेशत्वात्पशुवत् ॥ १३ ॥ अपि वा कर्मपृथक्त्वात्तेषां तन्त्रविधानात्साङ्गानामुपदेशः स्यात् ॥ १४ ॥ तथा चान्यार्थदर्शनम् ॥ १५ ॥ तदाऽवयवेषु स्यात् ॥ १६ ॥ पशौ तु चोदनैकत्वात्तन्त्रस्य विप्रकर्षः स्यात् ॥ १७ ॥)**

पूर्वोक्तैकफलानां षण्णामङ्गतन्त्रत्वमिहापोद्यत इति सङ्गति । दर्शपूर्णमासयोरुत्पत्तिवाक्यावगतकालानुरोधाद्विभज्य पर्वद्वये प्रयुज्यमानयोरङ्गानि तन्त्रम्, उत प्रतित्रिकमावर्तेरन्निति सन्देहे, "दर्शपूर्णमासाभ्यां स्वर्गकामो यजेत" इत्यनेन विवक्षितसाहित्यानां षण्णामपि यागानामेकस्मिन् फले विधानात्सहैव प्रयोक्तव्या इति तेषां षण्णामेवोपक्रमोपसंहारत्वम् । तथा च प्रातःसवन आरब्धस्तृतीयसवन इव पौर्णमास्यामारब्धं सर्वं प्रधानममावास्यायां समाप्यते । तेन पौर्णमास्यां क्रियमाणमप्यङ्गजातं सर्वार्थं भवतीति तन्त्रम् । साहित्यविधिवशाद्युगपदेव षण्णमापि प्रयोगः कार्यतया प्राप्तोऽपि "यदाग्नेयोऽष्टाकपालोऽमावास्यायां पौर्णमास्यां चाच्युतो भवति" इति वचनाद्विप्रकृष्यते । न तावताऽङ्गानामावृत्तिः । एवं "राजसूयेन स्वाराज्यकामो यजेत" इत्येकफलार्थानामनुमत्यादीष्टीनां पवित्रादिसोमयागानां च प्रयोगस्य कालभेदेपि "बार्हस्पत्यश्चरुर्ब्रह्मणो गृहे । ऐन्द्र एकादशकपालो राजन्यस्य गृहे । आदित्यश्चरुर्महिष्या गृहे" इति वचनादेशभेदेऽप्यङ्गानि तन्त्रम् । तथा "चातुर्मास्यैः स्वर्गकामो यजेत" इत्येकप्रयोगवचनेनैकफलार्थे विनियुक्तानां वैश्वदेववरुणप्रघाससामकेधशुनासीरीयाख्यानां चतुर्णां पर्वणां "वसन्ते वैश्वदेवेन यजेत । वर्षासु वरुणप्रघासैर्यजेत । हेमन्ते साकमेधैर्यजेत" इत्यादिवचनात्कालभेदेन प्रयोगविप्रकर्षेऽप्यङ्गानां तन्त्रतेति । तदाह सूत्रे, **इष्टिराजसूयेत्यादि** । व्यक्तोऽर्थः । **ऐककर्म्यात्** एकफलत्वादित्यर्थः । **सिद्धान्तस्तु,** "पौर्णमास्यां पौर्णमास्या यजेत" इति वाक्ये पौर्णमासी-संज्ञकाग्नेयादियागत्रयकरणको यः फलार्थस्साङ्गप्रत्ययवाच्यव्यापारस्तदङ्गत्वेन पौर्णमासीकालो विधीयत इत्यङ्गानामपि यागकरणकफलक्रियान्तर्गतानां तत्कालतैव विहिता भवति । एवमेव "अमावास्यायाममावस्यया यजेत" इत्यत्राप्यमावस्याशब्दितयागत्रयकरणकफलार्थव्यापारेऽमावास्या-

ಸಿದ್ಧಾಂತ - ಆರೂ ಯಾಗಗಳಿಗೆ ಒಂದೇ ಫಲವಿರುವುದರಿಂದ ಪ್ರಯೋಗದಲ್ಲಿ ಐಕ್ಯವು ತಿಳಿಯುತ್ತದೆ. ಆದರೆ ಹುಣ್ಣಿಮೆ ಮತ್ತು ಅಮಾವಾಸ್ಯೆ ಎಂಬ ಕಾಲಗಳಲ್ಲಿ ಭೇದವಿರುವುದರಿಂದ ಪ್ರಯಾಜಾದಿ ಅಂಗಗಳು ಭಿನ್ನ ಭಿನ್ನವಾಗುತ್ತವೆ. 'ಪೌರ್ಣಮಾಸ್ಯಾಂ ಪೌರ್ಣಮಾಸ್ಯಾ ಯಜೇತ' ಎಂಬ ವಾಕ್ಯದಲ್ಲಿ ಪೌರ್ಣಮಾಸಿ ಎಂಬ ಹೆಸರುಳ್ಳ ಆಗ್ನೇಯಾದಿ ಮೂರು ಯಾಗಗಳನ್ನು ವಿಧಿಸಲಾಗಿದೆ. ಈ ಆಗ್ನೇಯಾದಿ ಮೂರು ಯಾಗಗಳನ್ನು ಹುಣ್ಣಿಮೆ ಎಂಬ ಕಾಲದಲ್ಲಿ ವಿಧಾನ ಮಾಡಲಾಗಿದೆ. ಇದರಂತೆ ಅಮಾವಾಸ್ಯಾಯಾಂ ಅಮಾವಾಸ್ಯಯಾ ಯಜೇತ' ಎಂಬ ವಾಕ್ಯದಲ್ಲಿ ಅಮಾವಾಸ್ಯಾ ಎಂದು ಹೆಸರುಳ್ಳ ಮೂರು ಯಾಗಗಳನ್ನು ಅಮಾವಾಸ್ಯೆ ಎಂಬ ಕಾಲದಲ್ಲಿ ವಿಧಿಸಲಾಗಿದೆ. ಇಲ್ಲಿಯ ಪೌರ್ಣಮಾಸ್ಯಾ ಮತ್ತು ಅಮಾವಾಸ್ಯಾ ಎಂಬ ಶಬ್ದಗಳು ಕಾಲವನ್ನು ಕರಣವೆಂದು ಹೇಳುತ್ತಿವೆ. ಈ ಕಾಲವನ್ನೇ ಕರಣವಾಗಿವುಳ್ಳ ಧನಾರ್ಥವ್ಯಾಪಾರವು ಪ್ರತ್ಯಯವಾಚ್ಯವಾಗಿದೆ. ಯಜೇತ ಎಂಬಲ್ಲಿ ಲಿಜ್‌ಪ್ರತ್ಯಯಕ್ಕೆ ಭಾವನಾ ಎಂದರ್ಥ. ಸ್ವರ್ಗಸಾಧನವಾದ ಭಾವನಾ ಎಂಬ ವ್ಯಾಪಾರವೇ ಲಿಜ್‌ಪ್ರತ್ಯಯದಿಂದ ವಾಚ್ಯವಾಗಿದೆ ಎಂದರ್ಥ.

ಪ್ರಕೃತ ಪೌರ್ಣಮಾಸ್ಯಾ ಯಜೇತ ಎಂದು ಹೇಳಿದಾಗ 'ಪೌರ್ಣಮಾಸ್ಯಾಕರಣಕೇನ ಯಾಗಂ ಭಾವಯೇತ್' ಎಂದರ್ಥವಾಗುತ್ತದೆ. ಪೌರ್ಣಮಾಸ್ಯಾ ಎಂಬ ಕರ್ಮವು ಭಾವನಾದಲ್ಲಿ ಕರಣ ಆಗಿದೆ. ಕಾಲವು ಅಂಗತ್ವೇನ ವಿಹಿತವಾಗಿದೆ. ಅಂದರೆ ಪೌರ್ಣಮಾಸ್ಯಾಕರ್ಮಕ್ಕೆ ಹುಣ್ಣಿಮೆ ಎಂಬ ಕಾಲವನ್ನು ಅಮಾವಾಸ್ಯಾ ಎಂಬ ಕರ್ಮಕ್ಕೆ ಅಮಾವಾಸ್ಯಾ ಎಂಬ ಕಾಲವನ್ನು ಈ ವಾಕ್ಯವು ವಿಧಿಸಿದೆ ಎಂದರ್ಥ. ಇದರಿಂದ ಪೌರ್ಣಮಾಸ್ಯಾ ಕರ್ಮಕ್ಕೆ ಅಂಗವಾದ ಪ್ರಯಾಜಾದಿ ಅಂಗಗಳಿಗೂ ಹುಣ್ಣಿಮೆ ಎಂಬ ಕಾಲವನ್ನೇ ವಿಧಿಸಿದಂತಾಯಿತು. ಅಂದರೆ ಯಾವ ಹುಣ್ಣಿಮೆ ಎಂಬ ಕಾಲದಲ್ಲಿ ಆಗ್ನೇಯಾದಿ ಮೂರು ಪೌರ್ಣಮಾಸ್ಯಾದಿ ಯಾಗಗಳನ್ನು ಆಚರಿಸುತ್ತೇವೋ ಅದೇ ಕಾಲದಲ್ಲಿ ಪ್ರಯಾಜಾದಿ ಅಂಗಗಳನ್ನು ಆಚರಿಸಬೇಕು. ಪೌರ್ಣಮಾಸ್ಯಾ ಯಾಗಕರಣಕಫಲಕ್ರಿಯೆಯೆಂಬ ಭಾವನಾದಲ್ಲಿ ಪ್ರಯಾಜಾದಿ ಅಂಗಗಳು ಅಂತರ್ಗತವಾದ್ದರಿಂದ ಕಾಲವಿಧಿಯು ಅಂಗಗಳಿಗೂ ಹೇಳಿದಂತಾಯಿತು.

ಒಟ್ಟು ಅಭಿಪ್ರಾಯ - ಆಗ್ನೇಯಾದಿ ಮೂರು ಪೌರ್ಣಮಾಸಿಯಾಗಗಳನ್ನು ಆಚರಿಸುವಾಗಲೂ ಈ ಪ್ರಯಾಜಾದಿ ಅಂಗಯಾಗಗಳನ್ನು ಅನುಷ್ಠಾನ ಮಾಡಬೇಕು. ಅಮಾವಾಸ್ಯಾ ಎಂಬ ಮೂರು ಯಾಗಗಳನ್ನು ಆಚರಿಸುವಾಗಲೂ ಪ್ರಯಾಜಾದಿ ಅಂಗಯಾಗಗಳನ್ನು ಅನುಷ್ಠಾನ ಮಾಡಬೇಕು. ಹೀಗೆ ಅಂಗಗಳನ್ನು ಪ್ರತ್ಯೇಕವಾಗಿ ಎರಡು ಪರ್ವಗಳಲ್ಲಿ ಅನುಷ್ಠಾನ ಮಾಡಬೇಕು.

---

कालो विधीयत इति दर्शयागकरणकफलार्थक्रियायामन्तर्गतानामङ्गानां तत्कालतैवोक्तः भवतीति द्वयोरपि कालयोरङ्गानामावृत्तिः । नच यथा पशुप्रयोगे "वपया प्रातस्सवने प्रचरन्ति । पुरोडाशेन माध्यन्दिने । अङ्गैस्तृतीयसवने" इति विप्रकृष्यमाणेऽपि नाङ्गानामावृत्तिस्तथाऽत्र किं न स्यादिति शङ्क्यम् । पशौ प्रातर्वपामात्रस्य माध्यन्दिने पुरोडाशमात्रस्य तृतीयसवने हृदयाद्यङ्गमात्रस्य चोदनात् । अत्र पुनः प्रधानकालभेदस्य चोदनेन वैषम्यात् । एवञ्च राजसूये चातुर्मास्येषु च देशकालभेदेऽप्यङ्गावृत्तिर्ध्येयेति ।

इति द्वितीयं दर्शपूर्णमासेष्टिप्रभृतिषु सङ्घभेदेनाङ्गानां भेदेनानुष्ठानाधिकरणम्

ಗಾಯತ್ರ್ಯಧಿಕರಣ-(೧।೧।೧೧)

ಪ್ರಕೃತ 'ಪೌರ್ಣಮಾಸ್ಯಾಂ ಪೌರ್ಣಮಾಸ್ಯಾ ಯಜೇತ' ಎಂಬ ವಾಕ್ಯದಲ್ಲಿ ಸಪ್ತಮ್ಯಂತವಾದ ಪೌರ್ಣಮಾಸ್ಯಾಂ ಎಂಬ ಶಬ್ದವು ಹುಣ್ಣಿಮೆ ಎಂಬ ಕಾಲದಲ್ಲಿ ಮುಖ್ಯಾರ್ಥವುಳ್ಳದ್ದಾಗಿದೆ. ತೃತೀಯಾಂತ-ವಾದ 'ಪೌರ್ಣಮಾಸ್ಯಾ' ಎಂಬ ಶಬ್ದವು ಕಾಲಸಂಬಂಧಿಯಾದ ಕರ್ಮದಲ್ಲಿ ಗೌಣಾರ್ಥವುಳ್ಳದ್ದಾಗಿದೆ. ಇದರಂತೆ 'ತ್ರಿಪಾತ್' ಎಂಬಲ್ಲಿರುವ ಪಾದಶಬ್ದವು ಭಗವಂತನ ಸ್ವರೂಪಾಂಶದಲ್ಲಿ ಮುಖ್ಯವಾಗಿದೆ. 'ಪಾದೋಸ್ಯ' ಎಂಬಲ್ಲಿ ಭಿನ್ನಾಂಶದಲ್ಲಿ ಅಮುಖ್ಯವಾಗಿದೆ. ಆದ್ದರಿಂದ ಒಂದೇ ಪಾದಶಬ್ದವು ಮುಖ್ಯ ಹಾಗೂ ಅಮುಖ್ಯಾರ್ಥಗಳನ್ನು ಹೇಳಬಹುದು.

ಇದನ್ನು ವ್ಯಾಕರಣವೂ ಸಮರ್ಥಿಸುತ್ತದೆ. 'ಪ್ರಥಮಯೋಃ ಪೂರ್ವಸವರ್ಣಃ' (೬/೧/೧೦೨) ಎಂಬಲ್ಲಿರುವ ಪ್ರಥಮಾಶಬ್ದಕ್ಕೆ ಪ್ರಥಮಾವಿಭಕ್ತಿ ಮತ್ತು ದ್ವಿತೀಯಾವಿಭಕ್ತಿಗಳಿಗೆ ಎಂದರ್ಥ. ಅಂದರೆ ಒಂದೇ ಪ್ರಥಮಶಬ್ದವು ಪ್ರಥಮಾವಿಭಕ್ತಿಯನ್ನು ಮುಖ್ಯವಾಗಿ ಹೇಳುತ್ತಿದೆ. ದ್ವಿತೀಯಾವಿಭಕ್ತಿಯನ್ನು ಅಮುಖ್ಯವಾಗಿ ಹೇಳುತ್ತಿದೆ. ಅದರಂತೆ ಪಾದಶಬ್ದವೂ ಸಹ ಮುಖ್ಯ ಹಾಗೂ ಅಮುಖ್ಯಾರ್ಥಗಳನ್ನು ಹೇಳಬಹುದು.

ಇಲ್ಲಿಯತನಕ 'ಜ್ಯೋತಿಶ್ಚರಣಾಭಿಧಾನಾತ್' ಎಂಬ ಮೊದಲನೆಯ ಸೂತ್ರವನ್ನು ಮತ್ತು 'ಭೂತಾದಿಪಾದವ್ಯಪದೇಶಾಚ್ಚ' ಎಂಬ ಮೂರನೆಯ ಸೂತ್ರವನ್ನು ನಿರಾಕರಿಸಿದ್ದಾಯಿತು.

**गुरुराजीयम्** – परीत्या पादशब्दस्यैकार्थत्वे सम्भवत्यनेकार्थत्वम-न्याय्यमित्याह – **यथा चेति** ॥ मुख्यार्थानेकत्वं नास्त्येव मुख्यामुख्योभयार्थत्वं दृष्टत्वान्न विरुद्धमिति भावः । न चोक्तस्थले तृतीयासप्तम्युक्तकरणाधिकरणत्वयो-रिवार्थभेदकल्पकस्य प्रकृतेऽभाव इति वाच्यम् । अमृतत्वोक्तित एव श्रुत्यर्थाभ्यां विनाशभावाभावयोरर्थभेदकल्पकयोर्लाभादिति भावः ।

## ಅದ್ವೈತಿಗಳ ನಾಲ್ಕನೇ ಸೂತ್ರ ವ್ಯಾಖ್ಯಾನ ವಿಮರ್ಶೆ

### तात्पर्यचन्द्रिका

**यच्च ''उभयस्मिन्नप्यविरोधात्'' इत्यस्य परकीयं व्याख्यानम् –''यथा वृक्षाग्र-सम्बद्धोऽपि श्येनः 'वृक्षाग्रे श्येनः, वृक्षाग्रात् परतः श्येनः' इति च व्यपदिश्यते, तथा दिव्येव सत् ब्रह्म 'दिवः परं' इत्यप्युच्यते । यथा वा वृक्षाग्रेणासम्बद्धोऽपि श्येनः 'वृक्षाग्रात्परत्र श्येनः, वृक्षाग्रे श्येनः' इति च उच्यते, एवं दिवः परमपि ब्रह्म 'दिवि' इत्यप्युच्यत इति, तदपि न । यस्य वृक्षाग्रस्य यं प्रति मुख्यमाधारत्वं अवधित्वं वा, तस्यैव तं प्रत्येवामुख्यस्यावधित्वस्यवाधारत्वस्य वा विवक्षायां' 'वृक्षाग्रात् परत्र श्येनः' इत्यादिप्रयोगाभावेन दृष्टान्तासिद्धेः ॥**

ಪರಿಪೂರ್ಣಚಂದ್ರಿಕಾ

**अत्र भामत्यामुक्तम् – यदाऽऽधारत्वं मुख्यं, तदा 'वृक्षाग्रात्' इत्यत्र श्येन-शब्दो वृक्षाग्रलग्नश्येनावयवादुपरितनश्येनावयवावच्छिन्नश्येनावयविलक्षकः । अग्र-शब्दो वा अग्रादर्वाग्भागलक्षकः । यदा त्ववधित्वं मुख्यं, तदा 'अग्रे' इत्यत्र सप्तमी सामीप्यं लक्षयति । एवं दार्ष्टान्तिकेऽपि ज्योतिश्शब्दो वा 'दिवः' इत्यत्र द्युप्राति-पदिकं वा 'दिवि' इत्यत्र सप्तमी वा लाक्षणिकीति, तन्न, ज्योतिषो ब्रह्मणो निरवयवत्वात् । लक्षणादिप्रसङ्गात् । ''पृथिव्यां द्यौर्महामेरुः'' इत्यादिस्मृति-विरोधाच्च ॥**

ಅನುವಾದ - 'ಉಭಯಸ್ಮಿನ್ನಪ್ಯವಿರೋಧಾತ್' ಎಂಬ ನಾಲ್ಕನೆಯ ಸೂತ್ರಕ್ಕೆ ಪರರ ವ್ಯಾಖ್ಯಾನ ಹೀಗಿದೆ - ದಿವಿಸ್ಥಿತತ್ವ ಮತ್ತು ದಿವಃಪರತ್ವಗಳನ್ನು ಒಬ್ಬನೇ ವಿಷ್ಣುವಿನಲ್ಲಿ ಶ್ರುತಿಯು ಹೇಳುತ್ತಿದೆ. ಈ ವಿರೋಧವನ್ನು ನಾವು ಪ್ರಮಾಣದ ಆಧಾರದಿಂದ ಪರಿಹರಿಸಿದ್ದೇವೆ. ಆದರೆ ಅದ್ವೈತಿಗಳು ದೃಷ್ಟಾಂತದ ಮೂಲಕ ಪರಿಹರಿಸಲು ಪ್ರಯತ್ನಿಸಿದ್ದಾರೆ. ಅದು ಹೀಗೆ -- 'ಶ್ಯೇನ'ಪಕ್ಷಿಯು ಮರದ ತುದಿಯಲ್ಲಿ ಕುಳಿತಿರುವಾಗ 'ಮರದ ತುದಿಯಲ್ಲಿ ಹದ್ದು' (ವೃಕ್ಷಾಗ್ರೇ ಶ್ಯೇನಃ) ಎಂದು ಪ್ರಯೋಗಿಸು-ತ್ತಾರೆ. ಅಥವಾ 'ಮರದ ಮೇಲೆ ಹದ್ದು' (ವೃಕ್ಷಾಗ್ರಾತ್ ಪರತ್ರ ಶ್ಯೇನಃ) ಎಂದೂ ಸಹ ಪ್ರಯೋಗಿ-ಸುತ್ತಾರೆ. ಅದರಂತೆ ಬ್ರಹ್ಮನು ದಿವಿಸ್ಥಿತನೇ ಆಗಿದ್ದಾನೆ. ಆದರೂ ತ್ರಿಲೋಕಕ್ಕಿಂತ ಮೇಲಿದ್ದಾನೆ (ದಿವಃಪರನಾಗಿದ್ದಾನೆ) ಎಂದು ಪ್ರಯೋಗಿಸಿದರೆ ಏನು ತಪ್ಪು?

ಅಥವಾ 'ಶ್ಯೇನಪಕ್ಷಿಯು ಮರದ ಮೇಲೆ ಕುಳಿತುಕೊಳ್ಳದೇ ಹಾರುತ್ತಿರುವಾಗ 'ಮರದ ಮೇಲೆ ಹದ್ದು' (ವೃಕ್ಷಾಗ್ರಾತ್ ಪರತ್ರ ಶ್ಯೇನಃ) ಎಂದು ಹೇಗೆ ಪ್ರಯೋಗಿಸುತ್ತಾರೋ ಅದರಂತೆ 'ಮರದ ತುದಿಯಲ್ಲಿ ಹದ್ದು' ಎಂದೂ ಸಹ ಪ್ರಯೋಗಿಸುತ್ತಾರೆ. ಇದರಂತೆ ಪ್ರಕೃತ ಬ್ರಹ್ಮನು ದಿವಃಪರನಾಗಿ-ದ್ದರೂ ದಿವಿಸ್ಥಿತನೆಂದು ಪ್ರಯೋಗಿಸಬಹುದು.' ಎಂದು ಅದ್ವೈತಿಗಳ ವಾದ.

ಇದು ತಪ್ಪು. ಅದ್ವೈತಿಗಳು ನೀಡಿದ ದೃಷ್ಟಾಂತವು ವಿಷಮವಾಗಿದೆ. ಶ್ಯೇನಪಕ್ಷಿಯು ಮರದ ತುದಿಯಲ್ಲಿ ಕುಳಿತಿರುವಾಗ (ವೃಕ್ಷಾಗ್ರದ ಸಂಬಂಧವನ್ನು ಹೊಂದಿರುವಾಗ) ಆಧಾರತ್ವವು ಮುಖ್ಯ-ವಾಗುತ್ತದೆ. ಆವಾಗ 'ವೃಕ್ಷಾಗ್ರೇ ಶ್ಯೇನಃ' ಎಂಬ ಪ್ರಯೋಗವು ಮುಖ್ಯಪ್ರಯೋಗವಾಗುತ್ತದೆ. ಆದರೆ ಆಧಾರತ್ವವು ಮುಖ್ಯವಾದಾಗ ಅವಧಿತ್ವವು ಅಮುಖ್ಯವಾಗಿರುತ್ತದೆ. ಆದ್ದರಿಂದ 'ವೃಕ್ಷಾಗ್ರ್ಯಾತ್ ಪರತ್ರ ಶ್ಯೇನಃ' ಎಂಬ ಪ್ರಯೋಗವು ಅಮುಖ್ಯಾವಧಿತ್ವವಿವಕ್ಷೆಯಿಂದ ಅಮುಖ್ಯಪ್ರಯೋಗವಾಗುತ್ತದೆ. ವೃಕ್ಷಾಗ್ರದಲ್ಲಿ ಶ್ಯೇನಪಕ್ಷಿಯು ಸಂಬಂಧವನ್ನು ಹೊಂದದೇ ಇರುವಾಗ ಅವಧಿತ್ವವು ಮುಖ್ಯವಾಗುತ್ತದೆ. ಆಧಾರತ್ವವು ಅಮುಖ್ಯವಾಗುತ್ತದೆ. ಅವಧಿತ್ವವು ಮುಖ್ಯವಾದ್ದರಿಂದ 'ವೃಕ್ಷಾಗ್ರಾತ್ ಪರತ್ರ ಶ್ಯೇನಃ' ಎಂಬ ಪ್ರಯೋಗವು ಮುಖ್ಯವೆನಿಸಿ 'ವೃಕ್ಷಾಗ್ರೇ ಶ್ಯೇನಃ' ಎಂಬ ಪ್ರಯೋಗವು ಅಮುಖ್ಯವೆನಿಸುತ್ತದೆ.

ಆದರೆ ಯಾವಪಕ್ಷದಲ್ಲಿ ಆಧಾರತ್ವವು ಮುಖ್ಯವಾಗಿರುತ್ತದೋ ಆವಾಗಲೇ ಅವಧಿತ್ವವನ್ನು ಮುಖ್ಯವಾಗಿ ವಿವಕ್ಷಿಸಿ 'ವೃಕ್ಷಾಗ್ರಾತ್ ಪರತ್ರ ಶ್ಯೇನಃ' ಎಂಬ ಮುಖ್ಯಪ್ರಯೋಗವು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲ.

ಅಥವಾ ಅವಧಿತ್ವವು ಮುಖ್ಯವಾಗಿರುವಾಗ ಪಕ್ಷದಲ್ಲಿ ಪುನಃ ಆಧಾರತ್ವವನ್ನು ಮುಖ್ಯವೆಂದು ಪರಿಗಣಿಸಿ 'ವೃಕ್ಷಾಗ್ರೇ ಶ್ಯೇನಃ' ಎಂದು ಪ್ರಯೋಗಿಸುವುದೂ ಸಹ ಎಲ್ಲಿಯೂ ಕಂಡಿಲ್ಲ. ಅಂದರೆ ನೀವು ನೀಡಿದ ದೃಷ್ಟಾಂತದಲ್ಲಿ ಒಂದು ಪ್ರಯೋಗ ಮುಖ್ಯವೆಂದೂ, ಮತ್ತೊಂದು ಪ್ರಯೋಗ ಅಮುಖ್ಯವೆಂದೂ ನಿರ್ಣಯವಾಗುತ್ತದೆ. ಆದರೆ ಪ್ರಕೃತ ಬ್ರಹ್ಮನಲ್ಲಿ ದಿವಿಸ್ಥಿತತ್ವ ಮತ್ತು ದಿವಃ-ಪರತ್ವವೆಂಬ ಎರಡೂ ಪ್ರಯೋಗಗಳನ್ನು ಏಕಕಾಲದಲ್ಲಿ ಮುಖ್ಯವೆನ್ನುತ್ತಿದ್ದೀರಿ. ಇದು ಸರಿಯಲ್ಲ.

ಇಲ್ಲಿ ಭಾಮತಿ ಹೀಗೆ ಹೇಳಿದೆ - ಆಧಾರತ್ವವು ಮುಖ್ಯವಾದಾಗ ಶ್ಯೇನಶಬ್ದಕ್ಕೆ ಅಥವಾ ಅಗ್ರಶಬ್ದಕ್ಕೆ ಲಕ್ಷಣಾ ಮಾಡಬೇಕು. ಪಕ್ಷಿಯು ವೃಕ್ಷದಲ್ಲಿ ಸಂಬಂಧವನ್ನು ಹೊಂದಿದಾಗ ಆಧಾರತ್ವವು ಮುಖ್ಯವಾದ್ದರಿಂದ 'ವೃಕ್ಷಾಗ್ರೇ ಶ್ಯೇನಃ' ಎಂಬ ಪ್ರಯೋಗವು ಮುಖ್ಯಪ್ರಯೋಗವೆನಿಸುತ್ತದೆ. ಆದರೆ 'ವೃಕ್ಷಾಗ್ರಾತ್ ಪರತ್ರ ಶ್ಯೇನಃ' ಎಂಬುದು ಅಮುಖ್ಯಪ್ರಯೋಗ. ಇಲ್ಲಿ ವೃಕ್ಷದ ತುದಿಯಲ್ಲಿ ಪಕ್ಷಿಯ ಕಾಲುಗಳಷ್ಟೇ ಸಂಬಂಧವನ್ನು ಹೊಂದಿವೆ. ಪಕ್ಷಿಯ ಹೊಟ್ಟೆ ಕತ್ತು ಮೊದಲಾದವು ಸಂಬಂಧವನ್ನು ಹೊಂದಿಲ್ಲ. ಆದ್ದರಿಂದ ಉದರಾದಿ ಅವಯವಾಚ್ಛಿನ್ನವಾದ ಶ್ಯೇನಅವಯವಿಯಲ್ಲಿ ಶ್ಯೇನಶಬ್ದಕ್ಕೆ ಲಕ್ಷಣಾ ಮಾಡಬೇಕು. (ಶ್ಯೇನಅವಯವಿಯು ವೃಕ್ಷಸಂಬಂಧವನ್ನು ಹೊಂದಿದ ಶ್ಯೇನಪಕ್ಷಿಯ ಪಾದಾದ್ಯವಚ್ಛಿನ್ನವೂ ಆಗಿದೆ; ವೃಕ್ಷಸಂಬಂಧವನ್ನು ಹೊಂದದ ಉದರಾದ್ಯವಯವಾವಚ್ಛಿನ್ನವೂ ಆಗಿದೆ. ಇಲ್ಲಿ ಉದರಾದ್ಯವಯವಾವಚ್ಛಿನ್ನವಾದ ಶ್ಯೇನ ಅವಯವಿಯಲ್ಲಿ ಲಕ್ಷಣಾ ಮಾಡಬೇಕು).

ಅಥವಾ 'ವೃಕ್ಷಾಗ್ರಾತ್' ಎಂಬಲ್ಲಿರುವ ಅಗ್ರಶಬ್ದಕ್ಕೆ ಮರದ ಅಗ್ರಭಾಗಕ್ಕಿಂತ ಕೆಳಗಿನ ಭಾಗದಲ್ಲಿ ಲಕ್ಷಣಾ ಮಾಡಬೇಕು. ಆವಾಗ ಮರದಿಂದಾಚೆ ಹಕ್ಕಿಯಿದೆ ಎಂದಾದರೆ ಮರದ ಮೇಲಿದೆ ಎಂದೂ ಅರ್ಥವಾಗುತ್ತದೆ.

ಅವಧಿತ್ವವು ಮುಖ್ಯವಾದಾಗ 'ವೃಕ್ಷಾಗ್ರಾತ್ ಪರತ್ರ ಶ್ಯೇನಃ' ಎಂಬುದು ಮುಖ್ಯಪ್ರಯೋಗ-ವಾಗಿದೆ. ಆದರೆ 'ವೃಕ್ಷಾಗ್ರೇ ಶ್ಯೇನಃ' ಎಂಬುದು ಅಮುಖ್ಯಪ್ರಯೋಗವಾಗುತ್ತದೆ. 'ವೃಕ್ಷಾಗ್ರೇ' ಎಂಬಲ್ಲಿರುವ ಅಗ್ರಶಬ್ದದ ಸಪ್ತಮೀವಿಭಕ್ತಿಗೆ ಸಾಮೀಪ್ಯದಲ್ಲಿ ಲಕ್ಷಣಾ ಮಾಡಬೇಕು. ಆವಾಗ ಪಕ್ಷಿಯು ಮರದಿಂದ ಆಚೆ ಹಾರುತ್ತಿದ್ದರೂ ಪಕ್ಷಿಯ ಹತ್ತಿರ ಮರದ ತುದಿ ಇರುವುದರಿಂದ 'ವೃಕ್ಷಾಗ್ರೇ ಶ್ಯೇನಃ' ಎಂಬ ಪ್ರಯೋಗವು ಸಾಧ್ಯವಾಗುತ್ತದೆ.

ಇದರಂತೆ 'ದಿವಃಪರಃ' 'ದಿವಿಸ್ಥಿತಃ' ಎಂಬ ದಾರ್ಷ್ಟಾಂತಿಕದಲ್ಲಿಯೂ ತಿಳಿಯಬೇಕು. ಆಧಾರತ್ವ-ವನ್ನು ಮುಖ್ಯವೆಂದು ಪರಿಗಣಿಸಿದಾಗ 'ದಿವಃಪರಃ ಜ್ಯೋತಿಃ' ಎಂಬುದು ಅಮುಖ್ಯಪ್ರಯೋಗ-

ವಾಗುತ್ತದೆ. ಆವಾಗ ದ್ಯುಶಬ್ದಕ್ಕೆ ಅಥವಾ ಜ್ಯೋತಿಶಬ್ದಕ್ಕೆ ಲಕ್ಷಣಾ ಮಾಡಬೇಕು. ದ್ಯುಲೋಕ ಅಸಂಬಂಧಿಯಾದ ಬ್ರಹ್ಮನ ಯಾವ ಅವಯವ ಇದೆಯೋ ತದವಚ್ಛಿನ್ನ ಬ್ರಹ್ಮನ ಅವಯವಿಯಲ್ಲಿ ಜ್ಯೋತಿಶಬ್ದಕ್ಕೆ ಲಕ್ಷಣಾ. ಅಥವಾ ದ್ಯುಲೋಕದ ಕೆಳಗಿನ ಲೋಕದಲ್ಲಿ ದ್ಯುಶಬ್ದಕ್ಕೆ ಲಕ್ಷಣಾ ಹೀಗೆ ಮಾಡಿದಾಗ ಬ್ರಹ್ಮನು ದಿವಿಸ್ಥಿತನಾಗಿದ್ದರೂ ಲಾಕ್ಷಣಿಕಪ್ರಯೋಗದಿಂದ 'ದಿವಃಪರಃ' ಎನ್ನಬಹುದು. ಅವಧಿತ್ವವು ಮುಖ್ಯವೆಂದು ವಿವಕ್ಷಿತವಾದಾಗ 'ದಿವಿಸ್ಥಿತಃ' ಎಂಬಲ್ಲಿರುವ ದ್ಯುಶಬ್ದದ ಸಪ್ತಮಿಗೆ ಸಾಮೀಪ್ಯದಲ್ಲಿ ಲಕ್ಷಣಾ ಮಾಡಬೇಕು. ದ್ಯುಲೋಕದ ಸಮೀಪದಲ್ಲಿ ಬ್ರಹ್ಮನಿದ್ದಾನೆಂದು ಅರ್ಥ. ಇಷ್ಟು ಭಾಮತಿಯ ವ್ಯಾಖ್ಯಾನ.

ಈ ವಾದದಲ್ಲಿ ಹುರುಳಿಲ್ಲ. ಜ್ಯೋತಿಸ್ವರೂಪನಾದ ಬ್ರಹ್ಮನನ್ನು ನಿರವಯವಿಯೆಂದು ಸ್ವತಃ ತಾವೇ ಒಪ್ಪಿ ಈಗ ಬ್ರಹ್ಮನಿಗೆ ಅವಯವ ಅವಯವಿಭಾವವನ್ನು ಹೇಳಿದರೆ ಅಪಸಿದ್ಧಾಂತ ಬರುತ್ತದೆ. ಮತ್ತು ಶಕ್ತಿವೃತ್ತಿಯಿಂದಲೇ ಸುಲಭವಾಗಿ ಶ್ರುತಿಯನ್ನು ವ್ಯಾಖ್ಯಾನಿಸಲು ಬರುವಾಗ ಲಕ್ಷಣಾ ಮಾಡುವುದು ತಪ್ಪಾಗುತ್ತದೆ. ಮತ್ತು 'ಪೃಥಿವ್ಯಾಂ ದ್ಯೌರ್ಮಹಾಮೇರುಃ' ಎಂಬ ಸ್ಮೃತಿಯು ದಿವಃ-ಪರತ್ವ ಮತ್ತು ದಿವಿಸ್ಥಿತತ್ವವನ್ನು ಅತ್ಯಂತ ಸ್ಪಷ್ಟವಾಗಿ ವ್ಯಾಖ್ಯಾನಿಸಿದೆ. ಈ ಪ್ರಮಾಣದ ವಿರೋಧವೂ ಸಹ ಅದ್ವೈತಿಗಳಿಗೆ ತಪ್ಪಿದ್ದಲ್ಲ.

### ಕಠಿಣಪದಾರ್ಥ

ಯದಾ = ವೃಕ್ಷಾಗ್ರದ ಸಂಬಂಧವನ್ನು ಹೊಂದಿರುವ ದಶೆಯಲ್ಲಿ; ಉಪರಿತನ = ವೃಕ್ಷಾಗ್ರದ ಸಂಬಂಧವನ್ನು ಹೊಂದದ; ಅಗ್ರಶಬ್ದೋ ವಾ = ವೃಕ್ಷದ ತುದಿಗಿಂತ ಕೆಳಗಿನ ಭಾಗದಲ್ಲಿ ಶ್ಯೇನಪಕ್ಷಿಯ ಸಂಬಂಧವಿಲ್ಲದ ಕಾರಣ 'ಅಗ್ರಾತ್ ಪರತಃ' ಎಂಬುದಕ್ಕೆ ವೃಕ್ಷದ ತುದಿಗಿಂತ ಕೆಳಗಿನ ಭಾಗ ಯಾವುದಿದೆಯೋ ಅದಕ್ಕಿಂತ ಮೇಲಿನ ಭಾಗದಲ್ಲಿ ಎಂದರ್ಥ; ಯದಾ ತು = ಸಂಬಂಧ ಇಲ್ಲದೆ ಮರದ ಆಚೆ ಸಂಚರಿಸುವ ದಶೆಯಲ್ಲಿ; ಜ್ಯೋತಿಶಬ್ದಃ = ದ್ಯುಲೋಕಸಂಬಂಧಿಯಾದ ಜ್ಯೋತಿಯೆನಿಸಿದ ಬ್ರಹ್ಮನ ಯಾವ ಅವಯವವಿದೆಯೋ ಅದಕ್ಕಿಂತ ಮೇಲಿನ ಅವಯವಾವಚ್ಛಿನ್ನವಾದ ಅವಯವಿಯಲ್ಲಿ ಜ್ಯೋತಿಶಬ್ದಕ್ಕೆ ಲಕ್ಷಣಾ ಮಾಡಬೇಕು; ದ್ಯುಪ್ರಾತಿಪದಿಕಂ ವಾ = ಬಾಹ್ಯವಾದ ದ್ಯುಲೋಕಭಾವಕ್ಕಿಂತ ಬೇರೆಯಾದ ಶರೀರದ ಹೃದಯದಲ್ಲಿರುವ ದ್ಯು ಎಂಬ ಭಾಗದಲ್ಲಿ ದ್ಯುಶಬ್ದಕ್ಕೆ ಲಕ್ಷಣಾ ಮಾಡಬೇಕು. ದಿವಿಸ್ಥಿತತ್ವಕ್ಕೆ ಮುಖ್ಯತ್ವವನ್ನು ಅಂಗೀಕರಿಸಿ ಲಕ್ಷಣಾ ಮಾಡಿದ್ದಾಯಿತು. ದಿವಃಪರತ್ವವನ್ನು ಮುಖ್ಯವೆಂದು ಪರಿಗಣಿಸಿ ದಿವಿ ಎಂಬ ವಾಕ್ಯದಿಂದ ವಿವರಿಸಿದ್ದಾರೆ. ದಿವಿಶಬ್ದಕ್ಕೆ ದ್ಯುಲೋಕದ ಸಾಮೀಪ್ಯದಲ್ಲಿ ಲಕ್ಷಣಾ;

**प्रकाशः** – यदपि ''तथा हि दर्शनं'' इत्यस्योभयोर्व्याख्यानं – अन्यत्रापीत्थं दर्शनमिति, तन्न, अस्मद्रीत्या विषयवाक्यगतहेतूक्तिपरत्वसम्भवे अन्यथा व्याख्यानायोगादित्यादिदूषणं स्पष्टं मत्वा, चतुर्थसूत्रव्याख्यानं परमते तावदनूद्य

निरस्यति – **यद्वेति** ॥ दिविष्ठत्वमुपेत्य तत्परत्वमुपपाद्येदानीं तत्परत्वमुपेत्य तत्स्थत्वमुपपादयति – **यथा वेति** ॥

सप्तमीपञ्चम्यर्थयोराधारत्वावधित्वयोर्द्वयोरपि मुख्यत्वायोगादेकस्य मुख्यत्वेऽन्यस्यामुख्यत्वात्, श्रुतौ च मुख्यार्थस्यैव ग्राह्यत्वात् वैषम्येण दृष्टान्तायोग इति भावेन यथाश्रुतभाष्यं निरस्यति – **तदपि नेति** ॥ भाष्याभिप्रायविवरणमनूद्य निरस्यति – **अत्रेति** ॥ **यदेति** ॥ वृक्षाग्रसम्बन्धितादशायामित्यर्थः ॥ **उपरितनेति** ॥ तद्भागस्याग्रसम्बन्धित्वादिति भावः ॥ **अग्रशब्दो वेति** ॥ अग्रावार्ग्भागे श्येनसम्बन्धाभावेन 'आग्रात् परतः' इत्यस्य अग्रावार्ग्भागात् परत इत्यर्थ इति भावः ॥ **यदा त्विति** ॥ असम्बन्धेनाग्रोपरि सञ्चरणदशायामित्यर्थः ॥ **ज्योतिश्शब्द इति** ॥ द्युसम्बन्धिज्योतिरवयवादुपरितनावयवावच्छिन्नावयविलक्षक इत्यर्थः ॥ **द्युप्रातिपदिकं वेति** ॥ बाह्यद्युभागातिरिक्तशारीरहार्दद्युभागस्य लक्षकमित्यर्थः । एवञ्च हार्दद्युभागस्थस्य ब्रह्मणो बाह्यद्युभागात् परतोऽवस्थानमुपपन्नमिति भावः ।

दिविष्ठत्वं मुख्यमुपेत्य लक्षकत्वमुक्तं, दिवः परत्वस्य मुख्यत्वपक्षे आह – **दिवीति** ॥ सामीप्यं लक्षयतीत्यर्थः । ज्योतिश्शब्दस्य लक्षकत्वे दोषमाह – **ज्योतिष इति** ॥ पक्षत्रयसाधारणदोषमाह – **लक्षणेति** ॥ भङ्ग्यन्तराभावादेवमाश्रीयत इत्यत आह – **पृथिव्यामिति** ॥

**पृथिव्यां द्यौर्महामेरुराकाशे सूर्यमण्डलम् ।**
**दिवीन्द्रसदनं चैव तत्परे तु दिवःपरे ॥**

इति छान्दोग्यभाष्योदाहृतस्मृत्या द्युशब्दार्थस्याक्षादिशब्दार्थवदनेकत्वेनाधारत्वावधित्व योर्मुख्ययोरेव सम्भवादिति भावः ।

ವಿವರಣೆ - ಅದ್ವೈತಿಗಳ ಎರಡನೆಯ ಸೂತ್ರವ್ಯಾಖ್ಯಾನವೂ ಸರಿಯಲ್ಲ. 'ಚೇತೋರ್ಪಣನಿಗದಾತ್' ಎಂಬ ಶಬ್ದಕ್ಕೆ 'ಗಾಯತ್ರೀ' ಎಂಬ ಅಧಿಷ್ಠಾನದಲ್ಲಿ ಬ್ರಹ್ಮನನ್ನು ಛಂದಸ್ಸೆಂದು ಉಪಾಸನೆ ಮಾಡಬೇಕು. ಅದಕ್ಕಾಗಿ 'ಗಾಯತ್ರೀ ವಾ ಇದಂ ಸರ್ವಮ್' ಎಂಬ ಬ್ರಾಹ್ಮಣವಾಕ್ಯವು ಗಾಯತ್ರಿಗೆ ಸರ್ವಾತ್ಮಕತ್ವವನ್ನು ಹೇಳುತ್ತಿದೆ. ಹೀಗೆ ಎರಡನೆಯ ಸೂತ್ರವನ್ನು ವ್ಯಾಖ್ಯಾನಿಸುತ್ತಾರೆ. ಆದರೆ ಬ್ರಹ್ಮನು ಆರೋಪಾಧಿಷ್ಠಾನನಾಗಿದ್ದಾನೆಂಬ ವಿಚಾರವನ್ನು ಅನೇಕಬಾರಿ ನಾವು ನಿರಾಕರಿಸಿದ್ದೇವೆ. ಆದರಿಂದಲೇ ಇವರ ವ್ಯಾಖ್ಯಾನವು ನಿರಾಕೃತವಾಯಿತು.

ಪರಿಪೂರ್ಣಚಂದ್ರಿಕಾ

ಮತ್ತು 'ತಥಾಹಿ ದರ್ಶನಮ್' ಎಂಬ ಸೂತ್ರಭಾಗಕ್ಕೆ ರಾಮಾನುಜರು ಹಾಗೂ ಅದ್ವೈತಿಗಳು ಬೇರೆಕಡೆಯೂ ಹೀಗೆಂದು ದೃಷ್ಟಾಂತಪರವಾಗಿ ವ್ಯಾಖ್ಯಾನಿಸುತ್ತಾರೆ. ಇದೂ ಸಹ ಸರಿಯಲ್ಲ. ''ವಿಷಯವಾಕ್ಯದಲ್ಲಿರುವ 'ಗಾಯತಿ ಚ ತ್ರಾಯತಿ ಚ' ಎಂಬ ಗಾನತ್ರಾಣಕರ್ತೃತ್ವಹೇತುವನ್ನು 'ತಥಾ ಹಿ ದರ್ಶನಮ್' ಎಂಬ ಸೂತ್ರಭಾಗವು ಸಮರ್ಥಿಸುತ್ತಿದೆ'' ಎಂಬ ನಮ್ಮ ವ್ಯಾಖ್ಯಾನವೇ ನಿರ್ದುಷ್ಟವಾಗಿದೆ. ಇದನ್ನು ಬಿಟ್ಟು ಬೇರೆ ರೀತಿ ವ್ಯಾಖ್ಯಾನ ಮಾಡುವುದು ಅಯುಕ್ತವಾಗಿದೆ. ಆದ್ದರಿಂದ ಅವರ ಎರಡನೆಯ ಸೂತ್ರವ್ಯಾಖ್ಯಾನವು ಸರಿಯಲ್ಲ. ಹೀಗೆ ಪ್ರಾರಂಭದ ಮೂರು ಸೂತ್ರಗಳ ಪರರ ವ್ಯಾಖ್ಯಾನವು ಅಸಾಧುವೆಂದು ಸಮರ್ಥಿಸಿದ್ದಾಯಿತು.

ಪ್ರಕೃತ ಪರರು ಮಾಡಿದ 'ಉಪದೇಶಭೇದಾತ್ ನೇತಿ ಚೇನ್ನ ಉಭಯಸ್ಮಿನ್ನಪ್ಯವಿರೋಧಾತ್' ಎಂಬ ನಾಲ್ಕನೆಯ ಸೂತ್ರದ ವ್ಯಾಖ್ಯಾನವನ್ನು 'ಯತ್ತು' ಇತ್ಯಾದಿ ಗ್ರಂಥದಿಂದ ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ. ದಿವಿಸ್ಥಿತತ್ವನ್ನು ಅಂಗೀಕರಿಸಿ ದಿವಃಪರತ್ವವನ್ನು ಸಮರ್ಥಿಸಿದ್ದಾಯಿತು. ದಿವಃಪರತ್ವವನ್ನು ಅಂಗೀಕರಿಸಿ ದಿವಿಸ್ಥಿತತ್ವಪರತ್ವವನ್ನು 'ಯಥಾ ವಾ' ಎಂಬ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

ಯಥಾಶ್ರುತವಾದ ಶಾಂಕರಭಾಷ್ಯವನ್ನು 'ತದಪಿ ನ' ಎಂಬ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ. ಸಪ್ತಮೀ ವಿಭಕ್ತಿಯು ಆಧಾರತ್ವವನ್ನು ಪಂಚಮೀ ವಿಭಕ್ತಿಯು ಅವಧಿತ್ವವನ್ನು ಹೇಳುತ್ತದೆ. ಏಕಕಾಲದಲ್ಲಿ ಎರಡನ್ನೂ ಮುಖ್ಯವೆಂದು ಪರಿಗಣಿಸಲಾಗದು. ಆಧಾರತ್ವ ಮತ್ತು ಅವಧಿತ್ವಗಳಲ್ಲಿ ಒಂದು ಮುಖ್ಯವಾದಾಗ ಮತ್ತೊಂದು ಅಮುಖ್ಯವಾಗುತ್ತದೆ. ಆದ್ದರಿಂದ ದೃಷ್ಟಾಂತದಲ್ಲಿ ಒಂದು ಮುಖ್ಯಪ್ರಯೋಗ ಮತ್ತೊಂದು ಅಮುಖ್ಯಪ್ರಯೋಗವಾಗಿದೆ. ಆದರೆ ಶ್ರುತಿಯು ಮುಖ್ಯಾರ್ಥವನ್ನಷ್ಟೇ ಹೇಳುತ್ತದೆ ಹೊರತು ಅಮುಖ್ಯಾರ್ಥವನ್ನು ಹೇಳುವುದಿಲ್ಲ. ಹೀಗೆ ದೃಷ್ಟಾಂತವು ವಿಷಮವಾದ್ದರಿಂದ ದಿವಃಪರತ್ವ ಮತ್ತು ದಿವಿ-ಸ್ಥಿತತ್ವವನ್ನು ಸಮರ್ಥಿಸಲು ಸಾಧ್ಯವಿಲ್ಲವೆಂದು ಗ್ರಂಥಕಾರರು ಇಲ್ಲಿ ಸಮರ್ಥಿಸಿದ್ದಾರೆ.

ಶಾಂಕರಭಾಷ್ಯದ ಅಭಿಪ್ರಾಯವನ್ನು ವ್ಯಾಖ್ಯಾನಿಸುವ ಭಾಮತೀಮತವನ್ನು ಅನುವಾದ ಮಾಡಿ 'ಅತ್ರ' ಎಂಬ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ.

ಭಾಮತಿಯ ಈ ವಾದವನ್ನು 'ತನ್ನ' ಎಂದು ನಿರಾಕರಿಸಿದ್ದಾರೆ. ಜ್ಯೋತಿಶಬ್ದಕ್ಕೆ ಲಕ್ಷಣಾ ಮಾಡಿದಾಗ ಬರುವ ದೋಷವನ್ನು 'ಜ್ಯೋತಿಷಃ' ಎಂಬ ಪದದಿಂದ ಸಮರ್ಥಿಸಿದ್ದಾರೆ. ಮೂರೂ ಪದಗಳಿಗೆ ಲಕ್ಷಣಾ ಮಾಡಿದಾಗ ಬರುವಂತಹ ಸಾಧಾರಣದೋಷವನ್ನು 'ಲಕ್ಷಣಾದಿಪ್ರಸಂಗಾತ್' ಎಂದು ಹೇಳಿದ್ದಾರೆ. ಬೇರೆ ಗತಿಯಿಲ್ಲದೆ ಹೀಗೆ ಲಕ್ಷಣಾ ಮಾಡಬೇಕೆಂದು ಉತ್ತರಿಸಿದರೆ 'ಪೃಥಿವ್ಯಾಮ್' ಎಂಬ ವಾಕ್ಯದಿಂದ ಗತ್ಯಂತರವನ್ನು ಹೇಳಿದ್ದಾರೆ.

ಪೃಥಿವ್ಯಾಂ ದ್ಯೌರ್ಮಹಾಮೇರುರಾಕಾಶೇ ಸೂರ್ಯಮಂಡಲಮ್ ।
ದಿವೀಂದ್ರಸದನಂ ಚೈವ ತತ್ಪರೇ ತು ದಿವಃಪರೇ ॥

(ಮೇರುಪರ್ವತವು ಪೃಥಿವೀಲೋಕದ ದ್ಯುಲೋಕವೆನಿಸಿದೆ. ಇದರ ಮೇಲ್ಭಾಗದಲ್ಲಿ ಅನಂತಾಸನವಿದೆ. ಆದ್ದರಿಂದ ಅನಂತಾಸನದಲ್ಲಿರುವ ಜ್ಯೋತಿಯು ದಿವಃಪರವೆನಿಸುತ್ತದೆ. ಅಂತರಿಕ್ಷಲೋಕದಲ್ಲಿ

ಸೂರ್ಯಮಂಡಲವು ದ್ಯುಲೋಕ. ಅದರ ಮೇಲೆ ಶ್ವೇತದ್ವೀಪವಿದೆ. ಶ್ವೇತದ್ವೀಪದಲ್ಲಿರುವ ರೂಪವೂ ಸಹ ಹೀಗೆ ದಿವಃಪರ ಎನಿಸಿದೆ. ಸ್ವರ್ಗಲೋಕದಲ್ಲಿ ಇಂದ್ರನ ಅರಮನೆಯು ದ್ಯುಲೋಕ. ಅದರ ಮೇಲೆ ವೈಕುಂಠವಿದೆ. ಅಲ್ಲಿರುವ ರೂಪವು ದಿವಃಪರವೆನಿಸುತ್ತದೆ. ಹೀಗೆ ಮೂರೂ ರೂಪಗಳಿಗೂ ದಿವಃ-ಪರತ್ವವನ್ನು ತಿಳಿಯಬೇಕು.)

ಹೀಗೆ ಛಾಂದೋಗ್ಯಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯು ದ್ಯುಶಬ್ದಕ್ಕೆ ಅನೇಕ ಅರ್ಥವನ್ನು ಹೇಳಿದೆ. ಅಕ್ಷ ಎಂಬ ಶಬ್ದಕ್ಕೆ ಹೇಗೆ ಅನೇಕಾರ್ಥಗಳಿದೆಯೋ ಅದರಂತೆ ದ್ಯುಶಬ್ದಕ್ಕೂ ಅನೇಕಾರ್ಥವಿದೆ. ಆದ್ದರಿಂದ ಆಧಾರತ್ವ ಮತ್ತು ಅವಧಿತ್ವಗಳಿಗೆ ಮುಖ್ಯಪ್ರಯೋಗವನ್ನೇ ಹೇಳಬಹುದು - ಎಂದು ಅಭಿಪ್ರಾಯ.

## ಸಾರ

ಜ್ಯೋತಿಸೂತ್ರಕ್ಕೆ ಮತ್ತು ಮೂರನೆಯ ಭೂತಾದಿಸೂತ್ರಕ್ಕೆ ಪರರು ಮಾಡಿದ ವ್ಯಾಖ್ಯಾನವನ್ನು ಇಲ್ಲಿಯ ತನಕ ವಿಮರ್ಶಿಸಿದ್ದಾಯಿತು. ಗಾಯತ್ರಿ ಎಂಬ ಅಧಿಷ್ಠಾನದಲ್ಲಿ ಬ್ರಹ್ಮನನ್ನು ಉಪಾಸನೆ ಮಾಡಬೇಕೆಂದು ತಿಳಿಸಲು ಎರಡನೆಯ ಸೂತ್ರವು ಹೊರಟಿದೆ ಎಂಬ ಅವರ ವ್ಯಾಖ್ಯಾನವನ್ನು ಪ್ರತ್ಯೇಕವಾಗಿ ನಿರಾಕರಿಸಬೇಕಿಲ್ಲ. ಅನೇಕ ಸ್ಥಳಗಳಲ್ಲಿ ಬ್ರಹ್ಮನು ಆರೋಪಾಧಿಷ್ಠಾನನಾಗುವುದಿಲ್ಲ ಎಂಬ ನಿರಾಕರಣೆಯಿಂದಲೇ ಪರರ ದ್ವಿತೀಯಸೂತ್ರದ ವ್ಯಾಖ್ಯಾನವು ನಿರಾಕೃತವಾಗಿದೆ. ಪ್ರಕೃತ ನಾಲ್ಕನೆಯ 'ಉಭಯಸ್ಮಿನ್ನಪ್ಯವಿರೋಧಾತ್' ಎಂಬ ಪರರ ಸೂತ್ರ-ವ್ಯಾಖ್ಯಾನವನ್ನು ವಿಮರ್ಶಿಸಲಾಗಿದೆ.

ಜ್ಯೋತಿಯಲ್ಲಿ ಕೇಳಿಸುತ್ತಿರುವ ದಿವಃಪರತ್ವ ಮತ್ತು ದಿವಿಸ್ಥಿತತ್ವವನ್ನು ಪ್ರಮಾಣದ ಆಧಾರದಿಂದ ನಾವು ಭಗವಂತನಲ್ಲಿ ಸಮರ್ಥಿಸುತ್ತೇವೆ. ಆದರೆ ಅದ್ವೈತಿಗಳು ಉದಾಹರಣೆಯ ಮೂಲಕ ಪರಿಹರಿಸಲು ಪ್ರಯತ್ನಿಸಿದ್ದಾರೆ -- ಪಕ್ಷಿಯು ಮರದ ತುದಿಯಲ್ಲಿ ಕುಳಿತಿರುವಾಗ 'ಮರದ ತುದಿಯಲ್ಲಿ ಪಕ್ಷಿ' ಎಂಬ ಪ್ರಯೋಗ-ವಿದ್ದಂತೆ; 'ಮರದ ತುದಿಯ ಆಚೆ ಪಕ್ಷಿ' ಎಂಬ ಪ್ರಯೋಗವನ್ನೂ ಲೋಕದಲ್ಲಿ ಕಾಣುತ್ತೇವೆ. ಇದರಂತೆ ಜ್ಯೋತಿಯು ದ್ಯುಲೋಕದಲ್ಲಿ ಇದ್ದಾಗ ದಿವಿಸ್ಥಿತನೆಂಬ ಪ್ರಯೋಗವಿದೆ. ಆದರೂ ದಿವಃಪರಃ ಎಂದು ಪ್ರಯೋಗಿಸಬಹುದು. ಮತ್ತು ಪಕ್ಷಿಯು ಮರದ ತುದಿಯ ಆಚೆ ಹಾರುತ್ತಿರುವಾಗ 'ಮರದ ತುದಿಯ ಆಚೆ ಪಕ್ಷಿ' ಎಂಬ ಪ್ರಯೋಗವಿದ್ದಂತೆ 'ಮರದ ತುದಿಯಲ್ಲಿ ಪಕ್ಷಿ' ಎಂಬ ಪ್ರಯೋಗವು ಕಾಣಿಸುತ್ತದೆ. ಇದರಂತೆ ಬ್ರಹ್ಮನು ದಿವಃಪರನಾಗಿದ್ದರೂ ದಿವಿಸ್ಥಿತನೆಂದು ಪ್ರಯೋಗಿಸಬಹುದು.

ಇದು ಅದ್ವೈತಿಗಳ ವಾದ. ಅಂತೂ ಬ್ರಹ್ಮನು ದ್ಯುಲೋಕದ ಒಳಗಿದ್ದಾನೋ, ಹೊರಗಿದ್ದಾನೋ ಎಂಬುದನ್ನು ಇವರು ಸ್ಪಷ್ಟಪಡಿಸಲೇ ಇಲ್ಲ. ಮತ್ತು ದ್ಯುಲೋಕದ ಸಂಬಂಧವಿರುವಾಗ ಅಥವಾ ಇಲ್ಲದಿರುವಾಗ ಎರಡು ವಿಧಪ್ರಯೋಗಗಳನ್ನು ಮುಖ್ಯವೆಂದು ಅದ್ವೈತಿಗಳಿಗೆ ಸಮರ್ಥಿಸಲಾಗದು. ಉದಾಹರಣೆ ನೀಡಿದಂತೆ ಒಂದು ಪ್ರಯೋಗವನ್ನಷ್ಟೇ ಮುಖ್ಯವೆಂದು ಹೇಳಿ ಮತ್ತೊಂದು ಪ್ರಯೋಗವನ್ನು ಅಮುಖ್ಯವೆನ್ನಬೇಕು. ಆದರೆ ಶ್ರುತಿಗೆ ಅಮುಖ್ಯಾರ್ಥ ಮಾಡುವುದು ಸರಿಯಲ್ಲ.

ಭಾಮತಿಯ ಸಮರ್ಥನೆ -- ಪಕ್ಷಿ ಮರದ ಮೇಲೆ ಕುಳಿತಾಗ ಮರಕ್ಕೆ ಪಕ್ಷಿಯ ಕಾಲುಗಳಷ್ಟೇ ಸಂಬಂಧ-ವಾಗಿರುತ್ತವೆ. ಹೊಟ್ಟೆ, ಕತ್ತು ಮೊದಲಾದ ಭಾಗಗಳು ಸಂಬಂಧ ಹೊಂದಿರುವುದಿಲ್ಲ. ಸಂಬಂಧ ಹೊಂದಿರುವ

ಕಾಲನ್ನು ವಿವಕ್ಷಿಸಿ 'ಮರದಲ್ಲಿ ಪಕ್ಷಿ' ಎಂಬ ಪ್ರಯೋಗವು ಸಾಧುವಾಗಿದೆ; ಸಂಬಂಧ ಹೊಂದಿರದ ಹೊಟ್ಟೆ ಕತ್ತು ಮೊದಲಾದವುಗಳನ್ನು ವಿವಕ್ಷಿಸಿ 'ಮರದ ತುದಿಯ ಆಚೆ ಪಕ್ಷಿ' ಎಂಬ ಪ್ರಯೋಗವು ಸಾಧುವಾಗುತ್ತದೆ. ಇದರಂತೆ ದ್ಯುಲೋಕದಲ್ಲಿ ಸಂಬಂಧ ಹೊಂದಿರುವ ಬ್ರಹ್ಮನ ಅವಯವವನ್ನು ವಿವಕ್ಷಿಸಿ ದಿವಿಸ್ಥಿತನೆಂಬ ಪ್ರಯೋಗವು ಸಾಧುವಾಗಿದೆ. ಸಂಬಂಧಪಡದ ಅವಯವವನ್ನು ವಿವಕ್ಷಿಸಿ ದಿವಃಪರತ್ವವೆಂಬ ಪ್ರಯೋಗವು ಸಾಧುವಾಗಿದೆ.

ಭಾಮತಿಯ ಈ ವಿಚಾರ ಅತ್ಯಂತ ಬಾಲಿಶ. ಸ್ವತಃ ತಾವೇ ಬ್ರಹ್ಮನನ್ನು ನಿರವಯವನೆಂದು ಒಪ್ಪಿ ಈಗ ಅವಯವವನ್ನು ಹೇಳುವುದು ಅನುಚಿತ. ಮತ್ತು ವಸ್ತುಸ್ಥಿತಿಯನ್ನು ಅರ್ಥಮಾಡಿಕೊಳ್ಳದೇ ಸ್ವಕಪೋಲಕಲ್ಪಿತವಾದ ಇಂತಹ ವ್ಯಾಖ್ಯಾನವು ಅತ್ಯಂತ ಕ್ಲಿಷ್ಟಕರ. ಅಷ್ಟೇ ಅಲ್ಲದೆ ಶ್ರುತಿಗೆ ಮುಖ್ಯಾರ್ಥವನ್ನು ಹೇಳಲು ಬರುವಾಗ ಲಕ್ಷಣಾ ಮಾಡುವುದು ಅನಾವಶ್ಯಕ. ದಿವಃಪರತ್ವ ಮತ್ತು ದಿವಿಸ್ಥಿತತ್ವವನ್ನು ಸಮರ್ಥಿಸುವ ಸ್ಮೃತಿವಿರೋಧವು ಇವರಿಗೆ ತಪ್ಪಿದ್ದಲ್ಲ.

- - - - - -

## ರಾಮಾನುಜರ ನಾಲ್ಕನೇ ಸೂತ್ರ ವಿಮರ್ಶೆ

### तात्पर्यचन्द्रिका

**केचित्तु – सप्तमी अन्तर्बहिरधरोर्ध्वभागस्थितिसाधारणी, प्रासादस्यान्तरधरभागस्थिते इव बहिरूर्ध्वभागावस्थितेऽपि वस्तुनि 'प्रासादे वर्तते' इति प्रयोगात् । पञ्चमी तूपरिस्थित्यसाधारणी । अत उभाभ्यां स्थानविशेषात् उपरिस्थितिरेव विवक्षितेत्युभे अपि मुख्यार्थे एवेत्याहुः ।**

**तन्न, उभयत्रापि द्युशब्दस्यैकार्थत्वे द्वयोरपि मुख्यार्थत्वायोगात् । सप्तमी ह्याधारत्वे । परन्तु तदाधारत्वमधरान्तर्भागाभ्यामिवोर्ध्वबहिर्भागाभ्यामप्यवच्छिद्यते, न त्ववयविनोऽवधित्वे सप्तमी । नहि वृक्षात् परतो भ्रमन् श्येनो 'वृक्षेऽस्ति' इत्युच्यते । पञ्चमी त्ववधित्व एव, न त्वाधारत्वे । न ह्यूर्ध्वभागावच्छिन्नेऽपि वृक्षे वसन् 'वृक्षात् परतः' इत्युच्यते, किन्तु 'वृक्षस्योर्ध्वभागे' इति । तस्मात् ''त्रिसप्तलोकापेक्षया'' इति भाष्योक्त एव परिहारः साधुः ।**

ಅನುವಾದ - ರಾಮಾನುಜರ ವಾದ - ಸಪ್ತಮೀವಿಭಕ್ತಿಯು ಒಳಗೆ, ಹೊರಗೆ, ಕೆಳಗೆ, ಮೇಲೆ ಎಂಬರ್ಥಗಳಲ್ಲಿ ಸಾಧಾರಣವಾಗಿದೆ. ದೇವದತ್ತನು ಮಹಡಿಯ ಒಳಗೆ ಅಥವಾ ಕೆಳಗೆ ಇದ್ದಾಗ 'ಮಹಡಿಯಲ್ಲಿ ದೇವದತ್ತನಿದ್ದಾನೆ' ಎಂಬ ಪ್ರಯೋಗವು ಕಾಣಸುತ್ತದೆ. ಇದರಂತೆ ಮಹಡಿಯ ಹೊರಗೆ ಅಥವಾ ಮೇಲೆ ಇದ್ದಾಗಲೂ 'ಮಹಡಿಯಲ್ಲಿ ದೇವದತ್ತನಿದ್ದಾನೆ' ಎಂಬ ಪ್ರಯೋಗವು

ಇರುತ್ತದೆ. ಪಂಚಮೀ ವಿಭಕ್ತಿಯಾದರೋ ಮೇಲೆ ಎಂಬರ್ಥದಲ್ಲಷ್ಟೇ ಅಸಾಧಾರಣವಾಗಿದೆ. ಈ ದೃಷ್ಟಾಂತದಂತೆ 'ದಿವಿಸ್ಥಿತಃ' ಮತ್ತು 'ದಿವಃಪರಃ' ಎಂಬ ಎರಡೂ ಪ್ರಯೋಗಗಳು ಮುಖ್ಯಾರ್ಥ-ವುಳ್ಳವುಗಳೇ ಆಗಿವೆ. ಈ ಸಪ್ತಮೀ ಮತ್ತು ಪಂಚಮೀವಿಭಕ್ತಿಗಳಲ್ಲಿ ಪಂಚಮೀವಿಭಕ್ತಿಯೇ ವಸ್ತು-ಸ್ಥಿತಿಯನ್ನು ಹೇಳುತ್ತಿದೆ. ಅಂದರೆ ಜ್ಯೋತಿಯು ದಿವಃಪರನೇ ಆಗಿದ್ದಾನೆ. ದಿವಿ ಎಂಬ ಸಪ್ತಮ್ಯಂತ-ಪದಕ್ಕೆ ದ್ಯುಲೋಕದ ಮೇಲ್ಭಾಗದಲ್ಲಿ ಎಂದು ಅರ್ಥೈಸಬೇಕು.

ಇದು ತಪ್ಪು. ಏನೇ ಆದರೂ ಒಂದು ವಿಭಕ್ತಿಗೆ ಅಮುಖ್ಯಾರ್ಥವನ್ನು ಒಪ್ಪಿದಂತೆ ಆಯಿತು. 'ದಿವಃ ಪರಃ ಮತ್ತು ದಿವಿ ಸ್ಥಿತಃ' ಎಂದು ಎರಡೂ ಕಡೆ ಇರುವ ದ್ಯುಶಬ್ದಕ್ಕೆ ಒಂದೇ ಅರ್ಥವನ್ನು ಹೇಳುತ್ತೀರಿ. ಎರಡೂ ಕಡೆ ಇರುವ ದ್ಯುಶಬ್ದಕ್ಕೆ ಮುಖ್ಯಾರ್ಥವನ್ನು ಹೇಳಲು ಸಾಧ್ಯವಿಲ್ಲ. ಅದು ಹೀಗೆ -- ಸಪ್ತಮಿಯು ಆಧಾರತ್ವವನ್ನು ಹೇಳುತ್ತದೆ. ಆದರೆ ಆ ಆಧಾರತ್ವವು ಅಧರಭಾಗದಿಂದ ಮತ್ತು ಅಂತರ್ಭಾಗದಿಂದ ಅವಚ್ಛಿನ್ನವಾದಂತೆ (ವಿಶಿಷ್ಟವಾದಂತೆ) ಊರ್ಧ್ವಭಾಗ ಮತ್ತು ಬಹಿ-ರ್ಭಾಗಗಳಿಂದಲೂ ಅವಚ್ಛಿನ್ನವಾಗುತ್ತದೆ. ಆದ್ದರಿಂದ ಸಪ್ತಮೀವಿಭಕ್ತಿಯನ್ನು ಪ್ರಯೋಗಿಸಬೇಕೆಂದರೆ ಒಳಗೆ, ಕೆಳಗೆ, ಮೇಲೆ, ಹೊರಗೆ ಯಾವುದಾದರೂ ಒಂದು ಸ್ಥಳದಲ್ಲಿ ಸಂಬಂಧವನ್ನು ಹೊಂದಿರಲೇ ಬೇಕು ಹೊರತು ಸಂಬಂಧವನ್ನು ಹೊಂದದೆ ದೂರದಲ್ಲಿದ್ದಾಗ ಆಧಾರಪದಾರ್ಥಕ್ಕೆ ಅವಧಿತ್ವವು ಬರುತ್ತದೆ ಹೊರತು ಆಧಾರತ್ವವು ಬರುವುದಿಲ್ಲ. ಆವಾಗ ಸಪ್ತಮೀವಿಭಕ್ತಿಯನ್ನು ಪ್ರಯೋಗಿಸಲು ಸಾಧ್ಯವಿಲ್ಲ. ಮರದ ಆಚೆ ಪಕ್ಷಿಯು ಹಾರುತ್ತಿರುವಾಗ 'ಮರದಲ್ಲಿ ಹಕ್ಕಿಯಿದೆ' ಎಂದು ಯಾರೂ ಹೇಳುವುದಿಲ್ಲ. ಇನ್ನು ಪಂಚಮೀವಿಭಕ್ತಿಯು ಅವಧಿತ್ವವನ್ನಷ್ಟೇ ಹೇಳುತ್ತದೆ; ಹೊರತು ಆಧಾರತ್ವ-ವನ್ನು ಹೇಳುವುದಿಲ್ಲ. ಪಕ್ಷಿಯು ಮರದ ತುದಿಯಲ್ಲಿ ಸಂಬಂಧವನ್ನು ಹೊಂದಿರುವಾಗ 'ಮರದ ಆಚೆ ಪಕ್ಷಿ' ಎಂದು ಯಾರೂ ಪ್ರಯೋಗಿಸುವುದಿಲ್ಲ; ಹೊರತು ಮರದ ತುದಿಯಲ್ಲಿ ಪಕ್ಷಿ ಎಂದೇ ಪ್ರಯೋಗಿಸುತ್ತಾರೆ. ಆದ್ದರಿಂದ 'ತ್ರಿಸಪ್ತಲೋಕಾಪೇಕ್ಷಯಾ' ಎಂಬ ಭಾಷ್ಯದಲ್ಲಿ ಹೇಳಿದ ಹಾಗೆ ಮೂರು ಲೋಕಗಳನ್ನು ವಿವಕ್ಷಿಸಿ ಅಥವಾ ಏಳು ಲೋಕಗಳನ್ನು ವಿವಕ್ಷಿಸಿ ದಿವಃಪರತ್ವ ಮತ್ತು ದಿವಿಸ್ಥಿತತ್ವಗಳನ್ನು ಹೊಂದಿಸಬೇಕು. ಈ ಪರಿಹಾರ ಬಿಟ್ಟು ಬೇರೆ ಮಾರ್ಗವಿಲ್ಲ.

**प्रकाशः –** उक्तदोषाप्रसङ्गान्मतान्तरं पृथगनूद्य निरस्यति – **केचित्त्विति** ॥ तदेव दर्शयति – **प्रासादस्येति** ॥ अन्तर्भागे अधरभागे स्थिते इत्यर्थः । बहिरूर्ध्वभागयोः स्थितेऽपीति ध्येयम् । किमतो यद्येवमित्यतोऽसाधारण-पञ्चम्यनुसारेण साधारणसप्तमी नेया, ततश्च द्वयोर्मुख्यार्थलाभ इत्याह – **अत इति** ॥ उक्तमेव विवेचयति – **सप्तमीति** ॥ **अवयविन** इति ॥ अन्तर्बहिराद्यवयव-विशिष्टस्येत्यर्थः । सप्तम्या अमुख्यार्थत्वं प्रदर्श्य पञ्चम्यास्तद्दर्शयति – **पञ्चमीति** ॥ उच्यते' मुख्यवृत्त्या कथ्यत इत्यर्थः ।

एतेन यत्केनचित्प्रलपितं, "यदतः परो दिवः" इति वाक्ये ज्योतिश्शिवः तदन्यो वेति सन्देहे, द्युशब्दस्याऽऽकाशवाचित्वात्तस्य च देहबाह्यभूताकाशरूपस्य वाऽन्तरिक्षलोकरूपस्य वा विवक्षितत्वेन तत ऊर्ध्ववर्ती सूर्यो वा 'अन्तः पुरुषे ज्योतिः" इति पुरुषान्तर्वर्तितया जाठराग्निर्वेति प्राप्ते, "पादोस्य सर्वा भूतानि" इति सर्वभूतपादाभिधानात्, तस्य च परिच्छिन्नगायत्र्यामयोगाच्छिव एवेति सिद्धान्त इति ॥ उपदेशभेदादेर्भामत्युक्त एव परिहारः । तदुक्तं –

**ज्योतिः पूषा दिवोऽभ्राद्भवति हि परतो जाठरैक्योपदेशात्**
**वह्निर्वा तन्न शम्भुश्चरणकथनतः तत्र हेतोरसिद्धेः ।**

इत्यादि, तन्निरस्तं, उदाहरणायोगस्य चरणपदायोगस्य चोक्तत्वात् । उपदेशभेदादिपरिहारस्य भामतीमतोक्तदोषेणैव दुष्टत्वात् । "पौनरुक्त्यं परमते" इत्यादिदोषसाम्याच्च । वागादेरपि प्रकृतत्वेन भूतादिचतुष्पात्त्वायोगस्योक्तत्वाच्च ॥

यदत्रोक्तं शिवार्कमणिदीपिकायां – "नद्यां घोषः" इत्युक्त्यनन्तरं गम्भीरायामिति विशेषणे तादृशनदीसम्बन्धित्वेन नदीशब्दस्तीरपरः । एवं "गायत्री वा इदं सर्वं भूतं" इत्युक्त्यनन्तरं "वाग्वै गायत्री" इति विशेषणे वाग्रूपगायत्र्यात्मकत्वं भूतस्य लभ्यत इति न तस्याः पार्थक्यमिति, तन्न, एवमपि प्राणेन सह पञ्चपादत्वानिरासात् । किञ्चैवं सति षाड्विध्यानुपपत्तिः, वाक्त्वस्य गायत्रीविशेषणत्वात् ।

यदत्रोक्तं – **पृथिव्यां सर्वभूतप्रतिष्ठात्वं सर्वभूतानतिवर्तनीयत्वमिति द्वे विधे, शरीरहृदययोर्ये प्राणप्रतिष्ठात्वतदनति वर्तनीयत्वे, तयोराश्रयभेदेन चतुष्ट्वेन षाड्विध्योपपत्तिः**– इत्यादि तदपि न, भूतादिरूपेण षाड्विध्यसम्भवे क्लेशायोगात् । एकस्यैव धर्मस्य धर्मिभेदेन विधान्तरत्वे अतिप्रसङ्गाच्च । "**गायत्र्या संस्थितो विष्णुः**" इत्यादिस्मृतिविरोधाच्च । किञ्च –

**नारायणपरो ज्योतिरात्मा नारायणः परः ।**

"**विष्णुरेव ज्योतिः विष्णुरेव ब्रह्म**" "**अहमग्निरहं हुतम्**" इत्यादि श्रुतिस्मृतिविरोधाच्च ।

**यदिदं परितः पूर्णं मत्स्यकूर्मादिरूपकम् ।**

इत्यादि छान्दोग्यभाष्योदाहृतैतद्व्याख्यानरूपस्मृतिविरोधाच्च । पुरुषसूक्तगत-मन्त्रोदाहरणविरोधाच्च ।

यदपि – पुरुषसूक्तस्य शिवपरत्वकल्पनं, तदपि न, ''यज्ञो वै विष्णुः'' इत्यादि श्रुतिसिद्धयज्ञनामविरोधात् । लक्ष्मीपतित्वलिङ्गविरोधात् । चन्द्रिकोक्तदिशा विष्ण्वेकनिष्ठपुरुषश्रुतिविरोधात् । ''तस्माद्विराडजायत'' इत्युक्तचतुर्मुखजनकत्व-लिङ्गस्य विष्णावेव प्रसिद्ध्या तद्विरोधाच्च ।

**तस्मिन् काले महाराज राम एवाभिधीयते ।**
**यथा हि पौरुषे सूक्ते विष्णुरेवाभिधीयते ॥**

इति स्कान्दवचनविरोधाच्चेति ।

**सुदर्शनाख्यं स्वास्त्रं तु प्रायुङ्क्त दयितं त्रिपात् ॥**

इति भागवतविरोधाच्च । कथं तर्ह्युपदेशभेदपरिहार इत्यत आह – **तस्मादिति ॥**

ವಿವರಣೆ - ಇಲ್ಲಿಯ ತನಕ ಅದ್ವೈತವಾದವನ್ನು ನಿರಾಕರಿಸಿದ್ದಾಯಿತು. ಅದ್ವೈತಿಗಳಿಗೆ ಬರುವ ದೋಷವು ರಾಮಾನುಜರಿಗೆ ಬರುವುದಿಲ್ಲವಾದ್ದರಿಂದ ಪ್ರತ್ಯೇಕವಾಗಿ ರಾಮಾನುಜಮತವನ್ನು ಅನುವಾದ ಮಾಡಿ 'ಕೇಚಿತ್ತು' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ. 'ಪ್ರಾಸಾದಸ್ಯ' ಎಂಬ ವಾಕ್ಯದಿಂದ ರಾಮಾನುಜಮತವನ್ನು ವಿವರಿಸುತ್ತಿದ್ದಾರೆ. ಅಂತರ್ಭಾಗದಲ್ಲಿ ಮತ್ತು ಅಧರಭಾಗದಲ್ಲಿರುವ ಎಂದರ್ಥ. ಅದರಂತೆ ಹೊರಗಿನ ಭಾಗ ಮತ್ತು ಊರ್ಧ್ವಭಾಗದಲ್ಲಿರುವ ಎಂಬರ್ಥವನ್ನು ತಿಳಿಯಬೇಕು. ಇದರಿಂದ ಏನು ತಿಳಿಯುತ್ತದೆಂದರೆ ನಿರವಕಾಶಪಂಚಮೀವಿಭಕ್ತಿಗೆ ಅನುಸಾರವಾಗಿ ಸಾವಕಾಶವಾದ ಸಪ್ತಮೀ ವಿಭಕ್ತಿಯನ್ನು ಅರ್ಥೈಸಬೇಕು. ಆದ್ದರಿಂದ ಸಪ್ತಮೀ ಹಾಗೂ ಪಂಚಮೀವಿಭಕ್ತಿಗಳು ಮುಖ್ಯಾರ್ಥವನ್ನೇ ಹೇಳುತ್ತವೆ. 'ಉಭಯತ್ರಾಪಿ' ಎಂಬ ವಾಕ್ಯದಿಂದ ಹೇಳಿದ ದೋಷವನ್ನೇ 'ಸಪ್ತಮೀ ಹಿ' ಎಂಬ ವಾಕ್ಯದಿಂದ ವಿವರಿಸಿದ್ದಾರೆ. ಎಲ್ಲಾ ಅವಯವಗಳಿಂದ ವಿಶಿಷ್ಟವಾದ ಅವಯವಿಯು ಅವಧಿಯಾದಾಗ ಆಧಾರತ್ವವನ್ನು ಹೇಳಲು ಸಾಧ್ಯವಿಲ್ಲ ಎಂದರ್ಥ. ಸಪ್ತಮೀವಿಭಕ್ತಿಗೆ ಅಮುಖ್ಯಾರ್ಥವನ್ನು ತೋರಿಸಿ ಪಂಚಮಿಗೆ ಆಧಾರತ್ವವನ್ನು ವಿವಕ್ಷಿಸುವುದಾದರೆ ಪಂಚಮಿಯು ಅಮುಖ್ಯಾರ್ಥವಾಗುತ್ತದೆಂದು 'ಪಂಚಮಿ' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. 'ಉಚ್ಯತೇ' ಎಂದರೆ ಮುಖ್ಯವೃತ್ತಿಯಿಂದ ಹೇಳ-ಲ್ಪಡುತ್ತದೆ ಎಂದರ್ಥ.

'' 'ಯದತಃ ಪರೋ ದಿವಃ' ಎಂಬ ವಾಕ್ಯದಲ್ಲಿರುವ ಜ್ಯೋತಿಯು ಶಿವನೋ ಅಥವಾ ಬೇರೆಯೋ ಎಂದು ಸಂದೇಹ. ದ್ಯುಶಬ್ದವು ಆಕಾಶದಲ್ಲಿ ಪ್ರಸಿದ್ಧಿಯಾಗಿದೆ. ಆದ್ದರಿಂದ ದೇಹಕ್ಕಿಂತ ಬಾಹ್ಯವಾದ

ಭೂತಾಕಾಶವನ್ನು ಅಥವಾ ಅಂತರಿಕ್ಷಲೋಕವನ್ನು ವಿವಕ್ಷಿಸಬೇಕು. ಆವಾಗ ದಿವಃಪರಃ ಎಂದರೆ ಸೂರ್ಯ ಎಂದರ್ಥವಾಯಿತು. ಆದ್ದರಿಂದ ಸೂರ್ಯನೇ ಜ್ಯೋತಿ; ಅಥವಾ 'ಪುರುಷನ ಒಳಗಡೆ ಇರುವ ಜಾಠರಾಗ್ನಿಯು ಜ್ಯೋತಿಯೆನಿಸಿದೆ'. ಆದ್ದರಿಂದ ದಿವಃಪರಃನಾದವನು ಸೂರ್ಯ; ದಿವಿಸ್ಥಿತವಾದದ್ದು ಜಾಠರಾಗ್ನಿ ಎಂದು ಪೂರ್ವಪಕ್ಷ.

ಸಿದ್ಧಾಂತ - 'ಪಾದೋಸ್ಯ ಸರ್ವಾ ಭೂತಾನಿ' ಎಂದು ಶ್ರುತಿಯು ಸರ್ವಭೂತಗಳನ್ನು ಜ್ಯೋತಿಯ ಪಾದವೆಂದು ಹೇಳಿದೆ. ಇದನ್ನು ಪರಿಚ್ಛಿನ್ನವಾದ ಗಾಯತ್ರಿಯಲ್ಲಿ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಶಿವನೇ ಜ್ಯೋತಿಯೆನಿಸಿದ್ದಾನೆ''. ಉಪದೇಶಭೇದಾದಿಗಳಿಗೆ ಭಾಮತಿಯಲ್ಲಿ ಹೇಳಿದ ಪರಿಹಾರವನ್ನೇ ತಿಳಿಯಬೇಕು.

'ಜ್ಯೋತಿಃ ಪೂಷಾ ದಿವೋಽಭ್ರಾತ್ ಭವತಿ ಹಿ ಪರತೋ ಜಾಠರೈಕ್ಯೋಪದೇಶಾತ್ ।
ವಹ್ನಿರ್ವಾ ತನ್ನ ಶಂಭುಶ್ಚರಣಕಥನತಸ್ತತ್ರ ಹೇತೋರಸಿದ್ಧಾ ॥'

(ಅಂತರಿಕ್ಷದಿಂದ ಮೇಲಿರುವ ಸೂರ್ಯನೇ ಜ್ಯೋತಿಯಾಗಿದ್ದಾನೆ. ಅಥವಾ ಜಾಠರಾಗ್ನಿಯಿಂದ ಐಕ್ಯವಿರುವ ವಹ್ನಿಯು ಜ್ಯೋತಿಯೆನಿಸಿದೆ ಎಂದು ಹೇಳಬಾರದು. ಏಕೆಂದರೆ ಶ್ರುತಿಯಲ್ಲಿ ಸರ್ವಭೂತಗಳನ್ನು ಪಾದವೆಂದು ಹೇಳಿದ್ದರಿಂದ ಈ ಹೇತುವು ಸೂರ್ಯನಲ್ಲಿ ಅಥವಾ ಅಗ್ನಿಯಲ್ಲಿ ಬರುವುದಿಲ್ಲ. ಆದ್ದರಿಂದ ಶಿವನೇ ಜ್ಯೋತಿಯೆನಿಸಿದ್ದಾನೆ) ಹೀಗೆ ಶೈವರು ವಾದಿಸುತ್ತಾರೆ.

ಇವರ ವಾದದಲ್ಲಿಯೂ ಹುರುಳಿಲ್ಲ. ಅದ್ವೈತಿಗಳಿಗೆ ಮತ್ತು ರಾಮಾನುಜರಿಗೆ ಹೇಳಿದಂತೆ ಈ ವಿಷಯವಾಕ್ಯದ ಉದಾಹರಣೆಯು ಇವರ ಮತದಲ್ಲಿಯೂ ಅಸ್ವರಸವಾಗಿದೆ. ಮತ್ತು ಚರಣಶಬ್ದಕ್ಕೆ ಪಾದವೆಂದು ಅರ್ಥೈಸುವುದಾದರೆ ಭೂತಾದಿಸೂತ್ರದಿಂದಲೇ ಆ ವಿಷಯವು ತಿಳಿಯುವಾಗ ಚರಣಪದವು ವ್ಯರ್ಥವಾಗುತ್ತದೆ. ಚರಣಾಭಿಧಾನವೇ ಬೇರೆ ಪಾದಾಭಿಧಾನವೇ ಬೇರೆ ಎಂದು ಪರಿಹಾರ ಹೇಳುವು-ದಾದರೆ ಅದನ್ನು ಸಹ ಈ ಹಿಂದೆ ನಿರಾಕರಿಸಿದ್ದಾಯಿತು. ಮತ್ತು ದಿವಿಸ್ಥಿತತ್ವ ಮತ್ತು ದಿವಃಪರತ್ವ-ವೆಂಬಲ್ಲಿರುವ ವಿರೋಧದ ಪರಿಹಾರವನ್ನು ಭಾಮತಿಮತದ ನಿರಾಕರಣೆಯಿಂದಲೇ ನಿರಾಕರಿಸಿದ್ದಾಯಿತು. ಈ ಹಿಂದೆ 'ಪೌನರುಕ್ತ್ಯಂ ಪರಮತೇ' ಎಂಬ ಶ್ಲೋಕದಲ್ಲಿ ಹೇಳಿದ ದೋಷವು ಇವರಿಗೂ ಸಮಾನವಾಗಿದೆ. ಅಷ್ಟೇ ಅಲ್ಲದೆ ವಾಕ್ ಮತ್ತು ಪ್ರಾಣಗಳನ್ನು ಸೇರಿಸಿ ಆರು ಪಾದಗಳನ್ನು ಹೇಳಬೇಕಿತ್ತು. ನಾಲ್ಕು ಪಾದಗಳೆಂದು ಹೇಳಿದ್ದು ತಪ್ಪು. ನಾಲ್ಕನ್ನೇ ಹೇಳಲು ಕಾರಣವನ್ನು ಶಿವಾರ್ಕಮಣಿದೀಪಿಕೆಯಲ್ಲಿ ಉತ್ತರಿಸಲು ಪ್ರಯತ್ನಿಸಿದ್ದಾರೆ. '' 'ನದ್ಯಾಂ ಘೋಷಃ' ಎಂದು ಹೇಳಿದ ಅನಂತರ 'ಗಂಭೀರಾಯಾಂ' ಎಂದು ವಿಶೇಷಣವನ್ನು ನೀಡಿದರೆ; ಗಂಭೀರಶಬ್ದವು ನದಿಯಲ್ಲಿ ವಿಶೇಷಣವಾಗುತ್ತದೆ. ತೀರದಲ್ಲಲ್ಲ. ಆವಾಗ ಗಂಭೀರವಾದ ನದಿಯ ತೀರದಲ್ಲಿ ಘೋಷವೆಂದು ಅರ್ಥವಾಗುತ್ತದೆ. ಇದರಂತೆ ಪ್ರಕೃತ 'ಗಾಯತ್ರೀ ವಾ ಇದಂ ಸರ್ವಂ ಭೂತಂ' ಎಂದು ಸರ್ವಭೂತಗಳನ್ನು ಗಾಯತ್ರೀಸ್ವರೂಪವೆಂದು ಮೊದಲು ಹೇಳಿ, ಅನಂತರ 'ವಾಗ್ವೈ ಗಾಯತ್ರೀ' ಎಂಬ ವಿಶೇಷಣವನ್ನು ನೀಡಿದರೆ ಭೂತಕ್ಕೆ ವಾಗ್ರೂಪಗಾಯತ್ರಿ-ಸ್ವರೂಪವನ್ನು ಹೇಳಿದಂತಾಯಿತು. ಈ ಪಕ್ಷದಲ್ಲಿ ವಾಕ್ ಎಂಬುದನ್ನು ಪ್ರತ್ಯೇಕವೆಂದು ಹೇಳಿದಂತಾಗು-ವುದಿಲ್ಲ. ಆದ್ದರಿಂದ ಚತುಷ್ಪಾದವೆಂದು ಹೇಳಬಹುದು'' ಎಂದು.

ಗಾಯತ್ರ್ಯಧಿಕರಣ-(೧।೧।೧೧)

ಇದು ತಪ್ಪು. ಏನೇ ಆದರೂ ಪಂಚಪಾದತ್ವದೋಷವು ತಪ್ಪಿದ್ದಲ್ಲ. ಅಂದರೆ ಗಾಯತ್ರಿಯನ್ನು ವಾಗ್ರೂಪವೆಂದು ಸಮರ್ಥಿಸಿದಿರಿ. ಆದರೆ ಪ್ರಾಣರೂಪವೆಂದು ಸಮರ್ಥಿಸಲು ಆಧಾರವಿಲ್ಲ. ಆದ್ದರಿಂದ ಷಟ್ಪಾದಗಳಾಗದಿದ್ದರೂ ಪಂಚಪಾದಗಳಾಗಬೇಕಾದೀತು ಎಂಬ ದೋಷವು ಬಂದೇ ಬರುತ್ತದೆ. ಮತ್ತು ಶ್ರುತಿಯಲ್ಲಿ ಷಡ್ವಿಧ ಎಂಬ ಪದವಿದೆ. ಇದನ್ನು ಹೇಗೆ ಕೂಡಿಸುತ್ತೀರಿ? ವಾಕ್ ಎಂಬುದನ್ನು ಗಾಯತ್ರಿಗೆ ವಿಶೇಷಣ ಮಾಡಿದ್ದರಿಂದ ಷಡ್ವಿಧತ್ವವನ್ನು ಹೇಳಲು ಸಾಧ್ಯವಿಲ್ಲವಲ್ಲವೇ?

ಷಡ್ವಿಧತ್ವವನ್ನು ಹೀಗೆ ವ್ಯಾಖ್ಯಾನಿಸುತ್ತಾರೆ.

'ಪೃಥಿವ್ಯಾಂ ಸರ್ವಭೂತಪ್ರತಿಷ್ಠಾತ್ವಂ ಸರ್ವಭೂತಾನತಿವರ್ತನೀಯತ್ವಮಿತಿ ದ್ವೇ ವಿಧೇ ಶರೀರಹೃದಯಯೋರ್ಯೇ ಪಾಣಾಪ್ರತಿಷ್ಠಾತ್ವತದನತಿ ವರ್ತನೀಯತ್ವೇ ತಯೋರಾಶ್ರಯಭೇದೇನ ಚತುಷ್ಟ್ವೇನ ಷಾಡ್ವಿಧ್ಯೋಪಪತ್ತಿಃ' (ಪೃಥಿವಿಯಲ್ಲಿ ಸರ್ವಭೂತಪ್ರತಿಷ್ಠಾತ್ವ ಮತ್ತು ಸರ್ವಭೂತಾನತಿ-ವರ್ತನೀಯತ್ವ ಎಂಬ ಎರಡು ವಿಧ ಧರ್ಮಗಳಿವೆ. ಶರೀರ ಹಾಗೂ ಹೃದಯಗಳಲ್ಲಿ ಪ್ರಾಣಪ್ರತಿಷ್ಠಾತ್ವ ಪ್ರಾಣಅನತಿವರ್ತನೀಯತ್ವ ಎಂಬ ಎರಡು ಧರ್ಮಗಳು ಪ್ರತ್ಯೇಕವಾಗಿವೆ. ಪೃಥಿವಿಯಲ್ಲಿ ಎರಡು ಧರ್ಮಗಳು; ಶರೀರದಲ್ಲಿ ಎರಡು ಧರ್ಮಗಳು; ಹೃದಯದಲ್ಲಿ ಎರಡು ಧರ್ಮಗಳು ಹೀಗೆ ಒಟ್ಟು ಆರು ಧರ್ಮಗಳನ್ನು ಹೇಳಿದಂತಾಯಿತು. ವಸ್ತುತಃ ಶರೀರ ಹಾಗೂ ಹೃದಯಗಳಲ್ಲಿ ಪ್ರಾಣಪ್ರತಿಷ್ಠಾತ್ವ ಮತ್ತು ಪ್ರಾಣಅನತಿವರ್ತನೀಯತ್ವ ಎಂಬ ಒಂದೇ ಧರ್ಮಗಳು ಇದ್ದರೂ ಆಶ್ರಯಭೇದದಿಂದ ಧರ್ಮಗಳಿಗೂ ಭೇದವನ್ನು ಹೇಳಬೇಕು. ಈ ಆರು ಧರ್ಮಗಳನ್ನೇ ಶ್ರುತಿಯು ಷಡ್ವಿಧ ಎನ್ನುತ್ತಿದೆ. ಆದ್ದರಿಂದ ಷಾಡ್ವಿಧ್ಯದ ಅನುಪಪತ್ತಿಯು ಶೈವರಿಗೆ ಬರುವುದಿಲ್ಲ) ಎಂದು ಶೈವರು ಷಡ್ವಿಧತ್ವವನ್ನು ಸಮರ್ಥಿಸಿಕೊಳ್ಳುತ್ತಾರೆ.

ಇದೂ ಸಹ ಸರಿಯಲ್ಲ. ಭೂತ, ಪೃಥಿವ್ಯಾದಿ ರೂಪಗಳಿಂದಲೇ ಷಡ್ವಿಧತ್ವವನ್ನು ಹೇಳಲು ಬರುವಾಗ ಧರ್ಮಗಳನ್ನು ವಿವಕ್ಷಿಸಿ ಷಡ್ವಿಧತ್ವವನ್ನು ಸಮರ್ಥಿಸುವುದು ಅತ್ಯಂತ ಕ್ಲೇಶಕರ. ಮತ್ತು ಶರೀರ ಹಾಗೂ ಹೃದಯಗಳಲ್ಲಿ ಧರ್ಮಿಭೇದೇನ ಧರ್ಮಗಳಿಗೆ ಭೇದವನ್ನು ಹೇಳಿದಿರಿ. ಹಾಗಾದರೆ ಶರೀರ ಹೃದಯಗಳು ಅನಂತವಾಗಿರುವುದರಿಂದ ಅನಂತಧರ್ಮಗಳನ್ನು ಒಪ್ಪಬೇಕಾದೀತೆಂಬ ಅತಿಪ್ರಸಂಗ ಬರುತ್ತದೆ. ಅಷ್ಟೇ ಅಲ್ಲದೆ 'ಗಾಯತ್ರ್ಯಾಂ ಸಂಸ್ಥಿತೋ ವಿಷ್ಣುಃ' ಎಂಬ ಸ್ಮೃತಿವಿರೋಧವೂ ಬರುತ್ತದೆ.

ಶಿವನನ್ನು ಜ್ಯೋತಿಯೆಂದು ಹೇಳುತ್ತಿದ್ದೀರಿ. ಆದರೆ ನಾರಾಯಣನೇ ಜ್ಯೋತಿಯೆನ್ನಲು ಅನೇಕ ಶ್ರುತಿ-ಸ್ಮೃತಿಗಳು ಪ್ರಮಾಣಗಳಾಗಿವೆ. 'ನಾರಾಯಣಪರೋ ಜ್ಯೋತಿರಾತ್ಮಾ ನಾರಾಯಣಃ ಪರಃ' 'ವಿಷ್ಣುರೇವ ಜ್ಯೋತಿರ್ವಿಷ್ಣುರೇವ ಬ್ರಹ್ಮ', 'ಅಹಮಗ್ನಿರಹಂ ಹುತಮ್' ಹೀಗೆ ಶ್ರುತಿಸ್ಮೃತಿಗಳು ನಾರಾಯಣಪರ-ವಾಗಿವೆ. 'ಯದಿದಂ ಪರಿತಃ ಪೂರ್ಣಂ ಮತ್ಸ್ಯಕೂರ್ಮಾದಿರೂಪಕಮ್' ಎಂಬ ಛಾಂದೋಗ್ಯಭಾಷ್ಯದಲ್ಲಿ ಉದಾಹರಿಸಿದ ಷಡ್ವಿಧತ್ವವನ್ನು ವ್ಯಾಖ್ಯಾನಿಸುವ ಸ್ಮೃತಿವಿರೋಧವೂ ಬರುತ್ತದೆ. ಛಾಂದೋಗ್ಯದಲ್ಲಿ ಸಂವಾದಿಯಾಗಿ ಉದಾಹರಿಸಿದ ಪುರುಷಸೂಕ್ತಮಂತ್ರದ ವಿರೋಧವೂ ಬರುತ್ತದೆ.

ಪುರುಷಸೂಕ್ತವನ್ನು ಶಿವಪರವೆಂದು ಶೈವರ ಮತ್ತೊಂದು ವಾದವಿದೆ. ಅದೂ ಸರಿಯಲ್ಲ. 'ಯಜ್ಞೋ ವೈ ವಿಷ್ಣುಃ' ಎಂಬಲ್ಲಿ ವಿಷ್ಣುವು ಯಜ್ಞರೂಪನೆಂದು ತಿಳಿಯುತ್ತದೆ. ಈ ಯಜ್ಞನೇ ಪುರುಷಸೂಕ್ತಪ್ರತಿಪಾದ್ಯ ಹೊರತು ಯಜ್ಞನೆನಿಸದ ಶಿವನಲ್ಲ. ಶ್ರುತಿಯಲ್ಲಿ ಕೇಳಿಸುತ್ತಿರುವ ಲಕ್ಷ್ಮೀಪತಿತ್ವಲಿಂಗದ ವಿರೋಧವು

ತಪ್ಪಿದ್ದಲ್ಲ. ಗ್ರಂಥದಲ್ಲಿ ಹೇಳಿದಂತೆ ಕೇವಲವಿಷ್ಣುನಿಷ್ಠವಾದ ಪುರುಷಶ್ರುತಿಯ ವಿರೋಧವೂ ಶೈವರಿಗೆ ಬರುತ್ತದೆ. 'ತಸ್ಮಾದ್ ವಿರಾಡಜಾಯತ' ಎಂಬ ಪುರುಷಸೂಕ್ತವು ಚತುರ್ಮುಖಜನಕತ್ವಲಿಂಗವನ್ನು ವಿಷ್ಣುವಿನಲ್ಲೇ ಹೇಳಿದೆ. ಕೇವಲ ವಿಷ್ಣುನಿಷ್ಠವಾದ ಈ ಲಿಂಗದ ವಿರೋಧವು ಬರುತ್ತದೆ.

**ತಸ್ಮಿನ್ ಕಾಲೇ ಮಹಾರಾಜ ರಾಮ ಏವಾಭೀಧೀಯತೇ ।**

**ಯಥಾ ಹಿ ಪೌರುಷೇ ಸೂಕ್ತೇ ವಿಷ್ಣುರೇವಾಭಿಧೀಯತೇ ॥ (ಸ್ಕಾಂದವಚನ)**

ಸಮಗ್ರಪುರುಷಸೂಕ್ತವು ಏಕಕಂಠದಿಂದ ವಿಷ್ಣುವನ್ನು ಹೊಗಳುವಂತೆ ರಾಮರಾಜ್ಯದಲ್ಲಿ ಎಲ್ಲ ಪ್ರಜೆಗಳೂ ಏಕಕಂಠದಿಂದ ರಾಮನನ್ನೇ ಹೊಗಳುತ್ತಿದ್ದರು.) ಈ ಸ್ಕಾಂದವಚನದಲ್ಲಿ ಪುರುಷಸೂಕ್ತವನ್ನು ದೃಷ್ಟಾಂತವಾಗಿ ನೀಡಬೇಕೆಂದರೆ ಪುರುಷಸೂಕ್ತಪ್ರತಿಪಾದ್ಯನು ವಿಷ್ಣುವೆಂದು ಮೊದಲೇ ತೀರ್ಮಾನ-ವಾಗಿರಬೇಕು. 'ಸುದರ್ಶನಾಖ್ಯಂ ಸ್ವಾಸ್ತ್ರಂ ತು ಪ್ರಾಯುಂಕ್ತ ದಯಿತಂ ತ್ರಿಪಾತ್' (ತ್ರಿಪಾತ್ ಎನಿಸಿದ ವಿಷ್ಣುವು ಸುದರ್ಶನವೆಂಬ ತನ್ನ ಅಸ್ತ್ರವನ್ನು ಪ್ರಯೋಗಿಸಿದನು) ಎಂಬ ಭಾಗವತದ ವಿರೋಧವು ಬರುತ್ತದೆ.

ಪರರ ಸಿದ್ಧಾಂತದ ಪ್ರಕಾರ ಉಪದೇಶಪರಿಹಾರವು ತಪ್ಪಾದಲ್ಲಿ ನಿಮ್ಮ ಸಿದ್ಧಾಂತದಲ್ಲಿ ಏನು ಪರಿಹಾರ? ಎಂಬ ಪ್ರಶ್ನೆಗೆ 'ತಸ್ಮಾತ್' ಎಂಬುದರಿಂದ ಉತ್ತರಿಸಿದ್ದಾರೆ.

**गुरुराजीयम् – नन्वेवमुक्तरीत्या परिहारासम्भवात्कथमत्र परिहार इत्यत** आह – **तस्मादिति ।**

## ಸಾರ

ರಾಮಾನುಜರು ಅದ್ವೈತಿಗಳಂತೆ ಶ್ರುತಿಗೆ ಲಕ್ಷಣಾ ಮಾಡುವುದಿಲ್ಲ. ದಿವಿ ಮತ್ತು ದಿವಃ ಎಂಬಲ್ಲಿರುವ ಸಪ್ತಮೀ ಹಾಗೂ ಪಂಚಮೀ ವಿಭಕ್ತಿಗಳು ಮುಖ್ಯಾರ್ಥವನ್ನೇ ಪ್ರತಿಪಾದಿಸುತ್ತವೆ. ಆದರೆ ಸಪ್ತಮೀ ವಿಭಕ್ತಿಯು ಸಾವಕಾಶವಾಗಿದೆ; ಪಂಚಮಿಯು ನಿರವಕಾಶವಾಗಿದೆ. ನಿರವಕಾಶಾನುಸಾರಿಯಾಗಿ ಸಾವಕಾಶವನ್ನು ವ್ಯಾಖ್ಯಾನಿಸಬೇಕು. ಆದ್ದರಿಂದ ದಿವಃಪರಃ ಎಂಬುದೇ ವಸ್ತುಸ್ಥಿತಿ. ದಿವಿ ಎಂಬುದಕ್ಕೆ ದಿವಃ ಉಪರಿ ಎಂದರ್ಥ. ಹೀಗೆ ಹೇಳುವ ರಾಮಾನುಜರಿಗೆ ಅದ್ವೈತಿಗಳಿಗೆ ಬರುವಷ್ಟು ದೊಡ್ಡ ದೋಷ ಬಾರದಿದ್ದರೂ, ದೋಷವು ತಪ್ಪಿದ್ದಲ್ಲ. ಎರಡು ವ್ಯುತ್ಪತ್ತಿಗಳಲ್ಲಿ ಒಂದಕ್ಕೆ ಅಮುಖ್ಯಾರ್ಥವನ್ನು ಇವರು ಹೇಳಲೇ ಬೇಕಾಗುತ್ತದೆ. ನಾವಾದರೆ ದ್ಯುಶಬ್ದಕ್ಕೆ ಅನೇಕಾರ್ಥವನ್ನು ಹೇಳಿದ್ದೇವೆ.

ಆದರೆ ರಾಮಾನುಜರು ಒಂದೇ ಅರ್ಥವನ್ನು ಹೇಳುತ್ತಾರೆ. 'ದೇವದತ್ತನಿಗೆ ಮನೆಯು ಆಧಾರವಾಗ-ಬೇಕಾದರೆ ಮನೆಯ ಒಳಗೋ, ಹೊರಗಿನ ಜಗಲಿಯಲ್ಲೋ, ಅಥವಾ ಮಹಡಿಯ ಮೇಲೋ ಅಥವಾ ಕೆಳಗೋ ಎಲ್ಲಾದರೂ ಒಂದು ಮನೆಯ ಭಾಗದಲ್ಲಿ ದೇವದತ್ತನು ಇರಲೇಬೇಕು. ಮನೆಯಿಂದ ದೇವದತ್ತನು ತುಂಬಾ ದೂರ ಹೋದಾಗ ದೇವದತ್ತನಿಗೆ ಮನೆಯು ಆಧಾರವಾಗುವುದಿಲ್ಲ; ಹೊರತು ಅವಧಿಯಾಗುತ್ತದೆ. ಆವಾಗ ಆಧಾರಾರ್ಥದಲ್ಲಿ ಸಪ್ತಮೀಯನ್ನು ಪ್ರಯೋಗಿಸಲಾಗದು.

ಪ್ರಕೃತ ಜ್ಯೋತಿಯೆಂಬ ಬ್ರಹ್ಮನು ದ್ಯುಲೋಕದ ಯಾವ ಭಾಗದಲ್ಲಿಯೂ ಇಲ್ಲದೆ ಮೇಲಿನ ಲೋಕದಲ್ಲಿದ್ದರೆ ದಿವಿಸ್ಥಿತಃ ಎಂಬ ಸಪ್ತಮ್ಯಂತಪ್ರಯೋಗವನ್ನು ಮುಖ್ಯವಾಗಿ ಮಾಡಲು ಸಾಧ್ಯವಿಲ್ಲ. ಇದರಂತೆ ಪಂಚಮಿಯು ಕೇವಲ ಅವಧಿತ್ವವನ್ನೇ ಹೇಳುತ್ತದೆ. ಹೀಗಿರುವಾಗ ಪಕ್ಷಿಯು ವೃಕ್ಷದಲ್ಲಿ ಕುಳಿತಾಗ 'ವೃಕ್ಷಾತ್ ಪರತ್ರ ಶ್ಯೇನಃ' ಎಂಬ ಪ್ರಯೋಗವನ್ನು ಅಮುಖ್ಯಾರ್ಥವೆಂದು ಹೇಳಲೇಬೇಕಾಗುತ್ತದೆ.

— — — — — —

## ಸ್ವಮತದಲ್ಲಿ ನಾಲ್ಕನೇ ಸೂತ್ರವ್ಯಾಖ್ಯಾನ

### तात्पर्यचन्द्रिका

**भाष्ये ह्येवमभिप्रेतम् – यदा भूर्भूवस्स्वरिति लोकत्रयविवक्षा, तदा लक्षयोजनोच्छ्रितान्तरिक्षलोकादुपरितनस्य सर्वस्यापि द्युत्वात् श्वेतद्वीपानन्तासनवैकुण्ठानां चान्तरिक्षादुपरितनत्वात् तत्रत्यं नारायणवासुदेववैकुण्ठाख्यं त्रिपात्संज्ञं रूपत्रयं 'दिवि' इत्युच्यते । नच –**

**पृथिवीस्थेषु सर्वोच्चो लोकोऽनन्तासनात्मकः ।**

**इत्युक्तत्वादनन्तासनस्य नान्तरिक्षादुपरितनतेति शङ्क्यं, तस्य पृथिवीस्थत्वेपि बहुलक्षयोजनोच्छ्रितत्वेन एकलक्षयोजनोच्छ्रितान्तरिक्षादुपरितनत्वोपपत्तेः । सर्वपृथिवीस्थोच्चत्वोक्त्या तु नान्ययोगो व्यावर्त्यते । किन्त्वयोगः । यदा तु भूर्भुवस्स्वर्महर्जनस्तपस्सत्यमिति सप्तलोकविवक्षा, तदा इन्द्रसदनस्य द्युत्वात्तत्परस्य वैकुण्ठस्य दिवः परत्वं,**

**पृथिव्यां द्यौर्महामेरुराकाशे सूर्यमण्डलम् ।**
**दिवीन्द्रसदनं चैव तत्परे तु दिवःपरे ॥**

**इति स्मृतेर्मेरोरपि द्युत्वात्तत्परस्यानन्तासनस्यापि दिवःपरता, सूर्यमण्डलस्यापि द्युत्वात् तत्परस्य श्वेतद्वीपस्यापि दिवः परत्वम् ।**

ಅನುವಾದ - ನಮ್ಮ ಭಾಷ್ಯದಲ್ಲಿ ಉಪದೇಶಭೇದಪರಿಹಾರವು ಹೀಗಿದೆ -- ಸಮಗ್ರ ಬ್ರಹ್ಮಾಂಡವನ್ನು ಎರಡು ವಿಧದಲ್ಲಿ ವಿಭಾಗಿಸಬಹುದು. ೧. ತ್ರಿಲೋಕ; ೨. ಸಪ್ತಲೋಕ ಎಂದು. ''ಭೂಃ, ಭುವಃ, ಸ್ವಃ' ಎಂದು ತ್ರಿಲೋಕವಿಭಾಗ. ಈ ಮೂರು ಲೋಕಗಳಲ್ಲಿಯೇ ಹದಿನಾಲ್ಕು ಲೋಕಗಳು ಸೇರುತ್ತವೆ. ಈ ಪಕ್ಷದಲ್ಲಿ ಭೂಲೋಕವೆಂದರೆ ನಾವು ವಾಸ ಮಾಡುವ ಲೋಕ.

ಇದಕ್ಕಿಂತ ಮೇಲೆ ಒಂದು ಲಕ್ಷಯೋಜನ ವಿಸ್ತಾರದ ಅಂತರಿಕ್ಷಲೋಕವಿದೆ. ಅದರ ಮೇಲಿರುವುದೆಲ್ಲಾ ದ್ಯುಲೋಕ. ಶ್ವೇತದ್ವೀಪ, ಅನಂತಾಸನ, ವೈಕುಂಠಗಳು ಅಂತರಿಕ್ಷಕ್ಕಿಂತಲೂ ಮೇಲ್ಭಾಗದಲ್ಲಿವೆ. ಆದ್ದರಿಂದ ಈ ಮೂರು ವಿಷ್ಣುಧಾಮಗಳು ದಿವಿಸ್ಥಿತಗಳಾದವು. ಈ ವಿಷ್ಣುಧಾಮಗಳಲ್ಲಿರುವ ನಾರಾಯಣ, ವಾಸುದೇವ, ವೈಕುಂಠ ಎಂಬ ಮೂರು ಭಗವಂತನ ರೂಪಗಳು ಸಹ ದ್ಯುಲೋಕದಲ್ಲಿವೆ ಎಂದಂತಾಯಿತು.

ಶಂಕೆ - 'ಪೃಥಿವೀಸ್ಥೇಷು ಸರ್ವೋಚ್ಚೋ ಲೋಕೋऽನಂತಾಸನಾತ್ಮಕಃ' (ಅನಂತಾಸನವು ಪೃಥಿವಿಯಲ್ಲಿರುವ ಶ್ರೇಷ್ಠಲೋಕವಾಗಿದೆ) ಎಂಬ ವಚನದಂತೆ ಅನಂತಾಸನವು ಪೃಥಿವಿಯಲ್ಲೇ ಇದೆ. ಹೀಗಿರುವಾಗ ಅಂತರಿಕ್ಷಕ್ಕಿಂತ ಮೇಲ್ಭಾಗದಲ್ಲಿ ಅನಂತಾಸನವಿದೆಯೆಂದು ಹೇಗೆ ಹೇಳಿದಿರಿ?

ಸಮಾಧಾನ - ಅನಂತಾಸನವು ಪೃಥಿವಿಯಲ್ಲಿ ಇದ್ದರೂ ಸಹ ಅನೇಕಲಕ್ಷಯೋಜನ ಮೇಲೆ ಇದೆ. ಆದ್ದರಿಂದ 'ಒಂದು ಲಕ್ಷಯೋಜನದಷ್ಟು ವಿಸ್ತಾರವಿರುವ ಅಂತರಿಕ್ಷಕ್ಕಿಂತ ಮೇಲೆ ಅನಂತಾಸನವಿದೆ' ಎಂದದ್ದು ತಪ್ಪಲ್ಲ. 'ಪೃಥಿವೀಸ್ಥೇಷು ಸರ್ವೋಚ್ಚಃ' ಎಂಬಲ್ಲಿ 'ಪೃಥ್ವೀಸ್ಥೇಷ್ವೇವ ಸರ್ವೋಚ್ಚಃ' ಎಂಬ ಅನ್ಯಯೋಗವ್ಯವಚ್ಛೇದವನ್ನು ವಿವಕ್ಷಿಸಿದರೆ ಪೃಥಿವೀಸ್ಥಾನಗಳಿಗಿಂತ ಅನಂತಾಸನವು ಮೇಲಿದೆ ಎಂದಂತಾಯಿತು; ಹೊರತು ಅಂತರಿಕ್ಷಕ್ಕಿಂತ ಮೇಲಿದೆ ಎಂದು ತಿಳಿಯುವುದಿಲ್ಲ. ಅದಕ್ಕೋಸ್ಕರ ಅನ್ಯಯೋಗವ್ಯವಚ್ಛೇದವನ್ನು ಹೇಳದೇ ಅಯೋಗವ್ಯವಚ್ಛೇದವನ್ನು ಹೇಳಬೇಕು. 'ಪೃಥಿವೀಸ್ಥೇಷು ಸರ್ವೋಚ್ಚಃ ಏವ' ಎಂದು ಹೇಳಿದಾಗ ಪೃಥಿವಿಯಲ್ಲಿರುವ ಎಲ್ಲ ಲೋಕಗಳಿಗಿಂತ ಅನಂತಾಸನವು ಸರ್ವೋಚ್ಚವೇ ಆಗಿದೆ ಎಂದಂತಾಯಿತು. ಹೊರತು ಅಂತರಿಕ್ಷಕ್ಕಿಂತ ಮೇಲಿಲ್ಲವೆಂದು ಹೇಳಿದಂತಾಗುವುದಿಲ್ಲ.

ಇನ್ನು 'ಭೂಃ, ಭುವಃ, ಸ್ವಃ, ಮಹಃ, ಜನಃ, ತಪಃ, ಸತ್ಯಮ್' ಎಂದು ಲೋಕಗಳನ್ನು ಏಳು ವಿಭಾಗ ಮಾಡುವುದಾದರೆ ಇಂದ್ರನ ಅರಮನೆಯು ದ್ಯುಲೋಕವೆನಿಸುತ್ತದೆ. ಅದರ ಮೇಲ್ಭಾಗದಲ್ಲಿರುವ ವೈಕುಂಠವು ದಿವಃಪರವಾಗುತ್ತದೆ. ಅದು ಹೀಗೆ --

ಪೃಥಿವ್ಯಾಂ ದ್ಯೌರ್ಮಹಾಮೇರುರಾಕಾಶೇ ಸೂರ್ಯಮಂಡಲಮ್ ।
ದಿವೀಂದ್ರಸದನಂ ಚೈವ ತತ್ಪರೇ ತು ದಿವಃಪರೇ ॥

(ಮೇರುಪರ್ವತವು ಪೃಥಿವೀಲೋಕದ ದ್ಯುಲೋಕವೆನಿಸಿದೆ. ಇದರ ಮೇಲ್ಭಾಗದಲ್ಲಿ ಅನಂತಾಸನವಿದೆ. ಆದ್ದರಿಂದ ಅನಂತಾಸನದಲ್ಲಿರುವ ಜ್ಯೋತಿಯು ದಿವಃಪರವೆನಿಸುತ್ತದೆ. ಅಂತರಿಕ್ಷಲೋಕದಲ್ಲಿ ಸೂರ್ಯಮಂಡಲವು ದ್ಯುಲೋಕ. ಅದರ ಮೇಲೆ ಶ್ವೇತದ್ವೀಪವಿದೆ. ಶ್ವೇತದ್ವೀಪದಲ್ಲಿರುವ ರೂಪವೂ ಸಹ ಹೀಗೆ ದಿವಃಪರ ಎನಿಸಿದೆ. ಸ್ವರ್ಗಲೋಕದಲ್ಲಿ ಇಂದ್ರನ ಅರಮನೆಯು ದ್ಯುಲೋಕ. ಅದರ ಮೇಲೆ ವೈಕುಂಠವಿದೆ. ಅಲ್ಲಿರುವ ರೂಪವು ದಿವಃಪರವೆನಿಸುತ್ತದೆ. ಹೀಗೆ ಮೂರೂ ರೂಪಗಳಿಗೂ ದಿವಃಪರತ್ವವನ್ನು ತಿಳಿಯಬೇಕು.)

ಗಾಯತ್ರ್ಯಧಿಕರಣ-(೧।೧।೧೧)

ಈ ಸ್ಮೃತಿಯಂತೆ ಮೇರುಪರ್ವತವು ಕೂಡ ದ್ಯು ಎನಿಸಿದೆ. ಅದರ ಮೇಲಿರುವ ಅನಂತಾಸನವು ದಿವಃಪರವಾಗುತ್ತದೆ. ಪೃಥ್ವಿಮಂಡಲವು ದ್ಯು. ಆದ್ದರಿಂದ ಅದರ ಮೇಲಿರುವ ಶ್ವೇತದ್ವೀಪವು ದಿವಃಪರವಾಗುತ್ತದೆ.

**प्रकाशः** – भाष्येऽस्पष्टत्वात् –

**लोकत्रयविवक्षायां परतो लक्षयोजनात् ।**
**सर्वं द्योरिति विज्ञेयं ततस्ते दिवि संस्थिताः ।**
**दिवः परश्च भगवान् सप्तलोकविवक्षया ॥**

इति छान्दोग्यभाष्यानुरोधेन टीकोक्तमाशयं प्रतीतानुपपत्तिनिरासेन विशदयति – **भाष्य** इति ॥ अधस्तनानामतलादीनामुपरितनानां महरादीनां भूस्स्वर्ग्रहणेन गृहीतत्वादिति भावः ।

**स्वरूपपादा विष्णोस्तु त्रयो हि दिवि संस्थिताः ।**
**नारायणो वासुदेवो वैकुण्ठ इति ते त्रयः ॥**

इति स्मृत्यनुरोधेनाह – **नारायणेति** ॥ टीकादावन्तरिक्षस्य लक्षयोजनत्वविशेषणत्वोक्तेः कृत्यं वक्तुं चोदयति – **नचेति** ॥ सर्वेषु लोकेषूच्चः सर्वोच्चः, सर्वेषु लोकेष्वित्यतः, 'पृथिवीस्थेषु' इति योजना ।

**बहुलक्षोच्छ्रिते नित्ये विमाने संस्थितं यतः ।**

इति तद्भाष्योक्तस्मृत्यनुसारेणाह **बहिरिति** ॥ उक्तञ्च द्वितीयस्कन्धतात्पर्ये षष्ठे –

**अनन्तासनवैकुण्ठनारायणपुराणि तु ।**
**बहुलक्षोच्छ्रितेष्वेषु स वसत्यमृतो हरिः ॥**

इति ॥ ननु पृथिवीस्थोच्चत्वोक्त्या नान्योच्चत्वं लभ्यते, अतः किमेवमित्यत आह – **सर्वेति** ॥ 'अन्ययोगः' अन्योच्चत्वयोगः ॥ **अयोग इति** ॥ पृथिवीस्थेषु सर्वेषूच्च एवेत्ययोग इत्यर्थः । पक्षान्तरं विशदयति – **यदेति** ॥ अधस्तनानां अतलवितलसुतलतलातल-महातलरसातलपातालानां भूर्ग्रहणेन ग्रहणादिति भावः ।

ವಿವರಣೆ - ಭಾಷ್ಯದಲ್ಲಿ ಸ್ಪಷ್ಟವಾಗಿ ತಿಳಿಯುವುದಿಲ್ಲ. ಆದಕ್ಕಾಗಿ ಛಾಂದೋಗ್ಯಭಾಷ್ಯವನ್ನು ಅನುಸರಿಸಿ ಪ್ರಕೃತ ಗ್ರಂಥಕಾರರು ವ್ಯಾಖ್ಯಾನಿಸುತ್ತಿದ್ದಾರೆ. ಮತ್ತು ಟೀಕೆಯನ್ನು ನೋಡಿದಾಗ ಆಪಾತತಃ ಬರುವ

ಅನುಪಪತ್ತಿಯನ್ನೂ ಸಹ 'ಭಾಷ್ಯ' ಇತ್ಯಾದಿ ಗ್ರಂಥದಿಂದ ಪರಿಹರಿಸುತ್ತಿದ್ದಾರೆ. ಛಾಂದೋಗ್ಯಭಾಷ್ಯ ಹೀಗಿದೆ --

'................. ಪರತಃ ಲಕ್ಷಯೋಜನಾತ್ ।
ಸರ್ವಂ ದ್ಯೌರಿತಿ ವಿಜ್ಞೇಯಂ ತತಸ್ತೇ ದಿವಿ ಸಂಸ್ಥಿತಾಃ ।
ದಿವಃ ಪರಶ್ಚ ಭಗವಾನ್ ಸಪ್ತಲೋಕವಿವಕ್ಷಯಾ ॥

(ಪೃಥಿವೀಲೋಕಕ್ಕಿಂತ ಲಕ್ಷಯೋಜನದ ಮೇಲೆ ದ್ಯುಲೋಕವಿದೆ. ಅಲ್ಲಿರುವ ರೂಪವು ದಿವಿಸ್ಥಿತ ವಾಗುತ್ತದೆ. ಸಪ್ತಲೋಕವಿವಕ್ಷೆಯಿಂದ ಅಲ್ಲಿರುವ ರೂಪಗಳೇ ದಿವಃಪರ ಎನಿಸುತ್ತವೆ.) ಎಂದು. ಮೂರು ಲೋಕಗಳನ್ನಾಗಿ ವಿಭಾಗ ಮಾಡಿದಾಗ ಕೆಳಗಿರುವ ಅತಲಾದಿಲೋಕಗಳು ಭೂಲೋಕವೆನಿಸುತ್ತವೆ. ಮೇಲಿರುವ ಮಹರ್ಲೋಕಗಳು ಸ್ವಃ ಎನಿಸುತ್ತವೆ.

'ಸ್ವರೂಪಪಾದಾ ವಿಷ್ಣೋಸ್ತು ತ್ರಯೋ ಹಿ ದಿವಿ ಸಂಸ್ಥಿತಾಃ ।
ನಾರಾಯಣೋ ವಾಸುದೇವೋ ವೈಕುಂಠೋ ಇತಿ ತೇ ತ್ರಯಃ ॥

(ನಾರಾಯಣ ವಾಸುದೇವ ವೈಕುಂಠ ಎಂಬ ಮೂರು ವಿಷ್ಣುವಿನ ಸ್ವರೂಪಾಂಶಗಳು ದ್ಯುಲೋಕದಲ್ಲಿ ಇರುತ್ತವೆ). ಈಸ್ಮೃತಿಗೆ ಅನುಸಾರಿಯಾಗಿ 'ನಾರಾಯಣವಾಸುದೇವ' ಇತ್ಯಾದಿ ಗ್ರಂಥವು ಹೊರಟಿದೆ. ಟೀಕೆಯಲ್ಲಿ ಅಂತರಿಕ್ಷಲೋಕವನ್ನು ಲಕ್ಷಯೋಜನವಿಸ್ತಾರವೆಂದು ಹೇಳಿದ್ದಾರೆ. ಲಕ್ಷಯೋಜನಪದದ ಸಾರ್ಥಕ್ಯವನ್ನು ತೋರಿಸಲು 'ನಚ' ಎಂಬ ಗ್ರಂಥವು ಹೊರಟಿದೆ. 'ಎಲ್ಲ ಲೋಕಗಳಲ್ಲಿ ಉಚ್ಚವಾದದ್ದು ಸರ್ವೋಚ್ಚ ಎನಿಸುತ್ತದೆ. ಎಲ್ಲ ಲೋಕವೆಂದರೆ ಯಾವುದು? ಎಂಬ ಪ್ರಶ್ನೆಗೆ ಪೃಥಿವಿಯಲ್ಲಿ ಅನೇಕ-ಲೋಕಗಳಿವೆ; ಆ ಎಲ್ಲ ಲೋಕಗಳಿಗಿಂತ ಉಚ್ಚಸ್ಥಾನದಲ್ಲಿದೆ' ಎಂದರ್ಥ. 'ಬಹುಲಕ್ಷೋಚ್ಛ್ರಿತೇ ನಿತ್ಯೇ ವಿಮಾನೇ ಸಂಸ್ಥಿತಂ ಯತಃ' (ಅನೇಕಲಕ್ಷಯೋಜನದೂರದಲ್ಲಿ ವಿಮಾನರೂಪವಾದ ಅನಂತಾಸನವಿದೆ. ಆದರಲ್ಲಿ ವಾಸುದೇವ ಎಂಬ ರೂಪವಿದೆ) ಈ ಸ್ಮೃತಿಯನ್ನು ಭಾಷ್ಯದಲ್ಲಿ ಉದಾಹರಿಸಿದ್ದಾರೆ. ಅದನ್ನು ಪ್ರಕೃತ ಗ್ರಂಥಕಾರರು 'ಬಹುಲಕ್ಷಯೋಜನ' ಎಂದು ವ್ಯಾಖ್ಯಾನಿಸುತ್ತಿದ್ದಾರೆ.

ಅನಂತಾಸನವೈಕುಂಠನಾರಾಯಣಪುರಾಣಿ ತು ।
ಬಹುಲಕ್ಷೋಚ್ಛ್ರಿತೇಷ್ವೇಷು ಸ ವಸತ್ಯಮೃತೋ ಹರಿಃ ॥ (ಭಾಗ.ತಾ. ೨/೬)

(ಅನಂತಾಸನವೈಕುಂಠಶ್ವೇತದ್ವೀಪಗಳು ಪೃಥಿವಿಗಿಂತ ಅನೇಕಲಕ್ಷಯೋಜನ ಮೇಲಿವೆ. ಅವುಗಳಲ್ಲಿ ಅಮೃತಮಯನಾದ ಹರಿಯು ವಾಸಿಸುತ್ತಾನೆ.)

'ಪೃಥಿವೀಸ್ಥೇಷು ಸರ್ವೇಷು' ಎಂಬುದರಿಂದ 'ಅನಂತಾಸನವು ಪೃಥಿವಿಗಿಂತ ಮೇಲಿದೆ' ಎಂದಷ್ಟೇ ತಿಳಿಯುತ್ತದೆ ಹೊರತು ಅಂತರಿಕ್ಷಕ್ಕಿಂತ ಮೇಲಿದೆ ಎಂದು ತಿಳಿಯುವುದಿಲ್ಲ ಎಂಬ ಪ್ರಶ್ನೆಗೆ 'ಸರ್ವ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ. ಇಲ್ಲಿ ಅನ್ಯಯೋಗವ್ಯವಚ್ಛೇದವನ್ನು ಮಾಡಿಲ್ಲ. ಅಂದರೆ ಇಲ್ಲಿ 'ಬೇರೆ ಲೋಕಗಳಿಗಿಂತ ಮೇಲಿಲ್ಲ'ವೆಂಬ ಅನ್ಯಯೋಗವ್ಯವಚ್ಛೇದವನ್ನು ಮಾಡಿಲ್ಲ. ಹೊರತು 'ಪೃಥಿವಿಯಲ್ಲಿರುವ ಎಲ್ಲ ಲೋಕಗಳಿಗಿಂತ ಮೇಲೆ ಇದ್ದೇ ಇದೆ' ಎಂಬ ಅಯೋಗವ್ಯವಚ್ಛೇದವನ್ನು ಮಾಡಲಾಗಿದೆ. ಮೂರು ಲೋಕಗಳ ವಿವಕ್ಷೆಯಿಂದ ದಿವಿಸ್ಥಿತತ್ವ ಮತ್ತು ದಿವಃಪರತ್ವದ ವಿರೋಧವನ್ನು ಪರಿಹರಿಸಿದ್ದಾಯಿತು.

## ಗಾಯತ್ರ್ಯಧಿಕರಣ-(೧।೧।೧೧)

'ಯದಾ ತು' ಎಂಬ ಗ್ರಂಥದಿಂದ ಸಪ್ತಲೋಕಗಳೆಂದು ವಿಭಾಗ ಮಾಡಿದರೂ ಉಪದೇಶಭೇದದ ವಿರೋಧವಿಲ್ಲವೆಂದು ಸಮರ್ಥಿಸುತ್ತಾರೆ. ಅತಲ, ವಿತಲ, ಸುತಲ, ತಲಾತಲ, ರಸಾತಲ, ಮಹಾತಲ, ಪಾತಾಳ ಇವುಗಳನ್ನು ಭೂಲೋಕದಲ್ಲಿ ಸೇರಿಸಬೇಕು.

**गुरुराजीयम्** – तर्ह्यसाधारण्येन पृथिवीस्थोचत्वोक्तिरयुक्तेत्यत आह – **सर्वपृथिवीस्थेति** ॥ सप्तलोकविवक्षायां दिवःपरत्वमुपपादयति ॥ **यदा त्विति** ॥ तथाप्यनन्तासनस्य दिवःपरत्वं कथमित्यतः स्मृत्यनुसारेण तदाह – **पृथिव्यामिति** ॥ श्वेतद्वीपस्य तदुपपादयति – **सूर्यमण्डलस्येति** ॥

## ಸಾರ

'ಉಪದೇಶಭೇದಾತ್' ಎಂಬ ಸೂತ್ರಕ್ಕೆ ಸಿದ್ಧಾಂತದ ಪ್ರಕಾರ ವ್ಯಾಖ್ಯಾನ. ಛಾಂದೋಗ್ಯೋಪನಿಷತ್ತಿನ ಗಾಯತ್ರೀಪ್ರಕರಣದಲ್ಲಿ 'ತ್ರಿಪಾದಸ್ಯಾಮೃತಂ ದಿವಿ' ಎಂದು ಗಾಯತ್ರಿಯು ದ್ಯುಲೋಕದಲ್ಲಿದೆ ಎನ್ನಲಾಗಿದೆ. ಮುಂದಿನ ಜ್ಯೋತಿಪ್ರಕರಣದಲ್ಲಿ 'ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ' ಎಂದು ದ್ಯುಲೋಕಕ್ಕಿಂತ ಮೇಲೆ ಜ್ಯೋತಿಯು ಇದೆ ಎನ್ನಲಾಗಿದೆ. ದಿವಿ ಎಂಬಲ್ಲಿ ಸಪ್ತಮೀ ವಿಭಕ್ತಿ ಇರುವುದರಿಂದ ದ್ಯುಲೋಕದಲ್ಲಿ ಎಂದರ್ಥ. ದಿವಃ ಎಂಬಲ್ಲಿ ಪಂಚಮೀ ವಿಭಕ್ತಿ ಇರುವುದರಿಂದ ದ್ಯುಲೋಕಕ್ಕಿಂತ ಮೇಲ್ಭಾಗದಲ್ಲಿ ಎಂದರ್ಥ. ಜ್ಯೋತಿ ಹಾಗೂ ಗಾಯತ್ರೀ ಎರಡೂ ಒಂದೇ ಆದಲ್ಲಿ ಒಂದೇ ವಸ್ತು ದ್ಯುಲೋಕದಲ್ಲಿ ಹಾಗೂ ಅದಕ್ಕಿಂತ ಮೇಲಿನ ಲೋಕದಲ್ಲಿ ಇರಲು ಹೇಗೆ ತಾನೆ ಸಾಧ್ಯ? ಈ ಕಾರಣದಿಂದ ದ್ಯುಲೋಕದಲ್ಲಿರುವ ಗಾಯತ್ರಿಯೇ ಬೇರೆ ಅದರ ಮೇಲಿನ ಲೋಕದಲ್ಲಿರುವ ಜ್ಯೋತಿಯೇ ಬೇರೆ ಎನ್ನಬೇಕು. ಈ ಪೂರ್ವಪಕ್ಷವನ್ನು 'ಉಪದೇಶಭೇದಾತ್' ಎಂಬ ಪದದಿಂದ ತೋರಿಸಿದ್ದಾರೆ.

'ಉಭಯಸ್ಮಿನ್ನಪ್ಯವಿರೋಧಾತ್' ಎಂಬ ಸೂತ್ರಭಾಗದಿಂದ ತಿಳಿಯುವ ಸಿದ್ಧಾಂತ. ಎರಡು ಬಗೆಯಲ್ಲಿ ಸಮಸ್ತಲೋಕಗಳನ್ನು ವಿಭಾಗಿಸಬಹುದು. ೧. ತ್ರಿಲೋಕ; ೨. ಸಪ್ತಲೋಕ ಎಂದು. 'ಭೂಃ ಭುವಃ ಸ್ವಃ' ಎಂದು ಮೂರು ವಿಭಾಗ ಮಾಡಿದಾಗ ಸಮಸ್ತ ಹದಿನಾಲ್ಕುಲೋಕಗಳು ಈ ಮೂರರಲ್ಲೇ ಸೇರುತ್ತವೆ. ಈ ಪಕ್ಷದಲ್ಲಿ ನಾವು ವಾಸಿಸುತ್ತಿರುವ ಲೋಕವು ಭೂಲೋಕ. ಇದಕ್ಕಿಂತ ಒಂದು ಲಕ್ಷಯೋಜನ ಮೇಲೆ ಅಂತರಿಕ್ಷಲೋಕ. ಅದರ ಮೇಲಿರುವುದೆಲ್ಲಾ ದ್ಯುಲೋಕ. ಶ್ವೇತದ್ವೀಪ ಅನಂತಾಸನ ಹಾಗೂ ವೈಕುಂಠಲೋಕಗಳು ಒಂದು ಲಕ್ಷಯೋಜನಕ್ಕಿಂತ ಮೇಲಿರುವುದರಿಂದ ಅವೆಲ್ಲವೂ ದ್ಯುಲೋಕವೆನಿಸಿವೆ. ಆ ಲೋಕಗಳಲ್ಲಿರುವ ಭಗವಂತನ ರೂಪಗಳು ದ್ಯುಲೋಕದಲ್ಲಿವೆ ಎನಿಸುತ್ತವೆ. ಹೀಗೆ ತ್ರಿಲೋಕವಿವಕ್ಷೆಯಿಂದ ದಿವಿಸ್ಥಿತತ್ವವನ್ನು ಹೊಂದಿಸಬೇಕು.

ಸಪ್ತಲೋಕವಿವಕ್ಷೆಯಿಂದ ದಿವಃಪರತ್ವವನ್ನು ಹೊಂದಿಸಬೇಕು. ಭೂಃ, ಭುವಃ, ಸ್ವಃ, ಮಹಃ, ಜನಃ, ತಪಃ, ಸತ್ಯಮ್‌ಎಂದು ಲೋಕಗಳನ್ನು ಏಳು ವಿಭಾಗ ಮಾಡಬಹುದು. ಮೇರು ಪರ್ವತವು ಪೃಥಿವೀಲೋಕದ ದ್ಯುಲೋಕ. ಅದರ ಮೇಲ್ಭಾಗದಲ್ಲಿ ಅನಂತಾಸನ. ಅಂತರಿಕ್ಷಲೋಕದಲ್ಲಿ ಸೂರ್ಯಮಂಡಲವು ದ್ಯುಲೋಕ. ಅದರ ಮೇಲ್ಭಾಗದಲ್ಲಿ ಶ್ವೇತದ್ವೀಪ. ಸ್ವರ್ಗಲೋಕದಲ್ಲಿ ಇಂದ್ರನ ಅರಮನೆ ದ್ಯುಲೋಕ. ಅದರ ಮೇಲ್ಭಾಗದಲ್ಲಿ ವೈಕುಂಠಲೋಕ. ಹೀಗೆ ಅನಂತಾಸನಾದಿಗಳಿಗೆ ದಿವಃಪರತ್ವವನ್ನು ಕ್ರಮವಾಗಿ ಹೊಂದಿಸಬೇಕು. ಹೀಗೆ ಹೇಳಿದಾಗ ದಿವಿಸ್ಥಿತತ್ವ ಹಾಗೂ ದಿವಃಪರತ್ವಗಳಿಗೆ ವಿರೋಧ ಬರುವುದಿಲ್ಲ.

ಪರಿಪೂರ್ಣಚಂದ್ರಿಕಾ

**तात्पर्यचन्द्रिका**

अत्र यद्यपि लोकत्रयविवक्षायामप्यनन्तासनादीनां मेर्वादिपरत्वेन दिवः परत्वसिद्धिः, स्वर्गलोकात्परत्वं अनन्तासनश्वेतद्वीपयोर्नास्ति,

यावानुच्चः स्वर्गलोकस्तावानुच्चतया स च ।
श्वेतद्वीपो दिविष्ठोऽतः ..................॥ इत्यादेः ।

तथाऽपि वैकुण्ठस्य सर्वद्युपरत्वसिद्धये सप्तलोकविवक्षोक्तिः । तदुक्तम् –

द्व्यात्मकेभ्यश्च सर्वेभ्यो वैकुण्ठश्चोच्च उच्यते ।

इति । एवञ्च यथा 'चैत्रो ग्रामेऽस्ति' इत्युक्त्वा 'स ग्रामाद्बहिः' इत्युक्ते आद्ये प्रयोगे ग्रामशब्दः अरण्यादिसहिते वर्तते, द्वितीये तु वाटपरिक्षेपे । तदुक्तं महाभाष्ये "ग्रामशब्दोऽयं बह्वर्थः । आस्ति वाटपरिक्षेपे वर्तते । तद्यथा 'ग्रामं प्रविष्टः' इति । अस्ति सारण्यके सस्थण्डिलके वर्तते । तद्यथा 'ग्रामो लब्धः' इतीति । तथा प्रकृतेऽपि द्युशब्दोऽनेकार्थः । अनेकार्थत्वं च अक्षादिशब्दवत् वृद्धव्यवहारादिना सर्वत्र मुख्यत्वेन वा, एकत्र मुख्यत्वेऽप्यन्यत्र अमुख्यत्वेन वेति । "अन्याय्यँ चानेकार्थत्वं" इति न्यायस्य नायं विषयः । सर्वतः पृष्ठत्वं अनन्तासनादीनां यथासम्भवं पृथिव्यादिलोकोच्चत्वं, विश्वतः पृष्ठत्वं च मेरुवैजयन्तसत्यलोकरूप-चतुर्मुखस्थानादुच्चत्वमिति टीकायामेवोक्तम् । इदञ्च –

पृथिव्यां ब्रह्मणो मेरुर्जयन्तं त्वन्तरिक्षगम् ।
तृतीयं सत्यलोके च सदनं त्रिविधं स्मृतम् ।
तेभ्योऽनन्तासनाद्या यत् परतो विश्वतः परे ॥

इत्यादिवाक्यादवगन्तव्यम् । अत्र यद्यपि वैकुण्ठस्य स्वर्गलोकात्परत्वेनैव दिवः परत्वसिद्धिः, तथाऽपि तस्य "सर्वतः पृष्ठेषु" इत्यनेनैवोक्तत्वात् 'दिवः परः" इत्यस्य वैयर्थ्यं माभूत् इतीन्द्रसदनस्य द्युत्वोक्तिः ।

**यद्वा – चित्प्रकृत्यात्मकत्वेन द्योतमाने स्थानत्रये सप्तम्यन्तो द्युशब्दो यौगिकः, पञ्चम्यन्तस्तु स्वर्गादौ रूढ इत्यविरोधः । अयञ्च सूत्राविरोधशब्दार्थ इति द्रष्टव्यम् । अयञ्च परिहारः –**

**बहुलक्षोच्छ्रिते नित्यं विमाने संस्थितं यतः ।**
**चित्प्रकृत्यात्मनि ततो दिवीति कथितं श्रुतौ ॥**

**इति छान्दोग्यभाष्ये सूचितः ।**

ಅನುವಾದ - ವಸ್ತುತಃ ಹಿಂದೆ ಹೇಳಿದಂತೆ ಯೋಜನೆ ಮಾಡಿದರೆ ಸಪ್ತಲೋಕದ ಅಪೇಕ್ಷೆ ಇರುವುದಿಲ್ಲ. ತ್ರಿಲೋಕಗಳನ್ನು ತೆಗೆದುಕೊಂಡರೂ ದಿವಃಪರತ್ವವನ್ನು ಹೇಳಬಹುದು. ಅನಂತಾಸನ, ಶ್ವೇತದ್ವೀಪಾದಿಗಳು ಮೇರು ಮೊದಲಾದ ದ್ಯುಲೋಕಗಳಿಗಿಂತ ಮೇಲಿರುವುದರಿಂದ ದಿವಃಪರ-ಗಳಾಗಿವೆ. ಸ್ವರ್ಗಲೋಕಕ್ಕಿಂತ ಮೇಲಂತೂ ಅನಂತಾಸನ ಮತ್ತು ಶ್ವೇತದ್ವೀಪಗಳು ಇರುವುದಿಲ್ಲ. ಏಕೆಂದರೆ 'ಯಾವಾನುಚ್ಚಃ ಸ್ವರ್ಗಲೋಕಸ್ತಾವಾನುಚ್ಚತಯಾ ಸ ಚ । ಶ್ವೇತದ್ವೀಪೋ ದಿವಿಷ್ಠೋಽತ' (ಸ್ವರ್ಗಲೋಕವು ಎಷ್ಟು ಎತ್ತರವಿದೆಯೋ ದಿವಿಸ್ಥಿತವಾದ ಶ್ವೇತದ್ವೀಪವು ಅಷ್ಟೇ ಎತ್ತರದಲ್ಲಿದೆ) ಎಂಬ ಪ್ರಮಾಣದಂತೆ.

ಆದರೆ ಹೀಗೆ ಸಪ್ತಲೋಕವನ್ನು ವಿವಕ್ಷಿಸಿದಾಗ ಮೂರು ದ್ಯುಲೋಕಗಳಿಂದ ಮಾತ್ರವಲ್ಲದೆ ಸ್ವರ್ಗಕ್ಕಿಂತಲೂ ಎತ್ತರದಲ್ಲಿ ವೈಕುಂಠಲೋಕವಿದೆ ಎಂದು ಸಿದ್ಧವಾಗುತ್ತದೆ. ಇದನ್ನು 'ದ್ವ್ಯಾತ್ಮಕೇಭ್ಯಶ್ಚ ಸರ್ವೇಭ್ಯೋ ವೈಕುಂಠಶ್ಚೋಚ್ಚ ಉಚ್ಯತೇ' (ಶ್ವೇತದ್ವೀಪ ಹಾಗೂ ಅನಂತಾಸನಗಳಿಗಿಂತ ವೈಕುಂಠವು ಎತ್ತರದಲ್ಲಿದೆ ಎಂದು ಹೇಳಿದೆ.) ಎಂಬಂತೆ ವೈಕುಂಠವು ಎಲ್ಲಕ್ಕಿಂತ ಎತ್ತರದಲ್ಲಿದೆ. ಈ ಪ್ರಯೋಜನ-ಕ್ಕಾಗಿ ಸಪ್ತಲೋಕವಿವಕ್ಷೆಯನ್ನು ಅನುಸರಿಸಲಾಗಿದೆ.

ದ್ಯುಶಬ್ದಕ್ಕೆ ಹೀಗೆ ಅನೇಕಾರ್ಥ ಹೇಳುವುದು ತಪ್ಪಲ್ಲ. ಉದಾ -- 'ಚೈತ್ರಃ ಗ್ರಾಮೇ ಅಸ್ತಿ' (ಚೈತ್ರನು ಗ್ರಾಮದಲ್ಲಿದ್ದಾನೆ) ಎಂದು ಹೇಳಿ; 'ಸಃ ಗ್ರಾಮಾದ್ಬಹಿಃ' ಅವನು ಗ್ರಾಮದ ಹೊರಗಿದ್ದಾನೆ ಎಂದು ಹೇಳಿದಾಗ, ಮೊದಲ ಪ್ರಯೋಗದಲ್ಲಿ ಗ್ರಾಮಶಬ್ದಕ್ಕೆ 'ಅರಣ್ಯದಿಂದ ಕೂಡಿದ ಗ್ರಾಮ' ಎಂದರ್ಥ. ಎರಡನೆ ಪ್ರಯೋಗದಲ್ಲಿ 'ವಾಟಪರಿಕ್ಷೇಪ' (ಜನಗಳು ವಾಸಮಾಡುವ ಸ್ಥಳ) ಎಂದರ್ಥ. ಏಕೆಂದರೆ ಚೈತ್ರನು ಊರಿನ ಹತ್ತಿರದ ಅರಣ್ಯದಲ್ಲಿದ್ದಾಗ ಗ್ರಾಮದಲ್ಲಿದ್ದಾನೆಂಬ ಪ್ರಯೋಗವಿದೆ. ಮತ್ತು ಗ್ರಾಮದ ಹೊರಗಿದ್ದಾನೆಂಬ ಪ್ರಯೋಗವೂ ಇದೆ. ಇಲ್ಲಿ ಎರಡೂ ಪ್ರಯೋಗಗಳಲ್ಲಿರುವ ಗ್ರಾಮಶಬ್ದಕ್ಕೆ ಅರಣ್ಯಸಹಿತಗ್ರಾಮದಲ್ಲಿ ಮತ್ತು ವಾಸಸ್ಥಳವುಳ್ಳ ಗ್ರಾಮದಲ್ಲಿ ಮುಖ್ಯಪ್ರಯೋಗವೇ ಕಂಡಿದೆ. ಮಹಾಭಾಷ್ಯದಲ್ಲಿಯೂ ಇದನ್ನು ಹೇಳಿದ್ದಾರೆ. 'ಗ್ರಾಮಶಬ್ದೋಽಯಂ ಬಹ್ವರ್ಥಃ । ಅಸ್ತಿ ವಾಟಪರಿಕ್ಷೇಪೇ ವರ್ತತೇ । ತದ್ಯಥಾ ಗ್ರಾಮಂ ಪ್ರವಿಷ್ಟ ಇತಿ । ಅಸ್ತಿ ಸಾರಣ್ಯಕೇ ಸ ಸ್ಥಂಡಿಲಕೇ

ವರ್ತತೇ । ತದ್ಯಥಾ ಗ್ರಾಮೋ ಲಬ್ಧಃ' ಎಂದು. ('ಗ್ರಾಮವನ್ನು ಪ್ರವೇಶಿಸಿದನು' ಎಂಬಲ್ಲಿ ಗ್ರಾಮ-ಶಬ್ದಕ್ಕೆ ವಾಟಪರಿಕ್ಷೇಪ ಎಂದರ್ಥ. 'ಗ್ರಾಮವು ಸಿಕ್ಕಿತು' ಎಂಬಲ್ಲಿ ಗ್ರಾಮಶಬ್ದಕ್ಕೆ ಗ್ರಾಮದ ಹತ್ತಿರದ ಅರಣ್ಯಪ್ರದೇಶ ಎಂದರ್ಥ. ಹೀಗೆ ಗ್ರಾಮಶಬ್ದವು ಅನೇಕಾರ್ಥ ಉಳ್ಳದ್ದಾಗಿದೆ).

ಇದರಂತೆ ಪ್ರಕೃತ ದ್ಯುಶಬ್ದವು ಅನೇಕಾರ್ಥವುಳ್ಳದ್ದಾಗಿದೆ. ಹೇಗೆ ಅಕ್ಷಾದಿಶಬ್ದವು ಹಿರಿಯರ ವ್ಯವಹಾರದಂತೆ ಎಲ್ಲಾ ಅರ್ಥಗಳಲ್ಲಿಯೂ ಮುಖ್ಯವಾಗಿದೆಯೋ ಅದರಂತೆ ದ್ಯುಶಬ್ದವೂ ಎಲ್ಲಾ ಅರ್ಥಗಳಲ್ಲಿಯೂ ಮುಖ್ಯವಾಗಿದೆ. ಅಥವಾ ಒಂದರ್ಥದಲ್ಲಿ ಮುಖ್ಯವೆಂದು ಉಳಿದ ಅರ್ಥಗಳಲ್ಲಿ ಅಮುಖ್ಯವೆಂದು ಹೇಳಿದರೂ ತಪ್ಪಿಲ್ಲ. 'ಅನ್ಯಾಯ್ಯಂ ಚಾನೇಕಾರ್ಥತ್ವಮ್' ಅನೇಕಾರ್ಥ ಹೇಳು-ವುದು ಅನ್ಯಾಯ ಎಂಬ ನ್ಯಾಯಕ್ಕೆ ಇದು ವಿಷಯವಲ್ಲ.

'ಸರ್ವತಃ ಪೃಷ್ಠೇಷು, ವಿಶ್ವತಃ ಪೃಷ್ಠೇಷು' ಎಂಬ ಶ್ರುತಿಗೆ ಹೀಗೆ ಅರ್ಥ. ಸರ್ವತಃ ಪೃಷ್ಠೇಷು ಎಂದರೆ ಹಿಂದೆ ಹೇಳಿದಂತೆ ಅನಂತಾಸನಾದಿಗಳು ಪೃಥಿವ್ಯಾದಿಲೋಕಗಳಿಗಿಂತ ಎತ್ತರದಲ್ಲಿವೆ ಎಂದರ್ಥ (ಪೃಷ್ಠ = ಮೇಲೆ). 'ವಿಶ್ವತಃ ಪೃಷ್ಠೇಷು' ಎಂದರೆ 'ಮೇರುವೈಜಯಂತಸತ್ಯಲೋಕ ಎಂಬ ಮೂರು ಬ್ರಹ್ಮದೇವರ ಸದನಗಳಿಗಿಂತ ಶ್ವೇತದ್ವೀಪಾದಿಗಳು ಎತ್ತರದಲ್ಲಿವೆ' ಎಂದರ್ಥ. ಇದನ್ನೆಲ್ಲಾ ಟೀಕೆಯಲ್ಲಿಯೇ ಹೇಳಿದ್ದಾರೆ.

'ಪೃಥಿವ್ಯಾಂ ಬ್ರಹ್ಮಣೋ ಮೇರುರ್ಜಯಂತಂ ತ್ವಂತರಿಕ್ಷಗಮ್ ।
ತೃತೀಯಂ ಸತ್ಯಲೋಕೇ ಚ ಸದನಂ ತ್ರಿವಿಧಂ ಸ್ಮೃತಮ್ ।
ತೇಭ್ಯೋಽನಂತಾಸನಾದ್ಯಾ ಯತ್ಪರತೋ ವಿಶ್ವತಃ ಪರಃ ॥

(ಪೃಥಿವಿಯಲ್ಲಿ ಮೇರುಲೋಕ ಬ್ರಹ್ಮದೇವರ ಸದನ; ಇದರ ಮೇಲೆ ಶ್ವೇತದ್ವೀಪ; ಅಂತರಿಕ್ಷದಲ್ಲಿ ವೈಜಯಂತ ಎಂಬುದು ಬ್ರಹ್ಮದೇವರ ಸದನ; ಇದರ ಮೇಲೆ ಅನಂತಾಸನ; ಸತ್ಯಲೋಕದಲ್ಲಿ ಮೂರನೆಯ ಬ್ರಹ್ಮದೇವರ ಸದನ; ಇದರ ಮೇಲೆ ವೈಕುಂಠ. ಆದ್ದರಿಂದ ಶ್ವೇತದ್ವೀಪಾದಿಗಳು ವಿಶ್ವತಃ ಪರಃ ಎನಿಸುತ್ತವೆ.) ಇತ್ಯಾದಿ ಪ್ರಮಾಣಗಳ ಆಧಾರದಿಂದ ವಿಶ್ವತಃ ಪೃಷ್ಠೇಷು ಎಂಬುದರ ಅರ್ಥವನ್ನು ತಿಳಿಯಬೇಕು.

ಈ ಹಿಂದೆ ಇಂದ್ರಸದನಕ್ಕಿಂತ ವೈಕುಂಠವು ಮೇಲ್ಭಾಗದಲ್ಲಿದೆಯೆಂದು ಹೇಳಲಾಯಿತು. ಆದರೆ ಸ್ವರ್ಗಲೋಕಕ್ಕಿಂತ ಮೇಲಿದೆಯೆಂದು ಹೇಳಿದರೆ ಸಾಕು. ಇಷ್ಟರಿಂದಲೇ ವೈಕುಂಠಕ್ಕೆ ದಿವಃಪರತ್ವವು ಸಿದ್ಧವಾಗುತ್ತದೆ. ಇಂದ್ರಸದನಕ್ಕಿಂತ ಮೇಲಿದೆಯೆಂದು ಹೇಳುವ ಅವಶ್ಯಕತೆ ಇಲ್ಲ. ಆದರೂ ಕೂಡ 'ಸರ್ವತಃ ಪೃಷ್ಠೇಷು' ಎಂಬ ವಾಕ್ಯದಿಂದಲೇ ಸ್ವರ್ಗಲೋಕಕ್ಕಿಂತ ಮೇಲಿರುವಿಕೆಯನ್ನು ಹೇಳಿದ ಮೇಲೆ ಪುನಃ 'ದಿವಃ ಪರಃ' ಎಂಬ ಹೇಳಿಕೆಯು ವ್ಯರ್ಥವಾಗಬೇಕಾದೀತು. ಆದ್ದರಿಂದ ಸರ್ವತಃ ಪೃಷ್ಠೇಷು ಎಂಬ ಮಾತಿನಿಂದ ಸ್ವರ್ಗಲೋಕದಿಂದ ಮೇಲ್ಭಾಗದಲ್ಲಿರುವಿಕೆಯನ್ನು; 'ದಿವಃ ಪರಃ' ಎಂಬುದರಿಂದ ಇಂದ್ರಸದನಕ್ಕಿಂತ ಮೇಲಿರುವಿಕೆಯನ್ನು ತಿಳಿಯಬೇಕು.

## ಗಾಯತ್ರ್ಯಧಿಕರಣ-(೧।೧।೧೧)

ಅಥವಾ ದ್ಯುಶಬ್ದಕ್ಕೆ ಹೀಗೆ ಅರ್ಥ. ಶ್ವೇತದ್ವೀಪ, ಅನಂತಾಸನ, ವೈಕುಂಠ ಈ ಮೂರೂ ಲೋಕಗಳು ಲಕ್ಷ್ಮ್ಯಾತ್ಮಕವಾಗಿ ಹೊಳೆಯುತ್ತಿವೆ. 'ಹೊಳೆಯುವಿಕೆ'(ದ್ಯೋತಮಾನ) ಎಂಬರ್ಥದಲ್ಲಿ ದ್ಯುಶಬ್ದವು ಯೌಗಿಕವಾಗಿವೆ. ಆದ್ದರಿಂದ ದಿವಿ ಎಂಬಲ್ಲಿರುವ ದ್ಯುಶಬ್ದದಿಂದ ಯೌಗಿಕಾರ್ಥವನ್ನು ವಿವಕ್ಷಿಸಬೇಕು. ದಿವಃ ಎಂಬಲ್ಲಿರುವ ದ್ಯುಶಬ್ದಕ್ಕೆ ಸ್ವರ್ಗಾದಿಗಳಲ್ಲಿ ರೂಢ್ಯರ್ಥವನ್ನು ತಿಳಿಯಬೇಕು. ಹೀಗೆ ಎರಡೂ ಕಡೆ ಇರುವ ದ್ಯುಶಬ್ದಗಳು ಯೋಗ ಹಾಗೂ ರೂಢಿಯೆಂಬ ಭಿನ್ನವೃತ್ತಿಗಳಿಂದ ಅರ್ಥವನ್ನು ಪ್ರತಿಪಾದಿಸುತ್ತಿರುವುದರಿಂದ ವಿರೋಧವಿಲ್ಲ. ಇದೂ ಸಹ ಸೂತ್ರದಲ್ಲಿರುವ ಅವಿರೋಧಶಬ್ದದ ಅರ್ಥ. ಈ ಬಗೆಯ ಪರಿಹಾರವು ಛಾಂದೋಗ್ಯಭಾಷ್ಯದಲ್ಲಿ ಸೂಚಿಸಲ್ಪಟ್ಟಿದೆ.

ಬಹುಲಕ್ಷೋಚ್ಛ್ರಿತೇ ನಿತ್ಯೇ ವಿಮಾನೇ ಸಂಸ್ಥಿತಂ ಯತಃ।
ಚಿತ್ಕೃತ್ಯಾತ್ಮನಿ ತತೋ ದಿವೀತಿ ಕಥಿತಂ ಶ್ರುತೌ ॥

(ಅನೇಕಲಕ್ಷಯೋಜನದ ಮೇಲಿರುವ ವಿಮಾನರೂಪದ ಶ್ವೇತದ್ವೀಪವು ಲಕ್ಷ್ಮೀಸ್ವರೂಪವಾಗಿದೆ. ಈ ಶ್ವೇತದ್ವೀಪದಲ್ಲಿ ಭಗವಂತನು ಸ್ಥಿತನಾದ್ದರಿಂದ ಶ್ರುತಿಯು ದಿವಿಸ್ಥಿತಃ ಎಂದು ಹೇಳಿದೆ.) ಎಂದು.

**प्रकाशः** – सप्तलोकविवक्षामाक्षिप्य समाधत्ते – **अत्रेति** ॥ **अनन्तेति** ॥ अनन्तासनश्वेत- द्वीपवैकुण्ठानां मेरुसूर्यमण्डलेन्द्रसदनेभ्यः परत्वेनेत्यर्थः । ननु त्रयाणां द्युत्वेन प्रसिद्धस्वर्गाद्युच्चत्वसिद्ध्यै सप्तलोकविवक्षाऽस्तु, त्रित्वविवक्षायां स्वरादेरन्तरिक्षादुपरितनस्य सर्वस्य द्युत्वेन स्वर्गात्परत्वासिद्धेरित्यतो वैकुण्ठस्य तत्सम्भवेऽपि नान्ययोस्तद्युज्यत इत्याह – **स्वर्गेति** ॥ यातु द्वितीयस्कन्धतात्पर्ये षष्ठे –

**अनन्तासनवैकुण्ठनारायणपुराणि तु ।**
**त्रीणि धामानि वै विष्णोस्त्रैलोक्याद्बहिरेव हि ॥**

इति बाह्यत्वोक्तिः, सा वैकुण्ठाशया, अलौकिकत्वाशया वा, स्वर्गलोकस्येन्द्र-सदनादर्वाग्भागविवक्षाशया वा । वस्तुतस्तु –

**भुवः स्वर्गश्च कोट्यैव योजनानां प्रविस्तृतौ ।**

इत्युक्तान्तरिक्षस्वर्गलोकयोः कोटियोजनविस्तीर्णत्वेन ततो बाह्यप्रदेश-स्थितत्वात् श्वेतद्वीपादेः, तथा भूम्या अनेककोटिविस्तीर्णत्वेन क्षीरसमुद्रादिस्थ-श्वेतद्वीपादेर्भूलोकस्थत्वेऽपि तमतिक्रम्यानेकलक्षयोजनोच्छ्रितत्वेन ततोऽपि बाह्यत्व -मिति त्रैलोक्याद्बाह्यत्वं ध्येयम्, नतु स्वर्गादप्युच्चत्वेनेति न विरोधः ।

यद्वा,"सर्वतः पृष्ठेषु" इत्यादाविवानन्तासनश्वेतद्वीपवैकुण्ठानां क्रमात् भूर्भुवः-सुवर्लोकेभ्यः उच्चत्वेन त्रिलोकाद्वाद्युत्वमित्यविरोधः ।

नन्वेवं द्युशब्दस्यानेकार्थत्वेऽप्येकस्मिन्नेव प्रकरणे नानार्थत्वं न दृष्टचरमित्यत आह – **एवञ्चेति** ॥ **तदुक्तमिति** ॥ आद्यपादे "हलोऽनन्तरास्संयोगः" इति सूत्रे । 'वाटपरिक्षेपे वर्तत यश्शब्दस्सोऽस्ति' इत्यादियोजना । ननु निरर्थकप्रयोगा-योगादेकार्थकत्वे वक्तव्ये अर्थान्तरकल्पनमन्याय्यमित्यत आह **अनेकार्थत्वं चेति** ॥ **नायमिति** ॥ यत्रानेकार्थकत्वेन मानं, तत्रैवायं न्यायः । अत्र तु पौराणिकप्रसिद्धेः सत्वान्नैवमित्यर्थः । अत एवोक्तं सुधायां वैशेषिकाधिकरणे – "यत्र ह्येकस्मिन्नर्थे व्यवस्थिते वृथैवार्थान्तराङ्गीकारः, तत्रैवानेकार्थत्वमन्याय्यम्" इति ।

तर्हि "सर्वतः पृष्ठेषु विश्वतः पृष्ठेषु" इत्यस्य पौनरुक्त्यमित्यतोऽर्थभेदं टीकोक्तं विशदयति – **सर्वत इति** ॥ **यथासम्भवमिति** ॥ पृथिवीलोकादुच्चत्वमनन्तासनस्य, अन्तरिक्षादुच्चत्वं श्वेतद्वीपस्य, स्वर्गादुच्चत्वं वैकुण्ठस्येत्यर्थः ॥ **चतुर्मुखस्थाना-दिति** ॥ क्रमेणानन्तासनादीनामिति भावः । अनेन पृष्ठशब्दस्योच्चत्वमर्थ इत्युक्तं भवति ॥ **इत्यादिवाक्यादिति** ॥ आदिपदेन –

**पृथिवीस्थेषु सर्वोच्चो लोकोऽनन्तासनात्मकः ।**
**अन्तरिक्षात्मकेभ्यश्च श्वेतद्वीपे स्थितो हरिः ।**
**द्व्यात्मकेभ्यश्च सर्वेभ्यो वैकुण्ठश्चोच्च उच्यते ॥**

इत्यस्य ग्रहणम् । टीकोक्तं वैकुण्ठस्येन्द्रसदनात्परत्वमाक्षिप्य समाधत्ते **अत्रेति** ॥ एकस्य शब्दस्याक्षादिशब्दवदनेकत्र रूढ्यङ्गीकारे हि नानार्थत्वं, एकत्र रूढस्यैव योगवृत्त्याऽर्थान्तरस्वीकारे नानेकार्थत्वमतः 'अन्याय्यं चानेकार्थत्वं' इत्यस्य नायं विषय इति भावेन पक्षान्तरमाह – **यद्वेति** ॥

यद्वा छान्दोग्यभाष्योक्तमन्यदपि सूत्रारूढं कर्तुमाह – **यद्वेति** ॥ **अविरोध इति** ॥ योगरूढिभ्यां द्युशब्दस्य भिन्नार्थत्वेन द्युस्थत्वदिवःपरत्वविरोधो नेत्यर्थः ।

ವಿವರಣೆ - ಸಪ್ತಲೋಕಗಳನ್ನು ವಿವಕ್ಷಿಸಿದಾಗ ಬರುವ ತೊಂದರೆಯನ್ನು ಆಕ್ಷೇಪಿಸಿ 'ಅತ್ರ' ಇತ್ಯಾದಿ ಗ್ರಂಥದಿಂದ ಸಮಾಧಾನ ಮಾಡುತ್ತಿದ್ದಾರೆ. ಉಪದೇಶಭೇದದ ವಿರೋಧವನ್ನು ಮೂರು ಲೋಕದ ವಿವಕ್ಷೆಯಿಂದ ಪರಿಹರಿಸಿದ್ದಾಯಿತು.

ಪ್ರಕೃತ ಸಪ್ತಲೋಕವಿವಕ್ಷೆಯಿಂದ ಪರಿಹರಿಸುತ್ತಿದ್ದಾರೆ. ತ್ರಿಲೋಕವೆಂದು ವಿಭಾಗಿಸಿದಾಗ ಅಂತರಿಕ್ಷಲೋಕ, ಅಂತರಿಕ್ಷದ ಕೆಳಗಿನ ಲೋಕ, ಅಂತರಿಕ್ಷದ ಮೇಲಿನ ಲೋಕ ಎಂದು ವಿಭಾಗ. ಹೀಗೆ ವಿಭಾಗಿಸಿದಾಗ ಅಂತರಿಕ್ಷದ ಮೇಲಿನ ಲೋಕಗಳೆಲ್ಲವೂ ದ್ಯುಎನಿಸುತ್ತವೆ. ಆದ್ದರಿಂದ ವೈಕುಂಠವೂ ಸಹ ದಿವಿಸ್ಥಿತವೇ ಆಗುತ್ತದೆ ಹೊರತು ದಿವಃಪರ ಆಗುವುದಿಲ್ಲ. ದಿವಃಪರತ್ವವನ್ನು ಸಮರ್ಥಿಸುವುದಕ್ಕಾಗಿಯೇ ಸಪ್ತಲೋಕಗಳ ವಿಭಾಗವನ್ನು ಅನುಸರಿಸಲಾಗಿದೆ. ಈ ಪಕ್ಷದಲ್ಲಿ ಮೇರು, ಸೂರ್ಯಮಂಡಲ, ಇಂದ್ರ ಸದನ ಮೂರು ದ್ಯುಲೋಕಗಳೆನಿಸಿವೆ. ಈ ಎಲ್ಲ ದ್ಯುಲೋಕಗಳಿಗಿಂತ ವೈಕುಂಠವು ಮೇಲಿದೆಯೆಂದು ಹೇಳಿದಂತಾಗುತ್ತದೆ.

ಪ್ರಸಿದ್ಧವಾದ ಸ್ವರ್ಗಕ್ಕಿಂತ ವೈಕುಂಠಲೋಕವು ಮೇಲಿದೆಯೆಂದು ತಿಳಿಸುವುದಕ್ಕಾಗಿ ಸಪ್ತಲೋಕದ ವಿವಕ್ಷೆಯು ಇರಲಿ. ಆದರೆ ವೈಕುಂಠಕ್ಕಷ್ಟೇ ಸ್ವರ್ಗಾದ್ಯುತ್ತಮತ್ವವನ್ನು ಹೇಳಿದಂತಾಗುತ್ತದೆ. ಹೊರತು ಅನಂತಾಸನ ಶ್ವೇತದ್ವೀಪಗಳಿಗೆ ಸ್ವರ್ಗಾದ್ಯುತ್ತಮತ್ವವನ್ನು ಹೇಳಿದಂತಾಗುವುದಿಲ್ಲವಲ್ಲವೆ? ಎಂಬ ಪ್ರಶ್ನೆಗೆ 'ಸ್ವರ್ಗಲೋಕಾದ್' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಅನಂತಾಸನ ಮತ್ತು ಶ್ವೇತದ್ವೀಪಗಳು ಸ್ವರ್ಗಕ್ಕಿಂತ ಮೇಲೆ ಇಲ್ಲದ ಕಾರಣ ಸ್ವರ್ಗಾದ್ಯುತ್ತಮತ್ವವನ್ನು ಹೇಳುವ ಅವಶ್ಯಕತೆ ಇಲ್ಲ.

ಅನಂತಾಸನವೈಕುಂಠನಾರಾಯಣಪುರಾಣೆ ತು ।
ತ್ರೀಣಿ ಧಾಮಾನಿ ವೈ ವಿಷ್ಣೋಸ್ತ್ರೈಲೋಕ್ಯಾದ್ಬಹಿರೇವ ಹಿ ॥

(ಅನಂತಾಸನ ಶ್ವೇತದ್ವೀಪ ವೈಕುಂಠಗಳೆಂಬ ಮೂರು ವಿಷ್ಣುವಿನ ಮನೆಗಳು ತ್ರಿಲೋಕಗಳಿಗಿಂತ ಹೊರಗಿವೆಯಷ್ಟೇ.) ಹೀಗೆ ದ್ವಿತೀಯಸ್ಕಂಧದ ಆರನೇ ಅಧ್ಯಾಯದ ತಾತ್ಪರ್ಯದಲ್ಲಿ ಅನಂತಾಸನಾದಿಗಳಿಗೆ ಸ್ವರ್ಗಾದಿ ಲೋಕಗಳಿಗಿಂತ ಬಾಹ್ಯತ್ವವನ್ನು ಹೇಳಲಾಗಿದೆ. ಆದರೆ ನೀವು ವೈಕುಂಠವನ್ನು ಸ್ವರ್ಗಕ್ಕಿಂತ ಮೇಲೆಂದು ಹೇಳುತ್ತಿದ್ದೀರಿ. ಹಾಗಾದಲ್ಲಿ ಭಾಗವತದ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ಮೂರು ಬಗೆಯಲ್ಲಿ ಉತ್ತರಿಸಬಹುದು.

೧. ಈ ಶ್ಲೋಕವು ವೈಕುಂಠಮಾತ್ರ ಮೂರು ಲೋಕಗಳಿಗಿಂತ ಮೇಲಿರುವುದರಿಂದ ಬಹಿಃ ಎಂದು ಹೇಳಿದೆ. ಹೊರತು ಶ್ವೇತದ್ವೀಪ ಅನಂತಾಸನಗಳ ಬಗ್ಗೆ ಇದು ಏನನ್ನೂ ಹೇಳುತ್ತಿಲ್ಲ.

೨. ಮೂರುಲೋಕಗಳಿಗಿಂತ ಅನಂತಾಸನಾದಿಗಳು ವಿಲಕ್ಷಣಗಳಾಗಿವೆ. ಮೂರು ಲೋಕಗಳು ಲೌಕಿಕವೆಂದು ಅನಂತಾಸನಾದಿಗಳು ಅಲೌಕಿಕವೆಂದು ಅಭಿಪ್ರಾಯ. ಈ ವಿವಕ್ಷೆಯಿಂದ ಬಹಿಃ ಎಂದಿದ್ದಾರೆ.

೩. ವೈಕುಂಠವು ಎಲ್ಲ ಲೋಕಕ್ಕಿಂತ ಮೇಲಿರುವುದರಿಂದ ಉಪರಿತನತ್ವೇನ ಬಹಿಷ್ಟ್ವವು ವೈಕುಂಠಕ್ಕೆ ಬರುತ್ತದೆ. ಶ್ವೇತದ್ವೀಪ ಹಾಗೂ ಅನಂತಾಸನಗಳು ಭೂಲೋಕ ಹಾಗೂ ಅಂತರಿಕ್ಷಲೋಕಗಳಿಗಿಂತ ಮೇಲಿದ್ದರೂ ಸ್ವರ್ಗಕ್ಕಿಂತ ಮೇಲಿರುವುದಿಲ್ಲ. ಇಂದ್ರಸದನಕ್ಕಿಂತ ಅರ್ವಾಕ್ ಭಾಗದಲ್ಲಿದೆ. ಆದ್ದರಿಂದಲೂ ತ್ರೈಲೋಕ್ಯಬಹಿಷ್ಟ್ವವನ್ನು ಶ್ವೇತದ್ವೀಪ ಅನಂತಾಸನಗಳಿಗೆ ಹೇಳಬಹುದು.

ವಸ್ತುತಃ 'ಭುವಃ ಸ್ವರ್ಗಶ್ಚ ಕೋಟ್ಯೈವ ಯೋಜನಾನಾಂ ಪ್ರವಿಸ್ತೃತೌ' (ಅಂತರಿಕ್ಷ ಹಾಗೂ ಸ್ವರ್ಗಲೋಕಗಳು ಒಂದು ಕೋಟಿಯೋಜನದಷ್ಟು ವಿಸ್ತೀರ್ಣವಾಗಿವೆ.). ಇದಕ್ಕಿಂತ ಹೊರಗಡೆ ಇರುವ

ಶ್ವೇತದ್ವೀಪವು ತ್ರಿಲೋಕಬಾಹ್ಯವೆನಿಸುತ್ತದೆ. ಅಥವಾ ಭೂಮಿಯು ಅನೇಕಕೋಟಿ ವಿಸ್ತೀರ್ಣವಾಗಿದೆ (ಸಪ್ತದ್ವೀಪ, ಸಪ್ತಸಮುದ್ರಗಳನ್ನು ಸೇರಿ ಭೂಮಿಯು ಏಳು ಕೋಟಿಯೋಜನದಷ್ಟು ವಿಸ್ತಾರವಾಗಿದೆ). ಈ ಭೂಮಿಯಲ್ಲಿಯೇ ಕ್ಷೀರಸಮುದ್ರವಿದೆ. ಅದರಲ್ಲಿ ಶ್ವೇತದ್ವೀಪವಿರುವುದರಿಂದ ಶ್ವೇತದ್ವೀಪವು ಭೂಲೋಕ ಸ್ಥಿತವೇ ಆಗಿದೆ. ಭೂಲೋಕದಲ್ಲೇ ಇದ್ದರೂ ಸಹ ಅನೇಕಲಕ್ಷ ಯೋಜನಗಳಷ್ಟು ದೂರದಲ್ಲಿರುವುದರಿಂದ ತ್ರಿಲೋಕಬಾಹ್ಯವೆನಿಸುತ್ತದೆ. ಹೊರತು ಸ್ವರ್ಗಕ್ಕಿಂತ ಶ್ವೇತದ್ವೀಪ ಅನಂತಾಸನಗಳು ಮೇಲಿವೆ ಎಂದು ಇದರ ಅರ್ಥವಲ್ಲ.

ಅಥವಾ 'ಸರ್ವತಃ ಪೃಷ್ಠೇಷು' ಎಂಬ ಶ್ರುತಿಗೆ ಮುಂದೆ ವ್ಯಾಖ್ಯಾನಿಸುವಂತೆ ಅನಂತಾಸನ, ಶ್ವೇತ-ದ್ವೀಪ, ವೈಕುಂಠಗಳು ಕ್ರಮವಾಗಿ ಭೂಃ ಭುವಃ ಸ್ವಃ ಎಂಬ ಲೋಕಗಳಿಗಿಂತ ಮೇಲಿರುವುದರಿಂದ ತ್ರಿಲೋಕಬಾಹ್ಯತ್ವವನ್ನು ತಿಳಿಯಬಹುದು. ಆದ್ದರಿಂದ ಸ್ವರ್ಗಕ್ಕಿಂತ ಉಚ್ಚತ್ವವನ್ನು ಹೇಳದ ಕಾರಣ ವಿರೋಧಕ್ಕೆ ಅವಕಾಶವಿಲ್ಲ.

ಸಪ್ತಲೋಕವನ್ನು ವಿವಕ್ಷಿಸಿದಾಗ ದ್ಯುಶಬ್ದಕ್ಕೆ ಅನೇಕಾರ್ಥವನ್ನು ಹೇಳಿದಿರಿ. ಆದರೆ ಒಂದೇ ಪ್ರಕರಣದಲ್ಲಿರುವ ಶಬ್ದಕ್ಕೆ ಅನೇಕಾರ್ಥವನ್ನು ಹೇಳುವುದು ಎಲ್ಲಿಯೂ ಕಂಡಿಲ್ಲವೆಂಬ ಪ್ರಶ್ನೆಗೆ 'ಏವಂ ಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

'ಹಲೋನಂತರಾಃ ಸಂಯೋಗಃ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಾ ಮಹಾಭಾಷ್ಯದಲ್ಲಿ ಒಂದೇ ಪ್ರಕರಣದಲ್ಲಿರುವ ಗ್ರಾಮಶಬ್ದಕ್ಕೆ ಅನೇಕಾರ್ಥವನ್ನು ಸಮರ್ಥಿಸಿದ್ದಾರೆ. ಮೂಲದಲ್ಲಿ 'ಅಸ್ತಿ ವಾಟಪರಿಕ್ಷೇಪೇ ವರ್ತತೇ' ಎಂಬ ವಾಕ್ಯವಿದೆ. 'ಅಸ್ತಿ, ವರ್ತತೇ' ಎಂಬ ಎರಡು ಕ್ರಿಯಾಪದಗಳಿಗೆ ಹೀಗರ್ಥ. ಯಾವಶಬ್ದವು ವಾಟಪರಿಕ್ಷೇಪವಾಚಕವೋ ಆ ಶಬ್ದವು ಲೋಕದ ವ್ಯವಹಾರದಲ್ಲಿದೆ ಎಂದು. ('ವಾಟಪರಿಕ್ಷೇಪೇ ಯಃ ಶಬ್ದಃ ವರ್ತತೇ ಸಃ ಅಸ್ತಿ' ಎಂದು ಅನ್ವಯ)

'ಒಂದು ಶಬ್ದಕ್ಕೆ ಕೇವಲ ಒಂದು ಅರ್ಥವನ್ನು ಹೇಳಬೇಕು. ಇಲ್ಲದಿದ್ದರೆ ನಿರರ್ಥಕತ್ವದೋಷಕ್ಕೆ ಅವಕಾಶವಿದೆ ಹೊರತು ಅನೇಕಾರ್ಥವನ್ನು ಒಪ್ಪುವ ಅವಶ್ಯಕತೆ ಇಲ್ಲ. ಒಂದೇ ಶಬ್ದಕ್ಕೆ ಅನೇಕಾರ್ಥ ಹೇಳುವುದು ನ್ಯಾಯವಿರುದ್ಧವಾಗಿದೆ' ಎಂಬ ಪ್ರಶ್ನೆಗೆ 'ಅನೇಕಾರ್ಥತ್ವಂ ಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಯಾವ ಸಂದರ್ಭಕ್ಕೆ ಅನೇಕಾರ್ಥವನ್ನು ಒಪ್ಪಲು ಪ್ರಮಾಣವಿರುವುದಿಲ್ಲವೋ ಅಲ್ಲಷ್ಟೇ ಈ ನಿಯಮವು ಸಂಬಂಧಪಡುತ್ತದೆ. ಪ್ರಕೃತ ದ್ಯುಶಬ್ದಕ್ಕೆ ಅನೇಕಾರ್ಥವನ್ನು ಒಪ್ಪಬೇಕೆನ್ನಲು ಪುರಾಣದ ಆಧಾರವಿದೆ. ಆದ್ದರಿಂದಲೇ ನ್ಯಾಯಸುಧೆಯ ವೈಶೇಷಿಕಾಧಿಕರಣದಲ್ಲಿ 'ಯತ್ರ ಹಿ ಏಕಸ್ಮಿನ್ನರ್ಥೇ ವ್ಯವಸ್ಥಿತೇ ವೃಥೈವಾರ್ಥಾಂತರಾಂಗೀಕಾರಸ್ತತ್ರೈವಾನೇಕಾರ್ಥತ್ವಮನ್ಯಾಯ್ಯಃ' (ಒಂದೇ ಅರ್ಥವು ವ್ಯವಸ್ಥಿತವಾಗಿ-ರಬೇಕಾದರೆ ವ್ಯರ್ಥವಾಗಿ ಅನೇಕಾರ್ಥವನ್ನು ಅಂಗೀಕರಿಸುವುದು ಅನ್ಯಾಯ) ಎಂಬ ಮಾತಿದೆ. 'ಸರ್ವತಃ ಪೃಷ್ಠೇಷು ವಿಶ್ವತಃ ಪೃಷ್ಠೇಷು' ಎಂಬ ಶ್ರುತ್ಯರ್ಥವನ್ನು 'ಸರ್ವತಃ' ಎಂಬ ವಾಕ್ಯದಿಂದ ವಿವರಿಸಿದ್ದಾರೆ. ವಸ್ತುತಃ 'ಸರ್ವತಃ ಪೃಷ್ಠೇಷು' ಎಂಬರ್ಥವನ್ನೇ 'ವಿಶ್ವತಃ ಪೃಷ್ಠೇಷು' ಎಂಬುದು ಹೇಳುತ್ತಿರುವುದರಿಂದ ಪುನರುಕ್ತಿಯು ಕಾಣಿಸುತ್ತದೆ. ಆದರೆ ಈ ಎರಡೂ ಶಬ್ದಗಳಿಗಿರುವ ಅರ್ಥವೈಲಕ್ಷಣ್ಯವನ್ನು ಟೀಕೆಯಲ್ಲಿ ತೋರಿಸಿದ್ದಾರೆ. ಅದನ್ನೇ ಇಲ್ಲಿ ಗ್ರಂಥಕಾರರು ವಿವರಿಸಿದ್ದಾರೆಂದು ತಿಳಿಯಬೇಕು. 'ಯಥಾಸಂಭವಂ'

ಪ್ರಕೃತ ಸಪ್ತಲೋಕವಿವಕ್ಷೆಯಿಂದ ಪರಿಹರಿಸುತ್ತಿದ್ದಾರೆ. ತ್ರಿಲೋಕವೆಂದು ವಿಭಾಗಿಸಿದಾಗ ಅಂತರಿಕ್ಷಲೋಕ, ಅಂತರಿಕ್ಷದ ಕೆಳಗಿನ ಲೋಕ, ಅಂತರಿಕ್ಷದ ಮೇಲಿನ ಲೋಕ ಎಂದು ವಿಭಾಗ. ಹೀಗೆ ವಿಭಾಗಿಸಿದಾಗ ಅಂತರಿಕ್ಷದ ಮೇಲಿನ ಲೋಕಗಳೆಲ್ಲವೂ ದ್ಯುಎನಿಸುತ್ತವೆ. ಆದ್ದರಿಂದ ವೈಕುಂಠವೂ ಸಹ ದಿವಿಸ್ಥಿತವೇ ಆಗುತ್ತದೆ ಹೊರತು ದಿವಃಪರ ಆಗುವುದಿಲ್ಲ. ದಿವಃಪರತ್ವವನ್ನು ಸಮರ್ಥಿಸುವುದಕ್ಕಾಗಿಯೇ ಸಪ್ತಲೋಕಗಳ ವಿಭಾಗವನ್ನು ಅನುಸರಿಸಲಾಗಿದೆ. ಈ ಪಕ್ಷದಲ್ಲಿ ಮೇರು, ಸೂರ್ಯಮಂಡಲ, ಇಂದ್ರ ಸದನ ಮೂರು ದ್ಯುಲೋಕಗಳೆನಿಸಿವೆ. ಈ ಎಲ್ಲ ದ್ಯುಲೋಕಗಳಿಗಿಂತ ವೈಕುಂಠವು ಮೇಲಿದೆಯೆಂದು ಹೇಳಿದಂತಾಗುತ್ತದೆ.

ಪ್ರಸಿದ್ಧವಾದ ಸ್ವರ್ಗಕ್ಕಿಂತ ವೈಕುಂಠಲೋಕವು ಮೇಲಿದೆಯೆಂದು ತಿಳಿಸುವುದಕ್ಕಾಗಿ ಸಪ್ತಲೋಕದ ವಿವಕ್ಷೆಯು ಇರಲಿ. ಆದರೆ ವೈಕುಂಠಕ್ಕಷ್ಟೇ ಸ್ವರ್ಗಾದ್ಯುತ್ತಮತ್ವವನ್ನು ಹೇಳಿದಂತಾಗುತ್ತದೆ. ಹೊರತು ಅನಂತಾಸನ ಶ್ವೇತದ್ವೀಪಗಳಿಗೆ ಸ್ವರ್ಗಾದ್ಯುತ್ತಮತ್ವವನ್ನು ಹೇಳಿದಂತಾಗುವುದಿಲ್ಲವಲ್ಲವೆ? ಎಂಬ ಪ್ರಶ್ನೆಗೆ 'ಸ್ವರ್ಗಲೋಕಾದ್' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಅನಂತಾಸನ ಮತ್ತು ಶ್ವೇತದ್ವೀಪಗಳು ಸ್ವರ್ಗಕ್ಕಿಂತ ಮೇಲೆ ಇಲ್ಲದ ಕಾರಣ ಸ್ವರ್ಗಾದ್ಯುತ್ತಮತ್ವವನ್ನು ಹೇಳುವ ಅವಶ್ಯಕತೆ ಇಲ್ಲ.

**ಅನಂತಾಸನವೈಕುಂಠನಾರಾಯಣಪುರಾಣಿ ತು ।**
**ತ್ರೀಣಿ ಧಾಮಾನಿ ವೈ ವಿಷ್ಣೋಸ್ತ್ರೈಲೋಕ್ಯಾದ್ಬಹಿರೇವ ಹಿ ॥**

(ಅನಂತಾಸನ ಶ್ವೇತದ್ವೀಪ ವೈಕುಂಠಗಳೆಂಬ ಮೂರು ವಿಷ್ಣುವಿನ ಮನೆಗಳು ತ್ರಿಲೋಕಗಳಿಗಿಂತ ಹೊರಗಿವೆಯಷ್ಟೇ.) ಹೀಗೆ ದ್ವಿತೀಯಸ್ಕಂಧದ ಆರನೇ ಅಧ್ಯಾಯದ ತಾತ್ಪರ್ಯದಲ್ಲಿ ಅನಂತಾಸನಾದಿಗಳಿಗೆ ಸ್ವರ್ಗಾದಿ ಲೋಕಗಳಿಗಿಂತ ಬಾಹ್ಯತ್ವವನ್ನು ಹೇಳಲಾಗಿದೆ. ಆದರೆ ನೀವು ವೈಕುಂಠವನ್ನು ಸ್ವರ್ಗಕ್ಕಿಂತ ಮೇಲೆಂದು ಹೇಳುತ್ತಿದ್ದೀರಿ. ಹಾಗಾದಲ್ಲಿ ಭಾಗವತದ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ಮೂರು ಬಗೆಯಲ್ಲಿ ಉತ್ತರಿಸಬಹುದು.

೧. ಈ ಶ್ಲೋಕವು ವೈಕುಂಠಮಾತ್ರ ಮೂರು ಲೋಕಗಳಿಗಿಂತ ಮೇಲಿರುವುದರಿಂದ ಬಹಿಃ ಎಂದು ಹೇಳಿದೆ. ಹೊರತು ಶ್ವೇತದ್ವೀಪ ಅನಂತಾಸನಗಳ ಬಗ್ಗೆ ಇದು ಏನನ್ನೂ ಹೇಳುತ್ತಿಲ್ಲ.

೨. ಮೂರುಲೋಕಗಳಿಗಿಂತ ಅನಂತಾಸನಾದಿಗಳು ವಿಲಕ್ಷಣಗಳಾಗಿವೆ. ಮೂರು ಲೋಕಗಳು ಲೌಕಿಕವೆಂದು ಅನಂತಾಸನಾದಿಗಳು ಅಲೌಕಿಕವೆಂದು ಅಭಿಪ್ರಾಯ. ಈ ವಿವಕ್ಷೆಯಿಂದ ಬಹಿಃ ಎಂದಿದ್ದಾರೆ.

೩. ವೈಕುಂಠವು ಎಲ್ಲ ಲೋಕಕ್ಕಿಂತ ಮೇಲಿರುವುದರಿಂದ ಉಪರಿತನತ್ವೇನ ಬಹಿಷ್ಟ್ವವು ವೈಕುಂಠಕ್ಕೆ ಬರುತ್ತದೆ. ಶ್ವೇತದ್ವೀಪ ಹಾಗೂ ಅನಂತಾಸನಗಳು ಭೂಲೋಕ ಹಾಗೂ ಅಂತರಿಕ್ಷಲೋಕಗಳಿಗಿಂತ ಮೇಲಿದ್ದರೂ ಸ್ವರ್ಗಕ್ಕಿಂತ ಮೇಲಿರುವುದಿಲ್ಲ. ಇಂದ್ರಸದನಕ್ಕಿಂತ ಅರ್ವಾಕ್ ಭಾಗದಲ್ಲಿದೆ. ಆದ್ದರಿಂದಲೂ ತ್ರೈಲೋಕ್ಯಬಹಿಷ್ಟ್ವವನ್ನು ಶ್ವೇತದ್ವೀಪ ಅನಂತಾಸನಗಳಿಗೆ ಹೇಳಬಹುದು.

ವಸ್ತುತಃ 'ಭುವಃ ಸ್ವರ್ಗಶ್ಚ ಕೋಟ್ಯೈವ ಯೋಜನಾನಾಂ ಪ್ರವಿಸ್ತೃತೌ' (ಅಂತರಿಕ್ಷ ಹಾಗೂ ಸ್ವರ್ಗಲೋಕಗಳು ಒಂದು ಕೋಟಿಯೋಜನದಷ್ಟು ವಿಸ್ತೀರ್ಣವಾಗಿವೆ.). ಇದಕ್ಕಿಂತ ಹೊರಗಡೆ ಇರುವ

ಶ್ವೇತದ್ವೀಪವು ತ್ರಿಲೋಕಬಾಹ್ಯವೆನಿಸುತ್ತದೆ. ಅಥವಾ ಭೂಮಿಯು ಅನೇಕಕೋಟಿ ವಿಸ್ತೀರ್ಣವಾಗಿದೆ (ಸಪ್ತದ್ವೀಪ, ಸಪ್ತಸಮುದ್ರಗಳನ್ನು ಸೇರಿ ಭೂಮಿಯು ಏಳು ಕೋಟಿಯೋಜನದಷ್ಟು ವಿಸ್ತಾರವಾಗಿದೆ). ಈ ಭೂಮಿಯಲ್ಲಿಯೇ ಕ್ಷೀರಸಮುದ್ರವಿದೆ. ಅದರಲ್ಲಿ ಶ್ವೇತದ್ವೀಪವಿರುವುದರಿಂದ ಶ್ವೇತದ್ವೀಪವು ಭೂಲೋಕ ಸ್ಥಿತವೇ ಆಗಿದೆ. ಭೂಲೋಕದಲ್ಲೇ ಇದ್ದರೂ ಸಹ ಅನೇಕಲಕ್ಷ ಯೋಜನಗಳಷ್ಟು ದೂರದಲ್ಲಿರುವುದರಿಂದ ತ್ರಿಲೋಕಬಾಹ್ಯವೆನಿಸುತ್ತದೆ. ಹೊರತು ಸ್ವರ್ಗಕ್ಕಿಂತ ಶ್ವೇತದ್ವೀಪ ಅನಂತಾಸನಗಳು ಮೇಲಿವೆ ಎಂದು ಇದರ ಅರ್ಥವಲ್ಲ.

ಅಥವಾ 'ಸರ್ವತಃ ಪೃಷ್ಠೇಷು' ಎಂಬ ಶ್ರುತಿಗೆ ಮುಂದೆ ವ್ಯಾಖ್ಯಾನಿಸುವಂತೆ ಅನಂತಾಸನ, ಶ್ವೇತ-ದ್ವೀಪ, ವೈಕುಂಠಗಳು ಕ್ರಮವಾಗಿ ಭೂಃ ಭುವಃ ಸ್ವಃ ಎಂಬ ಲೋಕಗಳಿಗಿಂತ ಮೇಲಿರುವುದರಿಂದ ತ್ರಿಲೋಕಬಾಹ್ಯತ್ವವನ್ನು ತಿಳಿಯಬಹುದು. ಆದ್ದರಿಂದ ಸ್ವರ್ಗಕ್ಕಿಂತ ಉಚ್ಚತ್ವವನ್ನು ಹೇಳದ ಕಾರಣ ವಿರೋಧಕ್ಕೆ ಅವಕಾಶವಿಲ್ಲ.

ಸಪ್ತಲೋಕವನ್ನು ವಿವಕ್ಷಿಸಿದಾಗ ದ್ಯುಶಬ್ದಕ್ಕೆ ಅನೇಕಾರ್ಥವನ್ನು ಹೇಳಿದಿರಿ. ಆದರೆ ಒಂದೇ ಪ್ರಕರಣದಲ್ಲಿರುವ ಶಬ್ದಕ್ಕೆ ಅನೇಕಾರ್ಥವನ್ನು ಹೇಳುವುದು ಎಲ್ಲಿಯೂ ಕಂಡಿಲ್ಲವೆಂಬ ಪ್ರಶ್ನೆಗೆ 'ಏವಂ ಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

'ಹಲೋನಂತರಾಃ ಸಂಯೋಗಃ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಾ ಮಹಾಭಾಷ್ಯದಲ್ಲಿ ಒಂದೇ ಪ್ರಕರಣದಲ್ಲಿರುವ ಗ್ರಾಮಶಬ್ದಕ್ಕೆ ಅನೇಕಾರ್ಥವನ್ನು ಸಮರ್ಥಿಸಿದ್ದಾರೆ. ಮೂಲದಲ್ಲಿ 'ಅಸ್ತಿ ವಾಟಪರಿಕ್ಷೇಪೇ ವರ್ತತೇ' ಎಂಬ ವಾಕ್ಯವಿದೆ. 'ಅಸ್ತಿ, ವರ್ತತೇ' ಎಂಬ ಎರಡು ಕ್ರಿಯಾಪದಗಳಿಗೆ ಹೀಗರ್ಥ. ಯಾವಶಬ್ದವು ವಾಟಪರಿಕ್ಷೇಪವಾಚಕವೋ ಆ ಶಬ್ದವು ಲೋಕದ ವ್ಯವಹಾರದಲ್ಲಿದೆ ಎಂದು. ('ವಾಟಪರಿಕ್ಷೇಪೇ ಯಃ ಶಬ್ದಃ ವರ್ತತೇ ಸಃ ಅಸ್ತಿ' ಎಂದು ಅನ್ವಯ)

'ಒಂದು ಶಬ್ದಕ್ಕೆ ಕೇವಲ ಒಂದು ಅರ್ಥವನ್ನು ಹೇಳಬೇಕು. ಇಲ್ಲದಿದ್ದರೆ ನಿರರ್ಥಕತ್ವದೋಷಕ್ಕೆ ಅವಕಾಶವಿದೆ ಹೊರತು ಅನೇಕಾರ್ಥವನ್ನು ಒಪ್ಪುವ ಅವಶ್ಯಕತೆ ಇಲ್ಲ. ಒಂದೇ ಶಬ್ದಕ್ಕೆ ಅನೇಕಾರ್ಥ ಹೇಳುವುದು ನ್ಯಾಯವಿರುದ್ಧವಾಗಿದೆ' ಎಂಬ ಪ್ರಶ್ನೆಗೆ 'ಅನೇಕಾರ್ಥತ್ವಂ ಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಯಾವ ಸಂದರ್ಭಕ್ಕೆ ಅನೇಕಾರ್ಥವನ್ನು ಒಪ್ಪಲು ಪ್ರಮಾಣವಿರುವುದಿಲ್ಲವೋ ಅಲ್ಲಷ್ಟೇ ಈ ನಿಯಮವು ಸಂಬಂಧಪಡುತ್ತದೆ. ಪ್ರಕೃತ ದ್ಯುಶಬ್ದಕ್ಕೆ ಅನೇಕಾರ್ಥವನ್ನು ಒಪ್ಪಬೇಕೆನ್ನಲು ಪುರಾಣದ ಆಧಾರವಿದೆ. ಆದ್ದರಿಂದಲೇ ನ್ಯಾಯಸುಧೆಯ ವೈಶೇಷಿಕಾಧಿಕರಣದಲ್ಲಿ 'ಯತ್ರ ಹಿ ಏಕಸ್ಮಿನ್ನರ್ಥೇ ವ್ಯವಸ್ಥಿತೇ ವೃಥೈವಾರ್ಥಾಂತರಾಂಗೀಕಾರಸ್ತತ್ರೈವಾನೇಕಾರ್ಥತ್ವಮನ್ಯಾಯ್ಯಃ' (ಒಂದೇ ಅರ್ಥವು ವ್ಯವಸ್ಥಿತವಾಗಿ-ರಬೇಕಾದರೆ ವ್ಯರ್ಥವಾಗಿ ಅನೇಕಾರ್ಥವನ್ನು ಅಂಗೀಕರಿಸುವುದು ಅನ್ಯಾಯ) ಎಂಬ ಮಾತಿದೆ. 'ಸರ್ವತಃ ಪೃಷ್ಠೇಷು ವಿಶ್ವತಃ ಪೃಷ್ಠೇಷು' ಎಂಬ ಶ್ರುತ್ಯರ್ಥವನ್ನು 'ಸರ್ವತಃ' ಎಂಬ ವಾಕ್ಯದಿಂದ ವಿವರಿಸಿದ್ದಾರೆ. ವಸ್ತುತಃ 'ಸರ್ವತಃ ಪೃಷ್ಠೇಷು' ಎಂಬರ್ಥವನ್ನೇ 'ವಿಶ್ವತಃ ಪೃಷ್ಠೇಷು' ಎಂಬುದು ಹೇಳುತ್ತಿರುವುದರಿಂದ ಪುನರುಕ್ತಿಯು ಕಾಣಿಸುತ್ತದೆ. ಆದರೆ ಈ ಎರಡೂ ಶಬ್ದಗಳಿಗಿರುವ ಅರ್ಥವೈಲಕ್ಷಣ್ಯವನ್ನು ಟೀಕೆಯಲ್ಲಿ ತೋರಿಸಿದ್ದಾರೆ. ಅದನ್ನೇ ಇಲ್ಲಿ ಗ್ರಂಥಕಾರರು ವಿವರಿಸಿದ್ದಾರೆಂದು ತಿಳಿಯಬೇಕು. 'ಯಥಾಸಂಭವಂ'

ಎಂಬುವುದರ ಅರ್ಥ - 'ಪೃಥಿವಿಲೋಕಕ್ಕಿಂತ ಅನಂತಾಸನವು ಮೇಲಿದೆ; ಅಂತರಿಕ್ಷಕ್ಕಿಂತ ಶ್ವೇತದ್ವೀಪವು ಮೇಲಿದೆ; ಸ್ವರ್ಗಕ್ಕಿಂತ ವೈಕುಂಠವು ಮೇಲಿದೆ' ಎಂದು. ಬ್ರಹ್ಮದೇವರ ಮೂರು ಸದನಗಳಿಗಿಂತ ಕ್ರಮವಾಗಿ ಅನಂತಾಸನಾದಿಗಳು ಮೇಲಿವೆ ಎಂದು 'ಚತುರ್ಮುಖಸ್ಥಾನಾತ್' ಎಂಬ ಪದವು ಹೇಳುತ್ತಿದೆ. ಶ್ರುತಿಯಲ್ಲಿರುವ ಪೃಷ್ಠಶಬ್ದಕ್ಕೆ ಉಪರಿತನ ಎಂದರ್ಥ. 'ಇತ್ಯಾದಿವಾಕ್ಯಾತ್' ಎಂಬಲ್ಲಿರುವ ಆದಿಪದದಿಂದ ಕೆಳಗಿನ ಪ್ರಮಾಣವನ್ನು ತಿಳಿಯಬೇಕು.

> ಪೃಥಿವೀಸ್ಥೇಷು ಸರ್ವೇಭ್ಯೋ ಲೋಕೋಽನಂತಾಸನಾತ್ಮಕಃ।
> ಅಂತರಿಕ್ಷಾತ್ಮಕೇಭ್ಯಶ್ಚ ಶ್ವೇತದ್ವೀಪೇ ಸ್ಥಿತೋ ಹರಿಃ।
> ದ್ಯ್ವಾತ್ಮಕೇಭ್ಯ ಸರ್ವೇಭ್ಯೋ ವೈಕುಂಠಶ್ಚೋಚ್ಚ ಉಚ್ಯತೇ ॥

ಪೃಥಿವಿಯಲ್ಲಿರುವ ಎಲ್ಲ ಲೋಕಗಳಿಗಿಂತ ಅನಂತಾಸನವು ಎತ್ತರದಲ್ಲಿದೆ. ಅಂತರಿಕ್ಷದಲ್ಲಿರುವ ಎಲ್ಲ ಲೋಕಗಳಿಗಿಂತ ಶ್ವೇತದ್ವೀಪದಲ್ಲಿರುವ ಹರಿಯು ಎತ್ತರದಲ್ಲಿದ್ದಾನೆ. (ಅಂತರಿಕ್ಷವೆಂಬುದು ಒಂದು ಪ್ರತ್ಯೇಕಲೋಕ. ಇದನ್ನು ಭುವರ್ಲೋಕ ಎಂದು ಕರೆಯುತ್ತಾರೆ.) ಈ ಶ್ವೇತದ್ವೀಪ ಹಾಗೂ ಅನಂತಾಸನ-ಗಳಿಗಿಂತಲೂ ವೈಕುಂಠವು ಇನ್ನೂ ಎತ್ತರದಲ್ಲಿದೆ. ಟೀಕೆಯಲ್ಲಿ ಇಂದ್ರಸದನಕ್ಕಿಂತ ವೈಕುಂಠಕ್ಕೆ ಉಚ್ಚತ್ವವನ್ನು ಹೇಳಿದ್ದಾರೆ. ಅದನ್ನು ಆಕ್ಷೇಪಿಸಿ ಸಮಾಧಾನವನ್ನು 'ಅತ್ರ' ಇತ್ಯಾದಿ ವಾಕ್ಯದಿಂದ ಮಾಡುತ್ತಿದ್ದಾರೆ.

ಒಂದು ಶಬ್ದಕ್ಕೆ ಅನೇಕ ಅರ್ಥಗಳಲ್ಲಿ ಅಕ್ಷಾದಿಶಬ್ದದಂತೆ ರೂಢಿಯನ್ನು ಅಂಗೀಕರಿಸಿದರೆ ನಾನಾರ್ಥತ್ವವು ಬರುತ್ತದೆ. ಆದರೆ ಒಂದು ಅರ್ಥದಲ್ಲಿ ರೂಢಿಯನ್ನು ಮತ್ತೊಂದು ಅರ್ಥದಲ್ಲಿ ಯೋಗವನ್ನು ಅಂಗೀಕರಿಸಿದರೆ ನಾನಾರ್ಥತ್ವವು ಬರುವುದಿಲ್ಲ. ಆವಾಗ 'ಅನೇಕಾರ್ಥತ್ವಂ ಅನ್ಯಾಯ್ಯಮ್' ಎಂಬ ನಿಯಮದ ವಿರೋಧಕ್ಕೂ ಅವಕಾಶವಿಲ್ಲ ಎಂಬ ಅಭಿಪ್ರಾಯದಿಂದ ಮತ್ತೊಂದು ಪಕ್ಷವನ್ನು 'ಯದ್ವಾ' ಎಂಬ ಗ್ರಂಥದಿಂದ ಹೇಳಿದ್ದಾರೆ. ಅಥವಾ ಛಾಂದೋಗ್ಯಭಾಷ್ಯದಲ್ಲಿ ಹೇಳಿದ ಮತ್ತೊಂದು ಅರ್ಥವನ್ನು 'ದ್ಯು'ಶಬ್ದಕ್ಕೆ ಹೇಳುವವರಾಗಿ ಸೂತ್ರಾರೂಢವನ್ನು ಮಾಡುತ್ತಿದ್ದಾರೆ 'ಯದ್ವಾ' ಇತ್ಯಾದಿ-ಗ್ರಂಥದಿಂದ. ಯೋಗ ಹಾಗೂ ರೂಢಿಯೆಂಬ ಬೇರೆ ಬೇರೆ ವೃತ್ತಿಗಳಿಂದ ದ್ಯುಶಬ್ದಕ್ಕೆ ಅನೇಕಾರ್ಥತ್ವವನ್ನು ಹೇಳಿದ್ದರಿಂದ ದ್ಯುಸ್ಥತ್ವ ಮತ್ತು ದಿವಃಪರತ್ವಗಳಿಗೆ ವಿರೋಧಗಳು ಇಲ್ಲವೆಂದು 'ಅವಿರೋಧ' ಎಂಬ ಶಬ್ದದಿಂದ ಹೇಳಿದ್ದಾರೆ.

**गुरुराजीयम्** – ननु सप्तलोकविवक्षाकरणमयुक्तम् । दिवःपरत्वस्य लोकत्रयविवक्षयापि सम्भवादित्यत आह – **अत्र यद्यपीति** ।। नन्वनन्तासन-श्वेतद्वीपयोः स्वर्गलोकात्परत्वसिद्ध्यर्थं सप्तलोकविवक्षेत्याह – **स्वर्गलोकादिति** ।। **यावानिति** ।। स्वर्गलोको यावानुच्चः उच्चतया तावान् श्वेतद्वीपो वर्तते । अतः स दिविष्ठ इत्यर्थः ।। **सर्वद्युपरत्वसिद्धय इति** ।। इन्द्रसदनमेरुसूर्यमण्डलरूप-सर्वद्युपरत्वसिद्धय इत्यर्थः । अन्यथा लोकत्रयविविक्षायां मेर्वादेर्द्युत्वस्या-विवक्षितत्वात्तत्परत्वं न सिद्ध्येदित्यर्थः । वैकुण्ठस्य सर्वद्युपरत्वे प्रमाणमाह –

तदुक्तमिति ॥ नन्वेवं द्युशब्दस्यानेकार्थत्वं स्यात् । लोकत्रयविवक्षापक्षेऽन्तरिक्षोपरितनसर्वलोकपरत्वस्यसप्तलोकविवक्षापक्षे मेरुसूर्यमण्डलेन्द्रसदनपरत्वस्य स्वीकृतत्वादित्यत आह – **एवञ्चेति** ॥ अस्ति वाटपरिक्षेपे वर्तत इत्यादौ यो वाटपरिक्षेपे वर्तते स एको ग्रामशब्दोस्तीत्यर्थः।

## ಸಾರ

ವಸ್ತುತಃ ಸಪ್ತಲೋಕದ ಅಪೇಕ್ಷೆ ಇಲ್ಲ. ತ್ರಿಲೋಕಗಳೆಂಬ ವಿಭಾಗದಿಂದಲೂ ದಿವಃಪರತ್ವವನ್ನು ಹೊಂದಿಸಬಹುದು. ಆದರೆ ಸಪ್ತಲೋಕವನ್ನು ವಿವಕ್ಷಿಸಿದ್ದಕ್ಕೆ ಹೆಚ್ಚಿನ ಪ್ರಯೋಜನವಿದೆ. ವೈಕುಂಠಲೋಕವು ಮೇರು, ಸೂರ್ಯಮಂಡಲ, ಇಂದ್ರಸದನಗಳೆಂಬ ಪ್ರಸಿದ್ಧವಾದ ಮೂರು ದ್ಯುಲೋಕಗಳಿಗಿಂತ ಎತ್ತರದಲ್ಲಿದೆ ಎಂದಷ್ಟೇ ಅಲ್ಲದೆ ಸ್ವರ್ಗಲೋಕಕ್ಕಿಂತಲೂ ಎತ್ತರದಲ್ಲಿದೆ ಎಂದು ಸಿದ್ಧವಾಗಬೇಕಾಗಿದೆ. ಇದಕ್ಕೋಸ್ಕರ ಸಪ್ತಲೋಕದ ವಿಭಾಗವು ಸಾರ್ಥಕ.

ದ್ಯುಶಬ್ದಕ್ಕೆ ಅನೇಕಾರ್ಥ ಹೇಳುವುದು ಸರಿಯೇ? ಎಂಬುದು ಮುಂದಿನ ವಿಚಾರ. ಒಂದೇ ಪ್ರಕರಣದಲ್ಲಿದ್ದರೂ ಅನೇಕಾರ್ಥಹೇಳುವುದು ತಪ್ಪಲ್ಲ. ಚೈತ್ರನು ಗ್ರಾಮದ ಹತ್ತಿರದ ಉದ್ಯಾನದಲ್ಲಿದ್ದಾಗ 'ಗ್ರಾಮದಲ್ಲಿದ್ದಾನೆ' ಎಂಬ ಪ್ರಯೋಗವಿದೆ. ಮತ್ತು 'ಗ್ರಾಮದ ಹೊರಗಿದ್ದಾನೆ' ಎಂಬ ಪ್ರಯೋಗವೂ ಇದೆ. ಗ್ರಾಮದಲ್ಲಿದ್ದಾನೆ ಎಂದು ಹೇಳಿದಾಗ ಗ್ರಾಮಶಬ್ದಕ್ಕೆ ಉದ್ಯಾನವನ ಎಂದರ್ಥ. ಅದೇ ಗ್ರಾಮಶಬ್ದಕ್ಕೆ ಗ್ರಾಮದ ಹೊರಗಿದ್ದಾನೆಂಬ ಪ್ರಯೋಗದಲ್ಲಿ ಜನರ ವಾಸಸ್ಥಳ ಎಂದರ್ಥ. ಹೀಗೆ ಒಂದೇ ಗ್ರಾಮಶಬ್ದಕ್ಕೆ ಅನೇಕಾರ್ಥವಿರುವುದು ಲೋಕದಲ್ಲಿ ಕಂಡಿದೆ. ಆದರಂತೆ ಇಲ್ಲಿಯೂ ದ್ಯುಶಬ್ದಕ್ಕೆ ಅನೇಕಾರ್ಥ ಹೇಳಿದರೆ ಏನು ತಪ್ಪು?

'ಸರ್ವತಃ ಪೃಷ್ಠೇಷು' ಎಂಬ ಶ್ರುತಿಯು ಅನಂತಾಸನಾದಿಗಳು ಪೃಥಿವ್ಯಾದಿಗಳಿಗಿಂತ ಮೇಲಿವೆ ಎನ್ನುತ್ತಿದೆ. ಅದೇ ಶ್ರುತಿ ಮುಂದೆ ವಿಶ್ವತಃಪೃಷ್ಠೇಷು ಎಂದು ಬ್ರಹ್ಮದೇವರ ಮೂರು ಅರಮನೆಗಳಿಗಿಂತ ಅನಂತಾಸನಾದಿಗಳು ಮೇಲಿವೆ ಎನ್ನುತ್ತಿವೆ. ಅಥವಾ ದ್ಯುಶಬ್ದಕ್ಕೆ ಯೌಗಿಕಾರ್ಥ ಹಾಗೂ ರೂಢ್ಯರ್ಥಗಳನ್ನು ವಿವಕ್ಷಿಸಿ ಅನೇಕಾರ್ಥತ್ವದೋಷವನ್ನು ಪರಿಹರಿಸಬಹುದು. ಶ್ವೇತದ್ವೀಪಾದಿಗಳು ಚಿತ್ಪ್ರಕೃತಿಯ ಸ್ವರೂಪವಾದ್ದರಿಂದ ಕಂಗೊಳಿಸುತ್ತಿವೆ. ಆದ್ದರಿಂದಲೇ ದ್ಯು ಎನಿಸಿವೆ. ಈ ಯೌಗಿಕಾರ್ಥವನ್ನು ದಿವಿ ಎಂಬಲ್ಲಿರುವ ದ್ಯುಶಬ್ದವು ಹೇಳಿದೆ. 'ದಿವಃ' ಎಂಬಲ್ಲಿರುವ ದ್ಯುಶಬ್ದವು ಸ್ವರ್ಗಾದಿಗಳಲ್ಲಿ ಮೇಲೆ ಹೇಳಿದ ಪ್ರಕಾರ ರೂಢವಾಗಿದೆ. ಆದ್ದರಿಂದ ಸಪ್ತಲೋಕವಿವಕ್ಷೆಯಲ್ಲಿ ದ್ಯುಶಬ್ದಕ್ಕೆ ಅನೇಕಾರ್ಥವನ್ನು ಹೇಳಿದಂತಾಗುವುದಿಲ್ಲ.

## 'ತ್ರಿಪಾದಸ್ಯ' ಎಂಬ ಶ್ರುತ್ಯರ್ಥ ವಿಮರ್ಶೆ

### तात्पर्यचन्द्रिका

**यच्चोक्तं परैः – जागरिते हि जीवस्य शरीरबाह्याकाशः स्थानं, स्वप्ने तु तन्मध्याकाशः, सुप्तौ तु हृदयाकाशः । तथा चावस्थात्रयविशिष्टो जीवः त्रिपात्,**

उक्तत्रिविधाकाशं च द्युशब्दार्थ इति, तन्न, जाग्रदाद्यवस्थावतो विश्वादिशब्दवाच्यस्य 'दक्षिणाक्षिमुखे विश्वो मनस्यन्तस्तु तैजसः' इत्यादिश्रुत्या स्थानान्तरोक्तेः । जागरादौ जीवस्य बाह्यादिपदार्थभोगेऽपि ''हृदि ह्येष आत्मा'' इति श्रुत्या हृदयस्थस्य जीवस्य बाह्याकाशादिस्थानत्वे मानाभावाच्च । जीवे अमृतत्वस्य असम्भवाच्च । 'दिवि' 'दिवः' इति वाक्ययोरैकार्थ्यस्य सम्मतत्वेन 'दिवः' इति वाक्योक्तस्य ज्योतिषोऽपि जीवत्वापत्त्या ब्रह्मत्वसिद्धान्तहानेश्च । ''त्रिपादूर्ध्व उदैत् पुरुषः'' इत्यादि श्रुतौ –

सुदर्शनाख्यं स्वास्त्रं तु प्रायुङ्क्त दयितं त्रिपात् ।

इति भागवते च भगवत्येव त्रिपाच्छब्दप्रयोगाच्च । यच्चोक्तं परैः – ''विश्वतः पृष्ठेषु'' इत्यत्र विश्वशब्दो सङ्कुचितवृत्तिरिति दर्शयितुं ''सर्वतः पृष्ठेषु'' इत्युक्तमिति, तत्र व्यक्तमेकस्य वैयर्थ्यम् ।

ಅನುವಾದ - ತ್ರಿಪಾತ್ ಶಬ್ದಕ್ಕೆ ಅದ್ವೈತಿಗಳ ವ್ಯಾಖ್ಯಾನ - "ಜೀವನು ಜಾಗ್ರದವಸ್ಥೆಯಲ್ಲಿ ಶರೀರದ ಬಾಹ್ಯಾಕಾಶದಲ್ಲಿ ಇರುತ್ತಾನೆ. ಸ್ವಪ್ನಕಾಲದಲ್ಲಿ ಶರೀರ ಮಧ್ಯಾಕಾಶದಲ್ಲಿ ಇರುತ್ತಾನೆ. ಸುಷುಪ್ತಿ-ಕಾಲದಲ್ಲಿ ಹೃದಯಾಕಾಶದಲ್ಲಿರುತ್ತಾನೆ. ಹೀಗೆ ಮೂರು ಅವಸ್ಥೆಗಳಿಂದ ವಿಶಿಷ್ಟನಾದ ಜೀವನೇ 'ತ್ರಿಪಾತ್' ಎನಿಸಿದ್ದಾನೆ. ಜೀವನ ಸ್ಥಾನವಾದ ಮೂರುವಿಧ ಆಕಾಶಗಳೇ ದ್ಯುಶಬ್ದದ ಅರ್ಥಗಳಾಗಿವೆ" ಎಂದು.

ಇದು ತಪ್ಪು. ಜೀವನಿಗೆ ಹೇಳಿದ ಸ್ಥಾನಗಳು ಇದಲ್ಲ. ಜಾಗ್ರದವಸ್ಥೆಯಲ್ಲಿ ಬಲಗಣ್ಣು, ಸ್ವಪ್ನಕಾಲ-ದಲ್ಲಿ ಕಂಠ, ಸುಷುಪ್ತಿಯಲ್ಲಿ ಹೃದಯ. ಇವು ಸ್ಥಾನಗಳೆಂದು 'ದಕ್ಷಿಣಾಕ್ಷಿಮುಖೇ ವಿಶ್ವೋ ಮನಸ್ಯಂತಸ್ತು ತೈಜಸಃ' ಎಂಬ ಶ್ರುತಿಯಲ್ಲಿ ಹೇಳಲಾಗಿದೆ. (ವಸ್ತುತಃ ವಿಶ್ವಾದಿರೂಪಿ ಭಗವಂತನು ಬಲಗಣ್ಣು ಮೊದಲಾದವುಗಳಲ್ಲಿ ವಾಸಿಸುತ್ತಾನೆ. ಆದರೆ ಜೀವನನ್ನೇ ವಿಶ್ವಾದಿಶಬ್ದವಾಚ್ಯನೆಂದು ಪರರಂತೆ ಒಪ್ಪಿ ಇಲ್ಲಿ ಆಕ್ಷೇಪಿಸಿದ್ದಾರೆ).

ಮತ್ತು ಅದ್ವೈತಿಗಳು ಹೇಳಿದ ಸ್ಥಾನವಿಷಯದಲ್ಲಿ ಪ್ರಮಾಣವಿಲ್ಲ. ಜಾಗ್ರತ್ಕಾಲದಲ್ಲಿ ಜೀವನು ಬಾಹ್ಯಪದಾರ್ಥಗಳನ್ನು ಭೋಗಿಸಿದರೂ 'ಹೃದಿ ಹ್ಯೇಷ ಆತ್ಮಾ' ಎಂಬ ಶ್ರುತಿಯಂತೆ ಹೃದಯದಲ್ಲೇ ಇರುತ್ತಾನೆ ಹೊರತು ಶರೀರದ ಬಾಹ್ಯಾಕಾಶದಲ್ಲಿರುತ್ತಾನೆನ್ನಲು ಆಧಾರವಿಲ್ಲ. ಮತ್ತು ಅದೇ ಶ್ರುತಿಯಲ್ಲಿ ಕೇಳಿಸುತ್ತಿರುವ ಅಮೃತತ್ವವು ಪರಮಾತ್ಮನ ಧರ್ಮವಾಗಿದೆ ಹೊರತು ಜೀವನ ಧರ್ಮವಲ್ಲ.

ಹಿಂದೆ ಹೇಳಿದಂತೆ 'ದಿವಿ, ದಿವಃ' ಎಂಬ ಎರಡು ವಾಕ್ಯಗಳು ಒಬ್ಬನನ್ನೇ ಹೇಳುತ್ತಿವೆ ಎಂದು ಅದ್ವೈತಿಗಳ ವಾದ. ಹಾಗಾದರೆ 'ತ್ರಿಪಾದಸ್ಯಾಮೃತಂ ದಿವಿ' ಎಂಬ ವಾಕ್ಯವು ಜೀವಪರವಾದಲ್ಲಿ 'ಅಥ ಯದತಃ' ಎಂಬ ವಾಕ್ಯದಲ್ಲಿ ಪ್ರತಿಪಾದ್ಯನಾದ ಜ್ಯೋತಿಯು ಜೀವನೇ ಆಗಬೇಕಾದೀತು. ಆವಾಗ ಜ್ಯೋತಿಯು ಬ್ರಹ್ಮನೆಂದು ಸಿದ್ಧಾಂತ ಮಾಡಿದ್ದಕ್ಕೆ ಹಾನಿ ಉಂಟಾಗುತ್ತದೆ. 'ತ್ರಿಪಾದೂರ್ಧ್ವ ಉದೈತ್ಪುರುಷಃ' ಎಂಬ ಶ್ರುತಿಯಲ್ಲಿ ಪರಮಾತ್ಮನಲ್ಲಷ್ಟೇ ಪ್ರಸಿದ್ಧವಾದ ಪುರುಷಶಬ್ದದ ಜೊತೆಗೆ 'ತ್ರಿಪಾತ್' ಎಂಬ ಪದವನ್ನು ಬಳಸಲಾಗಿದೆ. ಆದ್ದರಿಂದ ತ್ರಿಪಾತ್‌ಶಬ್ದವು ಭಗವಂತನನ್ನೇ ಪ್ರತಿಪಾದಿಸಬೇಕು. ಭಾಗವತದಲ್ಲಿಯೂ 'ಸುದರ್ಶನಾಖ್ಯಂ ಸ್ವಾಸ್ತ್ರಂ ತು ಪ್ರಾಯುಂಕ್ತ ದಯಿತಂ ತ್ರಿಪಾತ್' (ತ್ರಿಪಾತ್ ಎನಿಸಿದ ಭಗವಂತನು ತನ್ನ ಸುದರ್ಶನವೆಂಬ ಅಸ್ತ್ರವನ್ನು ಪ್ರಯೋಗಿಸಿದನು) ಎಂಬಲ್ಲಿ ಭಗವಂತನಲ್ಲಿಯೇ ತ್ರಿಪಾತ್‌ಶಬ್ದವನ್ನು ಬಳಸಲಾಗಿದೆ.

ಇನ್ನು ಅದ್ವೈತಿಗಳು 'ವಿಶ್ವತಃ ಪೃಷ್ಠೇಷು' ಎಂಬುದಕ್ಕೆ ಹೀಗೆ ವ್ಯಾಖ್ಯಾನಿಸುತ್ತಾರೆ - "ವಿಶ್ವತಃ ಪೃಷ್ಠೇಷು ಎಂಬಲ್ಲಿರುವ ವಿಶ್ವಶಬ್ದದ ಅರ್ಥವನ್ನು ಸಂಕೋಚಮಾಡಬೇಕೆಂದು ತಿಳಿಸಲು ಸರ್ವತಃ ಪೃಷ್ಠೇಷು ಎನ್ನಲಾಗಿದೆ". ಎಂದು. ಈ ವ್ಯಾಖ್ಯಾನದಲ್ಲಿ 'ವಿಶ್ವತಃ ಸರ್ವತಃ' ಎಂಬ ಎರಡು ಪದಗಳಲ್ಲಿ ಒಂದು ವ್ಯರ್ಥವಾಗುತ್ತದೆ.

**प्रकाशः** – त्रिपाच्छब्देन नारायणादिरूपत्रयमिति भाष्यादौ व्याख्यातम् । तत्र परोक्तमनूद्य निरस्यति – **यच्चेति** ॥ विश्वादेर्जाग्रदाद्यवस्थावज्जीवत्वं पररीत्योपेत्य प्रकृतप्रमेयं दूषयति – **जाग्रदिति** ॥ **'श्रुत्या'** मण्डूकश्रुत्या ॥ **हृदि हीति** ॥ द्वितीये **''अवस्थितिवैशेष्यादिति चेन्नाभ्युपगमाद्धृदि हि''** इति सूत्रोपात्तषट्प्रश्नश्रुत्येत्यर्थः । यत्तु तृतीये **''मुग्धेऽर्धसम्पत्तिः परिशेषात्''** इत्यस्य भाष्ये –

> **हृदयस्थात्पराज्जीवो दूरस्थो जाग्रदेष्यति ।**
> **समीपस्थस्तथा स्वप्नं ................ ॥**

इत्यादिस्मृत्या जीवस्य हृदयादन्यत्राक्ष्यादौ स्थितिकथनं, तत्तु सन्निधिविशेषाभिप्रायम् । यथोक्तमैतरेयभाष्ये द्वितीयेऽध्याये – **''हृदि स्थितमेव हि तस्य स्वरूपं, जागारितेऽप्यक्षादिषु विशेषसन्निहितं भवति । दीपप्रकाशवत्''** इत्यादि । अत एवोक्तं – **'बाह्याकाशादिस्थानत्त्वे'** इति ॥ **अमृतत्वस्येति** ॥ **''त्रिपादस्यामृतं दिवि''** इत्युक्तस्येत्यर्थः । **''विश्वतःपृष्ठेषु''** इत्याद्यन्यथा स्वयं व्याख्याय, तत्र परोक्तं निरस्यति ॥

ವಿವರಣೆ - 'ತ್ರಿಪಾದಸ್ಯಾಮೃತಂ ದಿವಿ' ಎಂಬಲ್ಲಿರುವ ತ್ರಿಪಾತ್ ಶಬ್ದವು ನಾರಾಯಣ, ವಾಸುದೇವ, ವೈಕುಂಠವೆಂಬ ಮೂರು ರೂಪಗಳನ್ನು ಪ್ರತಿಪಾದಿಸುತ್ತದೆಂದು ಭಾಷ್ಯಾದಿಗಳಲ್ಲಿ ವ್ಯಾಖ್ಯಾನಿಸಿದ್ದಾರೆ. ಈ 'ತ್ರಿಪಾತ್' ಶಬ್ದಕ್ಕೆ ಅದ್ವೈತಿಗಳ ವ್ಯಾಖ್ಯಾನವನ್ನು ಅನುವಾದ ಮಾಡಿ, 'ಯಚ್ಚ' ಇತ್ಯಾದಿ ಗ್ರಂಥದಿಂದ ನಿರಾಸ ಮಾಡುತ್ತಿದ್ದಾರೆ. ಜಾಗ್ರದಾದ್ಯವಸ್ಥೆಗಳಲ್ಲಿ ಭಗವಂತನು ವಿಶ್ವಾದಿರೂಪದಿಂದ ಕಣ್ಣು ಮೊದಲಾದವುಗಳಲ್ಲಿ ಇರುತ್ತಾನೆ. ಆದರೆ ಪ್ರಕೃತ ಗ್ರಂಥಕಾರರು ಅದ್ವೈತಿಗಳ ಸಿದ್ಧಾಂತದಂತೆ ಜೀವನನ್ನೇ ವಿಶ್ವಾದಿಗಳೆಂದು ವಿವಕ್ಷಿಸಿ, ಅದ್ವೈತಿಗಳ ಪ್ರಮೇಯವನ್ನು ದೂಷಿಸುತ್ತಿದ್ದಾರೆ 'ಜಾಗ್ರತ್' ಇತ್ಯಾದಿ ವಾಕ್ಯದಿಂದ. ಮಾಂಡೂಕ್ಯಶ್ರುತಿಯಲ್ಲಿ ಇದರ ವಿವರಣೆ ಇದೆ. ಜೀವನು ಹೃದಯದಲ್ಲಷ್ಟೇ ಇರುತ್ತಾನೆ ಹೊರತು, ಶರೀರದ ಬೇರೆ ಯಾವ ಸ್ಥಾನದಲ್ಲಿಯೂ ಇರಲಾರ. 'ಅವಸ್ಥಿತಿವೈಶೇಷ್ಯಾದಿತಿ ಚೇನ್ನಾಭ್ಯುಪ-ಗಮಾದ್ಧೃದಿ ಹಿ' ಎಂಬ ಸೂತ್ರದಲ್ಲಿ ಉದಾಹರಿಸಿದ ಷಟ್ಪ್ರಶ್ನೆಯು ಇದನ್ನು ಹೇಳಿದೆ. ಹಾಗಾದರೆ ಮೂರನೆ ಅಧ್ಯಾಯದ 'ಮುಗ್ಧೇಽರ್ಧಸಂಪತ್ತಿಃ ಪರಿಶೇಷಾತ್' ಎಂಬ ಸೂತ್ರಭಾಷ್ಯದಲ್ಲಿ ಅವಸ್ಥಾಭೇದದಿಂದ ಜೀವನ ಸ್ಥಾನವು ಭಿನ್ನವೆಂದು ಹೇಳಿದ್ದು ಹೇಗೆ ಸರಿಯಾಗುತ್ತದೆ?

'ಹೃದಯಸ್ಥಾತ್ ಪರಾಜ್ಜೀವೋ ದೂರಸ್ಥೋ ಜಾಗ್ರದೇಕ್ಷ್ಯತಿ ।
ಸಮೀಪಸ್ಥಸ್ತಥಾ ಸ್ವಪ್ನಮ್...'

'ಜೀವನು ಹೃದಯಭಾಗದಿಂದ ದೂರ ಹೋದಾಗ (ಕಣ್ಣಿಗೆ ಹೋದಾಗ) ಜಾಗ್ರತನಾಗುತ್ತಾನೆ. ಸ್ವಲ್ಪಹತ್ತಿರ ಬಂದಾಗ(ಕಂಠಕ್ಕೆ) ಸ್ವಪ್ನವನ್ನು ಕಾಣುತ್ತಾನೆ.' ಎಂಬ ಸ್ಮೃತಿಯಂತೆ ಜೀವನಿಗೆ ಹೃದಯಸ್ಥಾನ-ವನ್ನು ಬಿಟ್ಟು ಅಕ್ಷಿಮೊದಲಾದ ಸ್ಥಾನಗಳು ಇಲ್ಲಿ ಹೇಳಲ್ಪಟ್ಟಿವೆ. ಆದರೆ ಕೇವಲ ಸಾನ್ನಿಧ್ಯದ ವಿವಕ್ಷೆಯಿಂದಷ್ಟೇ ಕಣ್ಣುಮೊದಲಾದ ಸ್ಥಾನಗಳು ಹೇಳಲ್ಪಟ್ಟಿವೆ ಹೊರತು ಜೀವನು ಹೃದಯದಲ್ಲಿ ನಿಲ್ಲದೆ ಸಂಪೂರ್ಣವಾಗಿ ಕಣ್ಣಿಗೆ ಹೋಗುತ್ತಾನೆಂದು ಅಭಿಪ್ರಾಯವಲ್ಲ. ಐತರೇಯಭಾಷ್ಯದ ಎರಡನೆಯ ಅಧ್ಯಾಯದಲ್ಲಿ ಇದನ್ನು ಸಮ್ಮತಿಸಿದ್ದಾರೆ. 'ಹೃದಿಸ್ಥಮೇವ ಹಿ ತಸ್ಯ ರೂಪಮ್ । ಜಾಗರಿತೇಽಪ್ಯಕ್ಷಾದಿಷು ವಿಶೇಷಸನ್ನಿಹಿತಂ ಭವತಿ । ದೀಪಪ್ರಕಾಶವತ್' (ವಸ್ತುತಃ ಜೀವನು ಹೃದಯದಲ್ಲೇ ಇರುತ್ತಾನೆ. ಆದರೆ ಜಾಗ್ರತ್ಕಾಲದಲ್ಲಿ ಪ್ರಕಾಶರೂಪದಿಂದ ಕಣ್ಣಿನಲ್ಲಿ ಸನ್ನಿಹಿತನಾಗುತ್ತಾನೆ) ಎಂದು. ಹೀಗೆ ಬೇರೆ ಸ್ಥಾನದಲ್ಲಿ ಜೀವನು ಪ್ರಕಾಶರೂಪದಿಂದ ಇರುತ್ತಾನೆ. (ಸಾಂಶಜೀವರು ಅಂಶರೂಪದಿಂದ ಕಣ್ಣು ಮೊದಲಾದವುಗಳಲ್ಲಿ ಇರುತ್ತಾರೆ. ನಿರಂಶಜೀವರು ಪ್ರಕಾಶರೂಪದಿಂದ ಇರುತ್ತಾರೆ). ಬೇರೆ ಸ್ಥಾನದಲ್ಲಿ ಜೀವನು ಪ್ರಕಾಶ-ರೂಪದಿಂದ ಇರುತ್ತಾನಾದ್ದರಿಂದಲೇ ಅದ್ವೈತಿಗಳನ್ನು ನಿರಾಕರಿಸುವಾಗ ಬೇರೆ ಸ್ಥಾನದಲ್ಲಿ ಜೀವನು ಇರಲಾರ ಎಂದು ಹೇಳಿಲ್ಲ. ಹೊರತು ಅದ್ವೈತಿಗಳು ನಿರ್ದೇಶಿಸಿ ಬಾಹ್ಯಾಕಾಶ ಮೊದಲಾದ ಸ್ಥಾನಗಳಲ್ಲಿ ಇಲ್ಲವೆಂದಷ್ಟೇ ನಿರಾಕರಿಸಿದ್ದಾರೆ. ಆದ್ದರಿಂದಲೇ 'ಬಾಹ್ಯಾಕಾಶಾದಿಸ್ಥಾನತ್ವೇ ಮಾನಾಭಾವಾತ್' ಎಂದು ಹೇಳಿದ್ದಾರೆ.

'ತ್ರಿಪಾದಸ್ಯಾಮೃತಂ ದಿವಿ' ಎಂಬ ಶ್ರುತಿಯಲ್ಲಿ ತ್ರಿಪಾತ್ ಶಬ್ದದಿಂದ ಪ್ರತಿಪಾದ್ಯನಾದವನಿಗೆ ಅಮೃತತ್ವಧರ್ಮವು ಹೇಳಲ್ಪಟ್ಟಿದೆ. ಮರಣಶೀಲನಾದ ಜೀವನಲ್ಲಿ ಈ ಧರ್ಮವು ಸರ್ವಥಾ ಕೂಡುವುದಿಲ್ಲ. ಇನ್ನು ಅದ್ವೈತಿಗಳು 'ವಿಶ್ವತಃ ಪೃಷ್ಠೇಷು' ಎಂಬ ಶ್ರುತಿಯನ್ನು ಅನ್ಯಥಾ ವ್ಯಾಖ್ಯಾನಿಸುತ್ತಾರೆ. ಅದನ್ನು 'ಯಚ್ಚ' ಎಂಬ ಗ್ರಂಥದಿಂದ ಅನುವಾದ ಮಾಡಿ ನಿರಾಕರಿಸಿದ್ದಾರೆ.

## ಸಾರ

ತ್ರಿಪಾತ್‌ಶಬ್ದಕ್ಕೆ ಅದ್ವೈತಿಗಳ ವ್ಯಾಖ್ಯಾನ. "ಜೀವನು ಜಾಗ್ರದವಸ್ಥೆಯಲ್ಲಿ ಶರೀರದ ಬಾಹ್ಯಾಕಾಶ-ದಲ್ಲಿರುತ್ತಾನೆ. ಸ್ವಪ್ನದಲ್ಲಿ ಶರೀರದ ಮಧ್ಯಾಕಾಶದಲ್ಲಿರುತ್ತಾನೆ. ಸುಷುಪ್ತಿಯಲ್ಲಿ ಹೃದಯಾಕಾಶದಲ್ಲಿರುತ್ತಾನೆ. ಈ ಮೂರು ಅವಸ್ಥೆಗಳಿಂದ ಕೂಡಿದ ಜೀವನು ತ್ರಿಪಾತ್ ಎನಿಸುತ್ತಾನೆ. ಜೀವನಿರುವ ಆಕಾಶಾದಿಗಳು ದ್ಯು ಎನಿಸುತ್ತವೆ -- ಎಂದು.

ಇದು ಸರಿಯಲ್ಲ. ಮಾಂಡೂಕ್ಯಶ್ರುತಿಯಂತೆ ಜೀವನು ಜಾಗ್ರದಾದ್ಯವಸ್ಥೆಗಳಲ್ಲಿ ಬಲಗಣ್ಣು ಮೊದಲಾದೆಡೆ ಇರುತ್ತಾನೆ. ಹೊರತು ಬಾಹ್ಯಾಕಾಶಗಳಲ್ಲಿ ಇರುತ್ತಾನೆ ಎನ್ನಲು ಯಾವುದೇ ಪ್ರಮಾಣಗಳಿಲ್ಲ. ಮತ್ತು ದಿವಿಸ್ಥಿತತ್ವ ಮತ್ತು ದಿವಃಪರತ್ವಪ್ರತಿಪಾದಕ ಶ್ರುತಿಗಳು ಒಬ್ಬನನ್ನೇ ಹೇಳುತ್ತವೆಂದು ಅದ್ವೈತಿಗಳು ಒಪ್ಪಿದ್ದಾರೆ. ಆದ್ದರಿಂದ 'ತ್ರಿಪಾದಸ್ಯ' ಎಂಬ ಶ್ರುತಿಯು ಜೀವನನ್ನು ಪ್ರತಿಪಾದಿಸಿದರೆ 'ಅಥ ಯದತಃ' ಎಂಬ ಶ್ರುತಿಯಿಂದಲೂ ಜೀವನೇ ಪ್ರತಿಪಾದ್ಯನಾದರೆ ಜೀವನೇ ಜ್ಯೋತಿಯಾಗಬೇಕಾಗುತ್ತದೆ. ಬ್ರಹ್ಮನು ಜ್ಯೋತಿಯೆಂಬ ಸಿದ್ಧಾಂತಕ್ಕೆ ಧಕ್ಕೆ ಬರುತ್ತದೆ.

- - - - - -

### ರಾಮಾನುಜರ ವ್ಯಾಖ್ಯಾನದಲ್ಲಿ ಅಸ್ವಾರಸ್ಯ

**तात्पर्यचन्द्रिका**

**केचित्तु – "तथाक्षरात्सम्भवतीह विश्वम्" इति श्रुतौ विश्वशब्दः कार्ये प्रयुक्त इति अत्रापि तत्परः, सर्वशब्दस्तु परिशेषात् कारणपर इत्याहुः । तदपि न, "स इदꣲसर्वमसृजत" इत्यादौ सर्वशब्दः कार्ये प्रयुक्त इति तत्परः, परिशेषाद्विश्वशब्दः कारणपर इति प्रसङ्गात् । "सम्भवतीह विश्वम्" इत्यत्र च सम्भवति पद-सन्निधानेनैव विश्वशब्दः कार्यपरो न तु स्वतः । अन्यथा –**

**विश्वतः परमां नित्यं, विश्वात्मानं परायणम् ।**

**इत्यादावपि कार्यमात्रपरः स्यात् । तस्मात् श्रुतिसूत्रयोरन्योक्तार्थस्यायुक्तत्वात् भाष्योक्त एवार्थ इति ॥**

**टीकाक्षरार्थस्तु – आदिपदेन वाचो ग्रहणमिति ॥ "वाग्वै गायत्री" इति श्रुतौ वाक् शब्दार्थगुणवत्तयोपासनार्थं विष्णुर्वागित्युक्तः । तथाच वाक्त्वमपि न विष्णुत्वबाधकमिति दर्शयितुं भाष्य आदिपदमित्यर्थः ॥ अनुसन्धेयत्वं च**

सूचयतीति ॥ 'आदिपदं' इत्यनुषङ्गः ॥ आदिपदेन "या वै सा गायत्री" इति ॥ "या वै सा" इत्यादिना गायत्र्याः पृथिव्यभेदमुक्त्वा "अस्यां हीदं सर्वं प्रतिष्ठितम्" इति पृथिव्याः सर्वाधारत्वमुक्तम् । तच्च विष्णोरेव गायत्रीपृथिव्यादिशब्दार्थत्वे युक्तम्, नान्यथेत्यर्थः ॥

॥ इति श्रीब्रह्मण्यतीर्थपूज्यश्रीपादशिष्यव्यासतीर्थविरचिता
तात्पर्यचन्द्रिकायां गायत्र्यधिकरणं सम्पूर्णम् ॥११॥

ಅನುವಾದ - ರಾಮಾನುಜರು 'ವಿಶ್ವತಃ ಪೃಷ್ಠೇಷು' ಎಂಬ ಶ್ರುತಿಯನ್ನು ಹೀಗೆ ವ್ಯಾಖ್ಯಾನಿಸುತ್ತಾರೆ - 'ತಥಾಕ್ಷರಾತ್ ಸಂಭವತೀಹ ವಿಶ್ವಮ್' ಈ ಶ್ರುತಿಯಲ್ಲಿ ವಿಶ್ವಶಬ್ದವು ಕಾರ್ಯ ಎಂಬರ್ಥವನ್ನು ಹೇಳುತ್ತದೆ. ಪರಿಶೇಷದಿಂದ ಸರ್ವಶಬ್ದವು ಕಾರಣವನ್ನು ಹೇಳುತ್ತದೆ. ಆದ್ದರಿಂದ ಜ್ಯೋತಿಯು ಕಾರ್ಯಕಾರಣಪ್ರಪಂಚಕ್ಕಿಂತ ಮೇಲಿದ್ದಾನೆಂದು ಶ್ರುತಿಯ ಅರ್ಥ. ಇದು ಸರಿಯಲ್ಲ. ಸರ್ವಶಬ್ದವು ಕಾರಣಪರವೆಂದು ಹೇಳಿದ್ದಾರೆ. ಆದರೆ 'ಸ ಇದಂ ಸರ್ವಮಸೃಜತ' ಎಂಬಲ್ಲಿ ಕಾರ್ಯ ಎಂಬ ಅರ್ಥದಲ್ಲಿ ಸರ್ವಶಬ್ದವನ್ನು ಪ್ರಯೋಗಿಸಲಾಗಿದೆ. ಪರಿಶೇಷದಿಂದ ವಿಶ್ವಶಬ್ದವು ಕಾರಣಪರವಾಗುತ್ತದೆ. ಹೀಗೆ ನಾವು ಆಪಾದಿಸಿದರೆ ನಿಮ್ಮಲ್ಲಿ ಉತ್ತರವಿಲ್ಲ. ಮತ್ತು 'ಸಂಭವತೀಹ ವಿಶ್ವಮ್' ಎಂಬಲ್ಲಿರುವ ಸಂಭವತಿ ಎಂಬ ಪದದ ಸನ್ನಿಧಾನದಿಂದಷ್ಟೇ ವಿಶ್ವಶಬ್ದವು ಕಾರ್ಯಪರವಾಗಿದೆ. ಸಹಜವಾಗಿ ಅಲ್ಲ. ಹೀಗೆ ಹೇಳದಿದ್ದರೆ 'ವಿಶ್ವತಃ ಪರಮಾನ್ನಿತ್ಯಮ್, ವಿಶ್ವಾತ್ಮಾನಂ ಪರಾಯಣಂ' ಇತ್ಯಾದಿ ಸ್ಥಳಗಳಲ್ಲಿಯೂ ವಿಶ್ವಶಬ್ದವು ಕೇವಲ ಕಾರ್ಯಪರವಾಗಬೇಕಾದೀತು.

ಇಲ್ಲಿಯ ತನಕ ಪ್ರತಿಪಾದಿಸಿದಂತೆ ಶ್ರುತಿ ಹಾಗೂ ಸೂತ್ರಗಳಿಗೆ ಪರರು ಮಾಡುವ ವ್ಯಾಖ್ಯಾನವು ಅತ್ಯಂತ ಅಯುಕ್ತವಾಗಿದೆ. ಆದ್ದರಿಂದ ಭಾಷ್ಯದಲ್ಲಿ ಮಾಡಿದ ವ್ಯಾಖ್ಯಾನವೇ ಸಮಂಜಸವಾದ್ದರಿಂದ ಗ್ರಾಹ್ಯವಾಗಿದೆ.

ಟೀಕೆಯ ಕಠಿಣಪದಾರ್ಥ -- ಆದಿಪದೇನ ವಾಚೋ ಗ್ರಹಣಮ್॥ ಭಾಷ್ಯದಲ್ಲಿ ಅಗ್ನಿಗಾಯತ್ರ್ಯಾದಿ ಎಂದಿದೆ. ಇಲ್ಲಿರುವ ಆದಿಪದದಿಂದ ವಾಕ್ ಎಂಬುದನ್ನು ಇಟ್ಟುಕೊಳ್ಳಬೇಕು. ವಾಕ್ ಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುವ ಉದ್ದೇಶವೇನೆಂದರೆ ವಾಕ್‌ಶಬ್ದದಿಂದ ತಿಳಿಯುವ ಗುಣದ ಮೂಲಕ ಭಗವಂತನನ್ನು ಉಪಾಸನೆ ಮಾಡಬೇಕು ಅದಕ್ಕಾಗಿ 'ವಾಗ್ವೈ ಗಾಯತ್ರೀ' ಎಂಬ ಶ್ರುತಿಯು ಗಾಯತ್ರಿಯನ್ನು ವಾಕ್ ಎನ್ನುತ್ತಿದೆ. ಆದ್ದರಿಂದ ವಾಕ್ತ್ವವೂ ಕೂಡ ಜ್ಯೋತಿಯು ವಿಷ್ಣುವಲ್ಲ ಎನ್ನಲು ಬಾಧಕವಲ್ಲ. ಒಂದು ವೇಳೆ ಆದಿ ಪದದಿಂದ ವಾಕನ್ನು ತೆಗೆದುಕೊಳ್ಳದಿದ್ದರೆ ಅಗ್ನಿಗಾಯತ್ರೀಶಬ್ದಗಳು ವಿಷ್ಣುವನ್ನು ಪ್ರತಿಪಾದಿಸಿದರೂ ವಾಕ್‌ಶಬ್ದವು ವಿಷ್ಣುವನ್ನು ಪ್ರತಿಪಾದಿಸದ ಕಾರಣ ವಿಷ್ಣುವನ್ನು ಜ್ಯೋತಿಯೆಂದು ಪ್ರತಿಪಾದಿಸಲು ಆಗುತ್ತಿರಲಿಲ್ಲ.

ಅನುಸಂಧೇಯತ್ವಂ ಚ ಸೂಚಯತಿ ॥ ಆದಿಪದಂ ಎಂಬ ಕರ್ತೃವಾಚಕಪದವನ್ನು ಅನುಷಂಗ ಮಾಡಿ ಅನ್ವಯ ತಿಳಿಯಬೇಕು.

ಆದಿಪದೇನ ಯಾ ವೈ ಸಾ ಗಾಯತ್ರಿ ॥ 'ಯಾ ವೈ ಸಾ' ಎಂಬ ಶ್ರುತಿಯಲ್ಲಿ ಗಾಯತ್ರಿಗೆ ಪೃಥಿವಿಯಿಂದ ಅಭೇದವನ್ನು ಹೇಳಲಾಗಿದೆ. ಪುನಃ 'ಅಸ್ಯಾಂ ಹೀದಂ ಸರ್ವಂ ಪ್ರತಿಷ್ಠಿತಮ್' ಎಂಬಲ್ಲಿ ಪೃಥಿವಿಯನ್ನು ಸರ್ವಾಧಾರ ಎನ್ನಲಾಗಿದೆ. ವಿಷ್ಣುವು ಗಾಯತ್ರೀಪೃಥಿವಿ ಮೊದಲಾದ ಶಬ್ದ-ಗಳಿಂದ ಪ್ರತಿಪಾದ್ಯನಾದರೆ ಮಾತ್ರ ಈ ಸರ್ವಾಧಾರತ್ವವು ಯುಕ್ತವಾಗುತ್ತದೆ. ವಿಷ್ಣುವು ಪ್ರತಿಪಾದ್ಯ-ನಾಗದಿದ್ದರೆ ಅನುಪಪನ್ನವಾಗುತ್ತದೆಂದು ಅರ್ಥ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಗಾಯತ್ರ್ಯಧಿಕರಣವು ಸಂಪೂರ್ಣವಾಯಿತು.

**प्रकाशः – यच्चेति ॥ इति प्रसङ्गादिति ॥** तथाचोभयमुभयत्र ग्राह्यमित्येकस्य वैयर्थ्यमेवेत्यर्थः । नन्वेवं कथं विश्वशब्दस्य कार्ये प्रयोग इत्यत आह – **सम्भवतीति ॥** 'परमां' परमश्चासौ अश्व तमित्यर्थः । छन्दस्सूत्रसिद्धान्तटीकायां 'आदिपदेन वाचोग्रहणं' इत्येतद्दुर्गमत्वात्सुगमयति – **आदिपदेनेति ॥** "अधिकरणान्तरेऽप्येतन्न्यायस्यानुसन्धेयत्वं च सूचयति" इत्यत्र कर्त्राकाङ्क्षाया-मादिपदेनेति प्रकृतं प्राक्तनं विपरिणामेन सम्बन्धनीयमित्याह – **आदिपदमिति ॥** आदिपदेन "या वै सा गायत्री इयं वा सा येयं पृथिवी" इत्यादेः सङ्ग्रह इत्येतत्तात्पर्यमस्फुटत्वादाह – **या वै सेति ॥** शिष्टं स्पष्टीकृतमुपन्यासमुखेनेति ॥

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**
**चन्द्रिकाप्रकाशे गायत्र्यधिकरणं सम्पूर्णम् ॥११॥**

ವಿವರಣೆ - ರಾಮಾನುಜರು ವಿಶ್ವಶಬ್ದಕ್ಕೆ ಕಾರ್ಯವೆಂಬ ಅರ್ಥವನ್ನು ಹೇಳಿ, ಪರಿಶೇಷದಿಂದ ಕಾರಣವೆಂಬ ಅರ್ಥವನ್ನು ಹೇಳಿದರೆ, 'ಸ ಇದಂ ಸರ್ವಮಸೃಜತ' ಎಂಬ ಶ್ರುತಿಯಲ್ಲಿ ಕಾರ್ಯದಲ್ಲಿ ಸರ್ವಶಬ್ದವನ್ನು ಪ್ರಯೋಗಿಸಿದ್ದರಿಂದ ಪರಿಶೇಷದಿಂದ ವಿಶ್ವಶಬ್ದವು ಕಾರಣಪರವಾಗುತ್ತದೆ. ಆವಾಗ ವಿಶ್ವ ಹಾಗೂ ಸರ್ವಶಬ್ದಗಳಿಗೆ ಎರಡೂ ಅರ್ಥಗಳನ್ನು ಹೇಳಿದಂತಾಗಿ ಒಂದು ಶಬ್ದಕ್ಕೆ ವೈಯರ್ಥ್ಯವು ತಪ್ಪಿದ್ದಲ್ಲ. ಹಾಗಾದರೆ ವಿಶ್ವಶಬ್ದಕ್ಕೆ ಕಾರ್ಯವೆಂಬ ಅರ್ಥದಲ್ಲಿ ಪ್ರಯೋಗವು ಕಾಣಸುತ್ತಿದೆಯಲ್ಲಾ? ಎಂಬ ಪ್ರಶ್ನೆಗೆ 'ಸಂಭವತಿ' ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಪರಮಾತ್ ಎಂಬ ಶಬ್ದಕ್ಕೆ ಪರಮಶ್ಚಾಸೌ ಅಶ್ವ ಪರಮಃ, ತಸ್ಮಾತ್ ಪರಮಾತ್ ಎಂದು ವಿಗ್ರಹ. ಶ್ರೇಷ್ಠನಾದ ಭಗವಂತನು ಎಂದರ್ಥ.

ಛಂದಸೂತ್ರದ ಸಿದ್ಧಾಂತಟೀಕೆಯಲ್ಲಿ ಆದಿಪದದಿಂದ ವಾಕನ್ನು ವಿವಕ್ಷಿಸುತ್ತಿದ್ದಾರೆ. ಇದರ ಆಂತರ್ಯ ಗೂಢವಾದ್ದರಿಂದ 'ಆದಿಪದೇನ' ಎಂಬ ಗ್ರಂಥದಿಂದ ಅದನ್ನು ವ್ಯಾಖ್ಯಾನಿಸಿದ್ದಾರೆ. 'ಅಧಿಕರಣಾಂತರೇಪ್ಯೇತನ್ನ್ಯಾಯಸ್ಯಾನುಸಂಧೇಯತ್ವಂ ಸೂಚಯತಿ' (ಬೇರೆ ಅಧಿಕರಣದಲ್ಲಿಯೂ ಈ ನ್ಯಾಯವನ್ನು ಅನುಸಂಧಾನಮಾಡಬೇಕೆಂದು ಸೂಚಿಸುತ್ತಿದೆ) ಎಂಬ ಟೀಕೆಯಲ್ಲಿ ಕರ್ತೃವಾಚಕಪದವೇ ಕಾಣಿಸುತ್ತಿಲ್ಲ. ಅದನ್ನು ಗ್ರಂಥಕಾರರು 'ಆದಿಪದಮ್' ಎಂದು ಹೇಳಿದ್ದಾರೆ. ವಸ್ತುತಃ ಹಿಂದೆ ಪ್ರಸಕ್ತವಾಗಿದ್ದರೆ ಮಾತ್ರ ಅನುಷಂಗ ಮಾಡಲು ಸಾಧ್ಯ. ಹಿಂದೆ ಆದಿಪದಂ ಎಂಬುದು ಪ್ರಸಕ್ತವಾಗಿಲ್ಲ. ಆದರೆ ಆದಿಪದೇನ ಎಂಬ ಪದವು ಪ್ರಸಕ್ತವಾಗಿದೆ. ಅದನ್ನು ಆದಿಪದಂ ಎಂದು ವಿಪರಿಣಾಮ ಮಾಡಿ ಇಲ್ಲಿ ಅನುಷಂಗ ಮಾಡಬೇಕು.

''ಆದಿಪದೇನ 'ಯಾ ವೈ ಸಾ ಗಾಯತ್ರೀ ಇಯಂ ವಾವ ಸಾ ಯೇಯಂ ಪೃಥಿವೀ' ಇತ್ಯಾದೇಃ ಸಂಗ್ರಹಃ'' (ಆದಿಪದದಿಂದ 'ಯಾ ವೈ' ಇತ್ಯಾದಿಯನ್ನು ಸಂಗ್ರಹಿಸಬೇಕು) ಎಂದು ಟೀಕೆಯಲ್ಲಿದೆ. ಇದರ ಅರ್ಥವು ಅಸ್ಪಷ್ಟವಾದ್ದರಿಂದ 'ಯಾ ವೈ ಸಾ' ಎಂಬ ಗ್ರಂಥದಿಂದ ವ್ಯಾಖ್ಯಾನಿಸಿದ್ದಾರೆ. ಉಳಿದ ಕಠಿಣಪದಗಳ ಅರ್ಥವನ್ನು ಉಪನ್ಯಾಸಮುಖದಿಂದಲೇ ಸ್ಪಷ್ಟಪಡಿಸಿದ್ದಾರೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಗಾಯತ್ರ್ಯಧಿಕರಣವು ಮುಕ್ತಾಯವಾಯಿತು.

* * * * * * *

**गुरुराजीयम् – वाग्वै गायत्रीति श्रुताविति ॥** गायत्रीशब्दवद्वाक्शब्दस्य साक्षात्परपक्षसाधकत्वात् पृथिव्यादिशब्दवद्विष्णुलिङ्गोपेतत्वाभावेन छन्दस्त्वे तद्बाधकत्वाभावाच्च समन्वेतव्यशब्दसमकक्षतयोपादानम् ॥ अत एव पृथिव्यादिशब्दानामप्युपादानमत्र सम्भवदप्युल्लंघ्याग्रमादिपदेन कृतमिति ज्ञेयम् । **आदिपदमित्यनुषङ्ग** इति ॥ इदं चाधिकरणान्तरेप्येतन्न्यायस्यानुसन्धेयत्वं च सूचयतीत्येतत्पाठाभिप्रायेण । तेन हिशब्देनैवास्यार्थस्याभिधानादादिपदानुषङ्गोऽनर्थक इति चोद्यं परिहृतं भवति । चशब्दरहितहिशब्देनेत्येतच्छिरस्कपाठस्य भावबोध उपादानान्न विरोधः । एवं चात्र पाठे चेतोर्पणार्थं हीति भाष्यगतहिशब्दो नेति प्रतिज्ञार्थं प्रति चेतोर्पणनिगदादिति सौत्रपञ्चम्युक्तहेतुत्ववाची । तथाहीतिशब्दस्तु भाष्योदाहृतस्मृतिद्योतक इति द्रष्टव्यम् । **आदिपदेनेति ॥** सर्वलोकाभिधो ह्येष इति भाष्योदाहृतस्मृत्यनुरोधेनापि पृथिव्यादेः पृथग्ग्रहणमिति द्रष्टव्यम् ॥ छ ॥

॥ इति वाक्यार्थमञ्जर्यां गायत्र्यधिकरणं सम्पूर्णम् ॥

ಪರಿಪೂರ್ಣಚಂದ್ರಿಕಾ

## ಸಾರ

ಅದ್ವೈತಿಗಳು 'ವಿಶ್ವತಃ ಪೃಷ್ಠೇಷು' ಎಂಬ ಶ್ರುತಿಯಲ್ಲಿರುವ ವಿಶ್ವಶಬ್ದದ ಅರ್ಥವನ್ನು ಮೊಟಕು-ಗೊಳಿಸಿದ್ದಾರೆ. ಆದ್ದರಿಂದ 'ವಿಶ್ವತಃ' ಅಥವಾ 'ಸರ್ವತಃ' ಎಂಬ ಎರಡು ಪದಗಳಲ್ಲಿ ಒಂದನ್ನು ವ್ಯರ್ಥವೆಂದು ತಾವೇ ಒಪ್ಪಿಕೊಂಡಂತಾಗಿದೆ. ಈ ವೈಯ್ಯರ್ಥ್ಯದೋಷವು ರಾಮಾನುಜರಿಗೂ ತಪ್ಪಿದ್ದಲ್ಲ. ರಾಮಾನುಜರು ವಿಶ್ವಶಬ್ದಕ್ಕೆ ಕಾರ್ಯವೆಂದು ಸರ್ವಶಬ್ದಕ್ಕೆ ಕಾರಣವೆಂದು ಅರ್ಥೈಸುತ್ತಾರೆ.

ಇವರ ವಾದದಲ್ಲಿಯೂ ಹುರುಳಿಲ್ಲ. ಏಕೆಂದರೆ 'ಸ ಇದಂ ಸರ್ವಮಸೃಜತ' ಎಂಬಲ್ಲಿ ಸರ್ವಶಬ್ದವನ್ನು ಕಾರ್ಯವೆಂಬರ್ಥದಲ್ಲಿ ಪ್ರಯೋಗಿಸಲಾಗಿದೆ. 'ಪರಿಶೇಷಾತ್' ವಿಶ್ವಶಬ್ದವು ಕಾರಣಪರವಾಗುತ್ತದೆ; ಇದಕ್ಕೆ ವಿರುದ್ಧವಾಗಿ ರಾಮಾನುಜರಿಗೆ ಅರ್ಥೈಸಲಾಗದು. ಮತ್ತು ವಿಶ್ವಶಬ್ದಕ್ಕೆ ಕಾರ್ಯವೆಂಬರ್ಥವನ್ನು ಹೇಳಿದರೆ ವಿಶ್ವತಃ ಪರಮಾನ್ನಿತ್ಯಂ ಎಂಬಲ್ಲಿಯೂ ಕೇವಲ ಕಾರ್ಯವೆಂದೇ ವ್ಯಾಖ್ಯಾನಿಸಬೇಕಾದೀತು. ಹೀಗೆ ವಿಚಾರಮಾಡಿದಾಗ ಶ್ರುತಿಸೂತ್ರಗಳಿಗೆ ಪರರು ಮಾಡಿದ ವ್ಯಾಖ್ಯಾನವು ಅತ್ಯಂತ ಹೇಯವೆಂದು ತಿಳಿಯುತ್ತದೆ. ಬುಭುತ್ಸುಗಳು ನಿರ್ದುಷ್ಟವಾದ ಆಚಾರ್ಯರ ಭಾಷ್ಯದಿಂದಲೇ ಶ್ರುತಿಸೂತ್ರಗಳ ಅರ್ಥವನ್ನು ತಿಳಿದುಕೊಳ್ಳಬೇಕು.

**ಇಲ್ಲಿಗೆ ತಾತ್ಪರ್ಯಚಂದ್ರಿಕಾ ಸಾರದಲ್ಲಿ ಗಾಯತ್ರ್ಯಧಿಕರಣವು ಮುಗಿಯಿತು**

**॥ಶ್ರೀಕೃಷ್ಣಾರ್ಪಣಮಸ್ತು॥**

# ೦೧೧-ಗಾಯತ್ರ್ಯಧಿಕರಣ

ಭಾಗ -೩

ನ್ಯಾಯವಿವರಣ, ನ್ಯಾಯವಿವರಣಟೀಕಾ,
ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿಃ,
ಸೂತ್ರಾರ್ಥರತ್ನಾವಳಿಃ

# न्यायविवरणम्

## श्री जयतीर्थविरचिता न्यायविवरणपञ्चिका

**न्यायविवरणम् – अधिभूताऽध्यात्माऽधिवेदगतानामपि शब्दानामचेतनत्व-जीवान्वयव्यतिरेकित्वनित्यत्वेषु विद्यमानेष्वपि भगवद् विषयत्वमेवाऽनन्यथासिद्धलिङ्गैः ॥**

ಭೂತಪದಾರ್ಥಗಳಲ್ಲಿ ಪ್ರಸಿದ್ಧವಾದ ಆಕಾಶ, ಪೃಥ್ವಿ ಮೊದಲಾದ ಅಧಿಭೂತಶಬ್ದಗಳು, ಇಂದ್ರಿಯ ಪ್ರಾಣ ಶರೀರ ಮೊದಲಾದವುಗಳಲ್ಲಿ ಪ್ರಸಿದ್ಧವಾದ ಚಕ್ಷುರಾದಿ ಅಧ್ಯಾತ್ಮ(ಆಧ್ಯಾತ್ಮಿಕ)ಶಬ್ದಗಳು, ವೇದ-ಗಳಲ್ಲಿ ಪ್ರಸಿದ್ಧವಾದ ಗಾಯತ್ರೀ, ಉಷ್ಣಿಕ್ ಮೊದಲಾದ ಅಧಿವೇದಗತಶಬ್ದಗಳಿಗೆ ಅಚೇತನತ್ವ, ಜೀವಾನ್ವಯವ್ಯತಿರೇಕವತ್ವ, ನಿತ್ಯತ್ವಗಳು ಕ್ರಮವಾಗಿ ಪೂರ್ವಪಕ್ಷನ್ಯಾಯಗಳಾಗಿವೆ. ಈ ಪೂರ್ವಪಕ್ಷ-ನ್ಯಾಯಗಳಂತೆ ಅಚೇತನಾದಿಪದಾರ್ಥಗಳೇ ಪ್ರತಿಪಾದ್ಯಗಳಾಗುತ್ತವೆ ಹೊರತು ವಿಷ್ಣುವಲ್ಲವೆಂದು ಪೂರ್ವಪಕ್ಷ ಪ್ರಾಪ್ತವಾಗುತ್ತದೆ.

ಆದರೆ ಪರೋವರೀಯಸ್ತ್ವ, ಶ್ರೀಲಕ್ಷ್ಮೀಪತಿತ್ವ, ಗಾನತ್ರಾಣಕರ್ತೃತ್ವ ಮೊದಲಾದವು ಕ್ರಮವಾಗಿ ಸಿದ್ಧಾಂತಲಿಂಗಗಳೆನಿಸಿವೆ. ಈ ಲಿಂಗಗಳು ವಿಷ್ಣುವಿನಲ್ಲಿ ಅನನ್ಯಥಾಸಿದ್ಧಗಳಾಗಿವೆ. ಆದ್ದರಿಂದ ಆಕಾಶ, ಪ್ರಾಣ, ಗಾಯತ್ರೀ ಮೊದಲಾದ ಶಬ್ದಗಳಿಂದ ವಿಷ್ಣುವೇ ಮುಖ್ಯವಾಗಿ ಪ್ರತಿಪಾದ್ಯನಾಗುತ್ತಾನೆ.

**'एतावानस्य महिमा ततो ज्यायांश्च पुरुषः' इत्यादिशब्दसहितलिङ्गैश्च । सन्दिग्धश्रुतिलिङ्गाभ्याम् उक्ताभ्यामपि असन्दिग्धयोः केवलयोरपि बलवत्वात् ॥**

'ಏತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪುರುಷಃ' ಇತ್ಯಾದಿ ಪುರುಷಸೂಕ್ತದಲ್ಲಿ ಹೇಳಲ್ಪಟ್ಟ ಶ್ರುತಿಸಹಿತವಾದ ಲಿಂಗದಿಂದಲೂ ಸಹ ಗಾಯತ್ರ್ಯಾದಿಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ. ಆಕಾಶಪ್ರಾಣಗಾಯತ್ರೀಶ್ರುತಿಗಳು ಆಕಾಶಾದಿಭೂತವಾಚಕಗಳೂ ಆಗಿವೆ; ಭಗವದ್ವಾಚಕಗಳೂ ಆಗಿವೆ. ಆದ್ದರಿಂದ ಸಂದಿಗ್ಧವೆನಿಸಿವೆ. ಅದರಂತೆ ಅಚೇತನತ್ವಾದಿಲಿಂಗಗಳೂ ಸಹ ಸಂದಿಗ್ಧಗಳೇ ಆಗಿವೆ. ಹೀಗೆ ಪೂರ್ವಪಕ್ಷದಲ್ಲಿ ಹೇಳಲ್ಪಟ್ಟ ಶ್ರುತಿಲಿಂಗಗಳು ಸಂದಿಗ್ಧಗಳಾದ್ದರಿಂದ ದುರ್ಬಲಗಳಾಗಿವೆ. ಆದರೆ ಪರೋವರೀಯಸ್ತ್ವಾದಿಲಿಂಗಗಳು ಪುರುಷಸೂಕ್ತ ಮೊದಲಾದ ಶ್ರುತಿಗಳು ವಿಷ್ಣುವನ್ನು ಮಾತ್ರ ಪ್ರತಿ-ಪಾದಿಸುವವುಗಳಾದ್ದರಿಂದ ಅಸಂದಿಗ್ಧಗಳಾಗಿವೆ. ಸಂದಿಗ್ಧವಾದ ಶ್ರುತಿಲಿಂಗಗಳಿಗಿಂತಲೂ ಅಸಂದಿಗ್ಧವಾದ ಕೇವಲ ಶ್ರುತಿಲಿಂಗಗಳಿಗೂ ಪ್ರಾಬಲ್ಯವಿರುತ್ತದೆ. ಅಂದರೆ ಸಾವಕಾಶವಾದ ಅನೇಕಶ್ರುತಿಲಿಂಗಗಳಿಗಿಂತಲೂ ನಿರವಕಾಶವಾದ ಒಂದೇ ಶ್ರುತಿ, ಅಥವಾ ಒಂದೇ ಲಿಂಗವು ಪ್ರಬಲವಾಗಿರುತ್ತದೆಂದು ಅಭಿಪ್ರಾಯ.

**न्यायविवरणपञ्चिका – ॐ आकाशस्तल्लिङ्गात् ॐ ॥ ॐ अत एव प्राणः ॐ ॥ ॐ ज्योतिश्चरणाऽभिधानात् ॐ ॥ ॐ छन्दोऽभिधानान्नेति चेन्न, तथा**

**चेतोऽर्पणनिगदात्तथा हि दर्शनम् ॐ ॥ एतानि चत्वार्यतिदेशाधिकरणानि । अत्र, पूर्वपक्षेऽधिकाऽऽशङ्का दर्शनीया । ज्योतिरधिकरणे तु, भाष्यादेव साधिता, यदाह – ''अग्निसूक्तत्वा''दिति । अतस्तद्विहायाऽन्यत्र भाष्याऽऽद्यनवगताऽधिकाशङ्काप्रदर्शनेन लाघवायैकोक्त्या न्यायविवरणं क्रियते ।**

ಓಂ ಆಕಾಶಸ್ತಲ್ಲಿಂಗಾತ್ ಓಂ । ಓಂ ಅತ ಏವ ಪ್ರಾಣಃ ಓಂ । ಓಂ ಜ್ಯೋತಿಶ್ಚರಣಾಭಿಧಾನಾತ್ ಓಂ । ಓಂ ಛಂದೋಽಭಿಧಾನಾನ್ನೇತಿ ಚೇನ್ನ ತಥಾ ಚೇತೋಽರ್ಪಣನಿಗದಾತ್ ತಥಾ ಹಿ ದರ್ಶನಮ್ ಓಂ ॥ ಈ ನಾಲ್ಕೂ ಅತಿದೇಶಾಧಿಕರಣಗಳೆನಿಸಿವೆ.

ಈ ನಾಲ್ಕರ ಪೂರ್ವಪಕ್ಷದಲ್ಲಿ ಅಧಿಕಾಶಂಕೆಯನ್ನು ತೋರಿಸಬೇಕು. ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯವನ್ನೇ ಈ ನಾಲ್ಕು ಅಧಿಕರಣಗಳಲ್ಲಿ ಅತಿದೇಶ ಮಾಡಬೇಕು. ಆದ್ದರಿಂದ ಪೂರ್ವಪಕ್ಷದಲ್ಲಿ ಅಧಿಕಾಶಂಕೆಯನ್ನು ತೋರಿಸಿದರೆ ಸಾಕು. ಆದರೆ ಜ್ಯೋತಿರಧಿಕರಣದ ಪೂರ್ವಪಕ್ಷನ್ಯಾಯವನ್ನು ಭಾಷ್ಯ-ದಲ್ಲಿಯೇ 'ಅಗ್ನಿಸೂಕ್ತಸ್ಥತ್ವಾತ್' ಎಂದು ಹೇಳಿದ್ದಾರೆ. ಆದ್ದರಿಂದ ಜ್ಯೋತಿರಧಿಕರಣದ ಪೂರ್ವಪಕ್ಷ-ನ್ಯಾಯವನ್ನು ಬಿಟ್ಟು, ಭಾಷ್ಯದಿಂದ ತಿಳಿಯದ ಉಳಿದ ಮೂರು ಅಧಿಕರಣಗಳ ಅಧಿಕಾಶಂಕೆಯನ್ನು ತೋರಿಸಲು ಹೊರಟಿದ್ದಾರೆ. ಪ್ರತ್ಯೇಕವಾಗಿ ತೋರಿಸುವುದಕ್ಕಿಂತ ಒಟ್ಟಿಗೆ ತೋರಿಸುವುದರಲ್ಲಿ ಲಾಘವವಿದೆ ಎಂದಭಿಪ್ರಾಯದಿಂದ ಒಂದೇ ಮಾತಿನಲ್ಲಿ ನ್ಯಾಯವಿವರಣಕಾರರು ನಾಲ್ಕು ಅಧಿಕರಣಗಳನ್ನು ಜೋಡಿಸಿದ್ದಾರೆ.

**न्यायविवरणपञ्चिका** – तत्र तावत्, आकाशो भूताकाश एव भवेत् । आकाशशब्दस्य, तत्र योगरूढिभ्यां प्रवृत्तत्वात् । नच पूर्ववत्सावकाशत्वादिन्यायः भगवद्विषयस्य निरवकाशप्रमाणस्याऽभावात् । नाऽपि मुख्यत्वाऽऽदिन्यायः; इन्द्राऽऽदयो हि चेतनाः परमैश्वर्याऽऽदिशब्दगतया आगन्तुकया वर्षणादिकया चेष्टया प्रवृत्तिनिमित्तेनेन्द्रादिशब्दवाच्याः । सम्भवति चेतनानां चेष्टानां परायत्तत्वं, राजपुरुषादिषु दर्शनात् । आकाशस्त्वचेतनः; तदीयं चाऽऽकाशशब्दप्रवृत्ति-निमित्तमवकाशत्वाऽऽदिकं स्वभाव एव; नत्वागन्तुकम् । तत्कथं पराऽधीनं स्या-दिति ॥ तथा, प्राणोऽपि मुख्यप्राण एव; प्राणशब्दस्य तत्र प्रसिद्धेः । नच निरवकाशत्वं बाधकमस्ति, नाऽपि प्राणशब्दप्रवृत्तिनिमित्तस्य भगवदधीनत्वम्; यद्धि यत्र न सम्भवति तत्तत्र दृश्यमानमन्याऽधीनं कल्प्यते । सम्भवति च तन्मुख्ये, जीवनस्य तदन्वयव्यतिरेकाऽनुविधायित्वात् । तत्प्रमाणकत्वाच्च हेतुहेतुमद् भावस्येति ॥

**एवं, गायत्र्यपि वेदविशेष एव । तच्छब्दस्य तत्र प्रसिद्धत्वात्, बाधकाऽभावाच्च । नच गायत्रीशब्दप्रवृत्तिनिमित्तस्य वाचकत्वाऽपरपर्यायस्य गानस्याऽन्याऽधीनता सम्भवति; येन मुख्याऽमुख्यन्यायाऽवकाशः । वाचकत्वस्य शब्दस्वभावत्वात् । आगन्तुकस्यैव पराऽधीनत्वात् । न चाऽऽकाशन्यायः; तस्योत्पत्तिमतोऽवकाश-त्वसहितस्यैव पराऽयत्तत्वोपपत्त्या तदुपपत्तेः । वेदस्य तु नित्यत्वेनाऽनादित्वात् । न चाकाशो नित्यः, भूताकाशस्य तत्र पूर्वपक्षितत्वात् । तच्च, "सर्वाणि ह वा इमानि भूतानि" इति भूतोत्पत्तिस्थितिलयकारणत्वभूतज्यायस्त्वलिङ्गादवगम्यते । भूतानि च महाभूतान्येव; "अस्य लोकस्य का गतिरित्याकाश इति होवाच" इत्युक्तपृथिवी-गतित्वोपपादनार्थत्वादिति ॥**

ನ್ಯಾಯವಿವರಣದ ವಾಕ್ಯ ಹೀಗಿದೆ -- ಆಕಾಶಶಬ್ದವು ಭೂತಾಕಾಶವನ್ನೇ ಪ್ರತಿಪಾದಿಸುತ್ತದೆ. ಏಕೆಂದರೆ ಭೂತಾಕಾಶದಲ್ಲಿ ಯೋಗ ಹಾಗೂ ರೂಢಿ ಎರಡೂ ಸಹ ಪ್ರಸಿದ್ಧವಾಗಿದೆ. ಹಿಂದಿನ ಅಧಿಕರಣದ ಸಾವಕಾಶತ್ವಾದಿನ್ಯಾಯವನ್ನು ಇಲ್ಲಿ ಅನ್ವಯಿಸಲಾಗದು. ಏಕೆಂದರೆ ಭಗವದ್ವಿಷಯಕವಾದ ನಿರವಕಾಶ-ಪ್ರಮಾಣ ಕಾಣಸುತ್ತಿಲ್ಲ. ಇನ್ನು ಭಗವಂತನಲ್ಲಿ ಮುಖ್ಯವಾಚ್ಯತ್ವವನ್ನು ಇತರ ಪದಾರ್ಥಗಳಿಗೆ ಅಮುಖ್ಯ-ವಾಚ್ಯತ್ವವನ್ನು ಹೇಳಬೇಕು. ಆದರೆ ಇಂದ್ರಾದಿ ಚೇತನರಲ್ಲಿ ಪರಮೈಶ್ವರ್ಯವೆಂಬ ಇಂದ್ರಶಬ್ದದ ಪ್ರವೃತ್ತಿನಿಮಿತ್ತವು ಸ್ಫುಟವಾಗಿ ಕಾಣಸುತ್ತಿದೆ. ಆಗಂತುಕವಾದ ಮಳೆ ಸುರಿಸುವಿಕೆ ಮೊದಲಾದ ಚೇಷ್ಟೆಗಳಿಂದ ಪರಮೈಶ್ವರ್ಯವೆಂಬ ಪ್ರವೃತ್ತಿನಿಮಿತ್ತವು ದೇವೇಂದ್ರನಲ್ಲಿದೆ. ಅಂತಹ ದೇವೇಂದ್ರನೇ ಇಂದ್ರಶಬ್ದವಾಚ್ಯ-ನಾಗುತ್ತಾನೆ.

ಚೇತನನಲ್ಲಿರುವ ಚೇಷ್ಟೆಯು ಪರಾಧೀನವಾಗಬಹುದು. ರಾಜಪುರುಷಾದಿಗಳಲ್ಲಿ ಹಾಗೆ ಪರಾಧೀನ-ವಾಗಿರುವಿಕೆಯು ಕಂಡಿದೆ. ಆದರೆ ಅಚೇತನವಾದ ಆಕಾಶದಲ್ಲಿರುವ ಆಕಾಶತ್ವವೆಂಬ ಪ್ರವೃತ್ತಿನಿಮಿತ್ತವು ಭಗವದಧೀನವೆಂದು ಹೇಳಲಾಗದು. ಏಕೆಂದರೆ, ಸ್ವಾಭಾವಿಕವಾಗಿಯೇ ಭೂತಾಕಾಶದಲ್ಲಿ ಅವಕಾಶವಿ-ರುವುದು ಸಿದ್ಧವಾಗಿದೆ. ಹೊರತು ಆಗಂತುಕವಾಗಿ ಇರುವುದಿಲ್ಲ. ಹೀಗಿರುವಾಗ ಪರಾಧೀನವೆಂದು ಹೇಗೆ ಹೇಳುತ್ತೀರಿ? ಆದ್ದರಿಂದ ಆಕಾಶಶಬ್ದದಿಂದ ಭೂತಾಕಾಶವೇ ಪ್ರಸಿದ್ಧವಾಗಬೇಕು.

ಇದರಂತೆ ಪ್ರಾಣಶಬ್ದದಿಂದಲೂ ಮುಖ್ಯಪ್ರಾಣನೇ ಪ್ರತಿಪಾದ್ಯನಾಗುತ್ತಾನೆ. ಏಕೆಂದರೆ ಪ್ರಾಣಶಬ್ದದ ರೂಢಿಯು ಮುಖ್ಯಪ್ರಾಣನಲ್ಲಿ ಪ್ರಸಿದ್ಧವಾಗಿದೆ. ನಿರವಕಾಶತ್ವವೆಂಬ ಬಾಧಕವನ್ನೂ ಸಹ ಇಲ್ಲಿ ಹೇಳಲಾಗದು. ಮತ್ತು ಪ್ರಾಣಶಬ್ದ ಪ್ರವೃತ್ತಿನಿಮಿತ್ತವು ಭಗವದಧೀನವೂ ಅಲ್ಲ. ಏಕೆಂದರೆ, 'ಯಾವುದು ಎಲ್ಲಿ ಕೂಡುವುದಿಲ್ಲವೋ ಅದನ್ನು ಅಲ್ಲಿ ಅನ್ಯಾಧೀನವೆಂದು ಕಲ್ಪಿಸಬೇಕು' ಎಂಬ ವ್ಯಾಪ್ತಿಯಂತೆ ಪ್ರಾಣಶಬ್ದಪ್ರವೃತ್ತಿನಿಮಿತ್ತವೆನಿಸಿದ ಜೀವನಹೇತುತ್ವವು ಮುಖ್ಯಪ್ರಾಣನಲ್ಲಿ ಕೂಡದಿದ್ದರೆ ಮಾತ್ರ ವಿಷ್ಣುವಿನ ಅಧೀನವೆಂದು ಒಪ್ಪಬೇಕಾಗುತ್ತದೆ. ಆದರೆ ಮುಖ್ಯಪ್ರಾಣನಲ್ಲಿ ಜೀವನಹೇತುತ್ವವು ಕೂಡುತ್ತಿರುವಾಗ

ವಿಷ್ಣುವಿನಲ್ಲಿ ಒಪ್ಪಲು ಸಾಧ್ಯವಿಲ್ಲ. ಹೀಗೆ ಅನ್ವಯವ್ಯತಿರೇಕಾನುವಿಧಾಯಿತ್ವವೆಂಬ ಪ್ರಮಾಣದಿಂದ ಕೂಡಿರುವುದರಿಂದ ಹೇತುಹೇತುಮದ್ಭಾವವು ಸಪ್ರಮಾಣವಾಗುತ್ತದೆ. ಆದ್ದರಿಂದ ಪ್ರಾಣಶಬ್ದದಿಂದ ಮುಖ್ಯಪ್ರಾಣನೇ ಪ್ರತಿಪಾದ್ಯನು.

ಇದರಂತೆ ಗಾಯತ್ರೀಶಬ್ದವೂ ಸಹ ವೇದವಿಶೇಷವಾದ ಗಾಯತ್ರೀಛಂದಸ್ಸನ್ನೇ ಹೇಳುತ್ತದೆ. ಏಕೆಂದರೆ ಗಾಯತ್ರೀಶಬ್ದವು ಅಲ್ಲಿಯೇ ಹೆಚ್ಚು ಪ್ರಸಿದ್ಧ. ಮತ್ತು ಆ ಅರ್ಥದಲ್ಲಿ ಯಾವುದೇ ಬಾಧಕವೂ ಇರುವುದಿಲ್ಲ. ಗಾಯತ್ರೀಶಬ್ದಪ್ರವೃತ್ತಿನಿಮಿತ್ತವೆನಿಸಿದ ವಾಚಕತ್ವವನ್ನೇ ಗಾನ ಎನ್ನುತ್ತಾರೆ. ಇದು ಅನ್ಯಾಧೀನವಾಗುವುದಿಲ್ಲ. ಹಾಗಾಗಿದ್ದಲ್ಲಿ ಮುಖ್ಯಾಮುಖ್ಯನ್ಯಾಯವನ್ನು ಅನುಸರಿಸಬಹುದಿತ್ತು. ಏಕೆ ಅನ್ಯಾಧೀನವಾಗುವುದಿಲ್ಲವೆಂದರೆ ವಾಚಕತ್ವವು ಶಬ್ದದ ಸ್ವಾಭಾವಿಕಗುಣ. ಆಗಂತುಕವಾದದ್ದಷ್ಟೇ ಅನ್ಯಾಧೀನವಾಗುತ್ತದೆ. ಆಕಾಶಾಧಿಕರಣ-ನ್ಯಾಯದಿಂದಲೂ ಅನ್ಯಾಧೀನವೆನ್ನಲಾಗದು. ಭೂತಾಕಾಶಕ್ಕೆ ಉತ್ಪತ್ತಿ ಇರುವುದರಿಂದ ಅವಕಾಶತ್ವದಿಂದ ಕೂಡಿರುವ ಆಕಾಶಕ್ಕೆ ಅನ್ಯಾಧೀನತ್ವವನ್ನು ಹೇಳಬಹುದು. ಆದರೆ ವೇದವು ನಿತ್ಯವಾದ್ದರಿಂದ ಅನಾದಿಯಾಗಿದೆ. ಆದರೆ ಆಕಾಶವು ನಿತ್ಯವಾಗಿಲ್ಲ. ಆದ್ದರಿಂದ ಅನಾದಿಯೂ ಆಗುವುದಿಲ್ಲ. ಭೂತವಾದ ಆಕಾಶವು ಪೂರ್ವಪಕ್ಷಕ್ಕೆ ವಿಷಯವಾಗಿದೆ. ಈ ವಿಷಯವು 'ಸರ್ವಾಣಿ ಹ ವಾ ಇಮಾನಿ ಭೂತಾನಿ' ಎಂಬ ಶ್ರುತಿಯಿಂದ 'ಭೂತೋತ್ಪತ್ತಿಸ್ಥಿತಿಲಯಕಾರಣತ್ವ' ಮತ್ತು 'ಭೂತಜ್ಯಾಯಸ್ತ್ವ' ಎಂಬ ಲಿಂಗದಿಂದ ತಿಳಿಯುತ್ತಿದೆ. ಭೂತವೆಂದರೆ ಮಹಾಭೂತವೆಂದೇ ಅರ್ಥ. ಏಕೆಂದರೆ 'ಅಸ್ಯ ಲೋಕಸ್ಯ ಕಾ ಗತಿಃ । ಆಕಾಶ ಇತಿ ಹೋವಾಚ' ಎಂಬುದಾಗಿ ಪೃಥಿವಿಯ ಆಶ್ರಯವನ್ನು ಪ್ರಶ್ನಿಸಿದಾಗ ಆಕಾಶವೆಂದು ಉತ್ತರಿಸಿದ್ದಾರೆ.

(टी) एवं प्राप्ते, प्रतिविधत्ते – अधिभूतेति ॥ अत्र, भूताऽऽकाश-मुख्यप्राणच्छन्दोविशेषेति वक्तव्ये, अधिभूतेत्यादिवचनमाकाशादिशब्दाः सौत्राः, सजातीयोपलक्षणपरा इत्यस्य ज्ञापनार्थम् । एतत्, अधिकरणाऽन्तरेऽपि समानम् । तत्राऽऽकाशशब्दोऽधिभूतगतानां पृथिव्यादिशब्दानामुपलक्षकः; प्राणशब्दोऽध्यात्म-गतानां चक्षुरादिशब्दानाम्, गायत्रीशब्दोऽधिवेदगतानामुष्णिगादिशब्दानाम् ।

अत्र, विभक्त्यर्थेऽधिकरणत्वमात्रेऽव्ययं समस्तम् । ततश्चाऽधिभूतं, भूतेषु इत्यर्थः । आत्मशब्दश्चेन्द्रियप्राणशरीरवचनः । अध्यात्ममात्मनीत्यर्थः । वेदशब्देन सावान्तरभेदा जगत्यादय उच्यन्ते । अधिवेदं वेदेष्वित्यर्थः । सर्वत्र विषयसप्तमी । गतानामवगतानां, प्रसिद्धानाम् । अव्ययीभावद्वन्द्वगर्भः सप्तमीसमासः ।

अथ वाऽधिकर्तव्यप्रधानेऽधिकरणेऽधिशब्दः । तथा चाऽधिभूतं, भूतेषु वर्तमानः । एवमुत्तरत्र । एतच्च शब्दानां विशेषणम् । अव्ययीभावद्वन्द्वगर्भः कर्मधारयश्च समासः ।

यद्वा, अधिभूताऽऽदिशब्दैराकाशादीन्युच्यन्ते । समुदायैकदेशाऽऽश्रयणेनाऽ-

धिकरणाऽधिकर्तव्यतोपपत्तेः । 'गत'शब्दश्च प्राप्त्यर्थो विषयीकारिपरः । अव्ययीभावद्वन्द्वगर्भो द्वितीयासमासः ।

अचेतनत्वादीनां त्रयाणां यथासङ्ख्यं सम्बन्धः । आकाशप्राणगायत्रीणामिति शेषः । जीवो जीवनं, तस्यान्वयव्यतिरेकौ । स्वाऽन्वयव्यतिरेकाभ्यां तत्करत्वमिति यावत् ।

अनन्यथासिद्धलिङ्गैः, परोवरीयस्त्वश्रीलक्ष्मीपतित्वगानत्राणकर्तृत्वाऽऽद्यैर्निश्चीयत इति वाक्यशेषः ।

गायत्र्यधिकरणेऽधिकमपि प्रमाणमाह – **तावानस्येति** ॥ पुरुषश्रुतिसहितपुरुषसूक्तोक्तत्वभूतपादत्वाऽऽदिलिङ्गैश्चेत्यर्थः । न केवलं लिङ्गैः, श्रुत्या चेति भावः । अत्राऽप्यनन्यथासिद्धत्वं ग्राह्यम् । तथाऽपि कथं निर्णय इत्यत आह – **सन्दिग्धेति** ॥ आकाशप्राणगायत्रीश्रुतयस्तावत्, परमेश्वरेऽपि वाचकत्वशक्तियुक्तत्वेन, अत्र किम्परा इति सन्दिग्धाः, अचेतनत्वादीनि च लिङ्गानि, अनुव्याख्यानोक्तरीत्या न मुख्याऽमुख्यन्यायविघातायाऽलमिति सन्दिग्धान्युच्यन्ते । परोवरीयस्त्वलिङ्गानि, पुरुषश्रुतिश्चेत्येतानि भगवदेकनिष्ठत्वादसन्दिग्धानि । सावकाशेभ्योऽनेकेभ्योऽपि निरवकाशस्यैकस्यैव प्राबल्यान्निरवकाशद्वितीयश्रुतिसहितस्य सुतरां बलवत्त्वात् । मुख्याऽमुख्यन्यायस्याऽप्यनपाकृत्वाद्युक्तो निर्णयः । एतेनाऽनन्यथासिद्धेत्युक्तस्य प्रयोजनं दर्शितम् । केवलयोः, श्रुतिलिङ्गयोः ॥ ८-९-१०-११ ॥

॥ इति श्रीजयतीर्थभिक्षुविरचितायां न्यायविवरणपञ्चिकायाम्
आकाशप्राणज्योतिगायत्र्यधिकरणानि ॥

ಹೀಗೆ ಆಕಾಶ, ಪ್ರಾಣ ಮತ್ತು ಗಾಯತ್ರೀಶಬ್ದಗಳಿಂದ ಭೂತಾಕಾಶ, ಮುಖ್ಯಪ್ರಾಣ, ಛಂದೋವಿಶೇಷಗಳೇ ಪ್ರತಿಪಾದ್ಯವಾಗುತ್ತವೆಂದು ಪೂರ್ವಪಕ್ಷ. ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ "ಅಧಿಭೂತ"ವೆಂಬ ನ್ಯಾಯವಿವರಣವಾಕ್ಯವು ಹೊರಟಿದೆ. ವಸ್ತುತಃ ನ್ಯಾಯವಿವರಣದಲ್ಲಿ ಭೂತಾಕಾಶ, ಮುಖ್ಯಪ್ರಾಣ, ಛಂದೋವಿಶೇಷವೆಂದು ಹೇಳಬೇಕಿತ್ತು. ಆದರೆ ಶ್ರೀಮದಾಚಾರ್ಯರು ಅಧಿಭೂತ, ಅಧ್ಯಾತ್ಮ, ಅಧಿವೇದ ಎಂದು ಹೇಳಿದ್ದಾರೆ. ಇದಕ್ಕೆ ಕಾರಣವೇನೆಂದರೆ, ಸೂತ್ರದಲ್ಲಿರುವ ಆಕಾಶಾದಿಶಬ್ದಗಳಿಂದ ಸಜಾತೀಯವಾದ ಬೇರೆ ಶಬ್ದಗಳನ್ನೂ ಸಹ ಉಪಲಕ್ಷಣಯಾ ವಿವಕ್ಷಿಸಬೇಕೆಂದು ತಿಳಿಸುವುದು. ಈ ವಿಷಯವನ್ನು ಬೇರೆ ಅಧಿಕರಣಗಳಲ್ಲಿಯೂ ತಿಳಿಯಬೇಕು. ಆದ್ದರಿಂದ ಸೂತ್ರದಲ್ಲಿರುವ

ಆಕಾಶಶಬ್ದದಿಂದ ಅಧಿಭೂತಗತವಾದ ಪೃಥ್ವಿ, ಅಪ್ ಮೊದಲಾದ ಶಬ್ದಗಳನ್ನು ಉಪಲಕ್ಷಣಯಾ ಇಟ್ಟುಕೊಳ್ಳಬೇಕು. ಅದರಂತೆ ಪ್ರಾಣಶಬ್ದದಿಂದ ಅಧ್ಯಾತ್ಮಗತವಾದ ಚಕ್ಷುರಾದಿ ಶಬ್ದಗಳನ್ನು, ಗಾಯತ್ರೀಶಬ್ದದಿಂದ ಅಧಿವೇದಗತವಾದ ಉಷ್ಣಿಕ್, ಅನುಷ್ಟುಪ್ ಮೊದಲಾದ ಛಂದಸ್ಸುಗಳನ್ನು ಉಪಲಕ್ಷಣಯಾ ಇಟ್ಟುಕೊಳ್ಳಬೇಕು.

ಇಲ್ಲಿ ಅಧಿಭೂತ ಇತ್ಯಾದಿಶಬ್ದಗಳು ವಿಭಕ್ತ್ಯರ್ಥವಾದ ಅಧಿಕರಣಮಾತ್ರದಲ್ಲಿ ಇರುವ ಅವ್ಯಯವೆನಿಸಿದೆ. ಆದ್ದರಿಂದ ಅಧಿಭೂತಂ ಎಂದರೆ, ಭೂತೇಷು (ಭೂತಗಳಲ್ಲಿ) ಎಂದಷ್ಟೇ ಅರ್ಥ. ಆತ್ಮಶಬ್ದದಿಂದ ಇಂದ್ರಿಯ ಪ್ರಾಣ ಶರೀರಗಳನ್ನು ವಿವಕ್ಷಿಸಬೇಕು. ವಿಭಕ್ತ್ಯರ್ಥಪ್ರತಿನಿರೂಪಕವಾದ ಅಧ್ಯಾತ್ಮಪದಕ್ಕೆ ಆತ್ಮನಿ ಆತ್ಮನಲ್ಲಿ ಎಂದರ್ಥ. ವೇದಶಬ್ದದಿಂದ ಅವಾಂತರಭೇದವೆನಿಸಿದ ಜಗತಿ ಮೊದಲಾದ ಛಂದಸ್ಸುಗಳನ್ನು ವಿವಕ್ಷಿಸಬೇಕು. ಅಧಿವೇದ ಎಂಬ ಪದಕ್ಕೂ ಹಿಂದಿನಂತೆ ವೇದೇಷು(ವೇದಗಳಲ್ಲಿ) ಎಂದರ್ಥ. ಮೂರೂ ಕಡೆಯಲ್ಲಿಯೂ ವಿಷಯಾರ್ಥದಲ್ಲಿ ಸಪ್ತಮಿಯು ಇರುತ್ತದೆ. 'ಗತಾನಾಂ' ಎಂಬ ಪದಕ್ಕೆ 'ಅವಗತಾನಾಂ' ಎಂದರೆ 'ಪ್ರಸಿದ್ಧವಾದ' ಎಂದರ್ಥ. 'ಅಧಿಭೂತಅಧ್ಯಾತ್ಮಅಧಿವೇದಗತಾನಾಂ' ಎಂಬ ಪದದಲ್ಲಿ ಅವ್ಯಯೀಭಾವ ದ್ವಂದ್ವಗಳಿಂದ ಗರ್ಭಿತವಾದ ಸಪ್ತಮೀ ಸಮಾಸವನ್ನು ಮಾಡಬೇಕು. ಅದು ಹೀಗೆ— ಭೂತೇಷು ಅಧಿಭೂತಂ, ಆತ್ಮಸು ಅಧ್ಯಾತ್ಮಮ್, ವೇದೇಷು ಅಧಿವೇದಂ (ಅವ್ಯಯೀಭಾವ) ಅಧಿಭೂತಂ ಚ ಅಧ್ಯಾತ್ಮಂ ಚ ಅಧಿವೇದಂ ಚ ಅಧಿಭೂತಅಧ್ಯಾತ್ಮಅಧಿವೇದಾನಿ.(ದ್ವಂದ್ವ) ಅಧಿಭೂತಅಧ್ಯಾತ್ಮಅಧಿವೇದೇಷು ಗತಃ ಅಧಿಭೂತಅಧ್ಯಾತ್ಮಅಧಿವೇದಗತಾಃ, ತೇಷಾಂ ಅಧಿಭೂತಅಧ್ಯಾತ್ಮಅಧಿವೇದಗತಾನಾಂ (ಸಪ್ತಮೀ ತತ್ಪುರುಷ) ಎಂದು.

ಅಥವಾ, ಅಧಿ ಎಂಬ ಶಬ್ದವು ಅಧಿಕರ್ತವ್ಯಪ್ರಧಾನವಾದ (ಆಧೇಯವಾದ) ಅಧಿಕರಣ ಎಂಬರ್ಥದಲ್ಲಿದೆ. ಆವಾಗ ಅಧಿಭೂತಂ ಎಂದರೆ 'ಭೂತಗಳಲ್ಲಿ ಇರುವ' ಎಂದರ್ಥ. ಇದರಂತೆ ಅಧ್ಯಾತ್ಮ ಎಂದರೆ 'ಆತ್ಮನಲ್ಲಿ ಇರುವ', ಅಧಿವೇದ ಎಂದರೆ 'ವೇದಗಳಲ್ಲಿ ಇರುವ' ಎಂದರ್ಥ. ಇವುಗಳು ಶಬ್ದಾನಾಂ ಎಂಬಲ್ಲಿ ವಿಶೇಷಣಗಳಾಗಿವೆ. ಈ ಪಕ್ಷದಲ್ಲಿ ಅವ್ಯಯೀಭಾವ ದ್ವಂದ್ವಗಳಿಂದ ಗರ್ಭಿತವಾದ ಕರ್ಮಧಾರಯಸಮಾಸವನ್ನು ಮಾಡಬೇಕು -- ಭೂತೇಷು ವರ್ತಮಾನಮ್ ಅಧಿಭೂತಮ್, ಆತ್ಮಸು ವರ್ತಮಾನಂ ಅಧ್ಯಾತ್ಮಮ್, ವೇದೇಷು ವರ್ತಮಾನಮ್ ಅಧಿವೇದಮ್. ಅಧಿಭೂತಂ ಚ ಅಧ್ಯಾತ್ಮಂ ಚ ಅಧಿವೇದಂ ಚ ಅಧಿಭೂತಅಧ್ಯಾತ್ಮಅಧಿವೇದಾನಿ. ಅಧಿಭೂತಅಧ್ಯಾತ್ಮಅಧಿವೇದಾನಿ ಚ ತೇ ಗತಾನಿ ಚ ಅಧಿ ಭೂತಅಧ್ಯಾತ್ಮಅಧಿವೇದಗತಾನಿ ತೇಷಾಂ ಅಧಿಭೂತಅಧ್ಯಾತ್ಮಅಧಿವೇದಗತಾನಾಂ ಎಂದು ಸಮಾಸ.

ಅಥವಾ ಅಧಿಭೂತ ಮೊದಲಾದ ಶಬ್ದಗಳಿಂದ ಆಕಾಶಾದಿಗಳು ಪ್ರತಿಪಾದ್ಯಗಳಾಗಿವೆ. ಸಮುದಾಯದ ಏಕದೇಶವನ್ನು ಆಶ್ರಯಿಸಿದಾಗ ಅಧಿಕರಣಾರ್ಥದಲ್ಲಿ ಅಧಿಕರ್ತವ್ಯತ್ವವು ಉಪಪನ್ನವಾಗುತ್ತದೆ. ಗತಶಬ್ದವು 'ಪ್ರಾಪ್ತಿ' ಎಂಬರ್ಥದಲ್ಲಿದೆ. ವಿಷಯೀಕರಿಸುವಿಕೆ ಎಂದರ್ಥ. ಈ ಪಕ್ಷದಲ್ಲಿ ಅವ್ಯಯೀಭಾವದ್ವಂದ್ವಗಳಿಂದ ಗರ್ಭಿತವಾದ ದ್ವಿತೀಯಾತತ್ಪುರುಷಸಮಾಸವನ್ನು ಮಾಡಬೇಕು. ಅಧಿಭೂತ ಎಂದರೆ 'ಭೂತಗಳ ಸಮುದಾಯದ ಏಕದೇಶವಾದದ್ದು ಆಕಾಶ' ಎಂದರ್ಥ; ಅಧ್ಯಾತ್ಮ ಎಂದರೆ 'ಆತ್ಮನಿಗೆ ಸಂಬಂಧಿಸಿದ

ಪದಾರ್ಥಗಳ ಮಧ್ಯದಲ್ಲಿ ಏಕದೇಶವಾದ ಪ್ರಾಣ' ಎಂದರ್ಥ; ಅಧಿವೇದ ಎಂದರೆ 'ಜಗತೀ ಮೊದಲಾದ ಅನೇಕ ಛಂದಸ್ಸುಗಳ ಸಮುದಾಯದಲ್ಲಿ ಏಕದೇಶವಾದ ಗಾಯತ್ರೀ' ಎಂದರ್ಥ. ಇವುಗಳನ್ನು ವಿಷಯೀಕರಿಸುವ ಶಬ್ದಗಳೆಂದು ತಿಳಿಯಬೇಕು. ಸಮಾಸ ಹೀಗೆ -- ಭೂತೇಷು ವರ್ತಮಾನಃ ಅಧಿಭೂತಮ್, ಆತ್ಮಸು ವರ್ತಮಾನಃ ಅಧ್ಯಾತ್ಮಮ್, ವೇದೇಷು ವರ್ತಮಾನಃ ಅಧಿವೇದಮ್. ಅಧಿಭೂತಂ ಚ ಅಧ್ಯಾತ್ಮಂ ಚ ಅಧಿವೇದಂ ಚ ಅಧಿಭೂತಅಧ್ಯಾತ್ಮಅಧಿವೇದಾನಿ. ಅಧಿಭೂತಅಧ್ಯಾತ್ಮ-ಅಧಿವೇದಾನಿ ಗತಾಃ ಅಧಿಭೂತಾಅಧ್ಯಾತ್ಮಅಧಿವೇದಗತಾಃ ತೇಷಾಂ ಅಧಿಭೂತಅಧ್ಯಾತ್ಮಅಧಿವೇದಗತಾನಾಂ ಎಂದು.

ಅನನ್ಯಥಾಸಿದ್ಧವಾದ ಲಿಂಗಗಳೆಂದರೆ ಪರೋವರೀಯಸ್ತ್ವ, ಶ್ರೀಲಕ್ಷ್ಮೀಪತಿತ್ವ, ಗಾನತ್ರಾಣಕರ್ತೃತ್ವ ಮೊದಲಾದವುಗಳೆಂದರ್ಥ. ಇವುಗಳಿಂದ ವಿಷ್ಣುವೆಂದು ನಿರ್ಣಯಿಸುತ್ತೇವೆ ಎಂದು ವಾಕ್ಯವನ್ನು ಪೂರ್ತಿಮಾಡಬೇಕು. ಗಾಯತ್ರ್ಯಧಿಕರಣದಲ್ಲಿ ಅಧಿಕವಾದ ಸಿದ್ಧಾಂತಲಿಂಗವನ್ನು ಹೇಳುತ್ತಿದ್ದಾರೆ. ''ಏತಾವಾನಸ್ಯ'' ಇತ್ಯಾದಿಯಾಗಿ. ಪುರುಷಶಬ್ದದಿಂದ ಕೂಡಿರುವ ಪುರುಷಸೂಕ್ತೋಕ್ತತ್ವ ಮತ್ತು ಭೂತಪಾದತ್ವ ಮೊದಲಾದ ಲಿಂಗಗಳಿಂದ ಎಂದರ್ಥ. ಕೇವಲ ಲಿಂಗಗಳಿಂದಷ್ಟೇ ಅಲ್ಲದೆ ಶ್ರುತಿಯಿಂದಲೂ ಸಹ ಎಂದು ತಿಳಿಯಬೇಕು. ಅಂದರೆ ಅನನ್ಯಥಾಸಿದ್ಧವಾದ ಲಿಂಗ ಹಾಗೂ ಶ್ರುತಿಗಳಿಂದ ಎಂದರ್ಥ. ಆದರೂ ಹೇಗೆ ನಿರ್ಣಯಿಸುವುದು? ಎಂದರೆ ''ಸಂದಿಗ್ಧ'' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಆಕಾಶ, ಪ್ರಾಣ, ಗಾಯತ್ರೀಶ್ರುತಿಗಳು ಪರಮೇಶ್ವರನಲ್ಲಿಯೂ ಸಹ ವಾಚಕತ್ವಶಕ್ತಿಯನ್ನು ಹೊಂದಿವೆ. ಹೀಗಿರುವಾಗ ಶ್ರುತಿಗಳು ಉಭಯಪ್ರತಿಪಾದಕಗಳಾಗುವುದರಿಂದ ಇದನ್ನೆ ಪ್ರತಿಪಾದಿಸುತ್ತವೆಂದು ನಿರ್ಣಯಿಸಲಾಗದು. ಹೀಗೆ ಶ್ರುತಿಗಳು ಸಂದಿಗ್ಧವಾದಂತೆ ಅಚೇತನತ್ವಾದಿಲಿಂಗಗಳೂ ಸಹ ಸಂದಿಗ್ಧವಾಗಿವೆ. ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಮುಖ್ಯಾಮುಖ್ಯನ್ಯಾಯವನ್ನು ತಿರಸ್ಕರಿಸಲು ಇವುಗಳಿಗೆ ಸಾಮರ್ಥ್ಯವಿಲ್ಲವೆಂದು ತಿಳಿಸಲು ''ಸಂದಿಗ್ಧಾನಿ'' ಎಂದು ಹೇಳಿದ್ದಾರೆ. ಆದರೆ ಪರೋವರೀಯಸ್ತ್ವ ಮೊದಲಾದ ಲಿಂಗಗಳು ಪುರುಷಶ್ರುತಿಗಳು ಭಗವನ್ನಿಷ್ಠವಾದ್ದರಿಂದ ಅಸಂದಿಗ್ಧಗಳಾಗಿವೆ. ಅನೇಕವಾದ ಸಾವಕಾಶಶ್ರುತಿಲಿಂಗಗಳಿಗಿಂತ ನಿರವಕಾಶವಾದ ಶ್ರುತಿ ಅಥವಾ ಲಿಂಗ ಒಂದೇ ಆಗಿದ್ದರೂ ಪ್ರಬಲವಾಗಿರುತ್ತದೆ. ಹೀಗೆ ಹೇಳಿದಾಗ ಮುಖ್ಯಾ-ಮುಖ್ಯನ್ಯಾಯವನ್ನು ತಿರಸ್ಕರಿಸಿದಂತೆಯೂ ಆಗುವುದಿಲ್ಲವಾದ್ದರಿಂದ ಸಿದ್ಧಾಂತನಿರ್ಣಯವು ಸುಲಭ-ವಾಗುತ್ತದೆ. ಹೀಗೆ ಹೇಳಿದ್ದರಿಂದ ಅನನ್ಯಥಾಸಿದ್ಧ ಎಂಬ ಮಾತಿಗೆ ಪ್ರಯೋಜನವನ್ನು ತೋರಿಸಿದಂತಾಯಿತು. ಕೇವಲಯೋಃ ಎಂಬ ಪದಕ್ಕೆ ಶ್ರುತಿಲಿಂಗಗಳು ಎಂದರ್ಥ.

॥ಇಲ್ಲಿಗೆ ಶ್ರೀಜಯತೀರ್ಥಪೂಜ್ಯಚರಣರಿಂದ ವಿರಚಿತವಾದ ನ್ಯಾಯವಿವರಣಟೀಕೆಯಲ್ಲಿ

ಆಕಾಶ,ಪ್ರಾಣ,ಜ್ಯೋತಿ,ಗಾಯತ್ರ್ಯಧಿಕರಣಗಳು ಮುಗಿದವು ॥

श्रीमदानन्दतीर्थभगवत्पादाचार्यविरचितम्
अणुभाष्यम्;
श्रीमद्राघवेन्द्रतीर्थविरचिततत्वमञ्जर्या समेतम्

# गायत्र्यधिकरणम्

नन्वग्निसूक्तस्थं ज्योतिर्विष्णुरित्ययुक्तम् । अस्यैव ज्योतिषः 'अथ यदतः परो दिवो ज्योतिर्दीप्यते' इति छान्दोग्ये तृतीयेऽध्याये श्रवणात्तस्य च **'गायत्री वा इदं सर्व'**मित्युपक्रमेण गायत्रीत्वात् । नहि तस्यापि विष्णुत्वे गायत्रीवागाद्यन्यत्रप्रसिद्धशब्दोक्तौ प्रयोजनमस्ति । ज्योतिःशब्दप्रस्तुते **'तेजो वै ब्रह्मवर्चसं गायत्री'** इति तत्पर्यायस्य तेजःशब्दस्योक्तेः । अत उक्तमयुक्तमित्यतः प्राप्तम् । **छन्दोऽभिधानादित्यादिसूत्रत्रयम्** ॥

ಹಿಂದಿನ ಜ್ಯೋತಿರಧಿಕರಣದಲ್ಲಿ ಅಗ್ನಿಸೂಕ್ತದಲ್ಲಿರುವ ಜ್ಯೋತಿಯು ವಿಷ್ಣುವೆಂದು ಪ್ರತಿಪಾದಿಸಲಾಯಿತು. ಆದರೆ ಇದು ಸರಿಯಲ್ಲ. ಏಕೆಂದರೆ 'ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ' ಇತ್ಯಾದಿಯಾಗಿ ಛಾಂದೋಗ್ಯದ ಮೂರನೆಯ ಅಧ್ಯಾಯದಲ್ಲಿ ಜ್ಯೋತಿಶಬ್ದವು ಪ್ರಸಕ್ತವಾಗಿದೆ. ಇಂತಹ ಜ್ಯೋತಿಶಬ್ದವನ್ನು 'ಗಾಯತ್ರೀ ವಾ ಇದಂ ಸರ್ವಮ್' ಎಂಬ ಉಪಕ್ರಮದ ಬಲದಿಂದ ಗಾಯತ್ರೀ ಎಂದು ಹೇಳಬಹುದು. ಉಪಕ್ರಮದಲ್ಲಿರುವ ಗಾಯತ್ರೀಶಬ್ದವೂ ಸಹ ವಿಷ್ಣುವಾಚಕವೇ ಆಗಲಿ ಎಂದು ಹೇಳುವುದಾದರೆ ಗಾಯತ್ರೀ ವಾಕ್ ಮೊದಲಾದ ಅನ್ಯತ್ರಪ್ರಸಿದ್ಧಶಬ್ದಗಳಿಗೆ ಪ್ರಯೋಜನವೇ ಇಲ್ಲದಂತಾಗುತ್ತದೆ. 'ತೇಜೋ ವೈ ಬ್ರಹ್ಮವರ್ಚಸಂ ಗಾಯತ್ರೀ' ಎಂಬುದಾಗಿ ಜ್ಯೋತಿಶಬ್ದವು ಪ್ರಸ್ತುತವಾದಾಗ ಜ್ಯೋತಿಶಬ್ದದ ಪರ್ಯಾಯಪದವಾದ ತೇಜಸ್‌ಶಬ್ದವನ್ನು ಹೇಳಿದ್ದಾರೆ. ಆದ್ದರಿಂದ ಈ ಜ್ಯೋತಿಸ್‌ಶಬ್ದವು ವಿಷ್ಣುವಾಚಕವಲ್ಲವೆಂಬುವ ಶಂಕೆಯನ್ನು ಪರಿಹರಿಸುವುದಕ್ಕಾಗಿ "ಛಂದೋಭಿಧಾನಾತ್" ಇತ್ಯಾದಿಯಾದ ಮೂರು ಸೂತ್ರಗಳು ಹೊರಟಿವೆ.

तस्याप्यर्थो ज्योतिरित्याद्यैरिति । अग्न्यादिसूक्तोपनिषद्गतज्योतिः तत्सहश्रुतगायत्रीप्रभृतिभिश्चाधिवेदगतैरन्यवस्तुषु **प्रसिद्धैः सर्वैः शब्दैरेको विष्णुरेवोच्यते** । न तु छन्दोविशेषादिः । कुतः **सर्वगुणत्वतः** ।

'गायति च त्रायति च' इति 'एतामेव नातिशीयन्ते' 'पादोऽस्य सर्वा भूतानि त्रिपादस्यासृतं दिवी'त्यादिनोक्तैतत्प्रकरणस्थसर्ववेदोच्चारणाखिलपालनरूपगानत्राण-

**कर्तृत्वसर्वोत्तमत्वभूतादिपादत्वादिसर्वगुणत्वादित्यर्थः । केन निमित्तेन? सर्व-गुणत्वतः । गायत्रीवागाद्यधिदैवगततत्तच्छब्दप्रवृत्तिनिमित्तवत्त्वादन्यगतं प्रवृत्तिहेतुं प्रति स्वातन्त्र्याच्चेत्यर्थः ।**

ಗಾಯತ್ರೀಶಬ್ದದ ಅರ್ಥವನ್ನೇ ಅಣುಭಾಷ್ಯದಲ್ಲಿ ''ಜ್ಯೋತಿರಿತ್ಯಾದ್ಯೈಃ ಉಚ್ಯತೇ'' ಎಂದು ಹೇಳಿದ್ದಾರೆ. ಅಗ್ನಿ ಮೊದಲಾದ ಸೂಕ್ತಗಳಲ್ಲಿ ಮತ್ತು ಉಪನಿಷತ್ತುಗಳಲ್ಲಿ ಪ್ರಸಕ್ತವಾದ ಜ್ಯೋತಿಸ್‌ಶಬ್ದವು ಹಾಗೂ ಅದರೊಡನೆ ಕೇಳಿಸುತ್ತಿರುವ ಗಾಯತ್ರೀಮೊದಲಾದ ಶಬ್ದಗಳು ಮತ್ತು ಅಧಿವೇದಗತವಾದ ಅನ್ಯಪದಾರ್ಥಗಳಲ್ಲಿ ಪ್ರಸಿದ್ಧವಾದ ಸಕಲಶಬ್ದಗಳೂ ಸಹ ಒಬ್ಬನೇ ವಿಷ್ಣುವನ್ನು ಪರಮಮುಖ್ಯವೃತ್ತಿಯಿಂದ ಪ್ರತಿಪಾದಿಸುತ್ತವೆ ಹೊರತು ಛಂದಸ್ಸು ಮೊದಲಾದವುಗಳನ್ನು ಪ್ರತಿಪಾದಿಸುವುದಿಲ್ಲ. ಏಕೆಂದರೆ ಸಕಲಗುಣಪೂರ್ಣನಾದ್ದರಿಂದ.

'ಗಾಯತಿ ಚ ತ್ರಾಯತಿ ಚ' 'ಏತಾಮೇವ ನಾತಿಶೀಯಂತೇ' 'ಪಾದೋಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ' ಇವೇ ಮೊದಲಾದ ಶ್ರುತಿಗಳಲ್ಲಿ ಈ ಪ್ರಕರಣದಲ್ಲಿರುವ ಸರ್ವವೇದೋ-ಚ್ಚಾರಣತ್ವವೆಂಬ ಗಾನಕರ್ತೃತ್ವ, ಅಖಿಲಪಾಲನವೆಂಬ ತ್ರಾಣಕರ್ತೃತ್ವ, ಸರ್ವೋತ್ತಮತ್ವ, ಭೂತಾದಿಪಾದತ್ವ ಮೊದಲಾದ ಸಕಲಗುಣಗಳು ವಿಷ್ಣುವಿನಲ್ಲೇ ಇರುತ್ತವೆ. ಯಾವ ಕಾರಣವೆಂಬ ಪ್ರಶ್ನೆಗೆ ''ಸರ್ವಗುಣತ್ವತಃ'' ಎಂದು ಉತ್ತರಿಸಿದ್ದಾರೆ. ಅಂದರೆ ಅಧಿವೇದಗತವಾದ ಗಾಯತ್ರೀ, ವಾಕ್‌ಮೊದಲಾದ ಸಕಲಶಬ್ದಗಳ ಪ್ರವೃತ್ತಿನಿಮಿತ್ತಗಳೆಲ್ಲವೂ ವಿಷ್ಣುವಿನಲ್ಲೇ ಮುಖ್ಯವಾಗಿರುತ್ತವೆ. ಮತ್ತು ಬೇರೆಡೆ ಇರುವ ಧರ್ಮಗಳು ವಿಷ್ಣುವಿನ ಅಧೀನವೂ ಆಗಿವೆ.

तेनैव 'अत्र सर्वनयेष्वपीन्द्राकाशप्राणज्योतिर्गायत्रीवागित्यादिशब्दानां विष्णवर्थत्वे विष्णौ लोकतो प्रसिद्धानाम् अन्यत्ररूढानां श्रुतिषु प्रयोगे प्रयोजनं नास्ति' इत्यपि निरस्तम् । यतः तत्तच्छब्दप्रवृत्तिनिमित्तगुणवत्त्वात् निमित्ततादृश-सर्वगुणलाभार्थमिति यावत् । **सर्वैः** गुणिसामान्याधिदैवाधिभूताध्यात्मगत-सूक्तस्थाधिवेदगतैः शब्दैः विष्णुरेवोच्यते ।

ಹೀಗೆ ಹೇಳಿದ್ದರಿಂದಲೇ ''ಈ ಪಾದದ ಎಲ್ಲ ಅಧಿಕರಣಗಳಲ್ಲಿ ಇಂದ್ರ, ಆಕಾಶ, ಪ್ರಾಣ, ಜ್ಯೋತಿಸ್, ಗಾಯತ್ರೀ, ವಾಕ್ ಮೊದಲಾದ ಶಬ್ದಗಳು ವಿಷ್ಣುವಿನಲ್ಲೇ ಪ್ರಸಿದ್ಧವಾಗಿವೆಯೆಂದು ಹೇಳಿದಂತಾಯಿತು. ಹಾಗೆ ಹೇಳಿದರೆ ಲೋಕದಲ್ಲಿ ಅನ್ಯತ್ರಪ್ರಸಿದ್ಧವಾದ ಮತ್ತು ಅನ್ಯತ್ರರೂಢವಾದ ಶಬ್ದಗಳನ್ನು ಶ್ರುತಿಯಲ್ಲಿ ವಿಷ್ಣುಪರವಾಗಿ ಪ್ರಯೋಗಿಸುವುದಕ್ಕೆ ಪ್ರಯೋಜನವೇ ಇರುವುದಿಲ್ಲ'' ಎಂಬ ಶಂಕೆಯು ನಿರಸ್ತವಾಯಿತು. ಏಕೆಂದರೆ ಆಯಾಯ ಶಬ್ದಗಳ ಪ್ರವೃತ್ತಿನಿಮಿತ್ತವೆನಿಸಿದ ಗುಣಗಳು ವಿಷ್ಣುವಿನಲ್ಲಿವೆ ಎಂದು ಸಿದ್ಧವಾಗುವುದೇ ಈ ಸಮನ್ವಯದ ಪ್ರಯೋಜನವಾಗಿದೆ. ಅಣುಭಾಷ್ಯದಲ್ಲಿರುವ ಸರ್ವೈಃ ಎಂಬ ಪದಕ್ಕೆ

ಗುಣಸಾಮಾನ್ಯವಾಚಕವಾದ ಆಧಿದೈವಿಕ, ಆಧಿಭೌತಿಕ, ಆಧ್ಯಾತ್ಮಿಕಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ.

**न च गुणलाभो व्यर्थ इत्यपि शङ्क्यम् ॥ सर्वगुणत्वतः ॥ आद्यसूत्राभिमतब्रह्मशब्दोक्तप्रधानलक्षणभूतसमस्तगुणवत्त्वसिद्ध्यर्थत्वात् । अधिकारिणां स्वयोग्यगुणपूर्तये उपासनार्थत्वाच्च ।**

ವಿಷ್ಣುವಿನಲ್ಲಿ ಗುಣಗಳನ್ನು ಸಮನ್ವಯಮಾಡುವುದೇ ವ್ಯರ್ಥವೆಂದು ಶಂಕಿಸಬಾರದೆಂದು ಸರ್ವಗುಣತ್ವತಃ ಎಂಬುದರಿಂದ ಹೇಳಿದ್ದಾರೆ. ಜಿಜ್ಞಾಸಾಸೂತ್ರದಲ್ಲಿ ಅಭಿಮತವಾದ ಬ್ರಹ್ಮಶಬ್ದದಿಂದ ಸಕಲಗುಣಪರಿಪೂರ್ಣತ್ವವು ಬ್ರಹ್ಮನ ಲಕ್ಷಣವೆಂದು ಹೇಳಿದ್ದಾರೆ. ಅದನ್ನು ಸಮರ್ಥಿಸುವುದಕ್ಕಾಗಿ ಮತ್ತು ಆಯಾಯ ಅಧಿಕಾರಿಗಳು ತಮ್ಮ ಯೋಗ್ಯತೆಗೆ ಅನುಗುಣವಾದ ಗುಣಗಳನ್ನು ಪೂರ್ಣವಾಗಿ ಹೊಂದುವುದಕ್ಕಾಗಿ, ಉಪಾಸನೆಗೋಸ್ಕರವೂ ಸಹ ಹೀಗೆ ಅನೇಕಗುಣಗಳ ಸಮನ್ವಯವನ್ನು ಮಾಡುತ್ತಿದ್ದಾರೆ.

**ननु च 'उपक्रमस्थगायत्रीशब्देन तदुपरिश्रुतज्योतिःपदेन च विष्णुरेक एवोच्यत इत्ययुक्तम् । 'त्रिपादस्यामृतं दिवि' इति 'दिवः परो ज्योति'रिति द्युस्थत्वदिवःपरत्वयोरुक्त्या तयोर्भिन्नत्वात्- इति न शङ्क्यम् ॥ सर्वगुणत्वतः ॥ विष्णोरेकस्यैव द्युस्थत्वदिवःपरत्वगुणवत्त्वादित्यर्थः ।**

'ಉಪಕ್ರಮದಲ್ಲಿ ಗಾಯತ್ರೀಶಬ್ದವಿರುವುದರಿಂದ ಅದರ ಮುಂದಿರುವ ಜ್ಯೋತಿಃ ಎಂಬ ಪದದಿಂದಲೂ ವಿಷ್ಣುವೊಬ್ಬನೇ ಪ್ರತಿಪಾದ್ಯನಾಗುತ್ತಾನೆಂಬುದು ತಪ್ಪು. ಏಕೆಂದರೆ, 'ತ್ರಿಪಾದಸ್ಯಾಮೃತಂ ದಿವಿ' ಎಂಬುದಾಗಿ ದಿವಿಸ್ಥಿತತ್ವವನ್ನು ಹೇಳಿ, 'ದಿವಃಪರೋ ಜ್ಯೋತಿಃ' ಎಂಬುದಾಗಿ ದಿವಃಪರತ್ವವನ್ನು ಹೇಳಲಾಗಿದೆ. ಇವೆರಡೂ ವಿರುದ್ಧಗಳಾದ್ದರಿಂದ ಒಬ್ಬನೇ ವಿಷ್ಣುವನ್ನು ಗಾಯತ್ರೀ ಹಾಗೂ ಜ್ಯೋತಿ ಎಂಬ ಎರಡೂ ಶಬ್ದಗಳಿಂದ ಪ್ರತಿಪಾದ್ಯನೆನ್ನಲಾಗದು. ಈ ಶಂಕೆಯು ತಪ್ಪೆಂದು ಸರ್ವಗುಣತ್ವತಃ ಎಂಬುದರಿಂದಲೇ ಉತ್ತರಿಸಿದ್ದಾರೆ. ಏಕೆಂದರೆ ಒಬ್ಬನೇ ವಿಷ್ಣುವು ಭಿನ್ನವಾದ ವಿವಕ್ಷೆಯಿಂದ ದ್ಯುಸ್ಥನೂ ಆಗುತ್ತಾನೆ. ದಿವಃಪರನೂ ಆಗುತ್ತಾನೆಂದರ್ಥ.

त्रिलोकविवक्षायां लक्षयोजनोन्नतान्तरिक्षादुपरिस्थितानाम् अनन्तासनश्वेत द्वीपवैकुण्ठानां द्युत्वेन तत्र स्थितवासुदेवनारायणवैकुण्ठाख्यविष्णुरूपाणां द्युस्थत्वस्य –

'पृथिव्यां द्यौर्महामेरुराकाशे सूर्यमण्डलम् ।
दिवीन्द्रसदनं चैव तत्परे तु दिवः परे'

इति स्मृत्या क्रमान्मेर्वादिभ्य उन्नतेष्वनन्तासनादिषु स्थितानां दिवः परत्वस्य च

**सम्भवात् । नन्वेवमपि 'द्व्यात्मकेभ्यश्च सर्वेभ्यो वैकुण्ठश्चोच उच्यते' इत्युक्त-स्वर्गादिसर्वद्युपरत्वं वैकुण्ठस्थे नोक्तं स्यादिति चेत्तर्हि सप्तलोकविवक्षया द्युपरत्व-मस्तु । एवञ्च सर्वद्युपरत्वसिद्धिः । तथाऽग्निसूक्तस्थं छान्दोग्यस्थं च ज्योतिर्विष्णुरेक एवेत्यपि समाहितं बोध्यम् ॥**

ಮೂರು ಲೋಕಗಳನ್ನಾಗಿ ವಿವಕ್ಷಿಸಿದಾಗ ಲಕ್ಷಯೋಜನದಷ್ಟು ಎತ್ತರದಲ್ಲಿರುವ ಅಂತರಿಕ್ಷದ ಮೇಲಿನ ಅನಂತಾಸನ ಶ್ವೇತದ್ವೀಪ ವೈಕುಂಠಗಳು ದ್ಯುಲೋಕಗಳಾಗುತ್ತವೆ. ಅಲ್ಲಿರುವ ವಾಸುದೇವ, ನಾರಾಯಣ ಮತ್ತು ವೈಕುಂಠಗಳೆಂಬ ವಿಷ್ಣುವಿನ ರೂಪಗಳು ದ್ಯುಸ್ಥಗಳಾಗುತ್ತವೆ.

'ಪೃಥಿವ್ಯಾಂ ದ್ಯೌರ್ಮಹಾಮೇರುರಾಕಾಶೇ ಸೂರ್ಯಮಂಡಲಮ್ ।
ದಿವೀಂದ್ರಸದನಂ ಚೈವ ತತ್ಪರೇ ತು ದಿವಃ ಪರೇ ॥'

ಎಂಬ ಸ್ಮೃತಿಯಂತೆ ಕ್ರಮವಾಗಿ ಮೇರು ಮೊದಲಾದ ಪರ್ವತಗಳಿಗಿಂತ ಮೇಲೆ ಅನಂತಾಸನಾದಿಗಳು ಇರುತ್ತವೆ. ಅಲ್ಲಿರುವ ರೂಪಗಳು ದಿವಃಪರವೆನಿಸುತ್ತವೆ.

ಆದರೂ ಸಹ 'ದ್ವ್ಯಾತ್ಮಕೇಭ್ಯಶ್ಚ ಸರ್ವೇಭ್ಯೋ ವೈಕುಂಠಶ್ಚೋಚ್ಚ ಉಚ್ಯತೇ' ಇತ್ಯಾದಿಯಾಗಿ ಹೇಳಲ್ಪಟ್ಟ ಸ್ವರ್ಗಾದಿ ಸಕಲ ದ್ಯುಲೋಕಗಳಿಗಿಂತ ಉತ್ತಮತ್ವವನ್ನು ವೈಕುಂಠದಲ್ಲಿರುವ ರೂಪಕ್ಕೆ ಹೇಳಿದಂತಾಗ-ಲಿಲ್ಲವಲ್ಲ?. ಈ ಪ್ರಶ್ನೆಗೂ ಅವಕಾಶವಿಲ್ಲ. ಸಪ್ತಲೋಕದ ವಿವಕ್ಷೆಯನ್ನು ಹೊಂದಿದರೆ ದಿವಃಪರತ್ವವನ್ನು ವೈಕುಂಠದಲ್ಲಿರುವ ರೂಪಕ್ಕೂ ಸಹ ಹೇಳಬಹುದು. ಆದ್ದರಿಂದ ಸಕಲದ್ಯುಲೋಕಗಳ ಪರತ್ವವು ಸಿದ್ಧ-ವಾಗುತ್ತದೆ. ಇದರಂತೆ ಆಗ್ನಿಸೂಕ್ತದಲ್ಲಿರುವ ಹಾಗೂ ಛಾಂದೋಗ್ಯದಲ್ಲಿರುವ ಜ್ಯೋತಿಯು ವಿಷ್ಣುವೊಬ್ಬನೇ ಆಗಿದ್ದಾನೆಂದು ಸಮಾಧಾನವನ್ನು ಹೇಳಿದಂತಾಯಿತು.

**॥ सर्वगुणत्वतः ॥ कर्णादिविदूरत्वद्रष्टृत्वश्रोत्रत्वादिसर्वगुणत्वादित्यर्थः । सूत्रे श्रुतकर्णादिविदूरत्वगुणेऽपि हरौ छान्दोग्ये "तदेतद्दृष्टं च श्रुतं च" इत्युक्तदृष्टत्वादेः सुधोक्तदिशा अधिष्ठानद्वारोपपत्तेरिति ।**

ಸರ್ವಗುಣತ್ವತಃ ಎಂಬ ಮಾತಿಗೆ ಮತ್ತೊಂದು ಬಗೆಯ ವ್ಯಾಖ್ಯಾನ. ಕರ್ಣಾದಿವಿದೂರತ್ವ, ದೃಷ್ಟತ್ವ, ಶ್ರೋತೃತ್ವ ಮೊದಲಾದ ಗುಣಗಳಿರುವುದರಿಂದ ಎಂದರ್ಥ. ವಸ್ತುತಃ ಸೂತ್ರದಲ್ಲಿ ಕರ್ಣಾದಿ-ವಿದೂರತ್ವವೆಂಬ ಗುಣವಷ್ಟೇ ಹರಿಯಲ್ಲಿ ಕೇಳಿಸುತ್ತಿದೆ. ಆದರೆ ಛಾಂದೋಗ್ಯದಲ್ಲಿ 'ತದೇತದ್ ದೃಷ್ಟಂ ಚ ಶ್ರುತಂ ಚ' ಇತ್ಯಾದಿಯಾಗಿ ದೃಷ್ಟತ್ವಾದಿ ಧರ್ಮಗಳೂ ಸಹ ಹೇಳಲ್ಪಟ್ಟಿವೆ. ಈ ಎಲ್ಲ ಧರ್ಮಗಳೂ ವಿಷ್ಣು-ವಿನಲ್ಲಿದ್ದರೂ ಪರಸ್ಪರವಿರೋಧಕ್ಕೆ ಅವಕಾಶವಿಲ್ಲ. ಅಧಿಷ್ಠಾನದ ಮೂಲಕ ವಿರೋಧವು ಪರಿಹಾರ-ವಾಗುತ್ತದೆ. ಈ ವಿಷಯವು ಸುಧೆಯಲ್ಲಿ ಹೇಳಲ್ಪಟ್ಟಿದೆ.

ತತ್ವಮಂಜರಿಯಲ್ಲಿ ಗಾಯತ್ರ್ಯಧಿಕರಣದ ಕನ್ನಡಾನುವಾದವು ಮುಗಿಯಿತು.

ಪರಿಪೂರ್ಣಚಂದ್ರಿಕಾ

**श्री राघवेन्द्रतीर्थविरचिता**

# तन्त्रदीपिका

## गायत्र्यधिकरणम्

**॥ ॐ छन्दोऽभिधानान्नेति चेन्न तथा चेतोर्पणनिगदात्तथा हि दर्शनम् ॐ ॥**

अत्र नयेऽधिवेदगतगायत्र्याद्यशेषछन्दोनामसमन्वयं ब्रूते । प्राधान्यादन्योपलक्षणत्वेन गायत्र्याः सूचनेनोपादानम् ।

छन्द इत्यावृत्तिः । ''गायत्री वा इदं सर्वम्'' इत्युक्तगायत्री छन्दः स्यात् । कुतः? गायत्रीपदेन छन्दसोऽभिधानात् । तच्छब्दस्य तत्र रूढत्वादिति यावत् । न ब्रह्मेति चेत् ।

न । कुतः? तथा हि दर्शनम् । दर्शनं श्रुतिः । ''गायति त्रायति च'' इति गानत्राणकर्तृत्वादिलिङ्गबोधकश्रुतिर्हि यतोऽत इत्यर्थः । अप्रसिद्धपदेन ब्रह्मणो निर्देशो किं प्रयोजनमत उक्तं - तथेति । गानादिकर्तृत्वगुणविशिष्टतया चेतस्यर्पणायोपासनायेत्यर्थः । निगदात् ''गायत्री वा इदं सर्वम्'' इति कथनादित्यर्थः । चेतोर्पणेत्युक्तिरुपासनास्वरूपोक्त्यर्था । एवं नयान्तरे अप्रसिद्धशब्दोक्तिकृत्यं बोध्यम् । सुधायां तु ''परो दिवो ज्योतिः'' इत्युक्तं ज्योतिश्छन्द एव । न विष्णुः । ''गायत्री वा'' इत्युपक्रमे गायत्रीरूपछन्दसोऽभिधानादिति चेदित्यपि शङ्कार्थः । गानत्राणकर्तृत्वाद्गायत्री ब्रह्मेति ज्योतिरपि ब्रह्मेति परिहारोऽभिमतः ॥

ಈ ಅಧಿಕರಣದಲ್ಲಿ ವೇದಕ್ಕೆ ಸಂಬಂಧಿಸಿದ ಗಾಯತ್ರೀ ಮೊದಲಾದ ಛಂದೋವಾಚಕವಾದ ಎಲ್ಲ ವಿಧವಾದ ನಾಮಾತ್ಮಕಶಬ್ದಗಳ ಸಮನ್ವಯವನ್ನು ಮಾಡುತ್ತಿದ್ದಾರೆ. ಇಲ್ಲಿರುವ ಗಾಯತ್ರೀಛಂದಸ್ಸು ಇತರ ಛಂದಸ್ಸುಗಳಿಗೆ ಉಪಲಕ್ಷಣವಾಗಿದೆ. ಸಕಲವಿಧಛಂದಸ್ಸುಗಳಲ್ಲಿ ಗಾಯತ್ರಿಗೆ ಪ್ರಾಧಾನ್ಯವಿರುವುದರಿಂದ ಗಾಯತ್ರಿಯನ್ನೇ ಪ್ರಧಾನವಾಗಿ ಸ್ವೀಕರಿಸಿ ಉಳಿದ ಛಂದಸ್ಸುಗಳನ್ನು ಅಪ್ರಧಾನವಾಗಿ ಉಪಲಕ್ಷಣಯಾ ಸ್ವೀಕರಿಸಿದ್ದಾರೆ.

ಸೂತ್ರದಲ್ಲಿ ಛಂದಃ ಎಂಬ ಪದವನ್ನು ಎರಡು ಬಾರಿ ಇಟ್ಟುಕೊಳ್ಳಬೇಕು. ಛಂದಃ = 'ಗಾಯತ್ರೀ ವಾ ಇದಂ ಸರ್ವಮ್' ಎಂಬ ಶ್ರುತಿಯಲ್ಲಿ ಕೇಳಿಸುತ್ತಿರುವ ಗಾಯತ್ರಿಯು ಛಂದಸ್ಸಾಗುತ್ತದೆ. ಏಕೆಂದರೆ ಅಭಿಧಾನಾತ್ = ಗಾಯತ್ರೀಪದದಿಂದ ಛಂದಸ್ಸೇ ಪ್ರತಿಪಾದ್ಯವಾಗಬೇಕಲ್ಲವೇ? ಏಕೆಂದರೆ ಗಾಯತ್ರೀಶಬ್ದಕ್ಕೆ

ಛಂದಸ್ಸಿನಲ್ಲಿ ಲೋಕರೂಢಿ ಇದೆ. ನ = ಆದ್ದರಿಂದ ಗಾಯತ್ರಿಯು ಬ್ರಹ್ಮನಾಗುವುದಿಲ್ಲ. (ಎಂದು ಪೂರ್ವಪಕ್ಷ)

ನ = ಇದು ತಪ್ಪು. ಏಕೆಂದರೆ, ತಥಾ ಹಿ ದರ್ಶನಮ್ = ದರ್ಶನ ಶಬ್ದಕ್ಕೆ ಶ್ರುತಿ ಎಂದರ್ಥ. 'ಗಾಯತಿ ಚ ತ್ರಾಯತಿ ಚ' ಎಂಬುದಾಗಿ ಗಾನಕರ್ತೃತ್ವ ಹಾಗೂ ತ್ರಾಣಕರ್ತೃತ್ವ ಮೊದಲಾದ ಬ್ರಹ್ಮಲಿಂಗವನ್ನು ಪ್ರತಿಪಾದಿಸುವ ಶ್ರುತಿಗಳು ಯಾವ ಕಾರಣದಿಂದ ಇವೆಯೋ ಆ ಕಾರಣದಿಂದ ಬ್ರಹ್ಮನೇ ಗಾಯತ್ರಿ ಎನಿಸುತ್ತಾನೆ. ಅಪ್ರಸಿದ್ಧವಾದ ಗಾಯತ್ರೀ ಇತ್ಯಾದಿ ಪದಗಳಿಂದ ಬ್ರಹ್ಮನನ್ನು ನಿರ್ದೇಶಿಸುವುದರ ಪ್ರಯೋಜನವೇನು? ಎಂಬ ಪ್ರಶ್ನೆಗೆ ಸೂತ್ರದಲ್ಲಿ "ತಥಾ" ಎಂದು ಹೇಳಿದ್ದಾರೆ. ಗಾನಕರ್ತೃತ್ವ ಮೊದಲಾದ ಗುಣವಿಶಿಷ್ಟನಾದವನು ಬ್ರಹ್ಮನಾಗಿದ್ದಾನೆ ಎಂಬುದು ಚೇತಸೇ ಅರ್ಪಣಾಯ = ಉಪಾಸನೆಗೋಸ್ಕರ ಎಂದರ್ಥ. 'ಗಾಯತ್ರೀ ವಾ ಇದಂ ಸರ್ವಮ್' ಎಂದು ಹೇಳಿರುವುದರಿಂದ ಎಂದರ್ಥ.

ಚೇತೋರ್ಪಣವೆಂದು ಹೇಳಿದ್ದು ಉಪಾಸನೆಯ ಸ್ವರೂಪವನ್ನು ಹೇಳುವುದಕ್ಕಾಗಿ. ಹೀಗೆ ಬೇರೆ ಅಧಿಕರಣಗಳಲ್ಲಿಯೂ ಅಪ್ರಸಿದ್ಧವಾದ ಶಬ್ದಗಳ ಸಮನ್ವಯ ಮಾಡುವುದರ ಪ್ರಯೋಜನವನ್ನು ತಿಳಿಯಬೇಕು. ಇಷ್ಟು ಸೂತ್ರಾರ್ಥ.

ಸುಧೆಯ ಪ್ರಕಾರ ಸೂತ್ರವ್ಯಾಖ್ಯಾನ -- 'ಪರೋ ದಿವೋ ಜ್ಯೋತಿಃ' ಎಂಬಲ್ಲಿ ಹೇಳಲ್ಪಟ್ಟ ಜ್ಯೋತಿಸ್ಸು ಛಂದಸ್ಸೇ ಹೊರತು ವಿಷ್ಣುವಲ್ಲ. ಏಕೆಂದರೆ ಉಪಕ್ರಮವಾಕ್ಯದಲ್ಲಿ 'ಗಾಯತ್ರೀ ವಾ' ಎಂಬುದಾಗಿ ಗಾಯತ್ರೀರೂಪವಾದ ಛಂದಸ್ಸನ್ನು ಹೇಳಿರುವುದರಿಂದ ಎಂಬುದು ಶಂಕೆಯ ಅಭಿಪ್ರಾಯ. ಗಾನತ್ರಾಣ-ಕರ್ತೃವಾದ್ದರಿಂದ ಬ್ರಹ್ಮನೇ ಗಾಯತ್ರೀ ಎನಿಸಿದ್ದಾನೆ. ಜ್ಯೋತಿಸ್ಸೂ ಸಹ ಬ್ರಹ್ಮನೇ ಆಗಿದ್ದಾನೆ ಎಂಬುದು ಸಿದ್ಧಾಂತದ ಅಭಿಪ್ರಾಯ.

**इतश्च गायत्री ब्रह्मेत्याह -**

**॥ ॐ भूतादिपादव्यपदेशोपपत्तेश्चैवम् ॐ ॥ १-१-२६**

भूतं विश्वमादिर्यस्यामृतस्यामृताख्यस्वरूपस्य तद्भूतादि । भूतादि चासौ पादश्च । तस्य व्यपदेशः । एवं "पादोऽस्य सर्वा भूतानि त्रिपादस्यामृतं दिवि" इत्येवं भूतामृतरूपपादव्यपदेशोपपत्तेश्चैवं गायत्री ब्रह्मैवेत्यर्थः । एवमित्यस्यावृत्तिः । तत्राद्यं "त्रयाणामेव चैवम्" इत्यत्रेव प्रकारार्थकम् ।

"चतुष्पदा गायत्री" इत्युक्त्वा तद्विवरणाय सम्मतित्वेनोपनिषदुदाहृदे "तावान्" इति मन्त्रेऽस्य पुरुषस्य "सर्वाणि भूतानि" इत्येकः पादः । अमृताख्यं वैकुण्ठादिस्थितरूपत्रयं त्रिपात् पादत्रयमिति भूतादिपादचतुष्टयवत्त्वमुक्तम् । तच्च न छन्दसि युक्तमिति भावः । "पुरुषसूक्तोक्तत्वाच्च" इत्यनुक्तसमुच्चये वा चः । "ङे

प्रथमयोः'' इत्यत्र प्रथमाद्वितीययोः प्रथमाशब्द इव पादशब्दः अमृताख्यस्वरूपांशे मुख्यो भूतेष्वमुख्य इति बोध्यम् ॥

ಮತ್ತೊಂದು ಕಾರಣದಿಂದಲೂ ಗಾಯತ್ರಿಯು ಬ್ರಹ್ಮನೆಂದು ಮುಂದಿನ ಸೂತ್ರ ಪ್ರತಿಪಾದಿಸುತ್ತದೆ.

''ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಮ್''

ಭೂತ ಎಂದರೆ ವಿಶ್ವವು ಯಾವ ಅಮೃತಕ್ಕೆ, ಅಂದರೆ ಅಮೃತವೆಂಬ ಸ್ವರೂಪಕ್ಕೆ ಆವಿಯಾಗಿದೆಯೋ ಆ ಅಮೃತವೆಂಬ ಸ್ವರೂಪವು ಭೂತಾದಿ ಎನಿಸುತ್ತದೆ. ಭೂತಾದಿಯಾಗಿರುವ ಪಾದವೇ ಭೂತಾದಿ ಪಾದ ಎನಿಸುತ್ತದೆ. ಅದರ ವ್ಯಪದೇಶವೇ ಭೂತಾದಿಪಾದವ್ಯಪದೇಶ ಎನಿಸುತ್ತದೆ. ಏವಂ = 'ಪಾದೋಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ' ಎಂಬುದಾಗಿ ಭೂತಾಮೃತಸ್ವರೂಪವಾದ ಪಾದವ್ಯಪದೇಶವು ಉಪಪನ್ನವಾಗುವುದರಿಂದ, ಏವಂ = ಹಿಂದೆ ಹೇಳಲ್ಪಟ್ಟ ಗಾಯತ್ರಿಯು ಬ್ರಹ್ಮವೇ ಆಗಿದೆ ಎಂದರ್ಥ. ಸೂತ್ರದಲ್ಲಿ ಏವಂ ಎಂಬ ಪದವನ್ನು ಆವೃತ್ತಿಮಾಡಿಕೊಳ್ಳಬೇಕು. ಮೊದಲನೆಯ ಏವಂ ಎಂಬ ಪದಕ್ಕೆ 'ತ್ರಯಾಣಾಮೇವ ಚೈವಮ್' ಎಂಬಲ್ಲಿ ಹೇಗೆ ಪ್ರಕಾರವೆಂಬರ್ಥವಿದೆಯೋ ಅದರಂತೆ ಇಲ್ಲಿಯೂ ಪ್ರಕಾರವೆಂಬ ಅರ್ಥವನ್ನು ಹೇಳಬೇಕು.

ಸೂತ್ರಾರ್ಥ -- 'ಚತುಷ್ಪದಾ ಗಾಯತ್ರೀ ಎಂದು ಹೇಳಿ ಅದನ್ನು ವಿವರಿಸುವುದಕ್ಕಾಗಿ ಸಮ್ಮತಿರೂಪದಲ್ಲಿ ಉಪನಿಷತ್ತು ಉದಾಹರಿಸುವ ತಾವಾನ್ ಎಂಬ ಮಂತ್ರದಲ್ಲಿ ಈ ಪುರುಷನಿಗೆ ಸರ್ವಾಣಿ ಭೂತಾನಿ ಎಂದು ಸಕಲಭೂತಗಳು ಒಂದು ಪಾದವಾಗಿದೆ. ಅಮೃತವೆಂದು ಕರೆಯಲ್ಪಡುವ ಶ್ವೇತದ್ವೀಪ, ಅನಂತಾಸನ, ವೈಕುಂಠವೆಂಬ ಮೂರುಸ್ಥಳಗಳಲ್ಲಿ ಮೂರು ರೂಪಗಳಿವೆ. ಈ ಮೂರು ರೂಪಗಳನ್ನು ತ್ರಿಪಾತ್ ಎಂಬುದಾಗಿ ಮೂರು ಪಾದಗಳೆಂದು ಬಣ್ಣಿಸಲಾಗಿದೆ. ಸಕಲಭೂತಗಳನ್ನು ಸೇರಿಸಿದರೆ ನಾಲ್ಕು ಪಾದಗಳಾಗುತ್ತವೆ. ಈ ಚತುಷ್ಪದತ್ವವು ಛಂದಸ್ಸಿನಲ್ಲಿ ಕೂಡುವುದಿಲ್ಲವೆಂದು ಅಭಿಪ್ರಾಯ.

ಅಥವಾ ಪುರುಷಸೂಕ್ತದಲ್ಲಿ ಪ್ರತಿಪಾದ್ಯವಾದ್ದರಿಂದಲೂ ಗಾಯತ್ರಿಯು ಬ್ರಹ್ಮನೇ ಆಗಿದ್ದಾನೆ. ಇಲ್ಲಿರುವ ಚಶಬ್ದವು ಅನುಕ್ತವಾದ ಯುಕ್ತಿಸಮುಚ್ಚಯವನ್ನು ಸೂಚಿಸಿದೆ.

ಜೇ ಪ್ರಥಮಯೋಃ ಎಂಬ ಪಾಣಿನಿಸೂತ್ರದಲ್ಲಿ ಪ್ರಥಮಾವಿಭಕ್ತಿ ಹಾಗೂ ದ್ವಿತೀಯಾವಿಭಕ್ತಿಗಳನ್ನು ತಿಳಿಸುವ ಪ್ರಥಮಾಶಬ್ದವು ಪ್ರಥಮಾವಿಭಕ್ತಿಯಲ್ಲಿ ಮುಖ್ಯವಾಗಿದ್ದು, ದ್ವಿತೀಯಾದಿ ವಿಭಕ್ತಿಗಳಲ್ಲಿ ಹೇಗೆ ಅಮುಖ್ಯವಾಗಿರುತ್ತದೋ ಅದರಂತೆ ಪ್ರಕೃತ ಸೂತ್ರದಲ್ಲಿರುವ ಪಾದಶಬ್ದವು ಅಮೃತವೆಂಬ ಸ್ವರೂಪದಲ್ಲಿ ಮುಖ್ಯವಾಗಿದ್ದು ಭೂತಗಳಲ್ಲಿ ಅಮುಖ್ಯವಾಗಿದೆ ಎಂದು ತಿಳಿಯಬೇಕು.

उक्तमाक्षिप्य समाधत्ते -

॥ ॐ उपदेशभेदान्नेति चेन्नोभयस्मिन्नप्यविरोधात् ॐ ॥ १-१-२७

गायत्रीज्योतिषोर्द्युस्थत्वदिवःपरत्वरूपोपदेशभेदात् तद्द्वयं ब्रह्माख्यमेकं वस्त्वि-

त्युक्तं न युक्तमिति चेन्न । उभयस्मिन्नप्युपदेशे विरोधाभावादित्यर्थः । त्रिसप्त-लोकापेक्षयोपपत्तेरिति भावः ।

भूर्भुवः स्वरिति त्रिलोकापेक्षायां भुवर्लोकादूर्ध्वस्य सर्वस्य द्युत्वादनन्तासन-श्वेतद्वीपवैकुण्ठस्थानां द्युस्थत्वात् । भूर्भुवःस्वर्महर्जनस्तपःसत्यमिति सप्तलोक-विवक्षायां मेरुसूर्यमण्डलेन्द्रसदनानां –

''पृथिव्यां द्यौर्महामेरुराकाशे सूर्यमण्डलम् ।
दिवीन्द्रसदनं चैव तत्परे तु दिवःपरे''

इति स्मृत्या द्युत्वात् क्रमात्तत्परानन्तासनादिस्थानां द्युपरत्वादिति भावः ।

लोकत्रयपक्षेप्युक्तदिशा द्युपरत्वसिद्धावपि वैकुण्ठस्य सर्वद्युपरत्वसिद्ध्यै सप्त-लोकपक्षोक्तिः । ''द्व्यात्मकेभ्यश्च सर्वेभ्यो वैकुण्ठश्चोच्च उच्यते'' इत्युक्तेः ।

चन्द्रिकायां तु - अग्निसूक्तस्थछान्दोग्यस्थजोतिषोर्नैकार्थत्वं कर्णादिविदूरत्व-दृष्टश्रुतत्वाद्युपदेशभेदादिति चेन्न । उभयस्मिन्नप्युपदेशे आकारभेदेनाविरोधात्- इति वृत्त्यन्तरमुक्तम् ॥ ११ ॥

ಇಲ್ಲಿಯ ತನಕ ಹೇಳಿದ ಪ್ರಮೇಯವನ್ನು ಆಕ್ಷೇಪಿಸಿ ಸಮಾಧಾನವನ್ನು ನೀಡುತ್ತಿದ್ದಾರೆ. ''ಓಂ ಉಪದೇಶಭೇದಾತ್ ನೇತಿ ಚೇನ್ನ ಉಭಯಸ್ಮಿನ್ನಪ್ಯವಿರೋಧಾತ್ ಓಂ'' ಎಂಬುದಾಗಿ.

ಸೂತ್ರಾರ್ಥ -- ಉಪದೇಶಭೇದಾತ್ = ಗಾಯತ್ರಿಯು ದ್ಯುಲೋಕದಲ್ಲಿದೆ; ಜ್ಯೋತಿಸ್ಸು ದ್ಯುಲೋಕ-ದಿಂದ ಮೇಲಿನ ಭಾಗದಲ್ಲಿದೆ. ಹೀಗೆ ವಿಭಿನ್ನವಾದ ಪ್ರಕಾರದಲ್ಲಿ ಉಪದೇಶವನ್ನು ಮಾಡಿದ್ದರಿಂದ ನ = ಎರಡೂ ಪದಾರ್ಥಗಳು ಬ್ರಹ್ಮನೆಂಬ ಒಂದೇ ವಸ್ತುವಾಗಲು ಸಾಧ್ಯವಿಲ್ಲ.

ಇತಿ ಚೇನ್ನ = ಈ ಆಕ್ಷೇಪವು ತಪ್ಪು. ಉಭಯಸ್ಮಿನ್ನಪ್ಯವಿರೋಧಾತ್ = ಎರಡು ವಿಧ ಉಪದೇಶಗಳಲ್ಲಿ ವಿರೋಧವಿಲ್ಲದಿರುವುದರಿಂದ ಎಂದರ್ಥ. ಮೂರು ಲೋಕ ಹಾಗೂ ಏಳು ಲೋಕಗಳೆಂಬ ವಿಭಿನ್ನವಾದ ದೃಷ್ಟಿಕೋಣದಿಂದ ದ್ಯುಸ್ಥತ್ವ ಹಾಗೂ ದಿವಃಪರತ್ವಗಳು ಉಪಪನ್ನವಾಗುತ್ತವೆ ತಿಳಿಯಬೇಕು.

ಭೂಃ, ಭುವಃ ಮತ್ತು ಸ್ವಃ ಎಂಬ ಮೂರು ಲೋಕಗಳ ವಿವಕ್ಷೆಯಿಂದ ಭುವರ್ಲೋಕದ ಮೇಲಿರುವುದೆಲ್ಲವೂ ದ್ಯುಲೋಕವೆನಿಸುತ್ತದೆ. ಆವಾಗ ಅನಂತಾಸನ, ಶ್ವೇತದ್ವೀಪ ಹಾಗೂ ವೈಕುಂಠಗಳ-ಲ್ಲಿರುವ ರೂಪಗಳು ದ್ಯುಲೋಕದಲ್ಲಿರುವ ರೂಪಗಳೆಂದೆನಿಸುತ್ತವೆ. ಭೂಃ, ಭುವಃ, ಸ್ವಃ, ಮಹಃ, ಜನಃ, ತಪಃ, ಸತ್ಯಮ್ ಎಂಬುದಾಗಿ ಏಳುಲೋಕಗಳನ್ನಾಗಿ ಪರಿಗಣಿಸಿದಾಗ -

ಪೃಥಿವ್ಯಾಂ ದ್ಯೌರ್ಮಹಾಮೇರುರಾಕಾಶೇ ಸೂರ್ಯಮಂಡಲಮ್ ।
ದಿವೀಂದ್ರಸದನಂ ಚೈವ ತತ್ಪರೇ ತು ದಿವಃಪರೇ ॥

ಪೃಥಿವಿಯಲ್ಲಿ ಮೇರುಪರ್ವತವು ದ್ಯುಲೋಕವೆನಿಸಿದೆ. ಆಕಾಶದಲ್ಲಿ ಸೂರ್ಯಮಂಡಲವು ದ್ಯುಲೋಕವೆನಿಸಿದೆ. ಸ್ವರ್ಗದಲ್ಲಿ ಇಂದ್ರನ ಅರಮನೆಯು ದ್ಯುಲೋಕವೆನಿಸಿದೆ. ಇವುಗಳಿಗಿಂತ ಮೇಲಿರುವುದೆಲ್ಲವೂ ದಿವಃಪರವೆನಿಸುತ್ತದೆ. -- ಈ ಸ್ಮೃತಿಯಂತೆ ಮೇರುಪರ್ವತ, ಸೂರ್ಯಮಂಡಲ ಹಾಗೂ ಇಂದ್ರನ ಅರಮನೆಗಳು ದ್ಯುಲೋಕಗಳಾಗಿವೆ. ಕ್ರಮವಾಗಿ ಈ ಮೂರು ದ್ಯುಲೋಕಗಳ ಮೇಲೆ ಇರುವ ಅನಂತಾಸನ, ಶ್ವೇತದ್ವೀಪ, ವೈಕುಂಠಗಳು ದಿವಃಪರವೆನ್ನಿಸುತ್ತವೆಂದು ತಿಳಿಯಬೇಕು.

ವಸ್ತುತಃ ಲೋಕತ್ರಯಪಕ್ಷದಲ್ಲಿ ಹಿಂದೆ ಹೇಳಿದಂತೆ ಅನಂತಾಸನಕ್ಕೆ ದಿವಃಪರತ್ವವು ಸಿದ್ಧವಾದರೂ ಸಹ ವೈಕುಂಠವು ಸಕಲವಿಧ ದ್ಯುಲೋಕಗಳಿಗಿಂತ ಮೇಲಿದೆಯೆಂದು ತಿಳಿಯುವುದಿಲ್ಲ. ಆದಕ್ಕೋಸ್ಕರ ಸಪ್ತಲೋಕಪಕ್ಷವನ್ನು ಹೇಳಿದ್ದಾರೆ. 'ದ್ಯುತ್ಕೇಭ್ಯಃ ಸರ್ವೇಭ್ಯೋ ವೈಕುಂಠಶ್ಚೋಚ್ಚ ಉಚ್ಯತೇ' ಎಂಬ ಪ್ರಮಾಣದಿಂದ ವೈಕುಂಠಲೋಕವು ಸಕಲ ದ್ಯುಲೋಕಗಳಿಗಿಂತಲೂ ಮೇಲಿದೆಯೆಂದು ನಿರ್ಣಯವಾಗಿದೆ.

ಚಂದ್ರಿಕೆಯ ಪ್ರಕಾರ ವ್ಯಾಖ್ಯಾನ -- ಅಗ್ನಿಸೂಕ್ತದಲ್ಲಿರುವ ಜ್ಯೋತಿಸ್‌ಶಬ್ದವು, ಛಾಂದೋಗ್ಯದಲ್ಲಿರುವ ಜ್ಯೋತಿಸ್‌ಶಬ್ದವು ಒಂದೇ ಅರ್ಥವನ್ನು ಹೇಳುತ್ತಿಲ್ಲ. ಏಕೆಂದರೆ, ಅಗ್ನಿಸೂಕ್ತದಲ್ಲಿರುವ ಜ್ಯೋತಿಸ್ಸಿನಲ್ಲಿ ಕರ್ಣಾದಿವಿದೂರತ್ವಗಳು ಕೇಳಿಸುತ್ತಿವೆ. ಆದರೆ ಛಾಂದೋಗ್ಯದಲ್ಲಿರುವ ಜ್ಯೋತಿಸ್ಸಿನಲ್ಲಿ ದೃಷ್ಟತ್ವ, ಶ್ರುತತ್ವ ಮೊದಲಾದ ಧರ್ಮಗಳು ಕೇಳಿಸುತ್ತಿವೆ. ಹೀಗೆ ಉಪದೇಶಭೇದವಿರುವುದರಿಂದ ಜ್ಯೋತಿಸ್ಸನ್ನು ಬ್ರಹ್ಮನೆಂದು ನಿರ್ಣಯಿಸಲಾಗದು. ಇದು ತಪ್ಪು. ಎರಡು ವಿಧ ಉಪದೇಶಗಳಲ್ಲಿಯೂ ಆಕಾರಭೇದವಿರುವುದರಿಂದ ವಿರೋಧವಿಲ್ಲ. ಹೀಗೆ ಮತ್ತೊಂದು ರೀತಿಯಲ್ಲಿ ಸೂತ್ರವನ್ನು ಚಂದ್ರಿಕೆಯಲ್ಲಿ ವ್ಯಾಖ್ಯಾನಿಸಿದ್ದಾರೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥರಿಂದ ರಚಿತವಾದ ತಂತ್ರದೀಪಿಕಾದ
ಕನ್ನಡಾನುವಾದದಲ್ಲಿ ಗಾಯತ್ರ್ಯಧಿಕರಣವು ಮುಗಿಯಿತು.

श्रीराघवेन्द्रयतिकृता

# न्यायमुक्तावळिः

## अन्तःस्थत्वाधिकरणम्

॥ ॐ छन्दोऽभिधानान्नेति चेन्न तथा चेतोऽर्पणनिगदात्तथा हि दर्शनम् ॐ ॥

पूर्वसिद्धान्ताक्षेपेण वा पूर्ववैषम्येण वा पूर्वपक्षप्रवृत्तेः सङ्गतिः । छान्दोग्ये तृतीयेऽध्याये ''गायत्री वा इद१ सर्वं भूतं यदिदं किञ्च वाग्वै गायत्री'' इति श्रुता गायत्री किं वर्णसमावेशरूपच्छन्दः उत विष्णुरिति सन्देहः । छन्दोविशेष इति पूर्वः पक्षः ।

गायत्रीशब्दस्य तत्र रूढत्वात् । नच विष्णुलिङ्गैः पूर्वत्रेवात्रापि श्रुतिबाधः स्यादिति शङ्क्यम् । विष्णौ प्रसिद्धशब्दत्यागेन अप्रसिद्धगायत्रीपदप्रयोगे प्रयोजनाभावात् । पूर्वत्रैकज्योतिःश्रुतिर्लिङ्गेनान्यत्र प्रसिद्धिबाधेऽपि इह ''वाग्वै गायत्री'' ''येयं पृथिवी'' इति वाक्पृथिव्याद्यनेकश्रुतिबाधायोगात् विष्णौ गायत्रीपदस्य रूढेरभावात् योगस्य चामुख्यत्वात् गायत्र्याः वेदविशेषत्वेन नित्यतया ईशाधीनत्वस्यायोगेन तदधीनत्वन्यायस्याप्यनवतारात् । अत एव प्राग्विष्णुवाचितया निर्णीतज्योतिःश्रुतेः अत्रोत्तरवाक्ये ''अथ यदतः परो दिवो ज्योतिर्दीप्यते'' इति श्रवणात्तद्बलेन प्राक्श्रुता गायत्री विष्णुरिति निरस्तम् । तया बहुश्रुतिबाधायोगात् ''तेजो वै ब्रह्मवर्चसं गायत्री'' इति ज्योतिःपर्यायतोजःशब्दस्य गायत्र्यां प्रयोगेण तत्रैव सावकाशत्वाच्च । तद्बलेन प्राचीनज्योतिषोऽपि गायत्रीत्वस्यैव न्यायत्वात् ।

ಹಿಂದಿನ ಅಧಿಕರಣದ ಸಿದ್ಧಾಂತವನ್ನು ಆಕ್ಷೇಪಿಸುತ್ತಿರುವುದರಿಂದ ಅಥವಾ ಹಿಂದಿನ ಅಧಿಕರಣಕ್ಕಿಂತ ವಿಲಕ್ಷಣವಾಗಿ ಪೂರ್ವಪಕ್ಷವು ಹೊರಟಿರುವುದರಿಂದ ಸಂಗತಿಯು ದೊರೆಯುತ್ತದೆ.

ಛಾಂದೋಗ್ಯದ ಮೂರನೆಯ ಅಧ್ಯಾಯದಲ್ಲಿ 'ಗಾಯತ್ರೀ ವಾ ಇದಂ ಸರ್ವಂ ಭೂತಂ ಯದಿದಂ ಕಿಂಚ ವಾಗ್ವೈ ಗಾಯತ್ರೀ' ಎಂಬಲ್ಲಿ ಕೇಳಿಸುತ್ತಿರುವ ಗಾಯತ್ರೀಶಬ್ದವು ವರ್ಣಸಮಾವೇಶರೂಪವಾದ ಛಂದಸ್ಸನ್ನು ಹೇಳುತ್ತದೋ, ಅಥವಾ ವಿಷ್ಣುವನ್ನು ಹೇಳುತ್ತದೋ ಎಂದು ಸಂದೇಹ. ಛಂದೋವಿಶೇಷವನ್ನೇ ಹೇಳುತ್ತದೆಂದು ಪೂರ್ವಪಕ್ಷ. ಛಂದೋವಿಶೇಷದಲ್ಲಿಯೇ ಗಾಯತ್ರೀಶಬ್ದವು ರೂಢವಾದ್ದರಿಂದ. ವಿಷ್ಣು-ಲಿಂಗಗಳಿಂದ ಹಿಂದಿನ ಅಧಿಕರಣದಂತೆ ಈ ಗಾಯತ್ರೀಶಬ್ದವೂ ಸಹ ಬಾಧಿತವಾಗಬಹುದಲ್ಲವೇ? ಎಂದು

ಶಂಕಿಸಬಾರದು. ಏಕೆಂದರೆ, ವಿಷ್ಣುವಿನಲ್ಲಿ ಪ್ರಸಿದ್ಧವಾದ ನಾರಾಯಣ ಮೊದಲಾದ ಶಬ್ದಗಳನ್ನು ಪರಿತ್ಯಾಗ-ಮಾಡಿ ಅಪ್ರಸಿದ್ಧವಾದ ಗಾಯತ್ರೀಪದವನ್ನು ಪ್ರಯೋಗಿಸುವುದರಲ್ಲಿ ಯಾವುದೇ ಪ್ರಯೋಜನವಿಲ್ಲ. ಮತ್ತು ಹಿಂದಿನ ಅಧಿಕರಣದಲ್ಲಿ ಒಂದು ಜ್ಯೋತಿಸ್‌ಶ್ರುತಿಯು ವಿಷ್ಣುವಿನ ಲಿಂಗದಿಂದ ಅನ್ಯತ್ರಪ್ರಸಿದ್ಧವಾಗಿದೆ ಎಂಬುದಕ್ಕೆ ಬಾಧದೋಷವನ್ನು ಹೇಳಲಾಗಿತ್ತು. ಆದರೆ ಈ ಅಧಿಕರಣದಲ್ಲಿ 'ವಾಗ್ವೈ ಗಾಯತ್ರೀ' 'ಯೇಯಂ ಪೃಥಿವೀ' ಇತ್ಯಾದಿಯಾಗಿ ವಾಕ್ ಪೃಥಿವೀ ಮೊದಲಾದ ಅನೇಕಶ್ರುತಿಗಳು ಲಿಂಗದಿಂದ ಬಾಧಿತವಾಗಲಾರವು. ಆದ್ದರಿಂದ ವಿಷ್ಣುವಿನಲ್ಲಿ ಗಾಯತ್ರೀಪದದ ರೂಢಿಯೂ ಇಲ್ಲದ ಕಾರಣ ಯೋಗವನ್ನು ಹೇಳಬೇಕಾಗುತ್ತದೆ. ರೂಢಿಗಿಂತ ಯೋಗವು ಅಮುಖ್ಯವಾದ್ದರಿಂದ ಗಾಯತ್ರೀಶಬ್ದವು ಲೋಕರೂಢಿಯಂತೆ ವೇದವಿಶೇಷವನ್ನೇ ಪ್ರತಿಪಾದಿಸುತ್ತದೆ. ಅಂತಹ ವೇದವಿಶೇಷವಾದರೋ ನಿತ್ಯವಾದ್ದರಿಂದ ಈಶ್ವರಾಧೀನವೂ ಆಗುವುದಿಲ್ಲ. ಆದ್ದರಿಂದ ತದಧೀನತ್ವನ್ಯಾಯವನ್ನು ಅನುಸರಿಸಿ ವಿಷ್ಣುವಿನಲ್ಲಿ ಗಾಯತ್ರೀಶಬ್ದವನ್ನು ಸಮನ್ವಯಮಾಡಲಾಗದು. ಆದ್ದರಿಂದಲೇ ಹಿಂದೆ ವಿಷ್ಣುವಾಚಿ ಎಂದು ನಿರ್ಣಯಿಸಲ್ಪಟ್ಟ ಜ್ಯೋತಿಃಶ್ರುತಿ-ಯಿರುವುದರಿಂದ ಇಲ್ಲಿನ ಉತ್ತರವಾಕ್ಯದಲ್ಲಿ 'ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ' ಎಂದು ಕೇಳಿಸುತ್ತಿರುವುದರಿಂದ ಜ್ಯೋತಿಃಶ್ರುತಿಯ ಆಧಾರದಿಂದ ಗಾಯತ್ರೀಯು ಸಹ ವಿಷ್ಣುವೇ ಆಗಿದ್ದಾನೆ ಎಂಬ ಆಕ್ಷೇಪವನ್ನು ನಿರಾಕರಿಸಿದಂತಾಯಿತು. ಏಕೆಂದರೆ ಒಂದು ಜ್ಯೋತಿಃಶ್ರುತಿಯಿಂದ ಅನೇಕ ಗಾಯತ್ರೀ-ಶ್ರುತಿಗಳನ್ನು ಬಾಧಿಸಲಾಗದು. ಅಷ್ಟೇ ಅಲ್ಲದೇ 'ತೇಜೋ ವೈ ಬ್ರಹ್ಮವರ್ಚಸಂ ಗಾಯತ್ರೀ' ಎಂಬುದಾಗಿ ಜ್ಯೋತಿಃ ಎಂಬುದರ ಪರ್ಯಾಯ ಪದವೆನಿಸಿದ ತೇಜಸ್‌ಶಬ್ದವನ್ನು ಗಾಯತ್ರಿಯಲ್ಲಿ ಪ್ರಯೋಗಿಸಿದ್ದರಿಂದ ತೇಜಸ್‌ಶಬ್ದವೇ ಛಂದೋವಿಶೇಷದಲ್ಲಿ ಸಾವಕಾಶವಾಗಿದೆ. ಇದರ ಬಲದಿಂದ ಹಿಂದಿನ ಅಧಿಕರಣದಲ್ಲಿ ನಿರ್ಣಯಿಸಲ್ಪಟ್ಟ ಜ್ಯೋತಿಯೂ ಸಹ ಗಾಯತ್ರಿಯೇ ಆಗಬೇಕು.

यद्वा विष्णुत्वेऽप्यग्रेतनज्योतिषः त्रिपादस्यामृतं दिवीति गायत्र्याद्युस्थत्वोक्त्या दिवःपरत्वेनोक्तज्योतिषो गायत्रीतोऽन्यत्वात् प्राक्तनस्य ज्योतिषः कर्णादिविदूरत्वेन विष्णुत्वेऽपि अत्रत्यस्य तदेतद्दृष्टं च श्रुतं चेति तद्विरुद्धदृष्टत्वादिश्रवणेनाविष्णुत्वात् न तया ज्योतिःश्रुत्या गायत्री विष्णुरिति ॥

ಅಥವಾ ಹಿಂದಿನ ಜ್ಯೋತಿಯು ವಿಷ್ಣುವೆಂದು ಹೇಳಿದರೂ, ಇಲ್ಲಿ ಕೇಳಿಸುತ್ತಿರುವ ಜ್ಯೋತಿಯು ವಿಷ್ಣುವಾಗುವುದಿಲ್ಲ; ಏಕೆಂದರೆ 'ತ್ರಿಪಾದಸ್ಯಾಮೃತಂ ದಿವಿ' ಎಂಬುದಾಗಿ ಗಾಯತ್ರಿಯನ್ನು ದ್ಯುಲೋಕಲ್ಲಿದೆ ಎನ್ನಲಾಗಿದೆ. ಆದರೆ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಗಾಯತ್ರಿಯು ದಿವಃಪರವಾದ್ದರಿಂದ ಬೇರೆಯೇ ಆಗಿದೆ. ಆದ್ದರಿಂದ ಕರ್ಣಾದಿ ವಿದೂರತ್ವ ಲಿಂಗದಿಂದ ಹಿಂದಿನ ಅಧಿಕರಣದ ಜ್ಯೋತಿಯು ವಿಷ್ಣುವಾಗಲಿ; ಆದರೆ ಇಲ್ಲಿರುವ ಜ್ಯೋತಿಯು 'ತದೇತದ್ ದೃಷ್ಟಂ ಚ ಶ್ರುತಂ ಚ' ಎಂಬ ಶ್ರುತಿಗೆ ಅನುಗುಣವಾಗಿ ಕರ್ಣಾದಿವಿದೂರತ್ವಧರ್ಮಕ್ಕೆ ವಿರುದ್ಧವಾದ ದೃಷ್ಟತ್ವ, ಶ್ರುತತ್ವ ಮೊದಲಾದ ಧರ್ಮಗಳನ್ನು ಹೊಂದಿರುವುದರಿಂದ ವಿಷ್ಣುವಾಗದೆ ಛಂದಸ್ಸೇ ಆಗುತ್ತದೆ. ಆದ್ದರಿಂದ ಇಂತಹ ಜ್ಯೋತಿಃಶ್ರುತಿಯಿಂದ ಗಾಯತ್ರೀಶಬ್ದಪ್ರತಿಪಾದ್ಯನಾದವನು ವಿಷ್ಣುವೆಂದು ನಿರ್ಣಯಿಸಲಾಗದು.

ಗಾಯತ್ರ್ಯಧಿಕರಣ (೧।೧।೧೧)

**सिद्धान्तस्तु ॥** **''ततो ज्यायांश्च पुरुषः'' ''यद्वै तद्ब्रह्म'' ''एतामेवं ब्रह्मोपनिषदं वेद''** इति पुरुषब्रह्मादिश्रुतीनां गायति च त्रायति चेत्युक्ताशेषवेदोच्चारणाख्या-गानत्राणकर्तृत्वस्य पादोऽस्य विश्वा भूतानीत्यादिनोक्तभूतादिपादत्वस्य एतामेव नातिशीयन्त इत्युक्तसर्वोत्तमत्वादेर्लिङ्गस्य च बाहुल्यात्, तत्पदप्रवृत्तिनिमित्त-गुणवत्तयोपासनार्थमप्रसिद्धपदप्रयोगोपपत्तेः ।

बहुभिः श्रुतिर्लिङ्गबहूनां शब्दानां प्रसिद्धार्थत्यागसम्भवात् । गायति च त्रायतिचेत्युक्त्याऽङ्गरूढितो बलवता श्रौतयोगेन अनादिगुणादीनां गुण्याद्यधीनत्वमिव स्वभावजीवकर्माणीत्यादिश्रुत्यपेक्षयाऽनादिनित्यस्यापि ईशाधीनत्वसम्भवेन तदधीन-त्वन्यायाच्च । महायोगेन सर्वच्छन्दोभिधो ह्येष इति पौराणिकरूढ्या च गायत्री विष्णुरित्यग्रेतनं प्राक्तनं च ज्योतिः स एव ।

द्युस्थत्वदिवःपरत्वादृश्यत्वदृष्टत्वाद्युपदेशभेदस्य त्रिसप्तलोकविवक्षया आकाशभेदेन चोपपत्तेरिति ॥ फले तु प्राचीनज्योतिषो विष्णुत्वाक्षेपतत्समाधी वा, अस्यां हीदं सर्वं प्रतिष्ठितमित्युक्तस्थितिहेतुत्वमुखेन जन्मादिसूत्राक्षेपतत्समाधी वेति ॥ ११ ॥

''ತತೋ ಜ್ಯಾಯಾಂಶ್ಚ ಪುರುಷಃ'' 'ಯದ್ವೈ ತದ್ಬ್ರಹ್ಮ' 'ಏತಾಮೇವ ಬ್ರಹ್ಮೋಪನಿಷದಂ ವೇದ' ಇವೇ ಮೊದಲಾದ ವಿಷ್ಣುವಿನಲ್ಲೇ ಪ್ರಸಿದ್ಧವಾದ ಪುರುಷ, ಬ್ರಹ್ಮ ಮೊದಲಾದ ಶ್ರುತಿಗಳು ಕೇಳಿಸುತ್ತಿವೆ. ಮತ್ತು 'ಗಾಯತಿ ಚ ತ್ರಾಯತಿ ಚ' ಎಂಬುದರಿಂದ ಹೇಳಲ್ಪಟ್ಟ ಸಕಲವೇದೋಚ್ಚಾರಣೆಯೆಂಬ ಗಾನಕರ್ತೃತ್ವ, ಹಾಗೂ ತ್ರಾಣಕರ್ತೃತ್ವಗಳೂ ಸಹ ವಿಷ್ಣುವಿನ ಧರ್ಮಗಳೇ ಆಗಿವೆ. 'ಪಾದೋಸ್ಯ ವಿಶ್ವಾ ಭೂತಾನಿ' ಎಂಬ ಪುರುಷಸೂಕ್ತದಿಂದ ಹೇಳಲ್ಪಟ್ಟ ಭೂತಾದಿಪಾದತ್ವವು ವಿಷ್ಣುವಿನ ಧರ್ಮವೇ ಆಗಿದೆ. 'ಏತಾಮೇವ ನಾತಿಶೀಯಂತೇ' ಎಂಬಲ್ಲಿ ಹೇಳಲ್ಪಟ್ಟ ಸರ್ವೋತ್ತಮತ್ವವೂ ಸಹ ವಿಷ್ಣುವಿನ ಲಿಂಗವೇ ಆಗಿದೆ. ಹೀಗೆ ಅನೇಕಶ್ರುತಿಗಳು ಹಾಗೂ ಅನೇಕ ಲಿಂಗಗಳೂ ವಿಷ್ಣುವಿನಲ್ಲಿರುವುದರಿಂದ ವಿಷ್ಣುವೇ ಗಾಯತ್ರೀ-ಪದವಾಚ್ಯನಾಗುತ್ತಾನೆ. ಹಾಗಾದರೆ ಅಪ್ರಸಿದ್ಧಪದವನ್ನೇಕೆ ಪ್ರಯೋಗಿಸಿದ್ದಾರೆ ಎಂದು ಶಂಕಿಸಬಾರದು. ಗಾಯತ್ರೀಪದದ ಪ್ರವೃತ್ತಿನಿಮಿತ್ತವೆನಿಸಿದ ಗಾನತ್ರಾಣಕರ್ತೃತ್ವವೆಂಬ ಗುಣವನ್ನು ಭಗವಂತನಲ್ಲಿ ಉಪಾಸನೆ ಮಾಡಬೇಕು. ಈ ದೃಷ್ಟಿಯಿಂದ ಅಪ್ರಸಿದ್ಧಶಬ್ದಗಳ ಸಮನ್ವಯವು ಯುಕ್ತವಾಗುತ್ತದೆ.

ಹೀಗೆ ಅನೇಕ ಶ್ರುತಿ ಹಾಗೂ ಲಿಂಗಗಳ ಬಲದಿಂದ ಛಂದೋವಿಶೇಷವೆಂಬ ಪ್ರಸಿದ್ಧಾರ್ಥವನ್ನು ಬಿಡಬೇಕಾಗುತ್ತದೆ. 'ಗಾಯತಿ ಚ ತ್ರಾಯತಿ ಚ' ಎಂದು ಹೇಳಿದ್ದರಿಂದ ಯೋಗವೃತ್ತಿಯನ್ನು ಶ್ರುತಿಯಿಂದ ತೋರಿಸಿದಂತಾಯಿತು. ಇಂತಹ ಶ್ರೌತಯೋಗವು ಅಜ್ಞರೂಢಿಗಿಂತ ಬಲಿಷ್ಠವಾಗಿದೆ. ಮತ್ತು ಅನಾದಿಯಾದ ಗುಣಗಳು ಗುಣಿಯ ಅಧೀನವಾಗುವಂತೆ ವೇದವಿಶೇಷವೆನಿಸಿದ ಗಾಯತ್ರೀಯು ಸಹ ವಿಷ್ಣುವಿನ

ಅಧೀನವಾಗಬಹುದು. 'ಸ್ವಭಾವಜೀವಕರ್ಮಾಣಿ' ಎಂಬ ಶ್ರುತಿಯೂ ಸಹ ಅನಾದಿಪದಾರ್ಥಕ್ಕೆ ಈಶಾಧೀನತ್ವವನ್ನು ಹೇಳುತ್ತಿದೆ. ಆದ್ದರಿಂದ ತದಧೀನತ್ವನ್ಯಾಯವನ್ನು ಅನುಸರಿಸಿ ಗಾಯತ್ರೀಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯಮಾಡಬಹುದು. ಅಷ್ಟೇ ಅಲ್ಲದೆ ಮಹಾಯೋಗವೃತ್ತಿ ಹಾಗೂ 'ಸರ್ವಚ್ಛಂದೋ-ಭಿಧೋ ಹ್ಯೇಷಃ' ಎಂಬ ಪೌರಾಣಿಕರೂಢಿ ಇವೆರಡರ ಬಲದಿಂದ ಗಾಯತ್ರೀಯು ವಿಷ್ಣುವೆಂದು ನಿರ್ಣಯವಾಗುತ್ತದೆ. ಆದ್ದರಿಂದ ಮುಂದಿನ ವಾಕ್ಯದಲ್ಲಿರುವ ಹಾಗೂ ಹಿಂದಿನ ವಾಕ್ಯದಲ್ಲಿರುವ ಜ್ಯೋತಿಯು ವಿಷ್ಣುವೆಂದು ನಿರ್ಣಯವಾಗುತ್ತದೆ.

ಹಾಗಾದರೆ ದ್ಯುಸ್ಥತ್ವ ಹಾಗೂ ದಿವಃಪರತ್ವಗಳ ವಿರೋಧ ಹಾಗೂ ಅದೃಶ್ಯತ್ವ ಹಾಗೂ ದೃಶ್ಯತ್ವ ಎಂಬ ಉಪದೇಶಭೇದವನ್ನು ಹೇಗೆ ಕೂಡಿಸುವುದು? ಎಂದರೆ ಲೋಕತ್ರಯವಿವಕ್ಷೆಯಿಂದ ಮತ್ತು ಸಪ್ತಲೋಕವಿವಕ್ಷೆಯಿಂದ; ಅಥವಾ ಆಕಾಶದಲ್ಲಿರುವ ಭೇದದಿಂದ ಇವುಗಳ ವಿರೋಧವನ್ನು ಪರಿಹರಿಸ-ಬಹುದು.

ಪೂರ್ವಪಕ್ಷಸಿದ್ಧಾಂತಗಳ ಫಲ ಹೀಗಿದೆ— ಹಿಂದಿನ ಅಧಿಕರಣದ ಜ್ಯೋತಿಯು ವಿಷ್ಣುವಾಗು-ವುದಿಲ್ಲವೆಂಬ ಆಕ್ಷೇಪವು ಪೂರ್ವಪಕ್ಷದ ಫಲ ಅದರ ಸಮಾಧಾನವು ಸಿದ್ಧಾಂತದ ಫಲ. ಅಥವಾ 'ಅಸ್ಯಾಂ ಹೀದಂ ಸರ್ವಂ ಪ್ರತಿಷ್ಠಿತಮ್' ಎಂಬಲ್ಲಿ ಹೇಳಲ್ಪಟ್ಟ ಸ್ಥಿತಿಹೇತುತ್ವಮೂಲಕವಾಗಿ ಜನ್ಮಾದಿಸೂತ್ರವನ್ನು ಆಕ್ಷೇಪಿಸುವುದು ಪೂರ್ವಪಕ್ಷದ ಫಲ; ಅದರ ಸಮಾಧಾನವು ಸಿದ್ಧಾಂತದ ಫಲ.

॥ ಇಲ್ಲಿಗೆ ಶ್ರೀರಾಘವೇಂದ್ರತೀರ್ಥರಿಂದ ರಚಿತವಾದ ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ

ಗಾಯತ್ರ್ಯಧಿಕರಣವು ಮುಗಿಯಿತು ॥

# सूत्रार्थरत्नावळिः

(अत्राधिवेदगतगायत्र्याद्यशेषशब्दसमन्वयः क्रियते)

## ॐ ॥ छन्दोभिधानात् नेति चेन्न तथा चेतोऽर्पणनिगदात् तथा हि दर्शनम् ॐ ॥२५॥

ननु गायत्री छन्द एव । तच्छब्दस्य तत्रैव रूढत्वात् । 'वाग् वै गायत्री' (छां.३/१२/१) इति वाक्यविधानात् । नच गायत्र्या भगवदधीनत्वेन गायत्रीशब्दस्तत्रैव मुख्य इति वाच्यम् । गायत्र्या वेदविशेषत्वात् नित्यत्वेन पराधीनत्वाभावात् । अतो गायत्री छन्दोविशेष एव – इति प्राप्ते, सूत्रं पठति –

ॐ ॥ छन्दोभिधानात् नेति चेन्न तथा चेतोऽर्पणनिगदात् तथा हि दर्शनम् ॐ ॥ अस्यार्थः – छन्दोभिधानात् । ननु छन्दोगश्रुतिस्थगायत्रीपदेन चतुर्विंशत्यक्षरात्मक-छन्दसः प्रतिपादनात् गायत्रीशब्दवाच्यो विष्णुर्नेति चेन्न । कुतः? तथाहि दर्शनम् । हि यस्मात् । तथा गानत्राणकर्तृत्वनिमित्तेन । दर्शनम् - विष्णोः गायत्री-शब्दवाच्यत्वप्रतिपादिका (छां३/१२/१) श्रुतिरस्ति । तस्माद् व्यर्थं गायत्रीपदेन विष्णोरभिधानमित्यत उक्तम् – तथेत्यादि । तथा चेतोर्पणनिगदात् विष्णोस्तथा गायत्र्यादिशब्दप्रवृत्तिनिमित्तवत्त्वेन चेतसि अर्पणाय उपासनाय । निगदात् श्रुतौ प्रतिपादनात् इत्यर्थः । तथा च न वैय्यर्थ्यमिति भावः ।

एवंच गानत्राणकर्तृत्वलिङ्गात् । नच लिङ्गस्य निरवकाशत्वायोगेन श्रुतिबाधायोगः । गायत्रीश्रुतेः पौराणिकरूढ्या श्रुत्युक्तयोगेन च तत्र मुख्यत्वात् । स्वभावेति वचनाद् गायत्र्या भगवदधीनत्वात् गायत्रीशब्दवाच्यो विष्णुरेवेति सिद्धम् ।

* * *

## ॐ ॥ भूतादिपादव्यपदेशोपपत्तेश्चैवम् ॥ॐ॥२६॥

हेत्वन्तरेणापि गायत्र्या विष्णुत्वं साधयत् सूत्रमुपन्यस्यति – भूतादिपादव्यप-देशोपपत्तेश्चैवमिति ॥

अस्यार्थः – एवम् इत्यस्यावृत्तिः । एवं गायत्रीशब्दवाच्यं ब्रह्मेत्येवमेव युक्तम् ।

कुतः? एवं भूतादिपादव्यपदेशोपपत्तेः । 'पादोऽस्य विश्वा भूतानि त्रिपादस्यामृतं दिवि' (छां ३/१२/६) इति एवंरूपभूतामृतांशवत्वोक्तेश्च । तस्य च विष्णावेवोपपत्तेः अन्यत्रानुपपत्तेश्चेत्यर्थः ।

एवंच छान्दोग्ये 'सैषा चतुष्पदा' (छां.३/१२/५) इति वाक्येन गायत्रीनामकस्य भगवतः प्रागुक्तगायत्रीभूतवाक्पृथिवीशरीरहृदयलक्षणषड्विधत्वम् अनूद्यांशचतुष्टयरूपवत्त्वरूपं चतुष्पादत्वं विधाय स्वोक्तार्थ एव पुरुषसूक्तमन्त्रः समाख्यारूपत्वेनोदाहृतः । भगवतश्चतुष्पादत्वं ऋङ्मन्त्रेण स्पष्टमानुकूल्येनोक्तम् । नच गायत्र्यामिव भूतभिन्नत्वेन विष्णावपि भूतपादत्वोक्तिरनुपपन्ना । 'सुवर्णकोशम्'(तै.आ.३/१९) इति श्रुतेः । नच पुरुषसूक्तं न विष्णुप्रकरणमिति वाच्यम् । 'तस्मिन् काले महाराज' (स्कान्दे) इति स्मृत्या तत्प्रकरणस्य विष्णुत्वनिश्चयात् । अतो गायत्रीशब्दवाच्यो विष्णुरेवेति सिद्धम् ॥

***

### ॐ ॥ उपदेशभेदान्नेति चेन्न उभयस्मिन्नप्यविरोधात् ॐ ॥०२७॥

ननु गायत्रीज्योतिप्रकरणयोरुपदेशभेदेन भिन्नार्थत्वात् इत्यादिना उक्तमाक्षिप्य समादधत् सूत्रमाह –

ॐ ॥ उपदेशभेदान्नेति चेन्न उभयस्मिन्नप्यविरोधात् ॐ ॥ अस्यार्थः – उपदेशभेदात् गायत्रीज्योतिषोः द्युस्थत्व(छां.३/१२/६) दिवःपरत्व(छां.३।१३।७)-रूपविरुद्धधर्मबोधकश्रुतिभेदान्नेति चेत् तद्द्वयं विष्ण्वाख्यमेकं वस्तु न किन्तु भिन्नमेवेति चेन्न । कुतः? उभयस्मिन् श्रुतिवाक्येऽपि एकस्य प्रतिपाद्यत्वेऽपि अविरोधात् त्रिसप्तलोकविवक्षया विरोधाभावादित्यर्थः ।

एवं च विवक्षाभेदेनैकस्यैव द्युस्थत्वदिवःपरत्वयोः सम्भवेन भिन्नार्थत्वाभावात् । अतो गायत्री विष्णुरेवेति सिद्धम् ॥

**॥ इति सूत्रार्थरत्नावळ्यां गायत्र्यधिकरणम् ॥**

॥ಪರಿಪೂರ್ಣಚಂದ್ರಿಕೆಯಲ್ಲಿ ಗಾಯತ್ರ್ಯಧಿಕರಣವು ಮುಗಿಯಿತು ॥

॥ ಶ್ರೀಮಧ್ವೇಶಾರ್ಪಣಮಸ್ತು ॥

॥ ಶ್ರೀಗುರುಭ್ಯೋ ನಮಃ ॥

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

ಬ್ರಹ್ಮಮೀಮಾಂಸಾಶಾಸ್ತ್ರ

# ಅಂತಿಮಪ್ರಾಣಾಧಿಕರಣ

**॥ ॐ प्राणस्तथानुगमात् ॐ॥**

ಸೂತ್ರಾರ್ಥ - ತೈತ್ತಿರೀಯಶ್ರುತಿಯಂತೆ ಐತರೇಯಶ್ರುತಿಯಲ್ಲಿರುವ ಪ್ರಾಣಶಬ್ದವೂ ಸಹ ದೇವೋಪಾಸ್ಯತ್ವವೇ ಮೊದಲಾದ ವಿಷ್ಣುಲಿಂಗಗಳಿರುವುದರಿಂದ ವಿಷ್ಣುವನ್ನೇ ಪ್ರತಿಪಾದಿಸುತ್ತದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ ಸೂತ್ರದೀಪಿಕಾ

**सूत्रदीपिका** – तथा 'तद्वै त्वम्' इति तैत्तिरीयोक्तप्राणवत् 'ता वा एताः' इति ऐतरेयोक्तप्राणोऽपि विष्णुरेव । कुतः? अनुगमात् । देवतोपास्यत्वादिविष्णुलिङ्गब्रह्मशब्दानाम् असकृच्छ्रवणादित्यर्थः ।

ತಥಾ = ತೈತ್ತಿರೀಯೋಪನಿಷತ್ತಿನಲ್ಲಿರುವ 'ತದ್ವೈ ತ್ವಂ ಪ್ರಾಣಃ' ಎಂಬ ಶ್ರುತಿಯಲ್ಲಿರುವ ಪ್ರಾಣಶಬ್ದದಂತೆ 'ತಾ ವಾ ಏತಾಃ' ಎಂಬ ತೈತ್ತಿರೀಯದಲ್ಲಿರುವ ಪ್ರಾಣನೂ ಸಹ, ತತ್ತು = ವಿಷ್ಣುವೇ ಆಗುತ್ತಾನೆ. ಏಕೆಂದರೆ, ಅನುಗಮಾತ್ = ದೇವೋಪಾಸ್ಯತ್ವವೇ ಮೊದಲಾದ ವಿಷ್ಣುಲಿಂಗಗಳು ಅನೇಕಬಾರಿ ಕೇಳಿಸುತ್ತಿರುವುದರಿಂದ.

* * * *

# ब्रह्मसूत्रभाष्यम्

## ॥ पादान्त्यप्राणाधिकरणम् ॥

ತೈತ್ತಿರೀಯಪ್ರಾಣನು ವಿಷ್ಣುವಾಗಲಿ; ಐತರೇಯಪ್ರಾಣನು ವಿಷ್ಣುವಲ್ಲ

### ॥ १२. अथ पादान्त्यप्राणाधिकरणम् ॥

**भाष्यम् – प्राणो विष्णुरित्युक्तम् । तत्र 'ता वा एताः शीर्षञ्छ्रियः श्रिताश्चक्षुः श्रोत्रं मनो वाक् प्राणः' (ऐ.आ. २-१-४.) इत्यत्र प्राणस्य विष्णुत्वं न युज्यते । इन्द्रियैः सहाभिधानादिति ।**

ಹಿಂದಿನ ಪ್ರಾಣಾಧಿಕರಣದಲ್ಲಿ ಪ್ರಾಣಶಬ್ದವಾಚ್ಯನಾದವನು ವಿಷ್ಣು ಎಂದು ಸಮರ್ಥಿಸಲಾಯಿತು. ಆದರೆ 'ತಾ ವಾ ಏತಾಃ ಶೀರ್ಷನ್ ಶ್ರಿಯಃ ಶ್ರಿತಾಚಕ್ಷುಃ ಶ್ರೋತ್ರಂ ಮನೋ ವಾಕ್ ಪ್ರಾಣಃ' ಎಂಬ ಐತರೇಯಶ್ರುತಿಯಲ್ಲಿ ಹೇಳಲ್ಪಟ್ಟ ಪ್ರಾಣನು ವಿಷ್ಣುವೆಂದು ಹೇಳಲಾಗದು. ಏಕೆಂದರೆ ಇಂದ್ರಿಯಗಳ ಜೊತೆಗೆ ಪ್ರಾಣನನ್ನು ಉಲ್ಲೇಖಿಸಿದ್ದರಿಂದ.

भाष्यदीपिका – अत्राधिकरणे लोकतोऽन्यत्र प्रसिद्धप्राणनाम्नो विष्णौ समन्वयः प्रतिपाद्यते । श्रुत्यादिसङ्गतिविषयवाक्यविषयसंशयसयुक्तिकपूर्वपक्षान् दर्शयति प्राण इति ॥ आद्यप्राणाधिकरणे 'तद्वै त्वम्' (तै.आ.३-१४.) इति वाक्योक्तप्राणो विष्णुरित्युक्तमित्यर्थः । ततः किमित्यत आह – तत्रेति ॥ उक्तमित्यनुषज्यते । तस्याऽवृत्तिविपरिणामौ । एवं तत्रेत्यप्यावर्तनीयम् । तथा च 'तत्र' तद्वै त्वमिति वाक्ये उक्तस्य प्राणस्य विष्णुत्वं न विद्यते न युज्यते । कुतः? यतस्तत्र 'तद्वै त्वम्' इति वाक्योक्तप्राणविषये 'उक्ते' श्रुते 'ता वा एताः' इत्यैतरेयवाक्ये उक्तस्य श्रुतस्य प्राणस्य विष्णुत्वं न विद्यत इति योजना । कुतो न विद्यत इत्यत आह – इन्द्रियैः सहाभिधानादिति ॥ इन्द्रियैः सह पठितत्वाद् इन्द्रियगणे गणितत्वादित्यर्थः । अनेनैतरेयप्राणस्य विष्णवन्यत्वाक्षेपमुखेन प्राचीनतैत्तिरीयोक्तप्राणस्याप्यन्यत्वाक्षेपात् तेनास्याऽक्षेपिकी सङ्गतिरुक्ता भवति ।

ऐतरेयप्राणाख्यो विषयः । प्राणोऽन्य उत विष्णुरिति संशयश्च सूचितः । तथा वाय्वादिरन्य एवेति पूर्वपक्षः । इन्द्रियगणे गणितत्वाख्यतत्साधकलिङ्गं च सूचितम् । 'ता वा एताः' इत्येतच्च चतुर्मुखशिरसि शिरश्शब्दप्रवृत्तिनिमित्तकथनाय प्रवृत्तम् । वैशब्दः प्रसिद्धौ ।

ಪ್ರತಿಪದಾರ್ಥ - ಈ ಅಧಿಕರಣದಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವಾದ ಪ್ರಾಣ ಎಂಬ ನಾಮಾತ್ಮಕಶಬ್ದವನ್ನು ವಿಷ್ಣುವಿನಲ್ಲಿ ಸಮರ್ಥಿಸುತ್ತಿದ್ದಾರೆ. ಶ್ರುತಿ ಮೊದಲಾದ ಸಂಗತಿಗಳನ್ನು ವಿಷಯವಾಕ್ಯ, ವಿಷಯ, ಸಂಶಯ ಸಯುಕ್ತಿಕವಾದ ಪೂರ್ವಪಕ್ಷ ಮೊದಲಾದವುಗಳನ್ನು ತೋರಿಸುತ್ತಿದ್ದಾರೆ. ಪ್ರಾಣಃ = ತೈತ್ತಿರೀಯದಲ್ಲಿ ಕೇಳಿಸುತ್ತಿರುವ ಪ್ರಾಣನು, ವಿಷ್ಣುಃ = ವಿಷ್ಣುವೇ, ಇತಿ = ಆಗಿದ್ದಾನೆಂದು, ಉಕ್ತಮ್ = ಹೇಳಲ್ಪಟ್ಟಿತು. ಆದರೆ ತತ್ರ = ಐತರೇಯಶ್ರುತಿಯಲ್ಲಿ, ತಾ ವಾಃ = ಅವುಗಳಾದರೋ, ಚಕ್ಷುಃ = ಕಣ್ಣು, ಶ್ರೋತ್ರಂ = ಕಿವಿಯು, ಮನಃ = ಮನಸ್ಸು, ವಾಕ್ = ವಾಗಿಂದ್ರಿಯವು, ಪ್ರಾಣಃ = ಪ್ರಾಣವು, ಏತಾಃ = ಇವುಗಳೇ, ಶೀರ್ಷನ್ = ತಲೆಯಲ್ಲಿ, ಶ್ರಿತಾಃ = ಆಶ್ರಯಿಸಿ ಕೊಂಡಿವೆ. ಮತ್ತು ಶ್ರಿಯಃ = ಭೂಷಣಗಳಾಗಿವೆ. ಇತ್ಯತ್ರ = ಈ ವಿಷಯವಾಕ್ಯದಲ್ಲಿ. ಪ್ರಾಣಸ್ಯ = ಪ್ರಾಣನಿಗೆ, ವಿಷ್ಣುತ್ವಂ = ವಿಷ್ಣುತ್ವವು, ನ ವಿದ್ಯತೇ = ಬರುವುದಿಲ್ಲ. ಏಕೆಂದರೆ, ಇಂದ್ರಿಯೈಃ = ಇಂದ್ರಿಯಗಳಿಂದ, ಸಹ = ಕೂಡಿಕೊಂಡು, ಅಭಿಧಾನಾತ್ = ಪ್ರಾಣನನ್ನು ಹೇಳಿದ್ದರಿಂದ, ಇತಿ = ಹೀಗೆ ಆಕ್ಷೇಪಿಸಿದರೆ.

**तत्वप्रकाशिका – अत्र लोकतोऽन्यत्रप्रसिद्धप्राणनाम्नो विष्णौ समन्वयप्रतिपादनादस्ति शास्त्रादिसङ्गतिः । श्रुत्यादिसङ्गतिविषयवाक्यविषयसंशयसयुक्तिकपूर्वपक्षान् दर्शयति – प्राण इति ॥**

ಈ ಅಧಿಕರಣದಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವಾದ 'ಪ್ರಾಣ' ಎಂಬ ನಾಮಾತ್ಮಕಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿರುವುದರಿಂದ ಶಾಸ್ತ್ರ, ಅಧ್ಯಾಯ, ಪಾದಸಂಗತಿಗಳಿರುತ್ತವೆ. ಶ್ರುತ್ಯಾದಿಸಂಗತಿಗಳು, ವಿಷಯವಾಕ್ಯ , ವಿಷಯ, ಸಂಶಯ ಮತ್ತು ಸಯುಕ್ತಿಕವಾದ ಪೂರ್ವಪಕ್ಷಗಳನ್ನು ''ಪ್ರಾಣ'' ಇತ್ಯಾದಿಗ್ರಂಥದಿಂದ ಭಾಷ್ಯಕಾರರು ತೋರಿಸುತ್ತಿದ್ದಾರೆ.

**'तद्वै त्वं प्राणः' इत्युक्तः प्राणो विष्णुरित्युक्तम् । ऐतरेयके च 'कश्चित्ता वा एताः' इत्यारभ्य बहुषु स्थलेषु प्राणः श्रूयते । तस्य विष्णोरन्यत्वे प्राचीनोऽप्यन्य इति शङ्का स्यादित्ययमवश्यं विचार्यः । स प्राणोऽत्र विषयः । किं विष्णुरुतान्य इति सन्देहः ।**

'ತದ್ವೈ ತ್ವಂ ಪ್ರಾಣಃ' ಎಂಬ ಶ್ರುತಿಯಲ್ಲಿರುವ ಪ್ರಾಣಶಬ್ದಾರ್ಥನು ವಿಷ್ಣುವೇ ಆಗಿದ್ದಾನೆ. ಐತರೇಯಬ್ರಾಹ್ಮಣದಲ್ಲಿ 'ಕಶ್ಚಿತ್ತಾ ವಾ ಏತಾಃ' ಎಂಬುದಾಗಿ ಪ್ರಾರಂಭಿಸಿ ಅನೇಕ ಸ್ಥಳಗಳಲ್ಲಿ 'ಪ್ರಾಣಃ'

---

तथा च यतः 'ता एताः' चक्षुः श्रोत्रं मनोवाक्प्राण इत्येतच्छब्दवाच्यास्तदभिमानिन्यो देवताः । 'शीर्षन्' शीर्ष्णि शिरःसञ्ज्ञिकमूर्ध्नि श्रिताः । अत एव श्रयणाच्छ्रिय इति सिद्धान्ते श्रुत्यर्थः । अनेन चक्षुरादिभिः श्रितत्वं शिरःपदप्रवृत्तिनिमित्तमित्युक्तं भवति । पूर्वपक्षी तु प्राणशब्दमन्यमात्रपरं मन्यते ।

ಎಂಬ ಪದವು ಕೇಳಿಸುತ್ತಿದೆ. ಈ ಪದವು ವಿಷ್ಣುವಿಗಿಂತ ಭಿನ್ನವಾದ ವಸ್ತುವನ್ನು ಪ್ರತಿಪಾದಿಸಿದರೆ ಹಿಂದಿನ ಪ್ರಾಣಾಧಿಕರಣದಲ್ಲಿ ಪ್ರತಿಪಾದ್ಯವಾದ ಪ್ರಾಣವೂ ಸಹ ವಿಷ್ಣುಭಿನ್ನವೇ ಆಗುತ್ತದೆ. ಆದ್ದರಿಂದ ಐತರೇಯ ಬ್ರಾಹ್ಮಣದಲ್ಲಿರುವ ಈ ಪ್ರಾಣಶಬ್ದಾರ್ಥವನ್ನು ಅವಶ್ಯವಾಗಿ ನಿರ್ಣಯಿಸಬೇಕು. ಆದ್ದರಿಂದ ಈ ಪ್ರಾಣವೇ ಇಲ್ಲಿ ವಿಷಯವಾಗಿದೆ. ಈ ಪ್ರಾಣಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೋ, ಅಥವಾ ಬೇರೆಯವರೋ ಎಂದು ಸಂಶಯ.

**(त) पूर्वोक्तन्यायोऽन्यत्रप्रसिद्धिश्च सन्देहबीजम् । तत्र न प्राणो विष्णुः किन्तु वाय्वादिरेवेति पूर्वः पक्षः । एतत्प्राणस्येन्द्रियगणे गणितत्वात् । न चैतल्लिङ्गं विष्णाववकाशं लभते । उपपद्यते च मुख्यप्राणादिषु अतस्तेषामन्यतमस्य एतत्प्राणत्वात् प्राचीनप्राण आनन्दमयोऽप्यन्य एवेति भावः ।**

(ಪೂರ್ವಪಕ್ಷ) ಹಿಂದಿನ ಪ್ರಾಣಾಧಿಕರಣದಲ್ಲಿ ಹೇಳಲ್ಪಟ್ಟ ಸಿದ್ಧಾಂತನ್ಯಾಯವು ಮತ್ತು ಲೋಕತಃ ಅನ್ಯತ್ರಪ್ರಸಿದ್ಧಿಯು ಸಂದೇಹಬೀಜವಾಗಿದೆ. ಈ ಪ್ರಾಣನು ವಿಷ್ಣುವಲ್ಲ ಹೊರತಾಗಿ ವಾಯ್ವಾದಿಗಳೇ ಆಗಿದ್ದಾರೆಂದು ಪೂರ್ವಪಕ್ಷ. ಏಕೆಂದರೆ ಪ್ರಸಕ್ತವಾದ ಶ್ರುತಿಯಲ್ಲಿ ಪ್ರಾಣನನ್ನು ಇಂದ್ರಿಯಗಳ ಸಮೂಹದಲ್ಲಿ ಹೇಳಲಾಗಿದೆ. ಈ ಲಿಂಗವು ವಿಷ್ಣುವಿನಲ್ಲಿ ಸಂಭವಿಸುವುದಿಲ್ಲ. ಆದರೆ ಮುಖ್ಯಪ್ರಾಣಾದಿಗಳಲ್ಲಿ ಯುಕ್ತವಾಗುತ್ತದೆ. ಆದ್ದರಿಂದ ವಾಯ್ವಾದಿಗಳ ಮಧ್ಯದಲ್ಲಿ ಯಾರಾದರೊಬ್ಬರು ಈ ಪ್ರಾಣರೆನಿಸುತ್ತಾರೆ. ಆದ್ದರಿಂದ ಹಿಂದಿನ ಪ್ರಾಣಾಧಿಕರಣದಲ್ಲಿ 'ತದ್ವೈ ತ್ವಂ ಪ್ರಾಣಃ' ಎಂಬ ಶ್ರುತಿಯಲ್ಲಿ ಪ್ರತಿಪಾದಿಸಲ್ಪಟ್ಟ ಪ್ರಾಣಶಬ್ದವಾಚ್ಯನು ಮತ್ತು ಆನಂದಮಯಶಬ್ದವಾಚ್ಯನು ಬೇರೆಯವರೇ ಆಗಬೇಕೆಂದು ಅಭಿಪ್ರಾಯ.

**भावदीपः – ॐ प्राणस्तथानुगमात् ॐ ॥ अन्यत्रप्रसिद्धेति ॥** यद्यपि **'आकाशोऽर्थान्तरत्वात्'** इत्यत्र आकाशशब्दस्येव प्राणशब्दस्यापि **'अत एव प्राणः'** इत्यत्रोक्तन्यायेन विष्णावपि प्रयोगादुभयत्रप्रसिद्धता भाति । तथापि प्राचीन-प्राणस्याप्यत्र पूर्वपक्षे विष्णुत्वाक्षेपेण तत्र विष्णौ प्रयोगस्यासम्प्रतिपत्तेः **'लोकतोऽ-न्यत्रप्रसिद्धः'** इत्युक्तम् । शेषं पूर्ववत् ।

**'सङ्गति'** इत्युक्त्यैव फलमपि लब्धमिति **'पूर्वपक्षतत्फलानि'** इत्यनुक्त्वा **'पूर्वपक्षानि'** इत्येवोक्तम् । इत्यन्तभाष्यं सङ्गतिपरत्वेन तावदाकाङ्क्षितपूर्त्या व्याचष्टे – **तद्वै त्वमिति ॥** **'इत्यत्र'** इत्यस्यार्थो **'बहुस्थलेषु'** इति । भाष्ये **'ता'** इति प्रतीकग्रहणमिति भावेन **'आरभ्य'** इत्युक्तम् । **'प्राणः श्रूयते'** इत्युक्त्या भाष्ये **'श्रुतस्य प्राणस्य'** इति श्रुतपदशेषः सूचितः । **'प्राणस्य'** इत्यादेरर्थः **'तस्य'** इति ।

**अन्यत्व इति** ॥ 'वक्ष्यमाणयुक्त्या वाय्वादित्वे' इत्यर्थः । 'उक्तम्' इत्यन्तस्य तात्पर्यं 'प्राचीनोऽपि' इति । **शङ्केति** ॥ अत्र प्रबलानेकान्यप्रापकसत्वेन प्राणस्यान्यत्वनिश्चयेऽपि न प्राचीनस्य स युक्तः । तत्र प्रबलान्यलिङ्गानामभावात् प्रत्युत श्रीपतित्वादिविपरीतलिङ्गमेव अस्तीति शङ्केत्येवोक्तम् । तावता प्राचीन-निर्णयाक्षेपमात्रेण फलवत्वसम्भवात् । **इत्ययमिति** ॥ इति सङ्गतिसम्भवादित्यर्थः । **पूर्वोक्तन्याय इति** ॥ 'महायोगविद्वद्रूढिसत्वात् विष्णुवाची प्राणशब्दः' इत्युक्तन्याय इत्यर्थः ।

तदेव भाष्यं पूर्वपक्षादिपरतयापि व्यनक्ति – **तत्रेत्यादिना** ॥ 'प्राणस्य विष्णुत्वं न युज्यते' इत्यस्यार्थः 'तत्र न प्राणो विष्णुः' इति । एवं सन्देहे सतीत्यर्थः । 'विष्णुर्न चेन्निरर्थकः प्राणशब्दः स्यात्' इत्यत उक्तम् – **किन्तु वाय्वादिरेवेति** ॥ 'वाय्विन्द्रजीवाः' इत्यर्थः । 'इन्द्रियैः' इत्यादिभाष्यार्थमाह – **एतदिति** ॥ अत एव भाष्ये चक्षुः श्रोत्रं मनो वागित्यंश उदाहृतः । **न चैतदिति** ॥ नीचैः चक्षुरादिभिः सह गणितत्वस्य सर्वोत्तमेऽनुपपत्तेरिति भावः ।

**उपपद्यत इति** ॥ मुख्यस्य **'सर्वेन्द्रियस्वामित्वादिन्द्रस्य हस्ताधिष्ठातुरिन्द्रियत्वात् जीवस्य च इन्द्रियजन्यफलाश्रयत्वात्'** इति सुधोक्तदिशेति भावः । एतेन सिद्धान्ते श्रुतिलिङ्गबाहुल्येऽपि तेषामेकेनापि निरवकाशेन वाय्वादावेव सावकाशयितव्यत्वं 'तयोः स्वभावो बलवान्' इत्युक्तेरिति सूचितम् । एवं सिद्धेऽपि पूर्वपक्षेऽनुभाष्यादौ श्रुतिलिङ्गबाहुल्योक्तिः पूर्वपक्षदार्ढ्यायेति भाष्याभिप्राय इति भावः ।

**अत इति** ॥ 'निरवकाशलिङ्गात्' इत्यर्थः । यद्वा 'अतः' इत्यस्य व्याख्या 'तेषाम्' इत्यादि । 'प्राणो विष्णुरित्युक्तम्' इत्यस्य तात्पर्यं 'प्राचीनप्राणः' इति । अन्य इत्यन्वयः । सन्देहे उपसंहारे चान्य इत्युक्त्या तेषामन्यतमोऽयमेवेत्यनिर्णयेऽप्यन्यत्वेनावधारणं सम्भवतीति न सन्देहात् पूर्वपक्षस्याविशेष इति भावः । 'अन्य एव' इत्यवधारणं तु प्रकृतप्राणबुद्ध्या न तु प्राचीनप्राणबुद्ध्या । तस्य विष्ण्वेक-निष्ठश्रीपतित्वादिलिङ्गेनान्य एवेति निर्णयायोगात् । प्रागुक्तशङ्कापदविरोधाच्च ।

यद्वा, वक्ष्यमाणदिशा प्राणसंवादोत्क्रमणप्रवेशादीनां बहुत्वात् श्रुत्यनुगृहीतत्वात्

साक्षात् प्राणविशेषणत्वाच्च । श्रीपतित्वादिलिङ्गानां तु वैपरीत्यात् तत्राप्यन्य एवेति निर्धारणं युक्तम् । पूर्वं शङ्केत्युक्तिः अभ्युपगमवादेन इति भावः ॥

ಟೀಕೆಯಲ್ಲಿ ''ಅನ್ಯತ್ರಪ್ರಸಿದ್ಧ' ಎಂಬ ಅಂಶದಿಂದ ಈ ಅಭಿಪ್ರಾಯವನ್ನು ವಿವಕ್ಷಿಸಿದ್ದಾರೆ—

ಶಂಕೆ - ವಸ್ತುತಃ 'ಆಕಾಶೋಽರ್ಥಾಂತರತ್ವಾತ್'' ಎಂಬ ಮೂರನೆಯ ಪಾದದಲ್ಲಿ ಸಮನ್ವಯ ಮಾಡುವ ಆಕಾಶಶಬ್ದವು ಯಾವ ರೀತಿಯಾಗಿ ಉಭಯತ್ರಪ್ರಸಿದ್ಧವಾಗಿದೆಯೋ ಅದರಂತೆ ಇಲ್ಲಿ ಸಮನ್ವಯ ಮಾಡುತ್ತಿರುವ ಪ್ರಾಣಶಬ್ದವೂ ಸಹ ಉಭಯತ್ರ ಪ್ರಸಿದ್ಧವೇ ಆಗಬೇಕು. ಏಕೆಂದರೆ, ಈಗಾಗಲೇ 'ಅತ ಏವ ಪ್ರಾಣಃ' ಎಂಬ ಸೂತ್ರದಿಂದ ಕೆಲವು ಪ್ರಾಣಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯವನ್ನು ಮಾಡಿದ್ದಾಗಿದೆ. ಲೋಕಪ್ರಸಿದ್ಧಿಯಂತೂ ಮುಖ್ಯವಾಯುವಿನಲ್ಲಿದೆ. ಆದ್ದರಿಂದ ಪ್ರಾಣಶಬ್ದವು ಉಭಯತ್ರಪ್ರಸಿದ್ಧವಾಗಿರುವುದರಿಂದ ಈ ಅಧಿಕರಣವನ್ನು ಮೂರನೆಯ ಪಾದದಲ್ಲಿ ಹೇಳಬೇಕಲ್ಲವೇ?

ಸಮಾಧಾನ - ಹೌದು. ಆದರೆ ಹಿಂದಿನ ಪ್ರಾಣಾಧಿಕರಣದಲ್ಲಿ ವಿಷಯನಾದ ಪ್ರಾಣನನ್ನೂ ಸಹ ವಿಷ್ಣುವಲ್ಲವೆಂದು ಇಲ್ಲಿ ಪೂರ್ವಪಕ್ಷ ಮಾಡುತ್ತಿರುವುದರಿಂದ ಹಿಂದಿನ ಅಧಿಕರಣದಲ್ಲಿ ಕೆಲವು ಪ್ರಾಣಶಬ್ದಗಳನ್ನು ವಿಷ್ಣುವಿನಲ್ಲಿ ಪೂರ್ವಪಕ್ಷಿಯು ಅಂಗೀಕರಿಸಿಲ್ಲ. ಹಾಗಾಗಿ ಉಭಯತ್ರಪ್ರಸಿದ್ಧವೆಂದು ಹೇಳಲಾಗದು. ಈ ದೃಷ್ಟಿಯಿಂದ ಟೀಕೆಯಲ್ಲಿ ''ಲೋಕತಃ ಅನ್ಯತ್ರಪ್ರಸಿದ್ಧ'' ಎಂಬ ಅರ್ಥಪೂರ್ಣವಾದ ಮಾತನ್ನು ಹೇಳಿದ್ದಾರೆ. ಉಳಿದದ್ದನ್ನು ಹಿಂದಿನಂತೆ ತಿಳಿಯಬೇಕು.

ಟೀಕೆಯಲ್ಲಿ ''ಶಾಸ್ತ್ರಾದಿಸಂಗತಿಃ'' ಎಂಬುದಾಗಿ ಸಂಗತಿಯನ್ನು ಹೇಳಿದ್ದರಿಂದಲೇ ಫಲವನ್ನೂ ಸಹ ಹೇಳಿದಂತಾಯಿತು. ಆದ್ದರಿಂದಲೇ ಮುಂದಿನ ವಾಕ್ಯದಲ್ಲಿ 'ಪೂರ್ವಪಕ್ಷತತ್ಫಲಾನ್' ಎಂದು ಹೇಳದೆ ಕೇವಲ ''ಪೂರ್ವಪಕ್ಷಾನ್'' ಎಂದಷ್ಟೇ ಹೇಳಿದ್ದಾರೆ.

''ಪ್ರಾಣೋ ವಿಷ್ಣುಃ'' ಎಂಬ ಭಾಷ್ಯದಿಂದ ಪ್ರಾರಂಭಿಸಿ ''ಇಂದ್ರಿಯೈಃ ಸಹಾಭಿಧಾನಾದಿತಿ'' ಎಂಬಲ್ಲಿಯ ತನಕ ಇರುವ ಭಾಷ್ಯವು ಸಂಗತಿಪರವಾದ್ದರಿಂದ ಆಕಾಂಕ್ಷೆಯನ್ನು ಪರಿಹರಿಸುತ್ತದೆಂಬ ದೃಷ್ಟಿಯಿಂದ ''ತದ್ವೈತ್ವಂ'' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನಿಸುತ್ತಿದ್ದಾರೆ. ಭಾಷ್ಯದಲ್ಲಿರುವ ''ಇತ್ಯತ್ರ'' ಎಂಬ ಪದದ ಅರ್ಥವನ್ನೇ ಟೀಕೆಯಲ್ಲಿ ''ಬಹುಸ್ಥಲೇಷು'' ಎಂದು ಹೇಳಿದ್ದಾರೆ. ಭಾಷ್ಯದಲ್ಲಿ 'ತಾ ವಾ ಏತಾಃ' ಎಂಬುದು ಐತರೇಯಾರಣ್ಯಕದ ಪ್ರತೀಕಗ್ರಹಣವಾಗಿದೆ ಹೊರತು ಸಂಪೂರ್ಣ ಶ್ರುತಿಯನ್ನು ಉಲ್ಲೇಖಿಸಿಲ್ಲ. ಆದ್ದರಿಂದ ಶಿಷ್ಯರು ಇಷ್ಟನ್ನೇ ವಿಷಯವಾಕ್ಯವೆಂದು ಪರಿಗಣಿಸಬಾರದು ಎಂಬ ವಿವಕ್ಷೆಯಿಂದ ಟೀಕೆಯಲ್ಲಿ ''ಆರಭ್ಯ'' ಎಂಬುದಾಗಿ ಅರ್ಥಪೂರ್ಣವಾಗಿ ಹೇಳಿದ್ದಾರೆ.

''ಪ್ರಾಣಃ ಶ್ರೂಯತೇ'' ಎಂಬ ಟೀಕೆಯಲ್ಲಿ 'ಶ್ರೂಯತೇ' ಎಂಬ ಪದವನ್ನು ಬಳಸಿದ್ದರಿಂದ ಭಾಷ್ಯದಲ್ಲಿ 'ಪ್ರಾಣಸ್ಯ' ಎಂಬ ಪದದ ಜೊತೆಗೆ 'ಶ್ರುತಸ್ಯ' ಎಂಬ ಪದವನ್ನು ಶೇಷಪೂರಣಮಾಡಿಕೊಳ್ಳಬೇಕೆಂದು ಸೂಚಿಸಿದ್ದಾರೆ. 'ಪ್ರಾಣಸ್ಯ' ಇತ್ಯಾದಿ ಭಾಷ್ಯದ ಅರ್ಥವನ್ನೇ ಟೀಕೆಯಲ್ಲಿ ''ತಸ್ಯ ವಿಷ್ಣೋಃ'' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

''ಅನ್ಯತ್ವೇ'' ಎಂಬ ಟೀಕೆಯಲ್ಲಿರುವ ಪದಕ್ಕೆ 'ಮುಂದೆ ಹೇಳುವ ಯುಕ್ತಿಯಿಂದ ವಾಯು ಮೊದಲಾದವರು ಪ್ರಾಣಶಬ್ದವಾಚ್ಯರೆಂದು ಹೇಳಿದರೆ' ಎಂದರ್ಥ. ''ಪ್ರಾಚೀನೋಽಪಿ'' ಎಂಬ ಪದದಿಂದ 'ವಿಷ್ಣುರಿತ್ಯುಕ್ತಮ್' ಎಂಬ ಹಿಂದಿನ ವಾಕ್ಯದ ತಾತ್ಪರ್ಯವನ್ನು ವಿವಕ್ಷಿಸಿದ್ದಾರೆ. ''ಶಂಕಾ'' ಎಂಬ ಟೀಕಾಭಾಗದ ತಾತ್ಪರ್ಯ ಹೀಗಿದೆ— ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ ಪ್ರಾಣಶಬ್ದದಿಂದ ಮುಖ್ಯವಾಯು ಮೊದಲಾದವರೇ ಪ್ರತಿಪಾದ್ಯರಾಗಲಿ. ಏಕೆಂದರೆ ನಿರವಕಾಶವಾದ ಅನೇಕಲಿಂಗಗಳು ಮುಖ್ಯವಾಯು ಮೊದಲಾದವರಲ್ಲಿ ಪ್ರಸಿದ್ಧವಾಗಿವೆ. ಆದರೆ ಹಿಂದಿನ ಪ್ರಾಣಾಧಿಕರಣದಲ್ಲಿ ಮಾತ್ರ ಮುಖ್ಯವಾಯು ಮೊದಲಾದವರು ಪ್ರತಿಪಾದ್ಯರಾಗುವುದು ಬೇಡ. ಏಕೆಂದರೆ ಪ್ರಬಲವಾದ ಲಿಂಗಗಳು ಅಲ್ಲಿ ಕೇಳಿಸುತ್ತಿಲ್ಲ. ಹೊರತಾಗಿ ವಿಷ್ಣುವೇ ಪ್ರಾಣಶಬ್ದವಾಚ್ಯನೆನ್ನಲು ಬೇಕಾಗಿರುವ ವಿಪರೀತವಾಗಿ ಶ್ರೀಪತಿತ್ವವೇ ಮೊದಲಾದ ಲಿಂಗಗಳೇ ಕೇಳಿಸುತ್ತಿವೆ. ಆದ್ದರಿಂದಲೇ ಇಲ್ಲಿ ಶಂಕಾ ಎಂಬ ಪದವನ್ನಷ್ಟೇ ಬಳಸಿದ್ದಾರೆ. ಅಂದರೆ ಹಿಂದಿನ ಪ್ರಾಣಾಧಿಕರಣದ ನಿರ್ಣಯವನ್ನಷ್ಟೇ ಇಲ್ಲಿ ಆಕ್ಷೇಪಿಸಲಾಗಿದೆ. ಆದ್ದರಿಂದ ಇದೇ ಪೂರ್ವಪಕ್ಷದ ಫಲವಾಗಿದೆ ಎಂದು ಹೇಳಬಹುದು.

''ಇತ್ಯಯಂ'' ಎಂಬ ಪದಕ್ಕೆ 'ಸಂಗತಿಯು ಕೂಡುವುದರಿಂದ' ಎಂದರ್ಥ. ''ಪೂರ್ವೋಕ್ತನ್ಯಾಯಃ' ಎಂಬ ಪದಕ್ಕೆ 'ಮಹಾಯೋಗ ಹಾಗೂ ವಿದ್ವದ್‌ರೂಢಿಗಳಿರುವುದರಿಂದ ಪ್ರಾಣಶಬ್ದವು ವಿಷ್ಣುವನ್ನು ಪ್ರತಿಪಾದಿಸುತ್ತದೆ ಎಂಬ ಹಿಂದಿನ ನ್ಯಾಯವು' ಎಂದರ್ಥ.

ಹೀಗೆ ಸಂಗತಿಪರವಾಗಿ ವ್ಯಾಖ್ಯಾನಿಸಿದ ಭಾಷ್ಯವನ್ನು ಪೂರ್ವಪಕ್ಷಪರವಾಗಿಯೂ ವ್ಯಾಖ್ಯಾನಿಸಲು ''ತತ್ರ'' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಭಾಷ್ಯದಲ್ಲಿರುವ 'ಪ್ರಾಣಸ್ಯ ವಿಷ್ಣುತ್ವಂ ನ ಯುಜ್ಯತೇ' ಎಂಬುದರ ಅರ್ಥವನ್ನೇ ಟೀಕೆಯಲ್ಲಿ ''ತತ್ರ ನ ಪ್ರಾಣೋ ವಿಷ್ಣುಃ'' ಎಂದು ಹೇಳಿದ್ದಾರೆ. ಹೀಗೆ ಸಂದೇಹ ಬಂದಾಗ ಎಂದು ಅಭಿಪ್ರಾಯ.

ಒಂದು ವೇಳೆ ಪ್ರಾಣಶಬ್ದದಿಂದ ವಿಷ್ಣುವು ಪ್ರತಿಪಾದ್ಯನಾಗದಿದ್ದರೆ ಪ್ರಾಣಶಬ್ದಕ್ಕೆ ಅರ್ಥವೇ ಇಲ್ಲವೆಂದಾಯಿತಲ್ಲವೇ? ಎಂಬ ಶಂಕೆಗೆ ''ಕಿಂತು ವಾಯ್ವಾದಿರೇವ'' ಎಂದು ಉತ್ತರಿಸಿದ್ದಾರೆ. ಮುಖ್ಯ-ವಾಯು, ದೇವೇಂದ್ರ ಹಾಗೂ ಜೀವರು ಪ್ರಾಣಶಬ್ದದಿಂದ ವಾಚ್ಯರಾಗುತ್ತಾರೆಂದು ವಾಯ್ವಾದಿ ಎಂಬ ಪದದ ಅಭಿಪ್ರಾಯ.

'ಇಂದ್ರಿಯೈಃ ಸಹಾಭಿಧಾನಾತ್' ಇತ್ಯಾದಿ ಭಾಷ್ಯದ ಮುಂದಿನ ವಾಕ್ಯಗಳ ಅರ್ಥವನ್ನು ''ಏತತ್ ಪ್ರಾಣಸ್ಯ'' ಇತ್ಯಾದಿ ಟೀಕೆಯಿಂದ ಹೇಳುತ್ತಿದ್ದಾರೆ. ಇಂದ್ರಿಯಗಳ ಸಮೂಹದಲ್ಲಿ ಪ್ರಾಣಶಬ್ದವನ್ನು ಶ್ರುತಿಯು ಹೇಳುತ್ತಿರುವುದರಿಂದಲೇ ಭಾಷ್ಯದಲ್ಲಿ 'ಚಕ್ಷುಃ ಶ್ರೋತ್ರಂ ಮನೋ ವಾಕ್' ಎಂಬಂಶವನ್ನು ಉದಾ-ಹರಿಸಿದ್ದಾರೆ. ''ನ ಚೈತತ್'' ಎಂಬ ಟೀಕೆಗೆ 'ನೀಚರಾದ ಚಕ್ಷುರಾದಿ ಇಂದ್ರಿಯಗಳ ಜೊತೆಗೆ ಸರ್ವೋತ್ತಮನಾದ ವಿಷ್ಣುವನ್ನು ಪರಿಗಣಿಸುವುದು ಅನುಪಪನ್ನವಾಗಿದೆ' ಎಂದು ಅಭಿಪ್ರಾಯ.

''ಉಪಪದ್ಯತೇ ಚ'' ಎಂದರೆ ಹೀಗರ್ಥ– 'ಮುಖ್ಯಸ್ಯ ಸರ್ವೇಂದ್ರಿಯಸ್ವಾಮಿತ್ವಾದಿಂದ್ರಸ್ಯ ಹಸ್ತಾ-ಧಿಷ್ಠಾತುರಿಂದ್ರಿಯತ್ವಾತ್ ಜೀವಸ್ಯ ಚ ಇಂದ್ರಿಯಜನ್ಯಫಲಾಶ್ರಯತ್ವಾತ್' (ಮುಖ್ಯವಾಯುವು

ಸರ್ವೇಂದ್ರಿಯಗಳಿಗೆ ಸ್ವಾಮಿಯಾಗಿದ್ದಾನೆ. ದೇವೇಂದ್ರನು ಹಸ್ತಕ್ಕೆ ಅಧಿಷ್ಠಾನನಾದ್ದರಿಂದ ಇಂದ್ರಿಯನೆನಿಸಿದ್ದಾನೆ. ಜೀವನು ಇಂದ್ರಿಯಜನ್ಯವಾದ ಫಲಕ್ಕೆ ಆಶ್ರಯನಾಗಿದ್ದಾನೆ) ಎಂದು ಸುಧೆಯಲ್ಲಿ ಹೇಳಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ಹೀಗೆ ಹೇಳಿದ್ದರಿಂದ ಸಿದ್ಧಾಂತದಲ್ಲಿ ಅನೇಕವಾದ ಶ್ರುತಿಲಿಂಗಗಳನ್ನು ಆಧಾರವಾಗಿ ಹೇಳಿದ್ದರೂ ವಾಯ್ವಾದಿಗಳಲ್ಲಿ ಹೇಳುತ್ತಿರುವ ಲಿಂಗವು ನಿರವಕಾಶವಾದ್ದರಿಂದ ಆ ಎಲ್ಲ ಶ್ರುತಿಲಿಂಗಗಳನ್ನು ವಾಯ್ವಾದಿಗಳಲ್ಲಿಯೇ ಸಾವಕಾಶಮಾಡಬೇಕು 'ತಯೋಃ ಸ್ವಭಾವೋ ಬಲವಾನ್' ಎಂಬ ವಾಕ್ಯದಿಂದ ನಿರವಕಾಶಕ್ಕೆ ಪ್ರಾಬಲ್ಯವನ್ನು ಹೇಳಿದ್ದರಿಂದ. ಇತ್ಯಾದಿವಿಷಯವನ್ನು ''ಉಪಪದ್ಯತೇ ಚ'' ಎಂಬುದರಿಂದ ಸೂಚಿಸಿದ್ದಾರೆ. ಹೀಗೆ ಪೂರ್ವಪಕ್ಷವು ಸಿದ್ಧವಾದ ಮೇಲೆ ಅನುವ್ಯಾಖ್ಯಾನದಲ್ಲಿ ಅನೇಕಶ್ರುತಿಲಿಂಗಗಳನ್ನು ಹೇಳಿದ್ದು ಪೂರ್ವಪಕ್ಷದ ದಾರ್ಢ್ಯಕ್ಕೋಸ್ಕರವೆಂದು ಭಾಷ್ಯದ ಅಭಿಪ್ರಾಯ.

''ಅತ ಇತಿ'' ಟೀಕೆಯಲ್ಲಿರುವ ಅತ ಎಂಬ ಪದಕ್ಕೆ 'ನಿರವಕಾಶತ್ವಲಿಂಗದಿಂದ' ಎಂದರ್ಥ. ಅಥವಾ ಭಾಷ್ಯದಲ್ಲಿರುವ ಅತಃ ಎಂಬುದರ ವ್ಯಾಖ್ಯಾನವನ್ನು ''ತೇಷಾಮನ್ಯತಮಸ್ಯ'' ಇತ್ಯಾದಿ ಟೀಕೆಯಿಂದ ಮಾಡಿದ್ದಾರೆ. 'ಪ್ರಾಣೋ ವಿಷ್ಣುರಿತ್ಯುಕ್ತಮ್' ಎಂಬ ಭಾಷ್ಯದ ಅಭಿಪ್ರಾಯವನ್ನು ''ಪ್ರಾಚೀನಪ್ರಾಣಃ'' ಎಂಬುದರಿಂದ ವಿವಕ್ಷಿಸಿದ್ದಾರೆ. ''ಅನ್ಯಃ'' ಎಂಬಲ್ಲಿ ಇದಕ್ಕೆ ಅನ್ವಯ. ಆವಾಗ 'ಪ್ರಾಚೀನಪ್ರಾಣಃ ಅನ್ಯಃ' ಎಂದಂತಾಗುತ್ತದೆ.

ಸಂದೇಹದಲ್ಲಿ ಮತ್ತು (ಪೂರ್ವಪಕ್ಷದ) ಉಪಸಂಹಾರದಲ್ಲಿ 'ಅನ್ಯಃ' ಎಂಬ ಪದವನ್ನು ಬಳಸಿದ್ದರಿಂದ ಒಂದು ಪ್ರಮೇಯವನ್ನು ತಿಳಿಸಿದ್ದಾರೆ. ಅದು ಹೀಗೆ — ಮುಖ್ಯವಾಯು, ಇಂದ್ರ ಹಾಗೂ ಜೀವ ಈ ಮೂವರಲ್ಲಿ ಇವರೇ ಪ್ರಾಣಶಬ್ದವಾಚ್ಯರೆಂಬ ನಿರ್ಣಯವಿಲ್ಲದ ಕಾರಣ ಪೂರ್ವಪಕ್ಷದ ನಿರ್ಣಯವನ್ನು ಹೇಗೆ ಮಾಡುತ್ತೀರಿ? ಎಂದು ಪ್ರಶ್ನೆ ಬಂದರೆ ವಿಷ್ಣುವನ್ನು ಬಿಟ್ಟು ಉಳಿದವರೇ ಪ್ರಾಣಶಬ್ದವಾಚ್ಯರೆಂಬ ವಿಷಯದಲ್ಲಿ ನಿರ್ಣಯವನ್ನು ಮಾಡಬಹುದಾದ್ದರಿಂದ ಸಂದೇಹಕ್ಕೂ ಪೂರ್ವಪಕ್ಷಕ್ಕೂ ವ್ಯತ್ಯಾಸವಿಲ್ಲ ಎಂಬ ಶಂಕೆಯನ್ನು ಮಾಡಲಾಗದು – ಎಂದು.

''ಅನ್ಯ ಏವ'' ಎಂಬುದಾಗಿ ಅವಧಾರಣವನ್ನು ಈ ಅಧಿಕರಣದ ಪ್ರಾಣನನ್ನು ವಿವಕ್ಷಿಸಿ ಮಾಡಿದ್ದೇ ಹೊರತು ಹಿಂದಿನ ಪ್ರಾಣಾಧಿಕರಣದ ಪ್ರಾಣನನ್ನು ವಿವಕ್ಷಿಸಿ ಮಾಡಿದ್ದಲ್ಲ. ಏಕೆಂದರೆ, ಕೇವಲ ವಿಷ್ಣುವಿನಲ್ಲಿರುವ ಶ್ರೀಪತಿತ್ವ ಮೊದಲಾದ ಲಿಂಗಗಳಿರುವುದರಿಂದ ಹಿಂದಿನ ಪ್ರಾಣನನ್ನು ಅನ್ಯ ಏವ ಎಂಬುದಾಗಿ ಅವಧಾರಣಮಾಡಲು ಸಾಧ್ಯವಿಲ್ಲ. ಹಾಗೆ ಮಾಡಿದರೆ ಹಿಂದೆ ಹೇಳಿದ ಶಂಕಾಪದದಿಂದ ವಿರೋಧ ಬರುತ್ತದೆ.

ಅಥವಾ ಮುಂದೆ ಹೇಳುವ ಪ್ರಕಾರ ಪ್ರಾಣಸಂವಾದ, ದೇಹದಲ್ಲಿ ಮಾಡುವ ಉತ್ಕ್ರಮಣ ಹಾಗೂ ಪ್ರವೇಶಗಳು ಮುಂತಾದ ಲಿಂಗಗಳಲ್ಲಿ ಬಹುತ್ವವಿದೆ, ಶ್ರುತ್ಯನುಗ್ರಹವಿದೆ; ಮತ್ತು ಸಾಕ್ಷಾತ್ ಪ್ರಾಣನಲ್ಲಿ ವಿಶೇಷಣಗಳಾಗಿವೆ. ಆದರೆ ವಿಷ್ಣುವಿನಲ್ಲಿ ಕೇಳಿಸುತ್ತಿರುವ ಶ್ರೀಪತಿತ್ವ ಮೊದಲಾದ ಲಿಂಗಗಳಲ್ಲಿ ಬಹುತ್ವ, ಶ್ರುತ್ಯನುಗೃಹೀತತ್ವ ಹಾಗೂ ಸಾಕ್ಷಾತ್ ವಿಶೇಷಣತ್ವ ಮೊದಲಾದ ಯಾವುದೇ ಧರ್ಮಗಳು ಇರುವುದಿಲ್ಲ. ಆದ್ದರಿಂದ ಹಿಂದಿನ ಪ್ರಾಣನನ್ನೂ ಸಹ 'ಅನ್ಯ ಏವ' ಎಂಬುದಾಗಿ ನಿರ್ಧಾರವಾಗಿ ಪೂರ್ವಪಕ್ಷ

ಮಾಡಬಹುದು. ಈ ಪಕ್ಷದಲ್ಲಿರುವ ಟೀಕೆಯಲ್ಲಿರುವ ಹಿಂದಿನ ಶಂಕಾ ಎಂಬ ಪದವು ಅಭ್ಯುಪಗಮವಾದದಿಂದ ಹೇಳಲ್ಪಟ್ಟಿದೆ ಹೊರತು, ಸ್ವಮತದಿಂದಲ್ಲ ಎಂದು ತಿಳಿಯಬೇಕು.

## ವಿಷ್ಣುವಿನ ಲಿಂಗಗಳಿಂದ ವಿಷ್ಣುವೇ ಪ್ರಾಣನು

**भाष्यम् – अत आह –**

**सू - ॐ ॥ प्राणस्तथाऽनुगमात् ॥ ॐ॥ २८ ॥**

**'तं देवाः प्राणयन्त' (ऐ.आ. २-१-५.) 'स एषोऽसुः स एष प्राणः' (ऐ.आ. २-१-५.) 'प्राण ऋच इत्येव विद्यात्' (ऐ.आ.२-२-२.) 'तदयं प्राणोऽधितिष्ठति' (ऐ.आ.२-३-८.) इत्याद्यनुगमात् । अत्रापि प्राणो विष्णुरेव ।**

ಅದಕ್ಕಾಗಿ ಸೂತ್ರಕಾರರು ಹೇಳುತ್ತಾರೆ 'ಪ್ರಾಣಃ ತಥಾನುಗಮಾತ್' ಎಂದು.

'ದೇವತೆಗಳು ಆ ಪ್ರಾಣನನ್ನು ಶಿಷ್ಯರಿಗೆ ಉಪದೇಶಿಸಿದರು' 'ಆ ಪರಮಾತ್ಮನೇ ಅಸು ಎನಿಸಿದ್ದಾನೆ ಮತ್ತು ಪ್ರಾಣನೆನಿಸಿದ್ದಾನೆ' 'ಶ್ರುತಿಗಳು ಪ್ರಾಣನೆಂದೇ ತಿಳಿಸುತ್ತವೆ' 'ಈ ಪ್ರಾಣನೇ ದೇಹರಥದಲ್ಲಿ ಕುಳಿತಿದ್ದಾನೆ' ಹೀಗೆ ವಿಷ್ಣುವಿನಲ್ಲಿರುವ ಅನೇಕ ಧರ್ಮಗಳು ಕೇಳಿಸುತ್ತಿರುವುದರಿಂದ ಐತರೇಯಶ್ರುತಿಯಲ್ಲಿ ಹೇಳಲ್ಪಟ್ಟ ಪ್ರಾಣನು ವಿಷ್ಣುವೇ ಆಗಿದ್ದಾನೆ.

**भाष्यदीपिका** – सिद्धान्तयत्सूत्रमवतारयति – अत इति ॥ यतः पूर्वपक्षः प्राप्तः अत उत्तरं सूत्रमाह भगवान् बादरायण इत्यर्थः ।

सूत्रं पठित्वा तत्रानुगमादिति हेत्वंशं श्रुत्युदाहरणेन व्याचष्टे प्राण इति ॥ इत्यादीति ॥ एवमादिवाक्योक्तानां देवतोपदेश्यत्वादिलिङ्गानामत्रास्मिन् प्रकरणे बहुषु स्थलेषु 'अनुगमात्' अनुवृत्तेरभ्यासादित्यर्थः । आदिपदेन 'प्राणो ह्येवैष य एष तपति' इति सूर्यमण्डलस्थत्व-प्रतिपादकवाक्यं गृह्यते । तथा 'सर्वाणि भूतान्यापिपीलिकाभ्यः प्राणेन बृहत्या विष्टब्धानि' इत्यादि वाक्यं च गृह्यते ।

सौत्रं तथाशब्दं व्याचष्टे – अत्रापीति ॥ श्रुत इति शेषः । न केवलं 'तद्वै त्वम्' इत्यत्र, किन्त्वैतरेयेऽपीति समुच्चयेऽपिशब्दः । सूत्रे अनुवृत्तस्य तत्त्वित्यस्यार्थमाह – विष्णुरेवेति ॥ अनेन यथा 'तद् वै त्वम्' इति श्रुत्युक्तप्राणो विष्णुः तथैतरेयोक्तोऽपि विष्णुरेव, न त्वन्यः । कुतः? विष्णुलिङ्गानां देवतोपदेश्यत्वादीनामस्मिन् प्रकरणे 'अनुगमात्' अनुवृत्ते-रभ्यासादिति सूत्रार्थ उक्तो भवति । ऐतरेये 'तं देवाः प्राणयन्त' इति एकखण्डस्थं वाक्यम् । 'तं' नारायणं वायुं च देवाः 'प्राणयन्त' प्रकर्षेण शिष्यप्रशिष्यादिषु नीतवन्तः उपदिदिशुरित्यर्थः । अनेन विष्णोः सर्वदेवोपास्यत्वमुक्तं भवति । 'स एषोऽसुः स एष प्राणः

ಪ್ರತಿಪದಾರ್ಥ - ಸಿದ್ಧಾಂತವನ್ನು ಸಮರ್ಥಿಸುವ ಸೂತ್ರವನ್ನು ವ್ಯಾಖ್ಯಾನಿಸುತ್ತಿದ್ದಾರೆ. ಅತಃ = ಯಾವ ಕಾರಣದಿಂದ ಪೂರ್ವಪಕ್ಷವು ಪ್ರಾಪ್ತವಾಗಿದೆಯೋ ಆ ಕಾರಣದಿಂದ, ಆಹ = ಮುಂದಿನ ಸೂತ್ರವನ್ನು 'ಪ್ರಾಣಸ್ತಥಾನುಗಮಾತ್' ಎಂದು ಹೇಳುತ್ತಿದ್ದಾರೆ. ಐತರೇಯದಲ್ಲಿ ಹೀಗೆ ಕೇಳಿಸುತ್ತಿದೆ. ತಂ = ಪ್ರಾಣನನ್ನು, ದೇವಾಃ = ದೇವತೆಗಳು, ಪ್ರಾಣಯಂತ = ಶಿಷ್ಯರಿಗೆ ಉಪದೇಶಿಸಿದರು. ಮತ್ತೊಂದೆಡೆ ಹೀಗಿದೆ ಏಷಃ = ಈ ಪ್ರಾಣನು, ಅಸುಃ = ದೋಷನಾಶಕನಾದ್ದರಿಂದ ಅಸು ಎನಿಸಿದ್ದಾನೆ, ಏಷಃ = ಇವನೇ,

---

स एष भूतिः' इत्याद्यन्यखण्डगतं वाक्यम् । अनेन भूतित्वादिना देवाद्युपास्यत्वमुच्यते । 'स एषः' भगवान् दुष्टनिरसनादसुः प्रकृष्टानन्दरूपत्वात् प्राणः देवानां भूतिशब्दितज्ञानाद्यैश्वर्य-प्रदत्वादसुराणाम् अज्ञानाद्यनैश्वर्यहेतुत्वाच्च भूत्यभूतिशब्दवाच्य इत्यर्थः । तत्रैव 'ता वा एताः सर्वा ऋचः सर्वे वेदाः सर्वे घोषा एकैव व्याहृतिः प्राण एव । प्राण ऋच इत्येव विद्यात्' इति अन्यद् वाक्यम् । अत्र प्राणस्य सर्ववेदोक्तत्वमुच्यते । यास्ताः एताः सर्वा ऋचस्तासां 'एकैव व्याहृतिः' एकमेव व्याहर्तव्यं प्रतिपाद्यम् । तच्च किम्? प्राणो विष्णुरेव ।

किञ्च ये सर्वे वेदाः तेषामपि प्राण एव प्रतिपाद्यः। अपि च ये समुद्रादिघोषाः तेषामपि, किमु वेदानाम् । तत्र ऋचस्तु विशेषत इन्द्रादिनामवतो विष्णोर्गुणान् अल्पज्ञाना- मपि प्रकाशयन्तीति, प्राणे नारायणे तद्विषया एव 'विद्यात्' तत्प्रतिपादिका एवेति जानीयादित्यर्थः ।

ऐतरेयभाष्ये तु – प्रथमप्राणपदमपि विषयसप्तम्यन्ततया व्याहृतिशब्दं च व्याहरणपरतया व्याख्याय एकमेव व्याहरणं निर्दोषगुणपूर्तिवाचकत्वादेकप्रकारमेव नामेत्यर्थ उक्तः । तत्त्वप्रदीपेऽप्ययमेवोक्तः। 'अथ देवरथः तस्य वागुद्धिः श्रोत्रे पक्षसी चक्षुषी युक्ते मनः सङ्गृहीता तदयं प्राणोऽधितिष्ठति' इति वाक्यान्तरम् । अत्र प्राणस्य देहरथत्वमुच्यते । प्रमेयान्तरकथनारम्भार्थोऽथशब्दः । उच्यत इति शेषः। तथा च देवस्य विष्णोः वायोः अध्यात्ममधिदैवतं च रथ उच्यते इत्यर्थः । तस्याध्यात्मं देहाख्यरथस्य 'वाक्' वागाख्या उमा उद्धिः धारणरज्जुरूपा अधिदैवं विष्णुरथस्य प्रसिद्धस्यन्दनस्य च नागाकारोमा उद्धिः 'श्रोत्रे' दक्षवामपार्श्वगतचन्द्रतद्भार्ये 'पक्षसी' पार्श्वयुक्ताश्वौ अन्यत्राश्वरूपौ पार्श्वयोर्युक्तौ 'चक्षुषी' उभयपार्श्वगतसूर्यतद्भार्ये च 'युक्ते' अग्रतो नियुक्ताश्वौ 'मनः' मनोऽभिमानी रुद्रः 'सङ्गृहीता' सारथिः । एवम् अधिदैवं प्रसिद्धस्यन्दनस्यापि रुद्रः सारथिः । स चासावयं च तदयमित्येकं पदम् । तत्त्वप्रदीपरीत्या भिन्नपदत्वेऽपि तदिति रथतयोक्तं शरीरं परामृश्यते । लिङ्गव्यत्ययेन तं रथमिति वा । अयं प्राणो विष्णुः वायुश्चाधितिष्ठतीत्यर्थः । लिङ्गेन पूर्वपक्षिते कथं तेनैव सिद्धान्त इत्याशङ्कानुदयाय लिङ्गबाहुल्योक्तिः ।

यदा बहुत्वनिरवकाशत्वाख्यप्रकारद्वयेनापि दुर्बललिङ्गस्योभयथाप्रबललिङ्गतो बाध-सम्भवेन तैनैव प्राणस्य विष्णुत्वसिद्धिः, तदा किमु वाच्यं निरवकाशब्रह्मशब्दाभ्यासादिति भावेनानुगमपदं प्रकारान्तरेण व्याचष्टे - ब्रह्मेति ॥

ಪ್ರಾಣಃ = ಉತ್ಕೃಷ್ಟ ಆನಂದರೂಪನಾದ್ದರಿಂದ ಪ್ರಾಣ ಎನಿಸಿದ್ದಾನೆ. ಮತ್ತೊಂದೆಡೆ ಹೀಗಿದೆ ಋಚಃ = ಶ್ರುತಿಗಳು, ಪ್ರಾಣಃ ಇತ್ಯೇವ = ಪ್ರಾಣನೆಂದೇ, ವಿದ್ಯಾತ್ = ಪರಮಾತ್ಮನನ್ನು ತಿಳಿಸುತ್ತವೆ. ಇನ್ನೊಂದು ಕಡೆ ತದಯಂ ಪ್ರಾಣಃ = ಅಂತಹ ಈ ಪ್ರಾಣನೇ, ಅಧಿತಿಷ್ಠತಿ = ದೇಹದಲ್ಲಿ ನೆಲೆಸಿದ್ದಾನೆ. ಇತ್ಯಾದಿ = ಈ ರೀತಿಯಾಗಿ, ಅನುಗಮಾತ್ = ಅನೇಕಬಾರಿ ವಿಷ್ಣುಧರ್ಮಗಳು ಕೇಳಿಸುತ್ತಿರುವುದರಿಂದ. ಅತ್ರಾಪಿ = ಈ ಐತರೇಯದಲ್ಲಿಯೂ, ಪ್ರಾಣಃ = ಪ್ರಾಣಶಬ್ದವಾಚ್ಯನಾದವನು, ವಿಷ್ಣುರೇವ = ವಿಷ್ಣುವೇ ಹೊರತು ವಾಯುವಲ್ಲ.

**तत्वप्रकाशिका – सिद्धान्तयत्सूत्रमवतार्य व्याचष्टे – अत इति ॥ 'तद्वै त्वं प्राणः' इति श्रुताविवात्रापि श्रुतः प्राणो विष्णुरेव । विष्णुलिङ्गानां देवतोपास्यत्वादीनामस्मिन्प्राणेऽनुगमादनुवृत्तेरभ्यासादित्यर्थः ।**

ಸಿದ್ಧಾಂತಮಾಡಲು ಸೂತ್ರಕ್ಕೆ ಅವತಾರಿಕೆ ನೀಡಿ "ಅತಃ" ಎಂದು ವ್ಯಾಖ್ಯಾನಿಸುತ್ತಿದ್ದಾರೆ. 'ತದ್ವೈ ತ್ವಂ ಪ್ರಾಣಃ' ಎಂಬ ಶ್ರುತಿಯಲ್ಲಿ ಪ್ರಾಣ ಎಂದರೆ ವಿಷ್ಣುವೆಂದು ಹೇಗೆ ನಿರ್ಣಯಿಸಲಾಯಿತೋ ಅದರಂತೆ ಐತರೇಯಶ್ರುತಿಯಲ್ಲಿ ಶ್ರುತನಾದ ಪ್ರಾಣನೂ ಸಹ ವಿಷ್ಣುವೇ ಆಗಿದ್ದಾನೆ. ಏಕೆಂದರೆ ಈ ಪ್ರಕರಣದಲ್ಲಿ ವಿಷ್ಣುವಿನ ಅಸಾಧಾರಣಧರ್ಮವಾದ ದೇವತೋಪಾಸ್ಯತ್ವಾದಿಗಳು ಈ ಪ್ರಾಣನಲ್ಲಿ ಅನುವೃತ್ತವಾಗಿವೆ. ಅಂದರೆ ಅನೇಕಬಾರಿ ಹೇಳಲ್ಪಟ್ಟಿವೆ ಎಂದರ್ಥ.

**तथाशब्दः समुच्चयार्थोऽतोत्रापीत्याह – तं देवाः प्राणायन्तेति ॥ तं प्राणं देवाः शिष्यादिषु सम्यक् नीतवन्तः । 'स एषोऽसुः स एष प्राणः स एष भूतिश्चाभूतिश्च तं भूतिरिति देवा उपासाञ्चक्रिरे' इति प्राणस्य भूतित्वेन देवोपास्यत्वमुच्यते । 'ता वा एताः सर्वा ऋचः सर्वे वेदाः सर्वे घोषा एकैव व्याहृतिः प्राण एव प्राण ऋच इत्येव विद्यात्' इति तस्य सर्ववेदोक्तत्वमुच्यते ।**

ಸೂತ್ರದಲ್ಲಿರುವ ತಥಾಶಬ್ದವು ಸಮುಚ್ಚಯಾರ್ಥದಲ್ಲಿದೆ. ಆದ್ದರಿಂದಲೇ ಭಾಷ್ಯಕಾರರು 'ಅತೋ ಅತ್ರಾಪಿ' ಎಂದು ಇಲ್ಲಿಯೂ ಸಹ ಹೇಳಿದ್ದಾರೆ. "ತಂ ದೇವಾಃ ಪ್ರಾಣಯಂತ" ಎಂಬ ಶ್ರುತಿಗೆ ಹೀಗೆ ಅರ್ಥ. ತಂ = ಆ ಪ್ರಾಣನನ್ನು, ದೇವಾಃ = ದೇವತೆಗಳು, ಪ್ರಾಣಯಂತ = ತಮ್ಮ ಶಿಷ್ಯರಿಗೆ ಶ್ರೇಷ್ಠತ್ವೇನ

---

अस्मिन् प्रकरणे 'एतद्ब्रह्म' (ऐ.आ. २-१-१.) 'ब्रह्मणो लोकः' (ऐ.आ. २-१-३.) 'ब्रह्मेमं पुरुषम्' (ऐ.आ. २-१-४.) 'उदरं ब्रह्मेत्याचक्षते' (ऐ.आ.२-१-४.) 'अ इति ब्रह्म' (ऐ.आ. २-३-८.) इत्यादिनिरवकाशब्रह्मशब्दाभ्यासाच्चेत्यर्थः । एतद् विष्णुस्वरूपं ब्रह्म गुणपूर्णम् । अयं जीवो ब्रह्मणः परस्याऽश्रयः । इमं पुरुषं चतुर्मुखं परब्रह्म प्रापयत । वायुर्यत्र स्थित उर्वेव गरणं स्तवनं चक्रे तत्स्थानमुदरं तद्गतमित्यर्थः ।

ಉಪದೇಶಿಸಿದರು. 'ಸ ಏಷೋಽಸುಃ ಸ ಏಷ ಪ್ರಾಣಃ ಸ ಏಷ ಭೂತಿಶ್ಚಾಭೂತಿಶ್ಚ ತಂ ಭೂತಿರಿತಿ ದೇವಾ ಉಪಸಾಂಚಕ್ರಿರೇ' ಆ ಪ್ರಾಣನು ಅಸು = ಶತ್ರುನಾಶಕನು, ಆ ಪ್ರಾಣನು ಶ್ರೇಷ್ಠನು, ಆ ಪ್ರಾಣನು ದೇವತೆಗಳಿಗೆ ಐಶ್ವರ್ಯಪ್ರದನು, ದೈತ್ಯರಿಗೆ ಅಜ್ಞಾನಪ್ರದನು, ಇಂತಹ ಪ್ರಾಣನನ್ನು ದೇವತೆಗಳು ಭೂತಿ ಎಂದು ಉಪಾಸನೆ ಮಾಡಿದರು'' ಎಂದು. ಹೀಗೆ ಶ್ರುತಿಯಲ್ಲಿ ಪ್ರಾಣನಿಗೆ ಭೂತಿತ್ವೇನ ದೇವತೋ-ಪಾಸ್ಯತ್ವವು ಹೇಳಲ್ಪಟ್ಟಿದೆ.

'ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾಃ ಏಕೈವ ವ್ಯಾಹೃತಿಃ ಪ್ರಾಣ ಏವ ಪ್ರಾಣ ಋಚ ಇತ್ಯೇವ ವಿದ್ಯಾತ್' (ಯಾವ, ಸರ್ವ ಋಕ್ಕುಗಳು ಎಲ್ಲಾ ವೇದಗಳು ಎಲ್ಲಾ ಧ್ವನಿಗಳು ಒಬ್ಬನೇ ಪ್ರಾಣನೆಂಬ ಪರಮಾತ್ಮನನ್ನು ಪ್ರತಿಪಾದಿಸುತ್ತಿವೆಯೆಂದು ತಿಳಿಯಬೇಕು) ಹೀಗೆ ಪ್ರಾಣನಿಗೆ ಸರ್ವವೇದಪ್ರತಿಪಾದ್ಯತ್ವವು ಹೇಳಲ್ಪಟ್ಟಿದೆ.

**'अथ देवरथस्तस्य वागुद्धिः श्रोत्र पक्षसी चक्षुषी युक्ते मनः सङ्गृहीता तदयं प्राणोऽधितिष्ठति' इति त(स्यैव देह)स्य देहरथत्वमुच्यते । स चासावयं चेति तदयम् । तदिति रथतयोक्तं शरीरं वा । लिङ्गव्यत्ययो वा । लिङ्गेन पूर्वपक्षिते कथं तेनैव सिद्धान्त इत्याशङ्कानुदयाय लिङ्गबाहुल्योक्तिः । बाहुल्यस्यापि प्राबल्यहेतुत्वात् । यदाहुः 'द्विविधं बलवत्त्वं च बहुत्वाच्च स्वभावतः' इति ।**

'ಅಥ ದೇವರಥಸ್ತಸ್ಯ ವಾಗುದ್ಧಿಃ ಶ್ರೋತ್ರೇ ಪಕ್ಷಸೀ ಚಕ್ಷುಷೀ ಯುಕ್ತೇ ಮನಃ ಸಂಗೃಹೀತಾ ತದಯಂ ಪ್ರಾಣೋಽಧಿತಿಷ್ಠತಿ' ಅನಂತರ ವಿಷ್ಣುವಿನ ರಥ ಯಾವುದೆಂದು ಹೇಳುತ್ತಾರೆ. ಆ ವಿಷ್ಣುದೇವನ ರಥಕ್ಕೆ ವಾಗಭಿಮಾನಿಯಾದ ಉಮಾದೇವಿಯು ಹಗ್ಗ, ಚಂದ್ರ ಮತ್ತು ಅವನ ಪತ್ನಿಯು ಎರಡು ಪಾರ್ಶ್ವಗಳಲ್ಲಿರುವ ಕುದುರೆಗಳು, ಸೂರ್ಯ ಮತ್ತು ಅವನ ಪತ್ನಿಯು ಮುಂದಿರುವ ಕುದುರೆಗಳು, ಮನೋಭಿಮಾನಿಯಾದ ರುದ್ರನು ಸಾರಥಿಯು, ಪ್ರಾಣನಾಮಕನಾದ ಪರಮಾತ್ಮನೇ ರಥದಲ್ಲಿ ಕುಳಿತಿದ್ದಾನೆ. ಹೀಗೆ ಶ್ರುತಿಯಲ್ಲಿ ಪ್ರಾಣನಿಗೆ ದೇಹವು ರಥವಾಗಿದೆಯೆಂದು ಹೇಳಲ್ಪಟ್ಟಿದೆ. 'ತದಯಂ' ಎಂದರೆ 'ಸಚಾಸೌ ಅಯಮ್' ಎಂದು ವಿವಕ್ಷಿಸಬೇಕು. ಏಕೆಂದರೆ, ಪ್ರಾಣ ಅಥವಾ ರಥ-ಶಬ್ದಗಳು ಪುಲ್ಲಿಂಗದಲ್ಲಿವೆ. ಆದರೆ ಭಾಷ್ಯದಲ್ಲಿ ನಪುಂಸಕಲಿಂಗದ ತತ್‌ಶಬ್ದವನ್ನು ಪ್ರಯೋಗಿಸಿದ್ದಾರೆ. ಆದ್ದರಿಂದ ಕರ್ಮಧಾರಯಸಮಾಸ ಮಾಡಿದಾಗ ಈ ಸಮಸ್ಯೆ ಪರಿಹಾರವಾಗುತ್ತದೆ. ಅಥವಾ ತತ್-ಶಬ್ದದಿಂದ ರಥರೂಪದಿಂದ ಹೇಳಿದ ಶರೀರವನ್ನು ತೆಗೆದುಕೊಳ್ಳಬೇಕು. ಶರೀರಶಬ್ದವು ನಪುಂಸಕ-ಲಿಂಗವಾದ್ದರಿಂದ ಸಮಸ್ಯೆಯಿಲ್ಲ. ಅಥವಾ ಶ್ರೌತಪ್ರಯೋಗವಾದ್ದರಿಂದ ಲಿಂಗವ್ಯತ್ಯಾಸವಿಲ್ಲವೆಂದು ತಿಳಿಯಬೇಕು.

ಇಂದ್ರಿಯಗಣಪರಿತತ್ವ ಎಂಬ ಲಿಂಗದಿಂದ ಮುಖ್ಯಪ್ರಾಣನೇ ಪ್ರಾಣಶಬ್ದವಾಚ್ಯನೆಂದು ಪೂರ್ವಪಕ್ಷ ಮಾಡಲಾಯಿತು. ಇದನ್ನು ದೇವೋಪಾಸ್ಯತ್ವ, ಸರ್ವವೇದೋಕ್ತತ್ವ, ದೇಹರಥಿತ್ವವೇ ಮೊದಲಾದ

ಲಿಂಗಗಳಿಂದಲೇ ನಿರಾಸ ಮಾಡಲು ಹೇಗೆ ಸಾಧ್ಯ? ಎಂಬ ಶಂಕೆಗೆ ಉತ್ತರ ನೀಡಲು ಲಿಂಗ-ಬಾಹುಲ್ಯವನ್ನು ಹೇಳಿದ್ದಾರೆ. ಏಕೆಂದರೆ ಲಿಂಗಬಾಹುಲ್ಯವೂ ಸಹ ಪ್ರಾಬಲ್ಯಕ್ಕೆ ಕಾರಣವಾಗಿದೆ. ಪ್ರಾಬಲ್ಯವು ಎರಡು ವಿಧವೆಂದು ಹೇಳಿದ್ದಾರೆ. 'ದ್ವಿವಿಧಂ ಬಲವತ್ವಂ ಚ ಬಹುತ್ವಾಚ್ಚ ಸ್ವಭಾವತಃ' (ಸ್ವಭಾವದಿಂದ ಬಾಹುಲ್ಯದಿಂದ ಲಿಂಗವು ಪ್ರಬಲವಾಗುತ್ತದೆ ಎಂದು).

**(त) ननु सैद्धान्तिकलिङ्गतोऽपि पूर्वपक्षलिङ्गमेव बलवत् । निरवकाशत्वात् । बाहुल्येन बलवतोऽपि स्वभावबलिनः प्राबल्यात् । यत आहुः । 'तयोः स्वभावो बलवान् उपजीव्यादिकश्च सः' । इति ।**

ಶಂಕೆ -- ಸಿದ್ಧಾಂತಪ್ರಾಪಕವಾದ ದೇಹೋಪಾಸ್ಯತ್ವ ಮೊದಲಾದ ಲಿಂಗಗಳಿಗಿಂತ ಪೂರ್ವಪಕ್ಷ-ಪ್ರಾಪಕವಾದ ಇಂದ್ರಿಯಗಣಪಠಿತತ್ವ ಲಿಂಗವೇ ಪ್ರಬಲವಾಗಿದೆ. ಏಕೆಂದರೆ ನಿರವಕಾಶವಾದ್ದರಿಂದ. ಬಹುತ್ವಪ್ರಯುಕ್ತವಾಗಿ ಪ್ರಬಲವಾಗುವುದಕ್ಕಿಂತ ಸ್ವಭಾವತಃ ಪ್ರಬಲವಾಗುವುದೇ ಶ್ರೇಷ್ಠ. ಈ ವಿಷಯದಲ್ಲಿ 'ತಯೋಃ ಸ್ವಭಾವೋ ಬಲವಾನ್ ಉಪಜೀವ್ಯಾದಿಕಶ್ಚ ಸಃ' ಸ್ವಭಾವತ್ವ ಮತ್ತು ಬಹುತ್ವಗಳ ಮಧ್ಯದಲ್ಲಿ ಸ್ವಭಾವವೇ ಶ್ರೇಷ್ಠವೆಂದು ಜ್ಞಾನಿಗಳ ಮಾತು ಸಮ್ಮತವಾಗಿದೆ. ಸ್ವಭಾವವೆಂದರೆ ಉಪಜೀವ್ಯಾದಿಗಳನ್ನು ತೆಗೆದುಕೊಳ್ಳಬೇಕು. ಆದ್ದರಿಂದ ದೇವೋಪಾಸ್ಯತ್ವವೇ ಮೊದಲಾದ ಅನೇಕಲಿಂಗಗಳಿಂದ ವಿಷ್ಣುವೇ ಪ್ರಾಣಶಬ್ದವಾಚ್ಯನೆಂದು ಹೇಗೆ ನಿರ್ಣಯಿಸುತ್ತೀರಿ?

ಸಮಾಧಾನ - ಇದು ತಪ್ಪು. ಸಿದ್ಧಾಂತಲಿಂಗಗಳೂ ಸಹ ಅನನ್ಯಥಾಸಿದ್ಧವಾದ್ದರಿಂದ ನಿರವಕಾಶ-ಗಳಾಗಿವೆ. ಆದ್ದರಿಂದ ಬಹುತ್ವಪ್ರಯುಕ್ತವಾಗಿ ಮತ್ತು ಸ್ವಭಾವಪ್ರಯುಕ್ತವಾಗಿ ಎರಡು ವಿಧದಿಂದಲೂ ಸಿದ್ಧಾಂತಲಿಂಗಗಳಿಗೆ ಪ್ರಾಬಲ್ಯವಿರುವುದರಿಂದ ಒಂದೇ ಪೂರ್ವಪಕ್ಷಯುಕ್ತಿಯು ದುರ್ಬಲವಾಗುತ್ತದೆ.

**भावदीपः – अत इतीति ॥** 'अतोऽन्यप्राप्तिसद्भावादाह प्राणस्य विष्णुत्वं सूत्रकारः' इत्यर्थो भाष्यस्य प्रागुक्तदिशा सुज्ञान इति नोक्तः । एवमग्रेऽपि । सौत्रप्रतिज्ञाहेत्वोरर्थोक्तिपरभाष्यं व्युत्क्रमेण व्याख्याति – **तद्वै त्वमिति** ॥ अपिपदार्थव्यक्तिरियम् । 'विष्णुमेव' इत्यादिवक्ष्यमाणस्मृत्यनुरोधेन लिङ्गानि निष्कर्षयति **तं देवा इति** ॥ लिङ्गस्य प्राणस्थताभिव्यक्त्या 'एतं प्राणम्' इति व्याख्या

**'तस्मात्श्रुत्वा परं ब्रह्म देवा नारायणाभिधम् ।**
**शिष्यप्रशिष्यादिषु च तेऽनयन् वायुनोदितम् ॥**

इति तद्भाष्योक्तेराह – **शिष्येति** ॥ प्रेत्यस्यार्थः सम्यगिति । **प्राणस्य भूतित्वेनेति** ॥ भाष्ये 'तं भूतिरिति देवाः' इत्येव वाच्ये 'स एषोऽसुः सप्राणः' इति

पूर्वांशोक्तिः 'तम्' इति परामृश्यमानं दर्शयितुमिति सूचितम् । 'ता वा एताः' इति श्रुत्यर्थं तु 'ज्योतिरुपक्रमात्' इत्यत्र वक्ष्यति । भाष्ये **'प्राणऋच इत्येव विद्यात्'** इत्यंशोक्तिरपि ऋचस्तु विशेषत इन्द्रादिनामवतो विष्णोर्गुणानल्पज्ञानिनामपि प्रकाशयन्तीति प्राणो नारायण एवेति विद्यात् इति तद्भाष्योक्तदिशा ऋचां तन्निष्ठत्वात् तदारण्यकस्यापि तन्निष्ठत्वस्य द्योतनायेत्याहुः ।

'तदयम्' इति तच्छब्दपरामृष्टं दर्शयितुं पूर्वांशमाह – **अथ देवरथ इति** ॥ देवस्य विष्णो रथः देवरथः वाग्देवतोमोद्धरणहेतुरज्जुः । श्रोत्रदेवते चन्द्ररोहिण्यौ पार्श्वस्थाश्वौ चक्षुर्देवते सूर्यतद्भार्ये युगवाहकपुरःस्थितावश्वौ । मनो रुद्रः सङ्ग्रहीता प्रागुक्ताया उद्धेरित्यर्थः ।

**स चासाविति** ॥ सुप्सुपेति समासः । तेन लिङ्गोपपत्तिरिति भावः । कर्मकारकलाभाय भिन्नं पदं मत्वाऽऽह – **तदितीति** ॥ **'विष्णुर्वायुश्च तं रथं प्रकृष्टानन्दरूपत्वात् प्राणाख्यावधितिष्ठत'** इत्यैतरेयभाष्योक्तेस्तदित्यस्य तमित्यर्थं मत्वा आह – **लिङ्गव्यत्ययो वेति** ॥

**.........बाहुल्ये श्रुतिलिङ्गयोः ।**
**अन्यस्य मुख्यवाच्यत्वं न ...........**

इत्यनुव्याख्यानुरोधेन तात्पर्यमाह **लिङ्गेनेति** ॥ **'इन्द्रियैः सहाभिधानात्'** इत्युक्तलिङ्गेनेत्यर्थः । **लिङ्गबाहुल्येति** ॥ एतल्लिङ्गानामेवोक्तिस्तु वक्ष्यमाणस्मृतिगृहीतत्वादिति भावः । **यदाहुरिति** ॥ विष्णुतत्वनिर्णयोक्तब्रह्मतर्कवचनकर्तार इत्यर्थः ।

**तयोरिति** ॥ पूर्वोक्तस्य उत्तरार्धमेतत् । आदिपदेन निरवकाशत्वग्रहः ।

"ಅತ ಇತಿ" ಎಂಬ ಟೀಕೆಯಲ್ಲಿರುವ ಪ್ರತೀಕಕ್ಕೆ ಹೀಗರ್ಥ-- ಹೀಗೆ ಅನ್ಯಪ್ರಾಪಕವಾದ ಲಿಂಗಗಳು ಕೇಳಿಸುತ್ತಿರುವುದರಿಂದ ಸೂತ್ರಕಾರರು ಪ್ರಾಣನಿಗೆ ವಿಷ್ಣುತ್ವವನ್ನು ಸಮರ್ಥಿಸುತ್ತಿದ್ದಾರೆ.ಎಂಬುದಾಗಿ ಹಿಂದೆ ಹೇಳಿದ ಪ್ರಕಾರ ಭಾಷ್ಯಕ್ಕೆ ಅರ್ಥವನ್ನು ತಿಳಿಯಬೇಕು. ಆದ್ದರಿಂದ ಇಲ್ಲಿ ಪ್ರತ್ಯೇಕವಾಗಿ ಹೇಳಿಲ್ಲ. ಮುಂದಿನ ಗ್ರಂಥದಲ್ಲೂ ಇದನ್ನು ಅನುಸಂಧಾನ ಮಾಡಿಕೊಳ್ಳಬೇಕು. ಸೂತ್ರದಲ್ಲಿರುವ ಪ್ರತಿಜ್ಞಾ ಹಾಗೂ ಹೇತುಗಳ ಅರ್ಥವನ್ನು ಹೇಳುವ ಭಾಷ್ಯವನ್ನು ವ್ಯುತ್ಕ್ರಮವಾಗಿ ವ್ಯಾಖ್ಯಾನಿಸುತ್ತಿದ್ದಾರೆ "ತದ್ವೈ ತ್ವಂ" ಇತ್ಯಾದಿಯಾಗಿ. ಭಾಷ್ಯದಲ್ಲಿರುವ 'ಅಪಿ' ಪದಾರ್ಥದ ಅಭಿಪ್ರಾಯವೇ ಇದಾಗಿದೆ.

ಅಂತಿಮಪ್ರಾಣಾಧಿಕರಣ (೧।೧।೧೨)

'ವಿಷ್ಣುಮೇವ' ಇತ್ಯಾದಿಯಾಗಿ ಮುಂದೆ ಹೇಳುವ ಸ್ಮೃತಿಯನ್ನು ಅನುಸರಿಸಿ ಲಿಂಗಗಳನ್ನು ನಿಷ್ಕರ್ಷೆ ಮಾಡುತ್ತಿದ್ದಾರೆ ''ತಂ ದೇವಾಃ'' ಎಂಬುದಾಗಿ. ಲಿಂಗವು ಪ್ರಾಣನಲ್ಲಿದೆಯೆಂದು ಮೇಲ್ನೋಟಕ್ಕೆ ತೋರುವುದರಿಂದ 'ಏತಂ ಪ್ರಾಣಂ' ಎಂಬುದಾಗಿ ಶ್ರುತಿಯನ್ನು ವ್ಯಾಖ್ಯಾನಿಸುತ್ತಿದ್ದಾರೆ.

ತಸ್ಮಾತ್ ಶ್ರುತ್ವಾ ಪರಂ ಬ್ರಹ್ಮ ದೇವಾ ನಾರಾಯಣಾಭಿಧಮ್ ।
ಶಿಷ್ಯಪ್ರಶಿಷ್ಯಾದಿಷು ಚ ತೇಽನಯನ್ ವಾಯುನೋದಿತಮ್ ॥

ಆದ್ದರಿಂದ ದೇವತೆಗಳು ನಾರಾಯಣನೆಂಬ ಪರಬ್ರಹ್ಮನ ಬಗ್ಗೆ ಕೇಳಿದರು; ವಾಯುದೇವರಿಂದ ತಿಳಿದಿದ್ದನ್ನು ಶಿಷ್ಯಪ್ರಶಿಷ್ಯಾದಿಗಳಿಗೆ ಉಪದೇಶಿಸಿದರು.

ಹೀಗೆ ಐತರೇಯೋಪನಿಷತ್ತಿನ ಭಾಷ್ಯದಲ್ಲಿ ಹೇಳಿದ್ದರಿಂದ ಟೀಕೆಯಲ್ಲಿ ''ಶಿಷ್ಯಾದಿಷು'' ಎಂದು ಹೇಳಿದ್ದಾರೆ. ಪ್ರಾಣಯಂತ ಎಂಬಲ್ಲಿರುವ 'ಪ್ರ' ಉಪಸರ್ಗದ ಅರ್ಥವನ್ನು 'ಸಮ್ಯಕ್' ಎಂದು ಹೇಳಿದ್ದಾರೆ. ''ಪ್ರಾಣಸ್ಯ ಭೂತಿತ್ವೇನ'' ಎಂದು ಟೀಕೆಯಲ್ಲಿದೆ. ವಸ್ತುತಃ 'ತಂ ಭೂತಿಃ ದೇವಾಃ' ಎಂದು ಹೇಳಿದ್ದರೆ ಸಾಕಾಗುತ್ತಿತ್ತು. 'ಏಷೋಽಸುಃ ಸ ಏಷ ಪ್ರಾಣಃ' ಎಂಬುದಾಗಿ ಹಿಂದಿನ ವಾಕ್ಯವನ್ನು ಹೇಳುವ ಅವಶ್ಯಕತೆ ಇರಲಿಲ್ಲ. ಆದರೆ 'ತಮ್' ಎಂಬುದರಿಂದ ಯಾರನ್ನು ಪರಾಮರ್ಶಿಸಬೇಕೆಂಬುದನ್ನು ತಿಳಿಸಲು ಹಿಂದಿನ ವಾಕ್ಯದಲ್ಲಿ ಪ್ರಕೃತನಾದ ಪ್ರಾಣನನ್ನು ಉಲ್ಲೇಖಿಸಿದ್ದಾರೆ. 'ತಾ ವಾ ಏತಾಃ ಸರ್ವಾ ಋಚಃ' ಇತ್ಯಾದಿ ಶ್ರುತಿಯ ಅರ್ಥವನ್ನು ಮೂರನೆಯ ಪಾದದ ಜ್ಯೋತಿರುಪಕ್ರಮಾತ್ ಎಂಬ ಸೂತ್ರದಲ್ಲಿ ವಿವರಿಸುವವರಿದ್ದಾರೆ.

ಭಾಷ್ಯದಲ್ಲಿ 'ಪ್ರಾಣ ಋಚ ಇತ್ಯೇವ ವಿದ್ಯಾತ್' ಎಂಬಂಶವನ್ನು ಏಕೆ ಹೇಳಿದ್ದಾರೆಂದರೆ ಇಂದ್ರಾದಿಗಳ ಹೆಸರನ್ನು ಹೇಳುವ ಋಕ್ಕುಗಳೂ ಸಹ ವಿಷ್ಣುವಿನ ಗುಣಗಳನ್ನೇ ಹೇಳಲು ಹೊರಟಿವೆ. ಹೀಗೆ ಅಲ್ಪಜ್ಞಾನಿಗಳಿಗೂ ಸಹ ಸಕಲಶಬ್ದಗಳಿಂದ ನಾರಾಯಣನೇ ವಾಚ್ಯನೆಂದು ತಿಳಿಸುವುದಕ್ಕಾಗಿ ಐತರೇಯಭಾಷ್ಯದ ಪ್ರಕಾರ ಎಲ್ಲಾ ಋಕ್ಕುಗಳೂ ಭಗವನ್ನಿಷ್ಠವಾದ್ದರಿಂದ ಅದರ ಆರಣ್ಯಕವಾದ ಐತರೇಯವೂ ಸಹ ಭಗವಂತನನ್ನೇ ಪ್ರತಿಪಾದಿಸುತ್ತದೆಂಬ ಸ್ವಾರಸ್ಯ ಇದರಲ್ಲಡಗಿದೆಯೆಂದು ಕೆಲವರು ವ್ಯಾಖ್ಯಾನಿಸುತ್ತಾರೆ.

ಭಾಷ್ಯದಲ್ಲಿ 'ತದಯಂ ಪ್ರಾಣೋಽಧಿಷ್ಠತಿ' ಎಂದಿದೆ. ಇಲ್ಲಿರುವ ತತ್‌ಶಬ್ದದಿಂದ ಯಾವುದನ್ನು ಪರಾಮರ್ಶಿಸಬೇಕೆಂಬುದನ್ನು ತಿಳಿಸಲು ಅದರ ಹಿಂದಿನ ವಾಕ್ಯವನ್ನು ಟೀಕೆಯಲ್ಲಿ ''ಅಥ ದೇವರಥಃ'' ಇತ್ಯಾದಿಯಾಗಿ ಉಲ್ಲೇಖಿಸಿದ್ದಾರೆ. ಆದ್ದರಿಂದ ತತ್‌ಶಬ್ದಕ್ಕೆ ದೇಹವೆಂಬ ರಥ ಎಂಬರ್ಥವು ತಿಳಿಯುತ್ತದೆ. ದೇವರಥಃ = ವಿಷ್ಣುವಿನ ರಥಕ್ಕೆ, ವಾಗುದ್ಧಿಃ = ವಾಗ್ದೇವತೆಯಾದ ಉಮಾದೇವಿಯು ಎಳೆಯುವ ಹಗ್ಗವಾಗಿದ್ದಾಳೆ. ಶ್ರೋತ್ರೇ = ಶ್ರೋತ್ರಾಭಿಮಾನಿಗಳಾದ ಚಂದ್ರ ಹಾಗೂ ರೋಹಿಣಿಯರು, ಪಕ್ಷಸೀ = ಎರಡೂ ಬದಿಯಲ್ಲಿರುವ ಕುದುರೆಗಳು, ಚಕ್ಷುಷೀ ಯುಕ್ತೇ = ಚಕ್ಷುರಭಿಮಾನಿದೇವತೆಗಳಾದ ಸೂರ್ಯ ಮತ್ತು ಅವನ ಹೆಂಡತಿ ಸಂಜ್ಞಾದೇವಿಯು ಮಧ್ಯದಲ್ಲಿರುವ ಎರಡು ಕುದುರೆಗಳು, ಮನಃ = ಮನೋಭಿಮಾನಿಯಾದ ರುದ್ರದೇವರು, ಸಂಗೃಹೀತಾಃ = ಇವರೆಲ್ಲರನ್ನೂ ಮುನ್ನಡೆಸುವ ಸಾರಥಿಯು. ಹೀಗೆ ಶುತ್ಯರ್ಥ.

ಪರಿಪೂರ್ಣಚಂದ್ರಿಕಾ

ತದಯಂ ಎಂಬ ಶಬ್ದಕ್ಕೆ 'ಸ ಚ ಅಯಂ ಚ ತದಯಮ್' ಎಂದು ವಿಗ್ರಹ. ಪುಲ್ಲಿಂಗವಾದ ರಥಶಬ್ದವನ್ನು ನಪುಂಸಕಲಿಂಗದಲ್ಲಿರುವ ತತ್‌ಶಬ್ದದಿಂದ ಪರಾಮರ್ಶಿಸುವುದು ಕಷ್ಟ. ಆದ್ದರಿಂದ "ಸ ಚಾಸೌ ಅಯಂ ಚ" ಎಂದು ಸಮಾಸ ಮಾಡಬೇಕು. 'ಸುಪ್‌ಸುಪಾ' ಎಂಬುವುದರಿಂದ ಹೀಗೆ ಸಮಾಸ ಮಾಡಬಹುದು. ಇದರಿಂದ ಲಿಂಗವ್ಯತ್ಯಾಸದೋಷವು ಬರುವುದಿಲ್ಲ. ಅಥವಾ ತತ್‌ಶಬ್ದದಿಂದ ರಥವೆಂದು ಹೇಳಲ್ಪಟ್ಟ ಶರೀರವನ್ನು ಪರಾಮರ್ಶಿಸಬೇಕು. ರಥಶಬ್ದವು ಪುಲ್ಲಿಂಗವಾದರೂ ಶರೀರಶಬ್ದವು ನಪುಂಸಕಲಿಂಗದಲ್ಲಿ-ರುವುದರಿಂದ ದೋಷವಿಲ್ಲ. ಹೀಗೆ ಹೇಳಿದಾಗ ಕರ್ಮಕಾರಕಲಾಭವು ಆಗುತ್ತದೆ.

ಅಥವಾ 'ತತ್' ಎಂಬ ಪದಕ್ಕೆ ತಮ್ ಎಂದು ಅರ್ಥೈಸಬಹುದು. ಏಕೆಂದರೆ ಐತರೇಯಭಾಷ್ಯದಲ್ಲಿ 'ವಿಷ್ಣುರ್ವಾಯುಶ್ಚ ತಂ ರಥಂ ಪ್ರಕೃಷ್ಟಾನಂದರೂಪತ್ವಾತ್ ಪ್ರಾಣಾಖ್ಯಾವಧಿತಿಷ್ಠತಃ' ಎಂಬುದಾಗಿ ತದಯಂ ಎಂಬುದಕ್ಕೆ ತಂ ರಥಂ ಎಂದು ಅರ್ಥೈಸಿದ್ದಾರೆ. ಈ ಅಭಿಪ್ರಾಯದಿಂದ "ಲಿಂಗವ್ಯತ್ಯಯೋ ವಾ" ಎಂದು ಟೀಕೆಯಲ್ಲಿ ಹೇಳಿದ್ದಾರೆ.

'............. ಬಾಹುಲ್ಯೇ ಶ್ರುತಿಲಿಂಗಯೋಃ।
ಅನ್ಯಸ್ಯ ಮುಖ್ಯವಾಚ್ಯತ್ವಂ ನ ..............'

ಎಂಬ ಅನುವ್ಯಾಖ್ಯಾನಕ್ಕೆ ಅನುಸಾರಿಯಾದ ತಾತ್ಪರ್ಯವನ್ನು "ಲಿಂಗೇನ ಪೂರ್ವಪಕ್ಷಿತೇ" ಇತ್ಯಾದಿ ಟೀಕೆಯಿಂದ ಹೇಳುತ್ತಿದ್ದಾರೆ. 'ಇಂದ್ರಿಯೈಃ ಸಹಾಭಿಧಾನಾತ್' (ಇಂದ್ರಿಯಗಳ ಜೊತೆಗೆ ಹೇಳಲ್ಪಟ್ಟ) ಎಂಬ ಲಿಂಗದಿಂದ ಎಂದರ್ಥ. "ಲಿಂಗಬಾಹುಲ್ಯೋಕ್ತಿಃ" ಎಂದು ಟೀಕೆಯಲ್ಲಿದೆ. ವಿಷ್ಣುವಿನಲ್ಲಿ ಹೇಳಲ್ಪಟ್ಟ ಬಹು-ಲಿಂಗಗಳಿಗೆ ಮುಂದೆ ಉದಾಹರಿಸುವ ಸ್ಮೃತಿಗಳ ಅನುಗ್ರಹವಿದೆ ಎಂದು ಇದರಿಂದ ತಿಳಿಸಿದ್ದಾರೆ. 'ಯದಾಹುಃ' ಎಂದರೆ ವಿಷ್ಣುತತ್ವನಿರ್ಣಯದಲ್ಲಿ ಉದಾಹರಿಸಲ್ಪಟ್ಟ ಬ್ರಹ್ಮತರ್ಕಕರ್ತೃಗಳು ಹೇಳಿ-ದ್ದಾರೆಂದರ್ಥ.

'ದ್ವಿವಿಧಂ ಬಲವತ್ತ್ವಂ ಚ' ಎಂಬುದಾಗಿ ಹಿಂದೆ ಹೇಳಿದ ಶ್ಲೋಕದ ಉತ್ತರಾರ್ಧವನ್ನೇ "ತಯೋಃ ಸ್ವಭಾವೋ" ಎಂಬುದಾಗಿ ಹೇಳಿದ್ದಾರೆ. "ಉಪಜೀವ್ಯಾದಿಕಃ" ಎಂಬಲ್ಲಿರುವ ಆದಿಪದದಿಂದ ನಿರ-ವಕಾಶತ್ವವನ್ನು ಗ್ರಹಿಸಬೇಕು.

## ಬ್ರಹ್ಮಶಬ್ದದ ಅನುಗಮ

**भाष्यम् – 'विष्णुमेवानयन् देवा विष्णुं भूतिमुपासते ।
स एव सर्ववेदोक्तस्तद्रथो देह उच्यते ॥' इति स्कान्दे ।
ब्रह्मशब्दानुगमाच्च ॥१२॥**

'ದೇವತೆಗಳು ವಿಷ್ಣುವನ್ನೇ ಶಿಷ್ಯರಿಗೆ ಪ್ರಾಣನೆಂದು ಉಪದೇಶಿಸಿದರು. ವಿಷ್ಣುವನ್ನೇ ಐಶ್ವರ್ಯಪ್ರದನನ್ನಾಗಿ ತಿಳಿದು ಪೂಜಿಸಿದರು. ಅಂತಹ ವಿಷ್ಣುವೇ ಸರ್ವವೇದಪ್ರತಿಪಾದ್ಯನು. ಈ ದೇಹವು ಅವನ ರಥವೇ ಆಗಿದೆ' ಎಂದು ಸ್ಕಾಂದಪುರಾಣದಲ್ಲಿ ಹೇಳಲ್ಪಟ್ಟಿದೆ.

**ಗುಣಪೂರ್ಣತ್ವವನ್ನು ಹೇಳುವ ಬ್ರಹ್ಮಶಬ್ದವು ಅನೇಕ ಬಾರಿ ಕೇಳಿಸುತ್ತಿರುವುದರಿಂದಲೂ ಪ್ರಾಣಶಬ್ದವಾಚ್ಯನು ವಿಷ್ಣುವೇ ಆಗಿದ್ದಾನೆ.**

ಪ್ರತಿಪದಾರ್ಥ - ಸಿದ್ಧಾಂತಲಿಂಗಗಳು ಅನೇಕವಿರಬಹುದು. ಆದರೆ ಪೂರ್ವಪಕ್ಷ-ಲಿಂಗವು ನಿರವಕಾಶವಾಗಿ ಬಲಿಷ್ಠವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುವುದಕ್ಕಾಗಿ ಸಿದ್ಧಾಂತಲಿಂಗದಲ್ಲಿಯೂ ನಿರವಕಾಶತ್ವವನ್ನು ಸಮರ್ಥಿಸಲು ಸ್ಮೃತಿಯನ್ನು ಉಲ್ಲೇ-ಖಿಸುತ್ತಿದ್ದಾರೆ. ವಿಷ್ಣುಮೇವ = ವಿಷ್ಣುವನ್ನೇ, ದೇವಾಃ = ದೇವತೆಗಳು, ಆನಯನ್ = ಶಿಷ್ಯರಿಗೆ ಪ್ರಾಣನೆಂದು ಉಪದೇಶಿಸಿದರು. ವಿಷ್ಣುಂ = ಅಂತಹ ವಿಷ್ಣುವನ್ನೇ, ಭೂತಿಂ = ಐಶ್ವರ್ಯಪ್ರದನನ್ನಾಗಿ, ಉಪಾಸತೇ = ತಿಳಿದು ಆರಾಧಿಸಿದರು. ಸ ಏವ = ಅಂತಹ ವಿಷ್ಣುವೇ, ಸರ್ವವೇದೋಕ್ತಃ = ಸಕಲವೇದ- ಪ್ರತಿಪಾದ್ಯನು. ದೇಹಃ = ದೇಹವು, ತದ್ರಥಃ = ಅವನ ರಥವೆಂದು, ಉಚ್ಯತೇ = ಹೇಳಲ್ಪಟ್ಟಿದೆ. ಇತಿ = ಈ ರೀತಿಯಾಗಿ, ಸ್ಕಾಂದೇ = ಸ್ಕಾಂದಪುರಾಣದಲ್ಲಿ ಹೇಳಿದ್ದಾರೆ. ಬ್ರಹ್ಮಶಬ್ದಾನುಗಮಾಚ್ಚ = ಗುಣಪೂರ್ಣ-ವೆಂಬ ಅರ್ಥದಲ್ಲಿರುವ ಬ್ರಹ್ಮಶಬ್ದವು ಅನೇಕಬಾರಿ ಕೇಳಿಸುತ್ತಿರುವುದರಿಂದಲೂ ಪ್ರಾಣಶಬ್ದವಾಚ್ಯನು ವಿಷ್ಣುವೇ ಆಗಿದ್ದಾನೆ.

तत्वप्रकाशिका – **अतः कथं तैर्विष्णुत्वनिश्चय इत्यतो लिङ्गानामनन्यथा-सिद्धतां च स्मृत्या साधयति – विष्णुमेवेति ॥ एकप्रकारेण प्रबलात्प्रकारद्वयेनापि प्रबलस्याधिक्येन निर्णयोपपत्तिरिति भावः । अभ्युपेत्य चेदमुदितम् । यावता प्राणैः**

---

**भाष्यदीपिका–** ननु बाहुल्येन बलवतः सैद्धान्तिकलिङ्गादपि पूर्ववाद्युक्तलिङ्गमेव बलवत् । निरवकाशत्वेन स्वभावतो बलवत्त्वात् । न चाविशेषेणानिर्णयः, बाहुल्येन बलवतोऽपि स्वभावबलिनः प्राबल्यात् । यदाहुः –

**'द्विविधं बलवत्त्वं च बहुत्वाच्च स्वभावतः ।**
**'तयोः स्वभावो बलवान् उपजीव्यादिकश्च सः ॥'**

इति । अतः कथं तैर्विष्णुत्वनिश्चय इत्यतो देवतोपदेश्यत्वादिलिङ्गानां निरवकाशत्वमपि स्मृत्या साधयति – विष्णुमिति ॥ देवाः विष्णुमेव प्राधान्येन शिष्यादिषु ज्ञानसम्प्रदायप्रवर्तनेन 'आनयन्' उपादिशन् । भूतिमुद्दिश्य विष्णुमेवोपासते । भूतिमिति विधेयविशेषणं वा । तथा च विष्णुं भूतिं भूतिर्ज्ञानाद्यैश्वर्यरूप इत्युपासत इत्यर्थः । 'सः' विष्णुर्मुख्यवाच्यतयेति शेषः, तेनैवकारोपपत्तिः । 'तद्रथः' विष्णोरेव रथः । अत्रैवकारस्य द्विर्ग्रहणात् सर्वत्रानुषङ्गः सूचितः । तेन सर्वलिङ्गानामपि निरवकाशत्वमुक्तं भवति । स्कान्दे इत्यनन्तरं लिङ्गानामनन्यथासिद्धत्वमुक्तमिति वाक्यशेषः । तथा चैकप्रकारेण प्रबलात् पूर्व-पक्षिलिङ्गात् प्रकारद्वयेनापि प्रबलस्य सैद्धान्तिकलिङ्गस्याऽधिक्येन निर्णयोपपत्तिरिति भावः । अभ्युपेत्य चेदमुदितम् । वस्तुतस्तु पूर्वपक्षिलिङ्गस्य न निरवकाशत्वेनापि प्राबल्यमस्ति, प्राणैः सहगणितत्वस्यान्तर्यामिनिष्ठतासम्भवात् ।

**सह गणितत्वस्यान्तर्यामितनष्टता सेत्स्यति । यदा प्रकारद्वयेनापि दुर्बललिङ्गस्योभयथा प्रबललिङ्गतो बाधसम्भवेन प्राणस्य विष्णुत्वसिद्धिस्तदा किं वाच्यमेतद् ब्रह्मशब्दाभ्यासादिति भावेनानुगमपदं प्रकारान्तरेण व्याचष्टे – ब्रह्मेति ॥ २८ ॥**

ಈ ವಿಷಯವನ್ನು ಸ್ಮೃತಿಯಿಂದ "ವಿಷ್ಣುಮೇವ" ಇತ್ಯಾದಿವಾಕ್ಯದಿಂದ ಸಾಧಿಸುತ್ತಿದ್ದಾರೆ.

ಒಂದು ಪ್ರಕಾರದಿಂದ ಪ್ರಬಲವಾಗಿರುವ ಲಿಂಗಕ್ಕಿಂತ ಎರಡು ಪ್ರಕಾರ ಪ್ರಬಲವಾಗಿರುವ ಲಿಂಗವೇ ಶ್ರೇಷ್ಠ. ಪ್ರಕೃತ ಸಿದ್ಧಾಂತಯುಕ್ತಿಗೆ ನಿರವಕಾಶತ್ವ ಮತ್ತು ಬಹುತ್ವವೆಂಬ ಎರಡು ಪ್ರಕಾರದಿಂದ ಶ್ರೇಷ್ಠತ್ವವಿದೆ. ವಸ್ತುತಃ ಪೂರ್ವಪಕ್ಷಯುಕ್ತಿಗೆ ನಿರವಕಾಶತ್ವವನ್ನು ಅವನ ಮಾತನ್ನು ಒಪ್ಪಿ ಹೇಳಿದ್ದು. ವಿಚಾರ ಮಾಡಿದರೆ ಪೂರ್ವಪಕ್ಷಯುಕ್ತಿಗೆ ನಿರವಕಾಶತ್ವವೇ ಇರುವುದಿಲ್ಲ. ಏಕೆಂದರೆ ಸರ್ವಾಂತರ್ಯಾಮಿಯಾದ ಪರಮಾತ್ಮನಲ್ಲಿ ಇಂದ್ರಿಯಗಣಪಠಿತತ್ವವೆಂಬ ಪೂರ್ವಪಕ್ಷಯುಕ್ತಿಯು ಸುಲಭವಾಗಿ ಕೂಡುತ್ತದೆ. ಹೀಗೆ ನಿರವಕಾಶತ್ವ ಮತ್ತು ಬಹುತ್ವ ಎಂಬ ಎರಡು ಪ್ರಕಾರದಿಂದಲೂ ಇಂದ್ರಿಯಗಣಪಠಿತತ್ವವೆಂಬ ಪೂರ್ವಪಕ್ಷಯುಕ್ತಿಯು ದುರ್ಬಲವಾಗಿರುವಾಗ ಎರಡೂ ಪ್ರಕಾರದಿಂದಲೂ ಪ್ರಬಲವಾದ ದೇವೋಪಾಸ್ಯತ್ವವೇ ಮೊದಲಾದ ಲಿಂಗಗಳಿಂದ ಬಾಧಿತವಾಗುತ್ತದೆ. ಈ ಕಾರಣದಿಂದ ಪ್ರಾಣಶಬ್ದವಾಚ್ಯನಾದವನು ವಿಷ್ಣುವೇ ಎಂದು ನಿರ್ಣಯವಾಗುತ್ತದೆ. ಹೀಗೆ ನಿರ್ಣಯವಾದ ಮೇಲೆ 'ಏತದ್ ಬ್ರಹ್ಮ' 'ಬ್ರಹ್ಮಣೋ ಲೋಕಃ' ಬ್ರಹ್ಮೇಮಂ ಪುರುಷಮ್' 'ಉದರಂ ಬ್ರಹ್ಮ' ಇತ್ಯಾದಿ ಸ್ಥಳಗಳಲ್ಲಿ ನಿರವಕಾಶವಾದ ಬ್ರಹ್ಮಶಬ್ದದ ಅನುಗಮವಿರುವುದರಿಂದ (ಬ್ರಹ್ಮಶಬ್ದದ ಅಭ್ಯಾಸವಿರುವುದರಿಂದ) ವಿಷ್ಣುವೇ ಪ್ರಾಣಶಬ್ದವಾಚ್ಯನೆಂದು ಸುಸ್ಪಷ್ಟವಾಗುತ್ತದೆ. ಈ ಅಭಿಪ್ರಾಯದಿಂದಲೇ ಸೂತ್ರದಲ್ಲಿರುವ ಅನುಗಮಪದವನ್ನು ಭಾಷ್ಯಕಾರರು "ಬ್ರಹ್ಮಶಬ್ದಾನುಗಮಾಚ್ಚ" ಎಂಬುದಾಗಿ ಮತ್ತೊಂದು ಪ್ರಕಾರದಿಂದ ವ್ಯಾಖ್ಯಾನಿಸಿದ್ದಾರೆ.

**भावदीपः – अनन्यथासिद्धतां चेति ॥** न केवलं बाहुल्यमिति चार्थः । **स्मृता-**ववधारणोक्त्यैतल्लाभ इति भावेन विष्णुमेवेत्यन्तप्रतीकोक्तिः । कथं तावतोक्तशङ्कानिरासः? इत्यतः तात्पर्यमाह – **एकेति ॥** निरवकाशत्वप्रकारेणेत्यर्थः । **प्रकारद्वयेनेति ॥** बहुत्वनिरवकाशत्वरूपप्रकारद्वयेनेत्यर्थः ।

**........... अत्रगस्य हि ।**

**विष्णोरेव तु लिङ्गानि प्राणस्थानि तु सर्वशः ॥** इत्याद्यनुभाष्ये ।

नच **'अनन्यथा सिद्धत्वम् अन्यश्रुतिलिङ्गादेः'** इत्यादि न्यायविवरणे च शास्त्रदृष्टिसूत्रदिशा सावकाशत्वोक्तेः तदनुरोधेन भाष्यभावमाह – **अभ्युपेत्य चेति*** ॥ इन्द्रियैः सह गणितत्वरूपपूर्वपक्षलिङ्गस्य निरवकाशत्वमभ्युपेत्येदं विष्णुलिङ्गानां

**बाहुल्यं निरवकाशत्वं चेत्यर्थः । अन्यथा एकस्य निरवकाशत्वोक्तौ वा तदनुक्तावपि सावकाशलिङ्गबाहुल्येन वा सावकाशैकलिङ्गबाधकसम्भवात् तद् बाहुल्यं तन्निरव-काशत्वं च न वाच्यमिति भावः । यावता 'यतः' इत्यर्थः ।**

**भाष्ये 'पूर्वमेवेत्यादिश्रुतिलिङ्गानुगमात्' इत्यनुक्त्वा, पृथग् 'ब्रह्मशब्दानुगमाच्च' इत्युक्तिरभ्युच्चयत्वाभिप्रायेणेति मत्वा, आह – यद्वा प्रकारद्वयेनेति ॥ एकत्वसाव-काशत्वरूपप्रकारद्वयेनेत्यर्थः । एतेनान्यत्रोक्तदिशा पूर्वपक्षे श्रुत्यादिबाहुल्येऽपि तेषां सावकाशत्वात् निरवकाशानेकश्रुत्यादिभिः बाध इत्यपि सूचितं ध्येयम् । तेषां सावकाशत्वं चाग्रे व्यक्तम् ॥२८॥**

''ಅನನ್ಯಥಾ ಸಿದ್ಧತಾಂ ಚ'' ಎಂಬಲ್ಲಿರುವ 'ಚ'ಪದಕ್ಕೆ 'ಬಾಹುಲ್ಯವಷ್ಟೇ ಅಲ್ಲ' ಎಂದರ್ಥ. ಸ್ಮೃತಿಯಲ್ಲಿ ನಿಶ್ಚಯಾರ್ಥದಲ್ಲಿ ಅವಧಾರಣವನ್ನು ಹೇಳಿದ್ದರಿಂದ ವಿಷ್ಣುವೇ ಪ್ರಾಣಶಬ್ದವಾಚ್ಯನೆಂಬುದು ತಿಳಿಯುತ್ತಿದೆ. ಅದಕ್ಕೋಸ್ಕರ ಟೀಕೆಯಲ್ಲಿ ''ವಿಷ್ಣುಮೇವ'' ಎಂಬುದಾಗಿ ಪ್ರತೀಕಗ್ರಹಣವನ್ನು ಮಾಡಿದ್ದಾರೆ. ಇಲ್ಲದಿದ್ದರೆ 'ವಿಷ್ಣುಮಿತಿ' ಎಂದಷ್ಟೇ ಸಾಕಾಗುತ್ತಿತ್ತು. ಇಷ್ಟನ್ನು ಹೇಳಿದ ಮಾತ್ರದಿಂದ ಹಿಂದಿನ ಪೂರ್ವಪಕ್ಷಗಳೆಲ್ಲವೂ ಹೇಗೆ ಪರಿಹಾರವಾಗುತ್ತವೆ? ಎಂದು ಪ್ರಶ್ನಿಸಿದರೆ ಅದಕ್ಕೆ ಉತ್ತರ ನೀಡುವುದಕ್ಕಾಗಿ ''ಏಕಪ್ರಕಾರೇಣ'' ಎಂಬುದಾಗಿ ಹೇಳುತ್ತಿದ್ದಾರೆ. 'ಏಕಪ್ರಕಾರೇಣ' ಎಂದರೆ ನಿರವಕಾಶತ್ವಪ್ರಕಾರದಿಂದ ಎಂದರ್ಥ. ''ಪ್ರಕಾರ-ದ್ವಯೇನ'' ಎಂದರೆ ಬಹುತ್ವ ಹಾಗೂ ನಿರವಕಾಶತ್ವರೂಪ ಎಂಬ ಎರಡು ಪ್ರಕಾರಗಳಿಂದ ಎಂದರ್ಥ.

.............. ಅತ್ರಗಸ್ಯ ಹಿ ।

ವಿಷ್ಣೋರೇವ ತು ಲಿಂಗಾನಿ ಪ್ರಾಣಸ್ಥಾನಿ ತು ಸರ್ವಶಃ ॥

ಇತ್ಯಾದಿಯಾಗಿ ಅನುವ್ಯಾಖ್ಯಾನದಲ್ಲಿ ''ನ ಚ ಅನನ್ಯಥಾಸಿದ್ಧತ್ವಮ್ ಅನ್ಯಶ್ರುತಿಲಿಂಗಾದೇಃ' ಇತ್ಯಾದಿ-ಯಾಗಿ ನ್ಯಾಯವಿವರಣದಲ್ಲಿ ಮತ್ತು ಶಾಸ್ತ್ರದೃಷ್ಟಿಸೂತ್ರದಲ್ಲಿ ಹೇಳುವಂತೆ ಮುಖ್ಯವಾಯುವಿನ ಲಿಂಗ-ಗಳೆಲ್ಲವೂ ಸಾವಕಾಶಗಳಾಗಿವೆ. ಅದಕ್ಕನುಸಾರಿಯಾಗಿ ಭಾಷ್ಯದ ಅಭಿಪ್ರಾಯವನ್ನು ''ಅಭ್ಯುಪೇತ್ಯ ಚ'' ಇತ್ಯಾದಿ ಟೀಕೆಯಿಂದ ವಿವರಿಸುತ್ತಿದ್ದಾರೆ. 'ಇಂದ್ರಿಯೈಃ ಸಹಗಣಿತತ್ವ' ಎಂಬ ಪೂರ್ವಪಕ್ಷದ ಲಿಂಗಕ್ಕೆ ನಿರವಕಾಶತ್ವವನ್ನು ಅಂಗೀಕರಿಸಿ ಈ ವಿಷ್ಣುಲಿಂಗಗಳಿಗೆ ಬಾಹುಲ್ಯ ಮತ್ತು ನಿರವಕಾಶತ್ವವನ್ನು ಅಂಗೀಕರಿಸಿ ಇಲ್ಲಿಯ ತನಕ ಹೇಳಿದ್ದು ಎಂದರ್ಥ. ಇಲ್ಲದಿದ್ದರೆ ಒಂದಕ್ಕೆ ನಿರವಕಾಶತ್ವವನ್ನು ಹೇಳಿದಾಗ, ಅಥವಾ ನಿರವಕಾಶತ್ವವನ್ನು ಹೇಳದಿದ್ದರೂ ಅನೇಕ ಸಾವಕಾಶವಾದ ಲಿಂಗಗಳಿಂದಲೇ ಒಂದು ಸಾವಕಾಶಲಿಂಗಕ್ಕೆ ಬಾಧವನ್ನು ಹೇಳಬಹುದಾದ್ದರಿಂದ ಬಾಹುಲ್ಯವನ್ನು ಹಾಗೂ ನಿರವಕಾಶತ್ವ ಎರಡನ್ನೂ ಹೇಳುವ ಅವಶ್ಯಕತೆ ಇರಲಿಲ್ಲ. ನಿರವಕಾಶತ್ವವನ್ನು ಬಾಹುಲ್ಯವನ್ನು ಹೇಳಿದ್ದರೆ ಸಾಕಾಗುತ್ತಿತ್ತು.

---

(*) पूर्वपक्षप्रापकश्रुत्यादीनामपि बाहुल्यात् तेषामपि प्रकारद्वयेन प्राबल्यम् इति, अत आह – अभ्युपेत्येति ॥ इदं निरवकाशत्वम् । यद्वा, उभयोर्निरवकाशत्वं विरुद्धम् इति, अत आह – अभ्युपेत्येति ॥ – (भावबोधः)

''ಯಾವತಾ'' ಎಂಬ ಪದಕ್ಕೆ 'ಯತಃ' ಎಂದರ್ಥ. ಭಾಷ್ಯದಲ್ಲಿ 'ಶ್ರುತಿಲಿಂಗಾನುಗಮಾತ್' ಎಂದು ಹೇಳದೆ 'ಬ್ರಹ್ಮಶಬ್ದಾನುಗಮಾತ್ ಚ' ಎಂದು ಏಕೆ ಹೇಳಿದ್ದಾರೆಂದರೆ ಶ್ರುತಿಲಿಂಗಗಳ ಜೊತೆಗೆ ಬ್ರಹ್ಮಶಬ್ದಾನುಗಮವು ಹೆಚ್ಚಿನ ಯುಕ್ತಿಯಾಗಿದೆ ಎಂಬುದನ್ನು ತಿಳಿಸುವುದಕ್ಕಾಗಿ. ಇದನ್ನೇ ಟೀಕೆಯಲ್ಲಿ ''ಯದಾ ಪ್ರಕಾರದ್ವಯೇನ'' ಎಂಬುದಾಗಿ ವ್ಯಾಖ್ಯಾನಿಸಿದ್ದಾರೆ. ''ಪ್ರಕಾರದ್ವಯೇನ'' ಎಂದರೆ ಏಕತ್ವ ಮತ್ತು ಸಾವಕಾಶತ್ವ ಎಂಬ ಪ್ರಕಾರದ್ವಯದಿಂದ ಎಂದರ್ಥ.

ಹೀಗೆ ಹೇಳಿದ್ದರಿಂದ ಬೇರೆಡೆ ಹೇಳಿದ ಮತ್ತೊಂದು ಯುಕ್ತಿಯನ್ನು ಸೂಚಿಸಿದಂತಾಯಿತು. ಅನೇಕ ಶ್ರುತಿಗಳಿದ್ದರೂ ಅವೆಲ್ಲವೂ ಸಾವಕಾಶವಾದ್ದರಿಂದ ನಿರವಕಾಶವಾದ ಬಹುಶ್ರುತಿಗಳಿಂದ ಅವುಗಳು ಬಾಧಿತ-ಗಳಾಗುತ್ತವೆ ಎಂಬುದನ್ನೂ ತಿಳಿಯಬೇಕು. ಪೂರ್ವಪಕ್ಷಶ್ರುತಿಗಳಿಗೆ ಸಾವಕಾಶತ್ವವು ಈ ಮುಂದೆ ತಿಳಿಯುತ್ತದೆ.

**वाक्यार्थमञ्जरी – तावा एता इति ॥** 'ता एताः श्रियः शीर्षं शिरः श्रिताः आश्रिताः । कास्ताः श्रिय इत्यत उक्तम् – **चक्षुरित्यादि ॥ प्राचीनप्राण इति ॥** ननु श्रीपतित्वादिना तत्रत्य प्राणस्य विष्णुत्वात् कथमेतत्? इति चेत् । अत्रत्यलिङ्गानां वक्ष्यमाणरीत्या बलवत्वेन तद्विरुद्धश्रीपतित्वादीनामन्यथा योज्यत्वान्न तैर्विष्णुत्व-निश्चय इति भावः । पूर्वोक्तन्यायः महायोगविद्वद्रूढिसत्वात् प्राणशब्दो विष्णुवाचक इति न्यायः । 'वाय्वादिरेव' इत्यादिशब्देन इन्द्रजीवयोर्ग्रहणम् । **न चैतदिति ॥** सर्वोत्तमस्य चक्षुरादिभिः, सहपाठायोगादिति भावः । **उपपद्यत चेति ॥** मुख्यप्राणस्येन्द्रियस्वामित्वादिन्द्रस्य हस्तेन्द्रियाधिष्ठितत्वाज्जीवस्येन्द्रियफलभोक्तृत्वा-दिति भावः ।

**ॐ प्राणस्तथानुगमात् ॐ ॥** यथा 'तद्वै त्वं प्राणः' इत्ययं प्राणो विष्णुः तथैतरेये श्रुतः प्राणोपि विष्णुरेव । ब्रह्मशब्दादेवोपास्यत्वादि तत् श्रुतिलिङ्गाना-मस्मिन् प्रकरणेऽनुगमात् अनुवृत्तेरभ्यासादित्यर्थः । नीतवन्तः 'उपदिदिशुः' इति यावत् । 'स एष भगवान् दैत्यनिरसनादसु नामा स एष प्रकृष्टानन्दत्वात् प्राणः सतां ज्ञानैश्वर्यादि भूतिदातृत्वाद् भूतिः असतामज्ञानाद्यनैश्वर्यदातृत्वादभूतिः तं भगवन्तं देवा भूतित्वोपासनां चक्रिरे' इत्यर्थः । **तावा इति ॥** 'ऋगादयः सर्वस्मिन् प्राणे परमात्मविषये एकैव व्याहृतिर्व्याहरणम् । एकमेव नाम निर्देषगुणपूर्तिवाचित्वादेक-प्रकारत्वम् । ऋचः विशेषेण प्राणपरा इति विजानीयात्' इत्यैतरेयभाष्योक्तदिशार्थः ।

टीकाकारस्तु – 'प्राण एव' इत्यत्र प्राणशब्दस्य प्रथमान्तत्वमङ्गीकृत्य 'यास्ता एताः सर्वा ऋचस्तासामेकैव व्याहृतिरेकमेव व्याहरणं तच्च प्रतिपाद्यं प्राण

एव । किं च ये सर्वे वेदास्तेषामपीश्वर एव प्रतिपाद्यः किमु ऋचाम् । अपि च ये समुद्रादि घोषास्तेषामपीश्वर एव प्रतिपाद्यः किमु वेदानाम्? ऋचस्तु विशेषेण प्राणप्रतिपादका इति जानीयात्' इति 'ज्योतिरुप्रक्रमात्' इत्युत्तरत्र व्याकरिष्यन्ति ।

'अथ देवरथः' इति देवाधीनो देहाख्यरथ उच्यते । तस्य देवरथस्य वाक् तदभिमानी उमा उद्धारणरज्जुः । श्रोत्रे तदभिमानि चन्द्रतद्धार्ये पक्षसी पार्श्व-नियुक्ताश्वौ । चक्षुषी तदभिमानिसूर्यतद्धार्ये युक्ते अग्रतो नियुक्ताश्वौ । मनः मनोभिमानी रुद्रः सङ्गृहीता रथयन्ता प्राणस्तादृशं रथमधितिष्ठतीत्यर्थः । रथप्राण-शब्दयोः पुल्लिङ्गत्वात् तदिति परामर्शानुपपत्तिरित्यत आह – स चासाविति ॥ आहुः ब्रह्मतर्के । सः स्वभाव उपजीव्यत्वनिरवकाशत्वादिरूप इत्यर्थः । अनन्यथासिद्धतां निरवकाशत्वम् अभ्युपेत्य पूर्वपक्षलिङ्गस्य निरवकाशत्वम् । अन्तर्यामीति ॥ वाय्वादीनामिन्द्रियैः सहगणितत्वे तदन्तर्यामिणोऽपि तैः सहगणितत्वमिति भावः । प्रकारद्वयेन ॥ एकत्वसावकाशत्वाभ्याम् ॥

**॥ इति श्रीशर्कराश्रीनिवासाचार्यविरचिता वाक्यार्थमञ्जर्यां प्राणाधिकरणम् ॥**

## ಬ್ರಹ್ಮಮೀಮಾಂಸಾಶಾಸ್ತ್ರ

**सू - ॐ ॥ न वक्तुरात्मोपदेशादिति चेदध्यात्मसम्बन्धभूमा ह्यस्मिन् ॥ ॐ ॥ २९ ॥**

ಸೂತ್ರಾರ್ಥ - ಬೃಹತೀಸಹಸ್ರವನ್ನು ಪಠಿಸುತ್ತಿರುವ ವಿಶ್ವಾಮಿತ್ರ ಋಷಿಯನ್ನು ಕುರಿತು ದೇವೇಂದ್ರನು 'ಪ್ರಾಣೋ ವಾ ಅಹಮಸ್ಮಿ' ಎಂಬುದಾಗಿ ಎಂಬುದಾಗಿ ತನ್ನನ್ನೇ ಪ್ರಾಣನೆಂದು ಉಪದೇಶಿಸಿದ್ದಾನೆ. ಆದ್ದರಿಂದ ಪ್ರಾಣಶಬ್ದದಿಂದ ದೇವೇಂದ್ರನೇ ವಾಚ್ಯನು. ಇದು ತಪ್ಪು. ದೇವೇಂದ್ರನಲ್ಲಿ ಪರಮಾತ್ಮನ ಅತಿಶಯವಾದ ಸಾನ್ನಿಧ್ಯ ಇರುವುದರಿಂದ ದೇವೇಂದ್ರನು ತನ್ನಲ್ಲಿರುವ ಭಗವಂತನನ್ನು ಉದ್ದೇಶಿಸಿ ಅಹಂ ಪ್ರಾಣಃ ಎಂದು ಉಪದೇಶಿಸಿದ್ದಾನೆ. ಆದ್ದರಿಂದ ವಿಷ್ಣುವೇ ಪ್ರಾಣಶಬ್ದವಾಚ್ಯನು.

### ಸೂತ್ರದೀಪಿಕಾ

सू.दी. – द्वितीयार्थे षष्ठी । वक्तुः – बृहतीसहस्रवक्तारं विश्वामित्रं प्रति इन्द्रेणाऽत्मो-पदेशात् । आत्मनः स्वस्य प्राणतयोपदेशाद् 'इन्द्र एवायं प्राणः न विष्णुः' इति चेत्, 'न'

इति शेषः । तस्याऽवृत्तिः । 'अनुगमात्' इत्यनुवर्तते । तथाच प्रागुक्तानुगमहेतोः नेन्द्रः प्राणः । तथा सत्युपदेशविरोध इत्यपि न । कुतः? यस्मात् अस्मिन् प्रकरणे भगवतः अध्यात्मसम्बन्धभूमा इन्द्रविश्वामित्रादिरूपबहुदेहसम्बन्धः उक्तोऽस्ति तस्मादित्यर्थः । यद्वा हि यस्मात् अस्मिन् इन्द्रे । अध्यात्मसम्बन्धभूमा । अधि अधिकस्याऽत्मनः सम्बन्धस्याऽवेशस्य भूमा बाहुल्यं विद्यते यस्मादित्यर्थः ॥

ವಕ್ತುಃ = ಬೃಹತೀಸಹಸ್ರವನ್ನು ಹೇಳುವ ವಿಶ್ವಾಮಿತ್ರನನ್ನು ಕುರಿತು (ದ್ವಿತೀಯಾರ್ಥದಲ್ಲಿ ಷಷ್ಠೀ ಪ್ರಯೋಗವಿದೆ). ಆತ್ಮೋಪದೇಶಾತ್ = 'ಪ್ರಾಣೋ ವಾ ಅಹಮಸ್ಮಿ' ಎಂಬುದಾಗಿ ದೇವೇಂದ್ರನು ಇಂದ್ರನಿಗೆ ಉಪದೇಶಿಸಿದ್ದರಿಂದ. ತನ್ನನ್ನು ಪ್ರಾಣನೆಂದು ಉಪದೇಶಿಸಿದ್ದರಿಂದ 'ಇಂದ್ರನೇ ಪ್ರಾಣನು ಹೊರತು ವಿಷ್ಣುವಲ್ಲ' ಹೀಗೆ ಹೇಳಿದರೆ; ನ(= ಅಲ್ಲ) ಎಂಬುದನ್ನು ಸೇರಿಸಿಕೊಳ್ಳಬೇಕು. 'ಅನುಗಮಾತ್' ಎಂಬುದನ್ನೂ ಸಹ ಹಿಂದಿನ ಸೂತ್ರದಿಂದ ಅನುವೃತ್ತಿಮಾಡಿಕೊಳ್ಳಬೇಕು. ಆದ್ದರಿಂದ ಹಿಂದೆ ಹೇಳಿದ ಅನುಗಮವೆಂಬ ಹೇತುವಿನಿಂದಲೂ ಇಂದ್ರನು ಪ್ರಾಣನಾಗುವುದಿಲ್ಲ. ಹಾಗಾದರೆ ಉಪದೇಶವಿರೋಧ ಬರುತ್ತದಲ್ಲವೇ? ಎಂಬುದೂ ಸಹ ತಪ್ಪು. ಏಕೆಂದರೆ, ಯಾವ ಕಾರಣದಿಂದ ಈ ಪ್ರಕರಣದಲ್ಲಿ ಪರಮಾತ್ಮನಿಗೆ 'ಅಧ್ಯಾತ್ಮಸಂಬಂಧಭೂಮಾ' ಇಂದ್ರ ವಿಶ್ವಾಮಿತ್ರ ಮೊದಲಾದ ಅನೇಕ ದೇಹಗಳ ಸಂಬಂಧವು ಹೇಳಲ್ಪಟ್ಟದೆಯೋ ಆ ಕಾರಣದಿಂದ ಎಂದರ್ಥ. ಅಥವಾ ಹಿ = ಯಾವ ಕಾರಣದಿಂದ ಅಸ್ಮಿನ್ = ದೇವೇಂದ್ರನಲ್ಲಿ, ಅಧ್ಯಾತ್ಮಸಂಬಂಧಭೂಮಾ = ಪರಮಾತ್ಮನ ಅತಿಶಯವಾದ ಆವೇಶವಿದೆಯೋ ಆ ಕಾರಣದಿಂದ ಎಂದರ್ಥ.

## ಇಂದ್ರನು ಪ್ರಾಣನೆಂದು ಪೂರ್ವಪಕ್ಷ

**भाष्यम् - ॐ ॥ न वक्तुरात्मोपदेशादिति चेदध्यात्म-**
**सम्बन्धभूमा ह्यस्मिन् ॥ ॐ ॥ २९ ॥**

**'प्राणो वा अहमस्म्यृषे'** (ऐ.आ.२-२-३.) **इति वक्तुरात्मोपदेशादिन्द्र एवेति चेत् -**

ಬೃಹತೀಸಹಸ್ರವನ್ನು ಹೇಳುತ್ತಿರುವ ವಿಶ್ವಾಮಿತ್ರನನ್ನು ಕುರಿತು ದೇವೇಂದ್ರನು 'ನಾನೇ ಪ್ರಾಣನು ಎಂದು ಉಪದೇಶಿಸಿದ್ದಾನೆ. ಆದ್ದರಿಂದ ದೇವೇಂದ್ರನೇ ಪ್ರಾಣನಾಗಿದ್ದಾನೆ. (ಎಂದು ಪ್ರಾಪ್ತವಾದರೆ)

---

**भाष्यदीपिका** – उक्तमाक्षिप्य समादधत्सूत्रं पठित्वाऽऽक्षेपांशं तावद् व्याचष्टे – नेति ॥ प्राण इत्यनुवर्तते । तथा च प्राणो विष्णुरिति न युक्तम् । कुतः? 'प्राणो वा अहमस्म्यृषे' इति वाक्येन बृहतीसहस्रवक्तुर्विश्वामित्रस्येन्द्रेण प्राणतया आत्मनः स्वस्यैवोपदेशादित्यर्थः । प्राण इन्द्र एवेति फलोक्तिः । न तूक्तहेतोः साध्योक्तिः ।

'प्राणो वाऽहमस्म्यृषे' इति वाक्यं तु 'तमिन्द्र उवाच ऋषे प्रियं वै मे धामोपागाः वरं ते ददामीति । स होवाच त्वामेव जानीयामिति । तमिन्द्र उवाच' इति पूर्ववाक्येन सह

ಪ್ರತಿಪದಾರ್ಥ— ಹಿಂದೆ ಹೇಳಿದ ಪ್ರಮೇಯವನ್ನು ಆಕ್ಷೇಪಿಸಿ ಸಮಾಧಾನವನ್ನು ನೀಡುವ ಸೂತ್ರವನ್ನು ಪಠಿಸುತ್ತಾ ಮೊದಲು ಆಕ್ಷೇಪಭಾಗವನ್ನು ವ್ಯಾಖ್ಯಾನಿಸುತ್ತಿದ್ದಾರೆ. **ಋಷೇ** = ಎಲೈ ವಿಶ್ವಾಮಿತ್ರ ಋಷಿಯೇ! **ಪ್ರಾಣೋ ವಾ** = ಪ್ರಾಣನಾದರೋ, **ಅಹಮಸ್ಮಿ** = ನಾನೇ ಆಗಿದ್ದಾನೆ. **ಇತಿ** = ಹೀಗೆ, **ವಕ್ತುಃ** = ಬೃಹತೀಸಹಸ್ರವನ್ನು ಹೇಳುವ ವಿಶ್ವಾಮಿತ್ರ ಋಷಿಯನ್ನು ಕುರಿತು, **ಆತ್ಮೋಪದೇಶಾತ್** = ತನ್ನ ಬಗ್ಗೆ ಹೇಳಿಕೊಂಡಿದ್ದರಿಂದ, **ಇಂದ್ರ ಏವ** = ಇಂದ್ರನೇ ಪ್ರಾಣನಾಗಿದ್ದಾನೆ, **ಇತಿ ಚೇತ್** = ಹೀಗೆ ಹೇಳಿದರೆ.

**तत्त्वप्रकाशिका –**

**उक्तमाक्षिप्य समादधत्सूत्रं पठित्वाऽऽक्षेपांशं तावद् व्याचष्टे – नेति ॥ यदुक्तं 'विष्णुरयं प्राणः' इति तदयुक्तम् । 'तमिन्द्र उवाच ऋषे प्रियं वै मे धामोपागावरं ते ददामीति । स होवाच । त्वामेव जानीयामिति । तमिन्द्र उवाच । प्राणो वा अहमस्म्यृषे' इति बृहतीसहस्रवक्तुर्विश्वामित्रस्येन्द्रेण प्राणतया आत्मोपदेशात् । न चायमिन्द्रोऽपि विष्णुः । प्रसिद्धस्यैव 'इन्द्रो वै वृत्रं हत्वा' इत्यादौ महाव्रतयज्ञे यजमानत्वेन प्रकृतत्वात् । न चास्योपदेशस्य सावकाशत्वं (वा) चास्ति । अत इन्द्र एवायं प्राण इत्याशयः ।**

ಪ್ರಾಣಶಬ್ದದಿಂದ ವಿಷ್ಣುವೇ ವಾಚ್ಯನೆಂದು ಹಿಂದಿನ ಸೂತ್ರದಲ್ಲಿ ಹೇಳಿದ್ದಾಯಿತು. ಅದರ ಮೇಲೆ ಬರುವ ಆಕ್ಷೇಪವನ್ನು ನಿರಾಕರಿಸುವುದಕ್ಕೋಸ್ಕರ ಸೂತ್ರವನ್ನೇ ಪಠಿಸಿ ಮೊದಲು ಆಕ್ಷೇಪಾಂಶವನ್ನು ವ್ಯಾಖ್ಯಾನಿಸುತ್ತಿದ್ದಾರೆ. ''ನ ವಕ್ತುಃ' ಇತ್ಯಾದಿಯಾಗಿ.

---

व्याख्येयम् । तत्प्रकारस्तु - 'तं' विश्वामित्रं 'इन्द्रः' तदन्तःस्थो भगवानुवाच । किमिति ? हे ऋषे ! मे प्रियं धामोपागाः प्राप्नुहि । ते वरं ददामीति । वैशब्दोऽवधारणे प्रसिद्धौ वा । एवं त्रिवारं शंसनेन धामशब्दितसालोक्यप्राप्तिभगवत्पुरप्राप्तिसाधनभगवत्प्रसादं प्राप्तः 'सः' विश्वामित्रः इन्द्राविष्टेन हरिणा वरं ते ददानीति पुनरुक्तः सन् उवाच । किमिति? त्वां सामान्यतः पूर्वम् अहं जाने । अधुना कीदृशस्त्वमिति विशेषतो जानीयामिति । एवमुक्तः 'इन्द्रः' तदन्तर्गतो हरिः ऋषिं प्रत्युवाच । किमिति? हे ऋषे! अहं प्रकृष्टानन्दरूपत्वात् प्राणशब्दवाच्योऽस्मीति । अत्र वाक्यसमन्वयपक्षेऽस्मदादिषूपपदेषु विहितानामस्मीत्यादि-तिङन्तपदानां तद्वृत्तेः सुलभत्वादिति तत्त्वनिर्णयटीकारीत्या अहमितीन्द्रान्तःस्थेन हरिणा स्वात्मनो निर्देशादस्मीति उत्तमपुरुषोपपत्तिः । पूर्वपक्षिरीत्या श्रुत्यर्थस्तु स्पष्टः । अहं प्राणोऽ-स्मीति पदानामहेयत्वप्रकृष्टानन्दत्वसंहर्तृत्वज्ञातृत्वनिमित्तैः भगवति समन्वयपक्षे तु न तदनुप-पत्तिरिति ध्येयम् ।

ಹಿಂದಿನ ಸೂತ್ರದಲ್ಲಿ ವಿಷ್ಣುವೇ ಪ್ರಾಣನೆಂದು ಹೇಳಿದ್ದು ತಪ್ಪು. ಏಕೆಂದರೆ 'ತಮಿಂದ್ರ ಉವಾಚ ಋಷೇ ಪ್ರಿಯಂ ವೈ ಮೇ ಧಾಮೋಪಾಗಾ ವರಂ ತೇ ದದಾಮೀತಿ । ಸ ಹೋವಾಚ । ತ್ವಾಮೇವ ಜಾನೀಯಾಮಿತಿ । ತಮಿಂದ್ರ ಉವಾಚ । ಪ್ರಾಣೋ ವಾ ಅಹಮಸ್ಮೃಷೇ' ('ಎಲೈ ವಿಶ್ವಾಮಿತ್ರ ಋಷಿಯೇ! ಪ್ರಿಯವಾದ ನನ್ನ ಸ್ಥಾನವನ್ನು ಕುರಿತು ನೀನು ಬಾ. ನಿನಗೆ ಇಷ್ಟವಾದ ವರವನ್ನು ಕೊಡುತ್ತೇನೆ'. ಆವಾಗ ವಿಶ್ವಾಮಿತ್ರ ಋಷಿಯು ಹೇಳುತ್ತಾರೆ. 'ನಿನ್ನನ್ನೇ ತಿಳಿಯಲು ಬಯಸುತ್ತೇನೆ'. ಆವಾಗ ದೇವೇಂದ್ರನು ಹೇಳುತ್ತಾನೆ 'ಋಷಿಯೇ ನಾನೇ ಪ್ರಾಣನಿದ್ದೇನೆ') ಎಂಬುದಾಗಿ ಬೃಹತೀಛಂದಸ್ಸಿನಲ್ಲಿರುವ ಸಾವಿರ ಋಙ್ಮಂತ್ರಗಳನ್ನು ಪಠಿಸುತ್ತಿರುವ ವಿಶ್ವಾಮಿತ್ರ ಋಷಿಯನ್ನು ಕುರಿತು ದೇವೇಂದ್ರನು ತನ್ನನ್ನು ಪ್ರಾಣನೆಂದು ಉಪದೇಶಿಸಿದ್ದಾನೆ.

ಈ ಶ್ರುತಿಯಲ್ಲಿ ಕೇಳಿಸುತ್ತಿರುವ ಇಂದ್ರಶಬ್ದಕ್ಕೆ ವಿಷ್ಣುವೆಂದು ಅರ್ಥವಲ್ಲ. ಏಕೆಂದರೆ, ಪ್ರಸಿದ್ಧನಾದ ದೇವೇಂದ್ರನೇ 'ಇಂದ್ರೋ ವೈ ವೃತ್ರಂ ಹತ್ವಾ' ಎಂಬುದಾಗಿ ಮಹಾವ್ರತವೆಂಬ ಯಜ್ಞದಲ್ಲಿ ಯಜಮಾನನಾಗಿ ಪ್ರಕೃತನಾಗಿದ್ದಾನೆ. ಇಂದ್ರನ ಈ ಮಾತನ್ನು ಸಾವಕಾಶ ಮಾಡಲು ಬರುವುದಿಲ್ಲ. ಆದ್ದರಿಂದ ಪ್ರಾಣನೆಂದರೆ ಇಂದ್ರನೇ ಆಗಿದ್ದಾನೆ ಎಂದು ಭಾಷ್ಯದ ಅಭಿಪ್ರಾಯ.

**भावदीपः – ॐ ॥ न वक्तुरात्मोपदेशादिति चेदध्यात्मसम्बन्धभूमा ह्यस्मिन् ॥ॐ**

**तदयुक्तमिति ॥** तेन सूत्रे 'प्राणो विष्णुः' इत्यनुवर्त्य नञाऽन्वयः कार्यः । 'इन्द्र एव' इति भाष्यं फलितार्थमिति भावः । इन्द्रस्य प्राणत्वेनोपदेशो असाङ्गत्यनिरासाय तस्येन्द्रवाक्यस्फोरणाय च पूर्ववाक्यमाह – **तमिति ॥** 'तम्' विश्वामित्रम् । 'प्रियं धाम'* स्वलोकम् उपागाः प्राप्तोऽभूः । शस्त्रशंसनेन धामप्राप्तिहेतुप्रसादं लब्धवानभूः इत्यर्थः । **'अनन्यथासिद्धत्वमन्यश्रुतिलिङ्गादेः'** इति न्यायविवरणोक्तमिन्द्रश्रुतेर्निरवकाशत्वम् 'इन्द्र एव' इति भाष्ये अवधारणसूचितमाह – **न चायमिति ॥ न चास्येति च ॥ सावकाशत्वं चेति ॥ सावकाशत्वं हि विरोचनं प्रति विरिञ्चेनेवेन्द्रेण, विश्वामित्रं प्रति 'प्राणो वाऽहम्' इति वञ्चनार्थमुक्तत्वेन वा वास्तत्वत्वेऽपि अन्तर्याम्यपेक्षया वा । नाद्यः । 'वक्तुः'** इत्युक्तेर्विशिष्टशास्त्रशंसितुर्विश्वामित्रस्य नेन्द्रोऽन्यथोपदेष्टुमर्हति - इति सुधोक्त्या बृहतीसहस्रवक्तुर्विश्वामित्रस्येन्द्रेण वञ्चनकरणायोगात् । **नान्त्यः** 'मञ्चाः क्रोशन्ति' इत्यत्र मञ्चपदस्य मञ्चस्थपुरुषेष्विव लक्षणाप्रसङ्गात् । न च मुख्ये सम्भवति सा युक्तेति भावः ।

ಓಂ ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮಸಂಬಂಧಭೂಮಾ ಹ್ಯಸ್ಮಿನ್ ಓಂ ॥ "ತದಯುಕ್ತಂ" ಎಂದು ಟೀಕೆಯಲ್ಲಿದೆ. ಹೀಗೆ ಹೇಳಿದ್ದರಿಂದ ಸೂತ್ರದಲ್ಲಿ 'ನ' ಎಂಬುದರ ಜೊತೆಗೆ 'ಪ್ರಾಣೋ ವಿಷ್ಣುಃ'

ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕೆಂದು ತಿಳಿಯುತ್ತದೆ. ಇದರಿಂದ 'ಇಂದ್ರ ಏವ' ಎಂಬ ಭಾಷ್ಯವು ಫಲಿತಾರ್ಥವಾಯಿತು. 'ಇಂದ್ರನಲ್ಲಿ ಪ್ರಾಣತ್ವದ ಉಪದೇಶವು ಅಸಂಗತವಾಗಿದೆ' ಎಂಬ ಶಂಕೆಯನ್ನು ಪರಿಹರಿಸಲು ಮತ್ತು 'ಅದು ಇಂದ್ರನ ವಾಕ್ಯವೇ ಆಗಿದೆ' ಎಂಬುದನ್ನು ಪ್ರಕಟಪಡಿಸಲು ಹಿಂದಿನ ವಾಕ್ಯವನ್ನು ''ತಮಿಂದ್ರ ಉವಾಚ'' ಇತ್ಯಾದಿಯಾಗಿ ಉಲ್ಲೇಖಿಸುತ್ತಿದ್ದಾರೆ. 'ತಂ' = ಆ ವಿಶ್ವಾಮಿತ್ರನನ್ನು ಕುರಿತು, ಇಂದ್ರಃ = ದೇವೇಂದ್ರನು, ಉವಾಚ = ಹೇಳಿದನು, ಋಷೇ = ಎಲೈ ವಿಶ್ವಾಮಿತ್ರ ಋಷಿಯೇ, ಮೇ = ನನ್ನ, ಪ್ರಿಯಂ ಧಾಮ = ಪ್ರಿಯವಾದ ಸ್ವರ್ಗಲೋಕವನ್ನು, ಉಪಾಗಾಃ = ಹೊಂದಿರುವಿ*. ಶಸ್ತ್ರಮಂತ್ರಗಳಿಂದ ಪ್ರಶಂಸೆಯನ್ನು ಮಾಡಿದ್ದರಿಂದ ನನ್ನ ಮನೆಯನ್ನು ಹೊಂದುವಿಕೆಗೆ ಬೇಕಾದ ಪ್ರಸಾದವನ್ನು ಹೊಂದಿದ್ದೀ ಎಂದರ್ಥ.

'ಅನನ್ಯಥಾಸಿದ್ಧತ್ವಮ್ ಅನ್ಯಶ್ರುತಿಲಿಂಗಾದೇಃ' ಎಂದು ನ್ಯಾಯವಿವರಣದಲ್ಲಿ ಹೇಳಿದಂತೆ ಇಂದ್ರಶ್ರುತಿಗೆ ನಿರವಕಾಶತ್ವವಿದೆ ಎಂದು 'ಇಂದ್ರ ಏವ' ಎಂಬ ಭಾಷ್ಯವು ಸೂಚಿಸಿದೆ. ಅದನ್ನೇ ''ನ ಚ'' ಎಂಬ ಟೀಕೆಯಿಂದ ವ್ಯಾಖ್ಯಾನಿಸುತ್ತಿದ್ದಾರೆ. ''ನ ಚಾಸ್ಯ ಉಪದೇಶಸ್ಯ'' ಎಂಬ ವಾಕ್ಯದಿಂದಲೂ ವ್ಯಾಖ್ಯಾನಿಸಿದ್ದಾರೆ.

''ಸಾವಕಾಶತ್ವಂ ವಾ'' ವಿರೋಚನನನ್ನು ಕುರಿತು ಬ್ರಹ್ಮದೇವರು ವಂಚನೆಗೋಸ್ಕರ ಉಪದೇಶ ಮಾಡಿದರು. ಅದರಂತೆ ವಿಶ್ವಾಮಿತ್ರ ಋಷಿಯನ್ನು ಕುರಿತು ದೇವೇಂದ್ರನೂ ಸಹ 'ಪ್ರಾಣೋ ವಾಽಹಂ' ಎಂಬುದಾಗಿ ವಂಚನೆಗೋಸ್ಕರ ಉಪದೇಶಿಸಿದ್ದಾನೋ ಅಥವಾ ವಂಚನೆಗೋಸ್ಕರ ಉಪದೇಶಿಸಿಲ್ಲವೆಂದರೆ ಅಂತರ್ಯಾಮಿಯ ಅಪೇಕ್ಷೆಯಿಂದ ಉಪದೇಶಿಸಿದ್ದಾನೋ? ಮೊದಲನೆಯ ಪಕ್ಷ ತಪ್ಪು. 'ವಕ್ತುಃ' ಎಂದು ಹೇಳಿದ್ದರಿಂದ ವಿಶಿಷ್ಟವಾದ ಶಸ್ತ್ರಮಂತ್ರಗಳಿಂದ ಪ್ರಶಂಸಿಸುತ್ತಿರುವ ವಿಶ್ವಾಮಿತ್ರ ಋಷಿಗೆ ದೇವೇಂದ್ರನು ಮೋಸಮಾಡಿ ಉಪದೇಶಿಸಲು ಸಾಧ್ಯವಿಲ್ಲ ('ವಕ್ತುರಿತ್ಯುಕ್ತೇಃ ವಿಶಿಷ್ಟಶಸ್ತ್ರಶಂಸಿತುರ್ವಿಶ್ವಾಮಿತ್ರಸ್ಯ ನೇಂದ್ರೋ -ಽನ್ಯಥೋಪದೇಷ್ಟುಮರ್ಹತಿ') ಎಂದು ಸುಧೆಯಲ್ಲಿ ಹೇಳಿದಂತೆ ಬೃಹತೀಸಹಸ್ರವನ್ನು ಪಠಿಸಿದ ವಿಶ್ವಾಮಿತ್ರನಿಗೆ ದೇವೇಂದ್ರನು ಮೋಸಮಾಡಲು ಸಾಧ್ಯವಿಲ್ಲ. ಎರಡನೆಯ ಪಕ್ಷವೂ ತಪ್ಪು. ಅಹಂ ಪದಕ್ಕೆ ಅಂತರ್ಯಾಮಿ ಎಂಬರ್ಥವನ್ನು ಹೇಳಿದರೆ 'ಮಂಚಾಃ ಕ್ರೋಶಂತಿ' ಎಂಬಲ್ಲಿ ಮಂಚಪದಕ್ಕೆ ಮಂಚದಲ್ಲಿರುವ ಪುರುಷರಲ್ಲಿ ಲಕ್ಷಣಾ ಮಾಡಿದಂತೆ ಲಕ್ಷಣಾ ಮಾಡುವ ಪ್ರಸಂಗ ಬರುತ್ತದೆ. ಮುಖ್ಯಾರ್ಥವನ್ನೇ ಹೇಳಲು ಬರುವಾಗ ಅಮುಖ್ಯಾರ್ಥವನ್ನು ಸ್ವೀಕರಿಸಲು ಬಾರದು ಎಂದಿದರ ಅಭಿಪ್ರಾಯ.

## ದೇವೇಂದ್ರನಲ್ಲಿ ವಿಷ್ಣುವಿನ ಸನ್ನಿಧಾನ

**भाष्यम् – न, 'प्राणस्त्वं प्राणः सर्वाणि भूतानि' (ऐ.आ.२-२-३) इति बह्वध्यात्मसम्बन्धो ह्यत्र विद्यते ॥ २९ ॥**

---

(*) 'प्रियं वै मे धामोपागा' इत्यत्र धामपदेन भगवत्सन्निधानपात्र बृहतीसहस्रमुच्यते । उपागाः उपपन्नतयाऽऽगाः गानमकरोदित्यर्थः । 'त्वामेव जानीयाम्' इति प्रार्थितत्वादस्योपदेशस्येन्द्रियैः सह गणनस्य नान्तर्यामिविषयत्वमिति भावेनोक्तम् – न चास्योपदेशस्येति ॥ – गुर्वर्थदीपिका ।

ಇದು ತಪ್ಪು, ಏಕೆಂದರೆ, 'ನೀನು ಪ್ರಾಣನು, ಸಕಲಭೂತಗಳೂ ಪ್ರಾಣವೇ' ಎಂಬುದಾಗಿ ಅನೇಕ ದೇಹಗಳಲ್ಲಿ ಪ್ರಾಣನಿಗೆ ಅಂತರ್ಯಾಮಿತ್ವವು ಹೇಳಲ್ಪಟ್ಟಿದೆ.

ಪ್ರತಿಪದಾರ್ಥ - ಪೂರ್ವಾಕ್ಷೇಪವನ್ನು ನಿರಾಕರಿಸುತ್ತಾ, ಸಿದ್ಧಾಂತಭಾಗವನ್ನು ವ್ಯಾಖ್ಯಾನಿಸುತ್ತಿದ್ದಾರೆ. ನ = 'ಇಂದ್ರನೇ ಪ್ರಾಣನು' ಎಂದು ಹೇಳಿದ್ದು ತಪ್ಪು. ಏಕೆಂದರೆ, ಅತ್ರ = ಇದೇ ಐತರೇಯೋಪನಿಷತ್ತಿನಲ್ಲಿ, ತ್ವಂ = ನೀನು, ಪ್ರಾಣಃ = ಪ್ರಾಣನು, ಸರ್ವಾಣಿ ಭೂತಾನಿ = ಸಕಲ ಜೀವರಾಶಿಗಳು, ಪ್ರಾಣಃ = ಪ್ರಾಣವು. ಇತಿ = ಈ ಪ್ರಕಾರವಾಗಿ, ಬಹ್ವಧ್ಯಾತ್ಮಸಂಬಂಧಃ = ಅನೇಕ ದೇಹಗಳಲ್ಲಿ ಅಂತರ್ಯಾಮಿ-ಯಾಗಿರುವಿಕೆಯೆಂಬ ಸಂಬಂಧವು, ವಿದ್ಯತೇ ಹಿ = ಇರುತ್ತದಷ್ಟೇ.

**भाष्यदीपिका** – नञध्याहारेण सिद्धान्तांशं व्याचष्टे - नेति ॥ अनुगमादित्यनुवर्तते । नेत्यावर्तते । हिशब्दो यत इत्यर्थे । अस्योक्तमिति शेषः । तथा चेत्थं तत्त्वप्रदीपटीकोक्ता योजना नायं प्राण इन्द्रः, किन्तु विष्णुरेव । कुतः? 'अनुगमात्' प्रागुक्तप्रबलतमलिङ्गादेः । तथा सत्युपदेशविरोध इति चेत् - न, कुतः? यतोऽत्र प्रकरणे स्वस्थितस्यैव प्रथमं 'प्राणो वा अहमस्म्यृषे' इति वाक्येन परमात्मत्वमुक्तमिन्द्रेण । तर्ह्यैक्योक्तिविरोध इत्यपि न । यतोऽत्र तस्यैव प्राणाख्यपरमात्मनः 'प्राणस्त्वं प्राणः सर्वाणि भूतानि' इत्येवमादिवाक्येन 'बह्वध्यात्मसम्बन्धः' इन्द्रादिजीवरूपबहुदेहसम्बन्धः सर्वगतत्वमेव ऋषिं प्रति इन्द्रेणोक्तं 'विद्यते' अस्ति नत्वैक्यमत इति । सूत्रोक्तसम्बन्धबाहुल्यं सम्बन्धिनि पर्यवस्यतीत्याशयेन बह्वित्युक्तम् । भूमशब्दस्य भाववाचित्वेऽपि भावभवित्रोरभेदाद् भवितरि प्रयोगः । सूत्रे तु परनिपात आर्षः ।

अथवा – अधिकश्चासावात्मा चाध्यात्मा तस्य सम्बन्धः बहुश्चासावध्यात्मसम्बन्धश्चेति विग्रहः । तथा च 'हि' यतः 'अत्र' इन्द्रे 'बहुः' बहुलः परमात्मसम्बन्धः सन्निधिविशेषो विद्यत इत्यर्थः । विद्यत इत्यनन्तरं तदपेक्षयाऽयम् उपदेशो न स्वापेक्षयेति शेषः । तथाचेन्द्रे तात्कालिकेश्वरसन्निधानविशेषाभिप्राया 'प्राणो वा अहम्' इत्युक्तिः, न स्वापेक्षयेति नोपदेशविरोध इति भावः । कुतो न स्वापेक्षयेत्यतः प्राणस्त्वमित्याद्याह । योजना तु - हि यस्मात् 'प्राणस्त्वम्' इत्यादिवाक्येनास्य प्राणस्य 'बह्वध्यात्मसम्बन्धः' अध्यात्मत्वेनान्तर्यामित्वेन इन्द्रादिरूपबहुदेहसम्बन्धः सर्वगतत्वमुक्तं विद्यते । न चैतदत्र जीवविशेषेन्द्रे विद्यते युज्यते । तस्मादिति ॥ प्रथमपक्षे 'यस्याऽत्मा शरीरम्' (माध्यन्दिन) इति श्रुतेरिन्द्रादीनां विष्णुदेहत्वादैक्यव्यपदेशः शरीरशरीरिभावनिबन्धन इति ज्ञापनायाध्यात्मेत्युक्तिः । अनेन बृहतीसहस्रवक्तुर्विश्वामित्रस्य तं प्रतीन्द्रेण प्राणतयाऽत्मोपदेशादयं प्राणो न विष्णुः, किन्तु इन्द्र एवेति चेत् - नेन्द्रोऽयं प्राणः, किन्तु विष्णुरेव । कुतः? अनुगमात् प्रागुक्तबलतमलिङ्गादेः । न चोपदेशविरोधः । यतोऽयमिन्द्रगताध्यात्मविषय एव । कुतः? हि यस्मादस्मिन् प्रकरणेऽध्यात्मसम्बन्धभूमा । अत्राध्यात्मसम्बन्धशब्देनाऽत्माधिकारे वर्तमानमिति । अधि-

तत्वप्रकाशिका – **नञध्याहारेण सिद्धान्तांशं व्याचष्टे – नेति ॥ नेन्द्रोऽयं प्राणः किन्तु विष्णुरेव । प्रागुक्तप्रबलतमलिङ्गादेः । उपदेशविरोध इति चेत् । भवेदयं विरोधो यद्यत्रेन्द्रेण प्राणतयाऽऽत्मोपदेशः क्रियेत । नैतदस्ति । यतोऽस्मिन्प्रकरणे स्वस्थितस्य प्राणो वा अहमस्मीति परमात्मत्वमुक्त्वा तस्यैव प्राणाख्यपरमात्मनः 'प्राणस्त्वं प्राणो सर्वाणि भूतानि' इत्यादिना बहुदेहसम्बन्धः सर्वगतत्वमेवेन्द्रेणोक्तं विद्यत इत्यर्थः । अथर्वेन्द्रे बहुपरमात्मसम्बन्धो विद्यते तदपेक्षयैवायमुपदेशो न स्वापेक्षया । कुतः? 'प्राणस्त्वम्' इत्यादिनास्य प्राणसाध्यात्मत्वेनान्तर्यामित्वेन सर्वगतत्वोक्तेः विद्यमानत्वात् । न चैतदिन्द्रे जीवविशेषे युक्तमित्यर्थः । अन्यथा त्वामेव जानीयामिति ज्ञातपूर्वेन्द्रस्य मुनेः प्रश्नस्यैवासम्भवात् । सम्भवे वा प्राणस्त्वम् इत्यादिपरिहारवाक्यासङ्गतेश्च । अस्मत्पक्षे तु (*)तेजोबाहुल्यात् इन्द्रेऽन्योऽपि वर्तते । कोऽसौ विष्णुश्चेत् स च कीदृश इत्यभिप्रायद्वयेन प्रश्ने सति कस्त्वयीति प्रश्नस्य प्राणौ वाऽहमिति परिहारः । कीदृशोऽसावित्यस्योत्तरतयोत्तरवाक्ययोजनोपपत्तेरिति ॥ २९ ॥**

'ನ' ಎಂಬುದನ್ನು ಅಧ್ಯಾಹಾರ ಮಾಡಿಕೊಂಡು ಸಿದ್ಧಾಂತಾಂಶವನ್ನು ಭಾಷ್ಯಕಾರರು "ನ" ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ. ಈ ಪ್ರಾಣನು ದೇವೇಂದ್ರನಲ್ಲ; ಹೊರತಾಗಿ ವಿಷ್ಣುವೇ ಆಗಿದ್ದಾನೆ. ಏಕೆಂದರೆ, ವಿಷ್ಣುವೆಂಬರ್ಥದಲ್ಲಿ ದೇವೋಪಾಸ್ಯತ್ವವೇ ಮೊದಲಾದ ಅತ್ಯಂತಪ್ರಬಲವಾದ ಲಿಂಗಗಳನ್ನು ಈ ಹಿಂದೆ ಹೇಳಲಾಗಿದೆ. ಹಾಗಾದರೆ ಉಪದೇಶದ ವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಒಂದು ವೇಳೆ ದೇವೇಂದ್ರನೇ ಸ್ವತಃ ತನ್ನನ್ನು ಪ್ರಾಣನೆಂದು ಉಪದೇಶಮಾಡಿದ್ದರೆ ವಿರೋಧಕ್ಕೆ ಅವಕಾಶವಿತ್ತು. ಆದರೆ ಹಾಗೆ ಮಾಡಿಲ್ಲ. ಏಕೆಂದರೆ, ಈ ಪ್ರಕರಣದಲ್ಲಿ ತನ್ನ ಒಳಗಿರುವ

---

श्चासौ आत्मा चेति देहः परमात्मा चोच्यते । तथा च यस्मादध्यात्मनो विष्णोरिन्द्र-विश्वामित्रादिदेहसम्बन्ध उक्तोऽस्ति तस्मात् ।

अथवा – हि यस्माद् अस्मिन्निन्द्रे अध्यात्मसम्बन्धभूमा – अधिरीश्वरे अधिकस्याऽत्मनः परमात्मनः सम्बन्धस्याऽवेशस्य भूमा बाहुल्यं विद्यते तस्मादुपदेशस्य सन्निहितपरमात्म-विषयत्वोपपत्तेरिति भावः । तदपि कुतः? हि यस्मात् अस्मिन् प्रकरणेऽध्यात्मसम्बन्ध-भूमोक्तः तस्मादिति सूत्रार्थ उक्तो भवति ।

(*) 'सर्वथाऽऽज्ञातस्यापि प्रश्नायोगात्' इति भावेनोक्तम् – तेजोबाहुल्यादिति ॥
– गुर्वर्थदीपिका ।

ಪರಮಾತ್ಮನನ್ನು ವಿವಕ್ಷಿಸಿ 'ಪ್ರಾಣೋ ವಾ ಅಹಮಸ್ಮಿ' ಎಂಬುದಾಗಿ ಹೇಳುತ್ತಿದ್ದಾನೆ. ಅಂತಹ ಪ್ರಾಣನೆಂಬ ಪರಮಾತ್ಮನಿಗೆ 'ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ' ಎಲ್ಲರಿಗೂ ನೀನೇ ಪ್ರಾಣನಾಗಿದ್ದೀ ಇತ್ಯಾದಿಯಾಗಿ ಅನೇಕ ದೇಹಗಳ ಸಂಬಂಧವನ್ನು ಹೇಳಲಾಗಿದೆ. ಮತ್ತು ಸರ್ವಗತತ್ವವನ್ನೂ ಸಹ ದೇವೇಂದ್ರನು ಹೇಳಿದ್ದಾನೆ ಎಂದರ್ಥ.

ಅಥವಾ ದೇವೇಂದ್ರನಲ್ಲಿ ಪರಮಾತ್ಮನ ವಿಶೇಷಸನ್ನಿಧಾನವಿದೆ. ಅದನ್ನು ವಿವಕ್ಷಿಸಿ ದೇವೇಂದ್ರನು ಹೀಗೆ ಉಪದೇಶಿಸಿದ್ದಾನೆ. ಹೊರತು ತನ್ನನ್ನು ಉದ್ದೇಶಿಸಿ ಉಪದೇಶಿಸಿಲ್ಲ. ಏಕೆಂದರೆ, 'ಪ್ರಾಣಸ್ತ್ವಮ್' ಇತ್ಯಾದಿಯಾಗಿ ಈ ಪ್ರಾಣನಿಗೆ ಅಧ್ಯಾತ್ಮಸಂಬಂಧದಿಂದ ಮತ್ತು ಅಂತರ್ಯಾಮಿತ್ವದಿಂದ ಸರ್ವಗತತ್ವವನ್ನು ಹೇಳುವ ವಚನಗಳಿರುವುದರಿಂದ ಎಂದು ತಿಳಿಯಬೇಕು. ಇಲ್ಲಿ ಹೇಳಲ್ಪಟ್ಟ ಸರ್ವಗತತ್ವವು ಜೀವವಿಶೇಷನಾದ ದೇವೇಂದ್ರನಲ್ಲಿ ಯುಕ್ತವಾಗುವುದಿಲ್ಲವೆಂದರ್ಥ. ಇಲ್ಲದಿದ್ದರೆ 'ತ್ವಾಮೇವ ಜಾನೀಯಾಮ್' (ನಿನ್ನನ್ನೇ ತಿಳಿಯುತ್ತೇನೆ) ಎಂದು ವಿಶ್ವಾಮಿತ್ರ ಋಷಿಯು ಏಕೆ ಪ್ರಶ್ನಿಸುತ್ತಿದ್ದರು. ಮೊದಲೇ ದೇವೇಂದ್ರನನ್ನು ಅವರು ತಿಳಿದಿದ್ದಾರಲ್ಲವೇ? ಒಂದು ವೇಳೆ ದೇವೇಂದ್ರನನ್ನು ತಿಳಿಯಬೇಕೆಂದೇ ಅವರು ಪ್ರಶ್ನಿಸಿದ್ದರೆ 'ಪ್ರಾಣಸ್ತ್ವಮ್' ಇತ್ಯಾದಿಯಾಗಿ ಇಂದ್ರನಿಗೆ ನೀಡುವ ಉತ್ತರವಾಕ್ಯವು ಅಸಂಗತವಾಗುತ್ತದೆ.

ನಮ್ಮ ಪಕ್ಷದಲ್ಲಾದರೋ ವಿಶೇಷವಾದ ತೇಜಸ್ಸು ದೇವೇಂದ್ರನಲ್ಲಿರುವುದರಿಂದ ಆ ತೇಜಸ್ಸನ್ನು ಗಮನಿಸಿದ ವಿಶ್ವಾಮಿತ್ರ ಋಷಿಯು ಈ ದೇವೇಂದ್ರನಲ್ಲಿ ಮತ್ತೊಬ್ಬನಿರಬಹುದು. ಅವನು ಯಾರು? ಎಂಬ ಗೊಂದಲದಿಂದ; ಒಂದು ವೇಳೆ ವಿಷ್ಣುವೇ ಇರುವವನಾದಲ್ಲಿ ಅವನ ಮಹಿಮೆಯೇನು? ಎಂಬುದಾಗಿ ಎರಡು ವಿಧದ ಅಭಿಪ್ರಾಯದಿಂದ 'ತ್ವಾಮೇವ ಜಾನೀಯಾಮ್' ಎಂದು ಪ್ರಶ್ನಿಸಿದ್ದಾರೆ. ನಿನ್ನಲ್ಲಿ ಯಾರಿದ್ದಾರೆ? ಎಂಬ ಪ್ರಶ್ನೆಗೆ 'ಪ್ರಾಣೋ ವಾ ಅಹಮ್' ಎಂದು ಉತ್ತರ ನೀಡಿದ್ದಾನೆ. ಪರಮಾತ್ಮನ ಮಹಿಮೆಯೇನು? ಎಂಬ ಪ್ರಶ್ನೆಗೆ ಮುಂದಿನ ವಾಕ್ಯಗಳಿಂದ ಉತ್ತರಿಸಿದ್ದಾನೆ. ಹೀಗೆ ಶ್ರುತಿವಾಕ್ಯಗಳನ್ನು ಯೋಜನಮಾಡಿ ಅರ್ಥೈಸಿಕೊಳ್ಳಬೇಕು.

**भावदीपः** – 'न प्राणो विष्णुः, किन्त्विन्द्र एव आत्मोपदेशात्' इति शङ्कायाः सूत्रशेषेण न साक्षादुत्तरं लगति, इत्यतः तदुत्तरत्वेन 'इति चेन्न' इत्यनन्तरं पूर्वसूत्रात् 'अनुगमात्' इति हेतुमनुवर्त्य, अर्थमाह – **नेन्द्रोऽयमिति** ॥ बहुत्व-निरवकाशत्वादेः सत्वात् **प्रबलतम** इत्युक्तम् । सूत्रे अध्याहृत्य वा अनुवृत्त्य वा उक्तस्य भाष्यस्थनञः 'प्राणो नेन्द्रः किन्तु विष्णुरेव अनुगमात्' इत्येकोऽर्थ उक्तः । 'उपदेश विरोधो न' इत्यर्थान्तरं चोक्त्वा, तत्र हेतुत्वेन सूत्रखण्डभाष्यस्यार्थमाह – **नैतदस्ति इत्यादिना** ॥ 'हि'शब्दार्थो 'यतः' इति । 'अस्मिन्' इति सौत्रपदानुवादः 'अत्र' इति भाष्यस्थपदं च विवृतं ध्येयम् । 'प्राणस्त्वम्' इत्यत पूर्वं किञ्चिदु-

पस्करोति – **स्वस्थितस्येति** ॥ 'अध्यात्मसम्बन्धभूमा' इत्यस्य प्रतिपदं भाष्ये 'बह्वि'त्यादि । तस्यार्थः 'बहुदेह' इति । देहा इव देहाः इन्द्रविश्वामित्रादिचेतनाः तत्सम्बन्धः । फलितार्थमाह – **सर्वगतत्वमेवेति** ॥ एतेन सूत्रे अधिकात्मनः परमात्मनः अध्यात्मसम्बन्धभूमा देहसम्बन्धबाहुल्यम् इत्यर्थः सूचितः ।

'ಪ್ರಾಣಶಬ್ದದಿಂದ ವಿಷ್ಣುವು ಪ್ರತಿಪಾದ್ಯನಲ್ಲ. ಹೊರತಾಗಿ ಆತ್ಮೋಪದೇಶವಿರುವುದರಿಂದ ದೇವೇಂದ್ರನೇ ಪ್ರತಿಪಾದ್ಯನು' ಎಂಬ ಶಂಕೆಗೆ ಸೂತ್ರಶೇಷದಿಂದ ನೇರವಾಗಿ ಉತ್ತರವು ದೊರೆಯುತ್ತಿಲ್ಲವಲ್ಲವೇ? ಎಂಬ ಪ್ರಶ್ನೆಗೆ ಉತ್ತರ ನೀಡುವುದಕ್ಕಾಗಿ "ಇತಿ ಚೇನ್ನ" ಎಂಬ ಪದದ ಮುಂದೆ ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟ 'ಅನುಗಮಾತ್' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಆವಾಗ ಸೂತ್ರದಲ್ಲಿಯೇ ನೇರವಾಗಿ ಉತ್ತರಿಸಿದಂತಾಗುತ್ತದೆಂದು ಟೀಕೆಯಲ್ಲಿ "ನೇಂದ್ರೋಽಯಂ" ಎಂಬ ವಾಕ್ಯದಿಂದ ವಿವರಿಸಿದ್ದಾರೆ.

ಬಹುತ್ವ ಹಾಗೂ ನಿರವಕಾಶತ್ವಗಳಿರುವುದರಿಂದ ವಿಷ್ಣುವಿನ ಲಿಂಗಗಳು ಪ್ರಬಲತಮವಾಗಿದೆಯೆಂದು ಸಮರ್ಥಿಸಿದ್ದಾಗಿದೆ. ಸೂತ್ರದಲ್ಲಿ ಭಾಷ್ಯದಲ್ಲಿರುವ "ನ" ಎಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು ಅಥವಾ ಅನುವೃತ್ತಿ ಮಾಡಿಕೊಂಡು ಪ್ರಾಣನು ಇಂದ್ರನಲ್ಲ; ಹೊರತಾಗಿ ವಿಷ್ಣುವೇ ಆಗಿದ್ದಾನೆ ಬ್ರಹ್ಮಶಬ್ದದ ಅನುಗಮವಿರುವುದರಿಂದ ಎಂದು ಒಂದರ್ಥವನ್ನು ತಿಳಿಸಿದಂತಾಯಿತು. 'ಉಪದೇಶವಿರೋಧವು ಇರುವುದಿಲ್ಲ' ಎಂಬ ಮತ್ತೊಂದು ಅರ್ಥವನ್ನು ಹೇಳಿದಂತಾಯಿತು. ಈ ವಿಷಯದಲ್ಲಿ ಕಾರಣವನ್ನು ನೀಡುವುದಕ್ಕಾಗಿ ಸೂತ್ರದ ಒಂದು ಭಾಗಕ್ಕೆ ವ್ಯಾಖ್ಯಾನಿಸಿ ಭಾಷ್ಯವನ್ನು "ನೈತದಸ್ತಿ" ಎಂಬುದರಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ಹಿ'ಶಬ್ದಕ್ಕೆ 'ಯತಃ' ಎಂದರ್ಥ. ಸೂತ್ರದಲ್ಲಿರುವ 'ಅಸ್ಮಿನ್' ಎಂಬ ಪದವನ್ನು ಅನುವಾದ ಮಾಡಿ, 'ಅತ್ರ' ಎಂಬ ಭಾಷ್ಯದಲ್ಲಿರುವ ಪದವನ್ನು ವಿವರಿಸಿದ್ದಾರೆ ಎಂದು ತಿಳಿಯಬೇಕು.

'ಪ್ರಾಣಸ್ತ್ವಮ್' ಎಂಬ ಶ್ರುತಿಗಿಂತ ಮೊದಲು ಕೆಲವು ಅಂಶವನ್ನು ಅವಗಾಹನೆಗಾಗಿ "ಸ್ವಸ್ಥಿತಸ್ಯ" ಎಂಬುದಾಗಿ ಹೇಳುತ್ತಿದ್ದಾರೆ. "ಅಧ್ಯಾತ್ಮಸಂಬಂಧಭೂಮಾ' ಎಂಬ ಸೂತ್ರದಲ್ಲಿರುವ ಪದಕ್ಕೆ ಪ್ರತಿಯಾಗಿ ಭಾಷ್ಯದಲ್ಲಿ 'ಬಹ್ವಧ್ಯಾತ್ಮಸಂಬಂಧಃ' ಎಂಬುದಾಗಿ ಹೇಳಿದ್ದಾರೆ. ಟೀಕೆಯಲ್ಲಿ 'ಬಹುದೇಹಸಂಬಂಧ' ಎಂದದರರ್ಥವನ್ನು ಹೇಳಿದ್ದಾರೆ. ದೇಹದಂತಿರುವವರು ಇಂದ್ರವಿಶ್ವಾಮಿತ್ರ ಮೊದಲಾದ ಚೇತನರು. ಅವರ ಸಂಬಂಧವು ವಿಷ್ಣುವಿಗೆ ಇದೆ ಎಂದರ್ಥ. ಫಲಿತಾರ್ಥವನ್ನು 'ಸರ್ವಗತತ್ವಮೇವ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. ಹೀಗೆ ಹೇಳಿದ್ದರಿಂದ ಅಧಿಕಾತ್ಮನಾದ ಪರಮಾತ್ಮನಿಗೆ ಅಧ್ಯಾತ್ಮಸಂಬಂಧಭೂಮಾ = ದೇಹಸಂಬಂಧಬಾಹುಲ್ಯ ಎಂಬರ್ಥವನ್ನು ಸೂಚಿಸಿದಂತಾಯಿತು.

भावदीपः – 'अध्यात्मसम्बन्धशब्देनावेशो हि विष्णोरिन्द्रे विवक्षितः इति, अधिकात्मनः परमात्मनः सम्बन्धो हि अध्यात्मसम्बन्धः इति' चेतरेयभाष्यदिशा 'बह्वि'त्यादिभाष्यमन्यथाऽपि व्याचष्टे – **अथवेति** ॥ 'अस्मिन्' इति सूत्रस्थस्य

प्रतिपदं भाष्ये 'अत्र' इति । तदनुवादेन अर्थोक्तिः अत्र **'इन्द्रे'** इति । तत्र हेतुतयापि तदेव समग्रभाष्यं योजयति – **कुत इति** ॥ 'अध्यात्मत्वेन आत्मनो जीवानधिकृत्य वर्तमानत्वेन अन्तर्यामित्वेन' इति यावत् । फलितार्थः – **सर्वगततयेति** ॥

अन्तर्यामित्वेनोक्तेर्विद्यमानत्वमेव कुतः यज्जीवविशेषे न युक्तम्? इत्यतः 'इन्द्रं तु जानात्येव विश्वामित्रः' इत्यैतरेयभाष्योक्तं विपक्षे बाधकं तावदाह – **अन्यथेति** ॥ 'स्वापेक्षयोपदेशपक्षे' इत्यर्थः । एतदर्थं च प्राक् टीकायां वाक्यशेषोद्धार इति भावः । 'विशेषज्ञानार्थमस्तु प्रश्नः' इत्यतः सम्भवे वा इति पूर्वपक्षेऽपि विश्वामित्रादेः प्राणत्वाभावादिति भावः । सूत्रे 'भूम'पदं द्वितीयव्याख्यानपरं ध्येयम् ।

'ಬಹ್ವಧ್ಯಾತ್ಮಸಂಬಂಧ' ಎಂಬ ಭಾಷ್ಯಕ್ಕೆ ಮತ್ತೊಂದು ಬಗೆಯ ಅರ್ಥ — ವಿಷ್ಣುವಿನ ಆವೇಶವು ದೇವೆಂದ್ರನಲ್ಲಿರುವುದರಿಂದ ಅಧಿಕಾತ್ಮನೆನಿಸಿದ ಪರಮಾತ್ಮನ ಸಂಬಂಧವು ದೇವೇಂದ್ರನಿಗಿದೆ. ಹೀಗೆ ಐತರೇಯಭಾಷ್ಯದಲ್ಲಿ ಹೇಳಿದ ಪ್ರಕಾರ ''ಅಥವಾ'' ಎಂಬುದಾಗಿ ಮತ್ತೊಂದು ಬಗೆಯಲ್ಲಿ ವ್ಯಾಖ್ಯಾನಿಸು-ತ್ತಿದ್ದಾರೆ. 'ಅಸ್ಮಿನ್' ಎಂಬ ಸೂತ್ರದಲ್ಲಿರುವ ಪದಕ್ಕೆ ಪ್ರತಿಯಾದ ಪದವನ್ನು ಭಾಷ್ಯದಲ್ಲಿ 'ಅತ್ರ' ಎಂದು ಹೇಳಿದ್ದಾರೆ. ಭಾಷ್ಯದಲ್ಲಿ ಹೇಳಿದ ಅತ್ರ ಎಂಬ ಪದದ ಅರ್ಥವನ್ನು ಟೀಕೆಯಲ್ಲಿ ''ಇಂದ್ರೇ'' ಎಂಬುದಾಗಿ ಬರೆದಿದ್ದಾರೆ. ಈ ವಿಷಯದಲ್ಲಿ ಹೇತುತ್ವವನ್ನು ಸಮರ್ಥನೆ ಮಾಡುತ್ತಾ ಅದೇ ಸಮಗ್ರವಾದ ಭಾಷ್ಯವನ್ನು ಯೋಜನೆ ಮಾಡುತ್ತಿದ್ದಾರೆ ''ಕುತಃ'' ಇತ್ಯಾದಿಯಾಗಿ. ಟೀಕೆಯಲ್ಲಿರುವ ''ಅಧ್ಯಾತ್ಮತ್ವೇನ'' ಎಂಬ ಪದಕ್ಕೆ ಜೀವನನ್ನು ಕುರಿತು ಹೊರಟಿರುವ ಎಂದರ್ಥ. ಅಂತರ್ಯಾಮಿತ್ವ ಎಂಬುದು ಒಟ್ಟಿನ ತಾತ್ಪರ್ಯ. ಫಲಿತವಾದ ಅರ್ಥವನ್ನು ''ಸರ್ವಗತತಯಾ'' ಎಂಬುದಾಗಿ ಹೇಳಿದ್ದಾರೆ.

ಅಂತರ್ಯಾಮಿತ್ವವಾಗಲೀ ಸರ್ವಗತತ್ವವಾಗಲೀ ಜೀವವಿಶೇಷನಾದ ದೇವೇಂದ್ರನಲ್ಲಿ ಹೇಳಲು ಸಾಧ್ಯವಿಲ್ಲ. ಏಕೆಂದರೆ 'ಇಂದ್ರಂ ತು ಜಾನಾತ್ಯೇವ ವಿಶ್ವಾಮಿತ್ರಃ' (ಇಂದ್ರನನ್ನು ವಿಶ್ವಾಮಿತ್ರರು ಈಗಾಗಲೇ ತಿಳಿದಿದ್ದಾರೆ) ಎಂಬ ಐತರೇಯಭಾಷ್ಯದಲ್ಲಿ ಹೇಳಲ್ಪಟ್ಟ ವಿಪಕ್ಷೇ ಬಾಧಕತರ್ಕವನ್ನು ''ಅನ್ಯಥಾ'' ಇತ್ಯಾದಿ-ವಾಕ್ಯದಿಂದ ಹೇಳುತ್ತಿದ್ದಾರೆ. 'ಅನ್ಯಥಾ' ಎಂಬ ಪದಕ್ಕೆ 'ತನ್ನನ್ನೇ ಉಪದೇಶಮಾಡಿದ ಪಕ್ಷದಲ್ಲಿ' ಎಂದರ್ಥ. ಇದನ್ನು ತಿಳಿಸುವುದಕ್ಕೋಸ್ಕರವೇ ಹಿಂದೆ ಟೀಕೆಯಲ್ಲಿ ಶ್ರುತಿಯ ವಾಕ್ಯಶೇಷವನ್ನು ಉದ್ಧರಿಸಿದ್ದಾರೆಂಬುದನ್ನು ಗಮನಿಸಬೇಕು. ಇಂದ್ರನ ಬಗ್ಗೆ ವಿಶೇಷಜ್ಞಾನವನ್ನು ಹೊಂದುವುದಕ್ಕಾಗಿ ವಿಶ್ವಾಮಿತ್ರ ಋಷಿಯು ಪ್ರಶ್ನಿಸಿ-ರಬಹುದಲ್ಲವೇ? ಎಂದು ಪ್ರಶ್ನಿಸಿದರೆ ಹಾಗೆ ಒಪ್ಪಿದರೂ ಸಹ ಪೂರ್ವಪಕ್ಷದಲ್ಲಿ ವಿಶ್ವಾಮಿತ್ರಾದಿಗಳಿಗೆ ಪ್ರಾಣತ್ವವು ಬರಲು ಸಾಧ್ಯವಿಲ್ಲ. ಸೂತ್ರದಲ್ಲಿರುವ ಭೂಮ ಎಂಬ ಪದವು ಎರಡನೆಯ ವ್ಯಾಖ್ಯಾನವನ್ನು ಸೂಚಿಸಿದೆ.

भा.दी. – अत्र 'प्राणस्यान्तर्यामित्वेनोक्तिः' इत्येतत् न केवलं विपक्षे बाधकात् ज्ञायते, किन्तु वाक्ययोजनासामञ्जस्याच्च ज्ञायते इति- भावेनाह – **अस्मत्पक्षे तु**

इति ॥ यद्वा, 'अयं च दोषो भवतामपि समः' इत्यत आह – **अस्मत्पक्षे तु इति** ॥ **अहमितीति** ॥ तर्हि प्राणो वा मयि अस्तीति स्यादिति तु निरसिष्यत इति भावः । **उत्तर इति** ॥ 'प्राणस्त्वम्' इत्यादिरित्यर्थः । अत्र यद्यपि ऐतरेयभाष्ये –

**त्वां जानीयामिति प्रश्नं विश्वामित्रस्य कुर्वतः ।**
**अभिप्रायद्वयं ह्यस्ति शक्राविष्टो न चापरः ।**
**हरेति तु मे तर्कस्तेजोबाहुल्यतोऽजनि ।**
**तस्य तर्कस्य सत्यत्वं ज्ञातव्यं प्रथमं मम ।**
**द्वितीयं यदि विष्णुः स्यात् ज्ञातव्यो मे विशेषतः ।**
**इत्यभिप्रायमस्यैव ज्ञात्वा विष्णुः सनातनः ।**
**अभिप्रायद्वयस्यापि परिहारं हरिर्ददौ ।**
**प्राणो वाऽहमित्यादिनामसन्दर्भमुक्तवान् ।**
**विशेषज्ञानसिद्ध्यर्थं नाम्ना मुक्तिः परात्मनः ।**
**इन्द्राविष्टः कोऽयमिति शङ्कानुत्यर्थमेव च ।**
**तपन्नेवास्मीत्यवद् तपन्तं वेद सोऽपि च ॥**

इति । तथा 'अहेयत्वादहं नामास्मि, असनान् मनुतेरपि' इत्यादिस्मृतौ ।

ವಿಪಕ್ಷೇ ಬಾಧಕತರ್ಕವಿರುವುದರಿಂದ ಪ್ರಾಣನಲ್ಲಿ ಅಂತರ್ಯಾಮಿತ್ವವನ್ನು ಹೇಳಿದ್ದಷ್ಟೇ ಅಲ್ಲ ಹೊರತಾಗಿ ವಾಕ್ಯಯೋಜನೆಯಲ್ಲಿ ಅಸಾಮಂಜಸ್ಯವು ಬರುತ್ತದೆ. ಈ ಅಭಿಪ್ರಾಯದಿಂದ 'ಅಸ್ಮತ್‌ಪಕ್ಷೇ' ಎಂಬ ಟೀಕೆಯು ಹೊರಟಿದೆ. ಅಥವಾ ನಮಗೆ ಹೇಳಿದ ದೋಷ ನಿಮಗೂ ಸಮಾನವಲ್ಲವೇ? ಎಂಬ ಪ್ರಶ್ನೆಗೆ ''ಅಸ್ಮತ್‌ಪಕ್ಷೇ'' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ''ಪ್ರಾಣೋ ವಾ ಅಹಮಿತಿ ಪರಿಹಾರಃ'' ಎಂದು ಟೀಕೆಯಲ್ಲಿದೆ. ಇಲ್ಲಿರುವ ಅಹಂ ಶಬ್ದದ ಅಭಿಪ್ರಾಯ ಹೀಗಿದೆ -- ಹಾಗಾದರೆ 'ಪ್ರಾಣೋ ವಾ ಮಯಿ ಅಸ್ತಿ' ಎಂದು ದೇವೇಂದ್ರನು ಹೇಳಬೇಕಿತ್ತಲ್ಲವೇ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಈ ಮುಂದೆ ಇದನ್ನು ನಿರಾಕರಿಸುತ್ತೇವೆ -- ಎಂದು. ''ಉತ್ತರವಾಕ್ಯ''ವೆಂದರೆ 'ಪ್ರಾಣಸ್ತ್ವಮ್' ಇತ್ಯಾದಿ ವಾಕ್ಯವೆಂದರ್ಥ.

— 'अहं त्वम्' आदिशब्दानामन्तर्यामिणि वृत्तेर्दर्शितत्वात् । 'सप्तसु प्रथमा' इति सूत्राच्च । तथा च ब्रह्माण्डे –

**यावज्ज्ञानेन मोक्षः स्यात् तावज्ज्ञात्वाऽपि कौशिकः ।**
**अधिकज्ञानलब्ध्यर्थं मोक्षेऽधिकसुखाप्तये ।**
**जानीयां त्वामिति प्राह तस्मा आह स केशवः ।**

ಪ್ರಶ್ನೆ - ಪ್ರಾಣೋ ವಾ ಅಹಮಸ್ಮಿ ಇತ್ಯಾದಿ ಪ್ರಕರಣವನ್ನು ಶ್ರುತಿಗೆ ಸೂತ್ರ, ಭಾಷ್ಯಗಳಲ್ಲಿ ಬೇರೆ ಬೇರೆ ಅಭಿಪ್ರಾಯದಿಂದ ವ್ಯಾಖ್ಯಾನಿಸಿರುವುದು ಕಾಣುತ್ತಿದೆ. ಏಕೆಂದರೆ, ಐತರೇಯಭಾಷ್ಯದಲ್ಲಿ ಶ್ರೀಮದಾಚಾರ್ಯರು ಈ ಪ್ರಕರಣವನ್ನು ಹೀಗೆ ವ್ಯಾಖ್ಯಾನಿಸಿದ್ದಾರೆ.

ತ್ವಾಂ ಜಾನೀಯಾಮಿತಿ ಪ್ರಶ್ನಂ ವಿಶ್ವಾಮಿತ್ರಸ್ಯ ಕುರ್ವತಃ।
ಅಭಿಪ್ರಾಯದ್ವಯಂ ಹ್ಯಸ್ತಿ ಶಕ್ರಾವಿಷ್ಟೋ ನ ಚಾಪರಃ।

ನಿನ್ನನ್ನು ನಾನು ತಿಳಿಯಬೇಕೆಂದು ಅಪೇಕ್ಷಿಸುವ ವಿಶ್ವಾಮಿತ್ರಋಷಿಗೆ ಎರಡು ಅಭಿಪ್ರಾಯವಿದೆ. ಇಂದ್ರನಲ್ಲಿ ಆವೇಶವನ್ನು ಹೊಂದಿದವನು ಬೇರೆ ಯಾರೂ ಅಲ್ಲ.

ಹರೇರಿತಿ ತು ಮೇ ತರ್ಕಸ್ತೇಜೋಬಾಹುಲ್ಯತೋಽಜನಿ।
ತಸ್ಯ ತರ್ಕಸ್ಯ ಸತ್ಯತ್ವಂ ಜ್ಞಾತವ್ಯಂ ಪ್ರಥಮಂ ಮಯಾ।

ದೇವೇಂದ್ರನಲ್ಲಿ ವಿಶೇಷವಾದ ತೇಜಸ್ಸು ಕಾಣಿಸುತ್ತಿರುವುದರಿಂದ ಹರಿಯೇ ಇಂದ್ರನಲ್ಲಿ ಇದ್ದಾನೆಂದು ನನಗೆ ಊಹೆ ಉಂಟಾಗಿದೆ. ಈ ಊಹೆಯಲ್ಲಿ ಸತ್ಯತೆಯನ್ನು ನಾನು ಮೊದಲು ತಿಳಿಯಬೇಕು.

ದ್ವಿತೀಯಂ ಯದಿ ವಿಷ್ಣುಃ ಸ್ಯಾಜ್ಜ್ಞಾತವ್ಯೋ ಮೇ ವಿಶೇಷತಃ।
ಇತ್ಯಭಿಪ್ರಾಯಮಸ್ಯೈವ ಜ್ಞಾತ್ವಾ ವಿಷ್ಣುಃ ಸನಾತನಃ।
ಅಭಿಪ್ರಾಯದ್ವಯಸ್ಯಾಪಿ ಪರಿಹಾರಂ ಹರಿರ್ದದೌ॥

ಎರಡನೆಯದಾಗಿ ಇಂದ್ರನಲ್ಲಿ ಆವೇಶವನ್ನು ಹೊಂದಿದವನು ವಿಷ್ಣುವೇ ಆಗಿದ್ದರೆ ಅಂತಹ ವಿಷ್ಣುವನ್ನು

---

**इन्द्राविष्टः प्राणनाम तथाऽन्याश्चाभिधाः प्रभुः ।**
**प्रकृष्टानन्दरूपत्वात् प्राण इत्यभिधीयते ।**
**अहेयत्वादहं नामाऽस्म्यसनान् मनुतेरपि ।**
**ततो वेत्तेति च त्वं स पूर्णत्वात् सर्वनामकः ।**
**सर्वाणि बहुरूपत्वात् सर्वरूपेषु पूर्तितः ।**
**प्रभूतत्वात् भूतनामा सर्वरूपप्रभूततः ।**
**बहुरूपः स भूतानीत्युक्तो विष्णुः सनातनः ।**
**सर्वैश्वर्यस्वरूपत्वादेष इत्यभिधीयते ।**
**स एव सूर्यसंस्थः सन् लोकान् तपति केशवः ॥**

इत्यादि महैतरेयोपनिषद्भाष्येऽपि भगवान् भाष्यकृदेवानयोरर्थविशेषं स्पष्टीचकार ।

अध्यात्मसम्बन्धशब्देनाऽवेशो हि विष्णोरिन्द्रे विवक्षितो भगवता । अन्येष्वपि अन्तर्यामिरूपेण सम्बन्धोऽस्त्येव । अस्मिन्निन्द्रे तु विशेषः तात्कालिकः । अधिकात्मनः परमात्मनः सम्बन्धो हि अध्यात्मसम्बन्धः । न हि स्वात्मनः स्वस्य सम्बन्धो भवति । यदि 'अध्यात्ममत्रोच्यते' इति विवक्षितं तर्हि 'अध्यात्मभूमा' इत्येव स्यात् । सम्बन्धशब्दो व्यर्थः । तस्मात् इन्द्रादिजीवेभ्यो विष्णोर्भेद एवात्र भगवतो विवक्षितः । – **(तत्वप्रदीपिका)**

ನಾನು ವಿಶೇಷವಾಗಿ ತಿಳಿಯಬೇಕು. ವಿಶ್ವಾಮಿತ್ರ ಋಷಿಯ ಈ ಎರಡು ವಿಧದ ಅಭಿಪ್ರಾಯವನ್ನು ತಿಳಿದು ಸಕಲಸಂಶಯ ಪರಿಹಾರಕನಾದ ಭಗವಂತನು ಎರಡು ವಿಧ ಅಭಿಪ್ರಾಯಕ್ಕೂ ಸರಿಯಾದ ಪರಿಹಾರವನ್ನು ನೀಡಿದ್ದಾನೆ.

ಪ್ರಾಣೋ ವಾऽಹಮಿತ್ಯಾದಿ ನಾಮಸಂದರ್ಭಮುಕ್ತವಾನ್ ।
ವಿಶೇಷಜ್ಞಾನಸಿದ್ಧ್ಯರ್ಥಂ ನಾಮ್ನಾ ಮುಕ್ತಿಃ ಪರಾತ್ಮನಃ ॥

ವಿಶೇಷವಾದ ತತ್ತ್ವಜ್ಞಾನದ ಸಿದ್ಧಿಗಾಗಿ 'ಪ್ರಾಣೋ ವಾऽಹಮಸ್ಮಿ' ಮುಂತಾದ ನಾಮಗಳನ್ನು ಬಣ್ಣಿಸಿದ್ದಾನೆ. ವಿಷ್ಣುಸಹಸ್ರನಾಮ ಮುಂತಾದ ಬೇರೆಡೆಗಳಲ್ಲಿಯೂ ಇದಕ್ಕೋಸ್ಕರವೇ ಅನೇಕ ನಾಮಗಳನ್ನು ಹೇಳಿದ್ದು ಕಂಡಿದೆ.

ಇಂದ್ರಾವಿಷ್ಟಃ ಕೋऽಯಮಿತಿ ಶಂಕಾನುತ್ತ್ಯರ್ಥಮೇವ ಚ ।
ತಪನ್ನೇವಾಸ್ಮೀತ್ಯವದತ್ ತಪಂತಂ ವೇದ ಸೋऽಪಿ ಹಿ ॥
(ನಾರಾಯಣಂ ಸೂರ್ಯಗತಂ ಗಾಯತ್ರ್ಯೋಪಾಸಕೋ ಹಿ ಸಃ)

ಇಂದ್ರನಲ್ಲಿ ಆವೇಶವನ್ನು ಹೊಂದಿದವನು ಯಾರು? ಎಂಬ ಶಂಕೆಯ ಪರಿಹಾರಕ್ಕಾಗಿ 'ತಪನ್ನೇವಾಸ್ಮಿ' ತಾಪವನ್ನುಂಟು ಮಾಡುವ ನಾನೇ ಇಂದ್ರನಲ್ಲಿ ಆವಿಷ್ಟನಾಗಿದ್ದೇನೆಂದು ಹೇಳಿಕೊಂಡಿದ್ದಾನೆ. ಸೂರ್ಯಮಂಡಲದಲ್ಲಿದ್ದು ನಾರಾಯಣ ರೂಪದಿಂದ ಲೋಕಕ್ಕೆ ಶಾಖನೀಡುವವನೆಂಬುದು ವಿಶ್ವಾಮಿತ್ರ ಋಷಿಗೆ ತಿಳಿದೇ ಇದೆ. ಏಕೆಂದರೆ ಗಾಯತ್ರೀಮಂತ್ರದ್ರಷ್ಟಾರನಾಗಿ ಸೂರ್ಯಮಂಡಲದಲ್ಲಿ ಅಂತರ್ಗತನಾದ ನಾರಾಯಣನನ್ನು ವಿಶ್ವಾಮಿತ್ರ ಋಷಿಯ ಉಪಾಸನೆ ಪ್ರಸಿದ್ಧವೇ ಆಗಿದೆ.

**भावदीपः** – नच 'प्राणो वा अहमस्म्यृषे' इत्यादावस्म्यादिशब्दः अस्मच्छब्दार्थः इत्यादिवाक्येषु चार्थपर्यालोचनया 'प्राणोऽहमस्म्यादिशब्दानां विष्णुनामत्वमुपेत्य कीदृश इति प्रश्नस्यायं परिहारः । 'कोऽयम्' इति प्रश्नस्य 'तपन्नेवास्मि' इत्ययं परिहार इत्युक्तं भाति; नतु 'अस्मि' इत्यस्य तिङन्तत्वमुपेत्य ।

न वा 'कोऽसौ' इत्यस्य 'प्राणो वा अहमस्मि' इत्येतत्समाधानमुपेत्य व्याख्यातम् । तथा 'प्राणस्तथानुगमात्' इति च विष्णोरेव प्राणशब्दाभिधेयत्वमुक्तम् इत्यादिना एतत्सूत्राण्यपि तथैव तत्र व्याख्यातानि इति च भाति । तथापि 'अस्मि' इत्यस्योत्तमपुरुषत्वाऽविघातेन प्राणस्येन्द्राद्यन्तर्याम्यैक्यरूपार्थान्तरपरतया श्रुतिसूत्र-भाष्याण्यत्र योजितानि । अत एव 'अन्तर'नये 'सोऽहमस्मीत्यादि त्वन्तर्याम्य-पेक्षया' इत्यादि भाष्यम् । स्मृत्युक्तार्थस्तु आनन्दमयनयभाष्योक्तरीत्या, तत्वप्रदीपो-क्तरीत्या च सुज्ञान इति तमनुक्त्वा उत्तरोपयोगित्वेनान्यार्थ उक्त इति ॥२९॥

ಮತ್ತು 'ಅಹೇಯತ್ವಾದಹಂನಾಮಾಸ್ಮಿ ಅಸನಾನ್ ಮನುತೇರಪಿ' (ಅಹೇಯನಾಗಿದ್ದರಿಂದ ಅಹಂ ಎನಿಸಿದ್ದಾನೆ, ಶತ್ರುಗಳನ್ನು ನಿರಾಸ ಮಾಡುವುದರಿಂದ ಮತ್ತು ಜ್ಞಾನರೂಪನಾದ್ದರಿಂದ ಅಸ್ಮಿ ಎನಿಸಿದ್ದಾನೆ).

ಈ ಸ್ಮೃತಿಯ ಪ್ರಕಾರ 'ಪ್ರಾಣೋ ವಾ ಅಹಮಸ್ಮ್ಯೃಷೇ' ಇತ್ಯಾದಿ ಸ್ಥಳದಲ್ಲಿರುವ ಅಸ್ಮಿ ಮೊದಲಾದ ಶಬ್ದಗಳನ್ನು ಕ್ರಿಯಾಪದವೆಂದು ಪರಿಗಣಿಸಿಯೇ ಇಲ್ಲ. ಹೊರತಾಗಿ ಅದು ಭಗವಂತನ ನಾಮವೆಂದು ಪರಿಗಣಿಸಿದ್ದಾರೆ.

ಆದ್ದರಿಂದ ಕೀದೃಶಃ ಎಂಬ ಪ್ರಶ್ನೆಗೆ ಉತ್ತರಿಸಿದಂತಾಯಿತು. ಇನ್ನು ''ಕೋಽಯಂ'' ಎಂಬ ಪ್ರಶ್ನೆಗೆ 'ತಪನ್ನೇವಾಸ್ಮಿ' ಎಂಬುದರಿಂದ ಉತ್ತರಿಸಿದಂತಾಯಿತೆಂದು ತೋರುತ್ತದೆ. ಹೊರತು ಅಸ್ಮಿ ಎಂಬುದು ಕ್ರಿಯಾಪದವೆಂದು ಅಂಗೀಕರಿಸಿ ಉತ್ತರಿಸಿರುವುದಿಲ್ಲ.

ಅಥವಾ 'ಕೋಽಸೌ' ಎಂಬ ಪ್ರಶ್ನೆಗೆ 'ಪ್ರಾಣೋ ವಾ ಅಹಮಸ್ಮಿ' ಎಂಬುದನ್ನು ಸಮಾಧಾನವನ್ನು ಒಪ್ಪಿ ವ್ಯಾಖ್ಯಾನಿಸಿಲ್ಲ. ಅದರಂತೆ 'ಪ್ರಾಣಸ್ತಥಾನುಗಮಾತ್ ಇತಿ ಚ ವಿಷ್ಣೋರೇವ ಪ್ರಾಣಶಬ್ದಾಭಿ-ಧೇಯತ್ವಮುಕ್ತಮ್' ಇತ್ಯಾದಿಯಾಗಿ ಈ ಸೂತ್ರಗಳನ್ನು ಹಾಗೆಯೇ ಅಲ್ಲಿ ವ್ಯಾಖ್ಯಾನಿಸಿದ್ದಾರೆಂದು ಕಾಣಿಸುತ್ತದೆ. ಆದ್ದರಿಂದ ಇಲ್ಲಿ ಮಾಡುತ್ತಿರುವ ವ್ಯಾಖ್ಯಾನಕ್ಕೂ ಭಾಷ್ಯದಲ್ಲಿ ತೋರುತ್ತಿರುವ ಅಭಿಪ್ರಾಯಕ್ಕೂ ವ್ಯತ್ಯಾಸವಿದೆಯಲ್ಲವೇ?

ಉತ್ತರ -- ಆದರೆ 'ಅಸ್ಮಿ' ಎಂಬುದನ್ನು ಉತ್ತಮಪುರುಷವೆಂದೇ ಪರಿಗಣಿಸಿ ಪ್ರಾಣನಿಗೆ ಇಂದ್ರಾದ್ಯಂತರ್ಯಾಮಿರೂಪದಿಂದ ಐಕ್ಯವನ್ನು ಹೇಳುವ ಮೂಲಕ ಅರ್ಥಾಂತರವನ್ನು ಒಪ್ಪಿ ಶ್ರುತಿ, ಸೂತ್ರ ಮತ್ತು ಭಾಷ್ಯಗಳಿಗೆ ಒಂದೇ ಅಭಿಪ್ರಾಯವೆಂದು ಟೀಕಾರಾಯರು ಹೊಂದಿಸಿದ್ದಾರೆ. ಆದ್ದರಿಂದಲೇ ಅಂತರಧಿ ಕರಣದಲ್ಲಿ 'ಸೋಽಹಮಸ್ಮಿ' ಎಂಬುದನ್ನು 'ಅಂತರ್ಯಾಮ್ಯಪೇಕ್ಷಯಾ' (ಅಂತರ್ಯಾಮಿ ಅಪೇಕ್ಷೆಯಿಂದ) ವಿವಕ್ಷಿಸಬೇಕೆಂದು ಭಾಷ್ಯಕಾರರೇ ಹೇಳಿದ್ದಾರೆ. ಸ್ಮೃತಿಯಲ್ಲಿ ಹೇಳಲ್ಪಟ್ಟ ಅರ್ಥವಾದರೋ ಆನಂದಮಯಾಧಿ ಕರಣದ ಭಾಷ್ಯದಂತೆ ಮತ್ತು ತತ್ತ್ವಪ್ರದೀಪದಂತೆ ಸುಲಭವಾಗಿ ತಿಳಿಯಬಹುದು. ಆದ್ದರಿಂದ ಆ ಅರ್ಥವನ್ನು ಇಲ್ಲಿ ಹೇಳದೆ ಮುಂದಿನ ವಾಖ್ಯಾನಕ್ಕೆ ಅನುಕೂಲವಾಗುವಂತೆ ಬೇರೆ ಅರ್ಥವನ್ನೇ ಹೇಳಿದ್ದಾರೆ.

वाक्यार्थमञ्जरी – ॐ न वक्तुरात्मोपदेशादिति चेदध्यात्मसम्बन्धभूमा ह्यस्मिन् ॐ ॥ बृहतीसहस्रं वक्तुर्विश्वामित्रस्य तं प्रतीति यावत् । प्राणो वा अहमस्मि ऋष इतीन्द्रेण स्वात्मन एव प्राणतया अभिधानान्न प्राणो ब्रह्मेति चेन्न, अस्मिन्निन्द्रे अधिकात्मनः परमात्मनः सम्बन्धभूमा सम्बन्धबाहुल्यं हि यस्मादस्ति अतस्तदपेक्षया 'प्राणो वा अहमस्मि ऋषे' इत्युक्तिर्न स्वात्मापेक्षयेत्यर्थः ॥ **तमिन्द्र इति** ॥ विश्वामित्रोक्तबृहतीसहस्रं श्रुत्वा तुष्ट इन्द्रो विश्वामित्रं प्रत्युवाच 'हे ऋषे' मे धाम गृहं प्रत्यागाः आगच्छ ते प्रियं वरं ददामि । त्वां त्वदन्तर्यामिणं मयि स्थितः प्राणः प्रकृष्टचेष्टकत्वात् प्राण' इति ॥ **अहेयत्वादहमिति** ॥ असनान्निरसनान्मनुतेर्ज्ञाना-

चास्मीति च नामवानित्यर्थः । बृहतीसहस्रं बृहतीछन्दोपेतम् ऋक्सहस्रं महाव्रताख्यो यज्ञः ॥ **नचेति** ॥ 'त्वामेव जानीयाम्' इति पूर्ववाक्यविरोधादिति भावः ॥ **प्राणस्त्वमिति** ॥ प्राणस्त्वयि सर्वभूतेष्वपि वर्तत इत्यर्थः । आत्मशब्दस्य देहपरत्वमुपेत्य व्याख्याय जीवपरत्वमुपेत्य प्रकारान्तरमाह – **अथवेति** ॥ **ज्ञानपूर्वेन्द्रेति** ॥ अन्यथा त्वामित्यनुवादानुपपत्तिरिति भावः । सामान्यज्ञानेऽपि विशेषजिज्ञासया प्रश्नः सम्भवतीत्यत आह – **सम्भवेति** ॥ **असङ्गतिरिति** ॥ तेन स्वस्वरूपादेरपृष्टत्वादिति भावः ॥

## ಬ್ರಹ್ಮಮೀಮಾಂಸಾಶಾಸ್ತ್ರ

**ॐ॥ शास्त्रदृष्ट्या तूपदेशो वामदेववत् ॥ ॐ ॥३०॥**

ಸೂತ್ರಾರ್ಥ - ಅಂತರ್ಯಾಮಿವಿವಕ್ಷೆಯಿಂದ ದೇವೇಂದ್ರನು ತಾನೇ ಪ್ರಾಣ ಎಂದು ಉಪದೇಶಿಸಿದ್ದಾನೆ. ವಾಮದೇವ ಋಷಿಯು ತನ್ನನ್ನೇ ಮನು, ಸೂರ್ಯ ಎಂದು ಉಪದೇಶಿಸಿಕೊಂಡಂತೆ.

## ಸೂತ್ರದೀಪಿಕಾ

'तु'शब्द एवार्थे । वामदेववत् यथा अन्तर्यामिविवक्षया वामदेवर्षिः 'अहं मनुरभवम्' इति स्वस्य मनुसूर्याद्यैक्यमाह तद्वत् । शास्त्रदृष्ट्या शास्ति सर्वम् इति शास्त्रमन्तर्यामी तद् दृष्ट्या, तद् विवक्षयैव उपदेशः 'प्राणोऽहम्' इति व्यपदेशः । नत्वैक्येनेत्यर्थः ॥

'ತು'ಶಬ್ದವು ಅವಧಾರಣಾರ್ಥದಲ್ಲಿದೆ. ವಾಮದೇವವತ್ = ಯಾವ ರೀತಿಯಾಗಿ ವಾಮದೇವ ಋಷಿಯು ಅಂತರ್ಯಾಮಿ ವಿವಕ್ಷೆಯಿಂದ 'ಅಹಂ ಮನುರಭವಮ್' ಎಂಬುದಾಗಿ ಮನು ಹಾಗೂ ಸೂರ್ಯಾದಿಗಳಿಂದ ತನಗೆ ಐಕ್ಯವನ್ನು ಹೇಳಿಕೊಂಡಿದ್ದಾನೋ ಅದರಂತೆ. ಶಾಸ್ತ್ರದೃಷ್ಟ್ಯಾ = ಎಲ್ಲವನ್ನೂ ಶಾಸನ ಮಾಡುವವನಾದ್ದರಿಂದ ಶಾಸ್ತ್ರ ಎನಿಸಿದ ಅಂತರ್ಯಾಮಿಯ ವಿವಕ್ಷೆಯಿಂದಲೇ ಉಪದೇಶಃ = 'ಪ್ರಾಣೋಽಹಮ್' ಎಂಬ ಪ್ರಯೋಗವು ಕೂಡುತ್ತದೆ; ಹೊರತು ಐಕ್ಯ ಇರುವುದರಿಂದಲ್ಲ.

## ब्रह्मसूत्रभाष्यम्

### ಅಂತರ್ಯಾಮಿಯ ವಿವಕ್ಷೆಯಿಂದ ಅಹಂಶಬ್ದಪ್ರಯೋಗ

**ॐ॥ शास्त्रदृष्ट्या तूपदेशो वामदेववत् ॥ ॐ ॥३०॥**

**(१) शास्त्रमन्तर्यामी ।**

**(२) 'संविच्छास्त्रं परं पदम्' इति हि भागवते ।**

**(३) 'तत्तन्नाम्नोच्यते विष्णुः सर्वशास्तृत्वहेतुतः ।**
**न क्वापि किञ्चिन्नामास्ति तमृते पुरुषोत्तमम् ॥' इति पाद्मे ॥**

भाष्यदीपिका – ननु यदि प्राणशब्देनेन्द्रेणापि विष्णुरेव स्वात्मादिसर्वगततयोच्यते तर्हि मयि प्राण इति निर्देशः स्यात् । न त्वहमिति । विष्णावहमित्यादिरूपोपदेशायोगा-दित्याशङ्कां परिहरत्सूत्रं पठति – शास्त्रेति ॥ तुरेवार्थोऽप्यर्थः, यत इत्यर्थे स्मृतिसूचकश्च । युज्यत इति शेषः । तथा च यतोऽपि प्राणस्य विष्णुत्वेऽप्युपदेशः प्राणो वाऽहम्' इत्येवंरूपो युज्यते, अतो न तदनुपपत्तिः । कथमयं युज्यते ? यतोऽयमुपदेशः 'शास्त्रदृष्ट्या' शास्ति सर्वमिति शास्त्रं अन्तर्यामी भगवान्, तद्दृष्ट्या तदपेक्षयैव प्रवृत्तो न त्वैक्येन । न चान्तर्यामिणि अहमादिप्रयोगादर्शनात् तदयोगः । यतो 'वामदेववत्' तत्कर्तृकप्रयोगवत् ।

यथा वामदेवो नाम ऋषिः अन्तर्यामिविवक्षया 'अहं मनुरभवम्' इति स्वस्मिन् अहंमन्वादिशब्दान् प्रयुयुजे । तथाऽयमप्युपदेशो युज्यत अत इति सूत्रयोजनामभिप्रयन् सौत्रशास्त्रपदं व्याचष्टे – शास्त्रमिति ॥ विष्णुरिति शेषः । तथा चान्तर्यामी विष्णुरिह शास्त्रपदेनोक्त इत्यर्थः । अन्तर्यामीति प्रकृताभिप्रायेण । यद्वा - शास्ति प्रेरयति सर्वानिति व्युत्पत्त्याऽन्तर्यामीत्येतदेव शास्त्रमित्यस्य व्याख्यानं भवतीति नापदार्थत्वशङ्कावकाशः । अत एव भागवते ध्येयेऽन्तर्यामिण्येव शास्त्रशब्दप्रयोगः । ऐतरेयभाष्ये 'शास्तुरन्तर्यामिणः' इति शास्तृशब्दं मूलीकृत्य व्याख्यानेऽपि, तदनुसारेण च तत्त्वप्रदीपे शास्तुरन्तर्यामिणो विष्णोरिति व्याख्यानेऽपि नास्य तद्विरोधः शङ्क्यः, यतस्तत्पर्यायशब्दव्याख्यानेनैव शास्त्रशब्दो व्याख्यातो भवतीत्याशयेन शास्त्रशब्दपर्यायशास्तृशब्दो व्याख्यायते ।

यद्वा – शास्त्रशब्दे शास्तृ अ इत्यवयवविभागमभिप्रेत्य शास्त्रित्यंशस्यान्तर्यामिण इत्यनेनाशब्दस्य विष्णोरित्यनेन च व्याख्यातत्वात्, अत्र त्ववयवविभागमविवक्षित्वा शास्त्रमित्यखण्डपदस्यान्तर्यामीति व्याख्यानात् तदनुकूलतया 'संविच्छास्त्रम्' इति वचनो-पन्यासाच्च न विरोधः ।

अन्तर्यामिणो विष्णोः शास्त्रपदवाच्यत्वे प्रमाणमाह – संविदिति ॥ प्रथमस्कन्धे व्यासं प्रति नारदवाक्यमिदम् ।

'स्वप्नो मायाऽग्रहः शय्या जाग्रदाभास आत्मनः ।
नामरूपक्रियावृत्तिः संविच्छास्त्रं परं पदम् ॥' इति ।

ನಾನು ವಿಶೇಷವಾಗಿ ತಿಳಿಯಬೇಕು. ವಿಶ್ವಾಮಿತ್ರ ಋಷಿಯ ಈ ಎರಡು ವಿಧದ ಅಭಿಪ್ರಾಯವನ್ನು ತಿಳಿದು ಸಕಲಸಂಶಯ ಪರಿಹಾರಕನಾದ ಭಗವಂತನು ಎರಡು ವಿಧ ಅಭಿಪ್ರಾಯಕ್ಕೂ ಸರಿಯಾದ ಪರಿಹಾರವನ್ನು ನೀಡಿದ್ದಾನೆ.

ಪ್ರಾಣೋ ವಾಽಹಮಿತ್ಯಾದಿ ನಾಮಸಂದರ್ಭಮುಕ್ತವಾನ್ ।
ವಿಶೇಷಜ್ಞಾನಸಿದ್ಧ್ಯರ್ಥಂ ನಾಮ್ನಾ ಮುಕ್ತಿಃ ಪರಾತ್ಮನಃ ॥

ವಿಶೇಷವಾದ ತತ್ತ್ವಜ್ಞಾನದ ಸಿದ್ಧಿಗಾಗಿ 'ಪ್ರಾಣೋ ವಾಽಹಮಸ್ಮಿ' ಮುಂತಾದ ನಾಮಗಳನ್ನು ಬಣ್ಣಿಸಿದ್ದಾನೆ. ವಿಷ್ಣುಸಹಸ್ರನಾಮ ಮುಂತಾದ ಬೇರೆಡೆಗಳಲ್ಲಿಯೂ ಇದಕ್ಕೋಸ್ಕರವೇ ಅನೇಕ ನಾಮಗಳನ್ನು ಹೇಳಿದ್ದು ಕಂಡಿದೆ.

ಇಂದ್ರಾವಿಷ್ಟಃ ಕೋಽಯಮಿತಿ ಶಂಕಾನುತ್ತ್ಯರ್ಥಮೇವ ಚ ।
ತಪನ್ನೇವಾಸ್ಮೀತ್ಯವದತ್ ತಪಂತಂ ವೇದ ಸೋಽಪಿ ಹಿ ॥
(ನಾರಾಯಣಂ ಸೂರ್ಯಗತಂ ಗಾಯತ್ರ್ಯೋಪಾಸಕೋ ಹಿ ಸಃ)

ಇಂದ್ರನಲ್ಲಿ ಆವೇಶವನ್ನು ಹೊಂದಿದವನು ಯಾರು? ಎಂಬ ಶಂಕೆಯ ಪರಿಹಾರಕ್ಕಾಗಿ 'ತಪನ್ನೇವಾಸ್ಮಿ' ತಾಪವನ್ನುಂಟು ಮಾಡುವ ನಾನೇ ಇಂದ್ರನಲ್ಲಿ ಆವಿಷ್ಟನಾಗಿದ್ದೇನೆಂದು ಹೇಳಿಕೊಂಡಿದ್ದಾನೆ. ಸೂರ್ಯಮಂಡಲದಲ್ಲಿದ್ದು ನಾರಾಯಣ ರೂಪದಿಂದ ಲೋಕಕ್ಕೆ ಶಾಖನೀಡುವವನೆಂಬುದು ವಿಶ್ವಾಮಿತ್ರ ಋಷಿಗೆ ತಿಳಿದೇ ಇದೆ. ಏಕೆಂದರೆ ಗಾಯತ್ರೀಮಂತ್ರದ್ರಷ್ಟಾರನಾಗಿ ಸೂರ್ಯಮಂಡಲದಲ್ಲಿ ಅಂತರ್ಗತನಾದ ನಾರಾಯಣನನ್ನು ವಿಶ್ವಾಮಿತ್ರ ಋಷಿಯ ಉಪಾಸನೆ ಪ್ರಸಿದ್ಧವೇ ಆಗಿದೆ.

**भावदीपः** – नच 'प्राणो वा अहमस्म्यृषे' इत्यादावस्म्यादिशब्दः अस्मच्छब्दार्थः इत्यादिवाक्येषु चार्थपर्यालोचनया 'प्राणोऽहमस्म्यादिशब्दानां विष्णुनामत्वमुपेत्य कीदृश इति प्रश्नस्यायं परिहारः । 'कोऽयम्' इति प्रश्नस्य 'तपन्नेवास्मि' इत्ययं परिहार इत्युक्तं भाति; नतु 'अस्मि' इत्यस्य तिङन्तत्वमुपेत्य ।

न वा 'कोऽसौ' इत्यस्य 'प्राणो वा अहमस्मि' इत्येतत्समाधानमुपेत्य व्याख्यातम् । तथा 'प्राणस्तथानुगमात्' इति च विष्णोरेव प्राणशब्दाभिधेयत्वमुक्तम् इत्यादिना एतत्सूत्राण्यपि तथैव तत्र व्याख्यातानि इति च भाति । तथापि 'अस्मि' इत्यस्योत्तमपुरुषत्वाऽविघातेन प्राणस्येन्द्राद्यन्तर्याम्यैक्यरूपार्थान्तरपरतया श्रुतिसूत्र-भाष्याण्यत्र योजितानि । अत एव 'अन्तर'नये 'सोऽहमस्मीत्यादि त्वन्तर्याम्य-पेक्षया' इत्यादि भाष्यम् । स्मृत्युक्तार्थस्तु आनन्दमयनयभाष्योक्तरीत्या, तत्वप्रदीपो-क्तरीत्या च सुज्ञान इति तमनुक्त्वा उत्तरोपयोगित्वेनान्यार्थ उक्त इति ॥२९॥

## (४) 'अहं मनुरभवं सूर्यश्च' (ऋ.४-२३-१) इत्यादिवत् ॥३०॥

ಸೂತ್ರದಲ್ಲಿರುವ ಶಾಸ್ತ್ರ ಶಬ್ದಕ್ಕೆ ಅಂತರ್ಯಾಮಿ ಎಂದರ್ಥ. 'ಸಂವಿಚ್ಛಾಸ್ತ್ರಂ ಪರಂ ಪದಮ್' ಎಂಬ ಭಾಗವತದಲ್ಲಿ ಅಂತರ್ಯಾಮಿ ಎಂಬರ್ಥದಲ್ಲಿ ಶಾಸ್ತ್ರಶಬ್ದವು ಪ್ರಯುಕ್ತವಾಗಿದೆ.

ಪದ್ಮಪುರಾಣದಲ್ಲಿಯೂ ಸಹ 'ಸಕಲ ಪದಾರ್ಥಗಳಿಗೆ ಪರಮಾತ್ಮನು ನಿಯಾಮಕನಾದ್ದರಿಂದ ಆಯಾ ಪದಾರ್ಥವಾಚಕವಾದ ಪದಗಳಿಂದ ಅವನೇ ಪ್ರತಿಪಾದ್ಯನು. ಅವನನ್ನು ಪ್ರತಿಪಾದನೆ ಮಾಡದ ಯಾವ ನಾಮಗಳೂ ಇರುವುದಿಲ್ಲ.

---

अस्यार्थः आत्मनो जीवस्य मायावासनाख्यसंस्कारोपादानकवस्तुज्ञानरूपः स्वप्नः । अग्रहः जाग्रत्स्वप्नविषयज्ञानरहिता शय्या सुषुप्तिः नामरूपक्रियासु शब्दार्थकर्मसु वृत्तिर्व्यावृत्तिर्यस्याः सा । आभासः प्रत्ययः सञ्ज्ञादिविषयज्ञानरूपो जाग्रच्च । आहत्यैतदवस्थात्रयं यस्मादात्मनः परब्रह्मणो भवति, तत्संवित् सर्वविषयकयथार्थज्ञानरूपं सर्वज्ञं वा । शास्त्रं सर्वनियन्तृ, परम् उत्तमं पदं सद्भिः प्राप्यं ब्रह्म अहम् अचिन्तयमिति । भागवत इत्यनन्तरं 'प्रयोगात्' इति शेषः । अस्यान्तर्यामीत्यनेनान्वयः ।

(३) नन्वन्तर्यामिणि अहमादिप्रयोगः कथं सम्भवतीत्याशङ्कायां तत्र तुशब्दसूचितां स्मृतिमेवाऽह – तत्तदिति । विष्णुः 'तत्तन्नाम्ना' अन्यपरत्वेन प्रसिद्धाहमादिनाम्नोच्यत इति । अनेन तस्यान्तर्यामिणि विष्णौ विद्वद्रूढिर्दर्शिता । 'सर्वशास्तृत्वहेतुतः' सर्वनियन्तृत्वनिमित्तेनेति । अनेन महायोगो दर्शितः । तत्र तस्य स्वातन्त्र्यनिमित्तोक्तेः । अनेन परमत इवास्मन्मतेऽपि लाक्षणिकत्वं परिहृतम् 'पुरुषोत्तमम्' अन्तर्यामिणं विष्णुं 'ऋते' विना, अन्यत्र 'क्वापि' जीवादौ 'किञ्चित्' अहमादिरूपं 'नाम' वाचकतया नास्तीति । अनेन हरौ परममुख्यताऽन्यत्र केवलमुख्यता चोक्ता । अन्यथा न क्वापीति सामान्यनिषेधायोगात् । अत्राहमादिशब्दाः प्रत्यगादिवाचित्वेन प्रसिद्धाः, प्रत्यगादयश्च सर्वदा पिण्डीभूताः, तानविवेकेनाज्ञाः केवलजीवादौ प्रयुञ्जते दहति शब्दमिव काष्ठे । प्राज्ञास्तु मुख्यामुख्यविवेकवन्तो ह्यमुख्यमर्थमनादृत्य मुख्यार्थे हरौ प्रयुञ्जत इति तत्त्वनिर्णयटीकोक्तमनुसन्धेयम् । 'पाद्मे' इत्यनन्तरम् 'अन्तर्यामिण्यहमादिपदानां मुख्यत्वोक्तेः शास्त्रदृष्ट्या अहमाद्युपदेशो युक्त एव' इति वाक्यशेषः ।

(४) नन्वन्तर्यामिणि अहमादिप्रयोगादर्शनात् तदयोग इत्याशङ्कां सूत्रोक्तदृष्टान्तविवरणेन परिहरति – अहमिति ॥ 'अहं' वामदेवसञ्ज्ञकऋष्यन्तर्यामी तत्तदन्तर्यामितया मनुः सूर्यश्चाभवमिति ऋङ्मन्त्रार्थः । आदिपदेन 'अहं कक्षीवान् ऋषिरस्मि विप्रोऽहं कुत्सम्' (ऋ.४-२६-१.) इत्यादिकं गृह्यते । 'इत्यादिवत्' एवमादिप्रयोगवदित्यस्य 'शास्त्रदृष्ट्योपदेशः' इत्यनेनान्वयः ।

'ಅಹಂ ಮನುಃ' ಎಂದು ವಾಮದೇವ ಋಷಿಯು ಹೇಳಿಕೊಂಡಂತೆ ದೇವೇಂದ್ರನು 'ಪ್ರಾಣೋಽಹಂ' ಎಂದು ಹೇಳಿಕೊಂಡಿದ್ದಾನೆ.

ಪ್ರತಿಪದಾರ್ಥ - ಹಾಗಾದರೆ ದೇವೇಂದ್ರನು ಮಯಿ ಪ್ರಾಣಃ ಎಂದು ನಿರ್ದೇಶಿಸ-ಬೇಕಿತ್ತಲ್ಲವೇ. ಅಹಂ ಎಂಬ ಪ್ರಯೋಗವನ್ನು ಹೇಗೆ ಮಾಡಿದನು? ಎಂಬ ಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಪಠಿಸುತ್ತಿದ್ದಾರೆ. 'ಶಾಸ್ತ್ರಂ = ಸೂತ್ರದಲ್ಲಿರುವ, ಶಾಸ್ತ್ರಶಬ್ದವು ಅಂತರ್ಯಾಮಿ = ಅಂತರ್ಯಾಮಿ ಎಂಬರ್ಥವನ್ನು ಹೇಳುತ್ತಿದೆ. ಭಾಗವತೇ = ಭಾಗವತದಲ್ಲಿ, ಸಂವಿತ್ = ಜ್ಞಾನರೂಪನಾದ, ಪರಂ ಪದಮ್ = ಅತ್ಯುತ್ತಮವಾದ ಬ್ರಹ್ಮನೇ, ಶಾಸ್ತ್ರಂ = ಅಂತರ್ಯಾಮಿಯು, ಇತಿ ಹಿ = ಹೀಗೆ ಹೇಳಲ್ಪಟ್ಟದೆಯಷ್ಟೆ.
ಪಾದ್ಮೇ ಚ = ಪದ್ಮಪುರಾಣದಲ್ಲಿಯೂ ಸಹ, ವಿಷ್ಣುಃ = ವಿಷ್ಣುವೇ, ಸರ್ವಶಾಸ್ತೃತ್ವ ಹೇತುತಃ = ಎಲ್ಲವನ್ನೂ ಶಾಸನ ಮಾಡುತ್ತಾನಾದ್ದರಿಂದ, ತತ್ತತ್ = ಆಯಾ ಪದಾರ್ಥಗಳ, ನಾಮ್ನಾ = ಹೆಸರುಗಳಿಂದ, ಉಚ್ಯತೇ = ಪ್ರತಿಪಾದ್ಯನಾಗಿದ್ದಾನೆ. ತಂ = ಅಂತಹ, ಪುರುಷೋತ್ತಮಮ್ = ಎಲ್ಲರಿಗಿಂತ ಶ್ರೇಷ್ಠನಾದ ಪರಮಾತ್ಮನನ್ನು, ಋತೇ = ಬಿಟ್ಟು, ಕಿಂಚಿತ್ = ಯಾವುದೇ, ನಾಮಾ = ಹೆಸರು, ಕ್ವಾಪಿ = ಬೇರೆಲ್ಲಿಯೂ, ನ = ಮುಖ್ಯವಾಗಿ ಇರುವುದಿಲ್ಲವಷ್ಟೇ, ಇತಿ = ಹೀಗೆ ಹೇಳಲ್ಪಟ್ಟದೆ.
ಮತ್ತು, ಅಹಂ = ನಾನು, ಮನುರಭವಮ್ = ಮನುವಾಗಿದ್ದೇನೆ, ಸೂರ್ಯಶ್ಚ = ಸೂರ್ಯನೂ ಸಹ ಆಗಿದ್ದೇನೆ, ಇತ್ಯಾದಿವತ್ = ಇವೇ ಮೊದಲಾದ ವಾಮದೇವ ಋಷಿಯ ಮಾತಿನಂತೆ ಅಂತರ್ಯಾಮಿ ದೃಷ್ಟಿಯಿಂದ ನಾನು ಎಂಬ ಪ್ರಯೋಗವು ಯುಕ್ತವಾಗಿದೆ.

तत्त्व-- नन्वत्र यदि प्राणपदेनेन्द्रेणापि विष्णुरेव स्वात्मादिसर्वगततयोच्यते तर्हि 'मयि प्राणः' इत्यादिप्रयोगः स्यात् । विष्णावहमित्यादिरूपोपदेशायोगात् इत्याशङ्कां परिहरत्सूत्रं पठित्वा शास्त्रपदं सप्रमाणकं व्याचष्टे – शास्त्रेति ॥ एतत् प्राणस्य विष्णुत्वेऽपि 'प्राणोऽहम्' इत्युपदेशो युज्यते । यतोऽयमुपदेशोऽन्तर्यामि-रूपभगवदपेक्षयेति सूत्रार्थे स्थितेऽन्तर्यामिण्यप्यहमादिप्रयोगः कथं सम्भवति? इत्याशङ्कायां स्मृतिमेवाह – तत्तदिति ॥ अन्तर्यामिण्यप्यहमादिशब्दप्रयोगादर्शनात् तदयोग इत्यतः सूत्रोक्तं दृष्टान्तं विवृणोति – अहमिति ॥ यथा अन्तर्यामिविवक्षया वामदेवोऽहंमन्वादिशब्दान्प्रयुयुजे तथाऽयमुपदेशो युक्त इति भावः । न च तत्रापि विवादः । वामदेवस्य मन्वादित्वाभावात् । चैतन्यैक्यविवक्षयोक्तिरिति चेन्न । किमत्र साक्षादैक्यमुच्यते लक्षणया वा(*) । नाद्यः । विरोधात् । न द्वितीयः । लक्षणाया अमुख्यत्वात् । सममेतदिति चेन्न । 'तत्तन्नाम्नोच्यते' इति सर्वशब्दानामन्तर्यामिण्येव मुख्यत्वोक्तेः ॥३०॥

ಮತ್ತು 'ಅಹೇಯತ್ವಾದಹಂನಾಮಾಸ್ಮಿ ಅಸನಾನ್ ಮನುತೇರಪಿ' (ಅಹೇಯನಾಗಿದ್ದರಿಂದ ಅಹಂ ಎನಿಸಿದ್ದಾನೆ, ಶತ್ರುಗಳನ್ನು ನಿರಾಸ ಮಾಡುವುದರಿಂದ ಮತ್ತು ಜ್ಞಾನರೂಪನಾದ್ದರಿಂದ ಅಸ್ಮಿ ಎನಿಸಿದ್ದಾನೆ).

ಈ ಸ್ಮೃತಿಯ ಪ್ರಕಾರ 'ಪ್ರಾಣೋ ವಾ ಅಹಮಸ್ಮ್ಯೃಷೇ' ಇತ್ಯಾದಿ ಸ್ಥಳದಲ್ಲಿರುವ ಅಸ್ಮಿ ಮೊದಲಾದ ಶಬ್ದಗಳನ್ನು ಕ್ರಿಯಾಪದವೆಂದು ಪರಿಗಣಿಸಿಯೇ ಇಲ್ಲ. ಹೊರತಾಗಿ ಅದು ಭಗವಂತನ ನಾಮವೆಂದು ಪರಿಗಣಿಸಿದ್ದಾರೆ.

ಆದ್ದರಿಂದ ಕೀದೃಶಃ ಎಂಬ ಪ್ರಶ್ನೆಗೆ ಉತ್ತರಿಸಿದಂತಾಯಿತು. ಇನ್ನು "ಕೋಽಯಂ" ಎಂಬ ಪ್ರಶ್ನೆಗೆ 'ತಪನ್ನೇವಾಸ್ಮಿ' ಎಂಬುದರಿಂದ ಉತ್ತರಿಸಿದಂತಾಯಿತೆಂದು ತೋರುತ್ತದೆ. ಹೊರತು ಅಸ್ಮಿ ಎಂಬುದು ಕ್ರಿಯಾಪದವೆಂದು ಅಂಗೀಕರಿಸಿ ಉತ್ತರಿಸಿರುವುದಿಲ್ಲ.

ಅಥವಾ 'ಕೋಽಸೌ' ಎಂಬ ಪ್ರಶ್ನೆಗೆ 'ಪ್ರಾಣೋ ವಾ ಅಹಮಸ್ಮಿ' ಎಂಬುದನ್ನು ಸಮಾಧಾನವನ್ನು ಒಪ್ಪಿ ವ್ಯಾಖ್ಯಾನಿಸಿಲ್ಲ. ಆದರಂತೆ 'ಪ್ರಾಣಸ್ತಥಾನುಗಮಾತ್ ಇತಿ ಚ ವಿಷ್ಣೋರೇವ ಪ್ರಾಣಶಬ್ದಾಭಿ-ಧೇಯತ್ವಮುಕ್ತಮ್' ಇತ್ಯಾದಿಯಾಗಿ ಈ ಸೂತ್ರಗಳನ್ನು ಹಾಗೆಯೇ ಅಲ್ಲಿ ವ್ಯಾಖ್ಯಾನಿಸಿದ್ದಾರೆಂದು ಕಾಣಿಸುತ್ತದೆ. ಆದ್ದರಿಂದ ಇಲ್ಲಿ ಮಾಡುತ್ತಿರುವ ವ್ಯಾಖ್ಯಾನಕ್ಕೂ ಭಾಷ್ಯದಲ್ಲಿ ತೋರುತ್ತಿರುವ ಅಭಿಪ್ರಾಯಕ್ಕೂ ವ್ಯತ್ಯಾಸವಿದೆಯಲ್ಲವೇ?

ಉತ್ತರ -- ಆದರೆ 'ಅಸ್ಮಿ' ಎಂಬುದನ್ನು ಉತ್ತಮಪುರುಷವೆಂದೇ ಪರಿಗಣಿಸಿ ಪ್ರಾಣನಿಗೆ ಇಂದ್ರಾದ್ಯಂತರ್ಯಾಮಿರೂಪದಿಂದ ಐಕ್ಯವನ್ನು ಹೇಳುವ ಮೂಲಕ ಅರ್ಥಾಂತರವನ್ನು ಒಪ್ಪಿ ಶ್ರುತಿ, ಸೂತ್ರ ಮತ್ತು ಭಾಷ್ಯಗಳಿಗೆ ಒಂದೇ ಅಭಿಪ್ರಾಯವೆಂದು ಟೀಕಾರಾಯರು ಹೊಂದಿಸಿದ್ದಾರೆ. ಆದ್ದರಿಂದಲೇ ಅಂತರಧಿ ಕರಣದಲ್ಲಿ 'ಸೋಽಹಮಸ್ಮಿ' ಎಂಬುದನ್ನು 'ಅಂತರ್ಯಾಮ್ಯಪೇಕ್ಷಯಾ' (ಅಂತರ್ಯಾಮಿ ಅಪೇಕ್ಷೆಯಿಂದ) ವಿವಕ್ಷಿಸಬೇಕೆಂದು ಭಾಷ್ಯಕಾರರೇ ಹೇಳಿದ್ದಾರೆ. ಸ್ಮೃತಿಯಲ್ಲಿ ಹೇಳಲ್ಪಟ್ಟ ಅರ್ಥವಾದರೋ ಆನಂದಮಯಾಧಿ ಕರಣದ ಭಾಷ್ಯದಂತೆ ಮತ್ತು ತತ್ತ್ವಪ್ರದೀಪದಂತೆ ಸುಲಭವಾಗಿ ತಿಳಿಯಬಹುದು. ಆದ್ದರಿಂದ ಆ ಅರ್ಥವನ್ನು ಇಲ್ಲಿ ಹೇಳದೆ ಮುಂದಿನ ವಾಖ್ಯಾನಕ್ಕೆ ಅನುಕೂಲವಾಗುವಂತೆ ಬೇರೆ ಅರ್ಥವನ್ನೇ ಹೇಳಿದ್ದಾರೆ.

वाक्यार्थमञ्जरी – ॐ न वक्तुरात्मोपदेशादिति चेदध्यात्मसम्बन्धभूमा ह्यस्मिन् ॐ ॥ बृहतीसहस्रं वक्तुर्विश्वामित्रस्य तं प्रतीति यावत् । प्राणो वा अहमस्मि ऋष इतीन्द्रेण स्वात्मन एव प्राणतया अभिधानान्न प्राणो ब्रह्मेति चेन्न, अस्मिन्निन्द्रे अधिकात्मनः परमात्मनः सम्बन्धभूमा सम्बन्धबाहुल्यं हि यस्मादस्ति अतस्तदपेक्षया 'प्राणो वा अहमस्मि ऋषे' इत्युक्तिर्न स्वात्मापेक्षयेत्यर्थः ॥ तमिन्द्र इति ॥ विश्वामित्रोक्तबृहतीसहस्रं श्रुत्वा तुष्ट इन्द्रो विश्वामित्रं प्रत्युवाच 'हे ऋषे' मे धाम गृहं प्रत्यागाः आगच्छ ते प्रियं वरं ददामि । त्वां त्वदन्तर्यामिणं मयि स्थितः प्राणः प्रकृष्टचेष्टकत्वात् प्राण' इति ॥ अहेयत्वादहमिति ॥ असनान्निरसनान्मनुतेर्ज्ञाना-

ಒಂದು ವೇಳೆ ದೇವೇಂದ್ರನು ಪ್ರಾಣಪದದಿಂದ ತನ್ನಲ್ಲಿ ಮತ್ತು ಸಕಲಭೂತಗಳಲ್ಲಿರುವ ವಿಷ್ಣುವನ್ನು ವಿವಕ್ಷಿಸುವುದಾದರೆ ಆವಾಗ 'ಮಯಿ ಪ್ರಾಣಃ' ಎಂದು ಉಪದೇಶಿಸಬೇಕಿತ್ತಲ್ಲವೇ? ವಿಷ್ಣುವಿನಲ್ಲಿ ಅಹಂ ಎಂಬ ಉಪದೇಶವು ತಪ್ಪಾಗುತ್ತದೆಂಬ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನೇ ಪಠಿಸಿ ಶಾಸ್ತ್ರಪದವು ಪ್ರಮಾಣಬದ್ಧವಾಗಿ ''ಶಾಸ್ತ್ರದೃಷ್ಟ್ಯಾ'' ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ. 'ಪ್ರಾಣೋ ವಾ ಅಹಮ್' ಎಂಬ ಶ್ರುತಿಯಲ್ಲಿ ವಿಷ್ಣುವೇ ಪ್ರತಿಪಾದ್ಯನೆಂದು ಒಪ್ಪಬಹುದು. ಆವಾಗಲೂ ಸಹ 'ಅಹಂ ಪ್ರಾಣಃ' ಎಂಬ ಉಪದೇಶವು ಯುಕ್ತವಾಗುತ್ತದೆ. ಏಕೆಂದರೆ ಅಂತರ್ಯಾಮಿಯಾದ ಭಗವದ್ರೂಪ-ವನ್ನು ಉದ್ದೇಶಿಸಿ ಈ ರೂಪವು ಹೊರಟಿದೆ. ಹೀಗೆ ಸೂತ್ರಾರ್ಥವು ಸಿದ್ಧವಾಯಿತು.

ಹಾಗಾದರೆ ಅಂತರ್ಯಾಮಿ ವಿಷಯದಲ್ಲಿ 'ಅಹಂ' ಮೊದಲಾದ ಪ್ರಯೋಗಗಳು ಹೇಗೆ ಕೂಡುತ್ತವೆ? ಎಂಬ ಆಶಂಕೆಯನ್ನು ಪರಿಹರಿಸಲು ಸ್ಮೃತಿಯನ್ನೇ ''ತತ್ತದ್'' ಇತ್ಯಾದಿಯಾಗಿ ಉದಾ-ಹರಿಸುತ್ತಿದ್ದಾರೆ. ಅಂತರ್ಯಾಮಿವಿಷಯದಲ್ಲಿ ಅಹಂ ಮೊದಲಾದ ಶಬ್ದಪ್ರಯೋಗಗಳು ಎಲ್ಲಿಯೂ ಕಂಡಿಲ್ಲವಾದ್ದರಿಂದ ಇಲ್ಲಿ ಹೇಗೆ ಪ್ರಯೋಗಿಸುತ್ತೀರಿ? ಎಂಬ ಪ್ರಶ್ನೆಗೆ ಸೂತ್ರದಲ್ಲಿ ಹೇಳಿರುವ ಉದಾಹರಣೆಯನ್ನು ''ಅಹಂ ಎಂಬುದರಿಂದ ವಿವರಿಸುತ್ತಿದ್ದಾರೆ.

ಯಾವರೀತಿಯಾಗಿ ವಾಮದೇವ ಋಷಿಯು ಅಂತರ್ಯಾಮಿಯನ್ನು ವಿವಕ್ಷಿಸಿ 'ಅಹಂ ಮನುಃ' ಇತ್ಯಾದಿ ಶಬ್ದಪ್ರಯೋಗಗಳನ್ನು ಮಾಡಿದ್ದಾರೋ ಅದೇ ರೀತಿಯಾಗಿ 'ಅಹಂ ಪ್ರಾಣಃ' ಎಂಬ ಉಪದೇಶವು ಯುಕ್ತವಾಗುತ್ತದೆಂದು ಅಭಿಪ್ರಾಯ. 'ಅಹಂ ಮನುಃ' ಎಂಬ ದೃಷ್ಟಾಂತವಾಕ್ಯದಲ್ಲಿಯೂ ವಿವಾದವಿದೆ ಎನ್ನಬಾರದು. ಏಕೆಂದರೆ ವಾಮದೇವನು ಮನುವಾಗಲು ಸಾಧ್ಯವೇ ಇಲ್ಲ. ಅಂದರೆ ವಿಶಿಷ್ಟಚೇತನರಿಗೆ ಐಕ್ಯವನ್ನು ಹೇಳಲಾಗದು. ಶುದ್ಧಚೇತನರಿಗೆ ಐಕ್ಯವಿರುವುದರಿಂದ 'ಅಹಂ ಮನುಃ' ಎಂಬ ಪ್ರಯೋಗವು ಯುಕ್ತವಾಗುತ್ತದೆಂದು ಶಂಕಿಸಬಾರದು. ಏಕೆಂದರೆ ಶುದ್ಧಚೇತನರಿಗೆ ಸಾಕ್ಷಾದ್ ವೃತ್ತಿಯಿಂದ ಐಕ್ಯವನ್ನು ಹೇಳುತ್ತೀರೋ? ಅಥವಾ ಲಕ್ಷಣಾವೃತ್ತಿಯಿಂದ ಐಕ್ಯವನ್ನು ಹೇಳುತ್ತೀರೋ? ಪ್ರಥಮಪಕ್ಷವು ಸರಿಯಿಲ್ಲ. ಹಾಗೆ ಹೇಳಿದರೆ ಅದ್ವೈತಸಿದ್ಧಾಂತಕ್ಕೆ ವಿರೋಧ ಬರುತ್ತದೆ. ಎರಡನೇ ಪಕ್ಷವನ್ನು ಒಪ್ಪಿದರೆ ಲಕ್ಷಣಾವೃತ್ತಿಯು ಅಮುಖ್ಯವಾಗುತ್ತದೆ.

ಅಂತರ್ಯಾಮಿ ಎಂಬರ್ಥವನ್ನು ಹೇಳುವ ಸಿದ್ಧಾಂತಿಗಳೂ ಈ ದೋಷ ಬರುತ್ತದಲ್ಲವೇ ಎಂದು ಪ್ರಶ್ನಿಸಬಾರದು. 'ತತ್ತನ್ನಾಮ್ನೋಚ್ಯತೇ ವಿಷ್ಣುಃ' ಇತ್ಯಾದಿಪ್ರಮಾಣದಿಂದ ಸಕಲಶಬ್ದಗಳೂ ಅಂತ-ರ್ಯಾಮಿಯಲ್ಲಿಯೇ ಮುಖ್ಯವಾಗಿರುತ್ತದೆಂದು ಹೇಳಲ್ಪಟ್ಟಿದೆ.

**भावदीपः –ॐ॥ शास्त्रदृष्ट्या तूपदेशो वामदेववत् ॥ॐ इत्यादीति ॥** 'त्वयि प्राणः' इत्यादिः 'आदि'पदार्थः । **इत्याशङ्कां परिहरदिति ॥**

(*) अहंपदस्य तत्तद्देहविशिष्टचैतन्यवाचकत्वात् देहविशिष्टैक्यं साक्षादैक्यम् । जहदजहल्लक्षणया चैतन्यमात्रैक्यलक्षणयैक्यमिति भावेन पृच्छति – किमत्र साक्षादिति ॥

– (गुर्वर्थदीपिका)

**तदैक्यवाचितच्छब्दाः अपि तद्गत्ववाचकाः ।**

**ऐक्यार्था नैव ते सर्वे भिन्नरूपा यतः सदा ।**

**समसु प्रथमा यस्मात् .....**

इति बृहद्भाष्योक्तसमाधौ सत्यपि समाध्यन्तरोक्त्या परिहरदित्यर्थः ।

ಓಂ ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್ ಓಂ ॥ "ಇತ್ಯಾದಿ ಪ್ರಯೋಗಃ" ಎಂಬಲ್ಲಿರುವ ಆದಿ ಪದದಿಂದ 'ತ್ವಯಿ ಪ್ರಾಣಃ' ಮೊದಲಾದವುಗಳನ್ನು ವಿವಕ್ಷಿಸಬೇಕು. "ಇತ್ಯಾಶಂಕಾಂ ಪರಿಹರತ್" ಎಂಬ ಟೀಕೆಗೆ ಹೀಗೆ ಅರ್ಥ.

'ತದೈಕ್ಯವಾಚಿತಚ್ಛಬ್ದಾಃ ಅಪಿ ತದ್‌ಗತ್ವವಾಚಕಾಃ ।
ಐಕ್ಯಾರ್ಥಾ ನೈವ ತೇ ಸರ್ವೇ ಭಿನ್ನರೂಪಾ ಯತಃ ಸದಾ ।
ಈಶಾಂಗವಾಚಿನೋ ವಾ ಸ್ಯುಸ್ತೇಷಾಮೇವ ತದರ್ಥತಃ ।
ಸಪ್ತಸು ಪ್ರಥಮಾ ಯಸ್ಮಾತ್ ತತ್ತದ್ಯೋಗ್ಯಾರ್ಥತಾ ಭವೇತ್"

ದೇವತೆಗಳಿಂದ ಐಕ್ಯವನ್ನು ಹೇಳುವ ಶಬ್ದಗಳಿಗೆ ಅಂತರ್ಯಾಮಿ ಎಂಬರ್ಥವನ್ನು ಹೇಳಬೇಕು. ಬೇರೆ ಬೇರೆ ರೂಪಗಳಾದ್ದರಿಂದ ಐಕ್ಯವನ್ನು ಹೇಳಲು ಸಾಧ್ಯವಿಲ್ಲ. ಏಳು ವಿಭಕ್ತಿಗಳ ಅರ್ಥದಲ್ಲಿ ಪ್ರಥಮಾ ವಿಭಕ್ತಿಯನ್ನು ಪ್ರಯೋಗಿಸಬಹುದಾದ್ದರಿಂದ' ಎಂಬ ಬೃಹದ್ಭಾಷ್ಯದಲ್ಲಿ ಹೇಳಿದ ಸಮಾಧಾನವು ಇರುವಾಗಲೇ ಮತ್ತೊಂದು ಸಮಾಧಾನವನ್ನು ಹೇಳುತ್ತಾ ಪರಿಹರಿಸುತ್ತಿದ್ದಾರೆ -- ಎಂದು.

भावदीपः – भाष्ये अनुक्तेः 'अन्यगतलिङ्गादीनामपि तद्गत भगवदपेक्षया युक्तेः' इति न्यायविवरणोक्तं सूत्रांशार्थमाह – **यतोऽयमिति**(*) ॥ **स्मृतिमिति** ॥ **स्मृतौ** स्वातन्त्र्यनिमित्तेन तत्तदन्तर्यामी अहमादिपदैरुच्यत इत्युक्त्या, लक्षणाप्रसङ्गो नेत्युक्तम् । 'न कापि' इत्युक्त्या 'परममुख्यवृत्त्या' इत्यपि गम्यते । **'कल्पनोपदेशात्'** इति वक्ष्यमाणन्यायेनान्यत्र निगमनिघण्ड्वादिसिद्धमुख्यवृत्तेरभ्युपगमेन 'न कापि' इति सामान्यनिषेधायोगात् **'स्वातन्त्र्यं तत्र मुख्यं स्यात्'** इत्यनुव्याख्यानोक्त्या, **'शास्तृत्वतः'** इति स्वातन्त्र्यनिमित्तकत्वोक्तेश्च । कथमन्यत्र वृत्तिः? इत्यतः **'तमृते'** इति स्मृतिशेषः । तत्तच्छब्दपरममुख्यार्थे ईश्वरसम्बन्धात् अन्यत्र वृत्तिर्न तु स्वतः **'शरीररूपकविन्यस्तगृहीतेः'** इति वक्ष्यमाणन्यायात् ।

---

(*) शास्तुरन्तर्यामिणो विष्णोः सर्वशरीरे स्थितत्वात् सर्वनामाभिधेयत्वम् इत्यैतरेयभाष्यं मनसि निधाय, सूत्रार्थमाह भाष्ये । पदार्थमात्रस्योक्तत्वात् सूत्रवाक्यार्थमाह – यत इति ॥ सूत्रगत 'दृष्टि'पदार्थो भगवदपेक्षया इति । सुत्रगत 'तु'शब्द उपदेशस्त्विति वाऽन्वितः । शास्त्रदृष्ट्यैव इत्यवधारणार्थो बोद्धव्यः । – **भावबोधः** ।

ಭಾಷ್ಯದಲ್ಲಿ 'ಅನ್ಯಗತಲಿಂಗಾದೀನಾಮಪಿ ತದ್ಗತಭಗವದಪೇಕ್ಷಯಾ ಯುಕ್ತೇಃ' (ಬೇರೆಯವರಲ್ಲಿರುವ ಲಿಂಗಗಳೂ ಸಹ ಭಗವಂತನಲ್ಲಿ ಹೊಂದಬಹುದು) ಎಂಬ ನ್ಯಾಯವಿವರಣದ ಸೂತ್ರಾಂಶದ ವ್ಯಾಖ್ಯಾನವನ್ನು ''ಯತೋಽಯಮ್'' ಎಂಬುದರಿಂದ ಹೇಳುತ್ತಿದ್ದಾರೆ. ''ಸ್ಮೃತಿಂ'' ಎಂದರೆ ಸ್ಮೃತಿಯಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಅಹಮಾದಿಪದಗಳನ್ನು ಅಂತರ್ಯಾಮಿಯಲ್ಲಿ ಶಕ್ತಿವೃತ್ತಿಯಿಂದಲೇ ಹೇಳಬಹುದೆಂದು ಹೇಳಿದ್ದಾರೆ. ಆದ್ದರಿಂದ ಲಕ್ಷಣಾಪ್ರಸಂಗಕ್ಕೆ ಅವಕಾಶವಿಲ್ಲ. ''ನ ಕ್ವಾಪಿ'' ಎಂದು ಭಾಷ್ಯದಲ್ಲಿ ಹೇಳಿದ್ದರಿಂದ 'ಪರಮಮುಖ್ಯವೃತ್ತಿಯಿಂದಲೂ ಸಹ ಆಯಾ ಹೆಸರುಗಳು ಬೇರೆಯವರಲ್ಲಿ ಕೂಡುವುದಿಲ್ಲ' ಎಂಬರ್ಥ ಸಿಗುತ್ತದೆ.

ಇಲ್ಲಿ ತಿಳಿಯಬೇಕಾದ ಪ್ರಮೇಯವಿಚಾರ --

'ಕಲ್ಪನೋಪದೇಶಾತ್' ಎಂಬ ಸೂತ್ರವ್ಯಾಖ್ಯಾನದಲ್ಲಿ ಹೇಳುವಂತೆ ಪರಮಾತ್ಮನನ್ನು ಬಿಟ್ಟು ಬೇರೆಯವ-ರಲ್ಲಿ ನಿಗಮ ನಿಘಂಟು ಮೊದಲಾದವುಗಳಿಂದ ಸಿದ್ಧವಾದ ಮುಖ್ಯವೃತ್ತಿಯನ್ನು ಅಂಗೀಕರಿಸಲಾಗಿದೆ. ಹೀಗಿರುವಾಗ 'ನ ಕ್ವಾಪಿ' ಎಂದು ಸಾಮಾನ್ಯನಿಷೇಧವು ಕೂಡುವುದಿಲ್ಲ. ಅಷ್ಟೇ ಅಲ್ಲದೆ 'ಸ್ವಾತಂತ್ರ್ಯಂ ತತ್ರ ಮುಖ್ಯಂ ಸ್ಯಾತ್' ಎಂಬ ಅನುವ್ಯಾಖ್ಯಾನದ ಮಾತಿನಂತೆ ಶಾಸ್ತೃತ್ವವೆಂಬ ಸ್ವಾತಂತ್ರ್ಯನಿಮಿತ್ತವನ್ನು ಹೇಳಿರು-ವುದರಿಂದಲೂ ಸಾಮಾನ್ಯ ನಿಷೇಧವು ಕೂಡುವುದಿಲ್ಲ. ಪರಮಾತ್ಮನನ್ನು ಬಿಟ್ಟು ಬೇರೆಡೆಯೂ ಶಬ್ದವೃತ್ತಿ-ಯನ್ನು ಕೂಡಿಸಬೇಕಲ್ಲವೇ? ಎಂಬ ಪ್ರಶ್ನೆಗೆ 'ತಮೃತೇ ಪುರುಷೋತ್ತಮಮ್' ಎಂಬ ಶ್ರುತಿಶೇಷವನ್ನು ಹೇಳಿದ್ದಾರೆ. ಅಂದರೆ ಆಯಾ ಶಬ್ದಗಳ ಪರಮಮುಖ್ಯವೃತ್ತಿಯು ಭಗವಂತನಲ್ಲಿಯೇ ಇರುತ್ತದೆ. ಅವನ ಸಂಬಂಧವು ಇತರ ಪದಾರ್ಥಗಳಲ್ಲಿರುವುದರಿಂದ ಆಯಾ ಶಬ್ದಗಳ ಮುಖ್ಯವೃತ್ತಿಯನ್ನು ಇತರ ಪದಾರ್ಥಗಳಲ್ಲಿ ಹೇಳಬಹುದು. ಈ ವಿಚಾರವನ್ನು 'ಶರೀರರೂಪಕವಿನ್ಯಸ್ತಗೃಹೀತೇಃ' ಎಂಬ ಸೂತ್ರದಲ್ಲಿ ಹೇಳುವವರಿದ್ದಾರೆ.

**भावदीपः** – नच तावता अन्यत्रोपचारः शङ्क्यः । **'समाकर्षात्'** इत्यत्र परममुख्यमुख्यभेदेन वृत्तिद्वयस्य उपपादयिष्यमाणत्वात् इति भावः । स्वातन्त्र्यस्य शब्दप्रवृत्तिनिमित्तत्वं तु **'तदधीनत्वादर्थवत्'** इत्यत्र सेत्स्यति । स्मृतौ **'शास्तृत्वतः'** इति स्वातन्त्र्यरूपमहायोगोक्तिरुपलक्षणम् ।

ಬೇರೆಡೆ ಈಶ್ವರನ ಸಂಬಂಧದಿಂದ ಶಬ್ದಪ್ರತಿಪಾದ್ಯತ್ವವನ್ನು ಹೇಳಿದ ಮಾತ್ರದಿಂದ ಔಪಚಾರಿಕ-ಪ್ರಯೋಗವೆಂದು ಶಂಕಿಸಬಾರದು. ಏಕೆಂದರೆ, 'ಸಮಾಕರ್ಷಾತ್' ಎಂಬ ಸೂತ್ರದಲ್ಲಿ ಪರಮಮುಖ್ಯ ಹಾಗೂ ಮುಖ್ಯವೃತ್ತಿ ಎಂದು ವೃತ್ತಿಯಲ್ಲಿ ಎರಡು ಬಗೆಯನ್ನು ಸಮರ್ಥಿಸುತ್ತಾರೆ. ಪರಮಮುಖ್ಯವೃತ್ತಿ-ಯಿಂದ ಪರಮಾತ್ಮನನ್ನು ಪ್ರತಿಪಾದಿಸಿದರೂ ಅದೇ ಶಬ್ದವು ಮುಖ್ಯವೃತ್ತಿಯಿಂದ ಬೇರೆ ಪದಾರ್ಥವನ್ನೂ ಸಹ ಪ್ರತಿಪಾದಿಸಬಹುದು. ಸ್ವಾತಂತ್ರ್ಯವು ಶಬ್ದಪ್ರವೃತ್ತಿನಿಮಿತ್ತವಾಗಿದೆ ಎಂಬ ವಿಚಾರವನ್ನು 'ತದಧೀನತ್ವಾ-ದರ್ಥವತ್' ಎಂಬ ಸೂತ್ರದಲ್ಲಿ ಪ್ರತಿಪಾದಿಸುವವರಿದ್ದಾರೆ.

ಪದ್ಮಪುರಾಣದ ಸ್ಮೃತಿಯಲ್ಲಿ ಶಾಸ್ತೃತ್ವ ಎಂಬ ಪದದಿಂದ ಸ್ವಾತಂತ್ರ್ಯವೆಂಬ ಮಹಾಯೋಗವೃತ್ತಿಯನ್ನು ಹೇಳಿದ್ದಾರೆ. ಇದು ಕೇವಲ ಉಪಲಕ್ಷಣ: ಬೇರೆಡೆ ಹೇಳಿದ ಪ್ರವೃತ್ತಿನಿಮಿತ್ತಗಳೆಂಬ ಮಹಾಯೋಗಗಳನ್ನೂ ಸಹ ಇಲ್ಲಿ ತಿಳಿಯಬೇಕು.

**भावदीपः –**

**अहंनामा हरिर्नित्यम् अहेयत्वात् प्रकीर्तितः ।**
**त्वं चासौ प्रतियोगित्वात् परोक्षत्वात् स इत्यपि ।**
**सर्वान्तर्यामिणि हरौ .....**

इत्यादि तत्वनिर्णयोक्तश्रुत्या,

**अहेयत्वादहंनामास्म्यसनान् मनुतेरपि ।**
**ततो वेत्तेति च त्वं सः पूर्णत्वात् सर्वनामकः ॥**

इत्याद्यैतरेयभाष्योक्तब्रह्माण्डस्मृत्या अहेयत्वाऽऽभिमुख्यादिप्रवृत्तिनिमित्तकत्वेन, तथा **'अ इति ब्रह्म' 'तत्रागतमहम्'** इति, **'तस्योपनिषदहम्'** इति, **'ततोऽहं-नामाऽभवत्'** इत्यादिश्रुत्युक्तयोगेन च- इत्यपि ज्ञेयम् ।

अहमादिशब्दैः अन्तर्याम्युक्तिप्रकारस्तु अहमादिशब्दाः प्रत्यगादिवाचकत्वेन तावत् प्रसिद्धाः । प्रत्यगादयः सर्वदा पिण्डीभूता एव । तत्राहेयत्वादिनिमित्तम् अपराधीनमन्तर्यामिणि तत्प्रेरितानि जीवादौ । तदेवं मुख्यामुख्यत्वाभ्यां पिण्डविषयं शब्दमविवेकिनो बाह्येषु जीवादिष्वेव प्रयुञ्जते । यथा दहतिशब्दं काष्ठे । प्राज्ञास्तु अमुख्यमंशमनादृत्य मुख्यार्थे हरौ प्रयुञ्जते । परैरपि अहंशब्दस्येदमनिदंरूप-पिण्डार्थता अङ्गीकृता एवेति । तथा अस्मदादिरूपपदेषूपपदेषु विहितानाम् 'अस्मि' इत्यादितिङन्तपदानां तद्वृत्तौ वृत्तेः सुलभत्वात् इत्यादिना तत्वनिर्णयटीकोक्तरीत्या बोध्यः । **अहमादीति** ॥ अहमादिशब्दप्रयोगादर्शनात् इत्यर्थः ।

'ಅಹಂ ನಾಮಾ ಹರಿರ್ನಿತ್ಯಂ ಅಹೇಯತ್ವಾತ್ ಪ್ರಕೀರ್ತಿತಃ।
ತ್ವಂ ಚಾಸೌ ಪ್ರತಿಯೋಗಿತ್ವಾತ್ ಪರೋಕ್ಷತ್ವಾತ್ ಸ ಇತ್ಯಪಿ।
ಸರ್ವಾಂತರ್ಯಾಮಿಣಿ ಹರೌ .....'

ಅಹೇಯತ್ವವೆಂಬ ಪ್ರವೃತ್ತಿನಿಮಿತ್ತವಿರುವುದರಿಂದ ಶ್ರೀಹರಿಯು ಅಹಂ ಎನಿಸಿದ್ದಾನೆ. ಆಭಿಮುಖ್ಯವೆಂಬ ಪ್ರವೃತ್ತಿನಿಮಿತ್ತವಿರುವುದರಿಂದ ತ್ವಂ ಎನಿಸಿದ್ದಾನೆ. ಪರೋಕ್ಷತ್ವವೆಂಬ ಪ್ರವೃತ್ತಿನಿಮಿತ್ತವಿರುವುದರಿಂದ ಸಃ

ಎನಿಸಿದ್ದಾನೆ. ಹೀಗೆ ಸರ್ವಾಂತರ್ಯಾಮಿಯಾದ ಹರಿಯಲ್ಲಿ ..... ಎಲ್ಲ ಶಬ್ದಗಳೂ ಸಮನ್ವಯವಾಗುತ್ತವೆ.'' ಇತ್ಯಾದಿ ವಚನಗಳನ್ನು ತತ್ವನಿರ್ಣಯದಲ್ಲಿ ಉಲ್ಲೇಖಿಸಿದ ಶ್ರುತಿಗಳಿಂದ ತಿಳಿಯಬಹುದು. ಮತ್ತು

**ಅಹೇಯತ್ವಾದಹಂ ನಾಮಾಸ್ಮ್ಯಸನಾನ್ ಮನುತೇರಪಿ ।**
**ತತೋ ವೇತ್ತೇತಿ ಚ ತ್ವಂ ಸಃ ಪೂರ್ಣತ್ವಾತ್ ಸರ್ವನಾಮಕಃ ।'**

(ಅಹೇಯನಾದ್ದರಿಂದ ಅಹಂ ಎನಿಸಿದ್ದಾನೆ. ಶತ್ರುಗಳನ್ನು ನಿರಾಸ ಮಾಡುವುದರಿಂದ ಮತ್ತು ಜ್ಞಾನ-ರೂಪನಾದ್ದರಿಂದ ಅಸ್ಮಿ ಎನಿಸಿದ್ದಾನೆ. ಎಲ್ಲೆಡೆ ವ್ಯಾಪ್ತನಾಗಿದ್ದು ಎಲ್ಲವನ್ನೂ ತಿಳಿಯುತ್ತಾನಾದ್ದರಿಂದ ತ್ವಂ ಎನಿಸಿದ್ದಾನೆ. ಹೀಗೆ ಪೂರ್ಣನಾದ್ದರಿಂದ ಸರ್ವಶಬ್ದಗಳೂ ಅವನ ಹೆಸರೇ ಆಗಿವೆ).

ಎಂದು ಐತರೇಯಭಾಷ್ಯದಲ್ಲಿ ಉಲ್ಲೇಖಿಸಿದ ಬ್ರಹ್ಮಾಂಡಪುರಾಣದ ಮಾತಿನಿಂದ ಅಹೇಯತ್ವ ಆಭಿಮುಖ್ಯವೇ ಮೊದಲಾದವುಗಳು ಪ್ರವೃತ್ತಿನಿಮಿತ್ತಗಳೆಂದು ತಿಳಿಯುತ್ತವೆ. ಅದರಂತೆ 'ಅ ಇತಿ ಬ್ರಹ್ಮ' ಎಂದು ಶ್ರುತಿಯಲ್ಲೇ ಹೇಳಿದ ಯೋಗವೃತ್ತಿಯಿಂದ, 'ತತ್ರಾಗತಮಹಮಿತಿ ತಸ್ಯೋಪನಿಷದಹಮಿತಿ ತತೋಽಹಂನಾಮಾಽಭವತ್' ಎಂಬ ಶ್ರುತ್ಯುಕ್ತಯೋಗದಿಂದಲೂ ಭಗವಂತನಲ್ಲಿ ಮಹಾಯೋಗವೃತ್ತಿ-ಯನ್ನು ತಿಳಿಯಬೇಕು.

ಅಹಮಾದಿಶಬ್ದಗಳಿಂದ ಅಂತರ್ಯಾಮಿಯೇ ಪ್ರತಿಪಾದ್ಯನೆಂದು ಸಮರ್ಥಿಸುವ ಬಗೆ ಹೀಗಿದೆ – ಶರೀರದ ಒಳಗಿರುವ ವಸ್ತುವನ್ನಷ್ಟೇ ಅಹಂ ಮೊದಲಾದ ಪದಗಳು ಪ್ರತಿಪಾದಿಸುತ್ತವೆಂಬುದು ಪ್ರಸಿದ್ಧವಾಗಿದೆ. ಒಳಗಿರುವ ಪದಾರ್ಥವು (ಪ್ರತ್ಯಗರ್ಥವು) ಕ್ರೋಢೀಕೃತವಾಗಿರುತ್ತದೆ (ಪಿಂಡೀಭೂತವಾಗಿರುತ್ತದೆ). ಅಹೇಯತ್ವವೆಂಬ ಪ್ರವೃತ್ತಿನಿಮಿತ್ತವು ಸ್ವತಂತ್ರನಾದ ಅಂತರ್ಯಾಮಿಯಲ್ಲಿಯೂ ಅಸ್ವತಂತ್ರನಾದ ಜೀವನಲ್ಲಿಯೂ ಇರುತ್ತದೆಂದು ಹೇಳಬಹುದು. ಆದರೆ ಪರಮಾತ್ಮನಲ್ಲಿ ಅಹೇಯತ್ವವು ಮುಖ್ಯವಾಗಿದ್ದು ಜೀವನಲ್ಲಿ ಅಮುಖ್ಯವಾಗಿರುತ್ತದೆ. ಹೀಗೆ ಕ್ರೋಢೀಕೃತವಾದ ಪದಾರ್ಥವನ್ನು ಪ್ರತಿಪಾದಿಸುವ ಅಹಂಶಬ್ದದ ಮುಖ್ಯವೃತ್ತಿಯನ್ನಾಗಲೀ ಅಮುಖ್ಯವೃತ್ತಿಯನ್ನಾಗಲೀ ಖಚಿತಪಡಿಸಿಕೊಳ್ಳಲು ಸಾಮಾನ್ಯಜನರು ಅಸಮರ್ಥ-ರಾಗುತ್ತಾರೆ. ಅಷ್ಟೇ ಅಲ್ಲದೆ ಹೆಚ್ಚಾಗಿ ಬಾಹ್ಯನಾದ ಜೀವನಲ್ಲಿಯೇ ಅಹಂ ಶಬ್ದವನ್ನು ಪ್ರಯೋಗಿಸುತ್ತಾರೆ. ಉದಾಹರಣೆ ಸುಡುವಶಕ್ತಿ ಬೆಂಕಿಯಲ್ಲಿದ್ದರೂ ಸಹ ಕಟ್ಟಿಗೆಯಲ್ಲಿಯೇ ಹೆಚ್ಚಾಗಿ ದಹತಿ ಎಂಬ ಶಬ್ದವನ್ನು ಪ್ರಯೋಗಿಸುತ್ತಾರೆ. (ಸುಡುತ್ತದೆ). ಆದರೆ ಬುದ್ಧಿವಂತರಾದವರು ಕಟ್ಟಿಗೆ ಸುಡುತ್ತದೆ ಎಂದು ಹೇಳದೆ ಕಟ್ಟಿಗೆಯಲ್ಲಿರುವ ಬೆಂಕಿಯು ಸುಡುತ್ತದೆ ಎಂದೇ ಹೇಳುತ್ತಾರೆ. ಅದರಂತೆ ಪ್ರಕೃತದಲ್ಲಿಯೂ ಅಹಂ ಶಬ್ದಕ್ಕೆ ಅಮುಖ್ಯವಾಗಿ ಜೀವನೆಂಬರ್ಥವಿದ್ದರೂ ಬುದ್ಧಿವಂತರು ಅದನ್ನು ತಿರಸ್ಕರಿಸಿ ಮುಖ್ಯಾರ್ಥನಾದ ಶ್ರೀಹರಿ-ಯಲ್ಲಿಯೇ ಅಹಂಶಬ್ದವನ್ನು ಪ್ರಯೋಗಿಸುತ್ತಾರೆ. ಅದ್ವೈತಿಗಳೂ ಸಹ 'ಇದಮನಿದಮ್' ಎನಿಸಿದ ಪಿಂಡಾರ್ಥವನ್ನೇ ಅಹಂಶಬ್ದದ ಅರ್ಥವೆಂದು ಅಂಗೀಕರಿಸಿದ್ದಾರೆ.

ಇದರಂತೆ ಅಸ್ಮತ್ ಮೊದಲಾದ ಪದಗಳಲ್ಲಿ ಮತ್ತು ಉಪಪದಗಳಲ್ಲಿ ವಿಹಿತವಾದ 'ಅಸ್ಮಿ' ಮೊದಲಾದ ತಿಙಂತಪದಗಳಿಗೂ ಭಗವಂತನಲ್ಲಿಯೇ ಮುಖ್ಯವೃತ್ತಿಯನ್ನು ಸುಲಭವಾಗಿ ಹೇಳಬಹುದು. ಇತ್ಯಾದಿ ವಿಚಾರಗಳನ್ನು ತತ್ವನಿರ್ಣಯಟೀಕೆಯಲ್ಲಿ ಹೇಳಿದ ಪ್ರಕಾರ ಇಲ್ಲಿ ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

'ಅಹಮಾದಿ' ಎಂಬ ಟೀಕೆಗೆ "ಅಹಮಾದಿಶಬ್ದಪ್ರಯೋಗಅದರ್ಶನಾತ್" ಎಂದರ್ಥ.

**भा.दी. – स्मृतिगतोच्यत इतिपदव्यावर्त्यं वक्तुं 'न हि मनुसूर्यादिर्भवति वामदेवः' इत्याद्यैतरेयभाष्योक्तयुक्तिं किञ्चिद् विवरितुमाह – नच तत्रेति ॥ साक्षादिति ॥ शुद्धचैतन्यलक्षणमनाश्रित्य विशिष्टयोरेवैक्यमित्यर्थः । एतत् अमुख्यत्वम् ॥३०॥**

'ನಹಿ ಮನುಸೂರ್ಯಾದಿರ್ಭವತಿ ವಾಮದೇವಃ' ಇತ್ಯಾದಿಯಾಗಿ ಐತರೇಯಭಾಷ್ಯದಲ್ಲಿ ಹೇಳಿದ ಯುಕ್ತಿಯನ್ನು ಸ್ವಲ್ಪಮಟ್ಟಿಗೆ ವಿವರಿಸಲು "ನಚ ತತ್ರಾಪಿ" ಎಂಬ ಟೀಕೆಯು ಹೊರಟಿದೆ. "ಸಾಕ್ಷಾತ್" ಎಂಬ ಪದಕ್ಕೆ 'ಶುದ್ಧಚೈತನ್ಯದಲ್ಲಿ ಲಕ್ಷಣವನ್ನು ಆಶ್ರಯಿಸದೆ ವಿಶಿಷ್ಟಗಳಿಗೆ ಐಕ್ಯವನ್ನು ಹೇಳುವುದಾದಲ್ಲಿ' ಎಂದರ್ಥ. "ಏತತ್" ಎಂಬ ಪದಕ್ಕೆ ಅಮುಖ್ಯತ್ವ ಎಂದರ್ಥ.

वाक्यार्थमञ्जरी - ॐ शास्त्रदृष्ट्या तूपदेशो वामदेववत् ॐ ॥ तुरेव । शास्तीति शास्त्रमन्तर्यामि तद्दृष्ट्या तदपेक्षयैवाहमित्युपदेशः । न तादात्म्येन । वामदेववद् वामदेवोपदेशवत् । यथा वामदेवान्तर्याम्यपेक्षया अहमनुरभवं सूर्य इत्याह तद्वदित्यर्थः । भाष्ये सम्यङ् निर्दोषमात्मानं वेत्तीति संवित् । शास्त्रमन्तर्यामि । पद्यत इति पदम् उत्तमं प्राप्तव्यो- त्तममिति प्रथमभागवतार्थः । साक्षाद् विशिष्टयोरेव लक्षणया विशिष्टांशत्यागेन चिन्मात्रलक्षणया वा ॥ **सममिति** ॥ अन्तर्यामिणि लक्षणाङ्गीकारादिति भावः ॥

## ಬ್ರಹ್ಮಮೀಮಾಂಸಾಶಾಸ್ತ್ರ

**सू - ॐ ॥ जीवमुख्यप्राणलिङ्गान्नेति चेन्नोपासा-त्रैविध्यादाश्रितत्वादिह तद्योगात् ॥ ॐ ॥ ३१ ॥**

ಶತಾಯುಷ್ಟ್ವ ಎಂಬ ಜೀವನ ಧರ್ಮದಿಂದ ಇಂದ್ರಿಯಗಳ ಸಂವಾದವೆಂಬ ಮುಖ್ಯಪ್ರಾಣನ ಲಿಂಗದಿಂದ ಜೀವ ಹಾಗೂ ಮುಖ್ಯಪ್ರಾಣರೇ ಪ್ರಾಣಶಬ್ದವಾಚ್ಯರು. ಇದು ಸಹ ತಪ್ಪು. ಜೀವ ಹಾಗೂ ಮುಖ್ಯಪ್ರಾಣರ ಧರ್ಮಗಳನ್ನು ಅಂತರ್ಯಾಮಿ ವಿವಕ್ಷೆಯಿಂದ ಶ್ರುತಿ ಹೇಳಿದೆ. ಹೀಗೇಕೆ? ಎಂದರೆ ಮೂರು ವಿಧವಾದ ಉಪಾಸನೆಗಳಿರುವುದರಿಂದ. ಮೂರು ವಿಧ ಉಪಾಸನೆ ಏಕೆ ಎಂದರೆ ಮೂರುವಿಧವಾದ ಅಧಿಕಾರಿ ವರ್ಗ ಇರುವುದರಿಂದ.

॥ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಅಂತಿಮಪ್ರಾಣಾಧಿಕರಣವು ಮುಗಿಯಿತು ॥

ಅಂತಿಮಪ್ರಾಣಾಧಿಕರಣ (೧।೧।೧೨)

**सूत्रदीपिका –** जीवमुख्यप्राणलिङ्गात् शतायुष्ट्वादिजीवलिङ्गानाम् इन्द्रियदेवैः संवादादिरूप मुख्यप्राणलिङ्गानां च श्रवणात् 'तावन्ति शतसंवत्सरस्य' 'ता अहिंसन्ता' इति प्राणो अन्य एव न विष्णुः- इति चेत्, न । कुतः? अनुगमात् । न च लिङ्गविरोधः । 'तल्लिङ्गानाम् अन्तर्यामिविषयत्वोपपत्तेः' इत्यादिकमध्यहार्यम् । किमर्थमन्तर्यामिकथनम्? इत्यत उक्तम् – उपासात्रैविध्यादिति ॥ अन्तर्बहिःसर्वगतभेदेन ब्रह्मोपासनस्य त्रिविधत्वात् । इह = प्रकरणे । तत् त्रैविध्यस्य आश्रितत्वात् उक्तत्वात् तद्योगात् तेषाम् अधिकारिणां त्रिविधोपासनायोग्यत्वादित्यर्थः । तथा च तत्तच्छब्दैस्तत्तदधिकारिभेदेनोपासनार्थम् अन्तर्यामिकथनं युक्तमिति भावः ॥

ಜೀವಮುಖ್ಯಪ್ರಾಣಲಿಂಗಾತ್ = ಶತಾಯುಷ್ಟ್ವವೇ ಮೊದಲಾದ ಜೀವಲಿಂಗಗಳಿರುವುದರಿಂದ ಇಂದ್ರಿಯಾಭಿಮಾನಿ ದೇವತೆಗಳ ಜೊತೆಗೆ ಸಂವಾದರೂಪವಾದ ಮುಖ್ಯಪ್ರಾಣನ ಲಿಂಗಗಳು ಸಹ 'ತಾವಂತಿ ಶತಸಂವತ್ಸರಸ್ಯ' 'ತಾ ಅಹಿಂಸಂತಾ' ಇತ್ಯಾದಿಯಾಗಿ ಕೇಳಿಸುತ್ತಿರುವುದರಿಂದ ಪ್ರಾಣನು ಜೀವ ಅಥವಾ ಮುಖ್ಯಪ್ರಾಣರೇ ಆಗುತ್ತಾರೆ ಹೊರತು ವಿಷ್ಣುವಲ್ಲ. ಇದು ತಪ್ಪು. ಏಕೆಂದರೆ, ಅನುಗಮಾತ್ = ಅನೇಕ ಕಡೆ ವಿಷ್ಣುಲಿಂಗಗಳೇ ಕೇಳಿಸುತ್ತಿರುವುದರಿಂದ, ಜೀವಾದಿಲಿಂಗಗಳ ವಿರೋಧಕ್ಕೂ ಅವಕಾಶವಿಲ್ಲ. ಅಂತರ್ಯಾಮಿ ವಿವಕ್ಷೆಯಿಂದ ಅವೆಲ್ಲವೂ ವಿಷ್ಣುವಿನಲ್ಲೇ ಕೂಡುತ್ತವೆ. ಅಂತರ್ಯಾಮಿಯಲ್ಲಿ ಏಕೆ ಹೇಳಬೇಕು ಎಂದರೆ ಉಪಾಸಾತ್ರೈವಿಧ್ಯಾತ್ = ಅಂತರುಪಾಸನೆ, ಬಹಿರುಪಾಸನೆ, ವ್ಯಾಪ್ತ್ಯೋಪಾಸನೆ ಎಂಬುದಾಗಿ ಬ್ರಹ್ಮನ ಉಪಾಸನೆಯು ತ್ರಿವಿಧವಾಗಿರುವುದರಿಂದ. ಇಹ = ಈ ಪ್ರಕರಣದಲ್ಲಿ ಆಶ್ರಿತತ್ವಾತ್ = ಹೇಳಿದ್ದರಿಂದ, ತದ್ಯೋಗಾತ್ = ಮೂರುವಿಧ ಅಧಿಕಾರಿಗಳು ತ್ರಿವಿಧ ಉಪಾಸನೆಗೆ ಯೋಗ್ಯರಾದ್ದರಿಂದ. ಆದ್ದರಿಂದ ಆಯಾ ಶಬ್ದಗಳಿಂದ ಆಯಾ ಅಧಿಕಾರಿಭೇದದಿಂದ ಉಪಾಸನೆಯನ್ನು ಹೇಳುವುದಕ್ಕಾಗಿ ಅಂತರ್ಯಾಮಿ ವಚನವು ಯುಕ್ತವಾಗಿದೆ ಎಂದರ್ಥ.

ಶ್ರೀಜಗನ್ನಾಥಯತಿಗಳಿಂದ ವಿರಚಿತವಾದ ಸೂತ್ರದೀಪಿಕಾದಲ್ಲಿ ಅಂತಿಮಪ್ರಾಣಾಧಿಕರಣವು ಮುಗಿಯಿತು

## ಶತಾಯುಷ್ಟ್ವ, ಪ್ರಾಣಸಂವಾದಲಿಂಗಗಳಿರುವುದರಿಂದ ಪುನಃ ಆಕ್ಷೇಪ

**भाष्यम् - ॐ ॥ जीवमुख्यप्राणलिङ्गान्नेति चेन्नोपासात्रैविध्यादाश्रितत्वादिह तद्योगात् ॥ ॐ ॥ ३१ ॥**

**'तावन्ति शतसंवत्सरस्याह्नां सहस्राणि भवन्ति'(ऐ.आ.२.२.४) इति जीवलिङ्गम् । प्राणसंवादादि मुख्यप्राणलिङ्गम् । तस्मात् नेति चेत् –**

ಸಾವಿರ ಋಕ್ಕುಗಳ ಸ್ವರಾಕ್ಷರದಿಂದ ಪ್ರತಿಪಾದ್ಯನಾದ ವಿಷ್ಣುವಿಗೆ ಎಷ್ಟು ರೂಪಗಳಿವೆಯೋ ಅಷ್ಟೂ ರೂಪಗಳು ಮನುಷ್ಯರ ನೂರುವರ್ಷ ಆಯುಷ್ಯದ ಹಗಲುಗಳು' ಹೀಗೆ ನೂರುವರ್ಷಗಳ ಆಯುಷ್ಯವೆಂಬ ಜೀವನ ಅಸಾಧಾರಣವಾದ ಲಿಂಗವು ಕೇಳಿಸುತ್ತಿದೆ.

ಪ್ರಾಣನ ಜೊತೆಗೆ ಇಂದ್ರಿಯಾಭಿಮಾನಿ ದೇವತೆಗಳ ಸಂವಾದವು ಮುಖ್ಯಪ್ರಾಣನ ಅಸಾಧಾರಣವಾದ ಲಿಂಗವಾಗಿದೆ. ಆದ್ದರಿಂದ ಮುಖ್ಯಪ್ರಾಣ ಅಥವಾ ಜೀವರೇ ಇಲ್ಲಿ ಪ್ರತಿಪಾದ್ಯರು. ಹೀಗೆ ಪ್ರಾಪ್ತವಾದರೆ --

ಪ್ರತಿಪದಾರ್ಥ - ಪುನಃ ಹಿಂದಿನ ಪ್ರಮೇಯವನ್ನು ಆಕ್ಷೇಪಿಸಿ ಸಮಾಧಾನವನ್ನು ಹೇಳುವುದಕ್ಕಾಗಿ ಸೂತ್ರವನ್ನು ಪಠಿಸಿ ಆಕ್ಷೇಪಭಾಗವನ್ನು ವ್ಯಾಖ್ಯಾನಿಸುತ್ತಿದ್ದಾರೆ. ಶತಸಂವತ್ಸರಸ್ಯ = ನೂರು ವರ್ಷಗಳಿಗೆ, ಯಾವಂತಿ = ಎಷ್ಟು, ಅಹ್ನಾಂ = ಹಗಲುಗಳ, ಸಹಸ್ರಾಣಿ = ಸಾವಿರಗಳು ಭವಂತಿ = 'ಇರುತ್ತವೋ, ತಾವಂತಿ = ಅಷ್ಟೇ ದಿನಗಳು, ಇತಿ ಹೀಗೆ ಜೀವಲಿಂಗಮ್ = ಜೀವನ ಧರ್ಮಗಳು, ಹಾಗೂ ಪ್ರಾಣಸಂವಾದಾದಿ = ಮುಖ್ಯಪ್ರಾಣನ ಜೊತೆಗೆ ಇಂದ್ರಿಯಾಭಿಮಾನಿ ದೇವತೆಗಳ ಸಂವಾದವೆಂಬ, ಮುಖ್ಯಪ್ರಾಣಲಿಂಗಂ ಚ = ಮುಖ್ಯಪ್ರಾಣನ ಲಿಂಗಗಳೂ ಸಹ, ಇರುವುದರಿಂದಲೇ, ನೇತಿ ಚೇತ್ = ಪ್ರಾಣನು ವಿಷ್ಣುವಲ್ಲವೆಂದರೆ,

---

**भाष्यदीपिका** – पुनरुक्तमाक्षिप्य समादधत्सूत्रमुपन्यस्य आक्षेपांशं तावद् व्याचष्टे – जीवेति ॥ अनुसन्धीयत उक्तमिति च शेषः । संवादो विवादः कलहः प्राणस्य प्राणैः सह संवाद इति विग्रहः । तथा च यस्मादत्र प्रकरणे 'तं शतं वर्षाण्यभ्यार्चत् तस्माच्छतं वर्षाणि पुरुषायुषो भवन्ति' (ऐ.आ.२.२.१) इत्यनेन यच्छतसंवत्सरपर्यन्तं प्राणस्य जीवदेहेऽवस्थानहेतुकं शतायुष्ट्वरूपं जीवलिङ्गमुक्तं तत् 'तावन्ति शतसंवत्सरस्याह्नां सहस्राणि भवन्ति' इत्यादिना बहुषु स्थलेष्वनुसन्धीयते । यस्माच्च 'ता अहिंसन्ता-हमुक्थमहमुक्थमस्मि' (ऐ.आ.२-१-४.) इति वाक्येन प्राणस्य प्राणैरिन्द्रियैः सह संवाद-रूपमुख्यप्राणलिङ्गमुक्तम् । यस्माच्चाऽदिपदगृहीतं 'प्राणो वंश इति स्थविरः शाकल्यस्तद्यथा शालावंशे सर्वेऽन्ये वंशाः समाहिताः स्युरेवमस्मिन् प्राणे चक्षुश्श्रोत्रं मनो वागिन्द्रियाणि शरीरं सर्व आत्मा समाहितः' (ऐ.आ. ३-२-१-१.) इति वाक्येन सर्वजीवेन्द्रियदेह-धारकत्वरूपलिङ्गं चोक्तमस्ति तस्मादयं प्राणो न विष्णुः, किन्तु जीवमुख्यप्राणावेवेति योजना । यद्यपि 'तस्माच्छतं वर्षाणि पुरुषायुषो भवन्ति' (ऐ.आ.२-२-१.) इति शतायुष्ट्वलिङ्गप्रतिपादकवाक्यमेवोदाहरणीयं, न तु 'तावन्ति' इति वाक्यम् । तथाऽपि लिङ्गस्य बहुषु स्थलेषु अनुगमोऽस्तीति ज्ञापनायोपनिषदो जीवलिङ्गे तात्पर्यमस्तीति ज्ञापयितुम् अनुसन्धिवाक्यमेवोदाहृतम् । सिद्धान्ते श्रुत्यर्थस्तु - पुरुषायुषः शतसंवत्सर-स्याह्नां सहस्राणि शतसंवत्सरान्तःप्रविष्टाहर्नियामकसूर्यगतभगवत्पुरुषरूपाणि तावन्ति सहस्राणि । कियन्ति ? बृहतीसहस्रगताक्षराणां वाच्यानि पुंरूपाणि यावन्ति सहस्राणि तावन्ति । तथा च तानि षट्त्रिंशत्सहस्राणि सम्पन्नानि भवन्ति । 'ताः' चक्षुरादिदेवताः 'अहिंसन्त' विवादमकुर्वन् । किन्त्विति अहमस्य चतुर्मुखदेहस्योक्थोऽस्मि उत्थापकोऽ-स्मीति ।

तत्वप्रकाशिका – **पुनरुक्तमाक्षिप्य समादधत्सूत्रमुपन्यस्याऽऽक्षेपांशं तावद्व्याचष्टे – जीवेति ॥ अथापि नात्रोक्तप्राणो विष्णुः । 'एष इमं लोकमभ्यार्चत्पुरुषरूपेण य एष तपति प्राणो वाव तदभ्यार्चत्प्राणो ह्येष य एष तपति तं शतं वर्षाण्यभ्यार्चत्तस्माच्छतं वर्षाणि पुरुषायुषो भवन्ति' इति प्राणस्योक्तशतायुष्ट्वस्योपर्यपि तावन्तीत्यादिना बहुस्थलेष्वनुसन्धानात् । शतायुष्ट्वस्य जीवलिङ्गत्वात् । 'शतायुर्वै पुरुषः' इत्यादिश्रुतेः ।**

**'ता अहिंसन्ताऽहमुक्थमस्म्यहमुक्थमस्मि' इति प्राणस्येन्द्रियैः सह कलहश्रवणात् । 'प्राण उदक्रामत्तत्प्राण उत्क्रान्तेऽपद्यत प्राणःप्राविशत्तत्प्राणे प्रपन्न उदतिष्ठत्' इत्युत्क्रमणप्रवेशादिश्रुतेः । तथा 'प्राणो वंश इति स्थविरः शाकल्यस्तद्यथा शालावंशे सर्वेऽन्ये वंशाः समाहिताः स्युरेवमस्मिन्प्राणे चक्षुः श्रोत्रं मनो वागिन्द्रियाणि शरीरं सर्व आत्मा समादितः' इति सर्वजीवेन्द्रियदेहधारकत्वोक्तेश्च । प्राणसंवादादीनां च मुख्यप्राणलिङ्गत्वेन 'अथ ह प्राणा अहं श्रेयसि व्यूदिरे' इत्यादिश्रुतिसिद्धत्वात् ।**

**'उदासीनौ च तावास्तां केशवश्चाब्जसम्भवः' इति विष्णोः विवादादावौदासीन्योक्तेश्च । अतोऽत्र प्राणनिष्ठतया जीवमुख्यप्राणलिङ्गसद्भावातयोः प्राणत्वमिति भावः ।**

ಅನುವಾದ --ಹಿಂದಿನ ಸೂತ್ರದಲ್ಲಿ ನಿರ್ಣಯಿಸಿದ ಸಿದ್ಧಾಂತವನ್ನು ಆಕ್ಷೇಪಮಾಡಿ ಸಮಾಧಾನವನ್ನು ಹೇಳುವ ಸೂತ್ರವನ್ನು ಪಠಿಸುತ್ತಾ ಆಕ್ಷೇಪಾಂಶವನ್ನು ''ಜೀವಮುಖ್ಯ'' ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ.

ಹಿಂದೆ ಹೇಳಿದ ಪ್ರಕಾರ ಸಮಾಧಾನವನ್ನು ಒಪ್ಪಿದರೂ ಪ್ರಾಣಶಬ್ದವು ವಿಷ್ಣುವನ್ನು ಪ್ರತಿಪಾದಿಸುವುದಿಲ್ಲ ಏಕೆಂದರೆ ''ಏಷ ಇಮಂ ಲೋಕಮಭ್ಯಾರ್ಚತ್ ಪುರುಷರೂಪೇಣ ಯ ಏಷ ತಪತಿ ಪ್ರಾಣೋ ವಾವ ತದಭ್ಯಾರ್ಚತ್ ಪ್ರಾಣೋ ಹ್ಯೇಷ ಯ ಏಷ ತಪತಿ ತಂ ಶತಂ ವರ್ಷಾಣ್ಯಭ್ಯಾರ್ಚತ್ ತಸ್ಮಾತ್ ಶತಂ ವರ್ಷಾಣಿ ಪುರುಷಾಯುಷೋ ಭವಂತಿ'' 'ಇವನು ಬ್ರಹ್ಮದೇವರ ದೇಹದಲ್ಲಿ ಪುರುಷರೂಪದಿಂದ ಪ್ರವೇಶಿಸಿದನು. ಯಾರು ಸೂರ್ಯನಲ್ಲಿ ನಿಂತು ತಾಪವನ್ನು ಉಂಟುಮಾಡುತ್ತಾನೋ ಅಂತಹ ಪ್ರಾಣನೇ ಬ್ರಹ್ಮದೇವರ ಶರೀರದಲ್ಲಿ ನೆಲೆಸಿದ್ದಾನೆ. ಅವನೇ ಸೂರ್ಯನಲ್ಲೂ ಪ್ರಕಾಶ ನೀಡುತ್ತಿದ್ದಾನೆ. ನೂರು ವರ್ಷಗಳ ಪರ್ಯಂತವಾಗಿ ಶರೀರದಲ್ಲಿದ್ದಾನಾದ್ದರಿಂದ ಪುರುಷನ ಆಯುಷ್ಯವು ನೂರುವರ್ಷವಾಗಿದೆ' -- ಇತ್ಯಾದಿಯಾಗಿ ಪ್ರಾಣನಲ್ಲಿ ಶತಾಯುಷ್ಟ್ವವು ಹೇಳಲ್ಪಟ್ಟಿದೆ. ಈ ಶ್ರುತಿಯೇ ಮುಂದೆ 'ತಾವಂತಿ' ಇತ್ಯಾದಿ

ಬಹುಸ್ಥಳಗಳಲ್ಲಿ ಅನುವೃತ್ತವಾಗಿದೆ. 'ಶತಾಯುಷ್ಟ್ವ' ಎಂಬುದು ಜೀವಲಿಂಗವಾಗಿದೆ. ಏಕೆಂದರೆ 'ಶತಾಯುರ್ವೈ ಪುರುಷಃ' ಎಂಬ ಶ್ರುತಿಯು ಪುರುಷನಿಗೆ ನೂರುವರ್ಷದ ಕಾಲವನ್ನು ಹೇಳಿದೆ.

'ತಾ ಅಹಿಂಸಂತಾऽಹಮುಕ್ಥಮಸ್ಮ್ಯಹಮುಕ್ಥಮಸ್ಮಿ' 'ಚಕ್ಷುರಾದಿ ಇಂದ್ರಿಯಾಭಿಮಾನಿದೇವತೆಗಳು ನಾನೇ ಶ್ರೇಷ್ಠ ನಾನೇ ಶ್ರೇಷ್ಠ ಎಂಬುದಾಗಿ ಕಲಹವನ್ನು ಪ್ರಾರಂಭಿಸಿದರು' ಹೀಗೆ ಪ್ರಾಣನಿಗೆ ಇಂದ್ರಿಯಾಭಿಮಾನಿದೇವತೆಗಳ ಜೊತೆಗೆ ಕಲಹವು ಕೇಳಿಸುತ್ತಿದೆ. 'ಪ್ರಾಣ ಉದಕ್ರಾಮತ್ ತತ್ಪ್ರಾಣ ಉತ್ಕ್ರಾಂತೇऽಪದ್ಯತ ಪ್ರಾಣಃ ಪ್ರಾವಿಶತ್ ಪ್ರಾಣೇ ಪ್ರಪನ್ನ ಉದತಿಷ್ಠತ್' 'ಮುಖ್ಯಪ್ರಾಣನು ದೇಹದಿಂದ ಹೊರಟು ಹೋದನು, ಆವಾಗ ಶರೀರವು ಬಿದ್ದಿತು. ಮುಖ್ಯಪ್ರಾಣನು ಪುನಃ ದೇಹದಲ್ಲಿ ಪ್ರವೇಶಿಸಿದನು. ಪುನಃ ದೇಹವು ಎದ್ದಿತು' ಎಂಬ ಶ್ರುತಿಯಲ್ಲಿ ಮುಖ್ಯಪ್ರಾಣನ ಅಸಾಧಾರಣ-ಧರ್ಮವೆನಿಸಿದ ಉತ್ಕ್ರಮಣ ಪ್ರವೇಶಗಳು ಕೇಳಿಸುತ್ತಿವೆ. ಮತ್ತು 'ಪ್ರಾಣೋ ವಂಶ ಇತಿ ಸ್ಥವಿರಃ ಶಾಕಲ್ಯಸ್ತದ್ಯಥಾ ಶಾಲಾವಂಶೇ ಸರ್ವೇऽನ್ಯೇ ವಂಶಾಃ ಸಮಾಹಿತಾಃ ಸ್ಯುರೇವಮಸ್ಮಿನ್ ಪ್ರಾಣೇ ಚಕ್ಷುಃ ಶ್ರೋತ್ರಂ ಮನೋ ವಾಗಿಂದ್ರಿಯಾಣಿ ಶರೀರಂ ಸರ್ವ ಆತ್ಮಾ ಸಮಾದಿತಃ' 'ವೃದ್ಧರಾದ ಶಾಕಲ್ಯ ಋಷಿಗಳು ಹೀಗೆ ಹೇಳಿದ್ದಾರೆ. ಪ್ರಾಣನೇ ಎಲ್ಲರಿಗೂ ಆಶ್ರಯನಾಗಿದ್ದಾನೆ; ಯಾವ ರೀತಿಯಾಗಿ ಒಂದು ಶಾಲಾವಂಶದಲ್ಲಿ ಇತರ ಎಲ್ಲ ವಂಶಗಳು ಹೇಗೆ ಆಶ್ರಯಿಸಿಕೊಂಡಿರುತ್ತವೋ ಅದರಂತೆ ದೇಹದಲ್ಲಿರುವ ಪ್ರಾಣನಲ್ಲಿ ಚಕ್ಷುಸ್ಸು ಶ್ರೋತ್ರ ಮೊದಲಾದ ಎಲ್ಲ ಇಂದ್ರಿಯ ಅಭಿಮಾನಿದೇವತೆಗಳು, ಶರೀರವು ಮತ್ತು ಜೀವಾತ್ಮನು ಆಶ್ರಯಿಸಿಕೊಂಡಿದ್ದಾರೆ' ಹೀಗೆ ಪ್ರಾಣನ ಅಸಾಧಾರಣಧರ್ಮವೆನಿಸಿದ ಸಕಲಜೀವಇಂದ್ರಿಯ ದೇಹಧಾರಕತ್ವ ಎಂಬ ಧರ್ಮವು ಈ ಶ್ರುತಿಯಲ್ಲಿ ಕೇಳಿಸುತ್ತಿದೆ. ಪ್ರಾಣಸಂವಾದಾದಿಗಳು ಮುಖ್ಯಪ್ರಾಣನ ಲಿಂಗವೇ ಆಗಿವೆ ಎಂಬುದು 'ಅಥ ಹ ಪ್ರಾಣಾ ಅಹಂ ಶ್ರೇಯಾಂಸಿ ವ್ಯೂದಿರೇ' ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿದೆ.

'ಉದಾಸೀನೌ ಚ ತಾವಾಸ್ತಾಂ ಕೇಶವಶ್ಚಾಬ್ಜಸಂಭವಃ' ಎಂಬ ಮಾತಿನಂತೆ ವಿಷ್ಣು ಹಾಗೂ ಚತುರ್ಮುಖಬ್ರಹ್ಮದೇವರು ಶರೀರದಲ್ಲಿ ಉದಾಸೀನರಾಗಿದ್ದಾರೆಂದು ಹೇಳಲ್ಪಟ್ಟಿದೆ. ಆದ್ದರಿಂದ ಈ ಶ್ರುತಿಯಲ್ಲಿ ಪ್ರಾಣನಲ್ಲಿ ಕೇಳಿಸುತ್ತಿರುವ ಜೀವ ಮತ್ತು ಮುಖ್ಯಪ್ರಾಣರ ಧರ್ಮಗಳಿರುವುದರಿಂದ ಇವರಿಬ್ಬರೇ ಪ್ರಾಣಶಬ್ದವಾಚ್ಯರಾಗುತ್ತಾರೆ.

**भावदीपः** – ॐ जीवमुख्यप्राणलिङ्गान्नेति चेन्न उपासात्रैविध्यादाश्रितत्वादिह तद्योगात् ॐ ॥ **अथापीति** ॥ 'इन्द्रकृतोपदेशस्य सावकाशत्वेऽपि' इत्यर्थः । 'नेति चेत्' इत्यत्र नेति प्रतिज्ञांशस्यार्थः । **नात्रोक्तप्राणो विष्णुरिति** ॥ हेत्वंशं विवृण्वानः भाष्ये बृहतीसहस्रवर्णानां शतसंवत्सरस्याह्नां च षट्त्रिंशत्सहस्रत्वेन सङ्ख्या-साम्यस्यैवोक्तेः शतायुष्ट्वलिङ्गस्य(*) प्राणस्थताभिव्यक्तये 'अभ्यार्चच्छतवर्षाणि' इत्याद्यनुभाष्योक्तं पूर्ववाक्यमाह – **एष इति** ॥ लोकं ब्रह्मादिशरीरं पुरुषरूपेण

**अन्तर्यामिरूपेणाभ्यार्चत् प्राप्नोत् । 'प्रविवेश' इत्यर्थः । तदेव कार्यलिङ्गेन दर्शयति । य एष इति ॥ सूर्यमण्डले स्थित्वा तपतीत्यर्थः । 'य एष' इत्युक्तं व्यनक्ति – प्राणो वावेति ॥ तं लोकम् । भाष्ये 'तावन्ति' इति वाक्योक्तेरुपयोगमाह – उपर्यपीति ॥ तेन अनन्यथासिद्धत्वं लभ्यते । तथा च बहुधाऽऽवृत्तजीवलिङ्गेन अन्यत्रप्रसिद्धस्यापि प्राणपदस्य जीवपरत्वमिति भावः ।**

"ಓಂ ಜೀವಮುಖ್ಯಪ್ರಾಣಲಿಂಗಾನ್ನೇತಿ ಚೇನ್ನೋಪಾಸಾತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್ ಓಂ"

"ಅಥಾಪಿ" ಎಂಬ ಪದಕ್ಕೆ 'ಇಂದ್ರನು ಮಾಡಲ್ಪಟ್ಟ ಉಪದೇಶಕ್ಕೆ ಸಾವಕಾಶತ್ವವನ್ನು ಒಪ್ಪಿದರೂ ಸಹ' ಎಂದರ್ಥ. 'ನೇತಿ ಚೇತ್' ಎಂಬ ಸೂತ್ರದ ಭಾಗದಲ್ಲಿರುವ 'ನ' ಎಂಬ ಪ್ರತಿಜ್ಞಾಂಶಕ್ಕೆ "ನಾತ್ರೋಕ್ತಪ್ರಾಣೋ ವಿಷ್ಣುಃ" ಇತ್ಯಾದಿ ಟೀಕೆಯಿಂದ ವ್ಯಾಖ್ಯಾನಿಸುತ್ತಿದ್ದಾರೆ. ಹೇತುಭಾಗವನ್ನು "ಏಷ ಇಮಮ್" ಇತ್ಯಾದಿ ಟೀಕೆಯಿಂದ ವಿವರಿಸುತ್ತಿದ್ದಾರೆ. ಆದಕ್ಕೋಸ್ಕರ ಭಾಷ್ಯದಲ್ಲಿ ಬೃಹತೀಸಹಸ್ರದ ವರ್ಣಗಳಿಗೂ, ನೂರು ವರ್ಷ ಜೀವನದ ಹಗಲುಗಳಿಗೂ, ಮೂವತ್ತಾರುಸಾವಿರ ಎಂಬ ಸಂಖ್ಯಾಸಾಮ್ಯವು ಹೇಳಲ್ಪಟ್ಟಿದೆ. ಇದರಿಂದ ಶತಾಯುಷ್ಟ್ವ ಎಂಬ ಲಿಂಗವನ್ನು ಪ್ರಾಣನಲ್ಲಿ ಹೇಳಿದಂತಾಗುತ್ತದೆ. ಅದನ್ನು ಸಮರ್ಥಿಸಲು 'ಅಭ್ಯಾರ್ಚಚ್ಛತವರ್ಷಾಣಿ' ಇತ್ಯಾದಿಯಾಗಿ ಅನುಭಾಷ್ಯದಲ್ಲಿ ಹೇಳಿದಂತೆ ಪ್ರಕೃತವಿಷಯವಾಕ್ಯದ ಹಿಂದಿನ ವಾಕ್ಯವನ್ನು "ಏಷ ಇಮಮ್" ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಲೋಕಂ = ಬ್ರಹ್ಮಾದಿಶರೀರವನ್ನು, ಪುರುಷರೂಪದಿಂದ ಹಾಗೂ ಅಂತರ್ಯಾಮಿರೂಪದಿಂದ ಅಭ್ಯಾರ್ಚತ್= ಹೊಂದಿದನು. ಅಂದರೆ ಪ್ರವೇಶಮಾಡಿದನು ಎಂದರ್ಥ. ಈ ವಿಚಾರವನ್ನು ಕಾರ್ಯದರ್ಶನದಿಂದ ಸಮರ್ಥಿಸುತ್ತಿದ್ದಾರೆ "ಯ ಏಷಃ" ಇತ್ಯಾದಿಯಾಗಿ. ಅಂದರೆ ಸೂರ್ಯಮಂಡಲದಲ್ಲಿದ್ದು ಎಲ್ಲವನ್ನೂ ಸುಡುತ್ತಾನೆಂದರ್ಥ. "ಯ ಏಷಃ" ಎಂಬಲ್ಲಿ ಹೇಳಿದ್ದನ್ನೇ "ಪ್ರಾಣೋ ವಾವ" ಎಂಬುದರಿಂದ ವಿವರಿಸುತ್ತಿದ್ದಾರೆ. 'ತಂ' = ಲೋಕವನ್ನು. ಭಾಷ್ಯದಲ್ಲಿ 'ತಾವಂತಿ' ಎಂಬ ವಾಕ್ಯವನ್ನು ಏಕೆ ಹೇಳಿದರೆಂಬುದಕ್ಕೆ "ಉಪರ್ಯಪಿ" ಎಂಬ ಟೀಕೆಯಿಂದ ಕಾರಣವನ್ನು ನಿರೂಪಿಸುತ್ತಿದ್ದಾರೆ. ಇದರಿಂದ ಅನನ್ಯಥಾಸಿದ್ಧತ್ವವನ್ನು ತೋರಿಸಿದಂತಾಗುತ್ತದೆ. ಆದ್ದರಿಂದ ಅನೇಕಬಾರಿ ಆವೃತವಾದ ಶತಾಯುಷ್ಟ್ವವೆಂಬ ಜೀವಲಿಂಗದಿಂದ ಪ್ರಾಣಪದವು ಅನ್ಯತ್ರಪ್ರಸಿದ್ಧವಾದರೂ ಸಹ ಜೀವಪರವಾಗುತ್ತದೆಂಬ ಅಭಿಪ್ರಾಯ.

भा.दी. – भाष्ये 'आदि'पदोक्तलिङ्गान्याह – **प्राण उदक्रामदित्यादिना** ॥ श्रुतेः

---

(*) यद्यपि 'प्राणो वाव तदभ्यार्चत्' इति वाक्ये प्राणपदमप्यस्ति, तथापि शतायुष्ट्वलिङ्गबलात् तदपि जीवपरमेवेति भावः । 'स प्रागन्थस्थो भगवान्' इत्यत्र सप्राक्पदाभ्यां जीवेन सहाऽऽगतोऽन्तर्यामी जीवान्तर्यामी एतं मुनीनामुपासनाय मूर्ध्वद्वारा हृत्पुण्डरीकाभ्यन्तरे प्राप्तं पुरुषं पूर्णषड्गुणमात्मानं स्वामिनं, 'तनु विस्तारे' इति धातोः डप्रत्यये कृते तः विस्तृतः अतिशयेन तः ततमः तं ततमं ब्रह्मापश्यदिति योजना ।

– (गुर्वर्थदीपिका)

'श्रवणात्' इत्यर्थः । 'प्राणवंशत्वमित्यपि' इत्यनुव्याख्यानसुधयोः प्राणवंशत्वस्य जीवलिङ्गत्वोक्तावपि वायुलिङ्गत्वं चोपेत्याह – **तथेति** ॥ सर्व आत्मा सर्वो जीवः । इत्यादि **श्रुतीति** ॥ छन्दोगश्रुतीत्यर्थः । 'आदि'पदेन 'प्राणादिदमाविरासीत्' 'प्राणो धत्ते' 'प्राणे लयमभ्युपैति' इत्यादिग्रहः । **औदासीन्योक्तेश्चेति** ॥ ऐतरेयभाष्योक्त-स्मृतावित्यर्थः । तेन लिङ्गस्यानन्यथासिद्धत्वमिति भावः । प्राणस्य विष्णुत्वे तस्यापि तैः सह विवादप्राप्तौदासीन्योक्तिविरोधात् । एतेन **'अनन्यथासिद्धत्वं अन्यत्र श्रुतिलिङ्गादेः'** इति न्यायविवरणं लिङ्गांशे विवृतं ध्येयम् । 'तस्मान्न' इत्यंशं तात्पर्योक्त्या व्यनक्ति – **अत इति** ॥ तस्यैव व्यक्तिरत्र 'प्राणः' इत्यादि ।

ಭಾಷ್ಯದಲ್ಲಿ 'ಆದಿ' ಪದದಿಂದ ಹೇಳಲ್ಪಟ್ಟ ಲಿಂಗಗಳನ್ನು "ಪ್ರಾಣ ಉದಕ್ರಾಮತ್" ಇತ್ಯಾದಿಯಾಗಿ ಹೇಳುತ್ತಿದ್ದಾರೆ. "ಶ್ರುತೇಃ" ಎಂಬ ಪದಕ್ಕೆ ಕೇಳಿಸುತ್ತಿರುವುದರಿಂದ ಎಂದರ್ಥ. ವಸ್ತುತಃ 'ಪ್ರಾಣವಂಶತ್ವ-ಮಪಿ' ಎಂಬ ಅನುವ್ಯಾಖ್ಯಾನ ಮತ್ತು ಸುಧೆಗಳಲ್ಲಿ ಪ್ರಾಣವಂಶತ್ವವೂ ಸಹ ಜೀವಲಿಂಗವಾಗಿದೆಯೆಂದು ಹೇಳಿದ್ದಾರೆ. ಆದರೂ ಸಹ ಪ್ರಕೃತ ವಾಯುಲಿಂಗವೂ ಆಗಿದೆಯೆಂದು ಅಂಗೀಕರಿಸಿ "ತಥಾ" ಎಂಬ ಟೀಕೆಯು ಹೊರಟಿದೆ. ಸರ್ವ ಆತ್ಮಾ ಎಂಬಶಬ್ದಕ್ಕೆ ಸಕಲಜೀವರು ಎಂದರ್ಥ. "ಇತ್ಯಾದಿ ಶ್ರುತೇಃ" ಎಂದರೆ ಛಾಂದೋಗ್ಯಶ್ರುತಿಯಿರುವುದರಿಂದ ಎಂದರ್ಥ. ಆದಿಪದದಿಂದ 'ಪ್ರಾಣಾದಿದಮಾವಿರಾಸೀತ್' ಪ್ರಾಣೋ ಧತ್ತೇ ಪ್ರಾಣೇ ಲಯಮಭ್ಯುಪೈತಿ' ಮೊದಲಾದವುಗಳನ್ನು ವಿವಕ್ಷಿಸಬೇಕು.

"ಔದಾಸೀನ್ಯೋಕ್ತೇಶ್ಚ" ಅಂದರೆ ಐತರೇಯಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಸ್ಮೃತಿಯಲ್ಲಿ ಔದಾಸೀನ್ಯವು ಕೇಳಿಸುತ್ತಿದೆ ಎಂದರ್ಥ. ಆದ್ದರಿಂದ ಜೀವ ಹಾಗೂ ಮುಖ್ಯವಾಯುಗಳ ಲಿಂಗಗಳು ಅನನ್ಯಥಾ-ಸಿದ್ಧಗಳಾದವು. ಒಂದು ವೇಳೆ ಪ್ರಾಣನು ವಿಷ್ಣುವಾದಲ್ಲಿ ವಿವಾದವು ಪ್ರಾಪ್ತವಾದಾಗ ವಿಷ್ಣುವಿಗೆ ಔದಾಸೀನ್ಯ ಹೇಳಿದ್ದರ ವಿರೋಧ ಬರುತ್ತದೆ. ಹೀಗೆ ವ್ಯಾಖ್ಯಾನಿಸಿದ್ದರಿಂದ "ಅನನ್ಯಥಾಸಿದ್ಧತ್ವಮ್ ಅನ್ಯತ್ರಶ್ರುತಿ-ಲಿಂಗಾದೇಃ" ಎಂಬ ನ್ಯಾಯವಿವರಣವನ್ನು ಹೇತ್ವಂಶದಲ್ಲಿ ವ್ಯಾಖ್ಯಾನಿಸಿದಂತಾಯಿತು.

'ತಸ್ಮಾನ್ನ' ಎಂಬ ಭಾಷ್ಯದ ತಾತ್ಪರ್ಯವನ್ನು "ಅತಃ ಅತ್ರ" ಎಂಬ ಟೀಕೆಯಿಂದ ಹೇಳುತ್ತಿದ್ದಾರೆ.

## ಜೀವಾದಿಲಿಂಗಗಳು ತ್ರಿವಿಧೋಪಾಸನೆಗಾಗಿ

**भाष्यम् – न, अन्तर्बहिः सर्वगतत्वेनेत्युपासात्रैविध्यादिहाऽश्रितत्वाच्च ।**

**'स एतमेव सीमानं विदार्यैतया द्वारा प्रापद्यते' (ऐ.आ. २-४-३.) 'स एतमेव पुरुषं ब्रह्म ततमम् अपश्यत्' (ऐ.आ. २-४-३.) 'एतद्ध स्म वै तद् विद्वानाह महिदास ऐतरेयः' (ऐ.आ.२-१-८.) इत्यादिना ।**

**(३) 'महिदासाभिधो जज्ञ इतरायास्तपोबलात् ।**

**साक्षात् स भगवान् विष्णुर्यस्तन्त्रं वैष्णवं व्यधात् ॥' इति ब्रह्माण्डे ॥**

ಇದು ತಪ್ಪು. ಅಂತರುಪಾಸನೆ, ಬಹಿರುಪಾಸನೆ, ವ್ಯಾಪ್ತ್ಯೋಪಾಸನೆ ಎಂಬುದಾಗಿ ಉಪಾಸನೆಗಳು ಮೂರು ಬಗೆಯಲ್ಲಿವೆ. ಆ ಮೂರು ಉಪಾಸನೆಗಳನ್ನೂ ಸಹ ಇಲ್ಲಿ ಆಶ್ರಯಿಸಲಾಗಿದೆ.

ಮತ್ತು 'ವಾಸುದೇವರೂಪಿಯಾದ ಪರಮಾತ್ಮನು ಶಿರೋಮಧ್ಯಭಾಗವನ್ನು ಒಡೆದು ಪ್ರಸಿದ್ಧವಾದ ಸುಷುಮ್ನಾನಾಡಿಯ ಮೂಲಕವಾಗಿ ಚತುರ್ಮುಖಬ್ರಹ್ಮನ ಹೃದಯವನ್ನು ಪ್ರವೇಶಿಸಿದನು.' 'ನಾರಾಯಣರೂಪಿಯಾದ ಪರಮಾತ್ಮನು ತನ್ನದೇ ಆದ ಗುಣಪೂರ್ಣ-ವಾದ ವ್ಯಾಪ್ತರೂಪವನ್ನು ನೋಡಿದನು. ಇದನ್ನು ಚತುರ್ಮುಖಬ್ರಹ್ಮನು ತಿಳಿದನು'. 'ಪೂರ್ಣ ಜ್ಞಾನಿಯಾದ ಇತರಾದೇವಿಯ ಮಗನಾದ ಮಹಿದಾಸನು ಲಕ್ಷ್ಮೀದೇವಿಯನ್ನು ಕುರಿತು ಎಲ್ಲ ವಿಚಾರವನ್ನು ಹೇಳಿದನು'

---

**भाष्यदीपिका** – परिहारांशं व्याचष्टे – नेति ॥ प्राणो विष्णुर्नेति न, किन्तु विष्णुरेवायं, न जीवादिरित्यर्थः । कुतो नेत्यतस्तत्र प्रागुक्तानुगमहेत्वनुषङ्गं, न चोक्त-जीवमुख्यप्राणलिङ्गविरोध इत्यतस्तत्र हेतुत्वेन यतः शास्त्रदृष्ट्या त्वयमुपदेशः इत्यस्यानुषङ्गं, किमर्थमन्तर्यामीति प्रश्नस्यान्तरुपास्त्यर्थमिति परिहारं चाभिप्रेत्य न चोपासनेऽ-वान्तरभेदाभाव इति चोद्योत्तरत्वेन प्रवृत्तम् 'उपासा' इति सूत्रांशं व्याचष्टे – अन्तरिति ॥ गतत्वेनेत्यस्यान्तर्बहिस्सर्वशब्दैः प्रत्येकं सम्बन्धः । इतिशब्दः प्रकारार्थः । तथा च देहान्तर्गतत्वेन तद्बहिर्गतत्वेन सर्वगतत्वेनेति प्रकारेण 'उपासात्रैविध्यात्' भगवदुपासनस्य त्रिविधत्वादित्यर्थः । ननु तथाऽपि कथनं व्यर्थं वस्तुत उपासनात्रैविध्यस्येहानुक्तस्या-न्तर्यामिकथनाप्रयोजकत्वादित्यतः प्रवृत्तम् 'आश्रितत्वात्' इत्यंशं चशब्दाध्याहारेण व्याचष्टे – इहेति ॥ एतत्प्रकरणे उक्तत्वादित्यर्थः । उपासात्रैविध्यस्येति विपरिणामेनात्रान्वीयते । चो हेतूपपादकहेतुसमुच्चये । तथा च अत्रोक्तत्रैविध्यान्तर्गतान्तरोपासनार्थमन्तर्यामिकथनं युक्तमिति भावः ।

अत्रोपासनात्रैविध्यमुच्यत इत्यत्रापि किं लिङ्गमित्यत आह – स इति ॥ 'सः' वासुदेवो भगवान् 'एतमेव सीमानं' शिरोमध्यं विदार्यैव 'एतया द्वारा' सुषुम्नानाड्या 'प्रापद्यत' प्राप्तः । चतुर्मुखहृदयमिति शेषः । अनेन भगवतो देहान्तःप्रवेशोक्ते-रुक्तेश्चोपासनार्थत्वाद् अन्तरुपास्तिरुक्ता भवति । 'सः' चतुर्मुखदेहे प्राक्प्रपदाभ्यामन्तः प्रविष्टो नारायणः 'एतमेव पुरुषं' व्यासकृष्णकपिलादिरूपमात्मानम् आततगुणं

ಬ್ರಹ್ಮಾಂಡಪುರಾಣದಲ್ಲಿ 'ಮಹಿದಾಸನು ವಿಶಾಲ ಎಂಬ ಋಷಿಪತ್ನಿಯಾದ ಇತರಾದೇವಿಯ ತಪಸ್ಸಿನಿಂದ ಹುಟ್ಟಿದನೆಂದು ಹೇಳಲಾಗಿದೆ. ಅಂತಹ ಮಹಿದಾಸನೇ ಷಡ್ಗುಣೈಶ್ವರ್ಯ-ಸಂಪನ್ನನೂ, ವಿಷ್ಣುಸ್ವರೂಪನೂ ಆಗಿದ್ದಾನೆ. ಇವನು ವಿಷ್ಣುವಿನ ಮಹಿಮೆಯನ್ನು ಹೇಳುವ ಪಂಚರಾತ್ರವೆಂಬ ತಂತ್ರಶಾಸ್ತ್ರವನ್ನು ರಚಿಸಿದನು' ಎಂದು ಹೇಳಲಾಗಿದೆ.

ಪ್ರತಿಪದಾರ್ಥ -- ಐತರೇಯೋಪನಿಷತ್ತಿನಲ್ಲೇ ಹೀಗೆ ಹೇಳಲ್ಪಟ್ಟಿದೆ. ಅಂತಃ = ಹೃದಯದ ಒಳಗೆ, ಬಹಿಃ = ಹೊರಗೆ, ಸರ್ವಗತತ್ವೇನ = ಬ್ರಹ್ಮಾಂಡದಲ್ಲೆಲ್ಲೆಡೆ, ಇತಿ = ಈ ಪ್ರಕಾರವಾಗಿ. ಉಪಾಸಾ = ಉಪಾಸನೆಯು, ತ್ರೈವಿಧ್ಯಾತ್ = ಮೂರು ಬಗೆಯಲ್ಲಿರುವುದರಿಂದ, ಆಶ್ರಿತತ್ವಾಚ್ಚ = ಅಧಿಕಾರಿಗಳು ಮೂರು ಬಗೆಯಲ್ಲಿರು-ವುದರಿಂದಲೂ, ಪ್ರಾಣಶಬ್ದವಾಚ್ಯನು ವಿಷ್ಣುವೇ ಆಗಿದ್ದಾನೆ.

ಮತ್ತು, ಸಃ = ವಾಸುದೇವ ರೂಪಿಯಾದ ಪರಮಾತ್ಮನು, ಏತಮೇವ ಸೀಮಾನಂ = ಈ ಶಿರೋಮಧ್ಯ ಪ್ರದೇಶವನ್ನೇ, ವಿದಾರ್ಯ = ಸೀಳಿ, ಏತಯಾ = ಪ್ರಸಿದ್ಧವಾದ, ದ್ವಾರಾ = ಸುಷುಮ್ನಾ ನಾಡಿಯ ಮೂಲಕ, ಪ್ರಾಪದ್ಯತ = ಚತುರ್ಮುಖಬ್ರಹ್ಮನ ಶರೀರವನ್ನು ಪ್ರವೇಶಿಸಿದನು.

ಸಃ = ಆ ನಾರಾಯಣರೂಪಿಯಾದ ಪರಮಾತ್ಮನು, ಏತಮೇವ = ತನ್ನದೇ ಆದ, ಪುರುಷಂ = ಅಂತಃಸ್ಥವಾದ, ಬ್ರಹ್ಮ = ಗುಣಪರಿಪೂರ್ಣವಾದ, ತತಮಮ್ = ಎಲ್ಲೆಡೆ ವ್ಯಾಪ್ತವಾದ ತನ್ನ ರೂಪವನ್ನೇ, ಅಪಶ್ಯತ್= ನೋಡಿದನು.' 'ಏತತ್ = ಈ ವಿಚಾರವನ್ನು, ಬ್ರಹ್ಮಾ = ಚತುರ್ಮುಖಬ್ರಹ್ಮನು, ಅಪಶ್ಯತ್ = ತಿಳಿದನು'.

ವಿದ್ವಾನ್ = ಜ್ಞಾನಿಯಾದ, ಐತರೇಯಃ = ಇತರಾದೇವಿಯ ಮಗನಾದ, ಮಹಿದಾಸಃ = ಮಹಿದಾಸರೂಪಿಯಾದ ಪರಮಾತ್ಮನು, ಆಹ = ಲಕ್ಷ್ಮೀದೇವಿಗೆ ಹೇಳಿದನು.

---

स्वस्वरूपभूतमादानादिकर्तारं वा । ततमं 'लोपः समाने' इति सूत्रात् तलोपः । तमबर्थे मप्रत्ययो वा । तथा च ततममतिशयेन व्याप्तं निरवधिकव्याप्तिमन्तं 'ब्रह्म' गुणपूर्णम् 'अपश्यत्' तद्गुणकतया तद्रूपं ददर्शेत्यर्थः । केचित्तु तकार एव व्याप्त्यभिधायक इत्याहुः । अनेन सर्वगतत्वं तथोपासनार्थमुक्तम् । 'तदेतत्' प्रकृतं सर्वं 'विद्वान्' जानन्नैतरेय इतराया अपत्यं पुमान् विशालसञ्ज्ञाद् ऋषेरुत्पन्नरैतरेयः । 'महिदासः' महिनो महात्मानो देवाः दासभूताः यस्यासौ भगवानाहेत्यर्थः । हस्मवैशब्दाः प्रसिद्धिद्योतकाः । अत्र बहिरुपास्त्यर्थं महिदास आहेति बहिरुपास्तिरुक्ता भवति । न च वाच्यमत्र स्वरूप-मात्रमुच्यते, नोपासनार्थमिति । उपासनां विनोक्तिप्रयोजनाभावात् । इत्यादिने-त्यस्येत्यादिना वाक्येनोपासनात्रैविध्यस्याऽश्रितत्वादर्थादुक्तत्वादित्यन्वयः । आदिशब्देन 'तं प्रपदाभ्यां प्रापद्यत ब्रह्मेमं पुरुषमेतस्यामेतम्' (ऐ.आ.२-१-४) इत्यादिकं गृह्यते । ननु 'एतद्धस्मवै तद्विद्वानाह हिरण्यदन्वा' (ऐ.आ.२-१-५) इतिवन्महिदासोऽपि ऋषित्वेनो-च्यतामिति चेन्न । अस्या उपनिषदः ऐतरेयसञ्ज्ञयैवेतरापुत्रस्य महिदासस्य ऋषित्वसिद्ध्या तदुक्तेर्व्यर्थत्वात् ।

ಬ್ರಹ್ಮಾಂಡೇ = ಬ್ರಹ್ಮಾಂಡಪುರಾಣದಲ್ಲಿ, ಇತರಾಯಾಃ = ಇತರಾದೇವಿಯ, ತಪಃ = ತಪಸ್ಸಿನ, ಬಲಾತ್ = ಪ್ರಭಾವದಿಂದ, ಮಹಿದಾಸಾಭಿಧಃ = ಮಹಿದಾಸನೆಂಬ ಹೆಸರುಳ್ಳ, ಋಷಿಯು, ಜಜ್ಞೇ = ಹುಟ್ಟಿದನು. ಸಃ = ಆ ಮಹಿದಾಸನು, ಭಗವಾನ್ = ಷಡ್ಗುಣೈಶ್ವರ್ಯಸಂಪನ್ನನಾದ, ಸಾಕ್ಷಾತ್ = ಸ್ವತಃ, ವಿಷ್ಣುಃ = ವಿಷ್ಣುವೇ ಆಗಿದ್ದಾನೆ, ಯಃ = ಯಾವ ಈ ಮಹಿದಾಸನು, ವೈಷ್ಣವಂ = ವಿಷ್ಣುಪ್ರತಿಪಾದಕವಾದ, ತಂತ್ರಂ = ಪಂಚರಾತ್ರವೆಂಬ ತಂತ್ರಶಾಸ್ತ್ರವನ್ನು, ವ್ಯಧಾತ್ = ರಚನೆ ಮಾಡಿದನು., ಇತಿ = ಹೀಗೆ ಹೇಳಲ್ಪಟ್ಟಿದೆ.

**(तत्व) परिहारांशं व्याचष्टे – नेति ॥ विष्णुरेवायं प्राणो न जीवादि । लिङ्गानां तदन्तर्यामिभगवद्विषयतयोपपत्तेः । किमर्थमन्तर्यामिकथनमिति चेत् अन्तरादिभेदेन भगवदुपासनस्य त्रैविध्यादेतत्प्रकरणे तत् त्रैविध्यस्योक्तत्वाच्चेति भावः ।**

**अत्रोपासात्रैविध्यमुच्यते इत्यत्र किं लिङ्गमित्यत आह – स इति ॥ 'स भगवानेतमेव मस्तकसीमानं विदार्यैतया द्वारा सुषुम्नया हृदयं प्राप्त ब्रह्माऽपश्यत्' इतिसर्वगतोपासनार्थमुच्यते । महिदास इति बहिरुपासनार्थमुच्यते । न च वाच्यमत्र स्वरूपमात्रमुच्यते नोपासनार्थमिति । उपासनं विनोक्तिप्रयोजनाभावात् । न हि (च) महिदासो मुनितयोच्यते । वैयर्थ्यादेव । महिदासस्य विष्णुत्वं कुतः? इत्यत आह – महिदासेति ॥**

ಪರಿಹಾರದ ಭಾಗವನ್ನು "ನ" ಎಂಬುದಾಗಿ ಹೇಳುತ್ತಿದ್ದಾರೆ. ಪ್ರಸ್ತುತನಾದ ಪ್ರಾಣಶಬ್ದವಾಚ್ಯನು ವಿಷ್ಣುವೇ ಹೊರತು ಜೀವಾದಿಗಳಲ್ಲ. ಜೀವ ಹಾಗೂ ಮುಖ್ಯಪ್ರಾಣರ ಲಿಂಗಗಳೆಲ್ಲವೂ ಸಹ ಅಂತರ್ಯಾಮಿಯಾದ ಭಗವಂತನಿಗೆ ಸಂಬಂಧಪಟ್ಟಿರುತ್ತವೆ. ಇಲ್ಲಿ ಅಂತರ್ಯಾಮಿಯೆಂದು ಏಕೆ ಹೇಳಬೇಕು? ಎಂದರೆ ಅಂತರಾದಿ ಉಪಾಸನಾಭೇದದಿಂದ ಭಗವಂತನ ಉಪಾಸನೆಯು ಮೂರು-ವಿಧವಾಗಿದೆ. ಆದ್ದರಿಂದಲೇ ಈ ಪ್ರಕರಣದಲ್ಲಿ ಉಪಾಸನಾತ್ರೈವಿಧ್ಯವು ಕೇಳಿಸುತ್ತಿದೆ ಎಂದಭಿಪ್ರಾಯ.

---

**भाष्यदीपिका** – तथाऽपि महिदासस्य विष्णुत्वं कुतो ज्ञायत इत्यत आह महिदासेति ॥ 'जज्ञे' व्यक्तो बभूव । 'स च' महिदासः – 'महिदासस्त्वैतरेयो बह्वृचोपनिषद्गतः । साक्षात् स भगवान् विष्णुस्तन्नामैको मुनिर्ह्यभूत् ॥' इति छान्दोग्यभाष्येऽनन्तरोक्तभगवदन्यः तत्सञ्ज्ञकेतरापुत्रः ऋषिरत्र न विवक्षितः, किन्तु । यो 'वैष्णवं' विष्णुविषयं 'तन्त्रं' ग्रन्थं 'व्यधात्' निर्ममे । यद्वा – 'तन्त्रं' पञ्चरात्रं व्यधात् नारदादिभ्यो व्याचख्यौ । यश्च 'साक्षात्' स्वयं 'भगवान्' पूर्णज्ञानादिमान् 'विष्णुः' तदवतारभूतः पूर्वोक्तः स एवात्र विवक्षित इत्याह साक्षादिति ॥ ब्रह्माण्डे पुराण इत्यस्याऽश्रितत्वादित्यनेनान्वयः। महिदासस्य विष्णुत्वोक्तिरिति तदर्थः । तेन चशब्दान्वयः ।

ಮೂರುವಿಧ ಉಪಾಸನೆಯು ಈ ಪ್ರಕರಣದಿಂದ ಪ್ರತಿಪಾದ್ಯವಾಗಿದೆಯೆನ್ನಲು ಏನು ಗಮಕ? ಎಂಬ ಪ್ರಶ್ನೆಗೆ ''ಸ ಏತಮೇವ'' ಎಂಬುದಾಗಿ ಉತ್ತರಿಸುತ್ತಿದ್ದಾರೆ. 'ಸಃ = ಭಗವಂತನು, ಏತಮೇವ ಮಸ್ತಕಸೀಮಾನಂ = ತಲೆಯ ಮಧ್ಯಭಾಗವನ್ನು, ವಿದಾರ್ಯ = ಸೀಳಿ, ಏತಯಾ ದ್ವಾರಾ = ಸುಷುಮ್ನಾ-ನಾಡಿಯ ಮಾರ್ಗವಾಗಿ, ಪ್ರಾಪದ್ಯತ = ಹೃದಯಸ್ಥಾನವನ್ನು ಹೊಂದುತ್ತಾನೆ' ಎಂಬುದಾಗಿ ಭಗವಂತನ ಅಂತರುಪಾಸನೆಯು ಹೇಳಲ್ಪಟ್ಟಿದೆ.

ಸಃ = ಹಿಂದೆ ಹೇಳಲ್ಪಟ್ಟ ಭಗವಂತನು, ಏತಂ ಪ್ರಾಪ್ತಂ ಪುರುಷಮಾತ್ಮಾನಂ = ಪುರುಷನನ್ನು, ತತಮಂ = ಸರ್ವಗುಣಪರಿಪೂರ್ಣನಾದ ಮತ್ತು ವ್ಯಾಪ್ತನಾದ, ಬ್ರಹ್ಮ = ಬ್ರಹ್ಮನನ್ನು, ನೋಡಿದನು. ಹೀಗೆ ಸರ್ವಗತನೆಂಬ ಉಪಾಸನೆಯು ಹೇಳಲ್ಪಟ್ಟಿದೆ. ಮಹಿದಾಸನ ಬಗ್ಗೆ ಹೇಳಿರುವುದು ಬಹಿರುಪಾಸನೆಗೋಸ್ಕರವೆಂದು ತಿಳಿಯಬೇಕು.

ಈ ಎಲ್ಲ ಶ್ರುತಿಗಳಲ್ಲಿ ಕೇವಲ ಭಗವತ್‌ಸ್ವರೂಪವು ಪ್ರತಿಪಾದ್ಯವಾಗಿದೆ ಹೊರತು ಉಪಾಸನೆಯು ಪ್ರತಿಪಾದ್ಯವಾಗಿಲ್ಲವೆಂದು ಹೇಳಬಾರದು. ಉಪಾಸನೆಯನ್ನು ಹೇಳದಿದ್ದರೆ ಈ ಎಲ್ಲ ಶ್ರುತಿವಚನಗಳಿಗೆ ಪ್ರಯೋಜನವೇ ಇರುವುದಿಲ್ಲ.

ಇನ್ನು ಮಹಿದಾಸನನ್ನು ಕೇವಲ ಒಬ್ಬ ಮುನಿಯೆಂದು ತಿಳಿಯಬಾರದು. ಹಾಗೆ ತಿಳಿದರೆ ವ್ಯರ್ಥವಾಗುತ್ತದೆ. ಮಹಿದಾಸನು ವಿಷ್ಣುವೆಂದು ಹೇಗೆ ನಿರ್ಣಯಿಸುತ್ತೀರಿ? ಎಂಬ ಪ್ರಶ್ನೆಗೆ ''ಮಹೀ-ದಾಸಾಭಿಧಃ'' ಎಂಬುದಾಗಿ ಉತ್ತರಿಸುತ್ತಿದ್ದಾರೆ.

**भावदीपः** – **'उपासा त्रैविध्यात्'** इत्यादेः साक्षादुक्तशङ्कानिवृत्तावक्षमत्वात् **'अन्यगतलिङ्गादीनामपि तद्गतभगवदपेक्षया युक्तेः'** इति न्यायविवरणोक्त्या 'न' इत्यनन्तरं 'शास्त्रदृष्ट्या' इति पदमनुवर्त्यम्- इत्युपेत्यार्थमाह – **विष्णुरेवायमिति** ॥ नञ्द्वयार्थः 'एव'इति । अत्रापि पूर्वत्रेव 'अनुगमात्' इति 'नच लिङ्गविरोधः' इति योजयित्वा 'लिङ्गानाम्' इत्यादि योज्यम् । उदासीनवत् आस्तान्तौ इत्यौदासीन्योक्तिस्तु अन्तर्यामिभिन्नबाह्यरूपेण । नतु अन्तर्यामिरूपेणेति भावः । उक्तं च तृतीयस्कन्धतात्पर्ये सप्तविंशेऽध्याये ।

**'यज्ञान्तःस्थः स्वयं पादौ विशन्नोत्थापयद्धरिः ।**
**शक्तोपि ब्रह्मवाय्वोस्तु बलज्ञस्त्यै जनार्दनः ।**
**तत्स्थ उत्थापयामास ब्रह्मदेहं विशन् प्रभुः ॥**

इति 'यज्ञोनामेन्द्रपुत्रस्तु जयन्त इति चोच्यते' इति पञ्चमबृहद्भाष्योक्त्या यज्ञो जयन्तः ।

ಸೂತ್ರದಲ್ಲಿರುವ 'ಉಪಾಸಾತ್ಮೈವಿಧ್ಯಾತ್' ಎಂಬ ಹೇತುವು ಹಿಂದಿನ ಪೂರ್ವಪಕ್ಷವನ್ನು ನಿರಾಸಮಾಡಲು ಸಮರ್ಥವಾಗಿದೆ; ಸಾಕ್ಷಾತ್ತಾಗಿ ಸಮರ್ಥವಾಗುವುದಿಲ್ಲ. ಆದ್ದರಿಂದ ಜೀವಾದಿಗಳಲ್ಲಿರುವ ಲಿಂಗಗಳನ್ನು ಭಗವಂತನಲ್ಲಿ ಸಮರ್ಥಿಸುವುದರ ಮೂಲಕ ಪೂರ್ವಪಕ್ಷನಿರಾಸಕವಾಗುತ್ತದೆ ('ಸಾಕ್ಷಾದುಕ್ತಶಂಕಾನಿವೃತ್ತಾ-ವಕ್ಷಮತ್ವಾದನ್ಯಗತಲಿಂಗಾದೀನಾಮಪಿ ತದ್ಗತಭಗವದಪೇಕ್ಷಯಾ ಯುಕ್ತೇಃ' ) ಹೀಗೆ ನ್ಯಾಯವಿವರಣದಲ್ಲಿ ಹೇಳಿದಂತೆ ಸೂತ್ರದಲ್ಲಿ 'ನ' ಎಂಬ ಪದದ ನಂತರ 'ಶಾಸ್ತ್ರದೃಷ್ಟ್ಯಾ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕೆಂದು ಅಂಗೀಕರಿಸಿ ''ವಿಷ್ಣುರೇವ ಅಯಮ್'' ಎಂಬ ಟೀಕೆಯಿಂದ ವ್ಯಾಖ್ಯಾನಿಸುತ್ತಿದ್ದಾರೆ. ಎರಡು ನಞ್‌ಗಳ ಅರ್ಥವನ್ನು ''ಏವ'' ಎಂದು ಹೇಳಿದ್ದಾರೆ. ಇಲ್ಲಿಯೂ ಸಹ ಹಿಂದಿನಂತೆ 'ಅನುಗಮಾತ್' ಎಂಬುದನ್ನು ಮತ್ತು ನ ಚ ಲಿಂಗವಿರೋಧಃ ಎಂಬುದನ್ನು ಯೋಜಿಸಿಕೊಂಡು, ಲಿಂಗಾನಾಮ್ ಎಂದು ಯೋಜನೆ ಮಾಡಿಕೊಳ್ಳಬೇಕು.

ಶ್ರುತಿಯಲ್ಲಿ ವಿಷ್ಣುವಿಗೆ ಔದಾಸೀನ್ಯವನ್ನು ಹೇಳಿದ್ದು ಅಂತರ್ಯಾಮಿರೂಪಕ್ಕಿಂತ ಭಿನ್ನವಾದ ಬಾಹ್ಯ-ರೂಪದಿಂದಷ್ಟೇ ಹೊರತು, ಬ್ರಹ್ಮದೇವರ ಅಂತರ್ಯಾಮಿ ರೂಪದಿಂದಲ್ಲ. ಏಕೆಂದರೆ ತೃತೀಯಸ್ಕಂಧ-ತಾತ್ಪರ್ಯದ ಹದಿನೇಳನೆಯ ಅಧ್ಯಾಯದಲ್ಲಿ ಸ್ಪಷ್ಟವಾದ ಮಾತಿದೆ.

ಯಜ್ಞಾಂತಃಸ್ಥಃ ಸ್ವಯಂ ಪಾದೌ ವಿಶನ್ನೋತ್ಥಾಪಯದ್ಧರಿಃ।
ಶಕ್ತೋಽಪಿ ಬ್ರಹ್ಮವಾಯ್ವೋಸ್ತು ಬಲಜ್ಞಪ್ತ್ಯೈ ಜನಾರ್ದನಃ।
ತತ್ಸ್ಥ ಉತ್ಥಾಪಯಾಮಾಸ ಬ್ರಹ್ಮದೇಹಂ ವಿಶನ್ ಪ್ರಭುಃ॥

ಯಜ್ಞನೆನಿಸಿದ ಪಾದಾಭಿಮಾನಿಯಾದ ಜಯಂತನ ಒಳಗಡೆ ಶ್ರೀಹರಿಯು ಸ್ವತಃ ಪ್ರವೇಶಿಸಿ, ಬ್ರಹ್ಮದೇವರ ದೇಹವನ್ನು ಎಬ್ಬಿಸಿದನು. ಸ್ವತಃ ತಾನೇ ಬಾಹ್ಯರೂಪದಿಂದ ಎಬ್ಬಿಸಲು ಸಮರ್ಥನಾಗಿದ್ದರೂ ವಾಯುದೇವರ ಬಲವನ್ನು ಪ್ರಕಟಪಡಿಸುವುದಕ್ಕಾಗಿ ಅಂತರ್ಯಾಮಿರೂಪದಿಂದ ಶರೀರವನ್ನು ಎಬ್ಬಿಸಿದನು.

'ಯಜ್ಞೋ ನಾಮೇಂದ್ರಪುತ್ರಸ್ತು ಜಯಂತ ಇತಿ ಚೋಚ್ಯತೇ' ಎಂದು ಬೃಹದಾರಣ್ಯಕಭಾಷ್ಯದ ಪಂಚಮಾಧ್ಯಾಯದಲ್ಲಿ ಹೇಳಿದಂತೆ ಯಜ್ಞಶಬ್ದಕ್ಕೆ ಜಯಂತ ಎಂದರ್ಥ.

भा.दी. – अब्जसम्भवस्यौदासीन्यं तु –

**अंशेन सुप्तो ब्रह्मा तु अंशेन निरगात् प्रभुः ।**
**स्वदेहाद् वायुसहितो विष्णुना च जगत्प्रभुः ॥**

इत्यादितृतीयस्कन्धतात्पर्योक्तदिशा अंशेन निर्गतत्वेपि, अंशेन देहे स्थितस्य निर्व्यापारत्वरूपं बोध्यम् । तेन –

**प्राणं विना नच ब्रह्मा तं विना प्राण एव च ।**
**अन्योन्यापाश्रयाच्छक्तौ स्थातुमन्ये कुतस्ततः? ॥**

इत्यादिना 'अष्टमे वाजसनेयभाष्ये प्राणनिर्गमने ब्रह्मणोऽवस्थान एव शक्त्यभावोक्तेः तद्विरोधः' इति प्रत्युक्तं बोध्यम् । सूत्रशेषभाष्यमवतार्य व्यनक्ति – **किमर्थमिति** ॥ उपासनार्थं मन्वान आह – **अन्तरादीति** ॥ **'इह'** इत्यस्यार्थः **'तत्प्रकरणे'** इति ।

ನಿತ್ಯಜ್ಞಾನಿಗಳಾದ ಮತ್ತು ಸುಷುಪ್ತ್ಯವಸ್ಥೆಯೇ ಇಲ್ಲದ ಬ್ರಹ್ಮದೇವರಿಗೆ ಔದಾಸೀನ್ಯವನ್ನು ಹೇಗೆ ಹೇಳುತ್ತೀರಿ? ಈ ಪ್ರಶ್ನೆಗೆ ಹೀಗೆ ಉತ್ತರಿಸಬೇಕು --

ಅಂಶೇನ ಸುಪ್ತೋ ಬ್ರಹ್ಮಾ ತು ಅಂಶೇನ ನಿರಗಾತ್ ಪ್ರಭುಃ।
ಸ್ವದೇಹಾದ್ ವಾಯುಸಹಿತೋ ವಿಷ್ಣುನಾ ಚ ಜಗತ್ಪ್ರಭುಃ॥

ಚತುರ್ಮುಖಬ್ರಹ್ಮದೇವರು ಒಂದಂಶದಿಂದ ಸುಪ್ತನಾಗಿದ್ದರೂ ಮತ್ತೊಂದಂಶದಿಂದ ವಾಯು ಹಾಗೂ ವಿಷ್ಣುವಿನಿಂದ ಸಹಿತರಾಗಿ ತಮ್ಮ ದೇಹದಿಂದ ಹೊರಗೆ ಬಂದಿದ್ದಾರೆ. ಹೀಗೆ ತೃತೀಯಸ್ಕಂಧದ ಭಾಗವತತಾತ್ಪರ್ಯದಲ್ಲಿ ಹೇಳಿದಂತೆ ಒಂದಂಶದಿಂದ ದೇಹದಿಂದ ಬಂದಿದ್ದರೂ ಮತ್ತೊಂದಂಶದಿಂದ ದೇಹದಲ್ಲೇ ಸುಪ್ತರಾಗಿದ್ದಾರೆ. ಅಂದರೆ ಇಲ್ಲಿ ಸುಷುಪ್ತಿ ಎಂಬ ಪದಕ್ಕೆ ವ್ಯಾಪಾರವಿಲ್ಲದವರಾಗಿದ್ದಾರೆ ಎಂದಷ್ಟೇ ಅರ್ಥ ಹೊರತು ನಿದ್ರೆ ಮಾಡಿದ್ದಾರೆ ಎಂದರ್ಥವಲ್ಲ. ಹೀಗೆ ಹೇಳಿದ್ದರಿಂದ ಮತ್ತೊಂದು ಶಂಕೆಯನ್ನು ನಿವಾರಿಸಿದಂತಾಯಿತು.

ಪ್ರಾಣಂ ವಿನಾ ನಚ ಬ್ರಹ್ಮಾ ತಂ ವಿನಾ ಪ್ರಾಣ ಏವ ಚ।
ಅನ್ಯೋನ್ಯಾಪಾಶ್ರಯಾಚ್ಛಕ್ತೌ ಸ್ಥಾತುಮನ್ಯೇ ಕುತಸ್ತತಃ॥

ಮುಖ್ಯಪ್ರಾಣನನ್ನು ಬಿಟ್ಟು ಬ್ರಹ್ಮದೇವರು ಇರಲಾರರು. ಬ್ರಹ್ಮದೇವರನ್ನು ಬಿಟ್ಟು ಮುಖ್ಯಪ್ರಾಣದೇವರು ಇರಲಾರರು. ಎಂದು ವಾಜಸನೇಯ ಭಾಷ್ಯದ ಅಷ್ಟಮಾಧ್ಯಾಯದಲ್ಲಿ ಹೇಳಿದ್ದರಿಂದ ಪ್ರಾಣನು ಹೊರಟಮೇಲೆ ಬ್ರಹ್ಮನು ಇರಲು ಸಾಧ್ಯವಿಲ್ಲ. ಆದ್ದರಿಂದ ಇದರ ವಿರೋಧ ಬರುತ್ತದಲ್ಲವೇ? ಎಂಬ ಶಂಕೆಗೆ ಈಗ ಅವಕಾಶವಿಲ್ಲ. ಏಕೆಂದರೆ ಒಂದಂಶದಿಂದ ಹೊರಗೆ ಹೊರಟಿದ್ದರೂ ಮತ್ತೊಂದಂಶದಿಂದ ದೇಹದಲ್ಲಿ ನಿರ್ವ್ಯಾಪಾರದಿಂದ ಬ್ರಹ್ಮದೇವರು ಇರುತ್ತಾರೆ.

ಸೂತ್ರಶೇಷಕ್ಕಿರುವ ಭಾಷ್ಯವನ್ನು ಅವತಾರಿಕೆ ನೀಡಿ ''ಕಿಮರ್ಥಮ್'' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನಿಸುತ್ತಿದ್ದಾರೆ. ಉಪಾಸನೆಗೋಸ್ಕರ ಅಂತರ್ಯಾಮಿಯನ್ನು ಹೇಳಿದ್ದಾರೆಂದು ಭಾವಿಸಿ ''ಅಂತರಾದಿ-ಭೇದೇನ'' ಎಂದು ಹೇಳಿದ್ದಾರೆ. ಭಾಷ್ಯದಲ್ಲಿರುವ 'ಇಹ' ಎಂಬ ಪದಕ್ಕೆ 'ಏತತ್ ಪ್ರಕರಣೇ' ಎಂದರ್ಥ.

भा.दी. – श्रुतौ 'अयम् अवसथ' इत्यक्षिकण्ठहृदयरूपस्थानत्रयोक्तेः, 'प्रापद्यते' इत्यस्य विवक्षितं कर्माऽऽह – **हृदयं प्राप्त इति** ॥ **स प्रागन्तःस्थ इति** ॥ 'तं प्रपदाभ्यां प्रापद्यते' इत्यादिना प्रपदाभ्यां प्रविष्टो नारायण इत्यर्थः । 'एतम्' इत्यस्यार्थः 'प्राप्तम्' इति ।

सुषुम्नया हृदयं प्राप्तं वासुदेवमात्मानं स्वात्मरूपम् । ततमं तततमं ब्रह्म गुणपूर्णमित्यर्थः ।

स सर्वगुणसम्पूर्णं सर्वगं नित्यमव्ययम् ।
एतदेवस्वरूपं स त्वपश्यदवतारगम् ॥

इति तद्भाष्योक्तेः । **नोपासनार्थमिति** ॥ 'आत्मानमेव लोकमुपासीत' इतिवदुपासनापदाश्रवणादिति भावः । **उक्तिप्रयोजनेति** ॥ साक्षादुपासनाश्रवणेऽपि तृतीये 'आध्यानाय प्रयोजनाभावात्' इति वक्ष्यमाणन्यायेनान्यथानुपपत्त्या सर्वत्रोपासनालाभादिति भावः ।

ಶ್ರುತಿಯಲ್ಲಿ 'ಅಯಮ್ ಅವಸಥ' ಎಂದು ಕಣ್ಣು, ಕಂಠ ಮತ್ತು ಹೃದಯವೆಂಬ ಮೂರು ಸ್ಥಾನವನ್ನು ಹೇಳಿದ್ದರಿಂದ 'ಪ್ರಾಪದ್ಯತೇ' ಎಂಬುದರಿಂದ ವಿವಕ್ಷಿತವಾದ ಕರ್ಮವನ್ನು "ಹೃದಯಂ ಪ್ರಾಪ್ತಃ" ಎಂಬುದರಿಂದ ಹೇಳುತ್ತಿದ್ದಾರೆ. ಶ್ರುತಿಯಲ್ಲಿರುವ 'ಸಃ' ಎಂಬ ಪದಕ್ಕೆ ಪ್ರಾಗಂತಃಸ್ಥಃ ಎಂಬುದಾಗಿ ಅರ್ಥೈಸಿದ್ದಾರೆ. ಅಂದರೆ 'ತಂ ಪ್ರಪದಾಭ್ಯಾಂ ಪ್ರಾಪದ್ಯತೇ' ಇತ್ಯಾದಿ ಮಾತಿನಂತೆ ಕಾಲಿನ ಮುಂಭಾಗದಲ್ಲಿ ಪ್ರವೇಶಹೊಂದಲ್ಪಟ್ಟ ನಾರಾಯಣನು ಎಂದರ್ಥ. 'ಏತಮ್' ಎಂಬುದರ ಅರ್ಥವನ್ನು 'ಪ್ರಾಪ್ತಮ್' ಎಂದು ಹೇಳಿದ್ದಾರೆ. ಅಂದರೆ ಸುಷುಮ್ನಾನಾಡಿಯಿಂದ ಹೃದಯವನ್ನು ಹೊಂದಿದ ವಾಸುದೇವನನ್ನು ಎಂದರ್ಥ. 'ಆತ್ಮಾನಂ' ಸ್ವಾತ್ಮರೂಪವನ್ನು. ತತಮಂ = ಗುಣಪೂರ್ಣನಾದ ಬ್ರಹ್ಮನನ್ನು.

ಸ ಸರ್ವಗುಣಸಂಪೂರ್ಣಂ ಸರ್ವಗಂ ನಿತ್ಯಮವ್ಯಯಮ್ ।
ಏತದೇವ ಸ್ವರೂಪಂ ಸ ತ್ವಪಶ್ಯದವತಾರಗಮ್ ।

ಸರ್ವಗುಣಪೂರ್ಣನಾದ ಎಲ್ಲೆಡೆ ವ್ಯಾಪ್ತನಾಗಿರುವ ನಿತ್ಯನಾದ ನಾಶರಹಿತನಾದ ಅವತಾರದಲ್ಲಿರುವ ಪರಮಾತ್ಮನ ಸ್ವರೂಪವನ್ನೇ ಬ್ರಹ್ಮನು ನೋಡಿದನು ಎಂದು ಅದರ ಭಾಷ್ಯದಲ್ಲಿ ಹೇಳಿದಂತೆ ಶ್ರುತಿಗೆ ಅರ್ಥವನ್ನು ಹೇಳಬೇಕು.

"ನೋಪಾಸನಾರ್ಥಮ್" ಎಂದು ಟೀಕೆಯಲ್ಲಿದೆ. 'ಆತ್ಮಾನಮೇವ ಲೋಕಮುಪಾಸೀತ' ಎಂಬಂತೆ ಪ್ರಕೃತ ಉಪಾಸನಾ ಎಂಬ ಪದವು ಕೇಳಿಸುತ್ತಿಲ್ಲವೆಂದು ಅಭಿಪ್ರಾಯ. "ಉಕ್ತಿಪ್ರಯೋಜನಾಭಾವಾತ್" ಎಂದರೆ ನೇರವಾಗಿ ಉಪಾಸನೆಯು ಕೇಳಿಸದಿದ್ದರೂ ಮೂರನೆಯ ಅಧ್ಯಾಯದ 'ಆಧ್ಯಾನಾಯ ಪ್ರಯೋಜನಾಭಾವಾತ್' ಎಂಬ ಸೂತ್ರದಿಂದ ಅನ್ಯಥಾನುಪಪತ್ತಿಪ್ರಮಾಣದ ಆಧಾರದಲ್ಲಿ ಸರ್ವತ್ರೋಪಾಸನೆಯು ಲಭಿಸುತ್ತದೆಂದು ಅಭಿಪ್ರಾಯ.

भावदीपः– 'एतद्ध स्म वै तद्विद्वानाह हिरण्यदन् बैदः' इत्यादिवत् महिदासोऽपि ऋषितयोच्यताम्, इत्यत आह – **न हीति** ॥ **वैय्यर्थ्यादेवेति** ॥ अस्या उपनिषद

इतरेयसञ्ज्ञयैव इतरापुत्रस्य महिदासस्य ऋषित्वंसिद्ध्या तदुक्तिवैय्यर्थ्यादिति भावः । अर्थान्तराणि त्वस्य चन्द्रिकायामुक्तानि* ।

यत् तु ऐतरेयभाष्ये प्रथमाध्याये आह 'महिदास ऐतरेयः' इति तु सर्वस्यैव वचनस्य तदीयत्वप्रदर्शनार्थम् । नतु सन्निहितस्यैव । 'यथेन्द्र कुत्स' इत्यादि । यथा 'पूर्वं तु बादरायणो हेतुव्यपदेशात् इत्यादि' इति मुनित्वोक्तिभाषणम्, तत् तु प्रसिद्धस्यापि मुनित्वस्य स्मारणार्थं श्रुतावुक्तेरावश्यकत्वेन मुनित्वस्याभिप्रेतत्वाभिप्रायम् । अत एव टीकायां 'मुनितयैव' इत्यवधारणम् ।

'ಏತದ್ಧ ಸ್ಮ ವೈ ತದ್ವಿದಾನಾಹ ಹಿರಣ್ಯದನ್ ಬೈದಃ' ಎಂಬಂತೆ ಮಹಿದಾಸನೂ ಸಹ ಋಷಿಯೆಂದು ಏಕೆ ಹೇಳಬಾರದು? ಎಂಬ ಪ್ರಶ್ನೆಗೆ "ನಹಿ ಮಹಿದಾಸಃ" ಎಂದು ಉತ್ತರಿಸಿದ್ದಾರೆ. "ವೈಯ್ಯರ್ಥ್ಯಾದೇವ" ಎಂಬುದಕ್ಕೆ ಹೀಗರ್ಥ. ಈ ಉಪನಿಷತ್ತಿಗೆ ಐತರೇಯ ಎಂದೇ ಹೆಸರು. ಈ ಹೆಸರಿನಿಂದಲೇ ಇತರಾದೇವಿಯ ಮಗನಾದ ಮಹಿದಾಸನು ಋಷಿಯೆಂದು ಸುಲಭವಾಗಿ ತಿಳಿಯುತ್ತದೆ. ಪುನಃ ಪ್ರತ್ಯೇಕವಾಗಿ ಮಹಿದಾಸನನ್ನು ಋಷಿಯೆಂದು ಹೇಳುವ ಅವಶ್ಯಕತೆ ಇಲ್ಲ ಎಂದು. ಹೆಚ್ಚಿನ ಅರ್ಥಗಳನ್ನು ತಾತ್ಪರ್ಯಚಂದ್ರಿಕೆಯಲ್ಲಿ ಹೇಳಿದ್ದಾರೆ.

ಐತರೇಯಭಾಷ್ಯದ ಪ್ರಥಮಾಧ್ಯಾಯದಲ್ಲಿ ಮಹಿದಾಸಃ ಐತರೇಯಃ ಎಂದು ಹೇಳಿದ್ದು ಎಂದರೆ ಸಕಲ ಮಾತುಗಳು ಮಹಿದಾಸನದ್ದೇ ಹೊರತು ಬೇರೆಯವರದ್ದಲ್ಲ ಎಂದು ತಿಳಿಸಲು ಮಾತ್ರ ಹೊರತು ಹತ್ತಿರದಲ್ಲಿರುವ ಪ್ರಕರಣವನ್ನು ಮಾತ್ರ ಮಹಿದಾಸನು ಉಪದೇಶಿಸಿದ್ದಾನೆಂದು ಅರ್ಥವಲ್ಲ. 'ಯಥೇಂದ್ರ ಕುತ್ಸ' ಎಂಬುದು. ಯಾವ ರೀತಿಯಾಗಿ 'ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್' ಎಂಬ ಸೂತ್ರದಲ್ಲಿ 'ಬಾದರಾಯಣ ಋಷಿಗಳು ಹೇಳಿದ್ದಾರೆ' ಎಂದರೆ ಈ ವಿಷಯವನ್ನು ಹೇಳಿದ್ದಾರೆಂದಷ್ಟೇ ಅಲ್ಲ ಹೊರತು ಪ್ರಸಿದ್ಧವಾದ ಮಾತು ವೇದವ್ಯಾಸರಿಂದ ಹೇಳಲ್ಪಟ್ಟಿದೆ ಎಂಬುದನ್ನು ತಿಳಿಸಲು ಮಾತ್ರ. ಅದರಂತೆ ಪ್ರಕೃತದಲ್ಲಿಯೂ ತಿಳಿಯಬೇಕು. ಆದ್ದರಿಂದಲೇ ಟೀಕೆಯಲ್ಲಿ 'ಮುನಿತಯೈವ' ಎಂಬಲ್ಲಿ ಅವಧಾರಣಾರ್ಥದಲ್ಲಿರುವ ಏವಕಾರವನ್ನು ಹೇಳಿದ್ದಾರೆ.

---

— मुनितयैवेति ॥ एतद्ध स्म वै तद्विद्वानाह हिरण्यदन् बैदः' इत्यादिवत् मुनितयैवोच्यते नोपास्यतया इत्यर्थः । मुनित्वं त्वस्या उपनिषद ऐतरेयसञ्ज्ञयैव सुज्ञातत्वेन पुनस्तत्कथनवैयर्थ्यादित्यर्थः । यद्वानृषिमात्रत्वे महिदासस्य 'इतः प्रदानाद्धेत इतः सम्भृता' इति देवतापदप्रापकत्वादीनामुपास्यब्रह्मधर्माणामुक्तिनैष्फल्यादित्यर्थः । यद्वा, 'मुनितयैवोच्यते नोपास्त्यर्थम्' इत्युक्तम् । उपास्त्यर्थं विना मुनितयोक्तेः वैय्यर्थ्यात् । हयग्रीवादीनामपि मुनितयोपास्त्यर्थमेव 'तदुक्तमृषिणा' इत्यादौ तत्र तत्रोक्तेः । हिरण्यदन् बैदादीनां मुनितया स्मर्तव्यत्वेप्यभगवत्वान्न प्रतिपाद्यतयोपास्यत्वं, महिदासस्य तु वाच्यवक्तृत्वस्वरूपेणेति भेद इति भावः । – (वाक्यार्थमुक्तावली)

## ಮೂರುಬಗೆಯ ಅಧಿಕಾರಿಗಳಿಗಾಗಿ ಮೂರು ಉಪಾಸನೆ

**भाष्यम्– तत्तदुपासनायोग्यतया च पुरुषाणाम् । 'केषांश्चित् सर्वगत्वेन केषाश्चिद्धृदये हरिः । केषाश्चिद् बहिरेवासावुपास्यः पुरुषोत्तमः ॥' इति ब्राह्मे ॥**

**'अग्नौ क्रियावतां विष्णुर्योगिनां हृदये हरिः । प्रतिमास्वप्रबुद्धानां सर्वत्र विदितात्मनाम् ॥' इति च ॥ ॥ ३१ ॥**

**॥ इति पादान्त्यप्राणाधिकरणम् ॥**

**॥ इति श्रीमदानन्दतीर्थभगवत्पादाचार्यविरचिते श्रीमद्ब्रह्मसूत्रभाष्ये प्रथमाध्यायस्य प्रथमः पादः ॥**

ಮೂರು ವಿಧವಾದ ಉಪಾಸನೆಗೆ ಯೋಗ್ಯರಾದ ಅಧಿಕಾರಿಗಳು ಭಿನ್ನ ಭಿನ್ನ ರಾಗಿದ್ದಾರೆ. ಶ್ರೀಹರಿಯು ದೇವತೆಗಳಿಗೆ ವ್ಯಾಪ್ತನೆಂದು ಉಪಾಸ್ಯನಾಗಿದ್ದಾನೆ. ಋಷಿಗಂಧರ್ವಾದಿಗಳಿಗೆ ಹೃದಯದಲ್ಲಿ, ಮನುಷ್ಯೋತ್ತಮರಿಗೆ ಬಾಹ್ಯರೂಪದಿಂದ ಉಪಾಸ್ಯನಾಗಿದ್ದಾನೆ. ಹೀಗೆ ಬ್ರಹ್ಮಾಂಡಪುರಾಣದಲ್ಲಿ ಹೇಳಲ್ಪಟ್ಟಿದೆ.

ಮತ್ತು 'ಯಜ್ಞಾದಿ ಕರ್ಮಾನುಷ್ಠಾನಶೀಲರಿಗೆ ಅಗ್ನಿಯಲ್ಲಿ, ಯೋಗಿಗಳಿಗೆ ಹೃದಯದಲ್ಲಿ, ಅಜ್ಞಾನಿಗಳಿಗೆ ಪ್ರತಿಮೆಯಲ್ಲಿ ಪರಮಾತ್ಮನು ಉಪಾಸ್ಯನಾಗಿದ್ದಾನೆಂದೂ ಸಹ ಹೇಳಲ್ಪಟ್ಟಿದೆ.

---

**भाष्यदीपिका** – नन्वेकविधोपासनया सर्वेषां ब्रह्मापरोक्षसम्भवात् किमुपासात्रैविध्येन इत्यतः प्रवृत्तं 'तद्योगात्' इति सूत्रशेषं व्याचष्टे – तत्तदिति ॥ उपासनेत्यनेन पुरुषाणामित्यनेन च तदित्यस्याऽवृत्तिः सूचिता । चः समुच्चये । तथा च तेषां पुरुषाणां मनुष्यर्षिगन्धर्वदेवाख्याधिकारिणां तेषु त्रिविधोपासनेषु मध्ये तत्तदुपासने यथाक्रमं बहिरन्तर्व्याप्तिरूपैकैकोपासन एव योग्यतया योग्यत्वेन हेतुनेत्यर्थः । अस्योपासात्रैविध्यादित्यनेनान्वयः । तथा चानेकविधोपास्तियोग्यतावतामधिकारिणां नैकविधोपासनया ब्रह्मज्ञानमिति तत्त्रैविध्यमावश्यकमिति भावः ।

पुरुषाणामुक्तानेकविधोपासनयोग्यता कुतो ज्ञायत इत्यतः कर्तृविशेषाननुपादाय सामान्यतः उपासकत्रैविध्यप्रतिपादिकां स्मृतिं पठति – केषाश्चिदिति ॥ 'पुरुषोत्तमो' हरिः 'केषाश्चित्' देवानां देवैः सर्वगतत्वेन प्रकारेणोपास्यः । 'केषाश्चित्' ऋषिगन्धर्वादीनां 'हृदये' स्वस्वहृदयाकाशे उपास्यः । 'केषाश्चित्' मनुष्योत्तमानां तु बहिरेवोपास्य इत्यर्थः । प्राचुर्यादेवमुक्तिः । इति ब्राह्म इत्यस्य तत्तदुपासनयोग्यतया तद्विशिष्टत्वेन पुरुषाणामाश्रितत्वादुक्तत्वादिति पूर्वेणान्वयः ।

ಪ್ರತಿಪದಾರ್ಥ - ಒಂದು ಪ್ರಕಾರದ ಉಪಾಸನೆಯಿಂದಲೇ ಎಲ್ಲರಿಗೂ ಅಪರೋಕ್ಷವಾಗುತ್ತದೆ. ಹೀಗಿರುವಾಗ ಮೂರು ಬಗೆಯ ಉಪಾಸನೆಯನ್ನು ಹೇಳಲು ಏನು ಕಾರಣ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಪುರುಷಾಣಾಂ = ಸಾಧಕರಿಗೆ, ತತ್ತದುಪಾಸನಾಯೋಗ್ಯತಯಾ ಚ = ಅವರವರು ಮಾಡಬೇಕಾದ ಉಪಾಸನಾ ಯೋಗ್ಯತೆಗೆ ಅನುಸಾರಿಯಾಗಿ, ಸ ಹಿ = ಶ್ರೀಹರಿಯು, ಕೇಷಾಂಚಿತ್ = ಕೆಲವು ದೇವತೆಗಳಿಗೆ, ಸರ್ವಗತತ್ವೇನ = ಎಲ್ಲೆಡೆ ವ್ಯಾಪ್ತನಾಗಿ, ಕೇಷಾಂಚಿತ್ = ಇನ್ನು ಕೆಲವು ಋಷಿಗಳಿಗೆ, ಹೃದಯೇ = ತಮ್ಮ ತಮ್ಮ ಹೃದಯಕಮಲದಲ್ಲಿ, ಕೇಷಾಂಚಿತ್ = ಮತ್ತು ಕೆಲವರಾದ ಮನುಷ್ಯೋತ್ತಮರಿಗೆ, ಬಹಿಃ = ರಾಮಕೃಷ್ಣಾದಿ ಅವತಾರರೂಪಗಳಿಂದ, ಪುರುಷೋತ್ತಮಃ = ಪುರುಷಶ್ರೇಷ್ಠನಾದ ಅಸೌ = ಈ ಪರಮಾತ್ಮನು, ಉಪಾಸ್ಯಃ = ಮೂರು ಬಗೆಯಲ್ಲಿ ಉಪಾಸ್ಯನಾಗಿದ್ದಾನೆ, ಇತಿ = ಹೀಗೆ, ಬ್ರಾಹ್ಮೇ = ಬ್ರಹ್ಮಾಂಡಪುರಾಣದಲ್ಲಿ ಹೇಳಲಾಗಿದೆ.

---

अत्रैवाधिकरणे कर्तृविशेषप्रतिपादकं विशेषप्रमाणमाह – अग्नाविति ॥ विष्णुः 'क्रियावतां' यज्ञादिक्रियानुष्ठातॄणाम् 'अग्नौ' गार्हपत्यादावुपास्यः हरिः । 'योगिनाम्' ऋषीणां हृदये उपास्यः । 'अप्रबुद्धानां' मन्दमतीनामत्यल्पप्रतिभानां मनुष्योत्तमानां 'प्रतिमासु' कृष्णरामादिविग्रहेषु उपास्यः । 'विदितात्मनां' विशेषतो ज्ञातभगवद्रूपाणाम् अश्रुतप्रतिभानां देवानां तु 'सर्वत्र' सर्वस्थानेषूपास्य इत्यर्थः । अत्राग्नौ प्रतिमास्विति वाक्यद्वयेन बहिर्मात्रोपासनोपलक्ष्यते । अत एव स्थानद्वयोक्तिः । यथाश्रुते सूर्यादौ विष्णूपास्तेर्बहिरुपास्तित्वं न स्यात् । योगिनामित्यनेनान्तरुपास्तिरुक्ता ।

'ऋषयोऽन्तःप्रकाशाः' इति श्रुतेः । सर्वत्रेति सर्वगतोपास्तिरिति ज्ञातव्यम् । न चात्र 'येषां बहिरुपासनेन मोक्षस्तेषामपि हृद्युपासनं किञ्चित्कार्यमेव' इति बृहद्भाष्येण 'भगवान् बिम्बदर्शनेनैनं मोचयति' इति न्यायविवरणेन च विरोधः शङ्क्यः । अग्नाविति वाक्येऽन्यनिषेधाभावेन बिम्बशब्दितस्वस्वयोग्यात्मापरोक्षार्थं हृद्युपासनस्यापि सर्वैः कार्यत्वाभ्युपगमात् । मोचकयोग्यापरोक्षद्वारभूता वताराद्यपरोक्षसाधनोपासनाया एव तैस्तैः प्राचुर्येण प्रकरणस्याग्नाविति वाक्येन व्यवस्थया प्रतिपादनाच्च । इति चेति ॥ चः समुच्चये । वचनद्वयस्याप्येकार्थसाधकत्वादस्यापि ब्राह्मे आश्रितत्वादिति पूर्वेणान्वयः । तत्तदुपासनयोग्यतावत्त्वेन पुरुषविशेषाणामुक्तत्वादिति तदर्थः । अतो न तद्योगादिति हेत्वसिद्धिः शङ्क्येति भावः ।

अनेन नात्रोक्तप्राणो विष्णुः, किन्तु जीवमुख्यप्राणावेव । कुतः ? 'जीवमुख्यप्राणलिङ्गात्' शतायुष्ट्वरूपजीवलिङ्गस्य प्राणसंवादादिरूपमुख्यप्राणलिङ्गस्य चेह श्रवणादिति चेत् – न, विष्णुरेवायं प्राणः, न जीवादिः । कुतः ? 'अनुगमात्' हेतोरेव, न चान्यश्रुतिलिङ्गविरोधः । उक्तरीत्या 'तद्योगात्' तेषामन्तर्यामिविषयत्वोपपत्तेः । यतः शास्त्रदृष्ट्याऽयम् उपदेश इति वा । किमर्थमत्रान्तर्यामिकथनमिति चेत्, अन्तरुपास्त्यर्थमिति

ಮತ್ತು ಕ್ರಿಯಾವತಾಂ = ಯಜ್ಞಕರ್ಮಾನುಷ್ಠಾನಶೀಲರಿಗೆ, ಅಗ್ನೌ = ಅಗ್ನಿಯಲ್ಲಿ, ವಿಷ್ಣುಃ = ಪರಮಾತ್ಮನು, ಯೋಗಿನಾಂ = ಯೋಗಿಗಳಿಗೆ, ಹೃದಯೇ = ತಮ್ಮ ಹೃದಯ-ಕಮಲದಲ್ಲಿ, ಹರಿಃ = ಶ್ರೀಹರಿಯು, ಉಪಾಸ್ಯಃ = ಉಪಾಸನೆ ಮಾಡಲು ಅರ್ಹನಾಗಿ-ದ್ದಾನೆ. ಅಪ್ರಬುದ್ಧಾನಾಮ್ = ಅಜ್ಞಾನಿಗಳಿಗೆ, ಪ್ರತಿಮಾಸು = ಪ್ರತಿಮೆಗಳಲ್ಲಿ, ಉಪಾಸ್ಯಃ = ಉಪಾಸನೆ ಮಾಡಲು ಅರ್ಹನಾಗಿದ್ದಾನೆ. ಇತಿ ಚ = ಈ ಬಗೆಯಲ್ಲಿಯೂ ಉಪಾಸನಾ ವೈವಿಧ್ಯ ಇರುವುದರಿಂದ, ವಿಷ್ಣುವೇ ಪ್ರಾಣಶಬ್ದವಾಚ್ಯನೆಂದು ಸಿದ್ಧವಾಯಿತು.

**(तत्व) नन्वेकविधोपासनया (सर्वेषां) ब्रह्मापरेक्षसम्भवात् किमुपासात्रैविध्येन इत्यतः सूत्रशेषं व्याचष्टे – तत्तदिति ॥ नैकविधोपासनया सर्वेषां ब्रह्मज्ञानम् । अन्तरादित्रिविधोपासनायोग्यत्वादित्यर्थः । कुतः पुरुषाणामुक्तानेकविधोपास्तियोग्यतेत्यत आह – केषाञ्चिदिति ॥ अत्रैव विशेषप्रमाणमाह – अग्नाविति ॥ अग्नौ प्रतिमास्विति बहिरुपासनोपलक्षणम् । अतोऽन्यलिङ्गानां तदन्तर्यामिविवक्षयोपपत्तेर्विष्णुरेवायं प्राण आनन्दमयश्चेति युक्ता तज्जिज्ञासेति सिद्धम् ॥३१॥**

**॥इति श्रीजयतीर्थभिक्षुविरचितायां तत्वप्रकाशिकायां पादान्त्यप्राणाधिकरणम् ॥**

**प्रथमोऽध्यायस्य प्रथमपादः सम्पूर्णम्**

ಒಂದೇ ಪ್ರಕಾರವಾಗಿ ಬ್ರಹ್ಮನನ್ನು ಉಪಾಸನೆ ಮಾಡಿದರೆ ಸಾಕು ಅಪರೋಕ್ಷವಾಗುತ್ತದೆ. ಹೀಗಿರುವಾಗ ಮೂರುವಿಧ ಉಪಾಸನೆಯನ್ನು ಏಕೆ ಹೇಳಿದರು? ಎಂಬ ಪ್ರಶ್ನೆಗೆ ಸೂತ್ರಶೇಷವನ್ನು

---

ब्रूमः । न चोपासनेऽवान्तरभेदाभावः । 'उपासात्रैविध्यात्' अन्तरादिभेदेन भगवदुपासनस्य त्रिविधत्वात् । न च तथाऽपि कथनमयुक्तम् । वास्तवत्रैविध्यस्येहानुक्तस्य कथनाप्रयोजकत्वादिति वाच्यम् । 'इह' प्रकरणे तत्त्रैविध्यस्याऽश्रितत्वादुक्तत्वात् । न चैकविधोपासनया सर्वेषां ब्रह्मापरोक्षसम्भवात् किमुपासात्रैविध्येनेति वाच्यम् । 'तद्योगात्' तेषां पुरुषाणां तस्मिन् तदुपासन एव योग्यत्वात् । अनेकविधोपास्तियोग्यतावतां च पुरुषाणामेकविधोपासनयाऽपरोक्षासम्भवेन योग्यताभेदादुपासात्रैविध्यस्याऽवश्यकत्वादिति सूत्रार्थ उक्तो भवति । न च विवादकर्तृत्वलिङ्गस्यान्तर्यामिविषयत्वे 'उदासीनौ च तावास्तां केशवश्चाब्जसम्भवः' इति वचनविरोधः शङ्क्यः । तस्यान्तर्यामिविषयभिन्नबाह्यरूपविषयत्वात् । अतोऽन्यलिङ्गानां तत्तदन्तर्यामिविषयत्वोपपत्तेः तद्विरोधाभावात् । विष्णुरेवायं प्राणः आनन्दमयश्चेति युक्ता तज्जिज्ञासेति सिद्धम् । ॥ इति पादान्त्यप्राणाधिकरणम् ॥

**॥ इति श्रीमत्परमहंसपरिव्राजकाचार्याणां सर्वतन्त्रस्वतन्त्राणां श्रीमद्रघुनाथतीर्थपूज्यपादानां शिष्येण श्रीमज्जगन्नाथयतिना कृतायां श्रीमद्ब्रह्मसूत्रभाष्यदीपिकायां प्रथमाध्यायस्य प्रथमः पादः ॥**

''ತತ್ತತ್'' ಎಂಬುದಾಗಿ ವ್ಯಾಖ್ಯಾನಿಸುತ್ತಿದ್ದಾರೆ. ಒಂದೇ ವಿಧವಾದ ಉಪಾಸನೆಯಿಂದ ಎಲ್ಲರಿಗೂ ಅಪರೋಕ್ಷವಾಗುವುದಿಲ್ಲ. ಅಂತರುಪಾಸನೆ ಮೊದಲಾದ ವಿಭಿನ್ನವಾದ ಉಪಾಸನೆಗಳಿಂದ ವಿಭಿನ್ನ ಯೋಗ್ಯತೆಯುಳ್ಳ ಪುರುಷರಿಗೆ ಅಪರೋಕ್ಷವಾಗುತ್ತದೆಂದು ತಿಳಿಸಲು ''ಕೇಷಾಂಚಿತ್'' ಎಂಬ ವಾಕ್ಯವು ಹೊರಟಿದೆ. ಈ ವಿಷಯದಲ್ಲಿ ವಿಶೇಷಪ್ರಮಾಣವನ್ನು ''ಅಗ್ನೌ'' ಎಂಬುದರಿಂದ ಹೇಳುತ್ತಿದ್ದಾರೆ. 'ಅಗ್ನೌ ಪ್ರತಿಮಾಸು' ಎಂಬುದು ಬಹಿರುಪಾಸನೆಗೆ ಉಪಲಕ್ಷಣವಾಗಿದೆ. ಆದ್ದರಿಂದ ಅಂತರ್ಯಾಮಿ ವಿವಕ್ಷೆಯಿಂದ ಅನ್ಯಲಿಂಗಗಳು ಉಪಪನ್ನವಾಗುತ್ತವೆ. ಹಾಗಾಗಿ ವಿಷ್ಣುವೇ ಪ್ರಾಣಶಬ್ದವಾಚ್ಯನು. ಅವನೇ ಆನಂದಮಯನು. ಅವನ ಜಿಜ್ಞಾಸೆಯು ಅವಶ್ಯಕರ್ತವ್ಯವಾಗಿದೆಯೆಂದು ನಿರ್ಣಯವಾಯಿತು.

ಇಲ್ಲಿಗೆ ತತ್ತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ ಅಂತಿಮಪ್ರಾಣಾಧಿಕರಣವು ಮುಗಿಯಿತು.

**भावदीपः** – 'तत्' इति परामृष्टमाह – **अन्तरादीति** ॥ **विशेषेति** ॥ उपासके अधिष्ठाने च विशेषोक्तेरिति भावः । नन्वत्र उपासनाचतुष्टयमुच्यते बहिरुपासनं च नोच्यत इत्यत आह – **अग्नाविति** ॥ भाष्योक्तस्मृतौ 'बहिरेव' इति, 'अग्नौ' इति, 'प्रतिमासु' इति चोक्तिर्बाहुल्याभिप्राया । द्वितीये बृहद्भाष्ये 'येषां बहिरुपासनेन मोक्षस्तेषां हृद्युपासनं किञ्चित् कर्तव्यमेव' इत्युक्तेः अत्र मिथ्योपास्तेः 'न प्रतीके न हि सः' इति चतुर्थाद्यपादे निरसिष्यमाणत्वात् ।

'ततमम्' इति व्याप्तत्वेनोक्तस्य शरीरहृदयस्थितेः, ब्रह्माण्डस्य सर्षपान्तःस्थितेरिव अवास्तवत्वात् त्रैविध्यमयुक्तम्- इति तु उत्तराधिकरणे 'व्योमवत्' इति समाधास्यते इति भावः ।

ತತ್‌ಶಬ್ದದಿಂದ ಪರಾಮರ್ಶಿಸಿದ್ದನ್ನು ''ಅಂತರಾದಿವಿವಿಧೋಪಾಸನಾ'' ಇತ್ಯಾದಿಯಾಗಿ ಹೇಳಿದ್ದಾರೆ. ''ವಿಶೇಷಪ್ರಮಾಣಮಾಹ'' ಎಂದರೆ ಉಪಾಸಕನಲ್ಲಿ ಮತ್ತು ಅಧಿಷ್ಠಾನದಲ್ಲಿ ವಿಶೇಷವಾದ ಪ್ರಮಾಣವನ್ನು ಹೇಳುತ್ತಿದ್ದಾರೆಂದರ್ಥ. ಇಲ್ಲಿ ನಾಲ್ಕುವಿಧ ಉಪಾಸನೆಯನ್ನು ಹೇಳುತ್ತಿದ್ದಾರೆ. ಮತ್ತು ಬಹಿರುಪಾಸನೆಯನ್ನು ಹೇಳುತ್ತಿಲ್ಲವಲ್ಲ? ಎಂಬ ಪ್ರಶ್ನೆಗೆ ''ಅಗ್ನೌ ಪ್ರತಿಮಾಸು'' ಎಂಬ ಟೀಕೆಯು ಹೊರಟಿದೆ. ಭಾಷ್ಯದಲ್ಲಿ ಹೇಳಲ್ಪಟ್ಟ ಸ್ಮೃತಿಯಲ್ಲಿ 'ಬಹಿರೇವ' 'ಅಗ್ನೌ ಪ್ರತಿಮಾಸು' ಎಂಬ ಮಾತುಗಳು ಬಹಳವಾದ ಉಪಾಸನೆಯ ಅಭಿಪ್ರಾಯದಿಂದ ಇರುತ್ತವೆ. ಏಕೆಂದರೆ ದ್ವಿತೀಯಾಧ್ಯಾಯದ ಬೃಹದಾರಣ್ಯಕಭಾಷ್ಯದಲ್ಲಿ ಯಾರು ಬಹಿರುಪಾಸನೆಯಿಂದ ಮೋಕ್ಷವನ್ನು ಹೊಂದುತ್ತಾರೋ, ಅವರೂ ಸಹ ಸ್ವಲ್ಪವಾದರೂ ಹೃದಯಲ್ಲಿ ಉಪಾಸನೆ ಮಾಡಬೇಕೆಂದು ಹೇಳಿದ್ದಾರೆ. ಮಿಥ್ಯೋಪಾಸನೆಯನ್ನೇ ಇಲ್ಲಿ ಹೇಳಿರಬಹುದಲ್ಲವೆ? ಎಂಬ ಪ್ರಶ್ನೆಗೆ ಚತುರ್ಥಾಧ್ಯಾಯದ ಮೊದಲನೆಯ ಪಾದದಲ್ಲಿರುವ 'ನ ಪ್ರತೀಕೇ ನ ಹಿ ಸಃ' ಎಂಬ ಸೂತ್ರದಲ್ಲಿ ಮಿಥ್ಯೋಪಾಸನೆಯನ್ನು ನಿರಾಕರಿಸಿದ್ದಾರೆ.

'ತತಮಮ್' ಎಂದು ಎಲ್ಲೆಡೆ ವ್ಯಾಪ್ತನಾಗಿದ್ದಾನೆಂದು ಹೇಳಿದ್ದರಿಂದ ಕೇವಲ ಶರೀರ ಹಾಗೂ ಹೃದಯದಲ್ಲಿದ್ದಾನೆಂದು ಹೇಳಲು ಸಾಧ್ಯವಿಲ್ಲ. ಹಾಗೆ ಹೇಳಿದರೆ ಸಾಸುವೆಕಾಳಿನ ಒಳಗೆ ಬ್ರಹ್ಮಾಂಡವು ಇದೆಯೆಂದು ಹೇಳಿದಂತಾಗುತ್ತದೆ. ಇದು ಅವಾಸ್ತವವಾದ್ದರಿಂದ ಉಪಾಸನೆಯಲ್ಲಿ ಮೂರು ಬಗೆಯನ್ನು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆ ತಪ್ಪು. ಮುಂದಿನ ಅಧಿಕರಣದಲ್ಲಿ 'ವ್ಯೋಮವತ್' ಎಂಬುದರಿಂದ ಇದಕ್ಕೆ ಉತ್ತರಿಸುತ್ತೇವೆ.

भा.दी. – **'अन्यगतलिङ्गादीनां तदन्तर्गतभगवदपेक्षया युक्तेः'** इति न्यायविवरणोक्तेः सबीजतां दर्शयन् अधिकरणार्थं फलोक्त्योपसंहरति – **अत इति** ॥ 'निरवकाशानेकश्रुतिलिङ्गाभ्यासात्' इति 'अनुगमात्' इत्यस्यार्थः । 'अन्यगतलिङ्गानाम्' इत्युपलक्षणम् । 'प्राणो वा अहमस्मि इत्युपदेशस्यापि' इत्यपि ध्येयम् । अयं च 'न वक्तुः' इत्यादिसूत्रत्रयार्थः ।

'प्राणस्तथा' इति प्रतिज्ञांशार्थमाह – **विष्णुरेवायं प्राण इति** ॥ 'बलवदन्यप्रापकलिङ्गोपेताशेषनामोपलक्षकः' इत्यपि ध्येयम् । 'आनन्दमयश्च' इति फलोक्तिः । 'प्राचीनप्राणद्वारा' इति भावः । **'तज्जिज्ञासा'**= विष्णुजिज्ञासा ।

यत् तु 'प्राणोस्मि प्रज्ञात्माऽहं ममायुरमृतमुपास्व' इति कौषीतकब्राह्मणवाक्यमेव अत्रोदाहार्यं न तु ऐतरेयवाक्यम् । तत्र 'प्राणस्त्वम्' 'प्राणः सर्वाणि भूतानि' इति सर्वात्मकरूपब्रह्मलिङ्गस्य श्रवणेन सन्देहादेरयोगात् - इति । तत्तु चन्द्रिकाप्रकाशे निरस्तं बोध्यम् ॥३१॥

**॥ इति श्रीमद्राघवेन्द्रयतिकृते तत्वप्रकाशिकाभावदीपे प्रथमाध्यायस्य प्रथमपादः॥**

'ಅನ್ಯಗತಲಿಂಗಾದೀನಾಂ ತದಂತರ್ಗತಭಗವದಪೇಕ್ಷಯಾ ಯುಕ್ತೇಃ' (ಬೇರೆಯವರಲ್ಲಿರುವ ಲಿಂಗಾದಿಗಳನ್ನು ಅವರ ಅಂತರ್ಗತನಾದ ಭಗವಂತನಲ್ಲಿ ಕೂಡಿಸಬೇಕು) ಎಂದು ನ್ಯಾಯವಿವರಣದಲ್ಲಿ ಹೇಳಿದಂತೆ ಇದಕ್ಕೆ ಕಾರಣವನ್ನು ತೋರಿಸುತ್ತಾ ಅಧಿಕರಣದ ಪ್ರಮೇಯವನ್ನು ಫಲವನ್ನು ಹೇಳುವ ಮೂಲಕ "ಅತಃ" ಇತ್ಯಾದಿಯಾಗಿ ಉಪಸಂಹಾರವನ್ನು ಮಾಡುತ್ತಿದ್ದಾರೆ. 'ಅನುಗಮಾತ್' ಎಂಬ ಪದದ ಅರ್ಥವನ್ನು "ನಿರವಕಾಶಾನೇಕಶ್ರುತಿಲಿಂಗಅಭ್ಯಾಸಾತ್" ಎಂದು ಹೇಳಿದ್ದಾರೆ. 'ಅನ್ಯಗತಲಿಂಗಾನಾಮ್' ಎಂಬುದು ಕೇವಲ ಉಪಲಕ್ಷಣ. 'ಪ್ರಾಣೋ ವಾ ಅಹಮಸ್ಮಿ' ಎಂಬ ಉಪದೇಶವಾಕ್ಯವನ್ನು ಇಲ್ಲಿ ವಿವಕ್ಷಿಸಬೇಕು. ಈ ವಿಚಾರವು 'ನ ವಕ್ತುಃ' ಇತ್ಯಾದಿ ಮೂರು ಸೂತ್ರಗಳ ಅಭಿಪ್ರಾಯವಾಗಿದೆ.

'ಪ್ರಾಣಸ್ತಥಾ' ಎಂಬ ಸೂತ್ರದ ಪ್ರತಿಜ್ಞಾಭಾಗದ ಅರ್ಥವನ್ನು "ವಿಷ್ಣುರೇವಾಯಂ ಪ್ರಾಣಃ" ಎಂಬುದಾಗಿ ಹೇಳಿದ್ದಾರೆ. ಬಲಿಷ್ಠವಾದ ಅನ್ಯಪ್ರಾಪಕವಾದ ಲಿಂಗಗಳಿಂದ ಕೂಡಿದ ಸಕಲ ನಾಮಗಳನ್ನು

ಉಪಲಕ್ಷಣವಾಗಿ ಸ್ವೀಕರಿಸಬೇಕು. 'ಆನಂದಮಯಃ ಚ' ಎಂಬುದಾಗಿ ಅಧಿಕರಣಕ್ಕೆ ಫಲವನ್ನು ಹೇಳಿದ್ದಾರೆ. ಈ ಅಧಿಕರಣದಿಂದ ಐತರೇಯಭಾಷ್ಯದಲ್ಲಿ ಶ್ರುತನಾದ ಪ್ರಾಣನು ವಿಷ್ಣುವೆಂದು ನಿರ್ಣಯವಾದರೆ ತೈತ್ತಿರೀಯಭಾಷ್ಯದಲ್ಲಿ ಕೇಳಿಸುತ್ತಿರುವ ಪ್ರಾಣನೂ ಸಹ ವಿಷ್ಣುವೆಂದು ನಿರ್ಣಯವಾಗುತ್ತದೆ. ಇದರಿಂದ ಆನಂದಮಯನೂ ಸಹ ವಿಷ್ಣುವೇ ಎಂದು ನಿರ್ಣಯವಾಗುತ್ತದೆ. ಆದ್ದರಿಂದ ವಿಷ್ಣುವಿನ ಜಿಜ್ಞಾಸೆಯು ಅವಶ್ಯ ಆಚರಿಸಬೇಕಾಗಿದೆ ಎಂಬ ಪರಮಪ್ರಮೇಯವು ನಿರ್ಣಯವಾಗುತ್ತದೆ.

ಕೆಲವರು 'ಪ್ರಾಣೋಽಸ್ಮಿ ಪ್ರಜ್ಞಾತ್ಮಾಽಹಂ ಮಮಾಯುರಮೃತಮುಪಾಸ್ವ' ಎಂಬ ಕೌಷೀತಕೀಬ್ರಾಹ್ಮಣದ ವಾಕ್ಯವನ್ನೇ ಈ ಅಧಿಕರಣ ವಿಷಯವಾಕ್ಯವನ್ನಾಗಿ ಪರಿಗಣಿಸುತ್ತಾರೆ. ಹೊರತು ಐತರೇಯವಾಕ್ಯವನ್ನು ವಿಷಯವಾಕ್ಯವನ್ನಾಗಿ ಪರಿಗಣಿಸುವುದಿಲ್ಲ. ಆದರೆ 'ಪ್ರಾಣೋಽಸ್ಮಿ ಪ್ರಜ್ಞಾತ್ಮಾ' ಎಂಬಲ್ಲಿ 'ಪ್ರಾಣಸ್ತ್ವಂ ಸರ್ವಾಣಿ ಭೂತಾನಿ' ಎಂಬುದಾಗಿ ಸರ್ವಾತ್ಮಕತ್ವವೆಂಬ ಬ್ರಹ್ಮನ ಲಿಂಗವು ಸ್ಪಷ್ಟವಾಗಿ ಕೇಳಿಸುತ್ತಿರುವುದರಿಂದ ಸಂದೇಹಕ್ಕೆ ಅವಕಾಶವೇ ಇರುವುದಿಲ್ಲ. ಇದನ್ನು ಚಂದ್ರಿಕಾಪ್ರಕಾಶದಲ್ಲಿ ಸಂಪೂರ್ಣವಾಗಿ ನಿರಾಕರಿಸಲಾಗಿದೆ.

ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಅಂತಿಮಪ್ರಾಣಾಧಿಕರಣವು ಮುಗಿಯಿತು.

## वाक्यार्थमञ्जरी

ॐ जीवमुख्यप्राणलिङ्गान्नेति चेन्नोपासात्रैविध्यादाश्रितत्वादिह तद् योगात् ॐ ॥ शतायुष्ट्वादिजीवलिङ्गात् प्राणसंवादादिमुख्यप्राणलिङ्गाच्च न प्राणो विष्णुरिति चेन्न । यस्माज्जीवमुख्यप्राणलिङ्गोपदेशोऽन्तर्याम्यपेक्षयैव युक्त इति पूर्वसूत्रावृत्त्या योज्यम् । किमर्थमन्तर्याम्युक्तिरित्यत उक्तम् – **उपासेति** ॥ अन्तर्व्याप्तत्वेन बहिश्चेति भेदेन ब्रह्मोपासनायास्त्रैविध्यात् । त्रैविध्यस्य चेह प्रकरणे – **स एवेत्यादिना** ॥ आश्रितत्वादुक्तत्वादित्यर्थः । एकयैवोपासनयालं किं त्रैविध्येनेत्यत उक्तम् – **तद्योगादिति** ॥ तस्याधिकारित्रैविध्यस्याधिकारिभेदेन योगाद्युक्तत्वादित्यर्थः । 'तावन्ति' इत्यादिश्रुतौ शतायुष्ट्वस्य प्राणनिष्ठतयानुक्तत्वादाह – **एष इममिति** ॥ एष इमं लोकं ब्रह्मादिशरीरम् । पुरुषरूपेणान्तर्यामिरूपेण अभ्यार्चत् प्रविवेश । तदेव कार्यलिङ्गेन दर्शयति – **य एष आदित्ये स्थित्वा तपतीति** ॥ एतच्छब्दार्थं वदन्नेव दार्ढ्यायोक्तमेव पुनराह – **प्राण इति** ॥ तत् = शरीरम् । कः प्राण इत्यत उक्तम् – **प्राणो ह्येष य एष तपतीति** ॥ यस्मादयं प्राणस्तं देहं शतं वर्षाणि अभ्यार्चत्, प्रविश्य स्थितः । तस्मात्पुरुषायुषः आयूंषि शतं वर्षाणीति प्रसिद्धानि भवन्तीत्यर्थः । बृहतीसहस्रवर्णानां सहस्राणि यावन्ति षट्त्रिंशतिसङ्ख्याकानि तावन्ति सहस्राणि शतसंवत्सरस्याह्नां भवन्तीत्यर्थः ॥ **ता इति** ॥ ताश्चक्षुरादिश्रियोऽहं श्रेष्ठोऽस्म्यहं श्रेष्ठोऽस्मीत्येवं कलहमकुर्वन्तेत्यर्थः ॥ **प्राण इति** ॥ प्राणो मुख्यवायुः

विराड्देहादुत्क्रान्त प्राण उत्क्रान्ते सति तच्छरीरं पतितं प्राणः पुनस्तच्छरीरं प्रविवेश । प्राणे प्राप्ते सति तच्छरीरमुत्थितमित्यर्थः ॥ **प्राणो वंश इति** ॥ प्राणो मुख्यवायुर्वंशः सर्वाश्रय इति स्थविरः शाकल्यमुनिराह । तद् यथा तृणादि-निर्मितगृहस्य प्रधानवेणाववान्तवेणवः सम्यक् स्थापिता आश्रिताः एवमस्मिन् प्राणे चक्षुरादीन्द्रियाणि शरीरं तदभिमान्यात्मा जीव इत्येते सर्वे समाहिताः इत्यर्थः ॥ **अथेति** ॥ प्राणाः इन्द्रियाभिमानिदेवाः अहं श्रेयसी श्रेयानित्यर्थे, कलहमकुर्वन्तेति छन्दोगवाक्यार्थः । एतल्लिङ्गानां निरवकाशत्वमैतरेयभायोदाहृतस्मृत्या दर्शयति – **उदासीनाविति** ॥ ननु,

**प्राणं विना नच ब्रह्मा तं विना प्राण एव च ।**
**अन्योन्यापाश्रयाच्छक्तौ स्थातुमन्ये कुतस्ततः ॥**

इति बृहद्भाष्ये प्राणं विना ब्रह्मणोऽनवस्थानोक्त्या कथं प्राण उत्क्रान्ते तस्मिन् शरीरे ब्रह्मण औदासीन्येनावस्थानमिति चेदुच्यते ।

**अंशेन सुप्तो ब्रह्मा तु अंशेन निरगात्पुनः .**
**स्वदेहाद्वायुसहितो विष्णुना च जगत्प्रभुः ॥**

इति तृतीयस्कन्धतात्पर्यानुसारेणांशेन निर्गतत्वेऽप्यंशेन देहस्थितस्य निर्व्यापाररूपौदासीन्याङ्गीकारात् ॥ **भगवद्विषयतयेति** ॥ बाह्यरूपेणौदासीन्योपपत्ते-रिति भावः । लिङ्गं ज्ञापकं मस्तकसीमानं शिरोमध्यभागम् । स प्राणः ॥ **अन्तःस्थ इति** ॥ तं प्रपदाभ्यां प्रापद्यतेत्यादिना प्रपदाभ्यां प्रविष्टो नारायण इत्यर्थः । एतमित्यस्यार्थः – **प्राप्तमिति** ॥ इण् गतावित्यस्माद् धातोः सुषुम्नया हृदयं प्राप्त-वासुदेवमात्मानं स्वात्मस्वरूपं ततमम् अतिशयेन व्याप्तं ब्रह्म पूर्णमपश्यदित्यर्थः । तकारस्य व्याप्त्यर्थत्वात् तमपश्चातिशयार्थत्वात् ततममित्येतत्तततममित्यर्थकमिति भावः । **बहिरुपास्त्यर्थमिति** ॥ तस्य बहिष्ठमूर्तित्वादिति भावः ॥ **नोपासनार्थमिति** ॥ उपासनापदश्रवणादिति भावः । एतद्धस्म वै तद् विद्वानाह हिरण्यदन्वैद इत्यादिवन्महिदासोऽपि ऋषितयोच्यतां नोपासनार्थमित्यत आह – **नहीति** ॥ एतदुपनिषद ऐतरेयसञ्ज्ञयैवेतरापुत्रस्य महिदासस्य ऋषित्वसिद्ध्या तदुक्ति-नैष्फल्यादित्यर्थः ॥ **विशेषप्रमाणमिति** ॥ पूर्वन्तु केषाञ्चिदित्येवोक्तत्वात् सामान्य-प्रमाणमिति भावः । नन्वत्रोपासनाचतुष्टयमुच्यते बहिरुपासनं च नोच्यत इत्यत आह – **अन्नाविति** ॥ ॥ **इति वाक्यार्थमञ्जर्यां प्रथमाध्यायस्य प्रथमपादः** ॥

ಪರಿಪೂರ್ಣಚಂದ್ರಿಕಾ

**ऐतरेये श्रूयते 'ता वा एताः शीर्षन् श्रियः श्रिताश्चक्षुः श्रोत्रं मनो वाक्प्राणः' इति । तत्र पूर्वं विष्णुविषयत्वेनोदितः प्राणशब्दः श्रूयमाणो विचार्यते किंविषयोऽयमिति । तत्र तावदयं प्राणो मुख्यप्राणो भवितुमर्हति न विष्णुः इन्द्रियपङ्क्तिगणितत्वात् ।**

ಐತರೇಯದಲ್ಲಿ ತಾವಾ ಏತಾಃ ಇತ್ಯಾದಿಯಾಗಿ ಕೇಳಿಸುತ್ತಿದೆ. ಈ ಶ್ರುತಿಯಲ್ಲಿ ಹಿಂದೆ ಹೇಳಿದಂತೆ ವಿಷ್ಣುವಿಷಯಕವಾದ ಪ್ರಾಣಶಬ್ದವು ಸಹ ಕೇಳಿಸುತ್ತಿರುವುದರಿಂದ ಯಾರನ್ನು ಮುಖ್ಯಪ್ರತಿಪಾದಿಸುತ್ತದೆಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಹೀಗಿರುವಾಗ ಇಲ್ಲಿರುವ ಪ್ರಾಣಶಬ್ದವು ಮುಖ್ಯಪ್ರಾಣನನ್ನೇ ಪ್ರತಿಪಾದಿಸುತ್ತದೆ ಹೊರತು ವಿಷ್ಣುವನ್ನಲ್ಲ. ಏಕೆಂದರೆ ಇಂದ್ರಿಯಗಳ ಸಮೂಹದಲ್ಲಿ ಪ್ರಾಣಶಬ್ದವು ಉಲ್ಲೇಖಿತವಾದ್ದರಿಂದ.

**सू - ॐ ॥ प्राणस्तथाऽनुगमात् ॥ ॐ॥ २८ ॥**

**यथेन्द्रियपङ्क्तिगणितं चक्षुः न विष्णुरित्येतत् पक्षं प्रतिक्षिपत् सूत्रमुपन्यस्य व्याचष्टे – प्राणस्तथेत्यादिना ॥ अयमर्थः – परमात्मासाधारणधर्मयुक्तत्वेन अभ्यस्यमानत्वादत्र प्राणो विष्णुरेव । तथाहि । 'तं देवा प्राणयन्त' इत्यनेन तस्य प्रकृतस्य प्राणस्य सर्वब्रह्मादिदेवैः सर्वलोकेष्वानीतत्वमाहात्म्यस्थानेन प्रकृतत्वऽमुच्यते ।**

ಇಂದ್ರಿಯಗಳ ಸಾಲಿನಲ್ಲಿ ಪರಿಗಣಿಸಲ್ಪಟ್ಟ ಚಕ್ಷುಸ್ಸು ವಿಷ್ಣುವಾಗುವುದಿಲ್ಲವೆಂಬ ಪಕ್ಷವನ್ನು ನಿರಾಕರಿಸುವಂತಹ ಸೂತ್ರವನ್ನು ಉಪನ್ಯಾಸಮಾಡಿ ವ್ಯಾಖ್ಯಾನಿಸುತ್ತಿದ್ದಾರೆ. ''ಪ್ರಾಣಸ್ತಥಾ'' ಇತ್ಯಾದಿಯಾಗಿ. ಒಟ್ಟು ಅಭಿಪ್ರಾಯ— ಪರಮಾತ್ಮನ ಅಸಾಧಾರಣಧರ್ಮದಿಂದ ಈ ಶ್ರುತಿಯು ಕೂಡಿರುವುದರಿಂದ, ಅನೇಕಬಾರಿ ಆ ಧರ್ಮಗಳು ಕೇಳಿಸುತ್ತಿರುವುದರಿಂದ ಪ್ರಾಣಶಬ್ದವಾಚ್ಯನಾದವನು ವಿಷ್ಣುವೇ ಆಗಿದ್ದಾನೆ. ಅದು ಹೀಗೆ 'ತಂ ದೇವಾಃ ಪ್ರಾಣಯಂತ' ಎಂಬುದರಿಂದ ಪ್ರಕೃತನಾದ ಪ್ರಾಣನಿಗೆ ಸಕಲಬ್ರಹ್ಮಾದಿ ದೇವತೆಗಳಿಂದ ಎಲ್ಲಾ ಲೋಕಗಳಲ್ಲಿ ಕರೆಯುವಿಕೆಯೆಂಬ ಮಾಹಾತ್ಮ್ಯಯನ್ನು ಹೇಳಿದ್ದರಿಂದ ಪ್ರಕೃತನಾಗಿದ್ದಾನೆ.

**'स एषोऽसुः स एषः प्राणः तं भूतिरिति देवा उपासाञ्चक्रिरे' इत्यन्तेन तस्यैव प्राणस्यैश्वर्यवतः पद्मजादिदेवैरुपास्यत्वमुच्यते । 'स एषोऽसुः स एष प्राणः सर्वे वेदा**

**सर्वे घोषाः एकैव व्याहृतिः प्राण एव प्राण ऋच इत्येव विद्यात्' इत्यनेन सर्वे वेदाः प्राणे प्राणस्यैव व्याहृतिः । परस्परविरोधशून्यतया प्रतिपादिका । ऋचः तस्य विशेषेण प्रतिपादिका इत्युच्यन्ते ।**

'ಸ ಏಷೋಽಸುಃ ... ಉಪಸಾಂಚಕ್ರಿರೇ' ಎಂಬಲ್ಲಿಯ ತನಕ ಅಂತಹ ಪ್ರಾಣನೇ ಐಶ್ವರ್ಯ-ಶಾಲಿಗಳಾದ ಬ್ರಹ್ಮಾದಿ ದೇವತೆಗಳಿಂದ ಉಪಾಸ್ಯನಾಗಿದ್ದಾನೆಂದು ಹೇಳಲಾಗಿದೆ. 'ಸ ಏಷೋಽಸುಃ ಸ ಏಷ ಪ್ರಾಣಃ ಸರ್ವೇ ವೇದಾ ಸರ್ವೇ ಘೋಷಾಃ ಏಕೈವ ವ್ಯಾಹೃತಿಃ ಪ್ರಾಣ ಏವ ಪ್ರಾಣ ಋಚ ಇತ್ಯೇವ ವಿದ್ಯಾತ್' ಎಂಬಲ್ಲಿಯ ತನಕ ಸಕಲ ವೇದಗಳು ಪ್ರಾಣನನ್ನು ಪ್ರತಿಪಾದಿಸುತ್ತವೆಂದು ತಿಳಿಯುತ್ತದೆ. ಪ್ರಾಣನನ್ನೇ ಕರೆಯುತ್ತವೆ. ಪರಸ್ಪರ ವಿರೋಧ ಬಾರದಂತೆ ಒಬ್ಬನೇ ಪ್ರಾಣನನ್ನು ಪ್ರತಿಪಾದಿಸುತ್ತಿವೆ. ಋಕ್ ಎಂಬುದು ಪ್ರಾಣನಲ್ಲಿ ವಿಶೇಷಣವಾದ್ದರಿಂದ ಋಗಾದಿವೇದಗಳು ಅವನನ್ನೆ ಪ್ರತಿಪಾದಿಸು-ತ್ತವೆಂದು ತಿಳಿಯಬೇಕು.

**'अथ देवरथस्तस्य वागुद्धिः श्रोत्रे पक्षसी चक्षुषी युक्ते मनः सङ्गृहीता तदयं प्राणोऽधितिष्ठन्ति' इत्यनेन वागादिभिः रथोपकरणत्वेन कल्पितैर्युक्तस्य देहाख्यस्य शरीरस्य मुख्याधिष्ठाता प्राण इत्युच्यते । तथा च स्कान्दवचनं 'विष्णुमेवानयन्' इति । 'अयं पुरुषो ब्रह्मणो लोकः । तत्प्रपदाभ्यां प्रापद्यत ब्रह्मेमम्' इत्यादिब्रह्मशब्दाभ्यासादपि एतद्विद्याप्रतिपाद्यो विष्णुरिति ज्ञायते ।**

'ಅಥ ದೇವರಥಸ್ತಸ್ಯ ವಾಗುದ್ಧಿಃ ಶ್ರೋತ್ರೇ ಪಕ್ಷಸೀ ಚಕ್ಷುಷೀ ಯುಕ್ತೇ ಮನಃ ಸಂಗೃಹೀತಾ ತದಯಂ ಪ್ರಾಣೋಽಧಿತಿಷ್ಠಂತಿ' ಎಂಬುದರಿಂದ ವಾಗಾದಿ ಇಂದ್ರಿಯಗಳನ್ನು ರಥಕ್ಕೆ ಉಪಕರಣಗಳೆಂದು ಕಲ್ಪಿಸಿದ್ದರಿಂದ ಅಂತಹ ಇಂದ್ರಿಯಗಳಿಂದ ಕೂಡಿರುವ ದೇಹವೆಂಬ ಶರೀರಕ್ಕೆ ಮುಖ್ಯಪ್ರೇರಕನು ಪ್ರಾಣನೇ ಆಗಿದ್ದಾನೆಂದು ಹೇಳಲಾಗಿದೆ. ಆದ್ದರಿಂದಲೇ ಸ್ಕಾಂದಪುರಾಣವು 'ವಿಷ್ಣುಮೇವಾನಯನ್' ಎಂದು ಹೇಳಲಾಗಿದೆ. ಮತ್ತು 'ಅಯಂಪುರುಷೋ ಬ್ರಹ್ಮಣೋ ಲೋಕಃ । ತತ್ ಪ್ರಪದಾಭ್ಯಾಂ ಪ್ರಾಪದ್ಯತೇ ಬ್ರಹ್ಮೇಮಮ್' ಎಂಬಲ್ಲಿ ಅನೇಕಬಾರಿ ಬ್ರಹ್ಮಶಬ್ದವು ಕೇಳಿಸುತ್ತಿರು-ವುದರಿಂದ ಈ ವಿದ್ಯೆಯಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆಂದು ತಿಳಿಯುತ್ತದೆ.

**तस्मात् इक्ष्वाकुवंशराजावलीगणितदाशरथिरामवत् इन्द्रियगणगणितोप्ययं प्राणो विष्णुरेवेति युक्तम् । नच वाच्यं 'तमिन्द्र उवाच प्राणो वा अहमस्मि ऋषे' इति वचनाद् अत्रेन्द्र एव प्राणशब्दार्थो विवक्षित इति । 'प्राणस्त्वं प्राणः सर्वाणि भूतानि प्राणो ह्येष य एष तपति' इति सर्वान्तर्यामित्वेन प्राणव्यपदेशात् ।**

ಆದ್ದರಿಂದ ಇಕ್ಷ್ವಾಕುವಂಶದ ರಾಜರ ಸಾಲಿನಲ್ಲಿ ಸರ್ವೋತ್ತಮನಾದ 'ದಾಶರಥಿ'ಯಾದ ಶ್ರೀರಾಮನನ್ನು ಹೇಗೆ ಹೇಳುತ್ತಾರೋ ಅದರಂತೆ ಇಂದ್ರಿಯಗಳ ಸಮೂಹದಲ್ಲಿ ಎಣಿಸಲ್ಪಟ್ಟಿದ್ದರೂ ಸಹ ಪ್ರಾಣನು ವಿಷ್ಣುವೇ ಆಗಿದ್ದಾನೆಂದು ಹೇಳಬಹುದು.

'ತಮಿಂದ್ರೋ ಉವಾಚ ಪ್ರಾಣೋ ವಾ ಅಹಮಸ್ಮಿ ಋಷೇ' ಎಂಬ ಮಾತಿನ ಆಧಾರದಿಂದ ದೇವೇಂದ್ರನೇ ಪ್ರಾಣನೆಂದೇಕೆ ವಿವಕ್ಷಿಸಬಾರದು ಎಂಬ ಪ್ರಶ್ನೆ ಅಸಾಧುವಾಗಿದೆ. 'ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ ಪ್ರಾಣೋ ಹ್ಯೇಷ ಯ ಏಷ ತಪತಿ' ಎಂಬುದಾಗಿ ಪ್ರಾಣನನ್ನು ಸರ್ವಾಂತ-ರ್ಯಾಮಿಯೆಂದು ಹೇಳಿದ್ದರಿಂದ ದೇವೇಂದ್ರನು ಪ್ರಾಣನಾಗಲಾರ.

**सू - ॐ ॥ न वक्तुरात्मोपदेशादिति चेदध्यात्मसम्बन्धभूमा ह्यस्मिन् ॥ ॐ ॥ २९ ॥**

'न हीन्द्रस्य जीवविशेषस्य सर्वान्तर्यामित्वं युज्यते' इत्येतत् प्रतिपादयत् सूत्रमुपन्यस्य व्याचष्टे – न वक्तुरित्यादिना ॥ ननु 'प्राणो वा अहमस्मि' इत्यादिभिरभेदः प्राणस्योच्यते, न तु तदन्तर्यामित्वम् इति चेत्; मैवम् । 'अन्तः-प्रविष्टः शास्ता जनानाम्' 'य आत्मानमन्तरो यमयति' इत्यादिश्रुतिविरोधात् । प्राणोऽहम् इति व्यपदेशात् इन्द्रस्य प्राणत्वे 'ग्रहोऽहम्' इति व्यपदेशात् ग्रहाविष्टपुरुषस्यापि ग्रहत्वप्रसङ्गः । अतः सिंहवेषधारिणि नटे सिंहो जातो नटः इतिवत् सर्वाधिष्ठात्रा प्राणशब्दवाच्येन विष्णुना इन्द्राद्यभेदव्यपदेशो नानुपपन्नः । तथा च पाद्मवचनम् 'तत्तन्नाम्ना' इति ।

दृष्टश्चान्तर्यामिविषयतया अहंशब्दः, श्रुत्यन्तरे 'तद्धैतत् पश्यन् ऋषिर्वामदेवः प्रतिपेदे । अहं मनुरभवं सूर्यश्च' इत्यादौ वामदेवस्याहं मनुसूर्यादित्वं देवदत्तस्येव विरुद्धमेव । अतो वामदेवाद्यहेयतया अहंनामको मनुसूर्यनियमनादियोगेन मनु-सूर्यादिशब्दार्थः । तथा च पाद्मवचनम् 'सर्वगतत्वादनन्तस्य स एवाहमवस्थितः' इति ॥

ಜೀವವಿಶೇಷನಾದ ದೇವೇಂದ್ರನಿಗೆ ಸರ್ವಾಂತರ್ಯಾಮಿತ್ವವು ಕೂಡುವುದಿಲ್ಲ ಎಂಬುದನ್ನು ಪ್ರತಿಪಾದಿಸುವ ಸೂತ್ರವನ್ನು ಉಪನ್ಯಾಸಮಾಡಿ ವ್ಯಾಖ್ಯಾನಿಸುತ್ತಿದ್ದಾರೆ "ನವಕ್ತುಃ" ಇತ್ಯಾದಿಯಾಗಿ. ಪ್ರಾಣೋ ವಾ ಅಹಮಸ್ಮಿ ಇತ್ಯಾದಿ ವಾಕ್ಯಗಳಿಂದ ಪ್ರಾಣನಿಗೆ ಅಭೇದವು ಹೇಳಲ್ಪಟ್ಟಿದೆ ಹೊರತು, ಜೀವವಿಶೇಷನಿಂದ ಅಭೇದವು ಹೇಳಲ್ಪಟ್ಟಿಲ್ಲವಲ್ಲ ಎಂದು ಪ್ರಶ್ನಿಸಬಾರದು. 'ಅಂತಃಪ್ರವಿಷ್ಟಃ ಶಾಸ್ತಾ

ಜನಾನಾಮ್' 'ಯ ಆತ್ಮಾನಮಂತರೋ ಯಮಯತಿ' ಇತ್ಯಾದಿ ಶ್ರುತಿಗಳ ವಿರೋಧ ಬರುತ್ತದೆ. 'ಪ್ರಾಣೋऽಹಂ' ಎಂದು ಹೇಳಿದ ಮಾತ್ರಕ್ಕೆ ಇಂದ್ರನು ಪ್ರಾಣನಾಗುವುದಾದರೆ 'ಗ್ರಹೋऽಹಂ' ಎಂದು ಹೇಳುವ ಗ್ರಹಾವಿಷ್ಟನಾದ ಪುರುಷನೂ ಸಹ ಗ್ರಹ ಎಂದೇ ಆಗಬೇಕಾದೀತು. ಆದ್ದರಿಂದ ಸಿಂಹವೇಷವನ್ನು ಧರಿಸಿದ ನಟನನ್ನು ಕುರಿತು ನಟನು ಸಿಂಹನೇ ಆದನು ಎಂದು ಜನರು ಹೇಗೆ ಪ್ರಯೋಗಿಸುತ್ತಾರೋ ಅದರಂತೆ ಎಲ್ಲರ ಒಳಗೆ ನಿಯಾಮಕನಾಗಿ ಪ್ರವೇಶಿಸಿದ ಪ್ರಾಣಶಬ್ದವಾಚ್ಯನಾದ ವಿಷ್ಣುವಿಗೆ ಇಂದ್ರಾದಿಗಳೇ ಆದನೆಂಬ ಪ್ರಯೋಗವು ಅನುಪಪನ್ನವಲ್ಲ. ಆದ್ದರಿಂದಲೇ ಪದ್ಮಪುರಾಣ-ದಲ್ಲಿ 'ತತ್ತನ್ನಾಮ್ನೋಚ್ಯತೇ' ಎಂಬುದಾಗಿ ಸಕಲಹೆಸರುಗಳು ಭಗವಂತನೆಂದು ಹೇಳಲಾಗಿದೆ.

ಅಂತರ್ಯಾಮಿವಿಷಯಕವಾಗಿ ಅಹಂಶಬ್ದವನ್ನು ಪ್ರಯೋಗಿಸುವುದು ಬೇರೆ ಶ್ರುತಿಯಲ್ಲಿ ಕಂಡಿದೆ— 'ತದ್ಧೈತತ್ ಪಶ್ಯನ್ ಋಷಿರ್ವಾಮದೇವಃ ಪ್ರತಿಪೇದೇ । ಅಹಂ ಮನುರಭವಂ ಸೂರ್ಯಶ್ಚ' ಇತ್ಯಾದಿ ಸ್ಥಳಗಳಲ್ಲಿ ವಾಮದೇವ ಋಷಿಯು 'ಅಹಂ ಮನುಃ' ಹೇಳಿದ್ದಾರೆ. ವಾಮದೇವ ಋಷಿಗೆ ಮನು ಮತ್ತು ಸೂರ್ಯನಿಂದ ಅಭೇದವನ್ನು ಹೇಳುವುದು ದೇವದತ್ತನಿಂದ ಅಭೇದವನ್ನು ಹೇಳುವುದು ಹೇಗೆ ವಿರುದ್ಧವೋ ಅದರಂತೆ ವಿರುದ್ಧವಾಗಿದೆ. ಆದ್ದರಿಂದಲೇ ಪದ್ಮಪುರಾಣದಲ್ಲಿ 'ಸರ್ವಗತತ್ವಾದನಂತಸ್ಯ ಸ ಏವಾಹಮವಸ್ಥಿತಃ' 'ಸರ್ವಗತನಾದ್ದರಿಂದ ನಾನೇ ಅಹಂ ಎನಿಸುತ್ತೇನೆ' ಎಂಬ ಮಾತು ಪ್ರಯುಕ್ತವಾಗಿದೆ.

**ॐ॥ शास्त्रदृष्ट्या तूपदेशो वामदेववत् ॥ ॐ ॥३०॥**

**एतत् प्रतिपादयत् सूत्रमुपन्यस्य व्याचष्टे – शास्त्रेत्यादिना ॥**

**सू - ॐ ॥ जीवमुख्यप्राणलिङ्गान्नेति चेन्नोपासा- त्रैविध्यादाश्रितत्वादिह तद्योगात् ॥ ॐ ॥ ३१ ॥**

**ननु जीवोऽत्र प्राणो भवितुमर्हति । 'एष इमं लोकमभ्यार्चत् पुरुषरूपेण य एष तपति तं शतं वर्षाण्यभ्यार्चत् । तस्मात् शतं वर्षाणि पुरुषायुषो भवन्ति' इति प्रस्तुतस्य प्राणस्य शतवर्षायुष्ट्वश्रवणात् । इदमेव शतायुष्ट्वं जीवलिङ्गमनुसन्धीयते । 'तस्य ह वा एतस्य बृहतीसहस्रस्य सम्पन्नस्य षट्त्रिंशतमक्षराणां सहस्राणि भवन्ति शतसंवत्सरस्याह्नां सहस्राणि भवन्ति' इति । मुख्यप्राणो वात्र प्राणशब्देन प्रतिपाद्यः स्यात् । 'ता अहिंसन्त अहमुक्थ्यमस्मीति, तमब्रुवन् । हन्तास्माच्छरीरात् उत्क्रामाम तद्यस्मिन्नुत्क्रान्त इदं शरीरं पत्स्यति तदुक्थं भविष्यति' इत्यादिना प्रस्तुतस्य प्राणस्येन्द्रियैः संवादशरीरोत्क्रमणादिश्रवणात् । इदं च मुख्यप्राणलिङ्गत्वेन प्रसिद्धं**

**श्रुत्यन्तरे 'अथ ह प्राणा अहं श्रेयांसि व्यूदिरे अहं श्रेयानस्मि' इत्यादावित्याशङ्कां परिहरत् सूत्रमुपन्यस्य व्याचष्टे – जीवेत्यादिना ॥**

ಹಿಂದೆ ಹೇಳಿದ ವಿಷಯವನ್ನೇ ಪ್ರತಿಪಾದಿಸುತ್ತಾ ಸೂತ್ರವನ್ನು ಉಪನ್ಯಾಸಮಾಡಿ ವ್ಯಾಖ್ಯಾನಿಸುತ್ತಿದ್ದಾರೆ ''ಶಾಸ್ತ್ರದೃಷ್ಟ್ಯಾ'' ಇತ್ಯಾದಿಯಾಗಿ. ಜೀವನೇ ಇಲ್ಲಿ ಪ್ರಾಣನಾಗಬಹುದಲ್ಲವೇ? ಏಕೆಂದರೆ 'ಏಷ ಇಮಂ ಲೋಕಮಭ್ಯಾರ್ಚತ್ ಪುರುಷರೂಪೇಣ ...' ಎಂಬುದಾಗಿ ಪ್ರಸ್ತುತನಾದ ಪ್ರಾಣನಿಗೆ ನೂರು ವರ್ಷ ಆಯುಷ್ಯವು ಕೇಳಿಸುತ್ತಿದೆ. ನೂರು ವರ್ಷ ಬದುಕುವಿಕೆ ಎಂಬುದು ಜೀವನ ಲಿಂಗವೆನಿಸಿದೆ.

ಅಥವಾ 'ತಸ್ಯ ಹ ವಾ ....' ಎಂಬ ಶ್ರುತಿಯಂತೆ ಮುಖ್ಯಪ್ರಾಣನೂ ಸಹ ಪ್ರಾಣಶಬ್ದದಿಂದ ಪ್ರತಿಪಾದ್ಯನಾಗಬಹುದು. ಏಕೆಂದರೆ 'ತಾ ಅಹಿಂಸಂತ .....' ಇತ್ಯಾದಿಯಾಗಿ ಪ್ರಸ್ತುತನಾದ ಪ್ರಾಣನಿಗೆ ಇಂದ್ರಿಯಾಭಿಮಾನಿ ದೇವತೆಗಳಿಂದ ಸಂವಾದವು ಹೇಳಲ್ಪಟ್ಟಿದೆ. ಮತ್ತು ಶರೀರದ ಉತ್ಕ್ರಮಣ ಪ್ರವೇಶಗಳಿಂದ ದೇಹೋತ್ಥಾನ ದೇಹೋಚ್ಯುತಿಗಳೆಂಬ ಲಿಂಗಗಳು ಕೇಳಿಸುತ್ತಿವೆ. ಇವೆಲ್ಲವೂ ಸಹ ಮುಖ್ಯಪ್ರಾಣನ ಲಿಂಗಗಳೇ ಆಗಿವೆ ಎಂದು ಬೇರೆ ಶ್ರುತಿಯಿಂದ ನಿರ್ಣಯವಾಗಿದೆ. 'ಅಥ ಹ ಪ್ರಾಣಾಃ ...' ಎಂಬಲ್ಲಿ ಸ್ಪಷ್ಟವಾಗಿ ಮುಖ್ಯಪ್ರಾಣನ ಲಿಂಗಗಳು ಕೇಳಿಸುತ್ತಿವೆ. ಆದ್ದರಿಂದ ಮುಖ್ಯಪ್ರಾಣನೇ ಪ್ರಾಣಶಬ್ದವಾಚ್ಯನಾಗಬಹುದಲ್ಲವೇ? ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಉಪನ್ಯಾಸಮಾಡಿ ವ್ಯಾಖ್ಯಾನಿಸುತ್ತಿದ್ದಾರೆ. ''ಜೀವ'' ಇತ್ಯಾದಿಯಾಗಿ.

**यज्जीवादिलिङ्गमुक्तं तज्जीवमुख्यप्राणान्तर्यामिणि विष्णावेवोपपद्यते । तस्य नित्यस्याप्यस्मिन् सन्देहे शतवर्षावस्थानसम्भवात् मुख्यप्राणद्वारा इन्द्रियसंवाद-शरीरोत्क्रमणादिसम्भवात् । अतो जीवाद्यन्तर्यामित्वेन स्थितो विष्णुरेव प्राण-शब्दाभिधेयो न जीवादिः प्रतिपाद्यते । 'स एतमेव सीमानं विदर्यैतया द्वारा प्रापद्यते' इत्यादिना अत्र जीवान्तर्यामिरूपेण अवताररूपेण सर्वगतरूपेण भगवान् विष्णुः तत्तद्रूपोपासकयोग्यताभेदात् इत्यर्थः ।**

**इति श्रीमदानन्दतीर्थभगवत्पादाचार्यविरचितश्रीमद्ब्रह्मसूत्रभाष्यटीकायां**
**श्रीपद्मनाभतीर्थभट्टारकविरचितायां सत्तर्कदीपावळ्यां प्रथमाध्यायस्य प्रथमपादः**

ಜೀವ ಹಾಗೂ ಮುಖ್ಯಪ್ರಾಣನ ಲಿಂಗಗಳೆಲ್ಲವೂ ಜೀವ ಹಾಗೂ ಮುಖ್ಯಪ್ರಾಣರ ಅಂತರ್ಯಾಮಿಯಾದ ವಿಷ್ಣುವಿನಲ್ಲೇ ಉಪಪನ್ನವಾಗುತ್ತವೆ. ಪರಮಾತ್ಮನು ನಿತ್ಯನಾಗಿದ್ದರೂ ಈ ದೇಹದಲ್ಲಿ ನೂರು ವರ್ಷಗಳ ಕಾಲ ಇರುತ್ತಾನಾದ್ದರಿಂದ ಮುಖ್ಯಪ್ರಾಣನ ಮೂಲಕ ಇಂದ್ರಿಯ

ಸಂವಾದ ಶರೀರೋತ್ಕ್ರಮಣಾದಿ ಲಿಂಗಗಳೂ ಸಹ ಪರಮಾತ್ಮನಲ್ಲೇ ಕೂಡುತ್ತವೆ. ಆದ್ದರಿಂದ ಜೀವಾದಿಗಳ ಅಂತರ್ಯಾಮಿಯಾಗಿ ನೆಲೆಸಿರುವ ವಿಷ್ಣುವೇ ಪ್ರಾಣಶಬ್ದವಾಚ್ಯನಾಗಿದ್ದಾನೆ. ಹೊರತು ಜೀವಾದಿಗಳಲ್ಲ. 'ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತೇ' ಇತ್ಯಾದಿಯಾಗಿ ಜೀವಾಂತರ್ಯಾಮಿರೂಪದಿಂದ ಅವತಾರರೂಪದಿಂದ ಮತ್ತು ಸರ್ವಗತರೂಪದಿಂದ ಎಲ್ಲೆಡೆ ನೆಲೆಸಿರುವವನು ಭಗವಂತನೇ ಆಗಿದ್ದಾನೆ. ಹೀಗೆ ಭಿನ್ನ ಭಿನ್ನ ಸ್ಥಳಗಳಲ್ಲಿ ಆಯಾ ರೂಪಗಳಿಂದ ಉಪಾಸಕರ ಯೋಗ್ಯತಾಭೇದದಿಂದ ಉಪಾಸನೆ ಮಾಡುವುದಕ್ಕಾಗಿ ಭಗವಂತನ ರೂಪಗಳನ್ನು ವರ್ಣಿಸಲಾಗಿದೆ.

ಇಲ್ಲಿಗೆ ಸತ್ತರ್ಕದೀಪಾವಳಿಯ ಕನ್ನಡಾನುವಾದದಲ್ಲಿ ಅಂತಿಮಪ್ರಾಣಾಧಿಕರಣವು ಮುಗಿಯಿತು.

॥ ಶ್ರೀಮಧ್ವೇಶಾರ್ಪಣಮಸ್ತು ॥

# ೦೧೨- ಅಂತಿಮಪ್ರಾಣಾಧಿಕರಣ

## ಭಾಗ - ೨

### ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ, ಭಾಟ್ಟಸಂಗ್ರಹ, ಶಂಕರಭಾಷ್ಯ, ಭಾಮತೀ, ವಿವರಣ, ಶ್ರೀಭಾಷ್ಯ, ಶ್ರುತಪ್ರಕಾಶ ಇವುಗಳ ಆಯ್ದ ಭಾಗಗಳು

ಸಂವಾದ ಶರೀರೋತ್ಕ್ರಮಣಾದಿ ಲಿಂಗಗಳೂ ಸಹ ಪರಮಾತ್ಮನಲ್ಲೇ ಕೂಡುತ್ತವೆ. ಆದ್ದರಿಂದ ಜೀವಾದಿಗಳ ಅಂತರ್ಯಾಮಿಯಾಗಿ ನೆಲೆಸಿರುವ ವಿಷ್ಣುವೇ ಪ್ರಾಣಶಬ್ದವಾಚ್ಯನಾಗಿದ್ದಾನೆ. ಹೊರತು ಜೀವಾದಿಗಳಲ್ಲ. 'ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತೇ' ಇತ್ಯಾದಿಯಾಗಿ ಜೀವಾಂತರ್ಯಾಮಿರೂಪದಿಂದ ಅವತಾರರೂಪದಿಂದ ಮತ್ತು ಸರ್ವಗತರೂಪದಿಂದ ಎಲ್ಲೆಡೆ ನೆಲೆಸಿರುವವನು ಭಗವಂತನೇ ಆಗಿದ್ದಾನೆ. ಹೀಗೆ ಭಿನ್ನ ಭಿನ್ನ ಸ್ಥಳಗಳಲ್ಲಿ ಆಯಾ ರೂಪಗಳಿಂದ ಉಪಾಸಕರ ಯೋಗ್ಯತಾಭೇದದಿಂದ ಉಪಾಸನೆ ಮಾಡುವುದಕ್ಕಾಗಿ ಭಗವಂತನ ರೂಪಗಳನ್ನು ವರ್ಣಿಸಲಾಗಿದೆ.

ಇಲ್ಲಿಗೆ ಸತ್ತರ್ಕದೀಪಾವಳಿಯ ಕನ್ನಡಾನುವಾದದಲ್ಲಿ ಅಂತಿಮಪ್ರಾಣಾಧಿಕರಣವು ಮುಗಿಯಿತು.

॥ ಶ್ರೀಮಧ್ವೇಶಾರ್ಪಣಮಸ್ತು ॥

# ೦೧೨- ಅಂತಿಮಪ್ರಾಣಾಧಿಕರಣ

## ಭಾಗ - ೨

### ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ, ಭಾಟ್ಟಸಂಗ್ರಹ, ಶಂಕರಭಾಷ್ಯ, ಭಾಮತೀ, ವಿವರಣ, ಶ್ರೀಭಾಷ್ಯ, ಶ್ರುತಪ್ರಕಾಶ ಇವುಗಳ ಆಯ್ದ ಭಾಗಗಳು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

## ಸಂಶಯ ಹಾಗು ಸಂಗತಿ ಪ್ರದರ್ಶನ

ಶ್ರುತಿಲಿಂಗಬಾಹುಲ್ಯವು ಗಾಯತ್ರ್ಯಧಿಕರಣದ ಸಿದ್ಧಾಂತನ್ಯಾಯ. ಆ ನ್ಯಾಯದಿಂದಲೇ ಈ ಅಧಿಕರಣದ ಪೂರ್ವಪಕ್ಷ ಹೊರಟಿದ್ದರಿಂದ ಆಪವಾದಿಕೀ ಸಂಗತಿಯನ್ನು ತಿಳಿಯಬೇಕು.

ವಾಯುಶ್ರುತಿ ಮೊದಲಾದವು ನಿರವಕಾಶವಾದ್ದರಿಂದ ವಾಯುಶ್ರುತಿಗಳಿಗೆ ಅನುಸಾರಿಯಾಗಿ ವಿಷ್ಣುಶ್ರುತಿ-ಗಳನ್ನು ಅರ್ಥೈಸಬೇಕು. ಆವಾಗ ಮುಖ್ಯವಾಯುವೇ ಪ್ರಾಣನಾಗುತ್ತಾನೆಂಬುದು ಪೂರ್ವಪಕ್ಷದ ಗುರಿ. ವಿಷ್ಣುಶ್ರುತಿ ನಿರವಕಾಶವಾದ್ದರಿಂದ ವಿಷ್ಣುಶ್ರುತಿಗೆ ಅನುಸಾರಿಯಾಗಿ ವಾಯುಶ್ರುತಿಯನ್ನು ಅರ್ಥೈಸಬೇಕು. ಆವಾಗ ವಿಷ್ಣುವೇ ಪ್ರಾಣಶಬ್ದವಾಚ್ಯನಾಗುತ್ತಾನೆಂಬುದು ಸಿದ್ಧಾಂತದ ಗುರಿ.

ಈ ಪಾದಾಂತ್ಯಪ್ರಾಣಾಧಿಕರಣವು ಗತಾರ್ಥವಾಗಿದೆಯೆಂದು ದೀರ್ಘವಾಗಿ ಆಕ್ಷೇಪಿಸಲಾಗಿದೆ.

ಹಿಂದಿನ ಪ್ರಾಣಾಧಿಕರಣದಲ್ಲಿ ತೈತ್ತಿರೀಯದಲ್ಲಿರುವ ಪ್ರಾಣಶಬ್ದವು ವಾಯುಪರವಲ್ಲವೆಂದು ಹೇಳಿದರು. ಇಲ್ಲಿ ಐತರೇಯಪ್ರಾಣನು ಇಂದ್ರನಾಗಲೀ ಜೀವನಾಗಲೀ ಅಲ್ಲವೆಂದು ಹೇಳುತ್ತಿದ್ದಾರೆ. ಹೀಗಿರುವಾಗ ಗತಾರ್ಥತ್ವ-ವನ್ನು ಹೇಗೆ ಹೇಳುತ್ತೀರಿ?

ಈ ಅಧಿಕರಣದಲ್ಲಿಯೂ ಸಹ ಪ್ರಾಣಶಬ್ದವು ವಾಯುಪರ ಅಲ್ಲವೆಂದೇ ಹೇಳಬೇಕು ಹೊರತು ಇಂದ್ರ ಅಥವಾ ಜೀವಪರವಲ್ಲ ಎಂಬುದು ಮುಖ್ಯವಲ್ಲ. ಇಲ್ಲದಿದ್ದರೆ ಸೂತ್ರದಲ್ಲಿರುವ ಮುಖ್ಯಪ್ರಾಣಪದವು ತಪ್ಪಾಗುತ್ತದೆ. ಆದ್ದರಿಂದ ಗತಾರ್ಥತ್ವವು ಬಂದೇ ಬರುತ್ತದೆ.

ಗಾಯತ್ರ್ಯಧಿಕರಣದಲ್ಲಿಯೂ ಸಹ 'ಗಾಯತ್ರೀ ವಾ ಇದಂ ಸರ್ವಂ ವಾಗ್ವೈ ಗಾಯತ್ರೀ ಸೈಷಾ ಷಡ್ವಿಧಾ ಗಾಯತ್ರೀ' ಎಂಬ ಏಕವಿಷಯಕವಾದ ಶ್ರುತಿಯು ಕೇಳಿಸುತ್ತಿದೆ. ಮತ್ತು ಆಕಾಶಾಧಿಕರಣದ ವಿಷಯವಾಕ್ಯದಲ್ಲಂತೂ ಒಂದೇ ಆಕಾಶಶ್ರುತಿಯು ಅನೇಕಬಾರಿ ಕೇಳಿಸುತ್ತಿದೆ. ಆದ್ದರಿಂದ ಪ್ರಾಣಾಧಿಕರಣದಿಂದ ಗತಾರ್ಥತ್ವವನ್ನು ಪರಿಹರಿಸಲು ಹೊರಟರೆ ಗಾಯತ್ರ್ಯಧಿಕರಣದಿಂದಲೋ ಅಥವಾ ಆಕಾಶಾಧಿಕರಣದಿಂದಲೋ ಗತಾರ್ಥತ್ವವು ಬಂದೇ ಬರುತ್ತದೆ.

ಆಕಾಶಾದ್ಯಧಿಕರಣಗಳಲ್ಲಿ ಶ್ರುತಿಲಿಂಗಬಾಹುಲ್ಯಪ್ರಯುಕ್ತವಾದ ಪೂರ್ವಪಕ್ಷವನ್ನು ಮಾಡಿಲ್ಲ. ಆದ್ದರಿಂದ ಈ ಅಧಿಕರಣದಲ್ಲಿ ಶ್ರುತಿಲಿಂಗಬಾಹುಲ್ಯಪ್ರಯುಕ್ತವಾದ ಪೂರ್ವಪಕ್ಷವು ಹುಟ್ಟಬಹುದು. ಆದ್ದರಿಂದಲೇ ಅನು-ವ್ಯಾಖ್ಯಾನದಲ್ಲಿ 'ಬಾಹುಲ್ಯಾತ್ ಶ್ರುತಿಲಿಂಗಯೋಃ' ಎಂದು ಹೇಳಿದ್ದಾರೆ. ಈ ಅಧಿಕರಣದ ಭಾಷ್ಯ ಹಾಗೂ ಟೀಕೆಗಳಲ್ಲಿ ವಸ್ತುತಃ ಲಿಂಗವನ್ನಷ್ಟೇ ಹೇಳಿರಬಹುದು. ಆದರೆ ಅದು ಕೇವಲ ಪೂರ್ವಪಕ್ಷದ ಉಪಕ್ರಮ ಮಾತ್ರ. ಮುಂದೆ ಬಾಹುಲ್ಯವನ್ನು ಹೇಳಬಹುದೆಂದು ಅದರ ಅಭಿಪ್ರಾಯ. ಆದ್ದರಿಂದ ಈ ಅಧಿಕರಣವು ಗತಾರ್ಥವಲ್ಲ.

ಇಂದ್ರಪ್ರಾಣಾದಿ ಲಿಂಗಗಳನ್ನು ಅವಲಂಬಿಸಿ, ಈ ಅಧಿಕರಣದಲ್ಲಿ ಪೂರ್ವಪಕ್ಷ ಮಾಡುತ್ತಿದ್ದಾರೆ. ಈ ರೀತಿಯಾದ ಪೂರ್ವಪಕ್ಷವು ಸರಿಯೇ? ಎಂದು ವಿಮರ್ಶಿಸಬೇಕು. ಏಕೆಂದರೆ ವಿಷ್ಣುವಿನಲ್ಲಿ ಈಗಾಗಲೇ ಪ್ರಸಿದ್ಧವಾದ ಬ್ರಹ್ಮ ಮೊದಲಾದ ನಾಮಧೇಯಗಳಿವೆ. ಇವುಗಳನ್ನು ಅನುಸರಿಸಿ ಇಂದ್ರಪ್ರಾಣಾದಿಲಿಂಗಗಳೂ ಸಹ ವಿಷ್ಣುವಿನಲ್ಲೇ ಬರುತ್ತವೆ. ಸಂಶಯಕ್ಕೆ ಅವಕಾಶವೇ ಇರುವುದಿಲ್ಲ. ಏಕೆಂದರೆ ಪೂರ್ವಮೀಮಾಂಸಾಕಾರರೂ ಸಹ ಇಂತಹ

ತೀರ್ಮಾನಗಳನ್ನು ತೆಗೆದುಕೊಂಡಿದ್ದಾರೆ. ಉದಾಹರಣೆ :- 'ದರ್ಶಪೂರ್ಣಮಾಸಾಭ್ಯಾಂ ಯಜೇತ' ಎಂಬ ಶ್ರುತಿಯಲ್ಲಿ 'ದರ್ಶಪೂರ್ಣಮಾಸ' ಎಂಬ ಹೆಸರು ಕೇಳಿಸುತ್ತಿದೆ. ಈ ಶ್ರುತಿಯನ್ನು ಕೇಳುವ ಮೊದಲೇ ವಿದ್ವದ್‌ವಾಕ್ಯದಿಂದ ದರ್ಶಪೂರ್ಣಮಾಸ ಶಬ್ದದ ಪರಿಚಯವಾಗಿದೆ. ಹಾಗಾಗಿ 'ಯಜೇತ' ಎಂಬಲ್ಲಿರುವ 'ಯಜ್' ಧಾತುವಿಗೆ ದರ್ಶಮಾಸದ ಮೂರು ಯಾಗಗಳು ಪೂರ್ಣಮಾಸದ ಮೂರು ಯಾಗಗಳು ಮಾತ್ರ ಅರ್ಥವೆನ್ನಬೇಕೆ ಹೊರತು, ಸಕಲ ಯಾಗಗಳನ್ನು ಅರ್ಥವೆಂದು ಹೇಳಬಾರದು. ಒಟ್ಟಾರೆ 'ದರ್ಶಪೂರ್ಣಮಾಸ'ವೆಂಬ ನಾಮಧೇಯವನ್ನು ಅನುಸರಿಸಿ 'ಯಜ್' ಧಾತುವಿನ ಅರ್ಥವನ್ನು ಸಾವಕಾಶಮಾಡಿದ್ದು ಕಂಡಿದೆ. ಹೀಗೆ ಒಪ್ಪದಿದ್ದರೆ 'ರಾಜಸೂಯೇನ ಯಜೇತ' ಎಂಬಲ್ಲಿಯೂ 'ಯಜ್' ಧಾತುವಿಗೆ ಅರ್ಥಸಂಕೋಚ ಮಾಡುವ ಪ್ರಸಂಗ ಬರುತ್ತದೆ. ಆದ್ದರಿಂದ ಬ್ರಹ್ಮನೆಂಬ ನಾಮಧೇಯವನ್ನು ಅನುಸರಿಸಿ ಇಂದ್ರಪ್ರಾಣಾದಿ ಲಿಂಗಗಳನ್ನು ವಿಷ್ಣುವಿನಲ್ಲಿ ಸಾವಕಾಶ ಮಾಡಬೇಕಾಗುತ್ತದೆ. ಆದ್ದರಿಂದ ಇಂದ್ರಪ್ರಾಣಾದಿ ಲಿಂಗಗಳನ್ನು ವಿವಕ್ಷಿಸಿ ಪೂರ್ವಪಕ್ಷವನ್ನು ನೀವು ಹೇಗೆ ರಚಿಸುತ್ತೀರಿ?

ಪ್ರಾಣಶಬ್ದದಿಂದ ಇಂದ್ರನಾಗಲಿ, ಮುಖ್ಯಪ್ರಾಣನಾಗಲಿ ಅಥವಾ ಜೀವನಾಗಲಿ ವಾಚ್ಯರಾಗಬಹುದು. ಇವರಲ್ಲೆಲ್ಲಾ ಪ್ರಸಿದ್ಧವಾದ ಲಿಂಗಗಳು ಹಾಗೂ ಶ್ರುತಿಗಳು ನಿರವಕಾಶಗಳಾದ್ದರಿಂದ ಪೂರ್ವಪಕ್ಷವು ಹುಟ್ಟುತ್ತದೆ.

ದೇವೇಂದ್ರನಲ್ಲಿ ವೃತ್ರಹಂತೃತ್ವ, ಮಹಾವ್ರತಯಾಜಿತ್ವ ಮೊದಲಾದ ಅಸಾಧಾರಣ ಧರ್ಮಗಳಿವೆ. ಮತ್ತು 'ಪ್ರಾಣೋ ವಾ ಅಹಂ' ಎಂಬ ಶ್ರುತಿಯೂ ಪ್ರಸಿದ್ಧವಾಗಿವೆ. ಇವುಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲು ಸಾಧ್ಯವಿಲ್ಲ. ಅಂತರ್ಯಾಮಿ ವಿವಕ್ಷೆಯಿಂದ ಇವುಗಳನ್ನು ವಿಷ್ಣುವಿನಲ್ಲಿ ಹೇಳಬಹುದೆಂಬ ಒಂದು ಅವಕಾಶವಿದೆ. ಆದರೆ ಒಂದು ವೇಳೆ 'ಅಹಂ' ಶಬ್ದಕ್ಕೆ 'ಅಂತರ್ಯಾಮಿ' ಎಂಬರ್ಥವನ್ನು ಹೇಳಿದರೆ ವಿಷ್ಣುವೇ ಸ್ವತಃ ಯಾವ ವಾಕ್ಯಗಳಲ್ಲಿ 'ಅಹಂ' ಶಬ್ದವನ್ನು ಪ್ರಯೋಗಿಸಿದ್ದಾನೋ ಅಂತಹ ಸ್ಥಳಗಳಲ್ಲಿಯೂ ವಿಷ್ಣುವಿನ ಅಂತರ್ಯಾಮಿ ಯಾರೋ ಒಬ್ಬನನ್ನು ಹೇಳಬೇಕಾಗುವ ಪ್ರಸಂಗ ಬರುತ್ತದೆ. ಆದ್ದರಿಂದ ಇಂದ್ರನಲ್ಲಿ ಪ್ರಸಿದ್ಧವಾದ ಲಿಂಗಗಳನ್ನು ಮತ್ತು ಶ್ರುತಿಗಳನ್ನು ವಿಷ್ಣುವಿನಲ್ಲಿ ಸಾವಕಾಶ ಮಾಡಲು ಸಾಧ್ಯವಿಲ್ಲ.

ಅಥವಾ ವಾಯುವೇ ಪ್ರಾಣಶಬ್ದವಾಚ್ಯನು. ಏಕೆಂದರೆ ಚಕ್ಷುರಾದಿ ಇಂದ್ರಿಯಗಳ ಅಥವಾ ಇಂದ್ರಿಯಾ-ಭಿಮಾನಿ ದೇವತೆಗಳ ಮಧ್ಯದಲ್ಲಿ ಈ ಪ್ರಾಣಶಬ್ದವು ಹೇಳಲ್ಪಟ್ಟಿದೆ. ಚಕ್ಷುರಾದಿಗಳೆಲ್ಲವೂ ಅಪ್ರಧಾನಾದಿಗಳಾದ್ದರಿಂದ ಅವುಗಳ ಮಧ್ಯದಲ್ಲಿ ಪಠಿತವಾದ ಪ್ರಾಣವೂ ಅಪ್ರಧಾನವೇ ಆಗಬೇಕು. ಹೊರತು ಪ್ರಧಾನವಾದ ಬ್ರಹ್ಮನು ಪ್ರಾಣಶಬ್ದವಾಚ್ಯನಾಗುವುದಿಲ್ಲ. ಈ ವಿಷಯವು ಸಾಹಚರ್ಯ ಪ್ರಮಾಣದಿಂದ ಸಿದ್ಧವಾಗಿದೆ. ಸಾಹಚರ್ಯವನ್ನು ಪ್ರಮಾಣವೆಂಬುದಾಗಿ ಪೂರ್ವಮೀಮಾಂಸಕರು ಮತ್ತು ವೈಯಾಕರಣರು ಒಪ್ಪಿಕೊಂಡಿದ್ದಾರೆ.

ಇಂದ್ರಿಯಾಭಿಮಾನಿ ದೇವತೆಗಳು ಪರಸ್ಪರ ಕಲಹ ಮಾಡುವ ಸಂದರ್ಭದಲ್ಲಿ ಪ್ರಾಣ ಶಬ್ದವು ಹೇಳಲ್ಪಟ್ಟಿದೆ. ಅತ್ಯಂತ ನಿಕೃಷ್ಟರಾದ ಇಂದ್ರಿಯಾಭಿಮಾನಿ ದೇವತೆಗಳ ಜೊತೆಗೆ ಸರ್ವೋತ್ಕೃಷ್ಟನಾದ ಬ್ರಹ್ಮನು ಕಲಹ ಮಾಡಲು ಸಾಧ್ಯವಿಲ್ಲದ ಕಾರಣ ಬ್ರಹ್ಮನು ಪ್ರಾಣಶಬ್ದ ವಾಚ್ಯನಾಗಲಾರ.

ಜೀವನ ಲಿಂಗವೂ ಸಹ ನಿರವಕಾಶವಾಗಿದೆ. 'ಶತಸಂವತ್ಸರತ್ವ' ಎಂಬ ಲಿಂಗವು ಜೀವನಲ್ಲಿ ಶ್ರುತವಾಗಿವೆ. ಈ ಲಿಂಗವು ಜೀವನನ್ನು ಬಿಟ್ಟು ಬೇರೆ ಯಾರಲ್ಲಿಯೂ ಬರುವುದಿಲ್ಲ. ವಸ್ತುತಃ ಜೀವನನ್ನು ಹೇಳುವ ಪ್ರಕರಣದಲ್ಲಿ ಪ್ರಾಣಶಬ್ದವಿರುವುದಿಲ್ಲ. ಆದರೂ 'ಪ್ರಾಣೋ ವಾ ತದಭ್ಯಾರ್ಚತ್' ಎಂಬಲ್ಲಿ ತತ್ ಶಬ್ದದಿಂದ ಪ್ರಕೃತನಾದ ಪ್ರಾಣನನ್ನು ಪರಾಮರ್ಶಿಸಲು ಬರುತ್ತದೆ. ಜೀವನಲ್ಲಿರುವ ಶತಸಂವತ್ಸರತ್ವ ಎಂಬ ಲಿಂಗವನ್ನು ಅಂತರ್ಯಾಮಿ ವಿವಕ್ಷೆಯಿಂದ ಪರಮಾತ್ಮನಲ್ಲಿ ಸಮನ್ವಯ ಮಾಡಬಾರದು. ಹಾಗಾದಲ್ಲಿ ಜೀವನಲ್ಲಿರುವ ಸಂಸಾರವನ್ನು

ಪರಮಾತ್ಮನಲ್ಲಿಯೇ ಸಮನ್ವಯ ಮಾಡಬೇಕಾದ ಪ್ರಸಂಗ ಬರುತ್ತದೆ. ಆದ್ದರಿಂದ ಜೀವನ ಲಿಂಗವನ್ನು ವಿಷ್ಣುವಿನಲ್ಲಿ ಸಾವಕಾಶ ಮಾಡಲಾಗದು. ಆದರೆ ವಿಷ್ಣುವಿನ ಬಗ್ಗೆ ಹೇಳಲ್ಪಟ್ಟ ವಾಕ್ಯಗಳನ್ನು ಜೀವನಲ್ಲಿ ಸಾವಕಾಶ ಮಾಡಬಹುದು.

ಆದ್ದರಿಂದ ಜೀವನಾಗಲೀ, ಮುಖ್ಯವಾಯುವಾಗಲೀ ಅಥವಾ ದೇವೇಂದ್ರನೇ ಆಗಲಿ ಪ್ರಾಣಶಬ್ದದಿಂದ ವಾಚ್ಯರಾಗುತ್ತಾರೆಂಬ ಪೂರ್ವಪಕ್ಷವು ದೃಢವಾಯಿತು.

ಶ್ರೀಮದಾಚಾರ್ಯರು ಹಿಂದಿನ ಪ್ರಾಣಾಧಿಕರಣದ ಸಿದ್ಧಾಂತದ ಆಕ್ಷೇಪವೇ ಈ ಅಧಿಕರಣದ ಪೂರ್ವಪಕ್ಷದ ಫಲವೆಂದು ಹೇಳಿದ್ದಾರೆ. ಇದು ಸರಿಯೋ ಅಲ್ಲವೋ? ಎಂಬುದರ ಬಗ್ಗೆ ಈಗ ವಿಚಾರ ನಡೆದಿದೆ. ಈ ಅಧಿಕರಣದಲ್ಲಿ ನಿರವಕಾಶವಾದ ಶ್ರುತಿಲಿಂಗಬಾಹುಲ್ಯವಿರುವುದರಿಂದ ಐತರೇಯದಲ್ಲಿ ಹೇಳಲ್ಪಟ್ಟ ಪ್ರಾಣನು ವಿಷ್ಣುವಲ್ಲ ಹೊರತು ಇಂದ್ರಾದಿಗಳೆಂದೇ ಪೂರ್ವಪಕ್ಷ ಮಾಡಲಾಯಿತು. ಇದರಿಂದಾಗಿ ಹಿಂದಿನ ಪ್ರಾಣಾಧಿಕರಣದಲ್ಲಿ ಹೇಳಲ್ಪಟ್ಟ ಪ್ರಾಣನೂ ಸಹ ಪರಮಾತ್ಮನಾಗಲಾರ ಎಂದು ಹೇಗೆ ಹೇಳಲು ಸಾಧ್ಯ ? ಏಕೆಂದರೆ ಶ್ರೀಪತಿತ್ವ ಮೊದಲಾದ ಲಿಂಗಗಳ ಬಲದಿಂದ ಹಿಂದಿನ ಅಧಿಕರಣದಲ್ಲಿ ತೈತ್ತಿರೀಯದಲ್ಲಿ ಹೇಳಲ್ಪಟ್ಟ ಪ್ರಾಣನು ವಿಷ್ಣುವೆಂದು ನಿರ್ಣಯವಾಗಿದೆ. ಇಲ್ಲಿ ಹೇಳಲ್ಪಟ್ಟ ಪೂರ್ವಪಕ್ಷಯುಕ್ತಿಯು ಹಿಂದಿನ ಅಧಿಕರಣದ ಪ್ರಾಣನಲ್ಲಿ ಬರುವುದಿಲ್ಲ. ಆದ್ದರಿಂದ ಶ್ರೀಮದಾಚಾರ್ಯರ ಮಾತಿಗೆ ಏನು ಅರ್ಥ?

ಶ್ರೀಮದಾಚಾರ್ಯರ 'ಪ್ರಾಚೀನೋಽಪ್ಯನ್ಯಃ' ಎಂಬ ಮಾತಿನ ಬಗ್ಗೆ ಆಕ್ಷೇಪ ಮಾಡಿದ್ದೂ ತಪ್ಪು. ಅಂತಿಮಪ್ರಾಣಾಧಿಕರಣದಲ್ಲಿ ಪ್ರಾಣಶಬ್ದದಿಂದ ದೇವೇಂದ್ರಾದಿಗಳು ಪ್ರತಿಪಾದ್ಯರೆನ್ನಲು ವಿಶೇಷಲಿಂಗವಿದೆ. ಆದರೆ ಪ್ರಾಣಾಧಿಕರಣದಲ್ಲಿ ಪ್ರಾಣಶಬ್ದವಾಚ್ಯನು ದೇವೇಂದ್ರನೆನ್ನಲು ವಿಶೇಷಲಿಂಗವಿರುವುದಿಲ್ಲ. ಆದರೂ ಸಹ ಈ ಅಧಿಕರಣದಲ್ಲಿ ವಿಶೇಷಲಿಂಗದ ಬಲದಿಂದ ದೇವೇಂದ್ರನು ಪ್ರಾಣಶಬ್ದವಾಚ್ಯನೆಂದು ನಿರ್ಣಯವಾದ ಮೇಲೆ ಹಿಂದಿನ ಪ್ರಾಣಾಧಿಕರಣದ ಪ್ರಾಣನೂ ಸಹ ದೇವೇಂದ್ರನೆಂದೇ ನಿರ್ಣಯವಾಗುತ್ತದೆ. ಇದಕ್ಕೆ ವಿಶೇಷಕಾರಣ ಬೇಕಾಗಿಲ್ಲ.

ಪೂರ್ವಮೀಮಾಂಸಕರಿಗೂ ಭಾಟ್ಟರಿಗೂ ಈ ವಿಷಯ ಸಮ್ಮತವಾಗಿವೆ. 'ಸ್ವರ್ಗಕಾಮೋ ಯಜೇತ' ಎಂಬಲ್ಲಿರುವ 'ಲಿಙ್' ಪ್ರತ್ಯಯವು ಅಪೂರ್ವವೆಂಬ ಕಾರ್ಯವನ್ನು ಹೇಳುತ್ತದೆ. ಇದಕ್ಕೆ 'ಸ್ವರ್ಗಕಾಮಃ' ಎಂಬ ಪ್ರಯೋಗವೇ ಕಾರಣವಾಗಿದೆ. ಆದರೆ 'ಸಂಧ್ಯಾಮುಪಾಸೀತ' ಎಂಬಲ್ಲಿ ಫಲಕಾಮಿ ವಾಚಕವಾದ ಪದ ಇರುವುದಿಲ್ಲ. ಆದರೂ 'ಏಕತ್ರ ನಿರ್ಣೀತಃ ಶಾಸ್ತ್ರಾರ್ಥಃ ಸರ್ವತ್ರ' ಎಂಬ ನ್ಯಾಯವನ್ನು ಅನುಸರಿಸಿ 'ಉಪಾಸೀತ' ಎಂಬಲ್ಲಿರುವ 'ಲಿಙ್' ಪ್ರತ್ಯಯವೂ ಸಹ ಅಪೂರ್ವವೆಂಬ ಕಾರ್ಯತ್ವವನ್ನೇ ಹೇಳುತ್ತದೆ.

ಇದರಂತೆ ಭಾಟ್ಟರು ಯವಮಯಾಧಿಕರಣದಲ್ಲಿ 'ಯವ' ಶಬ್ದಕ್ಕೆ ವಾಕ್ಯಶೇಷದ ಬಲದಿಂದ ದೀರ್ಘಶೂಕವಿಶಿಷ್ಟವಾದ ಧಾನ್ಯವಿಶೇಷವೆಂಬ ಅರ್ಥವನ್ನು ಅಂಗೀಕರಿಸಿದ್ದಾರೆ. ಆದರೆ ಎಲ್ಲಿ ವಾಕ್ಯಶೇಷವಿರುವುದಿಲ್ಲವೋ ಅಲ್ಲಿಯೂ ಸಹ ದೀರ್ಘಶೂಕವಿಶಿಷ್ಟವಾದ ಧಾನ್ಯವೆಂಬ ಅರ್ಥವನ್ನೇ ಅಂಗೀಕರಿಸಿದ್ದಾರೆ. 'ಏಕತ್ರ ನಿರ್ಣೀತಃ ಶಾಸ್ತ್ರಾರ್ಥಃ ಸರ್ವತ್ರ' ಎಂಬ ನ್ಯಾಯವೇ ಇದಕ್ಕೂ ಕಾರಣ. ಇದರಂತೆ ಪ್ರಕೃತ ಐತರೇಯದಲ್ಲಿರುವ ಪ್ರಾಣಶಬ್ದವಾಚ್ಯನು ಇಂದ್ರಾದಿಗಳೆನ್ನಲು ಅನೇಕ ನಿರವಕಾಶಲಿಂಗಗಳಿರುತ್ತವೆ. ಆದರೆ ತೈತ್ತಿರೀಯದಲ್ಲಿರುವ ಪ್ರಾಣನು ಇಂದ್ರಾದಿಗಳೆನ್ನಲು ಅಂತಹ ನಿರವಕಾಶಲಿಂಗಗಳಿರುವುದಿಲ್ಲ. ಆದ್ದರಿಂದ 'ಏಕತ್ರ ನಿರ್ಣೀತಃ ಶಾಸ್ತ್ರಾರ್ಥಃ ಸರ್ವತ್ರ' ಎಂಬ ನ್ಯಾಯವನ್ನು ಅನುಸರಿಸಿ ಶ್ರೀಮದಾಚಾರ್ಯರ ಮಾತನ್ನು ಅರ್ಥಮಾಡಿಕೊಳ್ಳಬೇಕು.

'ಏಕತ್ರ ನಿರ್ಣೀತಃ ಶಾಸ್ತ್ರಾರ್ಥಃ ಸರ್ವತ್ರ' ಎಂಬ ನ್ಯಾಯವನ್ನು ನಿರ್ಣಯಿಸಿ ಶ್ರೀಮದಾಚಾರ್ಯರ ಪೂರ್ವಪಕ್ಷ ಫಲದ ಮಾತನ್ನು ಸಮರ್ಥಿಸಿದಿರಿ. ಆದರೆ ಇದು ಅಯುಕ್ತವಾಗಿದೆ. ಈ ಅಧಿಕರಣದಲ್ಲಿ ನಿರವಕಾಶವಾದ ಇಂದ್ರಾದಿ ಲಿಂಗಗಳಿರುವುದರಿಂದ ಅಮುಖ್ಯವೃತ್ತಿಯಿಂದ ಇಂದ್ರಾದಿಪರತ್ವವನ್ನು ಪ್ರಾಣಶಬ್ದಕ್ಕೆ ಒಪ್ಪೋಣ. ಹಿಂದಿನ

ಪ್ರಾಣಾಧಿಕರಣದಲ್ಲಿ ಮುಖ್ಯವೃತ್ತಿಯಿಂದಲೇ ವಿಷ್ಣುಪರತ್ವವನ್ನು ಒಪ್ಪೋಣ. ಹೀಗೆ ಒಪ್ಪಿದಾಗ ಈ ಅಧಿಕರಣದ ಪೂರ್ವಪಕ್ಷಕ್ಕೆ ಹಿಂದಿನ ಅಧಿಕರಣದ ಸಿದ್ಧಾಂತವನ್ನು ಆಕ್ಷೇಪಿಸುವುದನ್ನು ಫಲವೆಂದು ಹೇಳಲು ಸಾಧ್ಯ ?

ಈ ಪ್ರಶ್ನೆಯೂ ಸಹ ತಪ್ಪು. ಏಕೆಂದರೆ ಐತರೇಯದ ಪ್ರಾಣಶಬ್ದಕ್ಕೆ ಇಂದ್ರಾದಿಗಳಲ್ಲಿ ಅಮುಖ್ಯವೃತ್ತಿಯನ್ನು ಏಕೆ ಹೇಳುತ್ತಿದ್ದೀರಿ. ಮುಖ್ಯವೃತ್ತಿಯನ್ನು ಒಪ್ಪಲು ಬಾಧಕವಿದ್ದರೇ ಮಾತ್ರ ಅಮುಖ್ಯವೃತ್ತಿಯನ್ನು ಹೇಳಬೇಕು. ವಿಷ್ಣುವಿನಲ್ಲಿ ಪ್ರಾಣಶಬ್ದವು ಮುಖ್ಯವಾಗಿರುವಿಕೆಯನ್ನು ಬಾಧಕವೆಂದು ಹೇಳಲಾಗದು. ಈ ಪ್ರಮೇಯವೂ ಹಿಂದಿನ ಪ್ರಾಣಾಧಿಕರಣದ ಸಿದ್ಧಾಂತವಾಗಿದೆ. ಅದನ್ನೇ ನಾವು ಪ್ರಕೃತ ಆಕ್ಷೇಪಿಸುತ್ತಿದ್ದೇವೆ.

ಇನ್ನು ಇಂದ್ರಾದಿಗಳಲ್ಲಿ ಯೋಗರೂಢಿಯ ಅಸತ್ವವನ್ನು ಬಾಧಕವೆಂದು ಹೇಳಬೇಕು. ಆದರೆ ಪ್ರಣೇತೃತ್ವ-ವೆಂಬ ಯೋಗವನ್ನು ದೇವೇಂದ್ರನಲ್ಲಿ ಹೇಳಬಹುದು. ರೂಢಿಯನ್ನು ಮುಖ್ಯಪ್ರಾಣನಲ್ಲಿ ಹೇಳಬಹುದು. ಆದ್ದರಿಂದ ಇಂದ್ರಾದಿಗಳಲ್ಲಿರುವ ಯೋಗರೂಢಿಯ ಅಸತ್ವವನ್ನು ಬಾಧಕವೆಂದು ಹೇಳಲು ಹೇಗೆ ಸಾಧ್ಯ. ವಿಷ್ಣುವಿನಲ್ಲಿ ವಿದ್ವದ್ರೂಢಿ ಹಾಗು ಮಹಾಯೋಗಗಳನ್ನೇ ಬಾಧಕವೆಂದು ಅಂತಿಮವಾಗಿ ಹೇಳಲು ಸಾಧ್ಯ. ಆದರೆ ಯಾವ ಪೂರ್ವಪಕ್ಷಿಯು ವೇದದಲ್ಲಿರುವ ಎಲ್ಲಾ ಪ್ರಾಣಶಬ್ದಗಳಿಗೆ ವಿಷ್ಣುಪರತ್ವವನ್ನು ಅಂಗೀಕರಿಸದೆ ಕೇವಲ ಇಂದ್ರಾದಿ ವಾಚಕತ್ವವನ್ನು ಆಕ್ಷೇಪಿಸುತ್ತಿದ್ದಾನೋ ಅಂತಹ ಪೂರ್ವಪಕ್ಷಿಯು ವಿಷ್ಣುವಿನಲ್ಲಿ ವಿದ್ವದ್ರೂಢಿಯನ್ನೂ ಸಹ ಒಪ್ಪಲಾರ. ವಿದ್ವದ್ರೂಢಿಯನ್ನು ಒಪ್ಪಿದರೆ ಮಾತ್ರ ಮಹಾಯೋಗವನ್ನು ವಿಷ್ಣುವಿನಲ್ಲಿ ಹೇಳಬಹುದು. ಆದ್ದರಿಂದ ಶ್ರೀಮದಾಚಾರ್ಯರ ಆಕ್ಷೇಪದ ಪೂರ್ವಪಕ್ಷದ ಫಲಕಥನ ಮಾತಿನಲ್ಲಿ ಯಾವುದೇ ದೋಷವಿಲ್ಲ.

ಈ ಅಧಿಕರಣದಲ್ಲಿ ಪ್ರಾಣಶಬ್ದವು ಇಂದ್ರನಲ್ಲಿ ಮುಖ್ಯವಾಗಿದೆ. ಹಿಂದಿನ ಅಧಿಕರಣದಲ್ಲಿ ವಿಷ್ಣುವಿನಲ್ಲಿ ಗೌಣವಾಗಿದೆ ಎಂದು ಹೇಳಬಹುದಲ್ಲವೇ? ಎಂಬ ಶಂಕೆಗೂ ಈಗ ಅವಕಾಶವಿಲ್ಲ. ಸಿದ್ಧಾಂತಿಯಾದವನಿಗೆ ಇದು ಅಭಿಮತವೇ ಆಗಿಲ್ಲ. ಅದರಂತೆ ಇಂದ್ರ ಹಾಗೂ ವಿಷ್ಣು ಇಬ್ಬರಲ್ಲಿಯೂ ಮುಖ್ಯಾರ್ಥವನ್ನು ಹೇಳೋಣವೇ? ಎಂಬ ಶಂಕೆಯನ್ನು ಈಗ ನಿರಾಕರಿಸಿದಂತಾಯಿತು.

ಬೇರೆ ಮಾರ್ಗವಿಲ್ಲದಾಗ ಮಾತ್ರ ಒಂದೇ ಶಬ್ದಕ್ಕೆ ಅನೇಕಾರ್ಥವನ್ನು ಹೇಳಬಹುದು. ಆದರೆ ಏನೂ ತೊಂದರೆಯಿಲ್ಲದಿದ್ದಾಗ ಎರಡರ್ಥ ಹೇಳುವುದು ತಪ್ಪಾಗುತ್ತದೆ. ಐತರೇಯದಲ್ಲಿ ಮುಖ್ಯವೃತ್ತಿಯಿಂದ ದೇವೇಂದ್ರನು ಪ್ರತಿಪಾದ್ಯನು. ತೈತ್ತೀರಿಯದಲ್ಲಿ ವಿಷ್ಣು ಗೌಣೀವೃತ್ತಿಯಿಂದ ಪ್ರತಿಪಾದ್ಯನು ಎಂಬ ಶಂಕೆಯೂ ಸಹ ತಪ್ಪು.

ಬಾಧಕವಿದ್ದಾಗ ಮಾತ್ರ ಮುಖ್ಯಾರ್ಥವನ್ನು ಬಿಟ್ಟು ಗೌಣೀವೃತ್ತಿಯನ್ನು ಆಶ್ರಯಿಸಬೇಕು. ಆದರೆ ಇಂದ್ರಶಬ್ದಕ್ಕೆ ವಿಷ್ಣುಪರತ್ವವನ್ನು ಒಪ್ಪಿದಾಗ ಯಾವುದೇ ಬಾಧಕಗಳಿರುವುದಿಲ್ಲ. ಆದ್ದರಿಂದ ಯಾವುದೇ ಪ್ರಕಾರದಿಂದಲೂ ಈ ಅಧಿಕರಣದ ಪೂರ್ವಪಕ್ಷದ ಫಲವನ್ನು ಹೇಳಿದ್ದು ಅಸಾಧುವೆಂದು ಶಂಕಿಸಲಾಗದು.

ಹಿಂದಿನ ಪ್ರಾಣಾಧಿಕರಣದಲ್ಲಿ ವಿಷ್ಣುವಿನಲ್ಲಿ ಅಸಾಧಾರಣವಾದ ಶ್ರೀಪತಿತ್ವ ಮೊದಲಾದ ಲಿಂಗಗಳಿಂದ ಪ್ರಾಣಶಬ್ದಕ್ಕೆ ವಿಷ್ಣುಪರತ್ವವನ್ನು ಸಮರ್ಥಿಸಿದ್ದಾಗಿದೆ. ಅದರ ಬಲದಿಂದಲೇ ಇಲ್ಲಿಯೂ ಸಹ ವಿಷ್ಣುಪರತ್ವವನ್ನು ಹೇಳಲು ಬರುವಾಗ ಪೂರ್ವಪಕ್ಷದ ಆಕ್ಷೇಪದ ಫಲವನ್ನು ಶ್ರೀಮದಾಚಾರ್ಯರು ಹೇಳಿದ್ದು ಹೇಗೆ ಸರಿ? ಎಂಬ ಅಂತಿಮವಾದ ವಿಕಲ್ಪಕ್ಕೂ ಈಗ ಅವಕಾಶವಿಲ್ಲ. ಏಕೆಂದರೆ ಈ ಅಧಿಕರಣದಲ್ಲಿ ಹೇಳುತ್ತಿರುವ ಲಿಂಗಗಳಲ್ಲಿ ಬಹುತ್ವ, ಶ್ರುತ್ಯನುಗೃಹೀತತ್ವ, ಸಾಕ್ಷಾದ್‌ಪ್ರಾಣವಿಶೇಷಣತ್ವ ಮೊದಲಾದ ಧರ್ಮಗಳಿವೆ, ಆದರೆ ಹಿಂದಿನ ಪ್ರಾಣಾಧಿಕರಣದಲ್ಲಿ ಹೇಳಲ್ಪಟ್ಟ ಶ್ರೀಪತಿತ್ವಾದಿ ಲಿಂಗಗಳಲ್ಲಿ ಈ ಯಾವಧರ್ಮಗಳೂ ಇರುವುದಿಲ್ಲ. ಆದ್ದರಿಂದ ಹಿಂದಿನ ಅಧಿಕರಣದ ಸಿದ್ಧಾಂತಯುಕ್ತಿಯಿಂದ ಈ ಅಧಿಕರಣದ ಪೂರ್ವಪಕ್ಷವು ಪರಿಹಾರವಾಗುವುದಿಲ್ಲ.

ಅಂತಿಮಪ್ರಾಣಾಧಿಕರಣ-(೧।೧।೧೨)

ಅಥವಾ ಅಲ್ಲಿಯೂ ಸಹ ಬ್ರಹ್ಮನ ಲಿಂಗಗಳಲ್ಲಿ ಬಹುತ್ವಾದಿಗಳು ಇವೆಯೆಂದು ವಿವಕ್ಷಿಸಿದರೂ ತಪ್ಪಿಲ್ಲ. ಈ ಅಧಿಕರಣದಲ್ಲಿ ಪ್ರಾಣಶಬ್ದವು ಇಂದ್ರಾದಿಪರವಾಗಿದೆ ಎಂದು ಪೂರ್ವಪಕ್ಷ ಮಾಡಿದಾಗ ಹಿಂದಿನ ಅಧಿಕರಣದ ಪ್ರಾಣನು ವಿಷ್ಣುವೋ ಅಥವಾ ಇಂದ್ರಾದಿಗಳೋ? ಎಂಬ ಸಂಶಯವಂತೂ ಬಂದೇ ಬರುತ್ತದೆ. ಆವಾಗ ವಿಷ್ಣು-ವೊಬ್ಬನೇ ಪ್ರಾಣಶಬ್ದವಾಚ್ಯನೆಂಬ ಅವಧಾರಣವೂ ಕೂಡುವುದಿಲ್ಲ. ಈ ಅವಧಾರಣವನ್ನು ಮಾತ್ರ ಶ್ರೀಮದಾ-ಚಾರ್ಯರು ಇಲ್ಲಿ ಪೂರ್ವಪಕ್ಷಫಲವನ್ನಾಗಿ ಆಕ್ಷೇಪಿಸಿದ್ದಾರೆಂದು ಭಾವಿಸಬೇಕು.

ಹಿಂದಿನ ಪ್ರಾಣಾಧಿಕರಣದಲ್ಲಿ ಪ್ರಾಣಶಬ್ದದಿಂದ ವಿಷ್ಣು ವಾಚ್ಯನಾಗುತ್ತಾನೆಂಬ ಸಂಶಯ ಬರುವುದೇ ಈ ಅಧಿಕರಣದ ಪೂರ್ವಪಕ್ಷಫಲ. ಹಿಂದಿನ ಪ್ರಾಣಾಧಿಕರಣದಲ್ಲಿ ವಿಷ್ಣುವೇ ಪ್ರಾಣಶಬ್ದವಾಚ್ಯನೆಂಬ ನಿರ್ಣಯವೇ ಈ ಅಧಿಕರಣದ ಸಿದ್ಧಾಂತಫಲ.

ಈ ಎರಡೂ ಅಧಿಕರಣಗಳಲ್ಲಿ ವಿಷ್ಣುವೇ ಪ್ರಾಣಶಬ್ದವಾಚ್ಯನೆಂದು ನಿರ್ಣಯಿಸಲಾಗಿದೆ. ಎರಡೂ ಅಧಿ ಕರಣಗಳ ಸಿದ್ಧಾಂತನ್ಯಾಯವು ಒಂದೇ ಆಗಿರುವಾಗ ಬೇರೆ ಬೇರೆ ಅಧಿಕರಣವನ್ನಾಗಿ ಏಕೆ ಪರಿಗಣಿಸಿದ್ದಾರೆಂದು ಗೊಂದಲವಾಗುತ್ತದೆ. ಈ ಎರಡೂ ಅಧಿಕರಣಗಳ ಪರಮಸಿದ್ಧಾಂತಗಳು ಒಂದೇ ಆಗಿದ್ದರೂ ಅವಾಂತರ-ನಿರ್ಣಯಗಳಲ್ಲಿ ವ್ಯತ್ಯಾಸವಿದೆ. ಹಿಂದಿನ ಪ್ರಾಣಾಧಿಕರಣದಲ್ಲಿ ಜೀವನಹೇತುತ್ವವನ್ನು ವಿಷ್ಣುವಿನಲ್ಲಿ ಸಮರ್ಥಿಸು-ವುದು ಅವಾಂತರಪ್ರಯೋಜನವಾಗಿತ್ತು. ಈ ಅಧಿಕರಣದಲ್ಲಿ ಪ್ರಸಿದ್ಧಲಿಂಗಗಳಿಗೆ ಅಂತರ್ಯಾಮಿಗತತ್ವವನ್ನು ಸಮರ್ಥಿಸುವುದು ಪ್ರಯೋಜನವಾಗಿದೆ. ಈ ಅವಾಂತರನಿರ್ಣಯಕ್ಕೋಸ್ಕರ ಅನೇಕ ಅಧಿಕರಣಗಳನ್ನು ಒಪ್ಪ-ಬಹುದೆಂದು ಪ್ರಾಭಾಕರರು ಹಾಗೂ ಭಾಟ್ಟರು ತಮ್ಮ ಗ್ರಂಥಗಳಲ್ಲಿ ಸಮರ್ಥಿಸಿಕೊಂಡಿದ್ದಾರೆ. ಆದ್ದರಿಂದ ಪ್ರಕೃತ ಒಂದು ಪಾದದಲ್ಲಿ ಎರಡು ಪ್ರಾಣಾಧಿಕರಣಗಳನ್ನು ಹೇಳಿದ್ದು ತಪ್ಪಾಗುವುದಿಲ್ಲ.

ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ ಪ್ರಾಣಶಬ್ದವು ಉಭಯತ್ರಪ್ರಸಿದ್ಧವಾಗಬೇಕು, ಏಕೆಂದರೆ ಹಿಂದಿನ ಪ್ರಾಣಾಧಿಕರಣದಲ್ಲಿ ಕೆಲವು ವಾಕ್ಯಗಳಲ್ಲಿರುವ ಪ್ರಾಣಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ. ಆದರೆ ಲೋಕಪ್ರಸಿದ್ಧಿಯು ಮುಖ್ಯವಾಯುವಿನಲ್ಲಿದೆ. ಹೀಗೆ ಪ್ರಾಣಶಬ್ದವು ಉಭಯತ್ರಪ್ರಸಿದ್ಧವಾಗುತ್ತದೆ. ಆದ್ದರಿಂದ ಈ ಅಧಿಕರಣವನ್ನು ಮೂರನೇ ಪಾದದಲ್ಲಿ ಸೇರಿಸಬೇಕಲ್ಲವೇ?

ಈ ಗೊಂದಲವನ್ನು ಪರಿಹಾರ ಮಾಡುವುದಕ್ಕಾಗಿಯೇ ಶ್ರೀಮದಾಚಾರ್ಯರು ಹಿಂದಿನ ಪ್ರಾಣಾಧಿಕರಣದ ಪ್ರಮೇಯವನ್ನು ಪೂರ್ವಪಕ್ಷಫಲವನ್ನಾಗಿ ಆಕ್ಷೇಪಿಸಿದ್ದಾರೆ. ಹಾಗೆ ಆಕ್ಷೇಪಿಸಿದ್ದರಿಂದ ಪ್ರಾಣಶಬ್ದಕ್ಕೆ ವಿಷ್ಣುಪರತ್ವವು ಇದುವರೆಗೂ ನಿರ್ಣಯವಾಗಿಲ್ಲವೆಂದಂತಾಯಿತು. ಹಾಗಾಗಿ ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ ಪ್ರಾಣಶಬ್ದವು ಲೋಕಪ್ರಸಿದ್ಧಿಯಂತೆ ಅನ್ಯತ್ರಪ್ರಸಿದ್ಧವಾಗುತ್ತದೆ ಹೊರತು ಉಭಯತ್ರಪ್ರಸಿದ್ಧ-ವಾಗುವುದಿಲ್ಲ. ಮೂರನೇ ಪಾದದಲ್ಲಿ ಆಕಾಶಶಬ್ದವನ್ನು ಉಭಯತ್ರಪ್ರಸಿದ್ಧವೆಂದು ಪರಿಗಣಿಸಿದ್ದಾರೆ. ಏಕೆಂದರೆ ಆ ಅಧಿಕರಣದ ಟೀಕೆಯಲ್ಲಿ ಪ್ರಥಮಪಾದದಲ್ಲಿ ಉಕ್ತವಾದ ಆಕಾಶಶಬ್ದವನ್ನು ಆಕ್ಷೇಪಮಾಡಿಯೇ ಇಲ್ಲ. ಹೊರತಾಗಿ ದ್ಯುಭ್ವಾದ್ಯಧಿಕರಣದ ಪ್ರಮೇಯವನ್ನಷ್ಟೇ ಆಕ್ಷೇಪಿಸಿದ್ದಾರೆ. ಆದ್ದರಿಂದ ಆಕಾಶಶಬ್ದವು ಉಭಯತ್ರಪ್ರಸಿದ್ಧವಾಗಿದೆ-ಯೆಂದು ನಿರ್ಣಯಿಸಿದ್ದಾರೆ. ಈ ವ್ಯತ್ಯಾಸವನ್ನು ಅವಶ್ಯ ಗಮನಿಸಬೇಕು.

''ಹಿಂದಿನ ಅಧಿಕರಣದ ಸಿದ್ಧಾಂತ ಪ್ರಮೇಯವನ್ನು ಆಕ್ಷೇಪ ಮಾಡಿದ್ದರೆ ಅನ್ಯತ್ರಪ್ರಸಿದ್ಧವಾಗುತ್ತದೆ. ಹಿಂದಿನ ಅಧಿಕರಣದ ಪ್ರಮೇಯವನ್ನು ಆಕ್ಷೇಪ ಮಾಡದಿದ್ದರೆ ಉಭಯತ್ರಪ್ರಸಿದ್ಧ ಎನಿಸುತ್ತದೆ'' ಎಂಬ ವ್ಯಾಪ್ತಿಯನ್ನು ಹೇಳಿದಂತಾಯಿತು.

ವಸ್ತುತಃ ಮೂರನೇ ಪಾದದಲ್ಲಿರುವ 'ಜ್ಯೋತಿರ್ದರ್ಶನಾತ್' ಎಂಬ ಸೂತ್ರದಲ್ಲಿ ಪ್ರಥಮಪಾದದಲ್ಲಿರುವ ಜ್ಯೋತಿರಧಿಕರಣದಲ್ಲಿರುವ ಪ್ರಮೇಯವನ್ನು ಆಕ್ಷೇಪಿಸಿಲ್ಲ. ಆದ್ದರಿಂದ ಅನ್ಯತ್ರಪ್ರಸಿದ್ಧವಾಗಬೇಕೆಂಬ ಸಂಶಯವು

ಬರುತ್ತದೆ. ಆದರೆ ಜ್ಯೋತಿಶಬ್ದದಿಂದ ಅಗ್ನಿ ಎಂಬ ಪೂರ್ವಪಕ್ಷವನ್ನು ಮೂರನೇ ಪಾದದಲ್ಲಿ ಮಾಡಿಯೇ ಇಲ್ಲ. ಪ್ರಥಮಪಾದದಲ್ಲಿ ಅಗ್ನಿ ಎಂದು ಪೂರ್ವಪಕ್ಷ ಮಾಡಲಾಗಿದೆ. ಆದ್ದರಿಂದ ಎರಡೂ ಅಧಿಕರಣಗಳಲ್ಲಿ ಜ್ಯೋತಿಶಬ್ದವು ಸಮಾನವಾಗಿದ್ದರೂ ಬೇರೆ ಬೇರೆ ಅರ್ಥಗಳಲ್ಲಿ ಜ್ಯೋತಿಶಬ್ದವು ಪ್ರಯುಕ್ತವಾಗಿದೆ. ಪ್ರಥಮ ಪಾದದಲ್ಲಿ ಅಗ್ನಿಯೆಂದು ಪೂರ್ವಪಕ್ಷ ಮಾಡಿದರೆ, ತೃತೀಯಪಾದದಲ್ಲಿ ಜೀವನೆಂದು ಪೂರ್ವಪಕ್ಷ ಮಾಡಲಾಗಿದೆ. ಆದ್ದರಿಂದ ಹಿಂದಿನ ಅಧಿಕರಣದ ಪ್ರಮೇಯವನ್ನು ಹೇಗೆ ತಾನೇ ಆಕ್ಷೇಪಿಸಲು ಸಾಧ್ಯವಾಗುತ್ತದೆ.

ಹಾಗಾದರೆ ನಾಲ್ಕನೇ ಪಾದದಲ್ಲಿ ಆಕಾಶ ಹಾಗೂ ಜ್ಯೋತಿಶಬ್ದದ ಸಮನ್ವಯವನ್ನು ಮಾಡಿದ್ದಾರೆ. ಆದರೆ ಹಿಂದಿನ ಅಧಿಕರಣದ ಪ್ರಮೇಯವನ್ನು ಅಲ್ಲಿಯೂ ಸಹ ಆಕ್ಷೇಪಿಸಿಲ್ಲ. ಆದ್ದರಿಂದ ಆ ಶಬ್ದಗಳು ಉಭಯತ್ರಪ್ರಸಿದ್ಧ-ವಾಗಬೇಕಲ್ಲವೆ? ಎಂದು ಪ್ರಶ್ನೆ ಬರುತ್ತದೆ. ಇದೂ ಸಹ ತಪ್ಪು. ಒಂದು ವೇಳೆ 'ಕಾರಣತ್ವೇನ' ಎಂಬ ಸೂತ್ರದಲ್ಲಿ 'ಜ್ಯೋತಿರುಪಕ್ರಮಾತ್' ಎಂಬ ಸೂತ್ರದಲ್ಲಿ ಕೇವಲ ಆಕಾಶ ಹಾಗೂ ಜ್ಯೋತಿಶಬ್ದಗಳ ಸಮನ್ವಯವು ವಿವಕ್ಷಿತ-ವಾಗಿದ್ದಲ್ಲಿ, ನಿಮ್ಮ ಆಕ್ಷೇಪವನ್ನು ಒಪ್ಪಬಹುದಿತ್ತು. ಆದರೆ ಯಾಗವಾಚಕವಾದ ಮತ್ತು ಕಾಲವಾಚಕವಾದ ಅನೇಕ ಶಬ್ದಗಳ ಸಮನ್ವಯಗಳನ್ನು ಆ ಅಧಿಕರಣಗಳಲ್ಲಿ ಮಾಡುತ್ತಿದ್ದಾರೆ. ಕೇವಲ ಲೋಕಪ್ರಸಿದ್ಧಿ ಹಾಗೂ ಪೂರ್ವೋಕ್ತಿಗಳು ಇದ್ದರೆ ಮಾತ್ರ ಉಭಯತ್ರಪ್ರಸಿದ್ಧವೆನ್ನಬೇಕು.

ಅಥವಾ ಲೋಕದಿಂದ ಅನ್ಯತ್ರಪ್ರಸಿದ್ಧವಾಗಿದ್ದರೆ ಮಾತ್ರ ಅನ್ಯತ್ರಪ್ರಸಿದ್ಧ ಎನಿಸುತ್ತದೆ. ಮೂರನೇ ಪಾದದಲ್ಲಿರುವ ಆಕಾಶಶಬ್ದವು ಏಕೆ ಉಭಯತ್ರಪ್ರಸಿದ್ಧವೆಂದರೆ, 'ವೈ ನಾಮ' ಎಂಬ ಶ್ರುತಿಯಲ್ಲಿರುವ ನಿಪಾತದಿಂದ ಪ್ರಸಿದ್ಧಾಕಾಶ ಎಂಬರ್ಥವು ತಿಳಿಯುತ್ತದೆ. ಇದರಿಂದ 'ಅಪ್ರಸಿದ್ಧಾಕಾಶಾ' ಎಂಬ ಮತ್ತೊಂದು ಪದಾರ್ಥವನ್ನು ಪೂರ್ವಪಕ್ಷಿಯು ಒಪ್ಪಿದ್ದಾನೆಂದು ಸಿದ್ಧವಾಗುತ್ತದೆ. ಈ ಕಾರಣದಿಂದಷ್ಟೇ 'ಆಕಾಶ' ಶಬ್ದವು ಉಭಯತ್ರಪ್ರಸಿದ್ಧವಾಗಿದೆ.

ಸಿದ್ಧಾಂತ ಸ್ಥಾಪನೆ ಹೀಗಿದೆ - ಪೂರ್ವಪಕ್ಷದಲ್ಲಿ ಎಷ್ಟು ನಿರವಕಾಶಯುಕ್ತಿಗಳನ್ನು ಹೇಳಿದರೋ ಅದಕ್ಕಿಂತಲೂ ನಿರವಕಾಶವಾದ ಅನೇಕ ಲಿಂಗಗಳು ವಿಷ್ಣುವಿನಲ್ಲೇ ಶ್ರುತವಾಗಿವೆ. ಐತರೇಯದ ಪ್ರಾರಂಭದಿಂದಲೂ ವಿಷ್ಣುವಿನ ಅನೇಕ ಅಸಾಧಾರಣ ಲಿಂಗಗಳೇ ಕೇಳಿಸುತ್ತಿವೆ - ದೇವೋಪಾಸ್ಯತ್ವಾ, ಸೂರ್ಯಮಂಡಲಸ್ಥತ್ವ, ಸರ್ವಂತ-ರ್ಯಾಮಿತ್ವ, ಸರ್ವವ್ಯಾಪಿತ್ವ. ಈ ಲಿಂಗಗಳೆಲ್ಲವೂ ಶ್ರುತಿಸ್ಮೃತಿಗಳ ಆಧಾರದಿಂದ ವಿಷ್ಣುವಿನಲ್ಲಿಯೇ ಇದೆಯೆಂದು ನಿರ್ಣಯವಾಗಿದೆ.

ಪರಕೀಯರು ಉದಾಹರಿಸಿದ ಶ್ರುತಿವಾಕ್ಯವು ಸಾವಕಾಶವಾಗಿದೆ. "ಪ್ರಾಣೋವಾ ಅಹಂ" ಎಂಬಲ್ಲಿರುವ 'ಅಹಂ' ಶಬ್ದವು ಅಂತರ್ಯಾಮಿಯಾದ ವಿಷ್ಣುವನ್ನೇ ಹೇಳುತ್ತದೆ. ಸಕಲ ಪದಾರ್ಥಗಳ ಅಂತರ್ಯಾಮಿಯಾದ್ದರಿಂದ ಒಬ್ಬನೇ ವಿಷ್ಣುವು 'ಏಷೋಽಹಂ ತ್ವಂ ಅಸೌ' ಇತ್ಯಾದಿ ಸರ್ವನಾಮಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ. 'ಅಹಂ ಮನುಃ' ಎನ್ನುವ ದೃಷ್ಟಾಂತದಲ್ಲಿಯೂ ಐಕ್ಯವನ್ನು ಹೇಳಲಾಗದು. ವಿಶಿಷ್ಟನಾದ ವಾಮದೇವನಿಗೆ ವಿಶಿಷ್ಟನಾದ ಮನ್ವಾದಿಗಳಿಂದ ಐಕ್ಯವು ಕೂಡುವುದಿಲ್ಲ. ದಾರ್ಷ್ಟಾಂತಿಕದಲ್ಲಿಯೂ ಸಹ ಚಿನ್ಮಾತ್ರದಲ್ಲಿ ಲಕ್ಷಣಾ ಮಾಡಿದರೆ ಪ್ರಾಣನು ಬ್ರಹ್ಮನಲ್ಲವೆಂಬ ಪೂರ್ವಪಕ್ಷವೇ ಕೂಡುವುದಿಲ್ಲ. ಮತ್ತು ಭೂಮಿಪ್ರಧಾನಾದಿಧರ್ಮಗಳೂ ಸಹ ಚಿನ್ಮಾತ್ರನಲ್ಲಿ ಕೂಡುವುದಿಲ್ಲ. ಆದ್ದರಿಂದ ಇಂದ್ರಶಬ್ದಕ್ಕೆ ದೇವೇಂದ್ರನೆಂದೇ ಅರ್ಥವನ್ನಿಟ್ಟುಕೊಂಡು 'ಅಹಂ' ಶಬ್ದಕ್ಕೆ 'ಅಂತರ್ಯಾಮಿ' ಎಂಬರ್ಥವನ್ನು ಹೇಳಬೇಕು.

ಲೋಕದಲ್ಲಿ 'ನಾನು' ಎಂಬರ್ಥದಲ್ಲಿ 'ಅಹಂ' ಶಬ್ದವನ್ನು ಪ್ರಯೋಗಿಸುತ್ತೇವೆ. ಆದರೆ ನಿಜವಾಗಿಯೂ 'ಅಹಂ' ಶಬ್ದದ ಯೋಗ ಮತ್ತು ರೂಢಿಗಳು ವಿಷ್ಣುವಿನಲ್ಲಿಯೇ ಇರುತ್ತವೆ. 'ಅ ಇತಿ ಬ್ರಹ್ಮ' ಇತ್ಯಾದಿ ಶ್ರುತಿಗಳಲ್ಲಿ 'ಅಹಂ' ಶಬ್ದದ ರೂಢಿ ವಿಷ್ಣುವಿನಲ್ಲಿ ಪ್ರಸಿದ್ಧವಾಗಿವೆ. ಮತ್ತು 'ಅಹೇಯತ್ವಾದಹಂ ನಾಮಾ' ಇತ್ಯಾದಿ ಶ್ರುತಿಗಳಂತೆ

ಭಗವಂತನು ಅಹೇಯನಾದ್ದರಿಂದ 'ಅಹಂ' ಶಬ್ದದಿಂದ ವಾಚ್ಯನಾಗಿದ್ದಾನೆ. ಆದರೆ 'ಪ್ರಾಣೋವಾ ಅಹಂ ಅಸ್ಮಿ' ಎಂಬಲ್ಲಿ 'ಅಹಂ' ಪದದಿಂದ ವಿಷ್ಣುವನ್ನು ನೇರವಾಗಿ ವಿವಕ್ಷಿಸಿಲ್ಲ. 'ಅಂತರ್ಯಾಮಿ' ರೂಪವನ್ನು ವಿವಕ್ಷಿಸಲಾಗಿದೆ. 'ಅಸ್ಮಿ' ಎಂಬ ಉತ್ತಮಪುರುಷಪದಪ್ರಯೋಗವೇ ಈ ಅರ್ಥವನ್ನು ಸ್ವೀಕರಿಸಲು ಕಾರಣ.

ಜೀವಪ್ರಾಪಕವಾದ ಲಿಂಗಗಳೂ ಸಹ ಸಾವಕಾಶವಾಗಿವೆ. ಏಕೆಂದರೆ ಜೀವನ ಶರೀರದಲ್ಲಿ ನೂರು ವರ್ಷಗಳ ಕಾಲ ಪ್ರಾಣನು ಇರುತ್ತಾನೆಂಬುದು ಜೀವನ ಲಿಂಗವಲ್ಲ; ಹೊರತು ಅದಕ್ಕೂ ಕಾರಣವಾದ ಶತಾಯುಷ್ಟ್ವ ಎಂಬುದು ಜೀವನ ಲಿಂಗವಾಗಿದೆ. ಆದರೆ ಈ ಲಿಂಗವು ಮುಖ್ಯಪ್ರಾಣನಲ್ಲಿ ಕೇಳಿಸುತ್ತಿಲ್ಲ. ಆದ್ದರಿಂದ ಇಂದ್ರಪ್ರಾಪಕ-ವಾದ ಲಿಂಗಗಳು, ಮುಖ್ಯವಾಯುಪ್ರಾಪಕವಾದ ಲಿಂಗಗಳು, ಜೀವಪ್ರಾಪಕವಾದ ಲಿಂಗಗಳೆಲ್ಲವೂ ಸಾವಕಾಶಗಳೇ ಆಗಿವೆ. ಆದರೆ ವಿಷ್ಣುವಿನ ಲಿಂಗಗಳೆಲ್ಲವೂ ನಿರವಕಾಶಗಳಾದ್ದರಿಂದ ಭಗವಂತನೇ ಐತರೇಯದಲ್ಲಿರುವ ಪ್ರಾಣಶಬ್ದದಿಂದ ವಾಚ್ಯನಾಗಿದ್ದಾನೆ. ಇಲ್ಲಿಗೆ ನಮ್ಮ ಪ್ರಕಾರ ಸಿದ್ಧಾಂತ ಸ್ಥಾಪನೆಯು ಮುಕ್ತಾಯವಾಯಿತು.

ಸೂತ್ರಗಳ ವಿನ್ಯಾಸ ಕ್ರಮ ಹೀಗಿದೆ - ಪ್ರಥಮಸೂತ್ರದಲ್ಲಿ ಪ್ರಾಣಶಬ್ದವು ವಿಷ್ಣುವನ್ನೇ ಪ್ರತಿಪಾದಿಸುತ್ತವೆ ಎನ್ನಲು ಸ್ವಪಕ್ಷಸಾಧಕಯುಕ್ತಿಗಳನ್ನು ಹೇಳಿದ್ದಾರೆ. ಎರಡನೆಯ ಸೂತ್ರದಲ್ಲಿ 'ಪ್ರಾಣೋಽವಾ ಅಹಂ' ಎಂಬಲ್ಲಿ 'ಅಹಂ' ಶಬ್ದವನ್ನು ಏಕೆ ಪ್ರಯೋಗಿಸಿದರು? ಎಂಬ ಬಾಧಕವನ್ನು ಪರಿಹರಿಸಿದ್ದಾರೆ. ಹಾಗಾದರೆ 'ಮಯಿ ಪ್ರಾಣಃ' ಎಂದು ಹೇಳಬೇಕಿತ್ತಲ್ಲವೇ? 'ಅಹಂ ಪ್ರಾಣ' ಎಂದು ಹೇಗೆ ಹೇಳಿದರು? ಎಂಬ ಪ್ರಶ್ನೆಗೆ ಅಂತರ್ಯಾಮಿಯನ್ನು ವಿವಕ್ಷಿಸಿ 'ಅಹಂ' ಎಂಬ ಪ್ರಯೋಗವು ಸಾಧುವಾಗಿದೆ ಎಂದು ಮೂರನೆ ಸೂತ್ರದಲ್ಲಿ ಸಮರ್ಥಿಸಿದ್ದಾರೆ. ಹಾಗಾದರೆ ನೇರವಾಗಿ ಪರಮಾತ್ಮನನ್ನೇ ಹೇಳದೆ ಅಂತರ್ಯಾಮಿರೂಪದಿಂದ ಪರಮಾತ್ಮನನ್ನು ಏಕೆ ಹೇಳಿದಿರಿ? ಎಂಬ ಪ್ರಶ್ನೆಗೆ ನಾಲ್ಕನೇ ಸೂತ್ರವು ಉತ್ತರಿಸಿದೆ. ಹೀಗೆ ಸೂತ್ರಗಳ ವಿನ್ಯಾಸಕ್ರಮ ಅತ್ಯಂತ ಅರ್ಥಪೂರ್ಣವಾಗಿದೆ.

ಅದ್ವೈತಿಗಳೂ ಸಹ ನಮ್ಮಂತೆ ಪ್ರಾಣಶಬ್ದ ಸಮನ್ವಯಕ್ಕೋಸ್ಕರವೇ ಈ ಅಧಿಕರಣವು ಹೊರಟಿದೆ ಎಂದು ಹೇಳುತ್ತಾರೆ. ಆದರೆ ನಮ್ಮಂತೆ ಅವರು 'ಮನೋವಾಕ್‌ಪ್ರಾಣಃ' ಇತ್ಯಾದಿ ಐತರೇಯ ಶ್ರುತಿಯಲ್ಲಿರುವ ಪ್ರಾಣಶಬ್ದದ ಸಮನ್ವಯವನ್ನು ಹೇಳಲಾರರು. ಹೊರತಾಗಿ ಕೌಶೀತಕೀ ಬ್ರಾಹ್ಮಣೋಪನಿಷತ್ತಿನಲ್ಲಿರುವ 'ಪ್ರಾಣೋಽಸ್ಮಿ ಪ್ರಜ್ಞಾತ್ಮಾ' ಎಂಬಲ್ಲಿರುವ ಪ್ರಾಣಶಬ್ದದ ಸಮನ್ವಯವನ್ನು ಹೇಳಲು ಹೊರಟಿದ್ದಾರೆ.

ಪೂರ್ವಪಕ್ಷ - ಇಂದ್ರ ಹಾಗೂ ಪ್ರತರ್ದನ ರಾಜನಿಗೆ ನಡೆಯುವ ಸಂವಾದ ಮಧ್ಯದಲ್ಲಿ ಈ ವಿಷಯವಾಕ್ಯವು ಪ್ರಸಕ್ತವಾಗುತ್ತದೆ. ಪ್ರತರ್ದನರಾಜನನ್ನು ಕುರಿತು ಇಂದ್ರನು 'ಪ್ರಾಣೋಽಸ್ಮಿ ಪ್ರಜ್ಞಾತ್ಮಾ' 'ಮಾಮೇವ ವಿಜಾನೀಹಿ' ಎಂದು ಉಪದೇಶಿಸುತ್ತಾನೆ. ಈ ವಾಕ್ಯವನ್ನು ನೋಡಿದಾಗ ತನ್ನನ್ನೇ ಪ್ರಾಣನೆಂದು ದೇವೇಂದ್ರನು ಹೇಳಿಕೊಂಡಿ-ದ್ದರಿಂದ ದೇವೇಂದ್ರನೇ ಪ್ರಾಣಶಬ್ದವಾಚ್ಯನೆಂದು ತಿಳಿಯುತ್ತದೆ. ಅಥವಾ ಪ್ರಾಣಶಬ್ದವಿರುವ ಆ ಪ್ರಕರಣದಲ್ಲಿ ಮತ್ತೊಂದು ವಾಕ್ಯವಿದೆ. ''ಅಥ ಪ್ರಾಣ ಏವ ಪ್ರಜ್ಞಾತ್ಮಾ ಇದಂ ಶರೀರಂ ಪರಿಗೃಹ್ಯೋತ್ಥಾಪಯತಿ'' ಎಂದು ಶರೀರಧಾರಣೆಗೆ ಕಾರಣನಾದ, ವಾಯುವಿನ ಬಗ್ಗೆ ಹೇಳಲಾಗಿದೆ. ಆದ್ದರಿಂದ ವಾಯುವೇ ಪ್ರಾಣಶಬ್ದವಾಚ್ಯ-ನಾಗಬಹುದು. ಅಥವಾ 'ವಕ್ತಾರಂ ವಿದ್ಯಾತ್' ಎಂಬ ವಾಕ್ಯ ಹೇಳುವಂತೆ ವಕ್ತೃತ್ವ ಧರ್ಮವಿರುವ ಜೀವನೂ ಸಹ ಪ್ರಾಣಶಬ್ದವಾಚ್ಯನಾಗಬಹುದು. ಏನೇ ಆದರೂ ಬ್ರಹ್ಮನು ಪ್ರಾಣಶಬ್ದವಾಚ್ಯನೆಂದು ಸಮರ್ಥಿಸುವುದು ಕಷ್ಟ.

ಸಿದ್ಧಾಂತ - ಪ್ರಾಣಶಬ್ದವಾಚ್ಯನಾದವನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ ಇಂದ್ರ ಪ್ರತರ್ದನರ ಸಂವಾದವು ಪ್ರಾರಂಭವಾಗುವಾಗ ಪ್ರತರ್ದನನು ಇಂದ್ರನನ್ನು ಕುರಿತು 'ಯಂ ತ್ವಂ ಮನುಷ್ಯಾಯ ಹಿತತಮಂ ಮನ್ಯಸೇ' ಎಂದು ಮನುಷ್ಯರಿಗೆ ಹಿತವಾದದ್ದನ್ನೇ ಹೇಳು ಎಂದು ಪ್ರಾರ್ಥಿಸಿದ್ದಾರೆ. ಮನುಷ್ಯರಿಗೆ ಹಿತವಾದದ್ದು ಬ್ರಹ್ಮಜ್ಞಾನವೇ ಹೊರತು ದೇವೇಂದ್ರನ ಜ್ಞಾನವಲ್ಲ. ಆದ್ದರಿಂದ ದೇವೇಂದ್ರನು ಬ್ರಹ್ಮನನ್ನು ಉಪದೇಶಿಸಬೇಕು ಹೊರತು, ತನ್ನ ಬಗ್ಗೆ ಅಲ್ಲ

ಮತ್ತು ಪ್ರಕರಣದ ಕೊನೆಯಲ್ಲೂ 'ಆನಂದೋಽಜರಃ' ಇತ್ಯಾದಿಯಾಗಿ ಬ್ರಹ್ಮನ ಲಿಂಗಗಳೇ ಬಹಳಷ್ಟು ಕೇಳಿಸುತ್ತಿವೆ. ಹೀಗೆ ಉಪಕ್ರಮೋಪಸಂಹಾರಗಳ ಬಲದಿಂದ ಸಂಪೂರ್ಣ ಪ್ರಕರಣವು ಬ್ರಹ್ಮಪರವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಪ್ರಾಣಶಬ್ದವಾಚ್ಯನಾದವನು ಪರಬ್ರಹ್ಮನೇ ಆಗಿದ್ದಾನೆ. ಭಾಮತಿಯಲ್ಲಿ ಶಂಕರಭಾಷ್ಯದಲ್ಲಿರುವ ಪೂರ್ವಪಕ್ಷವನ್ನೇ ಆಕ್ಷೇಪಿಸಿ ಸಿದ್ಧಾಂತವನ್ನು ಸಮರ್ಥಿಸಲಾಗಿದೆ.

ಹೀಗೆ ಶಂಕರಭಾಷ್ಯದಲ್ಲಿ ಈ ಅಧಿಕರಣವನ್ನು ನಿರೂಪಿಸಿದ್ದಾರೆ. ಆದರೆ ಈ ಅಧಿಕರಣಕ್ಕೆ ನಾವು 'ಅಂತಿಮಪ್ರಾಣಾಧಿಕರಣ' ಎಂಬ ಹೆಸರನ್ನು ಇಟ್ಟರೆ, ಅದ್ವೈತಿಗಳು 'ಪ್ರತರ್ದನಾಧಿಕರಣ'ವೆಂಬ ಹೆಸರನ್ನಿಟ್ಟಿದ್ದು ಗಮನಿಸಬೇಕಾದ ಅಂಶ.

ಅದ್ವೈತಿಗಳು ರಚಿಸಿದ ಅಧಿಕರಣಶರೀರವು ಸಮಂಜಸವಲ್ಲ. ಏಕೆಂದರೆ ಇಂದ್ರ ಪ್ರತರ್ದನರ ಸಂವಾದ ಪ್ರಕರಣದಲ್ಲಿ ಪ್ರಾಪ್ತವಾದ ಯಾವುದೇ ಧರ್ಮಗಳು ನಿರ್ವಿಶೇಷ ಬ್ರಹ್ಮನಲ್ಲಿ ಇರುವುದಿಲ್ಲ.

ಶ್ರುತಿಯು ಬ್ರಹ್ಮನನ್ನು ಹಿತತಮ ಎಂದು ಹೇಳಿದೆ. ಇದರರ್ಥ ಏನು? ಪರಮಪುರುಷಾರ್ಥವೆನಿಸಿದ ಮೋಕ್ಷವನ್ನು ನೀಡುತ್ತಾನಾದ್ದರಿಂದ ಬ್ರಹ್ಮನನ್ನು ಹಿತತಮನೆನ್ನಬೇಕು. ಆದರೆ ಜ್ಞಾನದಿಂದಲೇ ಅಜ್ಞಾನನಿವೃತ್ತಿ ಎಂಬ ಮೋಕ್ಷವು ಸಾಧ್ಯವೆಂದು ಅದ್ವೈತಿಗಳು ಒಪ್ಪಿದ್ದಾರೆ. ಈಗ ಬ್ರಹ್ಮನನ್ನು ಅಜ್ಞಾನನಿವರ್ತಕನೆಂದು ಹೇಳಿದರೆ ಅಪಸಿದ್ಧಾಂತ ಬರುತ್ತದೆ.

ಇನ್ನು ಪರಮಪುರುಷಾರ್ಥಸ್ವರೂಪನಾದ್ದರಿಂದ ಬ್ರಹ್ಮನನ್ನು ಹಿತತಮನೆನ್ನಬೇಕು. ಈ ಪರಮಪುರುಷಾರ್ಥ-ಸ್ವರೂಪನು ಶುದ್ಧಬ್ರಹ್ಮನೇ ಆಗಬೇಕು ಹೊರತು ವಿಶಿಷ್ಟಬ್ರಹ್ಮನಾಗುವುದಿಲ್ಲ. ಹೀಗೆ ಶುದ್ಧಬ್ರಹ್ಮನು ಹಿತತಮನಾಗು-ವುದಾದರೆ ವಿಶಿಷ್ಟಬ್ರಹ್ಮನನ್ನು ಕುರಿತು ಹಿತತಮನೆಂದು ಹೇಳಲಾಗದು. ಏಕೆಂದರೆ ಮೋಕ್ಷಾವಸ್ಥೆಯಲ್ಲಿ ವಿಶಿಷ್ಟಬ್ರಹ್ಮನೇ ಇರಲಾರ. ತನಗೆ ತಾನೇ ಹಿತತಮನೆಂದು ಹೇಳಬೇಕು. ಆವಾಗ ಅಖಂಡಸ್ವರೂಪನಾದ ಶುದ್ಧಬ್ರಹ್ಮನಲ್ಲಿ ''ಹಿತ, ಹಿತತಮ'' ಎಂಬ ವಿಭಾಗವನ್ನು ಮಾಡಿದಂತಾಗುತ್ತದೆ. ಇದರಿಂದ ಅದ್ವೈತ ಹಾನಿಯಾಗುತ್ತದೆ. ಮತ್ತು ಶುದ್ಧಬ್ರಹ್ಮ-ನಲ್ಲಿ ಹಿತತಮತ್ವವೆಂಬ ವಿಶೇಷಧರ್ಮವನ್ನು ಒಪ್ಪಬೇಕಾದರೆ, ಮೊದಲು ಹಿತತ್ವವೆಂಬ ಸಾಮಾನ್ಯಧರ್ಮವನ್ನು ಒಪ್ಪಿರಬೇಕು. ಇದರಿಂದಲೂ ಅದ್ವೈತ ಹಾನಿಯಾಗುತ್ತದೆ. ಈ ಎಲ್ಲಾ ಕಾರಣಗಳಿಂದ ಹಿತತಮತ್ವವನ್ನಂತು ಬ್ರಹ್ಮನ ಲಿಂಗವೆಂದು ಹೇಳಲಾಗದು. ಹೀಗಿರುವಾಗ ಸಂಪೂರ್ಣ ಪ್ರಕರಣವನ್ನು ಬ್ರಹ್ಮಪರವೆಂದು ಸಮರ್ಥಿಸಲು ಹೇಗೆ ಸಾಧ್ಯ ?

ಎಷ್ಟೇ ಪ್ರಯತ್ನಪಟ್ಟರೂ ಹಿತತಮತ್ವವನ್ನು ಬ್ರಹ್ಮನ ಲಿಂಗವೆಂದು ಸಮರ್ಥಿಸಲು ಅದ್ವೈತಿಗಳು ಎಡವಿ ಬಿದ್ದರು. ಅಮೃತನೆಂಬ ಉಪಾಸನೆಗೆ ಬ್ರಹ್ಮನು ವಿಷಯನಾಗಿದ್ದಾನಾದ್ದರಿಂದ, ಅಮೃತತ್ವಪ್ರಕಾರಕ ಉಪಾಸನಾ-ಕರ್ಮತ್ವವನ್ನು ಬ್ರಹ್ಮನ ಲಿಂಗವೆಂದು ಹೇಳಲು ಪ್ರಯತ್ನಿಸುತ್ತಾರೆ. ಆದರೆ ಈ ಧರ್ಮವು ಇಂದ್ರಾದಿ ಇತರ ಯಾವುದೇ ದೇವತೆಗಳಲ್ಲಿಯೂ ಹೇಳಬಹುದು. ಏಕೆಂದರೆ ಅಮೃತರಾಗಿದ್ದರೆ ಮಾತ್ರ ಉಪಾಸನೆ ಮಾಡಬೇಕೆಂದೇನೂ ನಿಯಮವಿಲ್ಲ. ಉಪಾಸನೆಗೆ ಯಾವುದು ವಿಷಯವೋ ಅದು ಅಸತ್ತಾಗಿರುತ್ತದೆಂದು ಅದ್ವೈತಿಗಳ ಸಿದ್ಧಾಂತ.

ಮತ್ತು ಬ್ರಹ್ಮನ ಜ್ಞಾನವನ್ನು ಹೊಂದುವುದರಿಂದ ಪುಣ್ಯಪಾಪಾದಿಕರ್ಮಗಳ ಲೇಪವು ಉಂಟಾಗದ ಕಾರಣ ''ಸರ್ವಕರ್ಮಾಲೇಪಹೇತುಜ್ಞಾನವಿಷಯತ್ವ'' ಎಂಬುದನ್ನು ಬ್ರಹ್ಮನ ಲಿಂಗವೆಂದು ಹೇಳಬಹುದು. ಆದರೆ ಶುದ್ಧ-ಬ್ರಹ್ಮನಲ್ಲಿ ಯಾವುದೇ ರೀತಿಯ ಕ್ರಿಯೆಯೇ ಇರಲಾರದ ಕಾರಣ ಈ ಧರ್ಮವು ಬರುವುದಿಲ್ಲ. ವಿಶಿಷ್ಟಬ್ರಹ್ಮನ ಜ್ಞಾನದಿಂದ ಪುಣ್ಯಪಾಪಾದಿಲೇಪಗಳು ಉಂಟಾಗುವುದಿಲ್ಲವೆಂದು ಅದ್ವೈತಿಗಳೇ ಒಪ್ಪಿಲ್ಲ. ಹೀಗೆ ಯಾವುದೇ ಧರ್ಮಗಳನ್ನು ಅದ್ವೈತಿಗಳು ಸಮರ್ಥಿಸಲು ಹೊರಟರೂ ಜಯಗಳಿಸಲು ಅವರಿಂದಾಗದು. ಏಕೆಂದರೆ

ಶುದ್ಧಬ್ರಹ್ಮನಲ್ಲಂತೂ ಯಾವುದೇ ಧರ್ಮಗಳಿರುವುದಿಲ್ಲ. ವಿಶಿಷ್ಟಬ್ರಹ್ಮನಲ್ಲಿ ಆ ಧರ್ಮವನ್ನು ಹೇಳುವುದರಿಂದ ಅವರ ಇಷ್ಟವೇ ಸಿದ್ಧವಾಗುವುದಿಲ್ಲ. ಆದ್ದರಿಂದ ಈ ಅಧಿಕರಣವು ಏಕೆ ಹೊರಟಿದೆ ! ಎಂಬುದೇ ಅದ್ವೈತಿಗಳಿಗೆ ಅರ್ಥವಾಗಿಲ್ಲ.

ಆಶ್ಚರ್ಯವೆಂದರೆ ಅಭೇದಸಮರ್ಥನೆಯನ್ನೇ ಗುರಿಯನ್ನಾಗಿಸಿಕೊಂಡ ಅದ್ವೈತಿಗಳು ಈ ಅಧಿಕರಣದಲ್ಲಿ ಸ್ಪಷ್ಟವಾಗಿ ಜೀವಬ್ರಹ್ಮರ ಭೇದವನ್ನೇ ಹೇಳಿಬಿಟ್ಟಿದ್ದಾರೆ.

ಅದ್ವೈತಿಗಳಂತೆ ರಾಮಾನುಜರೂ ಸಹ ಪ್ರತರ್ದನವಿದ್ಯೆಯಲ್ಲಿರುವ 'ಪ್ರಾಣೋऽಸ್ಮಿ ಪ್ರಜ್ಞಾತ್ಮಾ' ಎಂಬುದನ್ನೇ ವಿಷಯವಾಕ್ಯವನ್ನಾಗಿ ಹೇಳುತ್ತಾರೆ. ಆದರೆ ಅದ್ವೈತಿಗಳು ಜೀವ, ಇಂದ್ರ ಮತ್ತು ವಾಯು ಈ ಮೂವರು ಪ್ರಾಣಶಬ್ದವಾಚ್ಯರೆಂದು ಪೂರ್ವಪಕ್ಷ ಮಾಡಿದ್ದರೂ ಇವರು ಕೇವಲ ದೇವೇಂದ್ರನನ್ನೇ ಪ್ರಾಣಶಬ್ದವಾಚ್ಯನೆಂದು ಪೂರ್ವಪಕ್ಷ ಮಾಡುತ್ತಿದ್ದಾರೆ. ಈ ಪ್ರಕರಣದಲ್ಲಿರುವ ಜೀವಲಿಂಗ ಹಾಗೂ ಪ್ರಾಣಲಿಂಗಗಳನ್ನು ದೇವೇಂದ್ರನಲ್ಲಿಯೇ ಪರ್ಯವಸಾನಮಾಡಿ ಪೂರ್ವಪಕ್ಷವನ್ನು ದೃಢಗೊಳಿಸುತ್ತಾರೆ. ಮತ್ತು ಅದ್ವೈತಿಗಳು ಹೇಳುವಂತೆ 'ಆನಂದೋऽಜರೋऽಮೃತಃ' ಎಂಬ ಅನೇಕ ಬ್ರಹ್ಮಲಿಂಗಗಳು ಕೇಳಿಸುತ್ತಿರುವುದರಿಂದ ಬ್ರಹ್ಮನೇ ಪ್ರಕರಣ ಪ್ರತಿಪಾದ್ಯನೆಂದು ಸಿದ್ಧಾಂತ ಮಾಡಿದ್ದಾರೆ.

ರಾಮಾನುಜ ಮತದಲ್ಲಿ ಪ್ರಾಣಶಬ್ದವಾಚ್ಯನಾದವನು ಇಂದ್ರನೇ ಆಗಿದ್ದಾನೆಂದು ಪೂರ್ವಪಕ್ಷ ಮಾಡಲಾಗಿದೆ. ಹಾಗಾದಲ್ಲಿ 'ಜೀವಮುಖ್ಯಪ್ರಾಣಲಿಂಗಾತ್' ಎಂಬ ಸೂತ್ರದಲ್ಲಿರುವ ಜೀವಪದಕ್ಕೆ ಅಸ್ವಾರಸ್ಯವನ್ನು ಹೇಳಿದಂತಾಗುತ್ತದೆ. ಒಂದುವೇಳೆ ಇಂದ್ರನೆಂಬ ಜೀವ ವಿಶೇಷಪರತ್ವವನ್ನು ಅಂಗೀಕರಿಸಿದರೆ ''ನ ವಕ್ತುರಾತ್ಮೋಪದೇಶಾತ್'' ಎಂಬ ಸೂತ್ರವೇ ವ್ಯರ್ಥವಾಗುತ್ತದೆ. ಏಕೆಂದರೆ ನಾನೇ ಪ್ರಾಣನೆಂಬ ಇಂದ್ರನ ವಾಕ್ಯವು ಜೀವಲಿಂಗವಾಗಿದೆ. ಆದ್ದರಿಂದ 'ಜೀವಮುಖ್ಯಪ್ರಾಣಲಿಂಗಾತ್' ಎಂಬ ಸೂತ್ರದಿಂದಲೇ ಇದು ಸಂಗ್ರಹವಾಗುತ್ತದೆ. ಪುನಃ ''ಆತ್ಮೋಪದೇಶಾತ್'' ಎಂಬ ಸೂತ್ರದಿಂದ ಆಕ್ಷೇಪ ಹಾಗೂ ಸಮಾಧಾನಗಳು ಬೇಕಾಗಿರುವುದಿಲ್ಲ.

ಆದರೆ ನಮ್ಮ ಮತದಲ್ಲಿ ಈ ದೋಷವಿಲ್ಲ. ''ಶತಾಯುಷ್ಟ್ವ'' (ನೂರುವರ್ಷದ ಜೀವನ) ಎಂಬ ಲಿಂಗವು ಮರಣವಿಲ್ಲದ ಇಂದ್ರನಲ್ಲಿ ಸುತರಾಂ ಬರುವುದಿಲ್ಲ. ಆದ್ದರಿಂದ ಪ್ರತ್ಯೇಕ ಸೂತ್ರದ ಅನಿವಾರ್ಯತೆ ಇದೆ.

ಅದ್ವೈತಿಗಳ ಎರಡನೇ ಸೂತ್ರ ವ್ಯಾಖ್ಯಾನ - 'ಪ್ರಾಣೋऽಸ್ಮಿ ಪ್ರಜ್ಞಾತ್ಮಾ' ಎಂಬುದಾಗಿ ಇಂದ್ರನು ತನ್ನ ಉಪದೇಶ ಮಾಡುತ್ತಿರುವುದರಿಂದ ಪ್ರಾಣನು ಬ್ರಹ್ಮನಲ್ಲವೆಂದು ಪೂರ್ವಪಕ್ಷ.

ಇಂದ್ರ ಪ್ರತರ್ದನ ಸಂವಾದ ಪ್ರಕರಣದಲ್ಲಿ ಕೇಳಿಸುತ್ತಿರುವ ಧರ್ಮಗಳೆಲ್ಲವು ಶುದ್ಧಾತ್ಮನದ್ದೇ ಆಗಿವೆ. ಸಂಸಾರಿಯಾದ ಇಂದ್ರನಲ್ಲಿ ಆ ಧರ್ಮಗಳು ಅಸಂಭಾವಿತಗಳಾದ್ದರಿಂದ ಶುದ್ಧಾತ್ಮನೇ ಪ್ರಾಣಶಬ್ದವಾಚ್ಯನೆಂದು ಸಿದ್ಧಾಂತ.

ಅದ್ವೈತಿಗಳಿಗೆ ಎರಡನೆಯ ಸೂತ್ರದಲ್ಲಿ 'ವಕ್ತುಃ' ಎಂಬ ಪದದ ಸಾರ್ಥಕ್ಯವನ್ನು ಸಮರ್ಥಿಸಲಾಗದು. ಸೂತ್ರದಲ್ಲಿರುವ 'ಆತ್ಮೋಪದೇಶಾತ್' ಎಂಬ ಪದಕ್ಕೆ ವಕ್ತೃವು ಆತ್ಮನ ಬಗ್ಗೆ ಉಪದೇಶ ಮಾಡುತ್ತಿದ್ದಾನೆಂಬ ಅರ್ಥವು ಸುಲಭವಾಗಿ ತಿಳಿಯುತ್ತದೆ. ಪುನಃ ಪ್ರತ್ಯೇಕವಾಗಿ ವಕ್ತುಃ ಎಂದು ಹೇಳಬೇಕಾಗಿಲ್ಲ. 'ಆತ್ಮೋಪದೇಶ' ಪದಕ್ಕೆ ಸ್ವಾತ್ಮೋಪದೇಶ ಎಂಬರ್ಥವನ್ನು ಮಾಡಲು ವಕ್ತೃಪದವು ಬೇಕಾಗುತ್ತದೆಂದು ಅದ್ವೈತಿಗಳು ಹೇಳಿಕೊಳ್ಳಬಹುದು. ಆದರೆ ವಕ್ತೃ ಪದವಿಲ್ಲದಿದ್ದರೂ ಈ ಅರ್ಥ ತಿಳಿಯುವಾಗ 'ವಕ್ತೃ' ಪದವು ಏಕೆಂದು ಯಾರಿಗೂ ಮನವರಿಕೆಯಾಗುವುದಿಲ್ಲ.

ನಮ್ಮಲ್ಲಿ ಈ ದೋಷವಿಲ್ಲ. 'ವಕ್ತುಃ' ಎಂಬ ಪದವೇ ಬೇರೆ ವ್ಯಕ್ತಿಯನ್ನು ಹೇಳುತ್ತಿದೆ. 'ಆತ್ಮೋಪದೇಶ' ಎಂಬ ಪದವೇ ಬೇರೆ ವ್ಯಕ್ತಿಯನ್ನು ಹೇಳುತ್ತಿದೆ. ಬ್ರಹತೀಸಹಸ್ರವನ್ನು ಪಠಿಸುವ ವಿಶ್ವಾಮಿತ್ರನಿಗೆ ಎಂಬರ್ಥವನ್ನು ಹೇಳಲು ವಕ್ತೃಪದವು ಬೇಕಾಗುತ್ತದೆ. ಈ ಪದದ ಅಂತರಂಗದಲ್ಲಿ ಇಂದ್ರನು ವಿಶ್ವಾಮಿತ್ರನಿಗೆ ಸುಳ್ಳು ಹೇಳಲಾರ ಎಂಬ ಅರ್ಥವು ಗರ್ಭಿತವಾಗಿದೆ. ಆದ್ದರಿಂದ 'ವಕ್ತುಃ' ಎಂಬ ಪದವು ಅತ್ಯಂತ ಅನಿವಾರ್ಯ.

ಪರಮಾತ್ಮನಲ್ಲೇ ಅಸಾಧಾರಣವಾದ ಅನೇಕ ಧರ್ಮಗಳ ಸಂಬಂಧವನ್ನು ಈ ಪ್ರಕರಣವು ಹೇಳುತ್ತಿದೆ. ಆದ್ದರಿಂದ ಪ್ರಾಣನೇ ಬ್ರಹ್ಮನೆಂದು ರಾಮಾನುಜರು 'ನ ವಕ್ತುಃ' ಎಂಬ ಸೂತ್ರವನ್ನು ವ್ಯಾಖ್ಯಾನಿಸುತ್ತಾರೆ.

ಅದ್ವೈತಿಗಳಿಗೆ ಬಂದ ದೋಷವು ಇವರಿಗೂ ಬರುತ್ತದೆ. ಪೂರ್ವಪಕ್ಷ ಯುಕ್ತಿಯನ್ನು ಪರಿಹರಿಸದೆ ಸಿದ್ಧಾಂತಯುಕ್ತಿಯನ್ನೇ ನೇರವಾಗಿ ಹೇಳುವುದು ತಪ್ಪಲ್ಲವೇ? ಮತ್ತು ಸೂತ್ರದಲ್ಲಿ ಸಂಬಂಧಪದವಿಲ್ಲದೆ ಕೇವಲ 'ಅಧ್ಯಾತ್ಮ ಭೂಮಾ' ಎಂಬುದರಿಂದಲೇ ರಾಮಾನುಜರ ಅಭಿಪ್ರಾಯವು ಪೂರ್ಣವಾಗುವಾಗ ಸಂಬಂಧಪದವು ವ್ಯರ್ಥವಾಗಿದೆ. ಮತ್ತು ಸೂತ್ರದಲ್ಲಿ 'ಭೂಮಾ' ಎಂಬ ಪದವನ್ನು ಪ್ರಯೋಗಿಸಿದ್ದರಿಂದಲೇ ಪ್ರಥಮಸೂತ್ರದಲ್ಲಿ ಹೇಳಲ್ಪಟ್ಟ ಹಿತತಮತ್ವಾದಿ ಧರ್ಮಗಳನ್ನು ವಿವಕ್ಷಿಸಲು ಬರುವುದರಿಂದ ಕೇವಲ ಎರಡನೆಯ ಸೂತ್ರವು ಸಾಕಾಗುತ್ತದೆ.

ಅದ್ವೈತಿಗಳ ಮೂರನೇ ಸೂತ್ರ ವ್ಯಾಖ್ಯಾನ ಹೀಗಿದೆ - ಉಪದೇಶಃ = ಇಂದ್ರನು ಮಾಡಿದ ಮಾಮೇವ ವಿಜಾನೀಹಿ ಎಂಬ ಉಪದೇಶವು, ವಾಮದೇವವತ್ = ವಾಮದೇವಋಷಿಗಳು ತನ್ನನ್ನೇ ಮನು ಮತ್ತು ಸೂರ್ಯ ಎಂದು ಉಪದೇಶಿಸಿದಂತೆ, ಇಂದ್ರನು ತನ್ನಲ್ಲಿರುವ ಬ್ರಹ್ಮತ್ವವನ್ನು ಶಾಸ್ತ್ರದೃಷ್ಟ್ಯಾ = ಶಾಸ್ತ್ರಾಧ್ಯಯನದಿಂದ ತಿಳಿದಿದ್ದಾನೆ. ಈ ರೀತಿಯಾದ ಸೂತ್ರವ್ಯಾಖ್ಯಾನದಿಂದ ಬ್ರಹ್ಮೈಕ್ಯವನ್ನು ತಿಳಿದು ಇಂದ್ರನು ನಾನೇ ಪ್ರಾಣಶಬ್ದ-ವಾಚ್ಯನೆಂದು ಹೇಳಿಕೊಂಡಿದ್ದಾನೆ.

ಅದ್ವೈತಿಗಳ ಈ ವ್ಯಾಖ್ಯಾನ ಸರಿಯಲ್ಲ. ಏಕೆಂದರೆ 'ಮಾಮೇವ ವಿಜಾನೀಹಿ' ಎಂಬಲ್ಲಿರುವ 'ಮಾಂ' ಎಂಬ ಪದವು ಅಂತಃಕರಣವಿಶಿಷ್ಟನಾದ ಆತ್ಮನನ್ನು ಹೇಳುತ್ತಿದೆ. ಈ ಆತ್ಮಕ್ಕೆ ಬ್ರಹ್ಮನ ಅಭೇದವೂ ಯುಕ್ತವಲ್ಲ. ಇನ್ನು ಚಿನ್ಮಾತ್ರದಲ್ಲಿ ಲಕ್ಷಣಾ ಮಾಡಿದರೂ ಸಹ ಜ್ಞಾನಕರ್ಮತ್ವವನ್ನು ಚಿನ್ಮಾತ್ರನಿಗೆ ಹೇಳಿದಂತಾಗುತ್ತದೆ. ಯಾವುದೇ ಧರ್ಮಗಳಿಲ್ಲದ ಸಕಲಕಾರಕಶಕ್ತಿಗಳಿಂದ ದೂರನಾದ ಚಿನ್ಮಾತ್ರದಲ್ಲಿ ಜ್ಞಾನಕರ್ಮತ್ವವನ್ನಾದರೂ ಹೇಗೆ ತಾನೇ ಒಪ್ಪಿಯಾರು?

ಸೂತ್ರದಲ್ಲಿರುವ ಶಾಸ್ತ್ರಶಬ್ದಕ್ಕೆ ವೇದ ಎಂಬರ್ಥವನ್ನು ಅದ್ವೈತಿಗಳು ಹೇಳುತ್ತಾರೆ. ಆದರೆ ನಾವು ಅಂತರ್ಯಾಮಿ ಎಂಬರ್ಥವನ್ನು ಹೇಳುತ್ತೇವೆ. ಅದ್ವೈತಿಗಳು ವೇದ ಎಂಬರ್ಥದಲ್ಲಿ ಶಾಸ್ತ್ರಶಬ್ದಕ್ಕೆ ರೂಢಿಯನ್ನು ಹೇಳಿದರೆ, ನಾವು ಅಂತರ್ಯಾಮಿ ಎಂಬರ್ಥದಲ್ಲಿ ಯೋಗಾರ್ಥವನ್ನು ಹೇಳುತ್ತೇವೆ. ಇಲ್ಲಿ ಸಹಜವಾಗಿ ಪ್ರಶ್ನೆ ಹೀಗಿದೆ - ಎಲ್ಲೆಡೆ ಯೋಗಕ್ಕಿಂತ ರೂಢಿಯೇ ಪ್ರಬಲವಾದ್ದರಿಂದ ಇಲ್ಲಿ ಮಾತ್ರ ದ್ವೈತಿಗಳು ಯೋಗವನ್ನು ಹೇಗೆ ಆಶ್ರಯಿಸಿದ್ದಾರೆ ಎಂದು? ಈ ಪ್ರಶ್ನೆಯನ್ನು ಸ್ವಲ್ಪ ಆಳವಾಗಿ ವಿಚಾರ ಮಾಡಬೇಕು. ಏಕೆಂದರೆ ಯಾವುದೇ ಶಬ್ದಗಳನ್ನು ಸ್ವೀಕರಿಸಿದಾಗ ಮೊದಲು ಯೋಗಾರ್ಥವನ್ನು ಹೇಳಲು ಪ್ರಯತ್ನಿಸಬೇಕು. ಸಾಧ್ಯವಾಗದಿದ್ದಾಗ ಮಾತ್ರ ರೂಢಿಯನ್ನು ಆಶ್ರಯಿಸಬೇಕು. 'ವಾಜಿಕರಣ' ಎಂಬುದು ಒಂದು ವೃಕ್ಷದ ಹೆಸರು. ಕುದುರೆ ಕಿವಿಯಂತಹ ಕಿವಿಗಳು ಈ ವೃಕ್ಷಕ್ಕೆ ಎಂದೂ ಸಹ ಬರಲು ಸಾಧ್ಯವಿಲ್ಲದ ಕಾರಣ. ಯೋಗಾರ್ಥವನ್ನು ಹೇಳಲು ಸಾಧ್ಯವಾಗದು. ಆದ್ದರಿಂದ ಇಲ್ಲಿ ರೂಢಿಯನ್ನು ಆಶ್ರಯಿಸುವುದು ಅನಿವಾರ್ಯವಾಗುತ್ತದೆ. ಶ್ಲೋಕವಾರ್ತಿಕಕಾರನೂ ಸಮ್ಮತಿಸಿದ್ದಾನೆ. ಆದರೆ ಪ್ರಕೃತ ಶಾಸ್ತ್ರಶಬ್ದಕ್ಕೆ ಯೋಗಾರ್ಥವನ್ನು ಸ್ವೀಕರಿಸಲು ಬಾರದಂತಹ ಪರಿಸ್ಥಿತಿ ಇಲ್ಲ. ನಿಜವಾದ ಶಾಸ್ತ್ರಶಬ್ದದ ಯೋಗಾರ್ಥವು ಮುಖ್ಯವಾಗಿ ಪರಮಾತ್ಮನೇ ಆಗಿದ್ದಾನೆ. ಒಂದು ವೇಳೆ ರೂಢಿಯನ್ನು ನೀವು ಸ್ವೀಕರಿಸುವುದಾದರೆ, ವೇದಕ್ಕಿಂತ ಬೇರೆ

ಶಾಸ್ತ್ರಗಳಲ್ಲಿಯೇ ಶಾಸ್ತ್ರಶಬ್ದದ ರೂಢಿಯು ಲೋಕದಲ್ಲಿರುತ್ತದೆ. ಮತ್ತು ಯೋಗಾರ್ಥವನ್ನು ಇಲ್ಲಿ ಸ್ವೀಕರಿಸು-ವುದರಿಂದ ನೇರವಾಗಿ ಅರ್ಥವನ್ನು ತಿಳಿದಂತಾಗುತ್ತದೆಂಬ ಮಹಾಲಾಭವು ಇದೆ. ಆದ್ದರಿಂದ ಹಿತವನ್ನು ಮತ್ತು ಅಹಿತವನ್ನು ಶಾಸನ ಮಾಡುವ ಭಗವಂತನೇ ನಿಜವಾದ ಶಾಸ್ತ್ರಶಬ್ದದ ಅರ್ಥವಾಗಿದ್ದಾನೆ. ಇಂತಹ ಪರಮಾತ್ಮನನ್ನು ವಿವಕ್ಷಿಸಿ ದೇವೇಂದ್ರನು 'ಮಾಮೇವ ವಿಜಾನೀಹಿ' ಎಂಬ ಶಬ್ದವನ್ನು ಪ್ರಯೋಗಿಸಿದ್ದಾನೆ.

ಹಾಗಾದಲ್ಲಿ ಅಂತರ್ಯಾಮಿ ಪಕ್ಷವನ್ನು ಸ್ವೀಕರಿಸಿದರೆ, ಯೋಗಾರ್ಥವನ್ನು ಹೇಗೆ ಹೇಳುತ್ತೀರಿ ? ಎಂಬ ಶಂಕೆಗೆ ಭಗವದ್ಧರ್ಮ ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಭಗವಂತನು ಉಪೇಂದ್ರರೂಪವನ್ನು ಸ್ವೀಕರಿಸಿ ಬಲಿಚಕ್ರವರ್ತಿಯ ಸಾಮ್ರಾಜ್ಯವನ್ನು ಇಂದ್ರನಿಗೆ ನೀಡಿದನೆಂಬ ಭಗವತಾದಿಗ್ರಂಥಗಳ ಪ್ರಸಿದ್ಧಿಯನ್ನು 'ಹಿ' ಶಬ್ದದಿಂದ ತೋರಿಸಿದ್ದಾರೆ.

ಅದ್ವೈತಿಗಳ ಕೊನೆಯ ಸೂತ್ರ ವ್ಯಾಖ್ಯಾನ ಹೀಗಿದೆ - ಪ್ರಾಣಶಬ್ದವಿರುವ ಪ್ರಕರಣದಲ್ಲಿ ಪ್ರಾಣ, ಜೀವ, ಬ್ರಹ್ಮ ಮೂವರ ಲಿಂಗಗಳೂ ಕೇಳಿಸುತ್ತಿರುವುದರಿಂದ, ಪ್ರಾಣಶಬ್ದದಿಂದ ಮೂವರು ಪ್ರತಿಪಾದ್ಯರಾಗುತ್ತಾರೆಂದು ಪೂರ್ವಪಕ್ಷಮಾಡಿ ಉಪಕ್ರಮ ಉಪಸಂಹಾರಗಳಲ್ಲಿ ಬ್ರಹ್ಮನ ಪ್ರಸ್ತಾಪವಿರುವುದರಿಂದ ಬ್ರಹ್ಮನೇ ಪ್ರಾಣಶಬ್ದವಾಚ್ಯ-ನೆಂದು ಸಿದ್ಧಾಂತ ಮಾಡಿದ್ದಾರೆ. ಒಂದು ವೇಳೆ ಮೂವರ ಉಪಾಸನೆಯನ್ನು ಒಪ್ಪಿದರೆ ಉಪಸನಾತ್ರೈವಿಧ್ಯ ದೋಷವು ಬರುತ್ತದೆಂಬ ಯುಕ್ತಿಯನ್ನು ಹೇಳಿದ್ದಾರೆ.

ಇವರ ಈ ವ್ಯಾಖ್ಯಾನದಲ್ಲಿಯೂ ಹುರುಳಿಲ್ಲ. ಸೂತ್ರದಲ್ಲಿ ಪ್ರಸಂಗಶಬ್ದವೇ ಕಾಣಿಸುತ್ತಿಲ್ಲ. ಆದ್ದರಿಂದ ಉಪಾಸನಾತ್ರೈವಿಧ್ಯವನ್ನು ದೋಷವೆಂದು ಆಕ್ಷೇಪಿಸಲಾಗದು. ಹಾಗೆ ಆಕ್ಷೇಪಿಸುವುದು ಪೂರ್ವಪಕ್ಷಿಗೆ ಅನಿಷ್ಟವಲ್ಲ.

ಇಷ್ಟಾಪತ್ತಿಯೆಂಬ ದೊಡ್ಡದೋಷವನ್ನು ಪರಿಹರಿಸಿಕೊಳ್ಳಲು, ಶಂಕರಭಾಷ್ಯದಲ್ಲಿಲ್ಲದ ಬೇರೆ ಅರ್ಥವನ್ನೇ ವಾಚಸ್ಪತಿಯು ಸಮರ್ಥಿಸಲು ಪ್ರಯತ್ನಿಸಿದೆ. ಇಂದ್ರಪ್ರತರ್ದನರ ಸಂವಾದಪ್ರಕರಣವು ಕೇವಲ ಬ್ರಹ್ಮಪರವಾಗಿದೆ-ಯೆಂದು ಉಪಕ್ರಮ ಉಪಸಂಹಾರಗಳಿಂದ ತಿಳಿಯುತ್ತಿದೆ. ಒಂದು ವೇಳೆ ಜೀವ ಪ್ರಾಣಪರತ್ವಾದಿಗಳನ್ನು ಅಂಗೀಕರಿಸಿದಲ್ಲಿ ಕೇವಲ ಬ್ರಹ್ಮಪರತ್ವವೆಂಬ ಏಕವಾಕ್ಯತ್ವವು ಭಗ್ನವಾಗಿ ವಾಕ್ಯಭೇದದೋಷ ಬರುತ್ತದೆ. ಹೀಗೆ ಪೂರ್ವಪಕ್ಷಿಯನ್ನು ಕುರಿತು ನಾವು ಆಕ್ಷೇಪಿಸುತ್ತೇವೆ. ಪೂರ್ವಪಕ್ಷಿಗೆ ವಾಕ್ಯಭೇದವು ಇಷ್ಟವಾಗದ ಕಾರಣ ಇಷ್ಟಾಪತ್ತಿಯೆಂದು ಉತ್ತರಿಸಲಾರ.

ಭಾಮತಿಯ ಈ ನಿಲುವು ಸರಿಯಿಲ್ಲ. ಏಕೆಂದರೆ ಸ್ವತಃ ಅದ್ವೈತಿಗಳೇ ಪ್ರಾಣಪ್ರಕರಣವು ಸಂಪೂರ್ಣ ಬ್ರಹ್ಮನನ್ನು ಪ್ರತಿಪಾದಿಸಿದರೂ ಕೆಲವು ವಾಕ್ಯಗಳಿಗೆ ಅನ್ಯಪರತ್ವವನ್ನು ಒಪ್ಪಿದ್ದಾರೆ. 'ಯೋ ವೈ ಪ್ರಾಣಃ' ಇತ್ಯಾದಿ ಶ್ರುತಿಯಲ್ಲಿ ಬುದ್ಧಿಪ್ರಾಣಪರತ್ವವನ್ನು ಒಪ್ಪಿರುವುದು ಸ್ಪಷ್ಟವಾಗಿ ಕಾಣಿಸುತ್ತದೆ. ಅದರಂತೆ ಪ್ರಕೃತದಲ್ಲಿಯೂ ಏಕವಾಕ್ಯತ್ವವಿದ್ದರೂ ಇಂದ್ರಪ್ರಾಣಾದಿಪರತ್ವವನ್ನು ವಾಕ್ಯದ ಏಕದೇಶಕ್ಕೆ ಒಪ್ಪುವುದರಲ್ಲಿ ಏನೂ ತಪ್ಪಿಲ್ಲ. ಆದ್ದರಿಂದ ಇವರು ಹೇಳಿದ ಯುಕ್ತಿಯಿಂದ ಪೂರ್ವಪಕ್ಷಿಯ ನಿರಾಕರಣೆಯೇ ಆಗಲಾರದು.

ಮತ್ತು ಅದ್ವೈತಿಗಳು ಸೂತ್ರದಲ್ಲಿರುವ 'ಆಶ್ರಿತತ್ವಾತ್' ಎಂಬ ಪದಕ್ಕೆ ಪ್ರಕೃತವಾದ ತ್ರೈವಿಧ್ಯದಲ್ಲಿ ಅನ್ವಯ-ಮಾಡದೆ ಅಧ್ಯಾಹೃತವಾದ ಬ್ರಹ್ಮಪರತ್ವದಲ್ಲಿ ಅನ್ವಯ ಮಾಡುತ್ತಾರೆ. 'ತದ್ಯೋಗಾತ್' ಎಂಬ ಪದಕ್ಕೂ ವ್ಯಾಖ್ಯಾನಿಸುತ್ತಾ ಸನ್ನಿಹಿತವಾದ ತ್ರೈವಿಧ್ಯಪರತ್ವವನ್ನು ಬಿಟ್ಟು ಸನ್ನಿಹಿತವಲ್ಲದ ಬ್ರಹ್ಮಲಿಂಗಪರತ್ವವನ್ನು ಹೇಳುತ್ತಾರೆ. ಇದೆಲ್ಲವೂ ಅತ್ಯಂತ ಬಾಲಿಶವಾದ ವ್ಯಾಖ್ಯಾನವಾಗಿದೆ.

ಪ್ರಾಚೀನವೃತ್ತಿಕಾರರು ಅದ್ವೈತಮತಕ್ಕಿಂತ ವಿಭಿನ್ನವಾಗಿ ಅಂತಿಮಸೂತ್ರವನ್ನು ವ್ಯಾಖ್ಯಾನಿಸಲು ಪ್ರಯತ್ನಿಸಿ-ದ್ದಾರೆ. ಸಮಗ್ರವಾದ ಇಂದ್ರಪ್ರತರ್ದನಸಂವಾದವು ಬ್ರಹ್ಮನನ್ನೇ ಪ್ರತಿಪಾದಿಸುತ್ತದೆ. ಮಧ್ಯದಲ್ಲಿ ಕೇಳಿಸುತ್ತಿರುವ

ಪ್ರಾಣನ ಲಿಂಗಗಳಾಗಲೀ, ಜೀವನ ಲಿಂಗಗಳಾಗಲೀ, ಪ್ರಾಣನನ್ನು ಅಥವಾ ಜೀವನನ್ನು ಪ್ರತಿಪಾದಿಸಲಾರವು; ಹೊರತಾಗಿ ಬ್ರಹ್ಮನನ್ನೇ ಆಯಾ ಧರ್ಮಗಳಿಂದ ಉಪಾಸನೆ ಮಾಡಬೇಕೆಂದು ಹೇಳಲು ಹೊರಟಿವೆ. ಆದ್ದರಿಂದ ವಾಕ್ಯಭೇದಪ್ರಸಂಗದೋಷವಿಲ್ಲವೆಂದು ಇವರ ವಾದ. ಇದು ತಪ್ಪು.

ಏಕೆಂದರೆ, ಜೀವಪ್ರಾಣಾದಿಗಳಲ್ಲಿರುವ ಧರ್ಮದಿಂದ ಬ್ರಹ್ಮನನ್ನು ಉಪಾಸನೆ ಮಾಡುವುದಾದರೆ, ಬ್ರಹ್ಮನಲ್ಲಿರುವ ಧರ್ಮಗಳಿಂದಲೇ ಜೀವನನ್ನು, ಪ್ರಾಣನನ್ನು ಏಕೆ ಉಪಾಸನೆ ಮಾಡಬಾರದು? ಎಂಬ ಆಕ್ಷೇಪಕ್ಕೆ ಇವರಿಂದ ಉತ್ತರಿಸಲಾಗದು. ಭಾಮತಿಕಾರನೂ ಸಹ ಈ ಮತವನ್ನು ನಿರಾಕರಿಸಿದ್ದಾನೆ. ಆದರೆ ಗ್ರಂಥಕಾರರು ಇಲ್ಲಿ ಹೇಳುತ್ತಿರುವ ದೋಷವನ್ನು ಅಲ್ಲಿ ಹೇಳಿಲ್ಲ.

ರಾಮಾನುಜರು ಕೊನೆಯ ಸೂತ್ರವನ್ನು ಹೀಗೆ ವ್ಯಾಖ್ಯಾನಿಸುತ್ತಾರೆ. ಇಂದ್ರಪ್ರತರ್ದನರ ಸಂವಾದ-ಪ್ರಕರಣದಲ್ಲಿ ಸಂಪೂರ್ಣವಾಗಿ ಬ್ರಹ್ಮನೇ ಪ್ರತಿಪಾದ್ಯನು. ಅಂತಹ ಒಬ್ಬನೇ ಬ್ರಹ್ಮನನ್ನು ಚಿದ್ವಿಶಿಷ್ಟನಾಗಿ ಅಚಿ-ದ್ವಿಶಿಷ್ಟನಾಗಿ ಮತ್ತು ಸ್ವರೂಪತಃ ಮೂರುಬಗೆಯಲ್ಲಿ ಉಪಾಸನೆ ಮಾಡಬೇಕು. ಚಿದ್ವಿಶಿಷ್ಟನೆಂದರೆ ಜೀವನೇ ಶರೀರವಾಗಿ ಉಳ್ಳವನು ಎಂದರ್ಥ. ಅಚಿದ್ವಿವಿಶಿಷ್ಟನೆಂದರೆ ಜಡವಾದ ಪ್ರಾಣಾದಿಗಳು ಶರೀರವಾಗಿ ಉಳ್ಳವನು ಎಂದರ್ಥ. ಹೀಗೆ ಹೇಳಿದಾಗ ಚಿತ್ ಅಚಿತ್ ಪದಾರ್ಥಗಳೆಂಬ ಶರೀರಗಳೆಂಬ ಧರ್ಮಗಳೆಲ್ಲವೂ ಬ್ರಹ್ಮನಲ್ಲಿಯೇ ಬರುತ್ತವೆ. ಆದ್ದರಿಂದ ಈ ಪ್ರಕರಣದಲ್ಲಿ ಜೀವನಾಗಲೀ ಪ್ರಾಣನಾಗಲೀ ಪ್ರತಿಪಾದ್ಯರೇ ಆಗಲಾರರು. 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಇತ್ಯಾದಿ ಸ್ಥಳದಲ್ಲಿಯೂ ಹೀಗೆಯೇ ವ್ಯಾಖ್ಯಾನ ಮಾಡುವುದು ಕಂಡಿದ್ದರಿಂದ ಇಲ್ಲಿ ನಾವು ಮಾಡುತ್ತಿರುವ ವ್ಯಾಖ್ಯಾನವು ತಪ್ಪಾಗುವುದಿಲ್ಲವೆಂದು.

* * * * *

# अथ पादान्त्यप्राणाधिकरणम्

## ಸಂಶಯ ಹಾಗು ಸಂಗತಿ ಪ್ರದರ್ಶನ

**॥ ॐ प्राणस्तथाऽनुगमात् ॐ ॥ अत्र श्रुतिलिङ्गबाहुल्येन गायत्र्यधिकरण-सिद्धान्तन्यायेन पूर्वपक्षप्रवृत्तेरनन्तरसङ्गतिः ।**

**अत्र प्राणः किं मुख्यवाय्वादिः किं वा विष्णुः? इति चिन्ता । तदर्थं किं वाय्वादिश्रुत्याद्यनुसारेण विष्णुश्रुत्यादि नेयं उत विपरीतम्? इति । तदर्थं किं वाय्वादिश्रुत्यादिकं निरवकाशम् विष्णुश्रुत्यादिकन्तु सावकाशमुत विपरीतम्? इति ।**

ಅನುವಾದ - ॥ ಓಂ ಪ್ರಾಣಸ್ತಥಾನುಗಮಾತ್ ಓಂ ॥ ಶ್ರುತಿಲಿಂಗಬಾಹುಲ್ಯವು ಹಿಂದಿನ ಗಾಯತ್ರ್ಯಧಿಕರಣದ ಸಿದ್ಧಾಂತನ್ಯಾಯ. ಅದೇ ನ್ಯಾಯದಿಂದಲೇ ಈ ಅಧಿಕರಣದ ಪೂರ್ವಪಕ್ಷವು ಹೊರಟಿರುವುದರಿಂದ ಅನಂತರಸಂಗತಿ ಇದೆ.

ಇಲ್ಲಿ ೧. ಪ್ರಾಣವು ಮುಖ್ಯವಾಯುವೋ ಅಥವಾ ವಿಷ್ಣುವೋ? ಎಂದು ಸಂಶಯ.

೨. ಅದಕ್ಕಾಗಿ ವಾಯುಶ್ರುತಿಗೆ ಅನುಸಾರಿಯಾಗಿ ವಿಷ್ಣುಶ್ರುತಿಯನ್ನು ವ್ಯಾಖ್ಯಾನಿಸಬೇಕೋ ಅಥವಾ ವಿಷ್ಣುಶ್ರುತಿಗೆ ಅನುಸಾರಿಯಾಗಿ ವಾಯುಸ್ತುತಿಯನ್ನು ವ್ಯಾಖ್ಯಾನಿಸಬೇಕೋ?

೩. ಅದಕ್ಕಾಗಿ ವಾಯುಶ್ರುತ್ಯಾದಿಗಳು ನಿರವಕಾಶ, ವಿಷ್ಣುಶ್ರುತ್ಯಾದಿಗಳು ಸಾವಕಾಶವೆಂದೋ ಅಥವಾ ವಿಷ್ಣುಶ್ರುತ್ಯಾದಿಗಳು ನಿರವಕಾಶ ವಾಯುಶ್ರುತ್ಯಾದಿಗಳು ಸಾವಕಾಶವೆಂದೋ? ಎಂದು ಸಂಶಯಕೋಟಿ.

**प्रकाशः – ॥ ॐ प्राणस्तथाऽनुगमात् ॐ ॥** नन्विदमेतदधिकरणभाष्यदिशा पूर्वप्राणाधिकरणसङ्गतं भाति, तदयुक्तमिव, तथात्वे तदानन्तर्यस्यैव प्राप्तेरित्यतः, सुधोक्तदिशा गायत्र्यधिकरणेन सङ्गति लाभादत्र निवेश इति भावेनाह – **अत्रेति ॥ सङ्गतिरिति ॥** आपवादिकीत्यर्थः ।

**"पूर्वसिद्धान्ततो यत्र पूर्वपक्षः प्रवर्तते ।**
**तत्रापवादिकी................. ॥" इत्यादेः ।**

**यद्वा** – पूर्वसिद्धान्तोपजीवनादुपजीव्योपजीवकवरूपेत्यर्थः । एतेन अन्यप्रापकश्रुतिलिङ्गबाहुल्योपेताः शब्दा उदाहरणमिति सूचितं, सूत्रस्योपलक्षणार्थत्वादिति ध्येयम् । एतच्चाग्रे स्फुटीभविष्यति । भाष्यं तु "मनो वाक्प्राणः" इत्यत्र प्राणो विष्णोरन्यश्चेत्तदा प्राक्तनोऽप्यन्य इति शङ्का स्यादिति तस्य विष्णुत्वावधारणार्थत्वात् सफलेयं चिन्तेति प्रयोजनपरं व्याख्येयमिति भावः ।

यद्यपि "सर्वे वेदाः" इति सर्ववेदप्रतिपाद्यत्वस्याप्यन्यनिष्ठत्वेन शास्त्रयोनित्वमप्यन्यस्येति शङ्कासमाधानमपि प्रयोजनमिति शक्यं वक्तुं भाति । तथाऽपि तस्याऽऽनन्दमयाधिकरणानाक्षेपकत्वात् तदाक्षेपायैवमुक्तम्, समन्वीयमानप्राणशब्दमुखाक्षेपस्य ततोऽप्यन्तरङ्गत्वाच्चेति ध्येयम् । समर्थयिष्यते चैतत्प्रयोजनम्॥

**अत्रेति ॥** ऐतरेयके "ता एताः शीर्षच्छ्रियः श्रिताश्चक्षुः श्रोत्रं मनो वाक् प्राणः" इत्यारभ्य बहुषु स्थलेषु श्रुत, प्राणो विषय इत्यर्थः । आदिपदेनेन्द्रो जीवश्च ग्राह्यः। **वाय्वादीति ॥** वक्ष्यमाणवाय्विन्द्रजीवप्रापकश्रुतिलिङ्गानुसारेणेत्यर्थः ॥ **विष्णुश्रुतीति ॥** "ब्रह्मेमं पुरुषं" इति ब्रह्मशब्दादीत्यर्थः । अत्र फलफलिभावः स्फुटः ।

ವಿವರಣೆ - ಪಾದಾಂತ್ಯಪ್ರಾಣಾಧಿಕರಣವು ಪ್ರಾರಂಭವಾಗುತ್ತಿದೆ. ಗ್ರಂಥಕಾರರು ಗಾಯತ್ರ್ಯಧಿಕರಣದಿಂದ ಸಂಗತಿಯನ್ನು ತೋರಿಸಿದ್ದಾರೆ. ಆದರೆ ಈ ಅಧಿಕರಣದ ಭಾಷ್ಯದಲ್ಲಿ ಹಿಂದಿನ ಪ್ರಾಣಾಧಿಕರಣದಿಂದ ಸಂಗತಿಯನ್ನು ತೋರಿಸಿದಂತೆ ಇದೆ. ಇದು ತಪ್ಪು. ಪ್ರಾಣಾಧಿಕರಣದಿಂದ ಸಂಗತಿಯನ್ನು ತೋರಿಸುವುದಾದಲ್ಲಿ ಪ್ರಾಣಾಧಿಕರಣದ ನಂತರವೇ ಈ ಅಧಿಕರಣವು ಇರಬೇಕಿತ್ತೆಂದು ಸುಧೆಯಲ್ಲಿ ಹೇಳಿದ್ದಾರೆ. ಆದ್ದರಿಂದ ಗಾಯತ್ರ್ಯಧಿಕರಣದಿಂದಲೇ ಸಂಗತಿಯನ್ನು ತೋರಿಸಬೇಕು. ಇದನ್ನು ಗ್ರಂಥಕಾರರು 'ಅತ್ರ' ಇತ್ಯಾದಿ ಗ್ರಂಥದಿಂದ ಪ್ರತಿಪಾದಿಸಿದ್ದಾರೆ. ಗಾಯತ್ರ್ಯಧಿಕರಣದಿಂದ ಈ ಅಧಿಕರಣಕ್ಕೆ ಆಪವಾದಿಕೀಸಂಗತಿಯನ್ನು ತಿಳಿಯಬೇಕು.

ಪೂರ್ವಸಿದ್ಧಾಂತತೋ ಯತ್ರ ಪೂರ್ವಪಕ್ಷಃ ಪ್ರವರ್ತತೇ ।
ತತ್ರಾಪವಾದಿಕೀ ....॥

ಹಿಂದಿನ ಸಿದ್ಧಾಂತನ್ಯಾಯವನ್ನವಲಂಬಿಸಿ ಪೂರ್ವಪಕ್ಷ ಮಾಡಿದರೆ ಆಪವಾದಿಕೀಸಂಗತಿ ಎನಿಸುತ್ತದೆ. ಅಥವಾ ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯವನ್ನು ಉಪಜೀವಿಸಿ ಈ ಅಧಿಕರಣದ ಪೂರ್ವಪಕ್ಷವು

ಹೊರಟಿದ್ದರಿಂದ ಉಪಜೀವ್ಯಉಪಜೀವಕತ್ವಭಾವಸಂಗತಿಯನ್ನು ಹೇಳಬಹುದು. ಹೀಗೆ ಸಂಗತಿಯನ್ನು ಗ್ರಂಥದಿಂದ ತೋರಿಸಿದ್ದರಿಂದ ಅನ್ಯಪ್ರಾಪಕಶ್ರುತಿಲಿಂಗಬಾಹುಲ್ಯೋಪೇತಶಬ್ದಗಳು ಈ ಅಧಿಕರಣದ ವಿಷಯವಾಕ್ಯಗಳೆಂದು ಸೂಚಿಸಿದ್ದಾರೆ. ಸೂತ್ರದಲ್ಲಿ ಹೇಳಿರುವ ಜೀವಮುಖ್ಯಪ್ರಾಣಲಿಂಗಗಳು ಕೇವಲ ಉಪಲಕ್ಷಣವಷ್ಟೇ. ಈ ವಿಚಾರವು ಮುಂದೆ ಸ್ಪಷ್ಟವಾಗುತ್ತದೆ.

ಗಾಯತ್ರ್ಯಧಿಕರಣದಿಂದ ಸಂಗತಿಯನ್ನು ತೋರಿಸುವುದಾದರೆ ಭಾಷ್ಯದಲ್ಲಿ ಪ್ರಾಣಾಧಿಕರಣದಿಂದ ಸಂಗತಿಯನ್ನು ತೋರಿಸಿದ್ದಾರಲ್ಲ? ಎಂಬ ಪ್ರಶ್ನೆಗೆ ಹೀಗೆ ಉತ್ತರ - 'ಮನೋವಾಕ್‌ಪ್ರಾಣಃ' ಎಂಬಲ್ಲಿ ಪ್ರಾಣಶಬ್ದದಿಂದ ವಿಷ್ಣುವಿಗಿಂತ ಬೇರೆಯವರು ಪ್ರತಿಪಾದ್ಯರಾದರೆ ಆವಾಗ ಹಿಂದಿನ ಪ್ರಾಣಾಧಿ-ಕರಣದಲ್ಲಿಯೂ ವಿಷ್ಣು ಪ್ರತಿಪಾದ್ಯನಾಗಲಾರ ಎಂಬ ಶಂಕೆ ಬರುತ್ತದೆ. ಈ ಅಧಿಕರಣದಲ್ಲಿ ಮನೋವಾಕ್‌ಪ್ರಾಣ ಎಂಬಲ್ಲಿರುವ ಪ್ರಾಣಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನೆಂದು ನಿರ್ಣಯವಾದಾಗ ಹಿಂದಿನ ಪ್ರಾಣಾಧಿಕರಣದ 'ತದ್ವೈತ್ವಂ ಪ್ರಾಣಃ' ಎಂಬ ವಿಷಯವಾಕ್ಯದಿಂದಲೂ ವಿಷ್ಣುವೇ ಪ್ರತಿಪಾದ್ಯನೆಂದು ನಿರ್ಣಯವಾಗುತ್ತದೆ. ಈ ರೀತಿಯಾಗಿ ಪ್ರಾಣಾಧಿಕರಣದಿಂದ ಪ್ರಯೋಜನವನ್ನಷ್ಟೇ ತೋರಿಸಲು ಭಾಷ್ಯದ ಮಾತು ಹೊರಟಿದೆ ಹೊರತು ಸಂಗತಿಗಾಗಿ ಅಲ್ಲ.

ವಸ್ತುತಃ 'ಮನೋವಾಕ್‌ಪ್ರಾಣಃ' ಎಂಬಲ್ಲಿರುವ ಪ್ರಾಣಶಬ್ದದಿಂದ ವಿಷ್ಣುವು ಪ್ರತಿಪಾದ್ಯನಾಗದಿದ್ದರೆ ಅಲ್ಲೇ 'ಸರ್ವೇ ವೇದಾಃ' ಎಂದು ಕೇಳಿಸುತ್ತಿರುವ ಸರ್ವವೇದಪ್ರತಿಪಾದ್ಯತ್ವವೂ ಸಹ ವಿಷ್ಣುವಿನಲ್ಲಿ ಬರುವುದಿಲ್ಲ. ಆದ್ದರಿಂದ ಈ ಅಧಿಕರಣಕ್ಕೆ ನೇರವಾಗಿ ಶಾಸ್ತ್ರಯೋನಿತ್ವಾಧಿಕರಣವನ್ನು ಆಕ್ಷೇಪಿಸಿ ಸಮಾಧಾನವನ್ನು ಹೇಳಬಹುದು. ಆದ್ದರಿಂದ ಪ್ರಾಣಾಧಿಕರಣದಿಂದ ಪ್ರಯೋಜನವನ್ನು ತೋರಿಸಿದಂತೆ ಶಾಸ್ತ್ರಯೋನಿತ್ವಾಧಿಕರಣದಿಂದಲೂ ಪ್ರಯೋಜನವನ್ನು ತೋರಿಸಬಹುದು. ಆದರೆ ಇದು ಸರಿಯಲ್ಲ. ಈ ಪಾದದಲ್ಲಿರುವ ಪ್ರತಿಯೊಂದು ಅಧಿಕರಣಗಳಿಗೆ ಆನಂದಮಯಾಧಿಕರಣವನ್ನು ಆಕ್ಷೇಪಿಸುವ ಮೂಲಕವೇ ಪ್ರಯೋಜನವನ್ನು ತೋರಿಸಿದ್ದಾರೆ. ಇಲ್ಲಿಯ ತನಕ ಪ್ರತಿಯೊಂದು ಅಧಿಕರಣಗಳಲ್ಲಿಯೂ ಆನಂದಮಯಾಧಿಕರಣದಿಂದ ಸಾರ್ಥಕ್ಯವನ್ನು ತೋರಿಸಿ, ಈ ಅಧಿಕರಣಕ್ಕೆ ಮಾತ್ರ ಶಾಸ್ತ್ರಯೋನಿತ್ವಾಧಿ ಕರಣ- ದಿಂದ ಪ್ರಯೋಜವನ್ನು ತೋರಿಸುವುದು ತಪ್ಪಾಗುತ್ತದೆ. ಆದ್ದರಿಂದ ಭಾಷ್ಯದಲ್ಲಿ ಪ್ರಾಣಾಧಿ ಕರಣದಿಂದಲೇ ಪ್ರಯೋಜನವನ್ನು ತೋರಿಸಿದ್ದಾರೆ. ಪ್ರಾಣಾಧಿಕರಣದಲ್ಲಾದರೋ ಆನಂದಮಯಾಧಿ ಕರಣದಿಂದ ಪ್ರಯೋಜನವನ್ನು ತೋರಿಸಿದ್ದರಿಂದ ಸಮಂಜಸವಾಗಿದೆ. ಮತ್ತು 'ಮನೋವಾಕ್‌ಪ್ರಾಣ' ಎಂಬಲ್ಲಿರುವ ಪ್ರಾಣನು ವಿಷ್ಣುವಲ್ಲವೆಂದರೆ 'ಅತ ಏವ ಪ್ರಾಣಃ' ಎಂಬಲ್ಲಿರುವ ಪ್ರಾಣನು ವಿಷ್ಣುವಲ್ಲವೆಂದು ಹೇಳುವುದು ಸುಲಭ (ಅಂತರಂಗವಾಗಿದೆ). ಅದನ್ನು ಬಿಟ್ಟು ಈ ಪ್ರಾಣ ವಿಷ್ಣುವಲ್ಲವೆಂದರೆ ಈ ಪ್ರಾಣನಲ್ಲಿ ಕೇಳಿಸುತ್ತಿರುವ ಸರ್ವವೇದಪ್ರತಿಪಾದ್ಯತ್ವಧರ್ಮವು ವಿಷ್ಣುವಿನಲ್ಲಿ ಬರುವುದಿಲ್ಲವೆನ್ನುವುದು ಕಠಿಣವಾಗಿದೆ. ಈ ಅಧಿಕರಣದ ಪ್ರಯೋಜನವನ್ನು ಸ್ವತಃ ಗ್ರಂಥಕಾರರೇ 'ಅತ್ರ' ಎಂಬ ಗ್ರಂಥದಿಂದ ತೋರಿಸಿದ್ದಾರೆ.

ಐತರೇಯೋಪನಿಷತ್ತಿನಲ್ಲಿ 'ತಾ ಏತಾಃ ಶೀರ್ಷಂಛ್ರಿಯಃ ಶ್ರಿತಾಶ್ಚಕ್ಷುಶ್ಶ್ರೋತ್ರಂ ಮನೋವಾಕ್ ಪ್ರಾಣಃ' ಎಂಬುದರಿಂದ ಪ್ರಾರಂಭಿಸಿ ಅನೇಕ ಸ್ಥಳಗಳಲ್ಲಿ ಪ್ರಾಣಶಬ್ದವು ಕೇಳಿಸುತ್ತಿದೆ. 'ಮುಖ್ಯವಾಯ್ವಾದಿಃ' ಎಂಬಲ್ಲಿರುವ ಆದಿಶಬ್ದದಿಂದ ಜೀವನನ್ನು ತೆಗೆದುಕೊಳ್ಳಬೇಕು. 'ವಾಯ್ವಾದಿಶ್ರುತ್ಯಾದಿಕಂ' ಎಂಬ ಪದಕ್ಕೆ

ಮುಂದೆ ಹೇಳುವ ಇಂದ್ರಜೀವ ಮೊದಲಾದವರನ್ನು ಸಮರ್ಥಿಸುವ ಶ್ರುತಿಲಿಂಗಗಳಿಗೆ ಅನುಸಾರಿಯಾಗಿ ಎಂದರ್ಥ. 'ವಿಷ್ಣುಶ್ರುತ್ಯಾದಿಕಂ' ಎಂಬಲ್ಲಿ 'ಬ್ರಹ್ಮೇಮಂ ಪುರುಷಂ' ಎಂಬ ಶ್ರುತಿಯನ್ನು ವಿವಕ್ಷಿಸಬೇಕು.

ಪೂರ್ವಪಕ್ಷದ ಫಲಫಲಿಭಾವ - ಒಂದು ವೇಳೆ ವಾಯುಶ್ರುತಿ ಮೊದಲಾದವುಗಳು ನಿರವಕಾಶವಾಗಿ ವಿಷ್ಣುಶ್ರುತಿಗಳು ಸಾವಕಾಶವಾದರೆ ವಾಯುಶ್ರುತಿ ಮೊದಲಾದವುಗಳಿಗೆ ಅನುಸಾರಿಯಾಗಿ ವಿಷ್ಣುಶ್ರುತಿಗಳನ್ನು ಅರ್ಥೈಸಬೇಕು. ಆವಾಗ ಮುಖ್ಯವಾಯುವೇ ಪ್ರಾಣನೆನಿಸುತ್ತಾನೆ.

ಸಿದ್ಧಾಂತದ ಫಲಫಲಿಭಾವ - ಒಂದು ವೇಳೆ ವಿಷ್ಣುಶ್ರುತಿಗಳು ನಿರವಕಾಶವಾಗಿ ವಾಯುಶ್ರುತಿ ಮೊದಲಾದವುಗಳು ಸಾವಕಾಶವಾದಲ್ಲಿ ವಿಷ್ಣುಶ್ರುತಿಗಳಿಗೆ ಅನುಸಾರಿಯಾಗಿ ವಾಯುಶ್ರುತಿ ಮೊದಲಾದವನ್ನು ಅರ್ಥೈಸಬೇಕು. ಆವಾಗ ವಿಷ್ಣುವೇ ಪ್ರಾಣನಾಗುತ್ತಾನೆ. ಈ ಫಲಫಲಿಭಾವವು ಸ್ಪಷ್ಟವಾದ್ದರಿಂದ ಪ್ರತ್ಯೇಕವಾಗಿ ಹೇಳಿಲ್ಲ.

**गुरुराजीयम् – ॥ ॐ प्राणस्तथानुगमात् ॥**

## ಸಾರ

ಶ್ರುತಿಲಿಂಗಬಾಹುಲ್ಯವು ಗಾಯತ್ರ್ಯಧಿಕರಣದ ಸಿದ್ಧಾಂತನ್ಯಾಯ. ಆ ನ್ಯಾಯದಿಂದಲೇ ಈ ಅಧಿಕರಣದ ಪೂರ್ವಪಕ್ಷ ಹೊರಟಿದ್ದರಿಂದ ಆಪವಾದಿಕೀ ಸಂಗತಿಯನ್ನು ತಿಳಿಯಬೇಕು.

ವಾಯುಶ್ರುತಿ ಮೊದಲಾದವು ನಿರವಕಾಶವಾದ್ದರಿಂದ ವಾಯುಶ್ರುತಿಗಳಿಗೆ ಅನುಸಾರಿಯಾಗಿ ವಿಷ್ಣು-ಶ್ರುತಿಗಳನ್ನು ಅರ್ಥೈಸಬೇಕು. ಆವಾಗ ಮುಖ್ಯವಾಯುವೇ ಪ್ರಾಣನಾಗುತ್ತಾನೆಂಬುದು ಪೂರ್ವಪಕ್ಷದ ಗುರಿ. ವಿಷ್ಣುಶ್ರುತಿ ನಿರವಕಾಶವಾದ್ದರಿಂದ ವಿಷ್ಣುಶ್ರುತಿಗೆ ಅನುಸಾರಿಯಾಗಿ ವಾಯುಶ್ರುತಿಯನ್ನು ಅರ್ಥೈಸಬೇಕು. ಆವಾಗ ವಿಷ್ಣುವೇ ಪ್ರಾಣಶಬ್ದವಾಚ್ಯನಾಗುತ್ತಾನೆಂಬುದು ಸಿದ್ಧಾಂತದ ಗುರಿ.

* * * *

## ಪುನರುಕ್ತಿಪರಿಹಾರ

### तात्पर्यचन्द्रिका

ननु "अत एव प्राणः" इत्यनेन गतार्थमिदम्। नच पूर्वत्र प्राणशब्दो वायुपरो नेत्युक्तं, इह त्विन्द्रजीवपरो नेत्युच्यते इति भेदः, इह सूत्रे मुख्यप्राणपदायोगात्। नच पूर्वत्र वायुपरत्वस्यैव निरासः, इह तु इन्द्रजीववायुपरत्वानामिति भेदः, अस्य बहुविषयस्य तेनागतार्थत्वेऽप्यनेन तस्याल्पविषयस्य गतार्थत्वात्। निरासक-न्यायभेदं विना निरसनीयभेदमात्रेणाधिकरणभेदासिद्धेश्च।

नच पूर्वत्र प्रसिद्ध्यवलम्बेन श्रुत्या पूर्वपक्षे लिङ्गैः सिद्धान्तः, अत्र तु लिङ्गैः पूर्वपक्षे श्रुतिलिङ्गाभ्यां सिद्धान्तः। अत एव तत्र पूर्वपक्षे भाष्ये 'प्रसिद्धेः' इत्युक्तम्,

**अत्र तु सूत्रे 'लिङ्गात्' इत्युक्तमिति वाच्यम्, श्रुत्या प्राप्तस्य पूर्वपक्षस्य लिङ्गमात्रेण बाधितस्य पुनर्विरोधिश्रुतिलिङ्गबाधेन लिङ्गैरुज्जीवनासम्भवात् ।**

**नच श्रुतिबाहुल्यादुज्जीवनं, तद्बाहुल्यप्राप्तस्यापि पूर्वपक्षस्य गायत्र्यधिकरणे निरासात् । नच तत्र गायत्रीवाक्पृथिव्यादिश्रुतयो भिन्नविषयाः, अत्र तु "चक्षुः श्रोत्रं मनोवाक् प्राणः । तत्प्राणे प्रपन्न उदतिष्ठत् स एष प्राणः" इत्यादावेकैव प्राणादिश्रुतिरावृत्तेति वाच्यम्, तत्रापि "गायत्री वा इदं सर्वं वाग्वै गायत्री सैषा षड्विधा गायत्री" इति श्रवणात् ।**

**आकाशाधिकरणविषयवाक्ये आकाशश्रुतेरेवावृत्तेश्च ।**

ಅನುವಾದ - ಈ ಅಧಿಕರಣವು 'ಅತ ಏವ ಪ್ರಾಣಃ' ಎಂಬ ಅಧಿಕರಣದಿಂದ ಗತಾರ್ಥವಾಗಿದೆ.

ಪ್ರಶ್ನೆ - ಹಿಂದಿನ ಪ್ರಾಣಾಧಿಕರಣದಲ್ಲಿ ತೈತ್ತಿರೀಯದಲ್ಲಿರುವ ಪ್ರಾಣಶಬ್ದವು ವಾಯುಪರ-ವಲ್ಲವೆಂದು ಹೇಳಿದರು. ಇಲ್ಲಿ ಐತರೇಯಪ್ರಾಣನು ಇಂದ್ರನಾಗಲೀ ಜೀವನಾಗಲೀ ಅಲ್ಲವೆಂದು ಹೇಳುತ್ತಿದ್ದಾರೆ. ಹೀಗಿರುವಾಗ ಗತಾರ್ಥತ್ವವನ್ನು ಹೇಗೆ ಹೇಳುತ್ತೀರಿ?

ಉತ್ತರ - ಈ ಅಧಿಕರಣದಲ್ಲಿಯೂ ಸಹ ಪ್ರಾಣಶಬ್ದವು ವಾಯುಪರ ಅಲ್ಲವೆಂದೇ ಹೇಳಬೇಕು ಹೊರತು ಇಂದ್ರ ಅಥವಾ ಜೀವಪರವಲ್ಲ ಎಂಬುದು ಮುಖ್ಯವಲ್ಲ. ಇಲ್ಲದಿದ್ದರೆ ಸೂತ್ರದಲ್ಲಿರುವ ಮುಖ್ಯಪ್ರಾಣಪದವು ತಪ್ಪಾಗುತ್ತದೆ. ಆದ್ದರಿಂದ ಗತಾರ್ಥತ್ವವು ಬಂದೇ ಬರುತ್ತದೆ.

ಪ್ರಶ್ನೆ - ಹಿಂದಿನ ಅಧಿಕರಣದಲ್ಲಿ ಕೇವಲ ವಾಯುಪರತ್ವವನ್ನು ನಿರಾಸ ಮಾಡಲಾಗಿದೆ. ಈ ಅಧಿಕರಣದಲ್ಲಿ ಇಂದ್ರ, ಜೀವ, ವಾಯುಪರವಲ್ಲವೆಂದು ನಿರಾಸ ಮಾಡಲಾಗಿದೆ. ಹೀಗೆ ವೈಲಕ್ಷಣ್ಯವನ್ನು ಹೇಳುತ್ತೇವೆ.

ಉತ್ತರ - ಹಾಗಾದಲ್ಲಿ ಬಹುವಿಷಯಕವಾದ ಈ ಅಧಿಕರಣಕ್ಕೆ ಹಿಂದಿನ ಪ್ರಾಣಾಧಿಕರಣದಿಂದ ಗತಾರ್ಥತ್ವ ಬಾರದಿದ್ದರೂ ಈ ಅಧಿಕರಣದಿಂದ ಅಲ್ಪವಿಷಯಕವಾದ ಹಿಂದಿನ ಪ್ರಾಣಾಧಿಕರಣಕ್ಕೆ ಗತಾರ್ಥತ್ವವು ಬಂದೇ ಬರುತ್ತದೆ. ಅಂದರೆ ಪ್ರಾಣಶಬ್ದವು ಇಂದ್ರ, ಜೀವ, ವಾಯು ಯಾರನ್ನೂ ಹೇಳುವುದಿಲ್ಲವೆಂದು ಈ ಅಧಿಕರಣದಲ್ಲಿ ತೀರ್ಮಾನವಾದ ಮೇಲೆ ಪುನಃ ಪ್ರತ್ಯೇಕವಾಗಿ ಹಿಂದಿನ ಪ್ರಾಣಾಧಿಕರಣದಲ್ಲಿ ಪ್ರಾಣಶಬ್ದವು ವಾಯುಪರವಲ್ಲವೆಂದು ಹೇಳುವುದರಲ್ಲಿ ಅರ್ಥವಿಲ್ಲ. ಮತ್ತು ಪೂರ್ವಪಕ್ಷವನ್ನು ನಿರಾಸಮಾಡುವ ನ್ಯಾಯಗಳಲ್ಲಿ ಭೇದವಿದ್ದರೆ ಮಾತ್ರ ಅಧಿಕರಣಭೇದವು ಯುಕ್ತವಾಗುತ್ತದೆ ಹೊರತು ನಿರಸನೀಯವಾದ ಪೂರ್ವಪಕ್ಷಗಳಲ್ಲಿ ಭೇದವಿದ್ದ ಮಾತ್ರದಿಂದ ಅಧಿಕರಣಗಳಲ್ಲಿ ಭೇದವು ಕೂಡುವುದಿಲ್ಲ.

ಪ್ರಶ್ನೆ - ಹಿಂದಿನ ಪ್ರಾಣಾಧಿಕರಣದಲ್ಲಿ ಲೋಕಪ್ರಸಿದ್ಧಿಯನ್ನು ಅವಲಂಬಿಸಿ ಶ್ರುತಿಯಿಂದ ಪೂರ್ವಪಕ್ಷವು ಪ್ರಾಪ್ತವಾದಾಗ ಲಿಂಗಗಳಿಂದ ಸಿದ್ಧಾಂತ ಮಾಡಲಾಗಿತ್ತು. ಆದರೆ ಈ ಅಧಿಕರಣದಲ್ಲಿ ಲಿಂಗಗಳಿಂದ ಪೂರ್ವಪಕ್ಷವು ಪ್ರಾಪ್ತವಾದಾಗ ಶ್ರುತಿಲಿಂಗಗಳಿಂದ ಸಿದ್ಧಾಂತವನ್ನು ಮಾಡಲಾಗಿದೆ. ಆದ್ದರಿಂದಲೇ ಆ ಅಧಿಕರಣದ ಪೂರ್ವಪಕ್ಷದ ಭಾಷ್ಯದಲ್ಲಿ 'ಪ್ರಸಿದ್ಧೇಃ' ಎಂದಿದ್ದಾರೆ. ಈ ಅಧಿಕರಣದ ಸೂತ್ರದಲ್ಲಿ 'ಲಿಂಗಾತ್' ಎಂದಿದ್ದಾರೆ.

ಉತ್ತರ - ಹಾಗಾದಲ್ಲಿ ಈ ಅಧಿಕರಣಗ ಪೂರ್ವಪಕ್ಷವೇ ಹುಟ್ಟಲು ಸಾಧ್ಯವಿಲ್ಲ. ಏಕೆಂದರೆ, ಶ್ರುತಿಯಿಂದ ಪ್ರಾಪ್ತವಾದ ಪೂರ್ವಪಕ್ಷವನ್ನು ಕೇವಲ ಲಿಂಗದಿಂದ ಹಿಂದೆ ನಿರಾಕರಿಸಿದ್ದಾಯಿತು. ಪುನಃ ಇದನ್ನು ವಿರೋಧಿಸುವ ಶ್ರುತಿಲಿಂಗಗಳನ್ನು ಬಾಧಿಸಿ ಕೇವಲ ಲಿಂಗದಿಂದ ಪೂರ್ವಪಕ್ಷವನ್ನು ಸ್ಥಾಪಿಸಲು ಸಾಧ್ಯವಿಲ್ಲ.

ಪ್ರಶ್ನೆ - ಲಿಂಗದಿಂದ ಪೂರ್ವಪಕ್ಷವು ಸ್ಥಾಪಿತವಾಗದಿದ್ದರೂ ಶ್ರುತಿಬಾಹುಲ್ಯಪ್ರಯುಕ್ತವಾಗಿ ಪೂರ್ವ-ಪಕ್ಷವು ಹುಟ್ಟಬಹುದಲ್ಲವೇ?

ಉತ್ತರ - ಶ್ರುತಿಬಾಹುಲ್ಯಪ್ರಯುಕ್ತವಾದ ಪೂರ್ವಪಕ್ಷವನ್ನು ಗಾಯತ್ರ್ಯಧಿಕರಣದಲ್ಲೇ ನಿರಾಕರಿಸಿ-ದ್ದಾಯಿತು. ಅದಕ್ಕೋಸ್ಕರ ಈ ಅಧಿಕರಣದ ಅನಿವಾರ್ಯತೆ ಇಲ್ಲ.

ಪ್ರಶ್ನೆ - ಗಾಯತ್ರ್ಯಧಿಕರಣದಲ್ಲಿ ಭಿನ್ನ ಭಿನ್ನ ವಿಷಯಕವಾದ ಗಾಯತ್ರೀ ವಾಕ್ ಪೃಥಿವೀ ಮೊದಲಾದ ಶ್ರುತಿಗಳಿಂದ ಪೂರ್ವಪಕ್ಷವು ಪ್ರಾಪ್ತವಾಗಿದೆ. ಆದರೆ ಈ ಅಧಿಕರಣದಲ್ಲಿ 'ಚಕ್ಷುಃಶ್ರೋತ್ರಂ ಮನೋವಾಕ್ ಪ್ರಾಣಃ । ತತ್ಪ್ರಾಣೇ ಪ್ರಪನ್ನ ಉದತಿಷ್ಠತ್ ಸ ಏಷ ಪ್ರಾಣಃ' ಇತ್ಯಾದಿಯಾಗಿ ಏಕವಿಷಯಕವಾದ ಒಂದೇ ಪ್ರಾಣಶ್ರುತಿಯು ಅನೇಕಬಾರಿ ಕೇಳಿಸುತ್ತಿದೆ. ಬಹುವಿಷಯಕಶ್ರುತಿಯಿಂದ ಪ್ರಾಪ್ತವಾದ ಪೂರ್ವಪಕ್ಷದ ನಿರಾಸಕ್ಕಾಗಿ ಗಾಯತ್ರ್ಯಧಿಕರಣವು ಹೊರಟಿದೆ. ಏಕವಿಷಯಕಶ್ರುತಿಯಿಂದ ಪ್ರಾಪ್ತವಾದ ಪೂರ್ವಪಕ್ಷದ ನಿರಾಸಕ್ಕಾಗಿ ಈ ಅಧಿಕರಣ ಹೊರಟಿದೆ.

ಉತ್ತರ - ಹಾಗೇನಿಲ್ಲ. ಗಾಯತ್ರ್ಯಧಿಕರಣದಲ್ಲಿಯೂ ಸಹ 'ಗಾಯತ್ರೀ ವಾ ಇದಂ ಸರ್ವಂ ವಾಗ್ವೈ ಗಾಯತ್ರೀ ಸೈಷಾ ಷಡ್ವಿಧಾ ಗಾಯತ್ರೀ' ಎಂಬ ಏಕವಿಷಯಕವಾದ ಶ್ರುತಿಯು ಕೇಳಿಸುತ್ತಿದೆ. ಮತ್ತು ಆಕಾಶಾಧಿಕರಣದ ವಿಷಯವಾಕ್ಯದಲ್ಲಂತೂ ಒಂದೇ ಆಕಾಶಶ್ರುತಿಯು ಅನೇಕಬಾರಿ ಕೇಳಿಸುತ್ತಿದೆ. ಆದ್ದರಿಂದ ಪ್ರಾಣಾಧಿಕರಣದಿಂದ ಗತಾರ್ಥತ್ವವನ್ನು ಪರಿಹರಿಸಲು ಹೊರಟರೆ ಗಾಯತ್ರ್ಯಧಿಕರಣದಿಂದಲೋ ಅಥವಾ ಆಕಾಶಾಧಿಕರಣದಿಂದಲೋ ಗತಾರ್ಥತ್ವವು ಬಂದೇ ಬರುತ್ತದೆ.

**प्रकाशः – ''ननु गतार्थमिदमधिकरणं, सर्वासां प्राणविद्यानां ''अत एव प्राणः'' इत्यनेनैव भगवद्विषयतायास्समर्थितत्वात्''** इति न्यायविवरणटीकां विवरितु-माक्षिपति – **नन्विति ॥** प्राणशब्दस्य विष्णौ तत्रैव मुख्यत्वसाधनादिति भावः ।

नच वाच्यं तत्र **"तद्वै त्वं प्राणः"** इत्येतदुदाहरणमत्र तु **"ता वा एताः"** इत्यादीति, उदाहरणभेदेनाधिकरणभेदेऽतिप्रसङ्गादित्युक्तत्वात् । नन्वथाऽपि निरसनीयभेदाद्वा पूर्वपक्षप्रापकन्यायभेदाद्वा भेदो भविष्यतीत्यतो निरसनीयभेदं तावदाशङ्क्य निरस्यति – **नचेति** ॥

'इह' अधिकरणे "जीवमुख्यप्राणलिङ्गात्" इति सूत्रे इत्यर्थः ॥ **निरासकन्यायेति** ॥ अन्यथाऽऽनन्दमयाधिकरणादावनेकत्वप्रसङ्ग इति भावः । अस्तु तर्हि प्रापकभेदाद्भेद इति चेन्न, तत् श्रुतिमात्रमुत लिङ्गमात्रं, वा ब्रह्मश्रुतिलिङ्गयोरपि भावात् ।

अथ तद्बाहुल्यमिति चेत्तत्किं लिङ्गबाहुल्यं उत श्रुतिबाहुल्यमथ श्रुतिलिङ्ग-बाहुल्यमिति विकल्प्याद्यमाशङ्क्य निरस्यति – **नचेति** ॥ 'लिङ्गैः' श्रीपतित्वादि-लिङ्गैः॥ **लिङ्गैरिति** ॥ प्राणसंवादादिभिः । सौत्रैकवचनं समुदायाशयमिति भावः ॥ **श्रुतीति** ॥ ब्रह्मश्रुत्या सर्वदेवोपदेश्यत्वादिलिङ्गेन च बाधेनेत्यर्थः । द्वितीयमाशङ्क्य निरस्यति – **नचेति** ॥ **तद्बाहुल्यप्राप्तस्येति** ॥

**कथं प्रसिद्धबहुलशब्दानामन्यथार्थता ।**

इत्युक्तेरिति भावः । ननु तत्र श्रुतिबाहुल्यप्राप्तस्य विष्णुश्रुतिलिङ्गबाहुल्येन निरासः,"बाहुल्यात् श्रुतिलिङ्गयोः" इत्यनुव्याख्यानोक्तेरिति चेत्, इहापि सिद्धान्ते श्रुतिलिङ्गबाहुल्यसत्त्वादिति तात्पर्यात् । पूर्ववैषम्यमाशङ्क्य तौल्यमाह – **नचेति** ॥

**स एष इति** । **"स एषोऽसुः स एष प्राणः स एष भूः"** इति वाक्यमुपादत्ते । ननु न गायत्र्यधिकरणे श्रुत्या वृत्तिप्रयुक्तपूर्वपक्षस्य निरासः, आकाशाधिकरण एव तस्य निरासात् । अन्यथा पौनरुक्त्यापत्तेः । अत एव प्राक्, गायत्रीवाक्पृथिव्यादिश्रुतय एव दर्शिताः, सुधायां च **"गायत्री वा इद९ सर्वं वाग्वै गायत्री" इत्यादयः प्रसिद्धा बहवश्शब्दाः श्रूयन्त"** इत्युक्तम्, टीकायां च **"वाक्त्वविधानाच्च"** इत्युक्तमिति न गायत्र्यधिकरणेन पौनरुक्त्यमित्यतः तर्ह्याकाशाधिकरणेन तत्स्यादित्याह **आकाशेति** ॥ श्रुत्यभ्यासप्राप्तस्यापि तत्रैव निरासान्न तेनेह पूर्वपक्षोदय इति भावः । ननु तत्र निरवकाशत्वपरत्वबहुत्वप्रयुक्तप्राबल्यैर्लिङ्गैर्निरासः ।

उक्तञ्च –

द्वाभ्यामावृत्तिजातिभ्यामेव हि प्रबला श्रुतिः ।
अगतित्वपरत्वानेकत्वैर्लिङ्गानि तु त्रिभिः ॥

इति । न चेह लिङ्गानि तादृशानि, वक्ष्यमाणदिशा बाहुल्यादौ सत्यपि परत्वायोगादिति चेत्, बहुत्वेन प्रबलानां लिङ्गानां जात्या बहुत्वेन च प्रबल-वैष्णवश्रुतियुक्तत्वेन सुतरां तद्विरोधित्वात् ।

यद्वा – तत्रापि निरवकाशत्वादिप्रयुक्तप्राबल्यमाश्रित्यैव श्रुत्यावृत्तिप्राप्तस्य निरासः । परत्वं तु वास्तवमभिप्रेत्य वा, अनुपसञ्जातविरोधित्वेनाकाशश्रुतेः प्राबल्यशङ्कायां तन्निरासाय "**प्रथमेऽश्रवणात्**" इति वक्ष्यमाणन्यायेन परत्वस्य प्राबल्यहेतुत्वमभिप्रेत्य वेति तात्पर्यात् । अत्रापि केषाञ्चित्परत्वसम्भवाच्चेति ।

ವಿವರಣೆ - ಈ ಪಾದಾಂತ್ಯಪ್ರಾಣಾಧಿಕರಣವು ಗತಾರ್ಥವಾಗಿದೆಯೆಂದು ದೀರ್ಘವಾಗಿ ಆಕ್ಷೇಪಿಸಲಾಗಿದೆ. 'ನನು ಗತಾರ್ಥಮಿದಮಧಿಕರಣಮ್ । ಸರ್ವಾಸಾಂ ಪ್ರಾಣವಿದ್ಯಾನಾಂ "ಅತ ಏವ ಪ್ರಾಣಃ" ಇತ್ಯನೇನೈವ ಭಗವದ್ವಿಷಯತಾಯಾಃ ಸಮರ್ಥಿತತ್ವಾತ್' (ಈ ಅಧಿಕರಣವು ಗತಾರ್ಥವಾಗಿದೆ. ಎಲ್ಲಾ ಪ್ರಾಣಶ್ರುತಿಗಳಿಗೆ 'ಅತ ಏವ ಪ್ರಾಣಃ' ಎಂಬ ಅಧಿಕರಣದಲ್ಲಿಯೇ ಭಗವದ್ವಿಷಯಕವನ್ನು ಸಮರ್ಥಿಸಿದ್ದರಿಂದ) ಎಂಬ ನ್ಯಾಯವಿವರಣದ ಟೀಕೆಯನ್ನು ವ್ಯಾಖ್ಯಾನ ಮಾಡುವುದಕ್ಕಾಗಿ "ನನು" ಇತ್ಯಾದಿ ಗ್ರಂಥದಿಂದ ಆಕ್ಷೇಪಿಸುತ್ತಿದ್ದಾರೆ. ಪ್ರಾಣಾಧಿಕರಣದಲ್ಲಿ ಪ್ರಾಣಶಬ್ದವನ್ನು ವಿಷ್ಣುವಿನಲ್ಲಿ ಮುಖ್ಯವಾಗಿ ಸಮರ್ಥನೆ ಮಾಡಿದ್ದರಿಂದ ಗತಾರ್ಥತ್ವವು ಬರುತ್ತದೆಂದು ಆಕ್ಷೇಪಕಾರರ ಅಭಿಪ್ರಾಯ.

ಪ್ರಾಣಾಧಿಕರಣದಲ್ಲಿ 'ತದ್ವೈತ್ವಂ ಪ್ರಾಣಃ' ಎಂಬುದು ವಿಷಯವಾಕ್ಯ; ಈ ಅಧಿಕರಣದಲ್ಲಿ 'ತಾ ವಾ ಏತಾ ಶೀರ್ಷನ್' ಎಂಬುದು ವಿಷಯವಾಕ್ಯ. ಹೀಗೆ ವಿಷಯವಾಕ್ಯದಲ್ಲಿ ಭೇದವಿರುವುದರಿಂದ ಅಧಿಕರಣ-ಭೇದವನ್ನು ಹೇಳುತ್ತೇವೆಂದು ಪ್ರಶ್ನಿಸಬಾರದು. ವಿಷಯವಾಕ್ಯಭೇದದಿಂದ ಅಧಿಕರಣವು ಭಿನ್ನಭಿನ್ನವಾಗು-ವುದಾದರೆ ವಿಷಯವಾಕ್ಯಗಳು ಅನಂತವಾದ್ದರಿಂದ ಅಧಿಕರಣಗಳೂ ಅನಂತವಾಗ- ಬೇಕಾಗುತ್ತದೆಂಬ ಅತಿಪ್ರಸಂಗ ಬರುತ್ತದೆ.

ಇನ್ನು ಪೂರ್ವಪಕ್ಷವು ಭಿನ್ನವಾದ್ದರಿಂದ ಅಥವಾ ಪೂರ್ವಪಕ್ಷಪ್ರಾಪಕನ್ಯಾಯವು ಭಿನ್ನವಾದ್ದರಿಂದ ಅಧಿಕರಣಭೇದವನ್ನು ಹೇಳಬೇಕು? ಇದೂ ಸಹ ತಪ್ಪೆಂದು 'ನಚ' ಎಂಬ ಗ್ರಂಥದಿಂದ ಸಮರ್ಥಿಸಿದ್ದಾರೆ. 'ಇಹಾಧಿಕರಣೇ' ಎಂಬ ಮಾತಿಗೆ 'ಜೀವಮುಖ್ಯಪ್ರಾಣಲಿಂಗಾತ್' ಎಂಬ ಸೂತ್ರದಲ್ಲಿ ಎಂದರ್ಥ. ಸಿದ್ಧಾಂತ-ನ್ಯಾಯದ ಭೇದದಿಂದಷ್ಟೇ ಅಧಿಕರಣಭೇದವನ್ನು ಹೇಳಬೇಕು. ಇಲ್ಲದಿದ್ದರೆ ಆನಂದಮಯಾದ್ಯಧಿಕರಣ-ಗಳಲ್ಲಿ ಅನೇಕಪೂರ್ವಪಕ್ಷಗಳಿರುವುದರಿಂದ ಅನೇಕ ಅಧಿಕರಣಗಳಾಗಬೇಕಾದೀತು.

ಅಂತಿಮಪ್ರಾಣಾಧಿಕರಣ-(೧।೧।೧೨)

ಹಾಗಾದರೆ ಪೂರ್ವಪಕ್ಷಭೇದದಿಂದ ಅಧಿಕರಣವು ಭಿನ್ನವಾಗುವುದು ಬೇಡ. ಪೂರ್ವಪಕ್ಷಪ್ರಾಪಕ-ನ್ಯಾಯದಲ್ಲಿ ಭೇದವಿರುವುದರಿಂದ ಅಧಿಕರಣವು ಭಿನ್ನವಾಗಲಿ ಎಂದು ಪ್ರಶ್ನಿಸಬಾರದು. ಪೂರ್ವ-ಪಕ್ಷಪ್ರಾಪಕನ್ಯಾಯವೆಂದರೆ ಯಾವುದು? ಕೇವಲ ಶ್ರುತಿಯೋ ಅಥವಾ ಕೇವಲ ಲಿಂಗವೋ? ಎರಡನ್ನೂ ಹೇಳಲಾಗದು. ಏಕೆಂದರೆ ಸಿದ್ಧಾಂತಸ್ಥಾಪಕವಾದ ಬ್ರಹ್ಮಶ್ರುತಿ ಹಾಗೂ ಬ್ರಹ್ಮಲಿಂಗಗಳು ಸಮಾನವಾಗಿವೆ.

ಇನ್ನು ಅವುಗಳ ಬಹುತ್ವವನ್ನು ಪೂರ್ವಪಕ್ಷಪ್ರಾಪಕವೆನ್ನಬೇಕು. ಆವಾಗ ಲಿಂಗಬಾಹುಲ್ಯವು ಪೂರ್ವಪಕ್ಷಪ್ರಾಪಕವೋ ಅಥವಾ ಶ್ರುತಿಬಾಹುಲ್ಯವು ಪೂರ್ವಪಕ್ಷಪ್ರಾಪಕವೋ? ಎಂಬ ಪ್ರಶ್ನೆ ಬರುತ್ತದೆ. ಮೊದಲನೆಯ ಪಕ್ಷವನ್ನು ಶಂಕಿಸಿ 'ನಚ' ಎಂಬ ಗ್ರಂಥದಿಂದ ನಿರಾಕರಿಸಿದ್ದಾರೆ. 'ಲಿಂಗೈಃ' ಎಂಬ ಪದಕ್ಕೆ ಶ್ರೀಪತಿತ್ವಲಿಂಗಗಳಿಂದ ಎಂದರ್ಥ. 'ಲಿಂಗೈಃ ಪೂರ್ವಪಕ್ಷೇ' ಎಂಬಲ್ಲಿರುವ 'ಲಿಂಗೈಃ' ಎಂಬ ಪದಕ್ಕೆ ಪ್ರಾಣಸಂವಾದಾದಿ ಲಿಂಗಗಳೆಂದರ್ಥ. ವಸ್ತುತಃ ಸೂತ್ರದಲ್ಲಿಯೂ ಬಹುವಚನಾಂತವಾದ ಲಿಂಗಶಬ್ದವನ್ನೇ ಪ್ರಯೋಗಿಸಬೇಕಿತ್ತು. ಆದರೆ 'ಸಮುದಾಯೇ ಏಕವಚನಂ' ಎಂದು ವಿವಕ್ಷಿಸಿದಾಗ ದೋಷವಿಲ್ಲ. 'ಶ್ರುತಿ-ಲಿಂಗಬಾಧೇನ' ಎಂದು ಗ್ರಂಥದಲ್ಲಿದೆ. ಇದಕ್ಕೆ 'ಬ್ರಹ್ಮಶ್ರುತಿಯಿಂದ ಹಾಗೂ ಸರ್ವದೇವೋಪದೇಶ್ಯತ್ವಾದಿ ಲಿಂಗಗಳಿಂದ ಬಾಧಬರುವುದರಿಂದ' ಎಂದರ್ಥ.

ಶ್ರುತಿಬಾಹುಲ್ಯವು ಪೂರ್ವಪಕ್ಷಪ್ರಾಪಕವೆಂಬ ಎರಡನೆಯ ಪಕ್ಷವನ್ನು ಆಶಂಕಿಸಿ 'ನಚ ಶ್ರುತಿ' ಎಂಬ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ. 'ಕಥಂ ಪ್ರಸಿದ್ಧಬಹುಲಶಬ್ದಾನಾಂ ಅನ್ಯಥಾರ್ಥತಾ' (ಪ್ರಸಿದ್ಧವಾದ ಬಹುಲಶಬ್ದಗಳ ಪ್ರಯೋಗದಿಂದ ಹೇಗೆ ತಾನೆ ಅನ್ಯಾರ್ಥವಾಗುತ್ತದೆ?) ಎಂಬ ಆಚಾರ್ಯರ (ಅನು-ವ್ಯಾಖ್ಯಾನದ) ಮಾತನ್ನು 'ತದ್ಬಾಹುಲ್ಯಪ್ರಾಪ್ತಸ್ಯ' ಎಂಬ ಪದದಿಂದ ಉಲ್ಲೇಖಿಸಿದ್ದಾರೆ. ಗಾಯತ್ರ್ಯಧಿಕರಣ-ದಲ್ಲಿ ಬಹಳಶ್ರುತಿಗಳಿಂದ ಪ್ರಾಪ್ತವಾದ ಪೂರ್ವಪಕ್ಷವನ್ನು 'ಬಾಹುಲ್ಯಾತ್ ಶ್ರುತಿಲಿಂಗಯೋಃ' ಎಂಬ ಅನುವ್ಯಾಖ್ಯಾನದ ಮಾತಿನಂತೆ, ವಿಷ್ಣುಪರವಾದ ಬಹಳಶ್ರುತಿಲಿಂಗಗಳಿಂದ ನಿರಾಕರಿಸಲಾಗಿದೆ ಎಂದು ಶಂಕಿಸಿದರೆ, ಈ ಅಧಿಕರಣದ ಸಿದ್ಧಾಂತದಲ್ಲಿಯೂ ಬಹಳವಾದ ಶ್ರುತಿಲಿಂಗಗಳನ್ನು ಉಲ್ಲೇಖಿಸಲಾಗಿದೆ ಎಂದು ಈ ವಾಕ್ಯದ ತಾತ್ಪರ್ಯ.

ಹಿಂದಿನ ಗಾಯತ್ರೀಪ್ರಕರಣದಿಂದ ಈ ಅಧಿಕರಣಕ್ಕೆ ವೈಷಮ್ಯವನ್ನು ಆಶಂಕಿಸಿ 'ನಚ' ಎಂಬ ಗ್ರಂಥದಿಂದ ನಿರಾಕರಿಸಿದ್ದಾರೆ. 'ಸ ಏಷ ಪ್ರಾಣಃ' ಎಂಬುದರಿಂದ 'ಸ ಏಷೋಸುಃ ಸ ಏಷ ಪ್ರಾಣಃ ಸ ಏಷ ಭೂಃ' ಎಂಬ ವಾಕ್ಯವನ್ನು ಸ್ವೀಕರಿಸಿದ್ದಾರೆ.

''ಗಾಯತ್ರ್ಯಧಿಕರಣದಲ್ಲಿ ಒಂದೇ ಶ್ರುತಿಯ ಆವೃತ್ತಿಯಿಂದ ಹುಟ್ಟಿದ ಪೂರ್ವಪಕ್ಷವನ್ನು ನಿರಾಕರಿಸಿಲ್ಲ. ಆದರೆ ಆಕಾಶಾಧಿಕರಣದಲ್ಲಿ ಅದನ್ನು ನಿರಾಕರಿಸಿದ್ದಾರೆ. ಹೀಗೆ ಹೇಳದಿದ್ದರೆ ಆಕಾಶಾಧಿಕರಣದಿಂದ ಗಾಯತ್ರ್ಯಧಿಕರಣಕ್ಕೆ ಪುನರುಕ್ತಿ ಬರುತ್ತಿತ್ತು. ಆದ್ದರಿಂದಲೇ ಹಿಂದೆ ಬಹುವಿಷಯಕವಾದ ಗಾಯತ್ರೀ-ವಾಕ್‌ಪೃಥಿವ್ಯಾದಿಶ್ರುತಿಗಳನ್ನು ಉಲ್ಲೇಖಿಸಿದ್ದರು. ಸುಧೆಯಲ್ಲಿಯೂ 'ಗಾಯತ್ರೀ ವಾ ಇದಂ ಸರ್ವಂ ವಾಗ್ವೈ ಗಾಯತ್ರೀತ್ಯಾದಯಃ ಪ್ರಸಿದ್ಧಾಃ ಬಹವಃ ಶಬ್ದಾಃ ಶ್ರೂಯಂತೇ' (ಗಾಯತ್ರೀ ವಾ ಇದಂ ಸರ್ವಂ ವಾಗ್ವೈ ಗಾಯತ್ರೀ ಇತ್ಯಾದಿಯಾಗಿ ಪ್ರಸಿದ್ಧವಾದ ಅನೇಕಶಬ್ದಗಳು ಕೇಳಿಸುತ್ತಿವೆ') ಎಂದು ಹೇಳಿದ್ದಾರೆ. ಟೀಕೆಯಲ್ಲಿಯೂ 'ವಾಕ್ತ್ವವಿಧಾನಾಚ್ಚ' ಎಂಬ ಮಾತಿನಿಂದ ಇದನ್ನೇ ಹೇಳಿದ್ದಾರೆ. ಆದ್ದರಿಂದ

ಗಾಯತ್ರ್ಯಧಿಕರಣದಿಂದ ಪುನರುಕ್ತಿಯನ್ನು ಈ ಅಧಿಕರಣಕ್ಕೆ ಹೇಳಲಾಗದು'' ಎಂದು ಪ್ರಶ್ನಿಸಿದರೆ ಆಕಾಶಾಧಿಕರಣದಿಂದ ಪುನರುಕ್ತಿ ಬರುತ್ತದೆಂದು 'ಆಕಾಶ' ಎಂಬ ಗ್ರಂಥದಿಂದ ಹೇಳುತ್ತಿದ್ದಾರೆ. ಆಕಾಶಾಧಿಕರಣದಲ್ಲಿ ಶ್ರುತಿಯ ಆವೃತ್ತಿಯಿಂದ ಪ್ರಾಪ್ತವಾದ ಪೂರ್ವಪಕ್ಷವನ್ನು ನಿರಾಕರಿಸಿದ ಮೇಲೆ ಪುನಃ ಇಲ್ಲಿ ಅದೇ ಪೂರ್ವಪಕ್ಷವನ್ನು ಇಲ್ಲಿ ಮಾಡಲು ಸಾಧ್ಯವಿಲ್ಲವೆಂದು ಅಭಿಪ್ರಾಯ.

ಶಂಕೆ - ಆಕಾಶಾಧಿಕರಣದಿಂದ ಗತಾರ್ಥತ್ವದೋಷವನ್ನು ಗ್ರಂಥಕಾರರು ಹೇಳಿದ್ದು ಸರಿಯಲ್ಲ. ಏಕೆಂದರೆ ಆಕಾಶಾಧಿಕರಣದಲ್ಲಿ ನಿರವಕಾಶತ್ವ, ಪರತ್ವ, ಬಹುತ್ವಪ್ರಯುಕ್ತವಾಗಿ ಪ್ರಬಲವಾದ ಅನೇಕ ಲಿಂಗಗಳಿಂದ ಪೂರ್ವಪಕ್ಷವನ್ನು ನಿರಾಕರಿಸಿದ್ದಾರೆ. ಇದನ್ನೇ

ದ್ವಾಭ್ಯಾಮಾವೃತ್ತಿಜಾತಿಭ್ಯಾಮೇವ ಹಿ ಪ್ರಬಲಾ ಶ್ರುತಿಃ ||
ಅಗತಿತ್ವಪರತ್ವಾನೇಕತ್ವೈರ್ಲಿಂಗಂ ನ ತು ತ್ರಿಭಿಃ ||

(ಬಹುತ್ವಪ್ರಯುಕ್ತವಾಗಿ ಮತ್ತು ಸ್ವಾಭಾವಿಕವಾಗಿ ಶ್ರುತಿಯು ಬಲಿಷ್ಠವಾಗಿದೆ. ಆದರೂ ಸಹ ನಿರವಕಾಶತ್ವ, ಪರತ್ವ, ಬಹುತ್ವಪ್ರಯುಕ್ತವಾದ ಲಿಂಗದಿಂದ ಬಾಧಿತವಾಗುತ್ತದೆ. ಶ್ರುತಿಯಲ್ಲಿ ಇಂತಹ ಪ್ರಾಬಲ್ಯವಿಲ್ಲ) ಎಂದು ಹೇಳಿದೆ. ಆದರೆ ಈ ಅಧಿಕರಣದಲ್ಲಿ ಹೇಳುವ ಲಿಂಗಗಳಲ್ಲಿ ಇಂತಹ ಪ್ರಾಬಲ್ಯವಿಲ್ಲ. ಮುಂದೆ ಹೇಳುವಂತೆ ನಿರವಕಾಶತ್ವ ಬಹುತ್ವಗಳು ಲಿಂಗದಲ್ಲಿ ಇರಬಹುದು. ಆದರೆ ಪರತ್ವವು ಇಲ್ಲದ ಕಾರಣ ಆಕಾಶಾಧಿಕರಣದ ಲಿಂಗಕ್ಕೂ ಈ ಅಧಿಕರಣದ ಲಿಂಗಕ್ಕೂ ವ್ಯತ್ಯಾಸವಿದೆ. ಹೀಗಿರುವಾಗ ಗ್ರಂಥಕಾರರು ಗತಾರ್ಥತ್ವವನ್ನು ಹೇಳಿದ್ದು ಹೇಗೆ ಸರಿ?

ಸಮಾಧಾನ - ಆಕಾಶಾಧಿಕರಣದಲ್ಲಿ ಉಲ್ಲೇಖಿಸಿದ ಲಿಂಗವು ಬಹುತ್ವೇನ ಪರತ್ವೇನ ನಿರವಕಾಶತ್ವೇನ ಪ್ರಬಲವಾಗಿದ್ದರೂ ಜಾತ್ಯಾ ದುರ್ಬಲವಾಗಿದೆ. ಹೀಗೆ ಜಾತ್ಯಾ ದುರ್ಬಲವಾದ ಲಿಂಗದಿಂದಲೇ ಪೂರ್ವಪಕ್ಷವನ್ನು ನಿರಾಕರಿಸಿದ ಮೇಲೆ ಈ ಅಧಿಕರಣದಲ್ಲಿ ಉಲ್ಲೇಖಿಸುತ್ತಿರುವ ಲಿಂಗದಲ್ಲಿ ಜಾತ್ಯಾಪ್ರಾಬಲ್ಯವೂ ಇದೆ. ಅಂದರೆ ನಿರವಕಾಶತ್ವ, ಬಹುತ್ವಪ್ರಯುಕ್ತವಾಗಿ ಪ್ರಬಲವಾದಂತೆ ವೈಷ್ಣವಶ್ರುತಿಗಳಿಂದ ಕೂಡಿದ್ದರಿಂದ ಸ್ವಭಾವದಿಂದಲೂ ಬಲಿಷ್ಠವಾಗಿದೆ. ಇಂತಹ ಲಿಂಗಗಳಿಂದ ಪೂರ್ವಪಕ್ಷವು ನಿರಾಸವಾಗುತ್ತದೆಂಬುದರಲ್ಲಿ ಸಂಶಯವಿಲ್ಲ. ಅಥವಾ ಪ್ರಾಣಾಧಿಕರಣದಲ್ಲಿ ಪರತ್ವಪ್ರಯುಕ್ತವಾದ ಪ್ರಾಬಲ್ಯವನ್ನು ಲಿಂಗಕ್ಕೆ ಹೇಳುವುದರಲ್ಲಿ ತಾತ್ಪರ್ಯವಿಲ್ಲ. ಕೇವಲ ನಿರವಕಾಶತ್ವ ಹಾಗೂ ಬಹುತ್ವಪ್ರಯುಕ್ತವಾದ ಲಿಂಗವಷ್ಟೇ ಅಭಿಪ್ರೇತವಾಗಿದೆ. ವಸ್ತುಸ್ಥಿತಿಯನ್ನಷ್ಟೇ ಅನುಸರಿಸಿ ಪರತ್ವವನ್ನು ಹೇಳಲಾಗಿದೆ. ಅಥವಾ ಆಕಾಶಶ್ರುತಿಯು ಅನುಪಸಂಜಾತ-ವಿರೋಧಿಯಾದ್ದರಿಂದ (ಉಪಕ್ರಮದಲ್ಲಿರುವುದರಿಂದ) ಪ್ರಬಲವಾಗಿದೆಯೆಂದು ಶಂಕಿಸಿದರೆ ಅದರ ಪರಿಹಾರಕ್ಕಾಗಿ ಪರತ್ವವನ್ನು ಹೇಳಿದ್ದಾರೆ. ಮುಂದೆ 'ಪ್ರಥಮೇ ಶ್ರವಣಾತ್' ಎಂಬ ಸೂತ್ರದಲ್ಲಿ ಉಪಕ್ರಮಕ್ಕಿಂತಲೂ ಉಪಸಂಹಾರವೇ ಪ್ರಬಲವೆಂದು ಸಮರ್ಥಿಸುತ್ತಾರೆ. ಅದರ ಪ್ರಕಾರ ಉಪಸಂಹಾರವು ಪ್ರಬಲವೆಂದು ತಿಳಿಸಲು ಇಲ್ಲಿ ಪರತ್ವವನ್ನು ಪ್ರಾಬಲ್ಯಹೇತುವನ್ನಾಗಿ ಪರಿಗಣಿಸಿದ್ದಾರೆ. ಆದ್ದರಿಂದ ಉಪಸಂಹಾರಪ್ರಾಬಲ್ಯವನ್ನು ತಿಳಿಸುವುದರಲ್ಲಷ್ಟೇ ಪರತ್ವಶಬ್ದದ ತಾತ್ಪರ್ಯ. ಅಥವಾ ಇಲ್ಲಿಯೂ ಸಹ ಕೆಲವು ವಾಕ್ಯಗಳಿಗೆ ಪರತ್ವವನ್ನು ಹೇಳಬಹುದು. ಆದ್ದರಿಂದ ಆಕಾಶಾಧಿಕರಣದಲ್ಲಿ ಹೇಳಿದ ಲಿಂಗಗಳಿಗೂ ಇಲ್ಲಿ ಹೇಳುತ್ತಿರುವ ಲಿಂಗಗಳಿಗೂ ಯಾವ ವ್ಯತ್ಯಾಸವೂ ಇಲ್ಲ.

ಅಂತಿಮಪ್ರಾಣಾಧಿಕರಣ-(೧।೧।೧೨)

गुरुराजीयम् – द्विधा गायत्र्यधिकरणे निरासादिति । एकस्याः वह्निश्रुतेरन्यत्रप्रसिद्धिबाधेपि गायत्रीवाक्पृथिव्याद्यनेकशब्दानामन्यत्रप्रसिद्धिबाधोऽयुक्त इति श्रुतिबाहुल्यप्राप्तस्य पूर्वपक्षस्य तत्तच्छब्दवाच्यत्वेनोपासनार्थमित्येकः प्रकारः । द्वितीयस्तु ततो ज्यायांश्च पुरुषः यद्वै तद्ब्रह्म एतामेव ब्रह्मोपनिषदं वेदेत्यादिश्रुतीनां गानत्राणकर्तृत्वं भूतादिपादत्वं एतामेव नातिशीयन्ते इति सर्वोत्तमत्वमित्यादि-लिङ्गानां बाहुल्यादनेकेषामपि शब्दानां प्रसिद्धार्थत्यागः इत्येवं प्रकारद्वयेन गायत्र्यधिकरणे निरासादित्यर्थः ।

## ಸಾರ

ಈ ಪಾದಾಂತ್ಯಪ್ರಾಣಾಧಿಕರಣವು ಗತಾರ್ಥವಾಗಿದೆಯೆಂದು ದೀರ್ಘವಾಗಿ ಆಕ್ಷೇಪಿಸಲಾಗಿದೆ.

ಹಿಂದಿನ ಪ್ರಾಣಾಧಿಕರಣದಲ್ಲಿ ತೈತ್ತಿರೀಯದಲ್ಲಿರುವ ಪ್ರಾಣಶಬ್ದವು ವಾಯುಪರವಲ್ಲವೆಂದು ಹೇಳಿದರು. ಇಲ್ಲಿ ಐತರೇಯಪ್ರಾಣನು ಇಂದ್ರನಾಗಲೀ ಜೀವನಾಗಲೀ ಅಲ್ಲವೆಂದು ಹೇಳುತ್ತಿದ್ದಾರೆ. ಹೀಗಿರುವಾಗ ಗತಾರ್ಥತ್ವವನ್ನು ಹೇಗೆ ಹೇಳುತ್ತೀರಿ?

ಈ ಅಧಿಕರಣದಲ್ಲಿಯೂ ಸಹ ಪ್ರಾಣಶಬ್ದವು ವಾಯುಪರ ಅಲ್ಲವೆಂದೇ ಹೇಳಬೇಕು ಹೊರತು ಇಂದ್ರ ಅಥವಾ ಜೀವಪರವಲ್ಲ ಎಂಬುದು ಮುಖ್ಯವಲ್ಲ. ಇಲ್ಲದಿದ್ದರೆ ಸೂತ್ರದಲ್ಲಿರುವ ಮುಖ್ಯಪ್ರಾಣಪದವು ತಪ್ಪಾಗುತ್ತದೆ. ಆದ್ದರಿಂದ ಗತಾರ್ಥತ್ವವು ಬಂದೇ ಬರುತ್ತದೆ.

ಗಾಯತ್ರ್ಯಧಿಕರಣದಲ್ಲಿಯೂ ಸಹ 'ಗಾಯತ್ರೀ ವಾ ಇದಂ ಸರ್ವಂ ವಾಗ್ವೈ ಗಾಯತ್ರೀ ಸೈಷಾ ಷಡ್ವಿಧಾ ಗಾಯತ್ರೀ' ಎಂಬ ಏಕವಿಷಯಕವಾದ ಶ್ರುತಿಯು ಕೇಳಿಸುತ್ತಿದೆ. ಮತ್ತು ಆಕಾಶಾಧಿಕರಣದ ವಿಷಯ-ವಾಕ್ಯದಲ್ಲಂತೂ ಒಂದೇ ಆಕಾಶಶ್ರುತಿಯು ಅನೇಕಬಾರಿ ಕೇಳಿಸುತ್ತಿದೆ. ಆದ್ದರಿಂದ ಪ್ರಾಣಾಧಿಕರಣದಿಂದ ಗತಾರ್ಥತ್ವವನ್ನು ಪರಿಹರಿಸಲು ಹೊರಟರೆ ಗಾಯತ್ರ್ಯಧಿಕರಣದಿಂದಲೋ ಅಥವಾ ಆಕಾಶಾಧಿಕರಣ-ದಿಂದಲೋ ಗತಾರ್ಥತ್ವವು ಬಂದೇ ಬರುತ್ತದೆ.

* * * *

## ಮತ್ತೊಂದು ಬಗೆಯಲ್ಲಿ ಪುನರುಕ್ತಿ ಪರಿಹಾರ

### तात्पर्यचन्द्रिका

**नच श्रुतिलिङ्गबाहुल्यादुज्जीवनम्, अत एवानुव्याख्याने "बाहुल्यात् श्रुतिलिङ्गयोः" इत्युक्तम् ।**

**इह भाष्ये टीकायां च लिङ्गमात्रोक्तिः पूर्वपक्षोपक्रममात्रमिति वाच्यम्,**

इन्द्रे "इन्द्रस्य प्रियं धामोपेयाय तमिन्द्र उवाच प्राणो वा अहमस्मि" इत्यादिश्रुतीनां महाव्रतयाजित्वादिलिङ्गानां मुख्यप्राणे प्राणादिश्रुतीनां "ता अहिंसन्त" इति प्राणसंवादादिलिङ्गानां,

जीवे "पुरुषरूपेण य एष तपति स एष पुरुषः समुद्रः" इत्यादिश्रुतीनां "तावन्ति शतसंवत्सरस्याह्नां सहस्राणि भवन्ति" इति शतसंवत्सरत्वादिलिङ्गानां च बाहुल्येऽपि, इन्द्रादिश्रुतेः "अन्तः" इत्यत्र, प्राणश्रुतेश्च "अत एव प्राणः" इत्यत्र, पुरुषश्रुतेश्च गायत्र्यधिकरणे सावकाशितत्वेन, लिङ्गानां च विष्णौ प्रवृत्तप्रबल-श्रुत्यनुसारेण अन्तरधिकरणपूर्वपक्षोक्तानामपान्नेतृत्वादिलिङ्गानामिव विष्णौ प्रवर्तनीयत्वेन सम्भाविताavakाशतया बहुविष्णुश्रुतिबाधकत्वायोगात् ।

ಅನುವಾದ - ಪ್ರಶ್ನೆ - ಹಿಂದಿನ ಆಕಾಶಾದ್ಯಧಿಕರಣಗಳಲ್ಲಿ ಶ್ರುತಿಲಿಂಗಬಾಹುಲ್ಯಪ್ರಯುಕ್ತವಾದ ಪೂರ್ವಪಕ್ಷವನ್ನು ಮಾಡಿಲ್ಲ. ಆದ್ದರಿಂದ ಈ ಅಧಿಕರಣದಲ್ಲಿ ಶ್ರುತಿಲಿಂಗಬಾಹುಲ್ಯಪ್ರಯುಕ್ತವಾದ ಪೂರ್ವಪಕ್ಷವು ಹುಟ್ಟಬಹುದು. ಆದ್ದರಿಂದಲೇ ಅನುವ್ಯಾಖ್ಯಾನದಲ್ಲಿ 'ಬಾಹುಲ್ಯಾತ್ ಶ್ರುತಿ-ಲಿಂಗಯೋಃ' ಎಂದು ಹೇಳಿದ್ದಾರೆ. ಈ ಅಧಿಕರಣದ ಭಾಷ್ಯ ಹಾಗೂ ಟೀಕೆಗಳಲ್ಲಿ ವಸ್ತುತಃ ಲಿಂಗವನ್ನಷ್ಟೇ ಹೇಳಿರಬಹುದು. ಆದರೆ ಅದು ಕೇವಲ ಪೂರ್ವಪಕ್ಷದ ಉಪಕ್ರಮ ಮಾತ್ರ. ಮುಂದೆ ಬಾಹುಲ್ಯವನ್ನು ಹೇಳಬಹುದೆಂದು ಅದರ ಅಭಿಪ್ರಾಯ. ಆದ್ದರಿಂದ ಈ ಅಧಿಕರಣವು ಗತಾರ್ಥವಲ್ಲ.

ಉತ್ತರ - ನೀವು ಹೇಳುತ್ತಿರುವ ಶ್ರುತಿಲಿಂಗಬಾಹುಲ್ಯವು ವಿಷ್ಣುವಿನಲ್ಲಿ ಸಾವಕಾಶವಾದ್ದರಿಂದ ಪೂರ್ವಪಕ್ಷಪ್ರಾಪಕವಾಗುವುದಿಲ್ಲ. ಅದು ಹೀಗೆ --

ಇಂದ್ರನಲ್ಲಿ ಶ್ರುತವಾದ 'ಇಂದ್ರಸ್ಯ ಪ್ರಿಯಂ ಧಾಮೋಪೇಯಾಯ ತಮಿಂದ್ರ ಉವಾಚ ಪ್ರಾಣೋ ವಾ ಅಹಮಸ್ಮಿ' ಇತ್ಯಾದಿ ಶ್ರುತಿಗಳು ಮತ್ತು ಮಹಾವ್ರತಯಾಜಿತ್ವ ಮೊದಲಾದ ಲಿಂಗಗಳು ಸಾವಕಾಶವಾಗಿವೆ. ಇದರಂತೆ ಮುಖ್ಯಪ್ರಾಣನಲ್ಲಿ ಕೇಳಿಸುತ್ತಿರುವ ಪ್ರಾಣಶ್ರುತಿಗಳು ಹಾಗೂ 'ತಾ ಅಹಿಂಸಂತ' ಎಂಬ ಪ್ರಾಣಸಂವಾದಾದಿ ಲಿಂಗಗಳು;

ಜೀವನಲ್ಲಿ ಕೇಳಿಸುತ್ತಿರುವ 'ಪುರುಷರೂಪೇಣ ಯ ಏಷ ತಪತಿ ಸ ಏಷ ಪುರುಷಃ ಸಮುದ್ರಃ' ಇತ್ಯಾದಿಶ್ರುತಿಗಳು 'ತಾವಂತಿ ಶತಸಂವತ್ಸರಸ್ಯಾಹ್ನಾಂ ಸಹಸ್ರಾಣಿ ಭವಂತಿ' ಎಂಬ ಶತಸಂವತ್ಸರತ್ವಾದಿ ಲಿಂಗಗಳು ಬಹಳವಾಗಿರಬಹುದು. ಆದರೂ ಸಹ ಇಂದ್ರಾದಿಶ್ರುತಿಗಳು ಸಾವಕಾಶವೆಂದು ಅಂತರಧಿಕರಣದಲ್ಲಿ; ಪ್ರಾಣಶ್ರುತಿಗಳು ಸಾವಕಾಶವೆಂದು 'ಅತ ಏವ ಪ್ರಾಣಃ' ಎಂಬ ಅಧಿಕರಣದಲ್ಲಿ; ಪುರುಷಶ್ರುತಿಯು ಸಾವಕಾಶವೆಂದು ಗಾಯತ್ರ್ಯಧಿಕರಣದಲ್ಲಿ ಸಮರ್ಥಿಸಿದ್ದಾಗಿದೆ. ಮತ್ತು ಎಲ್ಲ ಲಿಂಗಗಳು ವಿಷ್ಣುವಿನಲ್ಲಿ ಸಾವಕಾಶವಾಗಿವೆ ಎಂದು ಅಂತರಧಿಕರಣದಲ್ಲಿ ಹೇಳಿದ್ದಾಗಿದೆ. ವಿಷ್ಣುವಿನಲ್ಲಿ

**गुरुराजीयम्** – द्विधा गायत्र्यधिकरणे निरासादिति । एकस्याः वह्निश्रुतेरन्यत्रप्रसिद्धिबाधेपि गायत्रीवाक्पृथिव्याद्यनेकशब्दानामन्यत्रप्रसिद्धिबाधोऽयुक्त इति श्रुतिबाहुल्यप्राप्तस्य पूर्वपक्षस्य तत्तच्छब्दवाच्यत्वेनोपासनार्थमित्येकः प्रकारः । द्वितीयस्तु ततो ज्यायांश्च पुरुषः यद्वै तद्ब्रह्म एतामेव ब्रह्मोपनिषदं वेदेत्यादिश्रुतीनां गानत्राणकर्तृत्वं भूतादिपादत्वं एतामेव नातिशीयन्ते इति सर्वोत्तमत्वमित्यादि-लिङ्गानां बाहुल्यादनेकेषामपि शब्दानां प्रसिद्धार्थत्यागः इत्येवं प्रकारद्वयेन गायत्र्यधिकरणे निरासादित्यर्थः ।

## ಸಾರ

ಈ ಪಾದಾಂತ್ಯಪ್ರಾಣಾಧಿಕರಣವು ಗತಾರ್ಥವಾಗಿದೆಯೆಂದು ದೀರ್ಘವಾಗಿ ಆಕ್ಷೇಪಿಸಲಾಗಿದೆ.

ಹಿಂದಿನ ಪ್ರಾಣಾಧಿಕರಣದಲ್ಲಿ ತೈತ್ತಿರೀಯದಲ್ಲಿರುವ ಪ್ರಾಣಶಬ್ದವು ವಾಯುಪರವಲ್ಲವೆಂದು ಹೇಳಿದರು. ಇಲ್ಲಿ ಐತರೇಯಪ್ರಾಣನು ಇಂದ್ರನಾಗಲೀ ಜೀವನಾಗಲೀ ಅಲ್ಲವೆಂದು ಹೇಳುತ್ತಿದ್ದಾರೆ. ಹೀಗಿರುವಾಗ ಗತಾರ್ಥತ್ವವನ್ನು ಹೇಗೆ ಹೇಳುತ್ತೀರಿ?

ಈ ಅಧಿಕರಣದಲ್ಲಿಯೂ ಸಹ ಪ್ರಾಣಶಬ್ದವು ವಾಯುಪರ ಅಲ್ಲವೆಂದೇ ಹೇಳಬೇಕು ಹೊರತು ಇಂದ್ರ ಅಥವಾ ಜೀವಪರವಲ್ಲ ಎಂಬುದು ಮುಖ್ಯವಲ್ಲ. ಇಲ್ಲದಿದ್ದರೆ ಸೂತ್ರದಲ್ಲಿರುವ ಮುಖ್ಯಪ್ರಾಣಪದವು ತಪ್ಪಾಗುತ್ತದೆ. ಆದ್ದರಿಂದ ಗತಾರ್ಥತ್ವವು ಬಂದೇ ಬರುತ್ತದೆ.

ಗಾಯತ್ರ್ಯಧಿಕರಣದಲ್ಲಿಯೂ ಸಹ 'ಗಾಯತ್ರೀ ವಾ ಇದಂ ಸರ್ವಂ ವಾಗ್ವೈ ಗಾಯತ್ರೀ ಸೈಷಾ ಷಡ್ವಿಧಾ ಗಾಯತ್ರೀ' ಎಂಬ ಏಕವಿಷಯಕವಾದ ಶ್ರುತಿಯು ಕೇಳಿಸುತ್ತಿದೆ. ಮತ್ತು ಆಕಾಶಾಧಿಕರಣದ ವಿಷಯ-ವಾಕ್ಯದಲ್ಲಂತೂ ಒಂದೇ ಆಕಾಶಶ್ರುತಿಯು ಅನೇಕಬಾರಿ ಕೇಳಿಸುತ್ತಿದೆ. ಆದ್ದರಿಂದ ಪ್ರಾಣಾಧಿಕರಣದಿಂದ ಗತಾರ್ಥತ್ವವನ್ನು ಪರಿಹರಿಸಲು ಹೊರಟರೆ ಗಾಯತ್ರ್ಯಧಿಕರಣದಿಂದಲೋ ಅಥವಾ ಆಕಾಶಾಧಿಕರಣ-ದಿಂದಲೋ ಗತಾರ್ಥತ್ವವು ಬಂದೇ ಬರುತ್ತದೆ.

* * * *

## ಮತ್ತೊಂದು ಬಗೆಯಲ್ಲಿ ಪುನರುಕ್ತಿ ಪರಿಹಾರ

### तात्पर्यचन्द्रिका

**नच श्रुतिलिङ्गबाहुल्यादुजीवनम्, अत एवानुव्याख्याने "बाहुल्यात् श्रुतिलिङ्गयोः" इत्युक्तम् ।**

**इह भाष्ये टीकायां च लिङ्गमात्रोक्तिः पूर्वपक्षोपक्रममात्रमिति वाच्यम्,**

इन्द्रे "इन्द्रस्य प्रियं धामोपेयाय तमिन्द्र उवाच प्राणो वा अहमस्मि" इत्यादिश्रुतीनां महाव्रतयाजित्वादिलिङ्गानां मुख्यप्राणे प्राणादिश्रुतीनां "ता अहिंसन्त" इति प्राणसंवादादिलिङ्गानां,

जीवे "पुरुषरूपेण य एष तपति स एष पुरुषः समुद्रः" इत्यादिश्रुतीनां "तावन्ति शतसंवत्सरस्याह्नां सहस्राणि भवन्ति" इति शतसंवत्सरत्वादिलिङ्गानां च बाहुल्येऽपि, इन्द्रादिश्रुतेः "अन्तः" इत्यत्र, प्राणश्रुतेश्च "अत एव प्राणः" इत्यत्र, पुरुषश्रुतेश्च गायत्र्यधिकरणे सावकाशितत्वेन, लिङ्गानां च विष्णौ प्रवृत्तप्रबल-श्रुत्यनुसारेण अन्तरधिकरणपूर्वपक्षोक्तानामपान्नेतृत्वादिलिङ्गानामिव विष्णौ प्रवर्तनीयत्वेन सम्भावितावकाशतया बहुविष्णुश्रुतिबाधकत्वायोगात् ।

ಅನುವಾದ - ಪ್ರಶ್ನೆ - ಹಿಂದಿನ ಆಕಾಶಾದ್ಯಧಿಕರಣಗಳಲ್ಲಿ ಶ್ರುತಿಲಿಂಗಬಾಹುಲ್ಯಪ್ರಯುಕ್ತವಾದ ಪೂರ್ವಪಕ್ಷವನ್ನು ಮಾಡಿಲ್ಲ. ಆದ್ದರಿಂದ ಈ ಅಧಿಕರಣದಲ್ಲಿ ಶ್ರುತಿಲಿಂಗಬಾಹುಲ್ಯಪ್ರಯುಕ್ತವಾದ ಪೂರ್ವಪಕ್ಷವು ಹುಟ್ಟಬಹುದು. ಆದ್ದರಿಂದಲೇ ಅನುವ್ಯಾಖ್ಯಾನದಲ್ಲಿ 'ಬಾಹುಲ್ಯಾತ್ ಶ್ರುತಿ-ಲಿಂಗಯೋಃ' ಎಂದು ಹೇಳಿದ್ದಾರೆ. ಈ ಅಧಿಕರಣದ ಭಾಷ್ಯ ಹಾಗೂ ಟೀಕೆಗಳಲ್ಲಿ ವಸ್ತುತಃ ಲಿಂಗವನ್ನಷ್ಟೇ ಹೇಳಿರಬಹುದು. ಆದರೆ ಅದು ಕೇವಲ ಪೂರ್ವಪಕ್ಷದ ಉಪಕ್ರಮ ಮಾತ್ರ. ಮುಂದೆ ಬಾಹುಲ್ಯವನ್ನು ಹೇಳಬಹುದೆಂದು ಅದರ ಅಭಿಪ್ರಾಯ. ಆದ್ದರಿಂದ ಈ ಅಧಿಕರಣವು ಗತಾರ್ಥವಲ್ಲ.

ಉತ್ತರ - ನೀವು ಹೇಳುತ್ತಿರುವ ಶ್ರುತಿಲಿಂಗಬಾಹುಲ್ಯವು ವಿಷ್ಣುವಿನಲ್ಲಿ ಸಾವಕಾಶವಾದ್ದರಿಂದ ಪೂರ್ವಪಕ್ಷಪ್ರಾಪಕವಾಗುವುದಿಲ್ಲ. ಅದು ಹೀಗೆ --

ಇಂದ್ರನಲ್ಲಿ ಶ್ರುತವಾದ 'ಇಂದ್ರಸ್ಯ ಪ್ರಿಯಂ ಧಾಮೋಪೇಯಾಯ ತಮಿಂದ್ರ ಉವಾಚ ಪ್ರಾಣೋ ವಾ ಅಹಮಸ್ಮಿ' ಇತ್ಯಾದಿ ಶ್ರುತಿಗಳು ಮತ್ತು ಮಹಾವ್ರತಯಾಜಿತ್ವ ಮೊದಲಾದ ಲಿಂಗಗಳು ಸಾವಕಾಶವಾಗಿವೆ. ಇದರಂತೆ ಮುಖ್ಯಪ್ರಾಣನಲ್ಲಿ ಕೇಳಿಸುತ್ತಿರುವ ಪ್ರಾಣಶ್ರುತಿಗಳು ಹಾಗೂ 'ತಾ ಅಹಿಂಸಂತ' ಎಂಬ ಪ್ರಾಣಸಂವಾದಾದಿ ಲಿಂಗಗಳು;

ಜೀವನಲ್ಲಿ ಕೇಳಿಸುತ್ತಿರುವ 'ಪುರುಷರೂಪೇಣ ಯ ಏಷ ತಪತಿ ಸ ಏಷ ಪುರುಷಃ ಸಮುದ್ರಃ' ಇತ್ಯಾದಿಶ್ರುತಿಗಳು 'ತಾವಂತಿ ಶತಸಂವತ್ಸರಸ್ಯಾಹ್ನಾಂ ಸಹಸ್ರಾಣಿ ಭವಂತಿ' ಎಂಬ ಶತಸಂವತ್ಸರತ್ವಾದಿ ಲಿಂಗಗಳು ಬಹಳವಾಗಿರಬಹುದು. ಆದರೂ ಸಹ ಇಂದ್ರಾದಿಶ್ರುತಿಗಳು ಸಾವಕಾಶವೆಂದು ಅಂತರಧಿಕರಣದಲ್ಲಿ; ಪ್ರಾಣಶ್ರುತಿಗಳು ಸಾವಕಾಶವೆಂದು 'ಅತ ಏವ ಪ್ರಾಣಃ' ಎಂಬ ಅಧಿಕರಣದಲ್ಲಿ; ಪುರುಷಶ್ರುತಿಯು ಸಾವಕಾಶವೆಂದು ಗಾಯತ್ರ್ಯಧಿಕರಣದಲ್ಲಿ ಸಮರ್ಥಿಸಿದ್ದಾಗಿದೆ. ಮತ್ತು ಎಲ್ಲ ಲಿಂಗಗಳು ವಿಷ್ಣುವಿನಲ್ಲಿ ಸಾವಕಾಶವಾಗಿವೆ ಎಂದು ಅಂತರಧಿಕರಣದಲ್ಲಿ ಹೇಳಿದ್ದಾಗಿದೆ. ವಿಷ್ಣುವಿನಲ್ಲಿ

ಪ್ರಸಿದ್ಧವಾದ ಬ್ರಹ್ಮಶ್ರುತಿಗಳಿಗೆ ಅನುಸಾರಿಯಾಗಿ ಲಿಂಗಗಳನ್ನು ಸಮನ್ವಯ ಮಾಡಬೇಕೆಂದು ಹೇಳಿದ್ದಾರೆ. ಪೂರ್ವಪಕ್ಷದಲ್ಲಿ ಹೇಳಲ್ಪಟ್ಟ ಅಪಾಂನೇತೃತ್ವಾದಿ ಲಿಂಗಗಳಂತೆ ಈ ಲಿಂಗಗಳನ್ನೂ ಸಹ ವಿಷ್ಣುವಿನಲ್ಲಿ ಸಮನ್ವಯ ಮಾಡಬೇಕೆಂದು ಅಂತರಧಿಕರಣದ ನ್ಯಾಯದಿಂದ ತಿಳಿಯುತ್ತದೆ. ಆದ್ದರಿಂದ ಬಹಳವಾದ ವಿಷ್ಣುಶ್ರುತಿಗಳನ್ನು ಬಾಧಿಸಲು ಇಲ್ಲಿ ಹೇಳುತ್ತಿರುವ ಪೂರ್ವಪಕ್ಷಲಿಂಗಕ್ಕೆ ಸಾಮರ್ಥ್ಯವಿಲ್ಲ.

**प्रकाशः** – तृतीयमाशङ्क्य निरस्यति – **नचेति** ॥ 'उज्जीवनं पूर्वपक्षस्य' इत्यनुषङ्गः । **'इन्द्रियैस्सहाभिधानात्'** इति भाष्येण **'एतत्प्राणस्येन्द्रियगणे गणितत्वात्'** इति टीकया चैतद्विरुद्धमित्यत आह – **इहेति** ॥ त्वदभिमतश्रुत्यादीनां विष्णौ सावकाशत्वान्न तद्बाहुल्यमपि पूर्वपक्षप्रापकमिति भावेनेन्द्रमुख्यजीवश्रुत्यादिबाहुल्यं स्फुटयन्नाह – **इन्द्र इत्यादि** ॥ विषयसप्तम्य इमाः ॥ **महाव्रतयाजित्वादीति**॥ **''इन्द्रो वै वृत्रं हत्वा महानभवत्''** इत्यादिवाक्योक्तमहाव्रतयाजित्वादीनां ग्रहः ॥ **प्राणसंवादादीति** ॥ चक्षुरादिसहपाठोत्क्रमणप्रवेशतन्निमित्तदेहपातोत्थानादिरादिपदार्थः ॥ **इत्यादीति** ॥ **''स एष पुरुषः पञ्चविधः''** इत्यादिरादिपदार्थः॥ **शतसंवत्सरत्वादीति** ॥ ''प्राणो वंश इति विद्यात्'' इत्युक्तप्राणवंशत्वादिरादि-पदार्थः ॥ **विष्णौ प्रवृत्तेति** ॥ विष्णौ प्रसिद्धब्रह्मशब्दादिश्रुत्यनुसारेणेत्यर्थः । यद्यप्यग्नेतृत्वमिति वक्तव्यं, तथाऽपि श्रुत्यनुवादायैवमुक्तम् ॥ **बहुविष्णुश्रुतीति** ॥ ब्रह्मादिश्रुतेरत्र बहुधा आवृत्तत्वादिति भावः ।

ವಿವರಣೆ - ಶ್ರುತಿಲಿಂಗಬಾಹುಲ್ಯವೆಂಬ ಪೂರ್ವಪಕ್ಷನ್ಯಾಯವು ಭಿನ್ನವಾದ್ದರಿಂದ ಈ ಅಧಿಕರಣಕ್ಕೆ ಗತಾರ್ಥತ್ವ ಬರುವುದಿಲ್ಲವೆಂಬ ಮೂರನೆಯ ಪಕ್ಷವನ್ನು 'ನಚ' ಎಂಬ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ.

'ಉಜ್ಜೀವನಮ್' ಎಂದರೆ ಪೂರ್ವಪಕ್ಷದ ಉಜ್ಜೀವನ ಎಂದರ್ಥ. 'ಇಂದ್ರಿಯೈಃ ಸಹಾಭಿಧಾನಾತ್' ಎಂಬ ಭಾಷ್ಯಕ್ಕೆ ಮತ್ತು 'ಏತತ್ ಪ್ರಾಣಸ್ಯೇಂದ್ರಿಯಗಣೇ ಗಣಿತತ್ವಾತ್' ಎಂಬ ಟೀಕೆಗೆ ನೀವು ಹೇಳಿದ ಪೂರ್ವಪಕ್ಷವು ವಿರುದ್ಧವಾಗಿದೆ ಎಂಬ ಪ್ರಶ್ನೆಗೆ 'ಇಹ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ. ಶ್ರುತಿಲಿಂಗಬಾಹುಲ್ಯವು ವಿಷ್ಣುವಿನಲ್ಲಿ ಸಾವಕಾಶವಾದ್ದರಿಂದ ಪೂರ್ವಪಕ್ಷಪ್ರಾಪಕವಾಗುವುದಿಲ್ಲ. ಇದನ್ನು ಸಮರ್ಥಿಸಲು ಮೊದಲು ಇಂದ್ರ, ಪ್ರಾಣ, ಜೀವ ಮೊದಲಾದವರಲ್ಲಿ ಶ್ರುತಿಲಿಂಗಬಾಹುಲ್ಯವಿದೆ ಎಂದು ಮೊದಲು ಸ್ಪಷ್ಟಪಡಿಸಬೇಕು. ಅದಕ್ಕೋಸ್ಕರ 'ಇಂದ್ರ' ಇತ್ಯಾದಿ ಗ್ರಂಥವು ಹೊರಟಿದೆ. ಇಂದ್ರೇ, ಜೀವೇ, ಮುಖ್ಯಪ್ರಾಣೇ ಎಂಬಲ್ಲಿರುವ ಸಪ್ತಮೀವಿಭಕ್ತಿಗೆ ಇಂದ್ರವಿಷಯದಲ್ಲಿ ಇತ್ಯಾದಿಯಾಗಿ ಎಂದರ್ಥ. 'ಮಹಾವ್ರತಯಾಜಿತ್ವಾತ್' ಎಂಬ ಶಬ್ದದಿಂದ 'ಇಂದ್ರೋ ವೈ ವೃತ್ರಂ ಹತ್ವಾ ಮಹಾನಭವತ್' ಎಂಬಲ್ಲಿರುವ ಮಹಾವ್ರತಯಾಜಿತ್ವಲಿಂಗವನ್ನು ಇಟ್ಟುಕೊಳ್ಳಬೇಕು. (ಇಂದ್ರದೇವರು ವೃತ್ರಾಸುರನನ್ನು ಸಂಹಾರ ಮಾಡಿದ ಮೇಲೆ ಬ್ರಹ್ಮಹತ್ಯಾಪರಿಹಾರಕ್ಕಾಗಿ 'ಮಹಾವ್ರತ' ಎಂಬ ಯಾಗವನ್ನು ಕೈಗೊಳ್ಳುತ್ತಾರೆ. ಆದ್ದರಿಂದ

ಮಹಾವ್ರತಯಾಜಿತ್ವವೆಂಬ ಧರ್ಮವು ಇಂದ್ರದೇವರಲ್ಲಿದೆ). 'ಪ್ರಾಣಸಂವಾದಾದಿ' ಎಂಬಲ್ಲಿರುವ ಆದಿಪದಕ್ಕೆ ಚಕ್ಷುರಾದಿಗಳ ಜೊತೆಗೆ ಪಠಿತವಾದ ಉತ್ಕ್ರಮಣ ಮತ್ತು ಪ್ರವೇಶ ಇವುಗಳ ನಿಮಿತ್ತದಿಂದ ದೇಹದ ಪತನ ಮತ್ತು ದೇಹದ ಉತ್ಥಾನವನ್ನು ವಿವಕ್ಷಿಸಬೇಕು. 'ಇತ್ಯಾದಿಶ್ರುತೀನಾಂ' ಎಂಬಲ್ಲಿರುವ ಆದಿಪದದಿಂದ 'ಸ ಏಷ ಪುನಃ ಪಂಚವಿಧಃ' ಎಂಬ ಶ್ರುತಿಯನ್ನು ವಿವಕ್ಷಿಸಬೇಕು. 'ಶತಸಂವತ್ಸರಾದಿ' ಎಂಬಲ್ಲಿರುವ ಆದಿಪದದಿಂದ 'ಪ್ರಾಣೋ ವಂಶ ಇತಿ ವಿದ್ಯಾತ್' ಎಂಬ ಪ್ರಾಣವಂಶತ್ವಲಿಂಗಗಳನ್ನು ವಿವಕ್ಷಿಸಬೇಕು. 'ವಿಷ್ಣೌ ಪ್ರವೃತ್ತಪ್ರಬಲಶ್ರುತ್ಯನುಸಾರೇಣ' ಎಂಬ ಪದಕ್ಕೆ ವಿಷ್ಣುವಿನಲ್ಲಿ ಪ್ರಸಿದ್ಧವಾದ ಬ್ರಹ್ಮಶ್ರುತಿಗಳಿಗೆ ಅನುಸಾರಿಯಾಗಿ ಎಂದರ್ಥ.

'ಅಪಾಂ ನೇತೃತ್ವಾದಿ' ಎಂದು ಗ್ರಂಥಕಾರರು ಪ್ರಯೋಗಿಸಿದ್ದಾರೆ. ವಸ್ತುತಃ ಅಪಾಂ ನೇತಾ = ಅಮ್ನೇತಾ, ಅಮ್ನೇತುಃ ಭಾವಃ ಅಮ್ನೇತೃತ್ವಮ್ ಎಂದು ಹೇಳಬೇಕಿತ್ತು. ಆದರೆ ಶ್ರುತಿಯಲ್ಲಿ ಅಪಾಂ ನೇತಾರಂ ಎಂದಿರುವುದರಿಂದ ಅದರ ಅನುಗಮಕ್ಕಾಗಿ ಹೀಗೆ ಹೇಳಿದ್ದಾರೆ. 'ಬಹುವಿಷ್ಣುಶ್ರುತಿಬಾಧಕತ್ವಾಯೋಗಾತ್' ಎಂಬ ಪದಕ್ಕೆ 'ಬ್ರಹ್ಮಾದಿಶ್ರುತಿಗಳು ಇಲ್ಲಿ ಬಹಳವಾಗಿ ಕೇಳಿಸುತ್ತಿವೆ. ಇವುಗಳನ್ನು ಬಾಧಿಸಲು ಸಾವಕಾಶಶ್ರುತಿಲಿಂಗಗಳಿಗೆ ಸಾಧ್ಯವಿಲ್ಲ ಎಂದರ್ಥ.

### ಸಾರ

ಆಕಾಶಾದ್ಯಧಿಕರಣಗಳಲ್ಲಿ ಶ್ರುತಿಲಿಂಗಬಾಹುಲ್ಯಪ್ರಯುಕ್ತವಾದ ಪೂರ್ವಪಕ್ಷವನ್ನು ಮಾಡಿಲ್ಲ. ಆದ್ದರಿಂದ ಈ ಅಧಿಕರಣದಲ್ಲಿ ಶ್ರುತಿಲಿಂಗಬಾಹುಲ್ಯಪ್ರಯುಕ್ತವಾದ ಪೂರ್ವಪಕ್ಷವು ಹುಟ್ಟಬಹುದು. ಆದ್ದರಿಂದಲೇ ಅನುವ್ಯಾಖ್ಯಾನದಲ್ಲಿ 'ಬಾಹುಲ್ಯಾತ್ ಶ್ರುತಿಲಿಂಗಯೋಃ' ಎಂದು ಹೇಳಿದ್ದಾರೆ. ಈ ಅಧಿಕರಣದ ಭಾಷ್ಯ ಹಾಗೂ ಟೀಕೆಗಳಲ್ಲಿ ವಸ್ತುತಃ ಲಿಂಗವನ್ನಷ್ಟೇ ಹೇಳಿರಬಹುದು. ಆದರೆ ಅದು ಕೇವಲ ಪೂರ್ವಪಕ್ಷದ ಉಪಕ್ರಮ ಮಾತ್ರ. ಮುಂದೆ ಬಾಹುಲ್ಯವನ್ನು ಹೇಳಬಹುದೆಂದು ಅದರ ಅಭಿಪ್ರಾಯ. ಆದ್ದರಿಂದ ಈ ಅಧಿಕರಣವು ಗತಾರ್ಥವಲ್ಲ.

* * * *

## ನಾಮಧೇಯವನ್ನು ಅನುಸರಿಸಿ ಲಿಂಗಗಳನ್ನು ಅರ್ಥೈಸಬೇಕು (ಪೂರ್ವಪಕ್ಷವೇ ಹುಟ್ಟುವುದಿಲ್ಲ)

तात्पर्यचन्द्रिका

**दृष्टं हि "दर्शपूर्णमासाभ्यां यजेत" इत्यादौ यजेः प्रवृत्तदर्शपूर्णमासनामानुसारेण षड्यागमात्रपरत्वम् । अन्यथा राजसूययजेरिव सन्निहितसर्वयागपरता स्यात् । सन्ति च विष्णौ प्रवृत्ताः "ब्रह्मेमं पुरुषं" इति ब्रह्मशब्दाद्याः श्रुतयः । न चेन्द्रश्रुत्यादिकं पश्यन् पूर्वपक्षी तत्सन्निहितं विष्णुश्रुत्यादिकं न पश्यतीति युक्तम् । उक्तं चानन्दमयाधिकरणे ब्रह्मशब्दस्य विष्णौ मुख्यत्वम् इति चेत्, मैवं,**

ಅನುವಾದ - ಬ್ರಹ್ಮನಾಮವನ್ನು ಅವಲಂಬಿಸಿ ಲಿಂಗಸಮನ್ವಯ ಮಾಡಬೇಕು. ವಿಷ್ಣುವಿನಲ್ಲಿ ಪ್ರಸಿದ್ಧವಾದ ಬ್ರಹ್ಮ ಮೊದಲಾದ ನಾಮಗಳನ್ನು ಅನುಸರಿಸಿ ಲಿಂಗಗಳನ್ನು ಸಮನ್ವಯ ಮಾಡಬೇಕು. ಈ ವಿಷಯದಲ್ಲಿ ಪೂರ್ವಮೀಮಾಂಸೆಯ ದೃಷ್ಟಾಂತವು ಕಂಡಿದೆ -

'ದರ್ಶಪೂರ್ಣಮಾಸಾಭ್ಯಾಂ ಯಜೇತ' ಇತ್ಯಾದಿ ಸ್ಥಳದಲ್ಲಿ ದರ್ಶಪೂರ್ಣಮಾಸ ಎಂಬ ಯಾಗದ ನಾಮವು ಕೇಳಿಸುತ್ತಿದೆ. ಈ ನಾಮಕ್ಕೆ ಅನುಸಾರಿಯಾಗಿ 'ಯಜ್' ಧಾತುವಿಗೆ ಕೇವಲ ಆರು ಯಾಗಗಳೆಂದು ಅರ್ಥೈಸಬೇಕು. ಒಂದು ವೇಳೆ ನಾಮವನ್ನು ಅನುಸರಿಸಿ ಹೀಗೆ ವ್ಯಾಖ್ಯಾನ ಮಾಡದಿದ್ದಲ್ಲಿ, 'ರಾಜಸೂಯೇನ ಯಜೇತ' ಎಂಬಲ್ಲಿ ಯಾವರೀತಿಯಾಗಿ ಸನ್ನಿಹಿತವಾದ ಸಕಲ ಯಾಗಗಳನ್ನು ಯಾಗಶಬ್ದವು ಹೇಳುತ್ತದೋ ಅದರಂತೆ ಇಲ್ಲಿಯೂ ಸಹ ಯಜ್‌ಧಾತು ಎಲ್ಲಾ ಯಾಗಗಳನ್ನು ಹೇಳಬೇಕಾದೀತು.

ಪ್ರಕೃತ 'ಬ್ರಹ್ಮೇಮಂ ಪುರುಷಂ' ಇತ್ಯಾದಿಯಾಗಿ ಬ್ರಹ್ಮ ಮೊದಲಾದ ಶಬ್ದಗಳು ವಿಷ್ಣುವಿನಲ್ಲೇ ಅಸಾಧಾರಣವಾಗಿ ಪ್ರವೃತ್ತವಾಗಿವೆ. ಇದಕ್ಕೆ ಅನುಸರಿಯಾಗಿ ಉಳಿದ ಲಿಂಗಗಳನ್ನು ಅರ್ಥೈಸಬೇಕು. ವಿಷ್ಣುವಿನಲ್ಲಿ ಪ್ರಸಿದ್ಧವಾದ ನಾಮಧೇಯಗಳನ್ನು ಗಮನಿಸದವನು, ಪೂರ್ವಪಕ್ಷವನ್ನು ಮಾಡಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಯಾವ ಪೂರ್ವಪಕ್ಷಿಯೂ ಇಂದ್ರಶ್ರುತ್ಯಾದಿಗಳನ್ನು ನೋಡುತ್ತಾನೋ ಅಂತಹವನು ಹತ್ತಿರದಲ್ಲಿರುವ ವಿಷ್ಣುಶ್ರುತ್ಯಾದಿಗಳನ್ನು ನೋಡುವುದಿಲ್ಲ ಎನ್ನುವುದು ಅಯುಕ್ತ.

ಬ್ರಹ್ಮ ಮೊದಲಾದ ಶಬ್ದಗಳು ವಿಷ್ಣುವಿನಲ್ಲಿ ಅಪ್ರಸಿದ್ಧವೆನ್ನಬಾರದು. ಏಕೆಂದರೆ ಈಗಾಗಲೇ ಆನಂದಮಯಾಧಿಕರಣದಲ್ಲಿ ವಿಷ್ಣುವಿನಲ್ಲಿ ಬ್ರಹ್ಮಶಬ್ದವು ಮುಖ್ಯವಾಗಿದೆಯೆಂದು ಸಮರ್ಥಿಸಿದ್ದಾಗಿದೆ.

### ಕಠಿಣಪದಾರ್ಥ

ಪ್ರವೃತ್ತ = ವಿದ್ವದ್‌ವಾಕ್ಯದಿಂದ ಪ್ರಸಿದ್ಧವಾದ, ಅನ್ಯಥಾ = ಪ್ರಸಿದ್ಧವಾದ ದರ್ಶಪೂರ್ಣಮಾಸ ಎಂಬ ನಾಮಧೇಯವನ್ನು ಅನುಸರಿಸಿ ಯಜ್‌ಧಾತುವಿಗೆ ಆರುಯಾಗಗಳೆಂದು ಅರ್ಥೈಸದಿದ್ದಲ್ಲಿ, ಸನ್ನಿಹಿತಸರ್ವಯಾಗಪರತಃ = ಹತ್ತಿರದಲ್ಲಿರುವ ಪ್ರಯಾಜಾದಿ ಸಕಲ ಯಾಗಪರತ್ವವೂ.

**प्रकाशः – दृष्टं हीति ॥** चतुर्थेऽध्याये ''दर्शपूर्णमासयोरिज्याप्राधान्यमविशेषात्'' इति तुरीयपादीयैकादशाधिकरणे दर्शपूर्णमासयोः किं सर्वेषां यागानां प्राधान्यमुताऽऽग्नेयादीनामेव कालयोगिनां प्राधान्यं इतरेषां प्रयाजादीनामङ्गत्वमिति सन्दिह्य, 'दर्शपौर्णमासाभ्यां' इति नामधेयस्य त्वाख्यातानुसारित्वादाख्यातेन चाविशेषेण सन्निहितसर्वयागान् परामृश्य ''दर्शपौर्णमासाभ्यां स्वर्गकामो यजेत'' इति फले विनियोगात्सर्वेषां प्राधान्यमिति पूर्वपक्षयित्वा,

अप्रसिद्धार्थस्य नामधेयस्याऽऽख्यातपारतन्त्र्येपि प्रसिद्धार्थस्य स्वातन्त्र्यात् 'दर्शपूर्णमासाभ्याम्' इत्यस्य षड्यागानामुत्पत्तौ कालयोगाद्विद्वाक्यद्वयेन च त्रिकद्वयसम्पादनाच्च प्रकृतिप्रत्ययार्थप्रसिद्ध्या प्रसिद्धार्थत्वादाख्यातस्यैव नामपारतन्त्र्यात् षण्णामेव प्राधान्यं, समिदादीनां तु तदङ्गत्वमिति सिद्धान्तितम् ।

अत्र यथा फलवाक्यस्थयजेर्विद्वाक्यप्रसिद्धदर्शपौर्णमासनामानुसारेण षड्यागमात्रपरत्वं, यथा वा "इन्द्रं मित्रं" इत्यादिश्रुतिप्रसिद्धेन्द्रादिश्रुत्यनुसारेण "अपां नेतारं" इत्यादिलिङ्गानां विष्णुनिष्ठत्वं, तथा "ब्रह्मशब्दः परे विष्णौ" इत्यादिवाक्यप्रसिद्धब्रह्मशब्दानुसारेण प्राणसंवादादिलिङ्गानां विष्णौ" प्रवर्तयितुं शक्यत्वेन न तैः पूर्वपक्षोदय इत्यर्थः ।

ವಿವರಣೆ -

"ದರ್ಶಪೂರ್ಣಮಾಸಯೋರಿಜ್ಯಾಪ್ರಧಾನ್ಯಮವಿಶೇಷಾತ್" (೪-೪-೧೧)

ಪೂರ್ವಮೀಮಾಂಸೆಯ ಈ ಅಧಿಕರಣದಲ್ಲಿ ದರ್ಶಪೂರ್ಣಮಾಸಗಳಲ್ಲಿ ಎಲ್ಲಾ ಯಾಗಗಳು ಪ್ರಧಾನವಾಗಿವೆಯೋ ಅಥವಾ ಹುಣ್ಣಿಮೆ ಅಮಾವಾಸ್ಯೆಗಳೆಂಬ ಕಾಲಕ್ಕೆ ಸಂಬಂಧಿಸಿದ ಆರು ಯಾಗಗಳು ಮಾತ್ರ ಪ್ರಧಾನವಾಗಿ ಉಳಿದ ಪ್ರಯಾಜಾದಿ ಅಂಗಗಳಾಗಿವೆಯೋ ? ಎಂದು ಸಂದೇಹ.

---

**भाट्टसङ्ग्रहः –**

**दर्शपूर्णमासयोरिज्याप्राधान्यमविशेषात् ॥ २८ ॥**

अत्रापि पूर्वन्यायेन शङ्कनात्सङ्गतिः । दर्शपूर्णमासयोराघाराज्यभागप्रयाजानुयाजादयः कालसंयोगरहिताः केचन पठिताः । आग्नेयादयः षड्यागाः "यदाग्नेयोष्टाकपालोऽमावास्यायाम्" इत्यादिना कालसंयोगेन चोदिताः । तत्र किं सर्वेषां फलसम्बन्धेन प्राधान्यमुत कालयोगिनामेव । अन्येषां तदङ्गत्वमिति **सन्देहः । पूर्वपक्षस्तु,** "दर्शपूर्णमासाभ्यां स्वर्गकामो यजेत" इति फलवाक्यगतयजिना यागसामान्यवाचिना प्राकरणिकानामाघारादीनामाग्नेयादीनाञ्च यागानामनुवादेन फलसम्बन्धो बोध्यते राजसूयेऽन्योन्यविलक्षणेष्टिपशुसोमानां यजिनाऽनुवादेन फलान्वयो यथा बोध्यते । तथैव पादादावुक्तेः । तद्वत् द्विवचनान्तनामधेयमपि राजसूयपदस्येवाख्यातपरतन्त्रत्वात्तद्वदेव प्राकरणिकसर्वपरम् । अव्युत्पन्नप्रातिपदिकं द्विवचनानन्तप्रतिरूपकं नेयम् । पूर्वत्र प्रथमश्रुतषष्ठीस्वारस्यस्येव "दर्शपूर्णमासाभ्यां" इति प्रथमश्रुतद्विवचनस्वारस्यस्य त्यागसम्भवात् । तस्मात् सर्वेषां प्राधान्यम् । तदाह **सूत्रे, दर्शपूर्णमासयोरिज्यानां** सर्वयागानां **प्राधान्यम् ।** फलवाक्यस्थयजिना सर्वेषाम**विशेषेण** फलसम्बन्ध**बोधना**दिति । **सिद्धान्तस्तु,** राजसूयादिनामधेय-

ಪೂರ್ವಪಕ್ಷ - ಎಲ್ಲಾ ಯಾಗಗಳು ಪ್ರಧಾನವೇ ಆಗಿವೆ. ಏಕೆಂದರೆ 'ಯಜೇತ' ಎಂಬಲ್ಲಿರುವ ಆಖ್ಯಾತವೇ ಪ್ರಧಾನವಾಗಿವೆ. ಈ ಆಖ್ಯಾತವನ್ನು 'ದರ್ಶಪೂರ್ಣಮಾಸಾಭ್ಯಾಂ' ಎಂಬ ನಾಮಧೇಯವು ಅನುಸರಿಸಿ ಅರ್ಥವನ್ನು ಹೇಳುತ್ತಿದೆ. ಆಖ್ಯಾತವಾದರೂ ಯಾವುದೇ ವಿಶೇಷಣದಿಂದ ಯುಕ್ತವಾಗದ ಕಾರಣ ಸನ್ನಿಹಿತವಾದ ಎಲ್ಲಾ ಯಾಗಗಳನ್ನು ಪರಾಮರ್ಶಿಸಿ 'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ' ಎಂಬುದಾಗಿ ಫಲದಲ್ಲಿ ವಿನಿಯೋಗ ಮಾಡುತ್ತಿದೆ. ಆದ್ದರಿಂದ ಎಲ್ಲಾ ಯಾಗಗಳೂ ಸಹ ಪ್ರಧಾನವೇ ಆಗಿವೆ.

ಸಿದ್ಧಾಂತ - ನೀವು ಹೇಳಿದ್ದು ಸರಿಯಲ್ಲ. ಅಪ್ರಸಿದ್ಧಾರ್ಥವನ್ನು ಹೊಂದಿರುವ ನಾಮಧೇಯವು ಆಖ್ಯಾತವನ್ನು ಅನುಸರಿಸಬಹುದು. ಆದರೆ ಪ್ರಸಿದ್ಧಾರ್ಥವುಳ್ಳ ನಾಮಧೇಯವು ಸ್ವತಂತ್ರವಾಗಿ ಅರ್ಥವನ್ನು ಹೇಳುತ್ತದೆ. ಪ್ರಕೃತ 'ದರ್ಶಪೂರ್ಣಾಮಾಸಾಭ್ಯಾಂ' ಎಂಬ ನಾಮಧೇಯವು ಪ್ರಸಿದ್ಧವಾದ ಅರ್ಥವನ್ನು ಹೊಂದಿದೆ. ಏಕೆಂದರೆ ಆರು ಯಾಗಗಳು 'ದರ್ಶ' ಹಾಗೂ 'ಪೂರ್ಣಮಾಸ'ವೆಂಬ ಕಾಲಕ್ಕೆ ಸಂಬಂಧಪಟ್ಟಿವೆ. ಆದ್ದರಿಂದ ಇಂತಹ ಆರು ಯಾಗಗಳು 'ಯ ಏವಂ ವಿದ್ವಾನ್ ಅಮಾವಾಸ್ಯಾಯಾಂ ಯಜತೇ ಏವಂ ವಿದ್ವಾನ್ ಪೂರ್ಣಮಾಸ್ಯಾಂ ಯಜತೇ' ಎಂಬುದಾಗಿ ಎರಡು ವಿದ್ವದ್ವಾಕ್ಯಗಳಿಂದ ಮೂರರ ಎರಡು ಗುಂಪನ್ನು ಹೊಂದಿವೆ. ಆದಕಾರಣ ದರ್ಶಪೂರ್ಣಮಾಸವೆಂಬ ಪ್ರಕೃತ್ಯರ್ಥವು 'ದ್ವಿತ್ವ' ಎಂಬ ಪ್ರತ್ಯಯಾರ್ಥವು ಪ್ರಸಿದ್ಧವಾದ್ದರಿಂದ 'ಯಜೇತ' ಎಂಬಲ್ಲಿರುವ ಆಖ್ಯಾತಪ್ರತ್ಯಯವೇ ದರ್ಶಪೂರ್ಣಮಾಸವೆಂಬ ನಾಮಧೇಯವನ್ನು ಅನುಸರಿಸುತ್ತದೆ ಹೊರತು, ಆಖ್ಯಾತವನ್ನು ನಾಮಧೇಯವು ಅನುಸರಿಸುವುದಿಲ್ಲ. ಹಾಗಾಗಿ ಆರು ಯಾಗಗಳೇ ಪ್ರಧಾನವಾದವು. ಉಳಿದ ಸಮಿದಾದಿ ಯಾಗಗಳು ಅಂಗಗಳು.

ಪೂರ್ವಮೀಮಾಂಸೆಯ ಈ ಅಧಿಕರಣದಲ್ಲಿ 'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ' ಎಂಬ ಫಲವಾಕ್ಯದಲ್ಲಿರುವ ಯಜ್‌ಧಾತುವಿಗೆ ವಿದ್ವದ್ವಾಕ್ಯದಿಂದ ಪ್ರಸಿದ್ಧವಾದ ದರ್ಶಪೂರ್ಣಮಾಸ ಎಂಬ ನಾಮಧೇಯಕ್ಕೆ ಅನುಸಾರಿಯಾಗಿ ಕೇವಲ ಆರು ಯಾಗಗಳೆಂದು ನಿರ್ಣಯಿಸಲಾಯಿತು. ಮತ್ತು ಹಿಂದೆ

---

मिवाप्रसिद्धार्थकं यन्नाम तद्ध्याख्यातपरतन्त्रम् । इदं तु नामधेयं प्रसिद्धार्थकम् । प्रातिपादिकस्य प्रवृत्तिहेतुविचारे कालसंयुक्ताग्नेयादिपरताध्यवसायात् । द्विवचनस्यापि विद्वद्वाक्यसिद्धत्रिकत्रिकसमुदायाभिप्रायकत्वात् । अतः षड्यागानां समुदायद्वये प्रसिद्धं सदिदं नामधेयं सामन्याविषयमपि यजिं स्वविषये षड्यागमात्रेऽवस्थापयितुं शक्नोतीति षण्णमेव प्राधान्यम् । अन्येषां प्रकरणात्तदङ्गत्वमिति। तदाह **सूत्रे ॥ अपि वा अङ्गानि कानिचिदित्यादि ॥ फलन्तु,** प्रयाजादीनां विकृतिषु नातिदेः **पूर्वपक्षे** । प्रधानत्वात् । **सिद्धान्ते** तु अङ्गत्वादतिदेशः । **प्रकरणं तु पौर्णमास्यां रूपवाचनादिति** द्वितीयाध्यायद्वितीयपादीयनयेन ''य एवं विद्वान्'' इत्यादिविद्वद्वाक्यद्वयं फलवाक्योपात्तद्विवचानन्तप्रातिपदिकप्रसिद्ध्यर्थं कालयोगनिमित्तेन आग्नेयादित्रिकत्रिकसमुदायद्वयानुवादकमित्युक्त्या षण्णामेव प्राधान्यमन्येषां तदङ्गत्वमिति सिद्धावप्युक्तदिशा सर्वप्राधान्यमस्त्विति पूर्वोक्ताक्षेपेणेह पूर्वपक्षप्रवृत्तिरित्याहुः ।

ಅಂತರಧಿಕರಣದಲ್ಲಿ ಹೇಳಿದ "ಇಂದ್ರಂ ಮಿತ್ರಂ" ಇತ್ಯಾದಿ ಶ್ರುತಿಪ್ರಸಿದ್ಧವಾದ ಇಂದ್ರಾದಿ ಶಬ್ದಗಳಿಗೆ ಅನುಸಾರಿಯಾಗಿ 'ಅಪಾಂ ನೇತಾರಂ' ಇತ್ಯಾದಿ ಲಿಂಗಗಳನ್ನು ವಿಷ್ಣುಪರವೆಂದು ಸಮರ್ಥಿಸಿದರು. ಈ ಎರಡುವಿಧ ದೃಷ್ಟಾಂತಗಳಂತೆ ಪ್ರಕೃತ 'ಬ್ರಹ್ಮಶಬ್ದಃ ಪರೇ ವಿಷ್ಣೌ' ಇತ್ಯಾದಿ ವಾಕ್ಯದಿಂದ ಪ್ರಸಿದ್ಧವಾದ ಬ್ರಹ್ಮಶಬ್ದಕ್ಕೆ ಅನುಸಾರಿಯಾಗಿ ಪ್ರಾಣಸಂವಾದಾದಿ ಲಿಂಗಗಳನ್ನು ವಿಷ್ಣುವಿನಲ್ಲಿ ಸಮರ್ಥಿಸಬೇಕು. ಹೀಗಿರುವಾಗ ಪ್ರಾಣಸಂವಾದಾದಿ ಲಿಂಗಗಳಿಂದಲೇ ಪೂರ್ವಪಕ್ಷವು ಹುಟ್ಟಲು ಸಾಧ್ಯವಿಲ್ಲ.

**प्रकाशः** – प्रवृत्तनामानुरोधेन सङ्कोचानङ्गीकारे बाधकमाह – **अन्यथेति** ॥ तत्रैव "प्रकरणशब्दसामान्याच्चोदनानामनङ्गत्वम्" इति चतुर्थपादीयाद्याधिकरणे अनुमत्यादीनि विदेवनादीनि च यागायागकर्माणि प्रकृत्या श्रुतं "राजा राजसूयेन स्वाराज्यकामो यजेत" इति वाक्यमुदाहृत्य, किमनुमत्यादीनां यागानां विदेवनादीनामयागानां च फलसम्बन्धेन प्राधान्यमुत यागानामेवेति सन्दिह्य,

राजसूयशब्दस्य प्रसिद्धार्थत्वेऽपि तृतीयान्ततया फलसाधनपरत्वावगमात् प्रकृतानां फलापेक्षाणां यागायागरूपाणां कर्मणां नामधेयत्वावगमात् यजेश्च छत्रिन्यायेन तेषामेव परामर्शकत्वोपपत्तेः सर्वेषां प्राधान्यमिति पूर्वपक्षयित्वा,

भावार्थाधिकरणन्यायेन धात्वर्थस्यैव फलसम्बन्धान्नामार्थस्यातथात्वात् यजेश्च यागमात्रवचनात्तत्सामानाधिकरण्येन राजसूयशब्दस्यापि तन्नामत्वावगमात्तेषामेव फलसम्बन्धात्तत्प्राधान्यं, विदेवनादीनां तु "फलवत्सन्निधावफलं तदङ्गम्" इति न्यायेन तदङ्गत्वमिति सिद्धान्तितम् ।

तत्र यथा यजेः प्रकृतसर्वयागपरता, तथा प्रकृतेऽपि स्यादित्यर्थः । नन्वस्त्वन्यत्र प्रवृत्तनामानुसारेण सङ्कोचः, प्रकृते किमित्यत आह – **सन्ति चेति** ॥

ವಿವರಣೆ - ಪ್ರಸಿದ್ಧವಾದ ನಾಮಾತ್ಮಕ ಶಬ್ದವನ್ನು ಅನುಸರಿಸಿ ಆಖ್ಯಾತಕ್ಕೆ ಸಂಕೋಚವನ್ನು ಮಾಡದಿದ್ದಲ್ಲಿ ಬಾಧಕವನ್ನು 'ಅನ್ಯಥಾ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

"ಪ್ರಕರಣಶಬ್ದಸಾಮಾನ್ಯಾಚ್ಚೋದನಾನಾಮನಂಗತ್ವಂ" (೪-೪-೧)[1]

ಪೂರ್ವಮೀಮಾಂಸೆಯ ಈ ಅಧಿಕರಣದಲ್ಲಿ ಹೀಗೆ ವಿಚಾರ ಮಾಡಿದ್ದಾರೆ - ಅನುಮತಿ ಮೊದಲಾದ ಯಾಗಕರ್ಮಗಳು, ವಿದೇವನ ಮೊದಲಾದ ಅಯಾಗ ಕರ್ಮಗಳು ಪ್ರಕೃತವಾದಾಗ "ರಾಜಾ ರಾಜಸೂಯೇನ ಸ್ವಾರಾಜ್ಯಕಾಮೋ ಯಜೇತ" ಎಂಬ ವಾಕ್ಯವು ಹೊರಟಿದೆ. ಈ ವಾಕ್ಯವನ್ನು ನೋಡಿದಾಗ ಅನುಮತಿ ಮೊದಲಾದ ಯಾಗಗಳು ಹಾಗೂ ವಿದೇವನ ಮೊದಲಾದ ಅಯಾಗಕರ್ಮಗಳು

ಸ್ವಾರಾಜ್ಯಪ್ರಾಪ್ತಿಯೆಂಬ ಫಲಸಂಬಂಧವನ್ನು ಹೊಂದಿ ಪ್ರಧಾನವಾಗುತ್ತವೋ ಅಥವಾ ಕೇವಲ ಯಾಗಕರ್ಮದಲ್ಲಷ್ಟೇ ಫಲಸಂಬಂಧವನ್ನು ಹೊಂದಿ ಪ್ರಧಾನವಾಗುತ್ತವೋ? ಎಂದು ಸಂದೇಹ.

---

**१. भाट्टसङ्ग्रहः – प्रकरणशब्दसामान्याचोदनानामनङ्गत्वम् ॥ १ ॥**
**(अपि वाऽङ्गमनिज्याः स्युस्ततो विशिष्टत्वात् ॥ २ ॥)**

राजसूयप्रकरणे अनेकेष्टिपशुसोमदर्वीहोमरूपाश्चतुर्विधा यागाः श्रुताः । ''अनुमत्यै पुरोडाशमष्टादशकपालं निर्वपति'' ''नैर्ऋतमेककपालम्'' ''आदित्यं चरुं निर्वपति'', ''अग्नावैष्णवमेकादशकपालम्'' इत्यादय इष्टयः । ''आदित्यां मल्हां गर्भिणीमालभेत'' ''मारुतीं पृश्निम्'' ''पृष्ठौहीमश्विभ्याम्'' इत्यादयः पशुयागाः । **मल्हा** गलस्तनयुक्तेत्यर्थः । तस्या अदितिर्देवता । **पृश्निरल्पतनुः** । तस्या मारुतो देवता । यावता वयसा पृष्ठे भारं वोढुं शक्नोति तावद्वयस्का **पृष्ठौही** त्रिवर्षेत्यर्थः । तस्या अश्विनौ देवता । एवमभिषेचनीयदशपेयादयः सोमयागाः । ''वल्मीकवपायां होमः'' इत्यादयो दर्वीहोमाश्च । तथा ''अक्षैर्दीव्यति, राजन्यं जिनाति, शौनःशेपमाख्यापयति'' इति विदेवनराजन्यजयशुनःशेपाख्यानादयोऽयागरूपाः पदार्थाः श्रुताः । एवं श्रुतयागायागसमुदायं प्रकृत्य ''राजा राजसूयेन स्वाराज्यकामो यजेत'' इति श्रूयते । तत्र **सन्देहः**, किमनुमत्यादयो यागाः विदेवनादयश्चायागाः सर्वेपि फलवाक्येन साक्षात्फले विनियुक्ततया समप्रधानाः सन्तः फलेनैव प्रयुज्यन्ते । किं वा यागा एव तथा । अयागास्तु क्रत्वर्थास्सन्तः क्रतुद्वारा फले विनियुज्यन्त इति । **पूर्वपक्षस्तु,** फलवाक्यस्थराजसूयशब्दस्याप्रसिद्धार्थत्वेपि तृतीयान्ततया फलसाधनत्वेन निर्णीतत्वात् फलापेक्षाणां सन्निहितानां यागायागरूपाणां सर्वेषां नामत्वाध्यवसायात् यजेतेत्यनेन छत्रिन्यायेन यागायागसमुदायपरेण ''राजसूयनामकेन यागायागसमुदायेन स्वाराज्यं भावयेत्'' इति फलवाक्येन सर्वेषां फलसम्बन्धावगमात् सर्वेपि समप्रधानाः सन्तः फलेनैव प्रयुज्यन्त इति । **तदाह सूत्रे, प्रकरणस्य** फलाकाङ्क्षायाः **शब्दस्य** राजसूयामधेयस्य च **सामान्याचोदनाना**मिज्यानिज्याचोदनानामन्योन्य**मनङ्गत्वमिति । सिद्धान्तस्तु,** भावार्थनये धात्वर्थादेवापूर्वद्वारा फलमित्युक्तत्वादिहापि धात्वर्थादेव भावनाद्वारा फलस्य वाच्यत्वात्, धातोश्च मुख्यवृत्त्या सन्निहितयागमात्रपरत्वसम्भवे लक्षणाश्रयणायोगात्, नामधेयस्यापि यजिसामानाधिकरण्येन यागमात्रनामत्वात् यागानामेव फलसाधनत्वम् । अन्येषान्तु फलवदफलन्यायेन फलवदङ्गत्वमिति यागानामेव प्रयोज्यत्वं न विदेवनादीनां इति ।

तथा च **सूत्रम्, अपि वाऽङ्गमनिज्याः स्युः** इति । **फलन्तु,** अवेष्टिनामकेष्टेर्बहिः प्रयोगे विदेबनादेरननुष्ठानं **पूर्वपक्षे** । प्रधानत्वेन अवेष्ट्यङ्गत्वाभावात् । **सिद्धान्ते तु** अङ्गत्वादनुष्ठानमिति ॥

ಪೂರ್ವಪಕ್ಷ - ಇಲ್ಲಿರುವ ರಾಜಸೂಯ ಶಬ್ದವು ಅಪ್ರಸಿದ್ಧಾರ್ಥವಾಗಿದೆ. ಯಾವರೀತಿಯಾಗಿ 'ದರ್ಶಮಾಸಪೂರ್ಣಮಾಸ'ವೆಂಬ ಪದವು ವಿಧ್ವದ್ವಾಕ್ಯದಿಂದ ಮೊದಲೇ ಪ್ರಸಿದ್ಧವಾಗಿತ್ತೋ ಅದರಂತೆ ಇಲ್ಲಿರುವ 'ರಾಜಸೂಯ' ಶಬ್ದವು ಮೊದಲು ಪ್ರಸಿದ್ಧವಾಗಿಲ್ಲ. ಇದೇ ಮೊದಲಬಾರಿಗೆ ಪರಿಚಯ-ವಾಗುತ್ತಿರುವ ಕಾರಣ ಅಪ್ರಸಿದ್ಧಾರ್ಥವೆನಿಸಿದೆ. ಆದರೂ ಸಹ 'ರಾಜಸೂಯ' ಎಂಬಲ್ಲಿರುವ ತೃತೀಯಾವಿಭಕ್ತಿಯಿಂದ ಫಲಸಾಧನವಾಗಿದೆಯೆಂದು ತಿಳಿಯುತ್ತದೆ. ಆದ್ದರಿಂದ 'ರಾಜಸೂಯ' ಎಂಬುದು ಯಾವುದೋ ಒಂದು ಯಾಗದ ನಾಮಧೇಯವೆಂದು ತಿಳಿಯುತ್ತದೆ. ಯಾವುದರ ನಾಮಧೇಯವೆಂದು ಹೇಳಬೇಕೆಂದರೆ ಅಲ್ಲಿ ಪ್ರಕೃತವಾದ ಫಲವನ್ನು ಅಪೇಕ್ಷಿಸುವ ಯಾಗಕರ್ಮ ಅಯಾಗಕರ್ಮವೆಂಬ ಎಲ್ಲದರ ನಾಮಧೇಯವೂ ಆಗಿದೆಯೆಂದು ತಿಳಿಯುತ್ತದೆ. ಏಕೆಂದರೆ ಈ ವಾಕ್ಯದಲ್ಲಿ ಮಾತ್ರ ಫಲವನ್ನು ಹೇಳಲಾಗಿದೆ. ವಿದೇವನಾದಿಗಳನ್ನು ಹೇಳುವ ವಾಕ್ಯದಲ್ಲಿ ಫಲವನ್ನು ಹೇಳಿರುವುದಿಲ್ಲ. ಆದ್ದರಿಂದ ಫಲಾಂಕ್ಷೆಯು ಎಲ್ಲಾ ಕರ್ಮಗಳಲ್ಲಿಯೂ ಪ್ರಾಪ್ತವಾಗಿದೆ. ಆ ಎಲ್ಲ ಕರ್ಮಗಳಿಗೆ 'ಸ್ವರಾಜ್ಯಕಾಮೋ ಯಜೇತ' ಎಂಬುದರಲ್ಲಿಯೇ ಅನ್ವಯ ಮಾಡಬೇಕಾಗುತ್ತದೆ. ಆದ್ದರಿಂದ ಯಾಗಕರ್ಮ ಅಯಾಗಕರ್ಮ ಎಲ್ಲದಕ್ಕೂ 'ರಾಜಸೂಯ' ಎಂಬುದೇ ನಾಮಧೇಯವಾಗುತ್ತದೆ.

'ರಾಜಸೂಯ' ಎಂಬ ಪದವು ಯಾಗಕರ್ಮ ಅಯಾಗಕರ್ಮ ಎಲ್ಲದಕ್ಕೂ ನಾಮಧೇಯವಾದಲ್ಲಿ 'ಯಜೇತ' ಎಂಬಲ್ಲಿರುವ 'ಯಜ್' ಧಾತ್ವರ್ಥ ತಪ್ಪಾಗುತ್ತದಲ್ಲವೇ?

ಈ ಪ್ರಶ್ನೆಗೆ ಅವಕಾಶವಿಲ್ಲ. ಏಕೆಂದರೆ ಯಾಗಕರ್ಮಗಳಷ್ಟೇ ಯಜ್‌ಧಾತುವಿನ ಅರ್ಥಗಳು. ವಿದೇವನ ಮೊದಲಾದ ಅಯಾಗಕರ್ಮಗಳು ಯಜ್‌ಧಾತುವಿನ ಅರ್ಥಗಳಲ್ಲ. ಆದರೂ ಸಹ ಛತ್ರಿನ್ಯಾಯದಿಂದ ವಿದೇವನಾದಿಕರ್ಮಗಳನ್ನು ಪರಾಮರ್ಶಿಸಬಹುದು. ಒಟ್ಟಾರೆ ಯಾಗಕರ್ಮ ಅಯಾಗಕರ್ಮ ಎಲ್ಲದಕ್ಕೂ ಸ್ವಾರಾಜ್ಯಪ್ರಾಪ್ತಿ ಎಂಬ ಫಲವಿರುವುದರಿಂದ ಎಲ್ಲಾ ಕರ್ಮಗಳು ಪ್ರಧಾನವಾಗಿವೇ ಆಗಿವೆ.

ಸಿದ್ಧಾಂತ - 'ಯಜ್' ಧಾತುವೇ ಪ್ರಧಾನವಾಗಿದೆ. 'ಯಜ್' ಧಾತುವು ಭಾವನಾವನ್ನು ಹೇಳುತ್ತದೆ. ಭಾವನಾಕ್ಕೆ ಫಲವೇ ಭಾವ್ಯವಾಗಿರುತ್ತದೆ. ಭಾವ್ಯಕ್ಕೆ ಧಾತ್ವರ್ಥವೇ ಸಾಧನವಾಗಿರುತ್ತದೆ. ಆದ್ದರಿಂದ 'ಯಜೇತ' ಎಂಬ ಪದಕ್ಕೆ 'ಯಾಗೇನ ಫಲಂ ಭಾವಯೇತ್' ಎಂದರ್ಥವಾಗುತ್ತದೆ. ಇದರಿಂದ ಧಾತ್ವರ್ಥವೇ ಫಲಸಾಧನವೆಂದು ನಿರ್ಣಯವಾಗುತ್ತದೆ. ಈ ವಿಷಯವನ್ನು ಭಾವಾರ್ಥಾಧಿಕರಣವು ನಿರ್ಣಯಿಸಿದೆ. ಈ ಭಾವಾರ್ಥಾಧಿಕರಣದ ನ್ಯಾಯವನ್ನು ಇಲ್ಲಿಯೂ ಅನುಸಂಧಾನ ಮಾಡಿಕೊಳ್ಳಬೇಕು.

'ರಾಜಸೂಯೇನ ಸ್ವಾರಾಜ್ಯಕಾಮೋ ಯಜೇತ' ಎಂಬಲ್ಲಿ 'ಯಜೇತ' ಎಂದು ಕೇಳಿಸುತ್ತಿದೆ. ಇಲ್ಲಿರುವ 'ಲಿಙ್' ಪ್ರತ್ಯಯಕ್ಕೆ 'ಸ್ವಾರಾಜ್ಯಂ ಭಾವಯೇತ್' ಎಂದರ್ಥ. 'ಕೇನ ಭಾವಯೇತ್' ಎಂದು ಆಕಾಂಕ್ಷೆ ಬಂದರೆ 'ಯಾಗೇನ ಭಾವಯೇತ್' ಎಂದು ಉತ್ತರಿಸಬೇಕು. ಆದ್ದರಿಂದ ಧಾತ್ವರ್ಥಕ್ಕೇನೆ ಫಲಸಾಧನತ್ವವೂ ತಿಳಿಯುತ್ತದೆ. ಹೊರತು ನಾಮಧೇಯಕ್ಕೆ ಫಲಸಾಧನತ್ವ ತಿಳಿಯುವುದಿಲ್ಲ. ನಾಮಧೇಯವು ಕೇವಲ ಧಾತ್ವರ್ಥದಲ್ಲಿ ವಿಶೇಷಣವಾಗಿ ಫಲಸಾಧನವಾಗಬಹುದು. ನೇರವಾಗಿ ಫಲಸಾಧನ ಆಗುವುದಿಲ್ಲ. 'ಯಜ್' ಧಾತುವು ಕೇವಲ ಯಾಗವನ್ನಷ್ಟೇ ಹೇಳುತ್ತಿದೆ. ಆ ಯಾಗದ ಸಾಮಾನಾಧಿಕರಣ್ಯವು ರಾಜಸೂಯ ಶಬ್ದಕ್ಕೆ ಇರುವುದರಿಂದ ರಾಜಸೂಯಯಾಗದಿಂದ ಎಂದು ಅರ್ಥವಾಗುತ್ತದೆ. ಆದ್ದರಿಂದ ರಾಜಸೂಯ ಶಬ್ದವು

ಕೇವಲ ಯಾಗಗಳಿಗಷ್ಟೇ ನಾಮಧೇಯವಾಗುತ್ತದೆ ಹೊರತು. ಅಯಾಗಕರ್ಮಗಳಿಗೆ ನಾಮಧೇಯವಾಗುವುದಿಲ್ಲ. ಏಕೆಂದರೆ ಯಾಗಗಳಿಗಷ್ಟೇ ಫಲಸಂಬಂಧವು ಕೇಳಿಸುತ್ತಿರುವುದರಿಂದ ಪ್ರಧಾನಸಾಧನವಾಗಿವೆ. ವಿದೇವನಾದಿಗಳಿಗಾದರೂ ಫಲಸಂಬಂಧವಿಲ್ಲದ ಕಾರಣ ಅಪ್ರಧಾನವಾಗಿವೆ. ಆದರೆ 'ಫಲವತ್ಸನ್ನಿಧಾವಫಲಂ ತದಂಗಂ' ಎಂಬ ನ್ಯಾಯದಂತೆ ಫಲವುಳ್ಳ ರಾಜಸೂಯಾದಿ ಯಾಗಗಳ ಸನ್ನಿಧಾನವಿರುವುದರಿಂದ ಅವುಗಳಿಗೆ ಅಂಗವಾಗುತ್ತವೆ. ಆದ್ದರಿಂದ ಅನುಮತ್ಯಾದಿ ಎಲ್ಲಾ ರಾಜಸೂಯಾಗಾದಿ ಯಾಗಗಳಿಗೆ ವಿದೇವನಾದಿ ಕ್ರೀಡೆಗಳು ಅಂಗಗಳಾಗಿವೆ. ವಿದೇವನಾದಿ ಕ್ರೀಡೆಗಳು ಫಲೋಪಕಾರವಾದ ಅಂಗಗಳಾಗಿವೆ.

ಪೂರ್ವಮೀಮಾಂಸೆಯ ಈ ಅಧಿಕರಣದಲ್ಲಿ 'ಯಜ್' ಧಾತುವಿಗೆ ಅಯಾಗಕರ್ಮವೆನಿಸಿದ ವಿದೇವನಾದಿಗಳನ್ನು ಬಿಟ್ಟು, ಸಕಲ ಯಾಗಗಳೆಂಬ ಅರ್ಥಗಳನ್ನು ಹೇಗೆ ಮಾಡಿದ್ದಾರೋ, ಅದರಂತೆ ಪ್ರಕೃತದಲ್ಲಿಯೂ ತಿಳಿಯಬೇಕು. ಅಂದರೆ ಪ್ರಸಿದ್ಧವಾದ ನಾಮಧೇಯವನ್ನು ಅನುಸರಿಸಿ ಅರ್ಥೈಸದಿದ್ದಲ್ಲಿ 'ದರ್ಶಪೂರ್ಣಮಾಸಾಭ್ಯಾಂ ಯಜೇತ' ಎಂಬಲ್ಲಿಯೂ ಸಹ ಆರು ಯಾಗಗಳನ್ನಷ್ಟೇ ವಿವಕ್ಷಿಸದೆ ಸಕಲ ಯಾಗಗಳನ್ನು 'ಯಜ್' ಧಾತುವಿನಿಂದ ವಿವಕ್ಷಿಸಬೇಕಾದೀತು.

ಪ್ರಶ್ನೆ - ಬೇರೆಡೆ ಪ್ರಸಿದ್ಧವಾದ ನಾಮಧೇಯವನ್ನು ಅನುಸರಿಸಿ 'ಯಜ್' ಧಾತುವಿನ ಅರ್ಥವನ್ನು ಸಂಕೋಚ ಮಾಡಬೇಕೆಂದು ಹೇಳಿದಿರಿ. ಇದರಿಂದ ಪ್ರಕೃತದಲ್ಲಿ ಏನು ಹೇಳಿದಂತಾಯಿತು?

ಉತ್ತರ - ಈ ಪ್ರಶ್ನೆಗೆ 'ಸಂತಿ ಚ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಪ್ರಕೃತ ವಿಷ್ಣುವಿನಲ್ಲಿಯೇ ಪ್ರಸಿದ್ಧವಾದ ನಾಮಧೇಯವನ್ನು ಅನುಸರಿಸಿ ಇಂದ್ರಾದಿ ಲಿಂಗಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಬೇಕು. ಆದ್ದರಿಂದ ಇಂದ್ರಪ್ರಾಣಾದಿ ಲಿಂಗಗಳನ್ನು ಅನುಸರಿಸಿ ಪೂರ್ವಪಕ್ಷವೇ ಹುಟ್ಟುವುದಿಲ್ಲವೆಂದು ತಿಳಿಯಬೇಕು.

**प्रकाशः**– ननु विष्णुश्रुत्यज्ञानेन पूर्वपक्षः किं न स्यादित्यत आह – **नचेति** ॥ ननु ब्रह्मश्रुत्यादेः विष्णौ प्रवृत्तत्वमेवाद्याप्यसिद्धं, येन तद्बलादुक्तं युक्तं स्यादित्यत आह – **उक्तञ्चेति** ॥ ननु जन्माधिकरण एव ब्रह्मशब्दस्य विष्णौ मुख्यत्वमुक्तम् । अत एवाऽऽनन्दमयाधिकरणे ब्रह्मशब्दं पूर्वपक्षबाधकमाशङ्क्य समाधानमुक्तमिति चेत्सत्यं, जन्माधिकरणे स्वयं समर्थितत्वेऽपि भाष्यादौ तत्रानुक्तेरत्र तूक्तेस्तदभिप्रायेण एवमभिधानात् ।

ವಿಷ್ಣುಶ್ರುತಿಯನ್ನು ಗಮನಿಸದವನು ಪೂರ್ವಪಕ್ಷವನ್ನು ಮಾಡಬಹುದಲ್ಲವೇ? ಎಂಬ ಪ್ರಶ್ನೆಗೆ 'ನಚ' ಗ್ರಂಥದಿಂದ ಉತ್ತರಿಸಿದ್ದಾರೆ. ಬ್ರಹ್ಮಶ್ರುತಿಯು ವಿಷ್ಣುವಿನಲ್ಲಿ ಪ್ರಸಿದ್ಧವಾಗಿದೆಯೆಂದು ಇಲ್ಲಿಯತನಕವೂ ನಿರ್ಣಯವಾಗಿದ್ದಲ್ಲಿ ಪೂರ್ವಪಕ್ಷವು ಅಯುಕ್ತವಾಗುತ್ತಿತ್ತಲ್ಲವೇ? ಎಂಬ ಪ್ರಶ್ನೆಗೆ 'ಉಕ್ತಂ ಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

ಪ್ರಶ್ನೆ - ಜನ್ಮಾದ್ಯಧಿಕರಣದಲ್ಲಿಯೇ ಬ್ರಹ್ಮಶಬ್ದವು ವಿಷ್ಣುವಿನಲ್ಲಿ ಮುಖ್ಯವಾಗಿದೆಯೆಂದು ಹೇಳಲಾಗಿದೆ. ಆನಂದಮಯಾಧಿಕರಣದಲ್ಲಿ ಬ್ರಹ್ಮಶಬ್ದವನ್ನು ಪೂರ್ವಪಕ್ಷಬಾಧಕವನ್ನಾಗಿ ಆಶಂಕಿಸಿ ಸಮಾಧಾನವನ್ನು ಹೇಳಿದ್ದಾರೆ. ಆದರೆ ನೀವು ಆನಂದಮಯಾಧಿಕರಣದಲ್ಲಿ ಬ್ರಹ್ಮಶಬ್ದವು ವಿಷ್ಣುವಿನಲ್ಲಿ ಸಮರ್ಥಿತವಾಗಿದೆ ಎಂದು ಹೇಳುತ್ತಿದ್ದೀರಿ. ಇದು ತಪ್ಪಲ್ಲವೇ?

ಉತ್ತರ - ಹೌದು, ಗ್ರಂಥಕಾರರು ತಾತ್ಪರ್ಯಚಂದ್ರಿಕೆಯ ಜನ್ಮಾದ್ಯಧಿಕರಣದಲ್ಲಿ ಬ್ರಹ್ಮಶಬ್ದವನ್ನು ಸಮರ್ಥಿಸಿದ್ದಾರೆ. ಹೊರತು ಭಾಷ್ಯಕಾರರಾಗಲೀ ಟೀಕಾಕಾರರಾಗಲಿ ಜನ್ಮಾದ್ಯಧಿಕರಣದಲ್ಲಿ ಸಮರ್ಥಿಸಿಲ್ಲ ಹೊರತಾಗಿ ಆನಂದಮಯಾಧಿಕರಣದಲ್ಲಿ ಸಮರ್ಥಿಸಿದ್ದಾರೆ. ಭಾಷ್ಯ ಟೀಕೆಗಳ ಅಭಿಪ್ರಾಯದಿಂದ ಪ್ರಕೃತ ಗ್ರಂಥಕಾರರು ಆನಂದಮಯಾಧಿಕರಣೇ ಎಂದು ಹೇಳಿದ್ದಾರೆ.

**गुरुराजीयम् – अन्यथेति ॥ आग्नेयादिषट्के प्रवृत्तदर्शपूर्णमासानुसारेण यजेः षड्यागपरत्वाभाव इत्यर्थः । नचास्तु सन्निहितयागपरत्वमिति वाच्यम् । तथा सति प्रयाजादिसर्वयागपरत्वापत्त्या करणेतिकर्तव्यताभेदो न स्यात् ।**

## ಸಾರ

ಇಂದ್ರಪ್ರಾಣಾದಿ ಲಿಂಗಗಳನ್ನು ಅವಲಂಬಿಸಿ, ಈ ಅಧಿಕರಣದಲ್ಲಿ ಪೂರ್ವಪಕ್ಷ ಮಾಡುತ್ತಿದ್ದಾರೆ. ಈರೀತಿಯಾದ ಪೂರ್ವಪಕ್ಷವು ಸರಿಯೇ? ಎಂದು ವಿಮರ್ಶಿಸಬೇಕು. ಏಕೆಂದರೆ ವಿಷ್ಣುವಿನಲ್ಲಿ ಈಗಾಗಲೇ ಪ್ರಸಿದ್ಧವಾದ ಬ್ರಹ್ಮ ಮೊದಲಾದ ನಾಮಧೇಯಗಳಿವೆ. ಇವುಗಳನ್ನು ಅನುಸರಿಸಿ ಇಂದ್ರಪ್ರಾಣಾದಿಲಿಂಗಗಳೂ ಸಹ ವಿಷ್ಣುವಿನಲ್ಲೇ ಬರುತ್ತವೆ. ಸಂಶಯಕ್ಕೆ ಅವಕಾಶವೇ ಇರುವುದಿಲ್ಲ. ಏಕೆಂದರೆ ಪೂರ್ವಮೀಮಾಂಸಾಕಾರರೂ ಸಹ ಇಂತಹ ತೀರ್ಮಾನಗಳನ್ನು ತೆಗೆದುಕೊಂಡಿದ್ದಾರೆ. ಉದಾಹರಣೆ :- 'ದರ್ಶಪೂರ್ಣಮಾಸಾಭ್ಯಾಂ ಯಜೇತ' ಎಂಬ ಶ್ರುತಿಯಲ್ಲಿ 'ದರ್ಶಪೂರ್ಣಮಾಸ' ಎಂಬ ಹೆಸರು ಕೇಳಿಸುತ್ತಿದೆ. ಈ ಶ್ರುತಿಯನ್ನು ಕೇಳುವ ಮೊದಲೇ ವಿದ್ವದ್‌ವಾಕ್ಯದಿಂದ ದರ್ಶಪೂರ್ಣಮಾಸ ಶಬ್ದದ ಪರಿಚಯವಾಗಿದೆ. ಹಾಗಾಗಿ 'ಯಜೇತ' ಎಂಬಲ್ಲಿರುವ 'ಯಜ್' ಧಾತುವಿಗೆ ದರ್ಶಮಾಸದ ಮೂರು ಯಾಗಗಳು ಪೂರ್ಣಮಾಸದ ಮೂರು ಯಾಗಗಳು ಮಾತ್ರ ಅರ್ಥವೆನ್ನಬೇಕೆ ಹೊರತು, ಸಕಲ ಯಾಗಗಳನ್ನು ಅರ್ಥವೆಂದು ಹೇಳಬಾರದು. ಒಟ್ಟಾರೆ 'ದರ್ಶಪೂರ್ಣಮಾಸ'ವೆಂಬ ನಾಮಧೇಯವನ್ನು ಅನುಸರಿಸಿ 'ಯಜ್' ಧಾತುವಿನ ಅರ್ಥವನ್ನು ಸಾವಕಾಶಮಾಡಿದ್ದು ಕಂಡಿದೆ. ಹೀಗೆ ಒಪ್ಪದಿದ್ದರೆ 'ರಾಜಸೂಯೇನ ಯಜೇತ' ಎಂಬಲ್ಲಿಯೂ 'ಯಜ್' ಧಾತುವಿಗೆ ಅರ್ಥಸಂಕೋಚ ಮಾಡುವ ಪ್ರಸಂಗ ಬರುತ್ತದೆ. ಆದ್ದರಿಂದ ಬ್ರಹ್ಮನೆಂಬ ನಾಮಧೇಯವನ್ನು ಅನುಸರಿಸಿ ಇಂದ್ರಪ್ರಾಣಾದಿ ಲಿಂಗಗಳನ್ನು ವಿಷ್ಣುವಿನಲ್ಲಿ ಸಾವಕಾಶ ಮಾಡಬೇಕಾಗುತ್ತದೆ. ಆದ್ದರಿಂದ ಇಂದ್ರಪ್ರಾಣಾದಿ ಲಿಂಗಗಳನ್ನು ವಿವಕ್ಷಿಸಿ ಪೂರ್ವಪಕ್ಷವನ್ನು ನೀವು ಹೇಗೆ ರಚಿಸುತ್ತೀರಿ?

* * * *

ಅಂತಿಮಪ್ರಾಣಾಧಿಕರಣ-(೧।೧।೧೨)

## ದೇವೇಂದ್ರನೇ ಪ್ರಾಣಶಬ್ದವಾಚ್ಯನೆಂದು ಪೂರ್ವಪಕ್ಷ

तात्पर्यचन्द्रिका

**इन्द्रादिलिङ्गादीनां विष्णौ प्रवर्तयितुमप्यशक्यत्वेन पूर्वपक्षोदयात् । तथा हि – ''इन्द्रो वै वृत्रं हत्वा महानभवत् यन्महानभवत्तन्महाव्रतमभवत्' इत्यादौ यो वृत्रहन्ता इन्द्रो महाव्रतयजमानः प्रकृतः, स एव ''तमिन्द्र उवाच प्राणो वा अहं'' इति तत्रापीन्द्रशब्देनोच्यते । नच वृत्रहन्तृत्वमहाव्रतयजमानत्वादिकं ब्रह्मणि युक्तम् । नापि ''प्राणो वा अहम्'' इति प्रसिद्धेन्द्रे प्रयुक्तोऽहंशब्दो विष्णौ युक्तः । नच 'अहं' इत्यस्य मयीत्यर्थः, बिभक्तिव्यत्ययप्रसङ्गात् । अन्तर्यामिपरत्वे च लक्षणा स्यात् । न चाहंशब्दः स्वप्रयोक्त्रन्तर्यामिण्येव मुख्यः, ''तदात्मानमेवावेदहं ब्रह्मास्मि'' । ''अहं कृत्स्नस्य जगतः'' इत्यादावीश्वरप्रयुक्ताहंशब्दस्य अमुख्यार्थत्वप्रसङ्गात् ।**

ಅನುವಾದ - ಇಂದ್ರಪ್ರಾಣಾದಿಲಿಂಗಗಳನ್ನು ವಿಷ್ಣುವಿನಲ್ಲಿ ಸಮರ್ಥಿಸಲು ಸಾಧ್ಯವೇ ಇಲ್ಲ. ಆದ್ದರಿಂದ ಪೂರ್ವಪಕ್ಷವು ಹುಟ್ಟಬಹುದು. ಅದು ಹೀಗೆ -

> ಇಂದ್ರೋ ವೈ ವೃತ್ರಂ ಹತ್ವಾ ಮಹಾನಭವತ್ ।
> ಯನ್ಮಹಾನಭವತ್ತನ್ಮಹಾವ್ರತಮಭವತ್ ॥

ಇಂದ್ರನು ವೃತ್ರಾಸುರರನ್ನು ಕೊಂದು ದೊಡ್ಡ ವ್ಯಕ್ತಿಯಾಗಿ 'ಮಹಾವ್ರತ' ಎನಿಸಿದನು. ಇತ್ಯಾದಿಯಾಗಿ ವೃತ್ರಾಸುರ ಸಂಹಾರಕನಾದ ದೇವೇಂದ್ರನು 'ಮಹಾವ್ರತ' ಯಾಗಕ್ಕೆ ಯಜಮಾನನಾಗಿ ಪ್ರಕೃತನಾಗಿದ್ದಾನೆ. ಈ ದೇವೇಂದ್ರನೇ ''ತಮಿಂದ್ರ ಉವಾಚ ಪ್ರಾಣೋ ವಾ ಅಹಂ'' ಎಂಬಲ್ಲಿಯು ಇಂದ್ರಶಬ್ದದಿಂದ ಪ್ರಕೃತನಾಗಿದ್ದಾನೆ. ಇಲ್ಲಿರುವ 'ವೃತ್ರಂ ಹತ್ವಾ' ಎಂಬ ಲಿಂಗವಾಗಲಿ 'ಮಹಾನಭವತ್' ಎಂಬ ಲಿಂಗವಾಗಲಿ ಬ್ರಹ್ಮನಲ್ಲಿ ಸರ್ವಥಾ ಬರುವುದಿಲ್ಲ.

ಇದರಂತೆ 'ಪ್ರಾಣೋವಾ ಅಹಂ' ಎಂಬ ಶ್ರುತಿಯಲ್ಲಿ ದೇವೇಂದ್ರನ ವಿಷಯದಲ್ಲಿ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದವು ವಿಷ್ಣುವಿನಲ್ಲಿ ಸರ್ವಥಾ ಕೂಡುವುದಿಲ್ಲ. 'ಅಹಂ' ಶಬ್ದಕ್ಕೆ ಮಯಿ (ದೇವೇಂದ್ರನಲ್ಲಿ) ಎಂಬರ್ಥವನ್ನು ಮಾಡಿದರೆ ವಿಭಕ್ತಿವ್ಯತ್ಯಾಸ ಎಂಬ ದೋಷವು ಬರುತ್ತದೆ. ಇನ್ನು ಅಂತರ್ಯಾಮಿ ಎಂಬರ್ಥವನ್ನು ಮಾಡಿದರೆ ಲಕ್ಷಣಾಪ್ರಸಂಗದೋಷವು ಬರುತ್ತದೆ.

ಶಂಕೆ - ಅಹಂ ಶಬ್ದವು ಶಬ್ದಪ್ರಯೋಗ ಮಾಡುತ್ತಿರುವವನ ಅಂತರ್ಯಾಮಿಯಲ್ಲಿ ಮುಖ್ಯವಾಗಿದೆ ಎಂದು ಹೇಳಬಾರದು. ಹಾಗೇ ಹೇಳಿದರೆ 'ತದಾತ್ಮಾನಮೇವಾವೇದಹಂ ಬ್ರಹ್ಮಾಸ್ಮಿ' ಇತ್ಯಾದಿ ಸ್ಥಳಗಳಲ್ಲಿ ಈಶ್ವರನಲ್ಲಿ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದಕ್ಕೂ ಸಹ ಅಂತರ್ಯಾಮಿ ಎಂಬರ್ಥವನ್ನು ಮಾಡಬೇಕಾದೀತು. ಆದ್ದರಿಂದ ದೇವೇಂದ್ರನಲ್ಲಿ ಇಂದ್ರ ಹಾಗೂ ಶ್ರುತಿಗಳು ನಿರವಕಾಶಗಳಾಗಿ ದೇವೇಂದ್ರನೇ ಪ್ರಾಣಶಬ್ದವಾಚ್ಯನೆಂದು ಪೂರ್ವಪಕ್ಷವು ಹುಟ್ಟಬಹುದು.

**ಕಠಿಣಪದಾರ್ಥ**

ಮಹಾವ್ರತಂ = ಮಹಾವ್ರತವೆಂಬ ಯಾಗವನ್ನು, ಪ್ರಯುಕ್ತಃ = ಪ್ರಯೋಗಿಸಲ್ಪಟ್ಟ, ಸ್ವಪ್ರಯೋಕ್ತೃ = ಅಹಂ ಶಬ್ದವನ್ನು ಪ್ರಯೋಗಿಸುವವನಲ್ಲಿ, ಲಕ್ಷಣಾ ಸ್ಯಾತ್ = ಅಹಂ ಶಬ್ದಕ್ಕೆ ಲಕ್ಷಣಾಪ್ರಸಂಗದೋಷ ಬರಬೇಕಾದೀತು.

**प्रकाशः** – एवं न्यायविवरणटीकागताक्षेपांशं प्रपञ्च्य, ''विद्याविशेषे अधिकाशङ्कया पुनः प्रत्यवस्थानात्'' इति समाधानांशं विवृण्वन् पूर्वपक्षमुज्जीवयति – **मैवमित्यादिना** ॥ अपिपदेन स्वरसतः प्रवृत्तिर्नास्त्येव, बलादपि प्रवृत्तिर्नोपपद्यत इत्याचष्टे । सूत्रे ''न वक्तुः'' इतीन्द्रस्य, ''जीवमुख्यप्राणलिङ्गात्'' इति तयोश्च पूर्वपक्षितत्वादिन्द्रप्रापकं तावदाह – **इन्द्र इति** ॥ उदाहरिष्यमाणन्यायविवरणे अन्यलिङ्गेन श्रुत्युज्जीवनस्य सूचितत्वात्तथैवाह – **स एवेति** ॥ अन्यस्य तत्र यजमानत्वे शस्त्रशंसितारं विश्वामित्रं प्रति अनेन ''प्राणो वा अहं'' इत्युपदेशरूपवरदानायोगादिति भावः ।

अस्त्वेवं, किं तत इत्यत आह – **नचेति** ॥ पुराणादाविन्द्रस्यैव तथात्वप्रसिद्धेरिति भावः । एतेन ''न वक्तुः'' इति सूत्रपूर्वपक्षांशटीका विवृता । ''न चास्योपदेशस्य सावकाशत्वं वाऽस्ति'' इति टीकावाक्यं विवृण्वन् श्रुतिरपि निरवकाशेत्याह – **नापीति** ॥

ವಿವರಣೆ - ಇಲ್ಲಿಯ ತನಕ ನ್ಯಾಯವಿವರಣಾಟೀಕೆಯಲ್ಲಿರುವ ಆಕ್ಷೇಪಾಂಶವನ್ನೇ ವಿವರಿಸಿದರು. ಮುಂದೆಯೂ ವಿದ್ಯಾವಿಶೇಷೇऽಧಿಕಾಶಂಕಯಾ ಪುನಃ ಪ್ರತ್ಯವಸ್ಥಾನಾತ್'' (ನಿರವಕಾಶಲಿಂಗದಿಂದ ಪೂರ್ವಪಕ್ಷವು ಹುಟ್ಟಬಹುದು ಎಂಬ ನ್ಯಾಯವಿವರಣದ ಸಮಾಧಾನದ ವಾಕ್ಯವನ್ನೇ ವಿವರಿಸುತ್ತಾ ಪೂರ್ವಪಕ್ಷವನ್ನು ಉಜ್ಜೀವನಗೊಳಿಸುತ್ತಿದ್ದಾರೆ. ''ಮೈವಂ'' ಇತ್ಯಾದಿಯಾಗಿ.

ಗ್ರಂಥದಲ್ಲಿ 'ಪ್ರವರ್ತಯಿತುಮಪಿ' ಎಂಬ 'ಅಪಿ' ಪದದಿಂದ ಸ್ವಾಭಾವಿಕವಾಗಿ ವಿಷ್ಣುವಿನಲ್ಲಿಯೂ ಇಂದ್ರಲಿಂಗಗಳು ಇರುವುದಿಲ್ಲ. ಬಲಾತ್ಕಾರದಿಂದಲೂ ಇರುವುದಿಲ್ಲವೆಂದು ಹೇಳಿದ್ದಾರೆ. ಸೂತ್ರದಲ್ಲಿ 'ನ ವಕ್ತುರಾತ್ಮೋಪದೇಶಾತ್' ಎಂಬುದರಿಂದ ಇಂದ್ರನನ್ನು 'ಜೀವಮುಖ್ಯಪ್ರಾಣಲಿಂಗಾತ್' ಎಂಬುದರಿಂದ ಜೀವ ಹಾಗೂ ಮುಖ್ಯಪ್ರಾಣರನ್ನು ಪೂರ್ವಪಕ್ಷಕ್ಕೆ ವಿಷಯವಾಗಿ ಹೇಳಿದ್ದಾರೆ. ಅದಕ್ಕನುಸಾರಿಯಾಗಿ ಇಲ್ಲಿಯೂ ಗ್ರಂಥಕಾರರು ಮೊದಲು ಇಂದ್ರಪಾಪಕವಾದ ಪೂರ್ವಪಕ್ಷವನ್ನೇ 'ಇಂದ್ರೋ ವೈ' ಇತ್ಯಾದಿ ವಾಕ್ಯದಿಂದ ಮಾಡುತ್ತಿದ್ದಾರೆ. ಅನ್ಯಲಿಂಗದಿಂದ ಶ್ರುತಿಯನ್ನು ಉಜ್ಜೀವನ ಮಾಡಬೇಕೆಂಬ ವಿಷಯದಲ್ಲಿ ಮುಂದೆ ಗ್ರಂಥಕಾರರು ನ್ಯಾಯವಿವರಣದ ಮಾತನ್ನು ಉಲ್ಲೇಖಿಸುತ್ತಾರೆ. ಅದರಂತೆ ಪ್ರಕೃತ 'ಸ ಏವ' ಇತ್ಯಾದಿ ವಾಕ್ಯದಿಂದ ಪೂರ್ವಪಕ್ಷವನ್ನು ಸಮರ್ಥಿಸುತ್ತಿದ್ದಾರೆ.

'ತಮಿಂದ್ರ ಉವಾಚ' ಎಂಬಲ್ಲಿ ಒಂದು ವೇಳೆ ವಿಷ್ಣು ಇಂದ್ರಶಬ್ದದಿಂದ ಪ್ರತಿಪಾದ್ಯನಾಗಿ ಯಜಮಾನನಾಗುವುದಿಲ್ಲ. ಏಕೆಂದರೆ ಶಸ್ತ್ರವನ್ನು ಶಂಸನ ಮಾಡುವ ಋತ್ವಿಕ್ ಎನಿಸಿದ ವಿಶ್ವಾಮಿತ್ರನನ್ನು ಕುರಿತು "ಪ್ರಾಣೋ ವಾ ಅಹಂ" ಇತ್ಯಾದಿಯಾಗಿ ದೇವೇಂದ್ರನು ಉಪದೇಶ ಎಂಬ ವರವನ್ನು ನೀಡುತ್ತಾನೆ. ವಿಷ್ಣುವು ಯಜಮಾನನಾದಲ್ಲಿ ಈ ವರಪ್ರದಾನವು ತಪ್ಪಾಗುತ್ತದೆಂದು ಅಭಿಪ್ರಾಯ. ಆದರೂ ಸಹ ವಿಷ್ಣುವೇ ಪ್ರತಿಪಾದ್ಯನಾಗಲಿ ಎಂಬ ಪ್ರಶ್ನೆಗೆ 'ನಚ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಪುರಾಣಾದಿಗಳಲ್ಲಿ ದೇವೇಂದ್ರನಲ್ಲಿಯೇ ಇಂದ್ರಶಬ್ದವು ಪ್ರಸಿದ್ಧವಾಗಿದೆಯೆಂದು ಇದರ ಅಭಿಪ್ರಾಯ.

ಹೀಗೆ ಹೇಳಿದ್ದರಿಂದ 'ನ ವಕ್ತುಃ' ಎಂಬ ಸೂತ್ರದ ಪೂರ್ವಪಕ್ಷಭಾಗದ ಟೀಕೆಯನ್ನು ವ್ಯಾಖ್ಯಾನಿಸಿದಂತಾಯಿತು. ಮುಂದೆ 'ನ ಚಾಸ್ಯೋಪದೇಶಸ್ಯ ಸಾವಕಾಶತ್ವಂ ವಾಽಸ್ತಿ' ಇಂದ್ರನ ಉಪದೇಶಕ್ಕೆ ಸಾವಕಾಶವನ್ನು ಹೇಳಬಾರದು ಎಂಬ ಟೀಕೆಯ ವಾಕ್ಯವನ್ನು ವ್ಯಾಖ್ಯಾನಿಸುವವರಾಗಿ ಇಂದ್ರಶ್ರುತಿಯು ನಿರವಕಾಶವಾಗಿದೆಯೆಂದು 'ನಾಪಿ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः –** विष्णौ योगो हि चतुर्धा, तदभेदेन वा, भेदेऽपि विभक्तिविपरिणामेन मयि प्राणोऽस्तीत्यर्थकथनेन वा, मञ्चस्थपुरुषाभिप्रायेण मञ्चाः क्रोशन्तीतिवत् स्वान्तर्याम्यभिप्रायेण लक्षणया वा, अन्तर्यामिणि मुख्यत्वेन वा ?

नाद्यः, अन्तरधिकरणे इन्द्राद्यभेदस्य निरस्तत्वात् । "पृथक्" इत्यत्र निरसिष्यमाणत्वाच्च द्वितीयं निरस्यति **नचेति** ॥ 'अस्मि' इत्यस्यास्तीत्यर्थ इत्यपि ग्राह्यम् ॥ **विभक्तीति** ॥ इन्द्रपरत्वेनोपपत्तौ व्यत्ययादेरयोगादिति भावः । तृतीयं निरस्यति – **अन्तर्यामीति** ॥ चतुर्थमाशङ्क्याह – **नचेति** ॥ "ब्रह्म वा इदमग्र आसीत्" इति प्रकृतं ब्रह्म 'तत्' इति परामृश्यते । अहं ब्रह्मास्मीत्यवेदित्यर्थः।

**अहं कृत्स्नस्य जगतः प्रभवः प्रलयस्तथा ।**
**मत्तः परतरं नान्यत्किञ्चिदस्ति धनञ्जय ।**
**विष्टभ्याहमिदं कृत्स्नं एकांशेन स्थितो जगत् ॥**

इत्यादौ भगवत्प्रयुक्ताहंशब्दस्यापि तदन्तर्यामिबोधकत्वप्रसङ्ग इत्यर्थः । एतेन **"प्राणो वा अहमस्म्यृषे"** इति श्रुतिः' इति सुधावाक्यं च विवृतम् ।

ವಿಷ್ಣುವಿನಲ್ಲಿ ಇಂದ್ರಾದಿಶಬ್ದಗಳ ಯೋಗಗಳನ್ನು ನಾಲ್ಕು ಬಗೆಯಲ್ಲಿ ಹೇಳಬಹುದು -

೧) ಇಂದ್ರಾದಿಗಳಿಗೂ ವಿಷ್ಣುವಿಗೂ ಅಭೇದ ಇರುವುದರಿಂದ.

೨) ಭೇದವಿದ್ದರೂ 'ಅಹಂ'ಶಬ್ದವನ್ನು 'ಮಯಿ' ಎಂದು ವಿಭಕ್ತಿವಿಪರಿಣಾಮ ಮಾಡುವುದರಿಂದ.

೩) ಮಂಚದಲ್ಲಿರುವ ಪುರುಷರನ್ನು ವಿವಕ್ಷಿಸಿ 'ಮಂಚಾಃ ಕ್ರೋಶಂತಿ' ಎಂದು ಹೇಳುವಂತೆ ತನ್ನ ಅಂತರ್ಯಾಮಿಯನ್ನು ವಿವಕ್ಷಿಸಿ ಇಂದ್ರಶಬ್ದಕ್ಕೆ ವಿಷ್ಣುವಿನಲ್ಲಿ ಲಕ್ಷಣಾ ಮಾಡುವುದರಿಂದ.

೪) ಅಂತರ್ಯಾಮಿಯಲ್ಲಿ ಇಂದ್ರಶಬ್ದಕ್ಕೆ ಮುಖ್ಯಾರ್ಥವನ್ನು ಹೇಳುವುದರಿಂದ ಇಂದ್ರಾದಿ ಶಬ್ದಗಳ ಪ್ರತಿಪಾದ್ಯತ್ವವನ್ನು ವಿಷ್ಣುವಿನಲ್ಲೇ ಸಮರ್ಥಿಸಬಹುದು.

ಇವುಗಳಲ್ಲಿ ಮೊದಲನೇ ಪಕ್ಷವು ತಪ್ಪು. ಏಕೆಂದರೆ ಅಂತರಧಿಕರಣದಲ್ಲಿ ಇಂದ್ರಾದಿಗಳಿಗೂ ವಿಷ್ಣುವಿಗೆ ಅಭೇದವಿಲ್ಲವೆಂದು ಸಮರ್ಥಿಸಿದ್ದಾಗಿದೆ. ಮುಂದೆಯೂ ಸಹ ಪೃಥಗುಪದೇಶಾತ್ ಎಂಬಲ್ಲಿ ನಿರಾಕರಿಸುತ್ತಾರೆ. ಎರಡನೆಯ ಪಕ್ಷವನ್ನು 'ನಚ' ಇತ್ಯಾದಿ ವಾಕ್ಯದಿಂದ ನಿರಾಕರಿಸಿದ್ದಾರೆ. 'ಅಸ್ಮಿ' ಎಂಬುದಕ್ಕೆ 'ಅಸ್ತಿ' ಎಂಬರ್ಥವನ್ನೂ ಸ್ವೀಕರಿಸಬೇಕು. 'ಅಹಂ' ಶಬ್ದಕ್ಕೆ ದೇವೇಂದ್ರ ಎಂಬರ್ಥವನ್ನು ಹೇಳಿದಾಗ 'ಮಯಿ' ಎಂದು ವಿಭಕ್ತಿಯನ್ನು ವ್ಯತ್ಯಾಸ ಮಾಡಬೇಕಾಗಿಲ್ಲ. ಮೂರನೆಯ ಪಕ್ಷವನ್ನು 'ಅಂತರ್ಯಾಮಿ' ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಅಂದರೆ ಲಕ್ಷಣಾ ಮಾಡುವುದೇ ತಪ್ಪೆಂದು ಅಭಿಪ್ರಾಯ. ನಾಲ್ಕನೆಯ ಪಕ್ಷವನ್ನು 'ನಚ' ಎಂಬ ವಾಕ್ಯದಿಂದ ನಿರಾಕರಿಸಿದ್ದಾರೆ.

'ಬ್ರಹ್ಮವೇದಮಗ್ರ ಆಸೀತ್' ಎಂಬಲ್ಲಿ ಪ್ರಸಕ್ತನಾದ ಬ್ರಹ್ಮನನ್ನೇ 'ತದಾತ್ಮಾಂ' ಎಂಬಲ್ಲಿರುವ 'ತತ್' ಶಬ್ದದಿಂದ ಪರಾಮರ್ಶಿಸಲಾಗಿದೆ. ಒಂದು ವೇಳೆ 'ಅಹಂ' ಶಬ್ದಕ್ಕೆ 'ಅಂತರ್ಯಾಮಿ' ಎಂಬರ್ಥದಲ್ಲಿ ಮುಖ್ಯತ್ವವನ್ನು ಹೇಳಿದರೆ -

ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ।
ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ।
ವಿಷ್ಟಭ್ಯಾಹಮಿದಂ ಕೃತ್ಸ್ನಂ ಏಕಾಂಶೇನ ಸ್ಥಿತೋ ಜಗತ್ ॥

ಇತ್ಯಾದಿ ಸ್ಥಳಗಳಲ್ಲಿ ಭಗವಂತನಿಂದಲೇ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದಕ್ಕೂ ಸಹ ಅಂತರ್ಯಾಮಿ ಎಂಬರ್ಥವನ್ನು ಮಾಡುವ ಪ್ರಸಂಗ ಬರುತ್ತದೆ. ಹೀಗೆ ಹೇಳಿದ್ದರಿಂದ 'ಪ್ರಾಣೋ ವಾ ಅಹಮಸ್ಮೃಷೇ' ಇತಿ ಶ್ರುತಿಃ' ಎಂಬ ಸುಧಾವಾಕ್ಯವನ್ನು ವ್ಯಾಖ್ಯಾನಿಸಿದಂತಾಯಿತು.

**गुरुराजीयम्** – ननु च दृष्टान्तदार्ष्टान्तिकयोर्वैषम्यम् । दृष्टान्ते ह्याग्नेयादियागषट्कप्रसिद्धाया दर्शपूर्णमासश्रुतेः सत्त्वेन तदनुसारेण यजेः षड्यागमात्रपरत्ववत् प्रकृते विष्णौ प्रवृत्तप्रबलश्रुत्यभावेन तदनुसारेण लिङ्गानां विष्णुपरताया असम्भवादित्यत आह – **उक्तश्चेति** ॥

## ಸಾರ

ಪ್ರಾಣಶಬ್ದದಿಂದ ಇಂದ್ರನಾಗಲಿ, ಮುಖ್ಯಪ್ರಾಣನಾಗಲಿ ಅಥವಾ ಜೀವನಾಗಲಿ ವಾಚ್ಯರಾಗಬಹುದು. ಇವರಲ್ಲೆಲ್ಲಾ ಪ್ರಸಿದ್ಧವಾದ ಲಿಂಗಗಳು ಹಾಗೂ ಶ್ರುತಿಗಳು ನಿರವಕಾಶಗಳಾದ್ದರಿಂದ ಪೂರ್ವಪಕ್ಷವು ಹುಟ್ಟುತ್ತದೆ.

ಅಂತಿಮಪ್ರಾಣಾಧಿಕರಣ-(೧।೧।೧೨)

'ತಮಿಂದ್ರ ಉವಾಚ' ಎಂಬಲ್ಲಿ ಒಂದು ವೇಳೆ ವಿಷ್ಣು ಇಂದ್ರಶಬ್ದದಿಂದ ಪ್ರತಿಪಾದ್ಯನಾಗಿ ಯಜಮಾನನಾಗುವುದಿಲ್ಲ. ಏಕೆಂದರೆ ಶಸ್ತ್ರವನ್ನು ಶಂಸನ ಮಾಡುವ ಋತ್ವಿಕ್ ಎನಿಸಿದ ವಿಶ್ವಾಮಿತ್ರನನ್ನು ಕುರಿತು ''ಪ್ರಾಣೋ ವಾ ಅಹಂ'' ಇತ್ಯಾದಿಯಾಗಿ ದೇವೇಂದ್ರನು ಉಪದೇಶ ಎಂಬ ವರವನ್ನು ನೀಡುತ್ತಾನೆ. ವಿಷ್ಣುವು ಯಜಮಾನನಾದಲ್ಲಿ ಈ ವರಪ್ರದಾನವು ತಪ್ಪಾಗುತ್ತದೆಂದು ಅಭಿಪ್ರಾಯ. ಆದರೂ ಸಹ ವಿಷ್ಣುವೇ ಪ್ರತಿಪಾದ್ಯನಾಗಲಿ ಎಂಬ ಪ್ರಶ್ನೆಗೆ 'ನಚ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಪುರಾಣಾದಿಗಳಲ್ಲಿ ದೇವೇಂದ್ರನಲ್ಲಿಯೇ ಇಂದ್ರಶಬ್ದವು ಪ್ರಸಿದ್ಧವಾಗಿದೆಯೆಂದು ಇದರ ಅಭಿಪ್ರಾಯ.

ಹೀಗೆ ಹೇಳಿದ್ದರಿಂದ 'ನ ವಕ್ತುಃ' ಎಂಬ ಸೂತ್ರದ ಪೂರ್ವಪಕ್ಷಭಾಗದ ಟೀಕೆಯನ್ನು ವ್ಯಾಖ್ಯಾನಿಸಿದಂತಾಯಿತು. ಮುಂದೆ 'ನ ಚಾಸ್ಯೋಪದೇಶಸ್ಯ ಸಾವಕಾಶತ್ವಂ ವಾಽಸ್ತಿ' ಇಂದ್ರನ ಉಪದೇಶಕ್ಕೆ ಸಾವಕಾಶವನ್ನು ಹೇಳಬಾರದು ಎಂಬ ಟೀಕೆಯ ವಾಕ್ಯವನ್ನು ವ್ಯಾಖ್ಯಾನಿಸುವವರಾಗಿ ಇಂದ್ರಶ್ರುತಿಯು ನಿರವಕಾಶವಾಗಿದೆಯೆಂದು 'ನಾಪಿ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः –** विष्णौ योगो हि चतुर्धा, तदभेदेन वा, भेदेऽपि विभक्तिविपरिणामेन मयि प्राणोऽस्तीत्यर्थकथनेन वा, मञ्चस्थपुरुषाभिप्रायेण मञ्चाः क्रोशन्तीतिवत् स्वान्तर्याम्यभिप्रायेण लक्षणया वा, अन्तर्यामिणि मुख्यत्वेन वा ?

नाद्यः, अन्तरधिकरणे इन्द्राद्यभेदस्य निरस्तत्वात् । ''पृथक्'' इत्यत्र निरसिष्यमाणत्वाच्च द्वितीयं निरस्यति **नचेति** ॥ 'अस्मि' इत्यस्यास्तीत्यर्थ इत्यपि ग्राह्यम् ॥ **विभक्तीति** ॥ इन्द्रपरत्वेनोपपत्तौ व्यत्ययादेरयोगादिति भावः । तृतीयं निरस्यति – **अन्तर्यामीति** ॥ चतुर्थमाशङ्क्याह – **नचेति** ॥ ''ब्रह्म वा इदमग्र आसीत्'' इति प्रकृतं ब्रह्म 'तत्' इति परामृश्यते । अहं ब्रह्मास्मीत्यवेदित्यर्थः।

**अहं कृत्स्नस्य जगतः प्रभवः प्रलयस्तथा ।**
**मत्तः परतरं नान्यत्किञ्चिदस्ति धनञ्जय ।**
**विष्टभ्याहमिदं कृत्स्नं एकांशेन स्थितो जगत् ॥**

इत्यादौ भगवत्प्रयुक्ताहंशब्दस्यापि तदन्तर्यामिबोधकत्वप्रसङ्ग इत्यर्थः । एतेन **''प्राणो वा अहमस्म्यृषे'' इति श्रुतिः'** इति सुधावाक्यं च विवृतम् ।

ವಿಷ್ಣುವಿನಲ್ಲಿ ಇಂದ್ರಾದಿಶಬ್ದಗಳ ಯೋಗಗಳನ್ನು ನಾಲ್ಕು ಬಗೆಯಲ್ಲಿ ಹೇಳಬಹುದು -

೧) ಇಂದ್ರಾದಿಗಳಿಗೂ ವಿಷ್ಣುವಿಗೂ ಅಭೇದ ಇರುವುದರಿಂದ.

೨) ಭೇದವಿದ್ದರೂ 'ಅಹಂ'ಶಬ್ದವನ್ನು 'ಮಯಿ' ಎಂದು ವಿಭಕ್ತಿವಿಪರಿಣಾಮ ಮಾಡುವುದರಿಂದ.

೩) ಮಂಚದಲ್ಲಿರುವ ಪುರುಷರನ್ನು ವಿವಕ್ಷಿಸಿ 'ಮಂಚಾಃ ಕ್ರೋಶಂತಿ' ಎಂದು ಹೇಳುವಂತೆ ತನ್ನ ಅಂತರ್ಯಾಮಿಯನ್ನು ವಿವಕ್ಷಿಸಿ ಇಂದ್ರಶಬ್ದಕ್ಕೆ ವಿಷ್ಣುವಿನಲ್ಲಿ ಲಕ್ಷಣಾ ಮಾಡುವುದರಿಂದ.

೪) ಅಂತರ್ಯಾಮಿಯಲ್ಲಿ ಇಂದ್ರಶಬ್ದಕ್ಕೆ ಮುಖ್ಯಾರ್ಥವನ್ನು ಹೇಳುವುದರಿಂದ ಇಂದ್ರಾದಿ ಶಬ್ದಗಳ ಪ್ರತಿಪಾದ್ಯತ್ವವನ್ನು ವಿಷ್ಣುವಿನಲ್ಲೇ ಸಮರ್ಥಿಸಬಹುದು.

ಇವುಗಳಲ್ಲಿ ಮೊದಲನೇ ಪಕ್ಷವು ತಪ್ಪು. ಏಕೆಂದರೆ ಅಂತರಧಿಕರಣದಲ್ಲಿ ಇಂದ್ರಾದಿಗಳಿಗೂ ವಿಷ್ಣುವಿಗೆ ಅಭೇದವಿಲ್ಲವೆಂದು ಸಮರ್ಥಿಸಿದ್ದಾಗಿದೆ. ಮುಂದೆಯೂ ಸಹ ಪೃಥಗುಪದೇಶಾತ್ ಎಂಬಲ್ಲಿ ನಿರಾಕರಿಸುತ್ತಾರೆ. ಎರಡನೆಯ ಪಕ್ಷವನ್ನು 'ನಚ' ಇತ್ಯಾದಿ ವಾಕ್ಯದಿಂದ ನಿರಾಕರಿಸಿದ್ದಾರೆ. 'ಅಸ್ಮಿ' ಎಂಬುದಕ್ಕೆ 'ಅಸ್ತಿ' ಎಂಬರ್ಥವನ್ನೂ ಸ್ವೀಕರಿಸಬೇಕು. 'ಅಹಂ' ಶಬ್ದಕ್ಕೆ ದೇವೇಂದ್ರ ಎಂಬರ್ಥವನ್ನು ಹೇಳಿದಾಗ 'ಮಯಿ' ಎಂದು ವಿಭಕ್ತಿಯನ್ನು ವ್ಯತ್ಯಾಸ ಮಾಡಬೇಕಾಗಿಲ್ಲ. ಮೂರನೆಯ ಪಕ್ಷವನ್ನು 'ಅಂತರ್ಯಾಮಿ' ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಅಂದರೆ ಲಕ್ಷಣಾ ಮಾಡುವುದೇ ತಪ್ಪೆಂದು ಅಭಿಪ್ರಾಯ. ನಾಲ್ಕನೆಯ ಪಕ್ಷವನ್ನು 'ನಚ' ಎಂಬ ವಾಕ್ಯದಿಂದ ನಿರಾಕರಿಸಿದ್ದಾರೆ.

'ಬ್ರಹ್ಮವೇದಮಗ್ರ ಆಸೀತ್' ಎಂಬಲ್ಲಿ ಪ್ರಸಕ್ತನಾದ ಬ್ರಹ್ಮನನ್ನೇ 'ತದಾತ್ಮಾಂ' ಎಂಬಲ್ಲಿರುವ 'ತತ್' ಶಬ್ದದಿಂದ ಪರಾಮರ್ಶಿಸಲಾಗಿದೆ. ಒಂದು ವೇಳೆ 'ಅಹಂ' ಶಬ್ದಕ್ಕೆ 'ಅಂತರ್ಯಾಮಿ' ಎಂಬರ್ಥದಲ್ಲಿ ಮುಖ್ಯತ್ವವನ್ನು ಹೇಳಿದರೆ -

> ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ।
> ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ।
> ವಿಷ್ಟಭ್ಯಾಹಮಿದಂ ಕೃತ್ಸ್ನಂ ಏಕಾಂಶೇನ ಸ್ಥಿತೋ ಜಗತ್ ॥

ಇತ್ಯಾದಿ ಸ್ಥಳಗಳಲ್ಲಿ ಭಗವಂತನಿಂದಲೇ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದಕ್ಕೂ ಸಹ ಅಂತರ್ಯಾಮಿ ಎಂಬರ್ಥವನ್ನು ಮಾಡುವ ಪ್ರಸಂಗ ಬರುತ್ತದೆ. ಹೀಗೆ ಹೇಳಿದ್ದರಿಂದ 'ಪ್ರಾಣೋ ವಾ ಅಹಮಸ್ಮೃಷೇ' ಇತಿ ಶ್ರುತಿಃ' ಎಂಬ ಸುಧಾವಾಕ್ಯವನ್ನು ವ್ಯಾಖ್ಯಾನಿಸಿದಂತಾಯಿತು.

**गुरुराजीयम्** – ननु च दृष्टान्तदार्ष्टान्तिकयोर्वैषम्यम् । दृष्टान्ते ह्याग्नेयादि-यागषट्कप्रसिद्धाया दर्शपूर्णमासश्रुतेः सत्त्वेन तदनुसारेण यजेः षड्यागमात्रपरत्ववत् प्रकृते विष्णौ प्रवृत्तप्रबलश्रुत्यभावेन तदनुसारेण लिङ्गानां विष्णुपरताया असम्भवा-दित्यत आह – उक्तश्चेति ॥

## ಸಾರ

ಪ್ರಾಣಶಬ್ದದಿಂದ ಇಂದ್ರನಾಗಲಿ, ಮುಖ್ಯಪ್ರಾಣನಾಗಲಿ ಅಥವಾ ಜೀವನಾಗಲಿ ವಾಚ್ಯರಾಗಬಹುದು. ಇವರಲ್ಲೆಲ್ಲಾ ಪ್ರಸಿದ್ಧವಾದ ಲಿಂಗಗಳು ಹಾಗೂ ಶ್ರುತಿಗಳು ನಿರವಕಾಶಗಳಾದ್ದರಿಂದ ಪೂರ್ವಪಕ್ಷವು ಹುಟ್ಟುತ್ತದೆ.

ಅಂತಿಮಪ್ರಾಣಾಧಿಕರಣ-(೧।೧।೧೨)

ದೇವೇಂದ್ರನಲ್ಲಿ ವೃತ್ರಹಂತೃತ್ವ, ಮಹಾವ್ರತಯಾಜಿತ್ವ ಮೊದಲಾದ ಅಸಾಧಾರಣ ಧರ್ಮಗಳಿವೆ. ಮತ್ತು 'ಪ್ರಾಣೋ ವಾ ಅಹಂ' ಎಂಬ ಶ್ರುತಿಯೂ ಪ್ರಸಿದ್ಧವಾಗಿವೆ. ಇವುಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲು ಸಾಧ್ಯವಿಲ್ಲ. ಅಂತರ್ಯಾಮಿ ವಿವಕ್ಷೆಯಿಂದ ಇವುಗಳನ್ನು ವಿಷ್ಣುವಿನಲ್ಲಿ ಹೇಳಬಹುದೆಂಬ ಒಂದು ಅವಕಾಶವಿದೆ. ಆದರೆ ಒಂದು ವೇಳೆ 'ಅಹಂ' ಶಬ್ದಕ್ಕೆ 'ಅಂತರ್ಯಾಮಿ' ಎಂಬರ್ಥವನ್ನು ಹೇಳಿದರೆ ವಿಷ್ಣುವೇ ಸ್ವತಃ ಯಾವ ವಾಕ್ಯಗಳಲ್ಲಿ 'ಅಹಂ' ಶಬ್ದವನ್ನು ಪ್ರಯೋಗಿಸಿದ್ದಾನೋ ಅಂತಹ ಸ್ಥಳಗಳಲ್ಲಿಯೂ ವಿಷ್ಣುವಿನ ಅಂತರ್ಯಾಮಿ ಯಾರೋ ಒಬ್ಬನನ್ನು ಹೇಳಬೇಕಾಗುವ ಪ್ರಸಂಗ ಬರುತ್ತದೆ. ಆದ್ದರಿಂದ ಇಂದ್ರನಲ್ಲಿ ಪ್ರಸಿದ್ಧವಾದ ಲಿಂಗಗಳನ್ನು ಮತ್ತು ಶ್ರುತಿಗಳನ್ನು ವಿಷ್ಣುವಿನಲ್ಲಿ ಸಾವಕಾಶ ಮಾಡಲು ಸಾಧ್ಯವಿಲ್ಲ.

* * * *

## ಮುಖ್ಯವಾಯುವೇ ಪ್ರಾಣಶಬ್ದವಾಚ್ಯನೆಂದು ಪೂರ್ವಪಕ್ಷ

तात्पर्यचन्द्रिका

**यथा च "वत्समालभेत" इत्यत्र आलम्भनं गुणकर्मभूतगोदोहनादि- साहचर्यात् गुणकर्म, तथा प्राणोऽप्यप्रधानचक्षुरादि साहचर्यादप्रधानभूतः, नतु प्रधानभूतं ब्रह्म । चक्षुरादिभिश्चातिनिकृष्टैः सर्वोत्कृष्टस्य ब्रह्मणः कलहोऽप्ययुक्तः ।**

ಅನುವಾದ - ಪ್ರಾಣಶಬ್ದದಿಂದ ಮುಖ್ಯವಾಯುವು ಪ್ರತಿಪಾದ್ಯವೆಂಬ ಪೂರ್ವಪಕ್ಷವು ಹುಟ್ಟಬಹುದು. ಯಾವ ರೀತಿಯಾಗಿ "ವತ್ಸಮಾಲಭೇತ" ಎಂಬಲ್ಲಿ ಆಲಂಭನವು ಗುಣಕರ್ಮಭೂತವಾದ ಗೋದೋಹನಾದಿ ಸಾಹಚರ್ಯದಿಂದ ಗುಣಕರ್ಮವನ್ನೇ ಹೇಳುತ್ತದೋ ಅದರಂತೆ "ಪ್ರಾಣೋ ವಾ ಅಹಂ" ಎಂಬಲ್ಲಿರುವ ಪ್ರಾಣಶಬ್ದವೂ ಸಹ ಚಕ್ಷುರಿಂದ್ರಿಯಾದಿಸಾಹಚರ್ಯದಿಂದ ಅಪ್ರಧಾನವಾದ ಪ್ರಾಣವಾಯುವನ್ನೇ ಹೇಳುತ್ತದೆ ಹೊರತು ಪ್ರಧಾನಭೂತನಾದ ಬ್ರಹ್ಮನನ್ನು ಹೇಳುವುದಿಲ್ಲ. ಅತ್ಯಂತ ನಿಕೃಷ್ಟವಾದ ಚಕ್ಷುರಿಂದ್ರಿಯದ ಜೊತೆಗೆ ಪರಬ್ರಹ್ಮನ ಕಲಹವು ಅಯುಕ್ತವಾಗುತ್ತದೆ.

ಅತ್ಯಂತ ನಿಕೃಷ್ಟವಾದ ಚಕ್ಷುರಾದಿಇಂದ್ರಿಯಗಳ ಜೊತೆಗೆ ಅತ್ಯಂತಶ್ರೇಷ್ಠನಾದ ಪರಮಾತ್ಮನು ಕಲಹ ಮಾಡಲು ಸಾಧ್ಯವಿಲ್ಲ. ಆದ್ದರಿಂದಲೂ ಪ್ರಾಣಶಬ್ದದಿಂದ ಬ್ರಹ್ಮನನ್ನು ಪ್ರತಿಪಾದ್ಯನೆನ್ನಬಾರದು. ಹೊರತಾಗಿ ಮುಖ್ಯವಾಯುವೇ ಪ್ರತಿಪಾದ್ಯನೆನ್ನಬೇಕು.

**प्रकाशः –** एवमिन्द्रप्रापकश्रुतिलिङ्गयोर्निरवकाशत्वेनेन्द्रप्राप्तिमुक्त्वा वायुप्राप्तिं दृष्टान्तपूर्वमाह – **यथा चेत्यादिना ॥** प्राणशब्दस्य विष्णुवायुसाधारणस्य साहचर्य- मात्रात्कथमवधारणमित्यत उक्तम् – **यथा च वत्समिति ॥**

द्वितीये "विशये प्रायदर्शनात्" इति तृतीयपादीयषष्ठाधिकरणे अग्निहोत्रगो- दोहाधिकारे "वत्समालभेत" इति श्रुतं वाक्यमुदाहृत्य 'आलभेत' इति यागविधिः

उत संस्कारविधिरिति विशये, ''वायव्यं श्वेतमालभेत'' इत्यादाविवासत्यपि देवतासंयोगे प्राणिद्रव्यालम्भत्वसामान्याद्यागविधिरिति पूर्वपक्षयित्वा, आलम्भस्य स्पर्शमात्रत्वात्तस्य च लोकेऽपि दृष्टत्वेन यागं विनाऽनुपपत्त्यभावात् गुणकर्मभूत-गोदोहप्रायपाठदर्शनाद्वत्ससंस्काराख्यं गुणकर्मैव चोद्यत इति सिद्धान्तितम् ।

तद्वदत्राऽपि प्राणो विष्णुरन्यो वेति विशये, चक्षुरादिप्रायपाठादप्रधानो मुख्यप्राण एव भवेदित्यर्थः । अत एव वैयाकरणैस्साहचर्यं धर्मग्राहकमिति वदद्भिः ''सर्तिशास्त्यर्तिभ्यश्च'' इत्यत्र परस्मैपदिसाहचर्याच्छास्तेः परस्मैपदिन एव ग्रहण-मित्युक्तम् । अप्रधानप्रधानपदे हेतुगर्भे । एतेन ''एतत्प्राणस्येन्द्रियगणे गणितत्वात्'' दिति टीका विवृता ।

**चक्षुरादिभिरिति** ॥ ''ता अहिंसन्त । अहमुक्थमस्म्यहमुक्थमस्मि'' इत्यादिनोक्त इत्यर्थः ।

ವಿವರಣೆ - ಇಲ್ಲಿಯ ತನಕ ಇಂದ್ರಾದಿ ಪ್ರಾಪಕವಾದ ಶ್ರುತಿಲಿಂಗಗಳಿಗೆ ನಿರವಕಾಶತ್ವವನ್ನು ಸಮರ್ಥಿಸಿ ಪೂರ್ವಪಕ್ಷವನ್ನು ಮಾಡಿದ್ದಾಯಿತು. ಮುಂದೆ ವಾಯುಪ್ರಾಪಕವಾದ ಶ್ರುತಿಲಿಂಗಗಳನ್ನು ನಿರವಕಾಶಗಳೆಂದು ಸಮರ್ಥಿಸುವುದಕ್ಕಾಗಿ ದೃಷ್ಟಾಂತವನ್ನು 'ಯಥಾ ಚ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ಪ್ರಾಣಶಬ್ದವು ವಿಷ್ಣು ಹಾಗೂ ವಾಯು ಇಬ್ಬರಲ್ಲಿಯೂ ಸಾಧಾರಣವಾಗಿ ಪ್ರಸಿದ್ಧವಾಗಿವೆ. ಹೀಗಿರುವಾಗ ಕೇವಲ ಸಾಹಚರ್ಯದಿಂದ ವಾಯುವೇ ಪ್ರಾಣಶಬ್ದವಾಚ್ಯನೆಂದು ಹೇಗೆ ನಿರ್ಣಯಿಸುತ್ತೀರಿ? ಎಂಬ ಪ್ರಶ್ನೆಗೆ 'ಯಥಾ ಚ' ಎಂಬ ವಾಕ್ಯದಿಂದ ಪೂರ್ವಮೀಮಾಂಸೆಯ ದೃಷ್ಟಾಂತವನ್ನು ನೀಡುತ್ತಿದ್ದಾರೆ.

ವಿಶಯೇ ಪ್ರಾಯದರ್ಶನಾತ್ (೨-೩-೬)

ಅಗ್ನಿಹೋತ್ರಪ್ರಸಂಗದಲ್ಲಿ ಗೋದೋಹನವನ್ನು ಮಾಡಬೇಕು. ಆ ಸಂದರ್ಭದಲ್ಲಿ ವತ್ಸಮಾಲಭೇತ ಎಂಬ ವಾಕ್ಯವು ಶ್ರುತವಾಗಿದೆ. ಇಲ್ಲಿ ಕೇಳಿಸುತ್ತಿರುವ ಆಲಭೇತ ಎಂಬ ಪದವು ಯಾಗವನ್ನು ವಿಧಿಸುತ್ತಿದೆಯೋ? ಅಥವಾ ಸಂಸ್ಕಾರವನ್ನು ವಿಧಿಸುತ್ತಿದೆಯೋ? ಎಂದು ಸಂಶಯ.

ಪೂರ್ವಪಕ್ಷ - 'ಆಲಭೇತ' ಎಂಬ ಪದವು ಸಂಸ್ಕಾರ ವಿಧಾಯಕವಾಗಿದೆ. 'ವಾಯವ್ಯಂ ಶ್ವೇತ-ಮಾಲಭೇತ' ಎಂಬಲ್ಲಿಯೂ 'ಆಲಭೇತ' ಎಂಬ ಪದವಿದೆ. ಅಲ್ಲಿರುವ 'ಆಲಭೇತ' ಎಂಬ ಪದವು ವಾಯುದೇವತಾಕವಾದ ಯಾಗವನ್ನು ವಿಧಿಸುತ್ತಿದೆ. ಆದರಂತೆ ಇಲ್ಲಿಯೂ 'ಆಲಭೇತ' ಎಂಬ ಪದವು ಯಾಗವಿಧಾಯಕವೇ ಆಗಬೇಕು. ಒಂದು ಮಾತ್ರ ವ್ಯತ್ಯಾಸ - ಅಲ್ಲಿ ವಾಯು ಎಂಬ ದೇವತಾವಾಚಕ ಪದವಿದೆ. ಇಲ್ಲಿ ಅಂತಹ ಪದ ಕೇಳಿಸುತ್ತಿಲ್ಲ. ಆದರೆ ಪ್ರಾಣಿದ್ರವ್ಯದ ಆಲಂಭನವು ಎರಡೂ ಕಡೆ ಸಮಾನವಾದ್ದರಿಂದ ಯಾಗವಿಧಾಯಕವೆಂದು ಹೇಳಬಹುದು.

ಸಿದ್ಧಾಂತ - 'ವತ್ಸಮಾಲಭೇತ' ಎಂಬಲ್ಲಿರುವ ಆಲಂಭ ಶಬ್ದವು ಕೇವಲ ಕರುವಿನ ಸ್ಪರ್ಶವನ್ನಷ್ಟೇ ಹೇಳುತ್ತಿದೆ. ಕರುವನ್ನು ಪ್ರೀತಿಯಿಂದ ಮುಟ್ಟುವುದು ಲೋಕದಲ್ಲಿಯೂ ಕಂಡಿರುತ್ತದೆ. ಆದ್ದರಿಂದ ಯಾಗವಿಧಾಯಕವೆಂದು ಒಪ್ಪದಿದ್ದರೆ 'ವತ್ಸಮಾಲಭೇತ' ಎಂಬ ವಾಕ್ಯವೇ ಅನುಪಪನ್ನವಾಗುತ್ತದೆಂಬ ಸ್ಥಿತಿಯಿಲ್ಲ. ಆದ್ದರಿಂದ ಗೋದೋಹ (ಹಾಲು ಕರೆಯುವಿಕೆ ಎಂಬ) ಗುಣಕರ್ಮದ ಸಾಹಚರ್ಯವು ಆಲಂಭನಕ್ಕಿರುತ್ತದೆ. ಹಾಲು ಕರೆಯುವಿಕೆ ಎಂಬುದು ಸಂಸ್ಕಾರವಾದಂತೆ ಕರುವನ್ನು ಸ್ಪರ್ಶಿಸುವುದೂ ಗುಣಕರ್ಮವೆಂಬ ಸಂಸ್ಕಾರರೂಪವೇ ಆಗಿದೆ. ಆದ್ದರಿಂದ ಅಗ್ನಿಹೋತ್ರ ಪ್ರಕರಣದಲ್ಲಿ ಹಾಲನ್ನು ಕರೆಯುವಾಗ ಕರುವಿಗೆ ಹಾಲನ್ನು ಕುಡಿಸುವ ಮೂಲಕ ಸಂಸ್ಕಾರ ಮಾಡಬೇಕೆಂದು ತಿಳಿಯಬೇಕು.

ಪೂರ್ವಮೀಮಾಂಸೆಯ ಈ ಅಧಿಕರಣದಲ್ಲಿ ಗುಣಕರ್ಮಭೂತವಾದ ಗೋದೋಹನದ ಸಾಹಚರ್ಯವು ಆಲಂಭನಕ್ಕಿರುವುದರಿಂದ ಆಲಂಭನವೂ ಸಹ ಗುಣಕರ್ಮವಾಗಿದೆ ಎಂದು ನಿರ್ಣಯಿಸಲಾಗಿದೆ. ಇದರಿಂದ ಮೀಮಾಂಸಕರು ಸಾಹಚರ್ಯವನ್ನು ಪ್ರಮಾಣವೆಂಬುದಾಗಿ ಅಂಗೀ-ಕರಿಸಿದ್ದಾರೆ ಅದರಂತೆ ಪ್ರಕೃತದಲ್ಲಿಯೂ ಪ್ರಾಣಶಬ್ದವಾಚ್ಯನಾದವನು ವಿಷ್ಣುವೋ? ಅಥವಾ ಬೇರೆಯವರೋ? ಎಂದು ಸಂಶಯ ಬಂದಾಗ ಅಪ್ರಧಾನರಾದ ಚಕ್ಷುರಾದಿ ಇಂದ್ರಿಯಗಳ ಜೊತೆಗೆ ಪ್ರಾಣಪದವನ್ನು ಹೇಳಿದ್ದರಿಂದ ಅಪ್ರಧಾನವಾದ ಮುಖ್ಯವಾಯುವೇ ಸಾಹಚರ್ಯಪ್ರಮಾಣದಿಂದ ಸ್ವೀಕರಿಸಬೇಕೆಂದು ತಿಳಿಯುತ್ತದೆ.

ಮೀಮಾಂಸಕರು ಮಾತ್ರವಲ್ಲ ವೈಯ್ಯಾಕರಣರೂ ಸಹ ಸಾಹಚರ್ಯವನ್ನು ಪ್ರಮಾಣವೆಂದು ಅಂಗೀಕರಿಸಿದ್ದಾರೆ - 'ಸರ್ತಿಶಾಸ್ತ್ಯರ್ತಿಭ್ಯಶ್ಚ' ಎಂಬ ಸೂತ್ರದಲ್ಲಿ 'ಸೃಗತೌ' ಮತ್ತು 'ಋಗತೌ' ಈ ಎರಡು ಧಾತುಗಳು ಪರಸ್ಮೈಪದಿಯಲ್ಲಿರುತ್ತವೆ. ಈ ಎರಡು ಧಾತುಗಳ ಸಾಹಚರ್ಯ 'ಶಾಸು ಅನುಶಿಷ್ಟೌ' ಎಂಬ ಧಾತುವಿಗಿರುವುದರಿಂದ ಅದೂ ಸಹ 'ಪರಸ್ಮೈಪದಿ' ಆಗುತ್ತದೆಂದು ನಿರ್ಣಯಿಸಿದ್ದಾರೆ. ಇದರಂತೆ ಪ್ರಕೃತದಲ್ಲಿಯೂ ಅಪ್ರಧಾನದ ಜೊತೆಗೆ ಪಠಿತವಾದದ್ದೂ ಅಪ್ರಧಾನವೇ ಆಗುತ್ತದೆಂದು ತಿಳಿಯಬೇಕು. ಹೀಗೆ ಹೇಳಿದ್ದರಿಂದ ''ಏತತ್ಪ್ರಾಣಸ್ಯೇಂದ್ರಿಯಗಣೇ ಗಣಿತತ್ವಾತ್'' ಇಂದ್ರಿಯಗಳ ಸಮೂಹದಲ್ಲಿ ಈ ಪ್ರಾಣವು ಎಣಿಸಲ್ಪಟ್ಟಿದೆ ಎಂಬ ಟೀಕೆಯನ್ನು ವ್ಯಾಖ್ಯಾನಿಸಿದಂತಾಯಿತು.

''ತಾ ಅಹಿಂಸಂತ । ಅಹಮುಕ್ಥಮಸ್ಮ್ಯಹಮುಕ್ಥಮಸ್ಮಿ'' ಇತ್ಯಾದಿಯಾಗಿ ಇಂದ್ರಿಯಾದಿಭಿಮಾನಿ ದೇವತೆ-ಗಳು ಕಲಹ ಮಾಡುತ್ತಿದ್ದಾರೆಂದು ತಿಳಿಯಬೇಕು.

## ಸಾರ

ಅಥವಾ ವಾಯುವೇ ಪ್ರಾಣಶಬ್ದವಾಚ್ಯನು. ಏಕೆಂದರೆ ಚಕ್ಷುರಾದಿ ಇಂದ್ರಿಯಗಳ ಅಥವಾ ಇಂದ್ರಿಯಾ-ಭಿಮಾನಿ ದೇವತೆಗಳ ಮಧ್ಯದಲ್ಲಿ ಈ ಪ್ರಾಣಶಬ್ದವು ಹೇಳಲ್ಪಟ್ಟಿದೆ. ಚಕ್ಷುರಾದಿಗಳೆಲ್ಲವೂ ಅಪ್ರಧಾನಾದಿಗಳಾದ್ದರಿಂದ ಅವುಗಳ ಮಧ್ಯದಲ್ಲಿ ಪಠಿತವಾದ ಪ್ರಾಣವೂ ಅಪ್ರಧಾನವೇ ಆಗಬೇಕು. ಹೊರತು ಪ್ರಧಾನವಾದ ಬ್ರಹ್ಮನು ಪ್ರಾಣಶಬ್ದವಾಚ್ಯನಾಗುವುದಿಲ್ಲ. ಈ ವಿಷಯವು ಸಾಹಚರ್ಯ ಪ್ರಮಾಣದಿಂದ ಸಿದ್ಧವಾಗಿದೆ. ಸಾಹಚರ್ಯವನ್ನು ಪ್ರಮಾಣವೆಂಬುದಾಗಿ ಪೂರ್ವಮೀಮಾಂಸಕರು ಮತ್ತು ವೈಯಾಕರಣರು ಒಪ್ಪಿಕೊಂಡಿದ್ದಾರೆ.

ಪರಿಪೂರ್ಣಚಂದ್ರಿಕಾ

ಇಂದ್ರಿಯಾಭಿಮಾನಿ ದೇವತೆಗಳು ಪರಸ್ಪರ ಕಲಹ ಮಾಡುವ ಸಂದರ್ಭದಲ್ಲಿ ಪ್ರಾಣ ಶಬ್ದವು ಹೇಳಲ್ಪಟ್ಟಿದೆ. ಅತ್ಯಂತ ನಿಕೃಷ್ಟರಾದ ಇಂದ್ರಿಯಾಭಿಮಾನಿ ದೇವತೆಗಳ ಜೊತೆಗೆ ಸರ್ವೋತ್ಕೃಷ್ಟನಾದ ಬ್ರಹ್ಮನು ಕಲಹ ಮಾಡಲು ಸಾಧ್ಯವಿಲ್ಲದ ಕಾರಣ ಬ್ರಹ್ಮನು ಪ್ರಾಣಶಬ್ದ ವಾಚ್ಯನಾಗಲಾರ.

* * * *

## ಜೀವನೇ ಪ್ರಾಣಶಬ್ದವಾಚ್ಯನೆಂದು ಪೂರ್ವಪಕ್ಷ

तात्पर्यचन्द्रिका

**शतसंवत्सरत्वं तु जीवादन्यत्र न युक्तमेव ।**

**यद्यपि ''तावन्ति शतसंवत्सरस्याह्नां सहस्राणि भवन्ति'' इत्यत्र शतसंवत्सरत्वं प्राणनिष्ठं न भाति, बृहतीसहस्रवर्णानां शतसंवत्सरस्याह्नां च षट्त्रिंशत्सहस्रत्वेन सङ्ख्यासाम्यस्यैवोक्तेः । तथाऽपि ''तं शतं वर्षाण्यभ्यार्चत् तावन्ति'' इत्यत्र ''प्राणो वाव तदभ्यार्चत्'' इति प्रकृतस्य प्राणस्यान्वयात् ''तावन्ति'' इत्यत्रापि तस्यैवान्वयः । अत एव टीकायां ''प्राणो वाव तदभ्यार्चत्'' इत्यादि पूर्ववाक्यं पठितम् ।**

**नच तदन्तर्यामिणि लिङ्गानां सावकाशता, दुःखित्वादेरपि प्रसङ्गात् । अपां-नेतृत्वादिलिङ्गानामप्यन्तर्यामिगतता अत्रत्यसिद्धान्ताधीना । नच स्वातन्त्र्यादेवेश्वरे प्राणशब्दः, सति विरोधिश्रुत्यादौ तदयोगात् । नहि 'दरिद्रो भृत्यो जयी' इत्यत्र राज्ञि जयिशब्दः । तदेतदभिप्रेत्योक्तं टीकायाम् ''न चैतल्लिङ्गं विष्णाववकाशं लभते'' इति । अन्विष्याप्यवकाशं न लभत इत्यर्थः । अन्यथा 'न चैतल्लिङ्गं सावकाशम्' इत्येवावक्ष्यत् । विष्णुश्रुत्यादिकं तु इन्द्रादौ गौणम् ।**

ಅನುವಾದ - ಶತಸಂವತ್ಸರತ್ವ (ನೂರುವರ್ಷಗಳ ಜೀವನ) ಎಂಬ ಲಿಂಗವು ಜೀವನನ್ನು ಬಿಟ್ಟು ಬೇರೆಯವರಲ್ಲಿ ಬರುವುದೇ ಇಲ್ಲ. ಆದ್ದರಿಂದ ಜೀವನ ಲಿಂಗವೂ ಸಹ ನಿರವಕಾಶವಾದ್ದರಿಂದ ಜೀವನೇ ಪ್ರಾಣಶಬ್ದವಾಚ್ಯನು.

ವಸ್ತುತಸ್ತು ಜೀವನು ಪ್ರಾಣಶಬ್ದವಾಚ್ಯನೆನ್ನಬೇಕಾದರೆ ಶತಸಂವತ್ಸರತ್ವವು ಪ್ರಾಣನಲ್ಲಿ ಕೇಳಿಸಬೇಕು. ಆದರೆ ''ತಾವಂತಿ ಶತಸಂವತ್ಸರಸ್ಯಾಹ್ನಾಂ ಸಹಸ್ರಾಣಿ ಭವಂತಿ'' ಎಂಬಲ್ಲಿ ಶತಸಂವತ್ಸರತ್ವವು ಪ್ರಾಣನಲ್ಲಿ ಕೇಳಿಸುತ್ತಲೇ ಇಲ್ಲ. ಕೇವಲ ಬೃಹತೀಸಹಸ್ರದ ಅಕ್ಷರಗಳು ಮತ್ತು ನೂರು ವರ್ಷದ

ಹಗಲುಗಳು ಎರಡೂ ಸಹ ಮೂವತ್ತಾರು ಸಾವಿರ ಸಂಖ್ಯೆಯಿಂದ ಕೂಡಿವೆ ಎಂಬುದಾಗಿ ಶಂಕಾ-ಸಾಮ್ಯವಷ್ಟೇ ಕೇಳಿ ಸುತ್ತಿದೆ. ಆದರೂ "ತಂ ಶತಂ ವರ್ಷಾಣ್ಯಭ್ಯಾರ್ಚತ್" ಎಂಬುದಾಗಿ ಶತರ್ಚಿ ಶಬ್ದದ ಅರ್ಥವನ್ನು ವ್ಯಾಖ್ಯಾನಿಸುವ ಪ್ರಸಂಗದಲ್ಲಿ "ಪ್ರಾಣೋ ವಾವ ತದಭ್ಯಾರ್ಚತ್" ಎಂಬುದಾಗಿ ಪ್ರಾಣನು ಪ್ರಕೃತನಾಗಿದ್ದಾನೆ. ಈ ಪ್ರಾಣನನ್ನೇ 'ತಾವಂತಿ' ಎಂಬಲ್ಲಿಯೂ ಅನ್ವಯ ಮಾಡಬೇಕು. ಆದ್ದರಿಂದಲೇ ಟೀಕೆಯಲ್ಲಿ 'ಪ್ರಾಣೋ ವಾವ ತದಭ್ಯಾರ್ಚತ್' ಎಂಬ ಹಿಂದಿನ ವಾಕ್ಯವು ಪಠಿತವಾಗಿದೆ.

ಜೀವನ ಅಂತರ್ಯಾಮಿಯಲ್ಲಿ ಶತಸಂವತ್ಸರತ್ವ ಎಂಬ ಲಿಂಗವು ಸಾವಕಾಶವಾಗಬಹುದಲ್ಲವೇ? ಎಂದು ಶಂಕಿಸಬಾರದು. ಹಾಗಾದಲ್ಲಿ ಜೀವನಲ್ಲಿರುವ ದುಃಖಿತ್ವವೂ ಸಹ ಅಂತರ್ಯಾಮಿಯಲ್ಲಿಯೇ ಬರಬೇಕಾಗುವ ಪ್ರಸಂಗ ಬರುತ್ತದೆ. ಹಾಗಾದರೆ ಹಿಂದಿನ ಅಧಿಕರಣದಲ್ಲಿ ಅಪಾಂ ನೇತೃತ್ವಾದಿ-ಲಿಂಗಗಳನ್ನು ಅಂತರ್ಯಾಮಿಪರವಾಗಿ ಅರ್ಥೈಸಿದ್ದು ತಪ್ಪಾಗುತ್ತದಲ್ಲವೆ? ಎಂದು ಶಂಕಿಸಬಾರದು. ಈ ಅಧಿಕರಣದ ಸಿದ್ಧಾಂತವನ್ನು ಅಪೇಕ್ಷಿಸಿಯೇ ಹಿಂದಿನ ಅಧಿಕರಣದ ಅಂತರ್ಯಾಮಿಪರತ್ವ ಎಂಬ ಯುಕ್ತಿಯು ಸಿದ್ಧವಾಗುತ್ತದೆ.

ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿ ಬ್ರಹ್ಮನು ಪ್ರಾಣಶಬ್ದವಾಚ್ಯನಾಗಬಹುದಲ್ಲವೇ? ಎಂದು ಪ್ರಶ್ನಿಸಬಾರದು. ವಿರೋಧಿಶ್ರುತಿ ಇದ್ದಾಗ ಹಾಗೆ ಅರ್ಥೈಸಲು ಸಾಧ್ಯವಿಲ್ಲ. 'ದರಿದ್ರೋ ಭೃತ್ಯೋ ಜಯೀ' ಎಂಬ ಶಬ್ದವನ್ನು ಪ್ರಯೋಗಿಸಿದಾಗ, ಭೃತ್ಯನು ಗೆದ್ದನೆಂದೇ ಹೇಳಬೇಕು. ನಿಯಾಮಕನಾದ ರಾಜನು ಗೆದ್ದನು ಎಂದು ಸರ್ವಥಾ ಹೇಳಬಾರದು. ಏಕೆಂದರೆ ರಾಜನಲ್ಲಿ ದಾರಿದ್ರ್ಯವಾಗಲಿ ಭೃತ್ಯತ್ವವಾಗಲಿ ಇರುವುದಿಲ್ಲ. ಈ ಅಭಿಪ್ರಾಯದಿಂದಲೇ ಟೀಕೆಯಲ್ಲಿ "ನ ಚೈತಲ್ಲಿಂಗಂ ವಿಷ್ಣಾವವಕಾಶಂ ಲಭತೇ" ಜೀವನ ಲಿಂಗವು ವಿಷ್ಣುವಿನಲ್ಲಿ ಅವಕಾಶವನ್ನು ಹೊಂದುವುದಿಲ್ಲ ಎಂದು ಹೇಳಿದ್ದಾರೆ. ಅಂದರೆ ಹುಡುಕಿ ಪ್ರಯತ್ನ ಪಟ್ಟರೂ ಅವಕಾಶವು ದೊರೆಯುವುದಿಲ್ಲವೆಂದು ಅರ್ಥ. ಇಲ್ಲದಿದ್ದಲ್ಲಿ 'ನ ಚೈತಲ್ಲಿಂಗಂ ಸಾವಕಾಶಂ' ಎಂದೇ ಹೇಳುತ್ತಿದ್ದರು. 'ಲಭತೇ' ಎಂಬ ಪದವನ್ನು ಪ್ರಯೋಗಿಸುತ್ತಿರಲಿಲ್ಲ.

ಜೀವಾದಿಪರವಾದಾಗ ವಿಷ್ಣುಶ್ರುತಿಗಳ ವಿರೋಧವೂ ಬರುವುದಿಲ್ಲ. ಏಕೆಂದರೆ ವಿಷ್ಣುಶ್ರುತಿಗಳಿಗೆ ಇಂದ್ರಾದಿ ಜೀವರಲ್ಲಿ ಗೌಣಾರ್ಥವನ್ನು ಮಾಡಲು ಬರುತ್ತದೆ. ಆದ್ದರಿಂದ ಜೀವನಾಗಲೀ ಮುಖ್ಯವಾಯುವಾಗಲೀ ಅಥವಾ ದೇವೇಂದ್ರನಾಗಲೀ ಪ್ರಾಣಶಬ್ದದಿಂದ ವಾಚ್ಯರಾಗಿದ್ದಾರೆಂಬ ಪೂರ್ವಪಕ್ಷವನ್ನು ಮಾಡಬಹುದು.

### ಕಠಿಪದಾರ್ಥ

ಶತಸಂವತ್ಸರತ್ವಮ್ = ನೂರು ವರ್ಷದ ಬದುಕು, ವರ್ಣಾನಾಂ = ಸ್ವರವ್ಯಂಜನರೂಪವಾದ ವರ್ಣಗಳ, ಷಟ್‌ತ್ರಿಂಶತ್ಸಹಸ್ರತ್ವೇನ = ಮೂವತ್ತಾರು ಸಾವಿರವಾಗಿದ್ದರಿಂದ, ತಸ್ಯೈವ = ಪ್ರಾಣಶಬ್ದಕ್ಕೇನೇ, ಅತಏವ = ಪ್ರಕೃತನಾದ ಪ್ರಾಣನಿಗೆ ಅಲ್ಲಿ ಅನ್ವಯ ಹೇಳಿದ್ದರಿಂದಲೇ, ಅಭ್ಯಾರ್ಚತ್ = ಪೂಜಿಸಿದನು, ದುಃಖಿತ್ವಾತ್ = ದುಃಖದ ಸಂಬಂಧ ಅಜ್ಞಾನದ ಸಂಬಂಧಗಳೂ ಸಹ, ಅತ್ರತ್ಯ = ಈ ಅಧಿಕರಣದ,

ತದಯೋಗಾತ್ = ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವಾಗದು, ಗೌಣಂ = ತನಗಿಂತ ಅವರರನ್ನು ವಿವಕ್ಷಿಸಿ ಪೂರ್ಣರಾಗಿದ್ದಾರೆಂಬ ಗೌಣಾರ್ಥವನ್ನು

**प्रकाशः** – एवमिन्द्रवायुप्राप्तिमुक्त्वा, जीवप्राप्तिं च तल्लिङ्गप्राबल्योक्त्या वक्ति – **शतसंवत्सरत्वं त्विति ॥ "एष इमं लोकमभ्यार्चत् पुरुषरूपेण य एष तपति प्राणो वाव तदभ्यार्चत् प्राणो ह्येष य एष तपति तं शतं वर्षाण्यभ्यार्चत् । तस्माच्छतं वर्षाणि पुरुषायुषो भवन्ति"** इति वाक्योक्तं शतायुष्ट्वं **"शतायुः पुरुषः"** इत्यादिश्रुतेः जीव एव युक्तमित्यर्थः । अत्र भाष्ये 'तावन्ति' इति वाक्योक्तावपि टीकायां पूर्ववाक्यमुक्त्वा **"प्राणस्योक्तशतायुष्ट्वस्योपर्यपि 'तावन्ति' इत्यादिना बहुस्थलेषु अनुसन्धानात्"** इयुक्तम् । तदभिप्रायं शङ्कापूर्वं व्यनक्ति – **यद्यपीति ॥**

ವಿವರಣೆ - ಇಲ್ಲಿಯ ತನಕ ದೇವೇಂದ್ರನಾಗಲೀ ಮುಖ್ಯವಾಯುವಾಗಲೀ ಪ್ರಾಣಶಬ್ದದಿಂದ ವಾಚ್ಯರಾಗುತ್ತಾರೆಂಬ ಪೂರ್ವಪಕ್ಷವನ್ನು ಸಮರ್ಥಿಸಿದ್ದಾಯಿತು. ಪ್ರಕೃತ ಜೀವನು ಪ್ರಾಣಶಬ್ದವಾಚ್ಯನಾಗಬಹುದಾದ್ದರಿಂದ ಪೂರ್ವಪಕ್ಷವನ್ನು ಸಮರ್ಥಿಸಲು ಜೀವಪ್ರಾಪಕಲಿಂಗಕ್ಕೆ ನಿರವಕಾಶತ್ವ ಪ್ರಯುಕ್ತವಾದ ಪ್ರಾಬಲ್ಯವನ್ನು ಸಮರ್ಥಿಸಲು ಹೊರಟಿದ್ದಾರೆ. 'ಶತಸಂವತ್ಸರತ್ವಂ ತು' ಇತ್ಯಾದಿಯಾಗಿ.

'ಏಷ ಇಮಂ ಲೋಕಮಭ್ಯಾರ್ಚತ್ ಪುರುಷರೂಪೇಣ ಯ ಏಷ ತಪತಿ ಪ್ರಾಣೋ ವಾವ ತದಭ್ಯಾರ್ಚತ್ ಪ್ರಾಣೋ ಹ್ಯೇಷ ಯ ಏಷ ತಪತಿ ತಂ ಶತಂ ವರ್ಷಾಣ್ಯಭ್ಯಾರ್ಚತ್ । ತಸ್ಮಾಚ್ಛತಂ ವರ್ಷಾಣಿ ಪುರುಷಾಯುಷೋ ಭವಂತಿ' ಈ ವಾಕ್ಯದಲ್ಲಿ ಹೇಳಲ್ಪಟ್ಟ ಶತಾಯುಷ್ಟ್ವಂ ಎಂಬ ಧರ್ಮವು "ಶತಾಯುಃ ಪುರುಷಃ" ಎಂಬ ಶ್ರುತಿಗೆ ಅನುಗುಣವಾಗಿ ಜೀವನಲ್ಲಿಯೇ ಯುಕ್ತವಾಗುತ್ತದೆ.

ಈ ಪ್ರಸಂಗದ ಭಾಷ್ಯದಲ್ಲಿ 'ತಾವಂತಿ' ಎಂಬ ವಾಕ್ಯವನ್ನಷ್ಟೇ ಹೇಳಿದ್ದಾರೆ. ಆದರೆ ಟೀಕೆಯಲ್ಲಿ 'ತಾವಂತಿ' ಎಂಬ ಹಿಂದಿನ ವಾಕ್ಯವನ್ನು ಹೇಳಿ "ಪ್ರಾಣಸ್ಯೋಕ್ತಶತಾಯುಷ್ಟ್ವಸ್ಯೋಪರ್ಯಪಿ ತಾವಂತಿ ಇತ್ಯಾದಿನಾ ಬಹುಸ್ಥಲೇಷು ಅನುಸಂಧಾನಾತ್" ಪ್ರಾಣನಲ್ಲಿ ಹೇಳಲ್ಪಟ್ಟ ಶತಾಯುಷ್ಟ್ವವು ಮುಂದೆಯೂ 'ತಾವಂತಿ' ಇತ್ಯಾದಿ ಅನೇಕ ಸ್ಥಳಗಳಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು ಎಂದು ಹೇಳಲ್ಪಟ್ಟಿದೆ. ಟೀಕೆಯ ಅಭಿಪ್ರಾಯವನ್ನು ಏನೆಂದು ತಿಳಿಯಲು ಶಂಕೆಯನ್ನು ಮಾಡಿಕೊಂಡು 'ಯದ್ಯಪಿ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – "तस्य ह वा एतस्य बृहतीसहस्रस्य सम्पन्नस्य षट्त्रिंशतमक्षराणां सहस्राणि भवन्ति तावन्ति शतसंवत्सरस्याह्नां सहस्राणि भवन्ति" इत्यत्र प्राणश्रुतेरभावेन प्राणगततयाऽप्रतीतेः कथं प्राणशब्दस्य जीवार्थकत्वं स्यादिति भावः । 'वर्णानां' स्वरव्यञ्जनरूपाणाम् । **तस्यैवान्वय इति ॥**

ಅಂತಿಮಪ್ರಾಣಾಧಿಕರಣ-(೧।೧।೧೨)

"ತಸ್ಯ ಹ ವಾ ಏತಸ್ಯ ಬೃಹತೀಸಹಸ್ರಸ್ಯ ಸಂಪನ್ನಸ್ಯ ಷಟ್‌ತ್ರಿಂಶತಮಕ್ಷರಾಣಾಂ ಸಹಸ್ರಾಣಿ ಭವಂತಿ ತಾವಂತಿ ಶತಸಂವತ್ಸರಸ್ಯಾಹ್ನಾಂ ಸಹಸ್ರಾಣಿ ಭವಂತಿ'' ಎಂಬಲ್ಲಿ ಪ್ರಾಣಶಬ್ದವೇ ಕೇಳಿಸುತ್ತಿಲ್ಲ. ಆದ್ದರಿಂದ ಶತಾಯುಷ್ಟ್ವವು ಪ್ರಾಣನಲ್ಲಿದೆಯೆಂದು ತಿಳಿಯಲು ಸಾಧ್ಯವಿಲ್ಲ. ಹೀಗಿರುವಾಗ, ಜೀವನು ಪ್ರಾಣಶಬ್ದ-ವಾಚ್ಯನೆಂದು ಹೇಗೆ ಹೇಳುತ್ತೀರಿ ಎಂದು 'ಯದ್ಯಪಿ' ಇತ್ಯಾದಿ ಗ್ರಂಥದ ಅಭಿಪ್ರಾಯ. ಗ್ರಂಥದಲ್ಲಿರುವ 'ವರ್ಣಾನಾಂ' ಎಂಬ ಪದದಿಂದ ಸ್ವರವ್ಯಂಜನಾದಿಗಳೆಲ್ಲವನ್ನೂ ಸ್ವೀಕರಿಸಬೇಕು.

'ತಸ್ಯ ಏವ ಅನ್ವಯಃ' ಎನ್ನುವ ಅಭಿಪ್ರಾಯವು ಹೀಗಿದೆ - ಪ್ರಾಣನಿಗೆ ಯಾವ ಶತಸಂವತ್ಸರತ್ವವು ಹೇಳಲ್ಪಟ್ಟಿದೆಯೋ ಅದರ ಹಗಲುಗಳು ಎಂದು.

**प्रकाशः** – तथाच प्राणस्य यच्छतसंवत्सरं, तस्याह्नामित्यर्थ इति भावः । 'अत एव' प्रकृतस्य तत्रान्वयादेवेत्यर्थः ।

ननूक्तमत्राग्नेतृत्वादिवल्लिङ्गानि सावकाशानीति तत्राह– **नचेति** ॥ यदि जीव-धर्माणामन्तर्यामिगतत्वमुच्यते तर्हि दुःखाज्ञानसमवायादिरूपः सर्वोऽपि संसार-स्तत्रैव स्यात् । तथाच जीववदल्पशक्तित्वापत्त्याऽन्तर्यामित्वमपि तस्य न स्यादित्यर्थः । कथं तर्ह्यग्नेतृत्वं सावकाशितमित्यतोऽत्रत्यन्यायेनैवेत्याह – **अपामिति** ॥ ''तदधीनत्वादर्थवत्'' इति न्यायविषयत्वमाशङ्क्याह – **नचेति** ॥ **गौणमिति** ॥ स्वावरापेक्षया पूर्णत्वाद्ब्रह्मादिशब्दवत्त्वमित्यर्थः ।

ಹಿಂದಿನ ಅಧಿಕರಣದಲ್ಲಿ 'ಅಪಾಂ ನೇತೃತ್ವ' ಮೊದಲಾದ ಲಿಂಗಗಳನ್ನು ವಿಷ್ಣುವಿನಲ್ಲಿ ಸಾವಕಾಶ ಮಾಡಿದ್ದೇವಲ್ಲ? ಎಂಬ ಪ್ರಶ್ನೆಗೆ 'ನಚ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಒಂದು ವೇಳೆ ಜೀವನ ಧರ್ಮಗಳನ್ನು ಅಂತರ್ಯಾಮಿಯಲ್ಲಿ ಸಮರ್ಥಿಸುವುದಾದರೆ ಆವಾಗ ಜೀವನಲ್ಲಿರುವ ದುಃಖಸಂಬಂಧ ಮತ್ತು ಅಜ್ಞಾನದ ಸಂಬಂಧ ಮೊದಲಾದ ಸಕಲ ಸಂಸಾರವನ್ನು ವಿಷ್ಣು-ವಿನಲ್ಲಿಯೇ ಹೇಳಬೇಕಾದೀತು. ಆವಾಗ ಜೀವನಂತೆ ವಿಷ್ಣುವೂ ಸಹ ಅಲ್ಪಶಕ್ತವುಳ್ಳವನಾಗಿ ಅಂತ-ರ್ಯಾಮಿಯತ್ವವೇ ಅವನಿಗೆ ಕೂಡದಿರಬೇಕಾದೀತು ಎಂದು ಅಭಿಪ್ರಾಯ. ಹಾಗಾದರೆ 'ಅಪಾಂ ನೇತೃತ್ವ'ವನ್ನು ಹೇಗೆ ಸಾವಕಾಶ ಮಾಡಿದರು? ಎಂಬ ಪ್ರಶ್ನೆಗೆ 'ಅಪಾಂ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

'ತದಧೀನತ್ವಾದರ್ಥವತ್' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ನ್ಯಾಯವನ್ನನುಸರಿಸಿ 'ನಚ' ಎಂಬ ವಾಕ್ಯ-ದಿಂದ ಆಕ್ಷೇಪಿಸಿದ್ದಾರೆ. 'ಗೌಣಂ' ಎಂದರೆ ತನಗಿಂತ ನೀಚರಾದವರನ್ನು ವಿವಕ್ಷಿಸಿ ಇಂದ್ರಾದಿಗಳಲ್ಲಿಯೂ ಪೂರ್ಣತ್ವವಾಚಕವಾದ ಬ್ರಹ್ಮಾದಿಶಬ್ದಗಳನ್ನು ಸಮನ್ವಯ ಮಾಡಬಹುದು ಎಂದರ್ಥ.

**प्रकाशः** – नन्विन्द्रादिषु निर्धारित एक एव प्राण इति पूर्वः पक्षः, अनिर्धारितो यः कश्चिदिति वा, सर्वेपीति वा?

नाद्यः, अनेकप्रापकसत्त्वेन निर्धारणायोगात् ।
न द्वितीयः, निर्धारणाभावे पूर्वपक्षस्य सन्देहादविशेषापातात् ।
न तृतीयः, वाक्यभेदेनासम्भवात् ।

ಇಲ್ಲಿಯ ತನಕ ಇಂದ್ರ, ಪ್ರಾಣ ಹಾಗೂ ಜೀವ ಮೂವರು ಪ್ರಾಣಶಬ್ದವಾಚ್ಯರೆಂದು ಪ್ರತ್ಯೇಕ ಪ್ರತ್ಯೇಕವಾಗಿ ಪೂರ್ವಪಕ್ಷ ಮಾಡಲಾಯಿತು. ಇದರ ಅಭಿಪ್ರಾಯವೇನು? ಈ ಮೂವರಲ್ಲಿ ಒಬ್ಬರು ಮಾತ್ರ ಪ್ರಾಣಶಬ್ದವಾಚ್ಯರೆಂದೋ? ಅಥವಾ ಮೂವರಲ್ಲಿ ಯಾರು ಬೇಕಾದರೂ ಪ್ರಾಣಶಬ್ದವಾಚ್ಯರಾಗಬಹು-ದೆಂದೋ? ಅಥವಾ ಮೂವರೂ ಸಹ ಪ್ರಾಣಶಬ್ದವಾಚ್ಯರೆಂದೋ?

ಮೊದಲನೇ ಪಕ್ಷವು ಸರಿಯಲ್ಲ. ಒಬ್ಬನನ್ನೇ ಪ್ರಾಣಶಬ್ದವಾಚ್ಯನೆಂದು ನಿರ್ಧರಿಸಲಾಗದು. ಮೂವ-ರಲ್ಲಿಯೂ ಪ್ರತ್ಯೇಕವಾಗಿ ನಿರವಕಾಶಲಿಂಗಗಳಿರುತ್ತವೆ.

ಎರಡನೆಯ ಪಕ್ಷವೂ ತಪ್ಪು. ನಿರ್ಧಾರವಾಗಿ ಹೇಳದೆ ಯಾರಾದರೂ ಪ್ರಾಣಶಬ್ದವಾಚ್ಯರಾಗ-ಬಹುದೆಂದು ಅಭಿಪ್ರಾಯಪಟ್ಟರೆ ಪೂರ್ವಪಕ್ಷವು ಸಂಶಯರೂಪವಾಗುತ್ತದೆ. ಸಂಶಯಕ್ಕೂ ಪೂರ್ವಪಕ್ಷವು ವ್ಯತ್ಯಾಸವೇ ಇಲ್ಲದಂತಾಗುತ್ತದೆ.

ಮೂರನೇ ಪಕ್ಷವೂ ತಪ್ಪು. ಎಲ್ಲರೂ ಪ್ರಾಣಶಬ್ದವಾಚ್ಯರಾದಲ್ಲಿ ವಾಕ್ಯಭೇದಪ್ರಸಂಗದಿಂದ ಅಸಂಭವ-ದೋಷ ಬರುತ್ತದೆ.

**प्रकाशः** – इति चेत् अत्राहुः – प्राणादिप्रापकलिङ्गापेक्षया इन्द्रप्रापकश्रुति-लिङ्गानां प्राबल्योपपत्तेः, इन्द्रस्य हस्ताधिष्ठातुरिन्द्रियत्वेनेन्द्रियगणे गणितत्वस्य, तैस्सह कलहस्य चोपपत्तेः । अत एवैतल्लिङ्गस्य त्रितयसाधारण्यमुक्तं सुधायाम् । शतायुष्ट्वस्यापि तथैव कथञ्चिद्योज्यत्वात् 'इन्द्र एव' इत्यवधारणोपपत्तेः ।

मुख्य एव वाऽस्तु । मुख्यप्राणलिङ्गानां उपक्रमे ''प्राणो वंशः'' इत्यन्ते च श्रवणेन बलवत्त्वात् । प्राणश्रुतेश्च मुख्ये लोकतः प्रसिद्धाया बहुधा श्रवणेन तद्बलेन इन्द्रादिप्रापकाणां मुख्ये कथञ्चिन्नेयत्वात् । जीव एव वाऽस्तु, शतायुष्ट्वस्य चात्रा-भ्यस्यमानत्वेन बलवत्त्वात् । इन्द्रियजन्यफलाश्रये तत्सहपाठादेरपि सम्भवादिन्द्र-श्रुत्यादेः कथञ्चिन्नेयत्वादिति ।

ಈ ಪ್ರಶ್ನೆಗೆ ಕೆಲವರ ಉತ್ತರ ಹೀಗಿದೆ - ಪ್ರಥಮ ಪಕ್ಷವನ್ನು ಒಪ್ಪಬಹುದು. ದೇವೇಂದ್ರನೇ ಪ್ರಾಣಶಬ್ದವಾಚ್ಯನೆಂದು ನಿರ್ಧಾರವಾಗಿ ಹೇಳಲು ಯಾವ ಆತಂಕವೂ ಇಲ್ಲ. ಏಕೆಂದರೆ ಮುಖ್ಯ ವಾಯುವಿನಲ್ಲಿ ಪ್ರಸಿದ್ಧವಾಗಿರುವ ಲಿಂಗಕ್ಕಿಂತ ದೇವೇಂದ್ರನಲ್ಲಿ ಪ್ರಸಿದ್ಧವಾದ ಲಿಂಗವು ಪ್ರಬಲವಾಗಿದೆ. ಏಕೆಂದರೆ ಹಸ್ತಕ್ಕೆ ಅಧಿಷ್ಠಾನನಾದ್ದರಿಂದ ಇಂದ್ರನು ಇಂದ್ರಿಯನೆನಿಸುತ್ತಾನೆ. ಆದ್ದರಿಂದ ಇಂದ್ರಿಯಗಳ

ಸಮೂಹದಲ್ಲಿ ಎಣಿಸಲ್ಪಡುವಿಕೆಯೂ ಮತ್ತು ಅವರ ಜೊತೆಗೆ ಜಗಳವಾಡುವಿಕೆಯೂ ಇಂದ್ರನಲ್ಲಿ ಉಪಪನ್ನವಾಗುತ್ತದೆ. ಆದ್ದರಿಂದಲೇ ಈ ಲಿಂಗವು ಮೂವರಲ್ಲಿಯೂ ಸಮಾನವಾಗಿದೆಯೆಂದು ಸುಧೆಯಲ್ಲಿ ಹೇಳಿದ್ದಾರೆ.

ಇದರಂತೆ 'ಶತಾಯುಷ್ಟ್ವ' ಎಂಬ ಜೀವನ ಲಿಂಗವೂ ಸಹ ದೇವೇಂದ್ರನಲ್ಲಿ ಕಥಂಚಿತ್ ಸಮನ್ವಯ ಮಾಡಬಹುದು. ಆದ್ದರಿಂದ ದೇವೇಂದ್ರನೇ ಪ್ರಾಣಶಬ್ದವಾಚ್ಯನೆಂಬ ಅವಧಾರಣವನ್ನು ಮಾಡಲು ಸಾಧ್ಯವಿದೆ.

ಅಥವಾ ಮುಖ್ಯವಾಯು ಪ್ರಾಣಶಬ್ದವಾಚ್ಯನೆಂದು ನಿರ್ಧಾರ ಮಾಡಬಹುದು. ಏಕೆಂದರೆ ಉಪಕ್ರಮ ಮತ್ತು ಉಪಸಂಹಾರಗಳಲ್ಲಿ ಮುಖ್ಯಪ್ರಾಣನ ಲಿಂಗಗಳೇ ಕೇಳಿಸುತ್ತಿರುವುದರಿಂದ ಬಲಿಷ್ಠವಾಗಿವೆ. ಲೋಕದಲ್ಲಿಯೂ ಪ್ರಾಣಶ್ರುತಿಯು ಮುಖ್ಯಪ್ರಾಣನಲ್ಲಿಯೇ ಪ್ರಸಿದ್ಧವಾಗಿದೆ. ಆದ್ದರಿಂದ ಇಂದ್ರಾದಿ ಪ್ರಾಪಕ ಲಿಂಗಗಳೆಲ್ಲವನ್ನು ಮುಖ್ಯಪ್ರಾಣನಲ್ಲಿಯೇ ಕಥಂಚಿತ್ ಸಮನ್ವಯ ಮಾಡಬೇಕು.

ಅಥವಾ ಜೀವನೇ ಪ್ರಾಣಶಬ್ದವಾಚ್ಯನೆಂದು ನಿರ್ಧಾರ ಮಾಡಬಹುದು. ಶತಾಯುಷ್ಟ್ವವನ್ನು ಅನೇಕ ಬಾರಿ ಹೇಳಿದ್ದರಿಂದ ಪ್ರಬಲವಾಗಿದೆ. ಇಂದ್ರಿಯಜನ್ಯನಾದ ಫಲಕ್ಕೆ ಆಶ್ರಯನಾದ್ದರಿಂದ ಮತ್ತು ಸಹಪಠಿತನಾದ್ದರಿಂದ ಇಂದ್ರಾದಿಶ್ರುತಿಗಳನ್ನು ಕಥಂಚಿತ್ ಜೀವನಲ್ಲಿ ಸಮನ್ವಯ ಮಾಡಬಹುದು. ಹೀಗೆ ಮೂವರಲ್ಲಿಯೂ ನಿರ್ಧಾರಿತವಾದ ಪೂರ್ವಪಕ್ಷವನ್ನೇ ಮಾಡಲು ಬರುತ್ತದೆ.

**प्रकाशः** – द्वितीयपक्षोऽपि युक्त एव, अन्यप्रापकाणामुक्तदिशा बलवत्त्वनिश्चयेन विष्णोरन्यत्वावधारणोपपत्तेः । विशिष्टावधारणस्य व्यर्थत्वात् । अत एव टीकायां विष्णुरन्योवेति संशयो दर्शितः, ''तेषामन्यतमस्य'' इत्यप्युक्तम् ।

ಅಥವಾ ಅನಿರ್ಧಾರಿತವಾದ ದ್ವಿತೀಯಪಕ್ಷವನ್ನೇ ಒಪ್ಪಬಹುದು. ಹಾಗಾದರೆ ಅನೇಕರಲ್ಲಿ ಪ್ರಾಪಕವಾದ ಲಿಂಗಗಳಿರುವುದರಿಂದ ಪೂರ್ವಪಕ್ಷದಲ್ಲಿ ದಾರ್ಢ್ಯವೇ ಬರುವುದಿಲ್ಲ? ಎಂಬ ಶಂಕೆಗೆ ಆಸ್ಪದವಿಲ್ಲ. ಹಿಂದೆ ಹೇಳಿದ ಪ್ರಕಾರ ಅನ್ಯಪ್ರಾಪಕಲಿಂಗಗಳು ಬಲಿಷ್ಠವಾಗಿವೆ. ಆದ್ದರಿಂದ ವಿಷ್ಣುವಿಗಿಂತ ಭಿನ್ನರಾದವರೇ ಪ್ರಾಣಶಬ್ದವಾಚ್ಯರೆಂದು ನಿರ್ಧಾರವಾಗಿ ಹೇಳಬಹುದು. ಒಬ್ಬನೇ ವ್ಯಕ್ತಿಯನ್ನು ನಿರ್ಧಾರಮಾಡಿ ಹೇಳುವ ಅವಶ್ಯಕತೆ ಇಲ್ಲ. ಆದ್ದರಿಂದಲೇ ಟೀಕೆಯಲ್ಲಿ 'ವಿಷ್ಣುರನ್ಯೋ ವಾ' ಎಂದು ಸಾಧಾರಣವಾದ ಸಂಶಯವನ್ನು ತೋರಿಸಿದ್ದಾರೆ. 'ತೇಷಾಮನ್ಯತಮಸ್ಯ' 'ಅವರಲ್ಲಿ ಯಾರಾದರೂ ಒಬ್ಬರು' ಎಂಬುದಾಗಿಯೂ ಹೇಳಿದ್ದಾರೆ.

**प्रकाशः** – तृतीयो वाऽस्तु, त्रयाणां प्रापकसद्भावेन सर्वत्र मुख्यतया त्रितयपरत्वं वा, आद्यन्तयोर्लिङ्गदर्शनेन मुख्यस्यैवेदं महाप्रकरणं, तन्मध्ये ''एष इमं लोकम्'' इत्यारभ्य जीवावान्तरप्रकरणं; तन्मध्ये ''विश्वामित्रं'' इत्यादीन्द्रप्रकरण-मिति वा, कस्यचिन्मुख्यप्राणपरत्वं, कस्यचिज्जीवपरत्वं, कस्यचिदिन्द्रपरत्वमिति विभागेन वा त्रितयपरत्वोपपत्तेः । नच ''अर्थैकत्वादेकं वाक्यं'' इत्यादेर्नानार्थकत्वे

**वाक्यभेददोषः, न्यायप्राप्तत्वेन सह्यत्वात् । उक्तञ्च सुधायां – "नच वाक्यभेदो दोषः, अनन्यगतिकतया प्राप्तत्वात्" इति ।**

ಅಥವಾ ಎಲ್ಲರೂ ಪ್ರಾಣಶಬ್ದವಾಚ್ಯರೆಂಬ ಮೂರನೇ ಪಕ್ಷವನ್ನೇ ಒಪ್ಪೋಣ. ಮೂವರಲ್ಲಿಯೂ ಸಮಾನವಾಗಿ ನಿರವಕಾಶಲಿಂಗಗಳಿರುವುದರಿಂದ ಮೂವರೂ ಪ್ರಾಣಶಬ್ದವಾಚ್ಯರಾಗುತ್ತಾರೆ. ಅದು ಹೀಗೆ ಆದ್ಯಂತಗಳಲ್ಲಿ ಮುಖ್ಯವಾಯುವಿನ ಲಿಂಗವೇ ಕೇಳಿಸುತ್ತಿರುವುದರಿಂದ ಮಹಾಪ್ರಕರಣವು ಮುಖ್ಯಪ್ರಾಣನನ್ನು ಹೇಳುತ್ತದೆ. ಆದರೆ ಮಧ್ಯದಲ್ಲಿ "ಏಷ ಇಮಂ ಲೋಕಂ" ಎಂದು ಪ್ರಾರಂಭವಾಗಿ ಅವಾಂತರಪ್ರಕರಣವು ಜೀವನನ್ನು ಹೇಳುತ್ತಿದೆ. ಅದರ ಮಧ್ಯದಲ್ಲಿ 'ವಿಶ್ವಾಮಿತ್ರಂ' ಇತ್ಯಾದಿಯಾಗಿ ಕೆಲವು ವಾಕ್ಯಗಳು ದೇವೇಂದ್ರನನ್ನು ಹೇಳುತ್ತಿವೆ. ಆದ್ದರಿಂದ ಕೆಲವು ಭಾಗ ಮುಖ್ಯಪ್ರಾಣಪರವಾಗಿದೆ. ಕೆಲವು ಭಾಗ ಜೀವಪರವಾಗಿದೆ. ಇನ್ನು ಕೆಲವು ಭಾಗ ಇಂದ್ರಪರವಾಗಿದೆ ಎಂದು ವಿಭಾಗ ಮಾಡಬಹುದು.

ಹಾಗಾದರೆ "ಅರ್ಥೈಕತ್ವಾದೇಕಂ ವಾಕ್ಯಂ" ಇತ್ಯಾದಿಯಾಗಿ ನಾನಾರ್ಥ ಮಾಡುವುದಾದರೆ ವಾಕ್ಯಭೇದದೋಷ ಬರುತ್ತದೆಂದು ಶಂಕಿಸಬಾರದು. ನ್ಯಾಯಪ್ರಾಪ್ತವಾದ್ದರಿಂದ ವಾಕ್ಯಭೇದದೋಷವನ್ನು ಸಹಿಸಿಕೊಳ್ಳಬೇಕು. ಇದಕ್ಕೆ ಸುಧೆಯ ಸಮ್ಮತಿಯೂ ಇದೆ - 'ನಚ ವಾಕ್ಯಭೇದೋ ದೋಷಃ, ಅನನ್ಯಗತಿಕತಯಾ ಪ್ರಾಪ್ತತ್ವಾತ್' ವಾಕ್ಯಭೇದವೂ ದೋಷವಲ್ಲ, ಬೇರೆ ಮಾರ್ಗವಿಲ್ಲದೇ ಪ್ರಾಪ್ತವಾದ್ದರಿಂದ ಎಂದು.

**प्रकाशः** – अत्रोक्तपक्षत्रये तृतीय एवाभिमत इति भाति, सूत्रे त्रयस्याऽपि पूर्वपक्षित्वात्, टीकादौ त्रितयप्रापकस्यापि निरवकाशत्वोक्तेः, वाक्यभेदाङ्गीकाराच्चेति । ननु तर्ह्यनेकप्रापकसत्त्वात् सर्वानुग्रहार्थमिन्द्रादीनां विष्णवभेदमेवाशङ्क्य समाधानं कुतो न क्रियते, वाक्यभेददोषस्याप्यभावादिति चेन्न, भेदस्यासूत्रितत्वात् । अन्तरधिकरण एवेन्द्रादिदेवतैक्यस्य निरासात् । उक्तरीत्याऽन्यप्रापकाणां बलवत्त्वात्, विष्णुप्रापकाणां तदभावाभिमानात् । तौल्याभावेनाभेदकल्पकोभयान्यथानुपपत्तेरभावाच्चेति ।

ವಿಚಾರ ಮಾಡಿದರೆ ಮೂರು ಪಕ್ಷಗಳಲ್ಲಿ ಮೂರನೇ ಪಕ್ಷವೇ ಅಭಿಮತವೆಂದು ನಮಗೆ ತೋರುತ್ತದೆ. ಸೂತ್ರದಲ್ಲಂತೂ ಮೂರೂ ಪಕ್ಷಗಳನ್ನು ಪೂರ್ವಪಕ್ಷವಿಷಯವನ್ನಾಗಿ ಸ್ವೀಕರಿಸಿದ್ದಾರೆ. ಟೀಕೆಯಲ್ಲಿ ಮೂವರಲ್ಲಿಯೂ ನಿರವಕಾಶಲಿಂಗಗಳನ್ನು ಸಮರ್ಥಿಸಿದ್ದಾರೆ. ವಾಕ್ಯಭೇದದೋಷವನ್ನು ಸಹಿಸಿಕೊಂಡಿದ್ದಾರೆ.

ಅನೇಕರಲ್ಲಿ ಸಾಧಾರಣವಾದ ಲಿಂಗಗಳಿರುವುದರಿಂದ ಎಲ್ಲಾ ವಾಕ್ಯಗಳನ್ನು ಹೊಂದಿಸುವುದಕ್ಕಾಗಿ ಇಂದ್ರಾದಿಗಳಿಗೂ ವಿಷ್ಣುವಿಗೂ ಅಭೇದವನ್ನು ಒಪ್ಪಿಯೇ ಏಕೆ ಸಮಾಧಾನ ಮಾಡಬಾರದು. ಹೀಗೆ ಮಾಡಿದಾಗ ವಾಕ್ಯಭೇದದೋಷಕ್ಕೂ ಅವಕಾಶವಿರುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಅಭೇದವು ಸೂತ್ರಕಾರರಿಗೆ ಸಮ್ಮತವಾಗಿಲ್ಲ. ಆದ್ದರಿಂದ ಸರ್ವಥಾ ಅಭೇದ ಪಕ್ಷವನ್ನು ಅಂಗೀಕರಿಸಬಾರದು. ಮತ್ತು ಹಿಂದಿನ ಅಂತರಧಿಕರಣದಲ್ಲಿಯೇ ಇಂದ್ರಾದಿದೇವತೆಗಳಿಂದ ಐಕ್ಯವನ್ನು ನಿರಾಸ ಮಾಡಿದ್ದಾಗಿದೆ. ಮತ್ತು ಈ

ಹಿಂದೆ ಹೇಳಿದಂತೆ ಅನ್ಯಪ್ರಾಪಕವಾದ ಲಿಂಗಗಳೇ ಬಲಿಷ್ಠವಾಗಿವೆ. ವಿಷ್ಣುಪ್ರಾಪಕವಾದ ಲಿಂಗಗಳು ದುರ್ಬಲವಾಗಿವೆಯೆಂದು ಪೂರ್ವಪಕ್ಷಕಾರನು ಸಮರ್ಥಿಸಿದ್ದಾನೆ. ಆದ್ದರಿಂದ ವಿಷ್ಣುವಿನ ಲಿಂಗಗಳಿಗೆ ಹಾಗೂ ಅನ್ಯರ ಲಿಂಗಗಳಿಗೆ ತೌಲ್ಯವೇ ಇರುವುದಿಲ್ಲ. ಆದ್ದರಿಂದ ಉಭಯಾನ್ಯಥಾನುಪಪತ್ತಿಯೆಂಬ ಅಭೇದ ಕಲ್ಪಕ ಪಕ್ಷವು ನಿರ್ಣಯವಾಗುವುದಿಲ್ಲ.

**गुरुराजीयम्** – अपां नेतृत्वादिलिङ्गानामपीति ॥ तथाचान्तर्यामिपरन्यायस्य तत्राव्युत्पादनान्न तेनास्य गतार्थतेति भावः ।

## ಸಾರ

ಜೀವನ ಲಿಂಗವೂ ಸಹ ನಿರವಕಾಶವಾಗಿದೆ. 'ಶತಸಂವತ್ಸರತ್ವ' ಎಂಬ ಲಿಂಗವು ಜೀವನಲ್ಲಿ ಶ್ರುತವಾಗಿವೆ. ಈ ಲಿಂಗವು ಜೀವನನ್ನು ಬಿಟ್ಟು ಬೇರೆ ಯಾರಲ್ಲಿಯೂ ಬರುವುದಿಲ್ಲ. ವಸ್ತುತಃ ಜೀವನನ್ನು ಹೇಳುವ ಪ್ರಕರಣದಲ್ಲಿ ಪ್ರಾಣಶಬ್ದವಿರುವುದಿಲ್ಲ. ಆದರೂ 'ಪ್ರಾಣೋ ವಾ ತದಭ್ಯಾರ್ಚತ್' ಎಂಬಲ್ಲಿ ತತ್ ಶಬ್ದದಿಂದ ಪ್ರಕೃತನಾದ ಪ್ರಾಣನನ್ನು ಪರಾಮರ್ಶಿಸಲು ಬರುತ್ತದೆ. ಜೀವನಲ್ಲಿರುವ ಶತಸಂವತ್ಸರತ್ವ ಎಂಬ ಲಿಂಗವನ್ನು ಅಂತರ್ಯಾಮಿ ವಿವಕ್ಷೆಯಿಂದ ಪರಮಾತ್ಮನಲ್ಲಿ ಸಮನ್ವಯ ಮಾಡಬಾರದು. ಹಾಗಾದಲ್ಲಿ ಜೀವನಲ್ಲಿರುವ ಸಂಸಾರವನ್ನು ಪರಮಾತ್ಮನಲ್ಲಿಯೇ ಸಮನ್ವಯ ಮಾಡಬೇಕಾದ ಪ್ರಸಂಗ ಬರುತ್ತದೆ. ಆದ್ದರಿಂದ ಜೀವನ ಲಿಂಗವನ್ನು ವಿಷ್ಣುವಿನಲ್ಲಿ ಸಾವಕಾಶ ಮಾಡಲಾಗದು. ಆದರೆ ವಿಷ್ಣುವಿನ ಬಗ್ಗೆ ಹೇಳಲ್ಪಟ್ಟ ವಾಕ್ಯಗಳನ್ನು ಜೀವನಲ್ಲಿ ಸಾವಕಾಶ ಮಾಡಬಹುದು.

ಆದ್ದರಿಂದ ಜೀವನಾಗಲೀ, ಮುಖ್ಯವಾಯುವಾಗಲೀ ಅಥವಾ ದೇವೇಂದ್ರನೇ ಆಗಲಿ ಪ್ರಾಣಶಬ್ದದಿಂದ ವಾಚ್ಯರಾಗುತ್ತಾರೆಂಬ ಪೂರ್ವಪಕ್ಷವು ದೃಢವಾಯಿತು.

* * * *

## 'ಪ್ರಾಚೀನೋಽಪ್ಯನ್ಯಃ' ಎಂಬ ಶ್ರೀಮದಾಚಾರ್ಯರ ಮಾತಿಗೆ ಏನು ಅರ್ಥ?

तात्पर्यचन्द्रिका

**नन्वथापि ''प्राचीनोऽप्यन्यः'' इति प्रयोजनोक्तिरयुक्ता, आकाशाधिकरणे पूर्वपक्षबीजभूताया भूते प्रसिद्धेर्वाक्यद्वयेऽपि तुल्यतया ''आकाशः'' इति वाक्ये भूतपरत्वे ''यदेषः'' इति वाक्येऽपि तत्परत्वमिति प्रयोजनसम्भवेऽपि, अत्र प्राचीनपूर्वपक्षादत्रत्यपूर्वपक्षे प्राणस्याविष्णुत्वे यो विशेषहेतुः, तदभावादेव प्राचीनप्राणस्य तत्रत्यसिद्धान्तन्यायेन विष्णुत्वोपपत्तेः,**

ಅನುವಾದ - ಶ್ರೀಮದಾಚಾರ್ಯರು ಭಾಷ್ಯದಲ್ಲಿ ''ಪ್ರಾಚೀನೋಽಪ್ಯನ್ಯಃ'' ಎಂಬುದಾಗಿ ಪೂರ್ವಪಕ್ಷದ ಪ್ರಯೋಜನವನ್ನು ಹಿಂದಿನ ಪ್ರಾಣಾಧಿಕರಣಕ್ಕೆ ಸಂಬಂಧಪಟ್ಟಂತೆ ಹೇಳಿದ್ದಾರೆ. ಇದು ಅಯುಕ್ತವಾಗಿದೆ. ಹಿಂದಿನ ಆಕಾಶಾಧಿಕರಣದಲ್ಲಿ ಭೂತಪ್ರಸಿದ್ಧಿ ಎಂಬುದು ಪೂರ್ವಪಕ್ಷ ಬೀಜ-

ವಾಗಿತ್ತು. ಅದು 'ಯದೇಷ ಆಕಾಶ' ಎಂಬ ವಾಕ್ಯದಲ್ಲಿಯೂ 'ಆಕಾಶ ಇತಿ ಹೋವಾಚ' ಎಂಬ ವಾಕ್ಯದಲ್ಲಿಯೂ ಸಮಾನವಾಗಿದೆ. ಆದ್ದರಿಂದ 'ಆಕಾಶ ಇತಿ ಹೋವಾಚ' ಎಂಬ ವಾಕ್ಯವೂ ಭೂತಕಾಶಪರವಾದಲ್ಲಿ 'ಯದೇಷ ಆಕಾಶ' ಎಂಬ ವಾಕ್ಯವೂ ಸಹ ಭೂತಾಕಾಶಪರವೇ ಆಗುತ್ತದೆ. ಆದ್ದರಿಂದ ಹಿಂದಿನ ಪ್ರಾಣಾಧಿಕರಣದಲ್ಲಿ ಆಕಾಶಾಧಿಕರಣದ ಪ್ರಯೋಜನವೂ ಸಮಂಜಸವಾಗುತ್ತದೆ. ಆದರೆ ಪ್ರಕೃತ ಹಾಗೆ ಹೇಳಲಾಗದು. ಏಕೆಂದರೆ ಪೂರ್ವಪಕ್ಷದ ಬೀಜವು ಹಿಂದಿನ ಪ್ರಾಣಾಧಿಕರಣದಲ್ಲಿ ಈ ಅಧಿಕರಣದಲ್ಲಿ ಸಮಾನವಾಗಿರುವುದಿಲ್ಲ. ಹಿಂದಿನ ಪೂರ್ವಪಕ್ಷಕ್ಕಿಂತ ಈ ಅಧಿಕರಣದ ಪೂರ್ವಪಕ್ಷದಲ್ಲಿ ಪ್ರಾಣವು ವಿಷ್ಣುಪರವಲ್ಲವೆನ್ನಲು ವಿಶೇಷ ಹೇತುವಿದೆ. ಆದರೆ ಈ ವಿಶೇಷ ಹೇತುವು 'ತದ್ವೈತ್ವಂ ಪ್ರಾಣಃ' ಎಂಬಲ್ಲಿ ಇರುವುದಿಲ್ಲ. ಆದ್ದರಿಂದಲೇ ಹಿಂದಿನ ಪ್ರಾಣಾಧಿಕರಣದ ಸಿದ್ಧಾಂತದಿಂದ ವಿಷ್ಣುವು ಅಲ್ಲಿ ಪ್ರಾಣಶಬ್ದದಿಂದ ವಾಚ್ಯನಾಗಬಹುದು.

ಹೀಗಿರುವಾಗ ಶ್ರೀಮದಾಚಾರ್ಯರು ಈ ಅಧಿಕರಣದಲ್ಲಿ ವಿಷ್ಣುವು ಪ್ರಾಣಶಬ್ದವಾಚ್ಯನೆಂದು ಸಿದ್ಧನಾಗದಿದ್ದರೆ ಹಿಂದಿನ ಪ್ರಾಣಾಧಿಕರಣದಿಂದಲೂ ವಿಷ್ಣುವು ಪ್ರಾಣಶಬ್ದವಾಚ್ಯನೆಂದು ಸಿದ್ಧನಾಗಲಾರ. ಎಂದು ಪೂರ್ವಪಕ್ಷದ ಪ್ರಯೋಜವನ್ನು ಹೇಗೆ ಹೇಳಿದರು.

**ಕಠಿಣಪದಾರ್ಥ**

ಪ್ರಾಚೀನೋऽಪಿ = ಹಿಂದಿನ ಪ್ರಾಣಾಧಿಕರಣದಲ್ಲಿ ಹೇಳಲ್ಪಟ್ಟಿರುವ ಪ್ರಾಣನೂ ಸಹ, ಪ್ರಯೋಜನೋಕ್ತಿಃ = ಪೂರ್ವಪಕ್ಷಪ್ರಯೋಜನದ ಮಾತು. ವಾಕ್ಯದ್ವಯೇಪಿ = ''ಆಕಾಶ ಇತಿ ಹೋವಾಚ'' ''ಯದೇಷ ಆಕಾಶ'' ಎಂಬೆರಡು ವಾಕ್ಯಗಳಲ್ಲಿಯೂ, ತತ್ಪರತ್ವಮ್ = ಭೂತಪರತ್ವವು, ವಿಶೇಷಹೇತುಃ = ನಿರವಕಾಶವಾದ ಶ್ರುತಿಲಿಂಗಬಾಹುಲ್ಯವೆಂಬ ಅಸಾಧಾರಣವಾದ ಪೂರ್ವಪಕ್ಷ ಹೇತುವು, ತತ್ರತ್ಯಸಿದ್ಧಾಂತನ್ಯಾಯೇನ = ನಿರವಕಾಶವಾದ ಶ್ರೀಪತಿತ್ವಾದಿ ಲಿಂಗವೆಂಬ ಸಿದ್ಧಾಂತ ನ್ಯಾಯದಿಂದ.

**प्रकाशः** – एवं पूर्वपक्षोत्थानं निरवकाशप्रापकोक्त्या समर्थ्येदानीं यद्भाष्यकारोक्तं 'अयं प्राणोऽन्यश्चेत्' ''तद्वै त्वं प्राणः'' इत्युक्तोऽप्यन्यः स्यात् इति पूर्वोक्ताक्षेपः पूर्वपक्षे फलं, सिद्धान्ते च तत्समाधानम्' इति, तत्र पूर्वपक्षे प्रयोजनोक्तिं समर्थयितुमाक्षिपति – **नन्विति** ॥

ननु यथा ''आकाश इति होवाच'' इत्यत्र आकाशस्य भूतत्वे ''यदेष आकाशः'' इति निर्णीतब्रह्मप्रकरणगतस्याप्याकाशस्यान्यत्वं पूर्वपक्षफलं, तथाऽत्र किं न स्यादित्यत आह **आकाशेति** ॥ **य इति** ॥ निरवकाशश्रुतिलिङ्गबाहुल्यरूपः ॥ **तत्रत्येति** ॥ निरवकाशश्रीपतित्वादिलिङ्गेनेत्यर्थः ।

ವಿವರಣೆ - ಇಲ್ಲಿಯತನಕ ನಿರವಕಾಶಪ್ರಾಪಕವಾದ ಯುಕ್ತಿಗಳಿಂದ ಪೂರ್ವಪಕ್ಷವನ್ನು ಸಮರ್ಥಿಸಿದರು. ಪ್ರಕೃತ ಭಾಷ್ಯಕಾರರು ಹೇಳಿದ ''ಈ ಅಧಿಕರಣದಲ್ಲಿ ಹೇಳಲ್ಪಟ್ಟ ಪ್ರಾಣನು ವಿಷ್ಣುವಿಗಿಂತ ಭಿನ್ನನಾದರೆ ಹಿಂದಿನ

ಅಧಿಕರಣದಲ್ಲಿ ಹೇಳಲ್ಪಟ್ಟ ಪ್ರಾಣನೂ ವಿಷ್ಣುವಿಗಿಂತ ಭಿನ್ನ ಆಗುತ್ತಾನೆ'' ಎಂಬ ಹಿಂದಿನ ಅಧಿಕರಣದ ಸಿದ್ಧಾಂತವನ್ನು ಆಕ್ಷೇಪಿಸುವುದು ಪೂರ್ವಪಕ್ಷದ ಫಲ, ಅದನ್ನು ಸಮಾಧಾನ ಮಾಡುವುದು ಸಿದ್ಧಾಂತದ ಫಲ'' ಎಂಬ ಪೂರ್ವಪಕ್ಷದ ಪ್ರಯೋಜನವನ್ನು ಸಮನ್ವಯ ಮಾಡುತ್ತಿದ್ದಾರೆ ಅದಕ್ಕಾಗಿ 'ನನು' ಇತ್ಯಾದಿ ವಾಕ್ಯದಿಂದ ಆಕ್ಷೇಪಿಸುತ್ತಿದ್ದಾರೆ.

ಯಾವ ರೀತಿಯಾಗ 'ಆಕಾಶ ಇತಿ ಹೋವಾಚ' ಎಂಬಲ್ಲಿ ಆಕಾಶವು ಭೂತಪರವಾದರೆ 'ತದ್ಧೇತುಪದೇಶಾಚ್ಚ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ 'ಯದೇಷ ಆಕಾಶ' ಎಂಬ ಶ್ರುತಿಯಲ್ಲಿರುವ ಆಕಾಶವೂ ಸಹ ಭೂತಪರವೇ ಆಗುತ್ತದೆಂಬುದಾಗಿ ಆಕಾಶಾಧಿಕರಣದಲ್ಲಿ ಪೂರ್ವಪಕ್ಷ ಫಲವನ್ನು ಹೇಳಿದ್ದಾರೆ. ಅದರಂತೆ ಇಲ್ಲಿಯೂ ಸಹ ಹೇಳಲು ಬರುವಾಗ ಶ್ರೀಮದಾಚಾರ್ಯರ ಮಾತು ಸಮಂಜಸ-ವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ 'ಆಕಾಶಾಧಿಕರಣೇ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

### ಸಾರ

ಶ್ರೀಮದಾಚಾರ್ಯರು ಹಿಂದಿನ ಪ್ರಾಣಾಧಿಕರಣದ ಸಿದ್ಧಾಂತದ ಆಕ್ಷೇಪವೇ ಈ ಅಧಿಕರಣದ ಪೂರ್ವಪಕ್ಷದ ಫಲವೆಂದು ಹೇಳಿದ್ದಾರೆ. ಇದು ಸರಿಯೋ ಅಲ್ಲವೋ? ಎಂಬುದರ ಬಗ್ಗೆ ಈಗ ವಿಚಾರ ನಡೆದಿದೆ. ಈ ಅಧಿಕರಣದಲ್ಲಿ ನಿರವಕಾಶವಾದ ಶ್ರುತಿಲಿಂಗಬಾಹುಲ್ಯವಿರುವುದರಿಂದ ಐತರೇಯದಲ್ಲಿ ಹೇಳಲ್ಪಟ್ಟ ಪ್ರಾಣನು ವಿಷ್ಣುವಲ್ಲ ಹೊರತು ಇಂದ್ರಾದಿಗಳೆಂದೇ ಪೂರ್ವಪಕ್ಷ ಮಾಡಲಾಯಿತು. ಇದರಿಂದಾಗಿ ಹಿಂದಿನ ಪ್ರಾಣಾಧಿಕರಣದಲ್ಲಿ ಹೇಳಲ್ಪಟ್ಟ ಪ್ರಾಣನೂ ಸಹ ಪರಮಾತ್ಮನಾಗಲಾರ ಎಂದು ಹೇಗೆ ಹೇಳಲು ಸಾಧ್ಯ ? ಏಕೆಂದರೆ ಶ್ರೀಪತಿತ್ವ ಮೊದಲಾದ ಲಿಂಗಗಳ ಬಲದಿಂದ ಹಿಂದಿನ ಅಧಿಕರಣದಲ್ಲಿ ತೈತ್ತಿರೀಯದಲ್ಲಿ ಹೇಳಲ್ಪಟ್ಟ ಪ್ರಾಣನು ವಿಷ್ಣುವೆಂದು ನಿರ್ಣಯವಾಗಿದೆ. ಇಲ್ಲಿ ಹೇಳಲ್ಪಟ್ಟ ಪೂರ್ವಪಕ್ಷಯುಕ್ತಿಯು ಹಿಂದಿನ ಅಧಿಕರಣದ ಪ್ರಾಣನಲ್ಲಿ ಬರುವುದಿಲ್ಲ. ಆದ್ದರಿಂದ ಶ್ರೀಮದಾಚಾರ್ಯರ ಮಾತಿಗೆ ಏನು ಅರ್ಥ?

* * * *

## ಶ್ರೀಮದಾಚಾರ್ಯರ ಮಾತಿಗೆ ಏಕತ್ರ ನಿರ್ಣೀತಶಾಸ್ತ್ರಾರ್ಥಃ ಸರ್ವತ್ರ ಎಂದರ್ಥ

तात्पर्यचन्द्रिका

**इति चेत्, मैवम्, यथा प्राभाकरमते कामिनियोज्यान्वयबलाल्लिङादेः स्थायिकार्यार्थत्वे निश्चिते तदन्वयशून्येऽपि नित्याधिकारे तदर्थता, यथा वा मतान्तरे वाक्यशेषेण कचिद्यवादिशब्दानां दीर्घशूकाद्यर्थत्वे निश्चिते अन्यत्रापि तदर्थता, तथाऽत्र इन्द्रादिलिङ्गात् प्राणशब्दस्येन्द्राद्यर्थत्वे निर्णीते ''तद्वै त्वं प्राणः'' इत्यत्रापि तदर्थत्वात् ।**

ಅನುವಾದ - ಈ ಆಕ್ಷೇಪವೂ ತಪ್ಪು.

ಪರಿಪೂರ್ಣಚಂದ್ರಿಕಾ

ಪ್ರಭಾಕರ ಮತದ ದೃಷ್ಟಾಂತ - 'ಸ್ವರ್ಗಕಾಮೋ ಯಜೇತ' ಎಂಬಲ್ಲಿರುವ ಲಿಙ್ ಪ್ರತ್ಯಯಕ್ಕೆ ಕ್ಷಣಿಕವಾದ ಯಾಗಕಾರ್ಯ ಎಂದರ್ಥವಲ್ಲ. ಸ್ವರ್ಗಪರ್ಯಂತವಾಗಿ ಸ್ಥಾಯಿಯಾದ ಅಪೂರ್ವ-ಕಾರ್ಯ ಎಂಬರ್ಥವನ್ನು ಹೇಳಬೇಕು. ಇದಕ್ಕೆ ಕಾರಣವೇನೆಂದರೆ 'ಕಾಮಿನಿಯೋಜ್ಯಾನ್ವಯ'. ಅಂದರೆ ಇದಕ್ಕೆ ಯಾರು ನಿಯೋಜ್ಯನು (ಅಧಿಕಾರಿ) ಎಂದರೆ ಸ್ವರ್ಗಕಾಮಿಯಾದವನು ಅಧಿಕಾರಿಯು. ಇವನ ಅನ್ವಯವನ್ನು ಹೇಳಿದ್ದರಿಂದ ಲಿಂಗಾದಿಗಳು ಸ್ಥಾಯಿಕಾರ್ಯವನ್ನೇ ಹೇಳುತ್ತವೆ. ಹೀಗೆ ನಿರ್ಣಯವಾದ ಮೇಲೆ 'ಅಹರಹಃ ಸಂಧ್ಯಾಮುಪಾಸೀತ'' ಎಂಬಲ್ಲಿರುವ 'ಲಿಙ್' ಪ್ರತ್ಯಯಕ್ಕೆ ಏನರ್ಥ? ಎಂಬ ಸಂಶಯ ಬರುತ್ತದೆ. ಸಂಶಯವನ್ನು ಪರಿಹರಿಸಿಕೊಳ್ಳಲು ಕಾಮಿನಿಯೋಜ್ಯದ ಅನ್ವಯವು ಕಾಣಿಸುವುದಿಲ್ಲ. ಆದರೆ 'ಲಿಙ್‌ತ್ವ' ಎಂಬ ಸಮಾನಧರ್ಮವಿರುವುದರಿಂದ ಅಪೂರ್ವವೆಂಬ ಸ್ಥಾಯಿಕಾರ್ಯವನ್ನೇ ಅರ್ಥವೆಂದು ಹೇಳಬೇಕು.

ಭಾಟ್ಟಮತದ ದೃಷ್ಟಾಂತ - ''ಯವಮಯಶ್ಚರುರ್ಭವತಿ'' ಎಂಬಲ್ಲಿರುವ 'ಯವ' ಶಬ್ದಕ್ಕೆ ಏನು ಅರ್ಥ? ಎಂಬ ಸಂಶಯ ಬಂದಾಗ ''ಯತ್ರಾನ್ಯಾ ಓಷಧಯಃ'' ಎಂಬ ವಾಕ್ಯಶೇಷದ ಬಲದಿಂದ ಕೆಲವು ವಾಕ್ಯಗಳಲ್ಲಿರುವ ಯವಾದಿ ಶಬ್ದಗಳಿಗೆ ದೀರ್ಘಶೂಕವಿಶಿಷ್ಟವಾದ ಧಾನ್ಯವಿಶೇಷವೇ ಅರ್ಥ-ವೆಂದು ನಿರ್ಣಯವಾಗುತ್ತದೆ. ಅದರಂತೆ ಬೇರೆಡೆ ಇರುವ ಯವಾದಿಶಬ್ದಗಳಿಗೂ ವಾಕ್ಯಶೇಷದ ಬೆಂಬಲವಿಲ್ಲದಿದ್ದರೂ ದೀರ್ಘಶೂಕವಿಶಿಷ್ಟವಾದ ಧಾನ್ಯವಿಶೇಷವೆಂದೇ ಅರ್ಥೈಸಬೇಕು.

ಇದರಂತೆ ಇಂದ್ರಾದಿಲಿಂಗಗಳಿರುವುದರಿಂದ ಪ್ರಾಣಶಬ್ದವು ಇಂದ್ರಾದಿಪರವೆಂದು ಇಲ್ಲಿ ನಿರ್ಣಯವಾದ ಮೇಲೆ 'ತದ್ವೈತ್ವಂ ಪ್ರಾಣಃ' ಎಂಬಲ್ಲಿಯೂ ಇಂದ್ರಾದಿಗಳೇ ಪ್ರತಿಪಾದ್ಯರಾಗಬೇಕು.

### ಕಠಿಣಪದಾರ್ಥ

ಕಾಮಿನಿಯೋಜ್ಯಬಲಾತ್ = ಸ್ವರ್ಗಕಾಮಿಯಅಧಿಕಾರಿಯ ಅನ್ವಯದ ಬಲದಿಂದ, ಸ್ಥಾಯಿಕಾರ್ಯಾರ್ಥತ್ವೇ = ಫಲಪರ್ಯಂತವಾಗಿ ಉಳಿಯುವ ಅಪೂರ್ವ ಕಾರ್ಯವನ್ನೇ ಅರ್ಥವೆಂದು, ತದನ್ವಯ ಶೂನ್ಯೇಽಪಿ = ಕಾಮನಾವುಳ್ಳ ಅಧಿಕಾರಿಯ ಅನ್ವಯವು ಇಲ್ಲದ್ದಿದರೂ, ನಿತ್ಯಾಧಿಕಾರೇ = ನಿತ್ಯಕರ್ಮಗಳಲ್ಲಿ, ಮತಾಂತರೇ = ಭಾಟ್ಟರ ಮತದಲ್ಲಿ, ತದರ್ಥತ್ವಾತ್ = ಇಂದ್ರಾದಿ ಪರವಾಗುತ್ತದೆ.

**प्रकाशः** – 'एकत्र निर्णीतश्शास्त्रार्थः सर्वत्र' इति न्यायादत्रत्य-स्यान्यत्वेऽन्यत्रापि तथा भवितव्यमित्येतत्सदृष्टान्तमाह – **यथेति** ॥ ''स्वर्गकामो यजेत'' इत्यादौ स्वर्गकामं नियोज्यं प्रति क्रिया लिङादिशब्देन कार्यतया बोधयितु-मशक्या । कामी हि काम्यादन्यत्काम्याव्यवहितसाधनमेव कार्यतयाऽवैति, नतु व्यवहितसाधनम् । क्रिया चास्थायित्वेन काम्यव्यवहितत्वात् न कामिनियोज्या-न्वययोग्या । तृप्तिकामस्य व्यवहितसाधने पाके कार्यताधीस्तु न तृप्तिकामितया, किन्तु तृप्तिसाधनौदनकामितयैव, अन्यथा सिद्धान्नस्यापि तृप्तिकामस्य व्यवहितसाधने पाके कार्यताधीस्यात् ।

**अतः फलपर्यन्तस्थाय्यपूर्वमेव लिङा कार्यत्वेन बोध्यमित्यपूर्वं लिङ्वाच्यमिति कामाधिकारे नियोज्यान्वयसामर्थ्याल्लिङादेः स्थाय्यपूर्वशब्दितकार्यार्थत्वे निश्चिते ''अहरहः सन्ध्यामुपासीत'' इत्यादौ नित्ये कर्मणि काम्याश्रवणेन नियोज्यान्वय-शून्येऽपि 'एकत्र निर्णीतः शास्त्रार्थः परत्र' इति तत्रापि तथैवाङ्गीकृतं, तद्वदित्यर्थः ॥ यथावेति ॥ 'मतान्तरे' भट्टादिमते । यववराहाधिकरणमुक्तं जन्माधिकरणे । ''यवमयश्चरुर्भवति'' इत्यादौ ''यत्रान्या ओषधयो म्लायन्ते एते मोदमाना इवोत्तिष्ठन्ति'' इति वाक्यशेषाद्दीर्घशूकाद्यर्थत्वे निश्चिते, 'यवान् पच यवैर्यज' इत्यादौ यथा तदर्थत्वं, तद्वदित्यर्थः।**

ವಿವರಣೆ - ಇಲ್ಲಿಯ ತನಕ ಮಾಡಿದ ಆಕ್ಷೇಪವೂ ಅಸಮಂಜಸವಾಗಿದೆ. ಏಕೆಂದರೆ ''ಏಕತ್ರ ನಿರ್ಣೀತಶ್ಶಾಸ್ತ್ರಾರ್ಥಃ ಸರ್ವತ್ರ'' ಒಂದು ಕಡೆ ನಿರ್ಣಯಿಸಲ್ಪಟ್ಟ ಶಾಸ್ತ್ರಾರ್ಥವು ಎಲ್ಲೆಡೆ ನಿರ್ಣಯವಾಗುತ್ತದೆ ಎಂಬ ನ್ಯಾಯದಂತೆ ನಿರ್ಣಯಿಸಲ್ಪಟ್ಟ ನ್ಯಾಯವು ಹಿಂದಿನ ಪ್ರಾಣಾಧಿಕರಣದಲ್ಲಿಯೂ ಸಂಬಂಧಪಡುತ್ತದೆ. ಇಲ್ಲಿ ಉದಾಹರಿಸುತ್ತಿರುವ ಪ್ರಾಣವು ವಿಷ್ಣುವಾಗದಿದ್ದಲ್ಲಿ, ಹಿಂದಿನ ಅಧಿಕರಣದಲ್ಲಿರುವ ಪ್ರಾಣನು ವಿಷ್ಣು ಆಗಲಾರ ಈ ವಿಷಯದಲ್ಲಿ 'ಯಥಾ' ಇತ್ಯಾದಿ ವಾಕ್ಯದಿಂದ ದೃಷ್ಟಾಂತವನ್ನು ನೀಡುತ್ತಿದ್ದಾರೆ.

'ಸ್ವರ್ಗಕಾಮೋ ಯಜೇತ' ಇತ್ಯಾದಿ ಸ್ಥಳದಲ್ಲಿ ಸ್ವರ್ಗಕಾಮಿಯು ಅಧಿಕಾರಿಯಾಗಿದ್ದಾನೆ. ಇಂತಹ ಅಧಿಕಾರಿಯನ್ನು ಕುರಿತು 'ಲಿಜ್' ಪ್ರತ್ಯಯವು ಕಾರ್ಯವನ್ನು ಬೋಧಿಸುತ್ತಿದೆ. ಯಾಗಾದಿ ಕ್ರಿಯೆಯನ್ನು ಕಾರ್ಯತ್ವೇನ 'ಲಿಜ್' ಪ್ರತ್ಯಯವು ತಿಳಿಸುತ್ತಿದೆ ಎಂದು ಹೇಳಬಾರದು. ಏಕೆಂದರೆ ಸ್ವಾಮಿಯಾದ ಪುರುಷನು ಫಲವನ್ನು ಆಪೇಕ್ಷಿಸುತ್ತಾನೆ. ಮತ್ತು ಅಂತಹ ಫಲಕ್ಕೆ ಅವ್ಯವಹಿತ ಸಾಧನವನ್ನು ಅಪೇಕ್ಷಿಸುತ್ತಾನೆ. ವ್ಯವಹಿತ ಸಾಧನವನ್ನು ಅಪೇಕ್ಷಿಸುವುದಿಲ್ಲ. ಪ್ರಕೃತ ಸ್ವರ್ಗಕಾಮಿಯು ಕಾಮ್ಯವಾದ ಸ್ವರ್ಗವನ್ನು ಅಪೇಕ್ಷಿಸುತ್ತಾನೆ. ಸ್ವರ್ಗಕ್ಕೆ ಅವ್ಯವಹಿತ ಸಾಧನವೆನಿಸಿದ ಅಪೂರ್ವವನ್ನು ಅಪೇಕ್ಷಿಸುತ್ತಾನೆ ಹೊರತು ಯಾಗ ಕ್ರಿಯೆಯನ್ನು ಅಪೇಕ್ಷಿಸುವುದಿಲ್ಲ. ಏಕೆಂದರೆ ಯಾಗಕ್ರಿಯೆಯು ವ್ಯವಹಿತವಾಗಿದೆ ಮತ್ತು ಕ್ಷಣಿಕವಾಗಿದೆ. ಆದ್ದರಿಂದ ಯಾಗಕ್ರಿಯೆಯನ್ನು ಕಾರ್ಯತ್ವೇನ ತಿಳಿಸಲು 'ಲಿಜ್' ಪ್ರತ್ಯಯಕ್ಕೆ ಸಾಮರ್ಥ್ಯವಿಲ್ಲ; ಹೊರತು ಅವ್ಯವಹಿತ ಸಾಧನವಾದ ಮತ್ತು ಸ್ಥಾಯಿಯಾದ ಅಪೂರ್ವ ಎಂಬ ಕಾರ್ಯವನ್ನೇ 'ಲಿಜ್' ಪ್ರತ್ಯಯವು ಬೋಧಿಸಬೇಕು. ಆದ್ದರಿಂದ ಕಾಮಿನಿಯೋಜ್ಯಾನ್ವಯಕ್ಕೆ ಯೋಗ್ಯವಾದದ್ದು ಅಪೂರ್ವಕಾರ್ಯವೇ ಆಗುತ್ತದೆ ಹೊರತು ಯಾಗಕ್ರಿಯೆ ಆಗುವುದಿಲ್ಲ.

ಆಕ್ಷೇಪ - ಕಾಮಿಯಾದ ಪುರುಷನು ಅವ್ಯವಹಿತಸಾಧನವನ್ನೇ ಅಪೇಕ್ಷಿಸಬೇಕಾಗಿಲ್ಲ. ಏಕೆಂದರೆ ಲೋಕದಲ್ಲಿ ಒಬ್ಬನಿಗೆ ಹೊಟ್ಟೆ ತುಂಬಬೇಕು ಎಂಬ ಅಪೇಕ್ಷೆ ಇರುತ್ತದೆ. ಅಂತಹ ಪುರುಷನು ಅಡುಗೆ ಮಾಡಲು ಪ್ರವೃತ್ತನಾಗುತ್ತಾನೆ. ಇಲ್ಲಿ ತೃಪ್ತಿಗೆ ಅಡುಗೆ ಮಾಡುವಿಕೆಯು (ಪಾಕಕ್ರಿಯೆಯು) ವ್ಯವಹಿತ-ಸಾಧನವಾಗಿದೆ. ತೃಪ್ತಿಗೆ ಅವ್ಯವಹಿತ ಸಾಧನವಾದದ್ದು ಭೋಜನ. ಭೋಜನಕ್ಕೆ ಸಾಧನವಾದದ್ದು ಪಾಕಕ್ರಿಯೆ. ಆದರೆ ಲೋಕದಲ್ಲಿ ವ್ಯವಹಿತಸಾಧನವಾದ ಪಾಕಕ್ರಿಯೆಯಲ್ಲಿ ಪ್ರವೃತ್ತಿಯು ಕಂಡಿದೆಯಲ್ಲ?

ಸಮಾಧಾನ - ತೃಪ್ತಿಕಾಮಿಯಾದ ಪುರುಷನು ವ್ಯವಹಿತಸಾಧನವಾದ ಪಾಕದಲ್ಲಿ ಪ್ರವೃತ್ತಿ ಮಾಡುವುದು ಪಾಕವೇ ತೃಪ್ತಿಸಾಧನವೆಂಬ ಅಭಿಪ್ರಾಯದಿಂದಲ್ಲ. ತೃಪ್ತಿಯ ಸಾಧನವಾದ ಅನ್ನವನ್ನು ಅಪೇಕ್ಷಿಸಿ ಪಾಕಕ್ರಿಯೆಯಲ್ಲಿ ಪ್ರವೃತ್ತಿ ಮಾಡಿದ್ದಾನೆ. ಮೊದಲು ತೃಪ್ತಿಯಲ್ಲಿ ಅಪೇಕ್ಷೆ ಉಂಟಾಯಿತು. ಅನಂತರ ತೃಪ್ತಿಗೆ ಸಾಧನವಾದ ಭೋಜನದಲ್ಲಿ ಅಪೇಕ್ಷೆ ಉಂಟಾಯಿತು. ಅದಕ್ಕಾಗಿ ಪಾಕಕ್ರಿಯೆಯಲ್ಲಿ ಪ್ರವೃತ್ತಿಯನ್ನು ಮಾಡಿದ್ದಾನೆ. ಒಟ್ಟಾರೆ ತೃಪ್ತಿಗೆ ಅವ್ಯವಹಿತ ಸಾಧನವಾದದ್ದು ಭೋಜನ. ವ್ಯವಹಿತ ಸಾಧನವಾದದ್ದು ಪಾಕಕ್ರಿಯೆ. ವ್ಯವಹಿತ ಸಾಧನವಾದ ಪಾಕದಲ್ಲಿ ತೃಪ್ತಿಕಾಮನಾದಿಂದ ಕಾರ್ಯತ್ವ ಬುದ್ಧಿಯು ಹುಟ್ಟಿರು-ವುದಿಲ್ಲ. ಹೊರತಾಗಿ ತೃಪ್ತಿಗೆ ಸಾಧನವಾದ, ಅನ್ನಕಾಮನಾದಿಂದ ಕಾರ್ಯತ್ವ ಬುದ್ಧಿಯು ಹುಟ್ಟಿರುತ್ತದೆ. ಹೀಗೆ ಒಪ್ಪದಿದ್ದರೆ ಅನ್ನವು ಸಿದ್ಧವಾಗಿರುವಾಗ ತೃಪ್ತಿಕಾಮನೆ ಹುಟ್ಟಿದರೆ ಅಲ್ಲಿಯೂ ವ್ಯವಹಿತಸಾಧನವಾದ ಪಾಕಕ್ರಿಯೆಯಲ್ಲಿಯೇ ಕಾರ್ಯತ್ವಬುದ್ಧಿಯು ಬರಬೇಕಾದೀತು.

ಆದ್ದರಿಂದ ಫಲಪರ್ಯಂತವಾಗಿ ಇರುವ ಅಪೂರ್ವವನ್ನೇ 'ಲಿಙ್' ಪ್ರತ್ಯಯವು ತಿಳಿಸುತ್ತದೆಂದು ಒಪ್ಪಬೇಕು. ಹೀಗೆ ನಿಶ್ಚಯವಾದ ಮೇಲೆ 'ಅಹರಹಃ ಸಂಧ್ಯಾಮುಪಾಸೀತ' ಇತ್ಯಾದಿ ನಿತ್ಯಕರ್ಮಗಳಲ್ಲಿ ಫಲಕಾಮನೆಯು ಕೇಳಿಸದ ಕಾರಣ ನಿಯೋಜ್ಯದ ಅನ್ವಯ ಇರುವುದಿಲ್ಲ. ಆದರೂ ಸಹ ''ಏಕತ್ರ ನಿರ್ಣೀತಃ ಶಾಸ್ತ್ರಾರ್ಥಃ ಪರತ್ರ'' ಎಂಬ ನ್ಯಾಯದಂತೆ 'ಲಿಙ್' ಪ್ರತ್ಯಯಕ್ಕೆ ಅಪೂರ್ವವವೆಂಬ ಅರ್ಥವನ್ನೇ ಹೇಳಬೇಕು.

ಹೀಗೆ ಪೂರ್ವಮೀಮಾಂಸಕರು ನಿರ್ಣಯಿಸಿದ್ದಾರೆ. ಇದರಂತೆ ಪ್ರಕೃತ ಐತರೇಯಶ್ರುತಿಯಲ್ಲಿ ಪ್ರಸಕ್ತನಾದ ಪ್ರಾಣನು ಇಂದ್ರಾದಿಗಳೆಂದು ಸಿದ್ಧವಾದರೆ ತೈತ್ತೀರಿಯದಲ್ಲಿರುವ ಪ್ರಾಣನೂ ಸಹ ಇಂದ್ರಾದಿಗಳೇ ಆಗುತ್ತಾರೆ.

ಈ ವಿಷಯದಲ್ಲಿ ಭಾಟ್ಟರ ಸಮ್ಮತಿಯೂ ಇದೆ. ಯವವರಾಹಾಧಿಕರಣದಲ್ಲಿ ಭಾಟ್ಟರು ಈ ನ್ಯಾಯವನ್ನು ಅನುಸರಿಸಿದ್ದಾರೆ. ಜನ್ಮಾಧಿಕರಣದಲ್ಲಿ ವಿವರಿಸಿದ ಯವವರಾಹಾಧಿಕರಣವನ್ನು ಇಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು. ''ಯವಮಯಶ್ಚರುರ್ಭವತಿ'' ಎಂಬಲ್ಲಿ ಶ್ರುತವಾದ ಯವಶಬ್ದವು ಯಾವ ಧಾನ್ಯವಿಶೇಷವನ್ನು ಹೇಳುತ್ತದೆಂದು ತಿಳಿಯುವುದಿಲ್ಲ. ಆ ಸಂದರ್ಭದಲ್ಲಿ ''ಯತ್ರಾನ್ಯಾ ಓಷಧಯೋ ಮ್ಲಾಯಂತೇ ಏತೇ ಮೋದಮಾನಾ ಇವೋತ್ತಿಷ್ಠಂತಿ'' ಎಂಬ ವಾಕ್ಯಶೇಷದ ಬಲದಿಂದ ಯವಶಬ್ದವು ದೀರ್ಘಶೂಕವಿಶಿಷ್ಟವಾದ ಧಾನ್ಯವಿಶೇಷವನ್ನು ಹೇಳುತ್ತದೆಂದು ನಿರ್ಣಯವಾಗುತ್ತದೆ. ತದನಂತರ 'ಯವಾನ್ ಪಚ ಯವೈರ್ಯಜ' ಎಂಬ ವಾಕ್ಯಗಳಲ್ಲಿರುವ 'ಯವ' ಶಬ್ದವು 'ಏಕತ್ರ 'ನಿರ್ಣೀತಃ ಶಾಸ್ತ್ರಾರ್ಥಃ ಪರತ್ರ' ಎಂಬ ನ್ಯಾಯವನ್ನು ಅನುಸರಿಸಿ ದೀರ್ಘಶೂಕವಿಶಿಷ್ಟವಾದ ಧ್ಯಾನವಿಶೇಷವನ್ನು ಹೇಳುತ್ತದೆ. ವಸ್ತುತಃ 'ಯವಾನ್ ಪಚ' ಇತ್ಯಾದಿ ಸ್ಥಳಗಳಲ್ಲಿ ವಾಕ್ಯಶೇಷ ಇರುವುದಿಲ್ಲ. ಆದರೂ ಸಹ ಒಮ್ಮೆ ನಿರ್ಣಯವಾದ ಶಾಸ್ತ್ರಾರ್ಥವನ್ನು ಎಲ್ಲೆಡೆ ಇಟ್ಟುಕೊಳ್ಳಬಹುದೆಂಬ ಅಭಿಪ್ರಾಯದಿಂದ ಭಾಟ್ಟರು ಹೀಗೆ ಅರ್ಥೈಸಿದ್ದಾರೆ. ಇದರಂತೆ ಪ್ರಕೃತದಲ್ಲಿಯೂ ಒಮ್ಮೆ ಪ್ರಾಣಶಬ್ದದಿಂದ ಇಂದ್ರಾದಿಗಳು ಪ್ರತಿಪಾದ್ಯರಾದಲ್ಲಿ ಬೇರೆ ಸ್ಥಳಗಳಲ್ಲಿ ಇಂದ್ರಾದಿ ಲಿಂಗಗಳಿಲ್ಲದಿದ್ದರೂ ಪ್ರಾಣಶಬ್ದದಿಂದ ಇಂದ್ರಾದಿಗಳೇ ಪ್ರತಿಪಾದ್ಯರಾಗುತ್ತಾರೆಂದು ಶ್ರೀಮದಾಚಾರ್ಯರ ಅಭಿಪ್ರಾಯ.

ಅಂತಿಮಪ್ರಾಣಾಧಿಕರಣ-(೧।೧।೧೨)

**गुरुराजीयम् – कामिनियोज्येति ॥** कामीचासौ नियोज्यश्चेति कर्मधारयः । मतान्तरे भट्टमत इत्यर्थः ।

## ಸಾರ

ಶ್ರೀಮದಾಚಾರ್ಯರ 'ಪ್ರಾಚೀನೋಽಪ್ಯನ್ಯಃ' ಎಂಬ ಮಾತಿನ ಬಗ್ಗೆ ಆಕ್ಷೇಪ ಮಾಡಿದ್ದೂ ತಪ್ಪು. ಅಂತಿಮ-ಪ್ರಾಣಾಧಿಕರಣದಲ್ಲಿ ಪ್ರಾಣಶಬ್ದದಿಂದ ದೇವೇಂದ್ರಾದಿಗಳು ಪ್ರತಿಪಾದ್ಯರೆನ್ನಲು ವಿಶೇಷಲಿಂಗವಿದೆ. ಆದರೆ ಪ್ರಾಣಾ-ಧಿಕರಣದಲ್ಲಿ ಪ್ರಾಣಶಬ್ದವಾಚ್ಯನು ದೇವೇಂದ್ರನೆನ್ನಲು ವಿಶೇಷಲಿಂಗವಿರುವುದಿಲ್ಲ. ಆದರೂ ಸಹ ಈ ಅಧಿಕರಣದಲ್ಲಿ ವಿಶೇಷಲಿಂಗದ ಬಲದಿಂದ ದೇವೇಂದ್ರನು ಪ್ರಾಣಶಬ್ದವಾಚ್ಯನೆಂದು ನಿರ್ಣಯವಾದ ಮೇಲೆ ಹಿಂದಿನ ಪ್ರಾಣಾಧಿ-ಕರಣದ ಪ್ರಾಣನೂ ಸಹ ದೇವೇಂದ್ರನೆಂದೇ ನಿರ್ಣಯವಾಗುತ್ತದೆ. ಇದಕ್ಕೆ ವಿಶೇಷಕಾರಣ ಬೇಕಾಗಿಲ್ಲ.

ಪೂರ್ವಮೀಮಾಂಸಕರಿಗೂ ಭಾಟ್ಟರಿಗೂ ಈ ವಿಷಯ ಸಮ್ಮತವಾಗಿವೆ. 'ಸ್ವರ್ಗಕಾಮೋ ಯಜೇತ' ಎಂಬಲ್ಲಿರುವ 'ಲಿಜ್' ಪ್ರತ್ಯಯವು ಅಪೂರ್ವವೆಂಬ ಕಾರ್ಯವನ್ನು ಹೇಳುತ್ತದೆ. ಇದಕ್ಕೆ 'ಸ್ವರ್ಗಕಾಮಃ' ಎಂಬ ಪ್ರಯೋಗವೇ ಕಾರಣವಾಗಿದೆ. ಆದರೆ 'ಸಂಧ್ಯಾಮುಪಾಸೀತ' ಎಂಬಲ್ಲಿ ಫಲಕಾಮಿ ವಾಚಕವಾದ ಪದ ಇರು-ವುದಿಲ್ಲ. ಆದರೂ 'ಏಕತ್ರ ನಿರ್ಣೀತಃ ಶಾಸ್ತ್ರಾರ್ಥಃ ಸರ್ವತ್ರ' ಎಂಬ ನ್ಯಾಯವನ್ನು ಅನುಸರಿಸಿ 'ಉಪಾಸೀತ' ಎಂಬಲ್ಲಿರುವ 'ಲಿಜ್' ಪ್ರತ್ಯಯವೂ ಸಹ ಅಪೂರ್ವವೆಂಬ ಕಾರ್ಯತ್ವವನ್ನೇ ಹೇಳುತ್ತದೆ.

ಇದರಂತೆ ಭಾಟ್ಟರು ಯವಮಯಾಧಿಕರಣದಲ್ಲಿ 'ಯವ' ಶಬ್ದಕ್ಕೆ ವಾಕ್ಯಶೇಷದ ಬಲದಿಂದ ದೀರ್ಘ-ಶೂಕವಿಶಿಷ್ಟವಾದ ಧಾನ್ಯವಿಶೇಷವೆಂಬ ಅರ್ಥವನ್ನು ಅಂಗೀಕರಿಸಿದ್ದಾರೆ. ಆದರೆ ಎಲ್ಲಿ ವಾಕ್ಯಶೇಷವಿರುವು-ದಿಲ್ಲವೋ ಅಲ್ಲಿಯೂ ಸಹ ದೀರ್ಘಶೂಕವಿಶಿಷ್ಟವಾದ ಧಾನ್ಯವೆಂಬ ಅರ್ಥವನ್ನೇ ಅಂಗೀಕರಿಸಿದ್ದಾರೆ. 'ಏಕತ್ರ ನಿರ್ಣೀತಃ ಶಾಸ್ತ್ರಾರ್ಥಃ ಸರ್ವತ್ರ' ಎಂಬ ನ್ಯಾಯವೇ ಇದಕ್ಕೂ ಕಾರಣ. ಇದರಂತೆ ಪ್ರಕೃತ ಐತರೇಯ-ದಲ್ಲಿರುವ ಪ್ರಾಣಶಬ್ದವಾಚ್ಯನು ಇಂದ್ರಾದಿಗಳೆನ್ನಲು ಅನೇಕ ನಿರವಕಾಶಲಿಂಗಗಳಿರುತ್ತವೆ. ಆದರೆ ತೈತ್ತಿರೀಯ-ದಲ್ಲಿರುವ ಪ್ರಾಣನು ಇಂದ್ರಾದಿಗಳೆನ್ನಲು ಅಂತಹ ನಿರವಕಾಶಲಿಂಗಗಳಿರುವುದಿಲ್ಲ. ಆದ್ದರಿಂದ 'ಏಕತ್ರ ನಿರ್ಣೀತಃ ಶಾಸ್ತ್ರಾರ್ಥಃ ಸರ್ವತ್ರ' ಎಂಬ ನ್ಯಾಯವನ್ನು ಅನುಸರಿಸಿ ಶ್ರೀಮದಾಚಾರ್ಯರ ಮಾತನ್ನು ಅರ್ಥ-ಮಾಡಿಕೊಳ್ಳಬೇಕು.

* * * *

## ಇಲ್ಲಿ ಇಂದ್ರ ಪ್ರಾಣಾದಿಗಳು ಅಮುಖ್ಯವಾಗಿ ಪ್ರತಿಪಾದ್ಯರೆಂಬ ಪಕ್ಷ ತಪ್ಪು

### तात्पर्यचन्द्रिका

**न चात्रामुख्यवृत्त्या इन्द्रादिपरत्वेऽपि तल्लिङ्गोपपत्तिः, ''तद्वै त्वं प्राणः'' इत्यत्र तु मुख्यवृत्त्या विष्णुपरताऽस्त्विति वाच्यम्, अत्रेन्द्रादौ मुख्यत्वे बाधकाभावात् । नच विष्णौ मुख्यत्वमेव बाधकम्, तस्याद्याप्यसिद्धेः । इन्द्रादौ योगसम्भवात् ।**

**मुख्यप्राणे रूढेरपि सत्त्वाच्च । पूर्वपक्षे सर्वत्रापि वैदिकप्रयोगे प्राणशब्दस्ये-न्द्रादिपरत्वेन विष्णौ विद्वद्रूढेः तद्व्याप्यमहायोगस्य चाभावाच्च ।**

ಆಕ್ಷೇಪ - ಐತರೇಯದಲ್ಲಿ ಕೇಳಿಸುತ್ತಿರುವ ಪ್ರಾಣಶಬ್ದವು ಅಮುಖ್ಯವೃತ್ತಿಯಿಂದ ಇಂದ್ರಾದಿಗಳನ್ನು ಪ್ರತಿಪಾದಿಸುತ್ತಿದೆ. ಹೀಗೆ ಹೇಳಿದಾಗಲೂ ಲಿಂಗಗಳನ್ನು ಇಂದ್ರಾದಿಗಳಲ್ಲಿ ಕೂಡಿಸಬಹುದು. "ತದ್ವೈತ್ವಂ ಪ್ರಾಣಃ" ಎಂಬಲ್ಲಿ ಕೇಳಿಸುತ್ತಿರುವ ಪ್ರಾಣ ಶಬ್ದವು ವಿಷ್ಣುಪರವಾಗಬಹುದು. ಹೀಗೆ ಈ ಅಧಿಕರಣದಲ್ಲಿ ಅಮುಖ್ಯವೃತ್ತಿಯಿಂದ ಇಂದ್ರಾದಿಪರತ್ವವನ್ನು ಹಿಂದಿನ ಪ್ರಾಣಾಧಿಕರಣದಲ್ಲಿ ಮುಖ್ಯ-ವೃತ್ತಿಯಿಂದ ವಿಷ್ಣುಪರತ್ವವನ್ನು ಒಪ್ಪಿದಾಗ "ಏಕತ್ರ ನಿರ್ಣೀತಃ ಶಾಸ್ತ್ರಾರ್ಥಃ ಸರ್ವತ್ರ" ಎಂಬ ನ್ಯಾಯದಿಂದಲೂ ವಿರೋಧ ಬರುವುದಿಲ್ಲ.

ಸಮಾಧಾನ - ಐತರೇಯದಲ್ಲಿರುವ ಪ್ರಾಣಶಬ್ದವು ಅಮುಖ್ಯವೃತ್ತಿಯಿಂದ ಇಂದ್ರಾದಿಗಳನು ಪ್ರತಿಪಾದಿಸುತ್ತದೆಂದು ಹೇಳಬೇಕಾದರೆ, ಮುಖ್ಯವೃತ್ತಿಯಲ್ಲಿ ಬಾಧಕವಿರಬೇಕು. ಆದರೆ ಇಂದ್ರಾದಿ-ಗಳಲ್ಲಿ ಪ್ರಾಣಶಬ್ದವು ಮುಖ್ಯವೃತ್ತಿಯಿಂದ ಇರುತ್ತದೆನ್ನಲು ಯಾವುದೇ ಬಾಧಕವಿರುವುದಿಲ್ಲ. ವಿಷ್ಣುವಿನಲ್ಲಿ ಮುಖ್ಯವೃತ್ತಿಯಿಂದ ಇರುವುದೇ ಬಾಧಕವೆನ್ನಬೇಕು. ಆದರೆ ಈ ವಿಷಯವು ಇದು-ವರೆಗೂ ಸಿದ್ಧವಾಗಿಲ್ಲ. ಮತ್ತು ಇಂದ್ರಾದಿಗಳಲ್ಲಿ ಯೋಗಾರ್ಥವನ್ನು ಹೇಳಬಹುದು. ಮುಖ್ಯಪ್ರಾಣ-ನಲ್ಲಂತೂ ಯೋಗ ಹಾಗೂ ರೂಢಿ ಎರಡೂ ಇರುತ್ತವೆ. ಆದ್ದರಿಂದ ಮುಖ್ಯಾರ್ಥಗಳನ್ನೇ ಇಂದ್ರಾದಿ-ಗಳಲ್ಲಿ ಹೇಳಬಹುದು.

ಮತ್ತು ವೇದದಲ್ಲಿರುವ ಎಲ್ಲಾ ಪ್ರಾಣಶಬ್ದಗಳೂ ಇಂದ್ರಾದಿ ಪರವಾಗಿದೆ ಎಂದು ಪೂರ್ವಪಕ್ಷ ಮಾಡುವ ಸಂದರ್ಭದಲ್ಲಿ ವಿಷ್ಣುವಿನಲ್ಲಿ ವಿದ್ವದ್ರೂಢಿಯನ್ನೂ ಸಹ ಒಪ್ಪಲಾಗದು. ವಿದ್ವದ್-ಪ್ರಯೋಗದ ಬಾಹುಲ್ಯದಿಂದಷ್ಟೇ ವಿದ್ವದ್ರೂಢಿಯನ್ನು ಹೇಳಲು ಸಾಧ್ಯ. ವಿದ್ವದ್ರೂಢಿ ಇಲ್ಲದ್ದರಿಂದಲೇ ವಿದ್ವದ್ರೂಢಿಯಿಂದ ಅವಿನಾಭೂತವಾದ ಮಹಾಯೋಗವೂ ಸಹ ವಿಷ್ಣುವಿನಲ್ಲಿ ಬರುವುದಿಲ್ಲ. ಆದ್ದರಿಂದ ಇಂದ್ರಾದಿಗಳಲ್ಲಿ ಪ್ರಾಣಶಬ್ದವೂ ಇದೆ ಎಂದರೆ ಮುಖ್ಯವೃತ್ತಿಯಿಂದಲೇ ಇದೆ ಎಂದರ್ಥ. ಆದ್ದರಿಂದ ಈ ಅಧಿಕರಣದಲ್ಲಿ ಅಮುಖ್ಯವೃತ್ತಿಯಿಂದ ಇಂದ್ರಾದಿಗಳು ಪ್ರತಿಪಾದ್ಯರಾಗಿದ್ದಾರೆ. ಹಿಂದಿನ ಪ್ರಾಣಾಧಿಕರಣದಲ್ಲಿ ಮುಖ್ಯವೃತ್ತಿಯಿಂದ ವಿಷ್ಣುವು ಪ್ರತಿಪಾದ್ಯನಾಗಿದ್ದಾನೆಂಬ ಪಕ್ಷವು ಅಯುಕ್ತವಾಗಿದೆ.

### ಕಠಿಣಪದಾರ್ಥ

ತಲ್ಲಿಂಗೋಪಪತ್ತಿಃ = ಲಿಂಗಗಳನ್ನು ಇಂದ್ರಾದಿ ಪರವೆಂದು ಕೂಡಿಸಬಹುದು, ಮುಖ್ಯತ್ವೇ = ಮುಖ್ಯತ್ವವನ್ನು ಸ್ವೀಕರಿಸಲು, ತಸ್ಯ = ಹಿಂದಿನ ಪ್ರಾಣಾಧಿಕರಣದಲ್ಲಿ ವಿಷ್ಣುವಿನಲ್ಲಿ ನಿರ್ಣಯಿಸಿದ ಮುಖ್ಯವೃತ್ತಿತ್ವವು, ಯೋಗಸಂಭವಾತ್ = ಪ್ರಣೇತೃತ್ವವೆಂಬ ಧರ್ಮವು ಬರುವುದರಿಂದ, ಸರ್ವತ್ರ = 'ಪ್ರಾಣಸ್ಯ ಪ್ರಾಣಃ' ಇತ್ಯಾದಿ ಸ್ಥಳಗಳಲ್ಲಿ, ತದ್ವ್ಯಾಪ್ಯ = ವಿದ್ವದ್ರೂಢಿಯಿಂದ ವ್ಯಾಪ್ಯವಾದ,

**प्रकाशः** – ननु 'एकत्र निर्णीतः' इत्यस्यानुसरणेऽपि न प्रयोजनोक्तिर्युज्यते, ऐतरेयके यथा वाय्वादि त्रितयप्रापकसत्त्वेन त्रितयपरत्वमुपेयते, तथा विष्णुलिङ्गादेरपि सत्त्वेन तत्परत्वस्यापि सम्भवात्तत्रान्तर्नये अभेदनिरासने विष्णोरिन्द्रादिना ऐक्यायोगेऽपि चतुर्थपादीयोदाहरणेषु "अव्यक्तात्पुरुषः परः" इत्यादिषु मुख्यतो विष्णुपरत्वममुख्यतोऽन्यपरत्वमङ्गीकृतं, अन्यथा तारतम्याद्यसिद्धेः,

तद्वदत्रापि मुख्यतो विष्णुपरत्वेऽप्यमुख्यवृत्त्येन्द्रादिपरत्वाङ्गीकारमात्रेणापि इन्द्रादिलिङ्गाद्युपपत्तेः प्राक्तनस्याऽपि मुख्यतो विष्णुपरत्वस्य वा, इन्द्रादिलिङ्गानां बलवत्त्वेनात्र मुख्यत इन्द्रादिपरत्वेऽप्यमुख्यवृत्त्या विष्णुपरत्वेन पूर्वतनस्याप्यमुख्यतो विष्णुपरत्वस्य वा, विष्णुतदन्यप्रापकसत्त्वाविशेषेण मुख्यवृत्त्या उभयपरत्वस्यात्रैतरेयके सम्भवेन प्राचीनस्यापि मुख्यत उभयपरत्वस्य वा, ऐतरेयगतस्य प्राणस्य मुख्यवृत्त्येन्द्रादिपरत्वेऽपि तैत्तिरीयगतस्य मासाग्निहोत्रे अग्निहोत्रशब्दस्येव गौण्या वृत्त्या विष्णुपरत्वस्य वा, पूर्वत्र श्रीपतित्वादिविष्णुलिङ्गेन विष्ण्वर्थत्वस्य निश्चितत्वेनात्रापि तदर्थत्वापत्त्या वैपरीत्यस्यैव वा सम्भवेन पञ्चधा विष्णुपरत्वाक्षेपायोगादित्याशङ्क्याद्यं तावन्निरस्यति – **नचात्रेति** ॥ ऐतरेयक इत्यर्थः ॥

ವಿವರಣೆ - 'ಏಕತ್ರ ನಿರ್ಣೀತಃ ಶಾಸ್ತ್ರಾರ್ಥಃ ಸರ್ವತ್ರ' ಎಂಬ ನ್ಯಾಯವನ್ನು ಅನುಸರಿಸಿದರೂ ಶ್ರೀಮದಾಚಾರ್ಯರ ಮಾತು ಸರಿ ಹೊಂದುವುದಿಲ್ಲ. ಐತರೇಯಶ್ರುತಿಯಲ್ಲಿ 'ಮುಖ್ಯವಾಯು' ಮೊದಲಾದ ಮೂವರ ಲಿಂಗಗಳು ಕೇಳಿಸುತ್ತಿರುವುದರಿಂದ ತ್ರಿತಯಪರತ್ವವನ್ನು ಒಪ್ಪಿಕೊಳ್ಳಬೇಕು. ಅದರಂತೆ ವಿಷ್ಣುಲಿಂಗಾದಿಗಳು ಕೇಳಿಸುತ್ತಿರುವುದರಿಂದ ವಿಷ್ಣುಪರತ್ವವನ್ನೂ ಸಹ ಒಪ್ಪಬೇಕು. ಇಬ್ಬರಿಗೂ ಐಕ್ಯವನ್ನು ಒಪ್ಪಿದರೆ ಈ ಸಮಸ್ಯೆ ಪರಿಹಾರವಾಗಬಹುದು. ಆದರೆ ಜೀವಬ್ರಹ್ಮರ ಅಭೇದವನ್ನು ಅಂತರ್ಯಾಮ್ಯಧಿಕರಣದಲ್ಲಿ ನಿರಾಸ ಮಾಡಲಾಗಿದೆ. ಇನ್ನು ಚತುರ್ಥಪಾದದಲ್ಲಿ ಉದಾಹರಿಸುವ 'ಅವ್ಯಕ್ತಾತ್‌ಪುರುಷಃ ಪರಃ' ಇತ್ಯಾದಿ ಸ್ಥಳಗಳಲ್ಲಿ ವ್ಯಾಖ್ಯಾನಿಸುವಂತೆ ಇಲ್ಲಿಯೂ ತಿಳಿಯಬಹುದು. ಅವ್ಯಕ್ತಾದಿಶಬ್ದಗಳಿಂದ ವಿಷ್ಣುವು ಪರಮಮುಖ್ಯವೃತ್ತಿಯಿಂದ ವಾಚ್ಯನಾಗುತ್ತಾನೆ. ಅಮುಖ್ಯವೃತ್ತಿಯಿಂದ ಉಳಿದವರೂ ವಾಚ್ಯರಾಗುತ್ತಾರೆಂದು ಒಪ್ಪಬೇಕು. ಇಲ್ಲದಿದ್ದರೆ ತಾರತಮ್ಯವೇ ಅಸಿದ್ಧವಾದೀತು. ಹೀಗೆ ಚತುರ್ಥಪಾದದಲ್ಲಿ ಹೇಳಿದ್ದಾರೆ. ಅದರಂತೆ ಪ್ರಕೃತದಲ್ಲಿಯೂ ಮುಖ್ಯವೃತ್ತಿಯಿಂದ ಪ್ರಾಣಶಬ್ದವು ವಿಷ್ಣುವನ್ನು ಪ್ರತಿಪಾದಿಸಿದರೂ ಅಮುಖ್ಯವೃತ್ತಿಯಿಂದ ಇಂದ್ರಾದಿಗಳನ್ನೂ ಪ್ರತಿಪಾದಿಸುತ್ತದೆಂದು ಅಂಗೀಕರಿಸಬಹುದು. ಹೀಗೆ ಹೇಳಿದಾಗಲೂ ಶ್ರುತಿಗಳಲ್ಲಿ ಪ್ರಸಿದ್ಧವಾದ ಲಿಂಗಗಳು ಇಂದ್ರಾದಿಗಳಲ್ಲಿ ಉಪಪನ್ನವೇ ಆಗುತ್ತವೆ. ಹಿಂದಿನ ಪ್ರಾಣಾಧಿಕರಣದಲ್ಲಿಯೂ ಮುಖ್ಯವೃತ್ತಿಯಿಂದ ವಿಷ್ಣುವೇ ವಾಚ್ಯನಾಗಿದ್ದಾನೆ.

ಅಥವಾ ಇಂದ್ರಾದಿಲಿಂಗಗಳು ಬಲಿಷ್ಠವಾಗಿರುವುದರಿಂದ ಪ್ರಾಣಶಬ್ದಕ್ಕೆ ಇಂದ್ರಾದಿಪರತ್ವವನ್ನು ಈ ಅಧಿಕರಣದಲ್ಲಿ ಸಮರ್ಥಿಸುವುದು ಅನಿವಾರ್ಯ. ಆದರೆ ಹಿಂದಿನ ಅಧಿಕರಣದಲ್ಲಿ ಪ್ರಾಣಾದಿಶಬ್ದಗಳಿಂದ ವಿಷ್ಣುವು ಅಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆಂದು ಹೇಳಬಹುದು.

ಅಥವಾ ವಿಷ್ಣು ಹಾಗೂ ತದನ್ಯಪ್ರಾಪಕವಾದ ಧರ್ಮಗಳೂ ಎರಡೂ ಕಡೆ ಸಮಾನವಾಗಿರುವುದರಿಂದ ಐತರೇಯದಲ್ಲಿರುವ ಪ್ರಾಣಶಬ್ದದಿಂದ ಇಬ್ಬರೂ ಪ್ರತಿಪಾದ್ಯರಾಗುತ್ತಾರೆ. ಆದ್ದರಿಂದ ಹಿಂದಿನ ಪ್ರಾಣಾಧಿಕರಣದಲ್ಲಿರುವ ಪ್ರಾಣಶಬ್ದದಿಂದಲೂ ಇಬ್ಬರೂ ಮುಖ್ಯಪ್ರತಿಪಾದ್ಯರಾಗಿದ್ದಾರೆಂದು ಹೇಳಬಹುದು.

ಅಥವಾ ಐತರೇಯದಲ್ಲಿರುವ ಪ್ರಾಣಶಬ್ದವು ಮುಖ್ಯವೃತ್ತಿಯಿಂದ ಇಂದ್ರಾದಿಗಳನ್ನು ಪ್ರತಿಪಾದಿಸಿದರೂ ತೈತ್ತಿರೀಯದಲ್ಲಿರುವ ಪ್ರಾಣಶಬ್ದವು ಮಾಸಾಗ್ನಿಹೋತ್ರದಲ್ಲಿ ಬಳಸುವ ಅಗ್ನಿಹೋತ್ರ ಶಬ್ದದಂತೆ ಗೌಣೀವೃತ್ತಿಯಿಂದ ವಿಷ್ಣುಪರವಾಗುತ್ತದೆಂದು ಹೇಳಬಹುದು.

ಅಥವಾ ಹಿಂದಿನ ಪ್ರಾಣಾಧಿಕರಣದಲ್ಲಿ ಶ್ರೀಪತಿತ್ವ ಮೊದಲಾದ ವಿಷ್ಣುಲಿಂಗಗಳಿರುವುದರಿಂದ ವಿಷ್ಣುವೇ ಪ್ರಾಣಶಬ್ದವಾಚ್ಯನೆಂದು ನಿರ್ಣಯ ಮಾಡಲಾಗಿದೆ. ಅದರಂತೆ ಇಲ್ಲಿಯೂ ಸಹ ಪ್ರಾಣಶಬ್ದದಿಂದ ವಿಷ್ಣುವೇ ಮುಖ್ಯವಾಗಿ ಪ್ರತಿಪಾದ್ಯನಾಗಬಹುದು.

ಹೀಗೆ ಐದು ಬಗೆಯಲ್ಲಿ ವಿಷ್ಣುಪರತ್ವದ ಆಕ್ಷೇಪವನ್ನು ಮಾಡಿದ್ದು ತಪ್ಪೆಂದು ತಿಳಿಯುತ್ತದೆ. ಆದ್ದರಿಂದ ಶ್ರೀಮದಾಚಾರ್ಯರ ಮಾತಿಗೆ ಏನು ಅರ್ಥ? ಎಂಬ ಗೊಂದಲವು ಹಾಗೆಯೇ ಉಳಿಯಿತು.

**प्रकाशः – बाधकाभावादिति** ॥ ''अव्यक्तात्पुरुषः परः'' इत्यादौ अन्यस्य मुख्यत्वे बाधकं वक्ष्यत इति भावः । ननु प्रागुक्तरीत्या प्राणशब्दस्य विष्णौ मुख्यत्वं वा, इन्द्रादौ योगरूढ्योरसत्त्वं वा, विष्णौ प्रयोगबाहुल्यलब्धविद्वद्रूढिमहायोगसत्त्वं वा बाधकमित्याशङ्क्य क्रमेण निरस्यति – **नचेति** ॥ **अद्यापीति** ॥ प्रागुक्तस्यापीहाक्षेपादिति भावः ।

**योगेति** ॥ प्रणेतृत्वादेः खण्डितैश्वर्ययुतेऽपि सत्त्वादिति भावः ॥ **सर्वत्रेति** ॥ ''प्राणस्य प्राणः'' प्राण एवाकरणः' इत्यादै ॥ **तद्व्याप्येति** ॥

**विद्वद्रूढिर्वैदिका स्यात् सा योगादेव लभ्यते ।**

इत्युक्तेरिति भावः ।

'ಅವ್ಯಕ್ತಾತ್ ಪುರುಷಃ ಪರಃ' ಇತ್ಯಾದಿ ಸ್ಥಳಗಳಲ್ಲಿ ಪ್ರಕೃತ್ಯಾದಿಗಳಲ್ಲಿ ಅವ್ಯಕ್ತಕ್ಕೆ ಮುಖ್ಯಾರ್ಥವನ್ನು ಸ್ವೀಕರಿಸಲು ಬಾಧಕವನ್ನು ಹೇಳುತ್ತಾರೆ. ಆದರೆ ಪ್ರಕೃತ ಇಂದ್ರಾದಿಶಬ್ದಗಳಿಗೆ ದೇವೇಂದ್ರಾದಿಗಳಲ್ಲಿ ಮುಖ್ಯಾರ್ಥತ್ವವನ್ನು ಹೇಳಲು ಅಂತಹ ಬಾಧಕವೇನೂ ಇರುವುದಿಲ್ಲ.

ಆಕ್ಷೇಪ - ಇಲ್ಲಿಯೂ ಬಾಧಕವಿದೆ. ಹಿಂದೆ ಹೇಳಿದ ಪ್ರಕಾರ ಪ್ರಾಣಶಬ್ದವು ವಿಷ್ಣುವಿನಲ್ಲಿ ಮುಖ್ಯವಾಗಿರುವಿಕೆಯೇ ಬಾಧಕವಾಗಿದೆ. ಅಥವಾ ಇಂದ್ರಾದಿಗಳಲ್ಲಿ ಪ್ರಾಣಶಬ್ದದ ಯೋಗವಾಗಲೀ, ರೂಢಿಯಾಗಲೀ ಇಲ್ಲದಿರುವುದಿಲ್ಲವಿಕೆಯೂ ಬಾಧಕವಾಗಿದೆ. ಅಥವಾ ವಿಷ್ಣುವಿನಲ್ಲಿ ಪ್ರಯೋಗ-ಬಾಹುಲ್ಯದಿಂದ ತಿಳಿಯುವ ವಿದ್ವದ್ರೂಢಿ ಮತ್ತು ಮಹಾಯೋಗಗಳು ಬಾಧಕವಾಗಿವೆ. ಆದ್ದರಿಂದ ಇಂದ್ರಾದಿಗಳಲ್ಲಿ ಮುಖ್ಯಾರ್ಥವನ್ನು ಹೇಳಲು ಸಾಧ್ಯವಿಲ್ಲ.

ಸಮಾಧಾನ - ಮೂರುವಿಧ ಬಾಧಕಗಳಲ್ಲಿ ಮೊದಲನೇ ಬಾಧಕವನ್ನು 'ನಚ ವಿಷ್ಣೌ' ಎಂಬ ವಾಕ್ಯದಿಂದ ನಿರಾಕರಿಸಿದ್ದಾರೆ. ಹಿಂದಿನ ಪ್ರಾಣಾಧಿಕರಣದಲ್ಲಿ ವಿಷ್ಣುವಿನಲ್ಲಿ ಸಮರ್ಥಿಸಲ್ಪಟ್ಟ ಮುಖ್ಯತ್ವವನ್ನು ಈಗ ಆಕ್ಷೇಪಿಸುತ್ತಿರುವುದರಿಂದ ಅದನ್ನು ಬಾಧಕವೆಂದು ಪರಿಗಣಿಸಲಾಗದು. ಇದರಂತೆಯೇ ಇಂದ್ರಾದಿ-ಗಳಲ್ಲಿ ಪ್ರಾಣಶಬ್ದದ ಯೋಗ ಹಾಗೂ ರೂಢಿಗಳ ಇಲ್ಲದಿರುವಿಕೆಯನ್ನು ಬಾಧಕವೆಂದು ಹೇಳಲಾಗದು. ಏಕೆಂದರೆ ಇಂದ್ರನಲ್ಲಿ ಸ್ವಲ್ಪ ಐಶ್ವರ್ಯವಿದ್ದರೂ ಅಷ್ಟನ್ನೇ ವಿವಕ್ಷಿಸಿ 'ಪ್ರಣೇತೃತ್ವ' ಎಂಬ ಪ್ರಾಣಶಬ್ದದ ಪ್ರವೃತ್ತಿನಿಮಿತ್ತವನ್ನು ಹೇಳಲು ಬರುತ್ತದೆ. ಆದ್ದರಿಂದ ಪ್ರಾಣಶಬ್ದದ ಯೋಗವೃತ್ತಿಯನ್ನು ದೇವೇಂದ್ರನಲ್ಲಿ ಹೇಳಬಹುದು. ಮುಖ್ಯಪ್ರಾಣನಲ್ಲಂತೂ ರೂಢಿಯೇ ಇರುತ್ತದೆ. ಇನ್ನು ವಿಷ್ಣುವಿನಲ್ಲಿರುವ ವಿದ್ವದ್ರೂಢಿ ಮಹಾಯೋಗಗಳನ್ನು ಬಾಧಕವೆಂದು ಹೇಳಬೇಕು. ಆದರೆ ವೇದದಲ್ಲಿರುವ ಎಲ್ಲಾ ಪ್ರಾಣಶಬ್ದಗಳಿಗೂ ಇಂದ್ರಾದಿಪರತ್ವವನ್ನು ಪೂರ್ವಪಕ್ಷಿಯು ಆಕ್ಷೇಪಿಸುತ್ತಿರುವಾಗ ಪ್ರಯೋಗಬಾಹುಲ್ಯವೆಂಬ ವಿದ್ವ-ದ್ರೂಢಿಯನ್ನೇ ಹೇಳಲಾಗದು. ''ವಿದ್ವದ್ರೂಢಿರ್ವೈದಿಕಾ ಸ್ಯಾತ್ ಸಾ ಯೋಗಾದೇವ ಲಭ್ಯತೇ'' ಎಂಬ ಮಾತಿನಂತೆ ವಿದ್ವದ್ರೂಢಿಯೆಂಬ ವ್ಯಾಪಕ ಇಲ್ಲದಿದ್ದಾಗ ತದ್ವ್ಯಾಪ್ಯವಾದ ಮಹಾಯೋಗವೂ ಸಹ ಬರುವುದಿಲ್ಲ.

**गुरुराजीयम्** – विष्णौ मुख्यत्वं बाधकमिति वदन्प्रष्टव्यः । इन्द्रादौ प्राणशब्दस्य लाक्षणिकत्वेन योगरूढ्योरभावाद्ब्रह्मणि च रूढियोगयोः सत्त्वान्न तत्र मुख्यत्वमिति वा किं वेन्द्रादौ रूढियोगयोस्सद्भावेपि विष्णौ विद्वद्रूढि-महायोगयोस्सद्भावेन तत्र मुख्यत्वमिति वा । नाद्य इत्याह – **इन्द्रादावित्यादि** ॥ न द्वितीय इत्याह – **पूर्वपक्ष इति** ॥

## ಸಾರ

'ಏಕತ್ರ ನಿರ್ಣೀತಃ ಶಾಸ್ತ್ರಾರ್ಥಃ ಸರ್ವತ್ರ' ಎಂಬ ನ್ಯಾಯವನ್ನು ನಿರ್ಣಯಿಸಿ ಶ್ರೀಮದಾಚಾರ್ಯರ ಪೂರ್ವಪಕ್ಷಫಲದ ಮಾತನ್ನು ಸಮರ್ಥಿಸಿದಿರಿ. ಆದರೆ ಇದು ಅಯುಕ್ತವಾಗಿದೆ. ಈ ಅಧಿಕರಣದಲ್ಲಿ ನಿರವಕಾಶವಾದ ಇಂದ್ರಾದಿ ಲಿಂಗಗಳಿರುವುದರಿಂದ ಅಮುಖ್ಯವೃತ್ತಿಯಿಂದ ಇಂದ್ರಾದಿಪರತ್ವವನ್ನು ಪ್ರಾಣಶಬ್ದಕ್ಕೆ ಒಪ್ಪೋಣ. ಹಿಂದಿನ ಪ್ರಾಣಾಧಿಕರಣದಲ್ಲಿ ಮುಖ್ಯವೃತ್ತಿಯಿಂದಲೇ ವಿಷ್ಣುಪರತ್ವವನ್ನು ಒಪ್ಪೋಣ. ಹೀಗೆ ಒಪ್ಪಿದಾಗ ಈ ಅಧಿಕರಣದ ಪೂರ್ವಪಕ್ಷಕ್ಕೆ ಹಿಂದಿನ ಅಧಿಕರಣದ ಸಿದ್ಧಾಂತವನ್ನು ಆಕ್ಷೇಪಿಸುವುದನ್ನು ಫಲವೆಂದು ಹೇಳಲು ಸಾಧ್ಯ ?

ಪರಿಪೂರ್ಣಚಂದ್ರಿಕಾ

ಈ ಪ್ರಶ್ನೆಯೂ ಸಹ ತಪ್ಪು. ಏಕೆಂದರೆ ಐತರೇಯದ ಪ್ರಾಣಶಬ್ದಕ್ಕೆ ಇಂದ್ರಾದಿಗಳಲ್ಲಿ ಅಮುಖ್ಯವೃತ್ತಿಯನ್ನು ಏಕೆ ಹೇಳುತ್ತಿದ್ದೀರಿ. ಮುಖ್ಯವೃತ್ತಿಯನ್ನು ಒಪ್ಪಲು ಬಾಧಕವಿದ್ದರೇ ಮಾತ್ರ ಅಮುಖ್ಯವೃತ್ತಿಯನ್ನು ಹೇಳಬೇಕು. ವಿಷ್ಣುವಿನಲ್ಲಿ ಪ್ರಾಣಶಬ್ದವು ಮುಖ್ಯವಾಗಿರುವಿಕೆಯನ್ನು ಬಾಧಕವೆಂದು ಹೇಳಲಾಗದು. ಈ ಪ್ರಮೇಯವೂ ಹಿಂದಿನ ಪ್ರಾಣಾಧಿಕರಣದ ಸಿದ್ಧಾಂತವಾಗಿದೆ. ಅದನ್ನೇ ನಾವು ಪ್ರಕೃತ ಆಕ್ಷೇಪಿಸುತ್ತಿದ್ದೇವೆ.

ಇನ್ನು ಇಂದ್ರಾದಿಗಳಲ್ಲಿ ಯೋಗರೂಢಿಯ ಅಸತ್ವವನ್ನು ಬಾಧಕವೆಂದು ಹೇಳಬೇಕು. ಆದರೆ ಪ್ರಣೇತೃತ್ವವೆಂಬ ಯೋಗವನ್ನು ದೇವೇಂದ್ರನಲ್ಲಿ ಹೇಳಬಹುದು. ರೂಢಿಯನ್ನು ಮುಖ್ಯಪ್ರಾಣನಲ್ಲಿ ಹೇಳಬಹುದು. ಆದ್ದರಿಂದ ಇಂದ್ರಾದಿಗಳಲ್ಲಿರುವ ಯೋಗರೂಢಿಯ ಅಸತ್ವವನ್ನು ಬಾಧಕವೆಂದು ಹೇಳಲು ಹೇಗೆ ಸಾಧ್ಯ. ವಿಷ್ಣುವಿನಲ್ಲಿ ವಿದ್ವದ್ರೂಢಿ ಹಾಗು ಮಹಾಯೋಗಗಳನ್ನೇ ಬಾಧಕವೆಂದು ಅಂತಿಮವಾಗಿ ಹೇಳಲು ಸಾಧ್ಯ. ಆದರೆ ಯಾವ ಪೂರ್ವಪಕ್ಷಿಯು ವೇದದಲ್ಲಿರುವ ಎಲ್ಲಾ ಪ್ರಾಣಶಬ್ದಗಳಿಗೆ ವಿಷ್ಣುಪರತ್ವವನ್ನು ಅಂಗೀಕರಿಸದೆ ಕೇವಲ ಇಂದ್ರಾದಿ ವಾಚಕತ್ವವನ್ನು ಆಕ್ಷೇಪಿಸುತ್ತಿದ್ದಾನೋ ಅಂತಹ ಪೂರ್ವಪಕ್ಷಿಯು ವಿಷ್ಣುವಿನಲ್ಲಿ ವಿದ್ವದ್ರೂಢಿಯನ್ನೂ ಸಹ ಒಪ್ಪಲಾರ. ವಿದ್ವದ್ರೂಢಿಯನ್ನು ಒಪ್ಪಿದರೆ ಮಾತ್ರ ಮಹಾಯೋಗವನ್ನು ವಿಷ್ಣುವಿನಲ್ಲಿ ಹೇಳಬಹುದು. ಆದ್ದರಿಂದ ಶ್ರೀಮದಾಚಾರ್ಯರ ಆಕ್ಷೇಪದ ಪೂರ್ವಪಕ್ಷದ ಫಲಕಥನ ಮಾತಿನಲ್ಲಿ ಯಾವುದೇ ದೋಷವಿಲ್ಲ.

* * * *

## ಹಲವು ವಿಕಲ್ಪಗಳ ನಿರಾಸ

तात्पर्यचन्द्रिका

**न चात्र मुख्यवृत्त्या इन्द्रादिपरत्वेऽपि पूर्वत्रामुख्यवृत्त्या विष्णुपरता सिद्धान्तिनेष्यते । न चेन्द्रादौ विष्णौ च मुख्यता सत्यां गतावनेकार्थत्वस्यान्याय्यत्वात् । नच वाक्यद्वयस्थप्राणशब्दस्य मुख्यवृत्त्यैकार्थत्वे पूर्वपक्षिणं प्रति बाधकमस्ति, येन मासाग्निहोत्रे अग्निहोत्रशब्दस्येव, तत्र विष्णौ प्राणशब्दस्य गौणता स्यात् । अत एव चानुव्याख्याने पूर्वपक्षे ''अन्यस्य मुख्यवाच्यत्वम्'' इत्युक्तम् ।**

ಆಕ್ಷೇಪ - ಈ ಅಧಿಕರಣದಲ್ಲಿ ಬಲಿಷ್ಠವಾದ ಇಂದ್ರಾದಿಲಿಂಗಗಳಿರುವುದರಿಂದ ಪ್ರಾಣಶಬ್ದಕ್ಕೆ ಮುಖ್ಯವಾಗಿ ಇಂದ್ರಪರತ್ವವು ಸಿದ್ಧವಾಗುತ್ತದೆ; ಅಮುಖ್ಯವೃತ್ತಿಯಿಂದ ವಿಷ್ಣುಪರತ್ವವೂ ಸಿದ್ಧವಾಗುತ್ತದೆ. ಆದ್ದರಿಂದ ಹಿಂದಿನ ಅಧಿಕರಣದಲ್ಲಿ ಪ್ರಾಣಶಬ್ದದಿಂದಲೂ ವಿಷ್ಣು ಅಮುಖ್ಯವಾಗಿಯೇ ಪ್ರತಿಪಾದ್ಯನಾಗುತ್ತಾನಲ್ಲವೇ?

ಸಮಾಧಾನ - ಈ ಅಧಿಕರಣದಲ್ಲಿ ಮುಖ್ಯವೃತ್ತಿಯಿಂದ ಇಂದ್ರಾದಿಪರತ್ವವನ್ನು ಒಪ್ಪಿ ಅಮುಖ್ಯವೃತ್ತಿಯಿಂದ ವಿಷ್ಣುಪರತ್ವವನ್ನು ಪೂರ್ವಪಕ್ಷ ಮಾಡಿದರೂ ಸಹ ಹಿಂದಿನ ಅಧಿಕರಣದಲ್ಲಿ ಅಮುಖ್ಯವೃತ್ತಿಯಿಂದ ವಿಷ್ಣುಪರತ್ವವೆಂಬುದನ್ನು ಸಿದ್ಧಾಂತಿಯೇ ಒಪ್ಪಲಾರ.

ಆಕ್ಷೇಪ - ಇಂದ್ರಾದಿಗಳು ಮತ್ತು ವಿಷ್ಣು ಇಬ್ಬರಲ್ಲಿಯೂ ಪ್ರಾಣಶಬ್ದವು ಮುಖ್ಯವೃತ್ತಿಯಿಂದಲೇ ಇದೆಯೆಂದು ಹೇಳಬಹುದಲ್ಲವೇ?

ಸಮಾಧಾನ - ಬೇರೆ ಗತಿಯಿಲ್ಲದಾಗ ಮಾತ್ರ ಒಂದೇ ಶಬ್ದಕ್ಕೆ ಅನೇಕಾರ್ಥವನ್ನು ಹೇಳಬಹುದು. ಆದರೆ ಬೇರೆ ಗತಿ ಇದ್ದಾಗ ಹೀಗೆ ಅನೇಕಾರ್ಥ ಹೇಳುವುದು ಅನ್ಯಾಯವಾಗುತ್ತದೆ.

ಆಕ್ಷೇಪ - ಈ ಅಧಿಕರಣದಲ್ಲಿ ಮುಖ್ಯವೃತ್ತಿಯಿಂದ ಇಂದ್ರಾದಿಪರತ್ವವನ್ನು ಒಪ್ಪಿದರೂ ಹಿಂದಿನ ಅಧಿಕರಣದಲ್ಲಿ ಗೌಣೀವೃತ್ತಿಯಿಂದ ವಿಷ್ಣುಪರತ್ವವನ್ನು ಒಪ್ಪಬಹುದಲ್ಲವೇ?

ಸಮಾಧಾನ - ಐತರೇಯ ಹಾಗೂ ತೈತ್ತಿರೀಯ ಎರಡೂ ವಾಕ್ಯಗಳಲ್ಲಿರುವ ಪ್ರಾಣಶಬ್ದಕ್ಕೆ ಮುಖ್ಯವೃತ್ತಿಯಿಂದ ಒಂದೇ ಅರ್ಥವನ್ನು ಹೇಳಲು ಬರುವಾಗ ತೈತ್ತೀರಿಯದಲ್ಲಿರುವ ಪ್ರಾಣಶಬ್ದಕ್ಕೆ ಗೌಣಾರ್ಥವನ್ನು ಹೇಳುವುದು ತಪ್ಪಾಗುತ್ತದೆ. ಮುಖ್ಯಾರ್ಥದಲ್ಲಿ ಬಾಧಕವಿದ್ದರೆ ಮಾತ್ರ ಗೌಣಾರ್ಥವನ್ನು ಸ್ವೀಕರಿಸಬೇಕು. ಬಾಧಕ ಇದ್ದಿದ್ದರೆ 'ಮಾಸಂ ಅಗ್ನಿಹೋತ್ರಂ ಜುಹೋತಿ' ಎಂಬಲ್ಲಿ ಅಗ್ನಿಹೋತ್ರಶಬ್ದಕ್ಕೆ 'ಮಾಸಂ' ಎಂಬ ಬಾಧಕವಿರುವುದರಿಂದ ಗೌಣಾರ್ಥವನ್ನು ಮಾಡುವಂತೆ ಇಲ್ಲಿಯೂ ಸಹ ವಿಷ್ಣುವಿನಲ್ಲಿ ಪ್ರಾಣಶಬ್ದಕ್ಕೆ ಗೌಣಾರ್ಥವನ್ನು ಮಾಡಬಹುದಿತ್ತು. ಆದರೆ ಅಂತಹ ಬಾಧಕವೇನೂ ಕಾಣಿಸುತ್ತಿಲ್ಲ. ಆದ್ದರಿಂದಲೇ ಅನುವ್ಯಾಖ್ಯಾನದ ಪೂರ್ವಪಕ್ಷದಲ್ಲಿ 'ಅನ್ಯಸ್ಯ ಮುಖ್ಯವಾಚ್ಯತ್ವಂ' ಎಂದು ಹೇಳಿದ್ದಾರೆ.

### ಕಠಿಣಪದಾರ್ಥ

ಅತ್ರ = ಐತರೇಯದಲ್ಲಿ, ಪೂರ್ವತ್ರ = ತೈತ್ತಿರೀಯದಲ್ಲಿ, ಸತ್ಯಾಂಗತೌ = ಒಂದೇ ಅರ್ಥವನ್ನು ಹೇಳಲು ಬರುವಾಗ, ವಾಕ್ಯದ್ವಯಶ್ಚ = ಐತರೇಯ ಹಾಗೂ ತೈತ್ತಿರೀಯ ವಾಕ್ಯಗಳಲ್ಲಿರುವ, ಅತ ಏವ = ಎರಡೂ ವಾಕ್ಯಗಳಲ್ಲಿರುವ ಪ್ರಾಣಶಬ್ದಕ್ಕೆ ಒಂದೇ ಅರ್ಥವನ್ನು ಹೇಳಿದಾಗ ಬಾಧಕವಿಲ್ಲದಿರುವುದರಿಂದಲೇ.

**ಪ್ರಕಾಶಃ** – द्वितीयं पक्षं निरस्यति – न चात्रेति ॥ ऐतरेये मुख्यवृत्त्येन्द्रादिपरत्वेऽप्यमुख्यतो विष्णुपरत्वाङ्गीकारेण प्राचीनस्य तथात्वं सिद्धान्तिनोऽनभिमतमित्यर्थः ।

ವಿವರಣೆ - ಬಲಿಷ್ಠವಾದ ಲಿಂಗಗಳ ಬಲದಿಂದ ಪ್ರಾಣಶಬ್ದಕ್ಕೆ ಮುಖ್ಯವಾಗಿ ಇಂದ್ರಾದಿಪರತ್ವವನ್ನು ಈ ಅಧಿಕರಣದಲ್ಲಿ ಹೇಳಿ ಹಿಂದಿನ ಅಧಿಕರಣದಲ್ಲಿ ಅಮುಖ್ಯವೃತ್ತಿಯಿಂದ ವಿಷ್ಣುಪರತ್ವವನ್ನು ಒಪ್ಪೋಣವೆಂಬ ಎರಡನೇ ಪಕ್ಷವನ್ನು 'ನ ಚಾತ್ರೇ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಐತರೇಯದಲ್ಲಿ ಮುಖ್ಯವೃತ್ತಿಯಿಂದ ಇಂದ್ರಾದಿ ಪರತ್ವವನ್ನು ಒಪ್ಪಿದರೂ ಅಮುಖ್ಯವೃತ್ತಿಯಿಂದ ವಿಷ್ಣುಪರತ್ವವನ್ನು ಒಪ್ಪಲಾಗಿದೆ. ಆದ್ದರಿಂದಲೇ ಹಿಂದಿನ ಅಧಿಕರಣದಲ್ಲಿಯೂ ಅಮುಖ್ಯವೃತ್ತಿಯಿಂದ ವಿಷ್ಣುಪರತ್ವವನ್ನು ಒಪ್ಪೋಣವೆಂಬುದು ಸಿದ್ಧಾಂತಿಗೆ ಅಭಿಮತವಾಗಿರುವುದಿಲ್ಲವೆಂದು ಅಭಿಪ್ರಾಯ.

### ಪರಿಪೂರ್ಣಚಂದ್ರಿಕಾ

**प्रकाशः** – तृतीयं निरस्यति – **नचेन्द्रादाविति** ॥ अस्य प्राक्तनस्य चेत्यर्थः । ननु 'राजा कुवलयोल्लासि' इत्यादाविव किं न स्यादित्यत आह – **नचेति** ॥ तत्र वक्तृविक्षादिविरोध इव प्रकृते बाधकाभावादिति भावः ।

ಪ್ರಾಣಶಬ್ದವು ಮುಖ್ಯವೃತ್ತಿಯಿಂದ ದೇವೇಂದ್ರ ಹಾಗೂ ವಿಷ್ಣು ಇಬ್ಬರನ್ನೂ ಪ್ರತಿಪಾದಿಸುತ್ತದೆಂಬ ಮೂರನೇ ಪಕ್ಷವನ್ನು 'ನಚ ಇಂದ್ರಾದೌ' ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

ಶಂಕೆ - ''ರಾಜಾ ಕುವಲಯೋಲ್ಲಾಸಿ'' ಎಂಬುದಕ್ಕೆ ರಾಜನು ಕುವಲಯ ಎಂಬ ಹೂಗಳಿಂದ ಶೋಭಾಯಮಾನವಾಗಿದ್ದಾನೆಂಬುದು ಒಂದು ಅರ್ಥ. ಅಥವಾ ಕುವಲಯದಿಂದ (ಕು = ಭೂ, ವಲಯ = ಮಂಡಲ) ಶೋಭಿತನಾಗಿದ್ದಾನೆಂಬುದು ಮತ್ತೊಂದು ಅರ್ಥ. ಹೀಗೆ 'ಕುವಲಯೋಲ್ಲಾಸಿ' ಎಂಬ ಒಂದೇ ಪದಕ್ಕೆ ಎರಡು ಅರ್ಥವನ್ನು ಹೇಳುವಂತೆ ಇಲ್ಲಿಯೂ ಸಹ 'ಪ್ರಾಣ'ಶಬ್ದಕ್ಕೆ 'ವಿಷ್ಣು' ಹಾಗೂ 'ಇಂದ್ರ' ಎಂಬ ಎರಡು ಅರ್ಥವನ್ನು ಏಕೆ ಹೇಳಬಾರದು?

ಸಮಾಧಾನ - ಈ ಶಂಕೆಗೆ 'ನಚ ವಾಕ್ಯದ್ವಯಶ್ಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ವಕ್ತೃವಿನ ವಿವಕ್ಷೆಯನ್ನು ಅನುಸರಿಸಿ ಶಬ್ದಗಳಿಗೆ ಅರ್ಥವನ್ನು ತಿಳಿಯಬೇಕು. 'ಕುವಲಯೋಲ್ಲಾಸಿ' ಎಂಬಲ್ಲಿ ಎರಡೂ ಬಗೆಯ ಅರ್ಥವೂ ವಕ್ತೃವಿಗೆ ವಿವಕ್ಷಿತವಾದ್ದರಿಂದ ಹಾಗೇ ಎರಡು ಅರ್ಥವನ್ನು ಹೇಳುವುದು ಅನಿವಾರ್ಯ. ಇಲ್ಲದಿದ್ದರೆ ವಕ್ತೃವಿವಕ್ಷೆಯ ವಿರೋಧವು ಬರುತ್ತದೆ. ಆದರೆ ಪ್ರಕೃತ ಪ್ರಾಣಶಬ್ದಕ್ಕೆ ಎರಡು ಅರ್ಥವನ್ನು ಹೇಳದಿದ್ದರೆ ವಕ್ತೃವಿವಕ್ಷಾವಿರೋಧವೆಂಬ ಬಾಧಕ ಇರುವುದಿಲ್ಲ ಎಂದು ಈ ಮಾತಿನ ಆಂತರ್ಯ. (''ನಚ ವಾಕ್ಯದ್ವಯಶ್ಚ'' ಇತ್ಯಾದಿ ವಾಕ್ಯಕ್ಕೆ ಇದು ಒಂದು ಬಗೆಯ ವ್ಯಾಖ್ಯಾನ; ಮತ್ತೊಂದು ಬಗೆಯ ವ್ಯಾಖ್ಯಾನವನ್ನು ಮುಂದೆ ಮಾಡುತ್ತಿದ್ದಾರೆ.)

**प्रकाशः** – यद्वाऽस्य मुख्यवृत्त्येन्द्रादिपरत्वेऽपि गौण्या वृत्त्या प्राचीनो विष्णुस्स्यादिति चतुर्थं पक्षं दृष्टान्तवैषम्योक्त्याऽपाकरोति – **नच वाक्येति** ॥ ऐतरेयतैत्तिरीयस्थेत्यर्थः ।

सप्तमे उक्तं **''क्रियाभिधानं तत् श्रुतावन्यत्र विधिप्रदेशः स्यात्''** इति तृतीयपादीयाद्याधिकरणे कुण्डपायिनामयने श्रुतं **''मासमग्निहोत्रं जुहोति''** इति वाक्यमुदाहृत्य, किमग्निहोत्रशब्दो नैयमिकाग्निहोत्रधर्माणामतिदेशको नेति संशये, उभयत्रापि जुहोति सामानाधिकरण्येन निर्देशाविशेषात् नामधेयत्वेन मुख्यत्वान्न धर्माणामतिदेशक इति प्राप्ते,

एकत्र मुख्यत्वेऽन्यत्र गौणत्वेनाप्युपपत्तावुभयत्र शक्तिकल्पनस्यान्याय्यत्वात्, नित्याग्निहोत्रे अग्नये होत्रमस्मिन्निति प्रवृत्तिनिमित्तसम्भवेन नैयमिके मुख्यत्वादन्यत्र

तत्सादृश्यविधित्सया गौण इति तद्धर्मातिदेशक इति सिद्धान्तितम् । तत्र यथा नैयमिकमासाग्निहोत्रयोः प्रकरणभेदेन भेदस्य द्वितीये निश्चितत्वान्मासाग्निहोत्रे प्रवृत्तिनिमित्ताभावेनानेकार्थस्यान्याय्यत्वेन च बाधकेन गौणत्वमुक्तम् । नच तथाऽत्र किञ्चिद्बाधकमस्ति, प्रत्युतैकार्थत्वं अमुख्यवृत्तिकत्वं चाश्रितं भवतीत्यर्थः ॥

**अत एवेति ॥ वाक्यद्वयस्थप्राणशब्दस्य मुख्यवृत्त्यैकार्थत्वे बाधकाभावादेव**

**................ बाहुल्यात् श्रुतिलिङ्गयोः ।**
**अन्यस्य मुख्यवाच्यत्वमिति तन्मात्रगस्य हि ।**

**इत्युक्तमित्यर्थः । इदमाद्यपक्षेऽपि ज्ञापकतया योज्यम् ।**

ವಿವರಣೆ - ಈ ಅಧಿಕರಣದಲ್ಲಿ ಮುಖ್ಯವೃತ್ತಿಯಿಂದ ಪ್ರಾಣಶಬ್ದವೂ ಇಂದ್ರಾದಿ ಪರವಾದರೂ ಹಿಂದಿನ ಅಧಿಕರಣದಲ್ಲಿ ಗೌಣೀವೃತ್ತಿಯಿಂದ ವಿಷ್ಣುಪರವಾಗಬಹುದು ಎಂಬ ನಾಲ್ಕನೆಯ ಪಕ್ಷವನ್ನು ನಿರಾಕರಿಸಲು 'ನಚ' ಎಂಬ ನಾಲ್ಕನೇ ಪಕ್ಷವನ್ನು "ನಚ ವಾಕ್ಯದ್ವಯಶ್ಚ" ಎಂಬ ಮಾತಿನಿಂದಲೇ ನಿರಾಕರಿಸುತ್ತಿದ್ದಾರೆ. ನೀವು ನೀಡಿದ ಪೂರ್ವಮೀಮಾಂಸಾ ದೃಷ್ಟಾಂತವೇ ವಿಷಮವಾಗಿದೆ. ಅದು ಹೀಗೆ -

ಕ್ರಿಯಾಭಿಧಾನಂ ತತ್ ಶ್ರುತಾವನ್ಯತ್ರ ವಿಧಿಪ್ರದೇಶಸ್ಸ್ಯಾತ್ (೭-೩-೧)

ಈ ಅಧಿಕರಣದಲ್ಲಿ ಮಾಡಿದ ವಿಚಾರ ಹೀಗಿದೆ - ಕುಂಡಪಾಯಿನ ಎಂಬ ಸತ್ರ ವಿಶೇಷದಲ್ಲಿ 'ಮಾಸಮಗ್ನಿಹೋತ್ರಂ ಜುಹೋತಿ' ಎಂಬ ವಾಕ್ಯವು ಶ್ರುತವಾಗಿದೆ. ನಿತ್ಯಾಗ್ನಿಹೋತ್ರದಲ್ಲಿ ಪ್ರಯೋಗಿಸುವ ಅಗ್ನಿಹೋತ್ರ ಶಬ್ದವನ್ನು ಮಾಸಾಗ್ನಿಹೋತ್ರದಲ್ಲಿ ಬಳಸಿದ್ದಾರೆ. ಇದರಿಂದ ಇಲ್ಲಿರುವ ಅಗ್ನಿಹೋತ್ರ ಶಬ್ದವು ನಿತ್ಯಾಗ್ನಿಹೋತ್ರದ ಧರ್ಮಗಳನ್ನು ಅತಿದೇಶ ಮಾಡುತ್ತಿದೆಯೋ ಇಲ್ಲವೋ? ಎಂದು ಸಂಶಯ.

ಪೂರ್ವಪಕ್ಷ - ಅತಿದೇಶವನ್ನು ಮಾಡಬೇಕಾಗಿಲ್ಲ. ನಿತ್ಯಾಗ್ನಿಹೋತ್ರಪ್ರಕರಣದಲ್ಲಿಯೂ 'ಅಗ್ನಿಹೋತ್ರಂ ಜುಹೋತಿ' ಎಂಬುದಾಗಿ 'ಜುಹೋತಿ' ಎಂಬ ಪದವನ್ನು ಬಳಸಿದ್ದಾರೆ. ಮಾಸಾಗ್ನಿಹೋತ್ರ ಪ್ರಕರಣದಲ್ಲಿಯೂ 'ಮಾಸಂ ಅಗ್ನಿಹೋತ್ರಂ ಜುಹೋತಿ' ಎಂಬುದಾಗಿ 'ಜುಹೋತಿ' ಎಂಬ ಪದವನ್ನು ಬಳಸಿದ್ದಾರೆ. ಹೀಗೆ ಎರಡೂ ಕಡೆಯೂ 'ಜುಹೋತಿ' ಪದವು ಸಮಾನವಾಗಿ ಶ್ರುತವಾಗಿದೆ. 'ಸಾಮಾನಾಧಿ ಕರಣ್ಯೇನ ಜುಹೋತಿ' ಪದವನ್ನು ನಿರ್ದೇಶಿಸಿದ್ದರಿಂದ ನಿತ್ಯಾಗ್ನಿಹೋತ್ರಕ್ಕೂ ಮತ್ತು ಮಾಸಾಗ್ನಿಹೋತ್ರಕ್ಕೂ ಅಗ್ನಿಹೋತ್ರಪದವು ನಾಮಧೇಯವಾಗಿದೆ. ಆದ್ದರಿಂದ ಎರಡೂಕಡೆ ಶಬ್ದವು ಮುಖ್ಯವಾಗಿಯೇ ಇರುವುದರಿಂದ ಧರ್ಮಗಳ ಅತಿದೇಶವನ್ನು ಮಾಡುವ ಅವಶ್ಯಕತೆ ಇಲ್ಲ. ಗೌಣೀವೃತ್ತಿಯನ್ನು ಆಶ್ರಯಿಸಿದರೆ ಮಾತ್ರ ಅತಿದೇಶವನ್ನು ಮಾಡಬೇಕಾಗುತ್ತದೆ. ಉದಾಹರಣೆ - 'ಸಿಂಹೋ ದೇವದತ್ತಃ' ಎಂದು ಗೌಣವಾಗಿ ಏಕೆ ಪ್ರಯೋಗಿಸುವುದೆಂದರೆ ಸಿಂಹದಲ್ಲಿರುವ ಶೌರ್ಯಾದಿಗುಣಗಳನ್ನು ದೇವದತ್ತನಲ್ಲಿ ಅತಿದೇಶ ಮಾಡುವುದಕ್ಕಾಗಿ. ಅದರಂತೆ ಇಲ್ಲಿಯೂ ಅಗ್ನಿಹೋತ್ರಶಬ್ದವು ಗೌಣವಾಗಿದ್ದಲ್ಲಿ ಅತಿದೇಶ ಮಾಡುವ ಅವಶ್ಯಕತೆ ಇರುತ್ತಿತ್ತು.

ಸಿದ್ಧಾಂತ - ಅಗ್ನಿಹೋತ್ರಶಬ್ದಕ್ಕೆ ನಿತ್ಯಾಗ್ನಿಹೋತ್ರ ಮತ್ತು ಮಾಸಾಗ್ನಿಹೋತ್ರದಲ್ಲಿ ಶಕ್ತಿಕಲ್ಪನೆ ಮಾಡುವುದು ಅನ್ಯಾಯ. ಒಂದು ಅರ್ಥದಲ್ಲಿ ಮುಖ್ಯಾರ್ಥವನ್ನು ಹೇಳಿ, ಇನ್ನೊಂದು ಅರ್ಥದಲ್ಲಿ ಗೌಣಾರ್ಥವನ್ನು ಹೇಳಲು ಬರುವಾಗ ಎರಡೂ ಕಡೆ ಶಕ್ತಿಯನ್ನು ಏಕೆ ಕಲ್ಪಿಸಬೇಕು? ಮತ್ತು ನಿತ್ಯಾಗ್ನಿಹೋತ್ರದಲ್ಲಿ 'ಅಗ್ನಯೇ ಹೋತ್ರಂ ಅಸ್ಮಿನ್' ಎಂಬುದಾಗಿ ಅಗ್ನಿಹೋತ್ರ ಶಬ್ದದ ಪ್ರವೃತ್ತಿನಿಮಿತ್ತವು ನಿತ್ಯಾಗ್ನಿಹೋತ್ರದಲ್ಲಿಯೇ ಅಗ್ನಿಹೋತ್ರಶಬ್ದಕ್ಕೆ ಮುಖ್ಯಾರ್ಥವನ್ನು ಮಾಡಬೇಕು. ಮಾಸಾಗ್ನಿಹೋತ್ರದಲ್ಲಿ ಅಮುಖ್ಯವೃತ್ತಿಯನ್ನೇ ಹೇಳಬೇಕು. ಹಾಗಾದರೆ ಗೌಣೀವೃತ್ತಿಯನ್ನು ಏಕೆ ಮಾಡಬೇಕು? ಎಂದು ಪ್ರಶ್ನೆ ಬರಬಹುದು. ನಿತ್ಯಾಗ್ನಿಹೋತ್ರವನ್ನು ಹೇಗೆ ಆಚರಿಸುತ್ತೇವೋ ಅದರಂತೆ ಮಾಸಾಗ್ನಿಹೋತ್ರವನ್ನು ಆಚರಿಸಬೇಕು. ಅಂದರೆ ನಿತ್ಯಾಗ್ನಿಹೋತ್ರದಲ್ಲಿರುವ ಧರ್ಮಗಳನ್ನು ಅತಿದೇಶ ಮಾಡುವುದಕ್ಕೋಸ್ಕರ ಹೀಗೆ ಗೌಣಪ್ರಯೋಗವನ್ನು ಅನೇಕ ಕಡೆ ಮಾಡುತ್ತಾರೆ.

ನಿತ್ಯಾಗ್ನಿಹೋತ್ರ ಮತ್ತು ಮಾಸಾಗ್ನಿಹೋತ್ರ ಇವುಗಳ ಪ್ರಕರಣ ಭಿನ್ನಭಿನ್ನವಾದ್ದರಿಂದ ಇವುಗಳಿಗೂ ಪರಸ್ಪರ ಭೇದವಿದೆಯೆಂದು ಎರಡನೆಯ ಅಧ್ಯಾಯದಲ್ಲಿ ನಿಶ್ಚಯ ಮಾಡಿದ್ದಾಗಿದೆ. ಆದ್ದರಿಂದ ಮಾಸಾಗ್ನಿಹೋತ್ರದಲ್ಲಿ ಪ್ರವೃತ್ತಿನಿಮಿತ್ತವು ಇಲ್ಲದ ಕಾರಣ ಮತ್ತು ಅನೇಕ ಅರ್ಥಗಳನ್ನು ಕಲ್ಪಿಸುವುದು ಅನ್ಯಾಯವಾದ್ದರಿಂದ ಗೌಣಾರ್ಥವನ್ನು ಮಾಡಬೇಕು. ಹೀಗೆ ಪ್ರವೃತ್ತಿನಿಮಿತ್ತಾಭಾವ ಮತ್ತು ಅನೇಕಾರ್ಥಸ್ಯ ಅನ್ಯಾಯತ್ವ ಎಂಬೆರಡು ಬಾಧಕಗಳಿರುವುದರಿಂದ ಗೌಣಾರ್ಥವನ್ನು ಹೇಗೆ ಮಾಡುತ್ತೇವೋ; ಅದರಂತೆ ಪ್ರಕೃತ ಪ್ರಾಣಶಬ್ದಕ್ಕೆ ವಿಷ್ಣುವಿನಲ್ಲಿ ಗೌಣಾರ್ಥವನ್ನು ಹೇಳಲು ಯಾವುದೇ ಬಾಧಕಗಳಿರುವುದಿಲ್ಲ. ಹೊರತಾಗಿ ಏಕಾರ್ಥತ್ವ ಮತ್ತು ಮುಖ್ಯವೃತ್ತಿತ್ವವೇ ಇರುತ್ತದೆ.

ಹೀಗೆ ಎರಡು ವಾಕ್ಯಗಳಲ್ಲಿರುವ ಪ್ರಾಣ ಎಂಬ ಶಬ್ದಕ್ಕೆ ಮುಖ್ಯವೃತ್ತಿಯಿಂದ ಒಂದೇ ಅರ್ಥವನ್ನು ಹೇಳಲು ಏನೂ ಬಾಧಕವಿಲ್ಲದ್ದರಿಂದಲೇ ಶ್ರೀಮದಾಚಾರ್ಯರು ಅನುವ್ಯಾಖ್ಯಾನದಲ್ಲಿ ''ಬಾಹುಲ್ಯಾತ್ ಶ್ರುತಿಲಿಂಗಯೋಃ। ಅನ್ಯಸ್ಯ ಮುಖ್ಯವಾಚ್ಯತ್ವಂ ಇತಿ ತನ್ಮಾತ್ರಗಸ್ಯ ಹಿ'' ಎಂದು ಹೇಳಿದ್ದಾರೆ. ಆಚಾರ್ಯರ ಈ ಮಾತನ್ನು ಪೂರ್ವಪಕ್ಷದಲ್ಲಿಯೂ ಅನುಸಂಧಾನ ಮಾಡಿಕೊಳ್ಳಬೇಕು.

**गुरुराजीयम्** – सिद्धान्तिनेति हेतुगर्भविशेषणम् । तथात्वे तदुक्तगुणालाभेन समन्वयकथनवैयर्थ्यं स्यादिति भावः । यावज्जीवकाग्निहोत्रेऽग्निहोत्रशब्दस्य मुख्यत्वेपि मासाग्निहोत्रेऽमुख्यत्ववत् प्राणशब्दस्यापि मुख्यप्राणे मुख्यत्वेपि विष्णावमुख्यत्वस्यैव न्याय्यत्वात्कथमनेकार्थत्वमन्याय्यमित्यतो वैषम्येण परिहरति – **नचेति** ॥ तत्र तद्वैत्वं प्राण इत्यत्रेत्यर्थः ।

## ಸಾರ

ಈ ಅಧಿಕರಣದಲ್ಲಿ ಪ್ರಾಣಶಬ್ದವು ಇಂದ್ರನಲ್ಲಿ ಮುಖ್ಯವಾಗಿದೆ. ಹಿಂದಿನ ಅಧಿಕರಣದಲ್ಲಿ ವಿಷ್ಣುವಿನಲ್ಲಿ ಗೌಣವಾಗಿದೆ ಎಂದು ಹೇಳಬಹುದಲ್ಲವೇ? ಎಂಬ ಶಂಕೆಗೂ ಈಗ ಅವಕಾಶವಿಲ್ಲ. ಸಿದ್ಧಾಂತಿಯಾದವನಿಗೆ ಇದು

ಅಭಿಮತವೇ ಆಗಿಲ್ಲ. ಆದರಂತೆ ಇಂದ್ರ ಹಾಗೂ ವಿಷ್ಣು ಇಬ್ಬರಲ್ಲಿಯೂ ಮುಖ್ಯಾರ್ಥವನ್ನು ಹೇಳೋಣವೇ? ಎಂಬ ಶಂಕೆಯನ್ನು ಈಗ ನಿರಾಕರಿಸಿದಂತಾಯಿತು.

ಬೇರೆ ಮಾರ್ಗವಿಲ್ಲದಾಗ ಮಾತ್ರ ಒಂದೇ ಶಬ್ದಕ್ಕೆ ಅನೇಕಾರ್ಥವನ್ನು ಹೇಳಬಹುದು. ಆದರೆ ಏನೂ ತೊಂದರೆಯಿಲ್ಲದಿದ್ದಾಗ ಎರಡರ್ಥ ಹೇಳುವುದು ತಪ್ಪಾಗುತ್ತದೆ. ಐತರೇಯದಲ್ಲಿ ಮುಖ್ಯವೃತ್ತಿಯಿಂದ ದೇವೇಂದ್ರನು ಪ್ರತಿಪಾದ್ಯನು. ತೈತ್ತೀರಿಯದಲ್ಲಿ ವಿಷ್ಣು ಗೌಣೀವೃತ್ತಿಯಿಂದ ಪ್ರತಿಪಾದ್ಯನು ಎಂಬ ಶಂಕೆಯೂ ಸಹ ತಪ್ಪು.

ಬಾಧಕವಿದ್ದಾಗ ಮಾತ್ರ ಮುಖ್ಯಾರ್ಥವನ್ನು ಬಿಟ್ಟು ಗೌಣೀವೃತ್ತಿಯನ್ನು ಆಶ್ರಯಿಸಬೇಕು. ಆದರೆ ಇಂದ್ರಶಬ್ದಕ್ಕೆ ವಿಷ್ಣುಪರತ್ವವನ್ನು ಒಪ್ಪಿದಾಗ ಯಾವುದೇ ಬಾಧಕಗಳಿರುವುದಿಲ್ಲ. ಆದ್ದರಿಂದ ಯಾವುದೇ ಪ್ರಕಾರದಿಂದಲೂ ಈ ಅಧಿಕರಣದ ಪೂರ್ವಪಕ್ಷದ ಫಲವನ್ನು ಹೇಳಿದ್ದು ಅಸಾಧುವೆಂದು ಶಂಕಿಸಲಾಗದು.

* * * *

## ಪೂರ್ವಪಕ್ಷದ ಫಲಸಮರ್ಥನೆ

ताात्पर्यचन्द्रिका

**नच तत्र श्रीपतित्वादिलिङ्गात् प्राणशब्दस्य विष्ण्वर्थत्वे निश्चितेऽत्रापि तदर्थतेति विपरीतं किं न स्यादिति शङ्क्यम्, प्राणसंवादोत्क्रमणप्रवेशादीनां बहुत्वात्, श्रुत्यनुगृहीतत्वात्, साक्षात्प्राणविशेषणत्वश्रवणाच्च । श्रीपतित्वादिलिङ्गानां तु वैपरीत्यात् । पूर्वस्याविष्णुत्वशङ्कामात्रेण विष्णुत्वनिश्चयाक्षेपसम्भवात् । अत एव टीकायां शङ्कापदप्रयोगः । अन्यथा ''प्राचीनप्राणोऽप्यन्य एव स्यात्'' ।**

ಶಂಕೆ - ಹಿಂದಿನ ಪ್ರಾಣಾಧಿಕರಣದಲ್ಲಿ ಶ್ರೀಪತಿತ್ವ ಮೊದಲಾದ ಲಿಂಗಗಳ ಬಲದಿಂದ ಪ್ರಾಣಶಬ್ದವು ವಿಷ್ಣುಪರವೆಂದು ನಿರ್ಣಯವಾಯಿತು. ಅದರ ಬಲದಿಂದ ಈ ಅಧಿಕರಣದಲ್ಲಿಯೂ ಸಹ ಪ್ರಾಣಶಬ್ದವು ವಿಷ್ಣುಪರವೆಂದು ವಿಪರೀತವಾಗಿ ಏಕೆ ಹೇಳಬಾರದು?

ಸಮಾಧಾನ : ಹೀಗೆ ಶಂಕಿಸಬಾರದು. ಇಲ್ಲಿ ಹೇಳುತ್ತಿರುವ ಲಿಂಗಗಳು ಬಲಿಷ್ಠವಾಗಿವೆ. ಏಕೆಂದರೆ ಪ್ರಾಣಸಂವಾದ, ಉತ್ಕ್ರಮಣಪ್ರವೇಶ, ಮಹಾವ್ರತಯಾಜಿತ್ವ ಹೀಗೆ ಅನೇಕ ಲಿಂಗಗಳು ಮುಖ್ಯ-ವಾಯುವಿನಲ್ಲಿ ಪ್ರಸಿದ್ಧವಾಗಿವೆ. ಇವುಗಳಿಗೆ ಶ್ರುತಿಯ ಅನುಗ್ರಹವೂ ಇದೆ. ಅಷ್ಟೇ ಅಲ್ಲದೆ ಈ ಎಲ್ಲಾ ಲಿಂಗಗಳು ನೇರವಾಗಿ ಪ್ರಾಣನಲ್ಲಿಯೇ ವಿಶೇಷಣವಾಗಿ ಕೇಳಿಸುತ್ತಿವೆ. ಆದರೆ ಹಿಂದಿನ ಪ್ರಾಣಾಧಿ-ಕರಣದಲ್ಲಿ ಹೇಳಲ್ಪಟ್ಟ ಶ್ರೀಪತಿತ್ವಾದಿಲಿಂಗಾದಿಗಳಲ್ಲಿ ಬಹುತ್ವ, ಶ್ರುತ್ಯನುಗ್ರಹೀತತ್ವ, ಸಾಕ್ಷಾತ್ ಪ್ರಾಣವಿಶೇಷಣತ್ವ ಮೊದಲಾದವುಗಳಲ್ಲಿ ಯಾವುದೇ ಒಂದೂ ಸಹ ಇರುವುದಿಲ್ಲ.

ಆದ್ದರಿಂದ ಹಿಂದಿನ ಅಧಿಕರಣದ ಪ್ರಾಣಶಬ್ದದಿಂದ ವಿಷ್ಣುವೂ ಪ್ರತಿಪಾದ್ಯನಾಗಲಾರ ಎಂದು ಶಂಕಿಸುವುದರಿಂದಷ್ಟೇ ವಿಷ್ಣುತ್ವ ನಿಶ್ಚಯವನ್ನು ಆಕ್ಷೇಪಿಸಿದಂತಾಗುತ್ತದೆ. ಆದ್ದರಿಂದಲೇ ಟೀಕೆಯಲ್ಲಿ

'ಶಂಕಾ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಇಲ್ಲದಿದ್ದಲ್ಲಿ ಮುಂದಿನ ಅಧಿಕರಣದಲ್ಲಿ ''ಪ್ರಾಚೀನ-ಪ್ರಾಣೋಽಪ್ಯನ್ಯ ಏವ ಸ್ಯಾತ್ । ಏಕಪ್ರಕರಣಾತ್ವಾತ್'' ಎಂಬ ಟೀಕೆಯಲ್ಲಿ 'ಏವ' ಕಾರವನ್ನು ಹೇಳುವಂತೆ ಇಲ್ಲಿಯೂ ಸಹ 'ಏವ'ಕಾರವನ್ನು ಬಳಸಬೇಕಿತ್ತು.

**ಕಠಿಣಪದಾರ್ಥ**

ತತ್ರ = ಹಿಂದಿನ ಪ್ರಾಣಾಧಿಕರಣದಲ್ಲಿ, ಅತ್ರಾಪಿ = ಈ ಅಧಿಕರಣ- ದಲ್ಲಿಯೂ, ತದರ್ಥತಾ = ವಿಷ್ಣುಪರತ್ವವು, ಶ್ರುತ್ಯನುಗ್ರಹೀತತ್ವಾತ್ = ಇಂದ್ರನು ಪ್ರಯೋಗಿಸುವ ಅಹಂ ಎಂಬ ಶ್ರುತಿಯ ಅನುಗ್ರಹವಿರುವುದರಿಂದ, ವೈಪರೀತ್ಯಾತ್ = ಬಹುತ್ವಾದಿಗಳು ಇರುವುದಿಲ್ಲವೆಂಬ ವೈಪರೀತ್ಯದಿಂದ, ಅನ್ಯಥಾ = ಶಂಕಾಪದವನ್ನು ಸಂಶಯವು ಬರುತ್ತದೆಂಬ ಅಭಿಪ್ರಾಯವು ಇಲ್ಲದಿದ್ದಲ್ಲಿ.

**प्रकाशः – पञ्चमं पक्षमनूद्य निरस्यति – नच तत्रेति ॥ प्राणेति ॥ ''अहमुक्थ-मस्मि''** इति प्राणशब्दितेन्द्रियैस्संवादः, **''तत्प्राणे उत्क्रान्तेऽपद्यत, तत्प्राणे प्रपन्न उदतिष्ठत्''** इत्युत्क्रमणप्रवेशौ तन्निमित्तदेहपातोत्थानशतसंवत्सरत्वप्राणवंशत्वा-दीनामित्यर्थः ॥ **श्रुतीति** ॥ इन्द्रेण प्रयुक्ताहमादिश्रुतीत्यर्थः ॥ **वैपरीत्यादिति** ॥ अबहुत्वात्, प्राणश्रुतेः सन्दिग्धत्वेनानुग्राहकश्रुत्यन्तराभावात्, **''अद्भ्यस्सम्भूतः''** इत्यनुवाकान्तरगतत्वेन साक्षादश्रवणादित्यर्थः । ननु तत्रापि – **तमेव मृत्युममृतं तमाहुस्तं भर्तारं तमु गोप्तारमाहुः । 'यस्तद्वेद' 'ब्रह्मणैष रमते' 'ह्रीश्च ते लक्ष्मीश्च पत्न्यौ'** इत्यादीनामपि बहूनां ब्रह्मलिङ्गानां सत्त्वात्, **'हरिं हरन्तमनुयन्ति देवाः'** इति हरिश्रुत्याऽनुगृहीतत्वात्, अमृतत्वादीनां तद्विशेषणत्वश्रवणाच्च कथं वैपरीत्यमिति चेत्सत्यं, भाष्योक्तश्रीपतित्वादिस्पष्टलिङ्गाभिप्रायेणैवमुक्तिः, तस्य चोक्तवैपरीत्य-सम्भवादिति ।

यद्वा – एतदरुच्यैव टीकोक्तं पक्षान्तरमाह – **पूर्वस्येति** ॥ माऽस्तु नाम प्राचीनोऽपीन्द्रादिरेवेत्यवधारणं, तथाऽप्यत्रत्यप्राणशब्दस्येन्द्रादित्वे प्राचीनो-पीन्द्रादिर्वा विष्णुर्वेति संशयसम्भवात् तन्मात्रेण विष्णुरेवेत्यवधारणाक्षेपसम्भवा-दित्यर्थः । **शङ्केति** । तस्य विष्णोरन्यत्वे प्राचीनोऽप्यन्य इति शङ्का स्यादिति शङ्कापदप्रयोग इत्यर्थः । ज्ञापकत्वं व्यनक्ति – **अन्यथेति** ॥

ವಿವರಣೆ - ಹಿಂದಿನ ಪ್ರಾಣಾಧಿಕರಣದಲ್ಲಿ ಶ್ರೀಪತಿತ್ವ ಮೊದಲಾದ ವಿಷ್ಣುಲಿಂಗಗಳಿಂದ ವಿಷ್ಣುಪರತ್ವವು ನಿಶ್ಚಿತವಾದ್ದರಿಂದ ಇಲ್ಲಿಯೂ ಸಹ ವಿಷ್ಣುಪರತ್ವವನ್ನೇ ಹೇಳಬೇಕೆಂಬ ಐದನೇ ಪಕ್ಷವನ್ನು ಅನುವಾದ ಮಾಡಿ ನಿರಾಸ ಮಾಡುತ್ತಿದ್ದಾರೆ 'ನಚ ತತ್ರ' ಇತ್ಯಾದಿಯಾಗಿ.

ಅಂತಿಮಪ್ರಾಣಾಧಿಕರಣ-(೧।೧।೧೨)

''ಅಹಮುಕ್ಥಮಸ್ಮಿ'' ಎಂಬಲ್ಲಿ ಪ್ರಾಣಶಬ್ದದಿಂದ ಪ್ರತಿಪಾದ್ಯವಾದ ಇಂದ್ರಿಯಗಳಿಂದ ಸಂವಾದವು ಕೇಳಿಸುತ್ತಿದೆ. ''ತತ್ಪ್ರಾಣೇ ಉತ್ಕ್ರಾಂತೇಽಪದ್ಯತ, ತತ್ಪ್ರಾಣೇ ಪ್ರಪನ್ನ ಉದತಿಷ್ಠತ್'' ಎಂಬಲ್ಲಿ ಪ್ರಾಣನ ಉತ್ಕ್ರಮಣ ಹಾಗೂ ಪ್ರವೇಶಗಳು ತನ್ನಿಮಿತ್ತಿಕವಾಗಿ ದೇಹದ ಬೀಳುವಿಕೆ ಮತ್ತು ಏಳುವಿಕೆಗಳು ಕೇಳಿಸುತ್ತಿವೆ. ಅದರಂತೆ ಶತಸಂವತ್ಸರತ್ವ ಪ್ರಾಣವಂಶತ್ವಾದಿ ಧರ್ಮಗಳೂ ಸಹ ಕೇಳಿಸುತ್ತಿವೆ. ಹೀಗೆ ಅನೇಕ ಧರ್ಮಗಳು ಇರುವುದಲ್ಲದೇ ಶ್ರುತ್ಯನುಗ್ರಹವೂ ಇದೆ. ಅಂದರೆ ಇಂದ್ರನಿಂದ ಪ್ರಯೋಗಿಸಲ್ಪಟ್ಟ 'ಅಹಂ' ಎಂಬ ಶ್ರುತಿಯು 'ಅಸ್ಮಿ' ಎಂಬ ಉತ್ತಮಪುರುಷಶ್ರುತಿಯೂ ಅನುಗ್ರಾಹಕವಾಗಿದೆ ಎಂದರ್ಥ. ಆದರೆ ಹಿಂದಿನ ಪ್ರಾಣಾಧಿಕರಣದಲ್ಲಿ ಹೇಳಲ್ಪಟ್ಟ ಲಿಂಗಗಳೂ ಅನೇಕವಾಗಿರುವುದಿಲ್ಲ. ಮತ್ತು ಪ್ರಾಣಶ್ರುತಿಯು ಸಂದಿಗ್ಧವಾಗಿರುವುದರಿಂದ ಅದಕ್ಕೆ ಅನುಗ್ರಾಹಕವಾಗಿ ಮತ್ತೊಂದು ಶ್ರುತಿಯೂ ಇರುವುದಿಲ್ಲ. ಅಷ್ಟೇ ಅಲ್ಲದೆ 'ಅದ್ಭ್ಯಸ್ಸಂಭೂತಃ' ಎಂಬ ಮತ್ತೊಂದು ಅನುವಾಕದಲ್ಲಿ ಶ್ರೀಪತಿತ್ವಾದಿಲಿಂಗಗಳಿರುವುದರಿಂದ ನೇರವಾಗಿ ಪ್ರಾಣನಲ್ಲಿ ವಿಶೇಷಣವೂ ಆಗಿರುವುದಿಲ್ಲ ಎಂಬ ವೈಪರೀತ್ಯವನ್ನು ಗಮನಿಸಬೇಕು.

ಶಂಕೆ - ವೈಪರೀತ್ಯವನ್ನು ಹೇಗೆ ಹೇಳುತ್ತೀರಿ? ಏಕೆಂದರೆ ಅಲ್ಲಿಯೂ ''ತಮೇವ ಮೃತ್ಯುಮಮೃತಂ ತಮಾಹುಸ್ತಂ ಭರ್ತಾರಂ ತಮು ಗೋಪ್ತಾರಮಾಹುಃ । ''ಯಸ್ತದ್ವೇದ'' ''ಬ್ರಹ್ಮಣ್ಯೈಷ ರಮತೇ'' । ''ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ'' ಇತ್ಯಾದಿಯಾಗಿ ಅಮೃತತ್ವ, ಭರ್ತೃತ್ವ, ಗೋಪ್ತೃತ್ವ ಮೊದಲಾದ ಅನೇಕ ಬ್ರಹ್ಮನ ಲಿಂಗಗಳು ಕೇಳಿಸುತ್ತಿವೆ. ಮತ್ತು 'ಹರಿಂ ಹರಂತಮನುಯಾಂತಿ ದೇವಾಃ' ಎಂಬಲ್ಲಿ ಹರಿಶ್ರುತಿಯು ಅನುಗ್ರಾಹಕವಾಗಿ ಶ್ರುತವಾಗಿದೆ. ಅಷ್ಟೇ ಅಲ್ಲದೆ ಶ್ರೀಪತಿತ್ವ ಲಿಂಗವು ಪ್ರಾಣನಲ್ಲಿ ನೇರವಾಗಿ ವಿಶೇಷಣವಾಗದಿದ್ದರೂ ಅಮೃತತ್ವ ಮೊದಲಾದ ಲಿಂಗಗಳು ಪ್ರಾಣನಲ್ಲಿ ನೇರವಾಗಿ ವಿಶೇಷಣವಾಗಿ ಕೇಳಿಸುತ್ತಿವೆ. ಹೀಗಿರುವಾಗ ವೈಪರೀತ್ಯವನ್ನು ನೀವು ಹೇಗೆ ಹೇಳುತ್ತೀರಿ?

ಸಮಾಧಾನ - ಹೌದು, ಆದರೆ ಭಾಷ್ಯದಲ್ಲಿ ಹೇಳಲ್ಪಟ್ಟ ಶ್ರೀಪತಿತ್ವ ಮೊದಲಾದ ಸ್ಪಷ್ಟವಾದ ಬ್ರಹ್ಮಲಿಂಗಗಳನ್ನು ವಿವಕ್ಷಿಸಿ ಗ್ರಂಥಕಾರರು ಹೀಗೆ ಹೇಳಿದ್ದಾರೆ - ಅಂದರೆ ನೀವು ಹೇಳಿದಂತೆ ಅಮೃತತ್ವ ಮೊದಲಾದ ಲಿಂಗಗಳಲ್ಲಿ ಬಹುತ್ವ ಸಾಕ್ಷಾದ್‌ವಿಶೇಷಣತ್ವಾದಿಗಳು ಇರಬಹುದು. ಆದರೆ ಭಾಷ್ಯದಲ್ಲಿ ಹೇಳಲ್ಪಟ್ಟ ಶ್ರೀಪತಿತ್ವಾದಿಲಿಂಗಗಳಿಗೆ ಬಹುತ್ವವಾಗಲಿ ಸಾಕ್ಷಾದ್‌ವಿಶೇಷಣತ್ವಾದಿಗಳಾಗಲಿ ಇರುವುದಿಲ್ಲವಾದ್ದರಿಂದ ವೈಪರೀತ್ಯವನ್ನು ಹೇಳಬಹುದು. ಅಮೃತತ್ವ ಮೊದಲಾದ ಲಿಂಗಗಳು ಇಂದ್ರಾದಿಗಳಲ್ಲಿಯೂ ಹೇಳಲು ಬರಬಹುದಾದ್ದರಿಂದ ಅವುಗಳು ಅಸ್ಪಷ್ಟ ಬ್ರಹ್ಮಲಿಂಗಗಳೆಂಬ ಸೂಕ್ಷ್ಮವನ್ನು ಗಮನಿಸಬೇಕು.

ಅಥವಾ ಒಟ್ಟಾರೆ ಬ್ರಹ್ಮಲಿಂಗಗಳಿಗೆ ಬಹುತ್ವಾದಿಗಳಿಲ್ಲವೆಂಬ ವೈಪರೀತ್ಯವನ್ನು ಹೇಳಲು ಬರುವುದಿಲ್ಲ ಎಂಬ ಅಸ್ವಾರಸ್ಯವಿರುವುದರಿಂದಲೇ ಗ್ರಂಥಕಾರರು ಟೀಕೆಯಲ್ಲಿ ಹೇಳಿದ ಮತ್ತೊಂದು ಪಕ್ಷವನ್ನು 'ಪೂರ್ವಸ್ಯ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಈ ವಾಕ್ಯದ ಅಭಿಪ್ರಾಯ ಹೀಗಿದೆ - ಹಿಂದಿನ ಅಧಿಕರಣದ ಪ್ರಾಣನು ಇಂದ್ರಾದಿಗಳೇ ಆಗಿದ್ದಾರೆಂಬ ಅವಧಾರಣವೂ ಬೇಡ. ಆದರೆ ಈ ಅಧಿಕರಣದಲ್ಲಿ ಪ್ರಾಣಶಬ್ದ ಇಂದ್ರಾದಿಪರವೆಂದು ಹೇಳಿದಾಗ ಹಿಂದಿನ ಅಧಿಕರಣದ ಪ್ರಾಣನು

ಇಂದ್ರಾದಿಗಳೋ? ಅಥವಾ ವಿಷ್ಣುವೋ? ಎಂಬ ಸಂಶಯ ಬರುತ್ತದೆ. ತನ್ಮಾತ್ರದಿಂದ ''ವಿಷ್ಣುರೇವ'' ಎಂಬ ಅವಧಾರಣವನ್ನು ಆಕ್ಷೇಪಿಸಬಹುದೆಂದು ಅಭಿಪ್ರಾಯ. ಆದ್ದರಿಂದಲೇ ಟೀಕೆಯಲ್ಲಿ ''ತಸ್ಯ ವಿಷ್ಣೋರನ್ಯತ್ವೇ ಪ್ರಾಚೀನೋಽಪ್ಯನ್ಯ ಇತಿ ಶಂಕಾ ಸ್ಯಾತ್'' ಎಂಬುದಾಗಿ ಶಂಕಾಪದವನ್ನು ಬಳಸಿದ್ದಾರೆ. ಇಲ್ಲದಿದ್ದಲ್ಲಿ 'ಅನ್ಯೈವಸ್ಯಾತ್' ಎಂದು ಹೇಳುತ್ತಿದ್ದರು.

**गुरुराजीयम् – वैपरीत्यादिति** ॥ बहुत्वाभावात् श्रुत्यननुगृहीतत्वात् साक्षाद् विष्णुविशेषणत्वाश्रवणाच्चेति विपरीतत्वादित्यर्थः । अस्तु वाऽत्रत्यप्राणशब्दस्य मुख्यप्राणपरत्वे तद्वैत्वमित्यत्रापि प्राणस्य मुख्यत्वमेवेतिवत् तद्वैत्वमित्यत्र श्रीपतित्वादिलिङ्गेन प्राणशब्दस्य विष्णुपरत्व ऐतरेयेऽपि प्राणशब्दस्य विष्णुपरत्वमिति वैपरीत्यम् । तथापि न दोषः । न चैवं पूर्वोक्तः प्राणो मुख्य एवेत्याक्षेपानुपपत्तिः । शङ्कामात्रेणापि विष्णुपरत्वनिश्चयाक्षेपसम्भवादित्याह – **पूर्वस्येति** ॥

यद्वा – अनुवाकद्वयस्योक्तरीत्यैकवाक्यत्वाल्लिङ्गानामपि निरवकाशत्वात् कथंवैपरीत्यमित्याशङ्क्याभ्युपगमवादेनाह – **पूर्वस्येति** ॥ **टीकायामिति** ॥ तस्य विष्णोरन्यत्वे प्राचीनोप्यन्य इति शङ्का स्यादिति सङ्गतिटीकायामित्यर्थः ।

## ಸಾರ

ಹಿಂದಿನ ಪ್ರಾಣಾಧಿಕರಣದಲ್ಲಿ ವಿಷ್ಣುವಿನಲ್ಲಿ ಅಸಾಧಾರಣವಾದ ಶ್ರೀಪತಿತ್ವ ಮೊದಲಾದ ಲಿಂಗಗಳಿಂದ ಪ್ರಾಣಶಬ್ದಕ್ಕೆ ವಿಷ್ಣುಪರತ್ವವನ್ನು ಸಮರ್ಥಿಸಿದ್ದಾಗಿದೆ. ಅದರ ಬಲದಿಂದಲೇ ಇಲ್ಲಿಯೂ ಸಹ ವಿಷ್ಣುಪರತ್ವವನ್ನು ಹೇಳಲು ಬರುವಾಗ ಪೂರ್ವಪಕ್ಷದ ಆಕ್ಷೇಪದ ಫಲವನ್ನು ಶ್ರೀಮದಾಚಾರ್ಯರು ಹೇಳಿದ್ದು ಹೇಗೆ ಸರಿ? ಎಂಬ ಅಂತಿಮವಾದ ವಿಕಲ್ಪಕ್ಕೂ ಈಗ ಅವಕಾಶವಿಲ್ಲ. ಏಕೆಂದರೆ ಈ ಅಧಿಕರಣದಲ್ಲಿ ಹೇಳುತ್ತಿರುವ ಲಿಂಗಗಳಲ್ಲಿ ಬಹುತ್ವ, ಶ್ರುತ್ಯನುಗೃಹೀತತ್ವ, ಸಾಕ್ಷಾದ್‌ಪ್ರಾಣವಿಶೇಷಣತ್ವ ಮೊದಲಾದ ಧರ್ಮಗಳಿವೆ, ಆದರೆ ಹಿಂದಿನ ಪ್ರಾಣಾಧಿಕರಣದಲ್ಲಿ ಹೇಳಲ್ಪಟ್ಟ ಶ್ರೀಪತಿತ್ವಾದಿ ಲಿಂಗಗಳಲ್ಲಿ ಈ ಯಾವಧರ್ಮಗಳೂ ಇರುವುದಿಲ್ಲ. ಆದ್ದರಿಂದ ಹಿಂದಿನ ಅಧಿಕರಣದ ಸಿದ್ಧಾಂತಯುಕ್ತಿಯಿಂದ ಈ ಅಧಿಕರಣದ ಪೂರ್ವಪಕ್ಷವು ಪರಿಹಾರವಾಗುವುದಿಲ್ಲ.

ಅಥವಾ ಅಲ್ಲಿಯೂ ಸಹ ಬ್ರಹ್ಮನ ಲಿಂಗಗಳಲ್ಲಿ ಬಹುತ್ವಾದಿಗಳು ಇವೆಯೆಂದು ವಿವಕ್ಷಿಸಿದರೂ ತಪ್ಪಿಲ್ಲ. ಈ ಅಧಿಕರಣದಲ್ಲಿ ಪ್ರಾಣಶಬ್ದವು ಇಂದ್ರಾದಿಪರವಾಗಿದೆ ಎಂದು ಪೂರ್ವಪಕ್ಷ ಮಾಡಿದಾಗ ಹಿಂದಿನ ಅಧಿಕರಣದ ಪ್ರಾಣನು ವಿಷ್ಣುವೋ ಅಥವಾ ಇಂದ್ರಾದಿಗಳೋ? ಎಂಬ ಸಂಶಯವಂತೂ ಬಂದೇ ಬರುತ್ತದೆ. ಆವಾಗ ವಿಷ್ಣುವೊಬ್ಬನೇ ಪ್ರಾಣಶಬ್ದವಾಚ್ಯನೆಂಬ ಅವಧಾರಣವೂ ಕೂಡುವುದಿಲ್ಲ. ಈ ಅವಧಾರಣವನ್ನು ಮಾತ್ರ ಶ್ರೀಮದಾಚಾರ್ಯರು ಇಲ್ಲಿ ಪೂರ್ವಪಕ್ಷಫಲವನ್ನಾಗಿ ಆಕ್ಷೇಪಿಸಿದ್ದಾರೆಂದು ಭಾವಿಸಬೇಕು.

* * * *

ಅಂತಿಮಪ್ರಾಣಾಧಿಕರಣ-(೧।೧।೧೨)

## ಸಿದ್ಧಾಂತದ ಫಲಸಮರ್ಥನೆ

तात्पर्यचन्द्रिका

**एकप्रकरणत्वात् इत्युत्तराधिकरणप्रयोजनटीकायामिव अत्रापि 'अन्य एव स्यात्' इत्यवक्ष्यत् । एकस्य निर्णयस्य अनेकन्यायसाध्यत्वेऽपि निर्णयविरोधितत्तत्पूर्वपक्षन्यायाभासनिरासकन्यायसाध्यावान्तरनिर्णयभेदश्च युक्तः, यथा प्राभाकरमते चोदनाप्रामाण्यनिर्णयस्य आद्याध्यायमात्रसाध्यत्वेऽपि अवान्तरनिर्णयभेदादधिकरणभेदः, यथा वा मतान्तरे "ऊर्जं पशूनाप्नोति "न स पापं श्लोकं शृणोति" इत्यादेरर्थवादत्वनिर्णयस्य औदुम्बराधिकरणपर्णमय्यधिकरणसाध्यत्वेऽप्यवान्तरनिर्णयभेदादधिकरणभेदस्तद्वत् । तस्मात्प्रयोजनोक्तिर्युक्ता । एवमन्यत्राऽपि पूर्वोक्ताक्षेपेण प्रयोजनोक्तिरुपपाद्या ।**

ಸಿದ್ಧಾಂತದ ಫಲ - ವಿಷ್ಣುವೇ ಪ್ರಾಣಶಬ್ದದಿಂದ ವಾಚ್ಯನೆಂಬ ಒಂದು ನಿರ್ಣಯವು ಅನೇಕ ನ್ಯಾಯದಿಂದ ಸಿದ್ಧವಾಗುತ್ತದೆ. ಆದರೂ ಸಹ ನಿರ್ಣಯಕ್ಕೆ ವಿರೋಧಿಯಾದ ಆಯಾ ಪೂರ್ವಪಕ್ಷ ನ್ಯಾಯಾಭಾಸಗಳನ್ನು ನಿರಾಸ ಮಾಡುವ ಅನೇಕ ಸಿದ್ಧಾಂತ ನ್ಯಾಯಗಳೆಂಬ ಅವಾಂತರ ನಿರ್ಣಯದ ಭೇದದಿಂದ ಅಧಿಕರಣಭೇದವು ಯುಕ್ತವಾಗುತ್ತದೆ.

ಉದಾಹರಣೆ - ಪ್ರಾಭಾಕರ ಮತದಲ್ಲಿ ಚೋದನಪ್ರಾಮಾಣ್ಯವನ್ನು ಮೊದಲನೆಯ ಅಧ್ಯಾಯವು ಸಂಪೂರ್ಣವಾಗಿ ಸಾಧಿಸುತ್ತದೆ. ಆದರೂ ಸಹ ಅವಾಂತರವಾದ ಸಿದ್ಧಾಂತ ನಿರ್ಣಯಗಳಲ್ಲಿ ಭೇದವಿರುವುದರಿಂದ ಅಧಿಕರಣಗಳ ಭೇದವನ್ನು ಒಪ್ಪಿದ್ದಾರೆ.

ಭಾಟ್ಟಮತದ ಉದಾಹರಣೆ - "ಊರ್ಜಂ ಪಶೂನಾಪ್ನೋತಿ" "ನ ಸ ಪಾಪಂ ಶ್ಲೋಕಂ ಶೃಣೋತಿ" ಎಂಬುದಕ್ಕೆ ಅರ್ಥವಾದತ್ವವನ್ನು ನಿರ್ಣಯಿಸುತ್ತಾರೆ. ಈ ನಿರ್ಣಯವು ಔದುಂಬರಾಧಿಕರಣ ಮತ್ತು ಪರ್ಣಮಯ್ಯಧಿಕರಣದಿಂದ ಸಾಧ್ಯವಾಗಿದೆ. ಆದರೂ ಸಹ ಅವಾಂತರನಿರ್ಣಯದಲ್ಲಿ ಭೇದವಿರುವುದರಿಂದ ಅಧಿಕರಣಭೇದವನ್ನು ಒಪ್ಪಿದ್ದಾರೆ. ಹಾಗಾಗಿ ಪೂರ್ವಪಕ್ಷ ಹಾಗೂ ಸಿದ್ಧಾಂತಗಳ ಪ್ರಯೋಜನವನ್ನು ಹೇಳಿದ್ದು ಯುಕ್ತವೇ ಆಗಿದೆ. ಇದರಂತೆ ಬೇರೆ ಅಧಿಕರಣಗಳಲ್ಲಿಯೂ ಹಿಂದಿನ ಅಧಿ -ಕರಣದ ಸಿದ್ಧಾಂತದ ನ್ಯಾಯವನ್ನು ಆಕ್ಷೇಪಿಸಿ ಪ್ರಯೋಜನವನ್ನು ಹೇಳಿದಾಗ ಈ ಅಭಿಪ್ರಾಯವನ್ನೇ ಅಲ್ಲಿಯೂ ತಿಳಿಯಬೇಕು.

### ಕಠಿಣಪದಾರ್ಥ

ಏಕಸ್ಯ ನಿರ್ಣಯಸ್ಯ = ವಿಷ್ಣುವೇ ಪ್ರಾಣಶಬ್ದವಾಚ್ಯನೆಂಬ ನಿರ್ಣಯಕ್ಕೆ, ಅವಾಂತರ
ನಿರ್ಣಯಭೇದಾತ್ = ಜೀವನಹೇತುತ್ವ ಮತ್ತು ಅನ್ಯಗತತ್ವೇನಪ್ರಸಿದ್ಧ ಲಿಂಗಗಳಿಗೆ

### ಪರಿಪೂರ್ಣಚಂದ್ರಿಕಾ

ಅಂತರ್ಯಾಮಿಗತತ್ವ ಮೊದಲಾದ ಅವಾಂತರನಿರ್ಣಯಗಳಲ್ಲಿ ಭೇದವಿರುವುದರಿಂದ, ಊರ್ಜಂ = ಭೋಗಿಸಲು ಯೋಗ್ಯವಾದ, ಪಾಪಂ ಶ್ಲೋಕಂ = ಕೆಟ್ಟ ಕೀತಿರ್ಯನ್ನು, ನ ಶೃಣೋತಿ = ಕೇಳುವುದಿಲ್ಲ, ಅನ್ಯತ್ರಾಪಿ = ಬೇರೆ ಅಧಿಕರಣಗಳಲ್ಲಿಯೂ

**प्रकाशः** – नन्वेवं ''तद्वै त्वं प्राणः'' इत्यत्र प्राणो विष्णुरन्यो वेति संशयस्यात्रत्यसिद्धान्तन्यायेनोत्पन्ननिर्णयेनैव निराससम्भवेन तत्रत्यसिद्धान्तो व्यर्थः । अतो न तस्य विष्णुत्वावधारणमेतत्सिद्धान्तफलं भवितुमर्हतीत्यतः सिद्धान्तप्रयोजनं च साधयति – **एकस्येति ॥ अवान्तरानेर्णयेति ॥** प्राणपदप्रवृत्तिनिमित्तस्य जीवनहेतुत्वस्य विष्णुगतत्वनिर्णयस्तत्रत्यन्यायसाध्यः, अन्यगतत्वेन प्रसिद्धलिङ्गानां अन्तर्यामिगतत्वनिर्णयोऽत्रत्यन्यायसाध्यः, उभाभ्यां सर्वत्र प्राणशब्दार्थो विष्णुरेवेति निर्णयः साध्य इत्यर्थः ॥ **यथा प्राभाकरमत इति ॥**

ವಿವರಣೆ - ಇಲ್ಲಿಯ ತನಕ ಪೂರ್ವಪಕ್ಷದ ಫಲವನ್ನು ಸಾಧಿಸಿದ್ದಾಯಿತು. ಹಿಂದಿನ ಪ್ರಾಣಾಧಿಕರಣದ ಸಿದ್ಧಾಂತವನ್ನು ಆಕ್ಷೇಪಿಸುವುದು ಪೂರ್ವಪಕ್ಷದ ಫಲವಾದಂತೆ ಅದಕ್ಕೆ ಸಮಾಧಾನ ಹೇಳುವುದು ಸಿದ್ಧಾಂತದ ಫಲವಾಗಿದೆ.

ಶಂಕೆ - "ತದ್ವೈ ತ್ವಂ ಪ್ರಾಣಃ" ಎಂಬಲ್ಲಿ ಪ್ರಾಣಶಬ್ದವಾಚ್ಯನಾದವನು ವಿಷ್ಣುವೋ ಅಥವಾ ಬೇರೆಯವನೋ? ಎಂಬ ಸಂಶಯವನ್ನು ಈ ಅಧಿಕರಣದ ಸಿದ್ಧಾಂತ ನ್ಯಾಯದಿಂದಲೇ ಪರಿಹರಿಸಲು ಬರುವಾಗ ಹಿಂದಿನ ಪ್ರಾಣಾಧಿಕರಣದ ಸಿದ್ಧಾಂತವು ವ್ಯರ್ಥವಲ್ಲವೇ? ಆದ್ದರಿಂದ ಹಿಂದಿನ ಪ್ರಾಣಾಧಿಕರಣದ ವಿಷ್ಣುತ್ವಾವಧಾರಣೆ ಎಂಬ ಸಿದ್ಧಾಂತ ಸ್ಥಾಪನೆಯು ಈ ಅಧಿಕರಣದ ಸಿದ್ಧಾಂತ ಫಲವಾಗಲು ಸಾಧ್ಯವಿಲ್ಲ.

ಸಮಾಧಾನ - ಈ ಶಂಕೆಯನ್ನು ಪರಿಹರಿಸಲು ಸಿದ್ಧಾಂತಪ್ರಯೋಜನವನ್ನು ಸಾಧಿಸುತ್ತಿದ್ದಾರೆ 'ಏಕಸ್ಯ' ಇತ್ಯಾದಿ ವಾಕ್ಯದಿಂದ. ವಿಷ್ಣುವೇ ಪ್ರಾಣಶಬ್ದವಾಚ್ಯನೆಂಬುದು ಮಹಾಸಿದ್ಧಾಂತ. ಈ ಸಿದ್ಧಾಂತವು ಎರಡು ಅಧಿಕರಣಗಳಿಂದಲೇ ಸಿದ್ಧವಾಗುತ್ತದೆ. ಆದರೆ ಅವಾಂತರ ಸಿದ್ಧಾಂತದ ನಿರ್ಣಯಗಳು ಮಾತ್ರ ಭಿನ್ನಭಿನ್ನವಾಗಿವೆ. ಪ್ರಾಣಪದಪ್ರವೃತ್ತಿನಿಮಿತ್ತವಾದ ಜೀವನಹೇತುತ್ವವು ವಿಷ್ಣುವಿನಲ್ಲೇ ಇದೆ ಎಂಬ ನಿರ್ಣಯವು ಹಿಂದಿನ ಪ್ರಾಣಾಧಿಕರಣದ ಸಿದ್ಧಾಂತನ್ಯಾಯದಿಂದ ಸಾಧ್ಯವಾಗಿದೆ. ಅನ್ಯಗತತ್ವೇನ ಪ್ರಸಿದ್ಧವಾದ ಲಿಂಗಗಳನ್ನು ಅಂತರ್ಯಾಮಿಗತವೆಂಬ ನಿರ್ಣಯವು ಈ ಅಧಿಕರಣದ ಸಿದ್ಧಾಂತ ನ್ಯಾಯದಿಂದ ಸಾಧ್ಯವಾಗಿದೆ. ಈ ಅವಾಂತರ ನಿರ್ಣಯಗಳ ಸ್ಥಾಪನೆಗಾಗಿ ಬೇರೆ ಬೇರೆ ಅಧಿಕರಣಗಳು ಹೊರಟಿವೆ. ಆದರೆ ಎರಡೂ ಅಧಿಕರಣಗಳಿಗೆ ಪ್ರಾಣಶಬ್ದದಿಂದ ವಿಷ್ಣುವೇ ವಾಚ್ಯನೆಂಬುದು ಪರಮನಿರ್ಣಯವಾಗಿದೆ. ಈ ವಿಷಯದಲ್ಲಿ ಪ್ರಾಭಾಕರಮತದ ಹಾಗೂ ಭಾಟ್ಟಮತದ ಉದಾಹರಣೆಯನ್ನು ನೀಡುತ್ತಿದ್ದಾರೆ 'ಯಥಾ ಪ್ರಾಭಾಕರಮತೇ' ಇತ್ಯಾದಿಯಾಗಿ.

**प्रकाशः –** भट्टमते श्रुतिस्मृत्यादिसाधारण्येन धर्मप्रमाणविचारः आद्याध्यायस्यार्थः, प्राभाकरमते चोदनाप्रामाण्यमात्रविचार इति व्यवस्था । तत्र ''चोदनालक्षणोऽर्थो धर्मः'' इत्युक्तचोदनाप्रामाण्य निर्णयस्याध्यायार्थत्वेऽप्यर्थवादाधिकरणे सापेक्षत्वमूलकाप्रामाण्यशङ्कानिरासपूर्वकः प्रामाण्यनिर्णयः विधिवन्निगदाधिकरणे तु एकेन वाक्येन औदुम्बरत्वसम्बन्धफलसम्बन्धरूपसम्बन्धद्वयविधानाशक्तिमूलकाप्रामाण्यशङ्कानिरासपूर्वकस्तन्निर्णय इत्यवान्तरनिर्णयभेदाद्यथाऽधिकरणभेदस्तथेत्यर्थः॥

ಪೂರ್ವಮೀಮಾಂಸೆಯ ಪ್ರಥಮಾಧ್ಯಾಯವು ಶ್ರುತಿಸ್ಮೃತಿಸಾಧಾರಣವಾದ ಧರ್ಮಪ್ರಾಮಾಣ್ಯವನ್ನು ವಿಚಾರ ಮಾಡುತ್ತಿದೆಯೆಂದು ಭಾಟ್ಟರು ಹೇಳುತ್ತಾರೆ. ಆದರೆ ಪ್ರಾಭಾಕರರು ಕೇವಲ ಚೋದನಪ್ರಮಾಣ್ಯ ವಿಚಾರವನ್ನು ಮಾಡುತ್ತಿದೆಯೆನ್ನುತ್ತಾರೆ. ಹೀಗೆ ಪ್ರಾಭಾಕರಮತವು ಭಾಟ್ಟಮತಕ್ಕಿಂತ ವಿಲಕ್ಷಣವಾದ್ದರಿಂದ ಗ್ರಂಥಕಾರರು 'ಪ್ರಭಾಕರಮತೇ' ಎಂದು ಹೇಳಿದ್ದಾರೆ.

'ಚೋದನಾಲಕ್ಷಣೋಽರ್ಥೋ ಧರ್ಮಃ' ಎಂಬಲ್ಲಿ ಹೇಳಿದ ಚೋದನಾಪ್ರಾಮಾಣ್ಯನಿರ್ಣಯವು ಸಂಪೂರ್ಣ ಪ್ರಥಮಾಧ್ಯಾಯದ ಉದ್ದೇಶವಾಗಿದೆ. ಆದರೂ ಸಹ ಅರ್ಥವಾದಾಧಿಕರಣದಲ್ಲಿ ಸಾಪೇಕ್ಷತ್ವ ಮೂಲಕವಾದ ಅಪ್ರಾಮಾಣ್ಯಶಂಕೆಯನ್ನು ನಿರಾಸ ಮಾಡುವ ಮೂಲಕ ಪ್ರಾಮಾಣ್ಯವನ್ನು ನಿರ್ಣಯಿಸಿದ್ದಾರೆ. ವಾಯುದೇವತೆಯು ಕ್ಷಿಪ್ರವಾಗಿ ಫಲವನ್ನು ಕೊಡುತ್ತಾನಾದ್ದರಿಂದ ವಾಯುದೇವತಾಕಾಯಾಗವನ್ನು ಮಾಡಿರಿ ಎಂದು ಹೇಳಿದಾಗ ಹೇತುಸಾಪೇಕ್ಷತ್ವೇನ ಅಪ್ರಾಮಾಣ್ಯ ಶಂಕೆಯನ್ನು ಅರ್ಥವಾದಾಧಿಕರಣದಲ್ಲಿ ಮಾಡಿದ್ದಾರೆ. ಆದರೆ ವಿಧಿವನ್ನಿಗದಾಧಿಕರಣದಲ್ಲಿ ಇದೇ ಸಿದ್ಧಾಂತ ನ್ಯಾಯವು ಇರುವುದಿಲ್ಲ. ಹೊರತಾಗಿ ''ಔದುಂಬರಮಯಃ ಯೂಪೋ ಭವತಿ'' ಎಂಬ ಒಂದೇ ವಾಕ್ಯದಿಂದ ಔದುಂಬರತ್ವ ಸಂಬಂಧವನ್ನು ಹೇಳುತ್ತಿದ್ದಾರೆ. ಮತ್ತು ಫಲಸಂಬಂಧವನ್ನು ಹೇಳುತ್ತಿದ್ದಾರೆ. ಒಂದೇ ವಾಕ್ಯ ಎರಡೂ ಅರ್ಥವನ್ನು ಹೇಳಿದರೆ ವಾಕ್ಯದ್ವಯದೋಷ ಬರುವುದರಿಂದ ಅಪ್ರಾಮಾಣ್ಯಶಂಕೆ ಬರುತ್ತದೆ. ಈ ಶಂಕೆಯನ್ನು ನಿರಾಕರಿಸುವ ಮೂಲಕವಾಗಿ ''ಔದುಂಬರೋ ಯೂಪೋ ಭವತಿ'' ಎಂಬ ವಾಕ್ಯಕ್ಕೆ ಪ್ರಾಮಾಣ್ಯವನ್ನು ನಿರ್ಣಯಿಸುತ್ತಾರೆ. ಹೀಗೆ ಅವಾಂತರ ನಿರ್ಣಯಗಳಲ್ಲಿ ಭೇದವಿರುವುದರಿಂದ ಅಧಿಕರಣ ಭೇದವನ್ನು ಪ್ರಾಭಾಕರರು ಒಪ್ಪಿದ್ದಾರೆ. ಅದರಂತೆ ಪ್ರಕೃತದಲ್ಲಿಯೂ ಎರಡೂ ಪ್ರಾಣಾಧಿಕರಣಗಳಿಗೆ ಭೇದವನ್ನು ಹೇಳಬಹುದು.

**प्रकाशः – यथा वेति ॥** भट्टमत इत्यर्थः । आद्ये ''विधिर्वा स्यादपूर्वत्वाद्वादमात्रं ह्यनर्थकम्'' इति द्वितीयपादीयद्वितीयाधिकरणे ''औदुम्बरो यूपो भवत्यूर्ग्वा उदुम्बरः ऊर्क् पशवः ऊर्जैवास्मा ऊर्जं पशूनाप्नोति ऊर्जोऽवरुध्यै'' इति वाक्यमुदाहृत्य 'ऊर्जोऽवरुध्यै' इत्येतदौदुम्बरतायाः फलसमर्पकमुतार्थवाद इति संशये, ''ऊर्जोऽवरुध्यै'' इति तादर्थ्ये चतुर्थी श्रुत्योर्क्शब्दितानां पशूनां साध्यत्वावगमात्साध्यस्य

साधनापेक्षत्वात्सन्निहितमौदुम्बरत्वमसत्यपि विधौ साधनमेवेति फलसमर्पकमेतदिति प्राप्ते,

विध्यभावे उदुम्बरताभवनाक्षिप्तभावनां प्रति सन्निहितत्वेन तस्या एव भाव्यत्वात्फलस्य विप्रकृष्टत्वेनाभाव्यत्वात्तस्यार्थवादत्वमुपेत्यैव विधेरुन्नेयत्वेनार्थवाद एव, न फलसमर्पकं ''उर्जोऽवरुध्यै'' इत्येतदिति सिद्धान्तितम् ।

''ವಿಧಿರ್ವಾ ಸ್ಯಾದಪೂರ್ವತ್ವಾದ್ವಾದಮಾತ್ರಂ ಹ್ಯನರ್ಥಕಂ'' (೧-೨-೨)

''ಔದುಂಬರೋ ಯೂಪೋ ಭವತಿ ಊರ್ಗ್ವಾ ಉದುಂಬರಃ । ಊರ್ಕ್ ಪಶ್ವಃ । ಊರ್ಜೈವಾಸ್ಮಾ ಊರ್ಜಂ ಪಶೂನಾಪ್ನೋತ್ಯೂರ್ಜೋಽವರುದ್ಧ್ಯೈ'' ಋತ್ವಿಕ್ ಆದವನು ಉದುಂಬರ ವೃಕ್ಷದ (ಹತ್ತಿ ಗಿಡದ) ಯೂಪ ಸ್ತಂಭವನ್ನು ಯಜ್ಞವೇದಿಕೆಯಲ್ಲಿ ಸ್ಥಾಪಿಸಬೇಕು. ಊರ್ಕ್ ಎಂದರೆ ಭೋಗ್ಯವಸ್ತು ವಿಶೇಷ ಎಂದರ್ಥ. ಉದುಂಬರ ವೃಕ್ಷವೂ ಸಹ ಭೋಗ್ಯ ವಸ್ತು ವಿಶೇಷವೇ ಆಗಿದೆ. ಉದುಂಬರ ವೃಕ್ಷದಂತೆ ಪಶುಗಳೂ ಸಹ ಊರ್ಕ್ ಎನಿಸುತ್ತವೆ. ಊರ್ಕ್ ಎನಿಸಿದ ಉದುಂಬರ ಯೂಪಸ್ತಂಭವನ್ನಾಗಿ ಮಾಡಿದಾಗ ಊರ್ಕ್ ಎನಿಸಿದ ಅನೇಕ ಪಶುಗಳನ್ನು ಯಜಮಾನನು ಹೊಂದುತ್ತಾನೆ. ಆದ್ದರಿಂದ ಅನೇಕ ಪಶುಗಳೆಂಬ ಸಂಪತ್ತನ್ನು ಹೊಂದುವುದಕ್ಕಾಗಿ ಔದುಂಬರ ವೃಕ್ಷದ ಯೂಪವನ್ನೇ ಸ್ಥಾಪಿಸಬೇಕು ಎಂದು ಈ ವಾಕ್ಯದ ಅಭಿಪ್ರಾಯ.

---

विधिर्वा **स्यादपूर्वत्वाद्वादमात्रं ॥ १ ॥**

**(लोकवदिति चेत् ॥ २० ॥ न पूर्वत्वात् ॥ २१ ॥ उक्तन्तु वाक्यशेषत्वम् ॥ २२ ॥ विधिश्चानर्थकः क्वचित्, तस्मात्स्तुतिः प्रतीयेत, तत्सामान्यादितरेषु तथात्वम् ॥ २३ ॥ प्रकरणे सम्भवन्नपकर्षो न कल्पयेत, विध्यानर्थक्यं हि तं प्रति ॥ २४ ॥ विधौ च वाक्यभेदः स्यात् ॥ २५ ॥)**

पूर्वाक्ताऽक्षेपेण पूर्वपक्षप्रवृत्तेराक्षेपिकी **सङ्गतिः** । 'औदुम्बरो यूपरो भवति, ऊर्ग्वा उदुम्बरः, ऊर्क्पश्वः, ऊर्जैवासा उर्जं पशूनाप्नोति, ऊर्जोऽवरुद्ध्यै' इति वैकृतपशुप्रकरणे श्रुतं वाक्यं **विषयः** । ऊर्क्शब्देनात्यन्तसारभूतः सूक्ष्मोऽन्नरस उच्यते । उदुम्बररूपया ऊर्जा यजमायार्थं अध्वर्युः पशुरूपां ऊर्जमाप्नोति । ततो यूपस्यौदुम्बरत्वमूर्जः सम्पादनाय भवतीत्यर्थः । तत्र ''ऊर्जोऽवरुद्ध्या'' इति वाक्यं औदुम्बरत्वरूपसाधनं प्रति फल-समर्पकमुत आप्नोतीत्यन्तवाक्यवदयमप्यर्थवादः इति **सन्देहः** । **पूर्वपक्षस्तु** यदुक्तं पूर्वत्र सर्वार्थवादानां प्राशस्त्यरूपार्थसमर्पणेन विधेयस्तुत्या विध्येकवाक्यत्वं तदयुक्तम् । 'ऊर्जोऽवरूद्ध्या' इत्येवमादेः फलसमर्पकत्वसम्भवात् । नच फलवचनस्य लक्षणया स्तावकत्वं युक्तम् । स्वर्गकामादिपदस्यापि तथात्वापत्तेरिति । **सिद्धान्तस्तु** विहितस्य

ಈ ವಾಕ್ಯದಲ್ಲಿರುವ "ಊರ್ಜೋಽವರುದ್ಧ್ಯೈ" ಎಂಬುದರ ವಿಷಯದಲ್ಲಿ ಸಂಶಯ ಬರುತ್ತದೆ. ಉದುಂಬರ ವೃಕ್ಷಕ್ಕೆ ಫಲಸಮರ್ಪಕವಾಗಿ ಈ ವಾಕ್ಯವು ಹೊರಟಿದೆಯೋ ಅಥವಾ ಊರ್ಗ್ವಾ ಉದುಂಬರಃ, ಊರ್ಕ್ ಪಾರ್ಶ್ವಃ ಎಂಬುದು ಹೇಗೆ ಅರ್ಥವಾದವೋ ಅದರಂತೆ ಊರ್ಜೋಽ-ವರುದ್ಧ್ಯೈ ಎಂಬುದೂ ಸಹ ಅರ್ಥವಾದವೋ? ಎಂದು ಸಂಶಯ.

ಪೂರ್ವಪಕ್ಷ - ಊರ್ಜೋಽವರುದ್ಧ್ಯೈ ಎಂಬುದು ಫಲಸಮರ್ಪಕವಾಗಿದೆ. ಏಕೆಂದರೆ ಈ ವಾಕ್ಯದಲ್ಲಿ 'ಪಶುಕಾಮಃ' ಇತ್ಯಾದಿ ಪದಗಳು ಕಾಣಿಸುವುದಿಲ್ಲ. ಆದರೆ ತಾದಾರ್ಥ್ಯವಿಷಯಕವಾದ ಚತುರ್ಥೀ ಶ್ರುತಿಯು ಕೇಳಿಸುತ್ತಿದೆ. ಇದರಿಂದ ಊರ್ಕ್‌ಶಬ್ದಗಳಿಂದ ಪ್ರತಿಪಾದಿತವಾದ ಪಶುಗಳು ಸಾಧ್ಯವೆಂದು ತಿಳಿಯಿತು. ಸಾಧ್ಯವು ಸಾಧನವನ್ನು ಅಪೇಕ್ಷಿಸುವುದರಿಂದ ಸಾಧನದ ಆಕಾಂಕ್ಷೆ ಬರುತ್ತದೆ. ಆವಾಗ ಸನ್ನಿಹಿತವಾದ ಔದುಂಬರತ್ವವನ್ನೇ ಸಾಧನವೆಂದು ಹೇಳಬೇಕು. ವಸ್ತುತಃ ವಿಧಿಪ್ರತ್ಯಯವಿದ್ದರೆ ಮಾತ್ರ ಸಾಧನವೆನ್ನಬೇಕು. ಆದರೂ ಸಹ ಪ್ರಕೃತ ಸಾಧ್ಯಕ್ಕೆ ಸಾಧನಾಕಾಂಕ್ಷೆ ಇರುವುದರಿಂದ ಔದುಂಬ-ರತ್ವವನ್ನು ಸಾಧನವೆನ್ನಬಹುದು. ಆದ್ದರಿಂದ ಊರ್ಜೋಽವರುದ್ಧ್ಯೈ ಎಂಬುದು ಫಲಸಮರ್ಪಕವೇ ಆಗಿದೆ.

ಸಿದ್ಧಾಂತ - ಊರ್ಜೋಽವರುದ್ಧ್ಯೈ ಎಂಬುದು ಅರ್ಥವಾದವಾಗಿದೆ. ಏಕೆಂದರೆ ಈ ವಾಕ್ಯದಲ್ಲಿ ವಿಧಿಯು ಕೇಳಿಸುತ್ತಿಲ್ಲ. 'ಔದುಂಬರೋ ಯೂಪೋ ಭವತಿ' ಎಂದಷ್ಟೇ ಇದೆ ಹೊರತು 'ಭವೇತ್' ಎಂದಾಗಲೀ, 'ಕುರ್ಯಾತ್' ಎಂದಾಗಲೀ, ವಿಧಾನವನ್ನು ಮಾಡಿರುವುದಿಲ್ಲ. ಒಂದುವೇಳೆ ಹಾಗೆ ವಿಧಾನ ಮಾಡಿದ್ದಲ್ಲಿ ಔದುಂಬರತ್ವವನ್ನು ಸಾಧನವೆನ್ನಬಹುದಿತ್ತು. ಇಲ್ಲಿ ಕೇವಲ ಭವತಿ ಎಂಬುದರಿಂದ ಭವನವನ್ನು ಹೇಳಿದ್ದಾರೆ. ಭವನದಿಂದ ಭಾವನಾವು ಆಕ್ಷಿಪ್ತವಾಗುತ್ತದೆ. ಹೊರತಾಗಿ ನೇರವಾಗಿ ಭಾವನಾವಾಚಕವಾದ 'ಲಿಙ್‌ಲೋಟ್' ಪ್ರತ್ಯಯಗಳು ಇಲ್ಲಿ ಇರುವುದಿಲ್ಲ. ಆಕ್ಷಿಪ್ತವಾದ ಈ ಭಾವನಾಕ್ಕೆ ಭಾವ್ಯವಾದದ್ದು ಯಾವುದು? ಎಂಬ ಪ್ರಶ್ನೆ ಬಂದರೆ ಪಶುಪ್ರಾಪ್ತಿಯೆಂಬ ಫಲವು ದೂರ-ದಲ್ಲಿರುವುದರಿಂದ ಭಾವನಾದಿಂದ ಆಕ್ಷಿಪ್ತವಾಗುವುದಿಲ್ಲ ಹೊರತಾಗಿ ಯೂಪದ ಔದುಂಬರತ್ವವು ಸನ್ನಿಹಿತವಾದ್ದರಿಂದ ಭಾವ್ಯವಾಗುತ್ತದೆ. ಮತ್ತು ಇಲ್ಲಿ ವಿಧಿಯು ಇರದ ಕಾರಣ ಅರ್ಥವಾದದಿಂದಲೇ

---

साधनस्येदं फलसमर्पकं वाच्यम् । न चौदुम्बरताया विधिरस्ति । विधिप्रत्ययस्या-श्रवणात् । नच फलवचनपूर्वमर्थवादत्वेन 'भवति' इत्यस्य लेट्त्वरूपविधित्वं कल्पयित्वा, विहितौदुम्बरत्वरूपसाधनं प्रति फलसमर्पकं भवत्विति युक्तम् । आवृत्तिरूपवाक्यभेद-प्रसङ्गात् । आप्नोत्यन्तार्थवादेन विधित्वमुन्नीय तत्र फलार्पकमित्येदपि गौरवादयुक्तम् । कामपदरहितमेवमादिवाक्यं फलार्पणशक्तं नेति **द्रव्यगुणसंस्कारकर्मसु** इति चतुर्थे पर्णमय्यधिकरणे वक्ष्यमाणत्वाचायमप्यर्थवाद एवेति । **फलन्तु** पूर्वोक्तार्थसमर्थनं व्यक्तम् । **सूत्रार्थस्तु, वा** शब्दोऽवधारणे । ऊर्क्प्राप्तिरूपफले औदुम्बरत्वाख्यसाधन**विधिरेव** स्यात् । कुतः **अपूर्वत्वात्** । एवं हि अपूर्वार्थो विहितो भवति । अन्यथा स्तुति-**वादमात्रमनर्थक**माश्रितं स्यादिति ॥ १९ ॥

इति द्वितीयं विधिवन्निगदाधिकरणम् ॥ (सूत्राणि १९-२५)

ಪರಿಪೂರ್ಣಚಂದ್ರಿಕಾ

ವಿಧಿಯನ್ನು ಉನ್ನಯನ ಮಾಡಬೇಕಾಗುತ್ತದೆ. ಆದ್ದರಿಂದ ಊರ್ಜೋವರುದ್ಧ್ಯೈ ಎಂಬುದನ್ನು ಅರ್ಥವಾದವೆಂದು ಅನಿವಾರ್ಯವಾಗಿ ಒಪ್ಪಬೇಕು. ಇಲ್ಲದಿದ್ದರೆ, ವಿಧಿಯನ್ನು ಉನ್ನಯನ ಮಾಡಲು ಸಾಧ್ಯವಾಗದು.

**प्रकाशः** – तथा चतुर्थे **''द्रव्यसंस्कारकर्मसु परार्थत्वात् फलश्रुतिरर्थवादः''** इति तृतीयपादीयाद्याधिकरणे **''यस्य पर्णमयी जुहूर्भवति न स पापं श्लोकं शृणोति''** इत्युदाहृत्य, पर्णमयीत्वं क्रत्वर्थमुत पुरुषार्थमथोभयार्थमिति सन्दिह्य, फलश्रवणात् पुरुषार्थमेव, यद्वा – क्रत्वर्थजहूद्देशेन विधानात् क्रत्वर्थं, फलश्रवणात् पुरुषार्थं चेति दध्यादिवदुभयार्थमिति द्वेधा पूर्वपक्षयित्वा, संयोगपृथक्त्वाभावेन दध्यादिवदु-भयार्थत्वाभावात् शृणोति' इति वर्तमानापदेशेन अपापश्लोकश्रवणस्य साध्यत्वा-प्रतीतेः पुरुषार्थत्वस्याप्ययोगात् क्रत्वर्थमेव, आपापश्लोकाश्रवणं त्वर्थवाद इति सिद्धान्तितम् ।

''ದ್ರವ್ಯಸಂಸ್ಕಾರಕರ್ಮಸು ಪರಾರ್ಥತ್ವಾತ್ ಫಲಶ್ರುತಿರರ್ಥವಾದಃ ಸ್ಯಾತ್'' (೪-೩-೧)[೧]

ಈ ಅಧಿಕರಣದಲ್ಲಿ ಮಾಡಿದ ವಿಚಾರ ಹೀಗಿದೆ. ಯಾವ ಯಜಮಾನನಿಗೆ ಹಂಸಮುಖದಲ್ಲಿರುವ 'ಜುಹೂ' ಎಂಬುದು ಪರ್ಣಮಯವಾಗಿರುತ್ತದೋ ಅಂತಹ ಯಜಮಾನನು ಕೆಟ್ಟ ಕೀರ್ತಿಯನ್ನು ಎಂದೂ ಕೇಳುವುದಿಲ್ಲ ಎಂಬುದಾಗಿ ಅಪಕೀರ್ತಿಯ ಅಭಾವವನ್ನು ಫಲವನ್ನಾಗಿ ಹೇಳಿದ್ದಾರೆ.

ಈ ವಾಕ್ಯವನ್ನು ನೋಡಿದಾಗ 'ಜುಹೂ' ಎಂಬ ಯಜ್ಞಸಾಧನಕ್ಕೆ ಹೇಳಿದ ಸ್ವರ್ಣಮಯತ್ವವು ಕ್ರತುವಿಗೋಸ್ಕರ ಹೇಳಲ್ಪಟ್ಟಿದೆಯೋ? ಅಥವಾ ಪುರುಷಾರ್ಥಕ್ಕೋಸ್ಕರ ಹೇಳಲ್ಪಟ್ಟಿದೆಯೋ? ಅಥವಾ ಎರಡೂ ಪ್ರಯೋಜನಕ್ಕೋಸ್ಕರ ಹೇಳಲ್ಪಟ್ಟಿದೆಯೋ? ಎಂದು ಸಂದೇಹ.

ಪೂರ್ವಪಕ್ಷ - ಫಲವು ಸ್ಪಷ್ಟವಾಗಿ ಕೇಳಿಸುತ್ತಿರುವುದರಿಂದ ಅಪಕೀರ್ತಿಯ ಅಭಾವವೆಂಬ ಪುರುಷಾರ್ಥವೇ ಇದರ ಫಲವೆಂದು ಮೊದಲನೆಯ ಪೂರ್ವಪಕ್ಷ. ಅಥವಾ ಕ್ರತುವಿಗೋಸ್ಕರ ಹೇಳಲ್ಪಟ್ಟ ಜುಹೂವನ್ನು ಅನುವಾದ ಮಾಡಿ ಪರ್ಣಮಯತ್ವವನ್ನು ವಿಧಿಸುತ್ತಿರುವುದರಿಂದ ಪರ್ಣಮಯತ್ವವು ಜುಹೂವಿಗೆ ಶೇಷವಾಯಿತು. ಆದ್ದರಿಂದ ಜುಹೂ ಎಂಬುದು ಹೇಗೆ ಕ್ರತು ಪ್ರಯೋಜನವುಳ್ಳದ್ದೋ ಪರ್ಣಮಯತ್ವವೂ ಸಹ ಕ್ರತುಪ್ರಯೋಜನವುಳ್ಳದ್ದೇ ಆಗಿದೆ. ಆದ್ದರಿಂದ ಪರ್ಣಮಯತ್ವವು ಕ್ರತ್ವರ್ಥಕವಾಗಿದೆ. ಫಲವು ಸ್ಪಷ್ಟವಾಗಿ ಕೇಳಿಸುತ್ತಿರುವುದರಿಂದ ಪುರುಷಾರ್ಥ-ಕ್ಕೋಸ್ಕರವೂ ಪರ್ಣಮಯತ್ವವೂ ಹೇಳಲ್ಪಟ್ಟಿದೆ ಎಂದಾಯಿತು. ಉದಾಹರಣೆ - 'ದಧ್ನಾ ಇಂದ್ರಿಯಕಾಮಸ್ಯ ಜುಹುಯಾತ್' ಎಂಬಲ್ಲಿ 'ದಧ್ನಾ ಜುಹುಯಾತ್' ಎಂದು ಹೇಳಿದ್ದರಿಂದ 'ದಧಿ' ಎಂಬುದು ಕ್ರತುಪ್ರಯೋಜನವುಳ್ಳದ್ದೆಂದು ತಿಳಿಯುತ್ತದೆ. ಇಂದ್ರಿಯಕಾಮಸ್ಯ ಎಂದು ಹೇಳಿದ್ದರಿಂದ

ಅಂತಿಮಪ್ರಾಣಾಧಿಕರಣ-(೧।೧।೧೨)

ಪುರುಷಾರ್ಥಪ್ರಯೋಜನವುಳ್ಳದ್ದೂ ಆಯಿತು. ಹೀಗೆ ಒಂದೇ ದಧಿಯು ಕ್ರತುಪ್ರಯೋಜನವುಳ್ಳದ್ದೂ, ಪುರುಷಾರ್ಥಪ್ರಯೋಜನವುಳ್ಳದ್ದೂ ಹೇಗೆ ಆಗಿದೆಯೋ ಅದರಂತೆ ಇಲ್ಲಿಯೂ ಸಹ ಪರ್ಣಮಯತ್ವವು ಎರಡುವಿಧ ಪ್ರಯೋಜನವುಳ್ಳದ್ದಾಗಬಹುದು.

---

१.भाट्टसङ्ग्रहः – **द्रव्यसंस्कारकर्मसु परार्थत्वात्फलश्रुतिरर्थवादः स्यात् ॥ १ ॥ (उत्पत्तेश्चातत्प्रधानन्तवात् ॥ २ ॥ फलन्तु तत्प्रधानायाम् ॥ ३ ॥)**

"यस्य पर्णमयी जुहूर्भवति न स पापं श्लोकं शृणोति" इत्यनारभ्य श्रूयते । तथा ज्योतिष्टोमे "यदांक्ते चक्षुरेव भ्रातृव्यस्य वृंक्ते" इति, तथा "यत्प्रयाजानूयाजा इज्यन्ते, वर्म वा एतद्यज्ञाय क्रियते, वर्म यजमानाय, भ्रातृव्यार्भिभूत्या" इति च । तत्र जुह्वाः पर्णमयत्वं, यश्चाञ्जनरूपचक्षुःसंस्कारः, यच्च प्रायाजानुयाजरूपं वर्म तत्त्रितयं किं पुरुषार्थत्वेन विधीयते, अथ क्रत्वर्थत्वेन, उतोभयार्थत्वेनेति **सन्देहः । पूर्वपक्षस्तु,** पापश्लोकश्रवणराहित्यादिफलश्रवणात् पुरुषार्थतया विधीयते । 'यस्य पथ्यमशनं भवति, स कल्पो भवति' इति लोके वर्तमानापदेशस्यापि फलप्रतिपादकत्वदर्शनादित्ये**कः** । फलसंयोगात्फलार्थत्वेऽपि क्रत्वर्था या जुहूस्तदुद्देशेन विधीयमानस्य पर्णमयत्वस्य क्रत्वर्थतापि स्यादिति दध्यादिवदुभयार्थं पर्णमयत्वविधानम् । तथा संस्कारकर्मणोरपि ज्योतिष्टोमादिप्रकरणेन क्रत्वर्थतापि प्राप्तेत्युभयस्याप्युभयार्थं विधानमित्य**न्यः** । **सिद्धान्तस्तु,** युक्तं दध्न उभयार्थत्वम् । "दध्ना जुहोति" इति, "दध्नेन्द्रियकामस्य जुहुयात्" इति क्रतुसंयोगस्य फलसंयोगस्य पृथग्वाक्यत्वयोक्तत्वेन संयोगपृथकत्वन्यायात्। इह त्वेकं वाक्यम् । तस्य क्रतुसम्बन्धफलसम्बन्धरूपोभयपरत्वे वाक्यभेदः स्यात् । नच क्रत्वर्थाप्प्रणयनाश्रितगोदोहनं यथा फलाय विधीयते तथा क्रत्वर्थजुह्वाद्याश्रितपर्णतादिकं फलाय विधीयतामिति वाच्यम् । तत्र पशुकामस्येति कामपदश्रवणेन पशोः फलत्वप्रतीत्या गोदोहनस्य फलार्थत्वेपीह 'न शृणोति' । 'वृंक्ते' 'वर्म क्रियते' इति वर्तमाननिर्देशेन साध्यत्वाप्रतीत्या पापश्लोकश्रवणराहित्यादेः फलत्वाप्रतीतेः । एवमुक्तदिशा क्रत्वर्थानां पर्णतादीनां क्रतुनिष्पादनद्वारा क्रतुफलेनैव फलवत्त्वेन फलाकाङ्क्षाविरहाद्रात्रिसत्रन्यायेन 'यः अपापश्लोकश्रवणादिकामः स पर्णतादिकं कुर्यात्' इति विपरिणामेनार्थवादस्य फलपरताकल्पनमप्ययुक्तत्यर्थवाद एव सर्वोपीति । तदाह **सूत्रे, द्रव्यसंस्कारकर्मसु** जुहूप्रकृतिभूतपर्णरूपद्रव्याञ्जनरूपसंस्कारप्रयाजानुयाजरूपकर्मसु **फलश्रुतिरर्थवादः** । कुतः? **परार्थत्वात्** क्रत्वर्थत्वात् । क्रत्वर्थत्या क्रतुफलेनैव फलवत्त्वेन फलाकाङ्क्षाविधुरत्वादिति । **फलन्तु,** न फलार्थं पर्णतादिविधानमिति क्रत्वर्थतयैव तदनुष्ठानमिति ।

इति प्रथमं द्रव्यसंस्कारकर्मणां क्रत्वर्थताधिकरणम् (सूत्राणि १-३)

ಸಿದ್ಧಾಂತ - ಪರ್ಣಮಯತ್ವವು ಪುರುಷಾರ್ಥವುಳ್ಳದ್ದೂ ಅಲ್ಲ. ಉಭಯಾರ್ಥವುಳ್ಳದ್ದೂ ಅಲ್ಲ ಹೊರತಾಗಿ ಕೇವಲ ಕ್ರತ್ವರ್ಥವುಳ್ಳದ್ದು. ಏಕೆಂದರೆ ದಧ್ಯಾದಿಗಳಲ್ಲಿ ಕ್ರತುಸಂಯೋಗ ಕ್ರತ್ವರ್ಥಗಳಿರುವುದರಿಂದ ಉಭಯರ್ಥಗಳಾಗಬಹುದು. ಆದರೆ ಪರ್ಣಮಯತ್ವದಲ್ಲಿ ಕ್ರತು ಸಂಯೋಗ ಕ್ರತ್ವರ್ಥಗಳು ಇಲ್ಲದಿರುವುದರಿಂದ ಉಭಯಾರ್ಥವನ್ನು ಹೇಳಲಾಗದು. ಅಂದರೆ 'ದಧ್ನಾಜುಹೋತಿ' ಎಂಬುದೇ ಬೇರೆ ವಾಕ್ಯವಾಗಿದೆ. 'ದಧ್ನಾ ಇಂದ್ರಿಯಕಾಮಸ್ಯ ಜುಹುಯಾತ್' ಎಂಬುದೇ ಬೇರೆ ವಾಕ್ಯವಾಗಿದೆ. 'ದಧ್ನಾ ಜುಹೋತಿ' ಎಂಬ ವಾಕ್ಯವು ಕ್ರತ್ವರ್ಥವನ್ನು ಹೇಳುತ್ತಿದೆ. 'ದಧ್ನಾ ಇಂದ್ರಿಯಕಾಮಸ್ಯ ಜುಹುಯಾತ್' ಎಂಬ ವಾಕ್ಯವು ಪುರುಷಾರ್ಥತ್ವವನ್ನು ಹೇಳುತ್ತಿದೆ. ಆದ್ದರಿಂದ ಫಲಸಂಯೋಗವನ್ನು ಮತ್ತು ಕ್ರತುಸಂಯೋಗವನ್ನು ಪ್ರತ್ಯೇಕ ಪ್ರತ್ಯೇಕವಾಗಿ ಹೇಳಿದ್ದರಿಂದ 'ದಧಿ' ಎಂಬುದು ಉಭಯಾರ್ಥವಾಗುತ್ತದೆ. ಆದರೆ ಪ್ರಕೃತ ಪರ್ಣಮಯತ್ವವನ್ನು ಬೇರೆ ಬೇರೆ ವಾಕ್ಯಗಳಲ್ಲಿ ಹೇಳಿರುವುದಿಲ್ಲ. ಕ್ರತುಸಂಯೋಗ ಮತ್ತು ಫಲಸಂಯೋಗವನ್ನು 'ಯಸ್ಯ ಪರ್ಣಮಯೀ' ಎಂಬ ಒಂದೇ ವಾಕ್ಯದಲ್ಲಿಯೇ ಹೇಳಲಾಗಿದೆ. ಆದ್ದರಿಂದ ಸಂಯೋಗ ಮತ್ತು ಕ್ರತ್ವರ್ಥತ್ವವು ಪರ್ಣಯತ್ವದಲ್ಲಿ ಇರುವುದಿಲ್ಲವೆಂದು ತಿಳಿಯಬೇಕು. ಆದ್ದರಿಂದ ಉಭಯಾರ್ಥವೆಂಬ ಎರಡನೆಯ ಪೂರ್ವಪಕ್ಷವು ನಿರಾಕೃತವಾಯಿತು.

ಪುರುಷಾರ್ಥಕ್ಕೋಸ್ಕರ ಪರ್ಣಮಯತ್ವವು ಹೇಳಲ್ಪಟ್ಟಿದೆ ಎಂಬ ಪ್ರಥಮಪೂರ್ವಪಕ್ಷವೂ ಸರಿಯಿಲ್ಲ. ಏಕೆಂದರೆ 'ಶೃಣೋತಿ' ಎಂಬುದಾಗಿ ವರ್ತಮಾನ ಪ್ರಯೋಗವನ್ನು ಮಾಡಲಾಗಿದೆ. ಆದ್ದರಿಂದ ಅಪಾಪ ಶ್ಲೋಕಶ್ರವಣಕ್ಕೆ ಸಾಧ್ಯತ್ವ ಪ್ರತೀತಿಯು ಬರುತ್ತಿಲ್ಲ. ಒಂದು ವೇಳೆ ಭವಿಷ್ಯದರ್ಥದಲ್ಲಿ ಪ್ರಯೋಗಿಸಿದ್ದರೆ. ಸಾಧ್ಯತ್ವದ ಪ್ರತೀತಿ ಬರುತ್ತಿತ್ತು. ಆದ್ದರಿಂದ ಕೇವಲ ಪುರುಷಾರ್ಥವನ್ನೇ ಪ್ರಯೋಜನವೆಂದು ಹೇಳಲಾಗದು. ಕೇವಲ ಕ್ರತ್ವರ್ಥವೆಂದೇ ಹೇಳಬೇಕು. ಅಪಾಪಶ್ಲೋಕಶ್ರವಣವನ್ನು ಏಕೆ ಹೇಳಿದ್ದೆಂದರೆ, ಅರ್ಥವಾದಕ್ಕೋಸ್ಕರವೆಂದು ತಿಳಿಯಬೇಕು.

**प्रकाशः** – अत्रोभयत्रापि 'ऊर्जोऽवरुध्यै' 'न स पापं' इति अनयोरर्थवादत्वनिर्णयाविशेषेऽप्यौदुम्बराधिकरणे उदुम्बरतायाः विध्यभावेन साधनत्वाभावमूलकोऽर्थवादत्वनिर्णयः पर्णमय्यधिकरणे तु अपापश्लोकश्रवणस्य वर्तमानापदेशेन साध्यत्वाभावमूलक इति अवान्तरनिर्णयभेदाधिकरणभेदस्तथेत्यर्थः ।

ಈ ಎರಡು ಅಧಿಕರಣಗಳಲ್ಲಿ ಊರ್ಜೋಽವರುದ್ಧ್ಯೈ ಎಂಬುದನ್ನು ಅರ್ಥವಾದವೆಂದು ನಿರ್ಣಯಿಸಿದ್ದಾರೆ. ಅದರಂತೆ "ನ ಸ ಪಾಪಂ" ಎಂಬುದನ್ನು ಸಹ ಅರ್ಥವಾದವೆಂದು ನಿರ್ಣಯಿಸಿದ್ದಾರೆ. ಹೀಗೆ ಎರಡೂ ಸಿದ್ಧಾಂತ ನ್ಯಾಯಗಳಲ್ಲಿ ಅರ್ಥವಾದತ್ವನಿರ್ಣಯವು ಸಮಾನವಾಗಿದೆ. ಆದರೂ ಸಹ ಅವಾಂತರ ನ್ಯಾಯಗಳಲ್ಲಿ ಭೇದವಿದೆ. ಔದುಂಬರಾಧಿಕರಣದಲ್ಲಿ ಔದುಂಬರತ್ವಕ್ಕೆ ವಿಧಿಯು ಕೇಳಿಸುತ್ತಿಲ್ಲ. ಆದ್ದರಿಂದ ಸಾಧನತ್ವವೆಂದು ಹೇಳಲಾಗದು. ಸಾಧನತ್ವಾಭಾವದ ಮೂಲಕವಾಗಿ ಅರ್ಥವಾದತ್ವವನ್ನು ನಿರ್ಣಯಿಸಿದ್ದಾರೆ. ಆದರೆ ಪರ್ಣಮಯ್ಯಧಿಕರಣದಲ್ಲಿ 'ಅಪಾಪಶ್ಲೋಕ'ಶ್ರವಣಕ್ಕೆ ವರ್ತಮಾನಪ್ರಯೋಗ ಮಾಡಿದ್ದರಿಂದ ಸಾಧ್ಯತ್ವಪ್ರತೀತಿಯೇ ಇಲ್ಲದ ಕಾರಣ ಅರ್ಥವಾದತ್ವವನ್ನು ನಿರ್ಣಯಿಸಲಾಗಿದೆ. ಹೀಗೆ ಅವಾಂತರ ನಿರ್ಣಯಗಳಲ್ಲಿ ಭೇದವಿರುವುದರಿಂದ, ಅಧಿಕರಣಭೇದವನ್ನು ತಿಳಿಯಬೇಕು.

ಅಂತಿಮಪ್ರಾಣಾಧಿಕರಣ-(೧।೧।೧೨)

ಅದೇ ರೀತಿಯಾಗಿ ಪ್ರಕೃತ ಪ್ರಾಣಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನು. ಎಂಬುದು ಎರಡೂ ಪ್ರಾಣಾಧಿ -ಕರಣಗಳ ಪರಮನಿರ್ಣಯವಾಗಿದೆ. ಆದರೆ ಜೀವನಹೇತುತ್ವ ಪ್ರಸಿದ್ಧಲಿಂಗಗಳ ಅಂತರ್ಯಾಮಿಗತತ್ವ ಮೊದಲಾದ ಅವಾಂತರ ನಿರ್ಣಯಗಳಲ್ಲಿ ಭೇದವಿರುವುದರಿಂದ ಅಧಿಕರಣಗಳು ಭಿನ್ನಭಿನ್ನವಾಗುತ್ತವೆ.

**प्रकाशः** – **'ऊर्जं पशूनाप्नोति' इत्येतत् 'ऊर्जोऽवरुध्यै' इत्यस्योपलक्षणार्थम् ।** **यद्वा** – भाष्यवार्तिकादौ शाखान्तरवाक्योक्त्या विचारकरणेऽपि प्रसिद्धशाखायामा-प्नोतीत्यन्तवाक्यश्रवणेन तस्य श्रृणोतीत्यन्तवाक्येन तुल्यविचारत्वमावश्यकमिति दर्शयितुमाप्नोतीत्यन्तमुक्तम् । आक्षिप्तां प्रयोजनोक्तिमुपपाद्योपसंहरति **तस्मादिति** ॥ **अन्यत्रापीति** ॥ अन्तराद्यधिकरणेष्वित्यर्थः ॥ उपपादितं चैतत्तत्र तत्र, उपपाद-यिष्यते चोत्तरत्राऽपि ।

ಗ್ರಂಥಕಾರರು ಮೂಲದಲ್ಲಿ "ಊರ್ಜಂ ಪಶೂನಾಪ್ನೋತಿ" ಎಂದು ಏಕೆ ಉಲ್ಲೇಖಿಸಿದರು; "ಊರ್ಜೋऽವರುದ್ಧೈ' ಎಂದು ಹೇಳಬೇಕಿತ್ತಲ್ಲವೇ ? ಎಂದು ಪ್ರಶ್ನೆ ಬರುತ್ತದೆ. ಆದರೆ 'ಊರ್ಜೋऽ-ವರುದ್ಧೈ' ಎಂಬುದನ್ನು ಸಂಗ್ರಹಿಸುವುದಕ್ಕಾಗಿ ಉಪಲಕ್ಷಣಯಾ 'ಊರ್ಜಂ ಪಶೂನಾಪ್ನೋತಿ' ಎಂದು ಉಲ್ಲೇಖಿಸಿದ್ದಾರೆಂದು ತಿಳಿಯಬೇಕು. ಅಥವಾ ಭಾಷ್ಯ ಮತ್ತು ವಾರ್ತಿಕಗಳಲ್ಲಿ ಅಪ್ರಸಿದ್ಧವಾದ ಬೇರೆ ಶಾಖೆಗಳಲ್ಲಿರುವ 'ಊರ್ಜೋऽವರುದ್ಧೈ' ಎಂಬ ವಾಕ್ಯವನ್ನು ವಿಚಾರ ಮಾಡಿದ್ದಾರೆ ಪ್ರಸಿದ್ಧಶಾಖೆಯಲ್ಲಿ 'ಊರ್ಜೋऽವರುದ್ಧೈ' ಎಂದು ಕೇಳಿಸುತ್ತಲೇ ಇಲ್ಲ. ಒಂದು ವೇಳೆ 'ಊರ್ಜೋऽವರುದ್ಧೈ' ಎಂಬುದನ್ನು ಸ್ವೀಕರಿಸದಿದ್ದಲ್ಲಿ, 'ಪಶೂನಾಪ್ನೋತಿ' ಎಂದಷ್ಟೇ ಹೇಳಿದಂತಾಗುತ್ತಿತ್ತು. ಆವಾಗ ಈ ವಾಕ್ಯಕ್ಕೂ 'ನಚ ಪಾಪಂ ಶ್ಲೋಕಂ ಶೃಣೋತಿ' ಎಂಬ ವಾಕ್ಯಕ್ಕೂ ಏನೂ ವ್ಯತ್ಯಾಸವಿಲ್ಲದೆ ಎರಡನ್ನೂ ಹೇಳಿದ್ದು ವ್ಯರ್ಥವಾಗುತ್ತಿತ್ತು. ಹೆಚ್ಚಿನ ವಿಚಾರವನ್ನು ತಿಳಿಸುವುದಕ್ಕಾಗಿ ಗ್ರಂಥಕಾರರು 'ಆಪ್ನೋತಿ' ಎಂಬಲ್ಲಿಯ ತನಕ ವಾಕ್ಯವನ್ನು ಹೇಳಿದ್ದಾರೆ.

ಇಲ್ಲಿಯ ತನಕ ಆಕ್ಷಿಪ್ತವಾದ ಪ್ರಯೋಜನೋಕ್ತಿಯನ್ನು ಉಪಪಾದನೆ ಮಾಡಿ 'ತಸ್ಮಾದ್' ಇತ್ಯಾದಿಯಾಗಿ ಉಪಸಂಹಾರ ಮಾಡುತ್ತಿದ್ದಾರೆ. ಇಲ್ಲಿಯತನಕ ಸಮರ್ಥಿಸಿದಂತೆ ಪೂರ್ವಪಕ್ಷ ಹಾಗೂ ಸಿದ್ಧಾಂತಫಲಗಳನ್ನು ಬೇರೆ ಅಧಿಕರಣಗಳಲ್ಲಿಯೂ ತಿಳಿಯಬೇಕು. ಇದರ ಬಗ್ಗೆ ಈ ಹಿಂದೆ ಕೆಲವೆಡೆ ತೋರಿಸಿದ್ದಾಗಿದೆ. ಮುಂದೆಯೂ ಸಹ ತೋರಿಸಲಾಗುತ್ತದೆ.

**गुरुराजीयम्** - ननु अत एव प्राणः प्राणस्तथानुगमादित्यधिकरणद्वयेन प्राणस्य विष्णुत्वं निर्णेयम् । तच्चैकमेवेति कथमधिकरणभेदः । नच निर्णेयस्यैकत्वेपि न्यायभेदाद्भेदः । निर्णयस्यानेकन्यायसाध्यत्वमात्रेणाधिकरणभेदे आनन्दमयस्य ब्रह्मत्वनिर्णयस्य ब्रह्मशब्दाभ्यासतद्धेतुव्यपदेशमान्त्रवर्णिकगानादिरूपानेकन्याय-साध्यत्वेन तत्राप्यधिकरणभेदः स्यादित्यत आह – **एकस्येति** ॥ अत्रैव पूर्वतन्त्र-सम्प्रतिपन्नदृष्टान्तमाह – **यथेति** ॥

ಸಾರ

ಹಿಂದಿನ ಪ್ರಾಣಾಧಿಕರಣದಲ್ಲಿ ಪ್ರಾಣಶಬ್ದದಿಂದ ವಿಷ್ಣು ವಾಚ್ಯನಾಗುತ್ತಾನೆಂಬ ಸಂಶಯ ಬರುವುದೇ ಈ ಅಧಿಕರಣದ ಪೂರ್ವಪಕ್ಷಫಲ. ಹಿಂದಿನ ಪ್ರಾಣಾಧಿಕರಣದಲ್ಲಿ ವಿಷ್ಣುವೇ ಪ್ರಾಣಶಬ್ದವಾಚ್ಯನೆಂಬ ನಿರ್ಣಯವೇ ಈ ಅಧಿಕರಣದ ಸಿದ್ಧಾಂತಫಲ.

ಈ ಎರಡೂ ಅಧಿಕರಣಗಳಲ್ಲಿ ವಿಷ್ಣುವೇ ಪ್ರಾಣಶಬ್ದವಾಚ್ಯನೆಂದು ನಿರ್ಣಯಿಸಲಾಗಿದೆ. ಎರಡೂ ಅಧಿಕರಣಗಳ ಸಿದ್ಧಾಂತನ್ಯಾಯವು ಒಂದೇ ಆಗಿರುವಾಗ ಬೇರೆ ಬೇರೆ ಅಧಿಕರಣವನ್ನಾಗಿ ಏಕೆ ಪರಿಗಣಿಸಿದ್ದಾರೆಂದು ಗೊಂದಲವಾಗುತ್ತದೆ. ಈ ಎರಡೂ ಅಧಿಕರಣಗಳ ಪರಮಸಿದ್ಧಾಂತಗಳು ಒಂದೇ ಆಗಿದ್ದರೂ ಅವಾಂತರ ನಿರ್ಣಯಗಳಲ್ಲಿ ವ್ಯತ್ಯಾಸವಿದೆ. ಹಿಂದಿನ ಪ್ರಾಣಾಧಿಕರಣದಲ್ಲಿ ಜೀವನಹೇತುತ್ವವನ್ನು ವಿಷ್ಣುವಿನಲ್ಲಿ ಸಮರ್ಥಿಸುವುದು ಅವಾಂತರಪ್ರಯೋಜನವಾಗಿತ್ತು. ಈ ಅಧಿಕರಣದಲ್ಲಿ ಪ್ರಸಿದ್ಧಲಿಂಗಗಳಿಗೆ ಅಂತರ್ಯಾಮಿಗತತ್ವವನ್ನು ಸಮರ್ಥಿಸುವುದು ಪ್ರಯೋಜನವಾಗಿದೆ. ಈ ಅವಾಂತರನಿರ್ಣಯಕ್ಕೋಸ್ಕರ ಅನೇಕ ಅಧಿಕರಣಗಳನ್ನು ಒಪ್ಪಬಹುದೆಂದು ಪ್ರಾಭಾಕರರು ಹಾಗೂ ಭಾಟ್ಟರು ತಮ್ಮ ಗ್ರಂಥಗಳಲ್ಲಿ ಸಮರ್ಥಿಸಿಕೊಂಡಿದ್ದಾರೆ. ಆದ್ದರಿಂದ ಪ್ರಕೃತ ಒಂದು ಪಾದದಲ್ಲಿ ಎರಡು ಪ್ರಾಣಾಧಿಕರಣಗಳನ್ನು ಹೇಳಿದ್ದು ತಪ್ಪಾಗುವುದಿಲ್ಲ.

* * * *

## ಪಾದಸಂಗತಿಯ ಅನುಪಪತ್ತಿಪರಿಹಾರ

तात्पर्यचन्द्रिका

**एवञ्च ''अत एव प्राणः'' इत्यत्र तैत्तिरीयस्थप्राणशब्दसमन्वये उक्तेऽपि अत्र पूर्वपक्षे ऐतरेयवाक्यस्थप्राणस्याविष्णुत्वेन तैत्तिरीयस्थस्यापि विष्णुत्वाक्षेपादुभयत्रप्रसिद्धत्वाभावः प्राणशब्दस्य । ''आकाशोऽर्थान्तरत्वादिव्यपदेशात्'' इत्यत्र तु 'आकाशस्तल्लिङ्गात्' इत्यत्रोक्तस्य 'आकाश इति होवाच' इति वाक्यस्थाकाशशब्दो ब्रह्मपर इत्यस्यानाक्षेपादुभयत्रप्रसिद्धत्वम् । अत एव तत्र टीकायां पादान्तरस्थं 'तल्लिङ्गात्' इत्यधिकरणं अनाक्षिप्य एकपादस्थद्युभ्वाद्यधिकरणमेव आक्षिप्तम् ।**

ಅನುವಾದ - ಪಾದಸಂಗತಿಯ ಅನುಪಪತ್ತಿಯ ಪರಿಹಾರ ಹೀಗಿದೆ - 'ಅತ ಏವ ಪ್ರಾಣಃ' ಎಂಬಲ್ಲಿ ತೈತ್ತಿರೀಯದಲ್ಲಿರುವ ಪ್ರಾಣಶಬ್ದಸಮನ್ವಯವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದರೂ ಈ ಅಧಿಕರಣದ ಪೂರ್ವಪಕ್ಷದಲ್ಲಿ ಐತರೇಯವಾಕ್ಯದಲ್ಲಿರುವ ಪ್ರಾಣನಿಗೆ ಅವಿಷ್ಣುತ್ವವನ್ನು ಹೇಳಿದ್ದರಿಂದ ತೈತ್ತಿರೀಯದಲ್ಲಿರುವ ಪ್ರಾಣನು ವಿಷ್ಣು ಆಗುವುದಿಲ್ಲ ಎಂದು ಆಕ್ಷೇಪಿಸಿದಂತಾಯಿತು. ಇದರಿಂದ ಪ್ರಾಣಶಬ್ದಕ್ಕೆ ಉಭಯತ್ರಪ್ರಸಿದ್ಧತ್ವವನ್ನು ಅಲ್ಲಗಳೆದಂತಾಯಿತು. ಉಭಯತ್ರಪ್ರಸಿದ್ಧವಾಗಿದ್ದಲ್ಲಿ ಈ ಅಧಿ-

ಕರಣವು ತೃತೀಯಪಾದದಲ್ಲಿ ಸೇರಬೇಕಾಗಿತ್ತು. "ಆಕಾಶೋऽರ್ಥಾಂತರತ್ವಾದಿವ್ಯಪದೇಶಾತ್" ಎಂಬ ಮೂರನೇ ಪಾದದಲ್ಲಿ ಬರುವ ಸೂತ್ರದಲ್ಲಿ "ಆಕಾಶಾಸ್ತಲ್ಲಿಂಗಾತ್" ಎಂಬ ಸೂತ್ರದಲ್ಲಿ ಹೇಳಲ್ಪಟ್ಟ "ಆಕಾಶ ಇತಿ ಹೋವಾಚ" ಎಂಬ ವಾಕ್ಯದಲ್ಲಿರುವ 'ಆಕಾಶ' ಎಂಬ ಶಬ್ದವು ಬ್ರಹ್ಮಪರವಾಗಿದೆ ಎಂಬುದನ್ನು ಆಕ್ಷೇಪ ಮಾಡದ ಕಾರಣ ಆಕಾಶಶಬ್ದವು ಉಭಯತ್ರಪ್ರಸಿದ್ಧಿ ಎನಿಸಿದೆ. ಆದ್ದರಿಂದಲೇ ಆ ಅಧಿಕರಣದ ಟೀಕೆಯಲ್ಲಿ ಬೇರೆ ಪಾದದಲ್ಲಿರುವ 'ತಲ್ಲಿಂಗಾತ್' ಎಂಬುದನ್ನು ಆಕ್ಷೇಪ ಮಾಡದೇ ಅದೇ ಪಾದದ ದ್ಯುಭ್ವಾದ್ಯಧಿಕರಣದಲ್ಲಿ ಹೇಳಲ್ಪಟ್ಟ ಪ್ರಮೇಯವನ್ನೇ ಆಕ್ಷೇಪಿಸಲಾಗಿದೆ. ಆದ್ದರಿಂದ ಪ್ರಕೃತ ಹಿಂದಿನ ಅಧಿಕರಣದ ಪ್ರಾಣಶಬ್ದವನ್ನು ಆಕ್ಷೇಪಿಸಿದ್ದರಿಂದ ಉಭಯತ್ರಪ್ರಸಿದ್ಧಿಯೆಂದು ಹೇಳಲಾಗದು.

**प्रकाशः** – नन्वन्यदेव किञ्चित्प्रयोजनमुच्यतां, किं पूर्वोक्तप्राणाक्षेपोपपादन-क्लेशेनेत्यतोऽवश्यं चैतत्, अन्यथा तृतीयपादे समन्वीयमानाकाशशब्दस्येव पूर्वोक्तन्यायान्यत्रप्रसिद्धिभ्यां प्राणशब्दस्योभयत्रप्रसिद्धत्वापत्त्याऽस्याधिकरणस्यैतत् पादासङ्गत्यापत्तेरित्याह – **एवञ्चेति** ॥ यद्वा – प्रयोजनोक्तिं समर्थ्येदानीं पूर्वोक्त्य-न्यत्रप्रसिद्धिभ्याम् आकाशशब्द इवात्राप्युभयत्रप्रसिद्धत्वापत्त्याऽत्रासङ्गतिमाशङ्क्य पादसङ्गतिं साधयति – **एवञ्चेति** ॥ एवमाक्षेपे उभयत्रसिद्धता नेत्येतद्व्यति-रेकमुखेनाह – **आकाश इति** ॥ **अत एवेति** ॥ उभयत्रप्रसिद्धार्थत्वलाभादेवेत्यर्थः । अन्यथाऽयमाकाशोऽन्यश्चेत्प्रागुक्तोऽप्यन्यस्स्यादित्येवोच्येत, 'स च विष्णोरितरश्चेत् सर्वाधारत्वमप्यन्यस्य प्रसज्यते' इति नोच्येतेति भावः । 'पादान्तर' इति, 'एक' इति च हेत्वन्तरम् ।

ವಿವರಣೆ - ಪೂರ್ವಪಕ್ಷದ ಫಲವನ್ನು ಹೇಳುವಾಗ ಹಿಂದಿನ ಪ್ರಾಣಾಧಿಕರಣದಲ್ಲಿ ವಿಷ್ಣು ಪ್ರಾಣಶಬ್ದದಿಂದ ಪ್ರತಿಪಾದ್ಯನಲ್ಲ ಎಂಬುದಾಗಿ ಫಲವನ್ನು ಹೇಳಿದರು. ಹೀಗೆಯೇ ಏಕೆ ಹೇಳಬೇಕು? ಎಂದರೆ ಒಂದುವೇಳೆ ಹಿಂದಿನ ಅಧಿಕರಣದ ಪ್ರಾಣನನ್ನು ಆಕ್ಷೇಪ ಮಾಡದಿದ್ದಲ್ಲಿ ಪೂರ್ವೋಕ್ತ-ನ್ಯಾಯದಿಂದ ಮತ್ತು ಅನ್ಯತ್ರಪ್ರಸಿದ್ಧಿಗಳಿಂದ ಆಕಾಶಶಬ್ದದಂತೆ ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ ಪ್ರಾಣಶಬ್ದವು ಉಭಯತ್ರಪ್ರಸಿದ್ಧವಾಗುತ್ತಿತ್ತು. ಉಭಯತ್ರಪ್ರಸಿದ್ಧವಾಗಿದ್ದಲ್ಲಿ ಅಂತಿಮಪ್ರಾಣಾಧಿಕರಣಕ್ಕೆ ಈ ಪಾದದಲ್ಲಿ ಅಂತರ್ಭಾವವೇ ಕೂಡುತ್ತಿರಲಿಲ್ಲ; ಮೂರನೇ ಪಾದದಲ್ಲಿ ಸೇರಬೇಕಾಗುವ ಪ್ರಸಂಗ ಬರುತ್ತಿತ್ತು. ಅದಕ್ಕೋಸ್ಕರ 'ಅತ ಏವ ಪ್ರಾಣಃ' ಎಂಬಲ್ಲಿ ಹೇಳುವ ಪ್ರಾಣನಿಗೆ ವಿಷ್ಣುತ್ವವನ್ನು ಆಕ್ಷೇಪ ಮಾಡಲೇಬೇಕೆಂದು 'ಏವಂಚ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

ಅಥವಾ 'ಏವಂಚ' ಇತ್ಯಾದಿ ವಾಕ್ಯಕ್ಕೆ ಮತ್ತೊಂದು ರೀತಿಯಲ್ಲಿ ಅವತಾರಿಕೆಯನ್ನು ತಿಳಿಯಬೇಕು. ಇಲ್ಲಿಯತನಕ ಭಾಷ್ಯದಲ್ಲಿ ಹೇಳಿದ ಪೂರ್ವಪಕ್ಷದ ಪ್ರಯೋಜನದ ಉಕ್ತಿಯನ್ನು ಸಮರ್ಥಿಸಿದರು.

ಪ್ರಕೃತ ಪೂರ್ವೋಕ್ತಿ ಹಾಗೂ ಅನ್ಯತ್ರಪ್ರಸಿದ್ಧಿಯಿಂದ ಪ್ರಾಣಶಬ್ದಕ್ಕೆ ಉಭಯತ್ರಪ್ರಸಿದ್ಧಿ ಬರುವುದರಿಂದ ಈ ಅಧಿಕರಣದಲ್ಲಿ ಪ್ರಾಣಶಬ್ದದ ಸಮನ್ವಯವು ಅಸಂಗತವಾಗುತ್ತದೆಂದು ಆಶಂಕಿಸಿ ಪಾದಸಂಗತಿಯನ್ನು 'ಏವಂಚ' ಇತ್ಯಾದಿಯಾಗಿ ಸಾಧಿಸುತ್ತಿದ್ದಾರೆ. ಹೀಗೆ ಆಕ್ಷೇಪ ಮಾಡಿದರೆ ಉಭಯತ್ರಪ್ರಸಿದ್ಧಿಯು ಬರುವುದಿಲ್ಲವೆಂಬ ವ್ಯತಿರೇಕಮುಖದಿಂದ 'ಆಕಾಶ' ಇತ್ಯಾದಿ ವಾಕ್ಯದಲ್ಲಿ ಉಪಪಾದಿಸುತ್ತಿದ್ದಾರೆ. ಅಂದರೆ ಎಲ್ಲಿ ಪೂರ್ವಾಧಿಕರಣವನ್ನು ಆಕ್ಷೇಪ ಮಾಡಿರುತ್ತಾರೋ, ಅಲ್ಲಿ ಉಭಯತ್ರಪ್ರಸಿದ್ಧತ್ವವು ಇರುವುದಿಲ್ಲ. ಎಲ್ಲಿ ಪೂರ್ವಾಧಿಕರಣದ ಪ್ರಮೇಯವನ್ನು ಆಕ್ಷೇಪ ಮಾಡಿರು-ವುದಿಲ್ಲವೋ ಅಲ್ಲಿ ಉಭಯತ್ರಪ್ರಸಿದ್ಧತ್ವವು ಇರುತ್ತದೆಂಬ ವ್ಯಾಪ್ತಿಯನ್ನು ಹೇಳಿದಂತಾಯಿತು.

ಆಕಾಶಪದಕ್ಕೆ ಉಭಯತ್ರಪ್ರಸಿದ್ಧತ್ವ ಬರಬೇಕೆಂಬ ಕಾರಣದಿಂದಲೇ ಮೂರನೇ ಪಾದದ ಆಕಾಶಾಧಿಕರಣದಲ್ಲಿ ಪ್ರಥಮಪಾದದಲ್ಲಿ ಬರುವ ಆಕಾಶಾಧಿಕರಣದ ಪ್ರಮೇಯವನ್ನು ಆಕ್ಷೇಪ ಮಾಡಿರುವುದಿಲ್ಲ. ಈ ವ್ಯಾಪ್ತಿಯನ್ನು ಒಪ್ಪದಿದ್ದರೆ ಮೂರನೇ ಪಾದದ ಆಕಾಶಾಧಿಕರಣದಲ್ಲಿಯೂ ಪ್ರಥಮಪಾದದ ಆಕಾಶಾಧಿಕರಣದ ಪ್ರಮೇಯವನ್ನು ಆಕ್ಷೇಪಿಸುತ್ತಿದ್ದರು. ''ಸ ಚ ವಿಷ್ಣೋರಿತರಶ್ಚೇತ್ ಸರ್ವಾಧಾರತ್ವಮಪ್ಯನ್ಯಸ್ಯ ಪ್ರಸಜ್ಯತೇ'' ಆಕಾಶಶಬ್ದದಿಂದ ವಿಷ್ಣುವು ಪ್ರತಿಪಾದ್ಯನಾಗದಿದ್ದರೆ ದ್ಯುಭ್ವಾದ್ಯಧಿಕರಣದಲ್ಲಿ ಹೇಳಲ್ಪಟ್ಟ ಸರ್ವಾಧಾರತ್ವವೂ ಸಹ ವಿಷ್ಣುವಿಗೆ ಬರುವುದಿಲ್ಲವೆಂದು ಟೀಕೆಯಲ್ಲಿ ಹೇಳುತ್ತಿರಲಿಲ್ಲ; ಹೊರತಾಗಿ ಪ್ರಥಮಪಾದದ ಆಕಾಶಾಧಿಕರಣವನ್ನೇ ಆಕ್ಷೇಪಿಸುತ್ತಿದ್ದರು.

ಗ್ರಂಥದಲ್ಲಿರುವ 'ಪಾದಾಂತರ' ಎಂಬ ಪದವು ಹಾಗೂ 'ಏಕ' ಎಂಬ ಪದವು ಹೇತ್ವಂತರವೆಂದು ತಿಳಿಸುತ್ತಿದೆ.

**गुरुराजीयम्** – ननु ''तद्वै त्वं प्राणः' इत्यत्र प्राणस्य विष्णुत्वमङ्गी-कृत्यैतरेयेऽन्यलिङ्गेनान्यपरत्वमित्येवं पूर्वपक्षसम्भवे किमर्थं तदाक्षेपो वर्ण्यत इत्यत आह – एवञ्चेत्यादि ॥ अन्यथोभयत्रप्रसिद्ध्यापत्त्या पादासङ्गत्यापातादिति भावः ।

## ಸಾರ

ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ ಪ್ರಾಣಶಬ್ದವು ಉಭಯತ್ರಪ್ರಸಿದ್ಧವಾಗಬೇಕು, ಏಕೆಂದರೆ ಹಿಂದಿನ ಪ್ರಾಣಾಧಿಕರಣದಲ್ಲಿ ಕೆಲವು ವಾಕ್ಯಗಳಲ್ಲಿರುವ ಪ್ರಾಣಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ. ಆದರೆ ಲೋಕಪ್ರಸಿದ್ಧಿಯು ಮುಖ್ಯವಾಯುವಿನಲ್ಲಿದೆ. ಹೀಗೆ ಪ್ರಾಣಶಬ್ದವು ಉಭಯತ್ರಪ್ರಸಿದ್ಧವಾಗುತ್ತದೆ. ಆದ್ದರಿಂದ ಈ ಅಧಿಕರಣವನ್ನು ಮೂರನೇ ಪಾದದಲ್ಲಿ ಸೇರಿಸಬೇಕಲ್ಲವೇ?

ಈ ಗೊಂದಲವನ್ನು ಪರಿಹಾರ ಮಾಡುವುದಕ್ಕಾಗಿಯೇ ಶ್ರೀಮದಾಚಾರ್ಯರು ಹಿಂದಿನ ಪ್ರಾಣಾಧಿಕರಣದ ಪ್ರಮೇಯವನ್ನು ಪೂರ್ವಪಕ್ಷಫಲವನ್ನಾಗಿ ಆಕ್ಷೇಪಿಸಿದ್ದಾರೆ. ಹಾಗೆ ಆಕ್ಷೇಪಿಸಿದ್ದರಿಂದ ಪ್ರಾಣಶಬ್ದಕ್ಕೆ ವಿಷ್ಣುಪರತ್ವವು ಇದುವರೆಗೂ ನಿರ್ಣಯವಾಗಿಲ್ಲವೆಂದಂತಾಯಿತು. ಹಾಗಾಗಿ ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ ಪ್ರಾಣಶಬ್ದವು ಲೋಕಪ್ರಸಿದ್ಧಿಯಂತೆ ಅನ್ಯತ್ರಪ್ರಸಿದ್ಧವಾಗುತ್ತದೆ ಹೊರತು

ಉಭಯತ್ರಪ್ರಸಿದ್ಧವಾಗುವುದಿಲ್ಲ. ಮೂರನೇ ಪಾದದಲ್ಲಿ ಆಕಾಶಶಬ್ದವನ್ನು ಉಭಯತ್ರಪ್ರಸಿದ್ಧವೆಂದು ಪರಿಗಣಿಸಿದ್ದಾರೆ. ಏಕೆಂದರೆ ಆ ಅಧಿಕರಣದ ಟೀಕೆಯಲ್ಲಿ ಪ್ರಥಮಪಾದದಲ್ಲಿ ಉಕ್ತವಾದ ಆಕಾಶಶಬ್ದವನ್ನು ಆಕ್ಷೇಪಮಾಡಿಯೇ ಇಲ್ಲ. ಹೊರತಾಗಿ ದ್ಯುಭ್ವಾದ್ಯಧಿಕರಣದ ಪ್ರಮೇಯವನ್ನಷ್ಟೇ ಆಕ್ಷೇಪಿಸಿದ್ದಾರೆ. ಆದ್ದರಿಂದ ಆಕಾಶಶಬ್ದವು ಉಭಯತ್ರಪ್ರಸಿದ್ಧವಾಗಿದೆಯೆಂದು ನಿರ್ಣಯಿಸಿದ್ದಾರೆ. ಈ ವ್ಯತ್ಯಾಸವನ್ನು ಅವಶ್ಯ ಗಮನಿಸಬೇಕು.

* * * *

## ಅನ್ಯತ್ರಪ್ರಸಿದ್ಧ ಹಾಗೂ ಉಭಯತ್ರಪ್ರಸಿದ್ಧ ಶಬ್ದಗಳ ಲಕ್ಷಣ ನಿರೂಪಣೆ (ಪೂರ್ವಪಕ್ಷದ ಮುಕ್ತಾಯ)

तात्पर्यचन्द्रिका

**नन्वेवं सति ''ज्योतिर्दर्शनात्'' इत्यत्र टीकायां – ''तच्च ज्योतिर्यदि विष्णोरन्यत्तदा ''ज्योतिश्चरणाभिधानात्'' इति पूर्वोक्तमप्यन्यत्स्यात् इत्युक्तत्वात् अग्निसूक्तेऽपि ज्योतिश्शब्दस्य पूर्वपक्षे विष्णुपरत्वाभावादुभयत्रप्रसिद्धत्वाभावात्तस्य तृतीयपादसङ्गतिर्न स्यादिति चेत्, मैवम्, न हि ''ज्योतिर्दर्शनात्'' इत्यत्र ज्योतिर्वह्निरिति पूर्वपक्षः, येन वह्नौ प्रसिद्धेः स्वतः सिद्धत्वेनान्यत्रप्रसिद्धता, उभयत्रप्रसिद्धता तु क्वचिद्विष्णुपरत्वेन साध्या स्यात् । किन्तु जीव इति पूर्वपक्षः । नच जीवे स्वतः प्रसिद्धिरस्ति । ज्ञानात्मकत्वात्तु जीवे प्रवृत्तिः । तच्च जीववदीश्वरेऽप्यस्तीति उभयत्रप्रसिद्धता ''ज्योतिर्दर्शनात्'' इत्यत्र ।**

**''ज्योतिश्चरण'' इत्यत्र तु वह्निरिति पूर्वपक्षितत्वादन्यत्रप्रसिद्धता । ''कारणत्वेन'' इत्यत्र ''ज्योतिरुपक्रमात्'' इत्यत्र च पूर्वपक्षे पूर्वोक्ताया आकाश-ज्योतिश्शब्दयोर्विष्णुपरताया अनाक्षेपेऽपि, तत्र प्रागनुक्तसमन्वयस्यावान्तर-कारणत्वरूपस्य लिङ्गस्य औषध्यादिनाम्नो ज्योतिष्टोमवसन्तादिशब्दस्य च समन्वयोक्तेर्न तयोरुभयत्रप्रसिद्धपादान्तर्भावप्रसङ्गः ।**

**यद्वा – प्राणादिशब्दानां प्राक् समन्वयोक्तावपि लोकसिद्ध्या अन्यत्रप्रसिद्ध्या अन्यत्रप्रसिद्धता । 'आकाशोऽर्थान्तर' इत्यत्र त्वाकाशशब्दस्य न पूर्वं समन्वयोक्त्या उभयत्रप्रसिद्धता, किन्तु 'वै नाम' इति निपातद्योतितप्रसिद्धिव्यावर्त्यत्वेन**

**पूर्वपक्षिणाऽप्यप्रसिद्धस्य ब्रह्मरूपस्याकाशशब्दवाच्यस्याङ्गीकृतत्वेनेति ज्ञेयम् । तस्मात् पादसङ्गतिः पूर्वपक्षोदयश्च ॥**

ಆಕ್ಷೇಪ - ಹಿಂದಿನ ಅಧಿಕರಣದ ಪ್ರಮೇಯವನ್ನು ಆಕ್ಷೇಪಿಸಿದರೆ ಅನ್ಯತ್ರಪ್ರಸಿದ್ಧವಾಗುತ್ತದೆಂದು ಹೇಳಿದಿರಿ; ಹಾಗಾದರೆ 'ಜ್ಯೋತಿರ್ದರ್ಶನಾತ್' ಎಂಬ ಅಧಿಕರಣವನ್ನು ಮೂರನೇ ಪಾದದಲ್ಲಿ ಸೇರಿಸಿದ್ದೇ ತಪ್ಪಾಗುತ್ತದೆ. ಏಕೆಂದರೆ ಆ ಸೂತ್ರದ ಟೀಕೆಯಲ್ಲಿ ಒಂದು ವೇಳೆ ಜ್ಯೋತಿಯು ವಿಷ್ಣುವಿಗಿಂತ ಭಿನ್ನವಾದಲ್ಲಿ, 'ಜ್ಯೋತಿಶ್ಚರಣಾಭಿಧಾನಾತ್' ಎಂಬ ಪ್ರಥಮ ಪಾದದಲ್ಲಿ ಹೇಳಲ್ಪಟ್ಟ ಜ್ಯೋತಿಯೂ ಸಹ ವಿಷ್ಣುವಿಗಿಂತ ಭಿನ್ನವೇ ಆಗುತ್ತದೆಂದು ಹೇಳಿದ್ದಾರೆ. ಆದ್ದರಿಂದ ಪ್ರಥಮಪಾದದ ಜ್ಯೋತಿರಧಿಕರಣಕ್ಕೆ ವಿಷಯಭೂತವಾದ ಅಗ್ನಿಸೂಕ್ತದಲ್ಲಿರುವ ಜ್ಯೋತಿಶಬ್ದಕ್ಕೆ ವಿಷ್ಣುಪರತ್ವವನ್ನು ಬಿಟ್ಟಂತಾಯಿತು. ಆದ್ದರಿಂದ ಮೂರನೇ ಪಾದದಲ್ಲಿ ಸಮನ್ವಯ ಮಾಡುತ್ತಿರುವ ಜ್ಯೋತಿಶಬ್ದಕ್ಕೆ ಉಭಯತ್ರ-ಪ್ರಸಿದ್ಧತ್ವವನ್ನು ಸಮರ್ಥಿಸಲು ಬರುವುದಿಲ್ಲ. ತೃತೀಯಪಾದದಿಂದ ಸಂಗತಿಯೂ ಸಹ ದೊರೆಯು-ವುದಿಲ್ಲ.

ಸಮಾಧಾನ - ನೀವು ಹೇಳಿದ್ದನ್ನು ಒಪ್ಪಬಹುದಿತ್ತು. 'ಜ್ಯೋತಿರ್ದರ್ಶನಾತ್' ಎಂಬ ಶಬ್ದದಲ್ಲಿ 'ಜ್ಯೋತಿ'ಶಬ್ದಕ್ಕೆ 'ವಹ್ನಿ' ಎಂದು ಪೂರ್ವಪಕ್ಷ ಮಾಡಿದ್ದರೆ ಆವಾಗ ವಹ್ನಿಯೆಂಬ ಅರ್ಥದಲ್ಲಿ ಜ್ಯೋತಿಶಬ್ದಕ್ಕೆ ಲೋಕಪ್ರಸಿದ್ಧಿ ಇರುವುದರಿಂದ ಅನ್ಯತ್ರಪ್ರಸಿದ್ಧ ಎನಿಸುತ್ತಿತ್ತು. ಮತ್ತು ಕೆಲವು ವಾಕ್ಯಗಳಿಗೆ ವಿಷ್ಣುಪರತ್ವವನ್ನು ಒಪ್ಪುವ ಮೂಲಕ ಉಭಯತ್ರಪ್ರಸಿದ್ಧತ್ವವನ್ನು ಸಮರ್ಥಿಸುವ ಅವಶ್ಯಕತೆ ಇರುತ್ತಿತ್ತು. ಆದರೆ ಮೂರನೇ ಪಾದದ ಜ್ಯೋತಿರಧಿಕರಣದಲ್ಲಿ 'ವಹ್ನಿ' ಎಂಬುದಾಗಿ ಪೂರ್ವ-ಪಕ್ಷವನ್ನೇ ಮಾಡಿರುವುದಿಲ್ಲ. 'ಜೀವ' ಎಂದು ಪೂರ್ವಪಕ್ಷ ಮಾಡಲಾಗಿದೆ. ಅಂತಹ ಜೀವನಲ್ಲಿ ಜ್ಯೋತಿಶಬ್ದಕ್ಕೆ ಲೋಕಪ್ರಸಿದ್ಧಿ ಇರುವುದಿಲ್ಲ; ಹೊರತಾಗಿ ಜ್ಞಾನಾತ್ಮಕತ್ವ ಎಂಬ ಪ್ರವೃತ್ತಿ ನಿಮಿತ್ತವನ್ನು ಅಪೇಕ್ಷಿಸಿ ಜೀವನಲ್ಲಿ ಜ್ಯೋತಿಶಬ್ದವು ಪ್ರವೃತ್ತವಾಗಿದೆ. ಇಂತಹ ಜ್ಞಾನಾತ್ಮಕತ್ವ ಎಂಬ ಪ್ರವೃತ್ತಿನಿಮಿತ್ತವು ಜೀವನಲ್ಲಿ ಹೇಗೆ ಇದೆಯೋ, ಅದರಂತೆ ಈಶ್ವರನಲ್ಲಿಯೂ ಸಹ ಇರುತ್ತದೆ. ಆದ್ದರಿಂದ ಜ್ಯೋತಿಶಬ್ದವು ಜೀವನಲ್ಲಿ ಹಾಗೂ ವಿಷ್ಣುವಿನಲ್ಲಿ ಪ್ರಸಿದ್ಧವಾಗಿದೆ ಎಂದಂತಾಯಿತು. ಈ ವಿವಕ್ಷೆಯಿಂದ ವಿಷ್ಣುಶಬ್ದಕ್ಕೆ ಉಭಯತ್ರಪ್ರಸಿದ್ಧತ್ವವನ್ನು ಜ್ಯೋತಿರ್ದರ್ಶನಾತ್ ಎಂಬ ಸೂತ್ರದಲ್ಲಿ ಸಮರ್ಥಿಸಿದ್ದಾರೆ.

'ಜ್ಯೋತಿಶ್ಚರಣ' ಇತ್ಯಾದಿ ಪ್ರಥಮಪಾದದಲ್ಲಿರುವ ಸೂತ್ರದಲ್ಲಾದರೂ 'ವಹ್ನಿ' ಎಂಬರ್ಥದಲ್ಲಿ ಪೂರ್ವಪಕ್ಷವನ್ನು ಮಾಡಿದ್ದರಿಂದ ಅನ್ಯತ್ರಪ್ರಸಿದ್ಧತ್ವವು ಬರುತ್ತದೆ.

ಆಕ್ಷೇಪ - ಹಾಗಾದರೆ 'ಕಾರಣತ್ವೇನ' ಎಂಬ ಸೂತ್ರದ ಮತ್ತು 'ಜ್ಯೋತಿರುಪಕ್ರಮಾತ್' ಎಂಬ ಸೂತ್ರದ ಪೂರ್ವಪಕ್ಷದಲ್ಲಿ ಹಿಂದೆ ಹೇಳಿದ 'ಆಕಾಶ' ಹಾಗೂ 'ಜ್ಯೋತಿ'ಶಬ್ದಗಳಿಗೆ ವಿಷ್ಣುಪರತ್ವವನ್ನು ಆಕ್ಷೇಪಿಸುತ್ತಿಲ್ಲ. ಆದ್ದರಿಂದ ನಾಲ್ಕನೇ ಪಾದದ ಈ ಎರಡು ಅಧಿಕರಣಗಳು ಉಭಯತ್ರಪ್ರಸಿದ್ಧವೆನಿಸಿ ಮೂರನೇ ಪಾದದಲ್ಲಿ ಸೇರಬೇಕಾದೀತಲ್ಲವೆ?

ಉಭಯತ್ರಪ್ರಸಿದ್ಧವಾಗುವುದಿಲ್ಲ. ಮೂರನೇ ಪಾದದಲ್ಲಿ ಆಕಾಶಶಬ್ದವನ್ನು ಉಭಯತ್ರಪ್ರಸಿದ್ಧವೆಂದು ಪರಿಗಣಿಸಿದ್ದಾರೆ. ಏಕೆಂದರೆ ಆ ಅಧಿಕರಣದ ಟೀಕೆಯಲ್ಲಿ ಪ್ರಥಮಪಾದದಲ್ಲಿ ಉಕ್ತವಾದ ಆಕಾಶಶಬ್ದವನ್ನು ಆಕ್ಷೇಪಮಾಡಿಯೇ ಇಲ್ಲ. ಹೊರತಾಗಿ ದ್ಯುಭ್ವಾದ್ಯಧಿಕರಣದ ಪ್ರಮೇಯವನ್ನಷ್ಟೇ ಆಕ್ಷೇಪಿಸಿದ್ದಾರೆ. ಆದ್ದರಿಂದ ಆಕಾಶಶಬ್ದವು ಉಭಯತ್ರಪ್ರಸಿದ್ಧವಾಗಿದೆಯೆಂದು ನಿರ್ಣಯಿಸಿದ್ದಾರೆ. ಈ ವ್ಯತ್ಯಾಸವನ್ನು ಅವಶ್ಯ ಗಮನಿಸಬೇಕು.

* * * *

## ಅನ್ಯತ್ರಪ್ರಸಿದ್ಧ ಹಾಗೂ ಉಭಯತ್ರಪ್ರಸಿದ್ಧ ಶಬ್ದಗಳ ಲಕ್ಷಣ ನಿರೂಪಣೆ (ಪೂರ್ವಪಕ್ಷದ ಮುಕ್ತಾಯ)

तात्पर्यचन्द्रिका

नन्वेवं सति ''ज्योतिर्दर्शनात्'' इत्यत्र टीकायां – ''तच्च ज्योतिर्यदि विष्णोरन्यत्तदा ''ज्योतिश्चरणाभिधानात्'' इति पूर्वोक्तमप्यन्यत्स्यात् इत्युक्तत्वात् अग्निसूक्तेऽपि ज्योतिश्शब्दस्य पूर्वपक्षे विष्णुपरत्वाभावादुभयत्रप्रसिद्धत्वाभावात्तस्य तृतीयपादसङ्गतिर्न स्यादिति चेत्, मैवम्, न हि ''ज्योतिर्दर्शनात्'' इत्यत्र ज्योतिर्वह्निरिति पूर्वपक्षः, येन वह्नौ प्रसिद्धेः स्वतः सिद्धत्वेनान्यत्रप्रसिद्धता, उभयत्रप्रसिद्धता तु क्वचिद्विष्णुपरत्वेन साध्या स्यात् । किन्तु जीव इति पूर्वपक्षः । नच जीवे स्वतः प्रसिद्धिरस्ति । ज्ञानात्मकत्वात्तु जीवे प्रवृत्तिः । तच्च जीववदीश्वरेऽप्यस्तीति उभयत्रप्रसिद्धता ''ज्योतिर्दर्शनात्'' इत्यत्र ।

''ज्योतिश्चरण'' इत्यत्र तु वह्निरिति पूर्वपक्षितत्वादन्यत्रप्रसिद्धता । ''कारणत्वेन'' इत्यत्र ''ज्योतिरुपक्रमात्'' इत्यत्र च पूर्वपक्षे पूर्वोक्ताया आकाश-ज्योतिश्शब्दयोर्विष्णुपरताया अनाक्षेपेऽपि, तत्र प्रागनुक्तसमन्वयस्यावान्तर-कारणत्वरूपस्य लिङ्गस्य औषध्यादिनाम्नो ज्योतिष्टोमवसन्तादिशब्दस्य च समन्वयोक्तेर्न तयोरुभयत्रप्रसिद्धपादान्तर्भावप्रसङ्गः ।

यद्वा – प्राणादिशब्दानां प्राक् समन्वयोक्तावपि लोकसिद्ध्या अन्यत्रप्रसिद्ध्या अन्यत्रप्रसिद्धता । 'आकाशोऽर्थान्तर' इत्यत्र त्वाकाशशब्दस्य न पूर्वं समन्वयोक्त्या उभयत्रप्रसिद्धता, किन्तु 'वै नाम' इति निपातद्योतितप्रसिद्धिव्यावर्त्यत्वेन

**पूर्वपक्षिणाऽप्यप्रसिद्धस्य ब्रह्मरूपस्याकाशशब्दवाच्यस्याङ्गीकृतत्वेनेति ज्ञेयम् । तस्मात् पादसङ्गतिः पूर्वपक्षोदयश्च ॥**

ಆಕ್ಷೇಪ - ಹಿಂದಿನ ಅಧಿಕರಣದ ಪ್ರಮೇಯವನ್ನು ಆಕ್ಷೇಪಿಸಿದರೆ ಅನ್ಯತ್ರಪ್ರಸಿದ್ಧವಾಗುತ್ತದೆಂದು ಹೇಳಿದಿರಿ; ಹಾಗಾದರೆ 'ಜ್ಯೋತಿರ್ದರ್ಶನಾತ್' ಎಂಬ ಅಧಿಕರಣವನ್ನು ಮೂರನೇ ಪಾದದಲ್ಲಿ ಸೇರಿಸಿದ್ದೇ ತಪ್ಪಾಗುತ್ತದೆ. ಏಕೆಂದರೆ ಆ ಸೂತ್ರದ ಟೀಕೆಯಲ್ಲಿ ಒಂದು ವೇಳೆ ಜ್ಯೋತಿಯು ವಿಷ್ಣುವಿಗಿಂತ ಭಿನ್ನವಾದಲ್ಲಿ, 'ಜ್ಯೋತಿಶ್ಚರಣಾಭಿಧಾನಾತ್' ಎಂಬ ಪ್ರಥಮ ಪಾದದಲ್ಲಿ ಹೇಳಲ್ಪಟ್ಟ ಜ್ಯೋತಿಯೂ ಸಹ ವಿಷ್ಣುವಿಗಿಂತ ಭಿನ್ನವೇ ಆಗುತ್ತದೆಂದು ಹೇಳಿದ್ದಾರೆ. ಆದ್ದರಿಂದ ಪ್ರಥಮಪಾದದ ಜ್ಯೋತಿರಧಿಕರಣಕ್ಕೆ ವಿಷಯಭೂತವಾದ ಅಗ್ನಿಸೂಕ್ತದಲ್ಲಿರುವ ಜ್ಯೋತಿಶಬ್ದಕ್ಕೆ ವಿಷ್ಣುಪರತ್ವವನ್ನು ಬಿಟ್ಟಂತಾಯಿತು. ಆದ್ದರಿಂದ ಮೂರನೇ ಪಾದದಲ್ಲಿ ಸಮನ್ವಯ ಮಾಡುತ್ತಿರುವ ಜ್ಯೋತಿಶಬ್ದಕ್ಕೆ ಉಭಯತ್ರ-ಪ್ರಸಿದ್ಧತ್ವವನ್ನು ಸಮರ್ಥಿಸಲು ಬರುವುದಿಲ್ಲ. ತೃತೀಯಪಾದದಿಂದ ಸಂಗತಿಯೂ ಸಹ ದೊರೆಯು-ವುದಿಲ್ಲ.

ಸಮಾಧಾನ - ನೀವು ಹೇಳಿದ್ದನ್ನು ಒಪ್ಪಬಹುದಿತ್ತು. 'ಜ್ಯೋತಿರ್ದರ್ಶನಾತ್' ಎಂಬ ಶಬ್ದದಲ್ಲಿ 'ಜ್ಯೋತಿ'ಶಬ್ದಕ್ಕೆ 'ವಹ್ನಿ' ಎಂದು ಪೂರ್ವಪಕ್ಷ ಮಾಡಿದ್ದರೆ ಆವಾಗ ವಹ್ನಿಯೆಂಬ ಅರ್ಥದಲ್ಲಿ ಜ್ಯೋತಿಶಬ್ದಕ್ಕೆ ಲೋಕಪ್ರಸಿದ್ಧಿ ಇರುವುದರಿಂದ ಅನ್ಯತ್ರಪ್ರಸಿದ್ಧ ಎನಿಸುತ್ತಿತ್ತು. ಮತ್ತು ಕೆಲವು ವಾಕ್ಯಗಳಿಗೆ ವಿಷ್ಣುಪರತ್ವವನ್ನು ಒಪ್ಪುವ ಮೂಲಕ ಉಭಯತ್ರಪ್ರಸಿದ್ಧತ್ವವನ್ನು ಸಮರ್ಥಿಸುವ ಅವಶ್ಯಕತೆ ಇರುತ್ತಿತ್ತು. ಆದರೆ ಮೂರನೇ ಪಾದದ ಜ್ಯೋತಿರಧಿಕರಣದಲ್ಲಿ 'ವಹ್ನಿ' ಎಂಬುದಾಗಿ ಪೂರ್ವ-ಪಕ್ಷವನ್ನೇ ಮಾಡಿರುವುದಿಲ್ಲ. 'ಜೀವ' ಎಂದು ಪೂರ್ವಪಕ್ಷ ಮಾಡಲಾಗಿದೆ. ಅಂತಹ ಜೀವನಲ್ಲಿ ಜ್ಯೋತಿಶಬ್ದಕ್ಕೆ ಲೋಕಪ್ರಸಿದ್ಧಿ ಇರುವುದಿಲ್ಲ; ಹೊರತಾಗಿ ಜ್ಞಾನಾತ್ಮಕತ್ವ ಎಂಬ ಪ್ರವೃತ್ತಿ ನಿಮಿತ್ತವನ್ನು ಅಪೇಕ್ಷಿಸಿ ಜೀವನಲ್ಲಿ ಜ್ಯೋತಿಶಬ್ದವು ಪ್ರವೃತ್ತವಾಗಿದೆ. ಇಂತಹ ಜ್ಞಾನಾತ್ಮಕತ್ವ ಎಂಬ ಪ್ರವೃತ್ತಿನಿಮಿತ್ತವು ಜೀವನಲ್ಲಿ ಹೇಗೆ ಇದೆಯೋ, ಅದರಂತೆ ಈಶ್ವರನಲ್ಲಿಯೂ ಸಹ ಇರುತ್ತದೆ. ಆದ್ದರಿಂದ ಜ್ಯೋತಿಶಬ್ದವು ಜೀವನಲ್ಲಿ ಹಾಗೂ ವಿಷ್ಣುವಿನಲ್ಲಿ ಪ್ರಸಿದ್ಧವಾಗಿದೆ ಎಂದಂತಾಯಿತು. ಈ ವಿವಕ್ಷೆಯಿಂದ ವಿಷ್ಣುಶಬ್ದಕ್ಕೆ ಉಭಯತ್ರಪ್ರಸಿದ್ಧತ್ವವನ್ನು ಜ್ಯೋತಿರ್ದರ್ಶನಾತ್ ಎಂಬ ಸೂತ್ರದಲ್ಲಿ ಸಮರ್ಥಿಸಿದ್ದಾರೆ.

'ಜ್ಯೋತಿಶ್ಚರಣ' ಇತ್ಯಾದಿ ಪ್ರಥಮಪಾದದಲ್ಲಿರುವ ಸೂತ್ರದಲ್ಲಾದರೂ 'ವಹ್ನಿ' ಎಂಬರ್ಥದಲ್ಲಿ ಪೂರ್ವಪಕ್ಷವನ್ನು ಮಾಡಿದ್ದರಿಂದ ಅನ್ಯತ್ರಪ್ರಸಿದ್ಧತ್ವವು ಬರುತ್ತದೆ.

ಆಕ್ಷೇಪ - ಹಾಗಾದರೆ 'ಕಾರಣತ್ವೇನ' ಎಂಬ ಸೂತ್ರದ ಮತ್ತು 'ಜ್ಯೋತಿರುಪಕ್ರಮಾತ್' ಎಂಬ ಸೂತ್ರದ ಪೂರ್ವಪಕ್ಷದಲ್ಲಿ ಹಿಂದೆ ಹೇಳಿದ 'ಆಕಾಶ' ಹಾಗೂ 'ಜ್ಯೋತಿ'ಶಬ್ದಗಳಿಗೆ ವಿಷ್ಣುಪರತ್ವವನ್ನು ಆಕ್ಷೇಪಿಸುತ್ತಿಲ್ಲ. ಆದ್ದರಿಂದ ನಾಲ್ಕನೇ ಪಾದದ ಈ ಎರಡು ಅಧಿಕರಣಗಳು ಉಭಯತ್ರಪ್ರಸಿದ್ಧವೆನಿಸಿ ಮೂರನೇ ಪಾದದಲ್ಲಿ ಸೇರಬೇಕಾದೀತಲ್ಲವೆ?

ಸಮಾಧಾನ - ಹೌದು, ಒಂದು ವೇಳೆ 'ಆಕಾಶ' ಹಾಗೂ 'ಜ್ಯೋತಿ'ಶಬ್ದಗಳ ಸಮನ್ವಯವನ್ನಷ್ಟೇ ಹೇಳಿದ್ದರೆ ನಿಮ್ಮ ಆಕ್ಷೇಪವನ್ನು ಒಪ್ಪಬಹುದಿತ್ತು. ಆದರೆ ಈ ಶಬ್ದಗಳನ್ನಷ್ಟೇ ಸಮನ್ವಯ ಮಾಡದೇ ಹಿಂದಿನ ಯಾವುದೇ ಪಾದಗಳಲ್ಲಿಯೂ ಸಮರ್ಥನೆ ಮಾಡದ ಅವಾಂತರಕಾರಣತ್ವ ಎಂಬ ಲಿಂಗವನ್ನು ಮತ್ತು ಓಷಧಿ ಮೊದಲಾದ ನಾಮಾತ್ಮಕಶಬ್ದಗಳನ್ನು ಮತ್ತು ಜ್ಯೋತಿಷ್ಟೋಮ ವಸಂತ ಮೊದಲಾದ ಶಬ್ದಗಳ ಸಮನ್ವಯವನ್ನು ಮಾಡುತ್ತಿರುವುದರಿಂದ ಈ ಎರಡು ಅಧಿಕರಣಗಳು ಉಭಯತ್ರಪ್ರಸಿದ್ಧವಾದ ಪಾದದಲ್ಲಿ ಅಂತರ್ಭಾವ ಹೊಂದುವುದಿಲ್ಲ.

ಅಥವಾ ಪ್ರಾಣಾದಿಶಬ್ದಗಳನ್ನು ಮೊದಲು ಸಮನ್ವಯ ಮಾಡಿದ್ದರೂ ಲೋಕದ ದೃಷ್ಟಿಯಿಂದ ಅನ್ಯತ್ರಪ್ರಸಿದ್ಧವಾದ್ದರಿಂದ ಅನ್ಯತ್ರಪ್ರಸಿದ್ಧವೆನಿಸಿವೆ. ಹಾಗಾದರೆ 'ಆಕಾಶೋಽರ್ಥಾಂತರ ಇತ್ಯಾದಿ ಸೂತ್ರಗಳಲ್ಲಿ ಹೇಳುವ ಆಕಾಶಶಬ್ದಕ್ಕೆ ಉಭಯತ್ರಪ್ರಸಿದ್ಧತ್ವವನ್ನು ಹೇಗೆ ಸಮರ್ಥಿಸುತ್ತೀರಿ? ಎಂದರೆ ಆಕಾಶಶಬ್ದವು ಪ್ರಥಮಪಾದದಲ್ಲಿ ಸಮನ್ವಯವಾಗಿರುವುದರಿಂದ ಮೂರನೇ ಪಾದದಲ್ಲಿ ಉಭಯತ್ರಪ್ರಸಿದ್ಧವೆಂದು ಸಮರ್ಥಿಸಿರುವುದಿಲ್ಲ. ಹೊರತಾಗಿ 'ಆಕಾಶೋ ವೈ ನಾಮ' ಎಂಬಲ್ಲಿರುವ 'ವೈ' ಎಂಬ ನಿಪಾತವು ಪ್ರಸಿದ್ಧವಾದ ಭೂತಾಕಾಶವನ್ನು ಸೂಚಿಸುತ್ತಿದೆ. ಪ್ರಸಿದ್ಧವಾದ ಆಕಾಶವಿರ-ಬೇಕಾದರೆ ಅಪ್ರಸಿದ್ಧವಾದ ಬ್ರಹ್ಮನೆಂಬ ಆಕಾಶವನ್ನು ಪೂರ್ವಪಕ್ಷಿಯು ಒಪ್ಪಿದಂತಾಯಿತೆಂದು ತಿಳಿಯಬೇಕು. ಆದ್ದರಿಂದ ಅಂತಿಮಪ್ರಾಣಾಧಿಕರಣಕ್ಕೆ ಪಾದಸಂಗತಿಯು ಸ್ಪಷ್ಟವಾಗಿ ಇರುತ್ತದೆ. ಪೂರ್ವಪಕ್ಷದ ಉದಯವೂ ಸಹ ಆಗುತ್ತದೆ.

**ಕಠಿಣಪದಾರ್ಥ :**

ಜ್ಯೋತಿರ್ದರ್ಶನಾದಿತ್ಯತ್ರ = ಮೂರನೇ ಪಾದದಲ್ಲಿ ಬರುವ ಜ್ಯೋತಿರಧಿಕರಣದಲ್ಲಿ, ಪೂರ್ವೋಕ್ತಮಪಿ = ಪ್ರಥಮಪಾದದಲ್ಲಿ ಹೇಳಲ್ಪಟ್ಟ ಜ್ಯೋತಿಯೂ ಸಹ, ತಸ್ಯ = ಜ್ಯೋತಿರ್ದರ್ಶನಾತ್ ಎಂಬ ಸೂತ್ರಕ್ಕೆ, ಜ್ಞಾನಾತ್ಮಕತ್ವಾತ್ = ಜ್ಞಾನಸ್ವರೂಪನಾದ್ದರಿಂದ, ಪ್ರವೃತ್ತಿಃ = ಜ್ಞಾನಾತ್ಮಕತ್ವ ಎಂಬ ಪ್ರವೃತ್ತಿನಿಮಿತ್ತದಿಂದ ಜೀವನಲ್ಲಿ ಜ್ಯೋತಿ ಶಬ್ದವು ಪ್ರವೃತ್ತವಾಗಿದೆ, ಪೂರ್ವೋಕ್ತಾಯಾಃ = ಪ್ರಥಮಪಾದದಲ್ಲಿ ಹೇಳಲ್ಪಟ್ಟ, ತತ್ರ = ನಾಲ್ಕನೆಯ ಪಾದದಲ್ಲಿರುವ, ಪ್ರಾಗುಕ್ತ = ಹಿಂದಿನ ಮೂರು ಪಾದಗಳಲ್ಲಿ ಹೇಳಲ್ಪಡದ, ಜ್ಯೋತಿಷ್ಟೋಮವಸಂತಾದಿ ಶಬ್ದಸ್ಯ = ಯಾಗವಾಚಿಯಾದ ಹಾಗೂ ಕಾಲವಾಚಿಗಳ ಶಬ್ದಗಳ, ತಯೋಃ = ನಾಲ್ಕನೇ ಪಾದದಲ್ಲಿರುವ ಕಾರಣತ್ವೇನ ಎಂಬ ಸೂತ್ರಕ್ಕೆ, ಮತ್ತು ಜ್ಯೋತಿರುಪಕ್ರಮ ಎಂಬ ಸೂತ್ರಕ್ಕೆ, ನಿಪಾತ = ವೈ ಎಂಬ ನಿಪಾತದಿಂದ, ಪೂರ್ವಪಕ್ಷೋದಯಶ್ಚ = ಪೂರ್ವಪಕ್ಷದ ಉದಯ ಹಾಗೂ ಪೂರ್ವಪಕ್ಷದ ಫಲವು ಯುಕ್ತವಾಗುತ್ತದೆ.

**प्रकाशः** – यद्येवं प्राणशब्दस्योभयत्रप्रसिद्धत्वाभावस्तर्हि ज्योतिश्शब्दस्यापि उक्तन्यायेन तदभावापत्त्या तृतीये निवेशो न स्यादित्याशङ्कते – **नन्वेवमिति** ॥ **तृतीयेति** ॥ आद्य एव स्यादित्यर्थः । तत्र पूर्वोक्तयन्यत्रप्रसिद्धिभ्यां नोभयसाधारण्यं, किन्तु प्रवृत्तिहेतुसाधारण्याश्रयेण । अतः पूर्वोक्ताक्षेपेऽपि न क्षतिरिति समाधत्ते –

**मैवमिति** ॥ एवं तर्हि कथमाद्ये ज्योतिश्शब्दसमन्वय इत्यत आह **ज्योतिश्चरणेति** ॥ तत्र लोकत एव प्रसिद्धिसत्वादिति भावः ।

ननु यदि प्रागुक्तानाक्षेपेण ''आकाशोऽर्थान्तर'' इत्यत्रोभयत्रप्रसिद्धता, तर्हि चतुर्थपादे समन्वीयमानयोः **'कारणत्वेन चाकाशादिषु यथा व्यपदिष्टोक्तेः''** ''ज्योतिरुपक्रमात्'' इत्याकाशज्योतिश्शब्दयोरुभयत्रप्रसिद्धता स्यादित्यत आह – **कारणत्वेनेति** ॥ **लिङ्गस्येति** ॥ **'अवान्तरं कारणं च'** इत्यणुभाष्योक्तेरिति भावः। **ओषधीति** ॥ **''पृथिव्या ओषधयः''** इत्यपि श्रवणादिति भावः ॥ **ज्योतिष्टोमेति** ॥ यागकालादिवाचिन इत्यर्थः ।

ननु 'पूर्वोक्त्यन्यत्रप्रसिद्धिभ्यां उभयत्रप्रसिद्धत्वम्, तच्चात्र प्राणशब्दे नास्ति, पूर्वोक्तेराक्षेपात्'' इत्युक्तमयुक्तं, अयं प्राणोऽन्यश्चेत् प्राचीनोऽप्यन्य एव न विष्णुरित्याक्षेपायोगेन प्राचीनोऽन्यो वा विष्णुर्वेति शङ्कामात्रत्वात्, तस्य चोभयत्रप्रसिद्ध्यविरोधात् स्यादेव तथात्वं प्राणशब्दस्येत्याशङ्क्य पक्षान्तरमाह – **यद्वेति** ॥ ज्योतिश्शब्देऽपि प्रवृत्तिहेतुसाधारण्यस्य पूर्वपक्षिणोऽभिमतत्वादिति भावः ॥ **वै नामेति** ॥ नामरूपनिर्वहिता प्रसिद्धाकाश इत्युक्तौ न त्वन्योऽप्रसिद्धाकाश इति गम्यते । नच तदनङ्गीकारे प्रसिद्धाकाश एव तन्निर्वहितेत्युक्तिर्युज्यत इत्यर्थः । चशब्दात् 'प्रयोजनं च युज्यते' इति शेषः ।

ವಿವರಣೆ - ಇಲ್ಲಿಯತನಕ ಪೂರ್ವೋಕ್ತ ಆಕ್ಷೇಪವನ್ನು ಮಾಡಿದ್ದರಿಂದ ಪ್ರಾಣಶಬ್ದವು ಉಭಯತ್ರಪ್ರಸಿದ್ಧವಾಗಿಲ್ಲ. ಪೂರ್ವೋಕ್ತ ಆಕ್ಷೇಪವನ್ನು ಮಾಡದೇ ಇದ್ದರಿಂದ ಆಕಾಶಶಬ್ದವು ಉಭಯತ್ರಪ್ರಸಿದ್ಧವಾಯಿತು ಎಂದು ಹೇಳಿದಿರಿ. ಹೀಗೆ ವಿಭಾಗವನ್ನು ಮಾಡುವುದಾದರೆ, ತೃತೀಯಪಾದದಲ್ಲಿ ಸಮನ್ವಯ ಮಾಡುವ ಜ್ಯೋತಿಶಬ್ದವೂ ಸಹ ಇದೇ ನ್ಯಾಯದಿಂದ ಉಭಯತ್ರಪ್ರಸಿದ್ಧವಾಗಿರಲೇಬೇಕಾದೀತು. ಆದ್ದರಿಂದ 'ಜ್ಯೋತಿರ್ದರ್ಶನಾತ್' ಎಂಬ ಅಧಿಕರಣಕ್ಕೆ ಮೂರನೇ ಸೂತ್ರದಲ್ಲಿ ಅಂತರ್ಭಾವವೂ ಸಹ ಇಲ್ಲದೇ ಇರಬೇಕಾದೀತೆಂಬುದಾಗಿ 'ನನ್ವೇವಂ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಜ್ಯೋತಿರಧಿಕರಣವೂ ಸಹ ಪ್ರಥಮಪಾದದಲ್ಲಿಯೇ ಸೇರಬೇಕಾದೀತೆಂಬುದು ವಾಕ್ಯದ ಅಭಿಪ್ರಾಯ.

ಈ ಆಕ್ಷೇಪಕ್ಕೆ 'ಮೈವಂ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ತೃತೀಯಪಾದದಲ್ಲಿ ಸಮನ್ವಯ ಮಾಡಿದ್ದಕ್ಕೆ ಉಭಯತ್ರಪ್ರಸಿದ್ಧಿಯನ್ನು ಬೇರೆ ಕ್ರಮದಲ್ಲಿಯೇ ಸಮರ್ಥಿಸುತ್ತಿದ್ದಾರೆ. ಪೂರ್ವೋಕ್ತಿ ಹಾಗೂ ಅನ್ಯತ್ರಪ್ರಸಿದ್ಧಿ ಇವುಗಳನ್ನು ವಿವಕ್ಷಿಸಿ ಉಭಯತ್ರಪ್ರಸಿದ್ಧಿಯನ್ನು ಅವು ಹೇಳುವುದಿಲ್ಲ; ಹೊರತಾಗಿ ಪ್ರವೃತ್ತಿನಿಮಿತ್ತ ಸಾಧಾರಣವಾದ್ದರಿಂದ ಉಭಯತ್ರಪ್ರಸಿದ್ಧತ್ವವನ್ನು ಹೇಳುತ್ತೇವೆ. ಆದ್ದರಿಂದ ಪೂರ್ವೋಕ್ತ ಆಕ್ಷೇಪವನ್ನು ಮಾಡಲಿ ಬಿಡಲಿ ದೋಷ ಬರುವುದಿಲ್ಲ.

ನೀವು ಹೇಳುವ ಪ್ರಕಾರ ಜ್ಯೋತಿಶಬ್ದವೂ ಉಭಯತ್ರಪ್ರಸಿದ್ಧ ಎಂದಂತಾಯಿತು. ಹಾಗಾದರೆ ಪ್ರಥಮಪಾದದಲ್ಲಿ ಅದರ ಸಮನ್ವಯವನ್ನು ಹೇಗೆ ಮಾಡುತ್ತೀರಿ? ಎಂಬ ಪ್ರಶ್ನೆಗೆ 'ಜ್ಯೋತಿಶ್ಚರಣ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅಗ್ನಿಯಲ್ಲಿ ಜ್ಯೋತಿಶಬ್ದಕ್ಕೆ ಲೋಕಪ್ರಸಿದ್ಧಿ ಇರುವುದರಿಂದಷ್ಟೇ ಅನ್ಯತ್ರಪ್ರಸಿದ್ಧಿ ಎಂದು ಪ್ರಥಮಪಾದದಲ್ಲಿ ಸಮರ್ಥಿಸಲಾಗಿದೆ. ಒಂದು ವೇಳೆ ಜ್ಯೋತಿಯು ಜೀವನೆಂದು ಪೂರ್ವಪಕ್ಷ ಮಾಡಿದರೆ ಉಭಯತ್ರಪ್ರಸಿದ್ಧವಾಗುವುದರಿಂದ ಮೂರನೇ ಪಾದದಲ್ಲಿ ಸೇರುತ್ತದೆ.

'ಯತ್ರ ಪೂರ್ವೋಕ್ತ' ಎಂದರೆ ಎಲ್ಲಿ ಪೂರ್ವೋಕ್ತ ಆಕ್ಷೇಪವೂ ಇರುವುದಿಲ್ಲವೊ ಅಲ್ಲಿ ಉಭಯತ್ರಸಿದ್ಧತ್ವವು ಇರುವುದಿಲ್ಲವೆಂದು ನೀವು ವ್ಯಾಪ್ತಿ ಹೇಳಿದರೆ ಮತ್ತೊಂದು ದೋಷ ಬರುತ್ತದೆ - ಚತುರ್ಥಪಾದದಲ್ಲಿ ಸಮನ್ವಯ ಮಾಡುವ ''ಕಾರಣತ್ವೇನ ಚಾಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ'' ''ಜ್ಯೋತಿರುಪಕ್ರಮಾತ್'' ಎಂಬ ಸೂತ್ರಗಳಲ್ಲಿ ಹೇಳುವ ಆಕಾಶ ಹಾಗೂ ಜ್ಯೋತಿಶಬ್ದಗಳೂ ಸಹ ಉಭಯತ್ರಪ್ರಸಿದ್ಧಗಳಾಗಬೇಕಾದೀತು? ಎಂಬ ಪ್ರಶ್ನೆಗೆ 'ಕಾರಣತ್ವೇನ' ಎಂಬ ವಾಕ್ಯದಿಂದ ಉತ್ತರಿಸು-ತ್ತಿದ್ದಾರೆ- ಈ ಅಧಿಕರಣಗಳಲ್ಲಿ ಆಕಾಶ ಹಾಗೂ ಜ್ಯೋತಿಶಬ್ದಸಮನ್ವಯವನ್ನಷ್ಟೇ ಮಾಡುತ್ತಿಲ್ಲ; ಹೊರತಾಗಿ ''ಅವಾಂತರಂ ಕಾರಣಂಚ'' ಎಂಬುದಾಗಿ ಅಣುಭಾಷ್ಯದಲ್ಲಿ ಹೇಳಿದಂತೆ ಅವಾಂತರಕಾರಣತ್ವವನ್ನು ಸಮರ್ಥಿಸುತ್ತಿದ್ದಾರೆ. ಮತ್ತು ''ಪೃಥಿವ್ಯಾಃ ಓಷಧಯಃ'' ಎಂಬಲ್ಲಿ ಕೇಳಿಸುತ್ತಿರುವ 'ಓಷಧಿ' ಮೊದಲಾದ ನಾಮಾತ್ಮಕಶಬ್ದಗಳ ಸಮನ್ವಯವನ್ನೂ ಮಾಡುತ್ತಿದ್ದಾರೆ. ಮತ್ತು ಯಾಗವಾಚಕ ಶಬ್ದಗಳ ಸಮನ್ವಯವನ್ನು ಮತ್ತು ಕಾಲವಾಚಕ ಶಬ್ದಗಳ ಸಮನ್ವಯವನ್ನೂ ಮಾಡುತ್ತಿದ್ದಾರೆ.

ಆಕ್ಷೇಪ - ಪೂರ್ವೋಕ್ತಿ ಹಾಗೂ ಅನ್ಯತ್ರಪ್ರಸಿದ್ಧಿಯಿಂದ ಉಭಯತ್ರಪ್ರಸಿದ್ಧತ್ವವನ್ನು ಹೇಳಬೇಕು. ಇವುಗಳು ಪ್ರಾಣಶಬ್ದದಲ್ಲಿ ಇರುವುದಿಲ್ಲ. ಆದ್ದರಿಂದ ಪ್ರಾಣಶಬ್ದವು ಅನ್ಯತ್ರಪ್ರಸಿದ್ಧವಾಗುತ್ತದೆಂದು ಹೇಳಿದಿರಿ. ಇದು ತಪ್ಪು. ಏಕೆಂದರೆ ಈ ಪ್ರಾಣನು ಅನ್ಯನಾದರೆ ಹಿಂದಿನ ಪ್ರಾಣಾಧಿಕರಣದಲ್ಲಿ ಹೇಳಲ್ಪಟ್ಟ ಪ್ರಾಣನೂ ಸಹ ಅನ್ಯನೇ ಆಗುತ್ತಾನೆಂಬ ಅವಧಾರಣ ಪೂರ್ವಕವಾದ ಆಕ್ಷೇಪ ಬರುವುದಿಲ್ಲ. ಹೊರತಾಗಿ ಪೂರ್ವಾಧಿ-ಕರಣದ ಪ್ರಾಣನು ವಿಷ್ಣುವೋ ಅಥವಾ ಬೇರೆಯವನೋ? ಎಂಬ ಸಂಶಯವಷ್ಟೇ ಬರುತ್ತದೆಂದು ಹೇಳಿದಿರಿ. ಹಾಗಾದರೆ ಕೇವಲ ಶಂಕಾಮಾತ್ರವು ಉಭಯತ್ರಪ್ರಸಿದ್ಧಿಗೆ ವಿರೋಧವಲ್ಲ. ಏಕೆಂದರೆ ಅಂತಿಮ-ಪ್ರಾಣಾಧಿಕರಣದಲ್ಲಿ ಹೇಳಲ್ಪಟ್ಟ ಪ್ರಾಣನಿಗೆ ಲೋಕತಃ ಅನ್ಯತ್ರಪ್ರಸಿದ್ಧಿ ಇದೆ. ಮತ್ತು ಪೂರ್ವೋಕ್ತಿಯೂ ಇದೆ. ಆದ್ದರಿಂದ ಪ್ರಾಣಶಬ್ದವು ಉಭಯತ್ರಪ್ರಸಿದ್ಧವಾಗುತ್ತದೆ. ಹೀಗಿರುವಾಗ ಅನ್ಯತ್ರಪ್ರಸಿದ್ಧವೆಂದು ಹೇಗೆ ಸಮರ್ಥಿಸುತ್ತೀರಿ?

ಸಮಾಧಾನ - ಈ ಆಕ್ಷೇಪಕ್ಕೆ ಉತ್ತರಿಸುವುದಕ್ಕಾಗಿ 'ಯದ್ವಾ' ಇತ್ಯಾದಿಯಾಗಿ ಮತ್ತೊಂದು ಪಕ್ಷವನ್ನು ಆಶ್ರಯಿಸಿದ್ದಾರೆ. ಪೂರ್ವೋಕ್ತಿಯನ್ನು ಆಕ್ಷೇಪ ಮಾಡದಿದ್ದರೂ ಪೂರ್ವೋಕ್ತಿಯ ವಿಷಯದಲ್ಲಿ ಸಂಶಯ ಪಡಲಾಗಿದೆ. ಸಂಶಯವಿದ್ದರೂ ಸಹ ಅನ್ಯತ್ರಪ್ರಸಿದ್ಧವೆಂದು ಹೇಳಬಹುದು. ಈ ಸಮಾಧಾನವನ್ನು ಹೇಳಿಯೇ ಆಕ್ಷೇಪವನ್ನು ನಿರಾಕರಿಸಲು ಬರುತ್ತದೆ. ಆದರೂ ಸಹ ಗ್ರಂಥಕಾರರು 'ಯದ್ವಾ' ಇತ್ಯಾದಿಯಾಗಿ ಪಕ್ಷಾಂತರವನ್ನು ಆಶ್ರಯಿಸಿದ್ದಾರೆ. ಜ್ಯೋತಿಶಬ್ದದಲ್ಲಿಯೂ ಪ್ರವೃತ್ತಿನಿಮಿತ್ತ ಸಾಧಾರಣವಾಗಿರುವುದರಿಂದ ಪೂರ್ವಪಕ್ಷಿಗೆ ಅಭಿಮತವಾಗಿದೆ ಎಂದು ಅಭಿಪ್ರಾಯ. 'ವೈ ನಾಮ' ಎಂಬ ವಾಕ್ಯದಲ್ಲಿ ಪ್ರಸಿದ್ಧಾಕಾಶವೇ

ನಾಮರೂಪನಿರ್ವಹಿತವಾಗಿದೆಯೆಂದು ಹೇಳಿದಂತಾಯಿತು. ಇದರಿಂದ ಅಪ್ರಸಿದ್ಧವಾದ ಆಕಾಶವು ನಾಮರೂಪಗಳಿಂದ ನಿರ್ವಹಿತವಾಗಿಲ್ಲವೆಂದು ತಿಳಿಯುತ್ತದೆ. ಒಂದುವೇಳೆ ಅಪ್ರಸಿದ್ಧವಾದ ಆಕಾಶವನ್ನು ಒಪ್ಪದಿದ್ದರೆ ಪ್ರಸಿದ್ಧವಾದ ಆಕಾಶವು ನಾಮರೂಪಗಳಿಂದ ನಿರ್ವಹಿತವಾಗಿದೆಯೆಂಬುದಾಗಿ ಹೇಳಲು ಸಾಧ್ಯವೇ ಇಲ್ಲವೆಂದು ಈ ವಾಕ್ಯದ ಅಭಿಪ್ರಾಯ. 'ಪೂರ್ವಪಕ್ಷೋದಯಶ್ಚ ಎಂಬಲ್ಲಿರುವ 'ಚ' ಶಬ್ದದಿಂದ ಪೂರ್ವಪಕ್ಷದ ಪ್ರಯೋಜನವೂ ಸಹ ಸಿದ್ಧವಾಯಿತೆಂದು ತಿಳಿಯಬೇಕು. 'ಯುಜ್ಯತೇ' ಎಂಬ ಪದವನ್ನು ಶೇಷಪೂರಣಮಾಡಿಕೊಳ್ಳಬೇಕು.

ಆದ್ದರಿಂದ ಅಂತಿಮಪ್ರಾಣಾಧಿಕರಣಕ್ಕೆ ಪಾದಸಂಗತಿ ಪೂರ್ವಪಕ್ಷದಉದಯ ಮತ್ತು ಪೂರ್ವಪಕ್ಷದ ಫಲವು ಸಿದ್ಧವಾಯಿತು.

**गुरुराजीयम् – नन्वेवं कारणत्वेनेत्यादावधिकसमन्वयेपि साक्षात्सूत्रोपात्त-ज्योतिश्शब्दांश उभयत्रप्रसिद्धता स्यादित्यत आह – यद्वेति ॥ नन्वाकाशशब्द-समन्वयस्यापि विरोधिसर्वबाहुल्यकारणत्वीनिषेधिनामित्याद्युक्तरीत्या कारणत्वेनेत्य-त्राङ्गीकारात्कथमेतत् । किञ्च ज्योतिर्दर्शनादित्यत्रेवात्रापि पूर्वोक्तन्यायेन प्राण-शब्दप्रवृत्तिनिमित्तसाधारण्येनास्तूभयत्रप्रसिद्धता । प्रसङ्गादित्यतो वाह – यद्वेति ॥ पादसङ्गतिरिति ॥ उपलक्षणं चैतत् । प्रयोजनोक्तिश्चेत्यपि द्रष्टव्यम् ॥**

## ಸಾರ

"ಹಿಂದಿನ ಅಧಿಕರಣದ ಸಿದ್ಧಾಂತ ಪ್ರಮೇಯವನ್ನು ಆಕ್ಷೇಪ ಮಾಡಿದ್ದರೆ ಅನ್ಯತ್ರಪ್ರಸಿದ್ಧವಾಗುತ್ತದೆ. ಹಿಂದಿನ ಅಧಿಕರಣದ ಪ್ರಮೇಯವನ್ನು ಆಕ್ಷೇಪ ಮಾಡದಿದ್ದರೆ ಉಭಯತ್ರಪ್ರಸಿದ್ಧ ಎನಿಸುತ್ತದೆ" ಎಂಬ ವ್ಯಾಪ್ತಿಯನ್ನು ಹೇಳಿದಂತಾಯಿತು.

ವಸ್ತುತಃ ಮೂರನೇ ಪಾದದಲ್ಲಿರುವ 'ಜ್ಯೋತಿರ್ದರ್ಶನಾತ್' ಎಂಬ ಸೂತ್ರದಲ್ಲಿ ಪ್ರಥಮಪಾದದಲ್ಲಿರುವ ಜ್ಯೋತಿರಧಿಕರಣದಲ್ಲಿರುವ ಪ್ರಮೇಯವನ್ನು ಆಕ್ಷೇಪಿಸಿಲ್ಲ. ಆದ್ದರಿಂದ ಅನ್ಯತ್ರಪ್ರಸಿದ್ಧವಾಗಬೇಕೆಂಬ ಸಂಶಯವು ಬರುತ್ತದೆ. ಆದರೆ ಜ್ಯೋತಿಶಬ್ದದಿಂದ ಅಗ್ನಿ ಎಂಬ ಪೂರ್ವಪಕ್ಷವನ್ನು ಮೂರನೇ ಪಾದದಲ್ಲಿ ಮಾಡಿಯೇ ಇಲ್ಲ. ಪ್ರಥಮಪಾದದಲ್ಲಿ ಅಗ್ನಿ ಎಂದು ಪೂರ್ವಪಕ್ಷ ಮಾಡಲಾಗಿದೆ. ಆದ್ದರಿಂದ ಎರಡೂ ಅಧಿಕರಣಗಳಲ್ಲಿ ಜ್ಯೋತಿಶಬ್ದವು ಸಮಾನವಾಗಿದ್ದರೂ ಬೇರೆ ಬೇರೆ ಅರ್ಥಗಳಲ್ಲಿ ಜ್ಯೋತಿಶಬ್ದವು ಪ್ರಯುಕ್ತವಾಗಿದೆ. ಪ್ರಥಮ ಪಾದದಲ್ಲಿ ಅಗ್ನಿಯೆಂದು ಪೂರ್ವಪಕ್ಷ ಮಾಡಿದರೆ, ತೃತೀಯಪಾದದಲ್ಲಿ ಜೀವನೆಂದು ಪೂರ್ವಪಕ್ಷ ಮಾಡಲಾಗಿದೆ. ಆದ್ದರಿಂದ ಹಿಂದಿನ ಅಧಿ-ಕರಣದ ಪ್ರಮೇಯವನ್ನು ಹೇಗೆ ತಾನೇ ಆಕ್ಷೇಪಿಸಲು ಸಾಧ್ಯವಾಗುತ್ತದೆ.

ಹಾಗಾದರೆ ನಾಲ್ಕನೇ ಪಾದದಲ್ಲಿ ಆಕಾಶ ಹಾಗೂ ಜ್ಯೋತಿಶಬ್ದದ ಸಮನ್ವಯವನ್ನು ಮಾಡಿದ್ದಾರೆ. ಆದರೆ ಹಿಂದಿನ ಅಧಿಕರಣದ ಪ್ರಮೇಯವನ್ನು ಅಲ್ಲಿಯೂ ಸಹ ಆಕ್ಷೇಪಿಸಿಲ್ಲ. ಆದ್ದರಿಂದ ಆ ಶಬ್ದಗಳು ಉಭಯತ್ರಪ್ರಸಿದ್ಧವಾಗಬೇಕಲ್ಲವೆ? ಎಂದು ಪ್ರಶ್ನೆ ಬರುತ್ತದೆ. ಇದೂ ಸಹ ತಪ್ಪು. ಒಂದು ವೇಳೆ 'ಕಾರಣತ್ವೇನ' ಎಂಬ ಸೂತ್ರದಲ್ಲಿ 'ಜ್ಯೋತಿರುಪಕ್ರಮಾತ್' ಎಂಬ ಸೂತ್ರದಲ್ಲಿ ಕೇವಲ ಆಕಾಶ ಹಾಗೂ ಜ್ಯೋತಿಶಬ್ದಗಳ

ಸಮನ್ವಯವು ವಿವಕ್ಷಿತವಾಗಿದ್ದಲ್ಲಿ, ನಿಮ್ಮ ಆಕ್ಷೇಪವನ್ನು ಒಪ್ಪಬಹುದಿತ್ತು. ಆದರೆ ಯಾಗವಾಚಕವಾದ ಮತ್ತು ಕಾಲವಾಚಕವಾದ ಅನೇಕ ಶಬ್ದಗಳ ಸಮನ್ವಯಗಳನ್ನು ಆ ಅಧಿಕರಣಗಳಲ್ಲಿ ಮಾಡುತ್ತಿದ್ದಾರೆ. ಕೇವಲ ಲೋಕಪ್ರಸಿದ್ಧಿ ಹಾಗೂ ಪೂರ್ವೋಕ್ತಿಗಳು ಇದ್ದರೆ ಮಾತ್ರ ಉಭಯತ್ರಪ್ರಸಿದ್ಧವೆನ್ನಬೇಕು.

ಅಥವಾ ಲೋಕದಿಂದ ಅನ್ಯತ್ರಪ್ರಸಿದ್ಧವಾಗಿದ್ದರೆ ಮಾತ್ರ ಅನ್ಯತ್ರಪ್ರಸಿದ್ಧ ಎನಿಸುತ್ತದೆ. ಮೂರನೇ ಪಾದದಲ್ಲಿರುವ ಆಕಾಶಶಬ್ದವು ಏಕೆ ಉಭಯತ್ರಪ್ರಸಿದ್ಧವೆಂದರೆ, 'ವೈ ನಾಮ' ಎಂಬ ಶ್ರುತಿಯಲ್ಲಿರುವ ನಿಪಾತದಿಂದ ಪ್ರಸಿದ್ಧಾಕಾಶ ಎಂಬರ್ಥವು ತಿಳಿಯುತ್ತದೆ. ಇದರಿಂದ 'ಅಪ್ರಸಿದ್ಧಾಕಾಶ' ಎಂಬ ಮತ್ತೊಂದು ಪದಾರ್ಥವನ್ನು ಪೂರ್ವಪಕ್ಷಿಯು ಒಪ್ಪಿದ್ದಾನೆಂದು ಸಿದ್ಧವಾಗುತ್ತದೆ. ಈ ಕಾರಣದಿಂದಷ್ಟೇ 'ಆಕಾಶ' ಶಬ್ದವು ಉಭಯತ್ರಪ್ರಸಿದ್ಧವಾಗಿದೆ.

* * * *

## ಸಿದ್ಧಾಂತ ಸ್ಥಾಪನೆ

तात्पर्यचन्द्रिका

**सिद्धान्तस्तु – ''तं देवाः प्राणयन्त'' इति देवोपदेश्यत्वं, ''तं भूतिरिति देवा उपासाञ्चक्रिरे'' इति भूतित्वेन देवोपास्यत्वं, ''सर्वे वेदाः'' इति सर्ववेदप्रतिपाद्यत्वं, ''प्राणो ह्येष य एष तपति'' इति सूर्यमण्डलस्थत्वं, ''प्राणस्त्वं प्राणः सर्वाणि भूतानि'' इति सर्वान्तर्यामित्वं, ''सर्वाणि भूतान्यापिपीलिकाभ्यः प्राणेन बृहत्या विष्टब्धानि'' इति सर्वव्यापित्वमित्यादीनि प्राणे श्रूयन्ते ।**

**तानि च ''विष्णुमेवानयन् देवाः'' इत्यादिभाष्योक्तस्मृत्या ''सर्वे वेदा यत्पदमामनन्ति'' ''य एषोऽन्तरादित्ये हिरण्मयः पुरुषो दृश्यते तस्य यथा कप्यासं पुण्डरीकमेवमक्षिणी'' ''पुरुष एवेदं सर्वम्'' 'अन्तर्बहिश्च तत्सर्वं व्याप्य नारायणः स्थितः' इत्यादिश्रुतिभिः, ''वेदैश्च सर्वैरहमेव वेद्यः'' ''ध्येयस्सदा सवितृमण्डल-मध्यवर्ती''**

**तपाम्यहमहं वर्षं निगृह्णाम्युत्सृजामि च ।**
**विष्टभ्याहमिदं कृत्स्नमेकांशेन स्थितो जगत् ॥**
**इत्यादिस्स्मृतिभिश्च विष्णोरेव ।**

ಅನುವಾದ - ಪೂರ್ವಪಕ್ಷದಲ್ಲಿ ಆಕ್ಷೇಪಿಸಲ್ಪಟ್ಟ ಲಿಂಗಗಳಿಗಿಂತಲೂ ಸಿದ್ಧಾಂತದ ಲಿಂಗಗಳು ಮತ್ತಷ್ಟು ನಿರವಕಾಶಗಳಾಗಿವೆ. ಐತರೇಯದಲ್ಲಿ ಮೊದಲಿನಿಂದಲೂ ಪ್ರಸಕ್ತವಾದ ಸಿದ್ಧಾಂತಲಿಂಗಗಳು ಹೀಗಿವೆ -

''ತಂ ದೇವಾಃ ಪ್ರಾಣಯಂತ'' ದೇವತೆಗಳು ಪರಮಾತ್ಮನನ್ನು ಉಪದೇಶಿಸಿದರು. (ಪ್ರಾಣಯಂತ = ಶಿಷ್ಯರಲ್ಲಿಗೆ ಕರೆದುಕೊಂಡು ಹೋದರು) ಎಂಬಲ್ಲಿ 'ದೇವೋಪದೇಶ್ಯತ್ವ' ಎಂಬ ಲಿಂಗವು ಕೇಳಿಸುತ್ತಿದೆ.

''ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ'' ದೇವತೆಗಳು ಪರಮಾತ್ಮನನ್ನು ಐಶ್ವರ್ಯ-ಸ್ವರೂಪನೆಂದು ಉಪಾಸನೆ ಮಾಡಿದರು ಎಂದು ಪ್ರಾರಂಭದಲ್ಲಿ 'ಭೂತಿತ್ವೇನ ದೇವೋಪಾಸ್ಯತ್ವ' ಎಂಬ ಲಿಂಗವು ಕೇಳಿಸುತ್ತಿದೆ.

''ಸರ್ವೇ ವೇದಾಃ'' ಎಂಬಲ್ಲಿ ಬೇರೆ ಯಾರಲ್ಲಿಯೂ ಇಲ್ಲದ 'ಸರ್ವವೇದಪ್ರತಿಪಾದ್ಯತ್ವ'ಲಿಂಗವು ಶ್ರುತವಾಗಿದೆ.

''ಪ್ರಾಣೋ ಹ್ಯೇಷ ಯ ಏಷ ತಪತಿ'' ''ಸೂರ್ಯಮಂಡಲದಲ್ಲಿದ್ದು ಪ್ರಾಣನೇ ತಾಪವನ್ನು ಕೊಡುತ್ತಾನೆ'' ಎಂಬುದಾಗಿ ''ಸೂರ್ಯಮಂಡಲಸ್ಥತ್ವ'' ಎಂಬ ಲಿಂಗವು ಕೇಳಿಸುತ್ತಿದೆ.

''ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ'' ನೀನು ಪ್ರಾಣ, ನಾನು ಪ್ರಾಣ ಎಲ್ಲ ಭೂತಗಳೂ ಪ್ರಾಣನೆಂದು ಶ್ರುತಿ ಹೇಳುತ್ತಿದೆ. ಇದರಿಂದ 'ಸರ್ವಾಂತರ್ಯಾಮಿತ್ವ' ಎಂಬ ಲಿಂಗವನ್ನು ಹೇಳಿದಂತಾಯಿತು.

''ಸರ್ವಾಣಿ ಭೂತಾನ್ಯಾಪಿಪೀಲಿಕಾಭ್ಯಃ ಪ್ರಾಣೇನ ಬೃಹತ್ಯಾ ವಿಷ್ಟಬ್ಧಾನಿ'' ''ಇರುವೆಯಿಂದ ಪ್ರಾರಂಭಿಸಿ ಸಕಲ ಭೂತಗಳು ವ್ಯಾಪ್ತನಾದ ಪ್ರಾಣನಿಂದ ಸಂಪರ್ಕ ಹೊಂದಿವೆ'' ಎಂಬ ಶ್ರುತಿಯಲ್ಲಿ ಸರ್ವವ್ಯಾಪಿತ್ವವೆಂಬ ಲಿಂಗವು ಕೇಳಿಸುತ್ತಿವೆ. ಮೇಲೆ ಹೇಳಿದ ಈ ಎಲ್ಲ ಲಿಂಗಗಳನ್ನು ಐತರೇಯ ಶ್ರುತಿಯು ಪ್ರಾಣನಲ್ಲಿ ಹೇಳುತ್ತಿದೆ.

ಈ ಎಲ್ಲಾ ಲಿಂಗಗಳು ವಿಷ್ಣುವಿನದ್ದೇ ಆಗಿವೆಯೆನ್ನಲು ಅನೇಕ ಪ್ರಮಾಣಗಳಿವೆ. ''ವಿಷ್ಣುಮೇವಾನಯನ್ ದೇವಾಃ'' ದೇವತೆಗಳು ಶಿಷ್ಯರಿಗೆ ವಿಷ್ಣುವನ್ನು ಉಪದೇಶಿಸಿದರು ಎಂಬ ಐತರೇಯ ಭಾಷ್ಯದಲ್ಲಿ ಹೇಳಲ್ಪಟ್ಟ ಸ್ಮೃತಿಯಿಂದ 'ತಂ ದೇವಾಃ ಪ್ರಾಣಯಂತ' ಎಂಬಲ್ಲಿ ಹೇಳಲ್ಪಟ್ಟ ದೇವೋಪದೇಶ್ಯತ್ವವು ವಿಷ್ಣುವಿನಲ್ಲೇ ಹೊಂದುತ್ತದೆ.

ಕಾಠಕೋಪನಿಷತ್ತಿನಲ್ಲಿರುವ ''ಸರ್ವೇ ವೇದಾ ಯತ್ಪದಮಾಮನಂತಿ'' ಹೀಗೆ ಪ್ರಾರಂಭಿಸಿ 'ತದ್ವಿಷ್ಣೋಃ ಪರಮಂ ಪದಂ' ಎಂದು ಕಾಠಕದಲ್ಲಿ ಹೇಳಿದ್ದರಿಂದ ಸರ್ವವೇದಪ್ರತಿಪಾದ್ಯತ್ವವು ವಿಷ್ಣುವಿನ ಧರ್ಮವೆಂದು ತಿಳಿಯುತ್ತದೆ.

''ಯ ಏಷೋऽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ'' ಆದಿತ್ಯನಲ್ಲಿ ಹಿರಣ್ಮಯಪುರುಷನನ್ನು ಹೇಳಿ ಅವನಲ್ಲಿ ಪುಂಡರೀಕಾಕ್ಷತ್ವಲಿಂಗವನ್ನು ಹೇಳಿದ್ದರಿಂದ ವಿಷ್ಣುವಿನಲ್ಲಿಯೇ ಸೂರ್ಯಮಂಡಲಸ್ಥಲಿಂಗವು ಬರುತ್ತದೆ.

''ಪುರುಷ ಏವೇದಂ ಸರ್ವಮ್'' ಇತ್ಯಾದಿ ಶ್ರುತಿಗಳಿಂದ ಸರ್ವಾಂತರ್ಯಾಮಿತ್ವವು ವಿಷ್ಣುವಿನ ಲಿಂಗಗಳೆಂದು ತಿಳಿಯುತ್ತದೆ.

ಅಂತಿಮಪ್ರಾಣಾಧಿಕರಣ-(೧।೧।೧೨)

"ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಸ್ಸ್ಥಿತಃ"

"ವೇದೈಶ್ಚ ಸರ್ವೈರಹಮೇವ ವೇದ್ಯಃ" ಶ್ರುತಿಗಳಿಂದ ಸಕಲವೇದಪ್ರತಿಪಾದತ್ವವು "ಧ್ಯೇಯಸ್ಸದಾ ಸವಿತೃಮಂಡಲಮಧ್ಯವರ್ತೀ" ಎಂಬ ಶ್ರುತಿಯಿಂದ ಸೂರ್ಯಮಂಡಲಸ್ಥಿತತ್ವವು. "ತಪಾಮ್ಯಹಮಹಂ ವರ್ಷಮ್" ಎಂಬಲ್ಲಿ ಸರ್ವಾಂತರ್ಯಾಮಿತ್ವವು "ವಿಷ್ಟಭ್ಯಾಹಮಿದಂ ಕೃತ್ಸ್ನಂ" ಎಂಬಲ್ಲಿ ಸರ್ವವ್ಯಾಪಿತ್ವವು ವಿಷ್ಣುವಿನ ಲಿಂಗವೆಂದು ಹೇಳಿದ್ದಾರೆ.

**प्रकाशः** – एवं निरवकाशलिङ्गादिभिः पूर्वपक्षे कृते ततोऽपि प्रबलनिरवकाशविष्णुलिङ्गादिबाहुल्येन सिद्धान्तोत्थितिमाह – **सिद्धान्तस्त्विति** ॥ 'तं' प्राणं देवाः शिष्यादिषु सम्यङ् नीतवन्त इत्यर्थः । **"स एषोऽसुः स एष प्राणः" "एष भूतिश्चाभूतिश्च" "तं भूतिरिति देवा उपासाञ्चक्रिरे"** इत्यत्र देवोपास्यत्वं, **"सर्वे वेदास्सर्वे घोषाः एकैव व्याहृतिः प्राण एव"** इत्यत्र सर्ववेदोक्तत्वमित्यर्थः ॥ **इत्यादीनीति** ॥ 'लिङ्गानि' इति शेषः । उपलक्षणमेतत्, **"ब्रह्मेमं पुरुषं" "उदरं ब्रह्म"** इत्यादिब्रह्मशब्दाभ्यासोऽपि ध्येयः । ननु पूर्वपक्षेऽपि लिङ्गबाहुल्यसत्त्वात्कथं निर्णय इत्यतः, तानि सावकाशयिष्यन्निरवकाशत्वमेषां साधयति – **तानि चेति** ॥

**विष्णुमेवानयन् देवा विष्णुं भूतिमुपासते ।**
**स एव सर्ववेदोक्तस्तद्रथो देह उच्यत ॥**

इति स्कान्दवचनेनेत्यर्थः ।

**सर्वे वेदा यत्पदमामनन्ति तपांसि सर्वाणि च यद्वदन्ति ।**
**यदिच्छन्तो ब्रह्मचर्यं चरन्ति तत्ते पदं सङ्ग्रहेण ब्रवीमि ॥**

इत्युपक्रम्य **"तद्विष्णोः परमं पदम्"** इति काठकोक्तेः सर्ववेदोक्तत्वस्य विष्णोरवगम इत्यर्थः । सूर्यमण्डलमध्यस्थत्वं विष्ण्वेकनिष्ठमित्याह – **य एष इति** ॥ छान्दोग्ये आदित्यान्तर्हिरण्मयपुरुषमभिधाय तस्य पुण्डरीकाक्षत्वलिङ्गोक्त्या विष्णुत्वावगतिरित्यर्थः । विस्तृतं चैतत् **"अन्तः"** इत्यत्रास्माभिः । सर्वव्यापित्वस्य विष्णुगतत्वे वाक्यद्वयमाह – **पुरुष इति** ॥

**पुरुष एवेदं सर्वं यद्भूतं यच्च भव्यम् ।**

इति पुरुषसूक्ते सहस्रशीर्षत्वादिना प्रकृतस्य विष्णोरेव सर्वव्यापित्वमुच्यते, पुरुषसूक्तं च विष्णुपरमिति **"तस्मिन् काले महाराजा"** इत्यादिना प्रसिद्धमित्यर्थः॥

ಪರಿಪೂರ್ಣಚಂದ್ರಿಕಾ

''अन्तर्बहिः'' इति नारायणोपनिषदि । आदिपदेन – सर्वे वेदा युक्तयस्सुप्रमाणाः ब्राह्मं ज्ञानं परमं त्वेकमेव । ''य आदित्ये तिष्ठन्'' ''सर्वं खल्विदं ब्रह्म'' इत्यादि गृह्यते ।

**वेदैश्च सर्वैरहमेव वेद्यो वेदान्तकृद्वेदविदेव चाहम् ।**

इति गीतावाक्येन, ''ध्येयः सदा'' इति नारसिंहपुराणवाक्येन,

**तपाम्यहमहं वर्षं निगृह्णाम्युत्सृजामि च इति**

**विष्टभ्याहमिदं कृत्स्नमेकांशेन स्थितो जगत्**

इत्यादिगीतावचनेन च विष्णोरेव तानि लिङ्गानीत्यर्थः । तथाच प्राणो विष्णुरेव, तल्लिङ्गानामत्रानुगमादिति सूत्रार्थ उक्तो भवति ।

ವಿವರಣೆ - ಇಲ್ಲಿಯ ತನಕ ನಿರವಕಾಶಲಿಂಗದಿಂದ ಪೂರ್ವಪಕ್ಷ ಮಾಡಿದ್ದಾಯಿತು. ಈಗ ಅದಕ್ಕಿಂತಲೂ ಪ್ರಬಲವಾದ, ನಿರವಕಾಶವಾದ ಮತ್ತು ಬಹಳವಾದ ವಿಷ್ಣುವಿನ ಲಿಂಗಗಳಿಂದ ಸಿದ್ಧಾಂತ ಸ್ಥಾಪನೆಯನ್ನು ಮಾಡುತ್ತಿದ್ದಾರೆ.

ತಂ = ಪ್ರಾಣನನ್ನು, ದೇವಾಃ = ದೇವತೆಗಳು, ಪ್ರಾಣಯಂತ = ಶಿಷ್ಯಾದಿಗಳಲ್ಲಿ ಚೆನ್ನಾಗಿ ಕರೆದುಕೊಂಡು ಹೋದರು ಎಂದು 'ತಂ ದೇವಾಃ' ಎಂಬ ಶ್ರುತಿಗೆ ಅರ್ಥ. ''ಸ ಏಷೋಽಸುಃ ಸ ಏಷ ಪ್ರಾಣಃ'' ''ಏಷ ಭೂತಿಶ್ಚಾಭೂತಿಶ್ಚ'' ''ತಂ ಭೂತಿರಿತಿ ದೇವಾ ಉಪಸಾಂಚಕ್ರಿರೇ'' ಎಂಬಲ್ಲಿ ದೇವೋಪಾಸ್ಯತ್ವವು ಪ್ರಾಣನಲ್ಲಿ ಕೇಳಿಸುತ್ತಿದೆ. ''ಸರ್ವೇ ವೇದಾಸ್ಸರ್ವೇ ಘೋಷಾಃ ಏಕೈವ ವ್ಯಾಹೃತಿಃ ಪ್ರಾಣ ಏವ'' ಎಂಬಲ್ಲಿ ಸರ್ವವೇದ-ಪ್ರತಿಪಾದ್ಯತ್ವವು ಪ್ರಾಣನಲ್ಲಿ ಕೇಳಿಸುತ್ತಿದೆ. 'ಇತ್ಯಾದೀನಿ' ಎಂಬ ಪದದ ಅನಂತರ ಲಿಂಗಾನಿ ಎಂಬ ಪದವನ್ನು ಶೇಷಪೂರಣ ಮಾಡಿಕೊಳ್ಳಬೇಕು. ಉಪಲಕ್ಷಣಯಾ ''ಬ್ರಹ್ಮೇಮಂ ಪುರುಷಂ'' ''ಉದರಂ ಬ್ರಹ್ಮ'' ಎಂಬಲ್ಲಿ ಅನೇಕ ಕಡೆ ಕೇಳಿಸುತ್ತಿರುವ ಬ್ರಹ್ಮಶಬ್ದಾಭ್ಯಾಸವನ್ನು ವಿವಕ್ಷಿಸಬೇಕು.

ಪೂರ್ವಪಕ್ಷದಲ್ಲಿಯೂ ಸಹ ಅನೇಕ ಲಿಂಗಗಳು ಕೇಳಿಸುತ್ತಿರುವುದರಿಂದ ಹೇಗೆ ನಿರ್ಣಯಿಸುತ್ತೀರಿ? ಎಂಬ ಪ್ರಶ್ನೆಗೆ ಪೂರ್ವಪಕ್ಷದ ಲಿಂಗಗಳನ್ನು ಸಾವಕಾಶ ಮಾಡಿ ಸಿದ್ಧಾಂತಲಿಂಗಗಳಿಗೆ ನಿರವಕಾಶತ್ವವನ್ನು ''ತಾನಿ ಚ'' ಇತ್ಯಾದಿ ವಾಕ್ಯದಿಂದ ಸಾಧಿಸುತ್ತಿದ್ದಾರೆ.

ವಿಷ್ಣುಮೇವಾನಯನ್ ದೇವಾ ವಿಷ್ಣುಂ ಭೂತಿಮುಪಾಸತೇ ॥
ಸ ಏವ ಸರ್ವವೇದೋಕ್ತಸ್ತದ್ರಥೋ ದೇಹ ಉಚ್ಯತೇ ॥

ವಿಷ್ಣುವನ್ನು ಶಿಷ್ಯರಿಗೆ ಉಪದೇಶಿಸಿದರು. ವಿಷ್ಣುವನ್ನು ಐಶ್ವರ್ಯಸ್ವರೂಪನೆಂದು ಉಪಾಸನೆ ಮಾಡಿದರು. ಅಂತಹ ವಿಷ್ಣುವೇ ಸರ್ವವೇದಪ್ರತಿಪಾದ್ಯನು ಅವನ ರಥವೇ ಈ ದೇಹವೆಂದು ಕರೆಯಲ್ಪಟ್ಟಿದೆ ಎಂದು ಸ್ಕಾಂದಪುರಾಣದಲ್ಲಿ ಹೇಳಲ್ಪಟ್ಟಿದೆ.

ಅಂತಿಮಪ್ರಾಣಾಧಿಕರಣ-(೧।೧।೧೨)

ಸರ್ವೇ ವೇದಾ ಯತ್ಪದಮಾಮನಂತಿ ತಪಾಂಸಿ ಸರ್ವಾಣಿ ಚ ಯದ್ವದಂತಿ ।
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇ ಪದಂ ಸಂಗ್ರಹೇಣ ಬ್ರವೀಮಿ ॥

ಎಲ್ಲ ವೇದಗಳು ಎಲ್ಲ ಪದಗಳೂ ಸಕಲ ತಪಸ್ಸುಗಳು ಯಾರನ್ನೂ ಕುರಿತು ಹೊರಟಿವೆಯೋ ಯಾರನ್ನು ಅಪೇಕ್ಷಿಸಿ ತಪಸ್ವಿಗಳು ಬ್ರಹ್ಮಚರ್ಯವನ್ನು ಹೊಂದುತ್ತಾರೋ ಅಂತಹವನ ಬಗ್ಗೆ ಸಂಗ್ರಹವಾಗಿ ಹೇಳುತ್ತೇನೆ ಎಂದು ಪ್ರಾರಂಭಿಸಿ 'ತದ್ವಿಷ್ಣೋಃ ಪರಮಂ ಪದಂ' ಎಂದು ಕಾಠಕದಲ್ಲಿ ಹೇಳಿದ್ದರಿಂದ ಸರ್ವವೇದ-ಪ್ರತಿಪಾದ್ಯತ್ವವು ವಿಷ್ಣುವಿನಲ್ಲಿ ತಿಳಿಯುತ್ತದೆ.

'ಸೂರ್ಯಮಂಡಲಸ್ಥತ್ವವೂ' ಸಹ ವಿಷ್ಣುವಿನಲ್ಲಿಯೇ ಇದೆಯೆಂದು 'ಯ ಏಷ' ಎಂಬ ವಾಕ್ಯದಿಂದ ಹೇಳಿದ್ದಾರೆ. ಛಾಂದೋಗ್ಯದಲ್ಲಿ ಆದಿತ್ಯನ ಅಂತರ್ಗತನಾಗಿ ಹಿರಣ್ಮಯಪುರುಷನನ್ನು ಹೇಳಿ ಅವನಿಗೆ ಪುಂಡರೀಕಾಕ್ಷತ್ವ ಲಿಂಗವನ್ನು ಹೇಳಿದ್ದರಿಂದ ವಿಷ್ಣುವೇ ಸೂರ್ಯಾಂತರ್ಗತನೆಂದು ತಿಳಿಯುತ್ತದೆ. ಈ ಹಿಂದೆ ಅಂತರಧಿಕರಣದಲ್ಲಿ ಇದರ ಬಗ್ಗೆ ವಿವರಿಸಿದ್ದೇವೆ.

ಸರ್ವವ್ಯಾಪಿತ್ವವು ವಿಷ್ಣುಗತವೆನ್ನಲು ಎರಡು ವಾಕ್ಯಗಳನ್ನು ಉದಾಹರಿಸುತ್ತಿದ್ದಾರೆ. ''ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಂ'' ಎಂಬುದಾಗಿ. ಪುರುಷಸೂಕ್ತದಲ್ಲಿ ಸಹಸ್ರಶೀರ್ಷತ್ವಾದಿನಾಮಗಳಿಂದ ಪ್ರಕೃತನಾದ ವಿಷ್ಣುವಿಗೆ ಸರ್ವವ್ಯಾಪಿತ್ವವು ಶ್ರುತವಾಗಿದೆ. ''ತಸ್ಮಿನ್ ಕಾಲೇ ಮಹಾರಾಜಾ'' ಇತ್ಯಾದಿ ಪ್ರಮಾಣದಿಂದ ಪುರುಷಸೂಕ್ತವು ವಿಷ್ಣುಪರವೆಂದು ಸಿದ್ಧವಾಗಿದೆ. ''ಅಂತರ್ಬಹಿಃ'' ಎಂಬುದು ನಾರಾ-ಯಣೋಪನಿಷತ್ತಿನಲ್ಲಿದೆ. ಆದಿಪದದಿಂದ ತತ್ವನಿರ್ಣಯದಲ್ಲಿ ವಿವರಿಸಿದ

''ಸರ್ವೇ ವೇದಾ ಯುಕ್ತಯಸ್ಸುಪ್ರಮಾಣಾಃ ಬ್ರಹ್ಮಂ ಜ್ಞಾನಂ ಪರಮಂ ತ್ವೇಕಮೇವ ।
''ಯ ಆದಿತ್ಯೇ ತಿಷ್ಠನ್'' ''ಸರ್ವಂ ಖಲ್ವಿದಂ ಬ್ರಹ್ಮ'' ಇತ್ಯಾದಿ ಪ್ರಮಾಣಗಳನ್ನು ಸ್ಮರಿಸಿಕೊಳ್ಳಬೇಕು.

''ವೇದೈಶ್ಚ ಸರ್ವೈರಹಮೇವ ವೇದ್ಯೋ ವೇದಾಂತಕೃದ್ವೇದವಿದೇವ ಚಾಹಂ'' ಎಂಬ ಗೀತಾವಾಕ್ಯದಿಂದ ''ಧ್ಯೇಯಃ ಸದಾ'' ಎಂಬ ನಾರಸಿಂಹಪುರಾಣವಾಕ್ಯದಿಂದ ''ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯು-ತ್ಸೃಜಾಮಿ ಚ'' ಇತ್ಯಾದಿಯಾಗಿ ''ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್'' ಇತ್ಯಾದಿ ಗೀತಾ ಮಾತಿನಿಂದ ಇವೆಲ್ಲವು ವಿಷ್ಣುವಿನ ಲಿಂಗಗಳೇ ಎಂದು ನಿರ್ಣಯವಾಗುತ್ತದೆ.

ಆದ್ದರಿಂದ ಪ್ರಾಣಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನು. ಪ್ರಾಣನಲ್ಲಿ ಶ್ರುತವಾದ ಲಿಂಗಗಳೆಲ್ಲವೂ ವಿಷ್ಣುವಿನಲ್ಲಿ ಅನುಗಮವಾಗುವುದರಿಂದ ಎಂದು ಸೂತ್ರಾರ್ಥವನ್ನು ಹೇಳಿದಂತಾಯಿತು.

**गुरुराजीयम् –**

एवमहंश्रुत्यादेः सावकाशत्वमुपपाद्य परोक्तलिङ्गानामपि सावकाशत्वमुप-पादयति – **चक्षुरादीति** ॥ बाह्यरूपेण वाय्वनन्तर्यामिरूपेण । प्राणसंवादादि-लिङ्गानामन्तर्यामिणि विष्णौ मुख्यत्वे दुःखादेरन्तर्यामिणि मुख्यत्वं स्यादित्येत-द्बाधकं परिहरति – **दुःखित्वादिकं त्विति** ॥

## ಸಾರ

ಸಿದ್ಧಾಂತ ಸ್ಥಾಪನೆ ಹೀಗಿದೆ - ಪೂರ್ವಪಕ್ಷದಲ್ಲಿ ಎಷ್ಟು ನಿರವಕಾಶಯುಕ್ತಿಗಳನ್ನು ಹೇಳಿದರೋ ಅದಕ್ಕಿಂತಲೂ ನಿರವಕಾಶವಾದ ಅನೇಕ ಲಿಂಗಗಳು ವಿಷ್ಣುವಿನಲ್ಲೇ ಶ್ರುತವಾಗಿವೆ. ಐತರೇಯದ ಪ್ರಾರಂಭ-ದಿಂದಲೂ ವಿಷ್ಣುವಿನ ಅನೇಕ ಅಸಾಧಾರಣ ಲಿಂಗಗಳೇ ಕೇಳಿಸುತ್ತಿವೆ - ದೇವೋಪಾಸ್ಯತ್ವ, ಸೂರ್ಯ-ಮಂಡಲಸ್ಥತ್ವ, ಸರ್ವಾಂತರ್ಯಾಮಿತ್ವ, ಸರ್ವವ್ಯಾಪಿತ್ವ. ಈ ಲಿಂಗಗಳೆಲ್ಲವೂ ಶ್ರುತಿಸ್ಮೃತಿಗಳ ಆಧಾರದಿಂದ ವಿಷ್ಣುವಿನಲ್ಲಿಯೇ ಇದೆಯೆಂದು ನಿರ್ಣಯವಾಗಿದ.

* * * *

## ದೇವೇಂದ್ರನ ಲಿಂಗಗಳೆಲ್ಲವೂ ಸಾವಕಾಶ

ताात्पर्यचन्द्रिका

**परकीयश्रुत्यादिकं तु सावकाशम् । तथाहि – इन्द्रस्य प्रसिद्धेन्द्रत्वेऽपि तत्प्रयुक्तोऽहंशब्दस्तावत् "अहं मनुः" इति वामदेवप्रयुक्ताहंशब्दवत् श्रुतितुल्यया निरूढया लक्षणया,**

**सर्वान्तर्यामिको विष्णुः सर्वनाम्नाऽभिधीयते ।**
**एषोऽहं त्वमसौ चेति नतु सर्वस्वरूपतः ॥**

**इत्यादिस्मृतिभिर्मुख्यवृत्त्या वा अन्तर्यामिपरः । नच तत्रापि विवादः, विशिष्टस्य वामदेवस्य मन्वादित्वाभावात् । अहंमन्वादिशब्दे चैतन्यमात्रलक्षणा चेत्, प्राण इन्द्र इति पूर्वपक्षे इन्द्रशब्देन विशिष्टोक्तौ विशिष्टेन्द्राभिन्नस्य प्राणस्य "प्राणस्त्वं प्राणः सर्वाणि" इति सार्वात्म्योक्तिरयुक्ता स्यात् । इन्द्रशब्देन शुद्धोक्तौ तु, प्राणस्य शुद्धब्रह्मत्वेन प्राणो न ब्रह्मेति पूर्वपक्षायोगः "प्राणो ह्येष य एष तपति" इति पूर्ववाक्यायोगश्च । नहि चिन्मात्रं तापकम् ।**

ಅನುವಾದ - ಪರಕೀಯರು ಉದಾಹರಿಸಿದ ಶ್ರುತಿಗಳೆಲ್ಲವೂ ಸಾವಕಾಶವೇ ಆಗಿವೆ. ಅದು ಹೀಗೆ ಇಂದ್ರಪ್ರತರ್ದನರ ಸಂವಾದಪ್ರಕರಣದಲ್ಲಿ ಪ್ರಸಕ್ತವಾಗಿರುವ ಇಂದ್ರಶಬ್ದ, ರುದ್ರಹಂತೃತ್ವ ಮೊದಲಾದ ಲಿಂಗಗಳು ದೇವೇಂದ್ರನಲ್ಲಿ ಪ್ರಸಿದ್ಧವಾಗಿವೆಯೆಂದು ಒಪ್ಪೋಣ; ಆದರೆ ದೇವೇಂದ್ರನಲ್ಲಿ ಹೇಳಲ್ಪಟ್ಟ 'ಅಹಂ' ಶಬ್ದವು ಮಾತ್ರ ಅಂತರ್ಯಾಮಿಪರವೇ ಆಗಿದೆ. ಯಾವರೀತಿಯಾಗಿ 'ಅಹಂಮನುರವಭವಂ' ಎಂಬುದಾಗಿ ವಾಮದೇವರಿಂದ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದವು ಅಂತರ್ಯಾಮಿಪರವಾಗಿದೆಯೋ

ಆದರಂತೆ ಎಂದು ತಿಳಿಯಬೇಕು. 'ಅಹಂ' ಶಬ್ದಕ್ಕೆ 'ಅಂತರ್ಯಾಮಿ' ಎಂಬರ್ಥವೇ ಮುಖ್ಯವಾದದ್ದು. ಏಕೆಂದರೆ, ಶ್ರುತಿತುಲ್ಯವಾದ ನಿರೂಢಲಕ್ಷಣಾದಿಂದ ಮತ್ತು

ಸರ್ವಾಂತರ್ಯಾಮಿಕೋ ವಿಷ್ಣುಃ ಸರ್ವನಾಮ್ನಾऽಭಿಧೀಯತೇ ।
ಏಷೋऽಹಂ ತ್ವಮಸೌ ಚೇತಿ ನತು ಸರ್ವಸ್ವರೂಪತಃ ॥

ವಿಷ್ಣುವು ಸರ್ವಂತರ್ಯಾಮಿಯಾದ್ದರಿಂದ ಏಷಃ, ಅಹಂ ತ್ವಂ ಅಸೌ ಮೊದಲಾದ ಸರ್ವನಾಮ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ ಹೊರತು ಸಕಲಪದಾರ್ಥಗಳಿಂದ ಅಭಿನ್ನನಾದ್ದರಿಂದ ಅಲ್ಲ. ಇವೇ ಮೊದಲಾದ ಶ್ರುತಿಗಳಿಂದಲೂ 'ಅಹಂ' ಶಬ್ದಕ್ಕೆ 'ಅಂತರ್ಯಾಮಿ' ಎಂಬರ್ಥವೇ ಮುಖ್ಯವಾಗಿದೆ.

'ಅಹಂ ಮನುಃ' ಎಂಬ ದೃಷ್ಟಾಂತ ವಾಕ್ಯದಲ್ಲಿಯೇ ವಿವಾದವಿದೆ ಎನ್ನಬಾರದು. ವಿಶಿಷ್ಟನಾದ ವಾಮದೇವನಿಗೆ ಮನ್ವಾದಿತ್ವವನ್ನು ಹೇಳಲು ಸಾಧ್ಯವಿಲ್ಲ. ಅಂದರೆ ವಿಶಿಷ್ಟನಾದ ವಾಮದೇವನಿಗೂ ವಿಶಿಷ್ಟನಾದ ಮನುವಿಗೂ ಅಭೇದವನ್ನು ಹೇಳಲಾಗದು. ಇನ್ನು 'ಅಹಂ' ಎಂಬ ಪದಕ್ಕೂ 'ಮನು' ಎಂಬ ಪದಕ್ಕೂ ಶಬ್ಧಚೈತನ್ಯದಲ್ಲಿ ಲಕ್ಷಣಾ ಮಾಡಿ ಅಭೇದವನ್ನು ಹೇಳಬೇಕು. ಹಾಗೇ ಹೇಳಿದರೆ ''ಇಂದ್ರನೇ ಪ್ರಾಣನು'' ಎಂಬ ಪೂರ್ವಪಕ್ಷದಲ್ಲಿ ಇಂದ್ರ ಶಬ್ದದಿಂದ ವಿಶಿಷ್ಟಚೈತನ್ಯನು ಪ್ರತಿಪಾದ್ಯ-ನಾಗುತ್ತಾನೆ. ಇಂತಹ ವಿಶಿಷ್ಟನಾದ ಇಂದ್ರನಿಂದ ಅಭಿನ್ನನಾದ ಪ್ರಾಣನಿಗೆ ''ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ'' ಇತ್ಯಾದಿಯಾಗಿ ಸಕಲವಸ್ತುಸ್ವರೂಪತ್ವವನ್ನು ಹೇಳಲು ಸಾಧ್ಯವಿಲ್ಲ. ಇನ್ನು ಇಂದ್ರಶಬ್ದದಿಂದ ಶುದ್ಧಾತ್ಮನನ್ನು ಹೇಳಬೇಕು. ಆವಾಗ ಪ್ರಾಣನೂ ಸಹ ಶುದ್ಧಬ್ರಹ್ಮನೆಂದು ಹೇಳಿದಂತಾಗುತ್ತದೆ. ಹೀಗಿರುವಾಗ ಪ್ರಾಣನು ಬ್ರಹ್ಮನಲ್ಲ ಎಂಬ ಪೂರ್ವಪಕ್ಷವೇ ಹುಟ್ಟುವುದಿಲ್ಲ. ಮತ್ತು ''ಪ್ರಾಣೋ ಹ್ಯೇಷ ಯ ಏಷ ತಪತಿ'' ಎಂಬ ಹಿಂದಿನ ವಾಕ್ಯದಲ್ಲಿ ಹೇಳಲ್ಪಟ್ಟ 'ಎಲ್ಲವನ್ನೂ ತಪನ ಮಾಡುವಿಕೆ' ಎಂಬ ಧರ್ಮವು ಅಯುಕ್ತವಾಗುತ್ತದೆ. ಏಕೆಂದರೆ ಚಿನ್ಮಾತ್ರವು ತಾಪಕವೇ ಅಲ್ಲ.

ಕಠಿಣಪದಾರ್ಥ :

ಸರ್ವನಾಮ್ನಾ = ಅಹಂ ತ್ವಂ ಮೊದಲಾದ ಸರ್ವನಾಮ ಶಬ್ದಗಳಿಂದ, ತತ್ರಾಪಿ = ಅಹಂ ಮನುಃ ಎಂಬ ದೃಷ್ಟಾಂತದ ಮಾತಿನಲ್ಲಿ, ವಿಶಿಷ್ಟಸ್ಯ = ಅಂತಃಕರಣ ವಿಶಿಷ್ಟನಾದ, ಏಷಃ = ಸೂರ್ಯಮಂಡಲದಲ್ಲಿರುವ ಪ್ರಾಣನು.

**प्रकाशः** – ननु पूर्वपक्षलिङ्गान्यपि निरवकाशानीत्युक्तमित्यतश्शास्त्रदृष्टिसूत्र-तात्पर्यमाह – **परकीयेति** ॥ **प्रसिद्धेति** ॥ वृत्रहन्तृत्वादेर्निरवकाशत्वादिति भावः । **'तमिन्द्र उवाच प्राणो वा अहमस्म्यृषे'** इतीन्द्रेण प्रयुक्तोहंशब्दोऽन्तर्यामिपर इत्यन्वयः । लक्षणायां किं प्रयोजनमित्यतो **'मञ्चाः क्रोशन्ति'** इत्यादौ मञ्चस्थपुरुषाभिप्रायेण मञ्चपदप्रयोगवन्निरूढत्वेन प्रयोजनानपेक्षणादिति भावेनोक्तं – **निरूढेति** ॥ लक्षणैव दोष इत्यत उक्तं – **श्रुतीति** ॥ **''सर्वान्तर्यामिकः''** इति आनन्दमयाधिकरणभाष्योदाहृतस्मृत्या,

**तत्तन्नाम्नोच्यते विष्णुः सर्वशास्तृत्वहेतुतः ।**
**इत्येतद्भाष्योक्ताभिः स्मृत्यादिभिश्चेत्यर्थः ।**

ननु 'वामदेववत्' इत्ययुक्तं, तत्प्रयुक्ताहंशब्दस्य अन्तर्यामिपरत्वासिद्धेरित्याशङ्कयाद्याध्यायबृहद्भाष्यदिशा साधयति – **नच तत्रेति ॥** वामदेवप्रयुक्ताहंशब्दस्यान्तर्यामिपरत्वाभावे तस्यैव मन्वादिभिरैक्यं वाच्यम् । तच्च किं मुख्यतो विशिष्टस्यैवोत चिन्मात्रलक्षणया विशष्यस्य । आद्यं निरस्यति – **विशिष्टस्येति ॥** द्वितीयं शङ्कते – **अहमिति ॥**

यदि लक्षणया विशेष्यैक्यं, तर्हि दार्ष्टान्तिके इन्द्रप्रयुक्ताहंशब्दसामानाधिकरण्यात्प्राण इन्द्र इति पक्षे इन्द्रपदेन विशिष्टं, लक्षणया विशेष्यमात्रं वा । आद्ये विशिष्टैक्यानङ्गीकारेण विशिष्टेन्द्रात्मकस्य प्राणस्य सर्वाभेदोक्त्ययोगः । द्वितीये प्राणो न ब्रह्मेत्युक्त्ययोग इति पूर्वपक्षिणं प्रत्यनिष्टमाह – **प्राण इन्द्र इतीति ॥** विशेष्यैक्यमात्रमङ्गीकुर्वतः पूर्ववादिनस्तव पक्ष इत्यर्थः ।

**''नहि मनुसूर्यादिर्भवति वामदेवस्तत्पक्षेऽपि''** इत्यैतरेयभाष्ये दृष्टान्तेऽभिहितदोषं दार्ष्टान्तिकेऽप्याह – **इति सार्वात्म्येति ॥** इति पूर्ववाक्यायोग इत्युपलक्षणम् । **''अत्र च ''अहं भूमिमददामार्याय'' इत्यादिना प्रवृत्तिरेवोच्यते । नहि वामदेवेन मन्वादिकर्म क्रियते कदापि''** इत्याद्यैतरेयभाष्योक्तं च ग्राह्यम् ।

ವಿವರಣೆ - ಸಿದ್ಧಾಂತಲಿಂಗಗಳಂತೆ ಪೂರ್ವಪಕ್ಷದ ಲಿಂಗಗಳೂ ಸಹ ನಿರವಕಾಶಗಳೇ ಆಗಿವೆಯಲ್ಲವೇ? ಎಂಬ ಶಂಕೆಯನ್ನು ನಿರಾಕರಿಸಲು 'ಶಾಸ್ತ್ರದೃಷ್ಟಿ' ಎಂಬ ಸೂತ್ರದ ತಾತ್ಪರ್ಯವನ್ನು 'ಪರಕೀಯ' ಇತ್ಯಾದಿ ಗ್ರಂಥದಿಂದ ಹೇಳಿದ್ದಾರೆ. 'ರುದ್ರಹಂತೃತ್ವ' ಮೊದಲಾದ ಲಿಂಗಗಳು ಇಂದ್ರನಲ್ಲಿ ನಿರವಕಾಶವಾದ್ದರಿಂದ ಇಂದ್ರಶಬ್ದದಿಂದ ದೇವೇಂದ್ರನೇ ಪ್ರತಿಪಾದ್ಯನಾಗಲಿ ಎಂದು 'ಪ್ರಸಿದ್ಧ' ಎಂಬ ಪದದ ಅಭಿಪ್ರಾಯ. ''ತಮಿಂದ್ರ ಉವಾಚ ಪ್ರಾಣೋ ವಾ ಅಹಮಸ್ಮ್ಯೃಷೇ'' ಎಂಬುದಾಗಿ ಇಂದ್ರನಿಂದ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದವು ಅಂತರ್ಯಾಮಿ ಪರವಾಗಿದೆ ಎಂದು ವಾಕ್ಯದ ಅನ್ವಯ.

'ಅಹಂ' ಶಬ್ದಕ್ಕೆ ಅಂತರ್ಯಾಮಿ ಎಂಬಲ್ಲಿ ಲಕ್ಷಣಾ ಮಾಡುವುದದರಿಂದ ಏನು ಪ್ರಯೋಜನ ಎಂದರೆ ''ಮಂಚಾಃ ಕ್ರೋಶಂತಿ'' ಇತ್ಯಾದಿ ಸ್ಥಳಗಳಲ್ಲಿ ಮಂಚದಲ್ಲಿರುವ ಪುರುಷರನ್ನು ವಿವಕ್ಷಿಸಿ 'ಮಂಚ' ಪದವನ್ನು ಪ್ರಯೋಗಿಸಲಾಗುತ್ತದೆ. ಇಲ್ಲಿ ಮಂಚಸ್ಥಪುರುಷರಲ್ಲಿ ಮಂಚ ಪದಕ್ಕೆ ನಿರೂಢಲಕ್ಷಣಾ ಮಾಡಲು ಯಾವುದೇ ರೀತಿಯಾದ ಪ್ರಯೋಜನವಿಲ್ಲವೋ ಅದರಂತೆ 'ಅಂತರ್ಯಾಮಿ' ಎಂಬರ್ಥದಲ್ಲಿ 'ಅಹಂ'

ಶಬ್ದಕ್ಕೆ ಲಕ್ಷಣಾ ಮಾಡಬೇಕಾದರೂ ಯಾವುದೇ ಪ್ರಯೋಜನ ಬೇಕಾಗಿರುವುದಿಲ್ಲ ಎಂಬ ಅಭಿಪ್ರಾಯದಿಂದ 'ನಿರೂಢ' ಎಂಬ ಪದವನ್ನು ಬಳಸಿದ್ದಾರೆ. ಲಕ್ಷಣಾ ಮಾಡುವುದು ದೋಷವಲ್ಲವೇ? ಎಂಬ ಪ್ರಶ್ನೆಗೆ 'ಶ್ರುತಿತುಲ್ಯಯಾ' ಎಂದು ಉತ್ತರಿಸಿದ್ದಾರೆ. ನಿರೂಢಲಕ್ಷಣಾವು ಶ್ರುತಿಗೆ ಸಮಾನವಾದ್ದರಿಂದ ದೋಷವಿಲ್ಲ. ಆದರೂ ಲಕ್ಷಣಾ ಮಾಡುವುದೇ ಕಷ್ಟವೆಂದು ಹೇಳುವುದಾದರೆ 'ಅಂತರ್ಯಾಮಿ' ಎಂಬರ್ಥದಲ್ಲಿ ಮುಖ್ಯಾರ್ಥವನ್ನೇ ಹೇಳುತ್ತೇವೆಂದು 'ಸರ್ವಾಂತರ್ಯಾಮಿ' ಎಂಬ ಶ್ಲೋಕದಿಂದ ಉಪಪಾದಿಸುತ್ತಿದ್ದಾರೆ. ಈ ಸ್ಮೃತಿವಾಕ್ಯವು ಆನಂದಮಯಾಧಿಕರಣದ ಭಾಷ್ಯದಲ್ಲಿ ಉದಾಹರಿಸಲ್ಪಟ್ಟಿದೆ. ಇದರ ಜೊತೆಗೆ ''ತತ್ತನ್ನಾಮ್ನೋಚ್ಯತೇ ವಿಷ್ಣುಃಸರ್ವಶಾಸ್ತ್ರತ್ವಹೇತುತಃ''. ಇತ್ಯಾದಿಯಾಗಿ ಭಾಷ್ಯದಲ್ಲಿ ಹೇಳಲ್ಪಟ್ಟ ಸ್ಮೃತಿಗಳನ್ನೂ ಸಹ ವಿವಕ್ಷಿಸಬೇಕು.

ಶಂಕೆ - 'ವಾಮದೇವವತ್' ಎಂಬ ಉದಾಹರಣೆ ನೀಡಿದ್ದೇ ತಪ್ಪು. ಏಕೆಂದರೆ ವಾಮದೇವನಿಂದ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದಕ್ಕೆ 'ಅಂತರ್ಯಾಮಿ ಪರತ್ವ' ಇದುವರೆಗೂ ಸಿದ್ಧವಾಗಿಲ್ಲವಲ್ಲವೇ?

ಸಮಾಧಾನ - ಈ ಶಂಕೆಗೆ ಬೃಹದ್ಭಾಷ್ಯದ ಮೊದಲನೇ ಅಧ್ಯಾಯದ ಮಾರ್ಗದರ್ಶನದಂತೆ ಅಂತರ್ಯಾಮಿಪರತ್ವವನ್ನು 'ನಚ ತತ್ರ' ಇತ್ಯಾದಿ ವಾಕ್ಯದಿಂದ ಸಾಧಿಸುತ್ತಿದ್ದಾರೆ. ವಾಮದೇವನಿಂದ ಪ್ರಯೋಗಿಸಲ್ಪಟ್ಟ ಅಹಂ ಶಬ್ದಕ್ಕೆ ಅಂತರ್ಯಾಮಿ ಎಂಬರ್ಥವನ್ನು ಹೇಳದಿದ್ದರೆ ಆ ವಾಮದೇವನಿಗೆ ಮನ್ವಾದಿಗಳಿಂದ ಐಕ್ಯವನ್ನು ಹೇಳಬೇಕಾಗುತ್ತದೆ. ಅಂತಹ ಐಕ್ಯವನ್ನು ಇಬ್ಬರು ವಿಶಿಷ್ಟಾತ್ಮರಿಗೆ ಹೇಳುತ್ತೀರೋ? ಅಥವಾ ಚಿನ್ಮಾತ್ರದಲ್ಲಿ ಲಕ್ಷಣಾ ಮಾಡಿ ಐಕ್ಯವನ್ನು ಹೇಳುತ್ತೀರೋ? ಮೊದಲನೆಯ ಪಕ್ಷವನ್ನು 'ವಿಶಿಷ್ಟಸ್ಯ' ಎಂಬ ವಾಕ್ಯದಿಂದ ನಿರಾಕರಿಸಿದ್ದಾರೆ. ಎರಡನೆಯ ಪಕ್ಷವನ್ನು 'ಅಹಂ' ಇತ್ಯಾದಿ ವಾಕ್ಯದಿಂದ ನಿರಾಕರಿಸಿದ್ದಾರೆ.

ಒಂದು ವೇಳೆ ಲಕ್ಷಣಾದಿಂದ ದೃಷ್ಟಾಂತದಲ್ಲಿ ವಿಶೇಷ್ಯಗಳಿಗೆ ಐಕ್ಯಗಳನ್ನು ಒಪ್ಪಿದರೆ ಆವಾಗ ದಾರ್ಷ್ಟಾಂತಿಕದಲ್ಲಿ ಸಮಸ್ಯೆ ಬರುತ್ತದೆ. ಇಂದ್ರನಿಂದ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದದ ಸಾಮಾನಾಧಿಕರಣ್ಯವು ಪ್ರಾಣಶಬ್ದಕ್ಕಿರುವುದರಿಂದ ಇಂದ್ರನು ಪ್ರಾಣನಾಗಿದ್ದಾನೆಂದು ಹೇಳಿದರೆ 'ಇಂದ್ರ'-ಪದಕ್ಕೆ 'ವಿಶಿಷ್ಟ' ಎಂಬರ್ಥವನ್ನು ಹೇಳುತ್ತೀರೋ? ಅಥವಾ ಲಕ್ಷಣಾ ಮಾಡಿ 'ವಿಶೇಷಣ' ಎಂಬರ್ಥವನ್ನು ಹೇಳುತ್ತೀರೋ? ಪ್ರಥಮಪಕ್ಷದಲ್ಲಿ ಎರಡು ವಿಶಿಷ್ಟಪದಾರ್ಥಗಳಿಗೆ ಐಕ್ಯವನ್ನು ಅದ್ವೈತಿಗಳೇ ಒಪ್ಪಿರುವುದಿಲ್ಲ. ಮತ್ತು ವಿಶಿಷ್ಟನಾದ ಇಂದ್ರಸ್ವರೂಪನಾದ ಪ್ರಾಣನಿಗೆ ಸಕಲಪದಾರ್ಥಗಳಿಂದ ಅಭೇದವನ್ನು ಹೇಳುವುದೂ ಸಹ ಅಯುಕ್ತವಾಗುತ್ತದೆ. ಎರಡನೇ ಪಕ್ಷದಲ್ಲಿ ಪ್ರಾಣನು ಬ್ರಹ್ಮನಲ್ಲವೆಂಬ ಮಾತೇ ತಪ್ಪಾಗುತ್ತದೆಂದು ಪೂರ್ವಪಕ್ಷಿಗೆ 'ಪ್ರಾಣ ಇಂದ್ರ' ಇತ್ಯಾದಿ ವಾಕ್ಯದಿಂದ ಅನಿಷ್ಟಾಪಾದನೆಯನ್ನು ಮಾಡುತ್ತಿದ್ದಾರೆ. ಕೇವಲ ವಿಶೇಷಗಳಿಗಷ್ಟೇ ಐಕ್ಯವನ್ನು ಒಪ್ಪುವ ಪೂರ್ವಪಕ್ಷಿಯಾದ ನಿನಗೆ ವಿಶಿಷ್ಟಗಳಿಗೆ ಐಕ್ಯವನ್ನು ಒಪ್ಪುವುದು ಅನಿಷ್ಟವಾಗಿದೆಯೆಂದು ಅಭಿಪ್ರಾಯ.

''ನಹಿ ಮನುಸೂರ್ಯಾದಿರ್ಭವತಿ ವಾಮದೇವಸ್ತತ್ಪಕ್ಷೇಽಪಿ'' ಎಂಬುದಾಗಿ ಐತರೇಯ ಭಾಷ್ಯದಲ್ಲಿ ದೃಷ್ಟಾಂತಕ್ಕೆ ಹೇಳಲ್ಪಟ್ಟ ದೋಷವನ್ನು 'ಇತಿ ಸಾರ್ವಾತ್ಮ್ಯೇತಿ' ಎಂದು ದಾರ್ಷ್ಟಾಂತಿಕಕ್ಕೂ ಹೇಳುತ್ತಿದ್ದಾರೆ. 'ಇತಿ ಪೂರ್ವವಾಕ್ಯಾಯೋಗಃ' ಎಂಬುದು ಉಪಲಕ್ಷಣವಾಗಿದೆ. - ''ಅಹಂ ಭೂಮಿಮದದಾಮರ್ಯಾಯ

ಇತ್ಯಾದೀನಾ ಪ್ರವೃತ್ತಿರೇವೋಚ್ಯತೇ । ನಹಿ ವಾಮದೇವೇನ ಮನ್ವಾದಿಕರ್ಮ ಕ್ರಿಯತೇ ಕದಾಪಿ'' ಇತ್ಯಾದಿಯಾಗಿ ಐತರೇಯ ಭಾಷ್ಯದಲ್ಲಿ ಭೂಮಿ ಪ್ರಧಾನಾದಿಗಳನ್ನು ಹೇಳಿದ್ದಾರೆ. ಇವುಗಳು ವಿಷ್ಣುವಿನಲ್ಲಿ ಬರುತ್ತವೆ ಹೊರತು ಶುದ್ಧಚಿನ್ಮಾತ್ರದಲ್ಲಿ ಬರಲಾರವು.

**गुरुराजीयम्** – सर्वव्यापित्वमित्यादीनीत्यत्रादिपदेन देहरथित्वपरामर्शः – **श्रुतितुल्ययेति** ॥ तथाचेश्वरप्रयुक्तोऽहंशब्दो मुख्यार्थ एवेति भावः । नन्वहंशब्देनान्तर्यामिणो लक्षणा नोपपद्यते । प्रयोजनाभावादित्यतोऽनिरूढलक्षणायामेव तदपेक्षा नतु निरूढलक्षणायामपि । इयञ्च निरूढलक्षणेत्याह – **निरूढयेति** ॥ तत्र हेतुः **श्रुतितुल्यतयेति** ॥ नन्वेतदयुक्तम् । सर्वेषां शब्दानामन्तर्यामिणि मुख्यत्वादहंशब्दस्य तत्र मुख्यत्वस्यैव सत्त्वेन लक्षणया तत्परत्वस्यासम्भवादित्यरुचेराह – **सर्वान्तर्यामिक इत्यादिना** ॥ **मुख्यवृत्त्या वेति** ॥ तथा चाक्षादिशब्दवन्नानार्थत्वस्य वक्ष्यमाणश्रौतानुशासनादिसिद्धत्वान्नोक्त दोष इति भावः ।

### ಸಾರ

ಪರಕೀಯರು ಉದಾಹರಿಸಿದ ಶ್ರುತಿವಾಕ್ಯವು ಸಾವಕಾಶವಾಗಿದೆ. ''ಪ್ರಾಣೋವಾ ಅಹಂ'' ಎಂಬಲ್ಲಿರುವ 'ಅಹಂ' ಶಬ್ದವು ಅಂತರ್ಯಾಮಿಯಾದ ವಿಷ್ಣುವನ್ನೇ ಹೇಳುತ್ತದೆ. ಸಕಲ ಪದಾರ್ಥಗಳ ಅಂತರ್ಯಾಮಿಯಾದ್ದರಿಂದ ಒಬ್ಬನೇ ವಿಷ್ಣುವು 'ಏಷೋऽಹಂ ತ್ವಂ ಅಸೌ' ಇತ್ಯಾದಿ ಸರ್ವನಾಮಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ. 'ಅಹಂ ಮನುಃ' ಎನ್ನುವ ದೃಷ್ಟಾಂತದಲ್ಲಿಯೂ ಐಕ್ಯವನ್ನು ಹೇಳಲಾಗದು. ವಿಶಿಷ್ಟನಾದ ವಾಮದೇವನಿಗೆ ವಿಶಿಷ್ಟನಾದ ಮನ್ವಾದಿಗಳಿಂದ ಐಕ್ಯವು ಕೂಡುವುದಿಲ್ಲ. ದಾರ್ಷ್ಟಾಂತಿಕದಲ್ಲಿಯೂ ಸಹ ಚಿನ್ಮಾತ್ರದಲ್ಲಿ ಲಕ್ಷಣಾ ಮಾಡಿದರೆ ಪ್ರಾಣನು ಬ್ರಹ್ಮನಲ್ಲವೆಂಬ ಪೂರ್ವಪಕ್ಷವೇ ಕೂಡುವುದಿಲ್ಲ. ಮತ್ತು ಭೂಮಿಪ್ರಧಾನಾದಿಧರ್ಮಗಳೂ ಸಹ ಚಿನ್ಮಾತ್ರನಲ್ಲಿ ಕೂಡುವುದಿಲ್ಲ. ಆದ್ದರಿಂದ ಇಂದ್ರಶಬ್ದಕ್ಕೆ ದೇವೇಂದ್ರನೆಂದೇ ಅರ್ಥವನ್ನಿಟ್ಟುಕೊಂಡು 'ಅಹಂ' ಶಬ್ದಕ್ಕೆ 'ಅಂತರ್ಯಾಮಿ' ಎಂಬರ್ಥವನ್ನು ಹೇಳಬೇಕು.

* * * *

## ವಿಷ್ಣುವೇ ಅಹಂ ಶಬ್ದಾರ್ಥ

### तात्पर्यचन्द्रिका

**यद्यपि** ''अ इति ब्रह्म तत्राऽऽगतमहमिति तस्योपनिषदहमिति । ततोऽहं नामाभवत्'' इत्यादि श्रुतेः । ''न वा अहमिमं विजानाति'' इति, ''अहं तत्तेजोरश्मीन्नारायणं पुरुषं जातमग्रतः'' इत्यादिश्रौतप्रयोगात्, ''अहेयत्वादहंनामा''

**इत्यादिस्मृतेश्च अहंशब्दोऽहेयत्वाद्यर्थेऽप्यस्ति । ''न वा'' इत्यादिश्रुतावहंशब्दस्यास्मच्छब्दत्वे 'विजानामि' इति स्यात् । ''भूरिति शिरः'' इत्यादिनाऽक्षिस्थो भगवान् हि तत्राहम् । तथाऽपीह प्राणे ''प्राणो वा अहमस्मि'' इत्युत्तमपुरुषश्रवणादन्तर्यामिपरतैवोक्ता ।**

ಅನುವಾದ - ಪ್ರಶ್ನೆ - ಅಹಂ ಶಬ್ದಕ್ಕೆ ನೇರವಾಗಿ ಭಗವಂತನ ರೂಪಗಳೇ ಅರ್ಥವೆಂದು ಹೇಳಬಹುದು. ಹೀಗಿರುವಾಗ ಅಂತರ್ಯಾಮಿ ಎಂಬರ್ಥವನ್ನು ಏಕೆ ಹೇಳುತ್ತಿದ್ದೀರಿ? ಏಕೆಂದರೆ ''ಅ ಇತಿ ಬ್ರಹ್ಮ ತತ್ರಾऽऽಗತಮಹಮಿತಿ ತಸ್ಯೋಪನಿಷದಹಮಿತಿ । ತತೋऽಹಂ ನಾಮಾಭವತ್'' 'ಅ' ಎಂದರೆ 'ಬ್ರಹ್ಮನು' ಅವನಿಗೆ 'ಅಹಂ' ಎಂಬ ಮತ್ತೊಂದು ನಾಮಾಂತರವು ಬಂದಿದೆ. ಅವನ 'ಅಹಂ' ಹೆಸರು ರಹಸ್ಯವಾದದ್ದು. ಆದ್ದರಿಂದ 'ಅಹಂ' ಎಂಬ ಹೆಸರನ್ನು ಧರಿಸಿದ್ದಾನೆ. ಇತ್ಯಾದಿಯಾಗಿ ಛಾಂದೋಗ್ಯವು ಹೇಳುತ್ತಿದೆ.

ಮತ್ತು ''ನ ವಾ ಅಹಮಿಮಂ ವಿಜಾನಾತಿ'' ''ಅಹಂ ತತ್ತೇಜೋರಶ್ಮೀನ್ನಾರಾಯಣಂ ಪುರುಷಂ ಜಾತಮಗ್ರತಃ'' ಇತ್ಯಾದಿ ಶ್ರುತಿಯಲ್ಲಿ 'ಅಹಂ' ಶಬ್ದವನ್ನು ಪ್ರಯೋಗಿಸಿದ್ದರಿಂದ 'ಅಹೇಯತ್ವದಹಂನಾಮಾ' ಇತ್ಯಾದಿ ಸ್ಮೃತಿಗಳಲ್ಲಿ ಹೇಳಿದ್ದರಿಂದಲೂ 'ಅಹೇಯತ್ವ' ಮೊದಲಾದ ಅರ್ಥಗಳಲ್ಲಿಯೂ 'ಅಹಂ' ಶಬ್ದವು ಪ್ರಸಿದ್ಧವಾಗಿದೆ. 'ನ ವಾ' ಇತ್ಯಾದಿ ಶ್ರುತಿಯಲ್ಲಿರುವ 'ಅಹಂ' ಶಬ್ದವು 'ಅಸ್ಮತ್' ಶಬ್ದವಾದಲ್ಲಿ 'ವಿಜಾನಾಮಿ' ಎಂದು ಪ್ರಯೋಗವಿರಬೇಕಾಗಿತ್ತು. 'ವಿಜಾನಾತಿ' ಎಂದಿರುವುದರಿಂದ 'ಅಹೇಯತ್ವ' ಎಂಬರ್ಥವನ್ನೇ ಹೇಳಬೇಕು.

''ಭೂರಿತಿ ಶಿರಃ'' ಇತ್ಯಾದಿ ಶ್ರುತಿಯಲ್ಲಿ ಕಣ್ಣಿನಲ್ಲಿರುವ ಭಗವಂತನೇ ಅಹಂ ಶಬ್ದ ಪ್ರತಿಪಾದ್ಯನಾಗಿದ್ದಾನೆ. ಹೀಗಿರುವಾಗ ಅಂತರ್ಯಾಮಿ ಎಂಬರ್ಥವನ್ನು ಹೇಗೆ ಹೇಳುತ್ತೀರಿ?

ಉತ್ತರ - ಹೌದು, ಆದರೆ ಪ್ರಕೃತ ಪ್ರಾಣನಲ್ಲಿ ''ಪ್ರಾಣೋ ವಾ ಅಹಮಸ್ಮಿ'' ಎಂಬುದಾಗಿ ಉತ್ತಮ ಪುರುಷವು ಕೇಳಿಸುತ್ತಿರುವುದರಿಂದ ಅಂತರ್ಯಾಮಿಪರತ್ವವನ್ನೇ ಹೇಳಬೇಕು.

ಕಠಿಣ ಪದಾರ್ಥ :

ತತ್ರ = ಬ್ರಹ್ಮನ ವಿಷಯದಲ್ಲಿ, ಅಹಂ = ಎಂಬ ಪದವು, ಆಗತಂ = ವಾಚಕವಾಗಿ ತಿಳಿದಿದೆ, ಉಪನಿಷತ್ = ರಹಸ್ಯವಾದ ಹೆಸರು, ಉತ್ತಮಪುರುಷಶ್ರವಣಾತ್ = ಅಸ್ಮಿ ಎಂಬ ಉತ್ತಮಪುರುಷ ಪ್ರಯೋಗವು ಕೇಳಿಸುತ್ತಿರುವುದರಿಂದ.

**प्रकाशः** – नन्वहंशब्दस्यान्तर्याम्यर्थकत्वमनुक्त्वैव प्रयोगबाहुल्येन विष्णावेव मुख्यत्वमुपेत्य विष्णुर्ब्रह्मेतिवदहं सर्वैरप्यहेयः परमात्मा प्राण इतीन्द्रेणोक्तमित्यपि समाधातुं शक्यत्वात् सूत्रादावन्तर्यामित्ववर्णनं किमर्थमित्याक्षिपति – यद्यपीति ॥

ಪರಿಪೂರ್ಣಚಂದ್ರಿಕಾ

तत्र ब्रह्मणि अहमितिपदं वाचकतयाऽवगतमित्यर्थः । 'उपनिषत्' रहस्यं नामेत्यर्थः । रूढिमुक्त्वा योगं चाह – **अहेयत्वादिति** ॥

**अहेयत्वादहंनामाऽस्म्यसनान्मनुतेरपि ।**
**ततो वेत्तीति च त्वं स पूर्णत्वात्सर्वनामकः ॥**

इति ब्रह्माण्डवचनात्,

**अहंनामा हरिर्नित्यमहेयत्वात्प्रकीर्तितः ।**

इति श्रुतिश्चेत्यपि ध्येयम् । ननु "**न वा अरे अहमिमं विजानाति**" इति मैत्रीयीं प्रति याज्ञवल्क्योक्ते वाक्ये अहंशब्दस्याहेयत्वार्थत्वं कुत इत्यत आह **न वा इतीति** ॥ **उत्तमेति** ॥ अन्यथा "प्राणो वा अहमस्मि" इति श्रूयेतेति भावः ।

ननु नेदमुत्तमपुरुषस्य रूपं, किन्तु 'असनान्मनुतेरस्मि' इत्यैतरेयभाष्यदिशाऽर्थान्तरपरमेवेति चेत्सत्यं, अस्मीत्यस्योत्तमपुरुषत्वाहानेनैवैतद्भाष्यदिशा वाक्यमर्यादया अर्थान्तरवर्णनमेतदिति ध्येयम् । ननूक्तमत्राहंशब्दस्यान्तर्यामिणि मुख्यत्वे "तदात्मानमेवाऽवेदहं ब्रह्मास्मि" इत्यादावपि वाजसनेये तथा स्यादिति चेन्न, तत्र, बाधेनान्तर्याम्यर्थत्वास्वीकारादिति भावः ।

ವಿವರಣೆ - 'ಅಹಂ' ಶಬ್ದಕ್ಕೆ ಅಂತರ್ಯಾಮಿ ಎಂಬ ಅರ್ಥವನ್ನು ಹೇಳದೆ, ಪ್ರಯೋಗಬಾಹುಲ್ಯದಿಂದ, ವಿಷ್ಣುವಿನಲ್ಲಿಯೇ ಮುಖ್ಯಾರ್ಥವನ್ನು ಅಂಗೀಕರಿಸಲು ಬರುತ್ತದೆ. ವಿಷ್ಣುವನ್ನು ಬ್ರಹ್ಮ ಎಂಬ ಶಬ್ದದಿಂದ ಕರೆಯುವಂತೆ 'ಅಹೇಯತ್ವ'ಗುಣವಿರುವ ಪ್ರಯುಕ್ತವಾಗಿ 'ಅಹಂ' ಎಂದೂ ಸಹ ಕರೆಯಬಹುದು. ಆದ್ದರಿಂದ ಎಲ್ಲರಿಂದಲೂ ಅಹೇಯನಾಗಿರುವ ಪ್ರಯುಕ್ತ ಪರಮಾತ್ಮನು ಪ್ರಾಣಶಬ್ದವಾಚ್ಯನಾಗಿದ್ದಾನೆಂದು ದೇವೇಂದ್ರನಿಂದ ಹೇಳಲ್ಪಟ್ಟಿದೆ. ಹೀಗೂ ಸಮಾಧಾನವನ್ನು ಮಾಡಲು ಬರುವಾಗ ಸೂತ್ರದಲ್ಲಿ ಅಂತರ್ಯಾಮಿ ಎಂಬರ್ಥವನ್ನು ಹೇಳಿದ್ದು ವ್ಯರ್ಥವಲ್ಲವೇ?

ಈ ಆಕ್ಷೇಪವನ್ನು 'ಯದ್ಯಪಿ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. 'ಅಹಂ' ಎಂಬ ಶಬ್ದಕ್ಕೆ ಪರಮಾತ್ಮನಲ್ಲಿ ರೂಢಿಯನ್ನು ಹೇಳಿ ಯೋಗವನ್ನು ಸಹ 'ಅಹೇಯತ್ವಾದಿ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ಅಹೇಯತ್ವಾದಹಂನಾಮಾಽಸ್ಮ್ಯಸನಾನ್ಮನುತೇರಪಿ ।
ತತೋ ವೇತ್ತೀತಿ ಚ ತ್ವಂ ಸ ಪೂರ್ಣತ್ವಾತ್ಸರ್ವನಾಮಕಃ ॥

ಅಹೇಯನಾದ್ದರಿಂದ 'ಅಹಂ' ಶಬ್ದವಾಚ್ಯನು ಶತ್ರುಗಳನ್ನು ನಿರಸನ ಮಾಡುವುದರಿಂದ, ಮತ್ತು ಜ್ಞಾನರೂಪನಾದ್ದರಿಂದ 'ಅಸ್ಮಿ' ಎಂಬ ಶಬ್ದದಿಂದ ವಾಚ್ಯನು, ವ್ಯಾಪ್ತನಾದ್ದರಿಂದ ಮತ್ತು ತಿಳಿಯಲ್ಪಡು-

ವವನಾದ್ದರಿಂದ 'ತ್ವಂ' ಶಬ್ದದಿಂದ ವಾಚ್ಯನು. ಪೂರ್ಣನಾದ್ದರಿಂದ ಸಕಲಶಬ್ದಗಳಿಂದ ಪರಮಾತ್ಮನು ವಾಚ್ಯನಾಗಿದ್ದಾನೆ. ಹೀಗೆ ಬ್ರಹ್ಮಾಂಡ ಪುರಾಣದ ವಚನದಿಂದ ಮತ್ತು 'ಅಹಂನಾಮಾ ಹರಿರ್ನಿತ್ಯ-ಮಹೇಯತ್ವಾತ್ಪ್ರಕೀರ್ತಿತಃ'' 'ಅಹೇಯನಾದ್ದರಿಂದ ಹರಿಯು ನಿತ್ಯವಾಗಿ ಅಹಂ' ಎನಿಸಿದ್ದಾನೆ ಎಂಬ ಶ್ರುತಿಪ್ರಮಾಣದಿಂದಲೂ 'ಅಹಂ' ಶಬ್ದದಿಂದ ಪರಮಾತ್ಮನೇ ವಾಚ್ಯನಾಗಿದ್ದಾನೆ.

''ನ ವಾ ಅರೇ ಅಹಮಿಮಂ ವಿಜಾನಾತಿ'' ಎಂಬುದಾಗಿ ಮೈತ್ರೇಯಿಯನ್ನು ಕುರಿತು ಯಾಜ್ಞ್ಯವಲ್ಕ್ಯರು ಉಪದೇಶಿಸುವ ಈ ವಾಕ್ಯದಲ್ಲಿ 'ಅಹೇಯತ್ವ' ಎಂಬರ್ಥವನ್ನು 'ಅಹಂ' ಶಬ್ದಕ್ಕೆ ಏಕೆ ಹೇಳಬೇಕು? ಎಂಬ ಪ್ರಶ್ನೆಗೆ 'ನ ವಾ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಉತ್ತಮ ಪುರುಷಶ್ರವಣಾತ್' ಎಂಬ ವಾಕ್ಯದಲ್ಲಿ 'ಅಹಂ' ಶಬ್ದಕ್ಕೆ 'ಅಂತರ್ಯಾಮಿಪರತ್ವ'ವನ್ನು ಹೇಳಿದ್ದಾರೆ. ಇಲ್ಲದಿದ್ದರೆ 'ಪ್ರಾಣೋವಾ ಅಹಮಸ್ಮಿ' ಎಂದು ಹೇಳಬೇಕಾಗಿತ್ತು ಎಂದರ್ಥ. 'ಪ್ರಾಣೋವಾ ಅಹಮಸ್ಮಿ' ಎಂಬ ವಾಕ್ಯದಲ್ಲಿ 'ಅಸ್ಮಿ' ಎಂಬುದನ್ನು ಉತ್ತಮಪುರುಷವೆಂದೇಕೆ ಹೇಳಬೇಕು; ಹೊರತಾಗಿ 'ಅಸನಾನ್ಮನುತೇರಸ್ಮಿ' ಎಂಬ ತೈತ್ತಿರೀಯಾಭಾಷ್ಯದ ಪ್ರಕಾರ ಬೇರೆ ಅರ್ಥವನ್ನೇ ಹೇಳಬಹುದಲ್ಲವೇ? ಹೌದು, ಆದರೆ 'ಅಸ್ಮಿ' ಎಂದು ಉತ್ತಮಪುರುಷತ್ವವನ್ನು ಬಿಡದೇ ಐತರೇಯಭಾಷ್ಯದ ಪ್ರಕಾರ ವಾಕ್ಯಮರ್ಯಾದೆಗೋಸ್ಕರ ಅರ್ಥಾಂತರವನ್ನು ಹೇಳಿದ್ದೇವೆ. ಅಂದರೆ ಐತರೇಯಭಾಷ್ಯದ ಅಭಿಪ್ರಾಯವನ್ನು ವಿವಕ್ಷಿಸಿ ಮತ್ತೊಂದು ಅರ್ಥವನ್ನು ವರ್ಣಿಸಿದ್ದೇವೆಂದು ಅಭಿಪ್ರಾಯ.

ಶಂಕೆ - 'ಅಹಂ' ಶಬ್ದಕ್ಕೆ 'ಅಂತರ್ಯಾಮಿ' ಎಂಬರ್ಥದಲ್ಲಿ ಮುಖ್ಯತ್ವವನ್ನು ಹೇಳಿದ್ದಾರೆ. ''ತದಾತ್ಮಾನಮೇವಾऽವೇದಹಂ ಬ್ರಹ್ಮಾಸ್ಮಿ'' ಇತ್ಯಾದಿಯಾಗಿ ಪರಮಾತ್ಮನೇ ಎಲ್ಲಿ 'ಅಹಂ' ಎಂಬ ಪದವನ್ನು ಉಪಯೋಗಿಸಿದ್ದಾನೋ ಅಲ್ಲಿಯೂ ಸಹ 'ಅಹಂ' ಶಬ್ದಕ್ಕೆ 'ಅಂತರ್ಯಾಮಿ' ಎಂಬರ್ಥವನ್ನು ವಿವಕ್ಷಿಸಬೇ-ಕಾದೀತು ಎಂಬ ಪೂರ್ವಪಕ್ಷಕ್ಕೆ ಏನು ಉತ್ತರ ?

ಸಮಾಧಾನ - 'ಅಂತರ್ಯಾಮಿತ್ವ' ಎಂಬರ್ಥವನ್ನು ಬಾಧವಿಲ್ಲದಿದ್ದಾಗ ಮಾತ್ರ ಸ್ವೀಕರಿಸಬೇಕು. ಪರಮಾತ್ಮನು ಪ್ರಯೋಗಿಸುವ ವಾಕ್ಯಗಳಲ್ಲಿ ಅಂತರ್ಯಾಮಿ ಎಂಬರ್ಥವನ್ನು ಸ್ವೀಕರಿಸಿದರೆ ಬಾಧಬರುತ್ತದೆ.

**गुरुराजीयम्** – अद्वैतिमते स्थित्वा शङ्कते – **अहमिति** ॥ इन्द्रशब्देन विशिष्टोक्ताविति ॥ अनेन किमत्र साक्षादैक्यमुच्यते लक्षणया वेत्यादिटीकावाक्यं दार्ष्टान्तिकपरतया योजितं भवति । अन्यथा दृष्टान्तवाक्ये विशिष्टचैतन्यैक्य-पक्षयोर्वामदेवस्य मन्वादित्वाभावाच्चैतन्यैक्यविवक्षयोक्तिरिति चेदित्यादिनोक्तत्वेन किमत्र साक्षादैक्यमुच्यते लक्षणया वेत्यादिविकल्पस्यासङ्गतत्वादिति भावः । न वा इत्यादिश्रुतावित्यादिशब्दोपात्तपार्ष्टिकवाक्यमुपपादयति – **भूरिति शिर इति** ॥

## ಸಾರ

ಲೋಕದಲ್ಲಿ 'ನಾನು' ಎಂಬರ್ಥದಲ್ಲಿ 'ಅಹಂ' ಶಬ್ದವನ್ನು ಪ್ರಯೋಗಿಸುತ್ತೇವೆ. ಆದರೆ ನಿಜವಾಗಿಯೂ 'ಅಹಂ' ಶಬ್ದದ ಯೋಗ ಮತ್ತು ರೂಢಿಗಳು ವಿಷ್ಣುವಿನಲ್ಲಿಯೇ ಇರುತ್ತವೆ. 'ಅ ಇತಿ ಬ್ರಹ್ಮ' ಇತ್ಯಾದಿ

ಶ್ರುತಿಗಳಲ್ಲಿ 'ಅಹಂ' ಶಬ್ದದ ರೂಢಿ ವಿಷ್ಣುವಿನಲ್ಲಿ ಪ್ರಸಿದ್ಧವಾಗಿವೆ. ಮತ್ತು 'ಅಹೇಯತ್ವಾದಹಂ ನಾಮಾ' ಇತ್ಯಾದಿ ಶ್ರುತಿಗಳಂತೆ ಭಗವಂತನು ಅಹೇಯನಾದ್ದರಿಂದ 'ಅಹಂ' ಶಬ್ದದಿಂದ ವಾಚ್ಯನಾಗಿದ್ದಾನೆ. ಆದರೆ 'ಪ್ರಾಣೋವಾ ಅಹಂ ಅಸ್ಮಿ' ಎಂಬಲ್ಲಿ 'ಅಹಂ' ಪದದಿಂದ ವಿಷ್ಣುವನ್ನು ನೇರವಾಗಿ ವಿವಕ್ಷಿಸಿಲ್ಲ. 'ಅಂತರ್ಯಾಮಿ' ರೂಪವನ್ನು ವಿವಕ್ಷಿಸಲಾಗಿದೆ. 'ಅಸ್ಮಿ' ಎಂಬ ಉತ್ತಮಪುರುಷಪದಪ್ರಯೋಗವೇ ಈ ಅರ್ಥವನ್ನು ಸ್ವೀಕರಿಸಲು ಕಾರಣ.

* * * *

## ಮುಖ್ಯವಾಯುವಿನ ಲಿಂಗಗಳೆಲ್ಲವೂ ಸಾವಕಾಶ

तात्पर्यचन्द्रिका

**चक्षुरादिसाहचर्यं तु सति संशये निर्णायकम् । उक्तं हि – ''विशये प्रायदर्शनात्'' इति । अत्र तूक्तलिङ्गादिना निश्चयान्न संशयः । प्राणसंवादोऽपि ''त्वमुक्थमसि त्वमिदं सर्वमसि तव वयं स्मः'' इत्युत्कर्षपर्यवसायित्वादन्तर्यामिणि विष्णौ युक्तः । एवञ्च –**

**प्राणलिङ्गादिकं यद्यप्यवकाशोज्झितं स्वतः ।**
**तथाऽप्यन्तर्यामिगततया नेतुं हि शक्यते ॥**

**''उदासीनौ च तावास्तां केशवश्चाब्जसम्भवः ।''**

**इत्यौदासीन्यं तु बाह्यरूपेण । दुःखित्वादिकं त्वन्तर्यामिणि बाधितम् ।**

ಅನುವಾದ – 'ಚಕ್ಷುಃಶ್ರೋತ್ರಂ' ಇತ್ಯಾದಿಯಾಗಿ ಚಕ್ಷುರಾದಿ ಇಂದ್ರಿಯಗಳ ಸಾಹಚರ್ಯ-ವಿರುವುದರಿಂದ ಪ್ರಾಣನು ಬ್ರಹ್ಮನಲ್ಲವೆಂಬ ಪೂರ್ವಪಕ್ಷವು ತಪ್ಪು. ಏಕೆಂದರೆ ಸಂಶಯವಿದ್ದಾಗ ಮಾತ್ರ ಸಾಹಚರ್ಯವು (ಪ್ರಾಯಪಾಠವು) ನಿರ್ಣಾಯಕವಾಗುತ್ತದೆಂದು ''ವಿಶಯೇ ಪ್ರಾಯದರ್ಶನಾತ್'' ಎಂಬಲ್ಲಿ ಹೇಳಿದ್ದಾರೆ. ಆದರೆ ಪ್ರಕೃತ ಇಲ್ಲಿಯ ತನಕ ಸಮರ್ಥಿಸಿದ ಅನೇಕ ವಿಷ್ಣುಲಿಂಗಗಳ ಬಲದಿಂದ ಸಂಶಯಕ್ಕೆ ಆಸ್ಪದವೇ ಇಲ್ಲ.

ಪ್ರಾಣಸಂವಾದಾದಿಗಳನ್ನು ಅಂತರ್ಯಾಮಿಯಾದ ವಿಷ್ಣುವಿನಲ್ಲಿಯೇ ಕೂಡಿಸಬಹುದು. ಏಕೆಂದರೆ ಕೊನೆಯಲ್ಲಿ ದೇವತೆಗಳೆಲ್ಲರೂ ''ತ್ವಮುಕ್ಥಮಸಿ ತ್ವಮಿದಂ ಸರ್ವಮಸಿ ತವ ವಯಂ ಸ್ಮಃ'' ನೀವೇ ಉತ್ಕೃಷ್ಟರಾಗಿದ್ದೀರಿ. ಇದೆಲ್ಲವೂ ನಿಮ್ಮ ಅಧೀನವೇ ಆಗಿದೆ. ನಾವೆಲ್ಲರೂ ನಿಮ್ಮ ದಾಸರಾಗಿದ್ದೇವೆ ಎಂಬುದಾಗಿ ಹೇಳಿದ್ದರಿಂದ ಈ ಎಲ್ಲಾ ಧರ್ಮಗಳು ಅಂತರ್ಯಾಮಿ ವಿಷ್ಣುವಿನಲ್ಲಿಯೇ ಮುಖ್ಯವಾಗಿ ಬರುತ್ತವೆ.

ಆದ್ದರಿಂದ ಸಿದ್ಧಾಂತದ ಸಂಗ್ರಹ ಹೀಗಿದೆ -

ಪ್ರಾಣಲಿಂಗಾದಿಕಂ ಯದ್ಯಪ್ಯವಕಾಶೋಜ್ಝಿತಂ ಸ್ವತಃ ।
ತಥಾಽಪ್ಯಂತರ್ಯಾಮಿಗತತಯಾ ನೇತುಂ ಹಿ ಶಕ್ಯತೇ ॥

ವಸ್ತುತಃ ಪ್ರಾಣನ ಲಿಂಗಗಳೆಲ್ಲವೂ ನಿರವಕಾಶಗಳಾಗಿವೆ. ಆದರೂ ಸಹ ಅಂತರ್ಯಾಮಿ ಪರವಾಗಿ ಅರ್ಥೈಸಲು ಬರುತ್ತದೆ.

"ಉದಾಸೀನೌ ಹಿ ತಾವಾಸ್ತಾಂ ಕೇಶವಶ್ಚಾಬ್ಜಸಂಭವಃ" ದೇಹಪಾತಾದಿ ಸಂದರ್ಭದಲ್ಲಿ ವಿಷ್ಣು ಹಾಗೂ ಬ್ರಹ್ಮದೇವರು ಉದಾಸೀನರಾಗಿ ಇದ್ದಾರೆಂದು ಈ ವಾಕ್ಯದಿಂದ ಕೇಳಿಸುತ್ತಿದೆ. ಇದನ್ನು ಕೇವಲ ಬಾಹ್ಯರೂಪದಿಂದಷ್ಟೇ ವಿವಕ್ಷಿಸಬೇಕು. ಮುಖ್ಯಪ್ರಾಣದೇವರ ಶರೀರದೊಳಗಿದ್ದು ಎಲ್ಲಾ ವ್ಯಾಪಾರ-ವನ್ನು ಪರಮಾತ್ಮನು ಮಾಡುತ್ತಿರುತ್ತಾನೆ.

ದುಃಖಿತ್ವಾದಿಗಳನ್ನು ಅಂತರ್ಯಾಮಿಗಳಲ್ಲಿ ಹೇಳಬೇಕಾದೀತೆಂದು ಪೂರ್ವಪಕ್ಷ ಮಾಡಿದ್ದರು. ಇದೂ ಸಹ ತಪ್ಪು. ಬಾಧಿತವಾದ್ದರಿಂದ ಅಂತರ್ಯಾಮಿಯಲ್ಲಿ ದುಃಖಿತ್ವಾದಿಗಳನ್ನು ವಿವಕ್ಷಿಸಬಾರದು.

### ಕಠಿಣಪದಾರ್ಥ

ಚಕ್ಷುರಾದಿಸಾಹಚರ್ಯಂ = ಚಕ್ಷುರಾದಿ ಇಂದ್ರಿಯಗಳ ಸಾಹಚರ್ಯವು, ವಿಶಯೇ = ಸಂಶಯವಿದ್ದಾಗ, ಉಕ್ತಲಿಂಗಾದಿನಾ = ವಿಷ್ಣುವಿನಲ್ಲಿ ಹೇಳಲ್ಪಟ್ಟ ನಿರವಕಾಶಲಿಂಗಗಳಿಂದ, ಉಕ್ಥಂ = ಉತ್ಥಾಪಕನು, ಸರ್ವಂ = ಸಕಲಪದಾರ್ಥಗಳಿಗೆ ಈಶನು. ಸ್ಮಃ = ದಾಸರಾಗಿದ್ದೇವೆ. ಉತ್ಕರ್ಷಪರ್ಯವಸಾಯಿತ್ವಾತ್ = ಸರ್ವೋತ್ಕೃಷ್ಟತ್ವದಲ್ಲಿ ಪರ್ಯವಸಾನವಾಗುವುದರಿಂದ, ಅವಕಾಶೋಜ್ಝಿತಂ = ನಿರವಕಾಶವಾಗಿದೆ, ಉದಾಸೀನೌ = ನಿರ್ವ್ಯಾಪಾರವುಳ್ಳವರು. ಅಬ್ಜಸಂಭವಃ = ಚತುರ್ಮುಖ ಬ್ರಹ್ಮದೇವರು, ಬಾಹ್ಯರೂಪೇಣ = ಅಂತರ್ಯಾಮಿಯಾದ ಬಾಹ್ಯ ರೂಪದಿಂದ.

**प्रकाशः** – एवमिन्द्रप्रापकं विष्णौ सावकाशमिति समर्थ्य वायुलिङ्गान्यपि तथेत्याह – **चक्षुरिति** ॥ यदुक्तं गोदोहनसाहचर्यात् वत्सालम्भनं गुणकर्मेतिवत् अप्रधानसाहचर्यात् प्राणोऽप्रधान इति, तन्न, वैषम्यात् । प्राणो विष्णुरन्यो वेति संशये सत्येव, साहचर्यस्य निर्णायकत्वात् । इह च निरवकाशविष्णुलिङ्गादिना निर्णयसम्भवान्नायं तन्न्यायस्य विषय इत्याह – **विशय इति** ॥ संशये सति प्रायशब्दितसाहचर्यदर्शनान्निर्णय इत्येव जैमिन्याचार्यैरुक्तमित्यर्थः। हि शब्देन मीमांसकसम्मतिमाह – 'त्वमुक्थमसि' अस्माकमुत्थापकोऽसि । अस्य सर्वस्य त्वमेवेशोऽसि, वयं तव दासाः स्मः, त्वमस्माकं स्वाम्यसीत्युत्तरवाक्यस्योत्कर्ष-पर्यवसायित्वात् स्वस्योत्तमताप्रकाशनायैव निकृष्टैः तेषु अन्तःस्थित्वा संवाद-मकरोदित्यर्थः । एतेन "लिङ्गानां तदन्तर्यामिभगवद्विषयतयोपपत्तेः" इति टीका

विवृता । ननु विष्णोः संवादादिवेलायामौदासीन्यावगतेः कथं संवादकर्तृत्वं अन्तर्यामितयाऽपीत्यत आह – **उदासीनादिति** ॥ यथोक्तं तृतीयस्कन्धतात्पर्ये सप्तविंशेऽध्याये –

**यज्ञान्तस्थः स्वयं पादौ विशन्नोत्थापयद्धरिः ।**
**शक्तोऽपि ब्रह्मवाय्वोस्तु बलज्ञप्त्यै जनार्दनः ।**
**तत्स्थ उत्थापयामास ब्रह्मदेहं विशन् प्रभुः ॥**

इति । अन्तर्यामिभिन्नप्रपदद्वाराप्रविष्टरूपाभिप्रायं, न त्वन्तर्यामिरूपविषयं, ''न ऋते त्वत्क्रियते'' इत्यादिवचनविरोधादित्यर्थः । ननु कथं चतुर्मुखस्य देहधारणादौ औदासीन्योक्तिः, अष्टमे बृहदारण्यकभाष्ये –

**प्राणं विना च ब्रह्मा तं विना प्राण एव च ।**
**अन्योन्यापाश्रयाच्छक्तौ स्थातुमन्ये कुतस्ततः॥**

इत्यादिवामनस्मृत्या प्राणस्योत्क्रमणे सति ब्रह्मणोऽवस्थान एव शक्त्यभावोक्तेरिति, मैवं, अंशेन प्राणेन सह निर्गतस्याप्यंशेन देहेऽवस्थानसम्भवात्, औदासीन्यस्य सुप्त्यर्थत्वोपपत्तेः । यथोक्तं तृतीयस्कन्धतात्पर्ये तत्रैव –

**अंशेन सुप्तो ब्रह्मा तु त्वंशेन निरगात्तथा ।**
**स्वदेहाद्वायुसहितो विष्णुना च जगत्प्रभुः ।**
**तमुत्थापयितुं देवांस्तानृते त्रीन् महाबलान् ।**
**नाशक्नुवन्नेकसंस्था स्ततस्तत्राविशंस्त्रयः ।**
**उदतिष्ठद्ब्रह्मदेहः तदा तेषां प्रभावतः ॥**

इति । नन्वेवं जीवगतदुःखसमवायित्वमपि स्यादित्युक्तमित्यत आह – **दुःखित्वेति** ॥ नहि जातिः पदार्थ इति मते 'घटोऽनित्यः' इत्यनित्यत्वं जातावन्वेतीति भावः ।

ವಿವರಣೆ - ಇಲ್ಲಿಯ ತನಕ ದೇವೇಂದ್ರನಲ್ಲಿ ಪ್ರಸಿದ್ಧವಾದ ಲಿಂಗಗಳನ್ನು ವಿಷ್ಣುವಿನಲ್ಲಿ ಸಾವಕಾಶ ಮಾಡಿದ್ದಾಯಿತು. ಪ್ರಕೃತ ಮುಖ್ಯವಾಯುವಿನಲ್ಲಿ ಪ್ರಸಿದ್ಧವಾದ ಲಿಂಗಗಳೂ ಸಹ ವಿಷ್ಣುವಿನಲ್ಲಿ ಸಾವಕಾಶವಾಗಿದೆಯೆಂದು ಸಮರ್ಥಿಸುತ್ತಿದ್ದಾರೆ.

ಅಂತಿಮಪ್ರಾಣಾಧಿಕರಣ-(೧|೧|೧೨)

ಗೋದೋಹನದ ಸಾಹಚರ್ಯದಿಂದ ವತ್ಸಾಲಂಬನವೂ ಗುಣಕರ್ಮವಾಗುತ್ತದೆ. ಅದರಂತೆ ಅಪ್ರಧಾನವಾದ ಚಕ್ಷುರಾದಿಗಳ ಸಾಹಚರ್ಯದಿಂದ ಪ್ರಾಣನೂ ಸಹ ಅಪ್ರಧಾನನಾಗುತ್ತಾನೆಂದು ಹಿಂದೆ ಪೂರ್ವಪಕ್ಷಿಯು ಆಕ್ಷೇಪಿಸಿದ್ದ. ಇದು ತಪ್ಪು. ದೃಷ್ಟಾಂತಕ್ಕೂ ದಾರ್ಷ್ಟಾಂತಿಕಕ್ಕೂ ವ್ಯತ್ಯಾಸವಿದೆ. ಪ್ರಾಣನು ವಿಷ್ಣುವು ಅಥವಾ ಬೇರೆಯವನೋ ಎಂಬ ಸಂಶಯವಿದ್ದರೆ ಮಾತ್ರ ಸಾಹಚರ್ಯವು ನಿರ್ಣಾಯಕವಾಗುತ್ತದೆ. ಆದರೆ ಪ್ರಕೃತ ನಿರವಕಾಶವಾದ ಅನೇಕ ವಿಷ್ಣುಲಿಂಗಗಳಿಂದಲೇ ನಿರ್ಣಯವನ್ನು ಮಾಡಲು ಬರುವಾಗ ಸಂಶಯಕ್ಕೆ ಅವಕಾಶವೇ ಇಲ್ಲ. ನಿಮ್ಮ ನ್ಯಾಯಕ್ಕೆ ಇಲ್ಲಿ ಪ್ರಸಕ್ತಿಯೇ ಇಲ್ಲ. 'ಸಂಶಯೇ ಸತಿ ಪ್ರಾಯಶಬ್ದಿತ ಸಾಹಚರ್ಯದರ್ಶನಾನ್ನಿರ್ಣಯಃ' - 'ಸಂಶಯ ಇದ್ದಾಗ ಮಾತ್ರ ಸಾಹಚರ್ಯದಿಂದ ನಿರ್ಣಯ ಮಾಡಬೇಕೆಂದು' ಜೈಮಿನಾಚಾರ್ಯರು ಹೇಳಿದ್ದಾರೆ. 'ಹಿ' ಶಬ್ದದಿಂದ ಮೀಮಾಂಸಕರ ಸಮ್ಮತಿಯನ್ನು ಸೂಚಿಸಿದ್ದಾರೆ. 'ತ್ವಮುಕ್ಥಮಸಿ' ನಮ್ಮೆಲ್ಲರಿಗೆ ಉತ್ಥಾಪಕನಾಗಿದ್ದೀ. ತ್ವಮಿದಂ ಸರ್ವಮಸಿ = ಈ ಎಲ್ಲಾ ಲೋಕಕ್ಕೆ ನೀನೇ ಈಶನಾಗಿದ್ದೀ. ವಯಂ ತವ ದಾಸಾಃ ಸ್ಮಃ = ನಿನಗೆ ನಾವೆಲ್ಲರೂ ದಾಸರಾಗಿದ್ದೇವೆ. ನೀನು ನಮಗೆಲ್ಲರಿಗೂ ಸ್ವಾಮಿಯಾಗಿದ್ದೀ; ಎಂಬುದಾಗಿ ಮುಂದಿನ ವಾಕ್ಯದಲ್ಲಿ ಪರಮಾತ್ಮನ ಉತ್ಕರ್ಷವು ಕೇಳಿಸುತ್ತಿದೆ. ತನಗೆ ಉತ್ತಮತ್ವವನ್ನು ತೋರಿಸುವುಕೊಳ್ಳುವುದಕ್ಕಾಗಿಯೇ ನಿಕೃಷ್ಟರಾದ ದೇವತೆಗಳ ಒಳಗೆ ನಿಂತು ಸಂವಾದವನ್ನು ಮಾಡಿದ್ದಾನೆಂದು ಇದರ ಅರ್ಥ. ಹೀಗೆ ಹೇಳಿದ್ದರಿಂದ ''ಲಿಂಗಾನಾಂ ತದಂತರ್ಯಾಮಿಭಗವದ್ವಿಷಯತಯೋಪಪತ್ತೇಃ'' ಎಂಬ ಟೀಕೆಯನ್ನು ವ್ಯಾಖ್ಯಾನಿಸಿದಂತಾಯಿತು.

ಸಂವಾದ ನಡೆಯುವ ಸಂದರ್ಭದಲ್ಲಿ ವಿಷ್ಣುವಿಗೆ ಹಾಗೂ ಚತುರ್ಮುಖಬ್ರಹ್ಮನಿಗೆ ಔದಾಸೀನ್ಯವು ತಿಳಿಯುತ್ತಿರುವುದರಿಂದ ಅಂತರ್ಯಾಮಿತ್ವೇನ ಪರಮಾತ್ಮನು ಸಂವಾದಕರ್ತೃವಾಗಿದ್ದಾನೆಂದು ಹೇಗೆ ತಾನೆ ಹೇಳುತ್ತೀರಿ? ಎಂಬ ಪ್ರಶ್ನೆಗೆ ''ಉದಾಸೀನವತ್'' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಈ ವಿಷಯದ ಬಗ್ಗೆ ತೃತೀಯಸ್ಕಂಧ ಭಾಗವತ ತಾತ್ಪರ್ಯದ ೨೭ನೇ ಅಧ್ಯಾಯದಲ್ಲಿ ಹೀಗೆ ಹೇಳಿದ್ದಾರೆ -

> ಯಜ್ಞಾಂತಸ್ಥಃ ಸ್ವಯಂ ಪಾದೌ ವಿಶನ್ನೋತ್ಥಾಪಯದ್ಧರಿಃ।
> ಶಕ್ತೋಽಪಿ ಬ್ರಹ್ಮವಾಯ್ವೋಸ್ತು ಬಲಜ್ಞಪ್ತ್ಯೈ ಜನಾರ್ದನಃ।
> ತತ್‌ಸ್ಥ ಉತ್ಥಾಪಯಾಮಸ ಬ್ರಹ್ಮದೇಹಂ ವಿಶನ್ ಪ್ರಭುಃ॥

ಸ್ವತಃ ಪಾದದಲ್ಲಿ ಪ್ರವೇಶ ಮಾಡಿದ ಯಜ್ಞಾಂತರ್ಗತನಾದ ಭಗವಂತನು ಸಮರ್ಥನಾಗಿದ್ದರೂ ದೇಹವನ್ನು ಎಬ್ಬಿಸಲಿಲ್ಲ. ಆದರೆ ಬ್ರಹ್ಮ ಹಾಗೂ ವಾಯುದೇವರ ಬಲವನ್ನು ತಿಳಿಸುವುದಕ್ಕೋಸ್ಕರ ಬ್ರಹ್ಮ ವಾಯುದೇವರ ಒಳಗಡೆ ಇದ್ದು ಆ ದೇಹವನ್ನು ಎಬ್ಬಿಸಿದನು.

ಈ ಪ್ರಮಾಣದಿಂದ ಭಗವಂತನು ಏಕೆ ಉದಾಸೀನನಾಗಿದ್ದಾನೆಂದು ಸ್ಪಷ್ಟವಾಗುತ್ತದೆ. ಅಂತರ್ಯಾಮಿ ರೂಪಕ್ಕಿಂತ ಭಿನ್ನವಾದ ಪ್ರಪದ ಎಂಬ ರೂಪದ ಮೂಲಕ ಯಜ್ಞಾಂತರ್ಗತರೂಪಕ್ಕೆ ಔದಾಸೀನ್ಯವನ್ನು ಹೇಳಲಾಗಿದೆ ಹೊರತು ಅಂತರ್ಯಾಮಿ ರೂಪದ ವಿವಕ್ಷೆಯಿಂದ ಔದಾಸೀನ್ಯವನ್ನು ಹೇಳಿಲ್ಲ. ಹಾಗೇನಾದರೂ ಅಂತರ್ಯಾಮಿ ರೂಪಕ್ಕೆ ಔದಾಸೀನ್ಯವನ್ನು ಹೇಳಿದರೆ ''ನ ಋತೇ ತ್ವತ್ಕ್ರಿಯತೇ'' ಎಂಬ ಶ್ರುತಿಯ ವಿರೋಧ ಬರುತ್ತದೆ.

ಪ್ರಶ್ನೆ - ಚತುರ್ಮುಖನಿಗೆ ದೇಹಧಾರಣಾದಿಗಳಲ್ಲಿ ಔದಾಸೀನ್ಯವನ್ನು ಏಕೆ ಹೇಳುತ್ತೀರಿ?. ಏಕೆಂದರೆ ಎಂಟನೇ ಅಧ್ಯಾಯದ ಬೃಹದಾರಣ್ಯಕಭಾಷ್ಯದಲ್ಲಿ -

ಪ್ರಾಣಂ ವಿನಾ ನಚ ಬ್ರಹ್ಮಾ ತಂ ವಿನಾ ಪ್ರಾಣ ಏವ ಚ ।
ಅನ್ಯೋನ್ಯಾಪಾಶ್ರಯಾಚ್ಛಕ್ತೌ ಸ್ಥಾತುಮನ್ಯೇ ಕುತಸ್ತತಃ ॥

ಪ್ರಾಣನನ್ನು ಬಿಟ್ಟು ಬ್ರಹ್ಮನು ಇರುವುದಿಲ್ಲ. ಬ್ರಹ್ಮನನ್ನು ಬಿಟ್ಟು ಪ್ರಾಣನು ಇರುವುದಿಲ್ಲ ಎಂದು ವಾಮನ ಪುರಾಣದ ಮಾತನ್ನು ಉದಾಹರಿಸಿದ್ದಾರೆ. ಈ ವಚನದಂತೆ ಪ್ರಾಣನಿಗೆ ಉತ್ಕ್ರಮಣವಾದರೆ, ಬ್ರಹ್ಮನಿಗೆ ದೇಹದಲ್ಲಿ ಇರಲು ಸಾಧ್ಯವೇ ಇಲ್ಲ. ಹೀಗಿರುವಾಗ ದೇಹಧಾರಣವಿಷಯದಲ್ಲಿ ಉದಾಸೀನನಾಗಿದ್ದಾನೆಂದು ಹೇಗೆ ಹೇಳಿದಿರಿ?

ಉತ್ತರ - ಒಂದು ಅಂಶದಿಂದ ಚತುರ್ಮುಖನು ಪ್ರಾಣನ ಜೊತೆಗೆ ನಿರ್ಗಮನ ಮಾಡಿದರೂ ಮತ್ತೊಂದು ಅಂಶದಿಂದ ದೇಹದಲ್ಲಿರುತ್ತಾನೆ. ಉದಾಸೀನ ಎಂಬ ಶಬ್ದಕ್ಕೆ ಸುಪ್ತನಾಗಿದ್ದಾಗ ಎಂಬರ್ಥವನ್ನು ಹೇಳಬಹುದು. (ಇಲ್ಲಿ 'ಸುಪ್ತಿ' ಎಂಬ ಶಬ್ದಕ್ಕೆ ನಿರ್ವ್ಯಾಪಾರದಿಂದ ಇದ್ದಾನೆಂದು ಅರ್ಥೈಸಬೇಕು. ಏಕೆಂದರೆ ಚತುರ್ಮುಖಬ್ರಹ್ಮದೇವರಿಗೆ ಪ್ರಲಯಕಾಲದ ಸುಷುಪ್ತಿಯ ಅವಸ್ಥೆಯೇ ಇರುವುದಿಲ್ಲ.) ಏಕೆಂದರೆ ತೃತೀಯಸ್ಕಂಧದ ತಾತ್ಪರ್ಯದಲ್ಲಿ ಹೀಗೆ ಹೇಳಿದ್ದಾರೆ -

ಅಂಶೇನ ಸುಪ್ತೋ ಬ್ರಹ್ಮಾ ತು ತ್ವಂಶೇನ ನಿರಗಾತ್ತಥಾ ।
ಸ್ವದೇಹಾದ್ವಾಯುಸಹಿತೋ ವಿಷ್ಣುನಾ ಚ ಜಗತ್ಪ್ರಭುಃ ।
ತಮುತ್ಥಾಪಯಿತುಂ ದೇವಾಂಸ್ತಾನ್ಯತೇ ತ್ರೀನ್ ಮಹಾಬಲಾನ್ ।
ನಾಶಕ್ನುವನ್ನೇಕಸಂಸ್ಥಾ ಸ್ತತಸ್ತತ್ರಾವಿಂಶಂಸ್ತ್ರಯಃ ।
ಉದತಿಷ್ಠದ್ಬ್ರಹ್ಮದೇಹಃ ತದಾ ತೇಷಾಂ ಪ್ರಭಾವತಃ ॥

ಒಂದು ಅಂಶದಿಂದ ಬ್ರಹ್ಮನು ಸುಪ್ತನಾಗಿ ದೇಹದಲ್ಲಿ ಉಳಿದು (ನಿರ್ವ್ಯಾಪಾರದಿಂದ ಇದ್ದು) ಮತ್ತೊಂದು ಅಂಶದಿಂದ ವಾಯು ಹಾಗೂ ವಿಷ್ಣುವಿನ ಜೊತೆಗೆ ದೇಹದಿಂದ ಹೊರಗೆ ಹೊರಟನು. ಈ ಮೂವರು ಬಲಿಷ್ಠರು ಹೊರಗೆ ಹೊರಟಾಗ ದೇವತೆಗಳಿಗೆ ದೇಹವನ್ನು ಎಬ್ಬಿಸಲು ಸಾಧ್ಯವಾಗಲಿಲ್ಲ. ಯಾವಾಗ ಪುನಃ ಆ ಮೂವರು ದೇಹದಲ್ಲಿ ಪ್ರವೇಶಿಸಿದರೋ ಆವಾಗ ಬ್ರಹ್ಮನ ದೇಹವು ಕುಳಿತುಕೊಂಡಿತು. ಅದ್ದರಿಂದ ಚತುರ್ಮುಖನಿಗೆ ದೇಹಧಾರಣ ವಿಷಯದಲ್ಲಿ ಔದಾಸೀನ್ಯ ಹೇಳಿದ್ದು ತಪ್ಪಲ್ಲ.

ಜೀವಾದಿಗಳಲ್ಲಿರುವ ಧರ್ಮಗಳು ಬ್ರಹ್ಮನಲ್ಲಿ ಬರುವುದಾದರೆ ದುಃಖಸಮವಾಯವೂ ಸಹ ಬ್ರಹ್ಮನಲ್ಲಿ ಬರಬೇಕಾದೀತು ಎಂಬ ಪೂರ್ವಪಕ್ಷಕ್ಕೆ 'ದುಃಖಿತ್ವಾದಿಕಂ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಯಾವ ಮತದಲ್ಲಿ ಜಾತಿಯನ್ನು ಪದಾರ್ಥವೆಂದು ಒಪ್ಪಿದ್ದಾರೋ ಅವರ ಮತದ ಪ್ರಕಾರ 'ಘಟೋಽನಿತ್ಯಃ'' ಎಂದು ಹೇಳಿದಾಗ ಅನಿತ್ಯತ್ವವು ಜಾತಿಯಲ್ಲಿ ಅನ್ವಯವಾಗುವುದಿಲ್ಲ. ಹೊರತಾಗಿ ಘಟದಲ್ಲಿಯೇ ಅನ್ವಯವಾಗುತ್ತದೆ. ಅದರಂತೆ ದುಃಖಿತ್ವದ ಅನ್ವಯವೂ ಸಹ ಅನ್ವಯಯೋಗ್ಯತಾವಿಲ್ಲದ ಕಾರಣ ವಿಷ್ಣುವಿನಲ್ಲಿ ಅನ್ವಿತವಾಗುವುದಿಲ್ಲ.

ಇಂದ್ರ ಹಾಗೂ ವಾಯುಪ್ರಾಪಕವಾದ ಲಿಂಗಗಳನ್ನು ಸಾವಕಾಶ ಮಾಡಿದ್ದಾಯಿತು. ಈಗ ಜೀವ ಪ್ರಾಪಕವಾದ ಲಿಂಗವನ್ನು ಸಾವಕಾಶ ಮಾಡುತ್ತಿದ್ದಾರೆ - 'ಶತಂ ವರ್ಷಾಣಿ' ಇತ್ಯಾದಿ ವಾಕ್ಯದಿಂದ.

ಅಂತಿಮಪ್ರಾಣಾಧಿಕರಣ-(೧।೧।೧೨)

## ಜೀವನ ಲಿಂಗಗಳೆಲ್ಲವೂ ಸಾವಕಾಶ (ಸಿದ್ಧಾಂತದ ಉಪಸಂಹಾರ)

तात्पर्यचन्द्रिका

**''तं शतं वर्षाण्यभ्यार्चत्'' इति यच्छतसंवत्सरपर्यन्तं प्राणस्य जीवशरीरेऽवस्थानं न तज्जीवलिङ्गम्, किन्तु ''तस्माच्छतं वर्षाणि पुरुषायुषो भवन्ति'' इति तद्धेतुकं शतायुष्ट्वम्। तच्च न प्राणे श्रुतम्। तस्मात् –**

**बहुत्वात् श्रुतिसाहित्यादवकाशोज्झितत्वतः।**
**बलवद्भिर्विष्णुलिङ्गैः प्राणश्रुत्यादि नीयते॥**

**तदेतदभिप्रेत्योक्तम् न्यायविवरणे – ''न चानन्यथासिद्धत्वमन्यत्र श्रुतिलिङ्गादेः, अन्यगतलिङ्गादीनामपि तद्गतभगवद्रूपापेक्षया युक्तेः'' इति।**

ಅನುವಾದ - ಜೀವಪ್ರಾಪಕವಾದ ಲಿಂಗಗಳೂ ಸಹ ಸಾವಕಾಶವಾಗಿವೆ. ಇದರಂತೆ ''ತಂ ಶತಂ ವರ್ಷಾಣ್ಯಭ್ಯಾರ್ಚತ್'' ಎಂದು ಪ್ರಾಣನಲ್ಲಿ ಕೇಳಿಸುತ್ತಿದೆ. ನೂರು ವರ್ಷಗಳ ಕಾಲ ಪ್ರಾಣನು ಜೀವಶರೀರದಲ್ಲಿರುತ್ತಾನೆಂಬ ಈ ಲಿಂಗವೂ ಸಹ ಜೀವನಲ್ಲಿ ಬರುವುದಿಲ್ಲ. ಹೊರತಾಗಿ ''ತಸ್ಮಾಚ್ಛತಂ ವರ್ಷಾಣಿ ಪುರುಷಾಯುಷೋ ಭವಂತಿ'' ನೂರುವರ್ಷಗಳ ಕಾಲ ಪರಮಾತ್ಮನು ಶರೀರದಲ್ಲಿರುತ್ತಾನಾದ್ದರಿಂದ ಜೀವನು ನೂರು ವರ್ಷಗಳ ಕಾಲ ಬದುಕುತ್ತಾನೆ ಎಂದು ಜೀವನಕ್ಕೆ ಹೇತುವಾದ ಶತಾಯುಷ್ಟ್ವವು ಜೀವನ ಲಿಂಗವಾಗಿ ಕೇಳಿಸುತ್ತಿದೆ. ಇಂತಹ ಶತಾಯುಷ್ಟ್ವಲಿಂಗವು ಪ್ರಾಣನಲ್ಲಿ ಕೇಳಿಸುತ್ತಲೇ ಇಲ್ಲ. ಆದ್ದರಿಂದ

ಬಹುತ್ವಾತ್ ಶ್ರುತಿಸಾಹಿತ್ಯಾದವಕಾಶೋಜ್ಝಿತತ್ವತಃ।
ಬಲವದ್ಭಿರ್ವಿಷ್ಣುಲಿಂಗೈಃ ಪ್ರಾಣಶ್ರುತ್ಯಾದಿ ನೀಯತೇ॥

ಪರಮಾತ್ಮನ ಲಿಂಗಗಳು ಬಹುವಾದ್ದರಿಂದ ಶ್ರುತಿಸಾಹಿತ್ಯವಿರುವುದರಿಂದ ಮತ್ತು ನಿರವಕಾಶವಾದ್ದರಿಂದ ವಿಷ್ಣುವಿನ ಲಿಂಗಗಳು ಬಲಿಷ್ಠವಾಗಿವೆ. ಇವುಗಳಿಗೆ ಅನುಸಾರಿಯಾಗಿ ಪ್ರಾಣಶ್ರುತ್ಯಾದಿಗಳನ್ನು ಅರ್ಥೈಸಬೇಕು.

ಈ ಅಭಿಪ್ರಾಯದಿಂದಲೇ ನ್ಯಾಯವಿವರಣದಲ್ಲಿ ''ನ ಚಾನ್ಯಥಾಸಿದ್ಧತ್ವಮನ್ಯತ್ರ ಶ್ರುತಿಲಿಂಗಾದೇಃ, ಅನ್ಯಗತಲಿಂಗಾದೀನಾಮಪಿ ತದ್ಗತಭಗವದ್ರೂಪಾಪೇಕ್ಷಯಾ ಯುಕ್ತೇಃ'' ಮುಖ್ಯಪ್ರಾಣಾದಿಗಳಲ್ಲಿ ಶ್ರುತಿಲಿಂಗಾದಿಗಳು ಅನ್ಯಥಾಸಿದ್ಧವಾಗಿ ನಿರ್ಣಯವಾಗಿಲ್ಲ. ಅವರಲ್ಲಿ ಪ್ರಸಿದ್ಧವಾಗಿರುವ ಲಿಂಗಗಳೆಲ್ಲವನ್ನು ಅವರವರ ಅಂತರ್ಯಾಮಿಯಾದ ಭಗವದ್ರೂಪದ ಅಪೇಕ್ಷೆಯಿಂದ ಕೂಡಿಸಬೇಕು ಎಂದು ಹೇಳಿದ್ದಾರೆ.

ಪರಿಪೂರ್ಣಚಂದ್ರಿಕಾ

**ಕಠಿಣಪದಾರ್ಥ**

ತತ್ = ಪ್ರಾಣನ ಅವಸ್ಥಾನವು, ತದ್ಧೇತುಕಂ = ನೂರುವರ್ಷಗಳ ಅವಸ್ಥಾನಕ್ಕೆ ನಿಮಿತ್ತವಾದ, ತಸ್ಮಾತ್ = ಬ್ರಹ್ಮಶ್ರುತಿ ಸಾಹಿತ್ಯವಿರುವುದರಿಂದ, ತದ್ದೇತುಕಂ = ಭಗವಂತನಿಗಿಂತ ಅನ್ಯವಿಷಯವಾದ ಶ್ರುತ್ಯಾದಿಗಳನ್ನು, ಅನನ್ಯಥಾಸಿದ್ಧತ್ವಂ = ನಿರಕವಾಶತ್ವವು, ಅನ್ಯಗತ = ಇಂದ್ರಾದಿಗಳಲ್ಲಿರುವ.

**प्रकाशः** – इदानीं जीवप्रापकमन्यथयति – **शतमिति** ॥ 'इमं लाकं' इत्यस्यार्थः – **जीवशरीर इति** ॥ 'तद्धेतुकं' प्राणस्य शतवर्षपर्यन्तं शरीरे अवस्थाननिमित्तकमित्यर्थः । सिद्धान्तमुपसंहरन् सङ्गृह्णाति **तस्मादिति** ॥ ब्रह्मश्रुतिसाहित्यादित्यर्थः । इयता प्रपञ्चितमन्यलिङ्गानां निरवकाशत्वमुपेत्य पूर्वपक्षकरणं, सिद्धान्ते च भगवलिङ्गानां निरवकाशत्वं, अन्यलिङ्गानां विष्णुनिष्ठत्वं च टीकोक्तं आचार्यवाक्यारूढं करोति – **तदेतदिति** ॥ 'अन्यत्र' भगवतोऽन्यविषयस्य श्रुत्यादेः । 'अनन्यथासिद्धत्वं' निरवकाशत्वम् । आदिपदेन ''प्राणो वा अहमस्मि'' इति वाक्यं गृह्यते । इति नच वाच्यमित्यर्थः ।

कुत एतदित्यत उक्तं – **अन्यगतेति** । इन्द्रादिगतानामप्यहंशब्दादीना मुख्यतस्तदन्तर्यामिभगवत्सम्बन्धित्वात्तदपेक्षया सावकाशत्वादिति । प्राक् 'श्रुतिलिङ्गादेः' इत्युक्तं, तदेतत्प्राबल्यापेक्षया । इदानीं 'लिङ्गादीनां' इति वचनं लिङ्गनिरवकाशतयैव श्रुत्यादिनिरवकाशतापूर्वपक्षसूचनार्थम् । अत एव पूर्वं श्रुतेः सावकाशत्वमाशङ्क्य; वृत्रहन्तृत्वादिलिङ्गवशेनैव श्रुतिरुज्जीवितेति ध्येयम् ।

ವಿವರಣೆ - ''ಇಮಂ ಲೋಕಂ'' ಎಂಬ ಶಬ್ದಕ್ಕೆ ಜೀವಶರೀರಂ ಎಂದರ್ಥ. ಜೀವನ ಶರೀರಕ್ಕೆ ಹೇತುವಾದದ್ದು. ಮುಖ್ಯಪ್ರಾಣನು ನೂರು ವರ್ಷಗಳ ಪರ್ಯಂತ ಶರೀರದಲ್ಲಿರುವಿಕೆಯು. ಅದಕ್ಕೆ ನಿಮಿತ್ತವಾದದ್ದು ಎಂದರ್ಥ. ಸಿದ್ಧಾಂತವನ್ನು ಉಪಸಂಹಾರ ಮಾಡುತ್ತಾ ಶ್ಲೋಕದಿಂದ ಸಂಗ್ರಹಿಸಿದ್ದಾರೆ 'ತಸ್ಮಾದ್' ಇತ್ಯಾದಿಯಾಗಿ.

ಇಲ್ಲಿಯ ತನಕ ಇಂದ್ರಾದಿ ಪ್ರಾಪಕವಾದ ಲಿಂಗಗಳಿಗೆ ನಿರವಕಾಶತ್ವವನ್ನು ಅಂಗೀಕರಿಸಿ ಪೂರ್ವಪಕ್ಷವನ್ನು ಮಾಡಿದರೂ ಸಹ ಸಿದ್ಧಾಂತದಲ್ಲಿ ವಿಷ್ಣುಲಿಂಗಗಳಿಗೆ ನಿರವಕಾಶತ್ವವನ್ನು ಸಮರ್ಥಿಸಿ ಇಂದ್ರಾದಿ ಲಿಂಗಗಳನ್ನು ವಿಷ್ಣುವಿನಲ್ಲಿ ಸಾವಕಾಶ ಮಾಡಿದರು. ಈ ಎಲ್ಲಾ ವ್ಯಾಖ್ಯಾನವನ್ನು ಟೀಕೆಯಲ್ಲಿಯೇ ಹೇಳಿದಂತೆ. ಆಚಾರ್ಯರ ವಾಕ್ಯದಲ್ಲಿ ಸಮನ್ವಯ ಮಾಡುತ್ತಿದ್ದಾರೆ 'ತದೇತದ್' ಇತ್ಯಾದಿಯಾಗಿ. ಅನ್ಯತ್ರ ಎಂಬ ಪದಕ್ಕೆ ಭಗವಂತನಿಂದ ಅನ್ಯರಾದ ಇಂದ್ರಾದಿ ವಿಷಯಕವಾದ ಶ್ರುತ್ಯಾದಿಗಳಿಗೆ ಎಂದರ್ಥ. ಆದಿ ಪದದಿಂದ ''ಪ್ರಾಣೋ ವಾ ಅಹಮಸ್ಮಿ'' ಎಂಬ ವಾಕ್ಯವನ್ನು ಸ್ವೀಕರಿಸಬೇಕು. 'ಇತಿ ನಚ ವಾಚ್ಯಮ್' ಎಂದು ಅನ್ವಯ.

ಅಂತಿಮಪ್ರಾಣಾಧಿಕರಣ-(೧।೧।೧೨)

ಹೀಗೇಕೆ ಒಪ್ಪಬೇಕು? ಎಂದರೆ 'ಅನ್ಯಗತ ಲಿಂಗಾದಿನಾಮಪಿ' ಎಂದು ಉತ್ತರಿಸಿದ್ದಾರೆ. ಇಂದ್ರಾದಿಗಳಲ್ಲಿರುವ ಅಹಂ ಶಬ್ದಾದಿಗಳಿಗೆ ಮುಖ್ಯವಾಗಿ ಅಂತರ್ಯಾಮಿಯಾದ ಭಗವದ್ರೂಪವೆಂದು ಅರ್ಥೈಸಬೇಕು. ಆವಾಗ ಆ ಭಗವದ್ರೂಪವಿವಕ್ಷೆಯಿಂದ ಇಂದ್ರಾದಿಗಳಲ್ಲಿರುವ ಲಿಂಗಗಳೆಲ್ಲವೂ ಸಾವಕಾಶವಾಗುತ್ತವೆಂದು ಇದರ ಅಭಿಪ್ರಾಯ.

ಶ್ರೀಮದಾಚಾರ್ಯರ ನ್ಯಾಯವಿವರಣದ ಈ ಮಾತಿನಲ್ಲಿ ಮೊದಲು 'ಶ್ರುತಿಲಿಂಗಾದೇಃ' ಎಂದು ಹೇಳಿದ್ದಾರೆ. ಅನಂತರ 'ಲಿಂಗಾದೀನಾಂ' ಎಂದಿದ್ದಾರೆ. ಹೀಗೇಕೆ ಪ್ರಯೋಗಿಸಿದ್ದಾರೆ? ಎಂದರೆ ಶ್ರುತಿಯು ಪ್ರಬಲವಾದ್ದರಿಂದ ಮೊದಲು ಶ್ರುತಿಶಬ್ದವನ್ನು ಉಪಯೋಗಿಸಿ 'ಶ್ರುತಿಲಿಂಗಾದೇಃ' ಎಂದು ಹೇಳಿದರು. ಪೂರ್ವಪಕ್ಷದಲ್ಲಿ ಲಿಂಗವು ನಿರವಕಾಶವಾದ್ದರಿಂದ ಶ್ರುತಿಯನ್ನು ಸಾವಕಾಶ ಮಾಡಿ ಆಕ್ಷೇಪಿಸಲಾಗಿದೆ. ಇದನ್ನು ಸೂಚನೆ ಮಾಡುವುದಕ್ಕೋಸ್ಕರ 'ಲಿಂಗಾದೀನಾಂ' ಎಂಬಲ್ಲಿ ಲಿಂಗಪದವನ್ನು ಬಳಸಿದ್ದಾರೆ. ಅದರಂತೆ ಗ್ರಂಥಕಾರರೂ ಸಹ ಮೊದಲು ಶ್ರುತಿಗೆ ಸಾವಕಾಶತ್ವವನ್ನು ಆಶಂಕಿಸಿ ವೃತ್ರಹಂತೃತ್ವಾದಿ ಲಿಂಗಗಳ ಬಲದಿಂದಲೇ ಶ್ರುತಿಯನ್ನು ಉಜ್ಜೀವನ ಮಾಡಿದ್ದಾರೆ. ಈ ಸೂಕ್ಷ್ಮವನ್ನು ಗಮನಿಸಬೇಕು.

### ಸಾರ

ಜೀವಪ್ರಾಪಕವಾದ ಲಿಂಗಗಳೂ ಸಹ ಸಾವಕಾಶವಾಗಿವೆ. ಏಕೆಂದರೆ ಜೀವನ ಶರೀರದಲ್ಲಿ ನೂರು ವರ್ಷಗಳ ಕಾಲ ಪ್ರಾಣನು ಇರುತ್ತಾನೆಂಬುದು ಜೀವನ ಲಿಂಗವಲ್ಲ; ಹೊರತು ಅದಕ್ಕೂ ಕಾರಣವಾದ ಶತಾಯುಷ್ಟ್ವ ಎಂಬುದು ಜೀವನ ಲಿಂಗವಾಗಿದೆ. ಆದರೆ ಈ ಲಿಂಗವು ಮುಖ್ಯಪ್ರಾಣನಲ್ಲಿ ಕೇಳಿಸುತ್ತಿಲ್ಲ. ಆದ್ದರಿಂದ ಇಂದ್ರಪ್ರಾಪಕವಾದ ಲಿಂಗಗಳು, ಮುಖ್ಯವಾಯುಪ್ರಾಪಕವಾದ ಲಿಂಗಗಳು, ಜೀವಪ್ರಾಪಕವಾದ ಲಿಂಗಗಳೆಲ್ಲವೂ ಸಾವಕಾಶಗಳೇ ಆಗಿವೆ. ಆದರೆ ವಿಷ್ಣುವಿನ ಲಿಂಗಗಳೆಲ್ಲವೂ ನಿರವಕಾಶಗಳಾದ್ದರಿಂದ ಭಗವಂತನೇ ಐತರೇಯದಲ್ಲಿರುವ ಪ್ರಾಣಶಬ್ದದಿಂದ ವಾಚ್ಯನಾಗಿದ್ದಾನೆ. ಇಲ್ಲಿಗೆ ನಮ್ಮ ಪ್ರಕಾರ ಸಿದ್ಧಾಂತ ಸ್ಥಾಪನೆಯು ಮುಕ್ತಾಯವಾಯಿತು.

* * * *

## ಸೂತ್ರಗಳ ವಿನ್ಯಾಸ ಕ್ರಮ

ताात्पर्यचन्द्रिका

**सूत्रक्रमस्तु – आद्ये स्वपक्षहेतूक्तिः । तस्य च ''तद्वै त्वं प्राणः'' इत्यत्र यथा प्राणो विष्णुस्तथाऽत्रापि प्राणो विष्णुः, तत् श्रुतिलिङ्गानामस्मिन् प्रकरणे बहुस्थलेष्वनुगमादित्यर्थः । एवञ्च – ''तद्वै त्वं प्राणः'' इति श्रुताविव इति टीकायाः ''तथाशब्दः समुच्चयार्थः'' इति टीकया सह न विरोधः ।**

**द्वितीये 'प्राणो वा अहम्' इति इन्द्रप्रयुक्ताहंशब्दरूपबाधकोद्धारः । तत्राध्यात्म-सम्बन्धभूमशब्दस्य यदा ''प्राणस्त्वं'' इत्यादिभाष्यानुसारेण अध्यात्मशब्दस्य**

देहार्थत्वस्वीकारेण भगवद्देहभूतेन्द्रविश्वामित्रादिबह्वात्म-सम्बन्धोऽर्थः, 'अस्मिन्' इत्यस्य चैतत्प्रकरणे इत्यर्थः, तदेन्द्रे भगवतस्सत्त्वात्तदभिप्रायेण "प्राणो वा अहं" इत्युक्तिः । अन्यथाऽस्मिन्नेव प्रकरणे "प्राणस्त्वं प्राणः सर्वाणि भूतानि" इति न स्यात्, पूर्वपक्षेऽपि विश्वामित्रादेः प्राणत्वाभावादिति परिहारार्थः । अत एव सूत्रे भूमपदं, भाष्येऽपि "प्राणस्त्वं" इत्यादेरुपादानम् ।

यदा त्वध्यात्मसम्बन्धशब्देन आवेशो विष्णोरिन्द्रे विवक्षितः, "अधिकात्मनः परमात्मनः सम्बन्धो ह्यध्यात्मसम्बन्धः" इत्यैतरेयभाष्यानुसारेण भगवतस्सन्निधान-विशेषोऽध्यात्मसम्बन्धभूमशब्दार्थः, "अस्मिन्" इत्यस्य च इन्द्रे इत्यर्थः, तदेन्द्रे तात्कालिकभगवत्सन्निधानविशेषाभिप्रायेण "प्राणो वा अहं" इत्युक्तिरित्यर्थः । एतच्च एतरेयभाष्योदाहृतात् –

आविष्टो विष्णुनाऽथेन्द्रः प्राणेन सह कौशिकम् ।

इत्यादिब्रह्माण्डवाक्यादवगन्तव्यम् । तृतीये तु तर्हि मयीति स्यादितीदं बाधकोद्धारे यद्बाधकं तदुद्धारः । तत्र च शास्त्रपदं ब्रह्मणः सर्वशास्तृत्वात् तत्तच्छब्दवाच्यता युक्तेति दर्शयितुम् । अत एव भाष्ये –

तत्तन्नाम्नोच्यते विष्णुः सर्वशास्तृत्वहेतुतः ।

इति स्मृतिरुदाहृता । चतुर्थे जीवादिलिङ्गं तदन्तर्यामिनिष्ठमित्यस्यार्थस्य तृतीयेनेन्द्रप्रयुक्ताहंशब्दस्यान्तर्यामिविषयत्वं वदतोक्तप्रायत्वात् तदनुक्त्वाऽन्तर्यामि-कथनं कस्मादिति शङ्कायामन्तरादिभेदेनोपासात्रैविध्यादित्येवोक्तम् ।

ಸೂತ್ರಗಳ ಕ್ರಮ ಹೀಗಿದೆ - 'ಪ್ರಾಣಸ್ತಥಾನುಗಮಾತ್' ಎಂಬ ಪ್ರಥಮ ಸೂತ್ರದಲ್ಲಿ ಸ್ವಪಕ್ಷ-ಸಾಧಕವಾದ ಹೇತುವನ್ನು ಹೇಳಿದ್ದಾರೆ. ತಥಾ = 'ತದ್ವೈ ತ್ವಂ ಪ್ರಾಣಃ' ಎಂಬಲ್ಲಿ ಯಾವರೀತಿಯಾಗಿ ಪ್ರಾಣಶಬ್ದದಿಂದ ವಿಷ್ಣುವು ವಾಚ್ಯವಾಗಿದ್ದಾನೋ ಅದೇ ರೀತಿಯಾಗಿ ಇಲ್ಲಿಯೂ ಸಹ ಪ್ರಾಣಶಬ್ದದಿಂದ ವಿಷ್ಣುವೇ ವಾಚ್ಯನಾಗಿದ್ದಾನೆ. ಏಕೆಂದರೆ ತಥಾನುಗಮಾತ್ = ವಿಷ್ಣುವಿನ ಶ್ರುತಿ ಹಾಗೂ ವಿಷ್ಣುವಿನ ಲಿಂಗಗಳು ಈ ಪ್ರಕರಣದಲ್ಲಿ ಅನೇಕ ಕಡೆ ಕೇಳಿಬರುತ್ತಿವೆ ಎಂದು ಸೂತ್ರಾರ್ಥ. ಆದ್ದರಿಂದ 'ತದ್ವೈ ತ್ವಂ ಪ್ರಾಣಃ ಇತಿ ಶ್ರುತಾವಿವ' ಎಂಬ ಟೀಕೆಯಿಂದ "ತಥಾಶಬ್ದಃ ಸಮುಚ್ಚಯಾರ್ಥಃ' ಎಂಬ ಟೀಕೆಯಿಂದಲೂ ವಿರೋಧ ಬರುವುದಿಲ್ಲ. ಏಕೆಂದರೆ 'ತಥಾ' ಶಬ್ದಕ್ಕೆ 'ದೃಷ್ಟಾಂತ'ವೆಂದು ಮತ್ತು 'ಸಮುಚ್ಚಯ'ವೆಂದು ಎರಡರ್ಥವನ್ನು ಹೇಳಿದ್ದರಿಂದ.

ಅಂತಿಮಪ್ರಾಣಾಧಿಕರಣ-(೧।೧।೧೨)

'ನ ವಕ್ತುಃ ಆತ್ಮೋಪದೇಶಾತ್ ಇತಿಚೇತ್ ಅಧ್ಯಾತ್ಮಸಂಬಂಧಭೂಮಾ ಅಸ್ಮಿನ್' ಎಂಬ ಎರಡನೆಯ ಸೂತ್ರದಲ್ಲಿ ''ಪ್ರಾಣೋ ವಾ ಅಹಂ'' ಎಂಬುದಾಗಿ ಇಂದ್ರನಿಂದ ಪ್ರಯುಕ್ತವಾದ 'ಅಹಂ' ಶಬ್ದವೆಂಬ ಬಾಧಕವನ್ನು ಪರಿಹರಿಸುತ್ತಿದ್ದಾರೆ. ಅದು ಹೀಗೆ - ಈ ಸೂತ್ರದಲ್ಲಿ 'ಅಧ್ಯಾತ್ಮಸಂಬಂಧಭೂಮಾ' ಎಂಬ ಶಬ್ದಕ್ಕೆ 'ಪ್ರಾಣಸ್ತ್ವಂ' ಇತ್ಯಾದಿ ಭಾಷ್ಯಾನುಸಾರಿಯಾಗಿ 'ಅಧ್ಯಾತ್ಮ' ಎಂಬ ಶಬ್ದಕ್ಕೆ ದೇಹವೆಂಬರ್ಥವನ್ನು ಸ್ವೀಕರಿಸಲಾಗಿದೆ. ಆವಾಗ ಪರಮಾತ್ಮನಿಗೆ ದೇಹಭೂತರಾದ ಇಂದ್ರ, ವಿಶ್ವಾಮಿತ್ರ ಮೊದಲಾದ ಅನೇಕ ಜೀವರ ಸಂಬಂಧವು ಪರಮಾತ್ಮನಿಗಿದೆ ಎಂದಂತಾಯಿತು. ಅಸ್ಮಿನ್ = ಈ ಪ್ರಕರಣದಲ್ಲಿ ಎಂದು ಇದರ ಅರ್ಥ. ಹೀಗೆ ಸೂತ್ರಾರ್ಥವನ್ನು ಹೇಳಿದಾಗ ಇಂದ್ರನಲ್ಲಿ ಭಗವಂತನು ಇದ್ದಾನೆಂದು ತಿಳಿಯುತ್ತದೆ. ಈ ಅಭಿಪ್ರಾಯದಿಂದ ದೇವೇಂದ್ರನು 'ಪ್ರಾಣೋ ವಾ ಅಹಂ' ಎಂದು ಹೇಳಿದ್ದಾನೆ. ಇಲ್ಲದಿದ್ದರೆ, 'ಅಹಂ' ಶಬ್ದಕ್ಕೆ ಅಂತರ್ಯಾಮಿ ಎಂದು ಹೇಳದಿದ್ದರೆ ಇದೇ ಪ್ರಕರಣದಲ್ಲಿ ಕೇಳಿಸುತ್ತಿರುವ, ''ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ'' ಎಂಬ ಮುಂದಿನ ವಾಕ್ಯದಿಂದ ಅನುಪಪತ್ತಿ ಬರುತ್ತದೆ. ಏಕೆಂದರೆ ಪೂರ್ವಪಕ್ಷದಲ್ಲಿಯೂ ಸಹ ವಿಶ್ವಾಮಿತ್ರಾದಿಗಳಿಗೆ ಪ್ರಾಣತ್ವವನ್ನು ಒಪ್ಪಲು ಸಾಧ್ಯವಿಲ್ಲ. ಆದ್ದರಿಂದಲೇ ಸೂತ್ರದಲ್ಲಿ ''ಭೂಮಾ'' ಎಂಬ ಪದವನ್ನು ಬಳಸಿದ್ದಾರೆ. ಎಲ್ಲಾ ಜೀವರ ಸಂಬಂಧವು ಪರಮಾತ್ಮನಿಗಿರುವುದರಿಂದ ವಿಪಕ್ಷೀಯ ಬಾಧಕವನ್ನು 'ಭೂಮಾ' ಎಂಬ ಪದದಿಂದ ಪರಿಹರಿಸಿದ್ದಾರೆ. ಇದೇ ಕಾರಣಕ್ಕಾಗಿ ಭಾಷ್ಯದಲ್ಲಿಯೂ ಸಹ 'ಪ್ರಾಣಸ್ತ್ವಂ' ಎಂದು ಹೇಳಿದ್ದಾರೆ.

ಒಂದು ವೇಳೆ ಅಧ್ಯಾತ್ಮಶಬ್ದದಿಂದ ವಿಷ್ಣುವಿನ ಆವೇಶವು ಇಂದ್ರನಲ್ಲಿದೆ ಎಂದು ವಿವಕ್ಷಿತವಾಗಿ ಇಂದ್ರನು 'ಅಹಂ' ಎಂದು ಹೇಳುವುದಾದರೆ ಆವಾಗ 'ಭೂಮಾ' ಎಂಬ ಶಬ್ದಕ್ಕೆ ಬೇರೆ ಅರ್ಥವನ್ನು ಮಾಡಬೇಕು. ''ಅಧಿಕಾತ್ಮನಃ ಪರಮಾತ್ಮನಃ ಸಂಬಂಧೋ ಹ್ಯಧ್ಯಾತ್ಮಸಂಬಂಧಃ'' ಶ್ರೇಷ್ಠನಾದ ಪರಮಾತ್ಮನ ಸನ್ನಿಧಾನವಿಶೇಷವು ಅಧ್ಯಾತ್ಮಸಂಬಂಧ ಎನಿಸುತ್ತದೆಂಬ ಐತರೇಯ ಭಾಷ್ಯಕ್ಕೆ ಅನುಸಾರಿಯಾಗಿ ಭಗವಂತನ ಸನ್ನಿಧಾನವಿಶೇಷವೇ 'ಅಧ್ಯಾತ್ಮಸಂಬಂಧಭೂಮಾ' ಎಂಬ ಶಬ್ದದ ಅರ್ಥವಾಗಿದೆ. ಈ ಅರ್ಥದಲ್ಲಿ 'ಅಸ್ಮಿನ್' ಎಂಬ ಪದಕ್ಕೆ 'ಇಂದ್ರನಲ್ಲಿ' ಎಂದು ಅರ್ಥ. ಇಂದ್ರನಲ್ಲಿ ಭಗವಂತನ ತಾತ್ಕಾಲಿಕವಾಗಿ ಸನ್ನಿಧಾನವಿರುವುದರಿಂದ ಅದನ್ನು ವಿವಕ್ಷಿಸಿ ದೇವೇಂದ್ರನು ''ಪ್ರಾಣೋ ವಾ ಅಹಂ'' ಎಂದು ಹೇಳಿದ್ದಾನೆ ಎಂದು ಸೂತ್ರಾರ್ಥ. ಈ ಅರ್ಥವನ್ನು ಐತರೇಯ ಭಾಷ್ಯದಲ್ಲಿ ಉದಾಹರಿಸಿದ ''ಆವಿಷ್ಟೋ ವಿಷ್ಣುನಾऽಥೇಂದ್ರಃ ಪ್ರಾಣೇನ ಸಹ ಕೌಶಿಕಮ್'' ದೇವೇಂದ್ರನು ವಿಷ್ಣುವಿನಿಂದ ಹಾಗೂ ಪ್ರಾಣನಿಂದ ಆವಿಷ್ಟನಾಗಿದ್ದಾನೆಂಬ ಬ್ರಹ್ಮಾಂಡಪುರಾಣದ ಮಾತಿನಿಂದ ತಿಳಿಯಬೇಕು.

'ಶಾಸ್ತ್ರದೃಷ್ಟ್ಯಾತೂದೇಶೋ ವಾಮದೇ ವವತ್' ಎಂಬುದು ಮೂರನೇ ಸೂತ್ರ. ಹಿಂದಿನ ಸೂತ್ರದ ಪ್ರಕಾರ 'ಅಹಂ' ಎಂಬ ಶಬ್ದದ ಬದಲು 'ಮಯಿ' ಎಂದು ಹೇಳಬೇಕಿತ್ತಲ್ಲವೇ? ಎಂಬುದರ ಬಾಧಕೋದ್ಧಾರ ವಿಷಯದಲ್ಲಿ ಯಾವ ಬಾಧಕಬರುತ್ತದೋ ಅದನ್ನು ಪರಿಹರಿಸಿದ್ದಾರೆ. ಈ ಸೂತ್ರದಲ್ಲಿರುವ ಶಾಸ್ತ್ರಪದಕ್ಕೆ ಬ್ರಹ್ಮನು ಸಕಲ ನಿಯಾಮಕನಾದ್ದರಿಂದ, ಶಾಸ್ತ್ರ ಎನಿಸಿದ್ದಾನೆಂದು ಅರ್ಥ. ಆದ್ದರಿಂದಲೇ ಭಾಷ್ಯದಲ್ಲಿ ''ತತ್ತನ್ನಾಮ್ನೋಚ್ಯತೇ ವಿಷ್ಣುಃ ಸರ್ವಶಾಸ್ತ್ಯತ್ವಹೇತುತಃ'' ಎಂಬ ಶ್ರುತಿ ಉದಾಹರಿಸಿದ್ದಾರೆ.

'ಜೀವಮುಖ್ಯಪ್ರಾಣಲಿಂಗಾತ್' ಎಂಬ ನಾಲ್ಕನೇ ಸೂತ್ರದಲ್ಲಿ ಜೀವಾದಿ ಲಿಂಗವು ಅಂತರ್ಯಾಮಿಯಲ್ಲಿ ಬರುತ್ತದೆಂದು ಸಮರ್ಥಿಸಿದ್ದಾಯಿತು. ಇಂದ್ರಪ್ರಯುಕ್ತವಾದ 'ಅಹಂ' ಶಬ್ದಕ್ಕೆ ಅಂತರ್ಯಾಮಿವಿಷಯತ್ವವನ್ನು ಹೇಳಿದ್ದರಿಂದಲೇ ಮೂರನೆಯ ಸೂತ್ರದಲ್ಲಿ ಅಂತರ್ಯಾಮಿ-ನಿಷ್ಠತ್ವವನ್ನು ಹೇಳಿದಂತಾಯಿತು. ಆದ್ದರಿಂದ ಸಾಕ್ಷಾತ್ತಾಗಿ ಪರಮಾತ್ಮನನ್ನೇ ಹೇಳದೆ ಅಂತರ್ಯಾಮಿ-ಯಾಗಿ ಅವನನ್ನು ಏಕೆ ಹೇಳಿದ್ದು? ಎಂಬ ಪ್ರಶ್ನೆಗೆ ಮೂರುವಿಧ ಉಪಾಸನೆಗೋಸ್ಕರವೆಂದು ಉತ್ತರಿಸಲಾಗಿದೆ.

**प्रकाशः** – हेतूक्तिमेव विवृणोति – **तस्येति** ॥ **श्रुतीति** ॥ ''**ब्रह्मेमं पुरुषं**'' इत्यादिब्रह्मश्रुतिर्देवोपदेश्यत्वादीनि लिङ्गानि । अनुगमात् अनुवृत्तेरभ्यासादिति यावत् ॥ **न विरोध इति** ॥ एकार्थत्वादिति भावः । ''न वक्तुः'' इत्यत्र टीकायां परिहार-द्वयस्योक्तत्वात् तन्मूलं वदन् परिहारद्वयं स्फुटयति – **तत्रेति** ॥ ''प्राणस्त्वं प्राणः सर्वाणि भूतानि'' इति बह्वाध्यात्मसम्बन्धो ह्यत्र विद्यते'' इति सूत्रभाष्यानु-सारेणेत्यर्थः । 'बहु' इति भूमशब्दार्थः ॥ **तदेति** ॥ विष्णोस्सर्वत्र सत्त्वेन ''प्राणस्त्वं'' इत्यादिसम्भवादिति भावः । 'अन्यथा' स्वगतविष्ण्वभिप्रायाभावे । **यदा त्विति** ॥ ''अध्यात्मसम्बन्धशब्देनाऽऽवेशो विष्णोरिन्द्रे विवक्षितः । भगवता अन्येष्वन्तर्यामिरूपेण सम्बन्धोऽस्त्येव । तस्मिन्निन्द्रे तु विशेषावेशस्तात्कालिकः । अधिकात्मनः परमात्मनः' इत्यैतरेयभाष्यानुसारेणेत्यर्थः ॥ **एतच्चेति** ॥ तात्कालिक -सन्निधानविशेषाभिप्रायेण उक्तमित्येतदित्यर्थः ।

**आविष्टो विष्णुनाऽथेन्द्रो वायुना सह कौशिकम् ।**
**शंसेत्युक्त्वा निषण्णोऽभूदिदमन्नं तवेति सः॥**
**ऋक्सहस्रं शशंसाथ यज्ञाङ्गत्वेन भक्तितः ।**
**तत् श्रुत्वा तुष्टिमगमत्केशवो वायुसंयुतः ॥**
**द्वितीयवारं शंसेति प्राह तं च जनार्दनः ।**
**प्रीतये शक्रमाविष्टो विश्वामित्रः शशंस तत्॥**
**अतिप्रियत्वाद् भगवान् पुनरप्याह कौशिकम् ।**
**तृतीयं च शशंसासौ विष्णोरन्यं प्रकल्प्य तत् ॥**
**ततोऽतितुष्टो भगवान् ददामि वरमुत्तमम् ।**
**ऊचे स प्रथमे त्वेव निजसालोक्यमीश्वरः ॥**

प्रादाद्वितीये सामीप्यं तृतीये पुनरेव च ।
वरं ददामीत्युक्तस्स मुनिः प्राह जनार्दनम् ॥
सम्यक्त्वामेव जानीयामिति मोक्षे सुखोच्चताम् ।
इच्छंस्तं प्राह भगवान् इन्द्रस्थो वायुसंयुतः ॥
सर्वनामाऽहमस्म्येक इति ज्ञानं ममोत्तमम् ।
यस्मात् सर्वगुणत्वं स्यात् सर्वनामत्व एव तु ॥

इत्यादिनेत्यर्थः ॥ तृतीय इति ॥ ''शास्त्रदृष्ट्या'' इत्यत्रेत्यर्थः । यदि स्वगत-विष्ण्वभिप्रायेण 'प्राणोऽहं' इत्युक्तिः, तर्हि 'रथे देवः' इतिवत् 'मयि प्राणः' इति स्यादिति यद्बाधकमित्यर्थः । तदुद्धारप्रकारं सूत्रपदेन दर्शयति – तत्रेति ॥

चतुर्थे जीवादिलिङ्गात् तत्प्राप्तिशङ्कायां सत्यां तल्लिङ्गस्यान्यथासिद्धिमनुक्त्वा प्रयोजनोक्तिरयुक्तेत्यत आह – चतुर्थ इति ॥ उक्तप्रायत्वादिति ॥ ननु कथं तर्हि परिहारे कृतेऽपि पुनरत्र शङ्केति चेन्मैवं, प्राणसंवादादिलिङ्गानामन्तर्यामिनिष्ठता न वक्तुं युक्ता, तस्य तदानीमौदासीन्यावगतेः, तथोक्तौ प्रयोजनाभावाच्चेति विशेष-शङ्कोपपत्तेः ।

अत एव टीकायां – ''उदासीनौ च तावास्तां'' इति वचनमुदाहृतम् । परि-हारस्तु – बाह्यरूपाभिप्रायेण वचनं नेयम् । प्रयोजनाभावस्तु नास्ति, अन्तर्बहिः-सर्वगतत्वेन चोपासात्रैविध्यार्थत्वात्, तस्य चास्मिन् प्रकरणे ''स य एतमेव सीमानं विदार्यैतया द्वारा प्रापद्यत'' इत्यादिनाऽऽश्रितत्वाच्च 'तद्योगात्' इत्यनुरोधेन त्रैविध्योपपत्तेश्चेत्यर्थः ।

ವಿವರಣೆ - ಅಂತಿಮಪ್ರಾಣಾಧಿಕರಣದಲ್ಲಿ ಒಟ್ಟು ನಾಲ್ಕು ಸೂತ್ರಗಳಿವೆ. ಈ ನಾಲ್ಕು ಸೂತ್ರಗಳ ಜೋಡಣೆಯು ಅರ್ಥಪೂರ್ಣವಾಗಿದೆ ಎಂದು ಪ್ರಕೃತ ಗ್ರಂಥಕಾರರು ಸಮರ್ಥಿಸುತ್ತಿದ್ದಾರೆ. 'ಪ್ರಾಣಸ್ತಥಾನುಗಮಾತ್' ಎಂಬ ಮೊದಲನೆಯ ಸೂತ್ರದಲ್ಲಿ 'ವಿಷ್ಣುವೇ ಪ್ರಾಣಶಬ್ದವಾಚ್ಯ' ಎನ್ನಲು ಅನೇಕ ಕಾರಣಗಳನ್ನು ಹೇಳಿದ್ದಾರೆ. ಅಂದರೆ ಸ್ವಪಕ್ಷಸಾಧಕವಾದ ಹೇತುಗಳನ್ನೆಲ್ಲಾ ಹೇಳಿದ್ದಾರೆ. ಅದನ್ನು ಗ್ರಂಥಕಾರರು 'ತಸ್ಯೇತಿ' ಇತ್ಯಾದಿ ವಾಕ್ಯದಿಂದ ವಿವರಿಸಿದ್ದಾರೆ. 'ಶ್ರುತಿಲಿಂಗಾನಾಂ' ಎಂಬುದರಿಂದ 'ಬ್ರಹ್ಮೇಮಂ ಪುರುಷಂ' ಇತ್ಯಾದಿ ಬ್ರಹ್ಮಶ್ರುತಿಗಳನ್ನು ದೇವೋಪಾಸ್ಯತ್ವಾದಿ ಲಿಂಗಗಳನ್ನು ವಿವಕ್ಷಿಸಬೇಕು. 'ಅನುಗಮಾತ್' ಎಂದರೆ ಅನೇಕ ಬಾರಿ ಅನುವೃತ್ತವಾಗುವುದರಿಂದ ಎಂದರ್ಥ.

'ನ ವಿರೋಧ ಇತಿ' ಎರಡೂ ಟೀಕೆಗಳಿಗೆ ಒಂದೇ ಅಭಿಪ್ರಾಯವಿರುವುದರಿಂದ ವಿರೋಧವಿಲ್ಲವೆಂದು ತಿಳಿಯಬೇಕು. 'ನ ವಕ್ತುಃ' ಎಂಬ ಸೂತ್ರದ ಟೀಕೆಯಲ್ಲಿ ಎರಡುವಿಧ ಪರಿಹಾರವನ್ನು ಹೇಳಿದ್ದಾರೆ. ಆ ಪರಿಹಾರಗಳಿಗೆ ವ್ಯಾಖ್ಯೇಯವನ್ನು ತೋರಿಸುತ್ತಾ ವಿವರಿಸುತ್ತಿದ್ದಾರೆ 'ತತ್ರ' ಇತ್ಯಾದಿ ವಾಕ್ಯದಿಂದ. ಭಾಷ್ಯಾನುಸಾರೇಣ ಎಂದರೆ ''ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ'' ಇತಿ ಬಹ್ವಾಧ್ಯಾತ್ಮಸಂಬಂಧೋ ಹ್ಯತ್ರ ವಿದ್ಯತೇ'' ಎಂಬ ಸೂತ್ರಭಾಷ್ಯಕ್ಕೆ ಅನುಸಾರಿಯಾಗಿರುವುದರಿಂದ ಎಂದರ್ಥ. ಸೂತ್ರದಲ್ಲಿರುವ 'ಭೂಮಾ' ಎಂಬ ಪದದ ಅರ್ಥವನ್ನೇ 'ಬಹು' ಎಂದಿದ್ದಾರೆ.

'ತದಾ' ಎಂಬ ವಾಕ್ಯಕ್ಕೆ ವಿಷ್ಣುವು ಎಲ್ಲಡೆ ವ್ಯಾಪ್ತನಾಗಿರುವುದರಿಂದ 'ತ್ವಂ ಪ್ರಾಣಃ' ಎಂದು ಹೇಳಬಹುದೆಂದು ಅಭಿಪ್ರಾಯ. 'ಅನ್ಯಥಾ' ಎಂಬ ಪದಕ್ಕೆ ಸ್ವಮತದಿಂದ ವಿಷ್ಣುವನ್ನು ವಿವಕ್ಷಿಸದಿದ್ದರೆ ಎಂದರ್ಥ. 'ಯದಾ ತು' ಎಂಬ ವಾಕ್ಯಕ್ಕೆ ಐತರೇಯಭಾಷ್ಯಕ್ಕೆ ಅನುಸಾರಿಯಾಗಿ ಅರ್ಥವನ್ನು ಹೇಳಬೇಕು. ಐತರೇಯ ಭಾಷ್ಯ ಹೀಗಿದೆ.

''ಅಧ್ಯಾತ್ಮಸಂಬಂಧಶಬ್ದೇನಾऽऽವೇಶೋ ವಿಷ್ಣೋರಿಂದ್ರೇ ವಿವಕ್ಷಿತಃ ।
ಭಗವತಾ ಅನ್ಯತ್ರಾಂತರ್ಯಾಮಿರೂಪೇಣ ಸಂಬಂಧೋऽಸ್ತ್ಯೇವ ।
ತಸ್ಮಿನ್ನಿಂದ್ರೇ ತು ವಿಶೇಷಾವೇಶಸ್ತಾತ್ಕಾಲಿಕಃ । ಅಧಿಕಾತ್ಮನಃ ಪರಮಾತ್ಮನಃ''

ಅಧಾತ್ಮಸಂಬಂಧ ಶಬ್ದದಿಂದ ಇಂದ್ರನಲ್ಲಿ ವಿಷ್ಣುವಿನ ಆವೇಶವು ವಿವಕ್ಷಿತವಾಗಿದೆ. ವಸ್ತುತಃ ಭಗವಂತನು ಸಕಲರಲ್ಲಿಯೂ ಅಂತರ್ಯಾಮಿರೂಪವಾದ ಸಂಬಂಧವನ್ನು ಹೊಂದಿಯೇ ಇದ್ದಾನೆ. ಆದರೆ ದೇವೇಂದ್ರನಲ್ಲಿ ತಾತ್ಕಾಲಿಕವಾಗಿ ವಿಶೇಷವಾದ ಆವೇಶವನ್ನು ಹೊಂದಿರುತ್ತಾನೆ ಎಂದು. 'ಏತಚ್ಚ' ಎಂಬ ವಾಕ್ಯಕ್ಕೆ ತಾತ್ಕಾಲಿಕ ಸನ್ನಿಧಾನ ವಿಶೇಷಾಭಿಪ್ರಾಯದಿಂದ ಹೇಳಲ್ಪಟ್ಟಿದೆ ಎಂಬುದನ್ನು ಎಂದರ್ಥ.

ವಿಶ್ವಾಮಿತ್ರ ಋಷಿಯು ಬೃಹತೀ ಸಹಸ್ರವನ್ನು ಪಠಿಸುವ ಮೊದಲು ಶ್ರೀಹರಿವಾಯುಗಳನ್ನು ಸ್ಮರಿಸಿದರು. ಆ ಸಂದರ್ಭದಲ್ಲಿ ದೇವಾಧಿಪತಿಯಾದ ಶ್ರೀಹರಿಯು ಮತ್ತು ವಾಯುದೇವರು ಇಂದ್ರನಲ್ಲಿ ಆವಿಷ್ಟರಾದರು. ಆವಾಗ -

ಆವಿಷ್ಟೋ ವಿಷ್ಣುನಾऽಥೇಂದ್ರೋ ವಾಯುನಾ ಸಹ ಕೌಶಿಕಮ್ ।
ಶಂಸೇತ್ಯುಕ್ತ್ವಾ ನಿಷಣ್ಣೋऽಭೂದಿದಮನ್ನಂ ತವೇತಿ ಸಃ ॥

ವಿಷ್ಣುವಿನಿಂದ ಹಾಗೂ ವಾಯುದೇವರಿಂದ ಆವಿಷ್ಟನಾದ ದೇವೇಂದ್ರನು ವಿಶ್ವಾಮಿತ್ರ ಋಷಿಯನ್ನು ಕುರಿತು ಬೃಹತೀಸಹಸ್ರದಿಂದ ಪ್ರಂಶಸೆ ಮಾಡು ! ಎಂದು ಹೇಳಿ ಋಷಿಯ ಮುಂದೆ ಕುಳಿತನು.

ಋಕ್ಸಹಸ್ರಂ ಶಶಂಸಾಥ ಯಜ್ಞಾಂಗತ್ವೇನ ಭಕ್ತಿತಃ ।
ತತ್ ಶ್ರುತ್ವಾ ತುಷ್ಟಿಮಗಮತ್ ಕೇಶವೋ ವಾಯುಸಂಯುತಃ ॥

ವಿಶ್ವಾಮಿತ್ರ ಋಷಿಯು 'ಇದು ನಿನ್ನ ಅನ್ನವಾಗಲಿ' ಎಂಬುದಾಗಿ ಬೃಹತೀಸಹಸ್ರವನ್ನು ಯಜ್ಞದ ಅಂಗವೆಂದು ಭಕ್ತಿಯಿಂದ ಪಠಿಸಿದರು. ಅದನ್ನು ಕೇಳಿ ವಾಯುದೇವರಿಂದ ಸಹಿತನಾದ ಕೇಶವನು ಬಹಳ ಸಂತೋಷ ಹೊಂದಿದನು.

ಅಂತಿಮಪ್ರಾಣಾಧಿಕರಣ-(೧।೧।೧೨)

ದ್ವಿತೀಯವಾರಂ ಶಂಸೇತಿ ಪ್ರಾಹ ತಂ ಚ ಜನಾರ್ದನಃ ।
ಪ್ರೀತಯೇ ಶಕ್ರಮಾವಿಷ್ಟೋ ವಿಶ್ವಾಮಿತ್ರಃ ಶಶಂಸ ತತ್ ॥

ದೇವೇಂದ್ರನಲ್ಲಿ ಆವಿಷ್ಟನಾದ ಜನಾರ್ದನನು ವಿಶ್ವಾಮಿತ್ರಋಷಿಯನ್ನು ಕುರಿತು ಪ್ರೀತಿಯಿಂದ ಎರಡನೆಯ ಬಾರಿ ಅದೇ ಮಂತ್ರವನ್ನು ಪಠಿಸು ! ಎಂದು ಹೇಳಿದನು. ಅದರಂತೆ ವಿಶ್ವಾಮಿತ್ರ ಋಷಿಯು ಪಠಿಸಿದರು.

ಅತಿಪ್ರಿಯತ್ವಾದ್ಭಗವಾನ್ ಪುನರಪ್ಯಾಹ ಕೌಶಿಕಮ್ ।
ತೃತೀಯಂ ಚ ಶಶಂಸಾಸೌ ವಿಷ್ಣೋರನ್ನಂ ಪ್ರಕಲ್ಪ್ಯ ತತ್ ॥

ವಿಶ್ವಾಮಿತ್ರ ಋಷಿಯು ಶ್ರೀಹರಿಗೆ ಅತ್ಯಂತ ಪ್ರಿಯ. ಬೃಹತೀಸಹಸ್ರವೂ ಸಹ ಶ್ರೀಹರಿಗೆ ಅತ್ಯಂತ ಪ್ರಿಯ. ಆದ್ದರಿಂದಲೇ ಭಗವಂತನು ವಿಶ್ವಾಮಿತ್ರ ಋಷಿಗೆ ಪುನಃ ಅದನ್ನೇ ಪಠಿಸಲು ಹೇಳಿದನು. ಮೂರನೇ ಬಾರಿಯೂ 'ಇದು ನಿನಗೆ ಅನ್ನವಾಗಲಿ' ಎಂದು ವಿಶ್ವಾಮಿತ್ರ ಋಷಿಯು ಮಂತ್ರವನ್ನು ಪಠಣ ಮಾಡಿದರು.

ತತೋಽತಿತುಷ್ಟೋ ಭಗವಾನ್ ದದಾಮಿ ವರಮುತ್ತಮಮ್ ।
ಊಚೇ ಸ ಪ್ರಥಮೇ ತ್ವೇವ ನಿಜಸಾಲೋಕ್ಯಮೀಶ್ವರಃ ॥

ಇದರಿಂದ ಅತ್ಯಂತ ಸಂತುಷ್ಟನಾದ ಭಗವಂತನು ನಿನಗೆ ವರವನ್ನು ಕೊಡುತ್ತೇನೆಂದು ವಿಶ್ವಾಮಿತ್ರ ಋಷಿಗೆ ಹೇಳಿದನು. ಮೊದಲ ಬಾರಿಗೆ ಭಗವಂತನು ತನ್ನ ಸಾಲೋಕ್ಯವನ್ನು ನೀಡಿ ಅನುಗ್ರಹಿಸಿದನು.

ಪ್ರಾದಾದ್‌ದ್ವಿತೀಯೇ ಸಮೀಪ್ಯಂ ತೃತಿಯೇ ಪುನರೇವ ಚ ।
ವರಂ ದದಾಮೀತ್ಯುಕ್ತಸ್ಸ ಮುನಿಃ ಪ್ರಾಹ ಜನಾರ್ದನಮ್ ॥

ಎರಡನೆಯ ಬಾರಿ ತನ್ನ ಸಾಮಿಪ್ಯವನ್ನು ನೀಡಿ ಅನುಗ್ರಹಿಸಿದನು. ಮೂರನೆಯ ಬಾರಿ ಅಧಿಕವಾದ ಸಾಮೀಪ್ಯವನ್ನು ನೀಡಿ ಅನುಗ್ರಹಿಸಿದನು. ಇಷ್ಟಕ್ಕೆ ತೃಪ್ತನಾಗದೆ ಪುನಃ ವರವನ್ನು ನೀಡುತ್ತೇನೆಂದು ಹೇಳಿದನು. ಭಗವಂತನು ವರವನ್ನು ನೀಡುತ್ತೇನೆಂದು ಹೇಳಿದಾಗ ಜನಾರ್ದನನ್ನು ಕುರಿತು ವಿಶ್ವಾಮಿತ್ರ ಋಷಿಯು ಹೀಗೆ ಪ್ರಾರ್ಥಿಸಿದನು

ಸಮ್ಯಕ್ತ್ವಾಮೇವ ಜಾನೀಯಾಮಿತಿ ಮೋಕ್ಷ ಸುಖೋಚ್ಚತಾಮ್ ।
ಇಚ್ಛಂಸ್ತಂ ಪ್ರಾಹ ಭಗವಾನ್ ಇಂದ್ರಸ್ಥೋ ವಾಯುಸಂಯುತಃ ॥

"ನಿನ್ನನ್ನೇ ನಾನು ಚೆನ್ನಾಗಿ ತಿಳಿಯುತ್ತೇನೆ." ಹೀಗೆ ಜನಾರ್ದನನಲ್ಲಿ ಮೋಕ್ಷದಲ್ಲಿ ಆನಂದಾತಿಶಯವನ್ನು ಬಯಸಿ ವರವನ್ನು ಬೇಡಿದನು. ಆವಾಗ ವಾಯುಸಮೇತನಾದ ಜನಾರ್ದನನು ವಿಶ್ವಾಮಿತ್ರ ಋಷಿಗೆ ಹೀಗೆ ಉಪದೇಶಿಸಿದನು.

ಸರ್ವನಾಮಾಽಹಮಸ್ಮ್ಯೇಕ ಇತಿ ಜ್ಞಾನಂ ಮಮೋತ್ತಮಮ್ ।
ಯಸ್ಮಾತ್ಸರ್ವಗುಣತ್ವಂ ಸ್ಯಾತ್ ಸರ್ವನಾಮತ್ವ ಏವ ತು ॥

ನಾನು ಒಬ್ಬನೇ ಸಕಲ ಶಬ್ದ ಪ್ರತಿಪಾದಕನಾಗಿದ್ದೇನೆ. ಈ ತಿಳುವಳಿಕೆಯೇ ಉತ್ತಮವಾದ ಜ್ಞಾನವಾಗಿದೆ. ಏಕೆಂದರೆ ಸಕಲ ಶಬ್ದಪ್ರತಿಪಾದ್ಯನಾದರೆ ಮಾತ್ರ ಆಯಾ ಶಬ್ದಗಳಿಂದ ತಿಳಿಯುವ ಸಕಲ ಗುಣಗಳೂ ನನ್ನಲ್ಲಿವೆ

ಎಂದು ನಿರ್ಣಯವಾಗುತ್ತದೆ. ಐತರೇಯೋಪನಿಷತ್ತಿನ ಈ ಪ್ರಕರಣವನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ಒಂದು ವೇಳೆ ತನ್ನಲ್ಲಿರುವ ವಿಷ್ಣುವಿನ ಅಭಿಪ್ರಾಯದಿಂದ ದೇವೇಂದ್ರನು 'ಪ್ರಾಣೋಽಹಂ' ಎಂದು ಹೇಳಿದ್ದಾದಲ್ಲಿ ಆವಾಗ 'ರಥೇ ದೇವಃ' ಎಂದು ಹೇಳುವಂತೆ 'ಮಯಿ ಪ್ರಾಣಃ' ಎಂದು ಹೇಳಬೇಕಲ್ಲವೇ? ಎಂಬುದಾಗಿ ಎರಡನೆಯ ಸೂತ್ರದ ಮೇಲೆ ಬಾಧಕವೂ ಬರುತ್ತದೆ. ಅದನ್ನು ಪರಿಹರಿಸುವ ಪ್ರಕಾರವನ್ನು ತೋರಿಸಲು ಮೂರನೇ ಸೂತ್ರವು ಹೊರಟಿದೆ. ಇದನ್ನೇ 'ತತ್ರ' ಇತ್ಯಾದಿ ವಾಕ್ಯವು ಸಮರ್ಥಿಸಿದೆ.

ನಾಲ್ಕನೇ ಸೂತ್ರದಲ್ಲಿ ಜೀವಾದಿಲಿಂಗಗಳಿಂದ ಜೀವಾದಿಗಳೇ ಪ್ರಾಣಶಬ್ದವಾಚ್ಯರಾಗಲಿ ಎಂಬ ಶಂಕೆಯು ಇರುವಾಗ ಅನ್ಯಥಾಸಿದ್ಧಿಯನ್ನು ಜೀವಾದಿಲಿಂಗಗಳಿಗೆ ಹೇಳದೆ ಪ್ರಯೋಜನವನ್ನು ಹೇಳಿದ್ದು ತಪ್ಪಲ್ಲವೇ ? ಎಂಬ ಪ್ರಶ್ನೆಗೆ 'ಚತುರ್ಥೇ' ಎಂಬ ವಾಕ್ಯವು ಉತ್ತರಿಸುತ್ತಿದೆ.

'ಉಕ್ತಪ್ರಾಯತ್ವಾತ್' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ -

ಶಂಕೆ - ಹಾಗಾದರೆ, ಪರಿಹಾರವನ್ನು ಮಾಡಿದ ಮೇಲೂ ಪುನಃ ಶಂಕೆಯನ್ನು ಹೇಗೆ ಮಾಡುತ್ತೀರಿ?

ಸಮಾಧಾನ - ಪ್ರಾಣಸಂವಾದಾದಿಲಿಂಗಗಳನ್ನು ಅಂತರ್ಯಾಮಿಯಲ್ಲಿ ಸಮರ್ಥಿಸಲು ಬರುವುದಿಲ್ಲ. ಏಕೆಂದರೆ, ಆ ಸಂದರ್ಭದಲ್ಲಿ ಅಂತರ್ಯಾಮಿಯಲ್ಲಿ ಔದಾಸೀನ್ಯವೂ ಕೇಳಿಸುತ್ತಿದೆ. ಆದ್ದರಿಂದ ಪ್ರಯೋಜನವಿಲ್ಲವೆಂಬ ಅಭಿಪ್ರಾಯದಿಂದ ಶಂಕೆಯು ಕೂಡುತ್ತದೆ. ಆದ್ದರಿಂದಲೇ ಟೀಕೆಯಲ್ಲಿ ''ಉದಾಸೀನೌ ಚ ತಾವಾಸ್ತಾಂ'' ಎಂದು ಉದಾಹರಿಸಿದ್ದಾರೆ ಎಂಬ ಪರಿಹಾರವನ್ನು ಭಗವಂತನ ಬಾಹ್ಯರೂಪವನ್ನು ವಿವಕ್ಷಿಸಿ ಮಾಡಬೇಕು. ಪ್ರಯೋಜನಾಭಾವವೂ ಸಹ ಇರುವುದಿಲ್ಲ. ಏಕೆಂದರೆ ಅಂತರುಪಾಸನಾ, ಬಹಿರುಪಾಸನಾ ಮತ್ತು ಸರ್ವಗತತ್ವೋಪಾಸನಾ ಎಂಬ ಮೂರುವಿಧವಾದ ಉಪಾಸನಾವನ್ನು ತಿಳಿಸುವುದೆಂಬ ಪ್ರಯೋಜನ ವಿದ್ದೇ ಇದೆ. ಆದ್ದರಿಂದಲೇ ಈ ಪ್ರಕರಣದಲ್ಲಿ ''ಸ ಯ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ'' ಇತ್ಯಾದಿಯಾದ ಮಾತುಗಳು ಹೊರಟಿವೆ.

**गुरुराजीयम् – एवञ्चेति** ॥ श्रुतिलिङ्गानुगमसाध्यविष्णुत्व एव दृष्टान्ततयोपादानादित्यर्थः । अन्यथा दृष्टान्तत्वसमुच्चययोर्विरुद्धनिश्चयसन्देहसापेक्षत्वेन विरोधाट्टीकाविरोधापत्तेरिति भावः ॥ **अन्यथेति** ॥ स्वात्मनः परमात्मदेहत्वाभिप्रायेणेन्द्रेण प्राणस्त्वं प्राण इत्युक्तमित्यस्यानङ्गीकार इत्यर्थः – **एतच्चेति** ॥ वायुना सह देवेशस्तदा वासवमाविशदिति पूर्ववाक्ये वायुसहितस्य विष्णोः प्रवेशमुक्त्वा आविष्टो विष्णुनेत्यनेन वायुसहितपरमात्मावेशतः तस्येन्द्रस्य विश्वामित्रे प्रवेश उच्यत इति भावः । तत्राविष्ट इत्यत्राविश्यत इत्याविष्टः । कर्मणि क्तः ॥

## ಸಾರ

ಸೂತ್ರಗಳ ವಿನ್ಯಾಸ ಕ್ರಮ ಹೀಗಿದೆ - ಪ್ರಥಮಸೂತ್ರದಲ್ಲಿ ಪ್ರಾಣಶಬ್ದವು ವಿಷ್ಣುವನ್ನೇ ಪ್ರತಿಪಾದಿಸುತ್ತವೆ ಎನ್ನಲು ಸ್ವಪಕ್ಷಸಾಧಕಯುಕ್ತಿಗಳನ್ನು ಹೇಳಿದ್ದಾರೆ. ಎರಡನೆಯ ಸೂತ್ರದಲ್ಲಿ 'ಪ್ರಾಣೋಽವಾ ಅಹಂ' ಎಂಬಲ್ಲಿ

'ಅಹಂ' ಶಬ್ದವನ್ನು ಏಕೆ ಪ್ರಯೋಗಿಸಿದರು? ಎಂಬ ಬಾಧಕವನ್ನು ಪರಿಹರಿಸಿದ್ದಾರೆ. ಹಾಗಾದರೆ 'ಮಯಿ ಪ್ರಾಣಃ' ಎಂದು ಹೇಳಬೇಕಿತ್ತಲ್ಲವೇ? 'ಅಹಂ ಪ್ರಾಣ' ಎಂದು ಹೇಗೆ ಹೇಳಿದರು ? ಎಂಬ ಪ್ರಶ್ನೆಗೆ ಅಂತರ್ಯಾಮಿಯನ್ನು ವಿವಕ್ಷಿಸಿ 'ಅಹಂ' ಎಂಬ ಪ್ರಯೋಗವು ಸಾಧುವಾಗಿದೆ ಎಂದು ಮೂರನೆ ಸೂತ್ರದಲ್ಲಿ ಸಮರ್ಥಿಸಿದ್ದಾರೆ. ಹಾಗಾದರೆ ನೇರವಾಗಿ ಪರಮಾತ್ಮನನ್ನೇ ಹೇಳದೆ ಅಂತರ್ಯಾಮಿರೂಪದಿಂದ ಪರಮಾತ್ಮನನ್ನು ಏಕೆ ಹೇಳಿದಿರಿ ? ಎಂಬ ಪ್ರಶ್ನೆಗೆ ನಾಲ್ಕನೇ ಸೂತ್ರವು ಉತ್ತರಿಸಿದೆ. ಹೀಗೆ ಸೂತ್ರಗಳ ವಿನ್ಯಾಸಕ್ರಮ ಅತ್ಯಂತ ಅರ್ಥಪೂರ್ಣವಾಗಿದೆ.

* * * *

## ಅದ್ವೈತಿಗಳ ಸೂತ್ರವ್ಯಾಖ್ಯಾನ

तात्पर्यचन्द्रिका.

**अन्ये तु – प्रतर्दनं प्रयुक्तं ''प्राणोऽस्मि प्रज्ञात्मा'' इति वाक्यमुदाहृत्य ''मामेव विजानीहि'' इति इन्द्रलिङ्गात्, ''इदं शरीरं परिगृह्योत्थापयति'' इति वायुलिङ्गात्, ''वक्तारं विद्यात्'' इति जीवलिङ्गाच्च इन्द्रादिरेव प्राण इति प्राप्ते,**

**''यं त्वं मनुष्याय हिततमम्'' इति हिततमत्वादिब्रह्मलिङ्गात् ब्रह्मैव प्राण इति सिद्धान्त इत्याहुः ।**

---

**शङ्करभाष्यम्** – अस्ति कौषीतकिब्राह्मणोपनिषदीन्द्रप्रतर्दनाख्यायिका – 'प्रतर्दनो ह वै दैवोदासिरिन्द्रस्य प्रियन्धामोपजगाम युद्धेन च पौरुषेण च' इत्यारभ्याम्नाता । तस्यां श्रूयते - 'स होवाच प्राणोऽस्मि प्रज्ञात्मा तं मामायुरमृतमित्युपास्स्व' इति । तथोत्तरत्रापि 'अथ खलु प्राण एव प्रज्ञात्मेदं शरीरं परिगृह्योत्थापयति' (कौ. ३।१,२,३) इति । तथा 'न वाचं विजिज्ञासीत वक्तारं विद्यात्' इत्यादि । अन्ते च 'स एष प्राण एव प्रज्ञात्मानन्दोऽजरोऽमृतः' (कौ. ३।८) इत्यादि । तत्र संशयः – किमिह प्राणशब्देन वायुमात्रमभिधीयत उत देवातात्मेति, जीवोऽथवा परं ब्रह्मेति । ननु 'अत एव प्राणः' इत्यत्र वर्णितं प्राणशब्दस्य ब्रह्मपरत्वम् । इहापि च ब्रह्मलिङ्गमस्ति – 'आनन्दोऽजरोऽमृतः' इत्यादि । कथमिह पुनः संशयः सम्भवति । अनेकलिङ्गदर्शनादिति ब्रूमः । न केवलमिह-ब्रह्मलिङ्गमेवोपलभ्यते । सन्ति हीतरलिङ्गान्यपि । 'मामेव विजानीहि' (कौ. ३।१) इतीन्द्रस्य वचनं देवतात्मलिङ्गम् । इदं शरीरं परिगृह्योत्थापयतीति प्राणलिङ्गम् । 'न वाचं विजिज्ञासीत वक्तारं विद्यात्' इत्यादि जीवलिङ्गम् । इदं शरीरं परिगृह्योत्थापयतीति प्राणलिङ्गम् । 'न वाचं विजिज्ञासीत वक्तारं विद्यात्' इत्यादि जीवलिङ्गम् । अत उपपन्नः संशयः । तत्र प्रसिद्धेर्वायुः प्राण इति प्राप्त उच्यते – प्राणशब्दं ब्रह्म विज्ञेयम् । कुतः, तथानुगमात् । तथाहि – पौर्वापर्येण पर्यालोच्यमाने वाक्ये

ಅನುವಾದ - ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ - ಪ್ರತರ್ದನನ್ನು ಕುರಿತು ಇಂದ್ರನು ಉಪದೇಶಿಸುವ ವಾಕ್ಯ "ಪ್ರಾಣೋಽಸ್ಮಿ ಪ್ರಜ್ಞಾತ್ಮಾ" ಎಂದು. ಈ ಪ್ರಕರಣವನ್ನು ಗಮನಿಸಿದಾಗ "ಮಾಮೇವ ವಿಜಾನೀಹಿ" 'ನನ್ನನ್ನೇ ಪ್ರಾಣನೆಂದು ತಿಳಿ ಎಂಬುದಾಗಿ ಇಂದ್ರನ ಲಿಂಗವು ಕೇಳಿಸುತ್ತಿದೆ.

---

पदार्थानां समन्वयो ब्रह्मप्रतिपादनपर उपलभ्यते । उपक्रमे तावत् 'वरं वृणीष्व' इतीन्द्रेणोक्तः प्रतर्दनः परमं पुरुषार्थं वरमुपचिक्षेप – 'त्वमेव मे वृणीष्व यं त्वं मनुष्याय हिततमं मन्यसे' इति । तस्मै हिततमत्वेनोपदिश्यमानः प्राणः कथं परमात्मा न स्यात् । न ह्यन्यत्र परमात्मज्ञानाद्धिततमप्राप्तिरस्ति । 'तमेव विदित्वातिमृत्युमेति नान्यः पन्था विद्यतेऽयनाय' (श्वेता. ३।८) इत्यादिश्रुतिभ्यः । तथा 'स यो मां वेद न ह वै तस्य केनचन कर्मणा लोको मीयते न स्तेयेन न भ्रूणहत्यया' (कौ. ३।१) इत्यादि च ब्रह्म-परिग्रहे घटते । ब्रह्मविज्ञानेन हि सर्वकर्मक्षयः प्रसिद्धः – 'क्षीयन्ते चास्य कर्माणि तस्मिन्दृष्टे परावरे' (मु. २।२।८) इत्याद्यासुश्रुतिषु । प्रज्ञात्मत्वं च ब्रह्मपक्ष एवोपपद्यते । न ह्यचेतनस्य वायोः प्रज्ञात्मत्वं सम्भवति । तथोपसंहारेऽपि – 'आनन्दोऽजरोऽमृतः' इत्यानन्दत्वादीनि न ब्रह्मणोऽन्यत्र सम्यक् सम्भवन्ति । 'स न साधुना कर्मणा भूयान् भवति नो एवासाधुना कर्मणा कनीयानेष ह्येव साधु कर्म कारयति तं यमेभ्यो लोकेभ्य उन्निनीषते । एष उ एवासाधु कर्म कारयति तं यमेभ्यो लोकेभ्योऽधो निनीषते' इति 'एष लोकाधिपतिरेष लोकेशः' (कौ. ३।८) इति च । सर्वमेतत्परस्मिन् ब्रह्मण्याश्रीयमाणेऽनुगन्तुं शक्यते न मुख्ये प्राणे । तस्मात्प्राणो ब्रह्म ॥ २८ ॥

**भामतीव्याख्या – प्राणस्तथानुगमात् ।** 'अनेकलिङ्गसन्दोहे बलवत्कस्य किं भवेत् । लिङ्गिनो लिङ्गमित्यत्र चिन्त्यते प्रागचिन्तितम्' ॥ मुख्यप्राणजीवदेवताब्रह्मणामनेकेषां लिङ्गानि बहूनि सम्प्लवन्ते, तत्कतमदत्र लिङ्गं, लिङ्गाभासं च कतमदित्यत्र विचार्यते । न चायमर्थः 'अत एव प्राणः' इत्यत्र विचारितः । स्यादेतत् । हिततमपुरुषार्थसिद्धिश्च निखिलभ्रूणहत्यादिपापापरामर्शश्च प्रज्ञात्मत्वं चानन्दादिश्च न मुख्ये प्राणे सम्भवन्ति । तथा 'एष साधु कर्म कारयति' 'एष लोकाधिपतिः' इत्याद्यपि । जीवे तु प्रज्ञात्मत्वं कथञ्चिद्भवेदितरेषां त्वसम्भवः । वक्तृत्वं च वाक्करणव्यापारवत्त्वं यद्यपि परमात्मनि स्वरूपेण न सम्भवति तथाप्यन्यथासिद्धबहुब्रह्मलिङ्गविरोधपरिहाराय जीवद्वारेण ब्रह्मण्येव कथञ्चिद्व्याख्येयं, जीवस्य ब्रह्मणोऽभेदात् । तथाच श्रुतिः – 'यद्वाचानभ्युदितं येन वागभ्युद्यते । तदेव ब्रह्म त्वं विद्धि' इति वाग्वदनस्य ब्रह्म कारणमित्याह । शरीरधारणमपि यद्यपि मुख्यप्राणस्यैव तथापि प्राणव्यापारस्य परमात्मायत्तत्वात्परमात्मन एव । यद्यपि चात्रेन्द्रदेवताया विग्रहवत्या लिङ्गमस्ति, तथाहि – इन्द्रधामगतं प्रतर्दनं प्रतीन्द्र उवाच, 'मामेव विजानीहि' इत्युपक्रम्य, 'प्राणोऽस्मि प्रज्ञात्मा' इत्यात्मनि प्राणशब्दमुच्चचार । प्रज्ञात्मत्वं चास्योपपद्यते, देवतानामप्रतिहतज्ञानशक्तित्वात् । सामर्थ्यातिशयाच्चेन्द्रस्य हिततमपुरुषार्थहेतुत्वमपि । मनुष्याधिकारत्वाच्छास्त्रस्य देवान्

ಮತ್ತು "ಇದಂ ಶರೀರಂ ಪರಿಗೃಹ್ಯೋತ್ಥಾಪಯತಿ" ಎಂಬ ವಾಕ್ಯದಲ್ಲಿ ವಾಯುವಿನ ಲಿಂಗವು ಕೇಳಿಸುತ್ತಿದೆ. "ವಕ್ತಾರಂ ವಿದ್ಯಾತ್" ಎಂಬಲ್ಲಿ ಜೀವಲಿಂಗವು ಕೇಳಿಸುತ್ತಿದೆ. ಈ ವಾಕ್ಯವನ್ನೆಲ್ಲಾ

---

प्रत्यप्रवृत्तेर्भ्रूणहत्यादिपापापरामर्शस्योपपत्तेः । लोकाधिपत्यं चेन्द्रस्य लोकपालत्वात् । आनन्दादिरूपत्वं च स्वर्गस्यैवानन्दत्वात्। 'आभूतसम्प्लुवं स्थानममृतत्वं हि भाष्यते' इति स्मृतेश्चामृतत्वमिन्द्रस्य । 'त्वाष्ट्रमहनम्' इत्याद्या च विग्रहवत्त्वेन स्तुतिस्तत्रैवोपपद्यते । तथापि परमपुरुषार्थस्यापवर्गस्य परब्रह्मज्ञानादन्यतोऽनवाप्तेः, परमानन्दरूपस्य मुख्यस्यामृतत्वस्याजरत्वस्य च ब्रह्मरूपाव्यभिचारात्, अध्यात्मसम्बन्धभूम्नश्च पराचीन्द्रेऽनुपपत्तेः, इन्द्रस्य देवताया आत्मनि प्रतिबुद्धस्य चरमदेहस्य वामदेवस्येव प्रारब्धविपाककर्माशयमात्रं भोगेन क्षपयतो ब्रह्मण एव सर्वमेततत् कल्पत इति विग्रहवदिन्द्रजीवप्राणवायुपरित्यागेन ब्रह्मैवात्र प्राणशब्दं प्रतीयत इति पूर्वपक्षा-भावादनारभ्यमेतदिति । अत्रोच्यते – 'यौ वै प्राणः सा प्रज्ञा या वा प्रज्ञा स प्राणः सह ह्येतावस्मिन् शरीरे वसतः सहोत्क्रामतः' इति यस्यैव प्राणस्य प्रज्ञात्मन उपास्यत्वमुक्तं तस्यैव प्राणस्य प्रज्ञात्मना सहोत्क्रमणमुच्यते । नच ब्रह्मण्यभेदे द्विवचनं, न सहभावः, न चोत्क्रमणम् । तस्माद्वायुरेव प्राणः । जीवश्च प्रज्ञात्मा । सह प्रवृत्तिनिवृत्त्या भक्त्यैकत्वमनयोरुपचरितं 'यो वै प्राणः' इत्यादिना । आनन्दामराजरापहतपाप्मत्वादयश्च ब्रह्मणि प्राणे भविष्यन्ति । तस्माद्यथायोगं त्रय एवात्रोपास्याः । न चैष वाक्यभेदो दोषमावहति । वाक्यार्थावगमस्य पदार्थावगमपूर्वकत्वात् । पदार्थानां चोक्तेन मार्गेण स्वातन्त्र्यात् । तस्मादुपास्यभेदादुपासात्रैविध्यमिति पूर्वः पक्षः । सिद्धान्तस्तु – सत्यं पदार्थावगमोपायोवाक्यार्थावगमः, नतु पदार्थावगमपराण्येव पदानि, अपि त्वेकवाक्यार्थवगमपराणि । तमेव त्वेकं वाक्यार्थं पदार्था-वगममन्तरेण न शक्नुवन्ति कर्तुमित्यन्तरा तदर्थमेव तमप्यवगमयन्ति, तेन पदानि विशिष्टैकार्थावबोधनस्वरसान्येव बलवद्बाधकोपनिपातान्नानार्थबोधपरतां नीयन्ते । यथाहुः – 'सम्भवत्येकवाक्यत्वे वाक्यभेदश्च नेष्यते' इति । तेन यथोपांशुयाजवाक्ये जामितादोषोपक्रमे तत्प्रतिसमाधानोपसंहारे चैकवाक्यत्वाय 'प्रजापतिरुपांशु यष्टव्यः' इत्यादयो न पृथग्विधयः किन्त्वर्थवादा इति निर्णीतं, तथेहापि 'मामेव विजानीहि' इत्युपक्रम्य 'प्राणोऽस्मि प्रज्ञात्मा' इत्युक्त्वान्ते 'स एष प्राण एव प्रज्ञात्मानन्दोऽजरोऽमृतः' इत्युपसंहारद्ब्रह्मण्येक-वाक्यत्वावगतौ सत्यां जीवमुख्यप्राणलिङ्गे अपि तदनुगुणतया नेतव्ये । अन्यथा वाक्यभेदप्रसङ्गात् । यत्पुनर्भेददर्शनं 'सह ह्येतौ' इति, तज्ज्ञानक्रियाशक्तिभेदेन बुद्धिप्राणयोः प्रत्यगात्मोपाधिभूतयोर्निर्देशः प्रत्यगात्मानमेवोपलक्षयितुम् । अत एवेपालक्ष्यस्य प्रत्यगात्मस्वरूपस्याभेदमुपलक्षणं भेदेनोपलक्षयति – 'प्राण एव प्रज्ञात्मा' इति । 'तस्मादनन्यथासिद्धब्रह्मलिङ्गानुसारतः । एकवाक्यबलात्प्राण जीवलिङ्गोपपादनम्' इति सङ्ग्रहः ॥ २८ ॥

ಗಮನಿಸಿದಾಗ ಇಂದ್ರ, ವಾಯು ಮತ್ತು ಜೀವರೇ ಮೊದಲಾದವರು ಪ್ರಾಣಶಬ್ದ ವಾಚ್ಯರೆಂದು ತಿಳಿಯುತ್ತಿದೆ. ಇಷ್ಟು ಪೂರ್ವಪಕ್ಷ.

ಅದೇ ಪ್ರಕರಣದಲ್ಲಿಯೇ "ಯಂ ತ್ವಂ ಮನುಷ್ಯಾಯ ಹಿತತಮಮ್" ಇತ್ಯಾದಿಯಾಗಿ ಹಿತತಮತ್ವವೇ ಮೊದಲಾದ ಬ್ರಹ್ಮನ ಲಿಂಗಗಳು ಕೇಳಿಸುತ್ತಿರುವುದರಿಂದ ಬ್ರಹ್ಮನೇ ಪ್ರಾಣನೆಂದು ಸಿದ್ಧಾಂತ.

### ಕಠಿಣಪದಾರ್ಥ

ಪ್ರಜ್ಞಾತ್ಮಾ = ಬುದ್ಧಿವಂತನಾದ ಪ್ರತರ್ದನನೇ, ಪ್ರಾಣೋऽಸ್ಮಿ = ಪ್ರಾಣಶಬ್ದವಾಚ್ಯನಾಗಿದ್ದಾನೆ, ಮಾಮೇವ = ನನ್ನನ್ನೇ, ವಿಜಾನೀಹಿ = ಪ್ರಾಣಶಬ್ದವಾಚ್ಯನೆಂದು ತಿಳಿ, ಉತ್ಥಾಪಯತಿ = ಎಬ್ಬಿಸುತ್ತಾನೆ, ವಕ್ತಾರಂ = ವಕ್ತೃವನ್ನು, ಇಂದ್ರಲಿಂಗಾತ್ = ಇಂದ್ರನ ಉಪದೇಶವೆಂಬ ಲಿಂಗದ ಬಲದಿಂದ, ವಾಯುಲಿಂಗಾತ್ = ಶರೀರಧಾರಣವೆಂಬ ವಾಯುಲಿಂಗದಿಂದ, ಜೀವಲಿಂಗಾತ್ = ವಾಗಿಂದ್ರಿಯವೇ ಮೊದಲಾದವುಗಳಿಗೆ ಅಧ್ಯಕ್ಷನಾಗಿರುವ ಜೀವನ ವಿಜ್ಞೇಯತ್ವವೆಂಬ ಲಿಂಗದಿಂದ, ವಕ್ತೃತ್ವಂ = ವಾಗಿಂದ್ರಿಯದ ವ್ಯಾಪಾರವು.

### ಅದ್ವೈತಿಗಳ ಪ್ರಥಮಸೂತ್ರವ್ಯಾಖ್ಯಾನ

**प्रकाशः – अन्ये त्विति ॥** कौषीतकिब्राह्मणे तृतीयेऽध्याये इन्द्रप्रतर्दनाख्यायिकायां प्रतर्दनं प्रति **"इन्द्र उवाच मामेव विजानीहि"** इत्युपक्रम्य श्रुतमिन्द्रवाक्यं **"प्राणोऽस्मि प्रज्ञात्मा तं मामायुरमृतमित्युपास्व"** इति । तत्र प्राणः किं वायुः किं वेन्द्रः उत जीवोऽथ ब्रह्मेति संशये, प्राणशब्दस्यान्यत्रप्रसिद्धेः प्राणो वायुरेवेति प्राप्ते, **"यं त्वं मनुष्याय हिततमं मन्यसे यो मां वेद न स्तेयेन न भ्रूणहत्यया स एष प्राण एव प्रज्ञात्माऽऽनन्दोऽजरोऽमृतः"** इति हिततमत्वनिखिलस्तेय भ्रूणहत्यादिपापालेपप्रज्ञात्मत्वानन्दत्वादेः ब्रह्मण्येवानुगमाद्वायौ च तदयोगात् ब्रह्मैवायं प्राण इत्याद्येनोक्त्वा,

ವಿವರಣೆ : ಇಲ್ಲಿಯ ತನಕ ಸಿದ್ಧಾಂತದ ಪ್ರಕಾರ ಪಾದಾಂತ್ಯ ಪ್ರಾಣಾಧಿಕರಣರಚನೆಯ ಬಗ್ಗೆ ವಿವರಿಸಿದ್ದಾಯಿತು. ಪ್ರಕೃತ ಪರವಾದಿಗಳ ಅಧಿಕರಣಶರೀರವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ. ಮೊದಲು ಶಂಕರಭಾಷ್ಯವನ್ನು 'ಅನ್ಯೇತು' ಇತ್ಯಾದಿಯಾಗಿ ಅನುವಾದ ಮಾಡುತ್ತಿದ್ದಾರೆ. ಈ ಅಧಿಕರಣಕ್ಕೆ ಅದ್ವೈತಿಗಳು 'ಪ್ರತರ್ದನಾಧಿಕರಣ'ವೆಂದು ಹೆಸರಿನ್ನಿಟ್ಟಿದ್ದಾರೆ. ಏಕೆಂದರೆ ಪ್ರತರ್ದನನೆಂಬ ರಾಜನಿಗೆ ಇಂದ್ರನು ಉಪದೇಶಿಸುವ ವಾಕ್ಯವೇ ಈ ಅಧಿಕರಣದ ವಿಷಯವಾಗಿದೆ.

ಕೌಷೀತಕೀಬ್ರಾಹ್ಮಣೋಪನಿಷತ್ತಿನ ಮೂರನೇ ಅಧ್ಯಾಯವು 'ಇಂದ್ರಪ್ರತರ್ದನಾಖ್ಯಾಯಿಕಾ' ಎಂದು ಕರೆಸಿಕೊಳ್ಳುತ್ತದೆ. ಅದರಲ್ಲಿ ಇಂದ್ರ ಹಾಗೂ ಪ್ರತರ್ದನ ರಾಜನ ಪರಸ್ಪರ ಸಂವಾದವಿದೆ. ಪ್ರತರ್ದನ

ರಾಜನು ಸ್ವರ್ಗಲೋಕವನ್ನು ಆಕ್ರಮಣ ಮಾಡಿದಾಗ ದೇವೇಂದ್ರನು ಅವನಿಗೆ ಹೀಗೆ ಉಪದೇಶಿಸಿದನು - ''ಮಾಮೇವ ವಿಜಾನೀಹಿ'' ಎಂದು ಪ್ರಾರಂಭಿಸಿ 'ಪ್ರಾಣೋಽಸ್ಮಿ ಪ್ರಜ್ಞಾತ್ಮಾ ತಂ ಮಾಮಾಯುರಮೃತಮಿತ್ಯುಪಾಸ್ವ' ಇತ್ಯಾದಿಯಾಗಿ ಮುಂದುವರೆದಿದೆ.

ಈ ಶ್ರುತಿಯಲ್ಲಿ ಕೇಳಿಸುತ್ತಿರುವ ಪ್ರಾಣಶಬ್ದವು ವಾಯುವನ್ನು ಹೇಳುತ್ತದೋ? ದೇವೇಂದ್ರನನ್ನು ಹೇಳುತ್ತದೋ? ಜೀವನನ್ನು ಹೇಳುತ್ತದೋ? ಅಥವಾ ಬ್ರಹ್ಮನನ್ನು ಹೇಳುತ್ತದೋ? ಎಂದು ಸಂಶಯ.

ತನ್ನನ್ನು ಇಂದ್ರನು ಪ್ರಾಣನೆಂದು ಹೇಳಿಕೊಂಡಿದ್ದರಿಂದ ಇಂದ್ರನೇ ಪ್ರಾಣನು. ಅಥವಾ ವಾಯುವಿನಲ್ಲಿ ಪ್ರಸಿದ್ಧವಾದ್ದರಿಂದ ವಾಯುವೇ ಪ್ರಾಣಶಬ್ದದಿಂದ ವಾಚ್ಯನೆಂದು ಪೂರ್ವಪಕ್ಷ.

''ಯಂ ತ್ವಂ ಮನುಷ್ಯಾಯ ಹಿತತಮಂ ಮನ್ಯಸೇ ಯೋ ಮಾಂ ವೇದ ನ ಸ್ತೇಯೇನ ನ ಭ್ರೂಣಹತ್ಯಯಾ ಸ ಏಷ ಪ್ರಾಣ ಏವ ಪ್ರಜ್ಞಾತ್ಮಾಽಽನಂದೋಽಜರೋಽಮೃತಃ'' ಇತ್ಯಾದಿಯಾಗಿ ಪ್ರಕರಣದ ಪ್ರಾರಂಭದಲ್ಲಿ ಪ್ರತರ್ದನರಾಜನು ಇಂದ್ರನನ್ನು ಕುರಿತು ಮನುಷ್ಯರಿಗೆ ಹಿತವಾದದ್ದನ್ನು ಉಪದೇಶಿಸು ಎಂದು ಕೇಳಿಕೊಂಡಿದ್ದಾನೆ. ಅವನ ಪ್ರಾರ್ಥನೆಗೆ ಇಂದ್ರನು ಪ್ರಾಣನ ಬಗ್ಗೆ ಉಪದೇಶವನ್ನು ನೀಡಿದ್ದಾನೆ. ಮತ್ತು ಉಪದೇಶಿಸುವ ವಾಕ್ಯದಲ್ಲಿ ಪುರುಷಾರ್ಥಸಾಧನವಾಗಿರುವಿಕೆ, ಸಕಲ ವಿಧವಾದ ಚೋರತನವಿಲ್ಲದಿರುವಿಕೆ, ಭ್ರೂಣಹತ್ಯವೇ ಮೊದಲಾದ ಪಾಪಾದಿಗಳಿಂದ ರಹಿತವಾಗಿರುವಿಕೆ, ಪ್ರಜ್ಞಾವಂತಿಕೆ, ಆನಂದದಲ್ಲಿರುವಿಕೆ, ಮುಪ್ಪು ಮೊದಲಾದವುಗಳಿಲ್ಲದಿರುವಿಕೆ, ಅಮೃತವಾಗಿರುವಿಕೆ ಮೊದಲಾದ ಅನೇಕ ಧರ್ಮಗಳನ್ನು ಹೇಳಿದ್ದಾನೆ. ಇವೆಲ್ಲವೂ ಬ್ರಹ್ಮನಲ್ಲಿಯೇ ಕೂಡುತ್ತವೆ ಹೊರತು ವಾಯುವಿನಲ್ಲಿ ಕೂಡುವುದಿಲ್ಲ. ಆದ್ದರಿಂದ ಬ್ರಹ್ಮನೇ ಪ್ರಾಣಶಬ್ದವಾಚ್ಯನು. ವಾಯು, ಇಂದ್ರ, ಜೀವ ಮೊದಲಾದವರು ಪ್ರಾಣಶಬ್ದವಾಚ್ಯರಲ್ಲವೆಂದು - ಸಿದ್ಧಾಂತ ಮಾಡಿದ್ದಾರೆ.

''ಪ್ರಾಣಸ್ತಥಾನುಗಮಾತ್'' = ಬ್ರಹ್ಮನಲ್ಲಿರುವ ಅಸಾಧಾರಣ ಧರ್ಮಗಳು ಕೇಳಿಸುತ್ತಿರುವುದರಿಂದ ಪ್ರಾಣಃ ಶಬ್ದವಾಚ್ಯನಾದವನು ಬ್ರಹ್ಮನೇ ಆಗಿರುತ್ತಾನೆ ಎಂದು ಪ್ರಥಮಸೂತ್ರವನ್ನು ವ್ಯಾಖ್ಯಾನಿಸುತ್ತಾರೆ.

### ಅದ್ವೈತಿಗಳ ದ್ವಿತೀಯ ತೃತೀಯ ಸೂತ್ರವ್ಯಾಖ್ಯಾನ

**प्रकाशः** – 'वक्तुः' उपदेष्टुरिन्द्रस्य ''प्राणोऽस्मि'' इति प्राणत्वेन स्वात्मोपदेशादिन्द्र एव प्राणो न ब्रह्मेति पुनराक्षिप्य, अस्मिन् प्रकरणे ''यावद्धि अस्मिन् शरीरे प्राणो वसति तावदायुः'' इत्यायुरवधित्वस्य ''प्रज्ञाऽऽनन्दोऽजरः'' इति प्रज्ञात्वादेश्चात्त्याऽध्यात्मशब्दितप्रत्यगात्मसम्बन्धबाहुल्यसत्त्वात् तस्य च प्राग् भूतेन्द्रेऽयोगात् ''मामेव विजानीहि प्राणोऽस्मि'' इति स्वात्मोपदेशस्य च ''अहं ब्रह्माऽस्मि'' इति शास्त्राधीनदृष्ट्या ''अहं मनुरभवं'' इति वामदेवस्य मनुत्वादिना स्वात्मोपदेशवदुपपत्तेः ब्रह्मैव प्राण इति द्वितीयतृतीयाभ्यामुक्त्वा,

ಹೀಗೆ ಸಿದ್ಧಾಂತ ಮಾಡಿದರೂ ಸಹ ಪುನಃ ಆಕ್ಷೇಪ ಬರುತ್ತದೆ - ಉಪದೇಶಕನಾದ ದೇವೇಂದ್ರನೇ ''ಪ್ರಾಣೋಽಸ್ಮಿ ಪ್ರಜ್ಞಾತ್ಮಾ ಮಾಮೇವ ವಿಜಾನೀಹಿ'' ಇತ್ಯಾದಿಯಾಗಿ ತನ್ನನ್ನೇ ಪ್ರಾಣನೆಂದು ಸ್ಪಷ್ಟವಾಗಿ

ಹೇಳಿಕೊಂಡಿದ್ದಾನೆ. ಆದ್ದರಿಂದ ಪ್ರಾಣಶಬ್ದದಿಂದ ದೇವೇಂದ್ರನೇ ವಾಚ್ಯನಾಗಬೇಕು ಹೊರತು, ಬ್ರಹ್ಮನು ಹೇಗೆ ತಾನೇ ವಾಚ್ಯನಾಗುತ್ತಾನೆ? ಎಂಬ ಈ ಆಕ್ಷೇಪವನ್ನು ಪರಿಹರಿಸಲು ಮುಂದಿನ ಸೂತ್ರವು ಹೊರಟಿದೆ. ಈ ಪ್ರಕರಣದಲ್ಲಿ ''ಯಾವದ್ಧಿ ಅಸ್ಮಿನ್ ಶರೀರೇ ಪ್ರಾಣೋ ವಸತಿ ತಾವದಾಯುಃ'' ಇತ್ಯಾದಿಯಾಗಿ ಶರೀರದಲ್ಲಿ ಪ್ರಾಣ ಇರುವವರೆಗೆ ಮಾತ್ರ ಆಯುಷ್ಯವೆಂದು ಕೇಳಿಸುತ್ತಿದೆ. ಮತ್ತು ''ಪ್ರಜ್ಞಾಽಽನಂದೋಽಜರಃ'' ಎಂದು ಪ್ರಜ್ಞಾತ್ಮವು ಕೇಳಿಸುತ್ತಿದೆ. ಆ ಪ್ರಕರಣದಲ್ಲಿ ಅಧ್ಯಾತ್ಮ ಎನಿಸುವ ಪ್ರತ್ಯಗಾತ್ಮನ (ಬ್ರಹ್ಮಚೈತನ್ಯದ) ಸಂಬಂಧವೇ ಹೆಚ್ಚಾಗಿ ಕೇಳಿಸುತ್ತಿದೆ. ಇದು ಪ್ರಾಗ್‌ಚೈತನ್ಯನಾದ ದೇವೇಂದ್ರನಲ್ಲಿ ಕೂಡುವುದಿಲ್ಲ ಹೊರತಾಗಿ ಬ್ರಹ್ಮನಲ್ಲಿಯೇ ಸಕಲ ಶಬ್ದವಾಚ್ಯತ್ವವನ್ನು ಹೇಳಬೇಕು.

ಹಾಗಾದರೆ ''ಮಾಮೇವ ವಿಜಾನೀಹಿ'' ''ಪ್ರಾಣೋಽಸ್ಮಿ ಪ್ರಜ್ಞಾತ್ಮಾ'' ಇತ್ಯಾದಿಯಾಗಿ ಸ್ವಾತ್ಮೋಪದೇಶವು ಕಾಣಿಸುತ್ತಿದೆಯಲ್ಲ? ಎಂದರೆ ಈ ಉಪದೇಶವನ್ನು ಗೌಣವಾಗಿ ಅರ್ಥೈಸಿಕೊಳ್ಳಬೇಕು. ''ಅಹಂ ಬ್ರಹ್ಮಾಸ್ಮಿ'' ಎಂಬ ಜ್ಞಾನವು ಶಾಸ್ತ್ರದಿಂದ ಬರುವಂತೆ ''ಅಹಂ ಮನುರಭವಂ'' ಎಂಬಲ್ಲಿ ವಾಮದೇವನು ತನ್ನನ್ನು 'ಮನು' ಎಂದು ಉಪದೇಶಿಸಿಕೊಂಡಂತೆ ''ಮಾಮೇವ ವಿಜಾನೀಹಿ'' ಎಂಬ ದೇವೇಂದ್ರನ ಮಾತೂ ಸಹ ಶಾಸ್ತ್ರಾಧೀನ ದೃಷ್ಟಿಯಿಂದ ಹೇಳಲ್ಪಟ್ಟದ್ದೆಂದು ಭಾವಿಸಬೇಕು. ಆದ್ದರಿಂದ ಬ್ರಹ್ಮನೇ ಪ್ರಾಣಶಬ್ದ ವಾಚ್ಯನು ಎಂಬುದಾಗಿ ಮೂರು ಮತ್ತು ನಾಲ್ಕನೇ ಸೂತ್ರಗಳ ಅಭಿಪ್ರಾಯ.

ಸೂತ್ರಾರ್ಥವನ್ನು ಹೀಗೆ ಹೇಳುತ್ತಾರೆ - ವಕ್ತುಃ = ಉಪದೇಶಮಾಡುತ್ತಿರುವ ದೇವೇಂದ್ರನ, ಆತ್ಮೋಪದೇಶಾತ್ = ತಾನೇ ''ಮಾಮೇವ ವಿಜಾನೀಹಿ'' ''ಪ್ರಾಣೋಽಸ್ಮಿ ಪ್ರಾಜ್ಞಾತ್ಮಾ'' ಎಂದು ತನ್ನನ್ನೇ ಪ್ರಾಣಸ್ವರೂಪನೆಂದು ಉಪದೇಶಿಸಿಕೊಂಡಿದ್ದರಿಂದ ಪ್ರಾಣಶಬ್ದದಿಂದ ದೇವೇಂದ್ರನೇ ವಾಚ್ಯನಾಗುತ್ತಾನೆ. ಇತಿ ಚೇತ್ ನ = ಈ ಆಕ್ಷೇಪವು ಸರಿಯಲ್ಲ. ಏಕೆಂದರೆ, ಅಸ್ಮಿನ್ = ಈ ಪ್ರಕರಣದಲ್ಲಿ , ಅಧ್ಯಾತ್ಮ ಸಂಬಂಧಭೂಮಾ = ಪ್ರತ್ಯಗಾತ್ಮನ ಧರ್ಮಗಳೇ ಹೆಚ್ಚಾಗಿ ಕೇಳಿಸುತ್ತಿರುವುದರಿಂದ ಬ್ರಹ್ಮನೇ ಪ್ರಾಣಶಬ್ದ ವಾಚ್ಯನು ಎಂದು ಎರಡನೇ ಸೂತ್ರಕ್ಕೆ ವ್ಯಾಖ್ಯಾನಿಸುತ್ತಾರೆ.

ಮೂರನೇ ಸೂತ್ರಾರ್ಥ - ಉಪದೇಶಃ = ''ಪ್ರಾಣೋಽಸ್ಮಿ ಪ್ರಜ್ಞಾತ್ಮಾ'' ಎಂಬ ದೇವೇಂದ್ರನ ಉಪದೇಶವು, ವಾಮದೇವವತ್ = ಅಹಂ ಮನುರಭವಂ ಇತ್ಯಾದಿಯಾಗಿ ವಾಮದೇವಋಷಿಯ ಉಪದೇಶದಂತೆ, ಶಾಸ್ತ್ರದೃಷ್ಟ್ಯಾ = ಶಾಸ್ತ್ರಕ್ಕೆ ಅನುಗುಣವಾಗಿದೆ ಎಂದು.

### ಅದ್ವೈತಿಗಳ ಚತುರ್ಥ ಸೂತ್ರವ್ಯಾಖ್ಯಾನ

**प्रकाशः** – चतुर्थेन सूत्रेण पुनः **'न वाचं विजिज्ञासीत वक्तारं विद्यात्'** इति वक्तृत्वरूपजीवलिङ्गात् **'अथ प्राण एव प्रज्ञात्मा इदं शरीरं परिगृह्योत्थापयति'** इति प्राणलिङ्गात् हिततमत्वादिब्रह्मलिङ्गाच्च त्रयाणामप्युपास्यत्वं नतु ब्रह्मण एवेत्याक्षिप्य, तथात्वे उपासात्रैविध्यप्रसङ्गात् अन्यत्र **'प्राणस्य प्राणः'** इत्यादौ वाक्यान्तरे ब्रह्मलिङ्गैः प्राणशब्दे ब्रह्मपरत्वस्याऽऽश्रितत्वात् इहापि हिततमत्वादिलिङ्गयोगात् **'मामेव विजानीहि'** इत्युपक्रम्य **'प्राणोऽस्मि प्रज्ञात्मा'** इत्युक्त्वाऽन्ते **'स एष प्राण**

**एव प्रज्ञात्माऽऽनन्दोऽजरोऽमृतः' इत्युपसंहारेण ब्रह्मण्येकवाक्यत्वावगतौ तन्मध्यगतान्यलिङ्गानि ब्रह्मण्येव नेयानीति ब्रह्मैव प्राण इति सिद्धान्त इत्याहुरित्यर्थः ।**

ನಾಲ್ಕನೇ ಸೂತ್ರದಿಂದ ಹೀಗೆ ವ್ಯಾಖ್ಯಾನಿಸಿದ್ದಾರೆ - ''ನ ವಾಚಂ ವಿಜಿಜ್ಞಾಸೀತ ವಕ್ತಾರಂ ವಿದ್ಯಾತ್'' - ವಾಗಿಂದ್ರಿಯವನ್ನು ಉಪಾಸನೆ ಮಾಡಬಾರದು. ವಸ್ತುವಾದ ಜೀವನನ್ನೇ ಉಪಾಸನೆ ಮಾಡಬೇಕು ಎಂಬಲ್ಲಿ ಜೀವನ ಲಿಂಗವು ಕೇಳಿಸುತ್ತಿದೆ. ''ಅಥ ಪ್ರಾಣ ಏವ ಪ್ರಜ್ಞಾತ್ಮಾ ಇದಂ ಶರೀರಂ ಪರಿಗೃಹ್ಯೋತ್ಥಾಪಯತಿ'' ಪ್ರಾಣನೇ ಈ ಶರೀರವನ್ನು ಎಬ್ಬಿಸುತ್ತಾನೆ ಎಂಬಲ್ಲಿ ಮುಖ್ಯಪ್ರಾಣನ ಲಿಂಗವು ಕೇಳಿಸುತ್ತಿದೆ. ಹಿತತಮತ್ವವೇ ಮೊದಲಾದ ಬ್ರಹ್ಮನ ಲಿಂಗಗಳೂ ಸಹ ಕೇಳಿಸುತ್ತಿವೆ. ಆದ್ದರಿಂದ ಸಂಪೂರ್ಣ ಪ್ರಕರಣವು ಜೀವ, ಮುಖ್ಯಪ್ರಾಣ ಮತ್ತು ಬ್ರಹ್ಮನೆಂಬ ಮೂರು ವ್ಯಕ್ತಿಗಳ ಉಪಾಸನೆಯನ್ನು ವಿಧಿಸುತ್ತಿದೆ ಹೊರತು ಕೇವಲ ಬ್ರಹ್ಮನ ಉಪಾಸನೆಯನ್ನು ವಿಧಿಸುತ್ತಿಲ್ಲ.

ಈ ಆಕ್ಷೇಪವು ತಪ್ಪು. ಏಕೆಂದರೆ ಒಂದೇ ಪ್ರಕರಣದಲ್ಲಿ ಜೀವ, ಪ್ರಾಣ, ಬ್ರಹ್ಮರೆಂಬ ಮೂವರ ಉಪಾಸನೆಯನ್ನು ಹೇಳುವುದು ಪರಸ್ಪರ ವಿರುದ್ಧವಾಗಿದೆ. ಮತ್ತು ಬೇರೆಡೆ ''ಪ್ರಾಣಸ್ಯ ಪ್ರಾಣಃ'' ಇತ್ಯಾದಿ ವಾಕ್ಯಗಳಲ್ಲಿ ಬ್ರಹ್ಮಲಿಂಗವೇ ಕೇಳಿಸುತ್ತಿರುವುದರಿಂದ, ಬ್ರಹ್ಮಪರತ್ವವನ್ನು ಪ್ರಾಣಶಬ್ದಕ್ಕೆ ಅವಶ್ಯವಾಗಿ ಆಶ್ರಯಿಸಬೇಕು. ಅದರಂತೆ ಇಲ್ಲಿಯೂ ಸಹ ಹಿತತಮತ್ವಾದಿ ಲಿಂಗಗಳಿಂದ ಬ್ರಹ್ಮಪರತ್ವವನ್ನು ಒಪ್ಪಬೇಕು. 'ಮಾಮೇವ ವಿಜಾನೀಹಿ' ಎಂಬ ಉಪಕ್ರಮದಲ್ಲಿ 'ಪ್ರಾಣೋಽಸ್ಮಿ ಪ್ರಜ್ಞಾತ್ಮ' ಎಂಬುದಾಗಿ ಉಪದೇಶಿಸಿ ಕೊನೆಯಲ್ಲಿ ''ಸ ಏಷ ಪ್ರಾಣ ಏವ ಪ್ರಜ್ಞಾತ್ಮಾಽನಂದೋಽಜರೋಽಮೃತಃ'' ಎಂದು ಉಪಸಂಹಾರ ಮಾಡಲಾಗಿದೆ. ಈ ಉಪಕ್ರಮ ಉಪಸಂಹಾರಗಳಿಗೆ ಹಿತತಮತ್ವಾದಿಲಿಂಗಗಳ ಬಲದಿಂದ ಏಕವಾಕ್ಯತ್ವವು ತಿಳಿಯುತ್ತದೆ. ಆದಕಾರಣ ಇವುಗಳ ಮಧ್ಯದಲ್ಲಿರುವ ಬೇರೆ ಲಿಂಗಗಳನ್ನೂ ಸಹ ಬ್ರಹ್ಮನಲ್ಲಿಯೇ ಸಮನ್ವಯ ಮಾಡಬೇಕು. ಇಷ್ಟು ಸಿದ್ಧಾಂತ.

ನಾಲ್ಕನೇ ಸೂತ್ರಾರ್ಥ - ಜೀವಮುಖ್ಯಪ್ರಾಣಲಿಂಗಾತ್ = ಜೀವ ಹಾಗೂ ಮುಖ್ಯಪ್ರಾಣರ ಲಿಂಗವಿರುವುದರಿಂದ ಪ್ರಾಣಶಬ್ದ ವಾಚ್ಯರು ಅವರೇ ಆಗುತ್ತಾರೆ. ಇತಿ ಚೇತ್ ನ = ಇದು ತಪ್ಪು, ಉಪಾಸಾತ್ರೈವಿಧ್ಯಾತ್ = ಹಾಗಾದಲ್ಲಿ ಮೂರು ಬಗೆಯ ಉಪಾಸನೆಯನ್ನು ಹೇಳಿದಂತಾಗುತ್ತದೆ. ಆಶ್ರಿತತ್ವಾತ್ = ಬೇರೆಡೆ ಬ್ರಹ್ಮನ ಲಿಂಗದ ಬಲದಿಂದ ಪ್ರಾಣಶಬ್ದಕ್ಕೆ ಬ್ರಹ್ಮಪರತ್ವವನ್ನು ಆಶ್ರಯಿಸಲಾಗಿದೆ. ಅದರಂತೆ, ಇಹ ತದ್ಯೋಗಾತ್ = ಇಲ್ಲಿಯೂ ಸಹ ಬ್ರಹ್ಮನಲ್ಲಿ ಎಲ್ಲಾ ಧರ್ಮಗಳು ಸಮನ್ವಯವಾಗುತ್ತವೆ. ಆದ್ದರಿಂದ ಬ್ರಹ್ಮನೇ ಪ್ರಾಣನು.

ಭಾಮತಿಯ ಪ್ರಕಾರ ಅಧಿಕರಣ ರಚನೆ

**प्रकाशः – ॥ इतीन्द्रलिङ्गादित्यादि ॥** यथाश्रुतभाष्यानुरोधेन एवमुक्तिः । भामत्यां तु – शरीरधारणरूपलिङ्गस्य वायुगतत्वेऽपि वायुव्यापारस्य परमात्मायत्तत्वात् वक्तृत्वस्य च वाक्करणकव्यापारवत्त्वरूपस्य **''येन वागभ्युद्यते''** इति श्रुतेर्जीवरूपेणोपपत्तेरनेकब्रह्मलिङ्गानुरोधेनेन्द्रलिङ्गानामन्यथासिद्धेः न पूर्वपक्षोदय इत्याक्षिप्य, **''यो वै प्राणः सा प्रज्ञा या प्रज्ञा स प्राणः सह ह्येतावस्मिन् शरीरे वसतः**

सहोत्क्रामतः'' इति यस्यैव प्राणस्य प्रज्ञात्मना उपास्यत्वमुक्तं, तस्यैव प्राणस्य प्रज्ञात्मना सहोत्क्रमणकथनात् निर्भेदे ब्रह्मणि द्विवचनसहभावोत्क्रमणानामयोगाद् यथायोगं वाय्वादयस्त्रय एवात्रोपास्याः, वाक्यभेदस्य सह्यत्वादिति पूर्वपक्षयित्वा प्रागुक्तैकवाक्यतामाश्रित्य सिद्धान्तितम् । उक्तं –

तस्मादनन्यथासिद्धब्रह्मलिङ्गानुसारतः ।
एकवाक्यबलात्प्राणजीवलिङ्गोपपादनम् ॥ इतीति ध्येयम् ।

ಗ್ರಂಥದಲ್ಲಿ ಶಂಕರಭಾಷ್ಯದಲ್ಲಿರುವ ಪ್ರಕಾರ ಯಥಾವತ್ತಾಗಿ ಅಧಿಕರಣವನ್ನು ಅನುವಾದ ಮಾಡಿದರು. ಆದರೆ ಭಾಮತಿಯಲ್ಲಿ ಹೀಗೆ ಅಧಿಕರಣವನ್ನು ರಚಿಸಲಾಗಿದೆ -

ಶರೀರಧಾರಣವೆಂಬ ಲಿಂಗವು ವಾಯುವಿನಲ್ಲಿ ಇದ್ದರೂ ಸಹ ವಾಯುವಿನ ವ್ಯಾಪಾರವು ಪರಮಾತ್ಮನ ಅಧೀನವೇ ಆಗಿದೆ. ಅದರಂತೆ ವಕ್ತೃತ್ವವೆಂಬ ಜೀವನ ಲಿಂಗವೂ ಸಹ ''ಯೇನ ವಾಗಭ್ಯುದ್ಯತೇ'' ಎಂಬ ಶ್ರುತಿಯಂತೆ ಬ್ರಹ್ಮನಲ್ಲಿಯೇ ಕೂಡುತ್ತದೆ. ಏಕೆಂದರೆ ಬ್ರಹ್ಮನಿಗೆ ಜೀವರೂಪವೂ ಇರುವುದರಿಂದ ಜೀವಲಿಂಗವನ್ನು ಬ್ರಹ್ಮನಲ್ಲಿ ಕೂಡಿಸಬಹುದು. ಅದರಂತೆ ಇಂದ್ರರೂಪವೂ ಇರುವ ಬ್ರಹ್ಮನಲ್ಲಿ ಇಂದ್ರ-ಲಿಂಗವನ್ನು ಕೂಡಿಸಬಹುದು. ಜೀವ ಹಾಗೂ ಇಂದ್ರರ ಲಿಂಗಗಳು ಅನ್ಯಥಾಸಿದ್ಧವಾದ್ದರಿಂದ ಪೂರ್ವಪಕ್ಷವೇ ಹುಟ್ಟುವುದಿಲ್ಲವಲ್ಲ?

ಹೀಗೆ ಆಕ್ಷೇಪಿಸಿ ಪೂರ್ವಪಕ್ಷವನ್ನು ಭಾಮತಿ ಹೀಗೆ ಸಮರ್ಥಿಸಿದೆ -

''ಯೋ ವೈ ಪ್ರಾಣಃ ಸಾ ಪ್ರಜ್ಞಾ ಯಾ ಪ್ರಜ್ಞಾ ಸ ಪ್ರಾಣಃ ಸಹ ಹ್ಯೇತಾವಸ್ಮಿನ್ ಶರೀರೇ ವಸತಃ ಸಹೋತ್ಕ್ರಾಮತಃ'' ಎಂಬುದಾಗಿ ಯಾವ ಪ್ರಾಣನಿಗೆ 'ಪ್ರಜ್ಞಾತ್ಮಾ' ಎಂಬ ಉಪಾಸನೆ ಹೇಳಲ್ಪಟ್ಟಿದೆಯೋ ಅಂತಹ ಪ್ರಾಣನಿಗೆ ಪ್ರಜ್ಞಾತ್ಮನ ಜೊತೆಗೆ ಉತ್ಕ್ರಮಣವನ್ನೂ ಸಹ ಹೇಳಲಾಗಿದೆ. ಆದರೆ ಒಬ್ಬನೇ ಬ್ರಹ್ಮನಲ್ಲಿ ಈ ಎರಡು ವಿರುದ್ಧಧರ್ಮಗಳು ಕೂಡಲಾರವು. ಆದ್ದರಿಂದ ವಾಯು ಮೊದಲಾದ ಮೂವರೂ ಸಹ ಇಲ್ಲಿ ಉಪಾಸ್ಯರಾಗಿದ್ದಾರೆ. ವಾಕ್ಯಭೇದದೋಷವನ್ನು ಅನಿವಾರ್ಯವಾಗಿ ಸಹಿಸಿಕೊಳ್ಳಬೇಕು. ಹೀಗೆ ಪೂರ್ವಪಕ್ಷವನ್ನು ಸಮರ್ಥಿಸಿ ಹಿಂದೆ ಶಂಕರ ಭಾಷ್ಯದಲ್ಲಿ ನಿರೂಪಿಸಿದ ಪ್ರಕಾರ ಉಪಕ್ರಮೋಪ ಸಂಹಾರಗಳಿಗಿರುವ ಏಕವಾಕ್ಯತ್ವದ ಮೂಲಕ ಸಿದ್ಧಾಂತವನ್ನು ಸಮರ್ಥಿಸಲಾಗಿದೆ. ಇದನ್ನೇ ಭಾಮತಿಯಲ್ಲಿ ಹೀಗೆ ಹೇಳಿದೆ -

ತಸ್ಮಾದನ್ಯಥಾಸಿದ್ಧಬ್ರಹ್ಮಲಿಂಗಾನುಸಾರತಃ ।
ಏಕವಾಕ್ಯಬಲಾತ್ಪ್ರಾಣಜೀವಲಿಂಗೋಪಪಾದನಮ್ ॥

ಈ ಎಲ್ಲಾ ಕಾರಣಗಳಿಂದ ಅನ್ಯಥಾ ಸಿದ್ಧವಾದ ಬ್ರಹ್ಮಲಿಂಗಗಳನ್ನು ಅನುಸರಿಸಿ ಮತ್ತು ಉಪಕ್ರಮ ಉಪಸಂಹಾರಗಳಿಗಿರುವ ಏಕವಾಕ್ಯತ್ವವನ್ನು ಆಶ್ರಯಿಸಿ ಪ್ರಾಣ ಹಾಗೂ ಜೀವರ ಲಿಂಗಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಬೇಕು. ಭಾಮತಿಯಲ್ಲಿ ಹೇಳುವ ಇಷ್ಟು ವಿಷಯಗಳನ್ನು ಇಲ್ಲಿ ಗಮನಿಸಬೇಕು.

ಅಂತಿಮಪ್ರಾಣಾಧಿಕರಣ-(೧।೧।೧೨)

**गुरुराजीयम् – इन्द्रलिङ्गादिति ॥ इन्द्रस्य वचनरूपलिङ्गादित्यर्थः ॥ वायुलिङ्गादिति ॥ शरीरधारणरूपवायुलिङ्गादित्यर्थः ॥ जीवलिङ्गादिति ॥ वागादिभिः करणैः व्यापृतस्य कार्यकारणाध्यक्षस्य जीवस्य विज्ञेयत्वरूपलिङ्गादित्यर्थः । वक्तृत्वं च वाक्करणकव्यापारवत्त्वम् ॥**

## ಸಾರ

ಅದ್ವೈತಿಗಳೂ ಸಹ ನಮ್ಮಂತೆ ಪ್ರಾಣಶಬ್ದ ಸಮನ್ವಯಕ್ಕೋಸ್ಕರವೇ ಈ ಅಧಿಕರಣವು ಹೊರಟಿದೆ ಎಂದು ಹೇಳುತ್ತಾರೆ. ಆದರೆ ನಮ್ಮಂತೆ ಅವರು 'ಮನೋವಾಕ್‌ಪ್ರಾಣಃ' ಇತ್ಯಾದಿ ಐತರೇಯ ಶ್ರುತಿಯಲ್ಲಿರುವ ಪ್ರಾಣಶಬ್ದದ ಸಮನ್ವಯವನ್ನು ಹೇಳಲಾರರು. ಹೊರತಾಗಿ ಕೌಶೀತಕೀ ಬ್ರಾಹ್ಮಣೋಪನಿಷತ್ತಿನಲ್ಲಿರುವ 'ಪ್ರಾಣೋಽಸ್ಮಿ ಪ್ರಜ್ಞಾತ್ಮಾ' ಎಂಬಲ್ಲಿರುವ ಪ್ರಾಣಶಬ್ದದ ಸಮನ್ವಯವನ್ನು ಹೇಳಲು ಹೊರಟಿದ್ದಾರೆ.

ಪೂರ್ವಪಕ್ಷ - ಇಂದ್ರ ಹಾಗೂ ಪ್ರತರ್ದನ ರಾಜನಿಗೆ ನಡೆಯುವ ಸಂವಾದ ಮಧ್ಯದಲ್ಲಿ ಈ ವಿಷಯವಾಕ್ಯವು ಪ್ರಸಕ್ತವಾಗುತ್ತದೆ. ಪ್ರತರ್ದನರಾಜನನ್ನು ಕುರಿತು ಇಂದ್ರನು 'ಪ್ರಾಣೋಽಸ್ಮಿ ಪ್ರಜ್ಞಾತ್ಮಾ' 'ಮಾಮೇವ ವಿಜಾನೀಹಿ' ಎಂದು ಉಪದೇಶಿಸುತ್ತಾನೆ. ಈ ವಾಕ್ಯವನ್ನು ನೋಡಿದಾಗ ತನ್ನನ್ನೇ ಪ್ರಾಣನೆಂದು ದೇವೇಂದ್ರನು ಹೇಳಿಕೊಂಡಿದ್ದರಿಂದ ದೇವೇಂದ್ರನೇ ಪ್ರಾಣಶಬ್ದವಾಚ್ಯನೆಂದು ತಿಳಿಯುತ್ತದೆ. ಅಥವಾ ಪ್ರಾಣಶಬ್ದವಿರುವ ಆ ಪ್ರಕರಣದಲ್ಲಿ ಮತ್ತೊಂದು ವಾಕ್ಯವಿದೆ. ''ಅಥ ಪ್ರಾಣ ಏವ ಪ್ರಜ್ಞಾತ್ಮಾ ಇದಂ ಶರೀರಂ ಪರಿಗೃಹ್ಯೋತ್ಥಾಪಯತಿ'' ಎಂದು ಶರೀರಧಾರಣೆಗೆ ಕಾರಣನಾದ, ವಾಯುವಿನ ಬಗ್ಗೆ ಹೇಳಲಾಗಿದೆ. ಆದ್ದರಿಂದ ವಾಯುವೇ ಪ್ರಾಣಶಬ್ದವಾಚ್ಯನಾಗಬಹುದು. ಅಥವಾ 'ವಕ್ತಾರಂ ವಿದ್ಯಾತ್' ಎಂಬ ವಾಕ್ಯ ಹೇಳುವಂತೆ ವಕ್ತೃತ್ವ ಧರ್ಮವಿರುವ ಜೀವನೂ ಸಹ ಪ್ರಾಣಶಬ್ದವಾಚ್ಯನಾಗಬಹುದು. ಏನೇ ಆದರೂ ಬ್ರಹ್ಮನು ಪ್ರಾಣಶಬ್ದವಾಚ್ಯನೆಂದು ಸಮರ್ಥಿಸುವುದು ಕಷ್ಟ.

ಸಿದ್ಧಾಂತ - ಪ್ರಾಣಶಬ್ದವಾಚ್ಯನಾದವನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ ಇಂದ್ರ ಪ್ರತರ್ದನರ ಸಂವಾದವು ಪ್ರಾರಂಭವಾಗುವಾಗ ಪ್ರತರ್ದನನು ಇಂದ್ರನನ್ನು ಕುರಿತು 'ಯಂ ತ್ವಂ ಮನುಷ್ಯಾಯ ಹಿತತಮಂ ಮನ್ಯಸೇ' ಎಂದು ಮನುಷ್ಯರಿಗೆ ಹಿತವಾದದ್ದನ್ನೇ ಹೇಳು ಎಂದು ಪ್ರಾರ್ಥಿಸಿದ್ದಾರೆ. ಮನುಷ್ಯರಿಗೆ ಹಿತವಾದದ್ದು ಬ್ರಹ್ಮಜ್ಞಾನವೇ ಹೊರತು ದೇವೇಂದ್ರನ ಜ್ಞಾನವಲ್ಲ. ಆದ್ದರಿಂದ ದೇವೇಂದ್ರನು ಬ್ರಹ್ಮನನ್ನು ಉಪದೇಶಿಸಬೇಕು ಹೊರತು, ತನ್ನ ಬಗ್ಗೆ ಅಲ್ಲ ಮತ್ತು ಪ್ರಕರಣದ ಕೊನೆಯಲ್ಲೂ 'ಆನಂದೋಽಜರಃ' ಇತ್ಯಾದಿಯಾಗಿ ಬ್ರಹ್ಮನ ಲಿಂಗಗಳೇ ಬಹಳಷ್ಟು ಕೇಳಿಸುತ್ತಿವೆ. ಹೀಗೆ ಉಪಕ್ರಮೋಪಸಂಹಾರಗಳ ಬಲದಿಂದ ಸಂಪೂರ್ಣ ಪ್ರಕರಣವು ಬ್ರಹ್ಮಪರವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಪ್ರಾಣಶಬ್ದವಾಚ್ಯನಾದವನು ಪರಬ್ರಹ್ಮನೇ ಆಗಿದ್ದಾನೆ. ಭಾಮತಿಯಲ್ಲಿ ಶಂಕರಭಾಷ್ಯದಲ್ಲಿರುವ ಪೂರ್ವಪಕ್ಷವನ್ನೇ ಆಕ್ಷೇಪಿಸಿ ಸಿದ್ಧಾಂತವನ್ನು ಸಮರ್ಥಿಸಲಾಗಿದೆ.

ಹೀಗೆ ಶಂಕರಭಾಷ್ಯದಲ್ಲಿ ಈ ಅಧಿಕರಣವನ್ನು ನಿರೂಪಿಸಿದ್ದಾರೆ. ಆದರೆ ಈ ಅಧಿಕರಣಕ್ಕೆ ನಾವು 'ಅಂತಿಮಪ್ರಾಣಾಧಿಕರಣ' ಎಂಬ ಹೆಸರನ್ನು ಇಟ್ಟರೆ, ಅದ್ವೈತಿಗಳು 'ಪ್ರತರ್ದನಾಧಿಕರಣ'ವೆಂಬ ಹೆಸರನ್ನಿಟ್ಟಿದ್ದು ಗಮನಿಸಬೇಕಾದ ಅಂಶ.

* * * *

ಪರಿಪೂರ್ಣಚಂದ್ರಿಕಾ

## ಹಿತತಮತ್ವವು ಬ್ರಹ್ಮಲಿಂಗವಲ್ಲ

तात्पर्यचन्द्रिका

**तत्र, न तावत् परमपुरुषार्थसाधनत्वं हिततमत्वम्, त्वन्मते ज्ञानादेवाज्ञाननिवृत्त्या ब्रह्मणि तस्याभावात् । परमपुरुषार्थत्वं हिततमत्वं चेत्, सर्वोपप्लवरहितं मोक्षदशानुगतं शुद्धचैतन्यं हिततमं वाच्यम् । तस्य हिततमत्वं च न विशिष्टं प्रति तस्य मोक्षदशायामभावात् । नापि शुद्धं प्रति, तस्याखण्डत्वेन अस्येदं हिततममिति विभागायोगात् । किञ्च हितत्वं विना न हिततमत्वम् । न चाखण्डे हितत्वसामान्यं हिततमत्वविशेषश्च युक्तम् । तस्मान्न हिततमत्वं ब्रह्मलिङ्गम् ।**

ಅನುವಾದ - ಅದ್ವೈತಿಗಳ ಅಧಿಕರಣಶರೀರವು ಅಸಾಧುವಾಗಿದೆ. ಹಿತತಮತ್ವವೆಂಬ ಬ್ರಹ್ಮಲಿಂಗದ ಬಲದಿಂದ ಪ್ರಾಣ ಶಬ್ದವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಿದರು. ಆದರೆ ಹಿತತಮತ್ವದ ನಿರ್ವಚನವನ್ನೇ ಅವರಿಂದ ಮಾಡಲಾಗದು. ಅದು ಹೀಗೆ -

ಹಿತತಮತ್ವವೆಂದರೆ ಪರಮಪುರುಷಾರ್ಥ ಸಾಧನತ್ವವೆಂದು ಹೇಳುವುದು ತಪ್ಪು. ಏಕೆಂದರೆ ಅದ್ವೈತಿಗಳ ಮತದಲ್ಲಿ ಅಜ್ಞಾನವು ಜ್ಞಾನದಿಂದಲೇ ನಿವೃತ್ತವಾಗಲು ಸಾಧ್ಯ. ಆದರೆ ಬ್ರಹ್ಮನಲ್ಲಿ ಇದು ಇಲ್ಲದ ಕಾರಣ ಪರಮಪುರುಷಾರ್ಥಸಾಧನತ್ವವನ್ನು ಹಿತತಮವೆಂದು ಹೇಳಲಾಗದು.

ಇನ್ನು ಪರಮಪುರುಷಾರ್ಥತ್ವವನ್ನೇ ಹಿತತಮವೆಂದು ಹೇಳಬೇಕು. ಸಕಲ ಧರ್ಮವಿಧುರನಾದ ಮೋಕ್ಷದಶೆಯಲ್ಲಿಯೂ ಅನುಗತನಾಗುವ ಶುದ್ಧಚೈತನ್ಯನನ್ನೇ ಹಿತತಮನೆಂದು ಹೇಳಬೇಕು. ಆ ಹಿತತಮತ್ವವು ವಿಶಿಷ್ಟನನ್ನು ಕುರಿತು ಎಂದು ಹೇಳಲಾಗದು. ಆದರೆ ಆ ವಿಶಿಷ್ಟಬ್ರಹ್ಮನು ಮೋಕ್ಷಕಾಲ-ದಲ್ಲಿ ಇರಲಾರನು. ಆದ್ದರಿಂದ ಶುದ್ಧನನ್ನು ಕುರಿತೇ ಹಿತತಮತ್ವವನ್ನು ಹೇಳಬೇಕು. ಅವನು ಅಖಂಡಸ್ವರೂಪನಾದ್ದರಿಂದ ''ಇದು ಹಿತ, ಇದು ಹಿತತಮವೆಂಬ ವಿಭಾಗವೇ ಕೂಡುವುದಿಲ್ಲ''.

ಅಷ್ಟೇ ಅಲ್ಲದೆ ಹಿತತ್ವವೆಂಬ ಸಾಮಾನ್ಯಧರ್ಮ ಇದ್ದರಷ್ಟೇ ಹಿತತಮತ್ವ ಎಂಬ ವಿಶೇಷಧರ್ಮವನ್ನು ಹೇಳಲು ಸಾಧ್ಯ. ಶುದ್ಧಬ್ರಹ್ಮನು ಅಖಂಡಸ್ವರೂಪನಾದ್ದರಿಂದ ಹಿತತ್ವವೆಂಬ ಸಾಮಾನ್ಯಧರ್ಮ-ವನ್ನಾಗಲೀ, ಹಿತತಮತ್ವವೆಂಬ ವಿಶೇಷಧರ್ಮವನ್ನಾಗಲೀ ಹೇಳಲಾಗದು. ಆದ್ದರಿಂದ ಹಿತತಮತ್ವ-ವೆಂಬುದನ್ನು ಬ್ರಹ್ಮನ ಲಿಂಗವೆಂದು ಯಾವುದೇ ಪ್ರಕಾರದಿಂದಲೂ ಸಮರ್ಥಿಸಲಾಗದು.

### ಕಠಿಣ ಪದಾರ್ಥ

ಪರಮಪುರುಷಾರ್ಥಸಾಧನತ್ವಂ = ಮೋಕ್ಷಕ್ಕೆ ಸಾಧನವಾಗಿರುವಿಕೆಯನ್ನು, ತಸ್ಯ ಅಭಾವಾತ್ = ಬ್ರಹ್ಮನಿಗೆ ಹಿತತಮತ್ವವು ಬರಲಾರದು, ಸರ್ವೋಪಪ್ಲವರಹಿತಂ = ಯಾವುದೇ ಧರ್ಮಗಳ ಸಂಬಂಧವಿಲ್ಲ, ತಸ್ಯ ಅಖಂಡತ್ವೇನ = ಶುದ್ಧಬ್ರಹ್ಮನು ನಿರ್ಧರ್ಮಕನಾದ್ದರಿಂದ,

ಅಂತಿಮಪ್ರಾಣಾಧಿಕರಣ-(೧।೧।೧೨)

**प्रकाशः** – सूत्रार्थान् क्रमेण दूषयिष्यन्नाद्यसूत्रोक्तसिद्धान्तहेतुं तावद्दूषयति – **तत्रेति** ॥ यदुक्तं हिततमत्वं लिङ्गमिति, तत्किं भामत्युक्तरीत्या पुमर्थहेतुत्वमुत पुरुषार्थरूपत्वमिति विकल्प्याऽऽद्येऽसिद्धं ब्रह्मणीत्याह – **न तावदिति** ॥ अज्ञानोच्छेदस्यैव परमपुरुषार्थत्वात्तस्य च ज्ञानादेव सिद्धेः । उक्तञ्च –**"परमपुरुषार्थस्यापवर्गस्य परमात्मज्ञानादन्यतोऽनवाप्तेः"** इति । परम्परया तद्धेतुत्वस्य जीवेऽपि सम्भवात् । नच मुक्तिहेतुज्ञानविषयत्वं तत्, अशब्दार्थत्वात् ।

ವಿವರಣೆ - ಅದ್ವೈತಿಗಳು ವ್ಯಾಖ್ಯಾನಿಸಿದ ಎಲ್ಲಾ ಸೂತ್ರಗಳ ಅರ್ಥವನ್ನು ಕ್ರಮವಾಗಿ ದೂಷಿಸಲು ಪ್ರಾರಂಭಿಸಿದ್ದಾರೆ. ಮೊದಲು ಪ್ರಥಮಸೂತ್ರದಲ್ಲಿ ಹೇಳಿದ ಹಿತತಮತ್ವವೆಂಬ ಸಿದ್ಧಾಂತಹೇತುವನ್ನು 'ತತ್ರ' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ.

ಹಿತತಮತ್ವವು ಬ್ರಹ್ಮನ ಲಿಂಗವಾಗಿದೆ ಎಂದು ಹೇಳಿದಿರಿ. ಭಾಮತಿಯ ಪ್ರಕಾರ ಪುರುಷಾರ್ಥ-ಸಾಧನವೆಂದು ಇದರರ್ಥವೋ? ಅಥವಾ ಪುರುಷಾರ್ಥಸ್ವರೂಪವೆಂದು ಇದರರ್ಥವೋ? ಪ್ರಥಮಪಕ್ಷದಲ್ಲಿ ಇಂತಹ ಹಿತತಮತ್ವವು ಬ್ರಹ್ಮನಲ್ಲಿ ಅಸಿದ್ಧವಾಗಿದೆಯೆಂದು 'ನ ತಾವತ್' ಗ್ರಂಥದಿಂದ ನಿರೂಪಿಸುತ್ತಿದ್ದಾರೆ.

ಅಜ್ಞಾನನಿವೃತ್ತಿಯು ಪರಮಪುರುಷಾರ್ಥವಾಗಿದೆ. ಇಂಥ ಪರಮಪುರುಷಾರ್ಥವು ಜ್ಞಾನದಿಂದಷ್ಟೇ ಸಿದ್ಧವಾಗುತ್ತದೆ. ಇದನ್ನೇ "ಪರಮಪುರುಷಾರ್ಥಸ್ಯಾಪವರ್ಗಸ್ಯ ಪರಮಾತ್ಮಜ್ಞಾನಾದನ್ಯತೋಽನವಾಪ್ತೇಃ" "ಪರಮಪುರುಷಾರ್ಥವೆನಿಸಿದ ಮೋಕ್ಷವು ಪರಮಾತ್ಮನ ಜ್ಞಾನವನ್ನು ಬಿಟ್ಟು ಬೇರೆಯದರಿಂದ ದೊರೆಯಲಾರದು" ಎಂದು ಅದ್ವೈತಿಗಳೇ ಹೇಳಿದ್ದಾರೆ. ಆದ್ದರಿಂದ ಬ್ರಹ್ಮಜ್ಞಾನದಿಂದಲೇ ಮೋಕ್ಷವು ದೊರೆಯುತ್ತದೆ ಹೊರತು ನೇರವಾಗಿ ಬ್ರಹ್ಮನಿಂದ ದೊರೆಯಲಾರದು. ಇನ್ನು ಪರಂಪರೆಯಿಂದ ಬ್ರಹ್ಮನು ಮೋಕ್ಷಕ್ಕೆ ಕಾರಣನಾಗಿದ್ದಾನಲ್ಲವೇ? ಎಂದು ಪ್ರಶ್ನಿಸಬಹುದು. ಇದು ಸರಿಯಲ್ಲ. ಇಂತಹ ಪರಂಪರೆಯ ಮೋಕ್ಷಕಾರಣತ್ವವು ಜ್ಞಾನಕ್ಕೆ ಕರ್ತೃವಾದ ಜೀವನಲ್ಲಿಯೂ ಹೇಳಬಹುದು. ಮೋಕ್ಷಕ್ಕೆ ಹೇತುವಾದ ಜ್ಞಾನವಿಷಯನೆಂಬರ್ಥವನ್ನು ಹಿತತಮಶಬ್ದಕ್ಕೆ ಹೇಳಲಾಗದು. ಹಿತತಮಶಬ್ದಕ್ಕೆ ಈ ಅರ್ಥವನ್ನು ಹೇಳಲು ಯಾವುದೇ ಆಧಾರವಿರುವುದಿಲ್ಲ.

**प्रकाशः** – किञ्च अत्र प्राणः किं विशिष्टं ब्रह्मेति सिद्धान्त्यते, शुद्धमिति वा ? आद्येऽसिद्धेः। द्वितीये "एष ह्येव साधु कर्म" इत्युक्तपुण्यपापकर्तृत्वाद्ययोग इति भावः ।

द्वितीयं निरस्यति – **परमेति** ॥ तत्किं विशिष्टस्य शुद्धस्य वा लिङ्गम् ? नाद्यः, तस्याज्ञानाद्युपपप्लवतस्तदयोगात् ।

द्वितीये विशिष्टं संसारिणं प्रति शुद्धं हिततममित्युच्यते, मुक्तं शुद्धं प्रत्येव वा? आद्यं निरस्यति – **तस्येति** ॥ द्वितीयं निराह – **नापीति** ॥ 'अस्य' इति षष्ठ्यर्थस्य भेदघटितत्वात्कल्पितभेदस्यापि तदाऽभावादिति भावः ॥

ಮತ್ತೊಂದು ದೋಷ - ನೀವು ಸಮನ್ವಯ ಮಾಡುತ್ತಿರುವ ಪ್ರಾಣಶಬ್ದದಿಂದ ವಿಶಿಷ್ಟಬ್ರಹ್ಮನು ಪ್ರತಿಪಾದ್ಯನೋ? ಅಥವಾ ಶುದ್ಧಬ್ರಹನೋ? ವಿಶಿಷ್ಟಬ್ರಹ್ಮನು ಪ್ರಾಣಶಬ್ದವಾಚ್ಯನೆಂದು ನೀವೇ ಒಪ್ಪಿಲ್ಲ. ಶುದ್ಧಬ್ರಹ್ಮನು ಪ್ರಾಣಶಬ್ದವಾಚ್ಯನೆಂದು ಹೇಳಿದರೆ. ''ಏಷ ಹ್ಯೇವ ಸಾಧು ಕರ್ಮ'' ಇತ್ಯಾದಿಯಾಗಿ ಹೇಳಲ್ಪಟ್ಟ ಪುಣ್ಯಕರ್ತೃತ್ವ, ಪಾಪಕರ್ತೃತ್ವಾದಿ ಧರ್ಮಗಳು ಕೂಡುವುದಿಲ್ಲ. ಒಟ್ಟಾರೆ ಪ್ರಾಣಶಬ್ದವಾಚ್ಯತ್ವವನ್ನು ಬ್ರಹ್ಮನಲ್ಲಿ ಸಮರ್ಥಿಸಲಾಗದು.

ಹಿಂದೆ ಹಿತತಮತ್ವವನ್ನು ಪುರುಷಾರ್ಥಸಾಧನವೆಂದು ಮತ್ತು ಪುರುಷಾರ್ಥಸ್ವರೂಪವೆಂದು ಎರಡು ವಿಕಲ್ಪಗಳನ್ನು ಮಾಡಿದ್ದರು. ಪ್ರಥಮಪಕ್ಷವನ್ನು ಇಲ್ಲಿಯತನಕ ನಿರಾಕರಿಸಿದ್ದಾಯಿತು. ಈಗ ಪುರುಷಾರ್ಥ-ಸ್ವರೂಪವೆಂಬ ಎರಡನೆಯ ಪಕ್ಷವನ್ನು 'ಪರಮಪುರುಷಾರ್ಥತ್ವಂ ಹಿ' ಇತ್ಯಾದಿ ಗ್ರಂಥದಿಂದ ನಿರಾ-ಕರಿಸುತ್ತಿದ್ದಾರೆ.

ಪರಮಪುರುಷಾರ್ಥಸ್ವರೂಪವಾಗಿರುವಿಕೆಯು ವಿಶಿಷ್ಟಬ್ರಹ್ಮನ ಲಿಂಗವೋ? ಅಥವಾ ಶುದ್ಧಬ್ರಹ್ಮನ ಲಿಂಗವೋ? ಮೊದಲನೆಯ ಪಕ್ಷ ತಪ್ಪು. ಅಜ್ಞಾನಾದಿಗಳಿಂದ ಕೂಡಿದ ವಿಶಿಷ್ಟಬ್ರಹ್ಮನು ಪರಮ-ಪುರುಷಾರ್ಥಸ್ವರೂಪನಾಗಲು ಸಾಧ್ಯವಿಲ್ಲ. ಆದ್ದರಿಂದ ಶುದ್ಧಬ್ರಹ್ಮನೇ ಪರಮಪುರುಷಾರ್ಥಸ್ವರೂಪ-ನೆನ್ನಬೇಕು. ಆವಾಗ ಪುನಃ ಪ್ರಶ್ನೆ ಬರುತ್ತದೆ. ಆ ಶುದ್ಧಬ್ರಹ್ಮನು ವಿಶಿಷ್ಟಬ್ರಹ್ಮನೆನಿಸಿದ ಸಂಸಾರಿಜೀವನನ್ನು ಕುರಿತು ಹಿತತಮನೋ? ಅಥವಾ ಶುದ್ಧಬ್ರಹ್ಮನನ್ನು ಕುರಿತು ಹಿತತಮನೋ? (ಅಂದರೆ ತನಗೆ ತಾನೇ ಹಿತತಮನೋ?)

ಪ್ರಥಮ ಪಕ್ಷವನ್ನು 'ತಸ್ಯ' ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ. ದ್ವಿತೀಯಪಕ್ಷವನ್ನು 'ನಾಪಿ' ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ. ತನಗೆ ತಾನೇ ಏಕೆ ಹಿತತಮನಾಗಲಾರ ? ಎಂದರೆ 'ಅಸ್ಯ ಇದಂ ಹಿತಂ' ಎಂದು ಹೇಳಬೇಕು. ಅಸ್ಯ ಎಂಬ ಷಷ್ಠ್ಯರ್ಥವು ಭೇದಘಟಿತವಾದ್ದರಿಂದ ಕಲ್ಪಿತಭೇದವನ್ನು ಸಹ ಶುದ್ಧಬ್ರಹ್ಮನಲ್ಲಿ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಶುದ್ಧಬ್ರಹ್ಮನಿಗೆ ತಾನೇ ಹಿತತಮನಾಗಲಾರನೆಂದು ಅಭಿಪ್ರಾಯ.

## ಸಾರ

ಅದ್ವೈತಿಗಳು ರಚಿಸಿದ ಅಧಿಕರಣಶರೀರವು ಸಮಂಜಸವಲ್ಲ. ಏಕೆಂದರೆ ಇಂದ್ರ ಪ್ರತರ್ದನರ ಸಂವಾದ ಪ್ರಕರಣದಲ್ಲಿ ಪ್ರಾಪ್ತವಾದ ಯಾವುದೇ ಧರ್ಮಗಳು ನಿರ್ವಿಶೇಷ ಬ್ರಹ್ಮನಲ್ಲಿ ಇರುವುದಿಲ್ಲ.

ಶ್ರುತಿಯು ಬ್ರಹ್ಮನನ್ನು ಹಿತತಮ ಎಂದು ಹೇಳಿದೆ. ಇದರರ್ಥ ಏನು? ಪರಮಪುರುಷಾರ್ಥವೆನಿಸಿದ ಮೋಕ್ಷವನ್ನು ನೀಡುತ್ತಾನಾದ್ದರಿಂದ ಬ್ರಹ್ಮನನ್ನು ಹಿತತಮನೆನ್ನಬೇಕು. ಆದರೆ ಜ್ಞಾನದಿಂದಲೇ ಅಜ್ಞಾನನಿವೃತ್ತಿ ಎಂಬ

ಮೋಕ್ಷವು ಸಾಧ್ಯವೆಂದು ಅದ್ವೈತಿಗಳು ಒಪ್ಪಿದ್ದಾರೆ. ಈಗ ಬ್ರಹ್ಮನನ್ನು ಅಜ್ಞಾನಿವರ್ತಕನೆಂದು ಹೇಳಿದರೆ ಅಪಸಿದ್ಧಾಂತ ಬರುತ್ತದೆ.

ಇನ್ನು ಪರಮಪುರುಷಾರ್ಥಸ್ವರೂಪನಾದ್ದರಿಂದ ಬ್ರಹ್ಮನನ್ನು ಹಿತತಮನೆನ್ನಬೇಕು. ಈ ಪರಮಪುರುಷಾರ್ಥಸ್ವರೂಪನು ಶುದ್ಧಬ್ರಹ್ಮನೇ ಆಗಬೇಕು ಹೊರತು ವಿಶಿಷ್ಟಬ್ರಹ್ಮನಾಗುವುದಿಲ್ಲ. ಹೀಗೆ ಶುದ್ಧಬ್ರಹ್ಮನು ಹಿತತಮನಾಗುವುದಾದರೆ ವಿಶಿಷ್ಟಬ್ರಹ್ಮನನ್ನು ಕುರಿತು ಹಿತತಮನೆಂದು ಹೇಳಲಾಗದು. ಏಕೆಂದರೆ ಮೋಕ್ಷಾವಸ್ಥೆಯಲ್ಲಿ ವಿಶಿಷ್ಟಬ್ರಹ್ಮನೇ ಇರಲಾರ. ತನಗೆ ತಾನೇ ಹಿತತಮನೆಂದು ಹೇಳಬೇಕು. ಆವಾಗ ಅಖಂಡಸ್ವರೂಪನಾದ ಶುದ್ಧಬ್ರಹ್ಮನಲ್ಲಿ ''ಹಿತ, ಹಿತತಮ'' ಎಂಬ ವಿಭಾಗವನ್ನು ಮಾಡಿದಂತಾಗುತ್ತದೆ. ಇದರಿಂದ ಅದ್ವೈತ ಹಾನಿಯಾಗುತ್ತದೆ. ಮತ್ತು ಶುದ್ಧಬ್ರಹ್ಮನಲ್ಲಿ ಹಿತತಮತ್ವವೆಂಬ ವಿಶೇಷಧರ್ಮವನ್ನು ಒಪ್ಪಬೇಕಾದರೆ, ಮೊದಲು ಹಿತತ್ವವೆಂಬ ಸಾಮಾನ್ಯಧರ್ಮವನ್ನು ಒಪ್ಪಿರಬೇಕು. ಇದರಿಂದಲೂ ಅದ್ವೈತ ಹಾನಿಯಾಗುತ್ತದೆ. ಈ ಎಲ್ಲಾ ಕಾರಣಗಳಿಂದ ಹಿತತಮತ್ವವನ್ನಂತು ಬ್ರಹ್ಮನ ಲಿಂಗವೆಂದು ಹೇಳಲಾಗದು. ಹೀಗಿರುವಾಗ ಸಂಪೂರ್ಣ ಪ್ರಕರಣವನ್ನು ಬ್ರಹ್ಮಪರವೆಂದು ಸಮರ್ಥಿಸಲು ಹೇಗೆ ಸಾಧ್ಯ ?

* * * *

## ಉಳಿದ ಧರ್ಮಗಳೂ ಬ್ರಹ್ಮನಲ್ಲಿಲ್ಲ

तात्पर्यचन्द्रिका

**नापि ''तं मामायुरमृतमित्युपास्व'' इत्युक्तम् अमृतत्वोपासनकर्मत्वं च ब्रह्मलिङ्गम्,**

**अविद्यमानतदुपासनकर्मत्वस्येन्द्रादावपि सम्भवात् । नापि ''स यो मां वेद न स्तेयेन न भ्रूणहत्यया'' इत्युक्तः स्वज्ञानेन सर्वकर्मालेपो ब्रह्मलिङ्गम्, शुद्धे ''एष ह्येव साधु कर्म कारयति एष लोकाधिपतिः'' इत्यादेरयोगात्, विशिष्टज्ञानेन च त्वन्मते सर्वकर्मालेपाभावात् । एवं लिङ्गान्तरं दूष्यम् । इदं चाधिकरणं जीवत्वनिषेधेन ब्रह्मत्वविधानात्तदभेदप्रतिकूलम् ॥**

ಅನುವಾದ - ಇನ್ನು ''ತಂ ಮಾಮಾಯುರಮೃತಮಿತ್ಯುಪಾಸ್ವ'' ಅಮೃತಂ ಎಂಬಲ್ಲಿ ಹೇಳಿದಂತೆ ಅಮೃತತ್ವಪ್ರಕಾರಕವಾದ ಉಪಾಸನಾಕರ್ಮತ್ವವನ್ನು ಬ್ರಹ್ಮನ ಲಿಂಗವೆಂದು ಹೇಳಬೇಕು. ಇದೂ ಸಹ ಕೂಡುವುದಿಲ್ಲ. ಏಕೆಂದರೆ ಉಪಾಸನಾ ಎಂದರೆ ಇಲ್ಲದ್ದನ್ನು ಚಿಂತಿಸುವುದು ಎಂದು ಅದ್ವೈತಸಿದ್ಧಾಂತ. ಆದ್ದರಿಂದ ಇಂತಹ ಅಮೃತತ್ವಪ್ರಕಾರಕವಾದ ಉಪಾಸನಾಕರ್ಮತ್ವವು ಇಂದ್ರಾದಿಗಳಲ್ಲಿಯೂ ಬರುತ್ತದೆ.

ಮತ್ತು 'ಸ ಯೋ ಮಾಂ ವೇದ ನ ಸ್ತೇಯೇನ ನ ಭ್ರೂಣಹತ್ಯಯಾ' ಎಂಬ ಶ್ರುತಿಯಲ್ಲಿ ಹೇಳಿದ ಸ್ವಜ್ಞಾನದಿಂದ ಸರ್ವಕರ್ಮಾಲೇಪವನ್ನು ಬ್ರಹ್ಮನ ಲಿಂಗವೆಂದು ಅದ್ವೈತಿಗಳು ಹೇಳುತ್ತಾರೆ. ಇದೂ ಸಹ

ತಪ್ಪು. ಏಕೆಂದರೆ ಇಂತಹ ಸರ್ವಕರ್ಮಾಲೇಪಕ್ಕೆ ಹೇತುವಾದ ಜ್ಞಾನವಿಷಯತ್ವವನ್ನು ಶುದ್ಧಬ್ರಹ್ಮನಲ್ಲಿ ಹೇಳಲಾಗದು. 'ಏಷ ಹ್ಯೇವ ಸಾಧು ಕರ್ಮ ಕಾರಯತಿ ಏಷ ಲೋಕಾಧಿಪತಿಃ' ಇತ್ಯಾದಿ ಧರ್ಮಗಳು ನಿರ್ಧರ್ಮಕನು ನಿಷ್ಕ್ರಿಯನೂ ಆದ ಶುದ್ಧಬ್ರಹ್ಮನಲ್ಲಿ ಬರುವುದಿಲ್ಲ. ಇದು ವಿಶಿಷ್ಟಬ್ರಹ್ಮನ ಜ್ಞಾನದಿಂದ ಸರ್ವಕರ್ಮಾಲೇಪವನ್ನು ಅದ್ವೈತಿಗಳೇ ಒಪ್ಪಿರುವುದಿಲ್ಲ.

ಇದರಂತೆ ಅಜರತ್ವವೇ ಮೊದಲಾದ ಬೇರೆ ಲಿಂಗಗಳೂ ಸಹ ಬ್ರಹ್ಮನಲ್ಲಿ ಬರುವುದಿಲ್ಲವೆಂಬುದನ್ನು ತಿಳಿಯಬೇಕು.

ಮತ್ತೊಂದು ದೊಡ್ಡ ದೋಷ - ಅದ್ವೈತಿಗಳು ಈ ಅಧಿಕರಣದಲ್ಲಿ ಬ್ರಹ್ಮನಲ್ಲಿ ಜೀವತ್ವವನ್ನು ನಿಷೇಧಿಸಿ ಬ್ರಹ್ಮತ್ವವನ್ನು ಸಮರ್ಥಿಸುತ್ತಿದ್ದಾರೆ. ಇದು ಜೀವಬ್ರಹ್ಮರ ಅಭೇದಪ್ರತಿಪಾದನೆಗೆ ಕೊಡಲಿ ಏಟಾಗಿದೆ.

**प्रकाशः – अविद्यमानेति ॥** त्वन्मते उपासनाविषयस्यासत्त्वस्वीकारात् । तथाच न पूर्वपक्षनिरास इति भावः ।

सर्वकर्मालेपहेतुज्ञानविषयत्वं शुद्धस्याङ्गीकृत्य, शुद्धं ब्रह्मैव प्रकरणे गीयते इत्युच्यते, उत विशिष्टस्य तदुपेत्य तदेवात्रोच्यत इति विकल्प्य आद्यं दूषयति – **शुद्ध इति ॥** शुद्धस्य 'निष्कलं निष्क्रियं' इत्यादिनौदासीन्यश्रवणादिति भावः ।

द्वितीयं निरस्यति – **विशिष्टेति ॥ एवमिति ॥** नापि ज्ञानात्मत्वं, जीवेऽपि सम्भवात् । नाप्यजरत्वामृतत्वलोकपालत्वादीनि, इन्द्रादिदेवे तदुपपत्तेः ।

किञ्चैतानि प्रज्ञात्मत्वादीनि शुद्धे चेत्, 'एष ह्येव साधु कर्म' इत्याद्ययोगः । विशिष्टे चेदसिद्धिरित्यादिरूपेण दूष्यमित्यर्थः ।

इदं परेषामनारभ्यमेवेत्याह – **इदञ्चेति ॥** तथाचाभेदवादिभिः कथमिदमारम्भणीयं, स्वव्याहतत्वादिति भावः ।

ವಿವರಣೆ - ಅದ್ವೈತ ಮತದಲ್ಲಿ ಉಪಾಸನೆಗೆ ವಿಷಯವಾದದ್ದನ್ನು ಅಸತ್ ಎಂದು ಅಂಗೀಕರಿಸಲಾಗಿದೆ. ಆದ್ದರಿಂದ ಅಮೃತತ್ವಪ್ರಕಾರಕವಾದ ಉಪಾಸನಾವಿಷಯತ್ವವನ್ನು ಬ್ರಹ್ಮನ ಧರ್ಮವೆಂದು ಅಂಗೀಕರಿಸಿ ಜೀವನಲ್ಲವೆಂದು ಪೂರ್ವಪಕ್ಷವನ್ನು ನಿರಾಸ ಮಾಡಲಾಗದು. ಆದ್ದರಿಂದ ಅಮೃತತ್ವಪ್ರಕಾರಕವಾದ ಉಪಾಸನಾ ಕರ್ಮತ್ವವೂ ಬ್ರಹ್ಮನ ಲಿಂಗವಾಗುವುದಿಲ್ಲ.

'ಸರ್ವಕರ್ಮಾಲೇಪಹೇತುಜ್ಞಾನವಿಷಯತ್ವ' ಎಂಬುದೂ ಬ್ರಹ್ಮಲಿಂಗವಲ್ಲ. ಏಕೆಂದರೆ ಈ ಧರ್ಮವನ್ನು ಶುದ್ಧಬ್ರಹ್ಮನಲ್ಲಿ ಅಂಗೀಕರಿಸಿ ಸಮಗ್ರ ಪ್ರಕರಣದಿಂದ ಶುದ್ಧಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಹೇಳುತ್ತಿರೋ? ಅಥವಾ ವಿಶಿಷ್ಟಬ್ರಹ್ಮನು ವಿಷಯನೆಂದು ಅಂಗೀಕರಿಸಿ ಅವನೇ ಪ್ರಕರಣಪ್ರತಿಪಾದ್ಯನೆಂದು

ಹೇಳುತ್ತಿರೋ? ಎಂದು ವಿಕಲ್ಪಿಸಿ ಪ್ರಥಮಪಕ್ಷವನ್ನು 'ಶುದ್ಧೇ' ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ. ಶುದ್ಧಬ್ರಹ್ಮನು 'ನಿಷ್ಕಲಂ ನಿಷ್ಕ್ರಿಯಂ' ಇತ್ಯಾದಿ ಪ್ರಮಾಣದಂತೆ ಉದಾಸೀನಸ್ವಭಾವದವನೆಂದು ಅದ್ವೈತಿಗಳು ಅಂಗೀಕರಿಸಿದ್ದರಿಂದ ಯಾವುದೇ ಕ್ರಿಯೆಯನ್ನಾಗಲೀ ಅಥವಾ ಧರ್ಮವನ್ನಾಗಲೀ ಅಂಗೀಕರಿಸಲು ಸಾಧ್ಯ-ವಿಲ್ಲವೆಂದು ಅಭಿಪ್ರಾಯ.

ಎರಡನೆಯ ಪಕ್ಷವನ್ನು 'ವಿಶಿಷ್ಟಜ್ಞಾನೇನ' ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ. ವಿಶಿಷ್ಟಬ್ರಹ್ಮನ ಜ್ಞಾನದಿಂದ ಪುಣ್ಯಪಾಪಾದಿಗಳ ಅಲೇಪವು ಉಂಟಾಗುತ್ತದೆಂದು ಅದ್ವೈತಿಗಳೇ ಒಪ್ಪಿರುವುದಿಲ್ಲ. ಇದರಂತೆ ಬೇರೆ ಧರ್ಮಗಳನ್ನು ಬ್ರಹ್ಮನಲ್ಲಿ ನಿರಾಕರಿಸಬೇಕೆಂದು 'ಏವಂ' ಇತ್ಯಾದಿ ಗ್ರಂಥದಿಂದ ಹೇಳುತ್ತಾರೆ. ಉದಾ: 'ಜ್ಞಾನಾತ್ಮತ್ವ' ಎಂಬುದನ್ನು ಬ್ರಹ್ಮನ ಧರ್ಮವೆಂದರೆ, ಜೀವನಲ್ಲಿಯೂ ಬರುತ್ತದೆ. 'ಅಜರತ್ವ', 'ಅಮೃತತ್ವ', 'ಲೋಕಪಾಲಕತ್ವ' ಮೊದಲಾದವುಗಳನ್ನು ಬ್ರಹ್ಮನ ಧರ್ಮವೆಂದರೆ ಇಂದ್ರಾದಿಗಳಲ್ಲಿಯೂ ಈ ಧರ್ಮಗಳು ಪ್ರಸಿದ್ಧವಾಗಿವೆ. ಆದ್ದರಿಂದ ಇಂದ್ರಪ್ರತರ್ದನರ ಸಂವಾದಪ್ರಕರಣದಲ್ಲಿರುವ ಯಾವುದೇ ಧರ್ಮಗಳನ್ನು ಶುದ್ಧಬ್ರಹ್ಮನಲ್ಲಿ ಅಥವಾ ವಿಶಿಷ್ಟಬ್ರಹ್ಮನಲ್ಲಿ ಸಮರ್ಥಿಸಲು ಅದ್ವೈತಿಗಳಿಗೆ ಸಾಧ್ಯವಿಲ್ಲ.

ಗಮನಿಸಬೇಕಾದ ಅಂಶ - ಅದ್ವೈತಿಗಳು ಹೇಳುತ್ತಿರುವ ಪ್ರಜ್ಞಾತ್ಮತ್ವವೇ ಮೊದಲಾದ ಧರ್ಮಗಳು ಶುದ್ಧಾತ್ಮನಲ್ಲಿ ಬರುವುದಾದರೆ ''ಏಷ ಹ್ಯೇವ ಸಾಧು ಕರ್ಮ'' ಇತ್ಯಾದಿ ಶ್ರುತಿಯಲ್ಲಿ ಹೇಳಿದ ಕರ್ಮಕರ್ತೃತ್ವಾದಿಗಳು ಶುದ್ಧಬ್ರಹ್ಮನಲ್ಲಿ ಕೂಡುವುದಿಲ್ಲ. ವಿಶಿಷ್ಟಬ್ರಹ್ಮನಲ್ಲಿ ಹೇಳಿದರೆ ಅಸಿದ್ಧಿದೋಷ ಬರುತ್ತದೆ. ಹೀಗೆ ಯಾವುದೇ ಧರ್ಮಗಳನ್ನು ಅದ್ವೈತಿಗಳು ಹೇಳಿದರೆ, ಈ ಪ್ರಕಾರದಲ್ಲಿ ನಿರಾಕರಣೆ ಮಾಡುವುದನ್ನು ಶಿಷ್ಯರು ತಿಳಿಯಬೇಕು.

ವಸ್ತುತಸ್ತು ಈ ಅಧಿಕರಣವು ಅದ್ವೈತಿಗಳಿಗೆ ಅನಾರಂಭಣೀಯವೇ ಆಗಿದೆಯೆಂದು 'ಇದಂಚ' ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ. ಅಭೇದವಾದಿಗಳು ಜೀವಬ್ರಹ್ಮಭೇದಸಾಧಕವಾದ ಧರ್ಮಗಳನ್ನು ಈ ಅಧಿ ಕರಣದಲ್ಲಿ ಸಮರ್ಥಿಸುತ್ತಿರುವುದರಿಂದ ಹೇಗೆ ತಾನೆ ಈ ಅಧಿಕರಣವು ಆರಂಭಣೀಯವಾಗುತ್ತದೆ. ಹಾಗೇನಾದರೂ, ಆರಂಭಮಾಡಿದರೆ ಅದ್ವೈತಿಗಳಿಗೆ ಸ್ವವ್ಯಾಹತಿ ಬರುತ್ತದೆಂದು ತಿಳಿಯಬೇಕು.

**गुरुराजीयम्** – लिङ्गान्तरं दूष्यमिति – 'स एष प्राण एष प्रज्ञात्माऽऽनन्दोऽजरोऽमृतः' इत्यादिलिङ्गान्तरमपि दूष्यमित्यर्थः ।

## ಸಾರ

ಎಷ್ಟೇ ಪ್ರಯತ್ನಪಟ್ಟರೂ ಹಿತತಮತ್ವವನ್ನು ಬ್ರಹ್ಮನ ಲಿಂಗವೆಂದು ಸಮರ್ಥಿಸಲು ಅದ್ವೈತಿಗಳು ಎಡವಿ ಬಿದ್ದರು. ಅಮೃತನೆಂಬ ಉಪಾಸನೆಗೆ ಬ್ರಹ್ಮನು ವಿಷಯನಾಗಿದ್ದಾನಾದ್ದರಿಂದ, ಅಮೃತತ್ವಪ್ರಕಾರಕ ಉಪಾಸನಾ-ಕರ್ಮತ್ವವನ್ನು ಬ್ರಹ್ಮನ ಲಿಂಗವೆಂದು ಹೇಳಲು ಪ್ರಯತ್ನಿಸುತ್ತಾರೆ. ಆದರೆ ಈ ಧರ್ಮವು ಇಂದ್ರಾದಿ ಇತರ ಯಾವುದೇ ದೇವತೆಗಳಲ್ಲಿಯೂ ಹೇಳಬಹುದು. ಏಕೆಂದರೆ ಅಮೃತರಾಗಿದ್ದರೆ ಮಾತ್ರ ಉಪಾಸನೆ ಮಾಡಬೇಕೆಂದೇನೂ ನಿಯಮವಿಲ್ಲ. ಉಪಾಸನೆಗೆ ಯಾವುದು ವಿಷಯವೋ ಅದು ಅಸತ್ತಾಗಿರುತ್ತದೆಂದು ಅದ್ವೈತಿಗಳ ಸಿದ್ಧಾಂತ.

ಮತ್ತು ಬ್ರಹ್ಮನ ಜ್ಞಾನವನ್ನು ಹೊಂದುವುದರಿಂದ ಪುಣ್ಯಪಾಪಾದಿಕರ್ಮಗಳ ಲೇಪವು ಉಂಟಾಗದ ಕಾರಣ "ಸರ್ವಕರ್ಮಾಲೇಪಹೇತುಜ್ಞಾನವಿಷಯತ್ವ" ಎಂಬುದನ್ನು ಬ್ರಹ್ಮನ ಲಿಂಗವೆಂದು ಹೇಳಬಹುದು. ಆದರೆ ಶುದ್ಧಬ್ರಹ್ಮನಲ್ಲಿ ಯಾವುದೇ ರೀತಿಯ ಕ್ರಿಯೆಯೇ ಇರಲಾರದ ಕಾರಣ ಈ ಧರ್ಮವು ಬರುವುದಿಲ್ಲ. ವಿಶಿಷ್ಟಬ್ರಹ್ಮನ ಜ್ಞಾನದಿಂದ ಪುಣ್ಯಪಾಪಾದಿಲೇಪಗಳು ಉಂಟಾಗುವುದಿಲ್ಲವೆಂದು ಅದ್ವೈತಿಗಳೇ ಒಪ್ಪಿಲ್ಲ. ಹೀಗೆ ಯಾವುದೇ ಧರ್ಮಗಳನ್ನು ಅದ್ವೈತಿಗಳು ಸಮರ್ಥಿಸಲು ಹೊರಟರೂ ಜಯಗಳಿಸಲು ಅವರಿಂದಾಗದು. ಏಕೆಂದರೆ ಶುದ್ಧಬ್ರಹ್ಮನಲ್ಲಂತೂ ಯಾವುದೇ ಧರ್ಮಗಳಿರುವುದಿಲ್ಲ. ವಿಶಿಷ್ಟಬ್ರಹ್ಮನಲ್ಲಿ ಆ ಧರ್ಮವನ್ನು ಹೇಳುವುದರಿಂದ ಅವರ ಇಷ್ಟವೇ ಸಿದ್ಧವಾಗುವುದಿಲ್ಲ. ಆದ್ದರಿಂದ ಈ ಅಧಿಕರಣವು ಏಕೆ ಹೊರಟಿದೆ ! ಎಂಬುದೇ ಅದ್ವೈತಿಗಳಿಗೆ ಅರ್ಥವಾಗಿಲ್ಲ.

ಆಶ್ಚರ್ಯವೆಂದರೆ ಅಭೇದಸಮರ್ಥನೆಯನ್ನೇ ಗುರಿಯನ್ನಾಗಿಸಿಕೊಂಡ ಅದ್ವೈತಿಗಳು ಈ ಅಧಿಕರಣದಲ್ಲಿ ಸ್ಪಷ್ಟವಾಗಿ ಜೀವಬ್ರಹ್ಮರ ಭೇದವನ್ನೇ ಹೇಳಿಬಿಟ್ಟಿದ್ದಾರೆ.

* * * *

## ರಾಮಾನುಜರ ಅಧಿಕರಣಶರೀರ

### तात्पर्यचन्द्रिका

**केचित्तु – "मामुपास्स्व" इति इन्द्रलिङ्गात्, जीवलिङ्गानां च जीवविशेषेन्द्रे पर्यवसानात्, प्राणलिङ्गे सत्यपि "प्राणोऽस्मि" इति प्राणस्य जीवविशेषेन्द्र-विशेषणत्वप्रतीतेर्जीववायुपक्षयोरनुत्थानादिन्द्रः प्राण इति प्राप्ते, "आनन्दोऽजरोमृतः" इत्यादिब्रह्मलिङ्गात् ब्रह्मैव प्राण इति सिद्धान्त इत्याहुः ।**

---

**श्रीभाष्यम्** – कौषीतकिब्राह्मणे प्रतर्दनविद्यायाम्, 'प्रतर्दनो ह वै दैवोदासिरिन्द्रस्य प्रियं धामोपजगाम युद्धेन च पौरुषेण च' इत्यारभ्य 'वरं वृणीष्व' इति वक्तारमिन्द्रं प्रति, 'त्वमेव मे वरं वृणीष्व यं त्वं मनुष्याय हिततमं मन्यसे' इति प्रतर्दनेनोक्ते स होवाच, प्राणोऽस्मि प्रज्ञात्मा तं मामायुरमृतमित्युपास्स्व (कौ.३-१४) इति श्रूयते । तत्र संशयः - किमयं हिततमोपासनकर्मतया इन्द्रप्राणशब्द निर्दिष्टो जीव एव, उत तदतिरिक्तः परमात्मेति । किं युक्तम्? जीव एवेति । कुतः । इन्द्रशब्दस्य जीवविशेष एव प्रसिद्धेः तत्समानाधिकरणस्य प्राणशब्दस्यापि तत्रैव वृत्तेः । अयमिन्द्राभिधानो जीवः प्रतर्दनेन, 'त्वमेव मे वरं वृणीष्व यं त्वं मनुष्याय हिततमं मन्यसे' इत्युक्तः, 'मामुपास्स्व इति स्वात्मोपासनं हिततममुपदिदेश । हिततमश्चामृतत्वाप्त्युपाय एव । जगत्कारणोपासनस्यैवामृतत्वप्राप्तिहेतुता, 'तस्य तावदेव चिरं यावन्न विमोक्ष्ये अथ सम्पत्स्ये' (छा. ६-१४-२) इत्यवगता । अतः प्रसिद्धजीवभाव इन्द्र एव कारणं ब्रह्म ॥

ಹೇಳುತ್ತಿರೋ? ಎಂದು ವಿಕಲ್ಪಿಸಿ ಪ್ರಥಮಪಕ್ಷವನ್ನು 'ಶುದ್ಧೇ' ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ. ಶುದ್ಧಬ್ರಹ್ಮನು 'ನಿಷ್ಕಲಂ ನಿಷ್ಕ್ರಿಯಂ' ಇತ್ಯಾದಿ ಪ್ರಮಾಣದಂತೆ ಉದಾಸೀನಸ್ವಭಾವದವನೆಂದು ಅದ್ವೈತಿಗಳು ಅಂಗೀಕರಿಸಿದ್ದರಿಂದ ಯಾವುದೇ ಕ್ರಿಯೆಯನ್ನಾಗಲೀ ಅಥವಾ ಧರ್ಮವನ್ನಾಗಲೀ ಅಂಗೀಕರಿಸಲು ಸಾಧ್ಯ-ವಿಲ್ಲವೆಂದು ಅಭಿಪ್ರಾಯ.

ಎರಡನೆಯ ಪಕ್ಷವನ್ನು 'ವಿಶಿಷ್ಟಜ್ಞಾನೇನ' ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ. ವಿಶಿಷ್ಟಬ್ರಹ್ಮನ ಜ್ಞಾನದಿಂದ ಪುಣ್ಯಪಾಪಾದಿಗಳ ಅಲೇಪವು ಉಂಟಾಗುತ್ತದೆಂದು ಅದ್ವೈತಿಗಳೇ ಒಪ್ಪಿರುವುದಿಲ್ಲ. ಇದರಂತೆ ಬೇರೆ ಧರ್ಮಗಳನ್ನು ಬ್ರಹ್ಮನಲ್ಲಿ ನಿರಾಕರಿಸಬೇಕೆಂದು 'ಏವಂ' ಇತ್ಯಾದಿ ಗ್ರಂಥದಿಂದ ಹೇಳುತ್ತಾರೆ. ಉದಾ: 'ಜ್ಞಾನಾತ್ಮತ್ವ' ಎಂಬುದನ್ನು ಬ್ರಹ್ಮನ ಧರ್ಮವೆಂದರೆ, ಜೀವನಲ್ಲಿಯೂ ಬರುತ್ತದೆ. 'ಅಜರತ್ವ', 'ಅಮೃತತ್ವ', 'ಲೋಕಪಾಲಕತ್ವ' ಮೊದಲಾದವುಗಳನ್ನು ಬ್ರಹ್ಮನ ಧರ್ಮವೆಂದರೆ ಇಂದ್ರಾದಿಗಳಲ್ಲಿಯೂ ಈ ಧರ್ಮಗಳು ಪ್ರಸಿದ್ಧವಾಗಿವೆ. ಆದ್ದರಿಂದ ಇಂದ್ರಪ್ರತರ್ದನರ ಸಂವಾದಪ್ರಕರಣದಲ್ಲಿರುವ ಯಾವುದೇ ಧರ್ಮಗಳನ್ನು ಶುದ್ಧಬ್ರಹ್ಮನಲ್ಲಿ ಅಥವಾ ವಿಶಿಷ್ಟಬ್ರಹ್ಮನಲ್ಲಿ ಸಮರ್ಥಿಸಲು ಅದ್ವೈತಿಗಳಿಗೆ ಸಾಧ್ಯವಿಲ್ಲ.

ಗಮನಿಸಬೇಕಾದ ಅಂಶ - ಅದ್ವೈತಿಗಳು ಹೇಳುತ್ತಿರುವ ಪ್ರಜ್ಞಾತ್ಮತ್ವವೇ ಮೊದಲಾದ ಧರ್ಮಗಳು ಶುದ್ಧಾತ್ಮನಲ್ಲಿ ಬರುವುದಾದರೆ ''ಏಷ ಹ್ಯೇವ ಸಾಧು ಕರ್ಮ'' ಇತ್ಯಾದಿ ಶ್ರುತಿಯಲ್ಲಿ ಹೇಳಿದ ಕರ್ಮಕರ್ತೃತ್ವಾದಿಗಳು ಶುದ್ಧಬ್ರಹ್ಮನಲ್ಲಿ ಕೂಡುವುದಿಲ್ಲ. ವಿಶಿಷ್ಟಬ್ರಹ್ಮನಲ್ಲಿ ಹೇಳಿದರೆ ಅಸಿದ್ಧಿದೋಷ ಬರುತ್ತದೆ. ಹೀಗೆ ಯಾವುದೇ ಧರ್ಮಗಳನ್ನು ಅದ್ವೈತಿಗಳು ಹೇಳಿದರೆ, ಈ ಪ್ರಕಾರದಲ್ಲಿ ನಿರಾಕರಣೆ ಮಾಡುವುದನ್ನು ಶಿಷ್ಯರು ತಿಳಿಯಬೇಕು.

ವಸ್ತುತಸ್ತು ಈ ಅಧಿಕರಣವು ಅದ್ವೈತಿಗಳಿಗೆ ಅನಾರಂಭಣೀಯವೇ ಆಗಿದೆಯೆಂದು 'ಇದಂಚ' ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ. ಅಭೇದವಾದಿಗಳು ಜೀವಬ್ರಹ್ಮಭೇದಸಾಧಕವಾದ ಧರ್ಮಗಳನ್ನು ಈ ಅಧಿ ಕರಣದಲ್ಲಿ ಸಮರ್ಥಿಸುತ್ತಿರುವುದರಿಂದ ಹೇಗೆ ತಾನೆ ಈ ಅಧಿಕರಣವು ಆರಂಭಣೀಯವಾಗುತ್ತದೆ. ಹಾಗೇನಾದರೂ, ಆರಂಭಮಾಡಿದರೆ ಅದ್ವೈತಿಗಳಿಗೆ ಸ್ವವ್ಯಾಹತಿ ಬರುತ್ತದೆಂದು ತಿಳಿಯಬೇಕು.

**ಗುರुराजीयम्** – लिङ्गान्तरं दूष्यमिति – 'स एष प्राण एष प्रज्ञात्माऽऽनन्दोऽजरोऽमृतः' इत्यादिलिङ्गान्तरमपि दूष्यमित्यर्थः ।

## ಸಾರ

ಎಷ್ಟೇ ಪ್ರಯತ್ನಪಟ್ಟರೂ ಹಿತತಮತ್ವವನ್ನು ಬ್ರಹ್ಮನ ಲಿಂಗವೆಂದು ಸಮರ್ಥಿಸಲು ಅದ್ವೈತಿಗಳು ಎಡವಿ ಬಿದ್ದರು. ಅಮೃತನೆಂಬ ಉಪಾಸನೆಗೆ ಬ್ರಹ್ಮನು ವಿಷಯನಾಗಿದ್ದಾನಾದ್ದರಿಂದ, ಅಮೃತತ್ವಪ್ರಕಾರಕ ಉಪಾಸನಾ-ಕರ್ಮತ್ವವನ್ನು ಬ್ರಹ್ಮನ ಲಿಂಗವೆಂದು ಹೇಳಲು ಪ್ರಯತ್ನಿಸುತ್ತಾರೆ. ಆದರೆ ಈ ಧರ್ಮವು ಇಂದ್ರಾದಿ ಇತರ ಯಾವುದೇ ದೇವತೆಗಳಲ್ಲಿಯೂ ಹೇಳಬಹುದು. ಏಕೆಂದರೆ ಅಮೃತರಾಗಿದ್ದರೆ ಮಾತ್ರ ಉಪಾಸನೆ ಮಾಡಬೇಕೆಂದೇನೂ ನಿಯಮವಿಲ್ಲ. ಉಪಾಸನೆಗೆ ಯಾವುದು ವಿಷಯವೋ ಅದು ಅಸತ್ತಾಗಿರುತ್ತದೆಂದು ಅದ್ವೈತಿಗಳ ಸಿದ್ಧಾಂತ.

ಪರಿಪೂರ್ಣಚಂದ್ರಿಕಾ

ಮತ್ತು ಬ್ರಹ್ಮನ ಜ್ಞಾನವನ್ನು ಹೊಂದುವುದರಿಂದ ಪುಣ್ಯಪಾಪಾದಿಕರ್ಮಗಳ ಲೇಪವು ಉಂಟಾಗದ ಕಾರಣ "ಸರ್ವಕರ್ಮಾಲೇಪಹೇತುಜ್ಞಾನವಿಷಯತ್ವ" ಎಂಬುದನ್ನು ಬ್ರಹ್ಮನ ಲಿಂಗವೆಂದು ಹೇಳಬಹುದು. ಆದರೆ ಶುದ್ಧಬ್ರಹ್ಮನಲ್ಲಿ ಯಾವುದೇ ರೀತಿಯ ಕ್ರಿಯೆಯೇ ಇರಲಾರದ ಕಾರಣ ಈ ಧರ್ಮವು ಬರುವುದಿಲ್ಲ. ವಿಶಿಷ್ಟಬ್ರಹ್ಮನ ಜ್ಞಾನದಿಂದ ಪುಣ್ಯಪಾಪಾದಿಲೇಪಗಳು ಉಂಟಾಗುವುದಿಲ್ಲವೆಂದು ಅದ್ವೈತಿಗಳೇ ಒಪ್ಪಿಲ್ಲ. ಹೀಗೆ ಯಾವುದೇ ಧರ್ಮಗಳನ್ನು ಅದ್ವೈತಿಗಳು ಸಮರ್ಥಿಸಲು ಹೊರಟರೂ ಜಯಗಳಿಸಲು ಅವರಿಂದಾಗದು. ಏಕೆಂದರೆ ಶುದ್ಧಬ್ರಹ್ಮನಲ್ಲಂತೂ ಯಾವುದೇ ಧರ್ಮಗಳಿರುವುದಿಲ್ಲ. ವಿಶಿಷ್ಟಬ್ರಹ್ಮನಲ್ಲಿ ಆ ಧರ್ಮವನ್ನು ಹೇಳುವುದರಿಂದ ಅವರ ಇಷ್ಟವೇ ಸಿದ್ಧವಾಗುವುದಿಲ್ಲ. ಆದ್ದರಿಂದ ಈ ಅಧಿಕರಣವು ಏಕೆ ಹೊರಟಿದೆ ! ಎಂಬುದೇ ಅದ್ವೈತಿಗಳಿಗೆ ಅರ್ಥವಾಗಿಲ್ಲ.

ಆಶ್ಚರ್ಯವೆಂದರೆ ಅಭೇದಸಮರ್ಥನೆಯನ್ನೇ ಗುರಿಯನ್ನಾಗಿಸಿಕೊಂಡ ಅದ್ವೈತಿಗಳು ಈ ಅಧಿ-ಕರಣದಲ್ಲಿ ಸ್ಪಷ್ಟವಾಗಿ ಜೀವಬ್ರಹ್ಮರ ಭೇದವನ್ನೇ ಹೇಳಿಬಿಟ್ಟಿದ್ದಾರೆ.

* * * *

## ರಾಮಾನುಜರ ಅಧಿಕರಣಶರೀರ

### तात्पर्यचन्द्रिका

**केचित्तु – ''मामुपास्स्व'' इति इन्द्रलिङ्गात्, जीवलिङ्गानां च जीवविशेषेन्द्रे पर्यवसानात्, प्राणलिङ्गे सत्यपि ''प्राणोऽस्मि'' इति प्राणस्य जीवविशेषेन्द्र-विशेषणत्वप्रतीतेर्जीववायुपक्षयोरनुत्थानादिन्द्रः प्राण इति प्राप्ते, ''आनन्दोऽ-जरोमृतः'' इत्यादिब्रह्मलिङ्गात् ब्रह्मैव प्राण इति सिद्धान्त इत्याहुः ।**

---

**श्रीभाष्यम्** – कौषीतकिब्राह्मणे प्रतर्दनविद्यायाम्, 'प्रतर्दनो ह वै दैवोदासि-रिन्द्रस्य प्रियं धामोपजगाम युद्धेन च पौरुषेण च' इत्यारभ्य 'वरं वृणीष्व' इति वक्तारमिन्द्रं प्रति, 'त्वमेव मे वरं वृणीष्व यं त्वं मनुष्याय हिततमं मन्यसे' इति प्रतर्दनेनोक्ते स होवाच, प्राणोऽस्मि प्रज्ञात्मा तं मामायुरमृतमित्युपास्स्व (कौ.३-१४) इति श्रूयते । तत्र संशयः - किमयं हिततमोपासनकर्मतया इन्द्रप्राणशब्द निर्दिष्टो जीव एव, उत तदतिरिक्तः परमात्मेति । किं युक्तम्? जीव एवेति । कुतः । इन्द्रशब्दस्य जीवविशेष एव प्रसिद्धेः तत्समानाधिकरणस्य प्राणशब्दस्यापि तत्रैव वृत्तेः । अयमिन्द्राभिधानो जीवः प्रतर्दनेन, 'त्वमेव मे वरं वृणीष्व यं त्वं मनुष्याय हिततमं मन्यसे' इत्युक्तः, 'मामुपास्स्व इति स्वात्मोपासनं हिततममुपदिदेश । हिततमश्चामृतत्वाप्राप्त्युपाय एव । जगत्कारणोपासनस्यैवामृतत्वप्राप्तिहेतुता, 'तस्य तावदेव चिरं यावन्न विमोक्ष्ये अथ सम्पत्स्ये' (छा. ६-१४-२) इत्यवगता । अतः प्रसिद्धजीवभाव इन्द्र एव कारणं ब्रह्म ॥

ಪೂರ್ವಪಕ್ಷ - ಪ್ರತರ್ದನವಿದ್ಯೆಯಲ್ಲಿ 'ಮಾಮುಪಾಸ್ವ' ಎಂಬುದಾಗಿ ಇಂದ್ರ ಲಿಂಗವು ಕೇಳಿಸುತ್ತಿದೆ. ಆ ಪ್ರಕರಣದಲ್ಲಿ ಕೇಳಿಸುತ್ತಿರುವ ವಕ್ತೃತ್ವಾದಿ ಜೀವನ ಲಿಂಗಗಳೆಲ್ಲವೂ ಜೀವವಿಶೇಷನಾದ ಇಂದ್ರನಲ್ಲಿ ಪರ್ಯವಸಾನವಾಗುತ್ತದೆ. ವಸ್ತುತಃ ಪ್ರಾಣನ ಲಿಂಗಗಳೂ ಸಹ ಇವೆ. ಆದರೆ 'ಪ್ರಾಣೋಽಸ್ಮಿ ಪ್ರಜ್ಞಾತ್ಮಾ' ಎಂಬುದಾಗಿ ಇಂದ್ರನಿಗೆ ಪ್ರಾಣಶಬ್ದವೂ ವಿಶೇಷಣವಾಗಿದೆ. ಆದ್ದರಿಂದ

---

इत्याशङ्कायामभिधीयतेप्राणस्तथानुगमादिति । अयमिन्द्रप्राणशब्दनिर्दिष्टो न जीवमात्रम्, अपि तु जीवादर्थान्तरभूतं परं ब्रह्म । 'स एष प्राण एव प्रज्ञात्मा आनन्दोऽजरोऽमृतः'(कौ.३-६२) इतीन्द्रप्राणशब्दाभ्यां प्रस्तुतस्यानन्दाजरामृतशब्दसामानाधिकरण्येनानुगमो हि तथासत्येवोपपद्यते ॥२९॥

**श्रुतप्रकाशिका – प्राणस्तथाऽनुगमात्** ॥ **तत्रेति** । 'इन्द्रस्य प्रियं धामोपजगाम' इत्युपक्रमे इन्द्रशब्दनिर्दिष्टत्वात् 'प्राणोऽस्मि प्रज्ञात्मा', 'स एष प्राण एव प्रज्ञात्माऽऽनन्दोऽजरोऽमृतः' इति प्राणशब्देन निर्दिष्टत्वाच्चेन्द्रप्राणशब्दनिर्दिष्ट इत्युक्तम् । प्राणशब्दस्य परमात्मलिङ्गप्रतिपादकवाक्यस्थत्वेन सिद्धान्तहेतुद्योतकत्वात् सूत्रे प्राणशब्देन धर्मी निर्दिष्टः; न त्विन्द्रशब्देन । इन्द्रशब्दनिर्दिष्टस्य विचारविषयत्वमार्थमिति सूत्रकाराभिप्राय इति भावः । जीवमात्रलिङ्गसद्भावेऽपि विशेषाकाङ्क्षायां जीवधर्मस्य इन्द्रशब्दवाच्यप्रकृतजीवविशेषनिष्ठत्वप्रतीतेः, जीवो वेति शिरोन्तरं **परोक्त**मयुक्तमिति भावः । प्राणलिङ्गे सत्यपि **प्राणोऽस्मीति** सामानाधिकरण्येन प्राणस्य जीवविशेषणत्वप्रतीतेः प्राधान्येन प्रतिपाद्यत्वशङ्काया असम्भवात् प्राणो वेति चानुपन्यस्तम् । कारणवाक्यप्रतिपाद्यं ब्रह्म किं प्रसिद्धजीवभाव इन्द्रः, उत परमात्मेति विचारः; तदर्थं हिततमोपासनकर्मतयेन्द्रप्राणशब्दनिर्दिष्टः किं प्रसिद्ध इन्द्रः उत परमात्मेति; तदर्थमानन्दादिगुणाः किं गौणाः, उत मुख्याः; तदर्थं किमुपक्रमावगतत्वाष्ट्रहननादिलिङ्गानुरोधेन आनन्दादिवर्णनम्, उत आनन्दादिलिङ्गानुगुणतया त्वाष्ट्रहननादिवर्णनम्; तदर्थं मामुपास्स्वेति किं स्वोपासनमुच्यते, उत स्वावस्थपरमात्मोपासनम् इति विचारः । यदा स्वोपासनोक्तिः, तदा त्वाष्ट्रवधाद्यनुगुणमानन्दादेर्वर्णनीयत्वेन आनन्दादिगुणानाममुख्यत्वात् हिततमोपासनकर्मतयोक्त इन्द्र इति जगत्कारणं प्रसिद्धजीवभाव इन्द्र इति पूर्वपक्षे फलफलिभावः । यदा स्वावस्थपरमात्मोपासनोपदेशः, तदा आनन्दादिगुणानुगुणं त्वाष्ट्रवधादेर्वर्णनीयत्वादानन्दादिगुणानां मुख्यत्वात् हिततमोपासनकर्मभूतेन्द्रप्राणशब्दनिर्दिष्टः परमात्मेति सर्ववेदान्तवेद्यं जगत्कारणं ब्रह्म परमात्मेति राद्धान्ते फलफलिभावः । **जीवविशेष एव प्रसिद्धेरिति** । अनेन जीवमात्र पक्षस्यानुदयः सूचितः । प्राणशब्दस्य कथं जीवपरत्वामित्यत्राह – **तत्समानाधिकरणस्येति** । अनेन प्रधानन्येन प्राणपरत्व-

ಪ್ರಾಣನು ಇಂದ್ರನಿಗಿಂತ ಅಭಿನ್ನನೆಂದು ಹೇಳಬಹುದು. ಹೀಗೆ ಜೀವ ಹಾಗೂ ವಾಯುವು ಪ್ರಾಣಶಬ್ದವಾಚ್ಯರೆಂಬ ಪೂರ್ವಪಕ್ಷ ಹುಟ್ಟುವುದೇ ಇಲ್ಲ. ಉಳಿದೊಬ್ಬ ದೇವೇಂದ್ರನೇ ಪ್ರಾಣಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ.

ಸಿದ್ಧಾಂತ - ''ಆನಂದೋऽಜರೋऽಮೃತಃ'' ಇತ್ಯಾದಿಯಾಗಿ ಬ್ರಹ್ಮನ ಲಿಂಗವೇ ಹೆಚ್ಚು ಕೇಳಿಸುತ್ತಿರುವುದರಿಂದ ಪ್ರತರ್ದನ ವಿದ್ಯೆಯಲ್ಲಿರುವ ಪ್ರಾಣಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನಾಗುತ್ತಾನೆ. ಇದು ರಾಮನುಜರು ರಚಿಸಿದ ಅಧಿಕರಣ ಶರೀರ.

**ಕಠಿಣಪದಾರ್ಥ**

ಇಂದ್ರವಿಶೇಷಣತ್ವಪ್ರತೀತೇಃ = ಪ್ರಾಣನು ಇಂದ್ರನಲ್ಲಿ ವಿಶೇಷಣನಾಗಿದ್ದಾನೆ, ಅನುತ್ಥಾನಾತ್ = ಪೂರ್ವಪಕ್ಷವೇ ಹುಟ್ಟದ ಕಾರಣ, ಬ್ರಹ್ಮಲಿಂಗಾತ್ = ಅಜರತ್ವ, ಅಮೃತತ್ವ ಮೊದಲಾದ ಬ್ರಹ್ಮನ ಲಿಂಗಗಳಿರುವುದರಿಂದ.

**प्रकाशः** – रामानुजमतमनूद्य पराचष्टे – **केचित्त्विति** ॥ प्रतर्दनविद्यायां शङ्कानुत्थानमप्यर्थात् सूचितम् । इन्द्रस्य जीवत्वे कथं कारणस्य जीवानतिरिक्तत्वमित्यत्राह – **अयमिति** । स्वात्मोपासनं हिततममुपदिष्टमस्तु, ततः किम् इन्द्रस्य जगत्कारणत्वे इत्यत्राह – **हिततम** इति । ततः किमित्यपेक्षायां मुमुक्षूपास्यत्वस्य कारणत्वव्याप्तिं दर्शयति – **जगदिति** । **अत** इति पूर्वपक्षोपसंहारः ॥

राद्धान्तं प्रतिजानीते **अयमिति** । उपपादयति – **स एष** इति । **अनुगमः** – पूर्ववाक्यप्रकृतस्य उत्तरवाक्यसम्बन्धः । स्ववाक्यानभिव्यक्तस्य सिद्धान्तहेतोः उत्तरवाक्याभिव्यक्ततया अनुगमादित्युक्तम् । आकाशाधिकरणे ज्योतिरधिकरणे च सिद्धान्तहेतोर्हि स्ववाक्यपूर्ववाक्याभिव्यक्ततयाऽनुगमादित्यनुक्तिः । सौत्रं **तथापदं** साधकाकारपरामर्शित्वेन व्याचष्टे **आनन्दाजरेति** । **प्राणः** – परमात्मा; **तथानुगमात्** – परमात्मत्वानुगुण्येनानुगमादिति सूत्रयोजना । **तथा**शब्दस्य साध्याकार-परामर्शित्वमप्यभिप्रयन्नाह – **तथा सत्येवेति** । **तथा सति** – इन्द्रप्राणशब्दनिर्दिष्टे परस्मिन् ब्रह्मणि सत्येवेत्यर्थः । प्राणः परमात्मा **तथाऽनुगमात्** – परमात्मतया अनुगमादिति योजना । अनुगमक्रियाविशेषणं **तथा**शब्दः । बुद्धिस्थसाध्यसाधकधर्मवत्तयाऽनुगमो विवक्षित इत्यभिप्रायः । आद्यसूत्रं 'स एष प्राण एव' इत्यादिवाक्यमात्रविषयं व्याख्यातम्; न तु **परैरिव** वाक्यान्तरस्थहेतवोऽप्यत्र विवक्षितत्वेनोक्ताः । **अध्यात्मासम्बन्धभूमेति** द्वितीयसूत्र एव बहुवाक्यस्थहेतुबाहुल्यस्य विवक्षितत्वावगमात् । आनन्दादिगुणप्रतिपादकवाक्यस्य प्राशणब्दचिह्नितत्वात् तद्गतहेतुपरत्वेन हि प्राणशब्दचिह्नितसूत्रव्याख्यानं युक्तम् । प्राणशब्दचिह्नितस्यापि प्राणोऽस्मीत्यादेरत्रानुदाहरणमन्यविशेषणभूतपरमात्मलिङ्गत्वात् । 'प्राणेऽर्पिताः' इत्यस्यानुदाहरणं तु सूत्रान्तरैकार्थ्यात् ॥ २९ ॥

ಅಂತಿಮಪ್ರಾಣಾಧಿಕರಣ-(೧।೧।೧೨)

**"स होवाच प्राणोऽस्मि प्रज्ञात्मा तं मामायुरमृतमित्युपास्स्व"**

इत्युपासनाकर्मतया इन्द्रप्राणशब्दनिर्दिष्टः किं प्रसिद्ध इन्द्र उत परमात्मेति संशये, "मामेव विजानीहि" "प्राणोऽस्मि प्रज्ञात्मा तं मामायुरमृतमित्युपास्व" इतीन्द्रलिङ्गात् अस्य च "इन्द्रः.......त्रिशीर्षाणं त्वाष्ट्रमहनम्" इत्युपक्रमे श्रुतत्वाष्ट्रवधादिभिः प्रसिद्धत्वात्, "आनन्दोऽजरोऽमृतः" इत्यानन्दादिलिङ्गानामुपक्रमावगतत्वाष्ट्रहननादिलिङ्गानुरोधेन नेयत्वादिन्द्र एव ।

ವಿವರಣೆ - ರಾಮಾನುಜಮತವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಕೇಚಿತ್ತು' ಇತ್ಯಾದಿಯಾಗಿ. ಪ್ರತರ್ದನವಿದ್ಯೆಯಲ್ಲಿ "ಸ ಹೋವಾಚ ಪ್ರಾಣೋಽಸ್ಮಿ ಪ್ರಜ್ಞಾತ್ಮಾ ಮಾಮಾಯುರಮೃತಮಿತ್ಯುಪಾಸ್ವ" ಎಂಬುದಾಗಿ ಉಪಾಸನೆಗೆ ವಿಷಯನನ್ನು ಇಂದ್ರ ಹಾಗೂ ಪ್ರಾಣಶಬ್ದಗಳಿಂದ ನಿರ್ದೇಶಿಸಲಾಗಿದೆ. ಇಲ್ಲಿ ಕೇಳಿಸುತ್ತಿರುವ ಪ್ರಾಣಶಬ್ದವು ಇಂದ್ರನನ್ನು ಪ್ರತಿಪಾದಿಸುತ್ತಿದೆಯೋ? ಅಥವಾ ಪರಮಾತ್ಮನನ್ನು ಪ್ರತಿಪಾದಿಸುತ್ತಿದೆಯೋ? ಎಂದು ಸಂಶಯ.

"ಮಾಮೇವ ವಿಜಾನೀಹಿ" ಎಂದು ಪ್ರಾರಂಭವಾದ ಪ್ರಕರಣದಲ್ಲಿ

'ಪ್ರಾಣೋಽಸ್ಮಿ ಪ್ರಜ್ಞಾತ್ಮಾ ಮಾಮಾಯುರಮೃತಮಿತ್ಯುಪಾಸ್ವ'

ನಾನೇ ಪ್ರಾಣನಾಗಿದ್ದೇನೆ. ನನ್ನನ್ನು "ಆಯು, ಅಮೃತ" ಎಂದು ಉಪಾಸನೆ ಮಾಡು ಎಂಬುದಾಗಿ ಇಂದ್ರನ ಲಿಂಗವು ಕೇಳಿಸುತ್ತಿದೆ. ಆದ್ದರಿಂದ ಪ್ರಾಣಶಬ್ದವಾಚ್ಯನಾದವನು ದೇವೇಂದ್ರನೇ ಆಗುತ್ತಾನೆ.

ಮತ್ತು "ಇಂದ್ರ....ತ್ರಿಶೀರ್ಷಾಣಂ ತ್ವಾಷ್ಟ್ರಮಹನಮ್" ಮೂರು ತಲೆಯುಳ್ಳ ವಿಶ್ವರೂಪಾಚಾರ್ಯರನ್ನು ದೇವೇಂದ್ರನು ಸಂಹರಿಸಿದನು ಎಂಬುದಾಗಿ ಪ್ರಾರಂಭದಲ್ಲಿ ವಿಶ್ವರೂಪಾಚಾರ್ಯರ ವಧೆಯು ಕೇಳಿಸುತ್ತಿದೆ. ಇದು ದೇವೇಂದ್ರನಲ್ಲೇ ಪ್ರಸಿದ್ಧವಾದ ಲಿಂಗವಾಗಿದೆ. ಮತ್ತು "ಆನಂದೋಽಜರೋಽಮೃತಃ" ಎಂಬಲ್ಲಿ ಕೇಳಿಸುತ್ತಿರುವ ಆನಂದಾದಿ ಲಿಂಗಗಳನ್ನು ತ್ವಾಷ್ಟ್ರಹನನವೆಂಬ ಲಿಂಗಕ್ಕೆ ಅನುಗುಣವಾಗಿ ದೇವೇಂದ್ರನಲ್ಲಿಯೇ ಸಮನ್ವಯ ಮಾಡಬೇಕು. ಅಂದರೆ ಉಪಕ್ರಮಕ್ಕೆ ಅನುಗುಣವಾಗಿ ಮುಂದಿನ ಪ್ರಕರಣವನ್ನು ಅರ್ಥೈಸಬೇಕು. ಆದ್ದರಿಂದ ದೇವೇಂದ್ರನೇ ಪ್ರತರ್ದನವಿದ್ಯೆಯಿಂದ ಪ್ರತಿಪಾದ್ಯನಾಗಿದ್ದಾನೆ.

**प्रकाशः –** यद्यपि **"वक्तारं विद्यात्"** इति जीवमात्रलिङ्गं, **"इदं शरीरं परिगृह्योत्थापयति"** इति पञ्चवृत्तिरूपमुख्यप्राणलिङ्गं चास्ति तथाऽपि विशेषाकाङ्क्षायां जीवधर्मस्येन्द्रशब्दवाच्यप्रकृतजीवविशेषनिष्ठत्वप्रतीतेः, **"प्राणोस्मि"** इति सामानाधिकरण्येन प्राणस्य जीवविशेषेन्द्रविशेषणत्वप्रतीतेः, प्राधान्येन प्रतिपाद्यत्वशङ्कानुदयान्न तयोरिह प्राप्तिरिति प्राप्ते,

ವಸ್ತುತಸ್ತು ಪ್ರತರ್ದನ ವಿದ್ಯೆಯಲ್ಲಿ ''ವಕ್ತಾರಂ ವಿದ್ಯಾತ್'' ಎಂಬುದಾಗಿ ಕೇವಲ ಜೀವನಲ್ಲಿ ಪ್ರಸಿದ್ಧವಾದ ವಕ್ತೃತ್ವಧರ್ಮವು ಕೇಳಿಸುತ್ತಿದೆ. ಮತ್ತು ''ಇದಂ ಶರೀರಂ ಪರಿಗೃಹ್ಯೋತ್ಥಾಪಯತಿ'' ಎಂಬುದಾಗಿ ಶರೀರಧಾರಕತ್ವ ಎಂಬ ಪ್ರಾಣಾಪಾನಾದಿ ಐದು ರೂಪಗಳನ್ನು ಹೊಂದಿದ ಮುಖ್ಯಪ್ರಾಣನ ಲಿಂಗವು ಕೇಳಿಸುತ್ತಿದೆ. ಆದರೂ ಸಹ ಜೀವನಾಗಲೀ, ಮುಖ್ಯವಾಯುವಾಗಲೀ, ಈ ಪ್ರಕರಣದಿಂದ ಪ್ರತಿಪಾದ್ಯರಲ್ಲ. ಆದರೂ ಸಹ ಜೀವನ ಬಗ್ಗೆ ವಿಶೇಷಾಕಾಂಕ್ಷೆಯು ಹುಟ್ಟಿದಾಗ ಜೀವಶಬ್ದವಾಚ್ಯನು ದೇವೇಂದ್ರನೇ ಎಂದು ನಿರ್ಣಯವಾಗುತ್ತದೆ. ಏಕೆಂದರೆ ಜೀವನಲ್ಲಿರುವ ಧರ್ಮವು ಇಂದ್ರಶಬ್ದವಾಚ್ಯನಾಗಿ ಪ್ರಕೃತನಾದ ಜೀವವಿಶೇಷನಲ್ಲಿಯೇ ಪ್ರತೀತವಾಗುತ್ತಿದೆ. ಆದ್ದರಿಂದ ಜೀವನು ಈ ಪ್ರಕರಣ ಪ್ರತಿಪಾದ್ಯನಾಗಲಾರ.

ಪ್ರಾಣನೂ ಸಹ ಪ್ರಾಣಶಬ್ದವಾಚ್ಯನಲ್ಲ ಏಕೆಂದರೆ 'ಪ್ರಾಣೋಽಸ್ಮಿ' ಎಂಬುದಾಗಿ ಸಾಮಾನಾಧಿಕರಣ್ಯೇನ ಪ್ರಾಣನು ದೇವೇಂದ್ರನಲ್ಲಿ ವಿಶೇಷಣನಾಗಿದ್ದಾನೆ. ವಿಶೇಷಣವಾದದ್ದನ್ನು ಪ್ರಧಾನವಾಗಿ ವಿವಕ್ಷಿಸಲು ಸಾಧ್ಯವಿಲ್ಲ. ಆದ್ದರಿಂದ ದೇವೇಂದ್ರನೇ ಪ್ರಾಣಶಬ್ದವಾಚ್ಯನಾಗಬೇಕು ಹೊರತು ಮುಖ್ಯಪ್ರಾಣನಲ್ಲ. ಇಷ್ಟು ಪೂರ್ವಪಕ್ಷ.

**प्रकाशः** – ''स एष प्रज्ञाऽऽनन्दोऽजरोमृतं मनुष्याय हिततमं एष ह्येव साधु कर्म कारयति । तद्यथा रथस्यारेषु नेमिरर्पिता नाभावरा अर्पिता एवमेवैता भूतमात्राः प्रज्ञामात्रास्वर्पिताः प्रज्ञामात्राः प्राणेऽर्पिताः एष लोकाधिपतिरेष सर्वेश्वरः'' इत्यादिनाऽऽनन्दाजरामृतत्वहिततमत्वसाध्वसाधुकर्मकारयितृत्वचेतनाचेतनात्मककृत्स्नवस्त्वाधारत्वसर्वलोकाधिपतित्वादिपरमात्मधर्मबाहुल्यात् स्वावस्थितपरमात्मोपासनाभिप्रायेण 'मामुपास्व' इत्युपदेशोपपत्तेरानन्दादिबहुतरगुणानुरोधेन त्वाष्ट्रवधादेः वर्णनीयत्वादिन्द्रप्राणादिनिर्दिष्टो जीवादर्थान्तरभूतः परमात्मेति सिद्धान्त इत्याहुरित्यर्थः ।

उक्तञ्च –

विद्या प्रातर्दनी सा वदति हिततमोपास्तिकर्मेन्द्रमेव<br>
ख्यातप्राणेन्द्रचिह्नान्वितमपि तदसौ विश्वकर्तेति चेन्न ।<br>
ब्रह्म त्रेधा ह्युपास्यं बहुविधचिदचित्कञ्चुकं स्वात्मना च<br>
प्राणेन्द्रप्रक्रमोऽपि प्रबलतरमहावाक्यवैघट्यभग्नः ॥

इत्यादि ।

ಅಂತಿಮಪ್ರಾಣಾಧಿಕರಣ-(೧।೧।೧೨)

ಸಿದ್ಧಾಂತ - ಪ್ರಾಣಶಬ್ದವಾಚ್ಯನಾದವನು ಪರಮಾತ್ಮನೇ ಹೊರತು ದೇವೇಂದ್ರನಲ್ಲ. ಏಕೆಂದರೆ ಪ್ರತರ್ದನವಿದ್ಯೆಯಲ್ಲಿ ಪರಮಾತ್ಮನ ಲಿಂಗಗಳೇ ಬಹಳವಾಗಿ ಕೇಳಿಸುತ್ತಿವೆ -

''ಸ ಏಷ ಪ್ರಜ್ಞಾಽಽನಂದೋಽಜರೋಮೃತಂ ಮನುಷ್ಯಾಯ ಹಿತತಮಂ ಏಷ ಹ್ಯೇವ ಸಾಧು ಕರ್ಮ ಕಾರಯತಿ । ತದ್ಯಥಾ ರಥಸ್ಯಾರೇಷು ನೇಮಿರರ್ಪಿತಾ ನಾಭಾವರಾ ಅರ್ಪಿತಾ ಏವಮೇವೈತಾ ಭೂತಮಾತ್ರಾಃ ಪ್ರಜ್ಞಾಮಾತ್ರಾಸ್ವರ್ಪಿತಾಃ ಪ್ರಜ್ಞಾಮಾತ್ರಾಃ ಪ್ರಾಣೇಽರ್ಪಿತಾಃ ಏಷ ಲೋಕಾಧಿ-ಪತಿರೇಷ ಸರ್ವೇಶ್ವರಃ''

ಈ ವಾಕ್ಯದಲ್ಲಿ ಆನಂದ, ಅಜರ, ಅಮೃತತ್ವ, ಹಿತತಮತ್ವ, ಸಾಧು ಅಸಾಧುಕರ್ಮಕಾರಯಿತೃತ್ವ, ಚೇತನಾಚೇನಾತ್ಮಕಕೃತ್ಸ್ನವಸ್ತ್ವಾಧಾರತ್ವ ಸರ್ವಲೋಕಾಧಿಪತಿತ್ವ ಮೊದಲಾದ ಪರಮಾತ್ಮನ ಅನೇಕ ಧರ್ಮಗಳು ಶ್ರುತವಾಗಿವೆ. ಹೀಗೆ ನಿರವಕಾಶವಾದ ಅನೇಕ ಲಿಂಗಗಳ ಬಲದಿಂದ ಪರಮಾತ್ಮನೇ ಪ್ರತರ್ದನವಿದ್ಯೆಯಿಂದ ಪ್ರತಿಪಾದ್ಯನಾಗಿದ್ದಾನೆ ಮತ್ತು ಪ್ರಾಣಶಬ್ದವಾಚ್ಯನಾಗಿದ್ದಾನೆ.

ಪ್ರಶ್ನೆ - ಹಾಗಾದರೆ ಪ್ರತರ್ದನರಾಜನನ್ನು ಕುರಿತು ದೇವೇಂದ್ರನು ಪರಮಾತ್ಮನ ಉಪಾಸನೆಯನ್ನು ಹೇಳಬೇಕಿತ್ತೇ ಹೊರತು, 'ನನ್ನನ್ನು ಉಪಾಸನೆ ಮಾಡು' ಎಂದೇಕೆ ಹೇಳಿದನು ?

ಉತ್ತರ - ದೇವೇಂದ್ರನ ಈ ಮಾತೇನು ತಪ್ಪಲ್ಲ. ತನ್ನ ಒಳಗಿರುವ ಪರಮಾತ್ಮನನ್ನು ಉಪಾಸನೆ ಮಾಡು ಎಂಬ ಅಭಿಪ್ರಾಯದಿಂದ, ದೇವೇಂದ್ರನು 'ಮಾಮುಪಾಸ್ವ' ಎಂದು ಹೇಳಿದ್ದಾನೆ ಹೊರತಾಗಿ ತನ್ನನ್ನೇ ಉಪಾಸನೆ ಮಾಡೆಂದು ದೇವೇಂದ್ರನಿಗೆ ಅಭಿಪ್ರಾಯವಿರುವುದಿಲ್ಲ.

ಪ್ರಶ್ನೆ - ಉಪಕ್ರಮದಲ್ಲಿ ವಿಶ್ವರೂಪಾಚಾರ್ಯರ ಹನನದ ಬಗ್ಗೆ ಹೇಳಿರುವುದರಿಂದ ತ್ವಾಷ್ಟ್ರವಧವು ದೇವೇಂದ್ರನ ನಿರವಕಾಶಲಿಂಗವಾಗಿದೆ. ಉಪಕ್ರಮಕ್ಕೆ ಅನುಗುಣವಾಗಿ ಸಂಪೂರ್ಣ ಪ್ರಕರಣವು ದೇವೇಂದ್ರನನ್ನೇ ಪ್ರತಿಪಾದಿಸಬೇಕಲ್ಲವೆ?

ಉತ್ತರ - ಇದು ತಪ್ಪು. ಆನಂದ ಮೊದಲಾದ ಅನೇಕ ನಿರವಕಾಶಲಿಂಗಗಳು ಪರಮಾತ್ಮನಲ್ಲಿ ಶ್ರುತವಾಗಿವೆ. ಈ ಎಲ್ಲಾ ಲಿಂಗಗಳು ತ್ವಾಷ್ಟ್ರವಧವೆಂಬ ಒಂದು ಲಿಂಗವನ್ನು ಸುತರಾಂ ಬಾಧಿಸುತ್ತಿದೆ. ಆದ್ದರಿಂದ ದೇವೇಂದ್ರನಲ್ಲಿರುವ ಪರಮಾತ್ಮ ತ್ವಾಷ್ಟ್ರವಧಕ್ಕೆ ಕಾರಣನಾಗಿದ್ದಾನೆಂದೇ ಶ್ರುತಿಗೆ ಅರ್ಥೈಸಬೇಕು.

ಈ ಎಲ್ಲಾ ಕಾರಣಗಳಿಂದ ಪ್ರತರ್ದನವಿದ್ಯೆಯಲ್ಲಿರುವ ಇಂದ್ರಪ್ರಾಣಾದಿಶಬ್ದಗಳಿಂದ ಪ್ರತಿಪಾದ್ಯ-ನಾದವನು ಜೀವನಿಗಿಂತ ವಿಲಕ್ಷಣನಾದ ಪರಮಾತ್ಮನೇ ಆಗಿದ್ದಾನೆ.

ಈ ಅಧಿಕರಣವನ್ನು ಶ್ರುತಪ್ರಕಾಶದಲ್ಲಿ ಹೀಗೆ ಸಂಗ್ರಹಿಸಲಾಗಿದೆ -

ವಿದ್ಯಾ ಪ್ರಾತರ್ದನೀ ಸಾ ವದತಿ ಹಿತತಮೋಪಾಸ್ತಿಕರ್ಮೇಂದ್ರಮೇವ
ಖ್ಯಾತಪ್ರಾಣೇಂದ್ರಚಿಹ್ನಾನ್ವಿತಮಪಿ ತದಸೌ ವಿಶ್ವಕರ್ತೇತಿ ಚೇನ್ನ ।
ಬ್ರಹ್ಮ ತ್ರೇಧಾ ಹ್ಯುಪಾಸ್ಯಂ ಬಹುವಿಧಚಿದಚಿತ್ಕಂಚುಕಂ ಸ್ವಾತ್ಮನಾ ಚ
ಪ್ರಾಣೇಂದ್ರಪ್ರಕ್ರಮೋಽಪಿ ಪ್ರಬಲತರಮಹಾವಾಕ್ಯವೈಘಟ್ಯಭಗ್ನಃ ॥

ಪರಿಪೂರ್ಣಚಂದ್ರಿಕಾ

"ಹಿತತಮ" ಎಂಬ ಉಪಾಸನೆಗೆ ದೇವೇಂದ್ರನೇ ವಿಷಯನಾಗಿದ್ದಾನೆಂದು ಪ್ರತರ್ದನವಿದ್ಯೆಯು ಹೇಳುತ್ತಿದೆ. ಜೀವ ಹಾಗೂ ಪ್ರಾಣರ ಲಿಂಗಗಳಿದ್ದರೂ ದೇವೇಂದ್ರನೇ ಪ್ರತಿಪಾದ್ಯನು. ಇಂತಹ ದೇವೇಂದ್ರನೇ ಜಗತ್ಕಾರಣನಾಗಿದ್ದಾನೆಂಬ ಪೂರ್ವಪಕ್ಷವು ತಪ್ಪು. ಏಕೆಂದರೆ ಬ್ರಹ್ಮನೇ ಜೀವ, ಪ್ರಾಣ, ಇಂದ್ರಾದಿಲಿಂಗಗಳಿಂದ ಉಪಾಸ್ಯನು ಬಹುವಿಧವಾದ ಮತ್ತು ಚಿದಚಿದಾತ್ಮಕವಾದ ಜಗತ್ತಿನ ಒಳಗೆ ಇಂತಹ ಪರಮಾತ್ಮನು ನೆಲೆಸಿದ್ದಾನೆ. ಪ್ರಾಣ ಹಾಗೂ ಇಂದ್ರರು ಉಪಕ್ರಮದಲ್ಲಿ ಪ್ರಸಕ್ತರಾಗಿದ್ದರೂ ಪ್ರಬಲವಾದ ಮಹಾವಾಕ್ಯದಿಂದ ಇಂದ್ರನೆಂಬ ಅರ್ಥವು ಭಗ್ನವಾಗುತ್ತದೆ ಎಂದು.

**प्रकाशः** – यद्यपि भाष्ये प्राणशब्दनिर्दिष्टो जीव एवोत परमात्मेत्येव संशयो दर्शितः, न त्विन्द्र एवेति । तथाऽपि प्रसिद्धजीवभाव इन्द्र एवेति पूर्वपक्षान्ते कथनात् श्रुतप्रकाशे तथैव व्याख्यातत्वाच्च इन्द्रः प्राण इति प्राप्ते इत्युक्तमिति ध्येयम् ।

ಶಂಕೆ - ಇಲ್ಲಿಯ ತನಕ ಸಮರ್ಥಿಸಿದ ಅಧಿಕರಣಶರೀರವು ಕೇವಲ ಶ್ರುತಪ್ರಕಾಶದಲ್ಲಷ್ಟೇ ನೋಡಬಹುದು. ಆದರೆ ರಾಮಾನುಜಭಾಷ್ಯದಲ್ಲಿ ಸ್ವಲ್ಪ ವಿಭಿನ್ನವಾದ ಪೂರ್ವಪಕ್ಷಸಿದ್ಧಾಂತಗಳು ಕಾಣಸುತ್ತವೆ. ಪ್ರಾಣಶಬ್ದದಿಂದ ನಿರ್ದೇಶಿಸಲ್ಪಟ್ಟಿರುವವನು ಜೀವನೋ? ಅಥವಾ ಪರಮಾತ್ಮನೋ? ಎಂಬುದಾಗಿ ಸಂಶಯ ಪ್ರದರ್ಶನ ಮಾಡಿದ್ದಾರೆ; ಹೊರತು ಇಂದ್ರನೋ? ಅಥವಾ ಪರಮಾತ್ಮನೋ? ಎಂಬುದಾಗಿ ಸಂಶಯ ತೋರಿಸಿಲ್ಲ. ಹೀಗಿರುವಾಗ ಇಲ್ಲಿ ಗ್ರಂಥಕಾರರು ಶ್ರುತಪ್ರಕಾಶದಲ್ಲಿ ಹೇಳಿರುವ ಪಕ್ಷವನ್ನೇ ಏಕೆ ಸ್ವೀಕರಿಸಿದರು?

ಸಮಾಧಾನ - ಹೌದು; ಆದರೆ ರಾಮಾನುಜಭಾಷ್ಯದ ಕೊನೆಯಲ್ಲಿ "ಪ್ರಸಿದ್ಧಜೀವಭಾವಃ ಇಂದ್ರ ಏವ" ಅಂದರೆ ಜೀವನೆಂದು ಪೂರ್ವಪಕ್ಷ ಮಾಡಿ, ಇಂತಹ ಜೀವನು ಯಾರೆಂದು ಪ್ರಶ್ನಿಸಿದಾಗ ಇಂದ್ರನೇ ಆಗಿದ್ದಾನೆಂದು ಹೇಳಿದ್ದಾನೆ. ಆದ್ದರಿಂದಲೇ ಶ್ರುತಪ್ರಕಾಶದಲ್ಲಿ ನೇರವಾಗಿ ಇಂದ್ರನನ್ನೇ ಪೂರ್ವಪಕ್ಷದ ವಿಷಯವನ್ನಾಗಿ ಸ್ವೀಕರಿಸಲಾಗಿದೆ. ಅದನ್ನೇ ಗ್ರಂಥಕಾರರು ಇಲ್ಲಿ ಅನುವಾದ ಮಾಡಿದ್ದು ಅತ್ಯಂತ ಸಮಂಜಸವಾಗಿದೆಯೆಂದು ತಿಳಿಯಬೇಕು.

## ಸಾರ

ಅದ್ವೈತಿಗಳಂತೆ ರಾಮಾನುಜರೂ ಸಹ ಪ್ರತರ್ದನವಿದ್ಯೆಯಲ್ಲಿರುವ 'ಪ್ರಾಣೋಽಸ್ಮಿ ಪ್ರಜ್ಞಾತ್ಮಾ' ಎಂಬುದನ್ನೇ ವಿಷಯವಾಕ್ಯವನ್ನಾಗಿ ಹೇಳುತ್ತಾರೆ. ಆದರೆ ಅದ್ವೈತಿಗಳು ಜೀವ, ಇಂದ್ರ ಮತ್ತು ವಾಯು ಈ ಮೂವರು ಪ್ರಾಣಶಬ್ದವಾಚ್ಯರೆಂದು ಪೂರ್ವಪಕ್ಷ ಮಾಡಿದ್ದರೂ ಇವರು ಕೇವಲ ದೇವೇಂದ್ರನನ್ನೇ ಪ್ರಾಣಶಬ್ದವಾಚ್ಯನೆಂದು ಪೂರ್ವಪಕ್ಷ ಮಾಡುತ್ತಿದ್ದಾರೆ.

ಈ ಪ್ರಕರಣದಲ್ಲಿರುವ ಜೀವಲಿಂಗ ಹಾಗೂ ಪ್ರಾಣಲಿಂಗಗಳನ್ನು ದೇವೇಂದ್ರನಲ್ಲಿಯೇ ಪರ್ಯವಸಾನ-ಮಾಡಿ ಪೂರ್ವಪಕ್ಷವನ್ನು ದೃಢಗೊಳಿಸುತ್ತಾರೆ. ಮತ್ತು ಅದ್ವೈತಿಗಳು ಹೇಳುವಂತೆ 'ಆನಂದೋಽ-

ಜರೋಽಮೃತಃ ಎಂಬ ಅನೇಕ ಬ್ರಹ್ಮಲಿಂಗಗಳು ಕೇಳಿಸುತ್ತಿರುವುದರಿಂದ ಬ್ರಹ್ಮನೇ ಪ್ರಕರಣ ಪ್ರತಿಪಾದ್ಯನೆಂದು ಸಿದ್ಧಾಂತ ಮಾಡಿದ್ದಾರೆ.

* * * *

## ರಾಮಾನುಜರ ಅಧಿಕರಣ ನಿರಾಸ

तात्पर्यचन्द्रिका

**तन्न, इन्द्र इत्येव पूर्वपक्षे सति सूत्रे 'जीवमुख्यप्राणलिङ्गात्' इति शङ्कायोगात् । तत्र जीवशब्दस्य तद्विशेषेन्द्रपरत्वे च वक्तुरात्मोपदेशस्यापि इन्द्रलिङ्गस्यानेनैव सङ्ग्रहसम्भवात् ''न वक्तुरात्मोपदेशात्'' इति पृथक्सौत्रशङ्कायोगात् । अस्मदीयोदाहरणे तु जीवलिङ्गं शतायुष्ट्वं नेन्द्रे युक्तम् । ''मनो वाक् प्राणः'' इत्यादौ प्राणोऽपि नान्यविशेषणम् ।**

ಅನುವಾದ - ರಾಮಾನುಜರು ರಚಿಸಿದ ಈ ಅಧಿಕರಣಶರೀರದಲ್ಲಿ ಹುರುಳಿಲ್ಲ. ರಾಮಾನುಜರು ಹೇಳುವಂತೆ ಇಂದ್ರನೇ ಪೂರ್ವಪಕ್ಷಕ್ಕೆ ವಿಷಯನಾಗುವುದಾದರೆ, ಸೂತ್ರಕಾರರು ಕೇವಲ ಇಂದ್ರನ ಲಿಂಗವನ್ನಷ್ಟೇ ಶಂಕಿಸಿದರೆ ಸಾಕಾಗುತ್ತಿತ್ತು. 'ಜೀವಮುಖ್ಯಪ್ರಾಣಲಿಂಗಾತ್' ಎಂಬುದಾಗಿ ಜೀವನ ಲಿಂಗವನ್ನಾಗಲೀ ಮುಖ್ಯಪ್ರಾಣನ ಲಿಂಗವನ್ನಾಗಲೀ ಶಂಕಿಸುವ ಅಗತ್ಯವಿರಲಿಲ್ಲ.

ಪ್ರತರ್ದನವಿದ್ಯೆಯಲ್ಲಿರುವ ಜೀವಶಬ್ದವು ಜೀವವಿಶೇಷನಾದ ಇಂದ್ರನಲ್ಲಿ ಪರ್ಯವಸಾನವಾಗುವುದಾದಲ್ಲಿ, ಈ ಪ್ರಕರಣದಿಂದ ಇಂದ್ರನನ್ನೇ ತೆಗೆದುಕೊಳ್ಳಬೇಕೆನ್ನಲು ''ವಕ್ತುರಾತ್ಮೋಪದೇಶ'' ಎಂಬುದು ಒಂದು ಲಿಂಗವಾಗಿದೆ. ಆವಾಗ ''ನ ವಕ್ತುರಾತ್ಮೋಪದೇಶಾತ್'' ಎಂಬ ಪ್ರತ್ಯೇಕ ಸೂತ್ರದಿಂದ ಶಂಕಿಸುವ ಅಗತ್ಯವಿರಲಿಲ್ಲ.

ನಾವು ಹೇಳುವ ವಿಷಯವಾಕ್ಯದಲ್ಲಿ ಈ ದೋಷಗಳಿಗೆ ಅವಕಾಶವಿಲ್ಲ. ಏಕೆಂದರೆ ಶತಾಯುಷ್ಟ್ವ ಎಂಬ ಜೀವನ ಲಿಂಗವು ದೇವೇಂದ್ರನಲ್ಲಿರುವುದಿಲ್ಲ. ಮತ್ತು ''ಮನೋ ವಾಕ್ ಪ್ರಾಣಃ'' ಎಂಬಲ್ಲಿರುವ ಪ್ರಾಣಶಬ್ದವು ದೇವೇಂದ್ರಾದಿಗಳಲ್ಲಿ ವಿಶೇಷಣವೂ ಆಗಿರುವುದಿಲ್ಲ. ಆದ್ದರಿಂದ ರಾಮಾನುಜರು ಉಲ್ಲೇಖಿಸುವ ವಿಷಯವಾಕ್ಯವು ಸಮಂಜಸವಲ್ಲವೆಂದು ತಿಳಿಯುತ್ತದೆ.

**प्रकाशः** – सूत्रानानुगुण्येन पूर्वपक्षं निरस्यति – **तन्नेति** ॥ ननु जीवशब्दस्य जीवविशेषेन्द्रपरत्वमुच्यत इति चेत्तथाऽपि मुख्यप्राणपदायोगात्, तस्य त्वन्मते जडत्वेन तद्विशेषेन्द्रपरत्वायोगात् । सामान्यशब्दस्य विशेषपरत्वे लक्षणापत्तेश्च ।

दोषान्तरं चाह – **तत्रेति** ॥ ''मामुपास्व इति वक्तुरिन्द्रस्य स्वात्मन एवोपदेशात्'' इति त्वया व्याख्यातत्वाज्जीवलिङ्गपदेन वक्तृत्वादेर्ग्रहणमिवाऽऽत्मोप-

देशोऽपि ग्रहीतुं शक्यत इति तत्सूत्रं व्यर्थमित्यर्थः । उपलक्षणमेतत्, प्राणस्येन्द्र-विशेषणत्वेनाप्राधान्ये धर्मिनिर्देशाय सूत्रे "प्राणस्तथा" इति प्राणपदप्रयोगो न स्यात् । किन्तु 'इन्द्रस्तथाऽनुगमात्' इत्येव स्यात् ।

ವಿವರಣೆ - ರಾಮಾನುಜರ ಅಧಿಕರಣಶರೀರವು ಅಸಮಂಜಸವಾಗಿದೆ. ಮತ್ತು ಅವರು ಮಾಡಿದ ಪೂರ್ವಪಕ್ಷವು ಸೂತ್ರಕ್ಕೆ ಅನುಗುಣವಾಗಿಲ್ಲವೆಂದು 'ತನ್ನ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

ಶಂಕೆ - ಗ್ರಂಥದಲ್ಲಿ ಮಾಡಿರುವ ನಿರಾಕರಣೆಯು ಸರಿಯಲ್ಲ. ಸೂತ್ರದಲ್ಲಿರುವ 'ಜೀವಮುಖ್ಯಪ್ರಾಣ-ಲಿಂಗಾತ್' ಎಂಬಲ್ಲಿ ಜೀವಪದಕ್ಕೂ ನಾವು ಇಂದ್ರನೆಂಬರ್ಥವನ್ನು ಅಂಗೀಕರಿಸಿದ್ದೇವೆ.ಸೂತ್ರದಲ್ಲಿರುವ 'ಜೀವಲಿಂಗಾತ್' ಎಂಬ ಪದವು ಹೇಗೆ ವ್ಯರ್ಥವಾಗುತ್ತದೆ?

ಸಮಾಧಾನ - ಜೀವಶಬ್ದಕ್ಕೆ ಇಂದ್ರನೆಂಬರ್ಥವನ್ನು ಮಾಡಬಹುದು, ಆದರೆ 'ಮುಖ್ಯಪ್ರಾಣಲಿಂಗಾತ್' ಎಂಬ ಪದವು ಅಯುಕ್ತವಾಗುತ್ತದೆ. ಏಕೆಂದರೆ ನಿಮ್ಮ ಮತದಲ್ಲಿ ಪ್ರಾಣನನ್ನು ಜಡಪದಾರ್ಥವೆಂದು ಅಂಗೀಕರಿಸಲಾಗಿದೆ. ಪಂಚವೃತ್ತಿಗಳಾದ ಜಡಪದಾರ್ಥಗಳನ್ನು ಹೇಳುವ ಪ್ರಾಣಪದಕ್ಕೆ ಚೇತನನಾದ ಇಂದ್ರಪರತ್ವವನ್ನು ಅಂಗೀಕರಿಸಲು ಸಾಧ್ಯವಿಲ್ಲ. ಮತ್ತು ಸಾಮಾನ್ಯವಾಚಕ ಪದಗಳಿಗೆ ವಿಶೇಷವ್ಯಕ್ತಿ ವಾಚಕತ್ವವನ್ನು ಒಪ್ಪಿದಲ್ಲಿ ಲಕ್ಷಣಾಪ್ರಸಂಗದೋಷವೂ ಸಹ ಬರುತ್ತದೆ.

ಮತ್ತೊಂದು ದೋಷವನ್ನು 'ತತ್ರ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

"ಮಾಮುಪಾಸ್ವ ಇತಿ ವಕ್ತುರಿಂದ್ರಸ್ಯ ಸ್ವಾತ್ಮನ ಏವೋಪದೇಶಾತ್" ಎಂದು ಶ್ರುತಿಗೆ ನೀವು ವ್ಯಾಖ್ಯಾನಿ-ಸುತ್ತೀರಿ. ಆದ್ದರಿಂದ "ಸೂತ್ರದಲ್ಲಿರುವ ಜೀವಲಿಂಗಪದದಿಂದ ವಕ್ತೃತ್ವ ಎಂಬ ಲಿಂಗವನ್ನು ಸ್ವೀಕರಿಸುವಂತೆ, ಆತ್ಮೋಪದೇಶವೆಂಬ ಲಿಂಗವನ್ನೂ ಸಹ ಸ್ವೀಕರಿಸಬಹುದು" ಎಂಬ ನಿಮ್ಮ ಸೂತ್ರವ್ಯಾಖ್ಯಾನವು ಸಹ ಈಗ ವ್ಯರ್ಥವಾಗುತ್ತದೆ.

ಉಪಲಕ್ಷಣಯಾ ಮತ್ತೊಂದು ದೋಷವನ್ನು ತಿಳಿಯಬೇಕು - ಇಂದ್ರನಲ್ಲಿ ವಿಶೇಷಣವಾದ್ದರಿಂದ ಪ್ರಾಣಪದವು ಅಪ್ರಧಾನವಾಚಕವಾದಲ್ಲಿ ಸೂತ್ರಕಾರರು ಧರ್ಮಿಯನ್ನು ನಿರ್ದೇಶನ ಮಾಡುವುದಕ್ಕಾಗಿ "ಪ್ರಾಣಸ್ತಥಾ" ಎಂದು ಪ್ರಾಣಪದಪ್ರಯೋಗವನ್ನು ಮಾಡಿದ್ದು ತಪ್ಪಾಗುತ್ತದೆ. ಹೊರತಾಗಿ 'ಇಂದ್ರಸ್ತಥಾಽ-ನುಗಮಾತ್' ಎಂದು ಉಲ್ಲೇಖಿಸಬಹುದಿತ್ತು.

**प्रकाशः** – यदत्रोक्तं श्रुतप्रकाशे – प्राणशब्दस्य परमात्मलिङ्गप्रतिपादक-वाक्यस्थत्वेन सिद्धान्तहेतुद्योतकत्वात् सूत्रे प्राणपदेन धर्मी निर्दिष्ट इति, तन्न, सिद्धान्तहेतोः 'तथाऽनुगमात्' इत्यादिनैव स्फुटं प्रतिभासात्, पूर्वपक्षहेतोः केनाप्य-प्रतीतेः तत्सूचनार्थत्वात् प्राधान्याच्च 'इन्द्रः' इत्येव निर्देष्टव्यत्वात् । अत एव तद् भाष्ये 'इन्द्रशब्दस्य जीवविशेष एव प्रसिद्धे'रिति पूर्वपक्षहेतुर्बहिरेवोक्त इति ध्येयम् ।

ಶ್ರುತಪ್ರಕಾಶದಲ್ಲಿ ಸೂತ್ರದಲ್ಲಿ ಪ್ರಾಣಶಬ್ದವನ್ನು ಹೀಗೆ ಸಮರ್ಥಿಸಲಾಗಿದೆ - ಪರಮಾತ್ಮನ ಲಿಂಗಗಳನ್ನು ಪ್ರತಿಪಾದಿಸುವ ವಾಕ್ಯಗಳ ಮಧ್ಯದಲ್ಲಿ ಪ್ರಾಣಶಬ್ದವು ಕಾಣಿಸುತ್ತಿದೆ. ಆದ್ದರಿಂದ ಸಿದ್ಧಾಂತಹೇತುವನ್ನು ಸಮರ್ಥಿಸುವುದಕ್ಕಾಗಿ ಪ್ರಾಣಪದವು ಅತ್ಯಂತ ಉಪಕಾರಿಯಾಗಿದೆ. ಅದಕ್ಕೋಸ್ಕರವೇ ಸೂತ್ರದಲ್ಲಿ ಪ್ರಾಣಪದದಿಂದಲೇ ಧರ್ಮಿಯನ್ನು ನಿರ್ದೇಶಿಸಿದ್ದಾರೆ.

ನಿರಾಕರಣೆ - ಶ್ರುತಪ್ರಕಾಶದ ಈ ನಿಲುವು ಸರಿಯಲ್ಲ. 'ತಥಾऽನುಗಮಾತ್' ಎಂಬ ಸೂತ್ರದ ಅಂಶದಿಂದಲೇ ಸಿದ್ಧಾಂತಹೇತುವನ್ನು ಸ್ಪಷ್ಟವಾಗಿ ಸಮರ್ಥಿಸಲು ಬರುತ್ತದೆ. ಮತ್ತು ಪೂರ್ವಪಕ್ಷಹೇತುವು ಸ್ಪಷ್ಟವಾಗಿ ತೋರುತ್ತಿಲ್ಲ. ಅದನ್ನು ತೋರಿಸುವುದಕ್ಕಾಗಿ ಮತ್ತು ಪ್ರಾಧಾನ್ಯವಿರುವುದರಿಂದಲೂ ಇಂದ್ರಶಬ್ದವನ್ನು ಸೂತ್ರದಲ್ಲಿ ಬಳಸಿದ್ದರೆ, ಸೂತ್ರದಲ್ಲಿ ಪೂರ್ವಪಕ್ಷಹೇತು ಸ್ಪಷ್ಟವಾಗಿ ತೋರದ ಕಾರಣದಿಂದಲೇ ರಾಮಾನುಜ -ಭಾಷ್ಯದಲ್ಲಿ ''ಇಂದ್ರಶಬ್ದಸ್ಯ ಜೀವವಿಶೇಷ ಏವ ಪ್ರಸಿದ್ಧೇಃ'' ''ಇಂದ್ರಶಬ್ದವು ಜೀವನಲ್ಲಿ ಪ್ರಸಿದ್ಧವಾದ್ದರಿಂದ'' ಎಂಬುದಾಗಿ ಪೂರ್ವಪಕ್ಷಹೇತುವನ್ನು ಸೂತ್ರದಿಂದ ಹೊರಗಡೆ ಸಮರ್ಥಿಸಲಾಗಿದೆಯೆಂಬುದನ್ನು ವಿಮರ್ಶಕರು ಗಮನಿಸಬೇಕು.

ಆದ್ದರಿಂದ ರಾಮಾನುಜರಿಗೆ ಸೂತ್ರದಲ್ಲಿ ಪ್ರಾಣಶಬ್ದವನ್ನೇ ಏಕೆ ಉಲ್ಲೇಖಿಸಿದರು? ಎಂಬುದಕ್ಕೆ ಮನದಟ್ಟಾಗುವಂತಹ ಕಾರಣವನ್ನು ನೀಡಲು ಸಾಧ್ಯವಿಲ್ಲ.

**प्रकाशः** – ननूक्तरीत्या जीवमुख्यप्राणकोटिकपूर्वपक्षासम्भवादगत्या सर्वसमाधेयमेतत् । अन्यथाऽयं दोषो भवतामपि सम इत्याशङ्क्य, स्यादयं दोषोऽद्वैतिनामिदमेवोदाहृत्य त्रितयपरत्वेन पूर्वपक्षयतां, न त्वस्माकं उक्तदोषास्पृष्टोदाहरणान्तरं कुर्वतामित्याह – **अस्मदीयेति ॥ नेन्द्र इति ॥** तस्यामरत्वेन बहुकालस्थायिनः शतायुष्ट्वायोगात्, त्वन्मते वक्तृत्वादिजीवलिङ्गस्य तद्विशेषेन्द्रनिष्ठत्वेन तत्र पर्यवसानमिव नास्मन्मते जीवलिङ्गमिन्द्रे पर्यवसाययितुं शक्यत इति स्वातन्त्र्येण जीवकोटिकपूर्वपक्षो युक्तः, प्राणोऽपि नान्यविशेषणतया प्रतीयत इति तत्कोटिकपूर्वपक्षोऽपि युक्त इति सर्वमनवद्यमिति भावः ।

ಶಂಕೆ - ಇಲ್ಲಿಯ ತನಕ ನೀವು ಹೇಳಿದ ದೋಷ ನಮಗೆ ಮಾತ್ರವಲ್ಲ. ಎಲ್ಲರಿಗೂ ಬರುತ್ತದೆ. ಜೀವಕೋಟಿಕ ಪೂರ್ವಪಕ್ಷವನ್ನಾಗಲಿ ಮುಖ್ಯಪ್ರಾಣಕೋಟಿಕ ಪೂರ್ವಪಕ್ಷವನ್ನಾಗಲೀ ಸಮರ್ಥಿಸುವುದು ಸುಲಭವಲ್ಲ. ಆದರೆ ಸೂತ್ರಕಾರರು ಈ ಎರಡು ಪೂರ್ವಪಕ್ಷಗಳನ್ನೇ ಉಲ್ಲೇಖಿಸಿದ್ದಾರೆ. ಶ್ರುತಿಯನ್ನು ನೋಡಿದಾಗ ಇಂದ್ರಕೋಟಿಕಪೂರ್ವಪಕ್ಷವೇ ಸುಲಭವಾಗಿ ಕಾಣಿಸುತ್ತಿದೆ. ಹಾಗಾಗಿ ಈ ಗೊಂದಲದ ಪರಿಹಾರದ ಭಾರ ನಮಗೆ ಮಾತ್ರವಲ್ಲ ಎಲ್ಲಾ ಭಾಷ್ಯಕಾರರಿಗೂ ಸಮಾನವಾಗಿದೆ. ಒಂದು ವೇಳೆ ಸಮಾಧಾನವನ್ನು ನೀಡದಿದ್ದಲ್ಲಿ ನಿಮಗೂ ಸಹ ನಮಗೆ ಬಂದ ದೋಷವು ತಪ್ಪಿದ್ದಲ್ಲ.

ಸಮಾಧಾನ - ಸಾಧ್ಯವೇ ಇಲ್ಲ. ಈ ದೋಷವು ಯಾರು ಪ್ರತರ್ದನವಿದ್ಯೆಯನ್ನು ವಿಷಯವಾಕ್ಯವನ್ನಾಗಿ ಸ್ವೀಕರಿಸುತ್ತಾರೋ ಅಂತಹ ನಿಮಗೆ ಈ ದೋಷ ಬರುತ್ತದೆ. ಅಥವಾ ಜೀವ, ಮುಖ್ಯಪ್ರಾಣ, ಇಂದ್ರ ಎಂಬ

ಮೂರು ಬಗೆಯಲ್ಲಿ ಪೂರ್ವಪಕ್ಷವನ್ನು ರಚಿಸುವ ಅದ್ವೈತಿಗಳಿಗೆ ಈ ದೋಷ ಬರುತ್ತದೆ. ಹೊರತು ನಮಗೆ ಈ ಯಾವ ದೋಷಗಳೂ ಬರುವುದಿಲ್ಲ. ಏಕೆಂದರೆ ನಾವು ಉದಾಹರಿಸುವ ವಿಷಯವಾಕ್ಯದಲ್ಲಿ ಈ ಆಕ್ಷೇಪಕ್ಕೆ ಅವಕಾಶವಿಲ್ಲವೆಂದು 'ಅಸ್ಮದೀಯ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

''ನೇಂದ್ರೇ ಯುಕ್ತಂ'' ಎಂಬುದಾಗಿ ಶತಾಯುಷ್ಟ್ವ ಎಂಬ ಜೀವಲಿಂಗವು ದೇವೇಂದ್ರನಲ್ಲಿ ಸರ್ವಥಾ ಬರುವುದಿಲ್ಲ ಎಂದಿದ್ದಾರೆ. ಏಕೆಂದರೆ ದೇವೇಂದ್ರನು ಅಮರನಾದ್ದರಿಂದ, ಬಹುಕಾಲವಿರುತ್ತಾನೆ. ಆದ್ದರಿಂದ ಕೇವಲ ನೂರು ವರ್ಷ ಮಾತ್ರ ಬದುಕಿರುವಿಕೆ ಎಂಬ ಧರ್ಮವು ಅವನಲ್ಲಿ ಬರುವುದಿಲ್ಲ.

ನಿಮ್ಮ ಮತದಲ್ಲಿ ವಕ್ತೃತ್ವವೇ ಮೊದಲಾದ ಜೀವಲಿಂಗವು ಜೀವವಿಶೇಷನಾದ ಇಂದ್ರನಲ್ಲಿ ಇದೆಯೆಂದು ಪರ್ಯವಸಾನ ಮಾಡಿದಿರಿ. ಆದರೆ ನಮ್ಮ ಮತದಲ್ಲಿ ಜೀವನ ಲಿಂಗವನ್ನು ಇಂದ್ರನಲ್ಲಿ ಪರ್ಯವಸಾನ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಪ್ರತ್ಯೇಕವಾಗಿ (ಸ್ವತಂತ್ರವಾಗಿ) ಜೀವಕೋಟಿಕ ಪೂರ್ವಪಕ್ಷವನ್ನು ರಚಿಸಬಹುದು.

ಪ್ರಾಣನೂ ಸಹ ಮತ್ತೊಂದೆಡೆ ವಿಶೇಷಣನಾಗದ ಕಾರಣ ಪ್ರಾಣಕೋಟಿಕ ಪೂರ್ವಪಕ್ಷವನ್ನೂ ಸಹ ನಾವು ಸುಲಭವಾಗಿ ಮಾಡಬಹುದು. ಆದ್ದರಿಂದ ಪ್ರಾಣಕೋಟಿಕ ಪೂರ್ವಪಕ್ಷವೂ ಸಮಂಜಸವಾಗಿದೆ. ಏನೇ ಆದರು ಸೂತ್ರದಲ್ಲಿರುವ 'ಜೀವಮುಖ್ಯಪ್ರಾಣಲಿಂಗಾತ್' ಎಂಬ ಪೂರ್ವಪಕ್ಷದ ಭಾಗವನ್ನು ಸುಂದರವಾಗಿ ವ್ಯಾಖ್ಯಾನಿಸಿರುವುದೇ ನಮ್ಮ ಹೆಗ್ಗಳಿಕೆ. ಆದ್ದರಿಂದ ಶ್ರೀಮದಾಚಾರ್ಯರು ಮಾಡಿದ ಸೂತ್ರವ್ಯಾಖ್ಯಾನವು ನಿಷ್ಕಳಂಕವಾಗಿದೆ ಎಂಬುದನ್ನು ಸಜ್ಜನರು ಗಮನಿಸಬಹುದು.

**ಗುರುರಾಜೀಯಮ್ –** नन्वेवं भवत्पक्षेपि जीवलिङ्गानां तद्विशेषेन्द्रपरत्वेन प्राणोऽस्मीति प्राणस्य जीवविशेषेन्द्रविशेषणत्वप्रतीतेः प्राणलिङ्गस्यापि तत्परत्वेनेन्द्र एव प्राण इत्येक एव पूर्वपक्षो वाच्यः । तथाच जीवप्राणलिङ्गायोगादिति शङ्कायोगः तत्र जीवशब्दस्य तद्विशेषपरत्वे च वक्तुरात्मोपदेशेपि इन्द्रलिङ्गस्यानेनैव सङ्ग्रहसम्भवात् वक्तुरात्मोपदेशादिति पृथक् सौत्रशङ्कायोगादिति दोषतादवस्थ्यमेवेत्यत आह – **अस्मदीयोदाहरणे त्विति ॥**

## ಸಾರ

ರಾಮಾನುಜ ಮತದಲ್ಲಿ ಪ್ರಾಣಶಬ್ದವಾಚ್ಯನಾದವನು ಇಂದ್ರನೇ ಆಗಿದ್ದಾನೆಂದು ಪೂರ್ವಪಕ್ಷ ಮಾಡಲಾಗಿದೆ. ಹಾಗಾದಲ್ಲಿ 'ಜೀವಮುಖ್ಯಪ್ರಾಣಲಿಂಗಾತ್' ಎಂಬ ಸೂತ್ರದಲ್ಲಿರುವ ಜೀವಪದಕ್ಕೆ ಅಸ್ವಾರಸ್ಯವನ್ನು ಹೇಳಿದಂತಾಗುತ್ತದೆ. ಒಂದುವೇಳೆ ಇಂದ್ರನೆಂಬ ಜೀವ ವಿಶೇಷಪರತ್ವವನ್ನು ಅಂಗೀಕರಿಸಿದರೆ ''ನ ವಕ್ತುರಾತ್ಮೋಪದೇಶಾತ್'' ಎಂಬ ಸೂತ್ರವೇ ವ್ಯರ್ಥವಾಗುತ್ತದೆ. ಏಕೆಂದರೆ ನಾನೇ ಪ್ರಾಣನೆಂಬ ಇಂದ್ರನ ವಾಕ್ಯವು ಜೀವಲಿಂಗವಾಗಿದೆ. ಆದ್ದರಿಂದ 'ಜೀವಮುಖ್ಯಪ್ರಾಣಲಿಂಗಾತ್' ಎಂಬ ಸೂತ್ರದಿಂದಲೇ ಇದು ಸಂಗ್ರಹವಾಗುತ್ತದೆ. ಪುನಃ ''ಆತ್ಮೋಪದೇಶಾತ್'' ಎಂಬ ಸೂತ್ರದಿಂದ ಆಕ್ಷೇಪ ಹಾಗೂ ಸಮಾಧಾನಗಳು ಬೇಕಾಗಿರುವುದಿಲ್ಲ.

ಅಂತಿಮಪ್ರಾಣಾಧಿಕರಣ-(೧।೧।೧೨)

ಆದರೆ ನಮ್ಮ ಮತದಲ್ಲಿ ಈ ದೋಷವಿಲ್ಲ. "ಶತಾಯುಷ್ಟ್ವ"(ನೂರುವರ್ಷದ ಜೀವನ) ಎಂಬ ಲಿಂಗವು ಮರಣವಿಲ್ಲದ ಇಂದ್ರನಲ್ಲಿ ಸುತರಾಂ ಬರುವುದಿಲ್ಲ. ಆದ್ದರಿಂದ ಪ್ರತ್ಯೇಕ ಸೂತ್ರದ ಅನಿವಾರ್ಯತೆ ಇದೆ.

* * * *

## ಅದ್ವೈತಿಗಳ ಎರಡನೇ ಸೂತ್ರ ವ್ಯಾಖ್ಯಾನ

तात्पर्यचन्द्रिका

**यत्तु परकीयं ''न वक्तुः'' इति सूत्रव्याख्यानं 'वक्तुः' उपदेष्टुरिन्द्रस्य 'प्राणोऽस्मि' इत्यात्मोपदेशान्नेति चेन्न,**

**अस्मिन् प्रकरणे ''यावद्ध्यस्मिन् शरीरे प्राणो वसति तावदायुः'' इत्यायुरवधित्वस्य ''वक्तारं विद्यात्'' इत वक्तृत्वप्रज्ञात्मत्वादेश्चोक्तेः प्रत्यगात्म-सम्बन्धबाहुल्यमस्ति, तच्च पराचीनेन्द्रे न युक्तमिति,**

---

**शङ्करभाष्यम्** – न वक्तुरात्मोपदेशादिति चेदध्यात्मसम्बन्धभूमा ह्यस्मिन् ॥ २९ ॥

यदुक्तं प्राणो ब्रह्मेति, तदाक्षिप्यते । न परं ब्रह्म प्राणशब्दम् । कस्मात्, वक्तुरात्मोपदेशात् वक्ताहीन्द्रो नाम कश्चिद्विग्रहवान्देवताविशेषः स्वमात्मानं प्रतर्दनायाचचक्षे – 'मामेव विजानीहि' इत्युपक्रम्य 'प्राणोऽस्मि प्रज्ञात्मा' इत्यहङ्कारवादेन । स एष वक्तुरात्मत्वेनोपदिश्यमानः प्राणः कथं ब्रह्म स्यात् । नहि ब्रह्मणो वक्तृत्वं सम्भवति, 'अवागमनाः' (बृह.३।८।८) इत्यादिश्रुतिभ्यः । तथा विग्रहसम्बन्धिभिरेव ब्रह्मण्य-सम्भवद्भिर्धर्मैरात्मानं तुष्टाव – 'त्रिशीर्षाणं त्वाष्ट्रमहनमरुन्मुखान्यतीञ्शालावृकेभ्यः प्रायच्छम्' इत्येवमादिभिः । प्राणत्वं चेन्द्रस्य बलवत्त्वादुपपद्यते । 'प्राणो वै बलम्' इति हि विज्ञायते । बलस्य चेन्द्रो देवता प्रसिद्धा । या च काचिद्बलकृतिरिन्द्रकर्मैव तदिति हि वदन्ति । प्रज्ञात्मत्वमप्यप्रतिहतज्ञानत्वाद्देवतात्मनः सम्भवति । अप्रतिहतज्ञाना देवता इति हि वदन्ति । निश्चिते चैवं देवतात्मोपदेशे हिततमत्वादिवचनानि यथासम्भवं तद्विषयाण्येव योजयितव्यानि । तस्माद्वक्तुरिन्द्रस्यात्मोपदेशान्न प्राणो ब्रह्मेत्याक्षिप्य प्रतिसमाधीयते – 'अध्यात्मसम्बन्धभूता ह्यस्मिन्' इति । अध्यात्मसम्बन्धः प्रत्यगात्मसम्बन्धस्तस्य भूता बाहुल्यामस्मिन्नध्याय उपलभ्यते 'यावद्ध्यस्मिञ्शरीरे प्राणो वसति तावदायुः' इति प्राणस्यैव प्रज्ञात्मनः प्रत्युग्भूतस्यायुष्प्रदानोपसंहारयोः स्वातन्त्र्यं दर्शयति न देवता-विशेषस्य पराचीनस्य । तथास्तित्वे च प्राणानां निःश्रेयसमित्यध्यात्ममेवेन्द्रियाश्रयं प्राणं दर्शयति । तथा 'प्राण एव प्रज्ञात्मेदं शरीरं परिगृह्योत्थापयति' (कौ. ३।३) इति, 'न

ಅನುವಾದ - ''ನ ವಕ್ತುಃ'' ಎಂಬ ಎರಡನೇ ಸೂತ್ರವನ್ನು ಅದ್ವೈತಿಗಳು ಹೀಗೆ ವ್ಯಾಖ್ಯಾನಿಸುತ್ತಾರೆ -

ವಕ್ತುಃ = ಉಪದೇಶಮಾಡುತ್ತಿರುವ ಇಂದ್ರನ, ಆತ್ಮೋಪದೇಶಾತ್ = ಪ್ರಾಣೋಽಸ್ಮಿ ಪ್ರಜ್ಞಾತ್ಮಾ ಎಂಬುದಾಗಿ ತಾನೇ ಪ್ರಾಣನೆಂಬ ಉಪದೇಶವಿರುವುದರಿಂದ ಪ್ರಾಣನು ಬ್ರಹ್ಮನಲ್ಲ. ಇತಿ ಚೇತ್ = ಹೀಗೆ ಹೇಳಿದರೆ, ನ = ತಪ್ಪು. ಅಸ್ಮಿನ್ = ಇಂದ್ರಪ್ರತರ್ದನ ಸಂವಾದ ಪ್ರಕರಣದಲ್ಲಿ ಅಧ್ಯಾತ್ಮಸಂಬಂಧ ಭೂಮಾ = ಶುದ್ಧಾತ್ಮನಿಗೆ ಸಂಬಂಧಿಸಿದ ಧರ್ಮಗಳೇ ಬಹಳವಾಗಿ ಇವೆ. ಏಕೆಂದರೆ - ''ಯಾವದ್ಧಿ ಅಸ್ಮಿನ್ ಶರೀರೇ ಪ್ರಾಣೋ ವಸತಿ ತಾವದಾಯುಃ'' ಎಲ್ಲಿಯ ತನಕ ಈ ಶರೀರದಲ್ಲಿ ಪ್ರಾಣನು ವಾಸವಾಗಿರುತ್ತಾನೋ ಅಲ್ಲಿಯ ತನಕ ಆಯುಷ್ಯ ಇರುತ್ತದೆ. ಹೀಗೆ 'ಆಯುಷ್ಯವನ್ನು ಕೊಡುವಿಕೆ' ಮತ್ತು 'ಆಯುಷ್ಯವನ್ನು ಉಪಸಂಹಾರ ಮಾಡುವಿಕೆ' ಎಂಬ ಲಿಂಗವು ಶುದ್ಧಾತ್ಮನಿಗೆ ಸಂಬಂಧಪಟ್ಟ ಧರ್ಮವಾಗಿದೆ.

''ವಕ್ತಾರಂ ವಿದ್ಯಾತ್'' ಎಂಬಲ್ಲಿ ವಕ್ತೃತ್ವ ಪ್ರಜ್ಞಾತ್ಮತ್ವ ಮೊದಲಾದ ಲಿಂಗಗಳು ಕೇಳಿಸುತ್ತಿವೆ. ಇವುಗಳೂ ಸಹ ಪ್ರತ್ಯಗಾತ್ಮನಲ್ಲೇ ಇರುವಂತಹ ಧರ್ಮಗಳು. ಹೊರತು ಹೊರಗಿರುವ (ಪ್ರಾಗ್ಭೂತನಾದ) ದೇವೇಂದ್ರನಲ್ಲಿ ಸರ್ವಥಾ ಕೂಡುವುದಿಲ್ಲ.

### ಕಠಿಣ ಪದಾರ್ಥ

ಇಂದ್ರಸ್ಯ = ಇಂದ್ರನ (ಕರ್ತರಿ ಷಷ್ಠಿ), ಅಸ್ಮಿನ್‌ಪ್ರಕರಣೇ = ಇಂದ್ರಪ್ರತರ್ದನರ ಸಂವಾದ ಪ್ರಕರಣದಲ್ಲಿ, ಆಯುರವಧಿತ್ವಸ್ಯ = ಆಯುಷ್ಯದಾನ ಮತ್ತು ಆಯುಷ್ಯದ ಉಪಸಂಹಾರದ ಸ್ವಾತಂತ್ರ್ಯವು, ಪ್ರತ್ಯಗಾತ್ಮ = ಶುದ್ಧಾತ್ಮನಿಗೆ, ಪರಾಚೀನೇ = ಸಂಸಾರಿಯಾದ್ದರಿಂದ ಹೊರಗಿರುವ.

**प्रकाशः** – एवं मतद्वये अधिकरणशरीरमाद्यसूत्रार्थं च निरस्याधुना पूर्वमताभिमतं द्वितीयसूत्रार्थमनूद्य निरस्यति – **यत्त्विति** ॥ प्राग्विवृतानि सूत्राण्यस्माभिः । 'पराचीने' संसारित्वेन पराग्भूते ।

ವಿವರಣೆ - ಇಲ್ಲಿಯ ತನಕ ಅದ್ವೈತಿಗಳ ಹಾಗೂ ರಾಮಾನುಜರ ಅಧಿಕರಣ ಶರೀರವನ್ನು ತೋರಿಸಿ ನಿರಾಕರಿಸಿದ್ದಾಯಿತು. ಮತ್ತು 'ಪ್ರಾಣಸ್ತಥಾಽನುಗಮನಾತ್' ಎಂಬ ಪ್ರಥಮ ಸೂತ್ರಾರ್ಥವನ್ನು

---

वाचं विजिज्ञासीत वक्तारं विद्यात्' इति चोपक्रम्य 'तद्यथा रथस्यारेषु नेमिरर्पिता नाभावरा अर्पिता एवमेवैता भूतमात्राः प्रज्ञामात्रास्वर्पिताः प्रज्ञामात्राः प्राणेऽर्पिताः स एष प्राण एव प्रज्ञात्मानन्दोऽजरोऽमृतः' इति विषयेन्द्रियव्यवहारारनाभिभूतं प्रत्यगात्मानमेवोपसंहरति । 'स म आत्मेति विद्यात्' इति चोपसंहारः प्रत्यगात्मपरिग्रहे साधुर्न पराचीनपरिग्रहे । 'अयमात्मा ब्रह्म सर्वानुभूः' (बृह. २।५।१९) इति च श्रुत्यन्तरम् । तस्मादध्यात्मसम्बन्धबाहुल्याद्ब्रह्मोपदेश एवायं न देवातात्मोपदेशः ॥२९॥

ನಿರಾಕರಿಸಿದ್ದಾಯಿತು. ಪ್ರಕೃತ ದ್ವಿತೀಯ ಸೂತ್ರದ ವ್ಯಾಖ್ಯಾನವನ್ನು ಅದ್ವೈತಿಗಳು ಮತ್ತು ರಾಮಾನುಜರು ಹೇಗೆ ಮಾಡಿದ್ದಾರೆಂಬುದನ್ನು ಅನುವಾದ ಮಾಡಿ ನಿರಾಕರಿಸಲು ಹೊರಟಿದ್ದಾರೆ.

'ಯತ್ತು' ಇತ್ಯಾದಿ ಗ್ರಂಥದಿಂದ ಅದ್ವೈತಿಗಳ 'ನ ವಕ್ತುಃ' ಎಂಬ ಎರಡನೇ ಸೂತ್ರವ್ಯಾಖ್ಯಾನವನ್ನು ಅನುವಾದ ಮಾಡುತ್ತಿದ್ದಾರೆ. ವಸ್ತುತಃ ಈ ಹಿಂದೆಯೇ ಪ್ರಾಸಂಗಿಕವಾಗಿ ಅದ್ವೈತಿಗಳ ಸೂತ್ರಾರ್ಥವನ್ನು ವಿವರಿಸಿದ್ದಾಗಿದೆ.

ಸಾರ

ಅದ್ವೈತಿಗಳ ಎರಡನೇ ಸೂತ್ರ ವ್ಯಾಖ್ಯಾನ - 'ಪ್ರಾಣೋಽಸ್ಮಿ ಪ್ರಜ್ಞಾತ್ಮಾ' ಎಂಬುದಾಗಿ ಇಂದ್ರನು ತನ್ನ ಉಪದೇಶ ಮಾಡುತ್ತಿರುವುದರಿಂದ ಪ್ರಾಣನು ಬ್ರಹ್ಮನಲ್ಲವೆಂದು ಪೂರ್ವಪಕ್ಷ.

ಇಂದ್ರ ಪ್ರತರ್ದನ ಸಂವಾದ ಪ್ರಕರಣದಲ್ಲಿ ಕೇಳಿಸುತ್ತಿರುವ ಧರ್ಮಗಳೆಲ್ಲವು ಶುದ್ಧಾತ್ಮನದ್ದೇ ಆಗಿವೆ. ಸಂಸಾರಿಯಾದ ಇಂದ್ರನಲ್ಲಿ ಆ ಧರ್ಮಗಳು ಅಸಂಭಾವಿತಗಳಾದ್ದರಿಂದ ಶುದ್ಧಾತ್ಮನೇ ಪ್ರಾಣಶಬ್ದವಾಚ್ಯನೆಂದು ಸಿದ್ಧಾಂತ.

* * * *

## ಅದ್ವೈತಿಗಳ ಎರಡನೆಯ ಸೂತ್ರವ್ಯಾಖ್ಯಾನದಲ್ಲಿ 'ವಕ್ತುಃ' ಎಂಬ ಪದವು ವ್ಯರ್ಥ

तात्पर्यचन्द्रिका

**तन्न, 'उपदेशात्' इत्यनेनैव उपदेष्टृत्वरूपवक्तृत्वलाभेन 'वक्तुः' इत्यस्य वैयर्थ्यात्, स्वात्मोपदेशादित्यस्य तु वक्तृपदप्रयोगेऽप्यलाभात् ।**

**अस्मत्पक्षे च बृहतीसहस्रवक्तारं प्रतीन्द्रस्य विप्रलम्भो न युक्त इति सूचनाय तस्य सार्थक्यात् । इन्द्रेऽपि स्वशरीरावस्थानवक्तृत्वप्रज्ञात्मत्वादेः सम्भवादायुरवधित्ववक्तृत्वयोश्च वायुजीवयोरेव सम्भवेन सदा सर्वगते इन्द्रियादिरहिते च ब्रह्मणि असम्भवेन च ब्रह्मपक्षप्रतिकूलत्वात् ।**

**किञ्चास्माकं मत इव वक्तुरात्मोपदेशस्य गतिमनुक्त्वा प्रकरणस्य ब्रह्मपरत्वोक्तिरयुक्ता । उक्तञ्च 'अनुगमात्' इत्यनेनैव प्रकरणस्य ब्रह्मपरत्वम् ।**

ಅನುವಾದ - ಈ ವ್ಯಾಖ್ಯಾನವು ಸರಿಯಿಲ್ಲ. 'ಆತ್ಮೋಪದೇಶಾತ್' ಎಂಬುದರಿಂದಲೇ ಉಪದೇಷ್ಟೃತ್ವ ಎಂಬ ವಕ್ತೃತ್ವವು ಲಭಿಸುವಾಗ 'ವಕ್ತುಃ' ಎಂಬ ಪದವು ವ್ಯರ್ಥವಾಗುತ್ತದೆ. ಏಕೆಂದರೆ ಸ್ವಾತ್ಮೋಪದೇಶವು ವಕ್ತೃಪದವಿಲ್ಲದಿದ್ದರೂ ತಿಳಿಯುತ್ತದೆ.

ನಮ್ಮ ವ್ಯಾಖ್ಯಾನದಲ್ಲಿ 'ವಕ್ತುಃ' ಎಂಬ ಪದಕ್ಕೆ ಬೃಹತೀಸಹಸ್ರವನ್ನು ಪಠಿಸುವಾಗ ಪಠಿಸುವ ವಿಶ್ವಾಮಿತ್ರ ಋಷಿಗೆ ಎಂದರ್ಥ. "ಇಂದ್ರನು ವಿಶ್ವಾಮಿತ್ರ ಋಷಿಗೆ ಸುಳ್ಳು ಹೇಳಿ ವಂಚನೆಯನ್ನು

---

**श्रीभाष्य - न वक्तरात्मोपदेशादिति चेदध्यात्मसम्बन्धभूमा ह्यस्मिन् ॥ ३० ॥**

यदुक्तम् - इन्द्रप्राणशब्दनिर्दिष्टस्य 'आनन्दोऽजरोऽमृतः' (कौ. ३-९) इत्यनेनैकार्थ्यादयं परं ब्रह्मेति तन्नोपपद्यते; 'मामेव विजानीहि', 'प्राणोऽस्मि प्रज्ञात्मा तं मामायुरमृतमित्युपास्स्व' (कौ. ३-१) इति वक्ता हीन्द्रः, 'त्रिशीर्षाणं त्वाष्ट्रमहनम्' इत्येवमादिना त्वाष्ट्रवधादिभिः प्रज्ञातजीवभावस्य स्वात्मन एवोपास्यतां प्रतर्दनायोपदिशति; अत उपक्रमे जीवविशेष इत्यवगते सति 'आनन्दोऽजरोऽमृतः' (कौ. ३-९) इत्यादिभिरुपसंहारस्तदनुगुण एव वर्णनीय इति चेत्-परिहरति-अध्यात्मसम्बन्धभूता ह्यस्मिन् ।

आत्मनि यः सम्बन्धः सोऽध्यात्मसम्बन्धः । तस्य भूमा-भूयस्त्वम् । बहुत्वमित्यर्थः । आत्मन्याधेयतया सम्बध्यमानानां बहुत्वेन सम्बन्धबहुत्वम् । तच्चास्मिन्-वक्तरि परमात्मन्येव हि सम्भवति । 'तद्यथा रथस्यारेषु नेमिरर्पिता नाभावरा अर्पिताः एवमेवैता भूतमात्राः प्रज्ञामात्रस्वर्पिताः, प्रज्ञामात्राः प्राणेऽर्पिताः । स एष प्राण एव प्रज्ञात्माऽऽनन्दोऽजरोऽमृताः' (कौ. ३-९) इति भूतमात्राशब्देनाचेतनवस्तुजातमभिधाय प्रज्ञामात्राशब्देन तदाधारतया चेतनवर्गं चाभिधाय तस्याप्यधारतया प्रकृतमिन्द्रप्राणशब्दाभिधेयं निर्दिश्य तमेव, 'आनन्दोऽजरोऽमृतः' इत्युपदिशति । तदेतच्चे तनाचेतनात्मककृत्स्नवस्त्वाधारत्वं जीवादर्थान्तरभूतेऽस्मिन्परमात्मन्येवोपपद्यते इत्यर्थः ॥

अथवा, अध्यात्मसम्बन्धभूमा ह्यस्मिन्-परमात्मासाधारणधर्मसम्बन्धोऽध्यात्मसम्बन्धः । तस्य भूमा बहुत्वं हि अस्मिन्-प्रकरणे विद्यते । तथा हि-प्रथमम्, 'त्वमेव मे वरं वृणीष्व यं त्वं मनुष्याय हिततमं मन्यसे' (कौ. ३-१) इति, 'मामुपास्स्व' (कौ. ३-१) इति च परमात्मासाधारणमोक्षासाधनोपासनकर्मत्वं प्राणशब्दनिर्दिष्टस्येन्द्रस्य प्रतीयते । तथा, 'एष एव साधु कर्म कारयति तम्, यमेभ्यो लोकेभ्य उन्निनीपति । एष एवासाधु कर्म कारयति तम्, यमधो निनीषति' (कौ. ३-९) इति सर्वस्य कर्मणः कारयितृत्वं च परमात्मधर्मः । तथा 'तद्यथा रथस्यारेषु नेमिरर्पिता नाभावरा अर्पिताः, एवमेवैता भूतमात्राः प्रज्ञामात्रास्वर्पिताः प्रज्ञामात्राः प्राणेऽर्पिताः' (कौ. ३-९) इति सर्वाधारत्वं च तस्यैव धर्मः । तथा 'स एष प्राण एव प्रज्ञात्माऽऽनन्दोऽजरोऽमृतः' इत्येतेऽपि परमात्मन एव धर्माः । 'एष लोकाधिपतिरेष सर्वेशः' इति च परमात्मन्येव सम्भवति । तदेवमध्यात्मसम्बन्धभूम्नोऽत्र विद्यमानत्वात् परमात्मैवात्रेन्द्रप्राणशब्दनिर्दिष्टः ॥ ३० ॥

ಮಾಡಲಾರ'' ಎಂಬುದನ್ನು ತಿಳಿಸಲು 'ವಕ್ತುಃ' ಎಂಬ ಪದವು ಸಾರ್ಥಕವಾಗಿದೆ. ಆದರೆ ಅದ್ವೈತ ಸಿದ್ಧಾಂತದಲ್ಲಿ 'ವಕ್ತುಃ' ಎಂಬ ಪದಕ್ಕೆ ಇಂದ್ರನಿಗೆ ಎಂದು ಅರ್ಥ. ಆವಾಗ 'ಆತ್ಮೋಪದೇಶಾತ್' (ಇಂದ್ರನ ಉಪದೇಶದಿಂದ) ಎಂಬ ಪದದಿಂದಲೇ ಈ ಅರ್ಥವು ದೊರೆಯುವಾಗ 'ವಕ್ತುಃ' ಎಂಬ ಪದವು ವ್ಯರ್ಥವಲ್ಲವೆ?

ಅದ್ವೈತಿಗಳು ಮಾಡಿದ ಸಿದ್ಧಾಂತವೂ ಸರಿಯಿಲ್ಲ. 'ಸ್ವಶರೀರಾವಸ್ಥಾನ, ವಕ್ತೃತ್ವ ಮತ್ತು ಪ್ರಜ್ಞಾತ್ಮತ್ವ' ಮೊದಲಾದ ಧರ್ಮಗಳು ಇಂದ್ರನಲ್ಲಿ ಉಪಪನ್ನವಾಗುತ್ತವೆ. ಆಯುರಾವಧಿತ್ವವು ಪ್ರಾಣನಲ್ಲಿ ಉಪಪನ್ನವಾಗಿದೆ. ಮತ್ತು ವಕ್ತೃತ್ವ ಧರ್ಮವು ಜೀವನಲ್ಲಿ ಉಪಪನ್ನವಾಗಿದೆ. ಆದರೆ ಈ ಯಾವುದೇ ಧರ್ಮಗಳು ಬ್ರಹ್ಮನಲ್ಲಿ ಸರ್ವಥಾ ಉಪಪನ್ನಗಳಾಗಲಾರವು. ಏಕೆಂದರೆ ನಿರಂತರವಾಗಿ ಬ್ರಹ್ಮನು ಸರ್ವಗತನಾಗಿರುವುದರಿಂದ ಶರೀರದಲ್ಲಿ ಮಾತ್ರ ಇದ್ದಾನೆಂದು ಹೇಳಲಾಗದು. ಮತ್ತು ಯಾವುದೇ ಇಂದ್ರಿಯಗಳಿಲ್ಲದ ಬ್ರಹ್ಮನಲ್ಲಿ ವಕ್ತೃತ್ವಾದಿಗಳನ್ನೂ ಸಹ ಹೇಳಲಾಗದು. ಆದ್ದರಿಂದ ನೀವು ಹೇಳಿದ ಸಿದ್ಧಾಂತ ಲಿಂಗಗಳೆಲ್ಲವೂ ಶುದ್ಧಬ್ರಹ್ಮನು ಪ್ರಾಣಶಬ್ದವಾಚ್ಯನೆನ್ನುವುದಕ್ಕೆ ಪ್ರತಿಕೂಲವೇ ಆಗಿವೆ ಹೊರತು ಅನುಕೂಲಗಳಾಗಿಲ್ಲ.

ಮತ್ತೊಂದು ದೋಷ - ನಮ್ಮ ಮತದಲ್ಲಿ ಬೃಹತೀಸಹಸ್ರದ ವಕ್ತೃವಿಗೆ ಮಾಡಿದ ಆತ್ಮೋಪದೇಶಕ್ಕೆ ಗತಿಯನ್ನು ಮೊದಲು ನಿರೂಪಿಸಿ ಆನಂತರ ಪ್ರಕರಣಕ್ಕೆ ಬ್ರಹ್ಮಪರತ್ವವನ್ನು ನಿರೂಪಿಸಲಾಗಿದೆ. ಆದರೆ ನಿಮ್ಮ ಮತದಲ್ಲಿ ವಕ್ತೃವಿನ ಆತ್ಮೋಪದೇಶಕ್ಕೆ ಗತಿಯನ್ನು ಹೇಳದೆ ಬ್ರಹ್ಮಪರತ್ವವನ್ನು ಹೇಳುತ್ತಿದ್ದೀರಿ. ಇದು ತಪ್ಪಾಗುತ್ತದೆ. 'ಅನುಗಮಾತ್' ಎಂಬುದರಿಂದ ಪ್ರಕರಣಕ್ಕೆ ಬ್ರಹ್ಮಪರತ್ವವನ್ನು ನೀವೇ ಸಮರ್ಥಿಸಿದ್ದೀರಿ.

ಕಠಿಣ ಪದಾರ್ಥ -

ತಸ್ಯ = ವಕ್ತುಃ ಎಂಬ ಪದಕ್ಕೆ, ವಾಯು = ವಾಯು ಅಥವಾ ಮುಖ್ಯಪ್ರಾಣ ಎಂಬ ಶಬ್ದಗಳಿಂದ ಪ್ರತಿಪಾದ್ಯವಾದ ಪ್ರಾಣಾಪಾನಾದಿ ಪಂಚ ವೃತ್ತಿಗಳು, ಸರ್ವಗತೇ = ಎಲ್ಲ ದೇಶಗಳಲ್ಲಿರುವ, ಉಕ್ತಂಚ = ಪ್ರಥಮ ಸೂತ್ರದಲ್ಲಿ ಹೇಳಿದ್ದಾರೆ, ಗತಿಂ = ನಿಜವಾದ ಅರ್ಥವನ್ನು.

**ಪ್ರಕಾಶಃ** – ननु 'आत्मोपदेशात्' इत्यनेन स्वोपदेशलाभात्तदर्थं 'वक्तुः' इत्येतदित्यत आह – **स्वात्मेति** ॥ भवतामप्ययं दोष इत्यत आह – **अस्मदिति** ॥ न त्वन्मत इव मन्मते 'वक्तुः' इत्यनेनेन्द्रो गृह्यते, किन्तु विश्वामित्रः । तथाऽपि तद्व्यर्थमिति चेन्न, पूर्वपक्षदार्ढ्यार्थत्वादिति भावः ।

ವಿವರಣೆ - ಸೂತ್ರದಲ್ಲಿರುವ 'ಆತ್ಮೋಪದೇಶಾತ್' ಎಂಬ ಪದಕ್ಕೆ 'ಸ್ವಾತ್ಮೋಪದೇಶಾತ್' ಎಂಬ ಅರ್ಥವನ್ನು ತಿಳಿಯಲು ವಕ್ತೃಪದವು ಬೇಕು. ಇಲ್ಲದಿದ್ದಲ್ಲಿ ಆತ್ಮ ಶಬ್ದಕ್ಕೆ ಪರಮಾತ್ಮ ಎಂದೂ ಸಹ ಅರ್ಥವಾಗಬಹುದಲ್ಲವೆ? ಎಂಬ ಪ್ರಶ್ನೆಗೆ 'ಸ್ವಾತ್ಮೋಪದೇಶಾತ್' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ವಕ್ತೃಪದವಿದ್ದಲ್ಲಿ ಮಾತ್ರ ಸ್ವಾತ್ಮೋಪದೇಶವೆಂದೇನೂ ತಿಳಿಯಬೇಕಾಗಿಲ್ಲ. ವಕ್ತೃವು ಆತ್ಮನ ಬಗ್ಗೆ ಉಪದೇಶ ಮಾಡಿದ್ದಾನೆಂಬ ಅರ್ಥವನ್ನೂ ಸಹ ಇದರಿಂದ ತಿಳಿಯಬಹುದು. ಆದ್ದರಿಂದ ವಕ್ತೃ ಪದವು ಬೇಕಾಗಿಲ್ಲ.

ಈ ದೋಷವು ದ್ವೈತಿಗಳಿಗೂ ಬರುತ್ತದಲ್ಲವೆ? ಎಂಬ ಪ್ರಶ್ನೆಗೆ 'ಅಸ್ಮತ್‌ಪಕ್ಷೇ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ನಮ್ಮ ಮತದಲ್ಲಿ ನಿಮ್ಮಂತೆ 'ವಕ್ತುಃ' ಎಂಬ ಪದಕ್ಕೆ ಇಂದ್ರನೆಂಬರ್ಥವನ್ನು ಮಾಡಿರುವುದಿಲ್ಲ. ಹೊರತಾಗಿ, 'ಬೃಹತೀಸಹಸ್ರವನ್ನು ಪಠಿಸುವ ವಿಶ್ವಾಮಿತ್ರ ಋಷಿಗೆ' ಎಂದರ್ಥ. ಇಷ್ಟಾದರೂ ವಕ್ತೃಪದವನ್ನು ವ್ಯರ್ಥವೆಂದು ಹೇಳಬಾರದು. ಪೂರ್ವಪಕ್ಷದ ದಾರ್ಢ್ಯಕ್ಕೋಸ್ಕರ ಸಾರ್ಥಕವಾಗಿದೆ.

**प्रकाशः** – सिद्धान्तांशार्थं निरस्यति – **इन्द्र इति** ॥ न केवलमन्यथासिद्धत्वं हेतूनामसिद्धिश्चेत्याह – **आयुरिति** ॥ **वाय्विति** ॥ वायुमुख्यप्राणशब्दितपञ्चवृत्ति-रूपवाय्वित्यर्थः। सर्वगतत्वान्नावधित्वं, करणशून्यत्वान्न वक्तृत्वमित्यर्थः ॥

**गतिमनुक्त्वेति** ॥ ब्रह्मपरत्वे स्वात्मोपदेशरूपबाधके शङ्किते मन्मत इवान्तर्याम्यादिविवक्षया तदुक्तिरिति गत्युक्त्या बाधकमपरिहृत्य प्रकरणस्य ब्रह्मपरत्वोक्तिरयुक्तेत्यर्थः । अयं च दोषस्तवापि तुल्य इति शङ्कानिरासाय वा, गत्युक्तिपरत्वमस्य युज्यत इत्यगत्यैवमाश्रितमित्याशङ्कानिरासाय वोक्तं – **अस्मन्मत इवेति** ।

ಅದ್ವೈತಿಗಳ ಸಿದ್ಧಾಂತವನ್ನು 'ಇಂದ್ರೇತಿ' ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಶರೀರಾವಸ್ಥಾನ, ವಕ್ತೃತ್ವ, ಮೊದಲಾದ ಧರ್ಮಗಳು ಬ್ರಹ್ಮನನ್ನು ಬಿಟ್ಟು ಬೇರೆಡೆ ಪ್ರಸಿದ್ಧವಾಗಿವೆಯೆಂದು 'ಬ್ರಹ್ಮತ್ವಂ ಅನ್ಯಾಥಾಪಿ ಸಿದ್ಧವಾಗುತ್ತದೆ' ಎಂಬುದಾಗಿ ಸಿದ್ಧಾಂತ ಹೇತುಗಳಿಗೆ ಅನ್ಯಥಾಸಿದ್ಧಿ ದೋಷವನ್ನು ಹೇಳಿದರು. ಈಗ ಅಸಿದ್ಧಿದೋಷವನ್ನು 'ಆಯುರವಧಿತ್ವ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

'ಗತಿಮನುಕ್ತ್ವಾ' ಎಂಬ ಗ್ರಂಥಕ್ಕೆ ಹೀಗರ್ಥ - ಪ್ರಾಣ ಪದವು ಬ್ರಹ್ಮಪರವಾದಲ್ಲಿ ಇಂದ್ರನ ಸ್ವಾತ್ಮೋ-ಪದೇಶವು ತಪ್ಪಾಗುತ್ತದಲ್ಲವೆ? ಎಂದು ಶಂಕಿಸಿದರೆ ಇಂದ್ರನು ಅಂತರ್ಯಾಮಿಯಾದ ಪರಮಾತ್ಮನನ್ನು ವಿವಕ್ಷಿಸಿ ತನ್ನನ್ನು ಪ್ರಾಣನೆಂದು ಉಪದೇಶಿಸಿಕೊಂಡಿದ್ದಾನೆಂಬುದಾಗಿ ನಾವು ಉತ್ತರಿಸುತ್ತೇವೆ. ಅಂದರೆ ಸ್ವಾತ್ಮೋಪದೇಶಕ್ಕೆ ಬಂದಿರುವಂತಹ ಬಾಧಕವನ್ನು ಮೊದಲು ಪರಿಹರಿಸಿ. ಅನಂತರ ಪ್ರಕರಣಕ್ಕೆ ಬ್ರಹ್ಮಪರತ್ವವನ್ನು ಸಾಧಿಸುವುದು ನ್ಯಾಯ. ಆದರೆ ಅದ್ವೈತಿಗಳು ಸ್ವಾತ್ಮೋಪದೇಶಕ್ಕೆ ಬಂದಿರುವ ಬಾಧಕ-ವನ್ನು ಪರಿಹರಿಸದೇ ಪ್ರಕರಣಕ್ಕೆ ಬ್ರಹ್ಮಪರತ್ವವನ್ನು ಸಮರ್ಥಿಸಲು ಹೊರಟಿದ್ದಾರೆ. ಇದು ತು[illegible] ತಪ್ಪಾಗುತ್ತದೆ.

ಅಥವಾ ನಮಗೆ ಹೇಳಿದ ದೋಷ ಅದ್ವೈತಿಗಳಿಗೂ ಬರುತ್ತದಲ್ಲವೆ? ಎಂಬ ಶಂಕೆಯನ್ನು ಪರಿಹರಿಸುವುದಕ್ಕಾಗಿ 'ಅಸ್ಮನ್‌ಮತೇ ಏವ' ಎಂದು ಹೇಳಿದ್ದಾರೆ.

ಅಂತಿಮಪ್ರಾಣಾಧಿಕರಣ-(೧।೧।೧೨)

**प्रकाशः** – नन्वेवं बाधके शङ्किते स्वपक्षहेतुं प्रथममनुक्त्वा 'शास्त्रदृष्ट्या' इत्यनेन तत्परिहारः क्रियते । अतो न दोष इत्यत आह – **उक्तञ्चेति** ॥ तथा च इहैव बाधकपरिहारः कर्तव्य इति भावः ।

एतेनास्यापि स्वपक्षहेतुपरत्वे आद्यस्य वैयर्थ्यमित्युक्तं भवति । नच तत्र हिततमत्वाजरत्वादिकमेव विवक्षितमिह पुनरायुरवधित्वादिकमतो न दोष इति वाच्यं, निरसिष्यमाणत्वादिति भावः ।

ಹೀಗೆ ಬಾಧಕವನ್ನು ಶಂಕಿಸಿದಾಗ ಸ್ವಪಕ್ಷಹೇತುವನ್ನು ಮೊದಲು ಹೇಳಿ ಅನಂತರ ಬಾಧಕವನ್ನು ಪರಿಹರಿಸುತ್ತೇವೆ. ಆದ್ದರಿಂದ 'ಶಾಸ್ತ್ರದೃಷ್ಟ್ಯಾ' ಎಂಬ ಮುಂದಿನ ಸೂತ್ರದಿಂದ ಸ್ವಾತ್ಮೋಪದೇಶಕ್ಕೆ ಬಂದಿರುವಂತಹ ಬಾಧಕವನ್ನೇ ಪರಿಹರಿಸಿಲ್ಲವೆಂಬ ಶಂಕೆಗೆ ಅವಕಾಶವಿಲ್ಲವೆಂದು ಅದ್ವೈತಿಗಳು ಸಮಾಧಾನ ನೀಡಿದರೆ 'ಉಕ್ತಂಚ' ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. 'ಪ್ರಾಣಸ್ತಥಾನುಗಮಾತ್' ಎಂಬ ಪ್ರಥಮ-ಸೂತ್ರದಲ್ಲಿಯೇ 'ಅನುಗಮಾತ್' ಎಂಬುದಾಗಿ ಮೊದಲೇ ಬ್ರಹ್ಮಪರತ್ವವನ್ನು ಸಮರ್ಥಿಸಿದ್ದರಿಂದ ಇಲ್ಲಿಯೇ ಬಾಧಕವನ್ನು ಪರಿಹರಿಸಬೇಕೆಂದು ಅಭಿಪ್ರಾಯ.

ಹೀಗೆ ಹೇಳಿದ್ದರಿಂದ ಮತ್ತೊಂದು ದೋಷವನ್ನು ತೋರಿಸಿದಂತಾಯಿತು. ಮೊದಲನೆಯ ಸೂತ್ರದಂತೆ ಎರಡನೆಯ ಸೂತ್ರವೂ ಸಹ ಸ್ವಪಕ್ಷಹೇತುವನ್ನೇ ಸಾಧಿಸಲು ಹೊರಟರೆ ಮೊದಲನೇ ಸೂತ್ರವು ವ್ಯರ್ಥವಾಗುತ್ತದೆ. ಇನ್ನು "ಹಿತತಮತ್ವ, ಅಜರತ್ವ ಮೊದಲಾದ ಬ್ರಹ್ಮನ ಧರ್ಮಗಳನ್ನು ಸಾಧಿಸುವುದಕ್ಕಾಗಿ ಪ್ರಥಮ ಸೂತ್ರವು ಸಾರ್ಥಕ. 'ಆಯುರವಧಿತ್ವ' ಮೊದಲಾದವುಗಳನ್ನು ಬ್ರಹ್ಮನ ಧರ್ಮವೆಂದು ಸಾಧಿಸಲು ಎರಡನೆಯ ಸೂತ್ರವು ಸಾರ್ಥಕವೆಂದು ಅದ್ವೈತಿಗಳು ಉತ್ತರಿಸಬಹುದು". ಅದ್ವೈತಿಗಳ ಈ ಧೋರಣೆಯನ್ನು ಈ ಮುಂದೆ ನಿರಾಕರಿಸುವವರಿದ್ದೇವೆ.

**गुरुराजीयम्** – नन्वेवं भवत्पक्षेप्युपदेशादित्यनेनैवोपदेष्टृत्वरूपवक्तृत्व-लाभाद्वक्तुरित्यस्य वैयर्थ्यं स्यादित्यतः स्यादेवं यद्यस्माभिर्वक्तुरिन्द्रस्येति व्याख्यायते नैवमित्याह – **अस्मत्पक्षे चेति** ॥ **सदा सर्वगत इति** ॥ अत्र ब्रह्मणि सदा सर्वगतत्वादायुरवधित्वस्यासम्भवः । इन्द्रियरहितत्वाद्वक्तृत्वस्यासम्भव इति सम्बन्धो बोध्यः ॥

## ಸಾರ

ಅದ್ವೈತಿಗಳಿಗೆ ಎರಡನೆಯ ಸೂತ್ರದಲ್ಲಿ 'ವಕ್ತುಃ' ಎಂಬ ಪದದ ಸಾರ್ಥಕ್ಯವನ್ನು ಸಮರ್ಥಿಸಲಾಗದು. ಸೂತ್ರದಲ್ಲಿರುವ 'ಆತ್ಮೋಪದೇಶಾತ್' ಎಂಬ ಪದಕ್ಕೆ ವಕ್ತೃವು ಆತ್ಮನ ಬಗ್ಗೆ ಉಪದೇಶ ಮಾಡುತ್ತಿದ್ದಾನೆಂಬ ಅರ್ಥವು ಸುಲಭವಾಗಿ ತಿಳಿಯುತ್ತದೆ. ಪುನಃ ಪ್ರತ್ಯೇಕವಾಗಿ ವಕ್ತುಃ ಎಂದು ಹೇಳಬೇಕಾಗಿಲ್ಲ. 'ಆತ್ಮೋಪದೇಶ' ಪದಕ್ಕೆ

ಸ್ವಾತ್ಮೋಪದೇಶ ಎಂಬರ್ಥವನ್ನು ಮಾಡಲು ವಕ್ತೃಪದವು ಬೇಕಾಗುತ್ತದೆಂದು ಅದ್ವೈತಿಗಳು ಹೇಳಿಕೊಳ್ಳಬಹುದು. ಆದರೆ ವಕ್ತೃ ಪದವಿಲ್ಲದಿದ್ದರೂ ಈ ಅರ್ಥ ತಿಳಿಯುವಾಗ 'ವಕ್ತೃ' ಪದವು ಏಕೆಂದು ಯಾರಿಗೂ ಮನವರಿಕೆ-ಯಾಗುವುದಿಲ್ಲ.

ನಮ್ಮಲ್ಲಿ ಈ ದೋಷವಿಲ್ಲ. 'ವಕ್ತುಃ' ಎಂಬ ಪದವೇ ಬೇರೆ ವ್ಯಕ್ತಿಯನ್ನು ಹೇಳುತ್ತಿದೆ. 'ಆತ್ಮೋ-ಪದೇಶ' ಎಂಬ ಪದವೇ ಬೇರೆ ವ್ಯಕ್ತಿಯನ್ನು ಹೇಳುತ್ತಿದೆ. ಬ್ರಹತೀಸಹಸ್ರವನ್ನು ಪಠಿಸುವ ವಿಶ್ವಾಮಿತ್ರನಿಗೆ ಎಂಬರ್ಥವನ್ನು ಹೇಳಲು ವಕ್ತೃಪದವು ಬೇಕಾಗುತ್ತದೆ. ಈ ಪದದ ಅಂತರಂಗದಲ್ಲಿ ಇಂದ್ರನು ವಿಶ್ವಾಮಿತ್ರನಿಗೆ ಸುಳ್ಳು ಹೇಳಲಾರ ಎಂಬ ಅರ್ಥವು ಗರ್ಭಿತವಾಗಿದೆ. ಆದ್ದರಿಂದ 'ವಕ್ತುಃ' ಎಂಬ ಪದವು ಅತ್ಯಂತ ಅನಿವಾರ್ಯ.

* * * *

## ಅದ್ವೈತಿಗಳ ದ್ವಿತೀಯ ಸೂತ್ರ ವ್ಯಾಖ್ಯಾನ ನಿರಾಕರಣೆ

तात्पर्यचन्द्रिका

**केचित्तु – परमात्मासाधारणधर्मः अध्यात्मशब्दार्थः । तत्सम्बन्धबहुत्वं अध्यात्मसम्बन्धभूमेत्याहुः ।**

**तन्न, उक्तदोषत्वात् । सम्बन्धपदवैयर्थ्याच्च । अन्यथा "अन्तस्तद्धर्म" इत्यादावपि सम्बन्धपदप्रसङ्गात् । 'अस्मिन्' इति सप्तम्यैव सम्बन्धोक्तेश्च ।**

**किञ्चेह भूमपदप्रयोगाद्धिततमत्वादिवदानन्दाजरत्वादीनां सर्वेषां ब्रह्म-धर्माणामत्रैव विवक्षासम्भवेन 'अनुगमात्' इति व्यर्थम् ।**

ಅನುವಾದ - 'ನ ವಕ್ತುಃ' ಎಂಬ ಸೂತ್ರಕ್ಕೆ ರಾಮಾನುಜರು ಹೀಗೆ ವ್ಯಾಖ್ಯಾನಿಸುತ್ತಾರೆ - ಪರಮಾತ್ಮನಲ್ಲಿ ಅಸಾಧಾರಣವಾದ ಅನೇಕ ಧರ್ಮಗಳನ್ನು ಈ ಪ್ರಕರಣದಲ್ಲಿ ಹೇಳಲಾಗಿದೆ. ಆ ಧರ್ಮಗಳ ಸಂಬಂಧವು ಬ್ರಹ್ಮನಲ್ಲಿರುವುದರಿಂದ ಬ್ರಹ್ಮನೇ ಪ್ರಾಣಶಬ್ದವಾಚ್ಯನು. ಹೀಗೆ ಪರಮಾತ್ಮನ ಅಸಾಧಾರಣ ಧರ್ಮವನ್ನು ಸೂತ್ರದಲ್ಲಿರುವ ಅಧ್ಯಾತ್ಮಶಬ್ದ ತಿಳಿಸುತ್ತಿದೆ ಎಂದು.

ಇದು ತಪ್ಪು. ಬಾಧಕವನ್ನು ಪರಿಹರಿಸದೆ ಬ್ರಹ್ಮಧರ್ಮಗಳ ಬಾಹುಲ್ಯವನ್ನು ಹೇಳುವಂಥದ್ದು ತಪ್ಪಾಗುತ್ತದೆಂದು ಹೇಳುವ ಹಿಂದಿನ ದೋಷ ಇವರಿಗೂ ತಪ್ಪಿದಲ್ಲ. ಸಂಬಂಧ ಪದಕ್ಕೆ ಅರ್ಥವೇ ಇಲ್ಲ. ಧರ್ಮಗಳ ಸಂಬಂಧವನ್ನು ಬ್ರಹ್ಮನಲ್ಲಿ ಹೇಳುವುದಕ್ಕಾಗಿಯೇ ಸಂಬಂಧಪದವು ಸಾರ್ಥಕವೆಂದು ಹೇಳಿದರೆ 'ಅಂತಸ್ತದ್ಧರ್ಮ' ಇತ್ಯಾದಿ ಸೂತ್ರಗಳಲ್ಲಿಯೂ ಸಂಬಂಧಪದವನ್ನು ಹೇಳಬೇಕಾಗುವ ಪ್ರಸಂಗ ಬರುತ್ತದೆ. ಅಷ್ಟೇ ಅಲ್ಲದೆ 'ಅಸ್ಮಿನ್' ಎಂಬುದಾಗಿ ಸಪ್ತಮೀವಿಭಕ್ತಿಯಿಂದಲೇ ಸಂಬಂಧವು ತಿಳಿಯುತ್ತಿರುವಾಗ ಪುನಃ ಸಂಬಂಧಪದವು ವ್ಯರ್ಥವಲ್ಲವೇ?

ಮತ್ತೊಂದು ದೋಷ - ಈ ಸೂತ್ರದಲ್ಲಿ ''ಭೂಮಾ'' ಎಂಬ ಪದವನ್ನು ಪ್ರಯೋಗಿಸಿದ್ದರಿಂದ ಹಿತತಮತ್ವಾದಿ ಲಿಂಗಗಳನ್ನು ವಿವಕ್ಷಿಸುವಂತೆ ಆನಂದ, ಅಜರತ್ವ ಮೊದಲಾದ ಬ್ರಹ್ಮನ ಧರ್ಮಗಳನ್ನು ಇಲ್ಲಿಯೇ ವಿವಕ್ಷಿಸಲು ಬರುವಾಗ 'ಅನುಗಮಾತ್' ಎಂಬ ಪದವು ವ್ಯರ್ಥವಾಗುತ್ತದೆ.

ಕಠಿಣಪದಾರ್ಥ :

ತತ್ಸಂಬಂಧ ಬಹುತ್ವಂ = ಬ್ರಹ್ಮನಲ್ಲಿ ಅನೇಕ ಧರ್ಮಗಳ ಸಂಬಂಧವನ್ನು, ಉಕ್ತದೋಷತ್ವಾತ್ = ಬಾಧಕವನ್ನು ಪರಿಹರಿಸದೇ ಸಾಧಕವನ್ನು ಹೇಳುವುದು ತಪ್ಪು ಎಂಬ ಹಿಂದಿನ ದೋಷವನ್ನು, ಅನ್ಯಥಾ = ಸಂಬಂಧಪದವು ಬೇಕೆಂದು ಹೇಳಿದರೆ, ಅತ್ರೈವ = ದ್ವಿತೀಯ ಸೂತ್ರದಲ್ಲಿಯೇ.

**प्रकाशः – केचित्त्विति ॥** ''मामेव विजानीहि'' ''मामुपास्स्व'' इत्यादि वक्तुः त्वाष्ट्रवधादिना प्रज्ञातजीवभावस्येन्द्रस्योपास्यत्वेनाऽऽत्मन एव उपदेशादिप्रक्रमस्य जीवविषयत्वे ''आनन्दोऽजरः'' इत्याद्युपसंहारस्तदनुगुण एव नेय इति चेत्,

अस्मिन् प्रकरणे हिततमत्वसाध्वसाधुकर्मकारयितृत्वादीनां अध्यात्मशब्दितानां परमात्मासाधारणधर्माणां सम्बन्धबाहुल्यमस्तीत्यर्थ इत्याहुरित्यर्थः ॥

**उक्तेति ॥** उक्तं बाधकमपरिहृत्य ब्रह्मधर्मबाहुल्योक्तिरयुक्ता । नच स्वपक्षहेतुं पूर्वमुक्त्वा पश्चाद्बाधकं शास्त्रसूत्रेण निरसिष्यते । उक्तं च श्रुतप्रकाशे – 'पूर्वं परमात्मपरत्वसाधकहेतुरुक्तः। पूर्वपक्षयुक्तेः कः परिहार इत्यतः शास्त्रसूत्रं' इतीति वाच्यं, 'अनुगमात्' इत्यनेनैव स्वपक्षहेतोरुक्तत्वात् । अत्र विशेषस्तु 'किञ्चेह' इत्यत्र निरसिष्यत इति प्रागुक्तदोषग्रस्तत्वादित्यर्थः॥

ವಿವರಣೆ - ರಾಮಾನುಜರ ಸೂತ್ರವ್ಯಾಖ್ಯಾನದ ವಿವರಣೆ ಹೀಗಿದೆ -

'ಮಾಮೇವ ವಿಜಾನೀಹಿ' 'ಮಾ ಉಪಾಸ್ವ' ಇತ್ಯಾದಿಯಾಗಿ ಹೇಳುತ್ತಿರುವವನು ಇಂದ್ರನೇ ಆಗಿದ್ದಾನೆ. ತ್ವಾಷ್ಟ್ರವಧ ಮೊದಲಾದ ಲಿಂಗಗಳು ಇದಕ್ಕೆ ಉಪಪಾದಕಗಳಾಗಿವೆ. ಆದ್ದರಿಂದ ಇಂದ್ರನೇ ತನ್ನ ಬಗ್ಗೆ ಉಪದೇಶಿಸುತ್ತಿದ್ದಾನೆಂದು ಪ್ರಕರಣವು ಜೀವವಿಷಯಕವಾಗಿ ಆರಂಭವಾಗಿದೆ. ಈ ಉಪಕ್ರಮಕ್ಕೆ ಅನುಗುಣವಾಗಿ ''ಆನಂದೋಽಜರಃ'' ಇತ್ಯಾದಿಯಾಗಿ ಉಪಸಂಹಾರ ವಾಕ್ಯವನ್ನು ಅರ್ಥೈಸಬೇಕು. ಆದ್ದರಿಂದ ದೇವೇಂದ್ರನೇ ಪ್ರಾಣಶಬ್ದ ವಾಚ್ಯನೆಂದು ಪೂರ್ವಪಕ್ಷ.

ಈ ಪ್ರಕರಣದಲ್ಲಿ ಹಿತತಮತ್ವ ಸಾಧ್ವಸಾಧುಕರ್ಮ ಕಾರಯಿತೃತ್ವ ಮೊದಲಾದವು ಅಧ್ಯಾತ್ಮಶಬ್ದದಿಂದ ಪ್ರತಿಪಾದ್ಯವಾಗುತ್ತವೆ. ಹೀಗೆ ಪರಮಾತ್ಮನ ಅನೇಕ ಅಸಾಧಾರಣ ಧರ್ಮಗಳು ಕೇಳಿಸುತ್ತಿವೆ. ಆದ್ದರಿಂದ ಪರಮಾತ್ಮನೇ ಪ್ರಾಣಶಬ್ದವಾಚ್ಯನೆಂದು ಸಿದ್ಧಾಂತ.

ಪರಿಪೂರ್ಣಚಂದ್ರಿಕಾ

ರಾಮಾನುಜರ ಈ ವ್ಯಾಖ್ಯಾನವು ಸಮಂಜಸವಲ್ಲ. ''ಆತ್ಮೋಪದೇಶದ ವಿಷಯದಲ್ಲಿ ಪ್ರಾಪ್ತವಾದ ಬಾಧಕವನ್ನು ಪರಿಹರಿಸದೆ ಅನೇಕ ಬ್ರಹ್ಮಧರ್ಮಗಳನ್ನು ಉಪಪಾದಿಸುವುದರಿಂದ ಏನೂ ಪ್ರಯೋಜನ-ವಿಲ್ಲ.'' ಅದ್ವೈತಿಗಳಿಗೆ ಹೇಳಿದ ದೋಷವನ್ನು ರಾಮಾನುಜರಿಂದಲೂ ತಪ್ಪಿಸಿಕೊಳ್ಳಲಾಗದು.

ಆಕ್ಷೇಪ - ಸ್ವಪಕ್ಷಸಾಧಕವಾದ ಹೇತುವನ್ನು ಮೊದಲು ಈ ಸೂತ್ರದಿಂದ ಸಾಧಿಸಿ, ಅನಂತರ ಮುಂದಿನ 'ಶಾಸ್ತ್ರದೃಷ್ಟ್ಯಾ' ಎಂಬ ಸೂತ್ರದಿಂದ ಬಾಧಕವನ್ನು ಪರಿಹರಿಸುತ್ತೇವೆ. ಶ್ರುತ ಪ್ರಕಾಶವು ಈ ವಾದವನ್ನು ಸಮ್ಮತಿಸುತ್ತದೆ - ''ಪೂರ್ವಂ ಪರಮಾತ್ಮಪರತ್ವಸಾಧಕಹೇತುರುಕ್ತಃ । ಪೂರ್ವಪಕ್ಷಯುಕ್ತೇಃ ಕಃ ಪರಿಹಾರ ಇತ್ಯತಃ ಶ್ಯಾಸ್ತ್ರಸೂತ್ರಂ ಇತಿ'' ''ಮೊದಲು ಪರಮಾತ್ಮಪರತ್ವಕ್ಕೆ ಸಾಧಕವಾದ ಹೇತು ಹೇಳಲ್ಪಟ್ಟಿದೆ. ಹಾಗಾದರೆ ಪೂರ್ವಪಕ್ಷದ ಯುಕ್ತಿಗೆ ಏನು ಪರಿಹಾರ ? ಎಂಬ ಪ್ರಶ್ನೆಗೆ ಶಾಸ್ತ್ರ, ಸೂತ್ರವು ಹೊರಟಿದೆ'' ಎಂದು. ಆದ್ದರಿಂದ ಸ್ವಾತ್ಮೋಪದೇಶ ವಿಷಯದಲ್ಲಿ ಪ್ರಾಪ್ತವಾದ ಬಾಧಕವನ್ನು ಪರಿಹರಿಸಿಲ್ಲವೆಂಬ ಶಂಕೆಗೆ ಅವಕಾಶವಿಲ್ಲ.

ಸಮಾಧಾನ - ಹಾಗಾದರೆ ಪ್ರಥಮಸೂತ್ರವು ಅದ್ವೈತಿಗಳಂತೆ ನಿಮ್ಮ ಪಕ್ಷದಲ್ಲಿಯೂ ವ್ಯರ್ಥ. ಏಕೆಂದರೆ 'ಅನುಗಮಾತ್' ಎಂಬುದಾಗಿ ಸ್ವಪಕ್ಷಸಾಧಕಹೇತುವನ್ನು ಹೇಳಿದ್ದೀರಿ. ಈ ಸೂತ್ರದಲ್ಲಿಯೇ ಸ್ವಪಕ್ಷಸಾಧಕ ಹೇತುವನ್ನು ಹೇಳುವುದಾದರೆ ಪ್ರಾಣಸ್ತಥಾನುಮಾತ್ ಎಂಬ ಸೂತ್ರವೇ ವ್ಯರ್ಥವಾಗುತ್ತದೆ.

**प्रकाशः – सम्बन्धेति** ॥ 'अध्यात्मभूमा' इत्यनेनैव पूर्णत्वादिति भावः । नन्वसिद्धिपरिहाराय सम्बन्धपदमित्यत आह – **अस्मिन्निति** ॥ आधाराधेयभावस्य सप्तम्यर्थत्वादिति भावः । स्वपक्षहेतुपरत्वे दोषान्तरमाह – **किञ्चेति** ॥ **भूमपदप्रयोगादिति** ॥

ಅಧ್ಯಾತ್ಮಭೂಮಾ ಎಂದಷ್ಟೇ ಸೂತ್ರದಿಂದ ನಿಮ್ಮ ಅಭಿಪ್ರಾಯವು ಪೂರ್ಣವಾಗುವಾಗ ಸಂಬಂಧಪದವು ವ್ಯರ್ಥ..

ಆಕ್ಷೇಪ - ಅಸಿದ್ಧಿಪರಿಹಾರಕ್ಕೋಸ್ಕರ ಹಿತತಮತ್ವಾದಿಧರ್ಮಗಳು ಬ್ರಹ್ಮನಲ್ಲಿ ಅಸಿದ್ಧವಾಗಿವೆಯೆಂಬ ಹೇತುಸಿದ್ಧಿಶಂಕೆಯು ಬರುತ್ತದೆ. ಅದನ್ನು ಪರಿಹಾರ ಮಾಡುವುದಕ್ಕಾಗಿ ಸಂಬಧಪದವನ್ನು ಸೂತ್ರವು ಹೇಳುತ್ತಿದೆ. ಹಿತತಮತ್ವಾದಿಧರ್ಮಗಳ ಸಂಬಂಧ ಬ್ರಹ್ಮನಲ್ಲಿರುವುದರಿಂದ ಅಸಿದ್ಧಿಯು ಬರುವುದಿಲ್ಲ.

ಸಮಾಧಾನ - ಹಾಗಾದಲ್ಲಿ 'ಅಂತಸ್ತದ್ಧರ್ಮೋಪದೇಶಾತ್' ಎಂಬಲ್ಲಿ ಹೇಳಿದ ಧರ್ಮಗಳು ಬ್ರಹ್ಮನಲ್ಲಿ ಅಸಿದ್ಧವಾಗಿವೆಯೆಂಬ ಶಂಕೆಯನ್ನು ಪರಿಹರಿಸಲು ಅಲ್ಲಿಯೂ ಸಂಬಂಧ ಪದವನ್ನು ಪ್ರಯೋಗಿಸ-ಬೇಕಾದೀತು. ಇಷ್ಟಾದರೂ ಸಂಬಂಧವನ್ನು ಹೇಳಲೇಬೇಕೆಂದು ನೀವು ಆಗ್ರಹಿಸಿದರೆ 'ಅಸ್ಮಿನ್' ಎಂಬ ಸಪ್ತಮೀವಿಭಕ್ತಿಯಿಂದಲೇ ಸಂಬಂಧವು ತಿಳಿಯುತ್ತದೆ. ಆಧಾರಾಧೇಯಭಾವವೇ ಸಪ್ತಮ್ಯರ್ಥವೆಂಬುದು ಪ್ರಸಿದ್ಧ.

ಈ ಸೂತ್ರವು ಸ್ವಪಕ್ಷಸಾಧಕವಾದ ಹೇತುವನ್ನು ಹೇಳುವುದಾದರೆ, ಮತ್ತೊಂದು ದೋಷವನ್ನು 'ಕಿಂಚ'

ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಭೂಮಪದ ಪ್ರಯೋಗದಿಂದಲೇ ಹಿತತಮತ್ವಾದಿ ಧರ್ಮಗಳನ್ನು ಸಂಗ್ರಹಿಸಲು ಬರುತ್ತದೆಂದು 'ಭೂಮಪದಪ್ರಯೋಗಾತ್' ಎಂಬುದರ ಅರ್ಥ.

**प्रकाशः –** एतेन यदत्रोक्तं श्रुतप्रकाशे – आद्यं सूत्रं "स एष प्राण एव प्रज्ञात्माऽऽनन्दोऽजरः" इत्यादिवाक्यमात्रविषयं व्याख्यानं, नतु परैरिव वाक्यान्तरस्थहेतवोप्यत्र विवक्षितत्वेनोक्ताः, 'अध्यात्मसम्बन्धभूमा' इति द्वितीयसूत्र एव बहुवाक्यस्थहेतुबाहुल्यस्य विवक्षितत्वावगमादिति नाद्वैतिमत इवास्माकं पौनरुक्त्यमिति, तन्निरस्तं, अत्रैव बाहुल्यवाचिभूमशब्देन सर्वस्य विवक्षितुं शक्यत्वादिति ॥

ಹೀಗೆ ಹೇಳಿದ್ದರಿಂದ ಶ್ರುತಪ್ರಕಾಶದ ಮತ್ತೊಂದು ಧೋರಣೆಯನ್ನು ನಿರಾಕರಿಸಿದಂತಾಯಿತು.

"ಆದ್ಯಂ ಸೂತ್ರಂ 'ಸ ಏಷ ಪ್ರಾಣ ಏವ ಪ್ರಜ್ಞಾತ್ಮಾऽऽನಂದೋऽಜರಃ ಇತ್ಯಾದಿವಾಕ್ಯಮಾತ್ರ-ವಿಷಯಂ ವ್ಯಾಖ್ಯಾನಮ್, ನತು ಪರೈರಿವ ವಾಕ್ಯಾನಂತರಸ್ಥಹೇತುವೋಽಪ್ಯತ್ರ ವಿವಕ್ಷಿತತ್ವೇನೋಕ್ತಾಃ, 'ಅಧ್ಯಾತ್ಮಸಂಬಂಧಭೂಮಾ' ಇತಿ ದ್ವಿತೀಯಸೂತ್ರ ಏವ ಬಹುವಾಕ್ಯಸ್ಥಹೇತುಬಾಹುಲ್ಯಸ್ಯ ವಿವಕ್ಷಿತತ್ವಾವಗಮಾತ್"

ಮೊದಲನೆಯ ಸೂತ್ರವು "ಸ ಏವ ಪ್ರಜ್ಞಾತ್ಮಾ ಆನಂದೋಽಜರಃ" ಇತ್ಯಾದಿ ವಾಕ್ಯವನ್ನಷ್ಟೇ ಸ್ವೀಕರಿಸುತ್ತಿದೆ. ಆದರೆ ಅದ್ವೈತಿಗಳು ಬೇರೆ ವಿಷಯವಾಕ್ಯಗಳಲ್ಲಿರುವ ಹೇತುವನ್ನೂ ಸಹ ಈ ಸೂತ್ರ-ದಿಂದಲೇ ವಿವಕ್ಷಿಸುತ್ತಾರೆ. ಇದು ತಪ್ಪು. ಹಾಗಾದಲ್ಲಿ 'ಅಧ್ಯಾತ್ಮಸಂಬಂಧಭೂಮಾ' ಎಂಬ ದ್ವಿತೀಯ ಸೂತ್ರದಲ್ಲಿಯೇ ಅನೇಕ ವಾಕ್ಯಗಳಲ್ಲಿರುವ ಹೇತುಬಾಹುಲ್ಯಗಳನ್ನು ವಿವಕ್ಷಿಸಲು ಬರುವಾಗ ಪ್ರಥಮಸೂತ್ರವು ಏಕೆ? ಆದ್ದರಿಂದ ವಿಷಯವಾಕ್ಯಗಳು ಭಿನ್ನಭಿನ್ನವಾದ್ದರಿಂದ ಎರಡೂ ಸೂತ್ರಗಳು ನಮ್ಮಮತದಲ್ಲಿ ಸಾರ್ಥಕವಾಗುತ್ತವೆ. ಆದರೆ ವಿಷಯವಾಕ್ಯದಲ್ಲಿರುವ ಹೇತುಗಳನ್ನು ಉಪಪಾದನೆ ಮಾಡುವುದಕ್ಕಾಗಿ ಎರಡನೆಯ ಸೂತ್ರ ಹೊರಟಿದೆ ಎಂಬ ಅದ್ವೈತಿಗಳಿಗೆ ಪುನರುಕ್ತಿ ದೋಷ ಬರುತ್ತದೆ."

ಶ್ರುತಪ್ರಕಾಶದ ಈ ಸಮರ್ಥನೆಯೂ ನಿರಾಕೃತವಾಯಿತು. ಏಕೆಂದರೆ ಈ ಸೂತ್ರದಲ್ಲಿಯೇ "ಭೂಮಾ" ಎಂಬ ಪದದಿಂದ ಎಲ್ಲಾ ವಿಷಯವಾಕ್ಯಗಳನ್ನು ವಿವಕ್ಷಿಸಿ ಬ್ರಹ್ಮಪರತ್ವವನ್ನು ಸಮರ್ಥಿಸಲು ಬರುವಾಗ ಪ್ರಥಮಸೂತ್ರದಿಂದ ಪುನರುಕ್ತಿ ಎಂಬ ದೋಷವು ನಿಮಗೂ ತಪ್ಪಿದಲ್ಲ.

**प्रकाशः – आनन्देति ॥** आद्यसूत्रोक्तानामपीत्यर्थः । एतेन प्राणशब्दचिह्नितसूत्रे प्राणशब्दचिह्नितवाक्यगतहेतोरेव वर्णनीयत्वादित्यपि प्रत्युक्तम् । तेनास्य वैयर्थ्याभावेऽप्यनेन बहुविषयेण तस्य वैयर्थ्यकथनात् ।

'ಆನಂದಾಜರತ್ವಾದಿನಾಂ' ಎಂದು ಗ್ರಂಥದಲ್ಲಿದೆ. ಇದಕ್ಕೆ "ಪ್ರಥಮಸೂತ್ರದಲ್ಲಿ ಹೇಳಲ್ಪಟ್ಟ" ಆನಂದಾದಿ ಧರ್ಮಗಳನ್ನು ಎಂದರ್ಥ. ಹೀಗೆ ಹೇಳಿದ್ದರಿಂದ ಪ್ರಾಣಶಬ್ದದಿಂದ ಕೂಡಿರುವ ವಾಕ್ಯಗಳಲ್ಲಿರುವ

ಹೇತುವನ್ನಷ್ಟೇ ಪ್ರಥಮಸೂತ್ರದಲ್ಲಿ ವಿವಕ್ಷಿಸಬೇಕೆಂಬ ಅಭಿಪ್ರಾಯವನ್ನು ನಿರಾಕರಿಸಿದಂತಾಯಿತು. ಪ್ರಥಮಸೂತ್ರದಿಂದ ದ್ವಿತೀಯಸೂತ್ರಾರ್ಥ ಗತಾರ್ಥವಾಗಿದೆಯೆಂದು ನಾವು ಆಕ್ಷೇಪಿಸುತ್ತಿಲ್ಲ; ಹೊರತಾಗಿ ದ್ವಿತೀಯಸೂತ್ರವು ಬಹುವಿಷಯಕವಾದ್ದರಿಂದ ಪ್ರಥಮಸೂತ್ರದ ಹೇತುವು ಗಥಾರ್ಥವಾಗಿದೆಯೆಂದು ಆಕ್ಷೇಪಿಸುತ್ತಿದ್ದೇವೆ. ಈ ಸೂಕ್ಷ್ಮವನ್ನು ಗಮನಿಸಬೇಕು.

**गुरुराजीयम् – उक्तदोषत्वादिति ॥ किं चास्मन्मत इव वक्तुरात्मोपदेशस्य गतिमनुक्त्वा प्रकरणस्य ब्रह्मपरत्वोक्तिरयुक्तेत्युक्तदोषादित्यर्थः ।**

### ಸಾರ

ಪರಮಾತ್ಮನಲ್ಲೇ ಅಸಾಧಾರಣವಾದ ಅನೇಕ ಧರ್ಮಗಳ ಸಂಬಂಧವನ್ನು ಈ ಪ್ರಕರಣವು ಹೇಳುತ್ತಿದೆ. ಆದ್ದರಿಂದ ಪ್ರಾಣನೇ ಬ್ರಹ್ಮನೆಂದು ರಾಮಾನುಜರು 'ನ ವಕ್ತುः' ಎಂಬ ಸೂತ್ರವನ್ನು ವ್ಯಾಖ್ಯಾನಿಸುತ್ತಾರೆ.

ಅದ್ವೈತಿಗಳಿಗೆ ಬಂದ ದೋಷವು ಇವರಿಗೂ ಬರುತ್ತದೆ. ಪೂರ್ವಪಕ್ಷ ಯುಕ್ತಿಯನ್ನು ಪರಿಹರಿಸದೆ ಸಿದ್ಧಾಂತಯುಕ್ತಿಯನ್ನೇ ನೇರವಾಗಿ ಹೇಳುವುದು ತಪ್ಪಲ್ಲವೇ? ಮತ್ತು ಸೂತ್ರದಲ್ಲಿ ಸಂಬಂಧಪದವಿಲ್ಲದೆ ಕೇವಲ 'ಅಧ್ಯಾತ್ಮಭೂಮಾ' ಎಂಬುದರಿಂದಲೇ ರಾಮಾನುಜರ ಅಭಿಪ್ರಾಯವು ಪೂರ್ಣವಾಗುವಾಗ ಸಂಬಂಧ -ಪದವು ವ್ಯರ್ಥವಾಗಿದೆ. ಮತ್ತು ಸೂತ್ರದಲ್ಲಿ 'ಭೂಮಾ' ಎಂಬ ಪದವನ್ನು ಪ್ರಯೋಗಿಸಿದ್ದರಿಂದಲೇ ಪ್ರಥಮ -ಸೂತ್ರದಲ್ಲಿ ಹೇಳಲ್ಪಟ್ಟ ಹಿತತಮತ್ವಾದಿ ಧರ್ಮಗಳನ್ನು ವಿವಕ್ಷಿಸಲು ಬರುವುದರಿಂದ ಕೇವಲ ಎರಡನೆಯ ಸೂತ್ರವು ಸಾಕಾಗುತ್ತದೆ.

* * * *

## ಅದ್ವೈತಿಗಳ ಮೂರನೇ ಸೂತ್ರಾರ್ಥ ವಿಮರ್ಶೆ

तात्पर्यचन्द्रिका

**यच्च ''शास्त्रदृष्ट्या'' इत्यस्य परकीयं व्याख्यानं – इन्द्रः स्वात्मानं यथा शास्त्रमार्गेण ज्ञानेन अहं ब्रह्मेति पश्यन् 'मामेव विजानीहि' इत्युपदिदेश वामदेववदिति[1], तन्न,**

**चिदचित्संवलनात्मकाहमर्थे ब्रह्मत्वस्य मन्वादित्वस्य चाभावेन ''मामेव विजानीहि'' ''अहं मनुः'' इत्यादिव्यपदेशहेतोः अहंब्रह्मेत्यादिदृष्टेः भ्रान्तिदृष्टित्वेन शास्त्रदृष्टित्वाभावात् । चिन्मात्रैक्यदृष्टेश्च भिन्नविषयत्वेन 'मां विजानीहि' इत्यादि-व्यपदेशाहेतुत्वात् । 'माम्' इत्यादौ चिन्मात्रलक्षणायां च ''मां विजानीहि, यो मां वेद'' इति वित्तिकर्मत्वोक्तिरयुक्ता ।**

ಅನುವಾದ - "ಶಾಸ್ತ್ರದೃಷ್ಟ್ಯಾ" ಎಂಬ ಮೂರನೇ ಸೂತ್ರವನ್ನು ಅದ್ವೈತಿಗಳು ಹೀಗೆ ವ್ಯಾಖ್ಯಾನಿಸುತ್ತಾರೆ. ದೇವೇಂದ್ರನು ತನ್ನನ್ನು ಶಾಸ್ತ್ರಮಾರ್ಗದಿಂದ "ಅಹಂ ಬ್ರಹ್ಮ" "ನಾನು ಬ್ರಹ್ಮನು." ಎಂಬ ಜ್ಞಾನವುಳ್ಳವನಾಗಿ 'ನನ್ನನ್ನೇ ತಿಳಿ' ಎಂದು ಉಪದೇಶಿಸಿದನು. ವಾಮದೇವ ಋಷಿಯು ತನ್ನನ್ನೇ ಮನುಸೂರ್ಯ ಎಂದು ಉಪದೇಶಿಸಿದಂತೆ.

ಇವರ ಈ ವ್ಯಾಖ್ಯಾನವು ಸಾಧುವಲ್ಲ. ಚಿದಚಿತ್‌ಸಂವಲನಾತ್ಮಕವಾದದ್ದು ಅಹಂ ಶಬ್ದಾರ್ಥವೆಂದು ಅದ್ವೈತಿಗಳು ಹೇಳುತ್ತಾರೆ. ಇದರಲ್ಲಿ ಬ್ರಹ್ಮತ್ವವಾಗಲಿ, ಮನ್ವಾದಿತ್ವಗಳಾಗಲಿ ಇರಲು ಸಾಧ್ಯವಿಲ್ಲ. ಮತ್ತು "ಮಾಂ ವಿಜಾನೀಹಿ" "ಅಹಂ ಮನುಃ" ಇತ್ಯಾದಿಯಾಗಿ ವ್ಯಪದೇಶಹೇತುವಿರುವುದರಿಂದ 'ಅಹಂ ಬ್ರಹ್ಮ' ಎಂಬ ತಿಳುವಳಿಕೆಯು ಭ್ರಾಂತ್ಯಾತ್ಮಕವಾಗಿದೆ. ಹೀಗಿರುವಾಗ ಶಾಸ್ತ್ರಜನ್ಯ ಜ್ಞಾನವೆಂದು ಹೇಳಲು ಸಾಧ್ಯವಿಲ್ಲ.

ಇನ್ನು ಮಾಂ ಎಂಬ ಪದಕ್ಕೆ ಹಾಗೂ ಮನುಃ ಎಂಬ ಪದಕ್ಕೆ ಚಿನ್‌ಮಾತ್ರದಲ್ಲಿ ಲಕ್ಷಣಾ ಮಾಡಬಹುದು. ಆದರೆ "ಮಾಂ ವಿಜಾನೀಹಿ" "ಯೋ ಮಾಂ ವೇದ" ಎಂಬಲ್ಲಿ ಹೇಳಿದ ಜ್ಞಾನಕರ್ಮತ್ವವು ತಪ್ಪಾಗುತ್ತದೆ.

### ಕಠಿಣ ಪದಾರ್ಥ

ಪರಕೀಯಂ = ಅದ್ವೈತಿಗಳ, ಶಾಸ್ತ್ರಮಾರ್ಗೇಣ = ಶಾಸ್ತ್ರಾಧ್ಯಯನದಿಂದ ಹುಟ್ಟಿದ, ಅಹಂ ಶಬ್ದಾರ್ಥೇ = ಅಂತಃಕರಣವಿಶಿಷ್ಟನಾದ ಆತ್ಮನಲ್ಲಿ, ವ್ಯಪದೇಶಹೇತುಃ =

---

१.**शङ्करभाष्यम्** – कथं तर्हि वक्तुरात्मोपदेशः –

शास्त्रदृष्ट्या तूपदेशो वामदेववत् ॥ ३० ॥

इन्द्रो नाम देवतात्मा स्वमात्मानं परमात्मत्वेनाहमेव परं ब्रह्मेत्यार्षेण दर्शनेन यथाशास्त्रं पश्यन्नुपदिशति स्म – 'मामेव विजानीहि' इति । यथा 'तद्धैतत्पश्यन्नृषिर्वामदेवः प्रतिपेदेऽहं मनुरभवं सूर्यश्च' इति तद्वत् । 'तद्यो यो देवानां प्रत्यबुध्यत स एव तदभवत्' (बृ. १।४।१०) इति श्रुतेः । यत्पुनरुक्तं 'मामेव विजानीहि' इत्युक्त्वा विग्रहधर्मैरिन्द्र आत्मानं तुष्टाव त्वाष्ट्रवधादिभिरिति, तत्परिहर्तव्यम् । अत्रोच्यते – न त्वाष्ट्रवधादीनां विज्ञेयेन्द्रस्तुत्यर्थत्वेनोपन्यासो यस्मादेवंकर्माहं तस्मान्मां विजानीहीति । कथं तर्हि । विज्ञानस्तुत्यर्थत्वेन । यत्कारणं त्वाष्ट्रवधादीनि साहसान्युपन्यस्य परेण विज्ञानस्तुतिमनुसन्दधाति – 'तस्य मे तत्र लोम च न मीयते स यो मां वेद न ह वै तस्य केन च कर्मणा लोको मीयते' इत्यादिना । एतदुक्तं भवति – यस्मादीदृशान्यपि क्रूराणि कर्माणि कृतवतो मम ब्रह्मभूतस्य लोमापि न हिंस्यते, स योऽन्योऽपि मां वेद न तस्य केनचिदपि कर्मणा लोको हिंस्यत इति । विज्ञेयं तु ब्रह्मैव 'प्राणोऽस्मि प्रज्ञात्मा' इति वक्ष्यमाणम् । तस्माद्ब्रह्मवाक्यमेतत् ॥ ३० ॥

ಶಬ್ದಪ್ರಯೋಗಕ್ಕೆ ಕಾರಣವಾಗಿರುವ, ಚಿನ್ಮಾತ್ರೈಕ್ಯ = ಚಿನ್ಮಾತ್ರದಿಂದ ಐಕ್ಯಜ್ಞಾನವು, ವಿತ್ತಿಕರ್ಮತ್ವೋಕ್ತಿಃ = ಜ್ಞಾನವಿಷಯತ್ವವೆಂಬ ವಚನವು.

**प्रकाशः** – अद्वैतिमते तृतीयसूत्रार्थमनूद्य निरस्यति – **यच्चेति** ॥ दृष्टान्ते दार्ष्टान्तिके च ब्रह्मात्मैक्यज्ञानं तादृशव्यपदेशहेतुरित्यर्थः । किमत्र दार्ष्टान्तिक इन्द्रे दृष्टान्ते वामदेवे चाहमर्थे विशिष्ट एव प्राणशब्दितब्रह्मत्वस्य मन्वादित्वस्य च ज्ञानं ''मामेव विजानीहि'' इत्यादिव्यपदेशहेतुरुच्यते, उत लक्षितस्य चिन्मात्रस्य चिन्मात्रेणैक्यज्ञानं तस्य हेतुरिति विकल्प्य, आद्यं निरस्यति – **चिदिचदिति** ॥

द्वितीयं निरस्यति – **चिन्मात्रेति** ॥ 'चिन्मात्रं विजानीहि' 'चिन्मात्रं मन्वादि' इत्येव स्यात्, नतु 'मां' इति 'अहं' इति च । नहि 'एक्यं विजानीहि' इति वक्तव्ये 'मां' इति व्यपदेशो युज्यत इत्यर्थः ।

ननु 'मां' इत्यस्य 'अहं' इत्यस्य च चिन्मात्रमर्थ इत्यत आह – **मामित्यादाविति** ॥ तस्योदासीनस्य सकलकारकशक्तिविधुरस्य कर्मत्वायोगात् । ननूल्लेखित्वमात्रेण 'मां' इत्युक्तिर्न तु कर्मत्वमिति चेत्, ''कर्मणि द्वितीया'' इति कर्मार्थकद्वितीयाश्रवणादिति भावः । लक्षणापत्तेश्चेत्यपि ध्येयम् । सिद्धान्ते च स्वप्रयुक्तास्मच्छब्दस्य स्वान्तर्यामिण्येव मुख्यत्वोक्तेर्न कोऽपि दोष इति भावः ।

ವಿವರಣೆ - ಅದ್ವೈತಿಗಳ ಮತದಲ್ಲಿ 'ಶಾಸ್ತ್ರದೃಷ್ಟ್ಯಾ' ಎಂಬ ಮೂರನೇ ಸೂತ್ರಾರ್ಥವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಯಚ್ಚ' ಇತ್ಯಾದಿ ವಾಕ್ಯದಿಂದ.

ದೃಷ್ಟಾಂತದಲ್ಲಿ ವಾಮದೇವ ಋಷಿಯು ಮನುವಿನಿಂದ ಐಕ್ಯಜ್ಞಾನವನ್ನು ಪಡೆದಿದ್ದಾನೆ. ಈ ಐಕ್ಯ ಜ್ಞಾನವೇ 'ಅಹಂ ಮನುಃ' ಎಂಬ ವ್ಯಪದೇಶಕ್ಕೆ (ಶಬ್ದಪ್ರಯೋಗಕ್ಕೆ) ಕಾರಣವಾಗಿದೆ.

ದಾರ್ಷ್ಟಾಂತಿಕದಲ್ಲಿ ದೇವೇಂದ್ರನು ಬ್ರಹ್ಮನಿಂದ ಐಕ್ಯಜ್ಞಾನವನ್ನು ಪಡೆದಿದ್ದಾನೆ. ಈ ಐಕ್ಯಜ್ಞಾನವೇ 'ಮಾಂ ವಿಜಾನೀಹಿ' ಎಂಬ ಶಬ್ದಪ್ರಯೋಗಕ್ಕೆ ಕಾರಣವಾಗಿದೆ. ಇಷ್ಟು 'ಯಚ್ಚ' ಇತ್ಯಾದಿ ವಾಕ್ಯದ ಅಭಿಪ್ರಾಯ.

ಅದ್ವೈತಿಗಳ ಈ ವ್ಯಾಖ್ಯಾನ ಸರಿಯಲ್ಲ. ದಾರ್ಷ್ಟಾಂತಿಕದಲ್ಲಿ ಹೇಳಿದ ಐಕ್ಯಜ್ಞಾನವೆಂದರೇನು? ಇಂದ್ರನಿಗೆ ವಿಶಿಷ್ಟನಾದ ಅಹಮರ್ಥದಲ್ಲಿ ಬ್ರಹ್ಮತ್ವದ ಜ್ಞಾನವಿರುವುದರಿಂದ 'ಮಾಮೇವ ವಿಜಾನೀಹಿ' ಎಂದು ಹೇಳಿದ್ದಾನೋ? ಅಥವಾ ಪ್ರಾಣಶಬ್ದದಿಂದ ಲಕ್ಷಿತನಾದ ಚಿನ್ಮಾತ್ರದಿಂದ ಐಕ್ಯಜ್ಞಾನವಿರುವ ಕಾರಣ 'ಮಾಮೇವ ವಿಜಾನೀಹಿ' ಎಂದು ಹೇಳಿದ್ದಾನೋ?

ಮತ್ತು ದೃಷ್ಟಾಂತದಲ್ಲಿ ಹೇಳಿದ ಐಕ್ಯಜ್ಞಾನವೆಂದರೇನು ? ವಾಮದೇವಋಷಿಗೆ ಅಹಮರ್ಥನಾದ ವಿಶಿಷ್ಟನಲ್ಲಿಯೇ ಮನ್ವಾದಿತ್ವದ ಜ್ಞಾನವಿರುವುದರಿಂದ 'ಅಹಂ ಮನುಃ' ಎಂಬುದಾಗಿ ಶಬ್ದಪ್ರಯೋಗ

ಮಾಡಿದ್ದಾನೋ? ಅಥವಾ ಮನ್ವಾದಿ ಶಬ್ದಗಳಿಂದ ಲಕ್ಷಿತನಾದ ಚಿನ್ಮಾತ್ರದಿಂದ ಐಕ್ಯಜ್ಞಾನವಿರುವ ಕಾರಣ 'ಅಹಂ ಮನುಃ' ಎಂದು ಪ್ರಯೋಗಿಸಿದ್ದಾನೋ?

ಈ ಎರಡು ವಿಕಲ್ಪಗಳಲ್ಲಿ ಮೊದಲನೇ ಪಕ್ಷವನ್ನು 'ಚಿದಚಿತ್' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಅಂದರೆ ಅಹಂ ಶಬ್ದಾರ್ಥದಲ್ಲಿ ಬ್ರಹ್ಮತ್ವವಾಗಲೀ ಮನ್ವಾದಿತ್ವವಾಗಲಿ ಇರುವುದಿಲ್ಲ ಎಂದು ಅದ್ವೈತಿಗಳೇ ಒಪ್ಪಿಕೊಂಡಿದ್ದಾರೆ. ಎರಡನೆಯ ಪಕ್ಷವನ್ನು 'ಚಿನ್ಮಾತ್ರ ಲಕ್ಷಣಾಯಾಂ' ಎಂಬ ವಾಕ್ಯದಿಂದ ನಿರಾಕರಿಸಿದ್ದಾರೆ. ಚಿನ್ಮಾತ್ರದಲ್ಲಿ ಲಕ್ಷಣಾ ಮಾಡಿದರೆ. 'ಚಿನ್ಮಾತ್ರಂ ವಿಜಾನೀಹಿ' 'ಚಿನ್ಮಾತ್ರಂ ಮನುಃ' ಎಂದೇ ಪ್ರಯೋಗಿಸಬೇಕಿತ್ತು. ಹೊರತು 'ಮಾಂ ವಿಜಾನೀಹಿ' ಎಂಬಲ್ಲಿ 'ಮಾಂ' ಎಂಬ ಪದ-ವನ್ನಾಗಲೀ, ಅಹಂ ಮನುಃ ಎಂಬಲ್ಲಿ ಅಹಂ ಪದವನ್ನಾಗಲೀ ಪ್ರಯೋಗಿಸಬಾರದಿತ್ತು. ಏಕೆಂದರೆ 'ಚೈತ್ರನನ್ನು ತಿಳಿ' ಎಂದು ಹೇಳುವ ಸಂದರ್ಭದಲ್ಲಿ ನನ್ನನ್ನು ಎಂಬ ಶಬ್ದವನ್ನು ಯಾರೂ ಪ್ರಯೋಗಿಸಲಾರರು. ಏಕೆಂದರೆ ಚೈತ್ರನೇ ಬೇರೆ, ನಾನೇ ಬೇರೆ ಎಂಬ ಅರಿವು ಹೇಳುವ ವ್ಯಕ್ತಿಗೆ ಇರುತ್ತದೆ. ಅದರಂತೆ ಚಿನ್ಮಾತ್ರವೇ ಬೇರೆ, ಅಹಮರ್ಥವೇ ಬೇರೆಯಾಗಿರುವಾಗ ಚಿನ್ಮಾತ್ರದ ಜ್ಞಾನಕ್ಕೋಸ್ಕರ 'ಅಹಂ' ಎಂಬ ಶಬ್ದಪ್ರಯೋಗವನ್ನು ಮಾಡುವುದು ಸರಿಯಲ್ಲ.

'ಮಾಂ' ಎಂಬ ಪದಕ್ಕೆ ಮತ್ತು 'ಅಹಂ' ಎಂಬ ಪದಕ್ಕೆ ಚಿನ್ಮಾತ್ರದಲ್ಲಿ ಲಕ್ಷಣಾ ಮಾಡುತ್ತೇವೆ. ಆವಾಗ ಹಿಂದಿನ ದೋಷವಿರುವುದಿಲ್ಲ ಎಂಬ ಪ್ರಶ್ನೆಗೆ 'ಮಾಂ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಶುದ್ಧಾತ್ಮನು ಉದಾಸೀನಸ್ವಭಾವನಾದ್ದರಿಂದ ಸಕಲಕಾರಕ ವಿದುರನಾಗಿದ್ದಾನೆ. ಆದ್ದರಿಂದ ಜ್ಞಾನಕರ್ಮತ್ವವು ಶುದ್ಧಾತ್ಮನಲ್ಲಿ ಬರುವುದಿಲ್ಲ.

ಶಂಕೆ - ಜ್ಞಾನಕರ್ಮತ್ವವನ್ನು ಹೇಳಲು ಬಾರದಿದ್ದರೂ ಉಲ್ಲೇಖಿತ್ವವನ್ನು ಹೇಳಬಹುದು. ಆದ್ದರಿಂದ ಉದಾಸೀನಸ್ವಭಾವನಾದ ಶುದ್ಧಾತ್ಮನು ಜ್ಞಾನದಿಂದ ಉಲ್ಲೇಖ್ಯನಾದ ಕಾರಣ 'ಮಾಂ ವಿಜಾನೀಹಿ' ಎಂದು ಹೇಳಬಹುದಲ್ಲವೆ?

ಸಮಾಧಾನ - 'ಕರ್ಮಣಿ ದ್ವಿತೀಯಾ' ಎಂಬ ಸೂತ್ರದಂತೆ ದ್ವಿತೀಯಾ ವಿಭಕ್ತಿಯು ಕೇವಲ ಕರ್ಮಾರ್ಥದಲ್ಲಿ ಬರುತ್ತದೆ. ಪ್ರಕೃತ 'ಮಾಂ ವಿಜಾನೀಹಿ' ಎಂಬಲ್ಲಿ ದ್ವಿತೀಯಾ ವಿಭಕ್ತಿಯು ಕೇಳಿಸುತ್ತಿರುವುದರಿಂದ ಕರ್ಮತ್ವವನ್ನು ಹೇಳಬೇಕು. ಉಲ್ಲೇಖಿತ್ವವನ್ನು ಹೇಳಬಾರದು. ಮತ್ತು ಲಕ್ಷಣಾ ಮಾಡಬೇಕಾದ ಪ್ರಸಂಗವೂ ಬರುತ್ತದೆ.

ಸಿದ್ಧಾಂತದಲ್ಲಿ ಈ ಯಾವ ದೋಷಗಳಿರುವುದಿಲ್ಲ. ತಾನು ಪ್ರಯೋಗಿಸಿದ 'ಮಾಂ' ಎಂಬ ಶಬ್ದವು ತನ್ನ ಅಂತರ್ಯಾಮಿಯಲ್ಲಿಯೇ ಮುಖ್ಯವಾಗಿದೆ. ಆದ್ದರಿಂದ ನನ್ನ ಅಂತರ್ಯಾಮಿಯಾದ ಪರಮಾತ್ಮನನ್ನು ತಿಳಿ ಎಂಬುದಾಗಿ ದೇವೇಂದ್ರನ ಅಭಿಪ್ರಾಯ. ಅಂತರ್ಯಾಮಿಯಲ್ಲಿ ಅಸ್ಮತ್ ಶಬ್ದಕ್ಕೆ ಮುಖ್ಯಾರ್ಥವನ್ನೇ ಒಪ್ಪಿರುವುದರಿಂದ ಲಕ್ಷಣಾಪ್ರಸಂಗ ದೋಷವೂ ಇರುವುದಿಲ್ಲವೆಂದು ತಿಳಿಯಬೇಕು.

**गुरुराजीयम् –** वित्तिकर्मत्वोक्तिरयुक्तेति ॥ अन्यथा वित्तिकर्मत्वरूपदृश्यत्वेन शुद्धस्यापि मिथ्यात्वं स्यादिति भावः ।

## ಸಾರ

ಅದ್ವೈತಿಗಳ ಮೂರನೇ ಸೂತ್ರ ವ್ಯಾಖ್ಯಾನ ಹೀಗಿದೆ - ಉಪದೇಶಃ = ಇಂದ್ರನು ಮಾಡಿದ ಮಾಮೇವ ವಿಜಾನೀಹಿ ಎಂಬ ಉಪದೇಶವು, ವಾಮದೇವವತ್ = ವಾಮದೇವಋಷಿಗಳು ತನ್ನನ್ನೇ ಮನು ಮತ್ತು ಸೂರ್ಯ ಎಂದು ಉಪದೇಶಿಸಿದಂತೆ, ಇಂದ್ರನು ತನ್ನಲ್ಲಿರುವ ಬ್ರಹ್ಮತ್ವವನ್ನು ಶಾಸ್ತ್ರದೃಷ್ಟ್ಯಾ = ಶಾಸ್ತ್ರಾಧ್ಯಯನದಿಂದ ತಿಳಿದಿದ್ದಾನೆ. ಈ ರೀತಿಯಾದ ಸೂತ್ರವ್ಯಾಖ್ಯಾನದಿಂದ ಬ್ರಹ್ಮೈಕ್ಯವನ್ನು ತಿಳಿದು ಇಂದ್ರನು ನಾನೇ ಪ್ರಾಣಶಬ್ದವಾಚ್ಯ-ನೆಂದು ಹೇಳಿಕೊಂಡಿದ್ದಾನೆ.

ಅದ್ವೈತಿಗಳ ಈ ವ್ಯಾಖ್ಯಾನ ಸರಿಯಲ್ಲ. ಏಕೆಂದರೆ 'ಮಾಮೇವ ವಿಜಾನೀಹಿ' ಎಂಬಲ್ಲಿರುವ 'ಮಾಂ' ಎಂಬ ಪದವು ಅಂತಃಕರಣವಿಶಿಷ್ಟನಾದ ಆತ್ಮನನ್ನು ಹೇಳುತ್ತಿದೆ. ಈ ಆತ್ಮಕ್ಕೆ ಬ್ರಹ್ಮನ ಅಭೇದವೂ ಯುಕ್ತವಲ್ಲ. ಇನ್ನು ಚಿನ್ಮಾತ್ರದಲ್ಲಿ ಲಕ್ಷಣಾ ಮಾಡಿದರೂ ಸಹ ಜ್ಞಾನಕರ್ಮತ್ವವನ್ನು ಚಿನ್ಮಾತ್ರನಿಗೆ ಹೇಳಿದಂತಾಗುತ್ತದೆ. ಯಾವುದೇ ಧರ್ಮಗಳಿಲ್ಲದ ಸಕಲಕಾರಕಶಕ್ತಿಗಳಿಂದ ದೂರನಾದ ಚಿನ್ಮಾತ್ರದಲ್ಲಿ ಜ್ಞಾನಕರ್ಮತ್ವವನ್ನಾದರೂ ಹೇಗೆ ತಾನೇ ಒಪ್ಪಿಯಾರು?

* * * *

## ಶಾಸ್ತ್ರಶಬ್ದಾರ್ಥ ವಿಮರ್ಶೆ

### तात्पर्यचन्द्रिका

**किञ्च – शास्त्रशब्दस्य हिताहितशास्तरि वेदादौ योगसम्भवान्न रूढिः । उक्तञ्च –**

भवेतां यदि वृक्षस्य वाजिकर्णौ कथञ्चन ।
अदृष्टां समुदायस्य कः शक्तिं जातु कल्पयेत् ॥ इति ।

शास्तृत्वं च ''एकः शास्ता न द्वितीयोऽस्ति शास्ता'' इत्यादिश्रुत्या ब्रह्मण्येव मुख्यम् । मुख्यसम्भवे चामुख्यमयुक्तम् । दर्शितश्च भाष्यकृता ''संविच्छास्त्रं परं पदम्'' इति ब्रह्मणि शास्त्रपदप्रयोगः । लोकप्रसिद्धिस्तु शास्त्रशब्दस्य वेदादन्यत्रैव ।

अपि च सकारणकदृष्टिद्वारा व्यपदेशविषयोक्तितोऽपि अस्मद्रीत्या साक्षादेव तदुक्तिर्युक्ता । सौत्रो वामदेवदृष्टान्तोऽपि परपक्षे न युक्तः । ''अहं मनुः'' इत्यादिनोक्तं ह्यैक्यं चिन्मात्रविवक्षया वक्तव्यम् । नच तद्विवक्षायां ''अहं भूमिमददामार्यायाहं दृष्टिं दाशुषे मर्त्याय'' इत्यादिविशिष्टविषयमुत्तरवाक्यं युज्यते । भगवद्धर्मो हीन्द्राय भूमिप्रदानादिकम् ।

ಅನುವಾದ - ಶಾಸ್ತ್ರಪದಕ್ಕೆ 'ಶಾಸನ ಮಾಡುವಿಕೆ' ಎಂದರ್ಥ. ಹಿತವನ್ನಾಗಲೀ ಅಹಿತವನ್ನಾಗಲೀ ಶಾಸನ ಮಾಡುವ ವೇದದಲ್ಲಿಯೇ ಶಾಸ್ತ್ರಶಬ್ದದ ಯೌಗಿಕಾರ್ಥ ಕೂಡುತ್ತದೆ. ಹೀಗಿರುವಾಗ ರೂಢ್ಯರ್ಥವನ್ನು ಹೇಳಬಾರದು. ಯೌಗಿಕಾರ್ಥ ಹಾಗೂ ರೂಢ್ಯರ್ಥಗಳು ಒಂದೇ ಶಬ್ದದಲ್ಲಿ ಉಪಸ್ಥಿತವಾದಾಗ ಯಾವುದನ್ನು ಸ್ವೀಕರಿಸಬೇಕೆನ್ನಲು ಆಧಾರ ಹೀಗಿದೆ -

ಭವೇತಾಂ ಯದಿ ವೃಕ್ಷಸ್ಯ ವಾಜಿಕರ್ಣೌ ಕಥಂಚನ ।

ಅದೃಷ್ಟಾಂ ಸಮುದಾಯಸ್ಯ ಕಃ ಶಕ್ತಿಂ ಜಾತು ಕಲ್ಪಯೇತ್ ॥

'ವಾಜಿಕರಣ' ಎಂಬ ವೃಕ್ಷವಿಶೇಷಕ್ಕೆ ಒಂದುವೇಳೆ ಕುದುರೆಯಂತಹ ಕಿವಿಗಳು ಇದ್ದಿದ್ದಲ್ಲಿ ಆವಾಗ ಯೌಗಿಕಾರ್ಥವನ್ನೇ ಹೇಳಬಹುದಿತ್ತು. ಅದೃಷ್ಟವಾದ ಸಮುದಾಯಶಕ್ತಿಯನ್ನು ಯಾರೂ ಸಹ ಕಲ್ಪಿಸುತ್ತಿರಲಿಲ್ಲ. ಆದ್ದರಿಂದ ಅವಯವಾರ್ಥ ಕೂಡುತ್ತಿದ್ದರೆ ಮಾತ್ರ ರೂಢಿಯನ್ನು ಕಲ್ಪಿಸಬೇಕೆಂದು ಈ ವಾಕ್ಯದಿಂದ ತಿಳಿಯುತ್ತದೆ. ಶಾಸ್ತ್ರತ್ವವು ಶಾಸ್ತ್ರಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ಪ್ರವೃತ್ತಿನಿಮಿತ್ತವು ''ಏಕಃ ಶಾಸ್ತಾ ನ ದ್ವಿತಿಯೋಽಸ್ತಿ ಶಾಸ್ತಾ'' ಎಂಬ ಶ್ರುತಿಯಂತೆ ಬ್ರಹ್ಮನಲ್ಲಿ ಮಾತ್ರ ಮುಖ್ಯವಾಗಿರುತ್ತದೆ. ಮುಖ್ಯಾರ್ಥವನ್ನೇ ಹೇಳಲು ಬರುವಾಗ ಅಮುಖ್ಯಾರ್ಥವನ್ನು ಸ್ವೀಕರಿಸಬಾರದು. ಶ್ರೀಮದಾ-ಚಾರ್ಯರು 'ಸಂವಿಚ್ಛಾಸ್ತ್ರಂ ಪರಂ ಪದಂ' ಎಂಬುದಾಗಿ ಬ್ರಹ್ಮನಲ್ಲಿ ಶಾಸ್ತ್ರಶಬ್ದವನ್ನು ಪ್ರಯೋಗಿಸಿದ್ದಾರೆ. ಶಾಸ್ತ್ರಶಬ್ದಕ್ಕೆ ವೇದ ಎಂಬರ್ಥವನ್ನು ಹೇಳುವುದಾದರೆ ಲೋಕಪ್ರಸಿದ್ಧಿಯೆಂಬ ರೂಢಿಯು ವೇದಕ್ಕಿಂತ ಹೆಚ್ಚಾಗಿ ಪುರಾಣಾದಿಗಳಲ್ಲಿಯೇ ಪ್ರಸಿದ್ಧವಾಗಿದೆ.

ಮತ್ತು ಶಾಸ್ತ್ರಶಬ್ದದಿಂದ ಅಂತರ್ಯಾಮಿಯನ್ನು ಸ್ವೀಕರಿಸುವುದರಿಂದ ನೇರವಾದ ಅರ್ಥವನ್ನು ಹೇಳಿದಂತಾಗುತ್ತದೆ. ನಿಮ್ಮ ಪ್ರಕಾರ ಭೇದ ಎಂಬ ಅರ್ಥವನ್ನು ಹೇಳಿದರೆ, ಶಾಸ್ತ್ರದಿಂದ ಹುಟ್ಟಿದ ಐಕ್ಯಜ್ಞಾನದ ಮೂಲಕ ವ್ಯಪದೇಶವಿಷಯತ್ವವನ್ನು ಹೇಳಿದಂತಾಗುವುದರಿಂದ ಪರಂಪರೆಯ ಕಾರಣತ್ವವನ್ನು ನಿರೂಪಿಸಬೇಕಾಗುತ್ತದೆ.

ಅದ್ವೈತಿಗಳ ಪಕ್ಷದಲ್ಲಿ ಸೂತ್ರದಲ್ಲಿ ನೀಡಿದ ವಾಮದೇವದೃಷ್ಟಾಂತವೇ ತಪ್ಪಾಗುತ್ತದೆ. 'ಅಹಂ ಮನುಃ' ಇತ್ಯಾದಿ ಶಬ್ದದಿಂದ ಹೇಳಲ್ಪಟ್ಟ ಐಕ್ಯವನ್ನು ಚಿನ್ಮಾತ್ರದ ಐಕ್ಯವಿವಕ್ಷೆಯಿಂದ ಹೇಳಬೇಕು. ಆದರೆ ಚಿನ್ಮಾತ್ರವನ್ನು ಇಲ್ಲಿ ವಿವಕ್ಷಿಸಿದರೆ 'ಅಹಂ ಭೂಮಿಮದದಾಮಾರ್ಯಾಯಾಹಂ ದೃಷ್ಟಿಂ ದಾಶುಷೇ ಮರ್ತ್ಯಾಯ' ನಾನು ಇಂದ್ರನಿಗೆ ಭೂಮಿಯನ್ನು ನೀಡಿದೆನು. ದಾನಶೀಲನಾದ ಮನುಷ್ಯನಿಗೆ ಜ್ಞಾನವನ್ನು ನೀಡಿದೆನು. ಇತ್ಯಾದಿಯಾಗಿ ವಿಶಿಷ್ಟಬ್ರಹ್ಮನ ಬಗ್ಗೆ ಮುಂದಿನ ವಾಕ್ಯವು ಹೇಳುತ್ತಿದೆ. ಇಂದ್ರನಿಗೆ ನೀಡುವ ಭೂಮಿದಾನವು ವಿಶಿಷ್ಟನಾದ ಭಗವಂತನ ಧರ್ಮವೇ ಆಗಿದೆ ಹೊರತು ಶುದ್ಧಚಿನ್ಮಾತ್ರನ ಧರ್ಮವಾಗಿಲ್ಲ.

### ಕಠಿಣಪದಾರ್ಥ

ಹಿತಾಹಿತಶಾಸ್ತರಿ = ಹಿತವನ್ನು ಅಹಿತವನ್ನು ನಿಯಮನ ಮಾಡುವ, ಉಕ್ತಂಚ = ವಾರ್ತಿಕಕಾರನಿಂದ ಹೇಳಲ್ಪಟ್ಟಿದೆ, ಶಾಸ್ತಾ = ನಿಯಾಮಕನು, ಸಕಾರಣಕದೃಷ್ಟಿದ್ವಾರಾ =

### ಪರಿಪೂರ್ಣಚಂದ್ರಿಕಾ

ಬ್ರಹ್ಮಾತ್ಮೈಕ್ಯ ಜ್ಞಾನದ ಮೂಲಕವಾಗಿ, ಸಾಕ್ಷಾದೇವ = ಅಂತರ್ಯಾಮಿ ವಿವಕ್ಷೆಯಿಂದ ನೇರವಾಗಿ, ತದುಕ್ತಿಃ = ಶಾಸ್ತ್ರಪದದ ಹೇಳುವಿಕೆಯು.

**प्रकाशः** – नन्वथापि भवन्मते शास्त्रशब्दस्यान्तर्यामिणि यौगिकत्वाद्वेदादिशास्त्रे रूढत्वात् रूढेश्च योगापेक्षया मुख्यत्वस्य रथकारनये स्थितत्वात् शास्त्रशब्दो मुख्यामुख्यन्यायेन वेदादिपरो नान्तर्यामिपर इत्याशङ्क्याह – **किञ्चेति** ॥ ''सन्ध्यामुपासीत'' ''न सुरां पिबेत्'' इत्यादिना हितमिदं कर्तव्यं अहितमिदं न कर्तव्यमिति शासकत्वाच्छास्त्रमिति ''शासु अनुशिष्टौ'' इत्यतः ष्ट्रन्प्रत्यये शास्त्रमिति योगेनैवोपपत्तेर्न रूढिरित्यर्थः ।

ವಿವರಣೆ - ಆಕ್ಷೇಪ - ನಿಮ್ಮ ಮತದಲ್ಲಿ ಶಾಸ್ತ್ರಶಬ್ದಕ್ಕೆ ಅಂತರ್ಯಾಮಿ ಎಂಬರ್ಥದಲ್ಲಿ ಯೋಗಾರ್ಥವನ್ನು ಹೇಳುತ್ತೀರಿ. ಆದರೆ ವೇದಾದಿಶಾಸ್ತ್ರಗಳಲ್ಲಿ ಶಾಸ್ತ್ರಶಬ್ದಕ್ಕೆ ರೂಢಿಯಿರುತ್ತದೆ. ಯೋಗಕ್ಕಿಂತ ರೂಢಿಯೇ ಪ್ರಬಲವೆಂದು ರಥಕಾರಾಧಿಕರಣದಲ್ಲಿ ಸಿದ್ಧವಾಗಿದೆ. ಮುಖ್ಯಾಮುಖ್ಯಗಳಲ್ಲಿ ಮುಖ್ಯವನ್ನೇ ಸ್ವೀಕರಿಸಬೇಕಾದ್ದರಿಂದ, ಶಾಸ್ತ್ರಶಬ್ದದಿಂದ ವೇದ ಎಂಬರ್ಥವನ್ನೇ ಹೇಳಬೇಕು ಹೊರತು, ಅಂತರ್ಯಾಮಿ ಎಂಬರ್ಥವನ್ನು ಹೇಳಬಾರದಲ್ಲವೇ?

ಸಮಾಧಾನ - ಈ ಆಕ್ಷೇಪಕ್ಕೆ 'ಕಿಂಚ' ಇತ್ಯಾದಿ ಗ್ರಂಥಗಳಿಂದ ಉತ್ತರಿಸುತ್ತಿದ್ದಾರೆ. ''ಅಹರಹಃಸಂಧ್ಯಾಮುಪಾಸೀತ'' ''ನ ಸುರಾಂ ಪಿಬೇತ್'' ಇತ್ಯಾದಿಯಾಗಿ ಹಿತವನ್ನು ಆಚರಿಸಬೇಕು, ಅಹಿತವನ್ನು ಆಚರಿಸಬಾರದು ಎಂಬುದಾಗಿ ಶಾಸನಕರ್ತೃವಾದದ್ದೇ ಶಾಸ್ತ್ರವೆನಿಸುತ್ತದೆ. ''ಶಾಸು ಅನುಶಿಷ್ಟೌ'' ಎಂಬ ಧಾತುವಿನ ಮೇಲೆ 'ಷ್ಟ್ರನ್' ಪ್ರತ್ಯಯ ಬಂದು ಶಾಸ್ತ್ರ ಶಬ್ದವು ನಿಷ್ಪನ್ನವಾಗಿದೆ. ಹೀಗೆ ಯೋಗದಿಂದಲೇ ಶಾಸ್ತ್ರಶಬ್ದಾರ್ಥವನ್ನು ಸ್ವೀಕರಿಸಲು ಬರುವಾಗ ರೂಢಿಯನ್ನು ಸ್ವೀಕರಿಸಬಾರದು.

**प्रकाशः** – नन्वेवं रूढिमात्रपरिलोपः, सर्वत्र योगेनैवोपपत्तेरित्यतो यत्र योगाभावस्तत्रैव रूढिरिति भावेन तत्र वार्तिकसम्मतिमाह – **उक्तश्चेति** ॥ नामधेयपादे प्रोक्षण्यधिकरणे उक्तमित्यर्थः । तदधिकरणं जन्मादिसूत्रे प्रपञ्चितम् । 'अश्वकर्णः' इति शब्दवाच्ये कस्मिंश्चिद्वृक्षविशेषे यदि वाजिकर्णसदृशौ कर्णौ भवेतां, तर्ह्यश्वकर्णपदस्य सत्स्ववयवार्थेषु तत एवोपपन्नत्वेन कल्पकाभावात् 'समुदायशक्तिं' रूढिं कः कल्पयेन्न कोऽपि । ततस्तत्रावयवार्थाभावादेव रूढिरङ्गीकृता, अत्रावयवार्थोऽस्तीत्यर्थः । नन्वस्तूभयत्र योगस्तथाऽप्यन्तर्यामिग्रहणे को हेतुरिति चेत्, उक्तानुपपत्तिगण एवेति ब्रूमः । हेत्वन्तरं चात्राह – **शास्तृत्वं चेति** ॥ प्रवृत्तिहेतुपौष्कल्यस्य ब्रह्मण्येव भावादिति भावः । वैदिकप्रयोगबाहुल्यरूपरूढिश्चास्तीत्याह – **दर्शितश्चेति** ॥ रूढिश्च तत्र नास्तीत्याह – **लोकेति** ॥

ಆಕ್ಷೇಪ - ಹಾಗಾದಲ್ಲಿ ರೂಢಿ ಎಂಬ ಪರಿಕಲ್ಪನೆಯೇ ಇಲ್ಲವಾಗಬೇಕಾದೀತು? ಎಲ್ಲೆಡೆ ಯೋಗ-ದಿಂದಲೇ ಅರ್ಥವನ್ನು ತಿಳಿಯಲು ಬರುತ್ತದಲ್ಲವೆ?

ಸಮಾಧಾನ - ಎಲ್ಲಿ ಯೋಗಾರ್ಥವನ್ನು ಹೇಳಲು ಬರುವುದಿಲ್ಲವೋ ಅಲ್ಲಿ ಮಾತ್ರ ರೂಢಿಯನ್ನು ಸ್ವೀಕರಿಸಬೇಕೆಂಬ ವಿಷಯದಲ್ಲಿ ವಾರ್ತಿಕ ಸಮ್ಮತಿಯನ್ನು ತೋರಿಸುತ್ತಿದ್ದಾರೆ 'ಉಕ್ತಂಚ' ಇತ್ಯಾದಿಯಾಗಿ. ನಾಮಧೇಯಪಾದದ ಪ್ರೋಕ್ಷಣ್ಯಧಿಕರಣದಲ್ಲಿ ಈ ಶ್ಲೋಕವನ್ನು ಕಾಣಬಹುದು. ಪ್ರೋಕ್ಷಣ್ಯಧಿಕರಣವನ್ನು ಜನ್ಮಾದಿಸೂತ್ರದಲ್ಲಿ ವಿವರಿಸಲಾಗಿದೆ -

'ಅಶ್ವಕರ್ಣ' ಎಂಬ ಶಬ್ದವು ವೃಕ್ಷ ವಿಶೇಷವನ್ನು ಹೇಳುತ್ತಿದೆ. ಒಂದು ವೇಳೆ ಆ ವೃಕ್ಷ ವಿಶೇಷಕ್ಕೆ ಕುದುರೆಯ ಕಿವಿಗಳಂತೆ ಕಿವಿಗಳು ಇದ್ದಲ್ಲಿ ಆವಾಗ 'ಅಶ್ವಕರ್ಣ' ಶಬ್ದಕ್ಕೆ ಅವಯವಾರ್ಥವನ್ನೇ ಸ್ವೀಕರಿಸಿ ಅರ್ಥವನ್ನು ಹೇಳಲು ಬರುವಾಗ ಸಮುದಾಯಶಕ್ತಿಯೆಂಬ ರೂಢಿಯನ್ನು ಯಾರು ತಾನೇ ಕಲ್ಪಿಸುತ್ತಿದ್ದರು? ಯಾರೂ ಕಲ್ಪಿಸುತ್ತಿರಲಿಲ್ಲ. ಹಾಗಾಗಿ 'ಅಶ್ವಕರ್ಣ' ಶಬ್ದಕ್ಕೆ ಅವಯವಾರ್ಥವನ್ನು ಹೇಳಲು ಬಾರದ ಕಾರಣವೇ ರೂಢಿಯನ್ನು ಸ್ವೀಕರಿಸಲಾಗಿದೆ. ಆದರೆ ಪ್ರಕೃತ ಶಾಸ್ತ್ರಶಬ್ದಕ್ಕೆ ಯೌಗಿಕಾರ್ಥವನ್ನು ಹೇಳಲು ಬರುವುದಿಲ್ಲ ಎಂಬ ಸ್ಥಿತಿಯಿಲ್ಲ. ಆದ್ದರಿಂದ ಯೌಗಿಕಾರ್ಥವನ್ನೇ ಸ್ವೀಕರಿಸಲು ಬರುವಾಗ ವೇದಾದಿ-ಶಾಸ್ತ್ರವೆಂಬ ರೂಢ್ಯರ್ಥವನ್ನು ಸ್ವೀಕರಿಸಬಾರದು.

ಆಕ್ಷೇಪ - ಶಾಸನಕರ್ತೃತ್ವವೆಂಬ ಯೌಗಿಕಾರ್ಥವನ್ನು ವೇದದಲ್ಲಿ ಮತ್ತು ಅಂತರ್ಯಾಮಿಯಲ್ಲಿ ಎರಡೂ ಕಡೆ ಹೇಳಲು ಬರುವಾಗ ಅಂತರ್ಯಾಮಿ ಎಂಬರ್ಥವನ್ನೇ ಏಕೆ ಸ್ವೀಕರಿಸಬೇಕು?

ಸಮಾಧಾನ - 'ವೇದ' ಎಂಬರ್ಥವನ್ನು ಸ್ವೀಕರಿಸಿದಾಗ ಹಿಂದೆ ಹೇಳಿದಂತೆ ಅನೇಕ ಅನುಪಪತ್ತಿ-ಗಳಿರುವುದರಿಂದಲೇ ಶಾಸ್ತ್ರಶಬ್ದಕ್ಕೆ ಅಂತರ್ಯಾಮಿ ಎಂಬರ್ಥವನ್ನು ನಾವು ಹೇಳುತ್ತೇವೆ. ಅಂತರ್ಯಾಮಿ ಎಂಬರ್ಥವನ್ನು ಸ್ವೀಕರಿಸಲು ಮತ್ತೊಂದು ಕಾರಣವನ್ನು 'ಶಾಸ್ತೃತ್ವಂ ಚ' ಎಂಬ ವಾಕ್ಯಗಳಿಂದ ನಿರೂಪಿಸುತ್ತಿದ್ದಾರೆ. ಪುಷ್ಕಲವಾದ ಪ್ರವೃತ್ತಿ ನಿಮಿತ್ತವು ಬ್ರಹ್ಮನಲ್ಲಿಯೇ ಇರುತ್ತದೆಂದು ಅಭಿಪ್ರಾಯ. ವೈದಿಕ ಪ್ರಯೋಗ ಬಾಹುಲ್ಯದಿಂದ ರೂಢಿಯೂ ಸಹ ಅಂತರ್ಯಾಮಿಯಲ್ಲಿಯೇ ಇದೆಯೆಂದು 'ದರ್ಶಿತಶ್ಚ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ರೂಢಿಯೂ ಸಹ ವೇದ ಎಂಬ ಅರ್ಥದಲ್ಲಿರುವುದಿಲ್ಲವೆಂದು 'ಲೋಕ-ಪ್ರಸಿದ್ಧಸ್ತು' ಎಂಬ ವಾಕ್ಯದಿಂದ ನಿರೂಪಿಸುತ್ತಿದ್ದಾರೆ.

**प्रकाशः** – यद्वा – योगार्थानुसन्धानशून्यानामपि लौकिकानां शास्त्रपदेन वेदप्रतीते रूढिरेवेत्यत आह – **लोकेति** ॥

शास्त्रपदेनान्तर्यामिग्रहणे हेत्वन्तरमाह – **अपिचेति** ॥ 'मां विजानीहि' इति व्यपदेशविषयत्वमिन्द्रस्य ''अहं ब्रह्मास्मि'' इत्यादिशास्त्रजन्यब्रह्मात्मैक्यज्ञानद्वारेति व्यवधानेन त्वयोच्यते । अस्माभिस्तु साक्षादेवान्तर्यामिदृष्ट्या 'प्राणोऽस्मि'' इति व्यपदेशविषयत्वमुच्यते । अतोऽप्यस्मदभिमत एवार्थ इत्यर्थः । ननु दृष्टान्त-बलादेवमाश्रीयत इति चेन्न, विशिष्टाभेदायोगेन दूषितत्वात् । चिन्मात्रलक्षणाया

अप्युक्तदोषत्वात् । दोषान्तरेणापि दूषयति – **सौत्र इति** ॥ कथं तर्ह्यन्तर्यामिपक्षे योग इत्यत आह – **भगवदिति** ॥ उपेन्द्ररूपेण बलेस्साम्राज्यमादायेन्द्राय दत्तमिति भागवतादिप्रसिद्धिं हिशब्देन द्योतयति ।

ಅಥವಾ ಯೋಗಾರ್ಥ ಅನುಸಂಧಾನವಿಲ್ಲದ ಲೌಕಿಕರಿಗೆ ಶಾಸ್ತ್ರಪದದಿಂದ ವೇದ ಎಂಬರ್ಥವು ತೋರುತ್ತದಲ್ಲವೇ? ಎಂಬ ಶಂಕೆಗೆ 'ಲೋಕಪ್ರಸಿದ್ಧಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

'ಶಾಸ್ತ್ರ' ಪದಕ್ಕೆ 'ಅಂತರ್ಯಾಮಿ' ಎಂಬರ್ಥವನ್ನು ಸ್ವೀಕರಿಸಲು ಮತ್ತೊಂದು ಹೇತುವನ್ನು 'ಅಪಿಚ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. 'ಅಹಂ ಬ್ರಹ್ಮಾಸ್ಮಿ' ಎಂಬುದಾಗಿ ಇಂದ್ರನಿಗೆ ಬ್ರಹ್ಮೈಕಜ್ಞಾನವು ಶಾಸ್ತ್ರಜನ್ಯವಾದ ಜ್ಞಾನದ ಮೂಲಕವಾಗಿ 'ಮಾಂ ವಿಜಾನೀಹಿ' ಎಂಬ ಶಬ್ದಪ್ರಯೋಗವನ್ನು ಮಾಡಿದ್ದಾನೆಂದು ನೀವು ಹೇಳುತ್ತೀರಿ. ಆದ್ದರಿಂದ ಬ್ರಹ್ಮೈಕ್ಯ ಜ್ಞಾನವೆಂಬ ವ್ಯವಧಾನದ ಮೂಲಕವಾಗಿ ಶಾಸ್ತ್ರಶಬ್ದಾರ್ಥವನ್ನು ನೀವು ವಿವಕ್ಷಿಸಬೇಕು. ಆದರೆ ನೇರವಾಗಿಯೇ ಅಂತರ್ಯಾಮಿ ದೃಷ್ಟಿಯಿಂದ 'ಪ್ರಾಣೋಽಸ್ಮಿ' ಎಂಬ ಶಬ್ದಪ್ರಯೋಗವನ್ನು ಮಾಡಬಹುದು. ಆದ್ದರಿಂದಲೂ ನಮಗೆ ಅಭಿಮತವಾದ ಅರ್ಥವೇ ಸಿದ್ಧವಾಗುತ್ತದೆ.

ಆಕ್ಷೇಪ - ವಾಮದೇವದೃಷ್ಟಾಂತದ ಬಲದಿಂದ ಹೀಗೆ ವ್ಯವಹಿತವಾದ ಅರ್ಥವನ್ನು ನಾವು ಹೇಳಬಹುದಲ್ಲವೇ?

ಸಮಾಧಾನ - ನಿಮ್ಮ ಪಕ್ಷದಲ್ಲಿ ವಿಶಿಷ್ಟಬ್ರಹ್ಮನಿಗೆ ಅಭೇದವು ಕೂಡದ ಕಾರಣ ದೃಷ್ಟಾಂತದ ಆಧಾರವನ್ನು ಹೇಳಲಾಗದು. ಇನ್ನು ಚಿನ್ಮಾತ್ರಕ್ಕೆ ಲಕ್ಷಣಾವನ್ನು ಆಶ್ರಯಿಸಿ ಅಭೇದವನ್ನು ಹೇಳಬೇಕು. ಈ ಪಕ್ಷದಲ್ಲಿಯೂ ನಾವು ಈಗಾಗಲೇ ದೋಷವನ್ನು ಹೇಳಿದ್ದೇವೆ.

**गुरुराजीयम्** – ननु शास्त्रपदे रूढिरेवास्त्वित्यतः किं विद्वद्रूढिर्वा पामररूढिर्वा? नाद्य इत्याह – **न रूढिरिति** ॥ ननु योगेन शास्त्रशब्दवाच्यत्वं वेदस्य कुतोऽभ्युपेयते । रूढिरेव किं न स्यादित्यतो योगासम्भवे रूढिरभ्युपेया । नतु तत्सम्भवे । अन्यथा तवापसिद्धान्तः स्यादित्यभिप्रायेण तद्वाक्यमुदाहरति – **उक्तञ्चेति** ॥ तथाच तत्र वाजिकर्णशब्दस्य वृक्षे योगासम्भवेन रूढिकल्पनेपि प्रकृते योगसम्भवेन रूढिकल्पनायोगादिति भावः । अस्तु वा शास्त्रशब्दस्य वेदेपि योग एव । तथापि शास्त्रशब्देन वेद एव गृह्यत इत्यतः तत्र प्रयोजकीभूतस्य योगस्य ब्रह्मणि मुख्यत्वात्तदेव ग्राह्यमित्यभिप्रेत्य तत्र मुख्यत्वे किं ज्ञापकमित्यत आह – **शास्तृत्वं चेति** ॥ शास्त्रशब्दप्रवृत्तिनिमित्तं शास्तृत्वं ब्रह्मणि मुख्यम् । तथाऽपि तदेव किमर्थं ग्राह्यम् । अमुख्यस्यापि वेदस्य शास्त्रशब्देन ग्रहणोपपत्तेरित्यत आह – **मुख्यसम्भवे चेति** ॥

एवं महायोगेन शास्त्रशब्दस्य विष्णुपरत्वमुपपाद्य तन्मूलकविद्वद्रूढ्यापि समर्थयते – **दर्शितश्चेति** ॥ द्वितीयं दूषयति – **लोकेति** ॥ **सकारणकेति** ॥ शास्त्ररूपकारणजन्या ब्रह्मैक्यदृष्टिः । तद्विषयीभूतं ब्रह्माहंशब्दव्यपदेशविषय इति परम्परयेत्यर्थः । अस्मन्मते साक्षादेवाहंशब्दविषयीभूतस्यान्तर्यामिणः प्रदर्शनमित्यर्थः । **उक्तदोषत्वादिति** ॥ शास्त्रशब्दस्य हिताहितशास्तरि वेदादौ रूढ्यभावे योगस्यैव वक्तव्यत्वात् योगस्य चैकः शास्ता न द्वितीय इत्यादिभाष्योदाहृतप्रमाणानुसारेण परमात्मनि मुख्यत्वेन मुख्यसम्भवे चामुख्यग्रहणायोगाच्छास्त्रशब्देन वेदग्रहणमयुक्तम् । किञ्च सकारणदृष्टिद्वारा व्यपदेशविषयोक्तितोऽप्यस्मद्रीत्या साक्षादेव तदुक्तिर्युक्तेत्युक्तदूषणस्यात्राप्यपरिहार्यत्वादित्यर्थः ।

## ಸಾರ

ಸೂತ್ರದಲ್ಲಿರುವ ಶಾಸ್ತ್ರಶಬ್ದಕ್ಕೆ ವೇದ ಎಂಬರ್ಥವನ್ನು ಅದ್ವೈತಿಗಳು ಹೇಳುತ್ತಾರೆ. ಆದರೆ ನಾವು ಅಂತರ್ಯಾಮಿ ಎಂಬರ್ಥವನ್ನು ಹೇಳುತ್ತೇವೆ. ಅದ್ವೈತಿಗಳು ವೇದ ಎಂಬರ್ಥದಲ್ಲಿ ಶಾಸ್ತ್ರಶಬ್ದಕ್ಕೆ ರೂಢಿಯನ್ನು ಹೇಳಿದರೆ, ನಾವು ಅಂತರ್ಯಾಮಿ ಎಂಬರ್ಥದಲ್ಲಿ ಯೋಗಾರ್ಥವನ್ನು ಹೇಳುತ್ತೇವೆ. ಇಲ್ಲಿ ಸಹಜವಾಗಿ ಪ್ರಶ್ನೆ ಹೀಗಿದೆ - ಎಲ್ಲೆಡೆ ಯೋಗಕ್ಕಿಂತ ರೂಢಿಯೇ ಪ್ರಬಲವಾದ್ದರಿಂದ ಇಲ್ಲಿ ಮಾತ್ರ ದ್ವೈತಿಗಳು ಯೋಗವನ್ನು ಹೇಗೆ ಆಶ್ರಯಿಸಿದ್ದಾರೆ ಎಂದು? ಈ ಪ್ರಶ್ನೆಯನ್ನು ಸ್ವಲ್ಪ ಆಳವಾಗಿ ವಿಚಾರ ಮಾಡಬೇಕು. ಏಕೆಂದರೆ ಯಾವುದೇ ಶಬ್ದಗಳನ್ನು ಸ್ವೀಕರಿಸಿದಾಗ ಮೊದಲು ಯೋಗಾರ್ಥವನ್ನು ಹೇಳಲು ಪ್ರಯತ್ನಿಸಬೇಕು. ಸಾಧ್ಯವಾಗದಿದ್ದಾಗ ಮಾತ್ರ ರೂಢಿಯನ್ನು ಆಶ್ರಯಿಸಬೇಕು. 'ವಾಜಿಕರಣ' ಎಂಬುದು ಒಂದು ವೃಕ್ಷದ ಹೆಸರು. ಕುದುರೆ ಕಿವಿಯಂತಹ ಕಿವಿಗಳು ಈ ವೃಕ್ಷಕ್ಕೆ ಎಂದೂ ಸಹ ಬರಲು ಸಾಧ್ಯವಿಲ್ಲದ ಕಾರಣ. ಯೋಗಾರ್ಥವನ್ನು ಹೇಳಲು ಸಾಧ್ಯವಾಗದು. ಆದ್ದರಿಂದ ಇಲ್ಲಿ ರೂಢಿಯನ್ನು ಆಶ್ರಯಿಸುವುದು ಅನಿವಾರ್ಯವಾಗುತ್ತದೆ. ಶ್ಲೋಕವಾರ್ತಿಕಾಕಾರನೂ ಸಮ್ಮತಿಸಿದ್ದಾನೆ. ಆದರೆ ಪ್ರಕೃತ ಶಾಸ್ತ್ರಶಬ್ದಕ್ಕೆ ಯೋಗಾರ್ಥವನ್ನು ಸ್ವೀಕರಿಸಲು ಬಾರದಂತಹ ಪರಿಸ್ಥಿತಿ ಇಲ್ಲ. ನಿಜವಾದ ಶಾಸ್ತ್ರಶಬ್ದದ ಯೋಗಾರ್ಥವು ಮುಖ್ಯವಾಗಿ ಪರಮಾತ್ಮನೇ ಆಗಿದ್ದಾನೆ. ಒಂದು ವೇಳೆ ರೂಢಿಯನ್ನು ನೀವು ಸ್ವೀಕರಿಸುವುದಾದರೆ, ವೇದಕ್ಕಿಂತ ಬೇರೆ ಶಾಸ್ತ್ರಗಳಲ್ಲಿಯೇ ಶಾಸ್ತ್ರಶಬ್ದದ ರೂಢಿಯು ಲೋಕದಲ್ಲಿರುತ್ತದೆ. ಮತ್ತು ಯೋಗಾರ್ಥವನ್ನು ಇಲ್ಲಿ ಸ್ವೀಕರಿಸುವುದರಿಂದ ನೇರವಾಗಿ ಅರ್ಥವನ್ನು ತಿಳಿದಂತಾಗುತ್ತದೆಂಬ ಮಹಾಲಾಭವು ಇದೆ. ಆದ್ದರಿಂದ ಹಿತವನ್ನು ಮತ್ತು ಅಹಿತವನ್ನು ಶಾಸನ ಮಾಡುವ ಭಗವಂತನೇ ನಿಜವಾದ ಶಾಸ್ತ್ರಶಬ್ದದ ಅರ್ಥವಾಗಿದ್ದಾನೆ. ಇಂತಹ ಪರಮಾತ್ಮನನ್ನು ವಿವಕ್ಷಿಸಿ ದೇವೇಂದ್ರನು 'ಮಾಮೇವ ವಿಜಾನೀಹಿ' ಎಂಬ ಶಬ್ದವನ್ನು ಪ್ರಯೋಗಿಸಿದ್ದಾನೆ.

ಹಾಗಾದಲ್ಲಿ ಅಂತರ್ಯಾಮಿ ಪಕ್ಷವನ್ನು ಸ್ವೀಕರಿಸಿದರೆ, ಯೋಗಾರ್ಥವನ್ನು ಹೇಗೆ ಹೇಳುತ್ತೀರಿ ? ಎಂಬ ಶಂಕೆಗೆ ಭಗವದ್ಧರ್ಮ ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಭಗವಂತನು ಉಪೇಂದ್ರರೂಪವನ್ನು ಸ್ವೀಕರಿಸಿ ಬಲಿಚಕ್ರವರ್ತಿಯ ಸಾಮ್ರಾಜ್ಯವನ್ನು ಇಂದ್ರನಿಗೆ ನೀಡಿದನೆಂಬ ಭಗವತಾದಿಗ್ರಂಥಗಳ ಪ್ರಸಿದ್ಧಿಯನ್ನು 'ಹಿ' ಶಬ್ದದಿಂದ ತೋರಿಸಿದ್ದಾರೆ.

## ರಾಮಾನುಜರ ದ್ವಿತೀಯಸೂತ್ರವ್ಯಾಖ್ಯಾನದ ವಿಮರ್ಶೆ

तात्पर्यचन्द्रिका

**केचित्तु – ''यस्याऽऽत्मा शरीरम्'' इत्यादि शास्त्रेण या दृष्टिः 'जीवो ब्रह्मशरीरं शरीरवाची च शब्दः देवमनुष्यादिवत् शरीरिपर्यन्तः' इत्येवंरूपा, सा शास्त्रदृष्टिरित्याहुः ।**

**तन्न, उक्तदोषत्वात् । भगवत्यहंशब्दप्रयोगे शरीरशब्दः शरीरिपर्यन्त इति लोकदृष्टेरपि हेतुत्वेन शास्त्रपदप्रयोगे विशेषहेत्वभावाच्च ।**

ಅನುವಾದ - ರಾಮಾನುಜರ ವ್ಯಾಖ್ಯಾನ ಹೀಗಿದೆ. ''ಯಸ್ಯಾಽಽತ್ಮಾ ಶರೀರಂ'' ಇತ್ಯಾದಿ ಶಾಸ್ತ್ರದಿಂದ ಜೀವನು ಬ್ರಹ್ಮನಿಗೆ ಶರೀರನಾಗಿದ್ದಾನೆಂದು ತಿಳಿದಿದೆ. ಇಂತಹ ಶಾಸ್ತ್ರಜನ್ಯಜ್ಞಾನದಿಂದ ಶರೀರವಾಚಿಯಾದ ಶಬ್ದವು ದೇವಮನುಷ್ಯಾದಿಶಬ್ದದಂತೆ ಶರೀರಿಯನ್ನು ಹೇಳುತ್ತದೆ. ದೇವೇಂದ್ರನು ಬ್ರಹ್ಮನ ಶರೀರನಾದ್ದರಿಂದ 'ಮಾಂ' ಎಂಬ ದೇವೇಂದ್ರವಾಚಕ ಶಬ್ದಕ್ಕೆ ಶರೀರಿಯಾದ ಭಗವತ್ಪರತ್ವವನ್ನು ಅಂಗೀಕರಿಸಬೇಕೆಂದು ಹೇಳುತ್ತಾರೆ.

ಇದು ತಪ್ಪು. ಶಾಸ್ತ್ರಶಬ್ದಕ್ಕೆ ಭಗವಂತನೆಂಬ ಮುಖ್ಯಾರ್ಥವನ್ನು ಹೇಳದ ಕಾರಣ ಅದ್ವೈತಿಗಳಿಗೆ ಬಂದ ದೋಷಗಳೆಲ್ಲವೂ ಇವರಿಗೂ ಸಮಾನ. ಭಗವಂತನಲ್ಲಿ 'ಅಹಂ' ಶಬ್ದವನ್ನು ಪ್ರಯೋಗಿಸಲು ಶಾಸ್ತ್ರಪದಪ್ರಯೋಗವನ್ನೇ ಕಾರಣವನ್ನಾಗಿ ನೀಡಬೇಕಾಗಿಲ್ಲ. ಶರೀರಶಬ್ದವು ಶರೀರಿಯನ್ನು ಹೇಳುತ್ತದೆಂಬ ಕೆಲವು ಲೋಕವಾಡಿಕೆಗಳನ್ನು ಇಟ್ಟುಕೊಂಡೇ ಸಮರ್ಥಿಸಬಹುದಿತ್ತು. ಆದ್ದರಿಂದ ಸೂತ್ರದಲ್ಲಿ ಶಾಸ್ತ್ರಪದವನ್ನು ಪ್ರಯೋಗಿಸಲು ವಿಶೇಷ ಕಾರಣವನ್ನು ಹೇಳಿದಂತಾಗಲಿಲ್ಲ.

**प्रकाशः – केचित्त्विति ।।** प्रज्ञातजीवभावेन इन्द्रेण **''मामेव विजानीहि, मामुपास्व''** इत्युपास्यस्य ब्रह्मण एव स्वात्मत्वोपदेशोऽयं न प्रमाणान्तरप्राप्तस्वात्मावलोकनकृतः, किन्तु **''य आत्मनि तिष्ठन् य आत्मनोऽन्तरो यमात्मा न वेद यस्यात्मा शरीरं''** इत्यादिशास्त्रेण जीवब्रह्मणोः शरीरशरीरिभावप्रतिपादनात् शरीरवाचिशब्दानां शरीरिपर्यन्तत्वस्य **''अनेन जीवेनात्मनाऽनुप्रविश्य नामरूपे व्याकरवाणि''** इत्यादिशास्त्रेण लब्धत्वात्, तेन शास्त्रेण लोकतश्च जनितया दृष्ट्या ब्रह्मणो जीवशरीरत्वं शरीरवाचिशब्दानां शरीरिपर्यवसानं च जानतो वामदेवस्य **''अहं मनुरभवं''** इत्यादौ स्ववाच्यहंशब्देन स्वशरीरकपरब्रह्मोपदेशवदिन्द्रस्यापि **''मामुपास्व''** इत्यादिना स्वशरीरकपरमात्मदृष्टिकृत इत्यर्थ इत्याहुरित्यर्थः ।।

ವಿವರಣೆ - ರಾಮಾನುಜರ ವ್ಯಾಖ್ಯಾನವನ್ನು 'ಕೇಚಿತ್ತು' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ. ತನ್ನನ್ನು ಜೀವನೆಂದು ತಿಳಿದಿರುವ ಇಂದ್ರನು 'ಮಾಮೇವ ವಿಜಾನೀಹಿ' ಮತ್ತು 'ಮಾಮುಪಾಸ್ವ' ಎಂಬುದಾಗಿ ಬ್ರಹ್ಮನ ಬಗ್ಗೆ ಉಪದೇಶವನ್ನು ಮಾಡುತ್ತಿದ್ದಾನೆ. ಈ ಉಪದೇಶವನ್ನು 'ಅಹಂ ಬ್ರಹ್ಮಾಸ್ಮಿ' ಇತ್ಯಾದಿ ಬೇರೆ ಪ್ರಮಾಣಗಳನ್ನು ಅನುಸಂಧಾನ ಮಾಡಿಕೊಂಡು ಹೇಳಿದ್ದಲ್ಲ. ಹೊರತಾಗಿ ''ಯಾ ಆತ್ಮನಿ ತಿಷ್ಠನ್ ಯ ಆತ್ಮಾನೋಽನ್ತರೋ ಯಮಾತ್ಮಾ ನ ವೇದ ಯಸ್ಯಾತ್ಮಾ ಶರೀರಂ'' ಇತ್ಯಾದಿ ಶಾಸ್ತ್ರದಿಂದ ಜೀವ ಹಾಗೂ ಬ್ರಹ್ಮರಿಗೆ ಶರೀರಶರೀರಿ ಭಾವವನ್ನು ಪ್ರತಿಪಾದನೆ ಮಾಡಿದ್ದರಿಂದ ಶರೀರವಾಚಿಗಳಾದ ಶಬ್ದಗಳೆಲ್ಲವೂ ಶರೀರಿಯನ್ನೇ ಹೇಳುತ್ತವೆ. ಈ ವಿಷಯವು ''ಅನೇನ ಜೀವೇನಾತ್ಮನಾಽನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ'' ಎಂಬ ಶಾಸ್ತ್ರದಿಂದ ಪ್ರಾಪ್ತವಾಗಿದೆ. ಈ ಶಾಸ್ತ್ರದ ಬಲದಿಂದ ಮತ್ತು ಲೋಕದಲ್ಲಿರುವ ಕೆಲವು ವ್ಯವಹಾರದಿಂದಲೂ ತಿಳಿದಿರುವಂತೆ ಬ್ರಹ್ಮನಿಗೆ ಜೀವನು ಶರೀರನಾಗಿದ್ದಾನೆ. ಹೀಗೆ ಶರೀರವಾಚಿಶಬ್ದಗಳನ್ನು ಶರೀರಿಯಾದ ಬ್ರಹ್ಮನಲ್ಲಿ ಪ್ರಯೋಗಿಸಬೇಕೆಂಬುದನ್ನು ತಿಳಿದಿರುವ ವಾಮದೇವನು ''ಅಹಂ ಮನುರಭವಂ'' ಎಂದು ಪ್ರಯೋಗಿಸಿದ್ದಾನೆ. ತನ್ನನ್ನು ಹೇಳುವ ಅಹಂ ಶಬ್ದದಿಂದ ತನಗೆ ಶರೀರಿಯಾದ ಬ್ರಹ್ಮನನ್ನು ಉಪದೇಶಿಸಿದ್ದಾನೆ. ಅದರಂತೆ ಇಂದ್ರನೂ ಸಹ ತನ್ನ ಶರೀರಿಯಾದ ಪರಮಾತ್ಮನನ್ನು ವಿವಕ್ಷಿಸಿ ಶರೀರವಾಚಿಯಾದ ''ಮಾಮುಪಾಸ್ವ'' ಎಂಬ ಶಬ್ದವನ್ನು ಪ್ರಯೋಗಿಸಿದ್ದಾನೆ. ಹೀಗೆ ರಾಮಾನುಜರು ''ಶಾಸ್ತ್ರದೃಷ್ಟ್ಯಾ'' ಎಂಬ ಸೂತ್ರವನ್ನು ವ್ಯಾಖ್ಯಾನಿಸುತ್ತಾರೆ.

**प्रकाशः – उक्तेति ॥** शास्त्रशब्दस्य ब्रह्मण्येव मुख्यतया मुख्यसम्भवेऽमुख्य-वेदग्रहणायोगादस्मद्रीत्या साक्षादेवोपदेशविषयोक्तिसम्भवे शास्त्रकारणकदृष्टिद्वारो-पदेशविषयोक्तेरयुक्तत्वात् इत्युक्तदोषग्रस्तत्वादित्यर्थः । शास्त्रपदास्वारस्यं चाधिक-मित्याह – **भगवतीति ॥** लोके 'ब्राह्मणमानय' इत्यादौ शरीरिपर्यन्तत्वप्रतीतेरिति भावः ॥

ರಾಮಾನುಜರ ಈ ವ್ಯಾಖ್ಯಾನವು ಅದ್ವೈತ ವ್ಯಾಖ್ಯಾನದಂತಿದೆ. ಏಕೆಂದರೆ ಶಾಸ್ತ್ರಶಬ್ದಕ್ಕೆ ಬ್ರಹ್ಮನಲ್ಲಿಯೇ ಮುಖ್ಯಾರ್ಥವಿದೆ. ಮುಖ್ಯಾರ್ಥವನ್ನು ಹೇಳಲು ಬರುವಾಗ ಅಮುಖ್ಯವಾದ ವೇದ ಎಂಬ ಅರ್ಥವನ್ನು ಸ್ವೀಕರಿಸಬಾರದು. ನಮ್ಮ ಪ್ರಕಾರ ನೇರವಾಗಿಯೇ ಉಪದೇಶವಿಷಯತ್ವವನ್ನು ಶಬ್ದಪ್ರಯೋಗಕ್ಕೆ ಹೇಳಲು ಬರುವಾಗ ಶಾಸ್ತ್ರದಿಂದ ಪಡೆಯಲ್ಪಟ್ಟ ಶರೀರಶರೀರಿಭಾವವೆಂಬ ಜ್ಞಾನವನ್ನು ಉಪದೇಶವಿಷಯವೆಂದು ಅಂಗೀಕರಿಸಿ ಪರಂಪರೆಯ ಹೇಳುವಿಕೆಯೂ ಗುರುಭೂತವಾಗಿದೆ. ಆದ್ದರಿಂದ ಅದ್ವೈತಿಗಳಿಗೆ ಬಂದ ದೋಷವೆಲ್ಲವೂ ಇವರಿಗೂ ಬರುವುದರಿಂದ ಅದ್ವೈತಿಗಳಿಗೆ ರಾಮಾನುಜರಿಗೆ ಏನೂ ವ್ಯತ್ಯಾಸ ಕಾಣುವುದಿಲ್ಲ.

ಮತ್ತು ಸೂತ್ರದಲ್ಲಿ ಶಾಸ್ತ್ರಪದವು ಅಧಿಕವಾಗಿದೆಯೆಂದು 'ಭಗವತಿ' ಎಂಬ ವಾಕ್ಯದಲ್ಲಿ ಹೇಳಿದ್ದಾರೆ. ಲೋಕದಲ್ಲಿ 'ಬ್ರಾಹ್ಮಣಮಾನಯ' ಎಂದು ಶಬ್ದಪ್ರಯೋಗಿಸಿದಾಗ ಶರೀರವನ್ನು ಬಿಟ್ಟು ಶರೀರಿಯಾದ ಆತ್ಮನೇ ವಿವಕ್ಷಿತನಾಗಿದ್ದಾನೆ. ಏಕೆಂದರೆ ಬ್ರಾಹ್ಮಣನನ್ನು ಕರೆದುಕೊಂಡು ಬಾ ಎಂದು ಹೇಳಿದಾಗ ಕೇವಲ ಬ್ರಾಹ್ಮಣಶರೀರವನ್ನು (ಬ್ರಾಹ್ಮಣ ಶವವನ್ನು) ಯಾರೂ ಸಹ ತರುವುದಿಲ್ಲ.

## ಸಾರ

ರಾಮಾನುಜರು ಅದ್ವೈತಿಗಳ ಅಭಿಪ್ರಾಯವನ್ನೇ ಅನುಸರಿಸಿದ್ದಾರೆ. ಇಂದ್ರನು ಭಗವಂತನ ಶರೀರನು ಶರೀರವಾಚಕವಾದ ಶಬ್ದವು ಶರೀರಿಯಾದ ಬ್ರಹ್ಮನನ್ನೇ ಹೇಳುತ್ತದೆಂದು ಇವರ ನಿಲುವು. ಆದರೆ ಶಾಸ್ತ್ರಶಬ್ದಕ್ಕೆ ಮುಖ್ಯಾರ್ಥವನ್ನು ಇವರೂ ಸಹ ಸ್ವೀಕರಿಸಿಲ್ಲ. ಮತ್ತು ಸೂತ್ರದಲ್ಲಿ ಶಾಸ್ತ್ರಪದವನ್ನು ಪ್ರಯೋಗಿಸಲಿಕ್ಕೆ ವಿಶೇಷಕಾರಣವನ್ನೂ ಸಹ ನೀಡಿಲ್ಲ. ಆದ್ದರಿಂದ ಪ್ರತ್ಯೇಕವಾಗಿ ಇವರನ್ನು ನಿರಾಕರಿಸುವ ಶ್ರಮವೂ ನಮಗಿಲ್ಲ.

* * * *

## ಅದ್ವೈತಿಗಳ ಅಂತಿಮಸೂತ್ರವ್ಯಾಖ್ಯಾನ ನಿರಾಕರಣೆ

तात्पर्यचन्द्रिका

**यत्तु – ''जीवमुख्यप्राण'' इति सूत्रस्य परकीयं व्याख्यानं, तत्तल्लिङ्गानुग्रहार्थं किञ्चिदत्र जीववाक्यं, किञ्चिन्मुख्यप्राणवाक्यं, किञ्चिद्ब्रह्मवाक्यं, तथाच त्रयोऽप्युपास्या इति चेन्न, उपासात्रैविध्यप्रसङ्गात्, अन्यत्र ''प्राणस्य प्राणम्'' इत्यादि वाक्यान्तरे ब्रह्मलिङ्गैः प्राणशब्दे ब्रह्मपरताया आश्रितत्वात् इहाऽपि हिततमत्वादिब्रह्मलिङ्गयोगादिति,**

---

शङ्करभाष्यम् – जीवमुख्यप्राणलिङ्गान्नेति चेन्नोपासात्रैविध्यादाश्रितत्वादिह तद्योगात् ॥ ३१ ॥

यद्यप्यध्यात्मसम्बन्धभूमदर्शनान्न पराचीनस्य देवतात्मन उपदेशः तथापि न ब्रह्मवाक्यं भवितुमर्हति । कुतः, जीवलिङ्गान्मुख्यप्राणलिङ्गाच्च । जीवस्य तावदस्मिन्वाक्ये विस्पष्टं लिङ्गमुपलभ्यते 'न वाचं विजिज्ञासीत वक्तारं विद्यात्' इत्यादि । अत्र हि वागादिभिः करणैर्व्यापृतस्य कार्यकरणाध्यक्षस्य जीवस्य विज्ञेयत्वमभिधीयते । तथा मुख्यप्राणलिङ्गमपि – 'अथ खलु प्राण एव प्रज्ञात्मेदं शरीरं परिगृह्योत्थापयति' इति । शरीरधारणं च मुख्यप्राणस्य धर्मः, प्राणसंवादे वागादीन्प्राणान्प्रकृत्य 'तान्वरिष्ठः प्राण उवाच मा मोहमापद्यथाहमेवैतत्पञ्चधात्मानं प्रविभज्यैतद्बाणमवष्टभ्य विधारयामि'(प्र. २।३) इति श्रवणात् । ये तु 'इमं शरीरं परिगृह्य' इति पठन्ति तेषामिमं जीवमिन्द्रियग्रामं वा परिगृह्य शरीरमुत्थापयतीति व्याख्येयम् । प्रज्ञात्मत्वमपि जीवे तावच्चेतनत्वादुपपन्नम् । मुख्येऽपि प्राणे प्रज्ञासाधनप्राणान्तराश्रयत्वादुपपन्नमेव । जीवमुख्यप्राणपरिग्रहे च प्राणप्रज्ञात्मनोः सहवृत्तित्वेनाभेदनिर्देशः स्वरूपेण च भेदनिर्देश इत्युभयथा निर्देश उपपद्यते – 'यो वै प्राणः सा प्रज्ञा या वै प्रज्ञा स प्राणः सह ह्येतावस्मिञ्शरीरे वसतः सहोत्क्रमातः' इति ।

ब्रह्मपरिग्रहे तु किं कस्माद्भिद्येत । तस्मादिह जीवमुख्यप्राणयोरन्यतर उभौ वा प्रतीयेयातां न ब्रह्मेति चेत्, नैतदेवं, उपासात्रैविध्यात् । एवं सति त्रिविधमुपासनं प्रसज्येत, जीवोपासनं मुख्यप्राणोपासनं ब्रह्मोपासनं चेति । नचैतदेकस्मिन्वाक्येऽभ्युपगन्तुं युक्तम् । उपक्रमोपसंहाराभ्यां हि वाक्यैकत्वमवगम्यते । 'मामेव विजानीहि' इत्युपक्रमस्य 'प्राणोऽस्मि प्रज्ञात्मा तं मामायुरमृतमित्युपास्स्व' इत्युक्त्वान्ते 'स एष प्राण एव प्रज्ञात्मानन्दोऽजरोऽमृतः' इत्येकरूपावुपक्रमोपसंहारौ दृश्येते । तत्रार्थैत्वं युक्तमाश्रयितुम् । नच ब्रह्मलिङ्गमन्यपरत्वेन परिणेतुं शक्यम् । दशानां भूतमात्राणां प्रज्ञामात्राणां च ब्रह्मणोऽन्यत्रार्पणानुपपत्तेः । आश्रितत्वाच्चान्यत्रापि ब्रह्मलिङ्गवशात्प्राणशब्दस्य ब्रह्मणि वृत्तेः । इहापि च हिततमोपन्यासादिब्रह्मलिङ्गयोगाद्ब्रह्मोपदेश एवायमिति गम्यते । यत्तु मुख्यप्राणलिङ्गं दर्शितम् – 'इदं शरीरं परिगृह्योत्थापयति' इति । तदसत् । प्राणव्यापारस्यापि परमात्मायत्तत्वात्परमात्मन्युप-चरितुं शक्यत्वात् । 'न प्राणेन नापानेन मर्त्यो जीवति कश्चन । इतरेण तु जीवन्ति यस्मिन्नेतावुपाश्रितौ (काठ. २।५।५) इति श्रुतेः । यदपि 'न वाचं विजिज्ञासीत वक्तारं विद्यात्' इत्यादि जीवलिङ्गं दर्शितं तदपि न ब्रह्मपक्षं निवायरति । नहि जीवो नामात्यन्तभिन्नो ब्रह्मणः, 'तत्त्वमसि' 'अहं ब्रह्मास्मि' इत्यादिश्रुतिभ्यः । बुद्ध्याद्युपाधिकृतं तु विशेषमाश्रित्य ब्रह्मैव सञ्जीवः कर्ता भोक्ता चेत्युच्यते । तस्योपाधिकृतविशेषपरित्यागेन स्वरूपं ब्रह्म दर्शयितुं 'न वाचं विजिज्ञासीत वक्तारं विद्यात्' इत्यादिना प्रत्यगात्माभिमुखीकरणार्थमुपदेशो न विरुध्यते । 'यद्वाचानभ्युदितं येन वागभ्युद्यते । तदेव ब्रह्म त्वं विद्धि नेदं यदिदमुपासते ॥' (के. १।४) इत्यादि च श्रुत्यन्तरं वचनादिक्रियाव्यापृतस्यैवात्मनो ब्रह्मत्वं दर्शयति । यत्पुनरेतदुक्तम् – 'सह ह्येतावस्मिन् शरीरे वसतः सहोत्क्रामतः' इति प्राणप्रज्ञात्मनोर्भेददर्शनं ब्रह्मवादे नोपपद्यत इति । नैष दोषः । ज्ञानक्रियाशक्तिद्वयाश्रययोर्बुद्धिप्राणयोः प्रत्यगात्मोपाधिभूतयोर्भेदनिर्देशोपपत्तेः । उपाधिद्वयोपहितस्य तु प्रत्यगात्मनः स्वरूपेणाभेद इत्यतः प्राण एव प्रज्ञात्मेत्येकीकरणमविरुद्धम् । अथवा 'नोपासात्रैविध्यादाश्रितत्वादिह तद्योगात्' इत्यस्यायमन्योऽर्थः – न ब्रह्मवाक्येऽपि जीवमुख्यप्राणलिङ्गं विरुध्यते । कथम्, उपासात्रैविध्यात् । त्रिविधमिह ब्रह्मोपासनं विवक्षितं, प्राणधर्मेण प्रज्ञाधर्मेण स्वधर्मेण च । तत्र 'आयुरमृतमुपास्स्वायुः प्राणः' इति, 'इदं शरीरं परिगृह्योत्थापयति' इति, 'तस्मादेतदेवोक्थमुपासीत' इति च प्राणधर्मः । 'अथ यथास्यै प्रज्ञायै सर्वाणि भूतान्येकीभवन्ति तद्व्याख्यास्यामः इत्युपक्रम्य 'वागेवास्या एकमङ्गमदूदुहत्तस्यै नाम परस्तात्प्रतिविहिता भूतमात्रा प्रज्ञया वाचं समारुह्य वाचा सर्वाणि नामान्याप्नोति' इत्यादिः प्रज्ञाधर्मः । 'ता वा एता दशैव भूतमात्रा अधिप्रज्ञं

**तन्न, ''अपीतौ तद्वत्प्रसङ्गात्'' इत्यादिवत् प्रसङ्गपदाभावात् । ''मामेव विजानीहि'' इतीन्द्रलिङ्गस्यापि सत्त्वेन चातुर्विध्यादिति वक्तव्यत्वाच्च । पूर्ववादिनं प्रति इष्टापत्तेश्च ।**

---

दश प्रज्ञामात्रा अधिभूतम् । यद्धि भूतमात्रा न स्युर्न प्रज्ञामात्राः स्युः । न ह्यन्यतरतो रूपं किञ्चन सिध्येत् । नो एतन्नाना । तद्यथा रथस्यारेषु नेमिरर्पिता नाभावरा अर्पिता एवमेवैता भूतमात्राः प्रज्ञामात्रास्वर्पिताः प्रज्ञामात्राः प्राणेऽर्पिताः स एष प्राण एव प्रज्ञात्मा' इत्यादिर्ब्रह्मधर्मः । तस्माद्ब्रह्मण एवैतदुपाधिद्वयधर्मेण स्वधर्मेण चैकमुपासनं त्रिविधं विवक्षितम् । अन्यत्रापि 'मनोमयः प्राणशरीरः' (छा. ३।१४।१) इत्यादावुपाधिधर्मेण ब्रह्मण उपासनमाश्रितम् । इहापि तद्युज्यते वाक्यस्योपक्रमोपसंहाराभ्यामेकार्थत्वावगमात् प्राणप्रज्ञाब्रह्मलिङ्गावगमाच्चातस्माद्ब्रह्मवाक्यमेतदिति सिद्धम् ॥ ३१ ॥ इति श्रीमच्छारीरकमीमांसाभाष्ये प्रथमाध्यायस्य प्रथमः पादः ॥१॥

**भामतीव्याख्या – न ब्रह्मवाक्यं भवितुमर्हतीति** । नैष सन्दर्भो ब्रह्मवाक्यमेव भवितुमर्हतीति, किन्तु तथायोगं किञ्चिदत्र जीववाक्यं, किञ्चिन्मुख्यप्राणवाक्यं, किञ्चिद्ब्रह्मवाक्यमित्यर्थः । **प्रज्ञासाधनप्राणान्तराश्रयत्वादिति** । प्राणान्तराणीन्द्रियाणि, तानि हि मुख्ये प्राणे प्रतिष्ठितानि । जीवमुख्यप्राणयोरन्यतर इत्युपक्रममात्रम् । उभाविति तु पूर्वपक्षतत्त्वम् । ब्रह्म तु ध्रुवम् । **न ब्रह्मेति** । न ब्रह्मैवेत्यर्थः । **दशानां भूतमात्राणामिति** । पञ्च शब्दादयः, पञ्च पृथिव्यादय इति दश भूतमात्राः । पञ्च बुद्धीन्द्रियाणि पञ्च बुद्धय इति दश प्रज्ञामात्राः । तदेवं स्वमतेन व्याख्याय प्राचां वृत्तिकृतां मतेन व्याचष्टे – **अथवेति** ।

पूर्वं प्राणस्यैकमुपासमपरं जीवस्यापरं ब्रह्मण इत्युपासनात्रैविध्येन वाक्यभेदप्रसङ्गो दूषणमुक्तम् । इह तु ब्रह्मण एकस्यैवोपासात्रयविशिष्टस्य विधानान्न वाक्यभेद इत्यभिमानः प्राचां वृत्तिकृताम् । तदेतदालोचनीयं कथं न वाक्यभेद इति ।

युक्तं 'सोमेन यजेत' इत्यादौ सोमादिगुणविशिष्टयागविधानं, तद्गुणविशिष्टस्यापूर्वस्य कर्मणोऽप्राप्तस्य विधिविषयत्वात् । इह तु सिद्धरूपं ब्रह्म न विधिविषयो भवितुमर्हति, अभावार्थत्वात् । भावार्थस्य विधिविषयत्वनियमात् ।

वाक्यान्तरेभ्यश्च ब्रह्मावगतेः प्राप्तत्वात्तदनूद्याप्राप्तोपासा भावार्थो विधेयस्तस्य च भेदाद्विध्यावृत्तिलक्षणो वाक्यभेदोऽतिस्फुट इति भाष्यकृता नोद्धाटितः, स्वव्याख्यानेनैवोक्तप्रायत्वादिति सर्वमवदातम् ॥३१॥

इति श्रीवाचस्पतिमिश्रविरचिते भाष्यविभागे
भामत्यां प्रथमस्याध्यायस्य प्रथमः पादः ॥१॥

**श्रीभाष्यम्** - कथं तर्हि प्रज्ञातजीवभावस्येन्द्रस्य स्वात्मन उपास्यत्वोपदेशः सङ्गच्छते ? तत्राह –

**शास्त्रदृष्ट्या तूपदेशो वामदेववत् ॥ ३१ ॥**

प्रज्ञातजीवभावेनेन्द्रेण, 'मामेव विजानीहि', 'मामुपास्व' (कौ. ३-१) इति उपास्यस्य ब्रह्मणः स्वात्मत्वेनोपदेशोऽयं न प्रमाणान्तरप्राप्तस्वात्मावलोकककनकृतः, अपि तु शास्त्रेण स्वात्मदृष्टिकृतः । एतदुक्तं भवति – 'अनेन जीवेनात्मनाऽनुप्रविश्य नामरूपे व्याकरवाणि', (छा. ६-३-२) 'ऐतदात्म्यमिदं सर्वम्', (छा. ६-८-७) 'अन्तःप्रविष्टः शास्ता जनानां सर्वात्मा' (तै.आ. ३-११-२१) 'य आत्मनि तिष्ठन् आत्मनोऽन्तरो यमात्मा न वेद यस्यात्मा शरीरं य आत्मानमन्तरो यमयति' (बृ.भा. ३-७-२२) 'एष सर्वभूतान्तरात्मा अपहतपाप्मा दिव्यो देव एको नारायणः' (सु. ७-१) इत्येवमादिना शास्त्रेण जीवात्मशरीरकं परमात्मानमवगम्य, जीवात्मवाचिनामहन्त्वमादिशब्दानामपि परमात्मन्येव पर्यवसानं ज्ञात्वा, 'मामेव विजानीहि', (कौ. ३-१) 'मामुपास्स्व' (कौ. ३-१) इति स्वात्मशरीरकं परमात्मानमेवोपास्यत्वेनोपदिदेशेति । वामदेववत्-यथा वामदेवः परस्य ब्रह्मणः सर्वान्तरात्मत्वं सर्वस्य तच्छरीरत्वं शरीरवाचिनां शब्दानां च शरीरिणि पर्यवसानं पश्यन्, 'अहम्' इति स्वात्मशरीरकं परं ब्रह्म निर्दिश्य तत्सामानाधिकरण्येन मनुसूर्यादीन् व्यपदिशति, 'तद्धै तत् पश्यन् ऋषिर्वामदेवः प्रतिपेदे अहं मनुरभवं सूर्यश्च'(बृ.३-४-१०) 'अहं कक्षीवान् ऋषिरस्मि विप्रः' (४-२६-१) इत्यादिना । यथा च प्रह्लादः, 'सर्वगत्वादनन्तस्य स एवाहमवस्थितः । मत्तः सर्वमहं सर्वं मयि सर्वं सनातने ॥' (वि.बु. १-१९-८५) इत्यादि वदति ॥ ३१ ॥

अस्मिन् प्रकरणे जीववाचिभिः शब्दैरचिद्विशेषाभिधायिभिश्चोपास्यभूतस्य परस्य ब्रह्मणोऽभिधाने कारणं चोद्यपूर्वकमाह –

**जीवमुख्यप्राणलिङ्गान्नेति चेन्नोपासानात्रैविध्यादाश्रितत्वादिह तद्योगात् ॥ ३२ ॥**

'न वाचं विजिज्ञासीत; वक्तारं विद्यात्', (कौ. ३-८) 'त्रिशीर्षाणं त्वाष्ट्रमहनम्; अरुन्मुखान् यतीन् सालावृकेभ्यः प्रायच्छम्' (कौ. ३-१) इत्यादिजीवलिङ्गात्, 'यावद्ध्यस्मिन् शरीरे प्राणो वसति तावदायुः', (कौ. ३-१) 'अथ खलु प्राणएव प्रज्ञात्मेदं शरीरं परिगृह्योत्थापयति' (कौ. ३-२) इति मुख्यप्राणलिङ्गाच्च नाध्यात्मसम्बन्धभूमेति चेत्-न; उपासात्रैविध्यात् हेतोः । उपासनात्रैविध्यमुपदेष्टुं तत्तच्छब्देनाभिधानम्-निखिलकारणभूतस्य ब्रह्मणः स्वरूपेणा(स्वरूपा ?)नुसन्धानम् भोक्तृवर्गशरीरकत्वानुसन्धानम् भोग्यभोगोपकरणशरीरकत्वानुसन्धानञ्चेति त्रिविधमनुसन्धानमुपदेष्टुमित्यर्थः । तदिदं त्रिविधं ब्रह्मानु-

ಅನುವಾದ - ಅದ್ವೈತಿಗಳು "ಜೀವಮುಖ್ಯಪ್ರಾಣ" ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸುತ್ತಾರೆ. ಪ್ರಾಣಶಬ್ದವಿರುವ ಪ್ರಕರಣದಲ್ಲಿ ಅನೇಕ ಲಿಂಗಗಳಿವೆ. ಅವುಗಳನ್ನೆಲ್ಲಾ ಕೂಡಿಸಬೇಕೆಂದರೆ ಕೆಲವು ವಾಕ್ಯಗಳು ಜೀವನನ್ನು ಪ್ರತಿಪಾದಿಸುತ್ತವೆ. ಕೆಲವು ವಾಕ್ಯಗಳು ಮುಖ್ಯಪ್ರಾಣನನ್ನು, ಇನ್ನು ಕೆಲವು ವಾಕ್ಯಗಳು ಬ್ರಹ್ಮನನ್ನು ಪ್ರತಿಪಾದಿಸುತ್ತವೆಂದು ಹೇಳಬೇಕು. ಆದ್ದರಿಂದ 'ಜೀವ, ಮುಖ್ಯಪ್ರಾಣ, ಬ್ರಹ್ಮ' ಮೂವರೂ ಸಹ ಉಪಾಸ್ಯರಾಗಿದ್ದಾರೆಂದು ಪೂರ್ವಪಕ್ಷ.

---

सन्धानं प्रकरणान्तरेष्वप्याश्रितम् 'सत्यं ज्ञानमनन्तं ब्रह्म'(तै. २-१-१) 'आनन्दो ब्रह्म' (तै. ३-१-१) इत्यादिषु स्वरूपा(पेणा?) नुसन्धानम्; 'तत्सृष्ट्वा तदेवानुप्राविशत् । तदनुप्रविश्य सच्च त्यच्चाभवत्, निरुक्तश्चानिरुक्तश्च निलयनं चानिलयनश्च, 'विज्ञानश्चाविज्ञानश्च, सत्यं चानृतश्च सत्यमभवत्' (तै. २-६-१) इत्यादिषु भोक्तृशरीरतया भोग्यभोगोपकरणशरीरतया चानुसन्धानम् । इहापि प्रकरणे तत् त्रिविधमनुसन्धानं युज्यत एवेत्यर्थः ।

एतदुक्तं भवति-यत्र हिरण्यगर्भादिजीवविशेषाणां प्रकृत्याद्यचेतनविशेषाणाञ्चपरमात्मासाधारणधर्मयोगः, तदभिधायिनां शब्दानां परमात्मवाचिशब्दैः सामानाधिकरण्यं वा दृश्यते; तत्र परमात्मनः तत्तच्चिदचिद्विशेषान्तरात्मत्वानुसन्धानं प्रतिपिपादयिषितमिति ॥

अतोऽत्रेन्द्रप्राणशब्दनिर्दिष्टो जीवादर्थान्तरभूतः परमात्मैवेति सिद्धम् ॥ ३२ ॥

॥ इति इन्द्रपाणाधिकरणम् ॥ ११ ॥

**श्रुतप्रकाशिका** – उत्तरसूत्रं शङ्कयाऽवतारयति – **कथं तर्हीति** । **प्रज्ञातजीवभावस्येति** । 'इदि परमैश्वर्ये' इत्यादिप्रकृतिप्रत्ययविभागेन परमात्मपरत्वमिन्द्रादि-शब्दानामयुक्तम्; त्वाष्ट्रवधादिलिङ्गानिर्वाहानुपपत्तेः । तत् कथमिन्द्रशब्देन परमात्मनिर्देश इति भावः । पूर्वं परमात्मपरत्वसाधकहेतुरुक्तः । पूर्वपक्षयुक्तेः कः परिहार इत्यपेक्षायां सूत्रावतार इत्यर्थः ॥ **शास्त्रदृष्ट्या तूपदेशो वामदेववत्** ॥ कीदृश उपदेश इत्यत्राह – **प्रज्ञातेति** । शास्त्रदृष्टिशब्दस्य व्यवच्छेद्यमाह – **न प्रामाणन्तरेति** । शास्त्रस्य दृष्टिः, शास्त्ररूपा दृष्टिरिति च (वा) प्रतीतिः स्यादिति तद्व्यावृत्त्यर्थमाह – **शास्त्रेणेति** । कस्य दृष्टिरित्यपेक्षायां **स्वात्मशब्दः** । स्वानुभवप्रत्यक्षेण आत्मावलोकने जीवमात्रप्रकाशः; शास्त्रेण तन्मूलयोगेन चात्मानुभवे परमात्मपर्यन्ततया प्रकाश इति भावः । नहि प्रमाणविशेषेण अन्यत् प्रमेयमन्यद्भवति, तच्च शास्त्रं किमित्यत्राह – **एतदुक्तमिति** । जीववाचिपदानां परमात्मसामानाधिकरण्योपपादिकाः श्रुतीरुदाजिहीर्षुर्नामरूपव्याकरण- श्रुतिमाह – **अनेनेति** । जीवेऽप्यनुप्रवेशं दर्शयितुमाह **ऐतदात्म्यमिति** । तदेव स्पष्टयति – **अन्तःप्रविष्ट** इति । शरीरत्वतल्लक्षणे दर्शयति – **य आत्मनीति** । **पर्यवसानं ज्ञात्वेति** नामरूपव्याकरणश्रुतिलब्धार्थः उक्तः ।

ಇದು ತಪ್ಪು. ಉಪಾಸನೆಯಲ್ಲಿ ತ್ರೈವಿಧ್ಯವನ್ನು ಆಶ್ರಯಿಸುವಂತಹ ಪ್ರಸಂಗ ಬರುತ್ತದೆ. ಮತ್ತು "ಪ್ರಾಣಸ್ಯ ಪ್ರಾಣಂ" ಇತ್ಯಾದಿ ಬೇರೆ ವಾಕ್ಯಗಳಲ್ಲಿ ಬ್ರಹ್ಮಲಿಂಗಗಳಿರುವುದಿಂದ ಪ್ರಾಣಶಬ್ದಕ್ಕೆ ಬ್ರಹ್ಮಪರತ್ವವನ್ನು ಒಪ್ಪಿರುವುದು ಕಾಣುತ್ತದೆ. ಆದರಂತೆ ಇಲ್ಲಿಯೂ ಹಿತತಮತ್ವವೇ ಮೊದಲಾದ ಅನೇಕ ಬ್ರಹ್ಮಲಿಂಗಗಳೂ ಕೇಳಿಸುತ್ತಿರುವುದರಿಂದ ಇಲ್ಲಿರುವ ಪ್ರಾಣಶಬ್ದದಿಂದಲೂ ಬ್ರಹ್ಮನು ಪ್ರತಿಪಾದ್ಯನಾಗುತ್ತಾನೆಂದು ಸಿದ್ಧಾಂತ.

**उपदिदेशेत्यन्तेन शास्त्रदृष्ट्या तूपदेश** इत्यंशो व्याख्यातः । **वामदेववदित्यंशं व्याचष्टे – यथेति । शरीरिणि पर्यवसानं पश्यन्नित्यन्तेन तद्धैतत्पश्यन्** इत्येतत् व्याख्यातम् । उक्तार्थविशदीकरणायाह – **यथा च प्रह्लाद** इति ॥ ३१ ॥

उत्तरसूत्रमवतारयति **अस्मिन्निति । जीववाचिभिरित्यादि ।** त्वाष्ट्रवधादिलिङ्ग-प्रतिपादनकारणमपि कथनीयमित्यभिप्रेतम्; उपरितनग्रन्थानुगुण्यात् । **कारणं** प्रयोजन-रूपम् । **उपदेष्टुमिति** हि वक्ष्यते । **चोद्यपूर्वकमाह** । न तूक्तार्थप्रतिक्षेपार्थकं चोद्यम् । विशेषणांशे तात्पर्यं प्रतीयत इति तस्य प्रयोजनमेव प्रष्टव्यम् । तत् चोद्यरूपेण पृष्टवान् इत्यर्थः ॥

**जीवमुख्यप्राणलिङ्गान्नेति चेन्नोपासात्रैविध्यादाश्रितत्वादिह तद्योगात्** ॥ **न वाचं विजिज्ञासीत वक्तारं विद्यादिति** । न केवलं मद्वचनमेव विजानीहि, वक्तारं माञ्च विजानीहीत्यर्थः । **मुख्यप्राणः** – पञ्चवृत्तिः । मुख्यशब्दः इन्द्रियादिव्यावृत्त्यर्थः । नञो निषेध्याकाङ्क्षायामनतिविप्रकृष्टं सौत्रपदमध्याहृतम् **अध्यात्मेति** । हेतुत्वं विवृणोति **उपासनेति** । उपदेष्टुमित्यनेन प्रयोजनतया हेतुत्वं स्पष्टम् । त्रैविध्यं विवृणोति **निखिलेति । स्वरूपेणानुसन्धानम्** – अद्वारकगुणविशिष्टानुसन्धानम् । त्रिविधानुसन्धानस्य प्रमाणमूलत्वे सिद्धे ह्ययं निर्वाह उपपन्नः स्यादिति शङ्कायाम्, **आश्रितत्वादित्येतद्व्याचष्टे – तदिदमिति** । कुत्रेत्यपेक्षायां **प्रकरणान्तरेष्वपीत्युक्तम्** । **आश्रितम्** – प्रतिपन्नमित्यर्थः । **तत्सृष्ट्वेत्यादि** । 'सत्यं ज्ञानमनन्तम्' इति देशकालवस्तुपरिच्छेदरहितस्य ब्रह्मणः, 'ब्रह्मविदाप्नोति' इति वेद्यत्वविधानात् प्रकरणस्य वेद्यब्रह्मप्रतिपादनपरत्वात्, 'स य एवंवित्' इति निगमन-वाक्येऽपि पूर्वोक्तसमस्तप्रकारविशिष्टवेदनप्रतीतेश्च चिदचिच्छरीरकत्वानुसन्धानमत्र विव-क्षितमिति भाष्याभिप्रायः ॥

ननु 'स यश्चायं पुरुषे यश्चासावादित्ये स एकः' इत्युक्त्वाऽनन्तरम्, 'स य एवंवित्' इति वाक्येन जीवान्तर्यामिण आदित्यान्तर्वर्तिनश्च उपासनमुच्यत इति चेन्न; स्थानभेदेन विद्याभेदप्रसङ्गात् । स चानुपपन्नः; 'एतमानन्दमयमात्मानमुपसङ्क्रामति' इत्यानन्दमय-प्राप्तिफलश्रवणेन 'ब्रह्मविदाप्नोति परम्', 'तस्माद्वा एतस्मादात्मनः' इत्यादिना प्रतिपादितानन्दमयविषयविद्यैकत्वावगमात् प्रकरणस्य, सम्भवत्येकवाक्यत्वे वाक्यभेदा-

ಇದು ತಪ್ಪು. ಈ ವ್ಯಾಖ್ಯಾನದಲ್ಲಿ ಪ್ರಸಂಗಪದವು ಅನಿವಾರ್ಯವಾಗುತ್ತದೆ. ಆದರೆ "ಅಪೀತೌ ತದ್ವತ್ಪ್ರಸಂಗಾತ್" ಎಂಬ ಸೂತ್ರದಂತೆ ಈ ಸೂತ್ರದಲ್ಲಿ ಪ್ರಸಂಗ ಪದವಿರುವುದಿಲ್ಲ. ಮತ್ತು 'ಮಾಮೇವ ವಿಜಾನೀಹಿ' ಎಂಬುದಾಗಿ ಇಂದ್ರಲಿಂಗವೂ ಸಹ ಇರುವುದರಿಂದ ಉಪಾಸನೆಯಲ್ಲಿ

---

नुपपत्तेश्च ॥ **स यश्चायमित्यादिवाक्ये** किमुच्यत इति चेत्-त्रिविधानुसन्धानरूपैकविद्याया मोक्षफलकत्वेन विवक्षतत्वे सति तत्र स्वरूपेणावस्थितस्य अनुसन्धाने ज्ञानादिगुणवत् दिव्यविग्रहयोगस्याप्यनुसन्धेयतासिद्ध्यर्थं पुण्डरीकाक्षमप्राकृतवपुरतिदिश्यते। तत्र 'स यश्चायं पुरुषे' इति विज्ञानमयादन्तरस्याऽऽन्दमयस्यानुवादः, 'यश्चासावादित्ये' इति विग्रहातिदेशः । किञ्च आान्दमयप्रतिपादनानन्तरं ब्रह्मविदाप्नोतीत्युपक्रमाभिहितप्राप्तिविशदीकारार्थम् 'अथातोऽनु प्रश्नाः' इति प्रश्ना उपक्षिप्ताः । पूर्वप्रतिपादनस्य बुभुत्साहेतुत्वमतश्शब्देनोच्यते **उताविद्वानिति** । **उत विद्वानिति** पदम् । 'निपातस्य च' इति छान्दसो दीर्घः; अथा सपत्नानितिवत् । अविद्वानिति पदे सति ह्याद्युदात्तत्वं स्यात्; 'तत्पुरुषे तुल्यार्थ....' इत्यादिस्मरणात्; 'अविद्वान् प्रतिगृह्णाति' इतिवत् । अन्तोदात्तश्चेदं पदम् । तस्मात् विद्वानिति पदम् । **कश्चन** – अविप्रकृष्टहृदयादिस्थानस्थमनवच्छिन्नश्च ब्रह्मोपासीनौ विद्वान् किमतः प्रेत्य **अमुं लोकं** – 'परमे व्योमन्' इत्युक्तं लोकं गच्छतीत्येकः प्रश्नः । उत गत्यनपेक्षमिहैव ब्रह्म प्राप्नोतीत्यर्थसिद्धः प्रश्नः । **आहो विद्वानिति । समश्नुता** इति भोक्तृत्वं विवक्षितम् । कश्चित्–अहङ्ग्रहेणोपासीनोऽपि विद्वान् अमुं लोकं गत्वाकिं समश्नुते? भोग्यमूतं ब्रह्मानुभवतीत्येकः प्रश्नः । उत ब्रह्मस्वरूपेणैकीभवतीत्यर्थसिद्धः प्रश्नः । एवं शास्त्रवैविध्यमूलाः गतिविशेषस्वरूपभेदभावाभावविषयाः प्रश्नाः बहुवचनविवक्षिताः । एतान् प्रतिवक्तुं जगत्कारणत्वौपयिकगुणविशिष्टस्यैव विलक्षणस्य ब्रह्मणः प्राप्यत्वादिज्ञापनाय 'सोऽकामयत' इत्यादिना जगत्कारणत्वादिकं निरतिशयानन्दपर्यन्तं महिमानमुक्त्वा, 'स यश्चायम्' इत्यादि वाक्यं वदति । सन्निकृष्टहृदयस्थं वा विप्रकृष्टरविमण्डलादिस्थानस्थं वा, पूर्वोक्तं सत्यत्वादिलक्षणमानन्दादिगुणकं वा ब्रह्मोपासीनः सर्वोऽपि विद्वान् अस्माल्लोकात् प्रेत्य अन्नमयादिसमष्टिव्यष्टिविभूतिकं निरतिशयानन्दं परमात्मानं भोग्यभूतं भोक्ता सन्ननुभवतीति प्रश्नस्योत्तरमुक्तम् । अतः सर्वेषां विद्याविशेषनिष्ठानामर्चिरादि – गतिमत्त्वं भोक्तृभोग्यभावेनावस्थानञ्च प्रतिपादयितुं सन्निकृष्टविप्रकृष्टस्थानविशेषोपलक्षणार्थम्, 'स यश्चायम्' इत्यादि उक्तम् । तस्मादादित्यान्तर्वर्तितया उपासनमानन्दवल्ल्यां न विधित्सितम् । अत उक्तलक्षणत्रिविधोपासनमेवात्र विवक्षितम् । एवम् 'भोक्ता भोग्यं प्रेरितारञ्च मत्वा सर्वं प्रोक्तं त्रिविधं ब्रह्ममेतत्' इत्यादीनि सदृशानि श्रुत्यन्तराणि च विवक्षितानि; त्रिविद्योपासनस्य स्फुटतरत्वात् । भोक्तृभोग्ययोरीश्वरविधात्वं कथमित्यपेक्षायां चिदचिदनु-

ಚಾತುರ್ವಿಧ್ಯವನ್ನು ಆಶ್ರಯಿಸಬೇಕೇ ಹೊರತು ತ್ರೈವಿಧ್ಯವನ್ನು ಆಶ್ರಯಿಸಿದ್ದು ತಪ್ಪಾಗುತ್ತದೆ. ಸಿದ್ಧಾಂತ ಮಾಡಿದ್ದೂ ಸಹ ಸರಿಯಿಲ್ಲ. ಪೂರ್ವಪಕ್ಷಿಯನ್ನು ಕುರಿತು ಉಪಾಸನೆಯಲ್ಲಿ ತ್ರೈವಿಧ್ಯಪ್ರಸಂಗ ಬರುತ್ತದೆಂದು ಆಕ್ಷೇಪಿಸಿದರೆ ಅವನಿಗೆ ಅದು ಇಷ್ಟವೇ ಆಗಿದೆ.

---

प्रवेशादीश्वरस्य तत्प्रकारित्वमिति त्रिविधोपासनपरश्रुत्यन्तरार्थविशदीकारहेतुत्वादानन्द-वल्लीवाक्यमिहोदाहृतम् । अन्यत्त्वभिप्रेतम् ।

इह **तद्योगादित्येतद्व्याचष्टे – इहापीति** । 'आनन्दोऽजरोऽमृतः' इति स्वेन रूपेणानुसन्धानम्, 'प्राणोऽस्मीत्यचिद्विशिष्टानुसन्धानम्, 'मामुपास्स्व' इति चिद्विशिष्टानुसन्धानमिति त्रिविधानुसन्धानमिहोपपद्यत इत्यर्थः । 'त्रिविधानुसन्धाने कर्तव्येऽप्यत्र चिद्विशेषाचिद्विशेषविशिष्टत्वोक्तिः कथम्, सामान्येन चिदचिद्विशिष्टानुसन्धानं हि प्रकरणान्तरोक्तम्' इत्यपेक्षां प्रशमयन्, अस्य न्यायस्य प्रतर्दनविद्यामात्रविषयत्वं च निवारयन् विशिष्टोपासनपरत्वचिह्नं च दर्शयति – **एतदुक्तं भवतीति** । **यत्रेति** । अयं न्यायो न प्रतर्दनविद्यामात्रविषयः, अपि त्वीदृशसर्वप्रकरणविषय इति भावः । सामान्येन चिदचिद्विशिष्टोपासनं हि विहितत्वात् स्वीक्रियते विधेरवैयर्थ्यार्थम्; तथा चिदचिद्विशेषविशिष्टोपासनं विहितं चेत्, तत्र तत्र चि(तत्र तत्तच्छि?)दचिद्विशेषान्तर्यामित्वमनुसन्धेयमित्यभिप्रायेणाह – **हिरण्यगर्भादीति** । **हिरण्यगर्भादिजीवविशेषाणामिति** पदेन **परमात्मशब्देन** च 'परमात्मा व्यवस्थितः । स ब्रह्मा स शिवः सेन्द्रः' इति श्रुतिः स्मार्यते । अनन्यपरेण नारायणानुवाकेन सर्वविद्यासूपास्यो नारायण एवेति निर्णीतत्वादिन्द्राद्युपासनेऽपि तदन्तर्यामी नारायण एवोपास्य इति भावः । पाशुपताधिकरणे तथाऽनुवदिष्यमाणत्वात् । परमात्मपर्यन्तत्वविवक्षाज्ञापकं द्विविधं प्रदर्शयति – **परमात्मासाधारणेति** । परमात्मासाधरणधर्मयोगात् तद्वाचिशब्द-सामानाधिकरण्याच्च विशिष्टोपासनपरत्वमवगम्यत इत्यर्थः । अधिकरणार्थमुपसंहरति अत इति ॥

अत्र **कैश्चिदेवं** वर्णितम्-प्राणव्यापारस्यापि परमात्मायत्तत्वात् तत्सङ्कीर्तनम् । जीवसङ्कीर्तनं तु तस्यौपाधिकभेदप्रतिक्षेपेण परब्रह्मरूपताज्ञापनार्थम् । अन्यथा त्रिविधमुपासनं प्रसज्येत । ततश्च वाक्यभेदः स्यादिति ॥ तदयुक्तम्; 'नित्योपलब्ध्यनुपलब्धिप्रसङ्गः' 'अपीतौ तद्वत्प्रङ्गात्' इतिवत् प्रसङ्गशब्दस्य अश्रुतत्वात् वाक्यभेदाभावाच्च । एकवाक्येनैव हि विधीयते, 'तं मामायुरमृतमित्युपास्स्व' इति । अत्र **मामिति** जीवविशिष्टतोक्ता; **आयुरिति** प्राणविशिष्टता-'आयुः प्राणः' इति ह्यनन्तरवाक्यम्; **अमृतमिति** स्वेन रूपेणावस्थितिः । अत एवंविधं परमात्मानमुपास्स्वेत्येकवाक्यत्वम् । उपासात्रैविध्यविधानस्य वृत्तिकाराभिमतत्वात् तदनतिक्रमाय परैरेवं त्रिविधोपासनपरत्वेन योजनान्तरं कृतं तत्र ज्ञानक्रियाशक्तिद्वयाश्रयबुद्धिप्राणरूपोपाधिधर्मेण स्वधर्मेण च

ಕಠಿಣಪದಾರ್ಥ

ತತ್ತಲಿಂಗಾನುಗ್ರಾಹಕತ್ವಂ = ಜೀವ, ಪ್ರಾಣ ಬ್ರಹ್ಮರ ವಿಷಯದಲ್ಲಿ ಪ್ರಾಪ್ತವಾದ ಲಿಂಗಗಳನ್ನು ಉಪಪಾದಿಸುವುದಕ್ಕಾಗಿ, ಕಿಂಚಿತ್ = ಕೆಲವು ವಾಕ್ಯಗಳು, ತ್ರಯೋಽಪಿ = ಜೀವ, ಪ್ರಾಣ, ಬ್ರಹ್ಮರು, ಇಹಾಽಪಿ = ಈ ಸೂತ್ರದಲ್ಲಿಯೂ

**प्रकाशः – यत्त्विति ॥ विवृतमेतत्प्राक् ॥ त्रैविध्यप्रसङ्गादिति ॥ ब्रह्ममात्रग्रहणे**

त्रिविधं ब्रह्मोपास्यमिति । तदयुक्तम्; जीवेश्वरभेदस्यान्तःकरण(णाविद्यादि?) रूपोपाध्यवच्छेदकल्पितत्वाभावात्; 'यस्यात्मा शरीरम्' 'मनोमयः प्राणशरीरः' इति जीवप्राणयोः परमात्मानं प्रति शरीरतया प्रकारत्वस्य श्रुतत्वेन प्रकारन्तरेण त्रैविध्यकल्पनायोगाच्च ।

अन्ये त्वेवमुपासात्रैविध्येन वाक्यैकत्वमाहुः प्रज्ञाशरीरो जीवशरीरः प्राणशरीरश्च परमात्मा उपास्यः । तत्र प्रज्ञाशरीरो मनोमयः । जीवशरीरो वाङ्मयः; वाक्शब्दः शब्दपरिणामशक्तियोगात् परमाकाशविषयः; अतो वाङ्मय आकाशशरीरः । आकाशशरीरत्वं च जीवशरीरत्वपर्यन्तम्, 'तस्यान्ते सुषिरं सूक्ष्मम्' 'तस्य मध्येमहानग्निः' इति हृदयाकाशमध्ये अग्निशब्देन जाठराग्निपरमात्म(?)ज्वालया संसृष्टं जीवमभिधाय, 'तस्याश्शिखाया मध्ये परमात्मा व्यवस्थितः' इत्याम्नानादिति ॥ तदप्युपपन्नम्; मनोमयादिव्यूहानाम् अप्रमाणिकत्वस्य पूर्वमेव दर्शितत्वात् । किञ्च अस्मिन् प्रकरणे प्रज्ञाशब्दस्य सहोत्क्रमणपृथग्व्यवहाराभ्यां स्थानप्रमाणेन च जीव-प्रसिद्धमनो-विषयत्वोपपादनेन ईश्वरप्रज्ञाशक्तिवाचित्वाभावात्; प्राणशब्दस्य, घटशब्दस्योदकाहरणशक्तिवाचित्वाभाववत्, क्रियाशक्तिवाचित्वाभावाच्च । अतः प्रज्ञाप्राणशब्दौ न मनोमयप्राणमयवाचकौ । यदि प्रसिद्धमनोवाक्प्राणा एतत्कार्यभूताः विवक्षिताः, तर्ह्यस्मिन् प्रकरणे चक्षुःश्रोत्रादीनामपि प्रकृतत्वात् तेषाञ्च परमात्ममयत्वादुपासात्रैविध्यंशःविरुध्यते । आकाशशरीरत्वं जीवशरीरत्वपर्यन्तमित्यप्ययुक्तम्; 'तस्य मध्ये महानग्निः' इत्यग्निशब्दस्य जीववाचित्वाभावात् । 'तत्र यः संश्रितो नित्यं स्थाल्यामग्निरिवार्पितः । आत्मानं तं विजानीयात्' इति स्मृऽतिवचनं तु न जीवस्य श्रुतावाग्निशब्दवाच्यत्वे प्रमाणम्; किन्तु स्थानस्थानिनोर्वैलक्षण्ये दृष्टान्तमात्रसमर्पकम् । वाङ्मयस्य जीवशरीरकत्वं भवत्प्रक्रियया विरुद्धश्च; प्राणमयस्यान्तर्यामित्वाभ्युपगमात् । अन्तर्यामिणो जीवशरीरकत्वश्रवणाच्च । 'यस्याऽत्मा शरीरम्', 'स त आत्माऽन्तर्याम्यमृतः' इति हि श्रूयते । तमोऽधिष्ठातृतयाऽभ्युपगतस्य वाङ्मयस्य जीवशरीकत्वं श्रुतिविरुद्धञ्च 'यः पृथिवीमन्तरे सञ्चरन् यस्य पृथिवी शरीरम्' इत्यारभ्य 'एष सर्वभून्तरात्माऽपहतपाप्मा दिव्यो देव एको नारायणः' इति समानप्रकरणे नारायणस्यैवान्तर्यामित्वश्रवणात् ॥ धर्म्यैक्यात् सर्वमुपपन्नमिति चेन्न; सर्वेषां व्यूहानां सर्वधर्मसम्भवेन व्यूहत्रयतद् व्यापारविभागव्यवस्थोपन्यासानुपपत्तेः । अतो यथोक्तमेव उपासात्रैविध्यमिति सिद्धम् ॥ ३२ ॥

ಅಂತಿಮಪ್ರಾಣಾಧಿಕರಣ-(೧।೧।೧೨)

तु नैवमिति भावः । कथं तर्हि प्राणशब्दो ब्रह्मणीत्यतः प्रवृत्तं – **आश्रितत्वादिति।** तस्यार्थमाह – **अन्यत्रेति ॥ चातुर्विध्यादिति ॥**

नन्विन्द्रलिङ्गं 'शास्त्रदृष्ट्या' इत्यनेनैव परिहृतं, न पुनरत्र शङ्कार्हमिति चेत्, तर्हि जीवमुख्यप्राणलिङ्गानामपि ब्रह्मैक्याङ्गीकारेण समाधातुं शक्यत्वेन साम्यात्, तथोपास्यत्वेन पुनः शङ्केत्यस्यापि साम्यादिति भावः ॥

**इष्टापत्तेरिति ॥** तेनैव त्रिविधोपासनाया अङ्गीकृतत्वादिति भावः ।

ವಿವರಣೆ - ಜೀವಮುಖ್ಯಪ್ರಾಣಸೂತ್ರವನ್ನು ಅದ್ವೈತಿಗಳು ಹೀಗೆ ವ್ಯಾಖ್ಯಾನಿಸುತ್ತಾರೆ. ಅವರ ಸೂತ್ರಾರ್ಥವನ್ನು ಈ ಹಿಂದೆಯೇ ವಿವರಿಸಿದ್ದಾಗಿದೆ. ಗ್ರಂಥದಲ್ಲಿ 'ತ್ರೈವಿಧ್ಯಪ್ರಸಂಗಾತ್' ಎಂದಿದೆ. ಕೇವಲ ಬ್ರಹ್ಮನನ್ನು ಪ್ರತಿಪಾದ್ಯನೆಂದು ಹೇಳಿದಾಗ ಈ ತ್ರೈವಿಧ್ಯಪ್ರಸಂಗವು ಇರುವುದಿಲ್ಲವೆಂದು ಇದರ ಅಭಿಪ್ರಾಯ. ಹಾಗಾದರೆ ಪ್ರಾಣಶಬ್ದವು ಬ್ರಹ್ಮನಲ್ಲಿ ಹೇಗೆ ಸಮನ್ವಯವಾಗುತ್ತದೆಂಬ ಪ್ರಶ್ನೆಗೆ 'ಆಶ್ರಿತತ್ವಾತ್' ಎಂದು ಉತ್ತರ ನೀಡಿದ್ದಾರೆ. ಆದರ ಅಭಿಪ್ರಾಯವನ್ನು 'ಅನ್ಯತ್ರ' ಎಂಬ ವಾಕ್ಯದಿಂದ ವಿವರಿಸಿದ್ದಾರೆ.

ಪ್ರಕರಣದಲ್ಲಿ ಇಂದ್ರಲಿಂಗವಿದೆ ಎಂಬುದನ್ನು 'ಶಾಸ್ತ್ರದೃಷ್ಟ್ಯಾ' ಎಂಬ ಸೂತ್ರದಿಂದಲೇ ಪರಿಹರಿಸಿ-ದ್ದಾಯಿತು. ಪುನಃ ಇಲ್ಲಿ ಅದನ್ನೇ ಶಂಕಿಸುವುದು ತಪ್ಪಲ್ಲವೇ? ಎಂದು ಪ್ರಶ್ನಿಸಬಾರದು. ಹಾಗಾದಲ್ಲಿ ಸಕಲಜೀವರಿಗೆ ಬ್ರಹ್ಮನಿಂದ ಐಕ್ಯವನ್ನು ಒಪ್ಪಿದ್ದರಿಂದ ಜೀವನ ಲಿಂಗ ಹಾಗೂ ಮುಖ್ಯಪ್ರಾಣನ ಲಿಂಗವೂ ಸಹ ಬ್ರಹ್ಮನಲ್ಲಿ ಬರುತ್ತದೆಂದು ಸಮನ್ವಯ ಮಾಡಬಹುದು. ಆದ್ದರಿಂದ ವ್ಯಾವಹಾರಿಕಭೇದದಿಂದಷ್ಟೇ ಇಲ್ಲಿ ಶಂಕಿಸಿದ್ದಾರೆಂದು ತಿಳಿಯಬೇಕು. ಬ್ರಹ್ಮನನ್ನು ಪ್ರಾಣಾದಿಶಬ್ದದಿಂದ ಉಪಾಸನೆ ಮಾಡಬೇಕೆಂಬ ಶಂಕೆಯೂ ಸಹ ಎರಡೂ ಕಡೆ ಸಮಾನವಾಗಿದೆ.

ಪೂರ್ವಪಕ್ಷಿಯು ಮೂರುವಿಧವಾದ ಉಪಾಸನೆಯನ್ನು ಅಂಗೀಕರಿಸಿದ್ದರಿಂದ ಅವನಿಗೆ ನಿಮ್ಮ ಆಕ್ಷೇಪ ಇಷ್ಟಾಪತ್ತಿಯಾಗಿದೆಯೆಂದು 'ಇಷ್ಟಾಪತ್ತೇಃ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

ಅದ್ವೈತಿಗಳು ಹೇಳುವ ಸೂತ್ರಾರ್ಥವನ್ನು ಈ ಹಿಂದೆ ವಿವರಿಸಿದ್ದರೂ ಸ್ಪಷ್ಟತೆಗಾಗಿ ಪುನಃ ಇಲ್ಲಿ ವಿವರಿಸಲಾಗಿದೆ.

''ಜೀವಮುಖ್ಯಪ್ರಾಣಲಿಂಗಾನ್ನೇತಿ ಚೇನ್ನ ಉಪಾಸಾತ್ ತ್ರೈವಿಧ್ಯಾತ್ ಆಶ್ರಿತತ್ವಾತ್ ಇಹ ತದ್ಯೋಗಾತ್''

ನ ವಾಚಂ ವಿಜಿಜ್ಞಾಸೀತ ವಕ್ತಾರಂ ಹಿ ವಿದ್ಯಾತ್ - ವಾಗಿಂದ್ರಿಯವನ್ನು ಉಪಾಸಿಸಬಾರದು; ವಕ್ತೃವಾದ ಜೀವನನ್ನೇ ಉಪಾಸಿಸಬೇಕು ಎಂದು ಜೀವನ ಲಿಂಗವು ಕೇಳಿಸುತ್ತಿದೆ. 'ಅಥ ಖಲು ಪ್ರಾಣ ಏವ ಪ್ರಜ್ಞಾತ್ಮಾ ಇದಂ ಶರೀರಂ ಪರಿಗೃಹ್ಯ ಉತ್ಥಾಪಯತಿ' - ಪ್ರಾಣನೇ ಈ ಶರೀರವನ್ನು ಎಬ್ಬಿಸುತ್ತಾನೆಂದು ಮುಖ್ಯಪ್ರಾಣನ ಲಿಂಗವು ಕೇಳಿಸುತ್ತಿದೆ. ಇದರಂತೆ ಬ್ರಹ್ಮನ ಲಿಂಗಗಳೂ ಸಹ ಅನೇಕ ಬಾರಿ ಕೇಳಿಸುತ್ತಿವೆ. ಹೀಗೆ ಮೂವರ

ಪ್ರಸ್ತಾಪವಿರುವುದರಿಂದ ಈ ಪ್ರಕರಣದಿಂದ ಬ್ರಹ್ಮ, ವಾಯು, ಜೀವ ಮೂವರೂ ಸಹ ಪ್ರತಿಪಾದ್ಯರಾಗುತ್ತಾರೆ. ನ = ಬ್ರಹ್ಮನೊಬ್ಬನೇ ಪ್ರಕರಣಪ್ರತಿಪಾದ್ಯನಲ್ಲ. ಇಷ್ಟು ಪೂರ್ವಪಕ್ಷ.

ಇತಿ ಚೇನ್ನ = ಇದು ತಪ್ಪು. ಹಾಗಾದಲ್ಲಿ ಉಪಾಸಾತ್ ತ್ರೈವಿಧ್ಯಾತ್ = ಒಂದೇ ಪ್ರಕರಣದಲ್ಲಿ ಮೂವರಿಗೆ ಉಪಾಸನೆಯನ್ನು ಹೇಳುವ ಪ್ರಸಂಗ ಬರುತ್ತದೆ. ಆದ್ದರಿಂದ ಉಪಕ್ರಮ ಉಪಸಂಹಾರಗಳಲ್ಲಿ ಬ್ರಹ್ಮನೇ ಪ್ರತಿಪಾದ್ಯನಾದ್ದರಿಂದ ಬ್ರಹ್ಮನೇ ಪ್ರಾಣಶಬ್ದವಾಚ್ಯನು. ಆಶ್ರಿತತ್ವಾತ್ = 'ಪ್ರಾಣಸ್ಯ ಪ್ರಾಣಂ' ಇತ್ಯಾದಿ ವಾಕ್ಯಗಳಲ್ಲಿ ಬ್ರಹ್ಮಲಿಂಗಗಳಿರುವುದರಿಂದ ಪ್ರಾಣಶಬ್ದಕ್ಕೆ ಬ್ರಹ್ಮಪರತ್ವವನ್ನು ಹೇಳಿರುವುದರಿಂದ, ಇಹ ತದ್ಯೋಗಾತ್ = ಇಲ್ಲಿಯೂ ಬ್ರಹ್ಮನ ಧರ್ಮಗಳು ಪ್ರಾಣನಲ್ಲಿ ಕೇಳಿಸುತ್ತಿರುವುದರಿಂದ ಬ್ರಹ್ಮನೇ ಪ್ರಾಣಶಬ್ದವಾಚ್ಯನು.

### ಸಾರ

ಅದ್ವೈತಿಗಳ ಕೊನೆಯ ಸೂತ್ರ ವ್ಯಾಖ್ಯಾನ ಹೀಗಿದೆ - ಪ್ರಾಣಶಬ್ದವಿರುವ ಪ್ರಕರಣದಲ್ಲಿ ಪ್ರಾಣ, ಜೀವ, ಬ್ರಹ್ಮ ಮೂವರ ಲಿಂಗಗಳೂ ಕೇಳಿಸುತ್ತಿರುವುದರಿಂದ, ಪ್ರಾಣಶಬ್ದದಿಂದ ಮೂವರು ಪ್ರತಿಪಾದ್ಯರಾಗುತ್ತಾರೆಂದು ಪೂರ್ವಪಕ್ಷಮಾಡಿ ಉಪಕ್ರಮ ಉಪಸಂಹಾರಗಳಲ್ಲಿ ಬ್ರಹ್ಮನ ಪ್ರಸ್ತಾಪವಿರುವುದರಿಂದ ಬ್ರಹ್ಮನೇ ಪ್ರಾಣಶಬ್ದವಾಚ್ಯನೆಂದು ಸಿದ್ಧಾಂತ ಮಾಡಿದ್ದಾರೆ. ಒಂದು ವೇಳೆ ಮೂವರ ಉಪಾಸನೆಯನ್ನು ಒಪ್ಪಿದರೆ ಉಪಸನಾತ್ರೈವಿಧ್ಯ ದೋಷವು ಬರುತ್ತದೆಂಬ ಯುಕ್ತಿಯನ್ನು ಹೇಳಿದ್ದಾರೆ.

ಇವರ ಈ ವ್ಯಾಖ್ಯಾನದಲ್ಲಿಯೂ ಹುರುಳಿಲ್ಲ. ಸೂತ್ರದಲ್ಲಿ ಪ್ರಸಂಗಶಬ್ದವೇ ಕಾಣಿಸುತ್ತಿಲ್ಲ. ಆದ್ದರಿಂದ ಉಪಾಸನಾತ್ರೈವಿಧ್ಯವನ್ನು ದೋಷವೆಂದು ಆಕ್ಷೇಪಿಸಲಾಗದು. ಹಾಗೆ ಆಕ್ಷೇಪಿಸುವುದು ಪೂರ್ವಪಕ್ಷಿಗೆ ಅನಿಷ್ಟವಲ್ಲ.

* * * *

## ಭಾಮತಿಯ ವಿಮರ್ಶೆ

तात्पर्यचन्द्रिका

**ननूपक्रमोपसंहारैकरूप्यादेकवाक्यताऽवगता । अत एव भामत्यां भाष्यमुल्लङ्घ्य त्रिविधोपासनापरत्वेन वाक्यभेदेन पूर्वपक्षं प्रापय्य, तदेकवाक्यताप्रतीतेः ब्रह्ममात्रपरत्वमिति सिद्धान्तितमिति चेत्, उच्यते –**

**बुद्ध्यादिपरमत्रैव सा प्रज्ञेत्यादिकं यथा ।**
**मामुपास्वेत्यादिवाक्यं तथाऽस्त्विन्द्रादिगोचरम् ॥**

**अत्रैव ब्रह्मपरवाक्यसमुदाये यथा – ''यो वै प्राणः सा प्रज्ञा या प्रज्ञा स प्राणः सह ह्येतावस्मिन् शरीरे वसतः सहोत्क्रमतः'' इत्येकदेशो ज्ञानक्रियाशक्त्या-**

**श्रयबुद्धिप्राणपरः, सिद्धान्तेऽपि प्रज्ञाप्राणशब्दयोरुत्क्रमणादिलिङ्गैर्बुद्धिवायुपरत्वात्, तथा पूर्वपक्षेऽपीन्द्रादिलिङ्गस्वारस्यार्थं तत्तद्वाक्यमिन्द्रादिपरमस्तु ।**

**'आश्रितत्वात्' इत्यत्र च प्रकृतत्रैविध्यस्यैव अन्वयसम्भवे 'ब्रह्मपरताया' इत्यध्याहारो न युक्तः । 'तद्योगात्' इति च सर्वनाम्नः सन्निकृष्टत्रैविध्यपरत्वसम्भवे विप्रकृष्टब्रह्मलिङ्गपरत्वमयुक्तम् । 'तद्योगात्' इत्यस्य 'अनुगमात्' इत्यनेन पुनरुक्तिश्च ।**

ಆಕ್ಷೇಪ - ಉಪಕ್ರಮ ಹಾಗೂ ಉಪಸಂಹಾರಗಳಲ್ಲಿ ಬ್ರಹ್ಮನೇ ಪ್ರತಿಪಾದ್ಯನಾದ್ದರಿಂದ ಸಂಪೂರ್ಣ ಪ್ರಕರಣಕ್ಕೆ ಏಕವಾಕ್ಯತ್ವ ತಿಳಿಯುತ್ತಿದೆ. ಆದ್ದರಿಂದಲೇ ಭಾಮತಿಯಲ್ಲಿ ಶಂಕರಭಾಷ್ಯವನ್ನು ಮೀರಿದ ಅರ್ಥವು ಹೇಳಲ್ಪಟ್ಟಿದೆ - ಜೀವ, ಪ್ರಾಣ, ಬ್ರಹ್ಮರ ಉಪಾಸನಾ ಪರವಾದ್ದರಿಂದ ವಾಕ್ಯಭೇದದೋಷ-ಬರುತ್ತದೆಂದು ಪೂರ್ವಪಕ್ಷವನ್ನು ಮಾಡಿ, ಏಕವಾಕ್ಯತ್ವವು ಉಪಕ್ರಮ ಉಪಸಂಹಾರಗಳಿಂದ ತಿಳಿಯುವುದರಿಂದ ಕೇವಲ ಬ್ರಹ್ಮಪರತ್ವವನ್ನು ಅಂಗೀಕರಿಸಬೇಕೆಂದು ಸಿದ್ಧಾಂತ ಮಾಡಲಾಗಿದೆ. ಆದ್ದರಿಂದ ಪೂರ್ವಪಕ್ಷಿಗೆ ತ್ರಿವಿಧೋಪಾಸ್ಯತ್ವವನ್ನು ನಾವು ಆಕ್ಷೇಪಿಸುತ್ತಲೇ ಇಲ್ಲ. ಹೊರತಾಗಿ, ವಾಕ್ಯಭೇದದೋಷವನ್ನು ಆಕ್ಷೇಪಿಸುತ್ತಿದ್ದೇವೆ.

ಸಮಾಧಾನ - ಭಾಮತಿಯ ಈ ಸಮರ್ಥನೆಯೂ ಸಹ ಅಸಾಧುವಾಗಿದೆ.

ಬುದ್ಧ್ಯಾದಿಪರಮತ್ರೈವ ಸಾ ಪ್ರಜ್ಞೇತ್ಯಾದಿಕಂ ಯಥಾ ।
ಮಾಮುಪಾಸ್ವೇತ್ಯಾದಿವಾಕ್ಯಂ ತಥಾಽಸ್ತ್ವಿಂದ್ರಾದಿಗೋಚರಮ್ ॥

ಬ್ರಹ್ಮಪರವಾಕ್ಯಸಮುದಾಯದಲ್ಲಿಯೇ 'ಸಾ ಪ್ರಜ್ಞಾ' ಎಂಬ ಶ್ರುತಿಗೆ ಬುದ್ಧ್ಯಾದಿ ಪರತ್ವವನ್ನು ಅದ್ವೈತಿಗಳೇ ಒಪ್ಪಿದಂತೆ 'ಮಾಮುಪಾಸ್ವ' ಇತ್ಯಾದಿ ವಾಕ್ಯವೂ ಸಹ ಬ್ರಹ್ಮಪ್ರಕರಣದಲ್ಲಿದ್ದರೂ ಇಂದ್ರನನ್ನು ಹೇಳಬಹುದು.

ಇದೇ ಪರಬ್ರಹ್ಮಪರವಾದ ವಾಕ್ಯಗಳ ಸಮುದಾಯದಲ್ಲಿ ಕೆಲವು ವಾಕ್ಯಗಳಿಗೆ ಅದ್ವೈತಿಗಳು ಬ್ರಹ್ಮನನ್ನು ಬಿಟ್ಟು ಬೇರೆ ಅರ್ಥಪ್ರತಿಪಾದಕತ್ವವನ್ನು ಒಪ್ಪಿದ್ದಾರೆ. ಉದಾ: 'ಯೋ ವೈ ಪ್ರಾಣಃ ಸಾ ಪ್ರಜ್ಞಾ ಯಾ ಪ್ರಜ್ಞಾ ಸ ಪ್ರಾಣಃ ಸಹ ಹ್ಯೇತಾವಸ್ಮಿನ್ ಶರೀರೇ ವಸತಃ ಸಹೋತ್ಕ್ರಾಮತಃ'' ಎಂಬ ವಾಕ್ಯದ ಏಕದೇಶಕ್ಕೆ ಜ್ಞಾನಶಕ್ತಿಗೆ ಆಶ್ರಯವಾದ ಬುದ್ಧಿಪರತ್ವವನ್ನು ಕ್ರಿಯಾಶಕ್ತಿಗೆ ಆಶ್ರಯವಾದ ಪ್ರಾಣಪರತ್ವವನ್ನು ಒಪ್ಪಿರುತ್ತಾರೆ. ಸಿದ್ಧಾಂತದಲ್ಲಿಯೂ ಸಹ ಉತ್ಕ್ರಮಣಾದಿ ಲಿಂಗಗಳಿಂದ ಪ್ರಜ್ಞಾಶಬ್ದಕ್ಕೆ ಬುದ್ಧಿಪರತ್ವವನ್ನು ಪ್ರಾಣಶಬ್ದಕ್ಕೆ ವಾಯುಪರತ್ವವನ್ನು ಒಪ್ಪಿರುತ್ತಾರೆ. ಅದರಂತೆ ಪ್ರಕೃತ ಇಂದ್ರಪ್ರತರ್ದನರ ಸಂವಾದ ಪ್ರಕರಣವು ಸಂಪೂರ್ಣವಾಗಿ ಬ್ರಹ್ಮಪರವಾದರೂ ಸಹ ಇಂದ್ರ ಹಾಗೂ ಜೀವರ ಲಿಂಗಗಳು ಕೇಳಿಸುತ್ತಿರುವುದರಿಂದ, ಆಯಾ ಲಿಂಗಗಳ ಸ್ವಾರಸ್ಯಕ್ಕಾಗಿ ಆಯಾ ವಾಕ್ಯೈಕದೇಶಗಳಿಗೆ ಇಂದ್ರಾದಿ ಪರತ್ವವನ್ನು ಒಪ್ಪಿದರೆ ಏನು ತಪ್ಪು?

ಮತ್ತು 'ಆಶ್ರಿತತ್ವಾತ್' ಎಂಬ ಪದಕ್ಕೆ ಮಾಡಿದ ವ್ಯಾಖ್ಯಾನವೂ ಸರಿಯಿಲ್ಲ. ಪ್ರಕೃತವಾದ ಉಪಾಸನಾ ತ್ರೈವಿಧ್ಯದಿಂದಲೇ ಅನ್ವಯವನ್ನು ಹೇಳಲು ಬರುವಾಗ ಇಲ್ಲದ ಬ್ರಹ್ಮಪರತ್ವವನ್ನು ಅಧ್ಯಾಹಾರ ಮಾಡಿ ಅನ್ವಯ ಹೇಳುವುದು ತಪ್ಪಾಗುತ್ತದೆ.

'ತದ್ಯೋಗಾತ್' ಎಂಬ ಪದದ ವ್ಯಾಖ್ಯಾನವು ತಪ್ಪು. 'ತತ್' ಎಂಬ ಸರ್ವನಾಮಪದದಿಂದ ಸನ್ನಿಹಿತವಾದ 'ಉಪಾಸಾತ್ರೈವಿಧ್ಯ' ಎಂಬರ್ಥವನ್ನೇ ಹೇಳಲು ಬರುವಾಗ ದೂರದಲ್ಲಿರುವ ಬ್ರಹ್ಮ-ಲಿಂಗಪರತ್ವವನ್ನು ಹೇಳುವುದು ತಪ್ಪಾಗುತ್ತದೆ. ಮತ್ತು 'ಅನುಗಮಾತ್' ಎಂಬ ಪದದ ಅರ್ಥವನ್ನೇ 'ತದ್ಯೋಗಾತ್' ಎಂಬ ಪದವು ಹೇಳುತ್ತಿರುವುದರಿಂದ ಪುನರುಕ್ತಿದೋಷವೂ ಬರುತ್ತಿದೆ.

### ಕಠಿಣಪದಾರ್ಥ

ಭಾಷ್ಯಮುಲ್ಲಂಘ್ಯ = ಶಂಕರಭಾಷ್ಯಕ್ಕೆ ವಿರುದ್ಧವಾಗಿ, ಬುದ್ಧಿ = ಜ್ಞಾನಶಕ್ತಿಗೆ ಆಶ್ರಯವಾದದ್ದು, ಪ್ರಾಣ = ಕ್ರಿಯಾಶಕ್ತಿಗೆ ಆಶ್ರಯವಾದದ್ದು, ತತ್ತದ್ವಾಕ್ಯಂ = ಇಂದ್ರಾದಿ ಪ್ರತಿಪಾದಕ ವಾಕ್ಯವು. ಏಕದೇಶಃ = ವಾಕ್ಯದ ಒಂದು ಭಾಗ. ಯಥಾ = ಜ್ಞಾನಶಕ್ತಿಗೆ ಆಶ್ರಯವಾದ ಬುದ್ಧಿಯನ್ನು ಕ್ರಿಯಾಶಕ್ತಿಗೆ ಆಶ್ರಯವಾದ ಪ್ರಾಣವನ್ನು ಹೇಗೆ ಪ್ರತಿಪಾದಿಸುತ್ತದೋ.

**प्रकाशः** – ननु नायं दोषः, उपासात्रैविध्यस्य पूर्वपक्षयुक्तित्वेन सिद्धान्ते तत्प्रसङ्गस्यानापाद्यत्वात् । किन्तु **''मामेव विजानीहि''** इत्युपक्रम्य **''प्राणोऽऽस्मि प्रज्ञात्मा''** इत्युक्त्वा **''स एष प्राणः''** इत्युपसंहारेण ब्रह्मण्यवगतेनैकवाक्यत्वेनेति वाचस्पतिमतमाशङ्क्य निरस्यति – **नन्विति** ॥ विवृतं चैतत्प्रागस्माभिः । एकवाक्यत्वावगमेऽपि न पूर्वपक्षोपमर्दः सम्भवतीति भावेनाह – **उच्यत इति** ॥

पूर्वार्धं व्याचष्टे – **अत्रैवेति** ॥ **'एकदेशः'** किञ्चिद्वाक्यम् । ज्ञानशक्त्याश्रयबुद्धेः क्रियाशक्त्याश्रयप्राणस्य च प्रतिपादकं यथेत्यर्थः । तत्र विगानमाह – **सिद्धान्तेऽपीति** ॥ उत्तरार्धं व्याख्याति – **तथेति** ॥ सूत्रखण्डार्थेऽप्यनुपपत्तिमाह – **आश्रितत्वादिति** ॥ उपलक्षणं चैतत्, 'अन्यत्र' इत्यस्याप्यध्याहार इत्यपि ध्येयम् ॥ **विप्रकृष्टेति** ॥ 'अनुगमात्' इत्यनेनोक्तेत्यर्थः ॥ **पुनरुक्तिरिति** ॥ हिततमत्वादिलिङ्गपर्यालोचनया ब्रह्मत्वावगमादिति व्याख्यातत्वादिति भावः ।

ವಿವರಣೆ - ಭಾಮತಿ ವ್ಯಾಖ್ಯಾನ - ಪೂರ್ವಪಕ್ಷಿಗಳಿಗೆ ಇಷ್ಟಾಪತ್ತಿಯನ್ನು ಉತ್ತರಿಸಲಾಗದು. ಏಕೆಂದರೆ ಉಪಸಾತ್ರೈವಿಧ್ಯವನ್ನು ಪೂರ್ವಪಕ್ಷಯುಕ್ತಿಯನ್ನಾಗಿ ಅದರ ಆಕ್ಷೇಪವನ್ನು ಸಿದ್ಧಾಂತದ ಯುಕ್ತಿಯನ್ನಾಗಿ ನಾವು ಹೇಳುತ್ತಲೇ ಇಲ್ಲ; ಹೊರತಾಗಿ, ''ಮಾಮೇವ ವಿಜಾನೀಹಿ'' ಎಂದು ಪ್ರಾರಂಭವಾದ ಸಂವಾದ ಪ್ರಕರಣವು ''ಪ್ರಾಣೋऽಸ್ಮಿ ಪ್ರಜ್ಞಾತ್ಮಾ'' ಎಂದು ಹೇಳಿ ''ಸ ಏಷ ಪ್ರಾಣಃ'' ಇತ್ಯಾದಿಯಾಗಿ ಮುಕ್ತಾಯವಾಗಿದೆ. ಈ

ಪ್ರಕರಣದ ಪ್ರಾರಂಭ ಮತ್ತು ಕೊನೆಯನ್ನು ಗಮನಿಸಿದಾಗ ಬ್ರಹ್ಮನೊಬ್ಬನೇ ಪ್ರತಿಪಾದ್ಯನೆಂದು ಹೇತುವಾಕ್ಯತ್ವವು ತಿಳಿಯುತ್ತದೆ. ಆದ್ದರಿಂದ ಅನೇಕರು ಪ್ರತಿಪಾದ್ಯರಾದಲ್ಲಿ ವಾಕ್ಯಭೇದದೋಷ ಬರುತ್ತದೆ.

ನಿರಾಕರಣೆ - ವಾಚಸ್ಪತಿಯ ಈ ಸಮರ್ಥನೆಯೂ ಸಾಧುವಲ್ಲ. ಪ್ರಕರಣಕ್ಕೆ ಏಕವಾಕ್ಯತ್ವವನ್ನು ಸಮರ್ಥಿಸಿದರೂ ಪೂರ್ವಪಕ್ಷವು ನಿರಾಕೃತವಾಗುವುದಿಲ್ಲವೆಂಬ ಅಭಿಪ್ರಾಯದಿಂದ 'ಉಚ್ಯತೇ' ಎಂಬ ವಾಕ್ಯವು ಹೊರಟಿದೆ. ಗ್ರಂಥಕಾರರೇ ರಚಿಸಿದ ಶ್ಲೋಕದ ಪೂರ್ವಾರ್ಧವನ್ನು ಸ್ವತಃ ತಾವೇ 'ಅತ್ರೈವ' ಎಂಬ ವಾಕ್ಯದಿಂದ ವಿವರಿಸುತ್ತಿದ್ದಾರೆ. ಉತ್ತರಾರ್ಧವನ್ನು 'ತತ್ರ' ಎಂಬ ವಾಕ್ಯದಿಂದ ವಿವರಿಸುತ್ತಿದ್ದಾರೆ. ಸೂತ್ರದಿಂದ ಒಂದೊಂದು ಪದಗಳ ವ್ಯಾಖ್ಯಾನವೂ ಸಹ ಅನುಪಪನ್ನವಾಗಿವೆಯೆಂದು 'ಆಶ್ರಿತತ್ವಾತ್' ಎಂಬ ವಾಕ್ಯದಿಂದ ನಿರೂಪಿಸುತ್ತಿದ್ದಾರೆ. ಉಪಲಕ್ಷಣಯಾ 'ಅನ್ಯತ್ರ' ಎಂಬ ಪದದ ಅಧ್ಯಾಹಾರವನ್ನು ಮಾಡಬೇಕಾಗುತ್ತದೆಂದು ತಿಳಿಯಬೇಕು. 'ವಿಪ್ರಕೃಷ್ಟ' ಎಂಬ ಪದಕ್ಕೆ 'ಅನುಗಮಾತ್' ಎಂಬುದಾಗಿ ದೂರದಲ್ಲಿ ಹೇಳಿದ ಎಂದರ್ಥ. 'ಪುನರುಕ್ತಿದೋಷ' ಏಕೆಂದರೆ ಹಿತತಮತ್ವಾದಿಲಿಂಗಾದಿಗಳನ್ನು ಪರ್ಯಾಲೋಚಿಸಿದಾಗ ಬ್ರಹ್ಮತ್ವವು ತಿಳಿಯುತ್ತದೆಂದು 'ಅನುಗಮಾತ್' ಎಂಬ ಮೊದಲನೇ ಸೂತ್ರದಲ್ಲಿ ಸಮರ್ಥಿಸಿದ್ದಾಗಿದೆ. ಪುನಃ ಇಲ್ಲಿಯೂ ಅದನ್ನೇ ಸಮರ್ಥಿಸಿದರೆ ಪುನರುಕ್ತಿ ಬರುತ್ತದೆ.

## ಸಾರ

ಇಷ್ಟಾಪತ್ತಿಯೆಂಬ ದೊಡ್ಡದೋಷವನ್ನು ಪರಿಹರಿಸಿಕೊಳ್ಳಲು, ಶಂಕರಭಾಷ್ಯದಲ್ಲಿಲ್ಲದ ಬೇರೆ ಅರ್ಥವನ್ನೇ ವಾಚಸ್ಪತಿಯು ಸಮರ್ಥಿಸಲು ಪ್ರಯತ್ನಿಸಿದೆ. ಇಂದ್ರಪ್ರತರ್ದನರ ಸಂವಾದಪ್ರಕರಣವು ಕೇವಲ ಬ್ರಹ್ಮಪರವಾಗಿದೆ-ಯೆಂದು ಉಪಕ್ರಮ ಉಪಸಂಹಾರಗಳಿಂದ ತಿಳಿಯುತ್ತಿದೆ. ಒಂದು ವೇಳೆ ಜೀವ ಪ್ರಾಣಪರತ್ವಾದಿಗಳನ್ನು ಅಂಗೀಕರಿಸಿದಲ್ಲಿ ಕೇವಲ ಬ್ರಹ್ಮಪರತ್ವವೆಂಬ ಏಕವಾಕ್ಯತ್ವವು ಭಗ್ನವಾಗಿ ವಾಕ್ಯಭೇದದೋಷ ಬರುತ್ತದೆ. ಹೀಗೆ ಪೂರ್ವಪಕ್ಷಿಯನ್ನು ಕುರಿತು ನಾವು ಆಕ್ಷೇಪಿಸುತ್ತೇವೆ. ಪೂರ್ವಪಕ್ಷಿಗೆ ವಾಕ್ಯಭೇದವು ಇಷ್ಟವಾಗದ ಕಾರಣ ಇಷ್ಟಾಪತ್ತಿಯೆಂದು ಉತ್ತರಿಸಲಾರ.

ಭಾಮತಿಯ ಈ ನಿಲುವು ಸರಿಯಿಲ್ಲ. ಏಕೆಂದರೆ ಸ್ವತಃ ಅದ್ವೈತಿಗಳೇ ಪ್ರಾಣ ಪ್ರಕರಣವು ಸಂಪೂರ್ಣ ಬ್ರಹ್ಮನನ್ನು ಪ್ರತಿಪಾದಿಸಿದರೂ ಕೆಲವು ವಾಕ್ಯಗಳಿಗೆ ಅನ್ಯಪರತ್ವವನ್ನು ಒಪ್ಪಿದ್ದಾರೆ. 'ಯೋ ವೈ ಪ್ರಾಣಃ' ಇತ್ಯಾದಿ ಶ್ರುತಿಯಲ್ಲಿ ಬುದ್ಧಿಪ್ರಾಣಪರತ್ವವನ್ನು ಒಪ್ಪಿರುವುದು ಸ್ಪಷ್ಟವಾಗಿ ಕಾಣಸುತ್ತದೆ. ಅದರಂತೆ ಪ್ರಕೃತದಲ್ಲಿಯೂ ಏಕವಾಕ್ಯತ್ವವಿದ್ದರೂ ಇಂದ್ರಪ್ರಾಣಾದಿಪರತ್ವವನ್ನು ವಾಕ್ಯದ ಏಕದೇಶಕ್ಕೆ ಒಪ್ಪುವುದರಲ್ಲಿ ಏನೂ ತಪ್ಪಿಲ್ಲ. ಆದ್ದರಿಂದ ಇವರು ಹೇಳಿದ ಯುಕ್ತಿಯಿಂದ ಪೂರ್ವಪಕ್ಷಿಯ ನಿರಾಕರಣೆಯೇ ಆಗಲಾರದು.

ಮತ್ತು ಅದ್ವೈತಿಗಳು ಸೂತ್ರದಲ್ಲಿರುವ 'ಆಶ್ರಿತತ್ವಾತ್' ಎಂಬ ಪದಕ್ಕೆ ಪ್ರಕೃತವಾದ ತ್ರೈವಿಧ್ಯದಲ್ಲಿ ಅನ್ವಯಮಾಡದೆ ಅಧ್ಯಾಹೃತವಾದ ಬ್ರಹ್ಮಪರತ್ವದಲ್ಲಿ ಅನ್ವಯ ಮಾಡುತ್ತಾರೆ. 'ತದ್ಯೋಗಾತ್' ಎಂಬ ಪದಕ್ಕೂ ವ್ಯಾಖ್ಯಾನಿಸುತ್ತಾ ಸನ್ನಿಹಿತವಾದ ತ್ರೈವಿಧ್ಯಪರತ್ವವನ್ನು ಬಿಟ್ಟು ಸನ್ನಿಹಿತವಲ್ಲದ ಬ್ರಹ್ಮಲಿಂಗಪರತ್ವವನ್ನು ಹೇಳುತ್ತಾರೆ. ಇದೆಲ್ಲವೂ ಅತ್ಯಂತ ಬಾಲಿಶವಾದ ವ್ಯಾಖ್ಯಾನವಾಗಿದೆ.

* * * *

ಪರಿಪೂರ್ಣಚಂದ್ರಿಕಾ

तात्पर्यचन्द्रिका

**इतरे तु – प्राणधर्मेण बुद्धिधर्मेण स्वधर्मेण च ब्रह्मोपासायास्त्रैविध्यात् ब्रह्मवाक्येऽपि जीवमुख्यप्राणलिङ्गं न विरुद्धमिति व्याचक्षते । तन्न, अन्यधर्मेणान्योपासने ब्रह्मधर्मादिना जीवोपासायाः त्रैविध्यात् जीववाक्येऽपि ब्रह्मलिङ्गं न विरुद्धमिति वैपरीत्यप्रसङ्गात् ।**

ಅನುವಾದ - ಅಂತಿಮಸೂತ್ರವನ್ನು ಪ್ರಾಚೀನವೃತ್ತಿಕಾರರು ಹೀಗೆ ವ್ಯಾಖ್ಯಾನಿಸಿದ್ದಾರೆ. ಸಂಪೂರ್ಣ-ಪ್ರಕರಣದಿಂದ ಬ್ರಹ್ಮನೇ ಪ್ರತಿಪಾದ್ಯನು. ಇಂತಹ ಬ್ರಹ್ಮನನ್ನು ಪ್ರಾಣನ ಧರ್ಮಗಳಿಂದ, ಬುದ್ಧಿಯ ಧರ್ಮಗಳಿಂದ ಮತ್ತು ತನ್ನ ಧರ್ಮಗಳಿಂದ ಉಪಾಸನೆ ಮಾಡಬೇಕು. ಹೀಗೆ ಉಪಾಸಾತ್ರೈವಿಧ್ಯವನ್ನು ತಿಳಿಯಬೇಕಾದ್ದರಿಂದ ಬ್ರಹ್ಮಪ್ರಕರಣವಾಗಿದ್ದರೂ ಜೀವಲಿಂಗಗಳಿಂದಾಗಲಿ, ಮುಖ್ಯಪ್ರಾಣಲಿಂಗ-ಗಳಿಂದಾಗಲಿ ವಿರೋಧ ಬರುವುದಿಲ್ಲ.

ನಿರಾಕರಣೆ - ಮತ್ತೊಬ್ಬರಲ್ಲಿರುವ ಧರ್ಮದಿಂದ ಇನ್ನೊಬ್ಬನನ್ನು ಉಪಾಸನೆ ಮಾಡುವುದಾದರೆ ಜೀವಮುಖ್ಯಪ್ರಾಣರ ಲಿಂಗಗಳಿಂದ ಬ್ರಹ್ಮನನ್ನೇ ಏಕೆ ಉಪಾಸನೆ ಮಾಡಬೇಕು? ಬ್ರಹ್ಮನಲ್ಲಿರುವ ಧರ್ಮಗಳಿಂದಲೇ ಜೀವನನ್ನು ಉಪಾಸನೆ ಮಾಡಬಹುದಲ್ಲವೆ? ಹೀಗೆ ಹೇಳಿದಾಗಲೂ ಜೀವಪ್ರಕರಣದಲ್ಲಿ ಬ್ರಹ್ಮನ ಲಿಂಗಗಳಿಂದ ವಿರೋಧ ಬರುವುದಿಲ್ಲ. ಹೀಗೆ ನಾವು ವಿಪರೀತವಾಗಿ ಆಕ್ಷೇಪಿಸಿದರೆ ಇವರಿಂದ ಉತ್ತರಿಸಲಾಗದು.

**प्रकाशः** – एवं भाष्याभिमतं निरस्येदानीं यत्प्राचां वृत्तिकृतां मतं 'अथवा' इत्यादिना परभाष्य एवोपन्यस्तं, तदनूद्य निरस्यति – **इतरे त्विति** ॥ "**शरीरं परिगृह्योत्थापयति**" इति प्राणधर्मेण, "**प्रज्ञया वाचं समारुह्य वाचा सर्वाणि नामान्याप्नोति**" इति प्रज्ञाशब्दितबुद्धिधर्मेण, क्रियाज्ञानशक्तिद्वयाश्रयणप्राणबुद्धि-रूपोपाधिधर्मेणेति यावत्, "**प्राण एव प्रज्ञात्माऽजरः**" इत्यादि ब्रह्मधर्मेण चैकस्यैव ब्रह्मण उपासनात्रैविध्यात् अन्यत्र "**मनोमयः प्राणशरीरो भारूपः**" इत्यादौ उपाधिधर्मेण ब्रह्मण उपासनाया आश्रितत्वादिहापि तद्योगादिति यथाश्रुतमेव, नतु प्रसङ्गशब्दाध्याहार इत्यर्थः । पूर्वं प्राणस्यैकमुपासनं अपरं जीवस्य, अपरं ब्रह्मण इत्युपासनात्रैविध्येन वाक्यभेदप्रसङ्गो दूषणमुक्तं पूर्वपक्षिणं प्रति । इह तु ब्रह्मण एकस्येवोपासनात्रयविशिष्टस्य विधानान्न वाक्यभेद इति भावः ।

**यद्यपीदं मतं भामत्यामेव वाक्यभेदप्रसङ्गेन दूषितं, तथाऽपि प्रबलदोषकथनायैवमुपन्यासः ॥ जीवेति ॥ बुद्ध्यवच्छिन्नस्यैव जीवत्वादिति भावः ॥**

ವಿವರಣೆ - ಇಲ್ಲಿಯ ತನಕ ಶಂಕರಭಾಷ್ಯಕ್ಕೆ ಅಭಿಮತವಾದ ವ್ಯಾಖ್ಯಾನವನ್ನು ನಿರಾಕರಿಸಿದ್ದಾಯಿತು. ಈಗ ಶಂಕರಭಾಷ್ಯದಲ್ಲಿಯೇ ಉಲ್ಲೇಖಿಸಿದ ವೃತ್ತಿಕಾರರಿಗೆ ಅಭಿಪ್ರೇತವಾದ ಮತವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ. 'ಇತರೇ ತು' ಇತ್ಯಾದಿಯಾಗಿ.

''ಶರೀರಂ ಪರಿಗೃಹ್ಯೋತ್ಥಾಪಯತಿ'' ಎಂಬ ಪ್ರಾಣನ ಧರ್ಮದಿಂದ 'ಪ್ರಜ್ಞಯಾ ವಾಚಂ ಸಮಾರುಹ್ಯ ವಾಚಾ ಸರ್ವಾಣಿ ನಾಮಾನ್ಯಾಪ್ನೋತಿ' ಎಂಬ ಪ್ರಜ್ಞಾ ಶಬ್ದದ ಅರ್ಥವಾದ ಬುದ್ಧಿಯ ಧರ್ಮದಿಂದ ಕ್ರಿಯಾಶಕ್ತಿ ಹಾಗೂ ಜ್ಞಾನಶಕ್ತಿಗಳಿಗೆ ಆಶ್ರಯವಾದ ಪ್ರಾಣಬುದ್ಧಿಯೆಂಬ ಉಪಾಧಿಯ ಧರ್ಮದಿಂದ ''ಪ್ರಾಣ ಏವ ಪ್ರಜ್ಞಾತ್ಮಾಽಜರಃ'' ಇತ್ಯಾದಿಯಾಗಿ ಬ್ರಹ್ಮನ ಧರ್ಮದಿಂದ ಒಬ್ಬನೇ ಬ್ರಹ್ಮನನ್ನು ಉಪಾಸನೆ ಮಾಡಬಹುದು. ಏಕೆಂದರೆ ''ಮನೋಮಯಃ ಪ್ರಾಣಶರೀರಃ ಭಾರೂಪಃ'' ಇತ್ಯಾದಿಯಾಗಿ ಬೇರೆಡೆ ಅನೇಕ ಉಪಾಧಿ- ಧರ್ಮಗಳಿಂದ ಒಬ್ಬನೇ ಬ್ರಹ್ಮನನ್ನು ಉಪಾಸನೆ ಮಾಡಬೇಕೆಂದು ಒಪ್ಪಿಕೊಳ್ಳಲಾಗಿದೆ. ಅದರಂತೆ ಇಲ್ಲಿಯೂ ಹೇಳಲು ಬರುತ್ತದೆಂದು ತಿಳಿಯಬೇಕು.

ಈ ರೀತಿಯಾದ ವ್ಯಾಖ್ಯಾನದಲ್ಲಿ ಪ್ರಸಂಗ ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗಿಲ್ಲ. ಏಕೆಂದರೆ ಹಿಂದೆ ಪ್ರಾಣನ ಉಪಾಸನೆ ಹಾಗೂ ಜೀವನ ಉಪಾಸನೆ ಮತ್ತು ಬ್ರಹ್ಮನ ಉಪಾಸನೆ ಎಂದು ಮೂರುವ್ಯಕ್ತಿಗಳ ಉಪಾಸನೆಯನ್ನು ಪ್ರತ್ಯೇಕವಾಗಿ ಹೇಳಿ ವಾಕ್ಯಭೇದಪ್ರಸಂಗ ಎಂಬ ದೋಷವನ್ನು ಪೂರ್ವಪಕ್ಷಿಗೆ ಹೇಳಲಾಗಿತ್ತು. ಆದರೆ ಇಲ್ಲಿ ಒಬ್ಬನೇ ಬ್ರಹ್ಮನನ್ನು ಅನೇಕ ಧರ್ಮಗಳಿಂದ ಉಪಾಸನೆ ಮಾಡಬೇಕೆಂದು ಸಮರ್ಥಿಸಿರುತ್ತಿರುವುದರಿಂದ ವಾಕ್ಯಭೇದದೋಷಕ್ಕೆ ಅವಕಾಶವಿಲ್ಲ.

ವಸ್ತುತಸ್ತು ಈ ಮತವನ್ನು ಭಾಮತಿಯಲ್ಲಿ ವಾಕ್ಯಭೇದಪ್ರಸಂಗದೋಷದಿಂದ ದೂಷಿಸಿದ್ದಾಗಿದೆ. ಆದರೂ ಸಹ ಪ್ರಬಲದೋಷವನ್ನು ಹೇಳುವುದಕ್ಕಾಗಿ ಗ್ರಂಥಕಾರರು ಈ ಮತವನ್ನು ಅನುವಾದ ಮಾಡಿ ನಿರಾಕರಿಸಿದ್ದಾರೆ.

## ಸಾರ

ಪ್ರಾಚೀನವೃತ್ತಿಕಾರರು ಅದ್ವೈತಮತಕ್ಕಿಂತ ವಿಭಿನ್ನವಾಗಿ ಅಂತಿಮಸೂತ್ರವನ್ನು ವ್ಯಾಖ್ಯಾನಿಸಲು ಪ್ರಯತ್ನಿಸಿದ್ದಾರೆ. ಸಮಗ್ರವಾದ ಇಂದ್ರಪ್ರತರ್ದನಸಂವಾದವು ಬ್ರಹ್ಮನನ್ನೇ ಪ್ರತಿಪಾದಿಸುತ್ತದೆ. ಮಧ್ಯದಲ್ಲಿ ಕೇಳಿಸುತ್ತಿರುವ ಪ್ರಾಣನ ಲಿಂಗಗಳಾಗಲೀ, ಜೀವನ ಲಿಂಗಗಳಾಗಲೀ, ಪ್ರಾಣನನ್ನು ಅಥವಾ ಜೀವನನ್ನು ಪ್ರತಿಪಾದಿಸಲಾರವು; ಹೊರತಾಗಿ ಬ್ರಹ್ಮನನ್ನೇ ಆಯಾ ಧರ್ಮಗಳಿಂದ ಉಪಾಸನೆ ಮಾಡಬೇಕೆಂದು ಹೇಳಲು ಹೊರಟಿವೆ. ಆದ್ದರಿಂದ ವಾಕ್ಯಭೇದಪ್ರಸಂಗದೋಷವಿಲ್ಲವೆಂದು ಇವರ ವಾದ. ಇದು ತಪ್ಪು.

ಏಕೆಂದರೆ, ಜೀವಪ್ರಾಣಾದಿಗಳಲ್ಲಿರುವ ಧರ್ಮದಿಂದ ಬ್ರಹ್ಮನನ್ನು ಉಪಾಸನೆ ಮಾಡುವುದಾದರೆ, ಬ್ರಹ್ಮನಲ್ಲಿರುವ ಧರ್ಮಗಳಿಂದಲೇ ಜೀವನನ್ನು, ಪ್ರಾಣನನ್ನು ಏಕೆ ಉಪಾಸನೆ ಮಾಡಬಾರದು? ಎಂಬ

ಆಕ್ಷೇಪಕ್ಕೆ ಇವರಿಂದ ಉತ್ತರಿಸಲಾಗದು. ಭಾಮತಿಕಾರನೂ ಸಹ ಈ ಮತವನ್ನು ನಿರಾಕರಿಸಿದ್ದಾನೆ. ಆದರೆ ಗ್ರಂಥಕಾರರು ಇಲ್ಲಿ ಹೇಳುತ್ತಿರುವ ದೋಷವನ್ನು ಅಲ್ಲಿ ಹೇಳಿಲ್ಲ.

* * * *

## ರಾಮಾನುಜಮತ ನಿರಾಸ

तात्पर्यचन्द्रिका

**केचित्तु चिद्विशिष्टत्वेन अचिद्विशिष्टत्वेन स्वरूपेण चेत्युपासायाः त्रैविध्यम् । नच वाक्यभेदः, "तं मामायुरमृतमित्युपास्व" इत्येकस्मिन्नेव वाक्ये 'मां' इति जीवविशिष्टायाः 'आयुः' इति प्राणविशिष्टायाः, 'अमृतं' इति स्वेन रूपेण चोपासनाया विधानादित्याहुः । तन्न, "तान् वरिष्ठः प्राण उवाच" "य एवायं मुख्यः प्राणः" "अपहतपाप्मा ह्येषः" इत्यादिश्रुत्या मुख्यप्राणस्य चेतनत्वात् तल्लिङ्ग-निर्वाहाय आचिद्विशिष्टोपासनोक्त्ययोगात् ।**

ಅನುವಾದ - ಈ ಇಂದ್ರಪ್ರತರ್ದನರ ಸಂವಾದ ಪ್ರಕರಣವು ಬ್ರಹ್ಮನನ್ನು ಚಿದ್ವಿಶಿಷ್ಟವಾಗಿ ಅಚಿದ್ವಿಶಿಷ್ಟವಾಗಿ ಮತ್ತು ಸ್ವರೂಪದಿಂದಲೂ ಉಪಾಸನೆ ಮಾಡಬೇಕೆಂದು ಮೂರುವಿಧ ಉಪಾಸನೆಯನ್ನು ಹೇಳುತ್ತಿದೆ. ವಾಕ್ಯಭೇದದೋಷಕ್ಕೆ ಅವಕಾಶವಿಲ್ಲ. ಏಕೆಂದರೆ, 'ತಂ ಮಾಮಾಯುರಮೃತಮಿತ್ಯುಪಾಸ್ವ' ಎಂಬ ಒಂದೇ ವಾಕ್ಯದಲ್ಲಿ 'ಮಾಂ' ಎಂದು ಜೀವವಿಶಿಷ್ಟಬ್ರಹ್ಮನ ಉಪಾಸನೆಯನ್ನು 'ಆಯುಃ' ಎಂದು ಪ್ರಾಣವಿಶಿಷ್ಟಬ್ರಹ್ಮನ ಉಪಾಸನೆಯನ್ನು, 'ಅಮೃತಂ' ಎಂದು ಸ್ವರೂಪದ ಉಪಾಸನೆಯನ್ನು ವಿಧಿಸುತ್ತಿದೆ.

ಇದು ತಪ್ಪು. ಏಕೆಂದರೆ "ತಾನ್ ವರಿಷ್ಠಃ ಪ್ರಾಣ ಉವಾಚ" "ಯ ಏವಾಯಂ ಮುಖ್ಯಃ ಪ್ರಾಣಃ" "ಅಪಹತಪಾಪ್ಮಾ ಹ್ಯೇಷಃ" ಇತ್ಯಾದಿ ಶ್ರುತಿಯಿಂದ ಮುಖ್ಯಪ್ರಾಣನು ಚೇತನ-ಸ್ವರೂಪನೆಂದು ನಿರ್ಣಯವಾಗಿದೆ. ಆದರೆ ನೀವು ಮುಖ್ಯಪ್ರಾಣನ ಲಿಂಗವನ್ನು ನಿರ್ವಾಹ ಮಾಡು-ವುದಕ್ಕಾಗಿ ಅಚಿದ್ವಿಶಿಷ್ಟ ಉಪಾಸನೆಯನ್ನು ಹೇಳುತ್ತೀರಿ. ಇದು ಅತ್ಯಂತ ಅಯುಕ್ತವಾಗಿದೆ.

**प्रकाशः – केचित्त्विति ॥** प्रसङ्गशब्दानध्याहारेण भोक्तृजीवशरीरक-रूपचिद्विशिष्टत्वानुसन्धानाय, भोग्यभोगकरणभूतप्राणशरीरकत्वरूपाचिद्विशिष्ट-त्वानुसन्धानाय, स्वरूपेण चिदचिल्लक्षणद्वारमन्तरेण गुणविशिष्टानुसन्धानाय चेति त्रिविधोपासनाय जीवादिलिङ्गानामत्रोपदेशात् । एवं त्रिविधानुसन्धानस्य "सत्यं ज्ञानमनन्तं ब्रह्म" "विज्ञानं चाविज्ञानं च" इत्यादिषु प्रकरणान्तरेष्वप्याश्रित-

त्वात् इहापि त्रिविधानुसन्धानस्य युक्तत्वादित्यर्थ इत्याहुरित्यर्थः। श्रुतप्रकाशोक्तं समाधानमाह – **तं मामिति** ॥ यत्र जीवविशेषाणामचेतनविशेषाणां परमात्मा-साधारणधर्मयोगः, तत्र चिदचिद्विशेषान्तरात्मत्वानुसन्धानं प्रतिपिपादयिषितमिति भावः । अत्र **"शरीरं परिगृह्योत्थापयति"** इति प्राणलिङ्गनिर्वाहाया-चिद्विशिष्टत्वेनानुसन्धानं यदुक्तं, तदयुक्तं, प्राणस्य चेतनत्वात् । तथाच द्वैविध्यमेवोपासनस्य न त्रैविध्यमिति भावेन दूषयति – **तन्नेति** ॥ **अपहतेति** ॥ न ह्यचेतनस्य पापप्रसक्तिरस्तीति भावः । उपलक्षणमेतत्, 'आश्रितत्वात्' इत्यस्य 'इह' इत्यनेनान्वयोपपत्तावन्यत्रेत्यध्याहारायोग इत्याद्यपि ध्येयम् ।

ವಿವರಣೆ - ರಾಮಾನುಜರ ಅಂತಿಮಸೂತ್ರವ್ಯಾಖ್ಯಾನ ಹೀಗಿದೆ - ಸೂತ್ರದಲ್ಲಿ ಪ್ರಸಂಗಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗಿಲ್ಲ. ಮತ್ತು ವಾಕ್ಯಭೇದದೋಷಕ್ಕೂ ಅವಕಾಶವಿಲ್ಲವೆಂಬುದನ್ನು ಇವರು ಸಮರ್ಥಿಸುತ್ತಾರೆ. ಭೋಕ್ತೃವಾದ ಜೀವನು ಬ್ರಹ್ಮನ ಶರೀರನಾಗಿದ್ದಾನೆ. ಶರೀರದಲ್ಲಿರುವ ಧರ್ಮಗಳನ್ನು ಶರೀರಿಯಲ್ಲಿ ಹೇಳಬಹುದು. ಆದ್ದರಿಂದ ಬ್ರಹ್ಮನು ಜೀವನೆಂಬ ಚಿದ್ವಿಶಿಷ್ಟನಾಗಿದ್ದಾನೆಂಬ ಅನುಸಂಧಾನವನ್ನು ಮಾಡಬಹುದು. ಅದರಂತೆ ಅಚಿತ್ ಎನಿಸಿದ ಪ್ರಾಣವೂ ಸಹ ಬ್ರಹ್ಮನ ಶರೀರವಾಗಿದೆ. ಆದ್ದರಿಂದ ಭೋಗ್ಯವಾದ ವಸ್ತುಗಳನ್ನು ಭೋಗಿಸಲು ಕರಣವಾದ ಪಂಚವೃತ್ತಿಗಳೆಂಬ ಪ್ರಾಣಶರೀರವೆಂಬ ಅಚಿತ್‌ಪದಾರ್ಥದಿಂದ ಬ್ರಹ್ಮನು ವಿಶಿಷ್ಟನಾಗಿದ್ದಾನೆಂದು ಉಪಾಸನೆ ಮಾಡಬಹುದು. ಸ್ವರೂಪತಃ ಉಪಾಸನೆ ಮಾಡಲೂ ಸಹ ಬರುತ್ತದೆ. ಅಂದರೆ ಚಿತ್ ಮತ್ತು ಅಚಿತ್ ಎಂಬ ದ್ವಾರವನ್ನು ಬಿಟ್ಟು ನೇರವಾದ ಗುಣಗಳಿಂದ ಉಪಾಸನೆ ಮಾಡುವುದೇ ಸ್ವರೂಪತಃ ಉಪಾಸನೆ ಎನಿಸುತ್ತದೆ. ಇಂತಹ ಮೂರುವಿಧ ಉಪಾಸನೆಗೋಸ್ಕರ ಈ ಪ್ರಕರಣದಲ್ಲಿ ಜೀವಾದಿಲಿಂಗಗಳನ್ನು ಉಪದೇಶಿಸಲಾಗಿದೆ.

ಆಶ್ರಿತತ್ವಾತ್ - ಈ ರೀತಿಯಾದ ವ್ಯಾಖ್ಯಾನ ತಪ್ಪಲ್ಲ. ಏಕೆಂದರೆ "ಸತ್ಯಂ ಜ್ಞಾನಂ ಮನಂತಂ ಬ್ರಹ್ಮ" ಇತ್ಯಾದಿ ಬೇರೆ ಪ್ರಕರಣಗಳಲ್ಲಿಯೂ ಇದೇ ಬಗೆಯ ತ್ರಿವಿಧ ಉಪಾಸನೆಯನ್ನು ಅಂಗೀಕರಿಸಲಾಗಿದೆ. ಇಹ ತದ್ಯೋಗಾತ್ - ಅದರಂತೆ ಇಲ್ಲಿಯೂ ತ್ರಿವಿಧ ಉಪಾಸನೆಯನ್ನು ಹೇಳಬಹುದು. ಇಷ್ಟು ರಾಮಾನುಜರ ವ್ಯಾಖ್ಯಾನ.

ಶ್ರುತಪ್ರಕಾಶದಲ್ಲಿ ಹೇಳಿದ ಸಮಾಧಾನವನ್ನು 'ತಂ ಮಾಂ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಎಲ್ಲಿ ಜೀವನ ವಿಶೇಷಧರ್ಮಗಳು ಮತ್ತು ಅಚೇತನ ವಿಶೇಷಧರ್ಮಗಳೂ ಪರಮಾತ್ಮನಲ್ಲಿ ಅಸಾಧಾರಣ-ಧರ್ಮವಾಗಿ ಕೂಡುತ್ತವೋ ಅಲ್ಲಿ ಚಿದಚಿದ್ವಿಶೇಷಾಂತರಾತ್ಮತ್ವ ಅನುಸಂಧಾನವನ್ನು ಪರಮಾತ್ಮನಲ್ಲಿ ಮಾಡಬೇಕೆಂದು ವ್ಯಾಖ್ಯಾನಿಸಲಾಗಿದೆಯೆಂದು ತಿಳಿಯಬೇಕು.

"ಇದಂ ಶರೀರಂ ಪರಿಗೃಹ್ಯೋತ್ಥಾಪಯತಿ" ಎಂಬುದಾಗಿ ಪ್ರಾಣಲಿಂಗವನ್ನು ಮಾಡುವುದಕ್ಕಾಗಿ, ಅಚಿದ್ವಿಶಿಷ್ಟತ್ವೇನ ಯಾವ ಉಪಾಸನೆಯನ್ನು ಹೇಳಿದರೋ ಅದು ಅಯುಕ್ತವಾಗಿದೆ. ಏಕೆಂದರೆ ಚೇತನನಾದ

ಪ್ರಾಣನನ್ನು ಅಚೇತನನೆಂದು ಹೇಳಿದ್ದೇ ತಪ್ಪು. ಆದ್ದರಿಂದ ದ್ವಿವಿಧ ಉಪಾಸನೆಯನ್ನು ಬ್ರಹ್ಮನಲ್ಲಿ ಹೇಳಬಹುದೇ ಹೊರತು ಉಪಾಸನಾ ತ್ರೈವಿಧ್ಯವೂ ತಪ್ಪಾಗುತ್ತದೆಂಬ ಅಭಿಪ್ರಾಯದಿಂದ 'ತನ್ನ' ಎಂದು ದೂಷಿಸುತ್ತಿದ್ದಾರೆ.

ಪ್ರಾಣನಲ್ಲಿ ಅಪಹತಪಾಪ್ಮತ್ವವು ವಿಶೇಷಣವಾಗಿದೆ. ಪಾಪರಹಿತನಾಗಬೇಕಾದರೆ, ಮೊದಲು ಪಾಪಕ್ಕೆ ಪ್ರಸಕ್ತಿಯಿರಬೇಕು. ಇದನ್ನು ಅಚೇತನನಲ್ಲಿ ಹೇಳಲು ಸಾಧ್ಯವಿಲ್ಲದ ಕಾರಣ ಪ್ರಾಣನು ಚೇತನನಾಗಿದ್ದಾನೆಂದು ಹೇಳಬೇಕು. ಉಪಲಕ್ಷಣಯಾ ಮತ್ತೊಂದು ದೋಷವನ್ನು ತಿಳಿಯಬೇಕು. 'ಆಶ್ರಿತತ್ವಾತ್' ಎಂಬ ಸೂತ್ರದಲ್ಲಿರುವ ಪದಕ್ಕೆ 'ಇಹ' ಪದದ ಜೊತೆಗೆ ಅನ್ವಯವನ್ನು ಹೇಳಲು ಬರುವಾಗ 'ಅನ್ಯತ್ರ' ಎಂಬ ಪದವನ್ನು ಅಧ್ಯಾಹಾರ ಮಾಡಿ ಅನ್ವಯವನ್ನು ಹೇಳಿದ್ದು ತಪ್ಪಾಗುತ್ತದೆ.

## ಸಾರ

ರಾಮಾನುಜರು ಕೊನೆಯ ಸೂತ್ರವನ್ನು ಹೀಗೆ ವ್ಯಾಖ್ಯಾನಿಸುತ್ತಾರೆ. ಇಂದ್ರಪ್ರತರ್ದನರ ಸಂವಾದಪ್ರಕರಣದಲ್ಲಿ ಸಂಪೂರ್ಣವಾಗಿ ಬ್ರಹ್ಮನೇ ಪ್ರತಿಪಾದ್ಯನು. ಅಂತಹ ಒಬ್ಬನೇ ಬ್ರಹ್ಮನನ್ನು ಚಿದ್ವಿಶಿಷ್ಟನಾಗಿ ಅಚಿದ್ವಿಶಿಷ್ಟನಾಗಿ ಮತ್ತು ಸ್ವರೂಪತಃ ಮೂರುಬಗೆಯಲ್ಲಿ ಉಪಾಸನೆ ಮಾಡಬೇಕು. ಚಿದ್ವಿಶಿಷ್ಟನೆಂದರೆ ಜೀವನೇ ಶರೀರವಾಗಿ ಉಳ್ಳವನು ಎಂದರ್ಥ. ಅಚಿದ್ವಿವಿಶಿಷ್ಟನೆಂದರೆ ಜಡವಾದ ಪ್ರಾಣಾದಿಗಳು ಶರೀರವಾಗಿ ಉಳ್ಳವನು ಎಂದರ್ಥ. ಹೀಗೆ ಹೇಳಿದಾಗ ಚಿತ್ ಅಚಿತ್ ಪದಾರ್ಥಗಳೆಂಬ ಶರೀರಗಳೆಂಬ ಧರ್ಮಗಳೆಲ್ಲವೂ ಬ್ರಹ್ಮನಲ್ಲಿಯೇ ಬರುತ್ತವೆ. ಆದ್ದರಿಂದ ಈ ಪ್ರಕರಣದಲ್ಲಿ ಜೀವನಾಗಲೀ ಪ್ರಾಣನಾಗಲೀ ಪ್ರತಿಪಾದ್ಯರೇ ಆಗಲಾರರು. 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಇತ್ಯಾದಿ ಸ್ಥಳದಲ್ಲಿಯೂ ಹೀಗೆಯೇ ವ್ಯಾಖ್ಯಾನ ಮಾಡುವುದು ಕಂಡಿದ್ದರಿಂದ ಇಲ್ಲಿ ನಾವು ಮಾಡುತ್ತಿರುವ ವ್ಯಾಖ್ಯಾನವು ತಪ್ಪಾಗುವುದಿಲ್ಲವೆಂದು.

ಇದು ಸರಿಯಲ್ಲ. ಪ್ರಾಣನನ್ನು ಹೇಳುತ್ತಿರುವ ಶ್ರುತಿಯು ಅಪಹತಪಾಪ್ಮತ್ವವೆಂದು ಪ್ರಾಣನಲ್ಲಿ ಪಾಪರಾಹಿತ್ಯವನ್ನು ಹೇಳುತ್ತಿದೆ. ಪಾಪರಾಹಿತ್ಯವು ಕೇವಲ ಚೇತನದಲ್ಲಷ್ಟೇ ಬರಲು ಸಾಧ್ಯ. ಆದರೆ ರಾಮಾನುಜರು ಪ್ರಾಣಶಬ್ದದಿಂದ ಜಡಪದಾರ್ಥವನ್ನು ವಾಚ್ಯವೆನ್ನುತ್ತಾರೆ.

ಈ ಕಾರಣದಿಂದ ತ್ರಿವಿಧ ಉಪಾಸನೆಯನ್ನು ಬ್ರಹ್ಮನಲ್ಲಿ ಹೇಳಬಹುದೇ ಹೊರತು ಉಪಾಸಾತ್ರೈವಿಧ್ಯವನ್ನು ರಾಮಾನುಜರಿಗೆ ಸಮರ್ಥಿಸಲು ಸಾಧ್ಯವೇ ಇಲ್ಲ.

* * * *

**प्रकाशः** – एतेन यत्केनचित्प्रलपितं – **''प्राणोऽस्मि प्रज्ञात्मा तं मामायुरमृतमित्युपास्व''** इत्यत्रेन्द्रवाक्ये उपासनाकर्मत्वेनेन्द्रशब्दनिर्दिष्टः किमिन्द्र उत शिव इति सन्देहे, वृष्टिद्वारा सकलरक्षकत्वरूपप्राणत्वस्य **''इन्द्रो राजा जगतो य ईशे''** इति श्रुत्या परमैश्वर्येण सर्वोपास्यत्वस्य च सम्भवात् जीवलिङ्गानां च जीवविशेषेन्द्र एव पर्यवसानात् प्राणलिङ्गे सत्यपि प्राणस्येन्द्रविशेषणत्वप्रतीतेः

जीववायुपक्षयोरनुत्थानादिन्द्र एवेति प्राप्ते, अजरामृतत्वादिलिङ्गानामनुगमादुपसंहारेऽवगमाच्छिव एवेति सिद्धान्त इति । उक्तञ्च –

प्राणोऽस्मीत्युक्त इन्द्रः स हि जगदखिलं प्राणयत्यम्बुवर्षैः
इन्द्रो राजेत्यनेकश्रुतिमितमहिमा स्यादुपास्यश्च मुक्त्यै ।
मैवं क्षुण्णः स सृज्यस्तमजरममृतं शक्नुमो नैव वक्तुं
तस्मात्तं मामुपास्वेत्यखिलपरिवृढे युज्यतां शास्त्रदृष्ट्या ॥

इति, तन्निरस्तं, इन्द्र इत्येव पूर्वपक्षे सति सूत्रे "जीवमुख्यप्राणलिङ्गात्" इति शङ्काऽयोगात् । तत्र जीवादिशब्दस्य तद्विशेषेन्द्रपरत्वे च वक्तुरात्मोपदेशस्यापीन्द्रलिङ्गस्य अनेनैव सङ्ग्रहसम्भवेन "न वक्तुः" इति पृथक् शङ्काऽयोगात् । प्राणस्येन्द्रविशेषणत्वेनाप्राधान्ये सूत्रे धर्मिनिर्देशाय प्राणपदप्रयोगायोगाच्च । प्राणत्वस्य विष्णावेव प्राणाधिकरणे साधितत्वाच्च । अमृतत्वादेः "त्रिपादस्यामृतं दिवि" इत्यादौ विष्णुधर्मत्वस्योक्तत्वाच्च । शिवस्यापि "रुद्रस्य शिर उत्पिपेष" इत्यादेरमृतत्वाद्ययोगाच्च ।

यदपि – "न वक्तुः" इत्यादीनां रामानुजरीत्याऽर्थकथनं, तदपि तद्दूषणेनैव निरस्तम् । तच्चोक्तं शिवार्कमणिदीपिकायां – ऐतरेये "प्राणो वा अहमस्म्यृचषे" इत्यत्र "प्राणः सर्वाणि भूतानि" इत्यादिना सार्वात्म्यस्य ब्रह्मलिङ्गस्य सत्त्वेन प्राणस्य ब्रह्मत्वं निश्चितमिति तत्र न सन्देहः । "प्राणोऽस्मि प्रज्ञात्मा" इत्यत्र तु त्वाष्ट्रवधादीन्द्रलिङ्गात् "शरीरं परिगृह्य" इत्यादिप्राणलिङ्गाच्च वैषम्यमिति, मूर्खप्रलपितमेतत्, तत्रेवात्रापि भूयसां ब्रह्मलिङ्गानां सत्त्वात् । तत्र ब्रह्मत्वस्यात्रत्यन्यायं विनाऽन्येनासिद्धेः । इन्द्रादिलिङ्गानां निरवकाशानां भूयसां दर्शितत्वाच्च । तस्यैवोदाहरणे सूत्रोक्तत्रयकोटिकपूर्वपक्षसम्भवेन सूत्रस्य सामञ्जस्यस्योक्तत्वाच्च । संशयबीजस्य टीकायामेवोक्तत्वाच्चेति ।

ಶೈವರ ಅಧಿಕರಣಶರೀರ ಹೀಗಿದೆ -

'ಪ್ರಾಣೋಽಸ್ಮಿ ಪ್ರಜ್ಞಾತ್ಮಾ ತಂ ಮಾಮಾಯುರಮೃತಮಿತ್ಯುಪಾಸ್ವ' ಎಂಬ ಇಂದ್ರವಾಕ್ಯದಲ್ಲಿ ಉಪಾಸನೆಗೆ ವಿಷಯಭೂತನಾದ ಇಂದ್ರಶಬ್ದದಿಂದ ನಿರ್ದೇಶಿಸಲ್ಪಟ್ಟ ಇಂದ್ರನು ಪ್ರತಿಪಾದ್ಯನೋ? ಅಥವಾ ಶಿವನೋ? ಎಂದು ಸಂದೇಹ.

ಸಂದೇಹ - ಇಂದ್ರನು ಪ್ರತಿಪಾದ್ಯನೆಂದು ಪೂರ್ವಪಕ್ಷ. ದೇವೇಂದ್ರನು ಮಳೆಯನ್ನು ಸುರಿಸುವ ಮೂಲಕ ಎಲ್ಲವನ್ನು ರಕ್ಷಿಸುತ್ತಾನೆ. ಆದ್ದರಿಂದ ಶ್ರುತಿಯಲ್ಲಿ ಹೇಳಿದ ಪ್ರಾಣತ್ವವೂ ದೇವೇಂದ್ರನಲ್ಲಿಯೇ ಉಪಪನ್ನವಾಗುತ್ತದೆ. ''ಇಂದ್ರೋ ರಾಜೋ ಜಗತೋ ಯ ಈಶೇ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಪರಮೈಶ್ವರ್ಯವೂ ಸಹ ದೇವೇಂದ್ರನಲ್ಲಿಯೇ ಯುಕ್ತವಾಗುತ್ತದೆ. ಆದ್ದರಿಂದ ಸಕಲರಿಂದ ಉಪಾಸ್ಯನಾದವನು ದೇವೇಂದ್ರನು.

ಇನ್ನು ಆ ಪ್ರಕರಣದಲ್ಲಿ ಕೇಳಿಸುತ್ತಿರುವ ಜೀವನ ಲಿಂಗಗಳೆಲ್ಲವೂ ಜೀವವಿಶೇಷನೆನಿಸಿದ ಇಂದ್ರನಲ್ಲಿ ಪರ್ಯವಸಾನವಾಗುತ್ತದೆ. ಪ್ರಾಣಲಿಂಗಗಳಿದ್ದರೂ ಪ್ರಾಣನು ಇಂದ್ರನಿಗೆ ವಿಶೇಷಣನಾದ್ದರಿಂದ ಜೀವನಾಗಲೀ ಪ್ರಾಣನಾಗಲೀ ಈ ಪ್ರಕರಣದಿಂದ ಪ್ರತಿಪಾದ್ಯರಾಗುವುದಿಲ್ಲ. ಹಾಗಾಗಿ ದೇವೇಂದ್ರನೇ ಪ್ರಾಣಪ್ರಕರಣ ಪ್ರತಿಪಾದ್ಯನೆಂದು ಪೂರ್ವಪಕ್ಷ.

ಸಿದ್ಧಾಂತ - ಶಿವನ ಅಜರಾಮರತ್ವಾದಿ ಲಿಂಗಗಳು ಉಪಸಂಹಾರದಲ್ಲಿ ಕೇಳಿಸುತ್ತಿವೆ. ಉಪಸಂಹಾರವೇ ಪ್ರಬಲವಾದ್ದರಿಂದ ಶಿವನೇ ಪ್ರಕರಣಪ್ರತಿಪಾದ್ಯನೆಂದು ಸಿದ್ಧಾಂತ. ಈ ಅಧಿಕರಣದ ಅಭಿಪ್ರಾಯ ಹೀಗಿದೆ -

> ಪ್ರಾಣೋಽಸ್ಮೀತ್ಯುಕ್ತ ಇಂದ್ರಃ ಸ ಹಿ ಜಗದಖಿಲಂ ಪ್ರಾಣಯಂತ್ಯಂಬುವರ್ಷೈಃ
> ಇಂದ್ರೋ ರಾಜೇತ್ಯನೇಕಶ್ರುತಿಮಿತಮಹಿಮಾ ಸ್ಯಾದುಪಾಸ್ಯಶ್ಚ ಮುಕ್ತ್ಯೈ ।
> ಮೈವಂ ಕ್ಷುಣ್ಣಃ ಸ ಸೃಜ್ಯಸ್ತಮಜರಮಮೃತಂ ಶಕ್ನುಮೋ ನೈವ ವಕ್ತುಂ
> ತಸ್ಮಾತ್ತಂ ಮಾಮುಪಾಸ್ವೇತ್ಯಖಿಲಪರಿವೃಢೇ ಯುಜ್ಯತಾಂ ಶಾಸ್ತ್ರದೃಷ್ಟ್ಯಾ ॥

''ಪ್ರಾಣೋಽಸ್ಮಿ ಪ್ರಜ್ಞಾತ್ಮಾ'' ಎಂಬಲ್ಲಿ ಇಂದ್ರನು ಪ್ರತಿಪಾದ್ಯನು. ಏಕೆಂದರೆ ಸಮಸ್ತ ಜಗತ್ತನ್ನು ಮಳೆ ಸುರಿಸುವ ಮೂಲಕ ರಕ್ಷಿಸುತ್ತಿದ್ದಾನೆ. ಮತ್ತು ''ಇಂದ್ರೋ ರಾಜಾ'' ಇತ್ಯಾದಿ ಅನೇಕ ಶ್ರುತಿಗಳಿಂದ ಪರಮೈಶ್ವರ್ಯಾದಿ ಮಹಿಮೆಗಳು ಅವನಲ್ಲಿ ತಿಳಿಯುತ್ತಿವೆ. ಇಂತಹ ಇಂದ್ರನನ್ನು ಮುಕ್ತಿಗೋಸ್ಕರ ಉಪಾಸನೆ ಮಾಡಬೇಕೆಂದು ಪೂರ್ವಪಕ್ಷ. ಇದು ತಪ್ಪು. ಅಜರಾಮರತ್ವಾದಿ ಶಿವನ ಲಿಂಗಗಳೇ ಉಪಸಂಹಾರದಲ್ಲಿ ಕೇಳಿಸುತ್ತಿರುವುದರಿಂದ ಇಂದ್ರನು ಪ್ರಕರಣಪ್ರತಿಪಾದ್ಯನೆಂದು ಹೇಳಬಾರದು. ಆದ್ದರಿಂದ ಶಾಸ್ತ್ರದ ಮೂಲಕ ವಿಚಾರ ಮಾಡಿದಾಗ ಶಿವನೇ ''ಮಾಮುಪಾಸ್ವ'' ಇತ್ಯಾದಿ ವಾಕ್ಯಗಳಿಂದ ಪ್ರತಿಪಾದ್ಯನೆಂದು ತಿಳಿಯುತ್ತದೆ.

ಜೀವರಿಗೆ ಅಧಿಕರಣರಚನೆಯು ಅಸಾಧುವಾಗಿದೆ. ಏಕೆಂದರೆ ಇಂದ್ರನೇ ಪೂರ್ವಪಕ್ಷಕ್ಕೆ ವಿಷಯನಾದಲ್ಲಿ ಜೀವಮುಖ್ಯಪ್ರಾಣರ ಲಿಂಗವನ್ನು ಸೂತ್ರದಲ್ಲಿ ಏಕೆ ಹೇಳಬೇಕಿತ್ತು. ಒಂದು ವೇಳೆ ಜೀವಾದಿ ಶಬ್ದಗಳನ್ನು ಜೀವವಿಶೇಷನಾದ ಇಂದ್ರನಲ್ಲಿಯೇ ಪರ್ಯವಸಾನ ಮಾಡಬೇಕಾದರೆ 'ನ ವಕ್ತುಃ' ಎಂಬ ಆತ್ಮೋಪದೇಶವೆಂಬ ಇಂದ್ರನ ಲಿಂಗವನ್ನು ಇದೇ ಸೂತ್ರದಿಂದಲೇ ಸಂಗ್ರಹಿಸಲು ಬರುತ್ತಿರುವಾಗ ಪುನಃ 'ವಕ್ತುಃ' ಎಂಬ ಸೂತ್ರದಿಂದ ಶಂಕಿಸುವುದು ತಪ್ಪಾಗುತ್ತದೆ.

ಮತ್ತು ಪ್ರಾಣನನ್ನು ಇಂದ್ರನಲ್ಲಿ ವಿಶೇಷಣ ಮಾಡಿದಿರಿ. ಹಾಗಾದಲ್ಲಿ ವಿಶೇಷಣತ್ವೇನ ಅಪ್ರಧಾನನಾದ ಪ್ರಾಣನೆಂಬ ಧರ್ಮಿಯನ್ನು ಉಲ್ಲೇಖಿಸುವುದಕ್ಕಾಗಿ ಸೂತ್ರದಲ್ಲಿ ಪ್ರಾಣಪದವನ್ನು ಪ್ರಯೋಗಿಸಿದ್ದು ಅಯುಕ್ತವಾಗುತ್ತದೆ. ಅಲ್ಲದೆ ಪ್ರಾಣತ್ವವು ವಿಷ್ಣುವಿನಲ್ಲಿಯೇ ಸಮಂಜಸವಾಗುತ್ತದೆಂದು ಪ್ರಾಣಾಧಿಕರಣದಲ್ಲಿ ಈಗಾಗಲೇ ನಾವು ಸಮರ್ಥಿಸಿದ್ದೇವೆ.

ಅಂತಿಮಪ್ರಾಣಾಧಿಕರಣ-(೧।೧।೧೨)

ಶಿವನಲ್ಲಿ ಹೇಳಿದ ಅಮೃತತ್ವಾದಿ ಲಿಂಗಗಳೂ ಸಹ 'ತ್ರಿಪಾದಸ್ಯಾಮೃತಂ ದಿವಿ' ಇತ್ಯಾದಿ ಶ್ರುತಿಗಳ ಆಧಾರದಿಂದ ವಿಷ್ಣುಧರ್ಮಗಳಾಗಿವೆ ಎಂಬುದನ್ನು ಸಮರ್ಥಿಸಿದ್ದೇವೆ. ಅಷ್ಟೇ ಅಲ್ಲದೆ 'ರುದ್ರಸ್ಯ ಶಿರಃ' ಇತ್ಯಾದಿ ಪ್ರಮಾಣದಂತೆ ರುದ್ರನ ತಲೆಯು ಬಿದ್ದಿತ್ತೆಂದು ತಿಳಿಯುವಾಗ ಅಮೃತತ್ವಾದಿ ಲಿಂಗಗಳು ರುದ್ರನಲ್ಲಿ ಸರ್ವಥಾ ಕೂಡಲಾರವು. ಇನ್ನು "ನ ವಕ್ತುಃ" ಇತ್ಯಾದಿ ಸೂತ್ರಗಳಿಗೆ ಶೈವರು ರಾಮಾನುಜಮತದಂತೆ ವ್ಯಾಖ್ಯಾನಿಸಿದ್ದಾರೆ. ರಾಮಾನುಜಮತವನ್ನು ನಿರಾಕರಿಸಿದ್ದರಿಂದಲೇ ಶೈವರ ವ್ಯಾಖ್ಯಾನವನ್ನು ನಿರಾಕರಿಸಿ-ದಂತಾಯಿತು.

ಶಿವಾರ್ಕಮಣಿದೀಪಿಕೆಯಲ್ಲಿ ಹೀಗೆ ಹೇಳಿದ್ದಾರೆ - ಐತರೇಯದಲ್ಲಿ ಕೇಳಿಸುತ್ತಿರುವ "ಪ್ರಾಣೋ ವಾ ಅಹಮಸ್ಮೃಷೇ" ಎಂಬಲ್ಲಿ "ಪ್ರಾಣಸ್ತ್ವಂ ಪ್ರಾಣಸ್ಸರ್ವಾಣಿ ಭೂತಾನಿ" ಇತ್ಯಾದಿಯಾಗಿ ಬ್ರಹ್ಮನ ಲಿಂಗವೆನಿಸಿದ ಸಾರ್ವಾತ್ಮ್ಯವು ಕೇಳಿಸುತ್ತಿದೆ. ಆದ್ದರಿಂದ ಪ್ರಾಣಶಬ್ದದಿಂದ ಬ್ರಹ್ಮನೇ ವಾಚ್ಯನೆಂದು ನಿಶ್ಚಯವಾದ್ದರಿಂದ ಸಂದೇಹಕ್ಕೆ ಆಸ್ಪದವಿಲ್ಲ. ಆದರೆ "ಪ್ರಾಣೋಽಸ್ಮಿ ಪ್ರಜ್ಞಾತ್ಮಾ" ಎಂಬಲ್ಲಿ ಮಾತ್ರ ತ್ವಾಷ್ಟ್ರವಧಾ ಮೊದಲಾದ ಇಂದ್ರನ ಲಿಂಗಗಳು ಕೇಳಿಸುತ್ತಿರುವುದು. "ಶರೀರಂ ಪರಿಗೃಹ್ಯ" ಇತ್ಯಾದಿಯಾಗಿ ಪ್ರಾಣಲಿಂಗಗಳು ಕೇಳಿಸುತ್ತಿರುವುದರಿಂದ ಸಂಶಯಕ್ಕೆ ಅವಕಾಶವಿದೆ. ಶಿವಾರ್ಕಮಣಿದೀಪಿಕೆಯ ಈ ಮಾತುಗಳು ಮೂರ್ಖರ ಜೊಳ್ಳುಮಾತುಗಳು. ಏಕೆಂದರೆ "ಪ್ರಾಣೋ ವಾ" ಎಂಬಲ್ಲಿ ಯಾವರೀತಿಯಾಗಿ ಅನೇಕ ಬ್ರಹ್ಮಲಿಂಗಗಳು ಕೇಳಿಸುತ್ತಿವೆಯೋ ಅದರಂತೆ "ಪ್ರಾಣೋಸ್ಮಿ" ಎಂಬಲ್ಲಿಯೂ ಬ್ರಹ್ಮಲಿಂಗಗಳು ಕೇಳಿಸುತ್ತಿವೆ. ಮತ್ತು ಇಲ್ಲಿರುವ ನ್ಯಾಯವನ್ನು ಬಿಟ್ಟು ಅಲ್ಲಿಯೂ ಸಹ ಬ್ರಹ್ಮತ್ವವು ಸಿದ್ಧವಾಗದು. ಅಷ್ಟೇ ಅಲ್ಲದೆ ನಿರವಕಾಶವಾದ ಇಂದ್ರಾದಿ ಅನೇಕಗಳು ಲಿಂಗಗಳು ಅಲ್ಲಿಯೂ ಇದೆಯೆಂದು ತೋರಿಸಿದ್ದೇವೆ. ಆದ್ದರಿಂದ "ಪ್ರಾಣೋ ವಾ" ಎಂಬ ಐತರೇಯ ವಾಕ್ಯವನ್ನೇ ಈ ಅಧಿಕರಣದಲ್ಲಿ ಉದಾಹರಿಸಿದಾಗ ಸೂತ್ರದಲ್ಲಿ ಹೇಳಲ್ಪಟ್ಟ ಮೂರುಕೋಟಿಯುಳ್ಳ ಪೂರ್ವಪಕ್ಷವೂ ಸಹ ಸಮಂಜಸವಾಗುತ್ತದೆ. ಸಂಶಯಬೀಜವನ್ನು ಟೀಕೆಯಲ್ಲಿಯೇ ಸ್ಪಷ್ಟವಾಗಿ ಹೇಳಿದ್ದಾರೆ. ಆದ್ದರಿಂದ ಶೈವರ ಅಧಿಕರಣ ರಚನೆಯು ಅತ್ಯಂತ ಅಸಾಧುವಾಗಿದೆ.

## ಟೀಕೆಯ ಕಠಿಣಪದಾರ್ಥ

तात्पर्यचन्द्रिका

**टीकाक्षरार्थस्तु – ननु "एतद्ध स्म वै तद्विद्वानाह हिरण्यदन्वैदः" इति हिरण्यदन्वैदवत् महिदासोऽपि ऋषित्वेनोच्यतामित्यत आह – नहि महिदासोऽपि मुनितयैवोच्यते। वैयर्थ्यादिति ॥ अस्या उपनिषदः ऐतरेयसंज्ञयैव इतरापुत्रस्य महिदासस्य ऋषित्वसिद्ध्या तदुक्तिनैष्फल्यादित्यर्थः ।**

**यद्वा – ऋषिमात्रत्वे महिदासस्य "इतःप्रदाना ह्येत इतः सम्भृताः" इत्यादिना**

देवतापदप्रदातृत्वं तत्पोषकत्वमित्यादीनां उमुपास्यब्रह्मधर्माणामुक्तेर्नैष्फल्यादित्यर्थः ।

यद्वा – महिदासस्य मुनित्वेनाप्युक्तिरिष्टा, मुनित्वेनैवोक्तिः नतु ब्रह्मतयेति तु न युक्तम्, ''इतःप्रदानाद्ध्येत इतः सम्भृताः'' इत्यादीनां ब्रह्मधर्मवाचिनां विरुद्धार्थत्वादित्यर्थः॥

ಅನುವಾದ - ಟೀಕೆಯ ಕಠಿಣಪದಾರ್ಥ ಹೀಗಿದೆ - ''ಏತದ್ಧಸ್ಮ ವೈ ತದ್ವಿದ್ವಾನಾಹ ಹಿರಣ್ಯದನ್ ವೈದಃ'' ಐತರೇಯ ಶ್ರುತಿಯಲ್ಲಿ ಇರುವ ಈ ವಾಕ್ಯವು ''ಹಿರಣ್ಯದನ್ ಬೈದಃ'' ಎಂಬ ಇಬ್ಬರು ಋಷಿಗಳನ್ನು ಹೇಳುತ್ತಿದೆ. ಅದರಂತೆ ಐತರೇಯದಲ್ಲಿಯೇ ಪ್ರಸಕ್ತನಾದ ಮಹಿದಾಸನೂ ಸಹ ಋಷಿಯೇ ಆಗಬಹುದಲ್ಲವೇ? ಎಂಬ ಪ್ರಶ್ನೆಗೆ 'ನಹಿ ಮಹಿದಾಸೋಽಪಿ ಮುನಿತಯೈವೋಚ್ಯತೇ' ಎಂಬ ಟೀಕೆಯಿಂದ ಉತ್ತರಿಸುತ್ತಿದ್ದಾರೆ. ಮಹಿದಾಸನನ್ನಾದರೂ ಇಲ್ಲಿ ಮುನಿ ಎಂದು ತಿಳಿಯಬಾರದು. ಏಕೆಂದರೆ 'ವೈಯರ್ಥ್ಯಾತ್' ವ್ಯರ್ಥವಾಗುತ್ತದೆ. ಏಕೆಂದರೆ ಈ ಉಪನಿಷತ್ತಿಗೆ ಐತರೇಯ ಎಂದು ಹೆಸರು. ಈ ಹೆಸರಿನಿಂದಲೇ ಇತರಾದೇವಿಯ ಮಗನಾದ ಮಹಿದಾಸನಿಂದ ಹೊರಹೊಮ್ಮಿದ್ದರಿಂದ ಮಹಿದಾಸನು ಋಷಿಯೆಂದು ಸುಲಭವಾಗಿ ಸಿದ್ಧವಾಗುತ್ತದೆ. ಪುನಃ ಋಷಿ ಎಂದು ಅವನನ್ನು ಪರಿಚಯಿಸುವುದು ವ್ಯರ್ಥ. ಹೀಗೆ ಟೀಕೆಯ ಮಾತುಗಳನ್ನು ಅರ್ಥೈಸಿಕೊಳ್ಳಬೇಕು. ಅಥವಾ ಮಹಿದಾಸನನ್ನು ಬೇರೆ ಋಷಿಗಳಂತೆ ಕೇವಲ ಋಷಿಯೆಂದು ಪರಿಗಣಿಸಿದರೆ ಆವಾಗ ''ಇತಃ ಪ್ರದಾನಾಹ್ಯೇತ ಇತಃ ಸಂಭೃತಾ'' ಇತ್ಯಾದಿಯಾಗಿ ಮಹಿದಾಸನಲ್ಲಿ ಕೇಳಿಬರುತ್ತಿರುವ ದೇವತಾಪದಪ್ರದಾತೃತ್ವ ದೇವತಾಪೋಷಕತ್ವ ಮೊದಲಾದ ಧರ್ಮಗಳನ್ನೇ ಹೇಳಿದ್ದು ವ್ಯರ್ಥವಾಗುತ್ತದೆ. ಉಪಾಸ್ಯನಾದ ಬ್ರಹ್ಮನ ಧರ್ಮಗಳನ್ನು ಕೇವಲ ಋಷಿ ಎನಿಸಿಕೊಂಡ ಮಹಿದಾಸನಲ್ಲಿ ಹೇಳುವುದು ವ್ಯರ್ಥವಲ್ಲವೇ? ಅಥವಾ ಮಹಿದಾಸನನ್ನು ಮುನಿಯೆಂದು ಒಪ್ಪಿಕೊಳ್ಳೋಣ ಆದರೆ ಕೇವಲ ಮುನಿಯಾಗಿದ್ದಾನೆ ಹೊರತು ಬ್ರಹ್ಮನಲ್ಲವೆಂಬ ಮಾತು ಅಯುಕ್ತವಾಗಿದೆ. ಏಕೆಂದರೆ ''ಇತಃ ಪ್ರದಾನಾಹ್ಯೇತ ಇತಃ ಸಂಭೃತಾ'' ಇತ್ಯಾದಿಯಾಗಿ ಬ್ರಹ್ಮನ ಧರ್ಮಗಳನ್ನು ಹೇಳುವ ಮಾತುಗಳಿಂದ ವಿರೋಧ ಬರುತ್ತದೆ. ಹೀಗೆ ಮೂರು ಬಗೆಯಲ್ಲಿ ಟೀಕೆಯ ಮಾತನ್ನು ಅರ್ಥೈಸಿಕೊಳ್ಳಬೇಕು.

**प्रकाशः** – अधिकरणान्ते टीकायां ''नहि महिदासो मुनितयैवोच्यते, वैयर्थ्यादिव'' इत्येतद्वाक्ये वैयर्थ्यादित्ययुक्तम्, ऋषिज्ञानार्थत्वादित्यतोऽवतार्यार्थमाह – **नन्विति** ॥ **ऋषित्वेति** ॥ ऋषिज्ञानस्यान्यथासिद्धेरित्यर्थः । ''वैयर्थ्यात्'' इत्यत्र प्रतियोगिनमध्याहृत्यार्थान्तरमाह – **यद्वेति** ॥ इतः प्रदानं येषान्त इति पददातृत्वं, 'सम्भृताः' इति पोषकत्वमिति ध्येयम् । 'उपास्यानां ब्रह्मधर्माणामित्यर्थः । विशब्दस्य विरुद्धार्थत्वं मत्वाऽन्यथा योजयति – **यद्वेति** ॥ शिष्टं सुगममिति भावः ।

ವಿವರಣೆ - ಟೀಕೆಯ ಕಠಿಣಪದಾರ್ಥವನ್ನು ಅಧಿಕರಣ ಕೊನೆಯಲ್ಲಿ ನಿರೂಪಿಸುತ್ತಿದ್ದಾರೆ. "ನಹಿ ಮಹಿದಾಸೋ ಮುನಿತಯ್ಯೆವೋಚ್ಯತೇ । ವೈಯರ್ಥ್ಯಾದೇವ" ಎಂಬ ಟೀಕಾ ಮಾತಿನಲ್ಲಿ "ವೈಯರ್ಥ್ಯಾದೇವ" ಎಂದು ಹೇಳಿದ್ದು ತಪ್ಪಲ್ಲವೇ? ಋಷಿ ಎಂದು ತಿಳಿಸುವುದಕ್ಕಾಗಿ ಹಾಗೇ ಹೇಳಿದ್ದಾರೆಂದು ಪ್ರಶ್ನಿಸಿದರೆ ಟೀಕೆಯ ವಾಕ್ಯಕ್ಕೆ ಅವತಾರಿಕೆಯನ್ನು ನೀಡಿ ಉತ್ತರವನ್ನು ನೀಡುತ್ತಿದ್ದಾರೆ 'ನನು' ಇತ್ಯಾದಿಯಾಗಿ. 'ಋಷಿತ್ವಸಿದ್ಧ್ಯೈ' ಎಂಬ ಪದಕ್ಕೆ ಋಷಿ ಎಂಬ ಜ್ಞಾನವು ಅನ್ಯಥಾಸಿದ್ಧವಾಗಿದೆ ಎಂದು ಅರ್ಥ. 'ವೈಯರ್ಥ್ಯಾತ್' ಎಂಬಲ್ಲಿ ಪ್ರತಿಯೋಗಿಪದವನ್ನು ಅಧ್ಯಾಹಾರ ಮಾಡಿಕೊಂಡು ಮತ್ತೊಂದು ವಾಕ್ಯವನ್ನು 'ಯದ್ವಾ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. 'ಇತಃ ಪ್ರದಾನಂ ಯೇಷಾಂ ತೇ' ಎಂಬುದಾಗಿ ದೇವತಾಪದದಾತೃತ್ವವನ್ನು ಹೇಳಿದ್ದಾರೆ. 'ಸಂಭೃತಾಃ' ಎಂಬುದರಿಂದ ಪೋಷಕತ್ವವನ್ನು ಹೇಳಿದ್ದಾರೆಂದು ತಿಳಿಯಬೇಕು. ಉಪಾಸ್ಯವಾದದ್ದು ಬ್ರಹ್ಮಧರ್ಮಗಳೆಂದು ಅನ್ವಯ. 'ವೈಯರ್ಥ್ಯಾತ್' ಎಂಬಲ್ಲಿರುವ 'ವಿ' ಎಂಬ ಶಬ್ದಕ್ಕೆ 'ವಿರುದ್ಧ' ಎಂಬರ್ಥವನ್ನು ವಿವಕ್ಷಿಸಿ. ಮತ್ತೊಂದು ಬಗೆಯಲ್ಲಿ ವ್ಯಾಖ್ಯಾನಿಸುತ್ತಿದ್ದಾರೆ. 'ಯದ್ವಾ' ಇತ್ಯಾದಿಯಾಗಿ. ಈ ಅಧಿಕರಣದ ಟೀಕೆಯಲ್ಲಿರುವ ಉಳಿದ ಪದಗಳ ಅರ್ಥವನ್ನು ಶಿಷ್ಯರೇ ಸುಲಭವಾಗಿ ತಿಳಿಯಬಹುದು.

## ಪ್ರಥಮಪಾದದಲ್ಲಿ ಹನ್ನೆರಡು ಅಧಿಕರಣಗಳ ಪೆಟ್ಟಿಗೆ

तात्पर्यचन्द्रिका

**अत्र चाद्या पञ्चाधिकरणी समन्वयविशेषाप्रतिपादकत्वादध्यायपादबहिर्भूता तदुपोद्घातत्वेनैका पेटिका । तत्राप्याद्यं शास्त्रमात्रोपोद्घातरूपम् । इतरा चतुरधिकरणी तु शास्त्रान्तर्गताऽपि अध्यायोपोद्घातरूपा । आनन्दमयाधिकरणमारभ्यापादपरिसमाप्ति समन्वयपरत्वेन एका महापेटिका ।**

**तत्राप्यानन्दमयान्तरधिकरणे बहुविषयपूर्वपक्षयुक्तत्वेन, अन्तरादिचतुरधिकरणी तु साक्षादानन्दमयाक्षेपकपूर्वपक्षयुक्तत्वेन, तत्राप्याकाशादित्रयमन्तरधिकरणन्यायातिदेशकत्वेन भूते प्रसिद्धनामविषयकत्वेन चैकाऽवान्तरपेटिकेत्याद्यूह्यम् ।**

**शब्दास्सामान्याधिदैवाधिभूताध्यात्मगोचराः ।<br>ससूक्ता अधिवेदस्थाः सलिङ्गाश्चात्र चिन्तिताः ॥**

**अस्मिंश्च पादे –**

**"आनन्दमयः" इत्यत्र सामान्यशब्दाः, "अन्तः" इत्यत्र अधिदैवगताः, "आकाशः" इत्यत्र अधिभूतगताः, "अत एव प्राणः" इत्यत्र अध्यात्मगताः,**

**''ज्योतिः'' इत्यत्र सूक्तसहिताः, ''छन्द'' इत्यत्र अधिवेदगताः, ''प्राणस्तथा'' इत्यत्र लिङ्गसहिताः शब्दा विचारिता इति ॥ इत्यन्तिमप्राणाधिकरणम् ॥ १२ ॥**

**इति श्रीमद्ब्रह्मण्यतीर्थपूज्यपादानां शिष्येण**
**श्रीव्यासयतिना विरचितायां**
**श्रीमद्भाष्यटीकाविवृतौ तात्पर्यचन्द्रिकायां प्रथमाध्यायस्य प्रथमः पादः ॥**

ಅನುವಾದ - ಪ್ರಥಮಾಧ್ಯಾಯದ ಪ್ರಥಮಪಾದದಲ್ಲಿ ಮೊದಲ ಐದು ಅಧಿಕರಣಗಳು 'ಪಂಚಾಧಿಕರಣ'ಗಳೆನಿಸಿವೆ. ಇವುಗಳಲ್ಲಿ ಯಾವುದೇ ಶಬ್ದಗಳ ಸಮನ್ವಯವನ್ನು ಖುದ್ದಾಗಿ ಮಾಡಿರು-ವುದಿಲ್ಲ. ಆದ್ದರಿಂದ ಅಧ್ಯಾಯದಲ್ಲಾಗಲೀ ಅಥವಾ ಪಾದದಲ್ಲಾಗಲೀ ಇದು ಅಂತರ್ಭೂತ-ವಾಗುವುದಿಲ್ಲ. ಆದ್ದರಿಂದ ಈ ಐದು ಅಧಿಕರಣಗಳು ಉಪೋದ್ಘಾತರೂಪವಾಗಿ ಒಂದು ಪೆಟ್ಟಿಗೆ-ಯಾಗಿದೆ. ಈ ಐದು ಅಧಿಕರಣಗಳಲ್ಲಿ ಮೊದಲನೆಯ 'ಜಿಜ್ಞಾಸಾಧಿಕರಣವು' ಸಮಗ್ರ ಶಾಸ್ತ್ರಕ್ಕೆ ಉಪೋದ್ಘಾತರೂಪವಾಗಿದೆ. ಆದ್ದರಿಂದ 'ಶಾಸ್ತ್ರಮಾತ್ರೋಪೋದ್ಘಾತತ್ವ' ಎಂಬುದು ಜಿಜ್ಞಾಸಾಧಿ-ಕರಣದ ಅವಾಂತರ ಪೆಟ್ಟಿಗೆ (ಒಳಪೆಟ್ಟಿಗೆ). ಉಳಿದ ನಾಲ್ಕು ಅಧಿಕರಣಗಳು ಶಾಸ್ತ್ರದಲ್ಲಿ ಸೇರಿರುವು-ದರಿಂದ ಪ್ರಥಮಾಧ್ಯಾಯಕ್ಕೆ ಉಪೋದ್ಘಾತರೂಪವಾಗಿದೆ.

ಆದ್ದರಿಂದ ಅಧ್ಯಾಯೋಪೋದ್ಘಾತತ್ವ ಎಂಬುದು ಇವುಗಳ 'ಅವಾಂತರ ಪೆಟ್ಟಿಗೆ'.

ಆನಂದಮಯಾಧಿಕರಣದಿಂದ ಪ್ರಾರಂಭಿಸಿ ಪಾದ ಮುಗಿಯುವ ತನಕ ಇರುವ ಅಧಿಕರಣಗಳಿಗೆ 'ಸಮನ್ವಯಪರತ್ವ' ಎಂಬುದು 'ಮಹಾಪೆಟ್ಟಿಗೆ'. ಅದರಲ್ಲಿಯೂ ಸಹ ಆನಂದಮಯಾಧಿಕರಣಕ್ಕೆ ಬಹುವಿಷಯಪೂರ್ವಪಕ್ಷಯುಕ್ತತ್ವ ಎಂಬುದು ಅವಾಂತರಪೆಟ್ಟಿಗೆ. ಅಂತರಧಿಕರಣದಿಂದ ಪ್ರಾರಂಭಿಸಿ ನಾಲ್ಕು ಅಧಿಕರಣಗಳಿಗೆ 'ಸಾಕ್ಷಾದಾನಂದಮಯಾಕ್ಷೇಪಕಪೂರ್ವಪಕ್ಷಯುಕ್ತತ್ವ' ಎಂಬುದು ಅವಾಂತರ ಪೆಟ್ಟಿಗೆ. ಅವುಗಳಲ್ಲಿಯೂ ಆಕಾಶಾಧಿಕರಣದಿಂದ ಮೂರು ಅಧಿಕರಣಗಳಿಗೆ 'ಅಂತರಧಿಕರಣ-ನ್ಯಾಯಾತಿದೇಶಕತ್ವ' ಎಂಬುದು ಮತ್ತು 'ಭೂತೇ ಪ್ರಸಿದ್ಧನಾಮವಿಷಯಕತ್ವ' ಎಂಬುದು ಅವಾಂತರ-ಪೆಟ್ಟಿಗೆ ಹೀಗೆ ಪೇಟಿಕಾಸಂಗತಿಗಳನ್ನು ಸ್ವತಃ ಊಹಿಸಿಕೊಳ್ಳಬೇಕು.

ಶಬ್ದಸ್ಸಾಮಾನ್ಯಾಧಿದೈವಾಧಿಭೂತಾಧ್ಯಾತ್ಮಗೋಚರಾಃ ।
ಸಸೂಕ್ತಾ ಅಧಿವೇದಸ್ಥಾಃ ಸಲಿಂಗಾಶ್ಚಾತ್ರ ಚಿಂತಿತಾಃ ॥

ಅನೇಕವಿಧವಾದ ಶಬ್ದಗಳನ್ನು ಈ ಪಾದದಲ್ಲಿ ಸಮನ್ವಯ ಮಾಡಲಾಗಿದೆ.

'ಆನಂದಮಯಃ' ಎಂಬ ಸೂತ್ರದಲ್ಲಿ ಸಾಮಾನ್ಯವಾಚಕ ಶಬ್ದಗಳನ್ನು ಸಮನ್ವಯ ಮಾಡಲಾಗಿದೆ.

ಅಂತರಧಿಕರಣದಲ್ಲಿ ಅಧಿದೈವಗತವಾದ ಶಬ್ದಗಳನ್ನು ಆಕಾಶಾಧಿಕರಣದಲ್ಲಿ ಅಧಿಭೂತಗತವಾದ ಶಬ್ದಗಳನ್ನು ಪ್ರಾಣಾಧಿಕರಣದಲ್ಲಿ ಅಧ್ಯಾತ್ಮಗತಶಬ್ದಗಳನ್ನು ಸಮನ್ವಯ ಮಾಡಲಾಗಿದೆ.

ಜ್ಯೋತಿರಧಿಕರಣದಲ್ಲಿ ಸೂಕ್ತಸಹಿತವಾದ ಶಬ್ದಗಳನ್ನು, ಗಾಯತ್ರ್ಯಧಿಕರಣದಲ್ಲಿ ಅಧಿವೇದಗತ-ವಾದ ಶಬ್ದಗಳನ್ನು, ಅಂತಿಮಪ್ರಾಣಾಧಿಕರಣದಲ್ಲಿ ಲಿಂಗಸಹಿತವಾದ ಶಬ್ದಗಳ ಸಮನ್ವಯವನ್ನು ವಿಚಾರ ಮಾಡಲಾಗಿದೆ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಅಂತಿಮಪ್ರಾಣಾಧಿಕರಣವು ಸಂಪೂರ್ಣವಾಯಿತು.

**प्रकाशः** – एतत्पादीयद्वादशाधिकरणानां प्रमेयस्य सुज्ञानाय पेटिकासङ्गतिमाह – **अत्रेति** ॥ समन्वयसूत्रे सामान्यतः प्रतिपादनात् 'विशेष' इत्युक्तम् । समन्वया-प्रतिपादने किमर्थमत्र निवेश इत्यत उक्तं – **उपोद्धातत्वेनेति** । एतच्चेक्षत्यधिकरणे स्पष्टम् ॥ **तत्राप्याद्यमिति** ॥ यथा चैतत् तथोक्तं जिज्ञासाधिकरणे ॥ **युक्तत्वेनेति** ॥ 'एकाऽवान्तरपेटिका' इत्यन्वयः । आदिपदेन च्छन्दःप्राणाधिकरणयोः बहुश्रुति-लिङ्गविषयत्वेन वा ज्योतिः प्राणद्वाराऽऽनन्दमयाक्षेपकत्वेन वा अन्यत्रप्रसिद्ध-श्रुतिलिङ्गोत्कीर्तनस्य प्रयोजनोक्तिपरत्वेन वा एका पेटिका । एवमुत्तरपादेष्वपि ध्येयमिति भावः ।

सप्तानामप्यधिकरणानां विषयोपाधीन् सङ्गृह्य विशदयति – **शब्दा इति** ॥ गुणिसामान्यवाचका इत्यर्थः । **लिङ्गेति** ॥ पूर्वपक्षप्रापकानेकलिङ्गसहिता इत्यर्थः ॥ **शब्दा इति** ॥ नामात्मका विष्णौ समन्विता इत्यर्थः ॥ छ ॥

**अन्तिमप्राणाधिकरणं सम्पूर्णम् ॥**

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**
**चन्द्रिकाप्रकाशे प्रथमाध्यायस्य प्रथमः पादः सम्पूर्णम् ॥१॥**

ವಿವರಣೆ - ಈ ಪಾದದಲ್ಲಿ ಒಟ್ಟು ಹನ್ನೆರಡು ಅಧಿಕರಣಗಳಿವೆ, ಅವುಗಳ ಪ್ರಮೇಯವನ್ನು ಸುಲಭವಾಗಿ ತಿಳಿಸುವುದಕ್ಕಾಗಿ ಪೇಟಿಕಾಸಂಗತಿಯನ್ನು 'ಅತ್ರ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಸಮನ್ವಯ ಸೂತ್ರದಲ್ಲಿ ಸಾಮಾನ್ಯವಾಗಿ ಶಬ್ದಸಮನ್ವಯವನ್ನು ಹೇಳಿದ್ದರಿಂದ 'ವಿಶೇಷ' ಎಂಬ ಪದವನ್ನು ಗ್ರಂಥಕಾರರು ಹೇಳಿದ್ದಾರೆ. ಐದು ಅಧಿಕರಣಗಳು ಸಮನ್ವಯವನ್ನು ಮಾಡದಿದ್ದಲ್ಲಿ ಇಲ್ಲೇಕೆ ಸೇರಿಸಬೇಕು ಎಂಬ ಪ್ರಶ್ನೆಗೆ 'ಉಪೋದ್ಘಾತತ್ವೇನ' ಎಂದು ವಿವರಿಸಿದ್ದಾರೆ. ಈ ಐದು ಅಧಿಕರಣಗಳು ಉಪೋದ್ಘಾತವಾದ್ದರಿಂದ ಇಲ್ಲಿಯೇ ಸೇರಿಸಲು ಅರ್ಹವಾಗಿವೆ ಎಂಬ ವಿಚಾರವನ್ನು ಈಕ್ಷತ್ಯಧಿಕರಣದಲ್ಲಿ ಸ್ಪಷ್ಟಪಡಿಸಲಾಗಿದೆ. 'ತತ್ರಾಪಿ ಆದ್ಯಂ' ಎಂಬುದಕ್ಕೆ ಜಿಜ್ಞಾಸಾಧಿಕರಣದಲ್ಲಿ ಹೇಳಿದ್ದನ್ನು ಸ್ಮರಿಸಿಕೊಳ್ಳಬೇಕು. 'ಯುಕ್ತತ್ವೇನ' ಎಂಬ ಪದಕ್ಕೆ 'ಅವಾಂತರಪೇಟಿಕಾ' ಎಂಬಲ್ಲಿ ಅನ್ವಯ. ಆದಿಪದಿಂದ ಹೀಗೆ ತಿಳಿಯಬೇಕು. ಗಾಯತ್ರ್ಯಧಿಕರಣ ಹಾಗೂ

ಪ್ರಾಣಾಧಿಕರಣದಲ್ಲಿ ಬಹುಶ್ರುತಿಲಿಂಗವಿಷಯತ್ವ ಎಂಬುದು ಅವಾಂತರ ಪೆಟ್ಟಿಗೆ. ಅಥವಾ 'ಜ್ಯೋತಿಃ-ಪ್ರಾಣದ್ವಾರಾಽಽನಂದಮಯಾಕ್ಷೇಪಕತ್ವ' ಎಂಬುದು ಅವಾಂತರಪೆಟ್ಟಿಗೆ. ಅಥವಾ ಅನ್ಯತ್ರಪ್ರಸಿದ್ಧವಾದ ಶ್ರುತಿಲಿಂಗಗಳಿಗೆ ಪ್ರಯೋಜನವನ್ನು ಹೇಳುವಿಕೆ ಅವಾಂತರಪೆಟ್ಟಿಗೆ. ಇದರಂತೆ ಮುಂದಿನ ಪಾದಗಳಲ್ಲಿಯೂ ತಿಳಿಯಬೇಕು.

ಆನಂದಮಯಾಧಿಕರಣದಿಂದ ಪ್ರಾರಂಭಿಸಿ ಏಳು ಅಧಿಕರಣಗಳಲ್ಲಿರುವ ವಿಷಯೋಪಾದಿಗಳನ್ನು ಸಂಗ್ರಹಿಸಿ 'ಶಬ್ದಾಃ' ಇತ್ಯಾದಿ ವಾಕ್ಯದಿಂದ ನಿರೂಪಿಸುತ್ತಿದ್ದಾರೆ. 'ಶಬ್ದಾಃ' ಎಂದರೆ ಗುಣಸಾಮಾನ್ಯ-ವಾಚಕಶಬ್ದಗಳು ಎಂದರ್ಥ. ಲಿಂಗ ಎಂದರೆ ಪೂರ್ವಪಕ್ಷಪ್ರಾಪಕವಾದ ಅನೇಕ ಲಿಂಗಗಳಿಂದ ಸಹಿತ-ವಾದವುಗಳು ಎಂದರ್ಥ. 'ಶಬ್ದಾಃ' ಎಂದರೆ ನಾಮಾತ್ಮಕವಾದ ವಿಷ್ಣುವಿನಲ್ಲಿಯೇ ಸಮನ್ವಯ ಮಾಡ-ಬೇಕಾದ ಸಮನ್ವಯಗಳು ಎಂದರ್ಥ.

ಇಲ್ಲಿಗೆ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಅಂತಿಮಪ್ರಾಣಾಧಿಕರಣ ಪ್ರಥಮಧ್ಯಾಯದ ಪ್ರಥಮ ಪಾದವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

**गुरुराजीयम्** – वचनक्रियायामन्ययोगव्यवच्छेदकैवकारस्वारस्यार्थमाह – **यद्वेति** ॥ यद्वाऽस्मिन्नपि टीकास्थस्य मुनितयैवोच्यत इत्यत्रैवकारस्य वैयर्थ्यं भवतीत्यत एवकारसूचितं पक्षान्तरमाह – **यद्वेति** ॥ अन्तिमप्राणाधिकरणं सम्पूर्णम् ॥ १२ ॥

**इति श्रीविद्याधीशपूज्यपादशिष्येण केशवभट्टारकेण विरचितायां चन्द्रिकावाक्यविवृतौ भावदीपिकायां प्रथमाध्यायस्य प्रथमःपादः ॥ १ ॥**

**॥ श्रीमध्वेशार्पणमस्तु ॥**

# ೦೧೨- ಅಂತಿಮಪ್ರಾಣಾಧಿಕರಣ

ಭಾಗ -೩

ನ್ಯಾಯವಿವರಣ, ನ್ಯಾಯವಿವರಣಟೀಕಾ,

ಅಣುಭಾಷ್ಯ, ತತ್ವಮಂಜರೀ,

ತಂತ್ರದೀಪಿಕಾ, ನ್ಯಾಯಮುಕ್ತಾವಳೀ,

ಸೂತ್ರಾರ್ಥರತ್ನಾವಳೀ

**श्रीमदानन्दतीर्थभगवत्पादाचार्यविरचितं**

## न्यायविवरणम्

**न चाऽनन्यथासिद्धत्वमन्यत्र श्रुतिलिङ्गादेः ।**
**अन्यगतलिङ्गाऽऽदीनामपि तद्गतभगवदपेक्षया युक्तेः ॥१२॥**

**इति न्यायविवरणे प्रथमाध्यायस्यः प्रथमः पादः**

ಇಂದ್ರಾದಿಗಳಲ್ಲಿರುವ ಇಂದ್ರಶ್ರುತಿ ಹಾಗೂ ರುದ್ರಹನನಾದಿ ಲಿಂಗಗಳು ನಿರವಕಾಶಗಳಾಗಿವೆ ಎಂದು ಹೇಳಬಾರದು. ಏಕೆಂದರೆ, ಇಂದ್ರಾದಿಗಳಲ್ಲಿದ್ದರೂ ಇಂದ್ರಾದಿಗಳ ಅಂತರ್ಯಾಮಿಯಾದ ಭಗವಂತನಲ್ಲಿ ಮುಖ್ಯವಾಗಿ ಇರುತ್ತವೆ. ಮತ್ತು ಇಂದ್ರಾದಿಗಳಲ್ಲಿರುವ ಈ ಧರ್ಮಗಳೆಲ್ಲವೂ ಭಗವಂತನ ಅಧೀನವಾಗಿ ಇರುತ್ತವೆ. ಆದ್ದರಿಂದ ಇಂದ್ರಪ್ರಾಣ ಮೊದಲಾದ ಶಬ್ದಗಳಿಂದೆಲ್ಲ ಭಗವಂತನೇ ಪ್ರತಿಪಾದ್ಯನಾಗುತ್ತಾನೆ.

## श्री जयतीर्थविरचिता न्यायविवरणपञ्चिका

॥ श्रीः ॥ ॐ प्राणस्तथाऽनुगमात् ॐ ॥ ननु, गताऽर्थमिदमधिकरणम्; सर्वासां प्राणविद्यानां "अत एव प्राणः" इत्यनेनैव भगवद्विषयतायाः समर्थितत्वात् । मैवम्; विद्याविशेषेऽधिकाऽशङ्कया पुनः प्रत्यवस्थानात् । तर्हि, तदनन्तरमेवेदं पठितव्यम् । मैवम्; गायत्र्यधिकरणसिद्धान्तन्यायाऽवलम्बेनाऽत्र पूर्वपक्षोऽत्थानादित्याशयवान् पूर्वपक्षन्यायं विवृण्वन्प्रतिषेधति ॥ **न चाऽनन्यथेति** ॥ अन्यत्र, भगवतोऽन्यविषयस्य श्रुत्यादेः । अनन्यथासिद्धत्वं, निरवकाशत्वम् । कथं, इन्द्रश्रुतिस्तावन्निरवकाशा; "**इन्द्रो वै वृत्रं हत्वा महानभूत्**" इति, प्रकृतस्यैव, "**विश्वामित्रं ह्येतदहः शंसिष्यन्तमिन्द्र उपनिषसाद-**" इत्यनुसन्धानात् । वृत्रहननं, महाव्रतयाजित्वं च लिङ्गं निरवकाशम्; यथेन्द्रियैः सहाऽभिधानं, प्राणसंवादादिकं च निरवकाशम् । तत्समभिव्याहृतप्राणश्रुतिरप्येवमेव ।

शताऽऽयुष्ट्वाऽऽदिलिङ्गं च निरवकाशम् । तत्सहचरिता पुरुषश्रुतिरपि तथैव । आदिपदेन "प्राणो वा अहमस्मी"ति । वाक्यं गृह्यते । तस्य च निरवकाशत्व-

मुक्तश्रुतिलिङ्गसाहचर्याद्गम्यते । कुतोऽनन्यथासिद्धत्वमित्यत आह – अन्यगतेति ॥ इन्द्रादिगतानामपि लिङ्गाऽऽदीनां वृत्रवधादीनां मुख्यतस्तदन्तर्यामिभगवत्सम्बन्धित्वात्, तदपेक्षया सावकाशत्वात् । तथा चोक्तं –''शास्त्रदृष्ट्ये''ति, ''उपासात्रैविध्यादि''ति च ।

प्राक् श्रुतिलिङ्गाऽऽदेरित्युक्तम्; तत्प्राबल्यापेक्षया, इदानीं लिङ्गाऽऽदीनामिति वचनं, लिङ्गनिरवकाशतयैव श्रुत्यादिनिरवकाशतापूर्वपक्ष इति सूचनार्थम् ॥

**इति श्रीमदानन्दतीर्थभगवत्पादाचार्यविरचितन्यायविवरणपञ्चिकायां**

**प्रथमाऽध्यायस्य प्रथमः पादः ॥ श्रीः।**

ಈ ಅಂತಿಮಪ್ರಾಣಾಧಿಕರಣವು ಗತಾರ್ಥವಾಗಿದೆ. ಏಕೆಂದರೆ ಪ್ರಾಣಶಬ್ದವಿರುವ ಎಲ್ಲ ಶ್ರುತಿಗಳನ್ನು 'ಅತ ಏವ ಪ್ರಾಣಃ' ಎಂಬ ಸೂತ್ರದಿಂದ ಭಗವಂತನಲ್ಲಿ ಸಮರ್ಥಿಸಿದ್ದಾಗಿದೆಯಲ್ಲವೇ? ಎಂಬ ಶಂಕೆಯು ತಪ್ಪು. ಐತರೇಯೋಪನಿಷತ್ತಿನಲ್ಲಿ ಪ್ರಸಕ್ತವಾಗುವ ಪ್ರಾಣವಿದ್ಯೆಯಲ್ಲಿ ಅಧಿಕಾಶಂಕೆಯು ಇರುವುದರಿಂದ ಪುನಃ ಜಿಜ್ಞಾಸೆಯು ಹುಟ್ಟುತ್ತದೆ. ಹಾಗಾದರೆ ಹಿಂದಿನ ಪ್ರಾಣಾಧಿಕರಣದ ಅನಂತರವೇ ಇದನ್ನು ಉಲ್ಲೇಖಿಸಬೇಕಿತ್ತಲ್ಲವೇ? ಹೌದು; ಆದರೆ ಗಾಯತ್ರ್ಯಧಿಕರಣದ ಸಿದ್ಧಾಂತದ ನ್ಯಾಯವನ್ನು ಅವಲಂಬಿಸಿ ಈ ಅಧಿಕರಣದಲ್ಲಿ ಪೂರ್ವಪಕ್ಷವು ಹುಟ್ಟುತ್ತಿರುವುದರಿಂದ ಅಲ್ಲಿ ಇದನ್ನು ಉಲ್ಲೇಖಿಸಿಲ್ಲ. ಪ್ರಕೃತ ಈ ಅಧಿಕರಣದ ಪೂರ್ವಪಕ್ಷನ್ಯಾಯವನ್ನು ವಿವರಿಸಿ ನಿರಾಕರಿಸುತ್ತಿದ್ದಾರೆ ''ನಚಾನನ್ಯಥಾ'' ಎಂಬುದಾಗಿ. ಅನ್ಯತ್ರ ಎಂಬ ಪದಕ್ಕೆ ಭಗವಂತನನ್ನು ಬಿಟ್ಟು ಉಳಿದ ವಿಷಯವನ್ನು ಪ್ರತಿಪಾದಿಸುವ ಶ್ರುತ್ಯಾದಿಗಳಲ್ಲಿ ಎಂದರ್ಥ. ಅನನ್ಯಥಾಸಿದ್ಧತ್ವಂ ಎಂದರೆ ನಿರವಕಾಶವಾಗಿರುವಿಕೆ ಎಂದರ್ಥ. ಇಂದ್ರಶ್ರುತಿಯು ಹೇಗೆ ನಿರವಕಾಶವಾಗಿದೆಯೆಂದರೆ 'ಇಂದ್ರೋ ವೈ ವೃತ್ರಂ ಹತ್ವಾ ಮಹಾನಭೂತ್' ಎಂದು ಪ್ರಕೃತನಾದ ಇಂದ್ರನಿಗೆ 'ವಿಶ್ವಾಮಿತ್ರಂ ಹ್ಯೆತದಹಃ....' ಎಂದು ಅನುಸಂಧಾನಮಾಡಿದ್ದರಿಂದ. ಮತ್ತು ವೃತ್ರಹನನ, ಮಹಾವ್ರತಯಾಜಿತ್ವ ಮೊದಲಾದ ಲಿಂಗಗಳು ನಿರವಕಾಶಗಳಾಗಿವೆ. ಯಾವರೀತಿಯಾಗಿ ಇಂದ್ರಿಯಗಳ ಜೊತೆಗೆ ಸಹಾಭಿಧಾನವು ಮತ್ತು ಪ್ರಾಣಸಂವಾದಾದಿಗಳು ನಿರವಕಾಶಗಳಾಗಿವೆಯೋ ಅದರಂತೆ ತತ್ಸಮಭಿವ್ಯಾಹತವಾದ ಪ್ರಾಣಶ್ರುತಿಯು ಸಹ ನಿರವಕಾಶವಾಗಿದೆ.

ಶತಾಯುಷ್ಟ್ವಾದಿ ಜೀವನ ಲಿಂಗವೂ ಸಹ ನಿರವಕಾಶವಾಗಿದೆ. ತತ್ಸಹಚರಿತವಾದ ಪುರುಷಶ್ರುತಿಯೂ ಸಹ ನಿರವಕಾಶವಾಗಿದೆ. ಆದಿಪದದಿಂದ 'ಪ್ರಾಣೋ ವಾ ಅಹಮಸ್ಮಿ' ಎಂಬ ವಾಕ್ಯವನ್ನು ಸ್ವೀಕರಿಸಬೇಕು. ಈ ಶ್ರುತಿಯು ನಿರವಕಾಶವೆಂದು ಹಿಂದೆ ಹೇಳಲ್ಪಟ್ಟ ಶ್ರುತಿಹಾಗೂ ಲಿಂಗಗಳ ಸಾಹಚರ್ಯದಿಂದ ತಿಳಿಯುತ್ತದೆ.

ಇವುಗಳು ಅನನ್ಯಥಾಸಿದ್ಧಲಿಂಗವೆಂದು ಹೇಗೆ ತಿಳಿಯುತ್ತದೆ ಎಂಬ ಪ್ರಶ್ನೆಗೆ 'ಅನ್ಯಗತ' ಎಂಬುದರಿಂದ ಉತ್ತರಿಸುತ್ತಿದ್ದಾರೆ. ವೃತ್ರಹನನಾದಿ ಲಿಂಗಗಳೆಲ್ಲ ಇಂದ್ರಾದಿಗಳಲ್ಲಿದ್ದರೂ ಮುಖ್ಯವಾಗಿ ಇಂದ್ರಾದಿಗಳ ಅಂತರ್ಯಾಮಿಯಾದ ಭಗವಂತನಲ್ಲೇ ಇರುತ್ತವೆ. ಆದ್ದರಿಂದ ಇಂದ್ರಾದಿಗಳಲ್ಲಿ ಸಾವಕಾಶವಾಗಿವೆ. ಆದ್ದರಿಂದಲೇ 'ಶಾಸ್ತ್ರದೃಷ್ಟ್ಯಾ' ಎಂದು ಮತ್ತು 'ಉಪಾಸಾತ್ರೈವಿಧ್ಯಾತ್' ಎಂದು ಹೇಳಿದ್ದಾರೆ.

ಅಂತಿಮಪ್ರಾಣಾಧಿಕರಣ-(೧।೧।೧೨)

ಹಿಂದೆ 'ಶ್ರುತಿಲಿಂಗಾದೇಃ' ಎಂದು ಹೇಳಿದ್ದರು, ಆದರೆ ಈಗ 'ಲಿಂಗಾದೀನಾಂ' ಎನ್ನುತ್ತಿದ್ದಾರೆ. ಏಕೆಂದರೆ ಶ್ರುತಿಯು ಪ್ರಬಲವೆಂಬ ವಿವಕ್ಷೆಯಿಂದ ಹಿಂದೆ ಶ್ರುತಿಯನ್ನು ಮೊದಲು ಪರಿಗಣಿಸಿದ್ದರು. ಆದರೆ ಈಗ ಲಿಂಗವನ್ನು ನಿರವಕಾಶವೆಂದು ಒಪ್ಪಿ ಶ್ರುತ್ಯಾದಿಗಳ ನಿರವಕಾಶತ್ವವನ್ನು ಹೇಳುವ ಮೂಲಕ ಪೂರ್ವಪಕ್ಷವನ್ನು ಮಾಡಬೇಕು. ಇದನ್ನು ಸೂಚಿಸುವುದಕ್ಕಾಗಿ ಲಿಂಗವನ್ನು ಮೊದಲು ಇಲ್ಲಿ ಪರಿಗಣಿಸಿದ್ದಾರೆ.

### श्रीमदानन्दतीर्थभगवत्पादाचार्यविरचितम्

## अणुभाष्यम्;

### श्रीमद्राघवेन्द्रतीर्थविरचिततत्वमञ्जर्या समेतम्

# अन्तिमप्राणाधिकरणम्

प्राणपदप्रवृत्तिनिमित्तगुणलाभस्य प्रणेतेत्यनेनैव उक्तत्वात् प्राणस्तथेत्येतत्सङ्ग्रहो न कृतः ।

यद्वा नन्वथापि प्रणेता विष्णुरित्ययुक्तम् । **''चक्षुः श्रोत्रं मनो वाक् प्राणः''** इत्यैतरेये श्रुतस्य प्राणशब्दितस्य प्रणेतुः चक्षुरादीन्द्रियसहपाठेन्द्रियसंवादादिना मुख्यप्राणस्य **''प्राणो वा अहमस्मि''** इतीन्द्रेण आत्मनः प्राणतादात्म्येक्तेः इन्द्रस्य **''यच्छतं वर्षाणि पुरुषायुषो भवन्ति''** इति जीवलिङ्गेन जीवत्वस्य च अवगमात् । वाक्यभेदेन त्रितयपरत्वोपपत्तेश्चेत्यत उक्तम् – प्राणस्तथाऽनुगमादिति सूत्रचतुष्टयम् ॥

ಅಣುಭಾಷ್ಯದಲ್ಲಿ ಅಂತಿಮಪ್ರಾಣಾಧಿಕರಣದ ಸಾರವನ್ನು ಪ್ರತ್ಯೇಕವಾಗಿ ಸಂಗ್ರಹಿಸಿಲ್ಲ. ಪ್ರಾಣಪದದ ಪ್ರವೃತ್ತಿನಿಮಿತ್ತವಾದ ಗುಣವನ್ನು 'ಪ್ರಣೇತಾ' ಎಂಬ ಪದವೇ ಹೇಳುತ್ತದೆ. ಆದ್ದರಿಂದ ಹಿಂದಿನ ಪ್ರಾಣಾಧಿ -ಕರಣದ ಸಾರವನ್ನು ಹೇಳುವ ಪ್ರಣೇತಾ ಎಂಬ ಪದದಿಂದಲೇ ಈ ಅಧಿಕರಣದ ಸಾರವನ್ನೂ ಸಹ ತಿಳಿಯಬೇಕು.

ಅಥವಾ ಪ್ರಣೇತೃತ್ವವು ವಿಷ್ಣುವಿನ ಧರ್ಮವೆಂದು ಹೇಳಿರುವುದು ಸರಿಯಲ್ಲ. ಏಕೆಂದರೆ, 'ಚಕ್ಷುಃ ಶ್ರೋತ್ರಂ ಮನೋ ವಾಕ್ ಪ್ರಾಣಃ' ಎಂಬುದಾಗಿ ಐತರೇಯಶ್ರುತಿಯಲ್ಲಿ ಪ್ರಾಣಶಬ್ದದಿಂದ ಪ್ರಣೇತೃತ್ವವು ಕೇಳಿಸುತ್ತಿದೆ. ಮತ್ತು ಚಕ್ಷುರಾದಿ ಇಂದ್ರಿಯಗಳ ಜೊತೆಗೆ ಪಠಿತವಾಗಿದೆ. ಮತ್ತು ಇಂದ್ರಿಯಗಳೊಡನೆ

ಸಂವಾದವೂ ಸಹ ಕೇಳಿಸುತ್ತಿದೆ. ಈ ಎಲ್ಲ ಕಾರಣಗಳಿಂದ ಮುಖ್ಯಪ್ರಾಣನೇ ಪ್ರಾಣನೆನಿಸುತ್ತಾನೆ. ಅಥವಾ ಪ್ರಾಣೋ ವಾ ಅಹಮಸ್ಮಿ' ಎಂಬುದಾಗಿ ದೇವೇಂದ್ರನು ತನ್ನನ್ನೇ ಪ್ರಾಣನೆಂದು ಹೇಳಿದ್ದರಿಂದ, ಪ್ರಾಣಶಬ್ದವು ದೇವೇಂದ್ರನನ್ನು ಪ್ರತಿಪಾದಿಸಬಹುದು.

ಅಥವಾ 'ಯಚ್ಛತಂ ವರ್ಷಾಣಿ ಪುರುಷಾಯುಷೋ ಭವಂತಿ' ಇತ್ಯಾದಿಯಾಗಿ ಶತಾಯುಷ್ಟ್ವವೆಂಬ ಜೀವನ ಲಿಂಗವು ಕೇಳಿಸುತ್ತಿರುವುದರಿಂದ ಪ್ರಾಣಶಬ್ದವು ಜೀವನನ್ನೂ ಸಹ ಹೇಳಬಹುದು. ಹೀಗೆ ವಾಕ್ಯಭೇದದಿಂದ ಐತರೇಯದಲ್ಲಿ ಕೇಳಿಸುತ್ತಿರುವ ಪ್ರಾಣಶಬ್ದವು ಮೂವರಲ್ಲಿ ಯಾರೊಬ್ಬರನ್ನೂ ಸಹ ಪ್ರತಿಪಾದಿಸಬಹುದಲ್ಲವೇ? ಎಂಬ ಪ್ರಶ್ನೆಗೆ ಉತ್ತರರೂಪವಾಗಿ ''ಪ್ರಾಣಸ್ತಥಾನುಗಮಾತ್'' ಇತ್ಯಾದಿಯಾದ ನಾಲ್ಕು ಸೂತ್ರಗಳು ಹೊರಟಿವೆ.

तदर्थः – **इत्याद्यैः प्रसिद्धैरन्यवस्तुषु ॥** उच्यते **विष्णुरेवैकः सर्वैः सर्वगुणत्वतः ॥** इति । मुख्यप्राणादिरूपान्यप्रापकप्रबललिङ्गोपेतप्राणाद्यैः सर्वैरन्यवस्तुषु प्रसिद्धैः शब्दैरेको विष्णुरेवोच्यते । न तु मुख्यप्राणादिरनेकः । येन वाक्यभेद आश्रीयेत । कुतः । **सर्वगुणत्वतः** । **"तं देवाः प्राणयन्त" "तं देवा भूतिरित्युपासाञ्चक्रिरे" 'तदयं प्राणोऽधितिष्ठति'** इत्यादिनोक्तैतत्प्रकरणस्थदेवोपास्यत्वदेहाख्यरथाधिष्ठातृत्वादि सर्वगुणत्वात् विष्णोरित्यर्थः । केन निमित्तेनोच्यते । सर्वगुणत्वतः ।

प्रागुक्तदिशा सर्वजीवनहेतुत्वादिरूपप्राणादितत्तच्छब्दप्रवृत्तिनिमित्तगुणवत्त्वात् अन्यगतं प्रति स्वातन्त्र्याच्च । न च अन्यलिङ्गविरोधः । **सर्वगुणत्वतः** । प्राणसंवादाद्यन्यलिङ्गरूपसर्वगुणवत्त्वादित्यर्थः । प्राणसंवादादिशतायुष्ट्वरूपस्य इन्द्रोक्तप्राणतादात्म्यस्य च तत्स्थितान्तर्यामिण्युपपत्तेः । न च **"उदासीनवदास्तां तौ केशवश्चाब्जसम्भवः"** इति स्मृतिविरोधः । सर्वगुणत्वतः । अन्तर्यामिणः तदीयप्राणसंवादादिसर्वगुणत्वात् । स्मृतेस्तु ततो बाह्यरूपविषयत्वेनोपपत्तेरिति ।

ಇದರ ಅರ್ಥವನ್ನೇ 'ಇತ್ಯಾದ್ಯೈಃ ಪ್ರಸಿದ್ಧೈರನ್ಯವಸ್ತುಷು । ಉಚ್ಯತೇ ವಿಷ್ಣುರೇವೈಕಃ ಸರ್ವೈಃ ಸರ್ವಗುಣತ್ವತಃ ॥'' ಎಂದು ಅಣುಭಾಷ್ಯದಲ್ಲಿ ಸಂಗ್ರಹಿಸಲಾಗಿದೆ.

ವಸ್ತುತಃ ಮುಖ್ಯಪ್ರಾಣಾದಿಗಳನ್ನು ಪ್ರಾಣಶಬ್ದವಾಚ್ಯರೆನ್ನಲು ಪ್ರಬಲವಾದ ಲಿಂಗ ಮೊದಲಾದ ಪ್ರಮಾಣಗಳಿವೆ. ಆದರೂ ಸಹ ಅನ್ಯವಸ್ತುಗಳಲ್ಲಿ ಪ್ರಸಿದ್ಧವಾದ ಎಲ್ಲ ಶಬ್ದಗಳಿಂದಲೂ ವಿಷ್ಣುವೊಬ್ಬನೇ ಪ್ರತಿಪಾದ್ಯನಾಗುತ್ತಾನೆ. ಹೊರತು ಮುಖ್ಯಪ್ರಾಣಾದಿಗಳೆಲ್ಲರೂ ಪ್ರತಿಪಾದ್ಯರಾಗುವುದಿಲ್ಲ. ಹಾಗೆ ಅನೇಕರನ್ನು ಪ್ರತಿಪಾದ್ಯರೆಂದು ಒಪ್ಪಿದರೆ, ವಾಕ್ಯಭೇದದೋಷವು ಬರುತ್ತದೆ. ಏಕೆಂದರೆ, ''ಸರ್ವಗುಣತ್ವತಃ'' ಎಂದು ಉತ್ತರ. ಅಂದರೆ, 'ತಂ ದೇವಾಃ ಪ್ರಾಣಯಂತ, 'ತಂ ದೇವಾಃ ಭೂತಿರಿತ್ಯುಪಾಸಾಂ ಚಕ್ರಿರೇ' 'ತದಯಂ ಪ್ರಾಣೋಽಧಿತಿಷ್ಠತಿ' ಇತ್ಯಾದಿಯಾಗಿ ಈ ಪ್ರಕರಣದಲ್ಲಿ ಪ್ರತಿಪಾದ್ಯವಾದ ದೇವೋಪಾಸ್ಯತ್ವ

ದೇಹರೂಪವಾದ ರಥಾಧಿಷ್ಠಾತೃತ್ವ ಮೊದಲಾದ ಲಿಂಗಗಳೆಲ್ಲವೂ ಸಕಲಗುಣಪೂರ್ಣನಾದ ವಿಷ್ಣುವಿನಲ್ಲೇ ಬರುತ್ತವೆ. ಯಾವ ಕಾರಣದಿಂದ ಎಂದರೆ, ಸರ್ವಗುಣತ್ವತಃ ಸಕಲಗುಣಗಳುಳ್ಳವನಾದ್ದರಿಂದ.

ಹಿಂದೆ ಹೇಳಿದ ಪ್ರಕಾರ ಸರ್ವಜೀವನಹೇತುತ್ವ ಮೊದಲಾದ ಪ್ರಾಣಾದಿಶಬ್ದಪ್ರವೃತ್ತಿನಿಮಿತ್ತದಿಂದ ತಿಳಿಯುವ ಗುಣಗಳೆಲ್ಲವೂ ಭಗವಂತನಲ್ಲಿಯೇ ಇರುತ್ತವೆ. ಬೇರೆಯವರಲ್ಲಿದ್ದರೂ ಅದಕ್ಕೆ ಭಗವಂತನೇ ನಿಯಾಮಕನಾಗಿರುತ್ತಾನೆ. ಹೀಗೆ ಹೇಳಿದಾಗ ಮುಖ್ಯಪ್ರಾಣಾದಿಗಳ ಲಿಂಗದ ವಿರೋಧವು ಬರುವುದಿಲ್ಲ. ಇದಕ್ಕೂ ಸಹ ಸರ್ವಗುಣತ್ವತಃ ಎಂಬುದೇ ಉತ್ತರ. ಅಂದರೆ ಪ್ರಾಣಸಂವಾದವೇ ಮೊದಲಾದ ಲಿಂಗ-ಗಳೆಲ್ಲವೂ ಸರ್ವಗುಣವುಳ್ಳ ಪರಮಾತ್ಮನಲ್ಲೇ ಇರುತ್ತವೆ. ಪ್ರಾಣಸಂವಾದ, ಶತಾಯುಷ್ಟ್ವ, ಇಂದ್ರೋಕ್ತ ಪ್ರಾಣತಾದಾತ್ಮ್ಯ ಎಲ್ಲವೂ ಸಹ ಆಯಾ ಜೀವಿಗಳ ಅಂತರ್ಯಾಮಿಯಾದ ಭಗವಂತನಲ್ಲಿಯೇ ಕೂಡುತ್ತದೆ.

'ಉದಾಸೀನವದಾಸ್ತಾಂ ತೌ ಕೇಶವಶ್ಚಾಬ್ದಸಂಭವಃ' ಎಂಬ ಸ್ಮೃತಿವಿರೋಧವೂ ಸಹ ಬರುವುದಿಲ್ಲ. ಏಕೆಂದರೆ ಸರ್ವಗುಣತ್ವತಃ ಎಂದೇ ಉತ್ತರ. ಅಂತರ್ಯಾಮಿಯಾದ ಭಗವಂತನು ಆಯಾ ಜೀವಿಗಳಲ್ಲಿರುವ ಪ್ರಾಣಸಂವಾದಾದಿ ಗುಣಗಳಿಂದ ಕೂಡಿದ್ದಾನೆ. ಭಗವಂತ ಬಾಹ್ಯರೂಪದ ವಿವಕ್ಷೆ- ಯಿಂದ ಸ್ಮೃತಿಯು ಔದಾಸೀನ್ಯವನ್ನು ಹೇಳುತ್ತಿದೆ.

न चान्तर्याम्युक्तिः नाभिमता । **सर्वगुणत्वतः** । **''स इदं ब्रह्म ततमम्''** इति, **''एतया द्वारा प्रापद्यते''** इति, **''इत्याह महिदासः''** इति व्याप्तत्वान्तस्थत्व-बहिष्ठत्वगुणवत्त्वोक्तेरित्यर्थः ।

न च त्रितयोक्तिः व्यर्था । **सर्वगुणत्वतः** । उपासनार्थं सर्वान् त्रिविधाधिकारिणः प्रति गुणत्वादनुरूपत्वादिति ।

ಅಂತರ್ಯಾಮಿಯನ್ನೇ ವಿವಕ್ಷಿಸಬೇಕೆಂದು ಸರ್ವಗುಣತ್ವತಃ ಎಂಬುದರಿಂದಲೇ ಉತ್ತರಿಸಿದ್ದಾರೆ. ಏಕೆಂದರೆ 'ಸ ಇದಂ ಬ್ರಹ್ಮ ತತಮ್' 'ಏತಯಾ ದ್ವಾರಾ ಪ್ರಾಪದ್ಯತೇ' 'ಇತ್ಯಾಹ ಮಹಿದಾಸಃ' ಇವೇ ಮೊದಲಾದ ಶ್ರುತಿವಾಕ್ಯಗಳಿಂದ ವಾಪ್ತತ್ವ, ಅಂತಃಸ್ಥತ್ವ, ಬಹಿಷ್ಠತ್ವ ಮೊದಲಾದ ಸಕಲಗುಣಗಳು ಪರಮಾತ್ಮನಲ್ಲಿರುವುದೇ ಸ್ಪಷ್ಟವಾಗುತ್ತದೆ.

ಮೂರು ಗುಣಗಳನ್ನು ಹೇಳಿದ್ದು ವ್ಯರ್ಥವಲ್ಲ. ಏಕೆಂದರೆ ಸರ್ವಗುಣತ್ವತಃ ಎಂದೇ ಉತ್ತರ. ಉಪಾಸನೆಗೋಸ್ಕರ ಮೂರುವಿಧ ಅಧಿಕಾರಿಗಳಿಗೆ ಯೋಗ್ಯತಾಭೇದದಿಂದ ಮೂರು ರೂಪಗಳು ಹೇಳಲ್ಪಟ್ಟಿವೆ.

पादार्थमुपसंहरति । इत्याद्यैरिति । समन्वितपूर्णानन्दादिशब्दानां इत्याद्यैरिति परामर्शः ।

**॥ इति श्रीब्रह्मसूत्राणुभाष्यविवृतौ तत्त्वमञ्जर्यां राघवेन्द्रयविकृतायां प्रथमाध्यायस्य प्रथमः पादः ॥**

ಸಮಸ್ತಪಾದದ ಪ್ರಮೇಯವನ್ನು ಉಪಸಂಹಾರ ಮಾಡುತ್ತಿದ್ದಾರೆ. 'ಇತ್ಯಾದ್ಯೈಃ ಪ್ರಸಿದ್ಧೈರನ್ಯ-ವಸ್ತುಷು' ಎಂಬುದಾಗಿ. 'ಇತ್ಯಾದ್ಯೈಃ' ಎಂಬುದರಿಂದ ಈ ಪಾದದಲ್ಲಿ ಸಮನ್ವಯಮಾಡಿದ ಪೂರ್ಣಾ-ನಂದಾದಿಶಬ್ದಗಳನ್ನು ಪರಾಮರ್ಶಿಸಿದ್ದಾರೆ.

## श्री राघवेन्द्रतीर्थविरचिता

# तन्त्रदीपिका

## अन्तिमप्राणाधिकरणम्

॥ ॐ प्राणस्तथाऽनुगमात् ॐ ॥ १-१-२८

अत्र नयेऽन्यप्रापकबहुलिङ्गयुतनामसमन्वय उच्यते । ऐतरेये बहुकृत्वः ''ता वा एता'' इत्यारभ्य श्रुतः प्राणो यथा ''तद्वै त्वं प्राण'' इत्ययं ब्रह्म तथा अयं च तत्तु ब्रह्मैव । न त्विन्द्रजीवमुख्यप्राणाः । कुतः? ब्रह्मशब्ददेवोपास्यत्वादितच्छ्रुतिलिङ्गाना-मस्मिन् प्रकरणेऽनुगमादनुवृत्तेरभ्यासादित्यर्थः ।

तथेत्युक्तिस्तत्रोक्तजीवनहेतुत्वरूपप्राणपदप्रवृत्तिनिमित्तसत्त्वस्मारणार्था । ''तथा प्राणाः तथाऽन्यत्प्रतिषेधात्'' इत्यादिवत् । यद्वा अस्यान्यत्वे प्राचीनोऽप्यन्य इति न शङ्क्यम् । स चायं च ब्रह्मैवेति वक्तुं तथेत्युक्तिः । अनुगमादित्युक्तिरेतत्प्रकरणस्य वैष्णवत्वोक्त्यर्था ।

ಪ್ರಾಣಸ್ತಥಾನುಗಮಾತ್ - ಈ ಅಧಿಕರಣದಲ್ಲಿ ವಿಷ್ಣುವಿಗಿಂತ ಅನ್ಯರಾದ ಮುಖ್ಯಪ್ರಾಣಾದಿಗಳಿಗೆ ಸಂಬಂಧಿಸಿದ ಅನೇಕ ಲಿಂಗಗಳಿಂದ ಕೂಡಿದ ನಾಮಾತ್ಮಕಶಬ್ದದ ಸಮನ್ವಯವನ್ನು ಮಾಡಲಾಗುತ್ತಿದೆ. ಐತರೇಯೋಪನಿಷತ್ತಿನಲ್ಲಿ 'ತಾ ವಾ ಏತಾಃ' ಎಂದು ಪ್ರಾರಂಭವಾಗಿ ಕೇಳಿಸುತ್ತಿರುವ ಪ್ರಾಣನು 'ತದ್ ವೈ ತ್ವಂ ಪ್ರಾಣಃ' ಎಂದು ತೈತ್ತಿರೀಯದಲ್ಲಿ ಶ್ರುತನಾಗಿರುವ ಪ್ರಾಣನು ಹೇಗೆ ಬ್ರಹ್ಮನಾಗಿದ್ದಾನೋ, ತಥಾ = ಆದರಂತೆ ಪ್ರಾಣಃ = ಈ ಪ್ರಾಣನೂ, ತತ್ತು = ಸಹ ಬ್ರಹ್ಮನೇ ಆಗಿದ್ದಾನೆ. ಹೊರತು ಇಂದ್ರ ಜೀವ ಮುಖ್ಯಪ್ರಾಣಾದಿಗಳು ಪ್ರಾಣಶಬ್ದವಾಚ್ಯರಾಗುವುದಿಲ್ಲ. ಏಕೆಂದರೆ ಈ ಪ್ರಕರಣದಲ್ಲಿ ಬ್ರಹ್ಮನಿಗೆ ಸಂಬಂಧಿಸಿದ

ಬ್ರಹ್ಮಶಬ್ದ ದೇವೋಪಾಸ್ಯತ್ವ ಮೊದಲಾದ ಶ್ರುತಿ ಹಾಗೂ ಲಿಂಗಗಳು ಅನುಗಮಾತ್ = ಅನುವೃತ್ತವಾಗಿವೆ. ಅಂದರೆ ಅನೇಕಬಾರಿ ಕೇಳಿಸುತ್ತಿರುವುದರಿಂದ ಎಂದರ್ಥ.

ಸೂತ್ರದಲ್ಲಿರುವ ತಥಾ ಎಂಬ ವಚನವು ಯುಕ್ತಿಗಳ ಸ್ಮರಣೆಯನ್ನು ತಂದುಕೊಡುತ್ತದೆ. ಯಾವರೀತಿಯಾಗಿ 'ತಥಾ ಪ್ರಾಣಾಃ ತಥಾಽನ್ಯತ್ ಪ್ರತಿಷೇಧಾತ್' ಇತ್ಯಾದಿ ಸೂತ್ರಗಳಲ್ಲಿ ತಥಾಶಬ್ದವು ಹಿಂದಿನ ಸೂತ್ರಗಳಲ್ಲಿರುವ ಯುಕ್ತಿಯನ್ನು ಸ್ಮರಣೆಗೆ ತಂದು ಕೊಡುತ್ತದೋ ಅದರಂತೆ ಈ ಸೂತ್ರ-ದಲ್ಲಿರುವ ತಥಾ ಶಬ್ದವೂ ಸಹ ಹಿಂದಿನ ಪ್ರಾಣಾಧಿಕರಣದಲ್ಲಿ ಹೇಳಲ್ಪಟ್ಟ ಪ್ರಾಣಪದಪ್ರವೃತ್ತಿ- ನಿಮಿತ್ತವೆನಿಸಿದ ಜೀವನಹೇತುತ್ವವೆಂಬ ಯುಕ್ತಿಯನ್ನು ಸ್ಮರಿಸಿಕೊಡುತ್ತದೆ.

ಅಥವಾ ಈ ಐತರೇಯೋಪನಿಷತ್ತಿನಲ್ಲಿ ಕೇಳಿಸುತ್ತಿರುವ ಪ್ರಾಣನು ಬ್ರಹ್ಮನಾಗದಿದ್ದಲ್ಲಿ ಹಿಂದಿನ ತೈತ್ತಿರೀಯೋಪನಿಷತ್ತಿನಲ್ಲಿ ಶ್ರುತನಾದ ಪ್ರಾಣನೂ ಸಹ ಬ್ರಹ್ಮನಾಗುವುದಿಲ್ಲ ಎಂದು ಶಂಕಿಸಬಾರದು. ತೈತ್ತಿರೀಯದಲ್ಲಿ ಹಾಗೂ ಐತರೇಯದಲ್ಲಿ ಪ್ರಸಕ್ತನಾಗಿರುವ ಪ್ರಾಣನು ಒಬ್ಬನೇ ಬ್ರಹ್ಮನಾಗಿದ್ದಾನೆ. ಈ ವಿಚಾರವನ್ನು ತಿಳಿಸಲೂ ಸಹ ತಥಾ ಎಂದು ಸೂತ್ರದಲ್ಲಿ ಹೇಳಿದ್ದಾರೆ. ಈ ಪ್ರಕರಣವು ವಿಷ್ಣುಸಂಬಂಧಿ ಯಾಗಿದೆ ಎಂದು ಸೂಚಿಸಲು ಅನುಗಮಾತ್ ಎಂದು ಹೇಳಿದ್ದಾರೆ.

उक्तमाक्षिप्य समाधत्ते -

**॥ ॐ न वुक्तरात्मोपदेशादिति चेदध्यात्म-**
**सम्बन्धभूता ह्यस्मिन् ॐ ॥ १-१-२९**

वक्तुर्बृहतीसहस्रं वक्तुर्विश्वामित्रस्येन्द्रेण **''प्राणो वा अहमस्म्यृषे''** इत्यात्मन एव प्राणतयोपदेशान्न प्राणो ब्रह्मेति चेन्नेति शेषः । कुतः? हि यस्मात् अस्मिन् प्रकरणेऽध्यात्मं देहेषु विष्णुदेहभूतेष्विन्द्रविश्वामित्रादिषु सम्बन्धभूमा सम्बन्ध-बाहुल्यम्, **''प्राणोऽहं प्राणस्त्वं प्राणस्सर्वाणि भूतानि''** इत्युक्तबह्वध्यात्मसम्बन्ध इति यावत्, व्यपदिश्यते यतोऽतः प्राणो विष्णुरित्यर्थः । इन्द्रेण प्राणाख्यब्रह्मणः सर्वगतत्वमेवोच्यते नतु प्राणत्वेनात्मोपदिश्यत इति भावः । यद्वा अस्मिन्निन्द्रेऽधि-कात्मनः सम्बन्धभूमा आवेशबाहुल्यं हि यस्मादस्त्यतस्तदपेक्षया **''प्राणो वा अहम्''** इत्युक्तिरित्यर्थः । आत्मोपदेशादित्येव पूर्तौ वक्तुरित्युक्तिः शास्त्रवक्तारं पति इन्द्रस्य न विप्रलम्भ इति पूर्वपक्षे युक्तिसूचानार्था । सम्बन्धेत्युक्तिरैक्यनिवृत्त्यर्था ॥

ಇಲ್ಲಿಯ ತನಕ ಹೇಳಿದ್ದನ್ನು ಆಕ್ಷೇಪಿಸಿ ಸಮಾಧಾನವನ್ನು ಹೇಳುವುದಕ್ಕಾಗಿ ಮುಂದಿನ ಸೂತ್ರ ಹೊರಡುತ್ತಿದೆ. ವಕ್ತುಃ = ಬೃಹತೀಸಹಸ್ರವನ್ನು ಪಠಿಸಿದ ವಿಶ್ವಾಮಿತ್ರನನ್ನು ಕುರಿತು ದೇವೇಂದ್ರನು 'ಪ್ರಾಣೋ ವಾ ಅಹಮಸ್ಮಿ ಋಷೇ' ಎಂಬುದಾಗಿ ತನ್ನನ್ನೇ ಪ್ರಾಣನು ಎಂದು ಉಪದೇಶಿಸಿಕೊಂಡಿದ್ದಾನೆ. ಇಲ್ಲಿರುವ

ಪ್ರಾಣಶಬ್ದಕ್ಕೆ ಬ್ರಹ್ಮನಲ್ಲವೆಂಬರ್ಥವನ್ನು ಹೇಳಬಾರದು. ಏಕೆಂದರೆ, ಹಿ = ಯಾವ ಕಾರಣದಿಂದ, ಅಸ್ಮಿನ್ = ಈ ಪ್ರಕರಣದಲ್ಲಿ, ಅಧ್ಯಾತ್ಮಂ = ದೇಹಗಳಲ್ಲಿ ಅಂದರೆ ವಿಷ್ಣುವಿನ ದೇಹವೆನಿಸಿದ ಇಂದ್ರ ವಿಶ್ವಾಮಿತ್ರ ಮೊದಲಾದವರಲ್ಲಿ ಸಂಬಂಧಭೂಮಾ = ಬಹಳವಾದ ಸಂಬಂಧವು ಅಂದರೆ 'ಪ್ರಾಣೋಽಹಂ ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ' ಎಂಬುದಾಗಿ ಬಹಳವಾದ ಅಧ್ಯಾತ್ಮಸಂಬಂಧವು ಹೇಳಲ್ಪಟ್ಟಿದೆಯೋ ಆ ಕಾರಣದಿಂದ ಪ್ರಾಣನು ವಿಷ್ಣುವೇ ಆಗಿದ್ದಾನೆಂದರ್ಥ. ಇಂದ್ರನಿಂದ ಪ್ರಾಣನೆಂಬ ಬ್ರಹ್ಮನನ್ನೇ ಸರ್ವಗತನೆಂದು ಉಪದೇಶಿಸಲಾಗಿದೆ. ಹೊರತು ತನ್ನನ್ನು ಪ್ರಾಣನೆಂದು ಉಪದೇಶಿಸಿರುವುದಿಲ್ಲವೆಂದು ಭಾವ.

ಅಥವಾ, ಅಸ್ಮಿನ್ = ಈ ಇಂದ್ರನಲ್ಲಿ, ಅಧ್ಯಾತ್ಮಸಂಬಂಧಭೂಮಾ = ಅಧಿಕನಾದ ಆತ್ಮನ ಬಹಳವಾದ ಆವೇಶವು ಯಾವ ಕಾರಣದಿಂದ ಇದೆಯೋ, ಆ ಕಾರಣದಿಂದ 'ಪ್ರಾಣೋ ವಾ ಅಹಮ್' ಎಂದು ಹೇಳಲಾಗಿದೆ ಎಂದರ್ಥ. ಆತ್ಮೋಪದೇಶಾತ್ ಎಂದಷ್ಟೇ ಸೂತ್ರದಲ್ಲಿ ಹೇಳಿದ್ದರೆ ಸಾಕಾಗುತ್ತಿತ್ತು. ಆದರೂ ಸಹ 'ವಕ್ತುಃ' ಎಂದು ಹೇಳಿದ್ದರಿಂದ ಶಾಸ್ತ್ರವನ್ನು ಉಪದೇಶಿಸುವ ದೇವೇಂದ್ರನು ಮತ್ತೊಬ್ಬನನ್ನು ವಂಚಿಸಲಾರ ಎಂಬ ಪೂರ್ವಪಕ್ಷಯುಕ್ತಿಯನ್ನು ಸೂಚಿಸಿದ್ದಾರೆ. ಸಂಬಂಧಪದವನ್ನು ಹೇಳಿದ್ದರಿಂದ ಐಕ್ಯವನ್ನು ನಿರಾಕರಿಸಿದ್ದಾರೆ.

तर्हि प्राणो मय्यस्त्यृषे इत्यादि स्यादित्यत आह

## ॥ ॐ शास्त्रदृष्ट्या तूपदेशो वामदेववत् ॐ ॥ १-१-३०

तुरेव । शास्तीति शास्त्रमन्तर्यामी । **"संविच्छास्त्रं परं पदम्"** इत्यादेः । तद्दृष्ट्यैव **"प्राणो वा अहम्"** इत्युपदेशो न तु तादात्म्येन । वामदेववत् वामदेवोपदेशवत् । यथा वामदेवोऽन्तर्यामिदृष्ट्या **"अहं मनुरभवम्"** इत्याद्याह तद्वदित्यर्थः । अन्तर्यामिदृष्ट्येति वाच्ये शास्त्रेत्युक्तिः सर्वशास्तृत्वात् तत्तच्छब्द-वाच्यतेति ज्ञापनार्था । **"तत्तन्नाम्नोच्यते विष्णुस्सर्वशास्तृत्वहेतुतः"** इत्यादेः ।

ಹಾಗಾದರೆ ದೇವೇಂದ್ರನು ನನ್ನಲ್ಲಿ ಪ್ರಾಣನಿದ್ದಾನೆಂದು ಹೇಳಬೇಕಿತ್ತಲ್ಲವೇ? ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ನೀಡಲು ಮುಂದಿನ ಸೂತ್ರ ಹೊರಟಿದೆ.

ಸೂತ್ರಾರ್ಥ - ತುಶಬ್ದಕ್ಕೆ ಏವ ಎಂದರ್ಥ. ಶಾಸ್ತ್ರದೃಷ್ಟ್ಯಾ = ಶಾಸ್ತೀತಿ ಶಾಸ್ತ್ರಮ್ ಹಾಗೂ 'ಸಂವಿಚ್ಛಾಸ್ತ್ರಂ ಪರಂ ಪದಮ್' ಎಂಬ ಪ್ರಮಾಣದ ಆಧಾರದಿಂದ ಶಾಸ್ತ್ರ ಎಂದರೆ ಅಂತರ್ಯಾಮಿ ಎಂದರ್ಥ. ಆ ಅಂತರ್ಯಾಮಿಯ ದೃಷ್ಟಿಯಿಂದಲೇ ದೇವೇಂದ್ರನು 'ಪ್ರಾಣೋ ವಾ ಅಹಮ್' ಎಂಬುದಾಗಿ ಉಪದೇಶಿಸಿದ್ದಾನೆ; ಹೊರತು ಅಭೇದವಿರುವುದರಿಂದಲ್ಲ. ವಾಮದೇವವತ್ ವಾಮದೇವನ ಉಪದೇಶದಂತೆ ಯಾವರೀತಿಯಾಗಿ ವಾಮದೇವನು ಅಂತರ್ಯಾಮಿ ದೃಷ್ಟಿಯಿಂದ 'ಅಹಂ ಮನುರಭವಮ್' ಎಂದು ತನ್ನನ್ನೇ ಮನುವೆಂದು ಹೇಳಿಕೊಂಡಿದ್ದಾನೋ ಅದರಂತೆ ಎಂದರ್ಥ.

ಅಂತರ್ಯಾಮಿ ದೃಷ್ಟ್ಯಾ ಎಂದು ಹೇಳುವ ಬದಲು ಶಾಸ್ತ್ರದೃಷ್ಟ್ಯಾ ಎಂದು ಹೇಳಿದ್ದರಿಂದ ಪರಮಾತ್ಮನು ಎಲ್ಲರಿಗೂ ನಿಯಾಮಕನಾದ್ದರಿಂದ ಆಯಾ ಶಬ್ದದಿಂದ ವಾಚ್ಯನಾಗಿದ್ದಾನೆ ಎಂಬುದನ್ನು ನೆನೆಪಿಸಿ-ದಂತಾಯಿತು. "ತತ್ತನ್ನಾಮ್ನೋಚ್ಯತೇ ವಿಷ್ಣುಃ ಸರ್ವಶಾಸ್ತೃತ್ವ ಹೇತುತಃ' ಎಂದು ಹೇಳಿರುವುದರಿಂದ.

**॥ ॐ जीवमुख्यप्राणलिङ्गान्नेति चेन्नोपासात्रैविध्या-
दाश्रितत्वादिह तद्योगात् ॐ ॥ १-१-३१**

प्राणो ब्रह्मेति वर्तते । नेत्यनन्तरं शास्त्रदृष्ट्या तूपदेश इति च । "तं शतं वर्षाण्यभ्यार्चत्" इति शतायुष्ट्वादिरूपजीवलिङ्गात् प्राणसंवादादिमुख्यप्राणलिङ्गान्न प्राणो ब्रह्मेति चेन्न । "तं शतम्" इत्यादिजीवप्राणलिङ्गोपदेशः तदन्तर्यामिदृष्ट्यैव युक्तः । "उदासीनावदास्तां तौ" इत्यौदासीन्यं तु बाह्यरूपेणेत्यविरोधः । किमर्थाऽ-न्तर्याम्युक्तिरित्यत उक्तमुपासेत्यादि ।

अन्तर्व्याप्तत्वबहिष्ठत्वभेदेन ब्रह्मोपासायाः त्रैविध्यादिह प्रकरणे "स एतमेव सीमानं विदार्यैतया द्वारा प्रापद्यत" इति "स एतमेव पुरुषं ब्रह्मततममपश्यत्" इति "एतद्ध स्म वै तद्विद्वानाह महिदास ऐतरेयः" इति च तत्त्रैविध्यस्या-श्रितत्वादुक्तत्वादित्यर्थः । एकयैवोपासायाऽलं किं त्रैविध्येनेत्यत उक्तं - तद्योगात् । तस्योपासात्रैविध्यस्याधिकारिभेदेन योगाद्युक्तत्वादित्यर्थः ।

'पूरणगुण' इति गुणेन समासनिषेधस्यानित्यत्वोक्तेरुपासात्रैविध्यादिति साधु । संज्ञाप्रमाणत्वादित्यादिवत् । एवमग्रेऽपि । "ण्यासश्रन्थोयुच्" इति विशेषमनाश्रित्य "गुरोश्च हलः" इत्युत्सर्गस्यैवाश्रयणाद्वा, "रोगाख्यायां ण्वुल् बहुलम्" इति बहुलग्रहणाद्वा, "वाऽसरूपोऽस्त्रियाम् इति सरूपप्रत्ययस्य विकल्पेन बाधोक्ते-र्घञन्तत्वेन वा उपासेति साधु ॥ "घञन्तः पुंसि" इति पाणिनीयलिङ्गानु-शासनस्य तृतीये "नौ वृ धान्ये" इत्यत्र मञ्जर्यां प्रायिकत्वोक्तेः ॥ १२ ॥

ಈ ಸೂತ್ರದಲ್ಲಿ 'ಪ್ರಾಣಃ' ಬ್ರಹ್ಮ ಎಂಬೆರೆಡು ಪದಗಳನ್ನು ಸೇರಿಸಿಕೊಳ್ಳಬೇಕು. ನ ಎಂಬುದರ ಅನಂತರ ಶಾಸ್ತ್ರದೃಷ್ಟ್ಯಾ ತೂಪದೇಶಃ ಎಂಬ ವಾಕ್ಯವನ್ನು ಅನುವೃತ್ತಿ ಮಾಡಿಕೊಳ್ಳಬೇಕು.

'ತಂ ಶತಂ ವರ್ಷಾಣ್ಯಭ್ಯಾರ್ಚತ್ ಎಂಬ ಶ್ರುತಿಯಲ್ಲಿ ಶತಾಯುಷ್ಟ್ವವೆಂಬ ಜೀವಲಿಂಗವು ಕೇಳಿಸುತ್ತಿದೆ. ಮತ್ತು ಇಂದ್ರಿಯಗಳೊಡನೆ ಸಂವಾದವೆಂಬ ಮುಖ್ಯಪ್ರಾಣನ ಲಿಂಗವೂ ಮತ್ತೊಂದು ಶ್ರುತಿಯಲ್ಲಿ ಕೇಳಿಸುತ್ತಿದೆ. ಆದ್ದರಿಂದ ಪ್ರಾಣನು ಬ್ರಹ್ಮನಾಗಲು ಸಾಧ್ಯವಿಲ್ಲ.

ಈ ಆಕ್ಷೇಪವು ತಪ್ಪು. ಏಕೆಂದರೆ ತಂ ಶತಂ ಇತ್ಯಾದಿಯಾಗಿ ಶತಾಯುಷ್ಟ್ವವೆಂಬ ಜೀವನ ಲಿಂಗವನ್ನು ಹಾಗೂ ಮುಖ್ಯಪ್ರಾಣದೇವನ ಲಿಂಗವನ್ನು ಅಂತರ್ಯಾಮಿಯಾದ ಪರಮಾತ್ಮನ ದೃಷ್ಟಿಯಿಂದಷ್ಟೇ ಶ್ರುತಿಯಲ್ಲಿ ಹೇಳಲಾಗಿದೆ. ಹಾಗಾದರೆ 'ಉದಾಸೀನವದಾಸ್ತಾಂ ತೌ' ಎಂಬುದಾಗಿ ಅಂತರ್ಯಾಮಿಯಾದ ಭಗವಂತ ಹಾಗೂ ಚತುರ್ಮುಖಬ್ರಹ್ಮದೇವರು ಉದಾಸೀನರಾಗಿದ್ದಾರೆಂದು ಕೇಳಿಸುತ್ತಿದೆಯಲ್ಲವೇ ಎಂದು ಪ್ರಶ್ನಿಸಬಾರದು. ಹಾಗೆ ಔದಾಸೀನ್ಯವನ್ನು ಹೇಳಿರುವುದು ಬಾಹ್ಯರೂಪದ ವಿವಕ್ಷೆಯಿಂದ. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲ.

ಅಂತರ್ಯಾಮಿಯನ್ನು ಹೇಳಿದ್ದಕ್ಕೆ ಏನುಪ್ರಯೋಜನ? ಎಂಬ ಪ್ರಶ್ನೆಗೆ ಸೂತ್ರದಲ್ಲಿ ಉಪಾಸಾ ಇತ್ಯಾದಿಯಾಗಿ ಉತ್ತರಿಸಿದ್ದಾರೆ. ಭಗವಂತನ ಉಪಾಸನೆಯು ಅಂತರುಪಾಸನೆ, ವ್ಯಾಪ್ತ್ಯೋಪಾಸನೆ, ಬಹಿರುಪಾಸನೆ ಎಂಬುದಾಗಿ ಮೂರು ವಿಧವಾಗಿದೆ. ಇದನ್ನೇ ಈ ಪ್ರಕರಣದಲ್ಲಿ 'ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತೇ' 'ಸ ಏತಮೇವ ಪುರುಷಂ...' ಎಂಬುದಾಗಿ ತ್ರೈವಿಧ್ಯವನ್ನು ಆಶ್ರಯಿಸಲಾಗಿದೆ. ಆಶ್ರಿತತ್ವಾತ್ ಎಂದರೆ ಹೇಳಿರುವುದರಿಂದ ಎಂದರ್ಥ. ಒಂದು ಬಗೆಯ ಉಪಾಸನೆಯನ್ನು ಹೇಳಿದರೆ ಸಾಕು. ಮೂರು ಬಗೆಯ ಉಪಾಸನೆಯನ್ನು ಏಕೆ ಹೇಳಬೇಕು? ಎಂಬ ಪ್ರಶ್ನೆಗೆ 'ತದ್ಯೋಗಾತ್' ಎಂಬುದರಿಂದ ಉತ್ತರಿಸಿದ್ದಾರೆ. ಬೇರೆಬೇರೆ ಅಧಿಕಾರಿಗಳಿಗೆ ಬೇರೆ ಬೇರೆ ಉಪಾಸನೆಯನ್ನು ಹೇಳುವುದಕ್ಕಾಗಿ ತ್ರಿವಿಧೋಪಾಸನೆಯನ್ನು ಹೇಳಿದ್ದು ಯುಕ್ತವಾಗಿದೆ ಎಂದರ್ಥ.

ಉಪಾಸಾತ್ರೈವಿಧ್ಯಾತ್ ಎಂಬ ಸಮಾಸವು ಸಾಧುವಾಗಿದೆ. ಏಕೆಂದರೆ 'ಪೂರಣಗುಣಃ'(೨/೨/೧೧) ಎಂಬ ವ್ಯಾಕರಣ ಸೂತ್ರದಲ್ಲಿ ಗುಣವನ್ನು ಹೇಳುವ ಶಬ್ದದ ಜೊತೆಗೆ ಷಷ್ಠೀಸಮಾಸವನ್ನು ನಿಷೇಧಿಸಲಾಗಿದೆ. ಆದರೂ ಸಹ ಈ ನಿಷೇಧವನ್ನು ಅನಿತ್ಯವೆಂದು ವೈಯ್ಯಾಕರಣರೇ ಒಪ್ಪಿದ್ದರಿಂದ 'ಸಂಜ್ಞಾ ಪ್ರಮಾಣತ್ವಾತ್' ಎಂಬಲ್ಲಿ ಹೇಗೆ ಸಮಾಸವಾಗುತ್ತದೋ ಆದರಂತೆ ಉಪಾಸಾತ್ರೈವಿಧ್ಯಾತ್ ಎಂಬಲ್ಲಿಯೂ ಸಮಾಸವಾಗುತ್ತದೆ. ಇದರಂತೆ ಮುಂದೆಯೂ ಸಹ ಸಮಾಸವಿಚಾರವನ್ನು ತಿಳಿಯಬೇಕು.

'ಉಪಾಸಾ' ಎಂಬ ಪದವು ಸಾಧುವಾಗಿದೆ. ಏಕೆಂದರೆ 'ಣ್ಯಾಸಶ್ರಂಥೋಯುಚ್'(೩/೩/೧೦೭) ಎಂಬ ಸೂತ್ರವು ಆಸ ಧಾತುವಿಗೆ ಯುಚ್ ಪ್ರತ್ಯಯವನ್ನು ವಿಧಿಸುತ್ತದೆ. ಆವಾಗ ಉಪಾಸನಾ ಎಂದು ರೂಪವಾಗುತ್ತದೆ. ಆದರೆ 'ಗುರೋಶ್ಚ ಹಲಃ' ಎಂಬ ಸೂತ್ರದ ಪ್ರಕಾರ 'ಉಪ' ಎಂಬ ಉಪಸರ್ಗದಿಂದ ಕೂಡಿದ್ದರೆ ಅಸಧಾತುವಿಗೆ ಅಕಾರಪ್ರತ್ಯಯವನ್ನು ಹೇಳಲಾಗಿದೆ. ಆವಾಗ ಉಪಾಸಾ ಎಂಬ ರೂಪವು ನಿಷ್ಪನ್ನವಾಗುತ್ತದೆ. ಇಲ್ಲಿ ಯುಚ್‌ಪ್ರತ್ಯಯವನ್ನು ವಿಧಿಸುವ ವಿಶೇಷಸೂತ್ರವನ್ನು ಆಶ್ರಯಿಸದೆ ಸಾಮಾನ್ಯಸೂತ್ರವನ್ನು ಆಶ್ರಯಿಸಿದ್ದರಿಂದ ದೋಷವಿಲ್ಲ. ಅಥವಾ 'ರೋಗಾಖ್ಯಾಯಾಂ ಣ್ವುಲ್ ಬಹುಲಮ್'(೩/೩/೧೦೮) ಎಂಬ ಸೂತ್ರದಲ್ಲಿ ಬಹುಲಗ್ರಹಣದಿಂದ 'ವ್ಯಾಸರೂಪೋಽಸ್ತ್ರಿಯಾಮ್' (೩/೧/೯೪) ಎಂಬುದಾಗಿ ಸಮಾನರೂಪವಿರುವ ಪ್ರತ್ಯಯಕ್ಕೆ ವಿಕಲ್ಪದಿಂದ ಬಾಧವನ್ನು ಹೇಳಲಾಗಿದೆ. ಆದ್ದರಿಂದ ಘಞ್‌ಪ್ರತ್ಯಯಾಂತವಾದ ಉಪಾಸಾ ಎಂಬ ಪದವು ಸಾಧುವಾಗುತ್ತದೆ.

ವಸ್ತುತಃ ಉಪಾಸಾ ಎಂಬ ಪದವು ಪುಲ್ಲಿಂಗದಲ್ಲಿರಬೇಕು. 'ಘಞಂತಃ ಪುಂಸಿ' ಎಂಬ ಸೂತ್ರವು ಘಞ್ ಪ್ರತ್ಯಯಾಂತವಾದ ಶಬ್ದಗಳೆಲ್ಲವೂ ಪುಲ್ಲಿಂಗದಲ್ಲಿರುತ್ತವೆಂದು ಹೇಳುತ್ತಿದೆ. ಆದರೆ ಪಾಣಿನೀಯ

ಲಿಂಗಾನುಶಾಸನವನ್ನು, 'ನೌ ವೃ ಧಾನ್ಯೇ' ಎಂಬ ಸೂತ್ರವನ್ನು ವ್ಯಾಖ್ಯಾನಿಸುವಾಗ, ಮಂಜರೀ ಗ್ರಂಥವು ಪ್ರಾಯಿಕವೆಂದು ಹೇಳಿದೆ. ಆದ್ದರಿಂದ ಉಪಾಸಾ ಎಂಬ ಸ್ತ್ರೀಲಿಂಗರೂಪವು ಅಸಾಧುವಲ್ಲ.

अत्रानन्दमयनये विष्णोः स्वावयवैक्यं, अन्तर्नये इन्द्रादिदेवगतैश्वर्यादेः आकाशनये सर्वस्वभावस्य चेशायत्तत्वं, प्राणनये सर्वजीवनहेतुत्वं, ज्योतिर्नये सर्वसूक्तानामवैष्णवत्वप्रसिद्धेरज्ञानमूलत्वं, छन्दोनयो अनादिनित्यस्यापीशाधीनत्वं, अन्त्यनये सर्वतत्तछ्रुतिलिङ्गानां तत्तदन्तर्यामिस्थत्वं सिद्धमित्यादि बोध्यम् ॥

**॥ इति श्रीमद्राघवेन्द्रयतिकृतायां तन्त्रदीपिकायां प्रथमाध्यायस्य प्रथमः पादः ॥**

ಈ ಪಾದದಲ್ಲಿ ಸಿದ್ಧವಾದ ಪ್ರಮೇಯಗಳು ಹೀಗಿವೆ. ಆನಂದಮಯಾಧಿಕರಣದಲ್ಲಿ ವಿಷ್ಣುವಿಗೆ ತನ್ನ ಅವಯವಗಳಿಂದ ಐಕ್ಯವು ಸಿದ್ಧವಾಗಿದೆ. ಅಂತರಧಿಕರಣದಲ್ಲಿ ಇಂದ್ರಾದಿದೇವತೆಗಳ ಐಶ್ವರ್ಯವು ಈಶಾಧೀನವೆಂದು ಸಿದ್ಧವಾಗಿದೆ. ಆಕಾಶಾಧಿಕರಣದಲ್ಲಿ ಸಕಲವಸ್ತುಗಳ ಸ್ವಭಾವವು ಈಶಾಧೀನವೆಂದು ಸಿದ್ಧವಾಗಿದೆ. ಪ್ರಾಣಾಧಿಕರಣದಲ್ಲಿ ಸರ್ವಜೀವನ ಹೇತುತ್ವವು, ಜ್ಯೋತಿರಧಿಕರಣದಲ್ಲಿ ಸಕಲಸೂಕ್ತಗಳ ಅವೈಷ್ಣವತ್ವಪ್ರಸಿದ್ಧಿಯು ಅಜ್ಞಾನಮೂಲಕವೆಂದು, ಛಂದೋಧಿಕರಣದಲ್ಲಿ ಅನಾದಿನಿತ್ಯವಾದದ್ದೆಲ್ಲವೂ ಈಶಾಧೀನವಾದದ್ದೆಂದೂ, ಅಂತಿಮಪ್ರಾಣಾಧಿಕರಣದಲ್ಲಿ ಸಕಲ ದೇವತೆಗಳ ಶ್ರುತಿಲಿಂಗಗಳಿಗೆ ಅಂತರ್ಯಾಮಿಸ್ಥತ್ವವು ಸಿದ್ಧವಾಯಿತೆಂದು ತಿಳಿಯಬೇಕು.

ಇಲ್ಲಿಗೆ ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಪ್ರಥಮಾಧ್ಯಾಯದ ಪ್ರಥಮಪಾದವು ಮುಗಿಯಿತು ॥

**श्रीराघवेन्द्रयतिकृता**

# न्यायमुक्तावळिः

## अन्तिमप्राणाधिकरणम्

॥ ॐ प्राणस्तथानुगमात् ॐ ॥ १२ ॥

॥ ॐ न वुक्तरात्मोपदेशादिति चेदध्यात्मसम्बन्धभूमा ह्यस्मिन् ॐ ॥

ಪರಿಪೂರ್ಣಚಂದ್ರಿಕಾ

॥ ॐ शास्त्रदृष्ट्या तूपदेशो वामदेववत् ॐ ॥

॥ ॐ जीवमुख्यप्राणलिङ्गान्नेति चेन्नोपासात्रैविध्या-
दाश्रितत्वादिह तद्योगात् ॐ ॥

अत्र श्रुतिलिङ्गबाहुल्येन पूर्वसिद्धान्तन्यायेन पूर्वपक्षप्रवृत्तेरापवादिकी सङ्गतिः । ऐतरेये "ता वा एताः शीर्षञ्छ्रियः श्रिताश्चक्षुः श्रोत्रं मनो वाक् प्राणः" (ऐ. २-१-४) इत्यादिना बहुस्थलेषु श्रुतः प्राण. किं मुख्यवाय्वादिरुत विष्णुरिति सन्देहः । वाय्विन्द्रजीवा इति पूर्वः पक्षः ॥ तच्छ्रुतिलिङ्गानां बाहुल्यात् । तथाहि । चक्षुः-श्रोत्रादिभिः सह पाठः, ता अहिंसन्तेत्यादिनोक्तानि 'प्राणविवादो देहादुत्क्रमणप्रवेशौ ततो देहपातोत्थाने प्राणसंवादश्च' इत्यादीनि मुख्यप्राणलिङ्गानि तत्सहचरित-प्राणश्रुतिश्च । तथा "तं यच्छतं वर्षाण्यभ्यार्चत्" इति (ऐ. २-२-१) श्रुत शतायुष्ट्वं तत्सहपठितपुरुषश्रुतिः "प्राणो वंश" (ऐ. ३-२-१) इति चक्षुरादीन् प्रति वंशत्व-मित्यादिजीवलिङ्गानि 'इन्द्रो वै वृत्रं हत्वा' इत्याद्युक्तवृत्रहननमहाव्रतयाजित्वा-दिलिङ्गानि इन्द्रो वै वृत्रं हत्वेत्याद्युक्तवृत्रहननमहाव्रतयाजित्यादिलिङ्गानि "तमिन्द्र उवाच प्राणो वाहमस्म्यृषे" (ऐ. २-२-३) इतीन्द्रप्रयुक्ताहंश्रुतिश्चेति श्रुतिलिङ्गबाहुल्यं श्रूयते । नचैतानि विष्णौ सम्भवन्तीति ॥

ಈ ಅಧಿಕರಣದಲ್ಲಿ ಶ್ರುತಿಲಿಂಗಬಾಹುಲ್ಯದಿಂದ ಪೂರ್ವಸಿದ್ಧಾಂತನ್ಯಾಯವನ್ನು ಅನುಸರಿಸಿ, ಪೂರ್ವ-ಪಕ್ಷವು ಹೊರಟಿರುವುದರಿಂದ ಆಪವಾದಕೀಸಂಗತಿಯು ಇರುತ್ತದೆ. ಐತರೇಯದಲ್ಲಿ 'ತಾವಾ ಏತಾಃ ಶೀರ್ಷನ್ ಶ್ರಿಯಃ ಶ್ರಿತಾಚಕ್ಷುಃಶ್ರೋತ್ರಂ ಮನೋ ವಾಕ್ ಪ್ರಾಣಃ' ಇತ್ಯಾದಿಯಾಗಿ ಅನೇಕಬಾರಿ ಪ್ರಾಣ-ಶಬ್ದವು ಕೇಳಿಸುತ್ತಿದೆ. ಈ ಪ್ರಾಣಶಬ್ದದಿಂದ ವಾಚ್ಯನಾದವನು ಮುಖ್ಯಪ್ರಾಣಾದಿಗಳೋ ಅಥವಾ ವಿಷ್ಣುವೋ ಎಂದು ಸಂದೇಹ.

ಮುಖ್ಯಪ್ರಾಣ, ಇಂದ್ರ, ಜೀವ ಇವರುಗಳೇ ಪ್ರಾಣಶಬ್ದವಾಚ್ಯರೆಂದು ಪೂರ್ವಪಕ್ಷ. ಏಕೆಂದರೆ, ಅವರ ಪರವಾದ ಶ್ರುತಿಲಿಂಗಗಳೇ ಬಹಳವಾಗಿವೆ. ಅದು ಹೀಗೆ— ಚಕ್ಷುಸ್ಸು ಶ್ರೋತ್ರ ಮೊದಲಾದ ಇಂದ್ರಿಯಗಳ ಜೊತೆಗೆ ಪ್ರಾಣಶಬ್ದವು ಪಠಿತವಾಗಿದೆ. ಮತ್ತು 'ತಾ ಅಹಿಂಸಂತ' ಇತ್ಯಾದಿಯಾಗಿ ಮುಖ್ಯಪ್ರಾಣನ ಲಿಂಗಗಳು ಕೇಳಿಸುತ್ತಿವೆ. ಅಷ್ಟೇ ಅಲ್ಲದೆ 'ಪ್ರಾಣವಿವಾದೋ ದೇಹಾದುತ್ಕ್ರಮಣಪ್ರವೇಶೌ ತತೋ ದೇಹಪಾತೋತ್ಥಾನೇ ಪ್ರಾಣಸಂವಾದಶ್ಚ' ಎಂಬುದಾಗಿ ಮುಖ್ಯಪ್ರಾಣನ ಅಸಾಧಾರಣಧರ್ಮವು ಶ್ರುತವಾಗಿದೆ. ಇಂತಹ ಲಿಂಗಗಳ ಜೊತೆಗೆ ಪ್ರಾಣಶ್ರುತಿಯೂ ಸಹ ಸೇರಿಕೊಂಡಿದೆ.

ಅದರಂತೆ 'ತಂ ಯಚ್ಛತಂ ವರ್ಷಾಣ್ಯಭ್ಯಾರ್ಚತ್' ಎಂಬುದಾಗಿ ಐತರೇಯದಲ್ಲಿ ಕೇಳಿಸುತ್ತಿರುವ ಶತಾಯುಷ್ಟ್ವ ಎಂಬ ಲಿಂಗವು ಅದರ ಜೊತೆಗೆ ಪಠಿತವಾದ ಪುರುಷಶ್ರುತಿಯು 'ಪ್ರಾಣೋ ವಂಶಃ'

ಎಂಬುದಾಗಿ ಚಕ್ಷುರಾದಿ ಇಂದ್ರಿಯಗಳನ್ನು ಕುರಿತು ವಂಶತ್ವವನ್ನು ಹೇಳಿದ್ದರಿಂದ ಇವೆಲ್ಲವೂ ಜೀವಲಿಂಗವೇ ಆಗಿವೆ. ಆದ್ದರಿಂದ ಜೀವನೂ ಸಹ ಪ್ರಾಣಶಬ್ದವಾಚ್ಯನಾಗಬಹುದು.

ಅಥವಾ 'ಇಂದ್ರೋ ವೈ ರುದ್ರಂ ಹತ್ವಾ' ಇತ್ಯಾದಿಯಾಗಿ ಹೇಳಲ್ಪಟ್ಟ ರುದ್ರಹಂತೃತ್ವ, ಮಹಾವ್ರತಯಾಜಿತ್ವ, ಮೊದಲಾದ ಲಿಂಗಗಳು ಹಾಗೂ 'ತಮಿಂದ್ರ ಉವಾಚ ಪ್ರಾಣೋವಾಹಮಸ್ಮ್ಯೃಷೇ' ಎಂಬುದಾಗಿ ಹೇಳಲ್ಪಟ್ಟ ಅಹಂಶ್ರುತಿಯು ದೇವೇಂದ್ರನಲ್ಲಿರುವುದರಿಂದ ದೇವೇಂದ್ರನೂ ಸಹ ಪ್ರಾಣನಾಗಬಹುದು.

ಹೀಗೆ ಮುಖ್ಯಪ್ರಾಣಾದಿಗಳಲ್ಲಿ ಶ್ರುತಿಲಿಂಗಬಾಹುಲ್ಯವಿದೆ. ಇವುಗಳನ್ನು ವಿಷ್ಣುವಿನಲ್ಲಿ ಕೂಡಿಸಲು ಸಾಧ್ಯವಿಲ್ಲವೆಂದು ಪೂರ್ವಪಕ್ಷ.

**सिद्धान्तस्तु ॥ एतद्ब्रह्मैतत्सत्यं** (ऐ. २-१-१), **तं प्रपदाभ्यां प्रापद्यत** (२-१-४) **ब्रह्मेमं पुरुषं** (२-१-४), **अः इति ब्रह्म** (२-३-८) इत्यादिश्रुतीनां ''**तं देवाः प्राणयन्त** (ऐ. २-१-५), **तं भूतिरिति देवा उपासाञ्चक्रिरे** (२-१-८), **सर्वे वेदा** (२-२-२) इति, **प्राणो ह्येष य एष तपति** (२-२-१), **प्राणस्त्वं प्राणः सर्वाणि भूतानि** (२-२-३) **आपिपीलिकाभ्यः प्राणेन बहुत्याविष्टब्धानि**'' इत्यादिना (ऐ. २-१-६) श्रुतानां देवोपदेश्यत्वभूतित्वप्रकारकदेवोपास्यत्वसर्ववेदप्रतिपाद्यत्वसूर्यमण्डलस्थत्व- सर्वान्तर्यामित्व सर्वव्यापित्वलिङ्गानां च भाष्याद्युक्तवचनानन्तरबलेन विष्णवेकनिष्ठत्वात् प्रागुक्तश्रुत्यादितोऽपि बाहुल्याच्च । प्रागुक्तश्रुतिलिङ्गानं तत्तदन्तर्यामिस्थतया सावकाशत्वात् । **उदासीनवदास्तामित्यस्य** (बृ. भा. २-१-४) बाह्यरूपविषयत्वेनाविरोधात् । इन्द्रप्रयुक्ताहंशब्दस्यापि **अहं मनुरभवम्** इत्यादौ वामदेवप्रयुक्ताहंशब्दवल्लक्षणया वा, ''**सर्वान्तर्यामिको विष्णुः सर्वनाम्नाभिधीयते । एषोऽहं त्वमसौ च**'' इत्यादिस्मृत्या (ब्र.सू.भा. १-१-१७) मुख्यवृत्त्या वा अन्तर्यामिपरत्वात् प्राणो विष्णुरेवेति । फले तु अत एव प्राण इत्युक्तप्राणस्य विष्णुत्वाक्षेपसमाधी ॥ १२ ॥

**इति श्रीराघवेन्द्रयतिकृतायां न्यायमुक्तावल्यां आद्येऽध्याये प्रथमः पादः**

'ಏತದ್ ಬ್ರಹ್ಮೈತತ್ಸತ್ಯಮ್' 'ತಂ ಪ್ರಪದಾಭ್ಯಾಂ ಪ್ರಾಪದ್ಯತೇ' 'ಬ್ರಹ್ಮೇಮಂ ಪುರುಷಂ' 'ಅಃ ಇತಿ ಬ್ರಹ್ಮ' ಹಾಗೂ 'ತಂ ದೇವಾಃ ಪ್ರಾಣಯಂತ' 'ತಂ ಭೂತಿರಿತಿ ದೇವಾ ಉಪಾಸಾಂ ಚಕ್ರಿರೇ' 'ಸರ್ವೇ ವೇದಾಃ' ಹಾಗೂ 'ಪ್ರಾಣೋ ಹ್ಯೇಷ ಯ ಏಷ ತಪತಿ' 'ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ' 'ಆಪಿಪೀಲಿಕಾಭ್ಯಃ ಪ್ರಾಣೇನ ಬಹುತ್ಯಾವಿಷ್ಟಬ್ಧಾನಿ' ಇತ್ಯಾದಿ ಶ್ರುತಿಗಳು 'ಇತ್ಯಾದಿಯಾಗಿ ಕೇಳಿಸಲ್ಪಟ್ಟ

ದೇವೋಪದೇಶ್ಯತ್ವ, ಹಾಗೂ ಭೂತಿತ್ವಪ್ರಕಾರಕವಾದ ದೇವೋಪಾಸ್ಯತ್ವ, ಸರ್ವವೇದಪ್ರತಿಪಾದ್ಯತ್ವ, ಸೂರ್ಯಮಂಡಲಸ್ಥತ್ವ, ಸರ್ವಾಂತರ್ಯಾಮಿತ್ವ, ಸರ್ವವ್ಯಾಪಿತ್ವ ಇವೇ ಮೊದಲಾದ ಅನೇಕ ಲಿಂಗಗಳು ಭಾಷ್ಯದಲ್ಲಿ ಹೇಳಲ್ಪಟ್ಟ ಅನೇಕ ವಚನಗಳ ಆಧಾರದಿಂದ ವಿಷ್ಣುವಿನಲ್ಲಿ ಮಾತ್ರ ಇರುತ್ತವೆಂದು ನಿರ್ಣಯವಾಗುತ್ತವೆ. ಇಂತಹ ಲಿಂಗಗಳು ಪೂರ್ವಪಕ್ಷದಲ್ಲಿ ಹೇಳಲ್ಪಟ್ಟ ಶ್ರುತಿಲಿಂಗಗಳಿಗಿಂತಲೂ ಬಲಿಷ್ಠವಾಗಿವೆ. ಮತ್ತು ಪೂರ್ವಪಕ್ಷದಲ್ಲಿ ಹೇಳಲ್ಪಟ್ಟ ಶ್ರುತಿಲಿಂಗಗಳನ್ನು ಅಂತರ್ಯಾಮಿಯಲ್ಲಿ ಸಾವಕಾಶವಾಗಿ ಹೇಳಬಹುದು. 'ಉದಾಸೀನವದಾಸ್ತಾಮ್' ಎಂಬುದನ್ನು ಭಗವಂತನ ಬಾಹ್ಯರೂಪವಿಶೇಷವನ್ನು ಅನುಸರಿಸಿ ವಿರೋಧವನ್ನು ಪರಿಹರಿಸಬಹುದು. ಇಂದ್ರನಿಂದ ಪ್ರಯೋಗಿಸಲ್ಪಟ್ಟ ಅಹಂಶಬ್ದವೂ ಸಹ ಅಹಂ ಮನುರಭವಮ್' ಎಂಬಲ್ಲಿ ವಾಮದೇವರಿಂದ ಪ್ರಯೋಗಿಸಲ್ಪಟ್ಟ ಅಹಂಶಬ್ದಕ್ಕೆ ಹೇಗೆ ಲಕ್ಷಣ ಮಾಡುತ್ತೇವೋ, ಆದರಂತೆ ಇಲ್ಲಿಯೂ ಲಕ್ಷಣಮಾಡಬಹುದು. "ಸರ್ವಾಂತರ್ಯಾಮಿಕೋ ವಿಷ್ಣುಃ ಸರ್ವನಾಮ್ನಾಭಿಧೀಯತೇ । ಏಷೋಽಹಂ ತ್ವಮಸೌ ಚ" ಇತ್ಯಾದಿ ಸ್ಮೃತಿಯಿಂದ ಮುಖ್ಯವೃತ್ತಿಯಿಂದಲೇ ಅಂತರ್ಯಾಮಿಯಲ್ಲಿ ಅಹಂಶಬ್ದವನ್ನು ಸಮನ್ವಯಮಾಡಬಹುದಾದ್ದರಿಂದ ಪ್ರಾಣನು ವಿಷ್ಣುವೇ ಆಗಿದ್ದಾನೆ. 'ಅತ ಏವ ಪ್ರಾಣಃ' ಎಂಬಲ್ಲಿ ಹೇಳಲ್ಪಟ್ಟ ಪ್ರಾಣನು ವಿಷ್ಣುವಲ್ಲವೆಂಬ ಆಕ್ಷೇಪವು ಪೂರ್ವಪಕ್ಷದ ಫಲ. ಆದರ ಸಮಾಧಾನವು ಸಿದ್ಧಾಂತದ ಫಲ.

॥ ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ರಚಿತವಾದ ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ ಅಂತಿಮಪ್ರಾಣಾಧಿಕರಣವು ಮುಗಿಯಿತು ॥

# सूत्रार्थरत्नावळिः

अत्र लोकतोऽन्यत्रप्रसिद्धप्राणनाम्नो विष्णौ समन्वयः प्रतिपाद्यते ।

**सू - ॐ ॥ प्राणस्तथाऽनुगमात् ॥ ॐ॥ २८ ॥**

ननु 'ता वा एताः' (ऐ.आ.२/१/४) इत्युक्तप्राणो न विष्णुः । इन्द्रियगणे गणितत्वात् । जीवो वा । 'एष इमे लोकमभ्यार्चत्' (ऐ.आ. २/२/१/१) इति जीवलिङ्गात् । मुख्यप्राणो वा । 'ता अहिंसन्त' (ऐ.आ.२/१/४/९) तल्लिङ्गात् – इति प्राप्ते सूत्रमुपन्यस्यति –

ॐ ॥ प्राणस्तथाऽनुगमादिति ॥ अस्यार्थः – तथा 'तद् वै त्वम्' (तै.आ.३/१४/४) इति तैत्तिरीयोक्तप्राणवत्, 'ता वा' इत्यैतरेयोक्तप्राणोऽपि विष्णुरेव । कुतः? अनुगमात् देवतोपास्यादिविष्णुलिङ्गब्रह्मशब्दानाम् असकृच्छ्रवणादित्यर्थः ।

एवं च 'स एषोऽसुः'(ऐ.आ.२/१/८) इत्यत्र दुष्टनिरसनाद् असुत्वेन प्रकृष्टानन्दरूपत्वात् प्राणत्वेन देवानां ज्ञानाद्यैश्वर्यप्रदत्वाद् असुराणामज्ञानाद्यैश्वर्य-

हेतुत्वाच्च भूत्यभूतित्वेन च 'ता वा एताः' इत्यत्र सर्ववेदोक्तत्वेन 'तदयं प्राणः' (ऐ.आ. २/३/८) इत्यत्र देहरथित्वेन, 'तं देवाः प्राणयन्ते' (ऐ.आ.२/१/५) इत्यत्र सर्वदेवतोपास्यत्वेन चोक्तत्वात् । नच पूर्वपक्षिलिङ्गस्य निरवकाशत्वेनापि प्राबल्यम् । प्राणैः सह गणितत्वस्यान्तर्यामिनिष्ठतासम्भवात् । प्राबल्येऽप्येकप्रकारेण प्रबलात् पूर्वपक्षिलिङ्गात् प्रकारद्वयेनापि प्रबलस्य सैद्धान्तिकलिङ्गस्याधिक्येन निर्णयोपपत्तेः । अस्मिन् प्रकरणे 'एतद् ब्रह्म'(ऐ.आ.२/१/१/१) 'ब्रह्मणो लोकः' (ऐ.आ.२/१/३/१), 'ब्रह्मेमं पुरुषम्' (ऐ.आ.२/१/४/१), 'उदरं ब्रह्मेत्याचक्षते' (ऐ.आ.२/१/४/५) 'अ इति ब्रह्म' (ऐ.आ.२/३/८/७) इत्यादि निरवकाशब्रह्मशब्दाभ्यासात् । अतोऽयं प्राणो विष्णुरेवेति सिद्धम् ।

**ॐ ॥ न वक्तुरात्मोपदेशादिति चेदध्यात्म-**
**सम्बन्धभूमा ह्यस्मिन् ॥ ॐ ॥ २९ ॥**

ननु नायं प्राणो विष्णुः । किन्तु इन्द्र एव । 'प्राणो वाऽहम्' इति (ऐ.आ. २/२/३) वाक्येन बृहतीसहस्रवक्तुर्विश्वामित्रस्येन्द्रेण प्राणतयाऽऽत्मनः स्वस्यैवोपदेशात् इत्याक्षिप्य समादधत् सूत्रमाह –

ॐ ॥ न वक्तुरात्मोपदेशादिति चेदध्यात्मसम्बन्धभूमा ह्यस्मिन्निति । अस्यार्थः –द्वितीयार्थे षष्ठी । वक्तुः बृहतीसहस्रवक्तारम् । विश्वामित्रं प्रतीन्द्रेण । आत्मोपदेशात् आत्मनः स्वस्य प्राणतयोपदेशात् इन्द्र एवायं प्राणः न विष्णुरिति चेत् नेति शेषः । तस्यावृत्तिः अनुगमात् इत्यनुवर्तते । तथाच प्रागुक्तानुगमहेतोर्नेन्द्रः प्राणः । तथा सति उपदेशविरोध इत्यपि न । कुतः? यस्मात् अस्मिन्प्रकरणे भगवतः अध्यात्मसम्बन्धभूमा इन्द्रविश्वामित्रादिरूपबहुदेहसम्बन्धः उक्तोऽस्ति । तस्मादित्यर्थः । यद्वा, हि यस्मात् । अस्मिन् इन्द्रे । अध्यात्मसम्बन्धभूमा । अधि अधिकस्य आत्मनः । सम्बन्धस्य आवेशस्य । भूमा बाहुल्यं विद्यते । तस्मादित्यर्थः ।

एवंच प्राणो विष्णुरिति सिद्धम् ॥

**ॐ॥ शास्त्रदृष्ट्या तूपदेशो वामदेववत् ॥ ॐ ॥३०॥**

ननु यदि प्राणशब्देनेन्द्रेणापि विष्णुरेव स्वात्मादिसर्वगततयोच्यते तर्हि 'मयि प्राणः' इति निर्देशः स्यात् । न त्वहमिति । विष्णावहमित्यादिरूपोपदेशायोगादिति प्राप्ते – परिहरत् सूत्रं पठति –

ॐ॥ शास्त्रदृष्ट्या तूपदेशो वामदेववत् इति । अस्यार्थः – तुशब्द एवार्थे ।

वामदेववत् यथाऽन्तर्यामिविवक्षया वामदेवर्षिः । 'अहं मनुरभवम्' इति स्वस्य मनुसूर्याद्यैक्यमाह, तद्वत् । शास्त्रदृष्ट्या 'शास्ति सर्वम्' इति शास्त्रम् अन्तर्यामि । तद्दृष्ट्या तद्विवक्षयैवोपदेशः 'प्राणोऽहम्' इति व्यपदेशः । नत्वैक्येनेत्यर्थः ॥

एवंच इन्द्रस्य प्राणतयाऽऽत्मोपदेशस्यान्तर्यामिविवक्षया प्रवृत्तत्वात् । अन्यथा 'त्वं प्राणः' इति व्यपदेशानुपपत्तेः । ईश्वरपक्षे तु अहमादिशब्दानां शास्त्रदृष्ट्या प्रवृत्तत्वेन बाधकाभावात् । 'तत्तन्नाम्नोच्यते विष्णुः' (पाद्मे) इति वचनात् प्राणोऽयं विष्णुरेवेति सिद्धम् ।

**सू - ॐ ॥ जीवमुख्यप्राणलिङ्गान्नेति चेन्नोपासात्रैविध्यादा-**
**श्रितत्वादिह तद्योगात् ॥ ॐ ॥**

पुनरुक्तमाक्षिप्य समादधत् सूत्रमुपन्यस्यति ।

सू - ॐ ॥ जीवमुख्यप्राणलिङ्गान्नेति चेन्नोपासात्रैविध्यादाश्रितत्वादिह तद्योगात् इति ।

अस्यार्थः – जीवमुख्यप्राणलिङ्गात् शतायुष्ट्वादिजीवलिङ्गानाम् इन्द्रियदेवैः संवादादिरूपमुख्यप्राणलिङ्गानां च श्रवणात् । (ऐ.आ.२/२/४) प्राणोऽन्य एव न विष्णुरिति चेन्न । कुतः? अनुगमात् । नच लिङ्गविरोधः । 'तल्लिङ्गानाम् अन्तर्यामि-विषयत्वेनोपपत्तेः' इत्यादिकमध्याहार्यम् । किमर्थमन्तर्यामिकथनम्? इत्यत उक्तम् – उपासात्रैविध्यादिति ॥ अन्तर्बहिः सर्वगतभेदेन ब्रह्मोपासनस्य त्रिविधत्वात् । इह प्रकरणे । तत् त्रैविध्यस्याश्रितत्वात् उक्तत्वात् । तद्योगात् तेषामधिकारिणां त्रिविधोपासनायोग्यत्वादित्यर्थः ।

एवंच तत्तच्छब्दैस्तत्तदधिकारिभेदेनोपासनार्थम् अन्तर्यामिकथनं युक्तमिति भावः । तस्मादयं प्राणो विष्णुरेवेति प्रागुक्तः प्राण आनन्दमयश्सच स एवेति युक्ता तज्जिज्ञासेति सिद्धम् ॥

॥ इति पादान्त्यप्राणाधिकरणम् ॥

॥ इति परिपूर्णचन्द्रिकायां पादान्त्यप्राणाधिकरणम् ॥



## ಎಲ್ಲಾ ಹೆಸರೂ ದೇವರ ನಾಮವೆ !

ದೇವನೊಬ್ಬ ನಾಮ ಹಲವು ಎಂಬುದೇ ಸತ್ಯ.
ದೇವನೊಬ್ಬ ವ್ಯಕ್ತಿ ಹಲವೆಂಬುದು ಮಿಥ್ಯಾ.
ಸರ್ವೋತ್ತಮನಾದ ದೇವನೆಂದರೆ ಮಹಾವಿಷ್ಣುವೇ.

ಇವನನ್ನು ಯಾವ ಹೆಸರಿನಿಂದಾದರೂ ಕರೆಯಿರಿ. ಗಣಪತಿ, ರುದ್ರ, ಚಂದ್ರ, ಬ್ರಹ್ಮ... ಅಷ್ಟೇ ಅಲ್ಲ...
ಪೃಥ್ವಿ, ಜಲ ತೇಜಸ್ಸು, ಆಕಾಶ ಮೊದಲಾದ ಭೌತಿಕ ಪದಾರ್ಥಗಳ ಹೆಸರುಗಳಿಂದಲೂ
ಅವನನ್ನು ಕರೆಯಬಹುದು. ತಪ್ಪೇ ಇಲ್ಲ...

ಇನ್ನೂ ಆಶ್ಚರ್ಯವೆಂದರೆ ದೇಹ, ಇಂದ್ರಿಯ, ಪ್ರಾಣ ಮೊದಲಾದ ಆಧ್ಯಾತ್ಮಿಕ ಶಬ್ದಗಳಿಂದಲೂ ಅವನನ್ನು
ಕೂಗಬಹುದು. ವೇದದಲ್ಲಿರುವ ಜ್ಯೋತಿ ಮೊದಲಾದ ಶಬ್ದಗಳಿಂದ ಗಾಯತ್ರಿ ಮೊದಲಾದ ಛಂದೋವಾಚಕ
ಶಬ್ದಗಳಿಂದಲೂ ಅವನನ್ನು ಕರೆಯಬಹುದು.

ಇದಕ್ಕಾಗಿಯೇ ಆಕಾಶಾಧಿಕರಣ, ಪ್ರಾಣಾಧಿಕರಣ, ಜ್ಯೋತಿರಧಿಕರಣ, ಗಾಯತ್ರ್ಯಧಿಕರಣ,
ಅಂತಿಮಪ್ರಾಣಾಧಿಕರಣಗಳು ಹೊರಟಿರುತ್ತವೆ.

ಒಟ್ಟಾರೆ ವೇದದಲ್ಲಿರುವ ಎಲ್ಲಾ ವಿಧವಾದ ನಾಮಾತ್ಮಕ ಶಬ್ದಗಳು ಭಗವಂತನಾದ ಮಹಾವಿಷ್ಣುವಿನ
ಹೆಸರುಗಳೆಂದು ಏಕಕಂಠದಿಂದ ಘೋಷಿಸುತ್ತದೆ ಈ ಪ್ರಥಮಪಾದ.

**ಈ ತಿಳುವಳಿಕೆ ರಕ್ತಗತವಾಗಿ ನರನಾಡಿಗಳಲ್ಲಿ ಹರಿಯುವಂತೆ ಅನುಷ್ಠಾನಕ್ಕೆ ತಂದರೆ ಮಾತ್ರ
ಈ ಪಾದದ ಅಧ್ಯಯನ ಸಾರ್ಥಕ ! ಸಾರ್ಥಕ ! ಸಾರ್ಥಕ !**

ಪ್ರಕಾಶಕರು : ಶ್ರೀಪಾದರಾಜಮಠ, ಮುಳಬಾಗಿಲು